ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೧೭

# RIG-VEDA

ಸಾಯಣಭಾಷ್ಯಸಮೇತಾ

# ಋಗ್ವೇದ ಸಂಹಿತಾ

( ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ )

ಭಾಗ—೧೭

ಮೂರನೆಯ ಅಷ್ಟಕದಲ್ಲಿ ಮೂರು, ನಾಲ್ಕು ಮತ್ತು
ಐದನೆಯ ಅಧ್ಯಾಯಗಳು.

ತೃತೀಯ ಮಂಡಲದ ಸೂಕ್ತಗಳು ೪೦–೬೨

ಚತುರ್ಥಮಂಡಲದ ಸೂಕ್ತಗಳು ೧–೧೮



*Translated with Exhaustive Critical Notes & Explanations*

*by*

ASTHANA MAHAVIDWAN

H. P. VENKATA RAO

*Editor.*

---

*Printed at*

SREE VINAYAK PRINTING WORKS, MYSRORE

1952

CC-0. Jangamwadi Math Collection. Digitized by eGangotri

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.

J. Rudrappa, M.A.,LL.B.
RETD. DIST. & SESSIONS JUDGE
112, GANDHINAGAR,
BANGALORE-9.

CC-0. Jangamwadi Math Collection. Digitized by eGangotri



ಯದುವಂಶಪಯಃಪಾರಾವಾರಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ
ಮೈಸೂರು ದೇಶವನ್ನಾಳುವ ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ
ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್,
ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.

CC-0. Jangamwadi Math Collection. Digitized by eGangotri

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

—o—

Translator & Editor :
ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್

Associate :
ಶ್ರೀ G. N. ಚಕ್ರವರ್ತಿ, M. A,
Professor of Ṣanskrit, St. Philomina's College, Mysore.

---

**ಸಹಾಯಕ ವಿದ್ವನ್ಮಂಡಲಿ**

1. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ವ್ಯಾಕರಣವಿದ್ವಾನ್, ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. ಆಸ್ಥಾನ ವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೌತಿಷ ವಿದ್ವಾನ್ ಮತ್ತು ಕರ್ಣಾಟಕ ಭಾಷಾಪಂಡಿತರು,
3. ಬ್ರ॥ ಶ್ರೀ॥ ಶ್ರೀನಿವಾಸಶಾಸ್ತ್ರಿಗಳು; ಋಗ್ವೇದ ಘನಪಾಠಿಗಳು.
4. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿರಂಗಾಜೋಯಿಸರು, ಶ್ರೌತ ವಿದ್ವಾನ್.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರಭಟ್ಟರು, ಮೀಮಾಂಸಾದರ್ಶನ ಪಂಡಿತರು.
6. ಬ್ರ॥ ಶ್ರೀ॥ ವೆಂಕಟರಮಣಾಚಾರ್, M. A., B. T., ಸಾಹಿತ್ಯವಿದ್ವಾನ್.
7. ಬ್ರ॥ ಶ್ರೀ॥ S. ರಂಗನಾಥನ್, ಸಾಹಿತ್ಯವಿದ್ವಾನ್, ಅರಮನೆ ಸರಸ್ವತೀ ಭಂಡಾರ.
8. ಬ್ರ॥ ಶ್ರೀ॥ ಪುತ್ತೂರು ಅನಂತಕೃಷ್ಣಮಾಚಾರ್, ಸಾಹಿತ್ಯ ವಿದ್ವಾನ್, Govt. Oriental Research Institute, Mysore.
9. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು. Govt. Oriental Research Institute, Mysore.

CC-0. Jangamwadi Math Collection. Digitized by eGangotri

# ಪೀಠಿಕೆ.

ಋಗ್ವೇದಸಂಹಿತೆಯ ಈ ಭಾಗದಲ್ಲಿ ಗಾಯತ್ರೀಮಹಾಮಂತ್ರದ ವಿವರಣೆ ಇದೆ. ನಾಲ್ಕು ವೇದಗಳಲ್ಲಿ ಋಗ್ವೇದವು ಪ್ರಥಮಸ್ಥಾನವನ್ನು ಪಡೆದಿರುವಂತೆಯೇ ಗಾಯತ್ರೀಮಂತ್ರವೂ ಸಹ ಸಮಸ್ತಮಂತ್ರಗಳಲ್ಲಿಯೂ ಅಗ್ರಸ್ಥಾನವನ್ನು ಪಡೆದಿದೆ. ಈ ಮಹಾಮಂತ್ರಕ್ಕೆ ಇಷ್ಟು ಪ್ರಾಶಸ್ತ್ಯವು ಹೇಗೆ ಬಂದಿತು ಎಂಬುದನ್ನು ವಿಮರ್ಶಿಸುವುದು ಅವಶ್ಯಕವಾಗಿದೆ.

ಗಾಯತ್ರೀಮಂತ್ರದಲ್ಲಿ ಪ್ರತಿಪಾದ್ಯವಾಗಿರುವ ದೇವತೆಯೆಂದರೆ ಸವಿತೃ. ಸವಿತೃವೆಂದರೆ ಸೂರ್ಯ ಸೂರ್ಯದೇವತೆಯನ್ನು ನಿರ್ದೇಶಿಸುವ ಶಬ್ದಗಳು ಋಗ್ವೇದದಲ್ಲಿ ಅನೇಕವಿವೆ—ಮಿತ್ರ, ರವಿ, ಸೂರ್ಯ, ಭಾನು, ಖಗ, ಪೂಷ, ಹಿರಣ್ಯಗರ್ಭ, ಮರೀಚಿ, ಆದಿತ್ಯ, ಸವಿತೃ, ಅರ್ಕ, ಭಾಸ್ಕರ ಎಂಬ ಹನ್ನೆರಡು ಹೆಸರುಗಳು ಸೂರ್ಯನನ್ನು ನಿರ್ದೇಶಿಸುವುದಾಗಿದ್ದರೂ ಅವುಗಳಲ್ಲಿ ಸವಿತೃ, ಸೂರ್ಯ, ಆದಿತ್ಯ ಎಂಬ ಮೂರು ಹೆಸರುಗಳೇ ಮುಖ್ಯವಾದವು. ಅದರಲ್ಲಿಯೂ ಈ ಮೂರು ಶಬ್ದಗಳು ಸೂರ್ಯನೆಂಬ ಒಂದೇ ವ್ಯಕ್ತಿಯನ್ನು ಸೂಚಿಸುವುದಾಗಿದ್ದರೂ ತತ್ತದ್ಗುಣಾನುಸಾರವಾಗಿ ಅವುಗಳನ್ನು ಪ್ರತ್ಯೇಕದೇವತೆಯಂತೆ ಭಾವಿಸಿ ಋಗ್ವೇದ ಮಂತ್ರಗಳಲ್ಲಿ ಸ್ತುತಿಸಲಾಗಿರುವುದು. ಹೇಗೆಂದರೆ—ಸವಿತೃವೆಂದರೆ ಆಗತಾನೇ ಉದಯಿಸುತ್ತಿರುವ ಸೂರ್ಯನು. ಸೂರ್ಯನೆಂದರೆ ಉದಯಾನಂತರ ಅಸ್ತಮಾನಕಾಲದವರೆಗೆ ಬೆಳಗುತ್ತಿರುವ ಸೂರ್ಯನು. ಆದಿತ್ಯನೆಂದರೆ ಸೂರ್ಯನ ಎಲ್ಲಾ ರೂಪವೈಶಿಷ್ಟ್ಯಗಳನ್ನು ಒಳಗೊಂಡಿರುವ ದೇವತೆ ಎಂದರೆ, ಸವಿತೃವಿನ ವೈಶಿಷ್ಟ್ಯವೂ, ಸೂರ್ಯನ ವೈಶಿಷ್ಟ್ಯವೂ ಆದಿತ್ಯನಲ್ಲಿರುವುದಲ್ಲದೆ ಜಗತ್ತಿಗೆ(ವಿಶ್ವಕ್ಕೆ) ಮೂಲಭೂತವಾದ ಪರವಸ್ತುವೇ (ಪರಬ್ರಹ್ಮವೇ) ಆದಿತ್ಯನೆಂಬ ದೇವತೆಯ ರೂಪದಿಂದ ವರ್ಣಿತವಾಗಿದೆ.

ಸವಿತೃ, ಸೂರ್ಯ, ಆದಿತ್ಯ ಮೊದಲಾದ ಸೂರ್ಯದೇವತಾಕವಾದ ಅನೇಕ ಮಂತ್ರಗಳು ಋಗ್ವೇದದಲ್ಲಿದ್ದರೂ ಸವಿತೃದೇವತಾಕವಾದ ಈ ಗಾಯತ್ರೀ ಮಂತ್ರಕ್ಕೆ ಏಕೆ ಇಷ್ಟು ಪ್ರಾಶಸ್ತ್ಯ ಎಂದರೆ—ಛಂದಸ್ಸುಗಳಲ್ಲೆಲ್ಲಾ ಗಾಯತ್ರೀ ಛಂದಸ್ಸೇ ಅತಿ ಶ್ರೇಷ್ಠವಾದುದು. ಗಾಯತ್ರೀಛಂದಸ್ಸೆಂದರೆ **ಅಷ್ಟಾಕ್ಷರಾ ಗಾಯತ್ರೀ, ತ್ರಿಪದಾ ಗಾಯತ್ರೀ** ಎಂಬ ಶ್ರುತಿ ವಾಕ್ಯಗಳಲ್ಲಿ ಹೇಳಿರುವಂತೆ ಎಂಟೆಂಟೇ ಅಕ್ಷರಗಳ ಮೂರು ಪಾದಗಳಿರುವ ಋಕ್ಕು ಎಂದರ್ಥವು. ಈ ಋಕ್ಕಿಗೆ ಪೂರ್ವಾರ್ಧದಲ್ಲಿ ಎಂಟೆಂಟು ಅಕ್ಷರಗಳ ಎರಡು ಪಾದಗಳೂ ಉತ್ತರಾರ್ಧದಲ್ಲಿ ಒಂದು ಪಾದವೂ ಇದ್ದು ಒಟ್ಟು ಇಪ್ಪತ್ತನಾಲ್ಕು ಅಕ್ಷರಗಳಿರುವವು. **ಅಗ್ನಿರ್ವೈ ದೇವಾನಾಮವಮೋ ವಿಷ್ಣುಃ ಪರಮಸ್ತದಂತರೇಣ ಸರ್ವಾ ಅನ್ಯಾ ದೇವತಾಃ** (ಐ. ಬ್ರಾ. ೧-೧); **ಅಗ್ನಿರಗ್ರೇ ಪ್ರಥಮೋ ದೇವತಾನಾಂ । ಸಂಯಾತಾನಾಮುತ್ತಮೋ ವಿಷ್ಣುರಾಸೀತ್** (ತೈ. ಬ್ರಾ. ೩-೪-೩-೩) ಎಂಬ ಶ್ರುತಿವಾಕ್ಯಗಳಲ್ಲಿ ಹೇಳಿರುವಂತೆ ದೇವತೆಗಳ ಪಟ್ಟಿಯಲ್ಲಿ ಅಗ್ನಿಗೆ ಪ್ರಥಮ ಸ್ಥಾನವೂ ವಿಷ್ಣುವಿಗೆ ಕೊನೆಯ ಸ್ಥಾನವೂ ಇದೆ. ಅದರಂತೆ **ಗಾಯತ್ರೀಂ ಛಂದಸಾಂ ಮಾತಾ** (ತೈ. ಉ. ೪-೩೪) ಗಾಯತ್ರೀ ಛಂದಸ್ಸೂ ಸಹ ಛಂದಸ್ಸುಗಳಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಬ್ರಹ್ಮಕ್ಷತ್ರ-ವೈಶ್ಯರೆಂಬ ವರ್ಣತ್ರಯಗಳಲ್ಲಿ ಯಜ್ಞಮಾಡುವಾಗ—**ಗಾಯತ್ರೀಭಿರ್ಬ್ರಾಹ್ಮಣಸ್ಯಾದಧ್ಯಾತ್ । ಗಾಯತ್ರಛಂದಾ ವೈ ಬ್ರಾಹ್ಮಣಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । ತ್ರಿಷ್ಟುಗ್ಭೀ ರಾಜನ್ಯಸ್ಯ । ತ್ರಿಷ್ಟುಪ್‌ಛಂದಾ ವೈ**

CC-0. Jangamwadi Math Collection. Digitized by eGangotri

ರಾಜನ್ಯಃ । ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । ಜಗತೀಭಿರ್ವೈಶ್ಯಸ್ಯ। ಜಗತೀಛಂದಾ ವೈ ವೈಶ್ಯಃ। ಸ್ವಸ್ಯ ಛಂದಸಃ ಪ್ರತ್ಯಯನಸ್ತ್ವಾಯ । (ತೈ. ಬ್ರಾ. ೧-೧-೯-೬, ೭) ಬ್ರಾಹ್ಮಣನಾದವನು ಗಾಯತ್ರೀಛಂದಸ್ಸಿನ ಋಕ್ಕು (ಮಂತ್ರ) ಗಳಿಂದಲೂ, ರಾಜನು ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದಲೂ, ವೈಶ್ಯನು ಜಗತೀಛಂದಸ್ಸಿನ ಮಂತ್ರಗಳಿಂದಲೂ ಯಜ್ಞಕರ್ಮಗಳನ್ನು ನೆರವೇರಿಸಬೇಕೆಂದು ಹೇಳಿದೆ. ಇದಲ್ಲದೆ, ಅಷ್ಟಾಕ್ಷರಾ ಗಾಯತ್ರೀ। ಗಾಯತ್ರೀ ಬ್ರಹ್ಮವರ್ಚಸಂ। ಗಾಯತ್ರಿಯೈವ ಬ್ರಹ್ಮವರ್ಚಸಮವರುಂಧೇ (ತೈ ಬ್ರಾ. ೨-೭-೩-೩) ಎಂಬ ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಗಾಯತ್ರೀಛಂದಸ್ಸೇ ಬ್ರಹ್ಮವರ್ಚಸ್ಸನ್ನು ಅಥವಾ ಬ್ರಹ್ಮಜ್ಞಾನವನ್ನು ಉಂಟುಮಾಡುವುದು ಎಂದು ಹೇಳಿದೆ. ಈ ಕಾರಣಗಳಿಂದ ಎಲ್ಲಾ ವಿಧವಾದ ಛಂದಸ್ಸುಗಳಲ್ಲಿಯೂ ಗಾಯತ್ರಿಗೇ ಅಗ್ರಸ್ಥಾನವು ದೊರಕಿದೆ. ಈ ಕಾರಣದಿಂದಲೇ ವಟುವಿಗೆ ಬ್ರಹ್ಮೋಪದೇಶವನ್ನು ಮಾಡುವಾಗ ಗಾಯತ್ರೀಛಂದಸ್ಸಿನ ಮಂತ್ರವಾದ ಗಾಯತ್ರಿಯಿಂದಲೇ ಉಪದೇಶಮಾಡುವರು.

ಗಾಯತ್ರಿಗೆ ಈ ವಿಧವಾದ ಶ್ರೇಷ್ಠತೆ ಉಂಟಾಗಲು ಕಾರಣವೇನು ? ಇದರಲ್ಲಿ ಅಂತಹ ಅಸಾಧಾರಣವಾದ ವಿಷಯವೇನಿದೆ ಎಂಬುದನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು ಅವಶ್ಯಕವು. ವಿಜ್ಞಾನಂ ಶಿಲ್ಪಶಾಸ್ತ್ರಯೋಃ ಎಂಬ ನಿಘಂಟು ವಚನದಂತೆ ವ್ಯಾವಹಾರಿಕಸಂಬಂಧವಾದ ಶಾಸ್ತ್ರಗಳೂ, ಅವುಗಳಿಂದ ಜನ್ಯವಾದ ಜ್ಞಾನವೂ ಸಹ ವಿಜ್ಞಾನವೆನಿಸುವುದು. ಬ್ರಹ್ಮವಸ್ತುವಿಷಯವಾದ ಜ್ಞಾನವೇ ಜ್ಞಾನವೆನಿಸುವುದು. ಸತ್ಯಂ ಜ್ಞಾನಮನಂತಂ ಬ್ರಹ್ಮ (ತೈ ಉ ೨-೧) ಎಂಬ ಶ್ರುತಿವಾಕ್ಯದಲ್ಲಿ ಬ್ರಹ್ಮವಸ್ತುವಿನ ಸೂಕ್ಷ್ಮವಿವರಣೆ ಇದೆ. ಇದರಲ್ಲಿ ಜ್ಞಾನವೇ ಬ್ರಹ್ಮವೆಂದು ಹೇಳಿದೆ. ಜ್ಞಾನವೆಂದರೆ ಬಾಹ್ಯಪ್ರಪಂಚಜ್ಞಾನವಲ್ಲ. ಪರವಸ್ತುವಿನ ನಿಜಸ್ವರೂಪವನ್ನು ವಿವರಿಸುವ ಜ್ಞಾನವು. ಇಂತಹ ಜ್ಞಾನವು ಗಾಯತ್ರೀಮಹಾಮಂತ್ರದಲ್ಲಿ ನಿರ್ದೇಶಿಸಲ್ಪಟ್ಟಿದೆ. ಆದುದರಿಂದಲೇ ಎಂದರೆ ಸರ್ವವಿಷಯಗಳಲ್ಲಿಯೂ ಶ್ರೇಷ್ಠವಾದ ಬ್ರಹ್ಮಜ್ಞಾನವನ್ನು ಬೋಧಿಸುವ ಗಾಯತ್ರೀಮಹಾಮಂತ್ರಕ್ಕೆ ಸರ್ವಶ್ರೇಷ್ಠತೆ ಇದೆ.

ಇನ್ನು ಗಾಯತ್ರಿಯಲ್ಲಿ ಪ್ರತಿಪಾದಿತವಾಗಿರುವ ವಿಷಯವನ್ನು ಸೂಕ್ಷ್ಮವಾಗಿ ವಿಮರ್ಶಿಸೋಣ. ಈ ಮಂತ್ರದಲ್ಲಿರುವ ಶಬ್ದಗಳಿಂದ ಸ್ಪಷ್ಟವಾಗುವ ಸ್ಥೂಲಾರ್ಥವನ್ನೇ ತೆಗೆದುಕೊಂಡು ಪರಿಶೀಲಿಸಿದರೂ—ನಮ್ಮ ಬುದ್ಧಿಯನ್ನೂ, ನಾವು ಮಾಡುವ ಕರ್ಮಗಳನ್ನೂ ಯಾವ ದೇವನು (ನಮ್ಮಲ್ಲಿ ಅಂತರಾತ್ಮನಾಗಿದ್ದುಕೊಂಡು) ಪ್ರೇರಿಸುವನೋ ಅಂತಹ ಪ್ರಕಾಶಮಾನನಾದ ಸವಿತೃ (ಸೂರ್ಯ) ದೇವನ ಶ್ರೇಷ್ಠವಾದ ತೇಜಸ್ಸನ್ನು ಧ್ಯಾನಮಾಡೋಣ. ಇದರ ಅರ್ಥವು ಅತ್ಯುತ್ತಮವೂ, ಅತಿರಹಸ್ಯವೂ ಆದ ತತ್ತ್ವರಹಸ್ಯವನ್ನೊಳಗೊಂಡಿರುವ ವಿಷಯವು ಗೋಚರವಾಗದೆ ಇರಲಾರದು. ಪರಮಪುರುಷನ ದಿವ್ಯ ತೇಜಸ್ಸನ್ನು ಅಥವಾ ಮಹಿಮೆಯನ್ನು ಧ್ಯಾನಮಾಡುವುದು ಮಾನವನ ಸರ್ವ ಕರ್ಮಗಳಲ್ಲಿಯೂ ಮಹತ್ತ್ವಪೂರಿತವಾಗಿರುವುದಲ್ಲದೆ ಆದ್ಯ ಕರ್ತವ್ಯವೂ ಆಗಿರುತ್ತೆ. ಆದುದರಿಂದ ಐಹಿಕಾಮುಷ್ಮಿಕ ಶ್ರೇಯೋಭಿವೃದ್ಧಿಯನ್ನು ಬಯಸುವ ಪುರುಷನು ಪರಮಪುರುಷನನ್ನು ಯೋಗ್ಯವಾದ ರೀತಿಯಿಂದ ಧ್ಯಾನಿಸಲೇಬೇಕು. ಇಂತಹ ಧ್ಯಾನಕ್ಕೆ ಸಾಧ್ಯವಾದ ಮಂತ್ರವೆಂದರೆ ಗಾಯತ್ರಿಯೇ ಎಂದು ನಿಸ್ಸಂದೇಹವಾಗಿ ಹೇಳಬಹುದು.

ಒಳ್ಳೇದು, ಪರಮಪುರುಷನ ಧ್ಯಾನರೂಪವಾದ ಆರಾಧನೆಯೇನೋ ಮಾನವನ ಆದ್ಯ ಕರ್ತವ್ಯವೆಂದು ಒಪ್ಪಿಕೊಳ್ಳೋಣ. ಆದರೆ ಗಾಯತ್ರೀಮಂತ್ರದಲ್ಲಿ ಪ್ರತಿಪಾದ್ಯನಾದ ಸವಿತೃ ಎಂಬ ದೇವತೆಯನ್ನು ಏತಕ್ಕೆ ಧ್ಯಾನ ಮಾಡಬೇಕು ? ಅನೇಕ ದೇವತೆಗಳಲ್ಲಿ ಈ ಸವಿತೃವೂ ಒಬ್ಬನಲ್ಲವೇ ? ಎಲ್ಲಾ ದೇವತೆಗಳನ್ನೂ ಬಿಟ್ಟು ಈ ಸವಿತೃವನ್ನು ಮಾತ್ರ ಏತಕ್ಕೆ ಧ್ಯಾನಿಸಬೇಕು ? ಇವನನ್ನು ಧ್ಯಾನಿಸಿದರೆ ಪರಮಪುರುಷನನ್ನು ಧ್ಯಾನಮಾಡಿದಂತೆ ಆಗುವುದೇ ? ಎಂದರೆ, ಈ ಪ್ರಶ್ನೆಗಳಿಗೆಲ್ಲಾ ಒಂದೇವಾಕ್ಯದಿಂದ ಉತ್ತರವನ್ನು ಹೇಳಬಹುದು. ಹೇಗೆಂದರೆ, ಈ ಸವಿತೃದೇವನೇ

CC-0. Jangamwadi Math Collection. Digitized by eGangotri

ಪರಬ್ರಹ್ಮನು. ಇವನನ್ನು ಸವಿತೃ, ಸೂರ್ಯ, ಆದಿತ್ಯ ಎಂಬ ಅನೇಕ ನಾಮುಗಳಿಂದ ವ್ಯವಹರಿಸಿದರೂ ಇವನೇ ಪರಬ್ರಹ್ಮನೆಂಬ ವಿಷಯದಲ್ಲಿ ಯಾವ ಅನುಮಾನವೂ ಇರುವುದಿಲ್ಲ. ಈ ವಿಷಯದಲ್ಲಿ ಶ್ರುತಿವಾಕ್ಯಗಳ ಪ್ರಮಾಣಗಳು ಬೇಕಾದಷ್ಟಿವೆ—

ಆದಿತ್ಯೋ ವೈ ತೇಜ ಓಜೋ ಬಲಂ ಯಶಶ್ಚಕ್ಷುಃ ಶ್ರೋತ್ರಮಾತ್ಮಾ ಮನೋ ಮನ್ಯುರ್ಮನು-ರ್ಮೃತ್ಯುಃ ಸತ್ಯೋ ಮಿತ್ರೋ ವಾಯುರಾಕಾಶಃ ಪ್ರಾಣೋ ಲೋಕಪಾಲಃ ಕಃ ಕಿಂ ಕಂ ತತ್ಸತ್ಯಮನ್ನಮಮೃತೋ ಜೀವೋ ವಿಶ್ವಃ ಕತಮಃ ಸ್ವಯಂಭು ಬ್ರಹ್ಮೈತದಮೃತ ಏಷ ಪುರುಷ ಏಷ ಭೂತಾನಾಮಧಿಪತಿರ್ಬ್ರಹ್ಮಣಃ ಸಾಯುಜ್ಯಗ್‌ಂ ಸಲೋಕತಾಮಾಪ್ನೋತ್ಯೇ-ತಾಸಾಮೇವ ದೇವತಾನಾಗ್‌ಂ ಸಾಯುಜ್ಯಗ್‌ಂ ಸಾರ್ಷ್ಟಿತಾಗ್‌ಂ ಸಮಾನಲೋಕತಾಮಾ-ಪ್ನೋತಿ ಯ ಏವಂ ವೇದೇತ್ಯುಪನಿಷತ್ ||

(ತೈ. ಉ. ೪–೧೫)

ಈ ಆದಿತ್ಯನು (ನಮ್ಮ ಕಣ್ಣುಗಳಿಗೆ ಗೋಚರನಾಗಿರುವ ಈ ಸೂರ್ಯನು) ಕಾಂತಿವಿಶಿಷ್ಟನು, ಬಲಸ್ವರೂಪನು, ಶರೀರದಲ್ಲಿರುವ ಶಕ್ತಿಯು, ಕೀರ್ತಿಯು, ಬಾಹ್ಯೇಂದ್ರಿಯಗಳಾದ ಕಣ್ಣು ಮತ್ತು ಕಿವಿಗಳು, ದೇಹ, ಮನಸ್ಸು ಮನಸ್ಸಿನ ಧರ್ಮವಾದ ಕೋಪ, ಸ್ವಾಯಂಭುವಾದಿ ಮನುವು, ಮೃತ್ಯುವೆನಿಸಿದ ಯಮ, ಸತ್ಯ, ಮಿತ್ರ ವಾಯು ಆಕಾಶ ಪ್ರಾಣ, ಲೋಕಪಾಲ (ಅಥವಾ ಸತ್ಯ ಮೊದಲಾದ ಗುಣಗಳ ಅಭಿಮಾನಿದೇವತೆಯು) ಪ್ರಜಾಪತಿ, ಇನ್ನೂ ಹೇಳದೆ ಇರುವ ಅನಿರ್ದಿಷ್ಟವಸ್ತು ಯಾವುದಿದೆಯೋ ಅದು, ಸುಖ, ಪರವಸ್ತು, ಅನೃತರಾಹಿತ್ಯ, ವ್ರೀಹಿಯವಾದಿ ಆಹಾರ, ಆಯುಸ್ಸು, ಮರಣವಿಲ್ಲದಿರುವಿಕೆ, ಜೀವ ಅಥವಾ ಆತ್ಮಾ ಇವರುಗಳ ಅನೇಕ ಭೇದಗಳು, ಅತಿಶಯವಾದ ಸುಖಸ್ವರೂಪ ಉತ್ಪನ್ನರಹಿತನಾದ ಪ್ರಜಾಪತಿ, ಸಮಸ್ತಪ್ರಾಣಿಗಳ ಪಾಲಕ, ಇವೇ ಮೊದಲಾದ ಯಾವ ಯಾವ ವಸ್ತುಗಳು ಈ ಪ್ರಪಂಚದಲ್ಲಿವೆಯೋ ಅವೆಲ್ಲಾ ಈ ಆದಿತ್ಯನೇ, ಎಂದರೆ ಆದಿತ್ಯಸ್ವರೂಪವಾದ ಬ್ರಹ್ಮನೇ ಆಗಿರುವುದು. ಸರ್ವ ಭೂತಗಳಿಗೂ ಅಧಿಪತಿಯೂ ಸರ್ವಾತ್ಮಕನೂ ಆದ ಈ (ಆದಿತ್ಯನಾಮಕ) ಪುರುಷನನ್ನು ಯಾವ ಪುರುಷನು ಉಪಾಸನೆ ಮಾಡುವನೋ ಅವನು ಬ್ರಹ್ಮಪದವಿಯನ್ನು ಎಂದರೆ ಬ್ರಹ್ಮಸಾಯುಜ್ಯವನ್ನು (ಬ್ರಹ್ಮನೊಡನೆ ಐಕ್ಯ ವನ್ನು) ಪಡೆಯುವನು. ಉಪಾಸನೆಗಳಲ್ಲಿ ಎರಡುವಿಧವು. ಸರ್ವವೂ ಪರಬ್ರಹ್ಮನೆಂಬ ಭಾವನೆಯಿಂದ ಉಪಾಸನೆಮಾಡಿ ದರೆ ಬ್ರಹ್ಮಸಾಯುಜ್ಯವನ್ನು ಪಡೆಯುವನು ಹಾಗಿಲ್ಲದೆ ಸಾಧಾರಣರೀತಿಯಿಂದ ಎಂದರೆ ದೇವತೆಯೆಂಬ ಭಕ್ತಿಭಾವದಿಂದ ಉಪಾಸನೆಮಾಡಿದರೆ ಆಯಾದೇವತೆಗಳ (ಇಂದ್ರಾದಿದೇವತೆಗಳ) ಲೋಕಗಳನ್ನು ಎಂದರೆ ಸ್ವರ್ಗಾದಿಲೋಕಗಳನ್ನು ಪಡೆದು ಸುಖಿಸುವನು ಎಂದು ಈ ಮಂತ್ರದ ಮುಖ್ಯಾಭಿಪ್ರಾಯವು. ಸಮಸ್ತವಸ್ತುಸ್ವರೂಪನೂ ಈ ಆದಿತ್ಯನೇ ಎಂದು ಹೇಳಿರುವುದರಿಂದಲೂ, ಬ್ರಹ್ಮವಸ್ತುವು ಮಾತ್ರ ಆರೀತಿ ಇರುವುದರಿಂದಲೂ ಈ ಆದಿತ್ಯನೇ ಪರಬ್ರಹ್ಮನೆಂದು ಸ್ಪಷ್ಟವಾಯಿತು.

ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ ತತ್ರ ತಾ ಋಚಸ್ತದೃಚಾ ಮಂಡಲಗ್‌ಂ ಸ ಋಚಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿರ್ದೀಪ್ಯತೇ ತಾನಿ ಸಾಮಾನಿ ಸ ಸಾಮ್ನಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿಷಿ ಪುರುಷಸ್ತಾನಿ ಯಜೂಗ್‌ಂಷಿ ಸ ಯಜುಷಾ ಮಂಡಲಗ್‌ಂ ಸ ಯಜುಷಾಂ ಲೋಕಃ ಸೈಷಾ ತ್ರಯ್ಯೇವ ವಿದ್ಯಾ ತಪತಿ ಯ ಏಷೋಽನ್ತ-ರಾದಿತ್ಯೇ ಹಿರಣ್ಮಯಃ ಪುರುಷಃ ||

(ತೈ. ಉ. ೪–೧೪)

CC-0. Jangamwadi Math Collection. Digitized by eGangotri

ಈ ಆದಿತ್ಯನೇ ಪರಮೇಶ್ವರನು. ನಮಗೆ ಕಣ್ಣಿಗೆ ಗೋಚರನಾಗಿರುವ ಈ ಆದಿತ್ಯನು ತೇಜಸ್ಸಿನಿಂದ (ಅತ್ಯಂತ ಪ್ರಕಾಶದಿಂದ) ಬೆಳಗುತ್ತಿರುವನು. ಅವನು ಬೆಳಗುತ್ತಿರುವ ಆ ತೇಜೋಮಂಡಲದಲ್ಲಿ ಋಗ್ವೇದ ಋಕ್ಕುಗಳೆಲ್ಲವೂ ಸ್ಥಾಪಿತವಾಗಿರುವವು ಎಂದರೆ ಸೂರ್ಯಮಂಡಲವು ಋಗ್ವೇದದಿಂದ ನಿಷ್ಪಾದಿತವಾಗಿ ಋಗಭಿಮಾನಿ ದೇವತೆಗಳ ಲೋಕ ಅಥವಾ ನಿವಾಸಸ್ಥಾನವಾಗಿರುವುದು. ಅದರಂತೆ ತೇಜಃಪುಂಜವಾದ ಈ ಮಂಡಲದಲ್ಲಿ ಅರ್ಚಿಸ್ವರೂಪ ಗಳಾದ ಬೃಹದ್ರಥಂತರಾದಿ ಸಾಮಮಂತ್ರಗಳೂ ಇರುವುದರಿಂದ ಸಾಮಮಂತ್ರಾಭಿಮಾನಿದೇವತೆಗಳ ನಿವಾಸಸ್ಥಾನವೂ ಆಗಿರುವುದು. ಅನಂತರ ಈ ಮಂಡಲದಲ್ಲಿ ಯಜುರ್ಮಂತ್ರಗಳೂ ಇರುವುದರಿಂದ ಯಜುರ್ಮಂತ್ರಾಭಿಮಾನಿದೇವತೆಗಳ ಲೋಕವೂ ಅಲ್ಲಿಯೇ ಇರುವುದು ಆದುದರಿಂದ ಋಗ್ವೇದ, ಯಜುರ್ವೇದ, ಸಾಮವೇದ ಮಂತ್ರಗಳ ಸ್ವಸ್ವರೂಪ ದಿಂದಲೇ ಬೆಳಗುತ್ತಿರುವ ಆದಿತ್ಯನು ಈ ತೇಜೋಮಂಡಲದಲ್ಲಿ ಹಿರಣ್ಮಯ (ಎಂದರೆ ಸುವರ್ಣಮಯ) ರೂಪ ದಿಂದ ಸುವರ್ಣಸದೃಶವಾದ ಮಹಾಕಾಂತಿಯಿಂದ ದೇದೀಪ್ಯಮಾನನಾಗಿ ಬೆಳಗುತ್ತಿರುವನು ಎಂದಭಿಪ್ರಾಯವು.

ಈ ಮಂತ್ರಗಳೂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಇತ್ಯಾದಿ ಅನೇಕಮಂತ್ರಗಳೂ ಸೂರ್ಯನ (ಅಥವಾ ಆದಿತ್ಯನ) ಪರಬ್ರಹ್ಮಸ್ವರೂಪವನ್ನು ಸ್ತುತಿಸುತ್ತವೆ. ಆದುದರಿಂಲೇ ದ್ವಿಜರಾದವರು ಪ್ರತಿದಿನವೂ ಸೂರ್ಯೋಪಾಸನೆಯನ್ನು ಮಾಡಲೇಬೇಕೆಂಬ ವಿಧಿಯಿರುವುದು. ಈ ಸೂರ್ಯೋಪಾಸನೆಯು ಸಂಧ್ಯಾವಂದನಾ ರೂಪವಾಗಿರುವುದು. ಸಂಧ್ಯಾವಂದನೆಯಲ್ಲಿ ಮೂರು ಮುಖ್ಯವಿಭಾಗಗಳಿರುವವು. ಅರ್ಘ್ಯಪ್ರದಾನ, ಗಾಯತ್ರೀ- ಮಂತ್ರಜಪ, ಉಪಸ್ಥಾನ, ಈ ಮೂರು ಕರ್ಮಗಳೂ ಸೂರ್ಯನನ್ನು ಉಪಾಸನೆಮಾಡುವುದೇ ಆಗಿವೆ. ಸಂಧ್ಯಾ ವಂದನೆಯಲ್ಲಿ ಮಾರ್ಜನ (ಪ್ರೋಕ್ಷಣ) ಮುಂತಾದ ಕರ್ಮಗಳಿದ್ದರೂ ಅವುಗಳು ದೇಹಶುದ್ಧಿಗಾಗಿ ಮಾಡುವ ಕರ್ಮಗಳು. ಅರ್ಘ್ಯಪ್ರದಾನಾದಿ ಕರ್ಮತ್ರಯಗಳೇ ಪ್ರಧಾನಕರ್ಮಗಳು. ಗಾಯತ್ರೀಮಂತ್ರವನ್ನು ಜಪ ಮಾಡುವುದಕ್ಕೆ ಮೊದಲು ಅಯಾತು ವರದಾ ದೇವೀ ಎಂದು ಮೊದಲಾದ ಮಂತ್ರಗಳಿಂದ ಆವಾಹನೆ ಮಾಡಿ, ನ್ಯಾಸಪೂರ್ವಕವಾಗಿ ದೇಹಶುದ್ಧಿಮಾಡಿಕೊಂಡು, ಏಕಾಗ್ರತೆಯಿಂದ ಧ್ಯಾನಮಾಡಿ ಅನಂತರ ಜಪಮಾಡಬೇಕು. ಜಪಾನಂತರ ಉತ್ತಮೇ ಶಿಖರೇ ಜಾತೇಎಂಬ ಮಂತ್ರಪುರಸ್ಸರವಾಗಿ ಗಾಯತ್ರೀವಿಸರ್ಜನೆಯನ್ನು ಮಾಡಿ ಬಳಿಕ ಉಪಸ್ಥಾನವನ್ನು ಮಾಡಬೇಕು. ಈ ರೀತಿ ಮಾಡುವ ಕರ್ಮಕ್ಕೆ ಸಂಧ್ಯಾವಂದನೆ ಎಂದು ಹೆಸರು. ಮಧ್ಯಾಹ್ನ ಕಾಲದಲ್ಲಿಯೂ ಸೂರ್ಯೋಪಾಸನೆಯಿಂದ ಸಹಿತವಾದ ಮಾಧ್ಯಾಹ್ನಿಕಕ್ರಿಯೆಯನ್ನು ಮಾಡಬೇಕು. ಗಾಯತ್ರೀ ಮಂತ್ರದ ಮಹಿಮೆಯನ್ನೂ ಸಂಧ್ಯಾವಂದನೆಯನ್ನೂ ಅದರ ಮಹಿಮೆಯನ್ನೂ ಅದರ ಅನುಷ್ಠಾನದಿಂದ ದೊರಕುವ ಫಲವನ್ನೂ ಸಹ ಶ್ರುತಿವಾಕ್ಯವೇ ಈರೀತಿ ವರ್ಣಿಸುತ್ತದೆ—

ರಕ್ಷಾಗ್ಂಸಿ ಹವಾ ಪುರೋಽನುವಾಕೇ ತಪೋಗ್ರಮತಿಷ್ಠಂತ ತಾನ್ಪ್ರಜಾಪತಿರ್ವರೇಣೋಪಾ- ಮಂತ್ರಯತ ತಾನಿ ವರಮವೃಣೀತಾದಿತ್ಯೋ ನೋ ಯೋದ್ಧಾ ಇತಿ ತಾನ್ಪ್ರಜಾಪತಿರಬ್ರ- ವೀದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠಂತಗ್ಂ ಹವಾ ತಾನಿ ರಕ್ಷಾಗ್ಸ್ಯಾದಿತ್ಯಂ ಯೋಧ- ಯಂತಿ ಯಾವದಸ್ತಮನ್ವಗಾತ್ತಾನಿ ಹವಾ ಏತಾನಿ ರಕ್ಷಾಗ್ಂಸಿ ಗಾಯತ್ರಿಯಾಭಿಮಂತ್ರಿ- ತೇನಾಂಭಸಾ ಶಾಮ್ಯಂತಿ ತದು ಹವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಃ ಸಂಧ್ಯಾಯಾಂ ಗಾಯತ್ರಿಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ ರಕ್ಷಾಗ್ಂಸಿ ಮಂದೇ ಹಾರುಣೇ ದ್ವೀಪೇ ಪ್ರಕ್ಷಿಪಂತಿ ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ ಪಾಪ್ಮಾನಮವಧೂನ್ವಂತ್ಯುದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯ-

CC-0. Jangamwadi Math Collection. Digitized by eGangotri

ಸ್ಕುರ್ವನ್ ಬ್ರಾಹ್ಮಣೋ ವಿದ್ವಾನ್ಸ್ಕಲಂ ಭದ್ರಮುಶ್ನುತೇऽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ಬ್ರಹ್ಮಾಪ್ಯೇತಿ ಯ ಏವಂ ವೇದ ||

(ತೈ. ಆ. ೨-೨)

ಪೂರ್ವದಲ್ಲಿ ರಾಕ್ಷಸರು ಉಗ್ರವಾದ ತಪಸ್ಸನ್ನಾಚರಿಸಿದರು. ಆಗ ದೇವನಾದ ಪ್ರಜಾಪತಿಯು ಪ್ರತ್ಯಕ್ಷನಾಗಿ ಅವರಿಗೆ ಯಾವ ವರವು ಬೇಕೆಂದು ಪ್ರಶ್ನಿಸಿದನು. ಆಗ ಅವರು ನಮಗೆ ಸೂರ್ಯನೊಂದಿಗೆ ಯುದ್ಧಮಾಡುವ ಶಕ್ತಿಯನ್ನೂ ಅವಕಾಶವನ್ನೂ ಕಲ್ಪಿಸಿಕೊಡು ಎಂದು ಪ್ರಾರ್ಥಿಸಿದರು. ಹಾಗೆಯೇ ಆಗಬಹುದು ಎಂದು ಪ್ರಜಾಪತಿಯು ಸಮ್ಮತಿಸಿದನು. ಆದುದರಿಂದಲೇ ರಾಕ್ಷಸರು ಸೂರ್ಯನು ಉದಯಿಸಿದೊಡನೆಯೇ ಅವನೊಡನೆ ಹೋರಾಡಲುಪಕ್ರಮಿಸಿ ಅಸ್ತಕಾಲದವರೆಗೂ ಹೋರಾಡುತ್ತಲೇ ಇರುವರು. ಆದರೆ ಗಾಯತ್ರೀ ಪಠನದಿಂದ ಪೂತವಾದ ಉದಕದಿಂದ ಅವರನ್ನು ಓಡಿಸಲು ಸಾಧ್ಯ. ಆದುದರಿಂದಲೇ ಬ್ರಹ್ಮವಾದಿಗಳು ಪ್ರಾತಃಸಂಧ್ಯಾಕಾಲದಲ್ಲಿಯೂ (ಸಾಯಂಸಂಧ್ಯಾಕಾಲದಲ್ಲಿಯೂ ಸಹ) ಗಾಯತ್ರಿಯನ್ನು ಪಠಿಸಿ ತತ್ಪೂತವಾದ ಉದಕದಿಂದ ಅರ್ಘ್ಯವನ್ನು ಸಮರ್ಪಿಸುತ್ತಾರೆ. ಅರ್ಘ್ಯರೂಪದಲ್ಲಿ ಅರ್ಪಿಸಿದ ಈ ಉದಕಬಿಂದುಗಳು ವಜ್ರಾತ್ಮಕವಾಗಿ ಪರಿಣಮಿಸಿ ರಾಕ್ಷಸರನ್ನು ಮಂದೇಹಾರುಣವೆಂಬ ದ್ವೀಪದಲ್ಲಿ ಎಸೆಯುತ್ತದೆ. ನಂತರ ಬ್ರಹ್ಮವಾದಿಗಳು ಪ್ರದಕ್ಷಿಣನಮಸ್ಕಾರಪೂರ್ವಕವಾದ ಕರ್ಮದಿಂದ ತಮ್ಮ ಪಾಪವನ್ನು ನೀಗಿಕೊಳ್ಳುತ್ತಾರೆ. ಈ ತತ್ತ್ವವನ್ನರಿತ ಬ್ರಾಹ್ಮಣನು (ಬ್ರಹ್ಮಜ್ಞಾನಿಯು) ಸೂರ್ಯೋದಯಕಾಲದಲ್ಲೂ ಸೂರ್ಯಾಸ್ತಮಯಕಾಲದಲ್ಲೂ ಸಹ ಗಾಯತ್ರಿಯನ್ನು ಪಠಿಸಿ ಅರ್ಘ್ಯವನ್ನರ್ಪಿಸುತ್ತಲೂ ಮತ್ತು ತನ್ಮೂಲಕ ಆದಿತ್ಯನನ್ನು ಉಪಾಸಿಸಿ ಧ್ಯಾನಿಸಿದರೆ ಅವನಿಗೆ ಸಕಲವಿಧವಾದ ಭದ್ರವೂ (ಕಲ್ಯಾಣವೂ) ಉಂಟಾಗುತ್ತದೆ. ಆದಿತ್ಯನೇ ಪರಬ್ರಹ್ಮನು. ಗಾಯತ್ರ್ಯುಪಾಸ್ಯನಾದ ಆದಿತ್ಯನೇ ಬ್ರಹ್ಮನೆಂದರಿತು ಉಪಾಸನೆಯನ್ನು ಮಾಡತಕ್ಕ ಪುರುಷನು ಬ್ರಹ್ಮಸಾಯುಜ್ಯವನ್ನು ಪಡೆದು ಬ್ರಹ್ಮರೂಪಿಯೇ ಆಗುತ್ತಾನೆ ಎಂದು ಗಾಯತ್ರೀಪಠನದ ಪ್ರಶಂಸೆಯಿದೆ.

ಸೂರ್ಯನ ಕಿರಣಗಳಿಗೆ ಕೆಲವು ರೋಗಗಳನ್ನು (ವಿಶೇಷವಾಗಿ ಚರ್ಮರೋಗಗಳನ್ನು) ವಾಸಿಮಾಡುವ ಗುಣವಿರುವುದೆಂದು ಪುರ್ವಕಾಲದಿಂದಲೂ ನಂಬಿಕೆ ಇರುವುದು. ಈಗಿನ ವೈದ್ಯಕೀಯ ಅಭಿಪ್ರಾಯವೂ ಇದನ್ನೇ ಸಮರ್ಥಿಸುವುದಾಗಿದೆ. Sun-both ಎಂಬ ಚಿಕಿತ್ಸಾಕ್ರಮವನ್ನು ಅನುಸರಿಸುವ ಪದ್ಧತಿಯೂ ಇದೆ. ಸೂರ್ಯನ ಬೆಳಕಿಗೂ, ಬಿಸಲಿಗೂ ಶರೀರವು ಪ್ರತಿನಿತ್ಯವೂ ಸ್ವಲ್ಪಕಾಲವಾದರೂ ಸ್ಪರ್ಶವಾಗುವಂತೆ ಮಾಡುವುದು ದೇಹಾರೋಗ್ಯಕ್ಕೆ ಬಹಳ ಸಹಾಯಕವಾಗುವುದೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಋಗ್ವೇದದ ಋಷಿಗಳಲ್ಲಿ ಪ್ರಸ್ಕಣ್ವನೆಂಬ ಋಷಿಯು ತನಗೆ ಉಂಟಾಗಿದ್ದ ಹೃದ್ರೋಗ ಮತ್ತೂ ಚರ್ಮರೋಗದ (ತೊನ್ನು) ನಿವಾರಣೆಗಾಗಿ ಸೂರ್ಯನನ್ನು ಪ್ರಾರ್ಥಿಸಿದ್ದಾನೆ. (ಋ. ಸಂ. ೧-೫೦ನೇ ಸೂಕ್ತ) ಅಗಸ್ತ್ಯ ಮಹರ್ಷಿಯು ವಿಷಪರಿಹಾರಕ್ಕಾಗಿ ಸೂರ್ಯನನ್ನು ಪ್ರಾರ್ಥಿಸಿದಾನೆ. (ಋ ಸಂ. ೧-೧೯೧ನೇಯ ಸೂಕ್ತ) ಇದರಂತೆಯೇ ಅನೇಕ ಋಷಿಗಳು ರೋಗಪರಿಹಾರಾರ್ಥವಾಗಿ ಸೂರ್ಯನನ್ನು ಸ್ತುತಿಸಿದಾರೆ. ಈ ಕಾರಣಗಳಿಂದಲೇ ಸೂರ್ಯನಮಸ್ಕಾರವೆಂಬ ವ್ರತವು (ಕರ್ಮವು) ಆಚರಣೆಯಲ್ಲಿ ಬಂದಿರುವುದೆಂದೂ ಇದರಿಂದ ರೋಗೋಪಶಮನವಾಗುವುದೆಂಬ ನಂಬಿಕೆಯು ಆಧಾರರಹಿತವಾದದ್ದಲ್ಲವೆಂದೂ ಧಾರಾಳವಾಗಿ ಹೇಳಬಹುದು.

ಆಧುನಿಕ ವಿಜ್ಞಾನದೃಷ್ಟಿಯಿಂದಲೂ ಸಹ ಆದಿತ್ಯ ಅಥವಾ ಸೂರ್ಯನ ಮಹತ್ತ್ವವು ಎಷ್ಟರಮಟ್ಟಿಗಿದೆ ಎಂದು ತಿಳಿಯುವುದೂ ಅವಶ್ಯಕವು. As far as this earth is concerned, the sun is the source of all energy and activity. ಬಾಹ್ಯಪ್ರಪಂಚದಲ್ಲಿ ನಾವು ನಡೆಸುವ ಸಮಸ್ತ ಚಲನವಲನ ಮತ್ತು ವ್ಯವಹಾರಗಳಿಗೂ ಸೂರ್ಯನೇ ಆಧಾರಭೂತನು. ನಾವು ತಿನ್ನುವ ಆಹಾರ, ಕುಡಿಯುವ ನೀರು ಸೇವಿಸುವ ಗಾಳಿ,

CC-0. Jangamwadi Math Collection. Digitized by eGangotri

ಉಪಯೋಗಿಸುವ ಬಟ್ಟೆ, ಸಂಚಾರಾದಿಗಳಿಗೆ ಉಪಯೋಗಿಸುವ ಎಲ್ಲಾ ವಿಧವಾದ ವಾಹನಗಳು ಇವೆಲ್ಲಕ್ಕೂ ಸೂರ್ಯನಿಂದ ನಮಗೆ ದೊರೆಯುವ ಬೆಳಕು ಮತ್ತು ಶಾಖವೇ (energy) ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಕಾರಣವು. ಹೇಗೆಂದರೆ–ನಾವು ತೆಗೆದುಕೊಳ್ಳುವ ಆಹಾರ ಮೊದಲಾದ ವಸ್ತುಗಳು ಪೃಥಿವಿ, (solid matter) ಅಪ್ (water) ತೇಜಃ (heat or energy) ವಾಯು (air) ಆಕಾಶ (sky or space) ಎಂಬ ಪಂಚಭೂತಗಳ ಸಹಾಯದಿಂದಲೇ ಲಭಿಸುವವು. ಇವೆಲ್ಲಕ್ಕೂ ಸೂರ್ಯನ ಕಿರಣಗಳ ಶಕ್ತಿಯಿಲ್ಲದಿದ್ದರೆ ಸಾಧ್ಯವಿರುವುದಿಲ್ಲ. ಸಸ್ಯಾಹಾರವಾಗಲಿ, ಮಾಂಸಾಹಾರವಾಗಲಿ ಪಂಚಭೂತಗಳಿಂದಲೇ ಉಂಟಾಗುವವು. ಇದಕ್ಕೆ ಸೂರ್ಯನ ಕಿರಣಗಳ ಶಕ್ತಿಯು (heat or energy)ಅವಶ್ಯಕವಾಗಿ ಬೇಕೇಬೇಕು. ಸೂರ್ಯನ ಬೆಳಕಿಲ್ಲದಿದ್ದರೆ ಸಸ್ಯವರ್ಗ ವಾಗಲಿ, ಪ್ರಾಣಿಗಳಾಗಲಿ ಜೀವಿಸಿರಲು ಸಾಧ್ಯವಿಲ್ಲ. ಸೂರ್ಯನ ಸಹಾಯದಿಂದಲೇ ಪೃಥಿವ್ಯಾದಿಪಂಚಭೂತಗಳಿಂದ ಸಸ್ಯವರ್ಗವೂ, ಸಸ್ಯವರ್ಗದಿಂದ ಪ್ರಾಣಿವರ್ಗವೂ ಉತ್ಪನ್ನವಾಗಿ ಅಭಿವೃದ್ಧಿಯನ್ನು ಪಡೆಯುವವು. ಇವುಗಳೇ ನಮಗೆ ಪೃಥಿವೀಸಂಬಂಧವಾದ (solid) ಆಹಾರವನ್ನು ಒದಗಿಸುವವು. ನಾವು ತಿನ್ನುವ ಆಹಾರದಲ್ಲಿ ಘನಪದಾರ್ಥ ಗಳು (solid matter) ಸರಿಯಾದ ಒಂದು ನಿರ್ದಿಷ್ಟಪ್ರಮಾಣದಲ್ಲಿರಬೇಕು. ಅನಂತರ ಅಪ್‌ಸಂಬಂಧವಾದ (fluid or water) ದ್ರವವಸ್ತುವು ಎಂದರೆ ನೀರು ನಮ್ಮ ಆಹಾರದಲ್ಲಿ ಘನಪದಾರ್ಥಕ್ಕಿಂತ ಹೆಚ್ಚುಪ್ರಮಾಣ ದಲ್ಲಿರಬೇಕು. ನಮ್ಮ ಶರೀರದಲ್ಲಿ ದ್ರವಪದಾರ್ಥವು ಅರ್ಧಕ್ಕಿಂತ ಹೆಚ್ಚುಪ್ರಮಾಣದಲ್ಲಿದೆ. ಆಹಾರವಿಷಯದಲ್ಲಿ ಘನಪದಾರ್ಥಕ್ಕಿಂತ ದ್ರವವಸ್ತುವು (ನೀರು) ಹೆಚ್ಚು ಆವಶ್ಯಕವಾಗಿರುವುದು. ಘನವಸ್ತುವಿನಿಂದ ಸಹಿತವಾದ ಆಹಾರವಿಲ್ಲದೆ ಅನೇಕದಿವಸಗಳವರೆಗೆ ಜೀವಿಸಿರಲು ಸಾಧ್ಯವು. ಆದರೆ ನೀರನ್ನು ಕುಡಿಯದೆ (ಅಥವಾ ಬೇರೆವಿಧವಾದ ಯಾವ ದ್ರವವಸ್ತುವನ್ನೂ ಸೇವಿಸದೆ) ಮೂರು ನಾಲ್ಕುದಿನಗಳಿಗಿಂತ ಹೆಚ್ಚಾಗಿ ಬದುಕಲು ಸಾಧ್ಯವಿಲ್ಲ. ತೇಜಸ್ಸು (ಶಾಖವು) ಈ ಎರಡು ವಸ್ತುಗಳಿಗಿಂತ ಹೆಚ್ಚು ಅವಶ್ಯಕವು. ದೇಹದಲ್ಲಿ ಶಾಖವಿಲ್ಲದಿದ್ದರೆ ಕೆಲವು ಗಂಟೆಗಳಿಗಿಂತ ಹೆಚ್ಚಾಗಿ ಜೀವಿಸಿರುವುದಕ್ಕಾಗುವುದಿಲ್ಲ. ಶೀತವಲಯಗಳಲ್ಲಿ ಶೈತ್ಯಮಾರುತಕ್ಕೆ ಸಿಕ್ಕಿ ಅನೇಕರು ಮೃತಪಟ್ಟಿರುವ ನಿದರ್ಶನವುಂಟು. ವಾಯುವು ಈ ಮೂರು ವಸ್ತುಗಳಿಗಿಂತಲೂ ಹೆಚ್ಚು ಅವಶ್ಯಕವು. ಗಾಳಿಯಿಲ್ಲದೆ ಐದಾರು ನಿಮಿಷಗಳಿಗಿಂತ ಹೆಚ್ಚಾಗಿ ಜೀವಿಸಿರಲು ಸಾಧ್ಯವಿಲ್ಲ. ನಮ್ಮ ಶರೀರದ ಚಲನವಲನಗಳಿಗೂ ಇತರ ವ್ಯಾಪಾರ ವ್ಯವಹಾರಗಳಿಗೂ ಆಕಾಶವು (ಅವಕಾಶ, space) ಎಲ್ಲಕ್ಕಿಂತಲೂ ಅವಶ್ಯಕವು. ಈ ಎಲ್ಲಾ ಪದಾರ್ಥಗಳೂ ನಮಗೆ ಸೂರ್ಯನಿಂದಲೇ ದೊರೆಯುವವು. ಸೂರ್ಯನ ಬೆಳಕು ಮತ್ತು ಶಾಖವಿಲ್ಲದೆ ನಮಗೆ ಸಸ್ಯಅಥವಾ ಪ್ರಾಣಿಜನ್ಯ ವಾದ ಯಾವ ಆಹಾರವೂ ದೊರೆಯಲು ಸಾಧ್ಯವಿಲ್ಲವೆಂದು ಹಿಂದೆಯೇ ಹೇಳಿದೆ. ನಾವು ಕುಡಿಯುವ ನೀರಿಗೂ ಇದೇ ಅನ್ವಯಿಸುವುದು. ಭೂಮಿಯಮೇಲಿರುವ ನೀರಿಗೆಲ್ಲಾ ಸಮುದ್ರವೇ ಮುಖ್ಯ ಆಧಾರವು ಸಮುದ್ರದ ಉಪ್ಪುನೀರನ್ನು ಕುಡಿಯಲು ಯಾರಿಂದಲೂ ಸಾಧ್ಯವಿಲ್ಲ. ಸಮುದ್ರದ ನೀರು ಸೂರ್ಯನ ಪ್ರಚಂಡವಾದ ಕಿರಣಗಳ ಶಾಖದಿಂದ ಕಾದು ಆವಿಯ ರೂಪದಲ್ಲಿ ಅಂತರಿಕ್ಷದಲ್ಲಿ ಮೇಘರೂಪವಾಗಿ ಪರಿವರ್ತಿತವಾಗಿ ಅದರಿಂದ ಭೂಮಿಯಮೇಲೆ ಮಳೆಯು ಸುರಿಯುವುದು. ಈ ಮಳೆಯ ನೀರೇ ಭೂಮಿಯಮೇಲಿರುವ ಸಮಸ್ತಪ್ರಾಣಿಗಳ ಉಪಯೋಗಕ್ಕೆ ಅರ್ಹವಾಗಿದೆ. ನದಿಗಳು, ಸರೋವರಗಳು, ಕೆರೆ, ಭಾವಿ ಮೊದಲಾದ ಸಮಸ್ತ (ಸಿಹಿನೀರಿನ) ಜಲಾಶಯಗಳಿಗೂ ಮಳೆಯ ನೀರೇ ಆಧಾರವಾಗಿದೆ. ಮಳೆಯು ಬರಬೇಕಾದರೆ ಸೂರ್ಯನ ತಾಪದಿಂದ ಮಾತ್ರ ಸಾಧ್ಯವು ನಾವು ಸೇವಿಸುವ ಗಾಳಿಯೂ ಸಹ ಸೂರ್ಯನ ಸಹಾಯವಿಲ್ಲದೆ ನಮಗೆ ಲಭಿಸುವುದಿಲ್ಲ. ಗಾಳಿಯು ಚಲನವಲನಗಳಿಲ್ಲದೆ ಇದ್ದಲ್ಲಿಯೇ ಇದ್ದರೆ ಅದು ಸೇವಿಸಲು ಅರ್ಹವಾಗುವುದಿಲ್ಲ. ಗಾಳಿಯ ಚಲನವಲನಗಳಿಗೆ ಸೂರ್ಯನ ಶಾಖವೇ ಕಾರಣವು. ನಮ್ಮ ಶರೀರದಲ್ಲಿರುವ ಶಾಖಕ್ಕೂ ಸಹ ಸೂರ್ಯನೇ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಕಾರಣವು. ನಮಗೆ ಸೂರ್ಯನಿಂದ ನೇರವಾಗಿ ಶಾಖವು ದೊರೆಯಬಹುದು, ಅಥವಾ ನಾವು ಸೇವಿಸುವ ಆಹಾರದಿಂದ ದೊರೆಯಬಹುದು. ಹೇಗೆ ದೊರೆತರೂ

CC-0. Jangamwadi Math Collection. Digitized by eGangotri

ಅದು ಸೂರ್ಯನ ಪ್ರತ್ಯಕ್ಷ ಅಥವಾ ಪರೋಕ್ಷಸಾಧನಗಳಿಂದಲೇ ದೊರೆಯುವುದು. ಇವೆಲ್ಲವೂ ಆಹಾರದ ವಿಷಯವಾಯಿತು. ಸೂರ್ಯನ ಬೆಳಕಿಲ್ಲದಿದ್ದರೆ ನಾವು ಬಾಹ್ಯವಸ್ತುಗಳನ್ನು ನಮ್ಮ ಕಣ್ಣುಗಳಿಂದ ನೋಡಲು ಸಾಧ್ಯವಿರುವುದಿಲ್ಲ. (ಇತರ ವಿಧವಾದ ದೀಪ ಮೊದಲಾದ ಬೆಳಕಿಗೂ ಸೂರ್ಯನ ಶಕ್ತಿಯೇ ಆಧಾರವು). ನಮ್ಮ ಚಲನವಲನಗಳೂ, ಸಂಚಾರಾದಿ ಸಾಧನಗಳೂ, ಇನ್ನೂ ಸಮಸ್ತವ್ಯವಹಾರಗಳೂ ಸೂರ್ಯನ ಶಕ್ತಿಯಿಂದಲೇ ನಡೆಯುವವು. ಈ ವಿಧವಾದ ಬಾಹ್ಯಪ್ರಪಂಚದ ಸ್ಥಿತಿಗಳಿಗೆ ಸೂರ್ಯನು ಕಾರಣನಾಗಿರುವುದಲ್ಲದೆ ನಮ್ಮ (ಸಮಸ್ತಪ್ರಾಣಿಗಳ) ಹೃದಯದಲ್ಲಿಯೂ ಅಂತರಾತ್ಮನಾಗಿ ಇದ್ದು ನಾವು ಮನಸ್ಸಿನಲ್ಲಿ ಯೋಚಿಸುವ ವಿಷಯುಗಳನ್ನೂ, ನಾವು ಮಾಡುವ ಕಾರ್ಯಗಳನ್ನೂ ಪ್ರೇರಿಸುತ್ತಿರುವನು ಎಂದರೆ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ಎಂಬ ಶ್ರುತಿವಾಕ್ಯದಂತೆ ಸೂರ್ಯನೇ ನಮ್ಮಲ್ಲಿ ಚೈತನ್ಯರೂಪದಿಂದ ಇದ್ದು ನಮ್ಮ ಸಮಸ್ತಕಾರ್ಯಗಳಿಗೂ ಕಾರಣನಾಗಿರುತ್ತಾನೆ. ಈ ಆದಿತ್ಯನೇ (ಸೂರ್ಯನೇ) ಕಾಲಸ್ವರೂಪನಾಗಿ ವಿಶ್ವದವ್ಯವಹಾರಗಳಿಗೆ ಕಾರಣನಾಗಿರುವನು.

> ಕಲಾತ್ಸ್ರವಂತಿ ಭೂತಾನಿ ಕಾಲಾದ್ವೃದ್ಧಿಂ ಪ್ರಯಾಂತಿ ಚ ।
> ಕಾಲೇ ಚಾಸ್ತಂ ನಿಯಚ್ಛಂತಿ ಕಾಲೋ ಮೂರ್ತಿರಮೂರ್ತಿಮಾನ್ ॥

ಆದಿತ್ಯರೂಪವಾದ ಅಥವಾ ಸಂವತ್ಸರರೂಪವಾದ ಕಾಲದಿಂದಲೇ ಸಕಲಭೂತಗಳೂ ಸಂಚರಿಸುತ್ತವೆ, ವೃದ್ಧಿಯನ್ನು ಹೊಂದುತ್ತವೆ. ಮತ್ತು ಕೊನೆಗೆ ಅಸ್ತವನ್ನು (ನಾಶವನ್ನು) ಹೊಂದುತ್ತವೆ. ಆದುದರಿಂದ ಸಮಸ್ತ ಚರಾಚರಾತ್ಮಕವಾದ ಪ್ರಪಂಚವೂ ಕಾಲಾಧೀನವಾಗಿರುತ್ತದೆ. ಸಕಲ ಪ್ರಾಣಿಗಳಿಗೂ ಅವುಗಳ ಕರ್ಮಾನುಗುಣವಾಗಿ ಫಲಗಳನ್ನು ಕೊಡುವುದಕ್ಕಾಗಿ ಉದಯಾಸ್ತಮಯರೂಪವಾದ ಸಂಚಾರಗಳಿಂದ ಲೋಕನಿರ್ವಹಣವನ್ನು ಮಾಡುವುದೂ, ನಿತ್ಯವಾದ ಸ್ಥಿತಿಯಲ್ಲಿ ಪರಮಾತ್ಮರೂಪದಲ್ಲಿರುವುದೂ ಮೊದಲಾದ ಆದಿತ್ಯನ ಜಗನ್ನಿಯಾಮಕವಾದ ವ್ಯವಹಾರವನ್ನು ಉಪನಿಷದ್ವಾಕ್ಯಗಳು ವರ್ಣಿಸುತ್ತವೆ.

ಸಕಲಲೋಕಗಳೂ ಈ ಕಾಲಚಕ್ರದಲ್ಲಿ ನೆಲಸಿವೆಯೆಂದು ತಿಳಿಯಬೇಕು. ಸಂವತ್ಸರ, ಪರಿವತ್ಸರ ಇತ್ಯಾದಿ ಹೆಸರುಗಳು ಈ ಮಹಾಕಾಲದ ಅವಯವಗಳು. ಈ ಮಹಾಕಾಲವೇ ಜಗತ್ತಿನ ವ್ಯವಹಾರಗಳಿಗೆಲ್ಲಾ ಆಧಾರವಾಗಿದೆ. ಇದನ್ನೇ ಸ್ವಭಾವ, ನಿಯಮ, ಬ್ರಹ್ಮ ಇತ್ಯಾದಿ ನಾನಾ ಹೆಸರುಗಳಿಂದ ಕರೆಯುತ್ತಾರೆ.

> ಕಿಂ ಕಾರಣಂ ಬ್ರಹ್ಮ ? ಕುತಃ ಸ್ಮ ಜಾತಾ ಜೀವಾಮ ಕೇನ ಕ್ವ ಚ ಸಂಪ್ರತಿಷ್ಠಾಃ ।
> ಅಧಿಷ್ಠಿತಾಃ ಕೇನ ಸುಖೇತರೇಷು ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾಂ ॥
>
> (ಶ್ವೇ. ಉ. ೧-೧)

ಜಗತ್ತಿನ ಮೂಲಕಾರಣವಾವುದು ? ಅದು ಬ್ರಹ್ಮವೇ, ಹಾಗಾದರೆ ಬ್ರಹ್ಮವಾವುದು ? ಅದರ ಸ್ವರೂಪವೇನು ? ನಮ್ಮ ಉತ್ಪತ್ತಿಯು ಎಲ್ಲಿಂದ ? ಯಾವುದರ ಅವಲಂಬನದಿಂದ ನಾವು ಜೀವಿಸುತ್ತೇವೆ ? ನಮ್ಮ ಸ್ಥಿತಿಗೆ ಆಧಾರವಾವುದು? ನಮ್ಮಸುಖದುಃಖಗಳು ಎಲ್ಲಿಂದ ಸಂಭವಿಸುತ್ತವೆ? ಇತ್ಯಾದಿ ಪ್ರಶ್ನೆಗಳಿಗೆ ಉತ್ತರರೂಪವಾಗಿ ಇವುಗಳಿಗೆಲ್ಲಾ ಮಹಾಕಾಲವೇ ಮೂಲವೆಂದೂ, ಕೆಲವರು ನಿಯತಿಯೆಂದೂ, ಕೆಲವರು ಸ್ವಭಾವವೆಂದೂ, ಕೆಲವರು ಬ್ರಹ್ಮವೆಂದೂ ಬೇರೆ ಬೇರೆ ಹೆಸರುಗಳಿಂದ ತತ್ತ್ವಜ್ಞರು ಕರೆಯುತ್ತಾರೆ. ಯಾವ ವಿಧವಾದ ಹೆಸರಿನಿಂದ ಕರೆದರೂ ಕಾಲಚಕ್ರವೆಂದು ವರ್ಣಿಸಿರುವುದನ್ನು ಆದಿತತ್ತ್ವವೆಂದೇ ತಿಳಿಯಬೇಕು. ಆದಿತ್ಯನು ವಸುರುದ್ರಾದಿತ್ಯಾದಿಗಳ ಲೋಕಗಳನ್ನೆಲ್ಲಾ ಬೆಳಗಿ ಅನಂತರ ಅದಕ್ಕಿಂತ ಊರ್ಧ್ವಭಾಗದಲ್ಲಿರುವ ಲೋಕವನ್ನು ಸೇರಿ ಅಲ್ಲಿ ನಿತ್ಯವಾದ ಸ್ಥಿತಿಯಲ್ಲಿರುತ್ತಾನೆ.

CC-0. Jangamwadi Math Collection. Digitized by eGangotri

ಆ ಲೋಕದಲ್ಲಿ ಆದಿತ್ಯನಿಗೆ ಉದಯವೂ ಇಲ್ಲ, ಅಸ್ತಮಯವೂ ಇಲ್ಲ, ಯಾವಾಗಲೂ ಅದ್ವಿತೀಯನಾಗಿ ವಿರಾಜಿಸುತ್ತಾ ಇರುತ್ತಾನೆ. ಉಪನಿಷತ್ತುಗಳಲ್ಲಿ ಆದಿತ್ಯನ ಈ ಪರಮಪದದ ಸ್ಥಿತಿಯನ್ನು ವರ್ಣಿಸಿದೆ. ಈ ತತ್ತ್ವವನ್ನು ತಿಳಿದವನು ಆ ಲೋಕವನ್ನು ಸೇರುತ್ತಾನೆ. ಅವನಿಗೂ ಸಹ ಉದಯಾಸ್ತಮಯಗಳಿರುವುದಿಲ್ಲ. ಯಾವಾಗಲೂ ಶಾಶ್ವತವಾದ ಅಮೃತತ್ವವೇ (ನಿತ್ಯಸುಖವೇ) ಇರುವುದು. ಆದುದರಿಂದ ಸಕಲ ಪ್ರಪಂಚವ್ಯವಹಾರಗಳಿಗೂ ಕಾರಣನಾದ ಸೂರ್ಯನೇ ಪರಬ್ರಹ್ಮನೆಂದು ಹೇಳಿರುವುದು ಸಮಂಜಸವಾಗಿರುವುದು. ಈರೀತಿಯಾಗಿ ಸೂರ್ಯನೇ ಅಥವಾ ಆದಿತ್ಯನೇ ಪರಬ್ರಹ್ಮನೆಂಪೂ ಈ ಆದಿತ್ಯ ಅಥವಾ ಸವಿತೃವನ್ನು ಪ್ರತಿಪಾದಿಸುವ ಗಾಯತ್ರೀಮಂತ್ರವೇ ಸಕಲವೇದ ಮಂತ್ರಗಳಲ್ಲಿಯೂ ಸರ್ವಶ್ರೇಷ್ಠವೆಂದೂ ನಿಶ್ಚಿತವಾಗಿರುವ ವಿಷಯದಲ್ಲಿ ಯಾವ ಅನುಮಾನವೂ ಇರುವುದಿಲ್ಲ.)

ಅತಿ ಪ್ರಾಚೀನವೂ, ಅತಿಗಹನವೂ, ಅತಿವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದ ಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದ ಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿ ಸಕಲಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ ಕರ್ನಾಟಕ ಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರು ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟಣೆಯನ್ನುತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಿಸುತ್ತಿರುವುದು ಕರ್ಣಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ದ್ವಿತೀಯರಾಜಕುಮಾರಿಗೂ ಸಮಸ್ತಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕ ಫಲಗಳಾದ ಆಯುರಾರೋಗ್ಯೈಶ್ವರ್ಯಾದಿಸಕಲಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

| ಮೈಸೂರು.<br>ನಂದನನಾಮ ಸಂ॥ ಕಾರ್ತಿಕ ಬ॥ ಪಂಚಮೀ ಗುರುವಾರ<br>ತಾ॥ 6-11-1952 | } | ಅನುವಾದಕ<br>**ಹೆಚ್. ಪಿ. ವೆಂಕಟರಾವ್,**<br>ಆಸ್ಥಾನ ಮಹಾವಿದ್ವಾನ್ |
|---|---|---|

CC-0. Jangamwadi Math Collection. Digitized by eGangotri

॥ ಶ್ರೀ ॥

# ವಿ ಷ ಯಾ ನು ಕ್ರ ಮ ಣಿ ಕೆ .



## ಮೂರನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು.

### ತೃತೀಯಮಂಡಲದ ಸೂಕ್ತಗಳು ೪೮–೬೨.



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

## ಮೂರನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು.



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

---

## ಗಾಯತ್ರೀಮಂತ್ರದ ವಿವರಣೆ.

---



CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

# ನಾಲ್ಕನೆಯ ಮಂಡಲವು.

## ೧-೧೮ ಸೂಕ್ತಗಳು.



ಮೂರನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತವು.

CC-0. Jangamwadi Math Collection. Digitized by eGangotri

# ಮೂರನೇ ಅಷ್ಟಕದಲ್ಲಿ ಐದನೆಯಅಧ್ಯಾಯವು.

---



CC-0. Jangamwadi Math Collection. Digitized by eGangotri

ಐದನೆಯ ಅಧ್ಯಾಯವು ಸಮಾಪ್ತವು.

ವಿಷಯಾನುಕ್ರಮಣಿಕೆಯು ಸಮಾಪ್ತವು.

CC-0. Jangamwadi Math Collection. Digitized by eGangotri

## ಸಂಕೇತಾಕ್ಷರಗಳ ವಿವರಣೆಯು.

---

ಅಥ. ಸಂ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ—ಆಪಸ್ತಂಬ ಧರ್ಮ ಸೂತ್ರ
ಆಪ. ಪ. ಸೂ—ಆಪಸ್ತಂಬ ಪರಿಭಾಷಾಸೂತ್ರ
ಆ. ಸೂ. ಅಥವಾ ಆ. ಆಶ್ವಲಾಯನ ಶ್ರೌತಸೂತ್ರ
ಉ. ಸೂ.—ಉಣಾದಿ ಸೂತ್ರ
ಋ. ಸಂ.—ಋಗ್ವೇದ ಸಂಹಿತಾ
ಐ. ಆ.—ಐತರೇಯಾರಣ್ಯಕ
ಐ. ಉ.—ಐತರೋಯೋಪನಿಷತ್
ಐ. ಬ್ರಾ.—ಐತರೇಯ ಬ್ರಾಹ್ಮಣ
ಛಾ. ಉ.—ಛಾಂದೋಗ್ಯೋಪನಿಷತ್
ಜೈ. ಪೂ. ಸೂ.—ಜೈಮಿನೀಯ ಪೂರ್ವಮೀಮಾಂಸಾ ಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾ ಬ್ರಾಹ್ಮಣ
ತೈ. ಆ.—ತೈತ್ತಿರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯ ಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ—ನಿರುಕ್ತ, ನಿಘಂಟು
ಪಾ. ಸೂ.—ಪಾಣಿನೀಯ ಸೂತ್ರ
ಪಾ. ಶಿ—ಪಾಣಿನೀಯ ಶಿಕ್ಷಾ
ಫಿ. ಅಥವಾ ಫಿ. ಸೂ.—ಫಿಟ್ ಸೂತ್ರ
ಬ್ರ. ಸೂ—ಬ್ರಹ್ಮ ಸೂತ್ರ
ಮ. ಭಾ.—ಮಹಾಭಾರತ
ಮ. ಸ್ಮೃ.—ಮನು ಸ್ಮೃತಿ
ಮೈ. ಸಂ.—ಮೈತ್ರಾಯಣೀಯಸಂಹಿತಾ
ಯಾ. ಸ್ಮೃ.—ಯಾಜ್ಞವಲ್ಕ್ಯ ಸ್ಮೃತಿ
ವಾ. ಸಂ.—ವಾಜಸನೇಯ ಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತ ಸೂತ್ರ
ಶ. ಬ್ರಾ.—ಶತಪಥಬ್ರಾಹ್ಮಣ
ಸಾ. ಸಂ.—ಸಾಮವೇದ ಸಂಹಿತಾ ಇತ್ಯಾದಿ.

---

CC-0. Jangamwadi Math Collection. Digitized by eGangotri



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

---

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ತೃತೀಯಾಷ್ಟಕಮಧ್ಯಸ್ಥಃ ದ್ವಿತೀಯೋಽಧ್ಯಾಯ ಆದರಾತ್ ।
ವ್ಯಾಖ್ಯಾತಃ ಸಾಯಣಾರ್ಯೇಣ ತೃತೀಯೋ ವ್ಯಾಕರಿಷ್ಯತೇ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

ಭಾಗ—೧೭

---

## ॥ ತೃತೀಯಾಷ್ಟಕದ ಅಧ್ಯಾಯಗಳು—೩, ೪, ೫ ॥

(ತೃತೀಯ ಮಂಡಲದ ಸೂಕ್ತಗಳು—೪೦-೬೨ ಮತ್ತು ಚತುರ್ಥ ಮಂಡಲದ ಸೂಕ್ತಗಳು—೧-೧೮)

## ॥ ಮೂರನೆಯ ಅಷ್ಟಕದಲ್ಲಿ ಮೂರನೆಯ ಅಧ್ಯಾಯವು ॥

### ಪೀಠಿಕೆ.

ಈ ಅಧ್ಯಾಯದ ಸೂಕ್ತಗಳೆಲ್ಲವೂ ಮೂರನೆಯ ಮಂಡಲದಲ್ಲಿಯೇ ಸೇರಿವೆ. ಹಿಂದಿನ ಎಂದರೆ ಹದಿನಾರನೆಯ ಭಾಗದ ಪ್ರಾರಂಭದಲ್ಲಿ ಮೂರನೆಯ ಮಂಡಲದ ದ್ರಷ್ಟೃವಾದ ವಿಶ್ವಾಮಿತ್ರಋಷಿಯ ವಿಷಯವಾಗಿ ವಿಸ್ತಾರವಾದ ವಿವರಣೆಯನ್ನು ಬರೆದಿರುವುದರಿಂದ ಅದನ್ನು ಮತ್ತೆ ಇಲ್ಲಿ ವಿವರಿಸುವುದು ಅನಾವಶ್ಯಕವು ಆದರೂ ಸೂಕ್ಷ್ಮವಾಗಿ ಒಂದೆರಡು ಮಾತುಗಳನ್ನು ಹೇಳುತ್ತೇವೆ.

ಈ ವಿಶ್ವಾಮಿತ್ರನು ಪ್ರಸಿದ್ಧರಾದ ಸಪ್ತರ್ಷಿಗಳಲ್ಲಿ ಒಬ್ಬನು. ಋಗ್ವೇದದಲ್ಲಿ ಈ ಋಷಿದೃಷ್ಟವಾದ ಋಕ್ಕುಗಳು ಒಟ್ಟು ೫೦೧ ಇರುವವು. ವಿಶ್ವಾಮಿತ್ರಋಷಿಯ ವಿಷಯವಾಗಿ ಯಾಸ್ಕರು ತಮ್ಮ ನಿರುಕ್ತದಲ್ಲಿ—

CC-0. Jangamwadi Math Collection. Digitized by eGangotri

ವಿಶ್ವಾಮಿತ್ರ ಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ವಿಶ್ವಾಮಿತ್ರಃ ಸರ್ವಮಿತ್ರಃ । ಸರ್ವಂ ಸಂಸೃತಂ । ಸುದಾಃ ಕಲ್ಯಾಣದಾನಃ । ಪೈಜವನಃ ಪಿಜವನಸ್ಯ ಪುತ್ರಃ । ಪಿಜವನಃ ಪುನಃ ಸ್ಪರ್ಧನೀಯಜವೋ ವಾಮಿಶ್ರೀಭಾವಗತಿರ್ವಾ । ಸ ವಿತ್ತಂ ಗೃಹೀತ್ವಾ ವಿಪಾಟ್ಛುತುದ್ರ್ಯೋಃ ಸಂಭೇದಮಾಯಯೌ । ಅನುಯಯುರಿತರೇ । ಸ ವಿಶ್ವಾಮಿತ್ರೋ ನದೀಸ್ತುಷ್ಟಾವ । ಗಾಧಾ ಭವತ ಇತಿ । ಅಪಿ ದ್ವಿವದಪಿ ಬಹುವತ್ ತದ್ಯದ್ದ್ವಿವದುಪರಿಷ್ಟಾತ್ತದ್ವ್ಯಾಖ್ಯಾಸ್ಯಾಮಃ ॥

(ನಿ ೨-೨೪)

ಎಂದು ಒಂದು ಪೂರ್ವೇತಿಹಾಸವನ್ನು ಹೇಳಿರುವರು. ವಿಶ್ವಾಮಿತ್ರನೆಂದರೆ ಈ ಋಷಿಯು ಸಕಲರಿಗೂ ಸ್ನೇಹಿತನು ಅಥವಾ ಸಕಲರೂ ಇವನ ಸ್ನೇಹಿತರು ಎಂದು ವಿಶ್ವಾಮಿತ್ರಶಬ್ದದ ಅವಯವಾರ್ಥವು. ಈ ಋಷಿಯು ಪಿಜವನ ಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು. ಒಂದು ಸಮಯದಲ್ಲಿ ಆ ರಾಜನು ಕೊಟ್ಟ ಧನವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗಬೇಕೆಂದು ಹೊರಟು ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳ (ಪಂಜಾಬಿನಲ್ಲಿರುವ ಈಗಿನ Beas and Sutlej ಎಂಬ ನದಿಗಳು) ಸಂಗಮ ಸ್ಥಾನಕ್ಕೆ ಬಂದನು. ಇವನಲ್ಲಿದ್ದ ದ್ರವ್ಯವನ್ನು ಅಪಹರಿಸಬೇಕೆಂದು ಕೆಲವು ಮಂದಿ ಕಳ್ಳರು ಇವನನ್ನನುಸರಿಸಿ ಬರುತ್ತಿದ್ದರು. ಇದನ್ನು ತಿಳಿದು ವಿಶ್ವಾಮಿತ್ರನು ಹೇಗಾದರೂ ಮಾಡಿ ದಾರಿಗೆ ಅಡ್ಡಲಾಗಿರುವ ಈ ನದಿಗಳನ್ನು ದಾಟಬೇಕೆಂದು ಪ್ರಯತ್ನಿಸಲು ಅವು ಪ್ರವಾಹದ ನೀರಿನಿಂದ ಬಹಳ ಆಳವಾಗಿದ್ದುದರಿಂದ ಸಾಧ್ಯವಾಗಲಿಲ್ಲ. ಆಗ ಋಷಿಯು ಈ ನದಿಗಳನ್ನು ಪ್ರಾರ್ಥಿಸುತ್ತಾ ತಮ್ಮ ನೀರನ್ನು ಕಡಿಮೆಮಾಡಿಕೊಂಡು ತಾನು ಹಾದುಹೋಗಲು ಅನುಕೂಲನಾಗುವಂತೆ ಮಾಡಬೇಕೆಂದು ಸ್ತೋತ್ರಮಾಡಿದನೆಂದು ಋ. ಸಂ. ೩-೩೩ ನೆಯ ಸೂಕ್ತದಲ್ಲಿಯೂ ಮತ್ತು ೩-೫೩-೯ ರಿಂದ ೧೧ ಋಕ್ಕುಗಳಲ್ಲಿಯೂ ಹೇಳಿದೆ.

ಈ ವಿಶ್ವಾಮಿತ್ರಋಷಿಯು ಋ. ಸಂ. ೩-೩೩-೫ ರಲ್ಲಿ ತಾನು ಕುಶಿಕನ ಮಗನೆಂದು ಹೇಳಿಕೊಂಡಿದ್ದಾನೆ. ವಿಶ್ವಾಮಿತ್ರನಿಗೂ ವಸಿಷ್ಠಋಷಿಗೂ ದ್ವೇಷಾಸೂಯೆಗಳಿದ್ದವೆಂದು ರಾಮಾಯಣ, ಭಾರತ ಮತ್ತು ಇತರ ಪುರಾಣಗಳಲ್ಲಿ ಹೇಳಿದೆ. ಇದಕ್ಕೆ ಆಧಾರವೂ ಋಗ್ವೇದದಲ್ಲಿ ಕೆಲವುಕಡೆ ಇದೆ. ಅದನ್ನು ಆಯಾ ಸಂದರ್ಭಗಳಲ್ಲಿ ವಿವರಿಸಲಾಗುವುದು. ಶುನಶ್ಶೇಫನ ವಿಷಯವಾದ ಇತಿಹಾಸದಲ್ಲಿ ವಿಶ್ವಾಮಿತ್ರಋಷಿಯ ಪಾತ್ರವು ಬಹು ಮುಖ್ಯವಾಗಿದೆ. ಐತರೇಯ ಬ್ರಾಹ್ಮಣದಲ್ಲಿ ವಿಸ್ತಾರವಾಗಿ ಹೇಳಿರುವ ಈ ಇತಿಹಾಸವನ್ನು ನಾವು ಋ. ಸಂ. ೩ನೆಯ ಭಾಗದಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ. ಇದಲ್ಲದೆ ಐತರೇಯಾರಣ್ಯಕ, ಐತರೇಯಬ್ರಾಹ್ಮಣ, ತೈತ್ತಿರೀಯಸಂಹಿತಾ, ಕಾಠಕಸಂಹಿತಾ, ಮೈತ್ರಾಯಣೀಯಸಂಹಿತಾ, ಕೌಶೀತಕೀಬ್ರಾಹ್ಮಣ, ಪಂಚವಿಂಶಬ್ರಾಹ್ಮಣ, ಜೈಮಿನೀಯ ಉಪನಿಷದ್ಬ್ರಾಹ್ಮಣ ಮೊದಲಾದ ವೈದಿಕಗ್ರಂಥಗಳಲ್ಲಿ ವಿಶ್ವಾಮಿತ್ರನ ಸಂಬಂಧವಾದ ವರ್ಣನೆಗಳಿವೆ.

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಇಂದ್ರ ತ್ವೇತಿ ನವರ್ಚಂ ದ್ವಿತೀಯಂ ಸೂಕ್ತಂ ವೈಶ್ವಾಮಿತ್ರಂ ಗಾಯತ್ರಮೈಂದ್ರಂ । ತಥಾ ಚಾನುಕ್ರಾಂತಂ । ಇಂದ್ರ ತ್ವಾ ಗಾಯತ್ರಂ ಹೀತಿ ॥ ಅಗ್ನಿಷ್ಟೋಮೇ ಪ್ರಾತಃಸವನೇ ಬ್ರಾಹ್ಮಣಾಚ್ಛಂಸಿ-ಶಸ್ತ್ರ ಇದಂ ಸೂಕ್ತಂ । ಸೂತ್ರಿತಂ ಚ । ಇಂದ್ರ ತ್ವಾ ವೃಷಭಮುದ್ವೇದಭೀತಿ ತಿಸ್ರಃ । ಆ. ೫-೧೦ । ಇತಿ ॥ ಆದ್ಯಾ ಪ್ರಾತಃಸವನೇ ಬ್ರಾಹ್ಮಣಾಚ್ಛಂಸಿನಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಇಂದ್ರ ತ್ವಾ ವೃಷಭಂ ಮರುತೋ ಯಸ್ಯ । ಆ. ೫-೫ । ಇತಿ ॥

ಅನುವಾದವು—ಇಂದ್ರ ತ್ವಾ ಎಂಬ ಈ ಸೂಕ್ತವು ಮೂರನೆಯ ಮಂಡಲದ ನಾಲ್ಕನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಇಂದ್ರನು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ ಇಂದ್ರ ತ್ವಾ ಗಾಯತ್ರಂ ಹಿ ಎಂದು ಮೊದಲಾಗಿ ಹೇಳಿರುವುದು. ಅಗ್ನಿಷ್ಟೋಮಯಾಗದಲ್ಲಿ ಪ್ರಾತಃಸವನವೆಂಬ ಪ್ರಾತಃಕಾಲದ ಸೋಮರಸವನ್ನು ಹಿಂಡುವ ಕರ್ಮವಿಶೇಷದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಶಸ್ತ್ರಮಂತ್ರವನ್ನು ಪಠಿಸುವುದಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಇಂದ್ರ ತ್ವಾ ವೃಷಭಮುದ್ವೇದಭೀತಿ ತಿಸ್ರಃ ಎಂಬ ಸೂತ್ರ ದಿಂದಲೂ (ಆ. ೫-೧೦) ಮತ್ತು ಪ್ರಾತಸ್ಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪಠಿಸಬೇಕಾದ ಪ್ರಸ್ಥಿತಯಾಜ್ಯಾಮಂತ್ರಕ್ಕಾಗಿ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ ಇಂದ್ರ ತ್ವಾ ವೃಷಭಂ ಮರುತೋ ಯಸ್ಯ ಎಂಬ ಸೂತ್ರದಿಂದಲೂ (ಆ. ೫-೫) ವಿವೃತವಾಗಿರುವುದು.

॥ ಓಂ ॥

## ಸೂಕ್ತ—೪೦

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೦ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧, ೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥

॥ ಋಷಿಃ—ವಿಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಗಾಯತ್ರೀ ॥

---

ಸಂಹಿತಾಪಾಠಃ

ಇಂದ್ರ ತ್ವಾ ವೃಷಭಂ ವಯಂ ಸುತೇ ಸೋಮೇ ಹವಾಮಹೇ ।

ಸ ಪಾಹಿ ಮಧ್ವೋ ಅಂಧಸಃ ॥ ೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಇಂದ್ರ । ತ್ವಾ । ವೃಷಭಂ । ವಯಂ । ಸುತೇ । ಸೋಮೇ । ಹವಾಮಹೇ ।

ಸಃ । ಪಾಹಿ । ಮಧ್ವಃ । ಅಂಧಸಃ ॥ ೧ ॥

ಸಾಯಣಭಾಷ್ಯಂ

ಇಂದೌ ದ್ರವತಿ ಸೋಮರಸೇ ರಮತೇ ಕ್ರೀಡತೀತೀಂದ್ರಃ । ಯದ್ವಾ ಇದಂ ಸರ್ವಂ ಜಗತ್ಸಾ-ಕ್ಷಾದ್ದರ್ಶಯತೀತೀಂದ್ರಃ । ತಸ್ಯ ಸಂಬುದ್ಧಿಃ । ಹೇ ಇಂದ್ರ ವೃಷಭಂ ಕಾಮಾನಾಂ ವರ್ಷಕಂ ತ್ವಾ ತ್ವಾಂ ಸುತೇ ಗ್ರಾವಭಿರಭಿಷುತೇ ಸೋಮೇ ವಯಂ ಹವಾಮಹೇ । ಸೋಮಪಾನಾರ್ಥಮಾಹ್ವಯಾಮಃ । ಸ ತ್ವಂ ಮಧ್ವೋ ಮದಕರಮಂಧಸೋಽನ್ನಲಕ್ಷಣಂ ಸೋಮಂ ಪಾಹಿ । ಪಿಬ । ಇಂದ್ರಶಬ್ದಂ ಯಾಸ್ಕೋ ಬಹುಧಾ ನಿರ್ವಿವೇಚ । ಇಂದ್ರ ಇರಾಂ ದೃಣಾತೀತಿ ವೇರಾಂ ದದಾತೀತಿ ವೇರಾಂ ದಧಾತೀತಿ ವೇರಾಂ ದಾರಯತೀತಿ ವೇರಾಂ ಧಾರಯತೀತಿ ವೇಂದವೇ ದ್ರವತೀತಿ ವೇಂದೌ ರಮತ ಇತಿ ವೇಂದ್ಧೇ ಭೂತಾನೀತಿ ವಾ । ತದ್ಯ-ದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯೇಂದ್ರತ್ವಮಿತಿ । ಯತ್ರ ಯತ್ರ ಯೋಽರ್ಥೋಽನುಗುಣಸ್ತತ್ರ ಸೋಽರ್ಥಃ ಸ್ವೀಕಾರ್ಯಃ । ಇದಂದರ್ಶನಾದಿತ್ಯೌಪಮನ್ಯವಃ । ಇದಂ ಬ್ರಹ್ಮ ಸಾಕ್ಷಾತ್ಪಶ್ಯತೀತೀಂದ್ರಃ । ತಥಾ ಚಾರಣ್ಯಕೇ ಶ್ರೂಯತೇ । ಸ ಏತಮೇವ ಪುರುಷಂ ಬ್ರಹ್ಮತತಮಮಪಶ್ಯದಿದಮದರ್ಶಮಿತೀ೩ । ತಸ್ಮಾದಿಂದ್ರೋ ನಾಮೇದಂದ್ರೋ ಹ ವೈ ನಾಮ ತಮಿದಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋ-ಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ । ಐ. ಆ. ೨-೪-೩ । ಇತಿ ॥ ಇಂದ್ರ । ಇದಿ ಪರಮೈಶ್ವರ್ಯೇ ಇತಿ ಧಾತುಃ । ಸ್ವಮಾಯಯಾ ಜಗದ್ರೂಪತ್ವಂ ಪರಮೈಶ್ವರ್ಯಂ । ಅನೇನಾಭಿಪ್ರಾಯೇಣ ಶ್ರೂಯತೇ । ಇಂದ್ರೋ ಮಾಯಾಭಿಃ ಪುರುರೂಪ ಈಯತ ಇತಿ । ಇಂದುಶಬ್ದ ಉಪಪದೇ ರಮತೇರನ್ಯೇಭ್ಯೋಽಪಿ ದೃಶ್ಯತ ಇತಿ ಡಃ । ಪೂರ್ವಪದಸ್ಯೋಕಾರಲೋಪಃ । ಇದಿ ಪರಮೈಶ್ವರ್ಯೇ ಇತ್ಯಸ್ಮಾದೃಜ್ರೇಂದ್ರಾಗ್ರೇ-ತ್ಯಾದಿನಾ ರನ್ಪ್ರತ್ಯಯಾಂತತ್ವೇನ ನಿಪಾತಿತಃ । ಏವಮೇತಾನಿ ನಿರ್ವಚನಾನಿ ದ್ರಷ್ಟವ್ಯಾನಿ । ಆಮಂತ್ರಿತಾ-ದ್ಯುದಾತ್ತತ್ವಂ । ಹವಾಮಹೇ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಲಟಿ ರೂಪಂ । ಮಧ್ವಃ । ಮಧುಶಬ್ದಃ ಫಲಿಪಾಟೀತ್ಯಾದಿನೋನ್ಪ್ರತ್ಯಯಾಂತಃ । ಅಗಮಾನುಶಾಸನಸ್ಯಾನಿತ್ಯತ್ವಾನ್ನುಮ-ಭಾವಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಃ । ಯಣಾದೇಶಃ । ಅಂಧಸಃ । ಅದೇರ್ನುಮ್ ಧಶ್ಚೇತ್ಯಸುನ್ । ನಿತ್ಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ವೃಷಭಂ—ಕಾಮವರ್ಷಕನಾದ । ತ್ವಾ—ನಿನ್ನನ್ನು । ವಯಂ—ನಾವು । ಸೋಮೇ ಸುತೇ—ಸೋಮರಸವು ಹಿಂಡಲ್ಪಟ್ಟು ಸಿದ್ಧವಾಗಿರುವುದರಿಂದ । ಹವಾಮಹೇ—ಪ್ರಾರ್ಥಿಸಿ ಕರೆಯು ತ್ತೇವೆ । ಸಃ—ಅಂತಹ (ಮಹಿಮೆಯುಳ್ಳ) ನೀನು । ಮಧ್ವಃ—ಮಧುರವಾದ ರಸಯುಕ್ತವಾದುದೂ । ಅಂಧಸಃ—ಅನ್ನವೆಂದು ಹೇಳಲ್ಪಡುವ ಸೋಮರಸವನ್ನು । ಪಾಹಿ—ಪಾನಮಾಡು.

CC-0. Jangamwadi Math Collection. Digitized by eGangotri

## ಭಾವಾರ್ಥ

ಎಲೈ ಇಂದ್ರನೇ, ಕಾಮುವರ್ಷಕನಾದ ನಿನ್ನನ್ನು ನಾವು ಸೋಮುರಸವನ್ನು ಹಿಂಡಿ ಸಿದ್ಧಮಾಡಿರುವುದರಿಂದ ಪ್ರಾರ್ಥಿಸಿ ಕರೆಯುತ್ತೇವೆ. ಮಹಾಮಹಿಮನಾದ ನೀನು ಮಾಧುರ್ಯದಿಂದ ಕೂಡಿ ಅನ್ನವೆಂದು ಹೇಳಲ್ಪಡುವ ಈ ಸೋಮರಸವನ್ನು ಪಾನಮಾಡು.

## English Translation

We invoke you, Indra, showerer (of benefits), to the effused libation: do you drink of the exhilarating beverage.

## ವಿಶೇಷವಿಷಯಗಳು

ಇಂದ್ರ— ಇಂದ್ರಶಬ್ದದ ನಿರ್ವಚನವನ್ನು ಭಾಷ್ಯಕಾರರು ಈ ರೀತಿ ವಿವರಿಸಿದ್ದಾರೆ- **ಇಂದೌ ಸ್ರವತಿ ಸೋಮರಸೇ ರಮತೇ ಕ್ರೀಡತೀತೀಂದ್ರಃ ।** ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡಿ ತೆಗೆಯುವಾಗ ಸೋಮ ರಸದ ಬಿಂದುಗಳು ಜಿನುಗುತ್ತಾ ತೊಟ್ಟಿಕ್ಕುವುದನ್ನು ನೋಡಿ ಇಂದ್ರನು ಸಂತೋಷದಿಂದ ನಲಿದಾಡುತ್ತಾನೆ. ಆದುದರಿಂದ ಇಂದ್ರನೆಂಬ ಹೆಸರು. ಅಥವಾ-**ಯೆದ್ವಾ ಇದಂ ಸರ್ವಂ ಜಗತ್ಸಾಕ್ಷಾದ್ದರ್ಶಯತೀತೀಂದ್ರಃ ।** ಈ ಸಮಸ್ತ ಜಗತ್ತನ್ನೂ ಪ್ರತ್ಯಕ್ಷವಾಗಿ ತೋರಿಸುತ್ತಾನಾದ್ದರಿಂದ ಇಂದ್ರನಿಗೆ ಇಂದ್ರನೆಂಬ ಹೆಸರು ಸಲ್ಲುವುದು. ಇದಲ್ಲದೆ ಯಾಸ್ಕರು ಇಂದ್ರಶಬ್ದದ ನಿರ್ವಚನವನ್ನು ಬಹುಪ್ರಕಾರವಾಗಿ ಹೇಳಿದಾರೆ-

**"ಇಂದ್ರ ಇರಾಂ ದೃಣಾತೀತಿ ವೇರಾಂ ದದಾತೀತಿ ವೇರಾಂ ದಧಾತೀತಿ ವೇರಾಂ ದಾರಯತೀತಿ ವೇರಾಂ ಧಾರಯತೀತಿ ವೇಂದವೇ ದ್ರವತೀತಿ ವೇಂದೌ ರಮತ ಇತಿ ವೇಂಧೇ ಭೂತಾನೀತಿ ವಾ ತದ್ಯದೇನಂ ಪ್ರಾಣೈಃ ಸಮೈಂಧಂಸ್ತದಿಂದ್ರಸ್ಯೇಂದ್ರತ್ವಮಿತಿ ವಿಜ್ಞಾಯತ ಇದಂಕರಣಾದಿತ್ಯಾಗ್ರಾಯಣ ಇದಂದರ್ಶ- ನಾದಿತ್ಯೌಪಮನ್ಯವ ಇಂದತೇರ್ವೈಶ್ವರ್ಯಕರ್ಮಣ ಇಞ್ಛತ್ರೂಣಾಂ ದಾರಯಿತಾ ವಾ ದ್ರಾವಯಿತಾ ವಾದರಯಿತಾ ಚ ಯಜ್ವನಾಂ । ಇತಿ । ನಿ. ೧೦-೮ ॥"** ಇದರ ಅರ್ಥಾನುವಾದವನ್ನು ಅವರೇ ಮಾಡಿದಾರೆ.

(1) **ದೃ ವಿದಾರಣ ಇತಿ ಧಾತುಃ । ಇರಾಮನ್ನಮುದ್ದಿಶ್ಯ ತನ್ನಿಷ್ಪಾದಕಜಲಸಿಧ್ಯರ್ಥಂ ದೃಣಾತಿ ಮೇಘಂ ವಿದೀರ್ಣಂ ಕರೋತೀತೀಂದ್ರಃ**— ದೃ ಎಂಬ ಧಾತುವಿಗೆ ಸೀಳು ವುದು, ಕತ್ತರಿಸುವುದು ಎಂದರ್ಥವು. ಇರಾ ಎಂದರೆ ಅನ್ನವು (ಆಹಾರವು) ಓಷಧಿವನ ಸ್ಪತಿಗಳಿಂದ ಎಂದರೆ ಸಸ್ಯವರ್ಗದಿಂದ ನಮಗೆ ಲಭಿಸುವುದು. ಆ ಸಸ್ಯವರ್ಗವು ಬೆಳೆಯ ಬೇಕಾದರೆ ಜಲವು ಅವಶ್ಯಕವು. ಆ ಜಲಕ್ಕಾಗಿ ಎಂದರೆ ಮಳೆ ಹುಯ್ಯುವುದಕ್ಕಾಗಿ ಮೇಘವನ್ನು (ವಿದ್ಯುತ್, ವಜ್ರಾಯುಧದಿಂದ) ಕತ್ತರಿಸುವವನಾದ ಕಾರಣ ಇಂದ್ರನೆಂಬ ಹೆಸರಾಯಿತು.

(2) **ಡುದಾಞ್ ದಾನ ಇತಿ ಧಾತುಃ । ಇರಾಮನ್ನಂ ವೃಷ್ಟಿನಿಷ್ಪಾದನೇನ ದದಾತೀತೀಂದ್ರಃ ॥** ದಾ ಎಂಬ ಧಾತುವಿಗೆ ಕೊಡುವುದು ಎಂದರ್ಥವು. ಇರಾಂ ಎಂದರೆ ಅನ್ನವನ್ನು ವೃಷ್ಟಿ (ಮಳೆಯ) ಮೂಲಕ ಕೊಡುವವನಾದುದರಿಂದ ಇಂದ್ರನೆಂದು ಹೆಸರು.

CC-0. Jangamwadi Math Collection. Digitized by eGangotri

(3) **ಧಾಞ್ ಪೋಷಣಾರ್ಥಃ । ಇರಾಮನ್ನಂ ತೃಪ್ತಿಕಾರಣಂ ಸಸ್ಯಂ ದಧಾತಿ ಜಲಪ್ರದಾನೇನ ಪುಷ್ಣಾತೀತೀಂದ್ರಃ ॥** ಧಾ ಎಂಬ ಧಾತುವಿಗೆ ಪೋಷಣೆಮಾಡುವುದು ಎಂದರ್ಥವು. ಅನ್ನವನ್ನು ಕೊಡುವ ಸಸ್ಯಾದಿಗಳನ್ನು ಜಲಪ್ರದಾನದಿಂದ (ಮಳೆಯಿಂದ) ಪೋಷಿಸುವವನಾದ ಕಾರಣ ಇಂದ್ರನೆಂದು ಹೆಸರು.

(4) **ಇರಾಮುತ್ಪಾದಯಿತುಂ ಕರ್ಷಕಮುಖೇನ ಭೂಮಿಂ ವಿದಾರಯತೀತೀಂದ್ರಃ ।** ಆಹಾರೋತ್ಪಾದನೆಗಾಗಿ ಭೂಮಿಯನ್ನು ಉಳಬೇಕಷ್ಟೆ. ಭೂಮಿಯನ್ನು ಉಳುವಾಗ ಅದನ್ನು ನೇಗಲಿನಿಂದ ಸೀಳುವಂತೆ ಮಾಡಿ ಬೆಳೆಗೆ ಅನುಕೂಲಪಡಿಸುವವನಾದುದರಿಂದ ಇಂದ್ರನೆಂದು ಹೆಸರು.

(5) **ಪೂರ್ವೋಕ್ತಪೋಷಣಮುಖೇನೇರಾಂ ಧಾರಯತಿ ವಿನಾಶರಾಹಿತ್ಯೇನ ಸ್ಥಾಪಯತೀತೀಂದ್ರಃ ।** ಹಿಂದೆ ಹೇಳಿದಂತೆ ಸಸ್ಯಾದಿಗಳನ್ನು ಪೋಷಣೆಮಾಡಿ ಅವುಗಳು ನಾಶವಾಗದಂತೆ ಸಂರಕ್ಷಿಸತಕ್ಕವನಾದುದರಿಂದ ಇಂದ್ರನೆಂದು ಹೆಸರು.

(6) **ಇಂದುಃ ಸೋಮೋ ವಲ್ಲೀರಸಃ । ತದರ್ಥಂ ಯಾಗಭೂಮೌ ದ್ರವತಿ ಧಾವತೀತೀಂದ್ರಃ** ಇಂದುವೆಂದರೆ ಸೋಮಲತೆಯಿಂದ ಸಿದ್ಧಪಡಿಸಿದ ಸೋಮರಸವು. ಯಜ್ಞಭೂಮಿಯಲ್ಲಿ ಇಂತಹ ಸೋಮಪಾನಾರ್ಥವಾಗಿ ಧಾವಿಸಿ (ಬೇಗನೆ ಓಡಿ) ಬರುವವನಾದುದರಿಂದ ಇಂದ್ರನೆಂದು ಹೆಸರು.

(7) **ಇಂದೌ ಯಥೋಕ್ತೇ ಸೋಮೇ ರಮತೇ ಕ್ರೀಡತೀತೀಂದ್ರಃ ।** ಹಿಂದೆ ಹೇಳಿದ ಸೋಮರಸದಿಂದ ತೃಪ್ತನಾಗಿ ವಿಹರಿಸುವವನಾದುದರಿಂದ ಇಂದ್ರನೆಂದು ಹೆಸರು.

(8) **ಞಿಇಂಧೀ ದೀಪ್ತಾವಿತಿ ಧಾತುಃ । ಭೂತಾನಿ ಪ್ರಾಣಿದೇಹಾನಿಂಧೇ ಜೀವಚೈತನ್ಯರೂಪೇಣಾಂತಃಪ್ರವಿಶ್ಯ ದೀಪಯತೀತೀಂದ್ರಃ ॥** ಇಂಧ್ ಧಾತುವಿಗೆ, ಬೆಳಗುವುದು, ಪ್ರಕಾಶಿಸುವುದು ಎಂದರ್ಥ. ಪ್ರಾಣಿಗಳ ಶರೀರಗಳಲ್ಲಿ ಚೈತನ್ಯರೂಪದಿಂದ ಪ್ರವೇಶಿಸಿ ಅವುಗಳು ತಮ್ಮ ತಮ್ಮ ಕೃತ್ಯಗಳನ್ನು ಮಾಡುವಂತೆ ಪ್ರೇರಿಸುತ್ತಾ ಬೆಳಗುತ್ತಿರುವವನಾದುದರಿಂದ ಇಂದ್ರನೆಂದು ಹೆಸರು.

(9) **ಯದ್ಯಸ್ಮಾತ್ಕಾರಣಾದೇನಂ ಪರಮಾತ್ಮರೂಪಮಿಂದ್ರಂ ದೇವಂ ಪ್ರಾಣೈರ್ವಾಕ್‌ಚಕ್ಷುರಾದೀಂದ್ರಿಯೈಃ ಪ್ರಾಣಾಪಾನಾದಿವಾಯುಭಿಶ್ಚ ಸಹಿತಂ ಸಮ್ಬಂಧನ್ನುಪಾಸಕಾ ಧ್ಯಾನೇನ ಸಮ್ಯಕ್ಪ್ರಕಾಶಿತವಂತಸ್ತತ್ತಸ್ಮಾತ್ಕಾರಣಾದಿಂದ್ರನಾಮ ಸಂಪನ್ನಂ ।** ಪರಮಾತ್ಮರೂಪನಾದ ಈ ದೇವನನ್ನು ಉಪಾಸಕರು ವಾಕ್‌ಚಕ್ಷುರಾದೀಂದ್ರಿಯಗಳಿಂದಲೂ ಪ್ರಾಣಾಪಾನಾದಿ ವಾಯುಗಳಿಂದಲೂ ಸೇರಿಸಿ ಧ್ಯಾನದಿಂದ ಚೆನ್ನಾಗಿ ಪ್ರಕಾಶಿಸುತ್ತಿರುವಂತೆ ಭಾವಿಸುವುರಾದ್ದರಿಂದ ಇಂದ್ರನೆಂಬ ಹೆಸರಾಯಿತು.

CC-0. Jangamwadi Math Collection. Digitized by eGangotri

(10) ಆಗ್ರಾಯಣನಾಮಕೋ ಮುನಿರಿದಂಕರಣಾದಿಂದ್ರ ಇತಿ ನಿರ್ವಚನಂ ಮನ್ಯತೇ । ಇಂದ್ರೋ ಹಿ ಪರಮಾತ್ಮರೂಪೇಣೇದಂ ಜಗತ್ಕರೋತಿ—ಇದಂಕರಣ ಎಂದರೆ ಪರಮಾತ್ಮರೂಪದಿಂದ ಇಂದ್ರನು ಈ ಜಗತ್ತನ್ನು ನಿರ್ಮಾಣಮಾಡುವುದರಿಂದ (ಸೃಷ್ಟಿಸುವುದರಿಂದ) ಈ ದೇವನಿಗೆ ಇಂದ್ರನೆಂದು ಹೆಸರು ಬಂದಿತು ಎಂದು ಆಗ್ರಾಯಣನೆಂಬ ಮುನಿಯು ಹೇಳುವನು.

(11) ಔಪಮನ್ಯವನಾಮಕೋ ಮುನಿರಿದಂದರ್ಶನಾದಿಂದ್ರ ಇತಿ ನಿರ್ವಚನಮಾಹ । ಇದಮಿತ್ಯಾಪರೋಕ್ಷ್ಯಮುಚ್ಯತೇ । ಔಪಮನ್ಯವನೆಂಬ ಮುನಿಯು, ಇದನ್ನು ಎಂದರೆ ಎಲ್ಲವನ್ನೂ ನೋಡುವವನಾದುದರಿಂದ ಇಂದ್ರನೆಂದು ಹೆಸರಾಯಿತು ಎಂದು ಹೇಳುವನು. ಇಲ್ಲಿ ಇದಂ ಎಂದರೆ ಅಪರೋಕ್ಷ್ಯ, ಕಣ್ಣಿಗೆ ಪ್ರತ್ಯಕ್ಷವಾಗಿ ಗೋಚರಿಸದಿರುವುದು. ಆದುದರಿಂದಲೇ "ಪರೋಕ್ಷಪ್ರಿಯಾ ಇವ ಹಿ ದೇವಾಃ" ಎಂದು ಶ್ರುತಿಯು ಹೇಳುತ್ತಿರುವುದು.

(12) ಇದಿ ಪರಮೈಶ್ವರ್ಯೇ ಇತಿ ಧಾತುಃ । ಸ್ವಮಾಯಯಾ ಜಗದ್ರೂಪತ್ವಂ ಪರಮೈಶ್ವರ್ಯಂ । ತದ್ಯೋಗಾದಿಂದ್ರಃ । ಇದಿ ಧಾತುವಿಗೆ ಪರಮೈಶ್ವರ್ಯವೆಂಬ ಅರ್ಥವಿರುವುದು. ಈ ದೇವನಿಗೆ ತನ್ನ ಮಾಯೆಯಿಂದ ಜಗದ್ರೂಪತ್ವವೆಂಬ ಪರಮೈಶ್ವರ್ಯವಿರುವುದರಿಂದ ಇಂದ್ರನೆಂಬ ಹೆಸರಾಯಿತು. ಈ ಅಭಿಪ್ರಾಯವನ್ನು "ಇಂದ್ರೋ ಮಾಯಾಭಿಃ ಪುರುರೂಪ ಈಯತೇ" (ಋ. ಸಂ. ೬-೪೭-೧೮) ಎಂಬ ವೇದವಾಕ್ಯವು ಸಮರ್ಥಿಸುವುದು.

(13) ಇನಶಬ್ದಸ್ಯೇಶ್ವರವಾಚಕಸ್ಯಾಕಾರಲೋಪೇ ಸತಿ ನಕಾರಾಂತಮಿನ್ನಿತಿ ಪದಂ ಭವತಿ । ಞಿಭೀ ಭಯೇ ಇತಿ ಧಾತುಃ । ಸ ಚ ಪರಮೇಶ್ವರಃ ಶತ್ರೂಣಾಂ ದಾರಯಿತಾ ಭೀಷಯಿತೇತೀಂದ್ರಃ ॥ ಇನಶಬ್ದವು ಈಶ್ವರವಾಚಕವು. ಈ ಇನಶಬ್ದದ ನಕಾರದಮೇಲಿರುವ ಅಕಾರವು ಲೋಪವಾದರೆ ಇನ್ ಎಂಬ ಪದವು ನಿಲ್ಲುವುದು ಞಿಭೀ ಎಂಬ ಧಾತುವಿಗೆ ಭಯವೆಂದರ್ಥವು- ಪರಮೇಶ್ವರನಾದ ಆ ದೇವನು ಶತ್ರುಗಳಿಗೆ ಭಯವನ್ನುಂಟುಮಾಡುವವನಾದ್ದರಿಂದ ಅವನಿಗೆ ಇಂದ್ರ ನೆಂಬ ಹೆಸರು.

(14) ದ್ರು ಗತಾವಿತಿ ಧಾತುಃ । ಶತ್ರೂಣಾಂ ದ್ರಾವಯಿತಾ ಪಲಾಯನಂ ಪ್ರಾಪಯಿತೇತೀಂದ್ರಃ ॥ ದ್ರು ಎಂಬ ಧಾತುವಿಗೆ ಗತ್ಯರ್ಥ ಎಂದರೆ ಹೋಗು, ಓಡಿಹೋಗು ಎಂದರ್ಥವು. ಈ ದೇವನು ಶತ್ರುಗಳನ್ನು ಓಡಿಹೋಗುವಂತೆ ಮಾಡುವವನಾದ್ದರಿಂದ ಇವನಿಗೆ ಇಂದ್ರನೆಂದು ಹೆಸರು.

(15) ಯಜ್ವನಾಂ ಯಾಗಾನುಷ್ಠಾಯಿನಾಮಾದರಯಿತಾ ಭಯಸ್ಯ ಪರಿಹರ್ತಾ—ತನ್ನನ್ನು ಯಾಗಾದಿಗಳಿಂದ ಆರಾಧಿಸುವವರನ್ನು ಆದರಿಸಿ ಅವರ ಭಯವನ್ನು ಪರಿಹಾರಮಾಡುವವನಾದುದರಿಂದ ಈ ದೇವನಿಗೆ ಇಂದ್ರನೆಂದು ಹೆಸರು-

ಇದರಂತೆಯೇ ಇಂದ್ರಶಬ್ದಕ್ಕೆ ಅನೇಕ ನಿರ್ವಚನಗಳನ್ನು ಕಲ್ಪಿಸಬಹುದು.

CC-0. Jangamwadi Math Collection. Digitized by eGangotri

ಈ ಅರ್ಥಗಳಲ್ಲದೆ ಯಾವ ಯಾವ ಸಂದರ್ಭಗಳಲ್ಲಿ ಯಾವ ಯಾವ ಅರ್ಥವು ಇಂದ್ರನಿಗೆ ಅನುಗುಣವಾಗಿ ಹೊಂದುವುದೋ ಆಯಾ ಅರ್ಥಗಳನ್ನು ಅಲ್ಲಲ್ಲಿ ಸ್ವೀಕರಿಸಬೇಕೆಂದು ಭಾಷ್ಯಕಾರರು ಹೇಳಿದ್ದಾರೆ. ಉದಾಹರಣೆಗೆ—

> ಇದಂ ದರ್ಶನಾದಿತ್ಯಾವಮನ್ಯವಃ । ಇದಂ ಬ್ರಹ್ಮ ಸಾಕ್ಷಾತ್ಪಶ್ಯತೀತೀಂದ್ರಃ । ತಥಾ ಚಾರಣ್ಯಕೇ ಶ್ರೂಯತೇ । ಸ ಏತಮೇವ ಪುರುಷಂ ಬ್ರಹ್ಮತತಮಮಪಶ್ಯದಿದಮದರ್ಶಮಿತೀ ೩ । ತಸ್ಮಾ-ದಿಂದ್ರೋ ನಾಮೇದಂದ್ರೋ ಹ ವೈ ನಾಮ ತಮಿದಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ (ಐ. ಆ. ೨-೪-೩).

ಇಲ್ಲಿ ಇದಂ ಶಬ್ದವು ಬ್ರಹ್ಮವಾಚ್ಯವಾಗಿರುವುದು. ಆ ಬ್ರಹ್ಮನನ್ನು ಇಂದ್ರನು ಪ್ರತ್ಯಕ್ಷನಾಗಿ ನೋಡುವವನಾದ್ದರಿಂದ ಎಂದರೆ ನೋಡಲು ಶಕ್ತಿಯುಳ್ಳವನಾದ್ದರಿಂದ ಇಂದ್ರನೆಂದು ಹೆಸರು ಎಂದು ಅರ್ಥನಿವರಣೆಮಾಡಿ ಆದರ ಸಮರ್ಥನೆಗಾಗಿ ಐತರೇಯಾರಣ್ಯಕದ **ಸ ಏತಮೇವ ........... ಇವ ಹಿ ದೇವಾಃ** ಎಂಬ ಮೇಲಿನ ವಾಕ್ಯವನ್ನು ಉದಾಹರಿಸಿದ್ದಾರೆ.

**ವೃಷಭಂ—ವೃಷು ವರ್ಷಣೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಮಳೆಸುರಿಯುವಂತೆ ತನ್ನನ್ನು ಸೇವಿಸುವವರ ಇಷ್ಟಾರ್ಥಗಳನ್ನು ಸುರಿಸುವವನು ಎಂದರ್ಥವು. ಈ ಶಬ್ದವು ಸಾಮಾನ್ಯವಾಗಿ ಇಂದ್ರನ ಪರವಾಗಿ ಉಪಯೋಗಿಸಲ್ಪಡುವುದು.

**ಸೋಮೇ ಸುತೇ—ಗ್ರಾವಭಿರಭಿಷುತೇ ಸೋಮೇ ।** ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆದು ಅದನ್ನು ಪಾನಕ್ಕೆ ಯೋಗ್ಯವಾಗುವಂತೆ ಶೋಧಿಸಿ ಸಿದ್ಧಪಡಿಸಿದನಂತರ ಎಂದಭಿಪ್ರಾಯವು. ಸೋಮರಸವನ್ನು ಸಿದ್ಧಪಡಿಸುವ ವಿಧಾನವನ್ನು ನಾವು ಹಿಂದೆ ಅನೇಕಾವರ್ತಿ ವಿಸ್ತಾರವಾಗಿ ವಿವರಿಸಿದೇವೆ. ಋ. ಸಂ. ಭಾಗ ೧೦ ಪೇಜು. 631, 637, 697 ಗಳನ್ನು ನೋಡಿ. ಮತ್ತು ಇಂದ್ರನ ಸೋಮಪಾನವಿಚಾರವಾಗಿ. ಭಾಗ. 14 ಪೇಜು 606ನ್ನು ನೋಡಿ.

**ಮಧ್ವಃ ಅಂಧಸಃ—ಮದಕರಮಂಧಸೋಽನ್ನಲಕ್ಷಣಂ ಸೋಮಂ ।** ಮಧ್ವಃ ಎಂಬ ಶಬ್ದವು ಅಂಧಸಃ ಎಂಬ ಶಬ್ದಕ್ಕೆ ವಿಶೇಷಣವಾಗಿದೆ. ಈ ಶಬ್ದಕ್ಕೆ ಸಿಹಿಯಾದ, ರುಚಿಕರವಾದ, ಆಹ್ಲಾದಕರವಾದ, ಮದ ಅಥವಾ ಸಂತೋಷವನ್ನುಂಟುಮಾಡುವ ಎಂಬರ್ಥಗಳನ್ನು ಹೇಳಬಹುದು. ಅಂಧಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ ೩-೮). ಇದಲ್ಲದೆ ಅಂಧಸ್‌ಶಬ್ದಕ್ಕೆ ಯಾಸ್ಕರು-

> ಅಂಧ ಇತ್ಯನ್ನನಾಮಾಧ್ಯಾನೀಯಂ ಭವತಿ । ತಮೋಽಪ್ಯಂಧ ಉಚ್ಯತೇ ನಾಸ್ಮಿನ್ ಧ್ಯಾನಂ ಭವತಿ । ನ ದರ್ಶನಮಂಧಂತಮ ಇತ್ಯಭಿಭಾಷಂತೇ । ಅಯಮಪೀತರೋಽನ್ಧ ಏತಸ್ಮಾದೇವ । ಪಶ್ಯದಕ್ಷಣ್ವಾನ್ನ ವಿಚೇತದಂಧ ಇತ್ಯಪಿ ನಿಗಮೋ ಭವತಿ ॥
>
> (ನಿ. ೫-೧)

ಎಂದರೆ ಅಂಧಃಶಬ್ದಕ್ಕೆ ಅನ್ನವೆಂದು ಹೆಸರು. ಏತಕ್ಕೆಂದರೆ, ಅನ್ನವು ಎಲ್ಲರಿಗೂ ಬೇಕಾಗಿರುವುದರಿಂದ ಅದು ಎಲ್ಲರಿಂದಲೂ ಪ್ರಾರ್ಥಿಸಲ್ಪಡುವುದು (ಅಪೇಕ್ಷಿಸಲ್ಪಡುವುದು.) ಆದುದರಿಂದ ಅಂಧಃ ಎಂದರೆ ಅನ್ನವು. ಸೋಮ

CC-0. Jangamwadi Math Collection. Digitized by eGangotri

ರಸವಿಷಯದಲ್ಲಿಯೂ ಅನ್ನರೂಪವಾದ ಸೋಮರಸವೆಂಬ ಅರ್ಥದಲ್ಲಿ ಅಂಧಃ ಶಬ್ದದ ಪ್ರಯೋಗವು ಋಗ್ವೇದದಲ್ಲಿ ವಿಶೇಷವಾಗಿದೆ. ಅಂಧಃ ಎಂದರೆ ತನುಸ್ಸಿಗೂ (ಕತ್ತಲೆಗೂ) ಹೆಸರು. ಏಕೆಂದರೆ, ಕತ್ತಲೆಯಲ್ಲಿ ಏನೂ ಕಾಣಿಸದಿರುವುದರಿಂದ ಯಾವುದನ್ನೂ ಮಾಡಲಾಗುವುದಿಲ್ಲ. ಲೋಕವ್ಯವಹಾರದಲ್ಲಿಯೂ ಕೂಡ ಜನರು ಕಣ್ಣಿಗೆ ಕಾಣಿಸದಿರುವಂತೆ ಕತ್ತಲೆ ಕವಿದಿರುವಾಗ ಅಂಧಂತಮವೆಂದು ಹೇಳುವರು. ಈ ವಿಷಯದಲ್ಲಿ ಪಶ್ಯದೆಕ್ಷಣ್ವಾನ್ನ ವಿಚೇತದಂಧಃ (ಋ. ಸಂ. ೧-೧೬೪-೧೬) ಎಂಬ ವೇದವಾಕ್ಯದ ಉದಾಹರಣೆಯೂ ಇರುವುದು ಎಂದು ಹೇಳಿದಾರೆ.

---

ಸಂಹಿತಾಪಾಠಃ

ಇಂದ್ರ ಕ್ರತುವಿದಂ ಸುತಂ ಸೋಮಂ ಹರ್ಯ ಪುರುಷ್ಟುತ ।

ಪಿಬಾ ವೃಷಸ್ವ ತಾತೃಪಿಂ ॥ ೨ ॥

ಪದಪಾಠಃ

ಇಂದ್ರ । ಕ್ರತುऽವಿದಂ । ಸುತಂ । ಸೋಮಂ । ಹರ್ಯ । ಪುರುऽಸ್ತುತ ।

ಪಿಬ । ಆ । ವೃಷಸ್ವ । ತತೃಪಿಂ ॥ ೨ ॥

ಸಾಯಣಭಾಷ್ಯಂ

ಬ್ರಾಹ್ಮಣಾಚ್ಛಂಸಿನಃ ಪ್ರಾತಃಸವನ ಇಂದ್ರ ಕ್ರತುವಿದಮಿತಿ ಶಸ್ತ್ರಯಾಜ್ಯಾ । ಸೂತ್ರಿತಂ ಚ । ಇಂದ್ರ ಕ್ರತುವಿದಂ ಸುತಮಿತಿ ಯಾಜ್ಯಾ । ಆ. ೫-೧೦ । ಇತಿ ॥

ಹೇ ಇಂದ್ರ ಕ್ರತುವಿದಂ ಕ್ರತೋಃ ಪ್ರಜ್ಞಾಯಾ ಲಂಭಕಂ ಸುತಮಭಿಷುತಮಿಮಂ ಸೋಮಂ ಹರ್ಯ । ಪಾತುಂ ಕಾಮಯಸ್ವ । ಹೇ ಪುರುಷ್ಟುತ ಪುರುಭಿರ್ಬಹುಭಿಃ ಸ್ತುತೇಂದ್ರ ತಾತೃಪಿಂ ತರ್ಪಕಮಾಪ್ಯಾಯನಕಾರಿಣಮಿಮಂ ಸೋಮಂ ಪಿಬ । ಪೀತಮಿಮಂ ಸೋಮಮಾ ವೃಷಸ್ವ । ಜಠರೇ ಸಿಂಚ । ಯಥಾ ನಾಭೇರಧೋ ನ ಪತತಿ ತಥಾ ಧಾರಯೇತಿ ಭಾವಃ ॥ ಹರ್ಯ । ಹರ್ಯ ಗತಿಕಾಂತ್ಯೋರಿತ್ಯಸ್ಯ ಲೋಟಿ ರೂಪಂ । ನಿಘಾತಃ । ಪುರುಷ್ಟುತ । ಸ್ತುತಸ್ತೋಮಯೋಶ್ಛಂದಸೀತಿ ಸಂಹಿತಾಯಾಂ ಷತ್ವಂ । ವೃಷಸ್ವ । ವೃಷ ಸೇಚನ ಇತ್ಯಸ್ಯ ಲೋಟಿ ರೂಪಂ । ಆಙ ಉತ್ತರತ್ವಾನ್ನಿಘಾತಃ । ತಾತೃಪಿಂ । ತೃಪ ಪ್ರೀಣನ ಇತ್ಯಸ್ಮಾಚ್ಛಂದಸಿ ಸದಾದಿಭ್ಯೋ ದರ್ಶನಾದಿತಿ ಕಿನ್ । ತಸ್ಯ ಲಿಡ್ವದ್ಭಾವಾದ್ದ್ವಿರ್ವಚನಾದಿ । ಸಂಹಿತಾಯಾಮನ್ಯೇಷಾಮಪೀತ್ಯಭ್ಯಾಸಸ್ಯ ದೀರ್ಘಃ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ಪುರುಷ್ಟುತ—ಅನೇಕರಿಂದ ಸ್ತುತನಾಗತಕ್ಕ । ಇಂದ್ರ—ಎಲೈ ಇಂದ್ರನೇ । ಕ್ರತುವಿದಂ—ಪ್ರಜ್ಞಾದಾಯಕವಾದುದೂ । ಸುತಂ—ಹಿಂಡಲ್ಪಟ್ಟಿರುವುದೂ ಆದ । ಸೋಮಂ—ಸೋಮರಸವನ್ನು । ಹರ್ಯ- ಪಾನ

CC-0. Jangamwadi Math Collection. Digitized by eGangotri

**ಮಾಡಲಿಚ್ಛಿಸು । ತಾತೃಪಿಂ**—ತೃಪ್ತಿದಾಯುಕವಾದ ಈ ಸೋಮುವನ್ನು । **ಪಿಬ**—ಪಾನವಮಾಡು । **ಆ ವೃಷಸ್ವ**—ಜಠರದಲ್ಲಿ ಸುರಿ .

ಭಾವಾರ್ಥ

ಅನೇಕರಿಂದ ಸ್ತುತನಾಗತಕ್ಕ ಎಲೈ ಇಂದ್ರನೇ, ಪ್ರಜ್ಞಾದಾಯಕವಾದುದೂ, ಹಿಂಡಿ ಸಿದ್ಧವಾಗಿರುವುದೂ ಆದ ಸೋಮರಸವನ್ನು ಪಾನಮಾಡಲಿಚ್ಛಿಸು. ತೃಪ್ತಿದಾಯಕವಾದ ಈ ರಸವನ್ನು ಪಾನಮಾಡಿ ನಿನ್ನ ಜಠರವನು ತುಂಬು.

English Translation

Indra, the praised of many, accept the effused Soma juice, the conferrer of knowledge ; drink ; imbibe the satisfactory draught.

ವಿಶೇಷವಿಷಯಗಳು

ಪ್ರಾತಃಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಇಂದ್ರ ಕ್ರತುವಿದಂ ಎಂಬ ಈ ಋಕ್ಕನ್ನು ಶಸ್ತ್ರಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ಇಂದ್ರ ಕ್ರತುವಿದಂ ಸುತಮಿತಿ ಯಾಜ್ಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು.

**ಕ್ರತುವಿದಂ**-ಕ್ರತುಶಬ್ದಕ್ಕೆ ಯಾಸ್ಕರು **ಕ್ರತುಂ ಕರ್ಮ ವಾ ಪ್ರಜ್ಞಾಂ ವಾ** ಎಂದು ನಿರ್ವಚನವನ್ನು ಹೇಳಿದಾರೆ. (ನಿ. ೨-೨೮) ಇದಲ್ಲದೆ ಕ್ರತುಶಬ್ದವು ಅಪಃ ಅಪ್ನಃ ಮೊದಲಾದ ಇಪ್ಪತ್ತಾರು ಕರ್ಮನಾಮುಗಳಲ್ಲಿಯೂ (ನಿ. ೩-೧), ಕೇತಃ, ಕೇತುಃ ಮೊದಲಾದ ಹನ್ನೊಂದು ಪ್ರಜ್ಞಾನಾಮುಗಳಲ್ಲಿಯೂ ಪಠಿತವಾಗಿದೆ. (ನಿ. ೩-೧೩) ಆದುದರಿಂದ **ಕ್ರತುವಿದಂ** ಎಂದರೆ **ಪ್ರಜ್ಞಾಯಾ ಲಂಭಕಂ** ಪ್ರಜ್ಞೆಯಿಂದ, ಜ್ಞಾನದಿಂದ ಹೊಂದುವುದಕ್ಕೆ ಸಾಧ್ಯವಾದ ಎಂದರ್ಥವು ಎಂದರೆ ಸೋಮರಸವನ್ನು ಸಿದ್ಧಪಡಿಸುವುದಕ್ಕೆ ಸರಿಯಾದ ತಿಳುವಳಿಕೆ ಅಥವಾ ಜ್ಞಾನವು ಬೇಕ್ಕು ಎಂದಭಿಪ್ರಾಯವು. ಅಥವಾ ಕ್ರತುಶಬ್ದಕ್ಕೆ ಕರ್ಮವೆಂದು ಅರ್ಥಮಾಡುವುದಾದರೆ ಯಜ್ಞಕರ್ಮದಲ್ಲಿ ಸಿದ್ಧಪಡಿಸಲ್ಪಡುವ ಸೋಮರಸವೆಂದರ್ಥವಾಗಬಹುದು. ಇಂತಹ ಸೋಮರಸವನ್ನು ಎಂದಭಿಪ್ರಾಯವು.

**ಸುತಂ ಸೋಮಂ**—ಇಲ್ಲಿ **ಸುತಂ** ಎಂಬ ಶಬ್ದಪ್ರಯೋಗವು ಈ ಯಜ್ಞದಲ್ಲಿ ಈಗತಾನೆ ಹೊಸದಾಗಿ ಸೋಮಲತೆಗಳನ್ನು ಜಜ್ಜಿ ಹಿಂಡಿ ತೆಗೆದು ಶೋಧಿಸಿ ಪಾನಮಾಡಲು ಯೋಗ್ಯವಾಗುವಂತೆ ಸಿದ್ಧಪಡಿಸಿರುವ ಸೋಮರಸವೆಂದರ್ಥವು.

**ಪುರುಷ್ಟುತ—ಪುರುಭಿರ್ಬಹುಭಿಃ ಸ್ತುತೇಂದ್ರ** । ಅನೇಕ ಜನರಿಂದ ಸ್ತುತಿಸಲ್ಪಡುವ ಇಂದ್ರನು. ಇಂದ್ರನನ್ನು ಅನೇಕಜನರು, ಋತ್ವಿಕ್ಕುಗಳು, ಯಜಮಾನರು ಮೊದಲಾದವರು ಸ್ತೋತ್ರಮಾಡುವರು

**ಪಿಬ**—ಈ ಶಬ್ದದ ಅಂತ್ಯಾಕ್ಷರವು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾಪಾಠದಲ್ಲಿ ದೀರ್ಘವಾಗಿರುವುದು. ಇಂತಹ ಪ್ರಯೋಗವು ಋಗ್ವೇದದಲ್ಲಿ ವಿಶೇಷವಾಗಿರುವುದು. ಉದಾ—ಪಿಬ ಎಂಬ ಶಬ್ದವು, **ಪಿಬಾ ಸೋಮಮಭಿ** (ಋ. ಸಂ. ೬-೧೭-೧) ; **ಪಿಬಾ ಸೋಮಮಿಂದ್ರ ಮಂದತು** (ಋ. ಸಂ. ೭-೨೨-೧) ; **ಪಿಬಾ ಸೋಮಂ ಮದಾಯ** (ಋ. ಸಂ. ೮-೯೫-೩) ; **ಪಿಬಾ ಸೋಮಂ ಮಹತೇ** (ಋ. ಸಂ. ೧೦-೧೧೬-೧) ಎಂಬ ಋಕ್ಕು

CC-0. Jangamwadi Math Collection. Digitized by eGangotri

ಗಳಲ್ಲಿಯೂ, ಶ್ರುಧಿ ಎಂಬ ಶಬ್ದವು ಶ್ರುಧೀ ನೋ ಅಗ್ನೇ ಸದನೇ (ಋ. ಸಂ. ೧೦-೧೧-೯) ಶ್ರುಧೀ ನ ಇಂದ್ರ (ಋ. ಸಂ. ೬-೨೬-೧) ಶ್ರುಧೀ ಹವಮಿಂದ್ರ ಶೂರ (ಋ. ಸಂ. ೧೦-೧೪೮-೫) ಶ್ರುಧೀ ಹವಂ ತಿರಶ್ಚ್ಯಾ (ಋ. ಸಂ. ೮-೯೫-೪) ಇತ್ಯಾದಿ ಋಕ್ಕುಗಳಲ್ಲಿಯೂ ಅಂತ್ಯಾಕ್ಷರ ದೀರ್ಘವಾಗಿ ಉಪಯೋಗಿಸಲ್ಪಡುವುದು. ಇಂತಹ ಉದಾಹರಣೆಗಳು ಅನೇಕವಿವೆ.

ತಾತೃಪಿಂ— ತರ್ಪಕಮಾಪ್ಯಾಯನಕಾರಿಣಮಿಮಂ ಸೋಮಂ । ತೃಪ್ತಿಯನ್ನುಂಟುಮಾಡುವ ಎಂದರೆ ಪಾನಮಾಡಿದನಂತರ ಉದರದಲ್ಲಿ ಸೇರಿ ಅದನ್ನು ತಣ್ಣಗೆಮಾಡಿ ಸಂತೋಷವುಂಟಾಗುವಂತೆ ಮಾಡುವ ಸೋಮರಸವು. ಸೋಮರಸವನ್ನು ಪಾನಮಾಡುವುದರಿಂದ ತೃಪ್ತಿ ಅಥವಾ ಸಂತೋಷವೂ ಮದವೂ ಉಂಟಾಗುವುದೆಂದು ಅನೇಕ ವರ್ಣನೆಗಳಿವೆ.

ವೃಷಸ್ವ—ಜಠರೇ ಸಿಂಚ । ಯಥಾ ನಾಭೇರಧೋ ನ ಪತತಿ ತಥಾ ಧಾರಯೇತಿ ಭಾವಃ । ಈ ಋಕ್ಕಿನಲ್ಲಿ ಪಿಬ-ಸೋಮರಸವನ್ನು ಪಾನಮಾಡು ಎಂದು ಸ್ಪಷ್ಟವಾಗಿ ಹೇಳಿದ್ದರೂ ವೃಷಸ್ವ ಎಂಬ ಶಬ್ದಪ್ರಯೋಗವು ವ್ಯರ್ಥವಲ್ಲವೇ ಎಂದರೆ, ಇಂದ್ರನು ಸೋಮರಸಪಾನದಲ್ಲಿ ಅತ್ಯಂತ ಆಸಕ್ತನೆಂದು ಪ್ರಸಿದ್ಧಿಯಾಗಿರುವುದರಿಂದ ಸೋಮಪಾನಮಾಡುವಾಗ ನಾಭಿಯಿಂದ ಕೆಳಗೆ ಬೀಳದಂತೆ ಯಥೇಷ್ಟವಾಗಿ ಪಾನಮಾಡಿ ಜಠರದ ಒಳಭಾಗವು ಚೆನ್ನಾಗಿ ನೆನೆದು ಆಪ್ಯಾಯಮಾನವಾಗುವಂತೆ ಪಾನಮಾಡು ಎಂದು ವಿಶದವಾಗಿ ಒತ್ತಿಹೇಳುವುದಕ್ಕಾಗಿ ಪಿಬ ಮತ್ತು ವೃಷಭ ಎಂಬ ಎರಡು ಶಬ್ದಗಳ ಪ್ರಯೋಗವೂ ಉಚಿತವಾಗಿದೆ.

---

ಸಂಹಿತಾಪಾಠಃ

ಇಂದ್ರ ಪ್ರ ಣೋ ಧಿತಾವಾನಂ ಯಜ್ಞಂ ವಿಶ್ವೇಭಿರ್ದೇವೇಭಿಃ ।

ತಿರಃ ಸ್ತವಾನ ವಿಶ್ಪತೇ ॥ ೩ ॥

ಪದಪಾಠಃ

ಇಂದ್ರ । ಪ್ರ । ನಃ । ಧಿತಽವಾನಂ । ಯಜ್ಞಂ । ವಿಶ್ವೇಭಿಃ । ದೇವೇಭಿಃ ।

ತಿರಃ । ಸ್ತವಾನ । ವಿಶ್ಪತೇ ॥ ೩ ॥

ಸಾಯಣಭಾಷ್ಯಂ

ಹೇ ಸ್ತವಾನ ಸ್ತೋತೃಭಿಃ ಸ್ತೂಯಮಾನ ವಿಶ್ಪತೇ ವಿಶಾಂ ಮರುತಾಂ ಪತೇ ಹೇ ಇಂದ್ರ ವಿಶ್ವೇಭಿರ್ದೇವೇಭಿಃ ಸರ್ವೈರ್ಯಜನೀಯೈರ್ದೇವೈಃ ಸಹಿತಸ್ತ್ವಂ ಧಿತಾವಾನಂ । ವನ್ಯತೇ ಸಂಭಜ್ಯತ ಇತಿ ವಾನಂ ಹವಿಃ । ಧಿತಂ ನಿಹಿತಂ ಹವಿರ್ಯಸ್ಯ ತಂ । ಸಂಭೃತಹವಿಷ್ಕಮಿತ್ಯರ್ಥಃ । ಅಸ್ಮದೀಯಮಿಮಂ ಯಜ್ಞಂ ಪ್ರ ತಿರಃ । ಪ್ರಕರ್ಷೇಣ ವರ್ಧಯ । ಹವಿಃಸ್ವೀಕರಣೇನ ಸಂಪೂರ್ಣಂ ಕುರ್ವಿತಿ ಭಾವಃ ॥ ೩ ॥

CC-0. Jangamwadi Math Collection. Digitized by eGangotri

**ಉಪಸರ್ಗಾದ್ಬಹುಲಮಿತಿ ಸಂಹಿತಾಯಾಂ ಣತ್ವಂ । ಧಿತಾವಾನಂ । ಡುಧಾಞ್ ಧಾರಣಪೋಷಣಯೋ-ರಿತ್ಯಸ್ಮಾನ್ನಿಷ್ಠಾ । ಬಹುವ್ರೀಹೌ ಪೂರ್ವಪದಸ್ವರಃ । ತಿರಃ । ತರತೇರ್ವ್ಯತ್ಯಯೇನ ಶಃ । ಪ್ರತ್ಯಯಸ್ವರಃ । ಸ್ತವಾನ । ಷ್ಟುಞ್ ಸ್ತುತೌ । ಸಮ್ಯಾನಚ್ ಸ್ತುವ ಇತ್ಯುಪಪದಾಭಾವೇऽಪಿ ಕರ್ಮಣ್ಯಾನಚ್‌ಪ್ರತ್ಯಯಃ । ಆಮಂತ್ರಿತತ್ವಾನ್ನಿಘಾತಃ ॥**

ಪ್ರತಿಪದಾರ್ಥ

**ಸ್ತವಾನ**—(ಭಕ್ತರಿಂದ) ಸ್ತುತನಾಗುವವನೂ । **ವಿಶ್ಪತೇ**—ಪ್ರಜಾರೂಪರಾದ ಮರುತ್ತುಗಳಿಗೆ ಒಡೆಯನೂ ಆದ । **ಇಂದ್ರ**—ಎಲೈ ಇಂದ್ರನೇ । **ವಿಶ್ವೇಭಿಃ ದೇವೇಭಿಃ**—ಸಮಸ್ತವಾದ ದೇವತೆಗಳೊಡಗೂಡಿ । **ಧಿತಾ-ವಾನಂ**—ಹವಿಸ್ಸಿನಿಂದ ಕೂಡಿದ । **ನಃ ಯಜ್ಞಂ**-ನಮ್ಮ ಈ ಯಜ್ಞವನ್ನು । **ಪ್ರ ತಿರ**-ವೃದ್ಧಿಯಾಗುವಂತೆ ಮಾಡು.

ಭಾವಾರ್ಥ

ಭಕ್ತರಿಂದ ಸ್ತುತನಾಗುವವನೂ, ಪ್ರಜಾರೂಪರಾದ ಮರುತ್ತುಗಳಿಗೆ ಒಡೆಯನೂ ಆದ ಎಲೈ ಇಂದ್ರನೇ, ಸಮಸ್ತವಾದ ದೇವತೆಗಳೊಡಗೂಡಿ ಹವಿಸ್ಸಿನಿಂದ ಕೂಡಿದ ನಮ್ಮ ಈ ಯಜ್ಞವನ್ನು ವೃದ್ಧಿಯಾಗುವಂತೆ ಮಾಡು.

English Translation

Indra, lord of men, you are praised (by the devout) and aided by the gods ; perfect this our sacrifice in which the oblation is offered (to you).

ವಿಶೇಷವಿಷಯಗಳು

**ವಿಶ್ಪತೇ—ವಿಶಾಂ ಮರುತಾಂ ಪತೇ** । ಮರುದ್ದೇವತೆಗಳಿಗೆ ನಾಯಕನಾದ ಇಂದ್ರನು. ಮರುದ್ದೇವತೆಗಳಿಗೂ ಇಂದ್ರನಿಗೂ ಬಹಳ ಮುಖ್ಯವಾದ ಸಾಹಚರ್ಯವಿದೆ. ಈ ವಿಷಯವನ್ನು ನಾವು ಋ. ಸಂ. ಭಾಗ 8, ಪೇಜು 172 ಮತ್ತು ಭಾಗ 13, ಪೇಜು 210 ರಲ್ಲಿ ವಿಸ್ತಾರವಾಗಿ ವಿವರಿಸಿದ್ದೇವೆ.

ಇಂದ್ರನಿಗೂ ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವು ಶ್ರುತಿಪ್ರಸಿದ್ಧವಾದುದು. ಇಂದ್ರನಿಗೂ ಮರುತ್ತುಗಳಿಗೂ ಇರುವ ರಾಜಪ್ರಜಾ ಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ, ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಮರುತ್ತುಗಳು ಇಂದ್ರನಿಗೆ ಸಹಾಯಮಾಡುವುದೂ, ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ವಿವರಿಸಲ್ಪಟ್ಟಿದೆ.

**ಕ್ಷತ್ರಂ ವಾ ಇಂದ್ರೋ ವಿಶೋ ಮರುತೋ ವಿಶಾ ವೈ ಕ್ಷತ್ರಿಯೋ ಬಲವಾನ್ ಭವತಿ ॥**

(ಶ. ಬ್ರಾ. ೪-೩-೩-೬)

ಇಂದ್ರನು ಕ್ಷಾತ್ರತೇಜಸ್ಸುಳ್ಳ ರಾಜನು, ಮರುತ್ತುಗಳೇ ಪ್ರಜೆಗಳು. ಪ್ರಜೆಗಳ ಸಹಕಾರದಿಂದಲೇ ರಾಜನು ಶಕ್ತಿಯುಳ್ಳವನಾಗಿ ಆಗುತ್ತಾನೆಂದೂ, ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯಾಯಿತೆಂದೂ ಇಲ್ಲಿ ಸೂಚಿಸಿದೆ.

CC-0. Jangamwadi Math Collection. Digitized by eGangotri

**ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।**
(ಬೃ. ದೇ. ೪–೫೬)

ಮರುತ್ತುಗಳೊಡಗೂಡಿರುವ ಇಂದ್ರನನ್ನು ಉದ್ದೇಶಿಸಿರುವ ಕಡೆಗಳಲ್ಲೆಲ್ಲಾ ಮರುತ್ವಾನ್ ಎಂದು ಕರೆದಿದೆಯೆಂದು ಬೃಹದ್ದೇವತೆಯಲ್ಲಿ ಈ ದೇವತೆಗಳ ಸಂಬಂಧಸೂಚಕವಾದ ವಿಶೇಷಣವನ್ನು ವಿವರಿಸಿದೆ.

ಧಿತಾವಾನಂ—ವನ್ಯತೇ ಸಂಭಜ್ಯತೇ ಇತಿ ವಾನಂ ಹವಿಃ । ಧಿತಂ ನಿಹಿತಂ ಹವಿರ್ಯಸ್ಯ ತಂ । ಸಂಭೃತಹವಿಷ್ಕಮಿತ್ಯರ್ಥಃ । ವನ ಷಣ ಸಂಭಕ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ವಾನಂ ಎಂಬ ಶಬ್ದಕ್ಕೆ ಸಿದ್ಧಪಡಿಸಲ್ಪಟ್ಟ ವಸ್ತುವು ಎಂದರ್ಥವು. ಅಂತಹ ವಸ್ತುವು ಎಂದರೆ ಹವಿಸ್ಸು ಯಾವ ಕರ್ಮದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಇಡಲ್ಪಟ್ಟಿದೆಯೋ ಅಂತಹ ಕರ್ಮ ಎಂದರೆ ಯಜ್ಞವೆಂದಭಿಪ್ರಾಯವು. ಯಜ್ಞದಲ್ಲಿ ದೇವತೆಗಳಿಗೆ ಅರ್ಪಿಸುವುದಕ್ಕಾಗಿ ಹವಿಸ್ಸನ್ನು ಸಿದ್ಧಮಾಡಿ ಇಟ್ಟಿರುವರು. ಅಂತಹ ಹವಿಸ್ಸಿನಿಂದ ಕೂಡಿದ ಯಜ್ಞವೆಂದು, ಧಿತಾವಾನಂ ಎಂಬ ಶಬ್ದಕ್ಕೆ ಅರ್ಥವು.

ಪ್ರ ತಿರ—ನಾವು ಅರ್ಪಿಸುವ ಹವಿಸ್ಸನ್ನು ಸ್ವೀಕಾರಮಾಡಿ ಈ ಯಜ್ಞವನ್ನು ವೃದ್ಧಿಯಾಗುವಂತೆಮಾಡು, ಸಾಂಗಗೊಳಿಸು.

---

ಸಂಹಿತಾಪಾಠಃ

ಇಂದ್ರ ಸೋಮಾಃ ಸುತಾ ಇಮೇ ತವ ಪ್ರ ಯಂತಿ ಸತ್ಪತೇ ।
ಕ್ಷಯಂ ಚಂದ್ರಾಸ ಇಂದವಃ ॥ ೪ ॥

ಪದಪಾಠಃ

ಇಂದ್ರ । ಸೋಮಾಃ । ಸುತಾಃ । ಇಮೇ । ತವ । ಪ್ರ । ಯಂತಿ । ಸತ್ಽಪತೇ ।
ಕ್ಷಯಂ । ಚಂದ್ರಾಸಃ । ಇಂದವಃ ॥ ೪ ॥

ಸಾಯಣಭಾಷ್ಯಂ

ಹೇ ಸತ್ಪತೇ ಇಂದ್ರ ಚಂದ್ರಾಸ ಆಹ್ಲಾದಯಿತಾರ ಇಂದವೋ ದೀಪ್ತಾಃ ಸುತಾ ಅಭಿಷುತಾ ಇಮೇಽಸ್ಮಾಭಿರ್ದತ್ತಾಃ ಸೋಮಾಃ ಕ್ಷಯಂ। ಕ್ಷಿಯಂತಿ ನಿವಸಂತ್ಯನ್ನಾದೀನ್ಯತ್ರೇತಿ ಕ್ಷಯೋ ಜಠರಂ । ಪ್ರ ಯಂತಿ। ಪ್ರಕರ್ಷೇಣ ಗಚ್ಛಂತಿ । ತಾನ್ ಧಾರಯೇತಿ ಭಾವಃ ॥ ಕ್ಷಯಂ । ಕ್ಷಿ ನಿವಾಸಗತ್ಯೋರಿತ್ಯ-ಸ್ಮಾದಧಿಕರಣೇ ಘಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತತ್ವೇ ಪ್ರಾಪ್ತೇ ಕ್ಷಯೋ ನಿವಾಸ ಇತ್ಯಾ-ದ್ಯುದಾತ್ತತ್ವಂ । ಚಂದ್ರಾಸಃ । ಚದಿ ಆಹ್ಲಾದನೇ ದೀಪ್ತೌ ಚ । ಅಸ್ಮಾತ್ಸ್ಫಾಯಿತಂಚೀತ್ಯಾದಿನಾ ರಕ್ಪ್ರ-ತ್ಯಯಃ । ಆಜ್ಜಸೇರಸುಗಿತ್ಯಸುಕ್ । ಪ್ರತ್ಯಯಸ್ವರಃ। ಇಂದವಃ । ಉಂದೇರಿಚ್ಚಾದೇರಿತ್ಯುಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಸತ್ಪತೇ**—ಸಜ್ಜನರಿಗೆ ಒಡೆಯನಾದ । **ಇಂದ್ರ**—ಇಂದ್ರನೇ । **ಚಂದ್ರಾಸಃ**—ಆಹ್ಲಾದಕಾರಕವೂ । **ಇಂದವಃ**—ಕಾಂತಿಯುತವೂ । **ಸುತಾಃ**—ಹಿಂಡಲ್ಪಟ್ಟವೂ । **ಇಮೇ**—ನಮ್ಮಿಂದ ಅರ್ಪಿತವಾದವೂ ಆದ । **ಸೋಮಾಃ**—ಈ ಸೋಮರಸಗಳು । **ತೇವ**—ನಿನ್ನ । **ಕ್ಷಯಂ**—ಜಠರರೂಪವಾದ ವಾಸಸ್ಥಾನದ ಅಭಿಮುಖವಾಗಿ । **ಪ್ರ ಯಂತಿ**—(ಪ್ರವಾಹರೂಪದಲ್ಲಿ) ಹರಿದುಬರುತ್ತವೆ ।

### ಭಾವಾರ್ಥ

ಸಜ್ಜನರಿಗೆ ಪಾಲಕನಾದ ಎಲೈ ಇಂದ್ರನೇ, ಆಹ್ಲಾದಕಾರಕವೂ, ಕಾಂತಿಯುತವೂ, ಹಿಂಡಲ್ಪಟ್ಟವೂ ನಮ್ಮಿಂದರ್ಪಿತವೂ ಆದ ಈ ಸೋಮರಸಗಳು ನಿನ್ನ ಜಠರರೂಪವಾದ ವಾಸಸ್ಥಾನದ ಅಭಿಮುಖವಾಗಿ ಹರಿದು ಬರುತ್ತವೆ.

### English Translation

Indra, lord of the virtuous, these effused Soma juices, exhilarating and brilliant, proceed to your abode (stomach)

### ವಿಶೇಷವಿಷಯಗಳು

**ಚಂದ್ರಾಸಃ**— **ಚದಿ ಆಹ್ಲಾದನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಚಂದ್ರಶಬ್ದಕ್ಕೆ ಆಹ್ಲಾದಕರವಾದ, ಸಂತೋಷವನ್ನುಂಟುಮಾಡುವ ಎಂದರ್ಥವು. ಈ ಶಬ್ದವು ಸೋಮಾಃ ಎಂಬ ಪದಕ್ಕೆ ವಿಶೇಷಣವಾಗಿದೆ.

**ಇಂದವಃ**— **ಉಂದೀ ಕ್ಲೇದನೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಇಂದುಶಬ್ದಕ್ಕೆ ಜಿನುಗುತ್ತಿರುವುದು, ತೊಟ್ಟಿಕ್ಕುತ್ತಿರುವುದು ಎಂದರ್ಥವು. ಸೋಮಲತೆಗಳನ್ನು ಕಲ್ಲಿನಿಂದ ಜಜ್ಜಿರಸವನ್ನು ತೆಗೆಯುವಾಗ ಕಬ್ಬಿನಿಂದ ರಸವನ್ನು ಹಿಂಡುವಾಗ ರಸವು ಜಿನುಗುವಂತೆ ಸೋಮರಸವು ಸ್ವಲ್ಪಸ್ವಲ್ಪವಾಗಿ ತೊಟ್ಟಿಕ್ಕುವುದರಿಂದ ಆಗತಾನೆ ಹಿಂಡುತ್ತಿರುವ ಸೋಮರಸಕ್ಕೆ ಇಂದು ಅಥವಾ ಇಂದವಃ (ಬಹುವಚನ) ಎಂದು ಹೇಳುವುದು ರೂಢಿಯು. ಆಗತಾನೆ ಹಿಂಡಿರುವುದರಿಂದ ಪ್ರಕಾಶಮಾನವಾದ ಎಂಬರ್ಥವನ್ನೂ ಹೇಳಬಹುದು.

**ಕ್ಷಯಂ**—ನಿವಾಸಸ್ಥಾನವನ್ನು. ಇಲ್ಲಿ ನಿವಾಸಸ್ಥಾನವೆಂದರೆ ಇಂದ್ರನ ಉದರವು. ಸೋಮರಸವನ್ನು ಇಂದ್ರನು ಪಾನಮಾಡಿದಮೇಲೆ ಅದು ಇಂದ್ರನ ಉದರದಲ್ಲಿ ಹೋಗಿ ನೆಲಸುವುದರಿಂದ ಆ ಜಠರವನ್ನು ಕ್ಷಯಂ ನಿವಾಸಸ್ಥಾನವೆಂದು ಇಲ್ಲಿ ನಿರ್ದೇಶಿಸಿದೆ.

**ಇಮೇ ಸುತಾಃ**—ನಾವು ಈ ಈಗ ಯಜ್ಞದಲ್ಲಿ ಹಿಂಡುತ್ತಿರುವ ಈ ಸೋಮರಸಗಳು. ಎಂದರೆ ಹಿಂದೆ ಹಿಂಡಿದ ರಸಗಳಲ್ಲ. ಈಗ ಹೊಸದಾಗಿ ಹಿಂಡುತ್ತಿರುವ ಸೋಮರಸವೆಂದಭಿಪ್ರಾಯವು.

**ಸೋಮಾಃ ಸುತಾಃ**—ಇವು ಪ್ರಥಮಾ ಬಹುವಚನಾಂತಶಬ್ದಗಳು. ಈ ಶಬ್ದಗಳ ಪೂರ್ವಪ್ರಯೋಗ ಗಳಾದ ಸೋಮಾಸಃ ಸುತಾಸಃ ಎಂಬ ರೂಪಗಳೂ ಋಗ್ವೇದದಲ್ಲಿ ವಿಶೇಷವಾಗಿ ಉಪಯೋಗಿಸಲ್ಪಡುವವು.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ದಧಿಷ್ವಾ ಜಠರೇ ಸುತಂ ಸೋಮಮಿಂದ್ರ ವರೇಣ್ಯಂ ।

ತವ ದ್ಯುಕ್ಷಾಸ ಇಂದವಃ ॥ ೩ ॥

ಪದಪಾಠಃ

ದಧಿಷ್ವ । ಜಠರೇ । ಸುತಂ । ಸೋಮಂ । ಇಂದ್ರ । ವರೇಣ್ಯಂ ।

ತವ । ದ್ಯುಕ್ಷಾಸಃ । ಇಂದವಃ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ವರೇಣ್ಯಂ ಸರ್ವೈರ್ವರಣೀಯಂ ಸುತಮಭಿಷುತಂ ಸೋಮಂ ಜಠರೇ ದಧಿಷ್ವ ಧಾರಯ । ಇಂದವೋ ದೀಪ್ತಾ ಇಮೇ ಸೋಮಾಸ್ತವ ದ್ಯುಕ್ಷಾಸಃ । ದಿವಿ ಕ್ಷಿಯಂತಿ ನಿವಸಂತೀತಿ ದ್ಯುಕ್ಷಾಸಃ । ಅತಸ್ತ್ವಂ ತಾನ್ ಧಾರಯೇತಿ ಭಾವಃ ॥ ದಧಿಷ್ವ । ದಧಾತೇರ್ಲೋಟಿ ರೂಪಂ । ಆಗಮಾ ಅನುದಾತ್ತಾ ಇತೀಟೋಽನುದಾತ್ತತ್ವಾತ್ಪ್ರತ್ಯಯಸ್ವರಃ ವರೇಣ್ಯಂ । ವೃಞ್ ಸಂಭಕ್ತೌ । ವೃಞ ಏಣ್ಯ । ಇತ್ಯೇಣ್ಯಪ್ರತ್ಯಯಃ । ವೃಷಾದಿತ್ವಾದಾದ್ಯುದಾತ್ತಃ । ದ್ಯುಕ್ಷಾಸಃ । ಕ್ಷಿಯತೇರನ್ಯೇಭ್ಯೋಽಪಿ ದೃಶ್ಯತೆ ಇತಿ ಡಪ್ರತ್ಯಯಃ । ಕೃದುತ್ತರಪದಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ವರೇಣ್ಯಂ**—(ಸರ್ವರಿಂದಲೂ) ಆದೃತವಾದುದೂ । **ಸುತಂ**—ಹಿಂಡಲ್ಪಟ್ಟುದೂ ಆದ । **ಸೋಮಂ**—ಈ ಸೋಮರಸವನ್ನು । **ಜಠರೇ**—ಜಠರದಲ್ಲಿ । **ದಧಿಷ್ವ**—ತುಂಬಿಡು । **ಇಂದವಃ**—ಪ್ರಕಾಶಮಾನಗಳಾದ ಈ ಸೋಮರಸಗಳು । **ತವ**—ನಿನ್ನೊಡನೆ । **ದ್ಯುಕ್ಷಾಸಃ**—ದೇವಲೋಕದಲ್ಲಿ ವಾಸಮಾಡತಕ್ಕವಾಗಿವೆ.

ಭಾವಾರ್ಥ

ಎಲೈ ಇಂದ್ರನೇ, ಸರ್ವರಿಂದಲೂ ಆದೃತವಾದುದೂ, ನಮ್ಮಿಂದ ಹಿಂಡಲ್ಪಟ್ಟುದೂ ಆದ ಈ ಸೋಮರಸವನ್ನು ಜಠರದಲ್ಲಿ ತುಂಬಿಡು. ಪ್ರಕಾಶಮಾನಗಳಾದ ಈ ಸೋಮರಸಗಳು ನಿನ್ನೊಡನೆ ದೇವಲೋಕದಲ್ಲಿ ವಾಸಮಾಡತಕ್ಕವಾಗಿವೆ.

English Translation

Receive, Indra, into your stomach this excellent effused libation, these bright (drops) abide with you in heaven.

ವಿಶೇಷವಿಷಯಗಳು

**ವರೇಣ್ಯಂ—ಸರ್ವೈರ್ವರಣೀಯಂ** । ಸರ್ವರಿಂದಲೂ ಅಪೇಕ್ಷಿಸಲ್ಪಡುವ ಅಥವಾ ಆದರಿಸಲ್ಪಡುವ. ಸೋಮರಸವು ಪಾನಮಾಡುವವರಿಗೆ ಹರ್ಷವನ್ನುಂಟುಮಾಡುವುದರಿಂದ ಇದನ್ನು ಸರ್ವರೂ ಅಪೇಕ್ಷಿಸುವರು. ಆದುದರಿಂದ ಇಲ್ಲಿ ಸೋಮರಸವನ್ನು ವರೇಣ್ಯಂ ಎಂಬ ಶಬ್ದದಿಂದ ವರ್ಣಿಸಿದೆ.

CC-0. Jangamwadi Math Collection. Digitized by eGangotri

**ದ್ಯುಕ್ಷಾಸಃ**—**ದಿವಿ ಕ್ಷಿಯಂತಿ ನಿವಸಂತೀತಿ ದ್ಯುಕ್ಷಾಸಃ** । ಈ ಸೋಮರಸವು ಸ್ವರ್ಗಲೋಕದಲ್ಲಿ ವಾಸಮಾಡುವುದರಿಂದ ಅಥವಾ ಈ ಸೋಮರಸದ ವಾಸಸ್ಥಾನವು ಸ್ವರ್ಗವಾದುದರಿಂದ ಇಲ್ಲಿ ದ್ಯುಕ್ಷಾಸಃ-ಸ್ವರ್ಗದಲ್ಲಿ ನಿವಾಸಸ್ಥಾನವುಳ್ಳ ಎಂಬ ಶಬ್ದದಿಂದ ವರ್ಣಿಸಿದೆ. ಈ ವಿಷಯದಲ್ಲಿ **ತೃತೀಯಸ್ಯಾಮಿತೋ ದಿವಿ ಸೋಮ ಆಸೀತ್ । ತಂ ಗಾಯತ್ರ್ಯಾಹರತ್** ಎಂದು ತೈತ್ತಿರೀಯಬ್ರಾಹ್ಮಣವಾಕ್ಯವಿರುವುದು. ಪೂರ್ವದಲ್ಲಿ ಸೋಮವು ಸ್ವರ್ಗದಲ್ಲಿತ್ತೆಂದೂ ಅದನ್ನು ಗಾಯತ್ರಿಯು ಶ್ಯೇನಪಕ್ಷಿಯ ರೂಪವನ್ನು ಧರಿಸಿ ಭೂಮಿಗೆ ತಂದಿತೆಂದೂ ಇತಿಹಾಸವಿರುವುದು.

---

ಸಂಹಿತಾಪಾಠಃ

ಗಿರ್ವಣಃ ಪಾಹಿ ನಃ ಸುತಂ ಮಧೋರ್ಧಾರಾಭಿರಜ್ಯಸೇ ।
ಇಂದ್ರ ತ್ವಾದಾತಮಿದ್ಯಶಃ ॥ ೬ ॥

ಪದಪಾಠಃ

ಗಿರ್ವಣಃ । ಪಾಹಿ । ನಃ । ಸುತಂ । ಮಧೋಃ । ಧಾರಾಭಿಃ । ಅಜ್ಯಸೇ ।
ಇಂದ್ರ । ತ್ವಾऽದಾತಂ । ಇತ್ । ಯಶಃ ॥ ೬ ॥

ಸಾಯಣಭಾಷ್ಯಂ

ಗಿರ್ವಣೋ ಗೀರ್ಭಿರ್ವನನೀಯ । ತಥಾ ಚ ಯಾಸ್ಕಃ । ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ । ನಿ. ೬-೧೪ । ಇತಿ । ತಾದೃಶೇಂದ್ರ ನೋऽಸ್ಮದೀಯಂ ಸುತಮಭಿಷುತಮಿಮಂ ಸೋಮಂ ಪಾಹಿ । ಪಿಬ । ಯತೋ ಮಧೋರ್ಮದಕರಸ್ಯ ಸೋಮಸ್ಯ ಧಾರಾಭಿರಜ್ಯಸೇ ಸಿಚ್ಯಸೇ ಹೇ ಇಂದ್ರ ತ್ವದಾತಮಿತ್ತ್ವಯಾ ಶೋಧಿತಂ ವಿಶದೀಕೃತಮೇವ ಯಶೋऽನ್ನಮಸ್ಮಾಸು ಭವತಿ ॥ ಗಿರ್ವಣಃ । ವನ ಸಂಭಕ್ತಾವಿತ್ಯಸ್ಮಾದಸುನ್ । ಗಿರ ಉಪಧಾಯಾ ದೀರ್ಘಾಭಾವಶ್ಛಾಂದಸಃ । ಆಮಂತ್ರಿತಸ್ಯೇತಿ ಷಾಷ್ಠಿಕಮಾದ್ಯುದಾತ್ತತ್ವಂ । ಪಾಹಿ । ಪಾ ಪಾನ ಇತ್ಯಸ್ಮಾಲ್ಲೋಟಿ ರೂಪಂ । ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ । ಪ್ರತ್ಯಯಸ್ವರಃ । ತ್ವಾದಾತಂ । ದೈಪ್ ಶೋಧನೇ । ಸತ್ಯಪಿ ಪಕಾರೇ ನಾನುಬಂಧಕೃತಮನೇಜಂತತ್ವಮಿತ್ಯೇಜಂತ ಏವಾಯಂ । ತತ ಆದೇಚ ಇತ್ಯಾತ್ವಂ । ಅಸ್ಮಾತ್ಕರ್ಮಣಿ ಕ್ತಃ । ದಾಧಾ ಘ್ವದಾಬಿತ್ಯತ್ರಾದಾಬಿತಿ ಪ್ರತಿಷೇಧೇನ ಘುಸಂಜ್ಞಾಯಾ ಅಭಾವಾದ್ದೋ ದದ್ಘೋರಿತಿ ದದಾದೇಶೋ ನ ಭವತಿ । ತ್ವೇತಿ ಯುಷ್ಮಚ್ಛಬ್ದಸ್ಯ ತೃತೀಯಾ ಕರ್ತೃಕರಣೇ ಕೃತಾ ಬಹುಲಮಿತಿ ಸಮಾಸಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ । ಯಶಃ । ಅಶೂ ವ್ಯಾಪ್ತೌ । ಅಶೇರ್ದೇವನೇ ಯುಟ್ ಚೇತ್ಯಸುನ್ । ತತ್ಸಂನಿಯೋಗೇನ ಧಾತೋರ್ಯುಡಾಗಮಃ । ನಿತ್ತ್ವಾದಾದ್ಯುದಾತ್ತಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಗಿರ್ವಣಃ**—ಸ್ತುತಿಗಳಿಂದ ಆಕರ್ಷಿತನಾಗುವ ಇಂದ್ರನೇ । **ನಃ**—ನಮ್ಮಿಂದ ಅರ್ಪಿತವಾದುದೂ । **ಸುತಂ**—ಹಿಂಡಲ್ಪಟ್ಟಿದ್ದೂ ಆದ ಸೋಮವನ್ನು । **ಪಾಹಿ**—ಪಾನಮಾಡು । **ಮಧೋಃ**—ಮದಕಾರಕವಾದ ಸೋಮದ । **ಧಾರಾಭಿಃ**—ಧಾರೆಗಳಿಂದ । **ಅಜ್ಯಸೇ**—ನೀನು ತೊಯ್ಯಲ್ಪಡುತ್ತೀಯೆ । **ಇಂದ್ರ**—ಎಲೈ ಇಂದ್ರನೇ । **ಅನ್ನಂ**—ನಮ್ಮ ಹವಿಸ್ಸಿನ ರೂಪವಾದ ಈ ಅನ್ನವು । **ತ್ವಾದಾತಮಿತ್**—ನಿನ್ನಿಂದಲೇ ಶುದ್ಧಿಮಾಡಲ್ಪಟ್ಟಿದೆ ।

ಭಾವಾರ್ಥ

ಸ್ತುತಿಗಳಿಂದ ಆಕರ್ಷಿತನಾಗುವ ಎಲೈ ಇಂದ್ರನೇ, ನಮ್ಮಿಂದ ಅರ್ಪಿತವಾದುದೂ, ಹಿಂಡಲ್ಪಟ್ಟಿದ್ದೂ ಆದ ಸೋಮವನ್ನು ಪಾನಮಾಡು. ಮದಕಾರಕವಾದ ಸೋಮದ ಧಾರೆಗಳಿಂದ ನೀನು ತೊಯ್ಯಲ್ಪಡುತ್ತೀಯೆ. ಎಲೈ ಇಂದ್ರನೇ, ನಮ್ಮ ಹವಿಸ್ಸಿನ ರೂಪವಾದ ಈ ಅನ್ನವು ನಿನ್ನಿಂದಲೇ ಶುದ್ಧಿಮಾಲ್ಪಟ್ಟಿದೆ.

English Translation

Indra, you are glorified with praise, drink this our libation, for you are sprinkled with the drops of the exhilarating (draught), the (sacrificial) food is verily purified by you.

ವಿಶೇಷವಿಷಯಗಳು

**ಗಿರ್ವಣಃ**—**ಗೀರ್ಭಿರ್ವನನೀಯ** । ಸ್ತುತಿವಾಕ್ಯಗಳಿಂದ ವರ್ಣಿಸಲ್ಪಡುವವನು. ಯಾಸ್ಕರು-**ಗಿರ್ವಣಾ ದೇವೋ ಭವತಿ ಗೀರ್ಭಿರೇನಂ ವನಯಂತಿ** (ನಿ. ೬-೧೪) ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಗಿರ್ವಣಾ ಎಂಬ ಶಬ್ದಕ್ಕೆ ದೇವನೆಂದು ಅರ್ಥವು. ಏಕೆಂದರೆ, ಸ್ತುತಿವಾಕ್ಯಗಳಿಂದ ಇವನನ್ನು ಸ್ತುತಿಸಿ ಇವನ ಅನುಗ್ರಹವನ್ನು ಹೊಂದುವುದರಿಂದ ಗಿರ್ವಣಾ ಎಂದರೆ ದೇವನೆಂದು ಹೆಸರು.

**ಮಧೋಃ ಧಾರಾಭಿಃ ಅಜ್ಯಸೇ**—ಇಲ್ಲಿ ಮಧುಶಬ್ದಕ್ಕೆ ಮದಕರವಾದ ಎಂದರೆ ಹರ್ಷವನ್ನುಂಟುಮಾಡುವ ಸೋಮರಸವೆಂದರ್ಥವು. ಮಧುಶಬ್ದಕ್ಕೆ ಸಿಹಿಯಾದ ಅಥವಾ ಹರ್ಷವನ್ನುಂಟುಮಾಡುವ ಎಂದು ಮಾತ್ರ ಅರ್ಥವಿರುವುದಾದರೂ ಸೋಮರಸಕ್ಕೆ ಈ ಗುಣಗಳಿರುವುದರಿಂದ ಸೋಮರಸವನ್ನು ನಿರ್ದೇಶಿಸುವಾದ ಮಧು ಶಬ್ದಪ್ರಯೋಗಮಾಡುವುದು ಋಗ್ವೇದದಲ್ಲಿ ವಿಶೇಷರೂಢಿಯಲ್ಲಿದೆ. ಧಾರಾಭಿಃ ಎಂದರೆ ಮೇಲಿನಿಂದ ಬೀಳುತ್ತಿರುವ ಅಥವಾ ಪ್ರವಾಹರೂಪದಿಂದ ಹರಿಯುತ್ತಿರುವ ಎಂದರ್ಥವು. ಸೋಮಲತೆಗಳನ್ನು ಹಿಂಡುವಾಗ ಅವುಗಳಿಂದ ರಸವು, ನೀರು ಕೆಳಕ್ಕೆ ಸುರಿಯುವಂತೆ ಸುರಿಯುವುದು ಅಥವಾ ಹಾಗೆ ಸುರಿದ ಸೋಮರಸವು ಹರಿದುಹೋಗಿ ಅದಕ್ಕಾಗಿ ಇಟ್ಟಿರುವ ದ್ರೋಣ ಅಥವಾ ಕಲಶವೆಂಬ ದೊಡ್ಡಮರದ ಪಾತ್ರೆಯಲ್ಲಿ ಶೇಖರವಾಗುವುದು ಈ ರೀತಿ ಹರಿದು ಹೋಗಿ ಶೇಖರವಾಗುವ ಸೋಮರಸವನ್ನು ಇಲ್ಲಿ **ಮಧೋಃ ಧಾರಾಭಿಃ** ಎಂಬ ಶಬ್ದಗಳಿಂದ ವರ್ಣಿಸಿದೆ. ಇಂತಹ ಸೋಮರಸದಿಂದ ನಿನ್ನ ಉದರಪ್ರದೇಶವನ್ನು ನೆನೆಯಿಸಿ ಆಪ್ಯಾಯನಮಾಡು ಎಂದು ಋಷಿಯು ಇಂದ್ರನನ್ನು ಪ್ರಾರ್ಥಿಸಿದಾನೆ.

**ತ್ವಾದಾತಂ ಇತ್-ತ್ವಯಾ ಶೋಧಿತಂ ವಿಶದೀಕೃತಮೇವ** । ನಿನ್ನಿಂದ ಶೋಧಿತವಾದ ಅಥವಾ ವಿಶದೀಕೃತವಾದ. ಇಲ್ಲಿ **ದೈಪ್ ಶೋಧನೇ** ಎಂಬ ಧಾತುವಿನಿಂದ ದಾತಂ ಎಂಬ ಶಬ್ದವು ನಿಷ್ಪನ್ನವಾಗಿರುವುದೆಂದು ಭಾಷ್ಯಕಾರರು ಹೇಳಿ ಅದಕ್ಕನುಸಾರವಾಗಿ ಅರ್ಥವಿವರಣೆಮಾಡಿರುವರು. ಆದರೆ "ಇಂದ್ರನಿಂದ ಶುದ್ಧಿಮಾಡಲ್ಪಟ್ಟ



CC-0. Jangamwadi Math Collection. Digitized by eGangotri

ಹವಿಸ್ಸು (ಅನ್ನ) ವೆಂದರೇನೆಂಬುದು ಸ್ಪಷ್ಟವಾಗಿಲ್ಲ ಆದರೆ ದಾತಂ-ಕೊಡಲ್ಪಟ್ಟ ಅಥವಾ ವಿಶದಮಾಡಲ್ಪಟ್ಟ ಎಂಬರ್ಥವು ತಕ್ಕಮಟ್ಟಿಗೆ ಹೊಂದುವುದು. ಎಂದರೆ ಇಂದ್ರನ ಅನುಗ್ರಹದಿಂದ ನಮಗೆ ದೊರೆತಿರುವ ಈ ಹವಿಸ್ಸಿನ ರೂಪವಾದ ಅನ್ನವು ಎಂದಭಿಪ್ರಾಯವು.

**ಯಶಃ—ಅನ್ನಂ । ಯಶಃ** ಎಂಬ ಶಬ್ದವು ೧೦೧ ಉದಕನಾಮಗಳಲ್ಲಿಯೂ (ನಿ ೧-೧೨) ಇಪ್ಪತ್ತೆಂಟು ಅನ್ನನಾಮಗಳಲ್ಲಿಯೂ (ನಿ. ೩-೯) ಇಪ್ಪತ್ತೆಂಟು ಧನನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇಲ್ಲಿ ಯಶಃ ಎಂಬ ಶಬ್ದಕ್ಕೆ ಭಾಷ್ಯಕಾರರು ಅನ್ನವೆಂಬ ಅರ್ಥವನ್ನು ಸ್ವೀಕಾರಮಾಡಿ ಅರ್ಥವಿವರಣೆಮಾಡಿದಾರೆ.

---

ಸಂಹಿತಾಪಾಠಃ

ಅಭಿ ದ್ಯುಮ್ನಾನಿ ವನಿನ ಇಂದ್ರಂ ಸಚಂತೇ ಅಕ್ಷಿತಾ ।

ಪೀತ್ವೀ ಸೋಮಸ್ಯ ವಾವೃಧೇ ॥ ೭ ॥

ಪದಪಾಠಃ

ಅಭಿ । ದ್ಯುಮ್ನಾನಿ । ವನಿನಃ । ಇಂದ್ರಂ । ಸಚಂತೇ । ಅಕ್ಷಿತಾ ।

ಪೀತ್ವೀ । ಸೋಮಸ್ಯ । ವವೃಧೇ ॥ ೭ ॥

ಸಾಯಣಭಾಷ್ಯಂ

ವನಿನಃ । ವನಂ ದೇವತಾವಿಷಯಂ ಸಂಭಜನಮಸ್ಯಾಸ್ತೀತಿ ವನೀ । ತಸ್ಯ ದೇವಾನ್ ಸಂಭಜಮಾನಸ್ಯ ಯಜಮಾನಸ್ಯ ದ್ಯುಮ್ನಾನಿ ದ್ಯೋತಮಾನಾನ್ಯಕ್ಷಿತಾ ಕ್ಷಯರಹಿತಾನಿ ಸಂಪೂರ್ಣಾನಿ ಸೋಮಾದೀನಿ ಹವೀಂಷೀಂದ್ರಮಭಿ ಅಭಿತಃ ಸಚಂತೇ । ಸಮವಯಂತಿ । ತೇಷು ಮಧ್ಯೇ ಸೋಮಸ್ಯ ಪೀತ್ವೀ ಸೋಮಂ ಪೀತ್ವಾ ವಾವೃಧೇ । ಸ ಇಂದ್ರೋ ವರ್ಧತೇ ॥ ವನಿನಃ । ಅತ ಇನಿಠನಾವಿತೀನಿಪ್ರತ್ಯಯಃ । ತಸ್ಯ ಸ್ವರಃ । ಸಚಂತೇ । ಷಚ ಸಮವಾಯ ಇತ್ಯಸ್ಯ ಲಟಿ ರೂಪಂ । ಅಕ್ಷಿತಾ । ಕ್ಷಿ ಕ್ಷಯ ಇತ್ಯಸ್ಯ ನಿಷ್ಠಾ । ಅತ್ರ ಣ್ಯದರ್ಥ ಇತಿ ದೀರ್ಘಾಭಾವಃ । ತಸ್ಮಾದೇವ ಕ್ಷಿಯೋ ದೀರ್ಘಾದಿತಿ ನಿಷ್ಠಾನತ್ವಾಭಾವಃ । ನಞಾ ಸಮಾಸೇ ತಸ್ಯ ಸ್ವರಃ । ಪೀತ್ವೀ । ಪಾ ಪಾನ ಇತ್ಯಸ್ಮಾತ್ ಕ್ತ್ವಾಪ್ರತ್ಯಯಸ್ಯ ಸ್ನಾತ್ವ್ಯಾದಯಶ್ಚೇತಿ ನಿಪಾತನಾತ್ ತ್ವೀ ಇತ್ಯಾದೇಶಃ । ಪ್ರತ್ಯಯಸ್ವರಃ । ಘುಮಾಸ್ಥಾಗಾಪೇತ್ಯಾದಿನಾ ಈತ್ವಂ ॥

ಪ್ರತಿಪದಾರ್ಥ

**ವನಿನಃ**—ದೇವತಾಪೂಜಕನಾದ ಯಜಮಾನನ । **ದ್ಯುಮ್ನಾನಿ**—ಪ್ರಕಾಶಮಾನವಾದವೂ । **ಅಕ್ಷಿತಾ**—ಕ್ಷಯರಹಿತವಾಗಿ ಪೂರ್ಣವಾದವೂ ಆದ ಸೋಮಾದಿ ಹವಿಸ್ಸುಗಳು । **ಇಂದ್ರಂ**—ಇಂದ್ರನನ್ನು । **ಅಭಿ**—ಸುತ್ತಲೂ **ಸಚಂತೇ**—ವ್ಯಾಪಿಸಿ ಸೇರಿಕೊಳ್ಳುತ್ತವೆ । **ಸೋಮಸ್ಯ**—ಸೋಮರಸದ । **ಪೀತ್ವೀ**—ಪಾನಮಾಡುವುದರಿಂದ । **ವಾವೃಧೇ**—ಇಂದ್ರನು ವೃದ್ಧಿಯನ್ನು ಹೊಂದುತ್ತಾನೆ.

CC-0. Jangamwadi Math Collection. Digitized by eGangotri

ಭಾವಾರ್ಥ

ದೇವತಾಪೂಜಕನಾದ ಯಜಮಾನನಿಂದ ಅರ್ಪಿತವಾದವೂ, ಪ್ರಕಾಶಮಾನವಾದವೂ, ಕ್ಷಯರಹಿತವಾಗಿ ಪೂರ್ಣವಾದವೂ ಆದ ಸೋಮಾದಿ ಹವಿಸ್ಸುಗಳು ಇಂದ್ರನನ್ನು ಸುತ್ತಲೂ ವ್ಯಾಪಿಸಿ ಸೇರಿಕೊಳ್ಳುತ್ತವೆ. ಸೋಮ ರಸವನ್ನು ಪಾನಮಾಡುವುದರಿಂದ ಇಂದ್ರನು ವೃದ್ಧಿಯನ್ನು ಹೊಂದುತ್ತಾನೆ.

English Translation

The brilliant and imperishable (Soma juice), offered by the worshipper, encompasses Indra; having drunk of the libation, he increases (in vigour).

ವಿಶೇಷವಿಷಯಗಳು

ಈ ಋಕ್ಕಿನ ಅರ್ಥವು ಅಧ್ಯಾಹಾರಪದಗಳಿಲ್ಲದೆ ಹೊಂದುವುದಿಲ್ಲ. ಆದುದರಿಂದ ಭಾಷ್ಯಕಾರರು **ವನಿನಃ** **ಅಕ್ಷಿತಾ** ಎಂಬ ಪದಗಳಿಗೆ ಅವಯವಾರ್ಥವನ್ನು ಕಲ್ಪಿಸಿ ಅರ್ಥಮಾಡಿರುವರು. **ವನಿನಃ** ಎಂಬ ಶಬ್ದವು ವನ ಸಂಭಕ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿ (ದೇವತೆಯನ್ನು),ಹೊಂದುವ ಅಥವಾ ಭಜಿಸುವ ಯಜಮಾನನ ಎಂದೂ ಅಕ್ಷಿತಾ ಎಂಬ ಪದವು ಕ್ಷಯರಹಿತವಾಗಿ ಅಥವಾ ಸಂಪೂರ್ಣವಾದ ಸೋಮಾದಿ ಹವಿದ್ರವ್ಯಗಳು ಎಂಬ ಅರ್ಥಗಳನ್ನು ಸೂಚಿಸುವವು ಎಂದು ಅರ್ಥಮಾಡಿದಾರೆ ಈ ವಿಧವಾದ ಅರ್ಥವು ಇಂತಹ ಋಕ್ಕನ್ನು ವಿಶದಪಡಿಸು ವುದಕ್ಕಾಗಿ ಅವಶ್ಯಕವೆನಿಸಿದರೂ ಈ ಋಕ್ಕಿಗೆ ಬೇರೆ ವಿಧವಾಗಿ ಅರ್ಥಮಾಡಲು ಸಾಧ್ಯವೆಂಬುದನ್ನು ಗಮನಿಸಬೇಕು. ಆದರೆ ಈ ಋಕ್ಕಿನಲ್ಲಿ ಇಂದ್ರನ ಸೋಮಪಾನವಿಷಯವು ಮಾತ್ರ ಸ್ಪಷ್ಟವಾಗಿ ಉಕ್ತವಾಗಿದೆಯೆಂಬುದನ್ನು ತಿಳಿಯ ಬೇಕು.

**ಪೀತ್ವೀ—ಪೀತ್ವಾ** । ಪಾನಮಾಡಿ ; ಪೀತ್ವಾ ಎನ್ನುವುದಕ್ಕೆ ಬದಲಾಗಿ ಇಲ್ಲಿ ಪೀತ್ವೀ ಎಂಬ ಶಬ್ದಪ್ರಯೋಗ ವಿದೆ. ಇದರಂತೆ—

**ಉಭೇ ಸಹಸ್ವತೀ ಭೂತ್ವೀ ಸಪತ್ನೀಂ ಮೇ ಸಹಾವಹೈ ।**

(ಋ. ಸಂ. ೧೦-೧೪೫-೫)

ಎಂಬ ಋಕ್ಕಿನಲ್ಲಿ ಭೂತ್ವಾ ಎಂಬ ಶಬ್ದಕ್ಕೆ ಬದಲಾಗಿ **ಭೂತ್ವೀ** ಎಂಬ ಶಬ್ದ ಪ್ರಯೋಗವಿದೆ. ಆದರೆ ಋಗ್ವೇದದಲ್ಲಿ ಈ ವಿಧವಾದ ಪ್ರಯೋಗಗಳು ಹೆಚ್ಚಾಗಿಲ್ಲ.

**ಸೋಮಸ್ಯ—ಸೋಮಂ** । ಇಲ್ಲಿ ದ್ವಿತೀಯಾವಿಭಕ್ತಿಗೆ ಬದಲಾಗಿ ಷಷ್ಠೀ ವಿಭಕ್ತಿಯ ಪ್ರಯೋಗವಿದೆ. ಆದ್ದರಿಂದ **ಸೋಮಸ್ಯ** ಎಂಬ ಶಬ್ದಕ್ಕೆ **ಸೋಮಂ** ಸೋಮರಸವನ್ನು ಎಂದು ದ್ವಿತೀಯಾವಿಭಕ್ತ್ಯರ್ಥವನ್ನು ಹೇಳ ಬೇಕು. ಅಥವಾ **ಸೋಮಸ್ಯ** ಎಂದರೆ ಸಿದ್ಧಪಡಿಸಿರುವ ಸೋಮರಸದ ಸ್ವಲ್ಪಭಾಗವನ್ನು ಎಂದು ಅರ್ಥಮಾಡ ಬಹುದು. ಈ ಅರ್ಥವೇ ಸಮಂಜಸವಾಗಿರುವುದು. ಇಂತಹ ಪ್ರಯೋಗಗಳು ಋಗ್ವೇದ ಸಾಹಿತ್ಯದಲ್ಲಿ ಒಂದು ವೈಶಿಷ್ಟ್ಯವು.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅರ್ವಾವತೋ ನ ಆ ಗಹಿ ಪರಾವತಶ್ಚ ವೃತ್ರಹನ್ ।

ಇಮಾ ಜುಷಸ್ವ ನೋ ಗಿರಃ ॥ ೮ ॥

ಪದಪಾಠಃ

ಅರ್ವಾऽವತಃ । ನಃ । ಆ । ಗಹಿ । ಪರಾऽವತಃ । ಚ । ವೃತ್ರऽಹನ್ ।

ಇಮಾಃ । ಜುಷಸ್ವ । ನಃ । ಗಿರಃ ॥ ೮ ॥

ಸಾಯಣಭಾಷ್ಯಂ

ಹೇ ವೃತ್ರಹನ್ನಿಂದ್ರ ಅರ್ವಾವತೋಽರ್ವಾಚೀನಾತ್ಸಮೀಪಾದ್ದೇಶಾತ್ಪರಾವತೋऽತಿದೂರಾದ್ದೇಶಾದ್ವಾ ನೋऽಸ್ಮಾನಭಿಲಕ್ಷ್ಯಾ ಗಹಿ । ಆಗಚ್ಛ । ಆಗತ್ಯ ಚ ನೋऽಸ್ಮದೀಯಾ ಇಮಾಃ ಸ್ತುತಿಲಕ್ಷಣಾ ಗಿರೋ ವಾಚೋ ಜುಷಸ್ವ । ಸೇವಸ್ವ ॥ ಪರಾವತಃ । ಉಪಸರ್ಗಾಚ್ಛಂದಸಿ ಧಾತ್ವರ್ಥ ಇತಿ ವತಿಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ವೃತ್ರಹನ್—ವೃತ್ರಹಂತಕನಾದ ಎಲೈ ಇಂದ್ರನೇ । ಅರ್ವಾವತಃ—ಸಮೀಪದೇಶದಿಂದಾಗಲಿ । ಪರಾವತಃ—ದೂರದೇಶದಿಂದಾಗಲಿ । ನಃ—ನಮ್ಮ ಅಭಿಮುಖವಾಗಿ । ಆ ಗಹಿ—ದಯಮಾಡು । ನಃ—ನಮ್ಮ । ಇಮಾಃ ಗಿರಃ—ಸ್ತುತಿರೂಪವಾದ ಈ ವಾಕ್ಯಗಳನ್ನು । ಜುಷಸ್ವ—ಸೇವಿಸು.

ಭಾವಾರ್ಥ

ವೃತ್ರಹಂತಕನಾದ ಎಲೈ ಇಂದ್ರನೇ, ಸಮೀಪದಿಂದಾಗಲಿ ದೂರದೇಶದಿಂದಾಗಲಿ ನಮ್ಮ ಅಭಿಮುಖವಾಗಿ ದಯಮಾಡು. ಸ್ತುತಿರೂಪವಾದ ನಮ್ಮ ಈ ವಾಕ್ಯಗಳನ್ನು ಸೇವಿಸು.

English Translation

Slayer of Vritra, whether from nigh or from afar, come to us, accept these our praises.

ವಿಶೇಷವಿಷಯಗಳು

ಅರ್ವಾವತಃ ಪರಾವತಃ—ಅರ್ವಾಕ್ ಅಥವಾ ಅರ್ವಾಕೇ ಎಂಬ ಶಬ್ದವು ಅಂತಿಕನಾಮಗಳಲ್ಲಿಯೂ (ನಿ. ೩-೮) ಪರಾವತಃ ಎಂಬ ಶಬ್ದವು ದೂರನಾಮಗಳಲ್ಲಿಯೂ (ನಿ. ೩-೨೦) ಪಠಿತವಾಗಿದೆ.

ಈ ಋಕ್ಕಿನ ಅರ್ಥವು ಸುಲಭವಾಗಿದೆ. ವೃತ್ರಸಂಹಾರಕನಾದ ಇಂದ್ರನು ಸಮೀಪದಲ್ಲಿರಲಿ ಅಥವಾ ದೂರದಲ್ಲಿರಲಿ ಎಂದರೆ ಎಲ್ಲೇ ಇರಲಿ ನಮ್ಮ ಅಭಿಮುಖವಾಗಿ (ನಮ್ಮ ಸಮೀಪಕ್ಕೆ) ಬಂದು ನಾವು ಮಾಡುವ ಸ್ತೋತ್ರಗಳನ್ನು ಕೇಳಲಿ ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯದಂತರಾ ಪರಾವತಮರ್ವಾವತಂ ಚ ಹೂಯಸೇ ।

ಇಂದ್ರೇಹ ತತ ಆ ಗಹಿ ॥ ೯ ॥

ಪದಪಾಠಃ

ಯತ್ । ಅಂತರಾ । ಪರಾऽವತಂ । ಅರ್ವಾऽವತಂ । ಚ । ಹೂಯಸೇ ।

ಇಂದ್ರ । ಇಹ । ತತಃ । ಆ । ಗಹಿ ॥ ೯ ॥

ಸಾಯಣಭಾಷ್ಯಂ

ಹೇ ಇಂದ್ರ ಯದ್ಯಸ್ಮಿನ್ಪರಾವತಮತಿವಿಪ್ರಕೃಷ್ಟಸ್ಯ ದೇಶಸ್ಯಾರ್ವಾವತಂ ಸಂನಿಕೃಷ್ಟಸ್ಯ ದೇಶಸ್ಯ ಚಾಂತರಾ ತಯೋರ್ಮಧ್ಯದೇಶೇ ಹೂಯಸೇ ಸಮ್ಯಗಿಜ್ಯಸೇ ತತಸ್ತಸ್ಮಾದ್ದೇಶಾದಿಹಾಸ್ಮಿನ್ಯಜ್ಞ ಆ ಗಹಿ । ಸೋಮಪಾನಾರ್ಥಮಾಗಚ್ಛ ॥ ಪರಾವತಂ ಆರ್ವಾವತಂ । ಅಂತರಾಂತರೇಣ ಯುಕ್ತೇ । ಪಾ. ೨-೩-೪ । ಇತಿ ದ್ವಿತೀಯಾ । ತತಃ । ಪಂಚಮ್ಯಾಸ್ತಸಿಲ್ । ಲಿತ್ಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಯತ್—ಯಾವ । ಪರಾವತಂ—ಅತ್ಯಂತ ದೂರದೇಶದಿಂದಾಗಲಿ । ಅರ್ವಾವತಂ—ಅತಿ ಸಮೀಪದೇಶದಿಂದಾಗಲಿ । ಚ—ಅಲ್ಲದೇ । ಅಂತರಾ—ಇವುಗಳ ಮಧ್ಯಪ್ರದೇಶದಿಂದಾಗಲಿ । ಹೂಯಸೇ—ಕರೆಯಲ್ಪಟ್ಟಾಗ । ತತಃ—ಆ ಪ್ರದೇಶದಿಂದ । ಇಹ—ಈ ಯಜ್ಞಕ್ಕೆ । ಆ ಗಹಿ—ದಯಮಾಡು.

ಭಾವಾರ್ಥ

ಎಲೈ ಇಂದ್ರನೇ, ಯಾವ ಅತ್ಯಂತ ದೂರದೇಶದಿಂದಾಗಲಿ, ಅತಿ ಸಮೀಪದೇಶದಿಂದಾಗಲಿ, ಅಲ್ಲದೇ ಇವುಗಳ ಮಧ್ಯದೇಶದಿಂದಾಗಲಿ ನೀನು ಕರೆಯಲ್ಪಟ್ಟಾಗ ಆ ಪ್ರದೇಶದಿಂದ ಈ ಯಜ್ಞಕ್ಕೆ ದಯಮಾಡು.

English Translation

Whether you are called from nigh or from afar, or from mid space, come hither, Indra, from thence.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಹೇಳಿರುವುದನ್ನೇ ಇಲ್ಲಿ ಪುನಃ ಹೇಳಲಾಗಿದೆ. ಇಂದ್ರನು ಎಲ್ಲಿದ್ದರೂ ಎಂದರೆ ದೂರ ಸಮೀಪದೇಶಗಳ ಮಧ್ಯವರ್ತಿಯಾದ ಪ್ರದೇಶದಲ್ಲಿ ಇದ್ದರೂ ನಾವು ಕರೆದಾಗ ನಮ್ಮ ಸಮೀಪಕ್ಕೆ ಬರಬೇಕೆಂದು ಪ್ರಾರ್ಥಿಸಿದೆ.

---

CC-0. Jangamwadi Math Collection. Digitized by eGangotri

# ನಲವತ್ತೊಂದನೆಯ ಸೂಕ್ತವು.

ಆ ತೂ ನ ಇಂದ್ರೇತಿ ನವರ್ಚಂ ತೃತೀಯಂ ಸೂಕ್ತಂ ವೈಶ್ವಾಮಿತ್ರಂ ಗಾಯತ್ರಮೈಂದ್ರಂ। ಆ ತೂ ನ ಇತ್ಯನುಕ್ರಾಂತಂ॥ ಅತಿರಾತ್ರೇ ದ್ವಿತೀಯೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿಶಸ್ತ್ರ ಏತದಾದಿಕೇ ದ್ವೇ ಸೂಕ್ತೇ। ಸೂತ್ರಿತಂ ಚ। ಆ ತೂ ನ ಇಂದ್ರ ಮದ್ರ್ಯಗಿತಿ ಸೂಕ್ತೇ। ಆ. ೬-೪। ಇತಿ॥

ಅನುವಾದವು—ಆ ತೂ ನ ಇಂದ್ರ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು, ಇಂದ್ರನು ದೇವತೆಯು, ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ ಆ ತೂ ನ ಎಂದು ಮೊದಲಾಗಿ ಹೇಳಿರುವುದು. ಅತಿರಾತ್ರವೆಂಬ ಯಾಗದ ಎರಡನೆಯ ಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಆ ತೂ ನ ಇಂದ್ರ ಮದ್ರ್ಯಗಿತಿ ಸೂಕ್ತೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೬-೪).

॥ ಓಂ ॥

## ಸೂಕ್ತ—೪೧

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೧ ॥
ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೩, ೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
। ಋಷಿಃ—ವಿಶ್ವಾಮಿತ್ರಃ ॥
॥ ದೇವತಾ—ಇಂದ್ರಃ ॥
। ಛಂದಃ—ಗಾಯತ್ರೀ ॥

———:o:———

ಸಂಹಿತಾಪಾಠಃ

ಆ ತೂ ನ ಇಂದ್ರ ಮದ್ರ್ಯಗ್ಘುವಾನಃ ಸೋಮಪೀತಯೇ।
ಹರಿಭ್ಯಾಂ ಯಾಹ್ಯದ್ರಿವಃ ॥ ೧ ॥

ಪದಪಾಠಃ

ಆ। ತು। ನಃ। ಇಂದ್ರ। ಮದ್ರ್ಯಕ್। ಹುವಾನಃ। ಸೋಮಽಪೀತಯೇ।
ಹರಿಽಭ್ಯಾಂ। ಯಾಹಿ। ಅದ್ರಿಽವಃ ॥ ೧ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

**ಹೇ ಅದ್ರಿವೋ ಹೇ ವಜ್ರಿನ್ ಹೇ ಇಂದ್ರ ಹುವಾನೋ ಹೋತೃಭಿರಾಹೂಯಮಾನಸ್ತ್ವಂ ಮದ್ರ್ಯಕ್ ಮದಭಿಮುಖಃ ಸನ್ ನೋಽಸ್ಮದೀಯೇ ಯಜ್ಞೇ ಸೋಮಪೀತಯೇ ಸೋಮಪಾನಾರ್ಥಂ ಹರಿಭ್ಯಾಮಶ್ವಿಭ್ಯಾಂ ಸಹ ತು ಕ್ಷಿಪ್ರಮಾ ಯಾಹಿ ॥ ತು । ಋಚಿ ತನುಘೇತ್ಯಾದಿನಾ ಸಂಹಿತಾಯಾಂ ದೀರ್ಘಃ । ಮದ್ರ್ಯಕ್ । ಮಾಮಂಚತೀತಿ ಋತ್ವಿಗ್ದಧೃಗಿತ್ಯಾದಿನಾ ಕ್ವಿನ್ । ಪ್ರತ್ಯಯೋತ್ತರಪದಯೋ-ಶ್ಚೇತ್ಯಸ್ಮಚ್ಛಬ್ದಸ್ಯೈಕವಚನೇ ಮಪರ್ಯಂತಸ್ಯ ಮಾದೇಶಃ । ವಿಶ್ವಗ್ದೇವಯೋಶ್ಚ ಟೇರದ್ರ್ಯಂಚತೌ ವಪ್ರತ್ಯಯ ಇತಿ ಟೇರದ್ರಿಇತ್ಯಾದೇಶಃ । ಅದ್ರಿಸಧ್ರ್ಯೋರಂತೋದಾತ್ತತ್ವನಿಪಾತನಂ ಕೃತ್ಸ್ವರನಿವೃತ್ತ್ಯರ್ಥ-ಮಿತಿ ವಚನಾದದ್ರ್ಯಾದೇಶೋಽಂತೋದಾತ್ತಃ । ಯಣಾದೇಶೇ ಕೃತೇ ಉದಾತ್ತಸ್ವರಿತಯೋರ್ಯಣ ಇತಿ ಯಣಃ ಸ್ವರಿತತ್ವಂ । ಕ್ವಿನ್ಪ್ರತ್ಯಯಸ್ಯ ಕುರಿತಿ ಕುತ್ವಂ । ಸೋಮಪೀತಯೇ । ದಾಸೀಭಾರಾದಿತ್ವಾತ್ಪೂ-ರ್ವಪದಪ್ರಕೃತಿಸ್ವರತ್ವಂ । ಅದ್ರಿವಃ । ಮತುವಸೋರಿತಿ ರುತ್ವಂ । ಆಮಂತ್ರಿತತ್ವಾನ್ನಿಘಾತಃ ॥**

## ಪ್ರತಿಪದಾರ್ಥ

ಅದ್ರಿವಃ—ವಜ್ರಾಯುಧವನ್ನು ಹಿಡಿದಿರುವ । ಇಂದ್ರ—ಎಲೈ ಇಂದ್ರನೇ । **ಹುವಾನಃ**—(ಹೋತೃಗಳಿಂದ) ಕರೆಯಲ್ಪಡುವ ನೀನು । **ಮದ್ರ್ಯಕ್**—ನನಗೆ ಅಭಿಮುಖವಾಗಿ । ನಃ—ನಮ್ಮಿಂದ ನೆರವೇರಿಸಲ್ಪಡುವ ಈ ಯಜ್ಞದಲ್ಲಿ । **ಸೋಮಪೀತಯೇ**— ಸೋಮರಸವನ್ನು ಪಾನಮಾಡುವುದಕ್ಕಾಗಿ । **ಹರಿಭ್ಯಾಂ**—ನಿನ್ನ ಎರಡು ಅಶ್ವಗಳೊಡನೆ । **ತು**—ಶೀಘ್ರವಾಗಿ । ಆ **ಯಾಹಿ**—ದಯಮಾಡು.

## ಭಾವಾರ್ಥ

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ಹೋತೃಗಳಿಂದ ಪ್ರಾರ್ಥಿತನಾಗಿ ಕರೆಯಲ್ಪಡತಕ್ಕ ನೀನು ನನಗೆ ಅಭಿಮುಖನಾಗಿ ನಮ್ಮಿಂದ ನೆರವೇರಿಸಲ್ಪಡುವ ಈ ಯಜ್ಞದಲ್ಲಿ ಸೋಮರಸವನ್ನು ಪಾನಮಾಡುವುದಕ್ಕಾಗಿ ನಿನ್ನ ಎರಡು ಅಶ್ವಗಳೊಡನೆ ಶೀಘ್ರವಾಗಿ ದಯಮಾಡು.

## English Translation

Indra, wielder of the thunderbolt, come to me with your horses, when invoked to drink the Soma at our (sacrifice).

## ವಿಶೇಷವಿಷಯಗಳು

**ಅದ್ರಿವಃ—ವಜ್ರಿನ್** । ವಜ್ರಾಯುಧವನ್ನು ಧರಿಸಿರುವ ಎಲೈ ಇಂದ್ರನೇ ಎಂದರ್ಥವು. ಯಾಸ್ಕರು—

**ಯದಿಂದ್ರ ಚಿತ್ರ ಮೇಹನಾಸ್ತಿ ತ್ವಾದಾತಮದ್ರಿವಃ ।**
**ರಾಧಸ್ತನ್ನೋ ವಿದದ್ವಸ ಉಭಯಾಹಸ್ತ್ಯಾ ಭರ ॥**

(ಋ ಸಂ. ೫-೩೯-೧)

ಎಂಬ ಮಂತ್ರದ ಅರ್ಥವನ್ನು ವಿವರಿಸುವಾಗ **ಅದ್ರಿವಃ** ಎಂಬ ಶಬ್ದಕ್ಕೆ—

**ಅದ್ರಿವಾನ್ । ಅದ್ರಿರಾದೃಣಾತ್ಯೇತೇನ । ಅಪಿ ವಾತ್ತೇಃ ಸ್ಯಾತ್ । ತೇ ಸೋಮಾದ ಇತಿ ಹ ವಿಜ್ಞಾಯತೇ ॥** (ನಿ ೪-೪)

CC-0. Jangamwadi Math Collection. Digitized by eGangotri

ಎಂದು ನಿರ್ವಚನವನ್ನು ಹೇಳಿದಾರೆ. ಎಂದರೆ ಪರ್ವತದ ಬಂಡೆಯಂತೆ ಅತಿ ಕಠಿಣವಾಗಿ ಸಮಸ್ತವನ್ನೂ ಸೀಳುವುದ ರಿಂದ ಅದ್ರಿ ಎಂದರೆ ವಜ್ರಾಯುಧವು. ಮತ್ತು ಅದ ಭಕ್ಷಣೇ ಎಂಬ ಧಾತುವಿನಿಂದಲಾದರೂ ಅದ್ರಿಶಬ್ದವು ನಿಷ್ಪನ್ನ ವಾಗಬಹುದು. ಈ ಸಂದರ್ಭದಲ್ಲಿ ಘಟ್ಟಿಯಾದ ಕಲ್ಲು ಇತರ ವಸ್ತುಗಳನ್ನು ಯಾವರೀತಿ ಭಕ್ಷಿಸುವುದೋ ಎಂದರೆ ಧ್ವಂಸಮಾಡುವುದೋ ಅಥವಾ ಪುಡಿ ಪುಡಿಮಾಡುವುದೋ ಅಂತಹ ಕಲ್ಲಿನಂತೆ ಕಠಿನಸ್ವಭಾವವುಳ್ಳ ವಜ್ರಾಯುಧವು. ಈ ವಿಷಯದಲ್ಲಿ ಉದಾ—**ತೇ ಸೋಮಾದ ಇತಿ ಹ ವಿಜ್ಞಾಯತೇ**—ಎಂದರೆ ಸೋಮಲತೆಗಳನ್ನು ಜಜ್ಜುವುದಕ್ಕೆ ಉಪಯೋಗಿಸುವ ಕಲ್ಲುಗಳು ಯಾವರೀತಿ ಸೋಮಲತೆಗಳನ್ನು ಮರ್ದನಮಾಡಿ ರಸವನ್ನು ಹೆರಹೊರಡಿಸುವವೋ ಅದ ರಂತೆ ಕಠಿನಸ್ವಭಾವವುಳ್ಳ ವಜ್ರಾಯುಧವು ಶತ್ರುಗಳನ್ನು ಧ್ವಂಸಮಾಡುವುದು ಎಂದಭಿಪ್ರಾಯವು ಅಂತಹ ವಜ್ರಾ ಯುಧವನ್ನು ಕೈಯಲ್ಲಿ ಧರಿಸಿರುವವನಿಗೆ ಅದ್ರಿವಾನ್ ಎಂದು ಹೆಸರು. ಇಂದ್ರನಿಗೆ ವಜ್ರವೇ ಆಯುಧವಾಗಿರುವುದ ರಿಂದ **ಆದ್ರಿವಾನ್** ಎಂದರೆ ಇಂದ್ರನೆಂದೇ ಅರ್ಥವು. **ಅದ್ರಿವಃ** ಎಂಬ ಶಬ್ದವು ಸಂಬುದ್ಧಿ ಪ್ರಥಮೈಕವಚನವು—ಅದ್ರಿಶಬ್ದವು ಮೇಘನಾಮಗಳಲ್ಲಿಯೂ ಪಠಿತವಾಗಿದೆ. (ನಿ. ೩-೨೧).

**ಹರಿಭ್ಯಾಂ**—ಇಂದ್ರನ ಕುದುರೆಗಳಿಗೆ ಹರೀ ಎಂದು ಹೆಸರು. ಇಂದ್ರನ ಕುದುರೆಗಳು ಎರಡು. ಇಲ್ಲಿ **ಹರಿಭ್ಯಾಂ** ಎಂದು ಹೇಳಿರುವುದರಿಂದ ಎರಡು ಕುದುರೆಗಳನ್ನು ಕಟ್ಟಿರುವ ರಥದಲ್ಲಿ ಕುಳಿತು ಬಾ ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಯಾಸ್ಕರು—

> **ಹರೀ ಇಂದ್ರಸ್ಯ । ರೋಹಿತೋಽಗ್ನೇಃ । ಹರಿತ ಆದಿತ್ಯಸ್ಯ । ರಾಸಭಾವಶ್ವಿನೋಃ । ಅಜಾ ಪೂಷ್ಣಃ । ಪೃಷತ್ಯೋ ಮರುತಾಂ । ಅರುಣ್ಯೋ ಗಾವ ಉಷಸಃ । ಶ್ಯಾವಾ ಸವಿತುಃ । ವಿಶ್ವರೂಪಾ ಬೃಹಸ್ಪತೇಃ । ನಿಯುತೋ ವಾಯೋಃ ।**
>
> (ನಿ ೨-೨೮)

ಎಂದು ನಾನಾದೇವತೆಗಳ ವಾಹನಗಳನ್ನು ವಿವರಿಸುವಾಗ ಇಂದ್ರನ ವಾಹನವು ಹರೀ ಎಂಬ ಎರಡು ಕುದುರೆಗಳೆಂದು ಹೇಳಿದ್ದಾರೆ.

---

ಸಂಹಿತಾಪಾಠಃ

ಸತ್ತೋ ಹೋತಾ ನ ಋತ್ವಿಯಸ್ತಿಸ್ತಿರೇ ಬರ್ಹಿರಾನುಷಕ್ ।
ಅಯುಜ್ರನ್ಪ್ರಾತರದ್ರಯಃ ॥ ೨ ॥

ಪದಪಾಠಃ

**ಸತ್ತಃ । ಹೋತಾ । ನಃ । ಋತ್ವಿಯಃ । ತಿಸ್ತಿರೇ । ಬರ್ಹಿಃ । ಆನುಷಕ್ ।**
**ಅಯುಜ್ರನ್ । ಪ್ರಾತಃ । ಅದ್ರಯಃ ॥ ೨ ॥**

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಇಂದ್ರ ನೋಽಸ್ಮದೀಯೇ ಯಜ್ಞೇ ಹೋತಾ ಋತ್ವಿಕ್ ತವಾಹ್ವಾನಾರ್ಥಮೃತ್ವಿಯಃ ಪ್ರಾಪ್ತ-ಕಾಲಃ ಸನ್ ಸತ್ತೋ ನಿಷಣ್ಣೋ ವರ್ತತೇ । ತಥಾ ಬರ್ಹಿರಾನುಷಕ್ ಅನುಷಕ್ತಂ ಪರಸ್ಪರಸಂಬದ್ಧಂ ಯಥಾ ಭವತಿ ತಥಾ ತಿಸ್ತಿರೇ । ಹವಿಷ್ವಾಸನ್ನೇಷು ಸ್ತೀರ್ಣಮಭೂತ್ । ತಥಾ ಪ್ರಾತಃ ಪ್ರಾತಃಸವನೇ ಸೋಮಾಭಿಷವಾರ್ಥಮದ್ರಯೋ ಗ್ರಾವಾಣೋಽಯುಜ್ರನ್ । ಪರಸ್ಪರಂ ಸಂಗತಾ ಅಭೂವನ್ । ತಸ್ಮಾ-ತ್ಸೋಮಪಾನಾರ್ಥಂ ತ್ವಮಾಗಚ್ಛೇತಿ ಭಾವಃ ॥ ಸತ್ತಃ । ಷದ್ಲೃ ವಿಶರಣಾದಿಷ್ವಿತ್ಯಸ್ಮಾದ್ಗತ್ಯರ್ಥಾ-ಕರ್ಮಕಶ್ಲಿಷೇತ್ಯಾದಿನಾ । ಪಾ. ೩-೪-೭೨ । ಕರ್ತರಿ ಕ್ತಃ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ನಿಷ್ಠಾತಕಾರಸ್ಯ ನತ್ವಾಭಾವಃ । ಋತ್ವಿಯಃ । ಋತುಶಬ್ದಾಚ್ಛಂದಸಿ ಘಸಿತಿ ಘಸ್ಪ್ರತ್ಯಯಃ । ಘಸ್ಯೇ-ಯಾದೇಶಃ । ಸಿತೀತಿ ಪದಸಂಜ್ಞಾಯಾಮೋರ್ಗುಣ ಇತಿ ಭಸಂಜ್ಞಾಧೀನೋ ಗುಣೋ ನ ಭವತಿ । ಯಣಾದೇಶಃ । ಪ್ರತ್ಯಯಸ್ವರಃ । ತಿಸ್ತಿರೇ । ಸ್ತೃಞ್ ಆಚ್ಛಾದನ ಇತ್ಯಸ್ಯ ಕರ್ಮಣಿ ಲಟ್ಯೃತೋ ಇದ್ಧಾತೋರಿತೀತ್ತ್ವಂ । ದ್ವಿರ್ವಚನೇ ಶರ್ಪೂರ್ವಾಃ ಖಯ ಇತಿ ತಕಾರಸ್ಯ ಶೇಷಃ । ಲಿಟಸ್ತಝಯೋರೇ-ಶಿರೇಜಿತಿ ತಪ್ರತ್ಯಯಸ್ಯೈಶಿತ್ಯಾದೇಶಃ । ಪಾದಾದಿತ್ವಾದನಿಘಾತಃ । ಪ್ರತ್ಯಯಸ್ವರಃ । ಆನುಷಕ್ । ಷಸ್ಜ ಸಂಗೇ । ಕ್ವಿಪ್ । ಅನಿದಿತಾಮಿತಿ ನಲೋಪಃ । ಆಙನ್ವೋರುಪಸರ್ಗಯೋಃ ಪ್ರಾಕ್ಪ್ರಯೋಗಃ । ಗತಿ-ಸಮಾಸಃ । ಕೃದುತ್ತರಪದಸ್ವರಃ । ಅಯುಜ್ರನ್ । ಯುಜಿರ್ ಯೋಗ ಇತ್ಯಸ್ಯ ಲುಙಃ ಝ್ಲೇರಿರಿತೋ ವೇತ್ಯಙಾದೇಶಃ । ಬಹುಲಂ ಛಂದಸೀತಿ ರುಡಾಗಮಃ । ಪಾದಾದಿತ್ವಾದನಿಘಾತಃ । ಅಡಾಗಮಸ್ವರಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ನಃ—ನಮ್ಮ ಈ ಯಜ್ಞದಲ್ಲಿ । **ಹೋತಾ**—ಹೋತೃವು । **ಋತ್ವಿಯಃ**—ನಿನ್ನ ಪ್ರಾರ್ಥನಾ ಕಾಲಕ್ಕೆ ಸರಿಯಾಗಿ (ನಿನ್ನನ್ನು ಯಜ್ಞಕ್ಕೆ ಕರೆಯುವ ಕಾಲಕ್ಕೆ ಸರಿಯಾಗಿ) । **ಸತ್ತಃ**—ಕುಳಿತಿದ್ದಾನೆ । ಬರ್ಹಿಃ—ದರ್ಭೆಯು । ಆನುಷಕ್—ಪರಸ್ಪರ ಸೇರಿರುವಂತೆ । ತಿಸ್ತಿರೇ—ವೇದಿಕೆಯಲ್ಲಿ (ಆಯಾ ಸ್ಥಾನಗಳಲ್ಲಿ) ಹರಡಲ್ಪಟ್ಟಿದೆ । ಅದ್ರಯಃ—ಸೋಮವನ್ನು ಹಿಂಡುವ ಕಲ್ಲುಗಳು । **ಅಯುಜ್ರನ್**—ಒಟ್ಟಿಗೆ ಇಡಲ್ಪಟ್ಟಿವೆ.

ಭಾವಾರ್ಥ

ಎಲೈ ಇಂದ್ರನೇ, ನಮ್ಮ ಯಜ್ಞದಲ್ಲಿ ಹೋತೃವು ನಿನ್ನನ್ನು ಪ್ರಾರ್ಥಿಸಿ ಕರೆಯುವ ಕಾಲಕ್ಕೆ ಸರಿಯಾಗಿ ಬಂದು ಕುಳಿತಿದ್ದಾನೆ. ದರ್ಭಾಸನಗಳು ವೇದಿಕೆಯ ಸುತ್ತಲೂ ಹರಡಲ್ಪಟ್ಟಿವೆ. ಸೋಮರಸವನ್ನು ಹಿಂಡುವ ಕಲ್ಲುಗಳು ಒಟ್ಟಿಗೆ ಇಡಲ್ಪಟ್ಟಿದೆ.

English Translation

The invoking priest is seated at the proper season; the sacred grass woven together has been spread; the stones are placed in contact for the morning (libation).

ವಿಶೇಷವಿಷಯಗಳು

**ನಃ ಹೋತಾ ಋತ್ವಿಯಃ ಸತ್ತಃ**—ಇಲ್ಲಿ ನಃ ಎಂದರೆ ನಮ್ಮ ಎಂಬ ಅರ್ಥವನ್ನು ಹೇಳಬಹುದು ಅಥವಾ ನಃ ಯಜ್ಞೇ ನಮ್ಮ ಯಜ್ಞದಲ್ಲಿ ಎಂದು **ಯಜ್ಞೇ** ಎಂಬ ಶಬ್ದವನ್ನು ಅಧ್ಯಾಹಾರಮಾಡಿಕೊಂಡು ಅರ್ಥವನ್ನು

CC-0. Jangamwadi Math Collection. Digitized by eGangotri

ಬೇಕಾದರೂ ಹೇಳಬಹುದು. **ಋತ್ವಿಯಃ** ಎಂಬ ಶಬ್ದಕ್ಕೆ ಭಾಷ್ಯಕಾರರು **ಪ್ರಾಪ್ತಕಾಲಃ ಸನ್** ಸರಿಯಾದ ಕಾಲಕ್ಕೆ ಬಂದು ಎಂದರ್ಥಮಾಡಿದಾರೆ. ಎಂದರೆ ಪ್ರಾತಃಕಾಲದಲ್ಲಿ ಯಜ್ಞಾರಂಭವಾಗುವುದು. ಪ್ರಾತಃಸವನವೂ ಎಂದರೆ ಸೋಮರಸವನ್ನು ಹಿಂಡುವುದೆಂಬ ಪ್ರಾತಸ್ಸವನಕರ್ಮವೂ ಪ್ರಾತಃಕಾಲದಲ್ಲಿಯೇ ನಡೆಯುವುದು. ಆದುದ ರಿಂದ ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಮಾಡುವ ಹೋತೃವೆಂಬ ಋತ್ವಿಜನು ತನ್ನ ಕರ್ತವ್ಯವನ್ನು ಮಾಡುವುದ ಕ್ಕಾಗಿ ಕಾಲವಿಳಂಬ ಮಾಡದೆ ಸರಿಯಾದ ಕಾಲದಲ್ಲಿ ಎಂದರೆ ಪ್ರಾತಃಕಾಲದಲ್ಲಿಯೇ ಯಜ್ಞಭೂಮಿಗೆ ಬಂದು ಕುಳಿತಿರುವನು ಎಂದಭಿಪ್ರಾಯವು.

ತಿಸ್ರೋ **ಬರ್ಹಿಃ ಆನುಷಕ್—ಪರಸ್ಪರಸಂಬದ್ಧಂ ಯಥಾ ಭವತಿ ತಥಾ ಬರ್ಹಿಃಷ್ವಾಸನ್ನೇಷು ಸ್ತೀರ್ಣ ಮಭೂತ್।** ಈ ಯಜ್ಞದಲ್ಲಿ **ಬರ್ಹಿಃ** ಎಂಬ ಒಂದೇಸಮನಾಗಿ ಕತ್ತರಿಸಿದ ದರ್ಭೆಗಳನ್ನು ದೇವತೆಗಳು ಯಜ್ಞ ಭೂಮಿಗೆ ಬಂದು ಕುಳಿತುಕೊಳ್ಳುವುದಕ್ಕಾಗಿ ಪರಸ್ಪರ ಸಂಬದ್ಧವಾಗಿ ಹರಡಿದೆ- ಎಂದರೆ ದರ್ಭೆಗಳನ್ನು ದೂರದೂರ ವಾಗಿ ಹರಡಿಲ್ಲ. ಒಂದಕ್ಕೊಂದು ಸೇರಿಕೊಂಡು ಎಂದರೆ ಪದರಪದರವಾಗಿ ಒಂದು ಪದರದ ಮೇಲೊಂದು ಪದರ ವನ್ನು ಹರಡಿ ಮೆತ್ತಗಿರುವಂತೆ ಹರಡಲಾಗಿದೆ ಈರೀತಿ ಮೂರು ಪದರಗಳನ್ನು ಒಂದರಮೇಲೊಂದನ್ನು ಹರಡಿ ಆಸನವು ಮೆತ್ತಗಾಗುವಂತೆ ಸಿದ್ಧಪಡಿಸುವರು. ಇದಕ್ಕೆ **ಬರ್ಹಿಃ** ಎಂದು ಹೆಸರು. **ಆನುಷಕ್** ಎಂಬ ಶಬ್ದಕ್ಕೆ ಯಾಸ್ಕರು—**ಆನುಷಗಿತಿ ನಾಮಾನುಪೂರ್ವಸ್ಯಾನುಷಕ್ತಂ ಭವತಿ । ಸ್ತೃಣಂತಿ ಬರ್ಹಿರಾನುಷಕ್** (ಋ. ಸಂ. ೮-೪೫-೧), **ಇತ್ಯಪಿ ನಿಗಮೋ ಭವತಿ** (ನಿ. ೬-೧೪), **ಆನುಷಕ್** ಎಂದರೆ ಪರಸ್ಪರ ಅಥವಾ ಎಡಬಿಡದೆ ಒಂದ ಕ್ಕೊಂದು ಸೇರಿಕೊಂಡು ಇರುವುದು. ವಿರಳವಲ್ಲದ, ಒತ್ತೊತ್ತಾದ ಎಂದಭಿಪ್ರಾಯವು ದರ್ಭೆಯನ್ನು ಒತ್ತೊ ತ್ತಾಗಿ ಹರಡುವಾಗ ಈ ಶಬ್ದದ ಪ್ರಯೋಗವಿರುವುದೆಂದು ತೋರಿಸುವುದಕ್ಕಾಗಿ ಯಾಸ್ಕರು—**ಸ್ತೃಣಂತಿ ಬರ್ಹಿ- ರಾನುಷಕ್** ಎಂಬ ಋಕ್ಕನ್ನು ಉದಾಹರಿಸಿರುವರು.

**ಅದ್ರಯಃ ಅಯುಜ್ರನ್—ಗ್ರಾವಾಣಃ ಪರಸ್ಪರಂ ಸಂಗತಾ ಅಭೂವನ್** ಸೋಮರಸವನ್ನು ಹಿಂಡು ವುದಕ್ಕಾಗಿ ಕಲ್ಲುಗಳನ್ನು ಒಂದರ ಪಕ್ಕದಲ್ಲೊಂದನ್ನು ಇಡಲಾಗಿದೆ ಎಂದಭಿಪ್ರಾಯವು.

ಈಗ ನಾವು ಮಾಡುವ ಯಜ್ಞದಲ್ಲಿ ಎಲ್ಲವೂ ಸಿದ್ಧವಾಗಿವೆ. ದೇವತೆಗಳನ್ನು ಆಹ್ವಾನಮಾಡುವುದಕ್ಕಾಗಿ ಹೋತೃವೆಂಬ ಋತ್ವಿಜನು ಕಾಲಕ್ಕೆ ಸರಿಯಾಗಿ ಬಂದು ತನ್ನ ಸ್ಥಾನದಲ್ಲಿ ಕುಳಿತು ಸಿದ್ಧವಾಗಿರುವನು. ದೇವತೆಗಳು ಯಜ್ಞಭೂಮಿಗೆ ಬಂದು ಕುಳಿತುಕೊಳ್ಳುವುದಕ್ಕಾಗಿ ದರ್ಭೆಗಳನ್ನು ಒತ್ತೊತ್ತಾಗಿ ಹರಡಿ ಮೆತ್ತಗಿರುವ ಆಸನವು ಸಿದ್ಧವಾಗಿದೆ. ಸೋಮಲತೆಗಳನ್ನು ಜಜ್ಜಿ ರಸವನ್ನು ಹಿಂಡುವುದಕ್ಕಾಗಿ ಕಲ್ಲುಗಳನ್ನು ಸಮೀಪದಲ್ಲಿಯೇ ಇಡಲಾಗಿದೆ. ಹೀಗೆ ಎಲ್ಲವೂ ಸಿದ್ಧವಾಗಿರುವುದರಿಂದ ಎಲೈ ಇಂದ್ರನೇ, ಸೋಮಪಾನಾರ್ಥವಾಗಿ ನಮ್ಮ ಯಜ್ಞಭೂಮಿಗೆ ಬೇಗ ಬಾ ಎಂದು ಪ್ರಾರ್ಥಿಸಲಾಗಿದೆ.

---

ಸಂಹಿತಾಪಾಠಃ

ಇಮಾ ಬ್ರಹ್ಮ ಬ್ರಹ್ಮವಾಹಃ ಕ್ರಿಯಂತ ಆ ಬರ್ಹಿಃ ಸೀದ ।

ವೀಹಿ ಶೂರ ಪುರೋಳಾಶಂ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಇಮಾ । ಬ್ರಹ್ಮ । ಬ್ರಹ್ಮsವಾಹಃ । ಕ್ರಿಯಂತೇ । ಆ । ಬರ್ಹಿಃ । ಸೀದ ।

ವೀಹಿ । ಶೂರ । ಪುರೋಳಾಶಂ ॥ ೩ ॥

ಸಾಯಣಭಾಷ್ಯಂ

ಬಹ್ಮಾಣಿ ಸ್ತೋತ್ರಾಣಿ ಸ್ತುತ್ಯತಯಾ ವಹತೀತಿ ಬ್ರಹ್ಮವಾಹಾ ಬ್ರಹ್ಮಣಾ ಸ್ತೋತ್ರೇಣ ಪ್ರಾಪ್ಯತ ಇತಿ ವಾ । ಹೇ ಬ್ರಹ್ಮವಾಹ ಇಂದ್ರ ತುಭ್ಯಮಿಮೇಮಾನಿ ಬ್ರಹ್ಮ ಬ್ರಹ್ಮಾಣಿ ಸ್ತೋತ್ರಾಣ್ಯಸ್ಮಾಭಿಃ ಕ್ರಿಯಂತೇ । ಅತೋ ಬರ್ಹಿರಾ ಸೀದ । ಸ್ತುತ್ಯತಯಾ ಬರ್ಹಿಷಿ ಯಜ್ಞ ಉಪವಿಶ । ಹೇ ಶೂರ ಸಮರ್ಥೇಂದ್ರಾಸ್ಮಾಭಿರ್ದೀಯಮಾನಮಿಮಂ ಪುರೋಡಾಶಂ ಪುರೋಡಾಶಾಖ್ಯಂ ಹವಿರ್ವೀಹಿ । ಭಕ್ಷಯ ॥ ಬ್ರಹ್ಮವಾಹಃ । ವಹ ಪ್ರಾಪಣ ಇತ್ಯಸ್ಮಾದ್ವಹಿಹಾಧಾಞ್ಭ್ಯಶ್ಛಂದಸೀತ್ಯಸುನ್ । ಣಿದಿತ್ಯನುವೃತ್ತೇರುಪಧಾವೃದ್ಧಿಃ । ಆಮಂತ್ರಿತತ್ವಾನ್ನಿಘಾತಃ । ಕ್ರಿಯಂತೇ । ಕರೋತೇಃ ಕರ್ಮಣಿ ಯಕ್ । ರಿಙ್ ಶಯಗ್ಲಿಂಕ್ಷ್ವಿತಿ ರಿಙಾದೇಶಃ । ಪ್ರತ್ಯಯಸ್ವರಃ । ಪಾದಾದಿತ್ವಾದನಿಘಾತಃ । ಬರ್ಹಿಃ । ಕಾಲಾಧ್ವನೋರತ್ಯಂತಸಂಯೋಗೇ ದ್ವಿತೀಯಾ । ವೀಹಿ । ವೀ ಕಾಂತ್ಯಾದಿಷು । ಲೋಟಿ ರೂಪಂ । ಹೇರ್ಙಿತ್ತ್ವಾದುದಾತ್ತಃ ಪುರೋಳಾಶಂ । ದಾಶೃ ದಾನ ಇತ್ಯಸ್ಮಾತ್ಪುರಸ್ಪೂರ್ವಾನ್ಮಂತ್ರೇ ಶ್ವೇತವಹೋಕ್ಥಶಸ್ಪುರೋಡಾಶೋಣ್ವಿನ್ । ಪುರೋ ದಾಶಂತ ಏನಮಿತಿ । ನಿಪಾತನಾದ್ಡಕಾರಸ್ಯ ಳಕಾರಃ । ಕೃದುತ್ತರಪದಸ್ವರಃ ॥

ಪ್ರತಿಪದಾರ್ಥ

ಬ್ರಹ್ಮವಾಹಃ— ಸ್ತುತಿಗಳಿಂದ (ತೃಪ್ತನಾಗಿ) ನಮ್ಮನ್ನು ಸಮೀಪಿಸತಕ್ಕ ಇಂದ್ರನೇ । ಇಮಾ ಬ್ರಹ್ಮ— ಈ ಸ್ತುತಿಗಳು । ಕ್ರಿಯಂತೇ— ನಮ್ಮಿಂದ ನಿರ್ಮಿತವಾಗಿವೆ (ಆದುದರಿಂದ) । ಬರ್ಹಿಃ— ದರ್ಭಾಸನದ ಮೇಲೆ । ಆ ಸೀದ— ಕುಳಿತುಕೊ । ಶೂರ— ಸಮರ್ಥನಾದ ಇಂದ್ರನೇ । ಪುರೋಡಾಶಂ— ಪುರೋಡಾಶರೂಪವಾದ ಈ ಹವಿಸ್ಸನ್ನು । ವೀಹಿ— ಭಕ್ಷಿಸು ।

ಭಾವಾರ್ಥ

ಸ್ತುತಿಗಳಿಂದ ತೃಪ್ತನಾಗಿ ನಮ್ಮನ್ನು ಸಮೀಪಿಸತಕ್ಕ ಎಲೈ ಇಂದ್ರನೇ, ನಮ್ಮಿಂದ ಈ ಸ್ತುತಿಗಳು ನಿರ್ಮಿತವಾಗಿವೆ. ಆದುದರಿಂದ ದರ್ಭಾಸನದ ಮೇಲೆ ಕುಳಿತುಕೊ. ಸಮರ್ಥನಾದ ಇಂದ್ರನೇ, ಪುರೋಡಾಶ ರೂಪವಾದ ಈ ಹವಿಸ್ಸನ್ನು ಭಕ್ಷಿಸು.

English Translation

Bearer of prayers, these prayers are offered (by us): sit down on the sacred grass: partake, hero, of the oblation.

ವಿಶೇಷವಿಷಯಗಳು

ಬ್ರಹ್ಮವಾಹಃ— ಇದು ಸಂಬುದ್ಧಿ ಪ್ರಥಮೈಕವಚನವು. ಇಂದ್ರನನ್ನು ಸಂಬೋಧಿಸುವುದಕ್ಕಾಗಿ ಉಪಯೋಗಿಸಲಾಗಿದೆ. ಬ್ರಹ್ಮವೆಂದರೆ ಸ್ತೋತ್ರವು. ಅಂತಹ ಸ್ತೋತ್ರಗಳಿಂದ ಸ್ತುತಿಸಲ್ಪಟ್ಟು ನಮ್ಮ ಸಮೀಪಕ್ಕೆ ಬರುವವನಾದ್ದರಿಂದ ಬ್ರಹ್ಮವಾಹಃ ಎಂಬ ಶಬ್ದದಿಂದ ಕರೆಯಲಾಗಿದೆ.

CC-0. Jangamwadi Math Collection. Digitized by eGangotri

**ಇಮಾ ಬ್ರಹ್ಮ ಕ್ರಿಯಂತೇ-ಇಮಾನಿ ಸ್ತೋತ್ರಾಣಿ ಅಸ್ಮಾಭಿಃ ಕ್ರಿಯಂತೇ** । ಈ ಸ್ತೋತ್ರಗಳು ನಮ್ಮಿಂದ ಮಾಡಲ್ಪಡುತ್ತವೆ. ಇಲ್ಲಿ ಬ್ರಹ್ಮ ಎಂಬ ಏಕವಚನಪ್ರಯೋಗವಿದ್ದರೂ ಬ್ರಹ್ಮಾಣಿ ಎಂದು ಬಹುವಚನಾರ್ಥವನ್ನು ಹೇಳಬೇಕು. ಏಕೆಂದರೆ ಇದಕ್ಕೆ ವಿಶೇಷಣವಾಗಿರುವ ಇಮಾಃ ಎಂಬ ಶಬ್ದವೂ ಕ್ರಿಯಂತೇ ಎಂಬ ಕ್ರಿಯಾಪದವೂ ಬಹುವಚನದಲ್ಲಿರುವುದರಿಂದ ಬ್ರಹ್ಮ ಎಂಬ ಶಬ್ದವೂ ಬಹುವಚನವೆಂದು ಪರಿಗಣಿಸಬೇಕು.

**ಆ ಬರ್ಹಿಃ ಸೀದ**—ಸಿದ್ಧಪಡಿಸಿರುವ ಈ ದರ್ಭಾಸನದ ಮೇಲೆ ಕುಳಿತುಕೋ.

**ಶೂರ ಪುರೋಳಾಶಂ ವೀಹಿ—ಸಮರ್ಥೇಂದ್ರ ಅಸ್ಮಾಭಿರ್ದೀಯಮಾನಮಿಮಂ ಪುರೋಡಾಶಾಖ್ಯಂ ಹವಿಃ ಭಕ್ಷಯ** । ಎಲೈ ಸಮರ್ಥನಾದ ಇಂದ್ರನೇ, ಈಗ ನಾವು ನಿನಗೆ ಅರ್ಪಿಸುವ ಪುರೋಡಾಶವೆಂಬ ಹವಿಸ್ಸನ್ನು ಭಕ್ಷಿಸು. ಪುರೋಡಾಶವೆಂದರೆ – **ಪುರೋ ದಾಶಂತ ಏನಮಿತಿ** । ನಿಪಾತನಾದ್ದಕಾರಸ್ಯ ಳಕಾರಃ ಯಜ್ಞವೇದಿಯ ಮುಂದುಗಡೆ ಇದನ್ನು ದೇವತೆಗಳಿಗೆ ಅರ್ಪಿಸುವುದರಿಂದ ಈ ಹವಿಸ್ಸಿಗೆ ಪುರೋಡಾಶವೆಂದು ಹೆಸರು.

---

ಸಂಹಿತಾಪಾಠಃ

**ರಾರಂಧಿ ಸವನೇಷು ಣ ಏಷು ಸ್ತೋಮೇಷು ವೃತ್ರಹನ್ ।**

**ಉಕ್ಥೇಷ್ವಿಂದ್ರ ಗಿರ್ವಣಃ ॥ ೪ ॥**

ಪದಪಾಠಃ

**ರರಂಧಿ । ಸವನೇಷು । ನಃ । ಏಷು । ಸ್ತೋಮೇಷು । ವೃತ್ರಽಹನ್ ।**

**ಉಕ್ಥೇಷು । ಇಂದ್ರ । ಗಿರ್ವಣಃ ॥ ೪ ॥**

ಸಾಯಣಭಾಷ್ಯಂ

**ಹೇ ಗಿರ್ವಣೋ ಗೀರ್ಭಿಃ ಸ್ತುತಿಭಿರ್ವನನೀಯ ವೃತ್ರಹನ್ ವೃತ್ರಸ್ಯ ಹಂತರ್ಹೇ ಇಂದ್ರ ನೋಽಸ್ಮಾಕಂ ಸಂಬಂಧಿಷು ತ್ರಿಷು ಸವನೇಷ್ವೇಷು ಕ್ರಿಯಮಾಣೇಷು ಸ್ತೋಮೇಷು ಸ್ತೋತ್ರೇಷೂಕ್ಥೇಷು ಶಸ್ತ್ರೇಷು ಚ ರಾರಂಧಿ । ರಮುಸ್ವ ॥ ರಾರಂಧಿ । ರಮತೇರ್ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಛಂದಸ್ಯುಭಯಥೇತಿ ಹೇರಾರ್ಧಧಾತುಕತ್ವೇನಾಜುತ್ತ್ವಾತ್ಽದಜುತಶ್ಚೇತಿ ಹೇರ್ಧಿಃ । ಸವನೇಷು । ಸೂಯತೇ ಸೋಮೋ ಯೇಷ್ವಿತ್ಯಧಿಕರಣೇ ಸುನೋತೇರ್ಲ್ಯುಟ್ । ಲಿತ್ಸ್ವರಃ । ಣಃ । ನಸೋ ನಕಾರಸ್ಯ ನಶ್ಚ ಧಾತುಸ್ಥೋರುಷಭ್ಯ ಇತಿ ಸಂಹಿತಾಯಾಂ ಣತ್ವಂ ॥**

ಪ್ರತಿಪದಾರ್ಥ

**ಗಿರ್ವಣಃ**—ಸ್ತುತಿಗಳಿಂದ ತೃಪ್ತನಾಗುವವನೂ । **ವೃತ್ರಹನ್**—ವೃತ್ರಹಂತಕನೂ ಆದ । **ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮಿಂದ ನೆರವೇರಿಸಲ್ಪಡುವ । **ಸವನೇಷು**—ಮೂರು ಸವನಗಳಲ್ಲಿಯೂ ಸಹ । **ಏಷು**—

CC-0. Jangamwadi Math Collection. Digitized by eGangotri

ಇಲ್ಲಿ ಪಠಿಸಲ್ಪಡುವ । **ಸ್ತೋಮೇಷು**—ಸ್ತೋಮರೂಪವಾದ ಸ್ತುತಿಗಳಿಂದಲೂ । **ಉಕ್ಥೇಷು**—ಶಸ್ತ್ರರೂಪವಾದ ಸ್ತುತಿಗಳಿಂದಲೂ । **ರಾರಂಧಿ**—ರಮಿಸು (ತೃಪ್ತನಾಗು) ।

ಭಾವಾರ್ಥ

ಸ್ತುತಿಗಳಿಂದ ತೃಪ್ತನಾಗುವವನೂ, ವೃತ್ರಹಂತಕನೂ ಆದ ಎಲೈ ಇಂದ್ರನೇ, ನಮ್ಮಿಂದ ನೆರವೇರಿಸಲ್ಪಡುವ ಮೂರು ಸವನಗಳಲ್ಲಿಯೂ ಇಲ್ಲಿ ನಿರ್ಮಿತವಾಗುವ ಸ್ತೋಮರೂಪವಾದ ಸ್ತುತಿಗಳಿಂದಲೂ, ಶಸ್ತ್ರರೂಪವಾದ ಸ್ತುತಿಗಳಿಂದಲೂ ರಮಿಸಿ ತೃಪ್ತಿಯನ್ನು ಹೊಂದು.

English Translation

Slayer of Vritra, Indra, you are gratified by praise, be pleased with these our praises and prayers at our (daily) secrifices.

ವಿಶೇಷವಿಷಯಗಳು

**ಗಿರ್ವಣಃ**—**ಗೀರ್ಭಿಃ ಸ್ತುತಿಭಿರ್ವನನೀಯಃ** । ಸ್ತೋತ್ರರೂಪವಾದ ವಾಕ್ಯಗಳಿಂದ ಹೊಂದಲ್ಪಡುವವನು ಎಂದರೆ ನಾವು ಮಾಡುವ ಸ್ತೋತ್ರಗಳನ್ನು ಕೇಳಿ ಸಂತುಷ್ಟನಾಗಿ ನಮ್ಮ ಸಮೀಪಕ್ಕೆ ಬರುವವನೆಂದಭಿಪ್ರಾಯವು.

**ವೃತ್ರಹನ್**—ವೃತ್ರಸಂಹಾರಕನಾದ ಎಲೈ ಇಂದ್ರನೇ. ಇಂದ್ರನ ಅತಿಮುಖ್ಯವಾದ ಸಾಹಸಕಾರ್ಯವೆಂದರೆ ವೃತ್ರಸಂಹಾರವು. ಆದುದರಿಂದ ಇಂದ್ರನನ್ನು ವೃತ್ರಸಂಹಾರಕನೆಂದು ಕರೆಯುವುದು ಋಗ್ವೇದದಲ್ಲಿ ಸಾಮಾನ್ಯವಾಗಿದೆ.

**ಸವನೇಷು**—ಸವನಗಳು ಮೂರು ಪ್ರಾತಃ ಸವನ, ಮಾಧ್ಯಂದಿನಸವಸ, ತೃತೀಯಸವನ ಎಂದು. ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ಸೋಮರಸವನ್ನು ತೆಗೆದು ಶೋಧನೆಮಾಡಿ ದೇವತೆಗಳಿಗೆ ಅರ್ಪಿಸುವರು. ಈ ಕಾರ್ಯವು ಮಂತ್ರಪೂರ್ವಕವಾಗಿ ನಡೆಯಬೇಕು. ಯಜ್ಞಗಳಲ್ಲಿ ಈ ಕಾರ್ಯವು ಪ್ರಾತಃಕಾಲ, ಮಧ್ಯಾಹ್ನ ಸಾಯಂಕಾಲಗಳಲ್ಲಿ ನಡೆಯುವುದು. ಈ ಸೋಮಾಭಿಷವಣವನ್ನು ಮಾಡುವ ದಿನಕ್ಕೆ ಸುತ್ಯಾದಿನವೆಂದು ಹೇಳುವರು. ಈ ವಿಷಯವನ್ನು ನಾವು ಹಿಂದೆ ವಿಸ್ತಾರವಾಗಿ ವಿವರಿಸಿದೇವೆ

**ಸ್ತೋಮೇಷು**—ಸ್ತೋತ್ರರೂಪವಾದ ವೇದಮಂತ್ರಗಳು. ಈ ಸ್ತೋಮಗಳ ವಿಷಯವಾದ ವಿಸ್ತಾರವಾದ ವಿವರಣೆಯನ್ನು ನಾವು. ಋ. ಸಂ. ಭಾಗ ೨, ಪೇಜು 138 ವಿವರಿಸಿರುವುನ್ನು ನೋಡಿ.

**ಉಕ್ಥೇಷು**—ದೇವತೆಗಳನ್ನು ಆಹ್ವಾನಮಾಡುವಾಗ ಉಪಯೋಗಿಸುವ ವೇದಮಂತ್ರಗಳಿಗೆ ಶಸ್ತ್ರಮಂತ್ರಗಳೆಂದು ಹೆಸರು. ಸಾಧಾರಣವಾಗಿ ಉಕ್ಥಶಬ್ದವು ಈ ವಿಧವಾದ ಮಂತ್ರಗಳನ್ನೂ ಸ್ತೋತ್ರಗಳನ್ನೂ ನಿರ್ದೇಶಿಸುವಾಗ ಉಪಯೋಗಿಸಲ್ಪಡುವುದು. ಈ ಶಬ್ದದ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ 8-252, 10-695, 13-421ನ್ನು ನೋಡಿ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಮತಯಃ ಸೋಮಪಾಮುರುಂ ರಿಹಂತಿ ಶವಸಸ್ಪತಿಂ ।

ಇಂದ್ರಂ ವತ್ಸಂ ನ ಮಾತರಃ ॥ ೫ ॥

ಪದಪಾಠಃ

ಮತಯಃ । ಸೋಮಽಪಾಂ । ಉರುಂ । ರಿಹಂತಿ । ಶವಸಃ । ಪತಿಂ ।

ಇಂದ್ರಂ । ವತ್ಸಂ । ನ । ಮಾತರಃ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ಮತಯೋಽಸ್ಮಾಭಿಃ ಕ್ರಿಯಮಾಣಾಃ ಸ್ತುತಯ ಉರುಂ ಮಹಾಂತಂ ಸೋಮಪಾಂ ಸೋಮಸ್ಯ ಪಾತಾರಂ ಶವಸೋ ಬಲಸ್ಯ ಪತಿಮಿಂದ್ರಂ ತ್ವಾಂ ರಿಹಂತಿ । ಲಿಹಂತಿ । ತತ್ರ ದೃಷ್ಟಾಂತಃ । ವತ್ಸಂ ನ । ಯಥಾ ವತ್ಸಂ ಮಾತರೋ ಧೇನವೋ ಲಿಹಂತಿ ತದ್ವತ್ ॥ ಮತಯಃ । ಮನ ಜ್ಞಾನ ಇತ್ಯಸ್ಮಾತ್ಕರ್ಮಣಿ ಮಂತ್ರೇ ವೃಷೇತ್ಯಾದಿನಾ ಕ್ತಿನ್ನುದಾತ್ತಃ । ಉರುಂ । ಊರ್ಣುಞ್ ಆಚ್ಛಾದನ ಇತ್ಯಸ್ಮಾನ್ಮಹತ್ಯರ್ಥೇ ಗಮ್ಯಮಾನೇ ಮಹತಿ ಹ್ರಸ್ವಶ್ಚ । ಉ. ೧-೩೨ । ಇತಿ ಕುಪ್ರತ್ಯಯೋ ಧಾತೋರ್ಹ್ರಸ್ವಶ್ಚ। ಪ್ರತ್ಯಯಸ್ವರಃ । ರಿಹಂತಿ । ಲಿಹ ಆಸ್ವಾದನ ಇತ್ಯಸ್ಯ ಲಟಿ ರೂಪಂ । ರಲಯೋರಭೇದಃ । ಪ್ರತ್ಯಯಸ್ವರಃ । ಶವಸಸ್ಪತಿಮಿತಿ ಸಂಹಿತಾಯಾಂ ಷಷ್ಠ್ಯಾಃ ಪತಿಪುತ್ರಪೃಷ್ಠೇತ್ಯಾದಿನಾ ವಿಸರ್ಜನೀಯಸ್ಯ ಸತ್ವಂ । ವತ್ಸಂ । ವದ ವ್ಯಕ್ತಾಯಾಂ ವಾಚಿ । ಅಸ್ಮಾದ್ವೃತೃವದಿಹನೀತ್ಯಾದಿನಾ ಸಪ್ರತ್ಯಯಃ । ವದತ್ಯಭೀಕ್ಷ್ಣಂ ಮಾತರಮಿತಿ ವತ್ಸೋ ಗೋಬಾಲಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಮತಯಃ—ನಮ್ಮಿಂದ ನಿರ್ಮಿತವಾಗುವ ಸ್ತುತಿಗಳು । ಉರುಂ—ಮಹದಾಕಾರವುಳ್ಳವನೂ । ಸೋಮಪಾಂ—ಸೋಮರಸವನ್ನು ಪಾನಮಾಡತಕ್ಕವನೂ । ಶವಸ್ಯ—ಬಲಕ್ಕೆ । ಪತಿಂ—ಒಡೆಯನೂ । ಇಂದ್ರಂ—ಇಂದ್ರರೂಪನೂ ಆದ ನಿನ್ನನ್ನು । ಮಾತರಃ—ಧೇನುಗಳು । ವತ್ಸಂ ನ—ತಮ್ಮ ಕರುಗಳನ್ನು ಪ್ರೇಮದಿಂದ ನೆಕ್ಕುವಂತೆ । ರಿಹಂತಿ—ನೆಕ್ಕುತ್ತವೆ. (ನಿನ್ನಲ್ಲಿ ಐಕ್ಯವಾಗುತ್ತವೆ).

ಭಾವಾರ್ಥ

ಎಲೈ ಇಂದ್ರನೇ, ನಮ್ಮಿಂದ ನಿರ್ಮಿತವಾಗತಕ್ಕ ಈ ಸ್ತುತಿಗಳು ಮಹದಾಕಾರವುಳ್ಳವನೂ, ಸೋಮರಸವನ್ನು ಪಾನಮಾಡತಕ್ಕವನೂ, ಬಲಕ್ಕೆ ಒಡೆಯನೂ, ಇಂದ್ರರೂಪನೂ ಆದ ನಿನ್ನನ್ನು ಧೇನುಗಳು ತಮ್ಮ ಕರುಗಳನ್ನು ಪ್ರೇಮದಿಂದ ನೆಕ್ಕುವಂತೆ ನೆಕ್ಕುತ್ತವೆ. ಎಂದರೆ ನಿನ್ನಲ್ಲಿ ಐಕ್ಯವಾಗಿ ನಿನಗೆ ಹರ್ಷದಾಯಕವಾಗುತ್ತವೆ.

## English Translation

Our praises caress the mighty Indra, the drinker of the Soma juice. as cows lick their calves.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಮತಯಃ— ಮತಯಃ ಎಂಬ ಶಬ್ದವು ಮನ ಜ್ಞಾನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಮೇಧಾವಿ ನಾಮಗಳಲ್ಲಿ ಪಠಿತವಾಗಿದೆ (ನಿ. ೩-೯). ಆದರೆ ಇಲ್ಲಿ ಮತಿಶಬ್ದಕ್ಕೆ ಬುದ್ಧಿ ಅಥವಾ ಮಂತ್ರವೆಂದು ಅರ್ಥವು. ಎಂದರೆ ನಾವು ಬುದ್ಧಿಪೂರ್ವಕವಾಗಿ ಪಠಿಸತಕ್ಕ ಸ್ತೋತ್ರವಾಕ್ಯಗಳು ಎಂದಭಿಪ್ರಾಯವು.

ಶವಸ್ಯ ಪತಿಂ— ಶವಸ್ ಶಬ್ದವು ನೂರೊಂದು ಉದಕನಾಮಗಳಲ್ಲಿಯೂ (ನಿ. ೧-೧೪). ಇಪ್ಪತ್ತೆಂಟು ಬಲನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇಲ್ಲಿ ಬಲವೆಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಬಲಕ್ಕೆ ಒಡೆಯನಾದ ಎಂದರೆ ಅತ್ಯಂತ ಬಲಶಾಲಿಯಾದ ಎಂದಭಿಪ್ರಾಯವು.

ಮಾತರಃ ವತ್ಸಂ ನ ರಿಹಂತಿ— ಯಥಾ ಧೇನವೋ ವತ್ಸಂ ಲಿಹಂತಿ ತದ್ವತ್ । ಹಸುಗಳು ತಮ್ಮ ಕರುಗಳನ್ನು ಯಾವ ಪ್ರಕಾರವಾಗಿ ಪ್ರೀತಿಯಿಂದ ನೆಕ್ಕುತ್ತವೆಯೋ ಅದರಂತೆ ನಾವು ಮಾಡುವ ಸ್ತೋತ್ರಗಳು ನಿನ್ನನ್ನು (ಇಂದ್ರನನ್ನು) ನೆಕ್ಕುತ್ತವೆ ಎಂದರೆ ನಿನ್ನನ್ನು ಸೇರುತ್ತವೆ. ನಾವು ಅತ್ಯಾದರದಿಂದ ಮಾಡುವ ಸ್ತೋತ್ರಗಳು ಇಂದ್ರನಾದ ನಿನಗೆ ಮುಟ್ಟಿ ನಿನಗೆ ಪ್ರೀತಿಯನ್ನೂ ಹರ್ಷವನ್ನೂ ಉಂಟುಮಾಡುತ್ತವೆ ಎಂದಭಿಪ್ರಾಯವು. ಹಸುಗಳಿಗೆ ತಮ್ಮ ಕರುಗಳಲ್ಲಿ ಯಾವರೀತಿ ಪ್ರೀತಿ ಇರುವುದೋ ಅದರಂತೆ ನಾವು ಇಂದ್ರನಲ್ಲಿ ಪ್ರೀತಿಯನ್ನು (ಭಕ್ತಿಯನ್ನು) ಹೊಂದಿರುವೆವು. ಅಂತಹ ಪ್ರೀತಿಯಿಂದ ನಾವು ಸ್ತೋತ್ರವನ್ನುಮಾಡುವೆವು ಎಂದು ಈ ದೃಷ್ಟಾಂತದ ಅಭಿಪ್ರಾಯವು.

---

ಸಂಹಿತಾಪಾಠಃ

ಸ ಮಂದಸ್ವಾ ಹ್ಯಂಧಸೋ ರಾಧಸೇ ತನ್ವಾ ಮಹೇ ।
ನ ಸ್ತೋತಾರಂ ನಿದೇ ಕರಃ ॥ ೬ ॥

ಪದಪಾಠಃ

ಸಃ । ಮಂದಸ್ವ । ಹಿ । ಅಂಧಸಃ । ರಾಧಸೇ । ತನ್ವಾ । ಮಹೇ ।
ನ । ಸ್ತೋತಾರಂ । ನಿದೇ । ಕರಃ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ಸ ತಥಾವಿಧಸ್ತ್ವಂ ಮಹೇ ಮಹತೇ ರಾಧಸೇ ಧನಾಯಾಂಧಸೋಽಸ್ಮಾಭಿರ್ದೀಯಮಾನಸ್ಯ ಸೋಮಸ್ಯ ಪಾನೇನ ತನ್ವಾ ಶರೀರೇಣ ಸಹ ಮಂದಸ್ವ । ಹೃಷ್ಟೋ ಭವ । ಹಿರತ್ರ ಸಮುಚ್ಚಯಾರ್ಥಃ । ಕಿಂ ಚ ತ್ವಂ ಸ್ತೋತಾರಂ ಮಾಂ ನಿದೇ ನಿಂದಾಯೈ ವಿಷಯಭೂತಂ ನ ಕರಃ । ಮಾ ಕಾರ್ಷೀಃ ॥ ಮಂದಸ್ವ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಲೋಟಿ ರೂಪಂ । ಹಿ ಚೇತಿ ನಿಘಾತಪ್ರತಿಷೇಧೇನ ಭವಿತವ್ಯಮಿತಿ ಚೇನ್ನ । ತತ್ರಾಪ್ರಾತಿಲೋಮ್ಯ ಇತಿ ವರ್ತತೇ । ಅತ್ರ ಹೇಃ ಸಮುಚ್ಚಯಾರ್ಥತ್ವಾನ್ನಿ-

CC-0. Jangamwadi Math Collection. Digitized by eGangotri

**ಘಾತಃ । ತನ್ವಾ । ಉದಾತ್ತಸ್ವರಿತಯೋರಿತಿ ಸ್ವರಿತತ್ವಂ । ಮಹೇ । ತಕಾರಲೋಪಶ್ಛಾಂದಸಃ । ಬೃಹನ್ಮ-ಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ನಿದೇ । ಣಿದಿ ಕುತ್ಸಾಯಾಮಿತ್ಯಸ್ಮಾತ್ಸಂಪದಾದಿ-ಲಕ್ಷಣೋ ಭಾವೇ ಕ್ವಿಪ್ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ಸಾವೇಕಾಚ ಇತಿ ವಿಭಕ್ತೇರು-ದಾತ್ತತ್ವಂ । ಕರಃ । ಕರೋತೇರ್ಲುಙಃ ಚ್ಲೇಃ ಕೃಮೃದೃರುಹಿಭ್ಯಶ್ಛಂದಸೀತ್ಯಙಾದೇಶಃ । ನಿಘಾತಃ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಸಃ**—ಅಂತಹ ಮಹಿಮೆಯುಳ್ಳ ನೀನು । **ಮಹೇ** – ಪ್ರಭೂತವಾದ । **ರಾಧಸೇ**—ಧನಪ್ರಾಪ್ತಿಗಾಗಿ । **ಅಂಧಸಃ**—(ನಮ್ಮಿಂದ ದತ್ತವಾದ) ಸೋಮದ ಪಾನದಿಂದ । **ತನ್ವಾ**—ಶರೀರಪುಷ್ಟಿಯೊಡನೆ । **ಮಂದಸ್ವ**—ಹರ್ಷಿತನಾಗು । **ಉ**—ಮತ್ತು । **ಸ್ತೋತಾರಂ**—ನಿನ್ನನ್ನು ಸ್ತುತಿಸುವ ನನ್ನನ್ನು । **ನಿದೇ**—ನಿಂದೆಗೆ ಪಾತ್ರನನ್ನಾಗಿ । **ನ ಕರಃ**—ಮಾಡಬೇಡ ।

ಭಾವಾರ್ಥ

ಎಲೈ ಇಂದ್ರನೇ, ಮಹಾಮಹಿಮನಾದ ನೀನು ನಮಗೆ ಧನಪ್ರಾಪ್ತಿಯ ಉದ್ದಿಶ್ಯದಿಂದ ನಮ್ಮಿಂದ ದತ್ತವಾದ ಸೋಮದ ಪಾನದಿಂದ ಶರೀರಪುಷ್ಟಿಯೊಡನೆ ಹರ್ಷಿತನಾಗು. ನಿನ್ನನ್ನು ಸ್ತುತಿಸುವ ನನ್ನನ್ನು ನಿಂದೆಗೆ ಪಾತ್ರನನ್ನಾಗಿ ಮಾಡಬೇಡ.

English Translation

Be exhilarated bodily (by drinking) of the libation which we offer for the sake of ample wealth : expose not your adorer to reproach.

ವಿಶೇಷವಿಷಯಗಳು

**ಸಃ**—ಇಲ್ಲಿ ಯುಷ್ಮಚ್ಛಬ್ದಪ್ರಯೋಗಕ್ಕೆ ಬದಲಾಗಿ ತಚ್ಛಬ್ದಪ್ರಯೋಗವಿರುವುದು. ಎಂದರೆ **ಸಃ** ಎಂಬ ಶಬ್ದಕ್ಕೆ **ತ್ವಂ**-ನೀನು ಎಂದು ಅರ್ಥವನ್ನು ಭಾಷ್ಯಕಾರರು ಹೇಳಿದಾರೆ. ಏತಕ್ಕೆಂದರೆ ಈ ವಾಕ್ಯದಲ್ಲಿರುವ **ಮಂದಸ್ವ**-ಹರ್ಷಿತನಾಗು ಎಂಬ ಕ್ರಿಯಾಪದವು ಮಧ್ಯಮಪುರುಷದಲ್ಲಿರುವುದರಿಂದ ಕರ್ತೃಪದವಾದ **ಸಃ** ಎಂಬ ಪದವು ಪ್ರಥಮಪುರುಷದಲ್ಲಿದ್ದರೂ ಮಧ್ಯಮಪುರುಷಾರ್ಥವನ್ನು ಹೇಳುವುದೇ ಯುಕ್ತವಾಗಿರುವುದು.

**ರಾಧಸೇ**—ರಾಧಃ ಶಬ್ದವು ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಮತ್ತು ಯಾಸ್ಕರು **ರಾಧ ಇತಿ ಧನನಾಮ ರಾಧ್ನುವಂತ್ಯನೇನ** ಎಂದು ನಿರ್ವಚನವನ್ನು ಹೇಳಿರುವರು. (ನಿ. (೪-೪)

**ಅಂಧಸಃ**—ಅಂಧಃ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ನಾವು ಹಿಂದೆಯೇ ಹೇಳಿರುವಂತೆ ಅಂಧಃ ಶಬ್ದವು ಸೋಮರಸವನ್ನು ನಿರ್ದೇಶಿಸುವುದಕ್ಕಾಗಿ ಇಲ್ಲಿ ಪ್ರಯುಕ್ತವಾಗಿದೆ.

**ಸ್ತೋತಾರಂ ನಿದೇ ನ ಕರಃ-ತ್ವಂ ಸ್ತೋತಾರಂ ಮಾಂ ನಿಂದಾಯೈ ವಿಷಯಭೂತಂ ಮಾ ಕಾರ್ಷೀಃ** । ಎಲೈ ಇಂದ್ರನೇ, ನಿನ್ನನ್ನು ಸ್ತೋತ್ರಮಾಡುತ್ತಿರುವ ನನ್ನನ್ನು ನಿಂದೆಗೆ ಗುರಿಯಾಗದಂತೆ ಮಾಡು. ಎಂದರೆ ಯಾರೂ ನನ್ನನ್ನು ನಿಂದಿಸದಿರಲಿ ಎಂದಭಿಪ್ರಾಯವು.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವಯಮಿಂದ್ರ ತ್ವಾಯವೋ ಹವಿಷ್ಮಂತೋ ಜರಾಮಹೇ ।

ಉತ ತ್ವಮಸ್ಮಯುರ್ವಸೋ ॥ ೭ ॥

ಪದಪಾಠಃ

ವಯಂ । ಇಂದ್ರ । ತ್ವಾಽಯವಃ । ಹವಿಷ್ಮಂತಃ । ಜರಾಮಹೇ ।

ಉತ । ತ್ವಂ । ಅಸ್ಮಽಯುಃ । ವಸೋ ಇತಿ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಾಯವೋ ಯಜ್ಞಾರ್ಥಂ ತ್ವಾಮಾತ್ಮನ ಇಚ್ಛಂತಸ್ತ್ವತ್ಕಾಮಾಃ ಸಂತೋ ಹವಿಷ್ಮಂತಃ ಸಂಭೃತಹವಿಷ್ಕಾ ವಯಂ ಜರಾಮಹೇ । ತ್ವಾಂ ಸ್ತುಮಃ । ಹೇ ವಸೋ ಸರ್ವಸ್ಯ ವಾಸಕ ಇಂದ್ರ ಉತ ತ್ವಮಪ್ಯಸ್ಮಯುರಸ್ಮದೀಯಹವಿಃಸ್ವೀಕರಣಾರ್ಥಮಸ್ಮಾನಾತ್ಮನ ಇಚ್ಛನ್ ಭವ ॥ ತ್ವಾಯವಃ । ತ್ವಾಮಿಚ್ಛಂತೀತ್ಯರ್ಥೇ ಸುಪಃ ಆತ್ಮನಃ ಕ್ಯಚ್ । ಪ್ರತ್ಯಯೋತ್ತರಪದಯೋಃಶ್ಚೇತಿ ಮಪರ್ಯಂತಸ್ಯ ತ್ವಾದೇಶಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ತ್ವದ್ಯ್ವ ಇತಿ ಪ್ರಾಪ್ತೌ ಯುಷ್ಮದಸ್ಮದೋರನಾದೇಶ ಇತ್ಯವಿಭಕ್ತಾವಪಿ ಹಲಾದೌ ವ್ಯತ್ಯಯೇನಾತ್ವಂ । ಪ್ರತ್ಯಯಸ್ವರಃ । ಹವಿಷ್ಮಂತಃ । ತಸೌ ಮತ್ವರ್ಥ ಇತಿ ಭಸಂಜ್ಞಾಯಾಂ ಸಕಾರಸ್ಯ ರುತ್ವಾಭಾವಃ । ಸ್ವರವಿಧೌ ವ್ಯಂಜನಮವಿದ್ಯಮಾನವದಿತಿ ಪರಿಭಾಷಾನಾಶ್ರಯಣಾನ್ಮತುಪ ಉದಾತ್ತತಾಭಾವಃ । ಇಸಿಪ್ರತ್ಯಯಸ್ವರಃ । ಜರಾಮಹೇ । ಜರತಿಃ ಸ್ತುತಿಕರ್ಮೇತಿ ಯಾಸ್ಕಃ । ಅಸ್ಮಯುಃ । ಅಸ್ಮಾನಿಚ್ಛತೀತ್ಯರ್ಥೇ ಸುಪಃ ಕ್ಯಚ್ । ತಸ್ಮಾದುಪ್ರತ್ಯಯಃ । ಪೂರ್ವಪದಾಂತಲೋಪಶ್ಛಾಂದಸಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । **ತ್ವಾಯವಃ**—ಶ್ರದ್ಧೆಯಿಂದ ನಿನ್ನ ಅನುಗ್ರಹವನ್ನು ಇಚ್ಛಿಸುವವರೂ । ಹವಿಷ್ಮಂತಃ—ಹವಿಸ್ಸನ್ನು ಹೊಂದಿರುವವರೂ ಆದ । **ವಯಂ**—ನಾವು । **ಜರಾಮಹೇ**—ನಿನ್ನನ್ನು ಸ್ತುತಿಸುತ್ತೇವೆ । **ವಸೋ**—ಎಲ್ಲರಿಗೂ ವಸತಿದಾಯಕನಾದ ಇಂದ್ರನೇ । **ಉತ ತ್ವಂ**—ನೀನೂ ಕೂಡ । **ಅಸ್ಮಯುಃ**—ನಮ್ಮ ಹವಿಸ್ಸನ್ನು ಸ್ವೀಕರಿಸಲು ಇಚ್ಛೆಯುಳ್ಳವನಾಗು ।

ಭಾವಾರ್ಥ

ಎಲೈ ಇಂದ್ರನೇ, ಶ್ರದ್ಧೆಯಿಂದ ನಿನ್ನ ಅನುಗ್ರಹವನ್ನು ಇಚ್ಛಿಸುವವರೂ, ಹವಿಸ್ಸನ್ನು ಹೊಂದಿರುವವರೂ ಆದ ನಾವು ನಿನ್ನನ್ನು ಸ್ತುತಿಸುತ್ತೇವೆ. ಎಲ್ಲರಿಗೂ ವಸತಿದಾಯಕನಾದ ಇಂದ್ರನೇ, ನೀನೂ ಕೂಡ! ನಮ್ಮ ಹವಿಸ್ಸನ್ನು ಸ್ವೀಕರಿಸಲು ಇಚ್ಛೆಯುಳ್ಳವನಾಗು.



CC-0. Jangamwadi Math Collection. Digitized by eGangotri

English Translation

Devoted, Indra, to you, and offering oblations, we glorify you, giver of dwellings: be favourably disposed to us.

ವಿಶೇಷವಿಷಯಗಳು

ಈ ಸುಕ್ತಿನ ಅರ್ಥವು ಸುಲಭವಾಗಿರುವುದು. ಕ್ಲಿಷ್ಟಶಬ್ದಗಳಾಗಲಿ ಅರ್ಥದಲ್ಲಿ ತೊಡಕಾಗಲಿ ಯಾವುದೂ ಇರುವುದಿಲ್ಲ. ಎಲೈ ಇಂದ್ರನೇ, ನಿನ್ನ ಅನುಗ್ರಹವನ್ನು ಸಂಪಾದಿಸುವುದಕ್ಕಾಗಿ ನಾವು ನಿನಗೆ ಅರ್ಪಿಸಲು ಹವಿಸ್ಸನ್ನು ಸಿದ್ಧಪಡಿಸಿಕೊಂಡು ನಿನ್ನನ್ನು ಸ್ತೋತ್ರಮಾಡುತ್ತಿದೇವೆ. ಸರ್ವರಿಗೂ ವಸತಿದಾಯಕನಾದ ನೀನು ನಮ್ಮ ಸಮೀಪಕ್ಕೆ ಬಂದು ಹವಿಸ್ಸನ್ನು ಸ್ವೀಕರಿಸು ಎಂದು ಮುಖ್ಯಾಭಿಪ್ರಾಯವು.



ಸಂಹಿತಾಪಾಠಃ

ಮಾರೇ ಅಸ್ಮದ್ವಿ ಮುಮುಚೋ ಹರಿಪ್ರಿಯಾರ್ವಾಙ್ ಯಾಹಿ ।
ಇಂದ್ರ ಸ್ವಧಾವೋ ಮತ್ಸ್ವೇಹ ॥ ೮ ॥

ಪದಪಾಠಃ

ಮಾ । ಆರೇ । ಅಸ್ಮತ್ । ವಿ । ಮುಮುಚಃ । ಹರಿಽಪ್ರಿಯ । ಅರ್ವಾಙ್ । ಯಾಹಿ ।
ಇಂದ್ರ । ಸ್ವಧಾಽವಃ । ಮತ್ಸ್ವ । ಇಹ ॥ ೮ ॥

ಸಾಯಣಭಾಷ್ಯಂ

ಹೇ ಹರಿಪ್ರಿಯ ಹರೀ ಅಶ್ವೌ ಪ್ರಿಯೌ ಯಸ್ಯ ತಾದೃಶ ಹೇ ಇಂದ್ರ ಅಸ್ಮದಸ್ಮತ್ತ ಆರೇ ದೂರೇ ರಥೇ ಯೋಜಿತಾವಶ್ವೌ ಮಾ ವಿ ಮುಮುಚಃ । ಮಾ ವಿಮೋಚಯ । ತಾಭ್ಯಾಮುಪೇತ ಏವಾರ್ವಾಙ್ ಅಸ್ಮದಾಭಿಮುಖ್ಯೇನ ಯಾಹಿ । ಆಗಚ್ಛ । ಹೇ ಸ್ವಧಾವಃ ಸೋಮಲಕ್ಷಣಾನ್ನವನ್ನಿಂದ್ರ ಇಹಾಸ್ಮಿನ್ದೇವಯಜನೇ ಮತ್ಸ್ವ । ಸೋಮಂ ಪೀತ್ವಾ ಹೃಷ್ಟೋ ಭವ ॥ ಅಸ್ಮತ್ । ಅಸ್ಮಚ್ಛಬ್ದಸ್ಯ ಪಂಚಮೀಬಹುವಚನಸ್ಯ ಪಂಚಮ್ಯಾ ಅತ್ । ಪಾ. ೭-೧-೩೧ । ಇತ್ಯದಾದೇಶಃ । ಮುಮುಚಃ । ಮುಚ್ಲೃ ಮೋಕ್ಷಣ ಇತ್ಯಸ್ಯ ಣ್ಯಂತಸ್ಯ ಛಾಂದಸೇ ಲುಙಿ ಚಙಿ ರೂಪಂ । ಅಭ್ಯಾಸಸ್ಯ ದೀರ್ಘಾಭಾವಶ್ಛಾಂದಸಃ । ನ ಮಾಙ್ಯೋಗ ಇತ್ಯಡಭಾವಃ । ನಿಘಾತಃ । ಹರಿಪ್ರಿಯ । ಆಮಂತ್ರಿತಸ್ಯ ಪಾದಾದಿತ್ವಾತ್ಷಾಷ್ಠಿಕಮಾದ್ಯುದಾತ್ತತ್ವಂ । ಮತ್ಸ್ವ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ಹರಿಪ್ರಿಯ—ಅಶ್ವಪ್ರಿಯನಾದ ಇಂದ್ರನೇ । **ಅಸ್ಮತ್**—ನಮ್ಮ ಯಜ್ಞಪ್ರದೇಶದಿಂದ । **ಆರೇ**—ಬಹುದೂರದಲ್ಲಿಯೇ । **ಮಾ ವಿ ಮುಮುಚಃ**—(ರಥದಿಂದ) ಅಶ್ವಗಳನ್ನು ಕಳಚಿ ಬಿಟ್ಟುಬಿಡಬೇಡ । (ಅವುಗಳೊಡನೆ) **ಅರ್ವಾಙ್**—ನಮಗೆ ಅಭಿಮುಖನಾಗಿ । **ಯಾಹಿ**—ದಯಮಾಡು । **ಸ್ವಧಾವಃ**—ಸೋಮರೂಪವಾದ ಅನ್ನಯುಕ್ತವಾದ । **ಇಂದ್ರ**—ಇಂದ್ರನೇ । **ಇಹ**—ಈ ಯಜ್ಞಪ್ರದೇಶದಲ್ಲಿ । **ಮತ್ಸ್ವ**—ಸೋಮಪಾನದಿಂದ ತೃಪ್ತನಾಗು ।

ಭಾವಾರ್ಥ

ಅಶ್ವಪ್ರಿಯನಾದ ಎಲೈ ಇಂದ್ರನೇ, ನಮ್ಮ ಯಜ್ಞಪ್ರದೇಶದಿಂದ ಬಹುದೂರದಲ್ಲಿಯೇ ನಿನ್ನ ಅಶ್ವಗಳನ್ನು ರಥದಿಂದ ಕಳಚಿ ಬಿಟ್ಟುಬಿಡಬೇಡ. ಅವುಗಳೊಡನೆ ನಮ್ಮ ಅಭಿಮುಖನಾಗಿ ದಯಮಾಡು. ಸೋಮರೂಪವಾದ ಅನ್ನಯುಕ್ತನಾದ ಇಂದ್ರನೇ, ಈ ಯಜ್ಞಪ್ರದೇಶದಲ್ಲಿ ಸೋಮಪಾನದಿಂದ ತೃಪ್ತನಾಗು.

English Translation

Lover of horses, Indra, loosen not your steeds while far from us, but come (with them) to our presence : enjoyer of the offering, be exhilarated at this sacrifice.

ವಿಶೇಷವಿಷಯಗಳು

**ಹರಿಪ್ರಿಯ**—ಹರೀ ಎಂದರೆ ಇಂದ್ರನ ಎರಡು ಕುದುರೆಗಳು. ಅವುಗಳಲ್ಲಿ ಇಂದ್ರನಿಗೆ ಪ್ರೀತಿ ಇರುವುದರಿಂದ ಇಲ್ಲಿ ಹರಿಪ್ರಿಯ ಎಂಬ ಶಬ್ದದಿಂದ ಇಂದ್ರನನ್ನು ಸಂಬೋಧಿಸಲಾಗಿದೆ.

**ಅಸ್ಮತ್ ಮಾ ಆರೇ ವಿ ಮುಮುಚಃ**—ಎಲೈ ಇಂದ್ರನೇ, ನಮಗೆ ದೂರಪ್ರದೇಶದಲ್ಲಿಯೇ ನಿನ್ನ ಕುದುರೆಗಳನ್ನು ರಥದಿಂದ ಬಿಚ್ಚಬೇಡ. ಎಂದರೆ ನಮ್ಮ ಸಮೀಪಕ್ಕೆ ಬರುವವರೆಗೂ ರಥಕ್ಕೆ ನಿನ್ನ ಕುದುರೆಗಳನ್ನು ಹೂಡಿರು. ರಥದಲ್ಲಿ ಕುಳಿತಿರುವ ನೀನು ನಮ್ಮ ಸಮೀಪಕ್ಕೆ ಬಂದನಂತರ ಕುದುರೆಗಳನ್ನು ಬಿಚ್ಚು. ಅಲ್ಲಿಯವರೆಗೂ ಮಧ್ಯಮಾರ್ಗದಲ್ಲಿ ಕುದುರೆಗಳನ್ನು ಬಿಚ್ಚಿ ಪ್ರಯಾಣವು ನಿಲ್ಲುವಂತೆ ಮಾಡಬೇಡ ಎಂದು ಇಂದ್ರನನ್ನು ಪ್ರಾರ್ಥಿಸಿದೆ.

---

ಸಂಹಿತಾಪಾಠಃ

ಅರ್ವಾಞ್ಚಂ ತ್ವಾ ಸುಖೇ ರಥೇ ವಹತಾಮಿಂದ್ರ ಕೇಶಿನಾ ।
ಘೃತಸ್ನೂ ಬರ್ಹಿರಾಸದೇ ॥ ೯ ॥

ಪದಪಾಠಃ

ಅರ್ವಾಞ್ಚಂ । ತ್ವಾ । ಸುಽಖೇ । ರಥೇ । ವಹತಾಂ । ಇಂದ್ರ । ಕೇಶಿನಾ ।
ಘೃತಸ್ನೂ ಇತಿ ಘೃತಽಸ್ನೂ । ಬರ್ಹಿಃ । ಆಽಸದೇ ॥ ೯ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

**ಹೇ ಇಂದ್ರ ಘೃತಸ್ನೂ ಶ್ರಮಜನಿತಜಲಪ್ರಸ್ರವಣಯುಕ್ತೌ ಕೇಶಿನಾ ಕೇಶಿನೌ ಸ್ಕಂಧಪ್ರದೇಶೇ ಲಂಬಮಾನಕೇಶಯುಕ್ತೌ ಹರೀ ಆಸದ ಆಸದನೀಯಂ ಬರ್ಹಿರಭಿಲಕ್ಷ್ಯ ಸುಖೇ ಸುಖಕರೇ ರಥೇಽರ್ವಾಂಚ ಮಸ್ಮದಭಿಮುಖಂ ತ್ವಾ ತ್ವಾಂ ವಹತಾಂ ॥ ಅರ್ವಾಂಚಂ। ಅಂಚತೇಃ ಕ್ವಿನ್ನ್ಯಗಿದಚಾಮಿತಿ ನುಮ್ । ವಹತಾಂ । ವಹೇರ್ಲೋಟಿ ರೂಪಂ । ತಸೋಃ ಲಸಾರ್ವಧಾತುಕಸ್ವರೇ ಕೃತೇ ಧಾತುಸ್ವರಃ । ಆಸದೇ । ಸದೇಃ ಕೃತ್ಯಾರ್ಥೇ ಕೇನ್ಪ್ರತ್ಯಯಃ । ನಿತ್ಸ್ವರಃ । ಕೃದುತ್ತರಪದಪ್ರಕೃತಿಸ್ವರಃ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಘೃತಸ್ನೂ**—ಆಜ್ಯದಂತೆ ಪ್ರಕಾಶಮಾನವಾದ ದೇಹವುಳ್ಳವೂ । (ಅಥವಾ ಬೆವರಿನಿಂದ ಕೂಡಿದವೂ) **ಕೇಶಿನಾ** ಕತ್ತಿನ ಮೇಲೆ ಆಕರ್ಷಕವಾದ ಕೂದಲುಳ್ಳವೂ ಆದ ನಿನ್ನ ಅಶ್ವಗಳು । **ಆಸದೇ**—ಕುಳಿತುಕೊಳ್ಳಲು ಯೋಗ್ಯವಾದ । **ಬರ್ಹಿಃ**—ದರ್ಭಾಸನವನ್ನುದ್ದೇಶಿಸಿ । **ಸುಖೇ**—ಸುಖಕರವಾದ । **ರಥೇ**—ರಥದಲ್ಲಿ । **ಅರ್ವಾಂಚಂ**—ನಮಗೆ ಅಭಿಮುಖವಾಗಿ । **ತ್ವಾ**—ನಿನ್ನನ್ನು । **ವಹತಾಂ**—ಕರೆತರಲಿ ।

ಭಾವಾರ್ಥ

ಎಲೈ ಇಂದ್ರನೇ, ಆಜ್ಯದಂತೆ ಪ್ರಕಾಶಮಾನವಾದ ದೇಹವುಳ್ಳವೂ (ಅಥವಾ ಬೆವರಿನಿಂದ ಕೂಡಿದವೂ) ಕತ್ತಿನ ಮೇಲೆ ಆಕರ್ಷಕವಾದ ಕೂದಲುಳ್ಳವೂ ಆದ ನಿನ್ನ ಅಶ್ವಗಳು ಕುಳಿತುಕೊಳ್ಳಲು ಯೋಗ್ಯವಾದ ದರ್ಭಾಸನವನ್ನುದ್ದೇಶಿಸಿ ಸುಖಕರವಾದ ರಥದಲ್ಲಿ ನಮಗೆ ಅಭಿಮುಖವಾಗಿ ನಿನ್ನನ್ನು ಕರೆತರಲಿ.

English Translation

May your long-maned and sleek-coated steeds bring you down in your easy chariot to sit upon the sacred grass.

ವಿಶೇಷವಿಷಯಗಳು

**ಘೃತಸ್ನೂ-ಶ್ರಮಜನಿತಜಲಪ್ರಸ್ರವಣಯುಕ್ತೌ** । ಘೃತಶಬ್ದವು ಉದಕನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೧-೧೨) ಘೃತವೆಂದರೆ ಜಲವು, ಶ್ರಮಜಲ ಅಥವಾ ಬೆವರು. ಕುದುರೆಗಳು ವೇಗವಾಗಿ ಬಹಳದೂರ ಓಡುವುದರಿಂದ ಅವುಗಳ ಶರೀರಗಳು ಬೆವರಿನಿಂದ ನೆನೆದು ಹೋಗಿರುವವು. ಅದರಂತೆ ಇಲ್ಲಿ ಇಂದ್ರನ ಕುದುರೆಗಳು ಬಹುದೂರದಿಂದ ಇಂದ್ರನನ್ನು ನಮ್ಮ ಯಜ್ಞಭೂಮಿಗೆ ಕರತಂದಿರುವುದರಿಂದ ಅವುಗಳ ಶರೀರವು ಬೆವರಿನಿಂದ ತೊಯ್ದುಹೋಗಿರುವುದು. ಆ ಸ್ಥಿತಿಯನ್ನೇ ಇಲ್ಲಿ ಘೃತಸ್ನೂ ಎಂಬ ಶಬ್ದದಿಂದ ವರ್ಣಿಸಿದೆ.

**ಕೇಶಿನಾ-ಕೇಶಿನೌ । ಸ್ಕಂಧಪ್ರದೇಶೇ ಲಂಬಮಾನಕೇಶಯುಕ್ತೌ ಹರೀ** । ಕುದುರೆಗಳ ಕತ್ತಿನಮೇಲೆ ಉದ್ದವಾದ ಕೂದಲುಗಳಿರುವುದು ಸಹಜವಷ್ಟೆ. ಆದರಂತೆ ಇಲ್ಲಿಯೂ ಇಂದ್ರನ ಕುದುರೆಗಳಿಗೆ ಕತ್ತಿನ ಮೇಲೆ ಉದ್ದವಾದ ಕೂದಲುಗಳಿರುವುದನ್ನು ವರ್ಣಿಸಲಾಗಿದೆ.

---

CC-0. Jangamwadi Math Collection. Digitized by eGangotri

## ನಲವತ್ತೆರಡನೆಯ ಸೂಕ್ತವು.

ಉಪ ನಃ ಸುತಮಿತಿ ನವರ್ಚಂ ಚತುರ್ಥಂ ಸೂಕ್ತಂ ವೈಶ್ವಾಮಿತ್ರಂ ಗಾಯತ್ರಮೈಂದ್ರಂ । **ಉಪ ನ** ಇತ್ಯನುಕ್ರಮಣಿಕಾ । ಪೂರ್ವಸೂಕ್ತೇನ ಸಹೋಕ್ತೋ ವಿನಿಯೋಗಃ ॥

ಅನುವಾದವು—**ಉಪ ನಃ ಸುತಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು, ಇಂದ್ರನು ದೇವತೆಯು, ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಉಪ ನಃ** ಎಂದು ಮೊದಲಾಗಿ ಹೇಳಿರುವುದು. ಇದರ ವಿನಿಯೋಗವನ್ನು ಹಿಂದಿನ ಸೂಕ್ತದ ಪ್ರಾರಂಭದಲ್ಲಿಯೇ ಹೇಳಿದೆ.

॥ ಓಂ ॥

### ಸೂಕ್ತ—೪೨

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೨ ॥
ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೫, ೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೯ ॥
॥ ಋಷಿಃ—ವಿಶ್ವಾಮಿತ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ—ಗಾಯತ್ರೀ ॥

ಸಂಹಿತಾಪಾಠಃ

ಉಪ ನಃ ಸುತಮಾ ಗಹಿ ಸೋಮಮಿಂದ್ರ ಗವಾಶಿರಂ ।
ಹರಿಭ್ಯಾಂ ಯಸ್ತೇ ಅಸ್ಮಯುಃ ॥ ೧ ॥

ಪದಪಾಠಃ

ಉಪ । ನಃ । ಸುತಂ । ಆ । ಗಹಿ । ಸೋಮಂ । ಇಂದ್ರ । ಗೋಽಆಶಿರಂ ।
ಹರಿಽಭ್ಯಾಂ । ಯಃ । ತೇ । ಅಸ್ಮಽಯುಃ ॥ ೧ ॥

ಸಾಯಣಭಾಷ್ಯಂ

**ಹೇ ಇಂದ್ರ ನೋಽಸ್ಮದೀಯಂ ಸುತಮಭಿಷುತಂ ಗವಾಶಿರಂ ಪಯಸಾ ಮಿಶ್ರಿತಂ ಸೋಮಂ ಪ್ರತಿ ಉಪಾ ಗಹಿ । ಸಮೀಪ ಆಗಚ್ಛ । ಯತೋ ಹರಿಭ್ಯಾಮಶ್ವಾಭ್ಯಾಂ ಯುಕ್ತಸ್ತವ ರಥೋಽಸ್ಮಯುರಸ್ಮಾ-**

CC-0. Jangamwadi Math Collection. Digitized by eGangotri

**ಸ್ಕಾಮಯಮಾನೋ ವರ್ತತೇ ॥ ಗವಾಶಿರಂ । ಆಙ್ಪೂರ್ವಸ್ಯ ಶ್ರೀಣಾತೇಃ ಕ್ವಿಪ್ಯಪಸ್ಪೃಧೇಥಾಮಾನೃಚುರಿತ್ಯಾದಿನಾಶಿರಿತ್ಯಾದೇಶಃ । ಬಹುವ್ರೀಹೌ ಪೂರ್ವಪದಸ್ವರಃ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ನಃ**—ನಮ್ಮಿಂದ । **ಸುತಂ**—ಹಿಂಡಲ್ಪಟ್ಟದೂ । **ಗವಾಶಿರಂ**—ಹಾಲಿನಿಂದ ಮಿಶ್ರಿತವಾದುದೂ ಆದ । **ಸೋಮಂ**—ಸೋಮರಸವನ್ನುದ್ದೇಶಿಸಿ । **ಉಪ ಆ ಗಹಿ**—ಸಮೀಪಕ್ಕೆ ದಯಮಾಡು । **ಹರಿಭ್ಯಾಂ**—ಅಶ್ವಗಳೊಡನೆ ಕೂಡಿದ । **ತೇ**—ನಿನ್ನ । **ಯಃ**—ಯಾವ ರಥವುಂಟೋ ಅದು । **ಅಸ್ಮಯುಃ**—ನಮ್ಮ ವಿಷಯದಲ್ಲಿ ಅನುಗ್ರಹಾತ್ಮಕವಾಗಿದೆ ।

ಭಾವಾರ್ಥ

ಎಲೈ ಇಂದ್ರನೇ, ನಮ್ಮಿಂದ ಹಿಂಡಲ್ಪಟ್ಟದೂ, ಹಾಲಿನಿಂದ ಮಿಶ್ರಿತವಾದುದೂ ಆದ ಸೋಮರಸವನ್ನುದ್ದೇಶಿಸಿ ಸಮೀಪಕ್ಕೆ ದಯಮಾಡು. ಅಶ್ವಗಳೊಡನೆ ಕೂಡಿದ ನಿನ್ನ ರಥವು ನಮ್ಮ ವಿಷಯದಲ್ಲಿ ಅನುಗ್ರಹಾತ್ಮಕವಾಗಿದೆ.

English Translation

Come, Indra, to this our effused Soma juice mixed with milk and curds, with your horses (yoked to your car), which is favourably disposed to us.

ವಿಶೇಷವಿಷಯಗಳು

**ಸುತಂ ಆ ಗಹಿ**—ನಾವು ಸಿದ್ಧಪಡಿಸಿರುವ ಸೋಮರಸವನ್ನುದ್ದೇಶಿಸಿ ಎಂದರೆ ಸೋಮಪಾನಾರ್ಥವಾಗಿ ನಮ್ಮ ಸಮೀಪಕ್ಕೆ ಬಾ ಎಂದಭಿಪ್ರಾಯವು.

**ಗವಾಶಿರಂ—ಪಯಸಾ ಮಿಶ್ರಿತಂ ಸೋಮಂ** । ರುಚಿಕರವಾಗುವುದಕ್ಕಾಗಿ ಸೋಮರಸಕ್ಕೆ ಹಾಲನ್ನೂ, ಮೊಸರನ್ನೂ, ಗೋಧಿಯ ಹಿಟ್ಟನ್ನೂ ಬೆರೆಸುವುದು ರೂಢಿಯು. ಹಾಲನ್ನು ಬೆರೆಸಿದ ಸೋಮರಸಕ್ಕೆ ಗವಾಶಿರವೆಂದೂ, ಮೊಸರನ್ನು ಬೆರಸಿದ ಸೋಮರಸಕ್ಕೆ ದಧ್ಯಾಶಿರವೆಂದೂ, ಹಿಟ್ಟನ್ನು ಬೆರೆಸಿದ ಸೋಮರಸಕ್ಕೆ ಯವಾಶಿರವೆಂದೂ ಹೆಸರು. ಈ ಆಶಿರದ್ರವ್ಯಗಳ ವಿಷಯವಾಗಿ ನಾವು ಋ. ಸಂ. ಭಾಗ ೨, ಪೇಜು 172 ರಲ್ಲಿ ಬರೆದಿರುವುದನ್ನು ನೋಡಿ.

ಸಂಹಿತಾಪಾಠಃ

ತಮಿಂದ್ರ ಮದಮಾ ಗಹಿ ಬರ್ಹಿಃಷ್ಠಾಂ ಗ್ರಾವಭಿಃ ಸುತಂ ।
ಕುವಿನ್ನ್ವಸ್ಯ ತೃಪ್ಣವಃ ॥ ೨ ॥

ಪದಪಾಠಃ

ತಂ । ಇಂದ್ರ । ಮದಂ । ಆ । ಗಹಿ । ಬರ್ಹಿಃऽಸ್ಥಾಂ । ಗ್ರಾವऽಭಿಃ । ಸುತಂ ।
ಕುವಿತ್ । ನು । ಅಸ್ಯ । ತೃಪ್ಣವಃ ॥ ೨ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಇಂದ್ರ ಗ್ರಾವಭಿಃ ಸುತಮಭಿಷುತಂ ಬರ್ಹಿಃಷ್ಠಾಂ ಬರ್ಹಿಷಿ ಸ್ಥಿತಂ ಮದಂ । ಮದ್ಯತ್ಯನೇನೇತಿ ಮದಃ ಸೋಮಃ । ತಮಿಮಂ ಸೋಮಮಾ ಗಹಿ । ಆಗಚ್ಛ । ಕುವಿತ್ಪ್ರಭೂತಂ ಯಥಾ ಭವತಿ ತಥಾಸ್ಯ ಸೋಮಸ್ಯ ಪಾನೇ ನು ಕ್ಷಿಪ್ರಂ ತೃಪ್ಣವಃ । ತೃಪ್ತೋ ಭವ ॥ ಮದಂ । ಮದೀ ಹರ್ಷೇ । ಮದೋಽನುಪಸರ್ಗ ಇತ್ಯಪ್ಪ್ರತ್ಯಯಃ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಬರ್ಹಿಃಷ್ಠಾಂ । ಷ್ಠಾ ಗತಿನಿವೃತ್ತೌ । ಕ್ವಿಪ್ । ಸಂಹಿತಾಯಾಂ ಪೂರ್ವಪದಸಕಾರಸ್ಯಾದೇಶಪ್ರತ್ಯಯಯೋರಿತಿ ಷತ್ವಂ । ಷ್ಟುತ್ವಂ । ಕೃದುತ್ತರಪದಸ್ವರಃ । ತೃಪ್ಣವಃ । ತೃಪ ಪ್ರೀಣನ ಇತ್ಯಸ್ಯ ಲೇಟ್ಯಡಾಗಮಃ । ಕುವಿದ್ಯೋಗಾದನಿಘಾತಃ । ಕ್ಷುಭ್ನಾದಿಷು ನೃನಮನ ತೃಪ್ನೋತೀತಿ ಪಠಿತಂ । ತಥಾಪಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ಣತ್ವಪ್ರತಿಷೇಧೋ ನ ಭವತಿ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಗ್ರಾವಭಿಃ—ಹಿಂಡುವ ಕಲ್ಲುಗಳಿಂದ । ಸುತಂ—ಹಿಂಡಲ್ಪಟ್ಟುದೂ । ಬರ್ಹಿಃಷ್ಠಾಂ—ದರ್ಭಾಸನಗಳ ಮೇಲೆ ಇಟ್ಟಿರುವುದೂ । ಮದಂ—ಹರ್ಷಕಾರಕವಾದುದೂ ಆದ । ತಂ—ಈ ಸೋಮರಸದ ಅಭಿಮುಖವಾಗಿ । ಆ ಗಹಿ—ದಯಮಾಡು । ಕುವಿತ್—ಪ್ರಭೂತವಾಗಿರುವ । ಅಸ್ಯ—ಈ ರಸದ ಪಾನದಿಂದ । ನು—ಶೀಘ್ರವಾಗಿ । ತೃಪ್ಣವಃ—ತೃಪ್ತಿಯನ್ನು ಹೊಂದು ।

ಭಾವಾರ್ಥ

ಎಲೈ ಇಂದ್ರನೇ, ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟುದೂ, ದರ್ಭಾಸನಗಳ ಮೇಲೆ ಇಟ್ಟಿರುವುದೂ ಹರ್ಷಕಾರಕವಾದುದೂ ಆದ ಈ ಸೋಮರಸದ ಅಭಿಮುಖವಾಗಿ ದಯಮಾಡು. ಪ್ರಭೂತವಾಗಿರುವ ಈ ರಸದ ಪಾನದಿಂದ ಶೀಘ್ರವಾಗಿ ತೃಪ್ತಿಯನ್ನುಹೊಂದು.

English Translation

Come, Indra, to the exhilarating (Soma) expressed by the stones, and placed upon the sacred grass: drink of it to satiety, for there is plenty.

ವಿಶೇಷವಿಷಯಗಳು

ಬರ್ಹಿಃಷ್ಠಾಂ ಗ್ರಾವಭಿಃ ಸುತಂ—ಕಲ್ಲುಗಳಿಂದ ಜಜ್ಜಿ ಹಿಂಡಿ ಶೋಧಿಸಿದ ಸೋಮರಸವನ್ನು ಬರ್ಹಿಸ್ಸೆಂಬ ಹರಡಿರುವ ದರ್ಭೆಯಮೇಲೆ ಇಟ್ಟಿರುವುದು. ಅದರ ಪಾನಾರ್ಥವಾಗಿ ಬರಬೇಕೆಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

ನು—ನು ಎಂಬ ನಿಪಾತಕ್ಕೆ ಅನೇಕಾರ್ಥಗಳಿದ್ದರೂ ಇಲ್ಲಿ ಕ್ಷಿಪ್ರಂ—ಬೇಗನೆ ಎಂಬರ್ಥವನ್ನು ಭಾಷ್ಯಕಾರರು ಸ್ವೀಕರಿಸಿ ಅರ್ಥ ವಿವರಣೆಮಾಡಿದಾರೆ.

ಸಂಹಿತಾಪಾಠಃ

ಇಂದ್ರಮಿತ್ಥಾ ಗಿರೋ ಮಮಾಚ್ಛಾಗುರಿಷಿತಾ ಇತಃ ।
ಆವೃತೇ ಸೋಮಪೀತಯೇ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಇಂದ್ರಂ । ಇತ್ಥಾ । ಗಿರಃ । ಮಮ । ಅಚ್ಛ । ಅಗುಃ । ಇಷಿತಾಃ । ಇತಃ ।

ಆಽವೃತೇ । ಸೋಮಽಪೀತಯೇ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ಇಷಿತಾಸ್ತ್ವದರ್ಥಂ ಪ್ರೇರಿತಾ ಇತ್ಥೇತ್ಥಮನೇನ ಪ್ರಕಾರೇಣೋಚ್ಯಮಾನಾ ಮಮ ಗಿರಃ ಸ್ತುತಿಲಕ್ಷಣಾ ವಾಚ ಇಂದ್ರಂ ತ್ವಾಮಿತೋಽಸ್ಮಾದ್ದೇವಯಜನದೇಶಾದಚ್ಛಾಗುಃ । ಆಭಿಮುಖ್ಯೇನ ಗಚ್ಛಂತು । ಕಿಮರ್ಥಂ । ಸೋಮಪೀತಯೇ ಸೋಮಪಾನಾರ್ಥಮಾವೃತೇ ತ್ವಾಮಾವರ್ತಯಿತುಂ ॥ ಇತ್ಥಾ । ಇದಂಶಬ್ದಾತ್ಥಾ ಹೇತೌ ಚ ಛಂದಸೀತಿ ವ್ಯತ್ಯಯೇನ ಥಾಪ್ರತ್ಯಯಃ । ಇದಮ ಏತೇತೌ ರಥೋರಿತೀದಿತ್ಯಾದೇಶಃ । ಪ್ರತ್ಯಯಸ್ವರಃ । ಅಚ್ಛ । ಅಚ್ಛ ಗತ್ಯರ್ಥವದೇಷ್ವಿತಿ ಗತಿಸಂಜ್ಞಾ । ಅಗುಃ । ಇಣ್ ಗತಾವಿತ್ಯಸ್ಯ ಲುಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ಇಷಿತಾಃ—ನಿನ್ನನ್ನುದ್ದೇಶಿಸಿ ಪ್ರೇರಿತವಾದವೂ । ಇತ್ಥಾ—ಈ ಪ್ರಕಾರ ವಾಗಿ ಪಠಿತವಾದವೂ ಆದ । ಮಮ—ನನ್ನ । ಗಿರಃ—ಸ್ತುತಿರೂಪವಾದ ವಾಕ್ಕುಗಳು । ಸೋಮಪೀತಯೇ—ಸೋಮಪಾನಾರ್ಥವಾಗಿ ।. ಆವೃತೇ—(ನಿನ್ನನ್ನು) ಇಲ್ಲಿಗೆ ಕರೆತರಲು । ಇಂದ್ರಂ—ಇಂದ್ರರೂಪಿಯಾದ ನಿನ್ನ । ಅಚ್ಛಾಗುಃ—ಅಭಿಮುಖವಾಗಿ ಹೊರಡಲಿ ।

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿ ಪ್ರೇರಿತವಾದವೂ, ಈ ವಿಧವಾಗಿ ಪಠಿತವಾದವೂ ಆದ ನನ್ನ ಸ್ತುತಿ ರೂಪವಾದ ವಾಕ್ಕುಗಳು ಸೋಮಪಾನಾರ್ಥವಾಗಿ ನಿನ್ನನ್ನು ಇಲ್ಲಿಗೆ ಕರೆತರಲು ಇಂದ್ರರೂಪಿಯಾದ ನಿನ್ನ ಅಭಿ ಮುಖವಾಗಿ ಹೊರಡಲಿ.

English Translation

May my praises, addressed from hence and in this manner, attain Indra, to bring him hither to drink the Soma juice.

ವಿಶೇಷವಿಷಯಗಳು

ಅಚ್ಛ—ಆಭಿಮುಖ್ಯೇನ । ಅಭಿಮುಖವಾಗಿ ; ಯಾಸ್ಕರು ಅಚ್ಛ ಎಂಬ ಶಬ್ದದ ನಿರ್ವಚನವನ್ನುಹೇಳುತ್ತಾ ಅಚ್ಛಾಭೇರಾಪ್ತುಮಿತಿ ಶಾಕಪೂಣಿಃ (ನಿ. ೫-೨೮) ಅಚ್ಛ ಎಂಬ ಶಬ್ದಕ್ಕೆ ಅಭಿಮುಖವಾಗಿ, ಎದುರಾಗಿ ಬರು ವುದು ಎಂಬರ್ಥವಿರುವುದೆಂದು ಶಾಕಪೂಣಿ ಎಂಬುವರ ಅಭಿಮತವೆಂದು ಹೇಳಿದ್ದಾರೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಂದ್ರಂ ಸೋಮಸ್ಯ ಪೀತಯೇ ಸ್ತೋಮೈರಿಹ ಹವಾಮಹೇ ।

ಉಕ್ಥೇಭಿಃ ಕುವಿದಾಗಮತ್ ॥ ೪ ॥

ಪದಪಾಠಃ

ಇಂದ್ರಂ । ಸೋಮಸ್ಯ । ಪೀತಯೇ । ಸ್ತೋಮೈಃ । ಇಹ । ಹವಾಮಹೇ ।

ಉಕ್ಥೇಭಿಃ । ಕುವಿತ್ । ಆऽಗಮತ್ ॥ ೪ ॥

ಸಾಯಣಭಾಷ್ಯಂ

ಸ್ತೋಮೈಸ್ತ್ರಿವೃತ್ಪಂಚದಶಾದಿಸ್ತೋಮಸಾಧ್ಯೈಃ ಸ್ತೋತ್ರೈರುಕ್ಥೇಭಿರುಕ್ಥೈಃ ಶಸ್ತ್ರೈಶ್ಚೇಹ ಕರ್ಮಣಿ ಸೋಮಸ್ಯ ಪೀತಯೇ ಸೋಮಪಾನಾರ್ಥಮಿಂದ್ರಂ ಹವಾಮಹೇ । ವಯಮಾಹ್ವಯಾಮಃ । ಕವಿದ್ಬಹುವಾರಮಾಹೂತಃ ಸ ಇಂದ್ರ ಆಗಮತ್ । ಯಜ್ಞಂ ಪ್ರತ್ಯಾಗಚ್ಛತು ॥ ಅಗಮತ್ । ಗಮೇರ್ಲೇ-ಟ್ಯಡಾಗಮಃ । ಆಗಮಾ ಅನುದಾತ್ತಾ ಇತ್ಯಟೋऽನುದಾತ್ತತ್ವಾದ್ಧಾತುಸ್ವರಃ । ತಿಙಃ ಚೋದಾತ್ತವತೀತಿ ಗತೇರ್ನಿಘಾತಃ । ಕುವಿದ್ಯೋಗಾದನಿಘಾತಃ ॥

ಪ್ರತಿಪದಾರ್ಥ

ಸ್ತೋಮೈಃ—ಸ್ತೋಮರೂಪವಾದ ಸ್ತುತಿಗಳಿಂದಲೂ । ಉಕ್ಥೇಭಿಃ—ಉಕ್ಥರೂಪವಾದ ಶಸ್ತ್ರಗಳಿಂದಲೂ । ಇಹ—ಈ ಯಜ್ಞದಲ್ಲಿ । ಸೋಮಸ್ಯ—ಸೋಮರಸದ । ಪೀತಯೇ—ಪಾನಾರ್ಥವಾಗಿ । ಇಂದ್ರಂ—ಇಂದ್ರನನ್ನು । ಹವಾಮಹೇ—ಕರೆಯುತ್ತೇವೆ । ಕುವಿತ್—ಅನೇಕಸಲ ಕರೆಯಲ್ಪಟ್ಟ ಇಂದ್ರನು । ಆಗಮತ್—ಈ ಯಜ್ಞಪ್ರದೇಶಕ್ಕೆ ದಯಮಾಡಲಿ ।

ಭಾವಾರ್ಥ

ಸ್ತೋಮರೂಪವಾದ ಸ್ತುತಿಗಳಿಂದಲೂ, ಉಕ್ಥರೂಪವಾದ ಶಸ್ತ್ರಮಂತ್ರಗಳಿಂದಲೂ ಸಹ ಈ ಯಜ್ಞದಲ್ಲಿ ಸೋಮರಸದ ಪಾನಾರ್ಥವಾಗಿ ಇಂದ್ರನನ್ನು ಕರೆಯುತ್ತೇವೆ. ಅನೇಕಸಲ ಕರೆಯಲ್ಪಟ್ಟ ಇಂದ್ರನು ಈ ಯಜ್ಞಪ್ರದೇಶಕ್ಕೆ ದಯಮಾಡಲಿ.

English Translation

We invoke Indra to this rite with prayers to drink the Soma juice; may he, repeatedly invoked, come hither.

ವಿಶೇಷವಿಷಯಗಳು

ಕುವಿತ್—ಕುವಿತ್ ಶಬ್ದವು ಉರು, ತುವಿ ಮೊದಲಾದ ಹನ್ನೆರಡು ಬಹುನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೧೩) ಇದಕ್ಕೆ ಅನೇಕಾವರ್ತಿ, ಬಹಳವಾಗಿ ಎಂದರ್ಥವು.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಂದ್ರ ಸೋಮಾಃ ಸುತಾ ಇಮೇ ತಾನ್ದಧಿಷ್ವ ಶತಕ್ರತೋ ।

ಜಠರೇ ವಾಜಿನೀವಸೋ ॥ ೫ ॥

ಪದಪಾಠಃ

ಇಂದ್ರ । ಸೋಮಾಃ । ಸುತಾಃ । ಇಮೇ । ತಾನ್ । ದಧಿಷ್ವ । ಶತಕ್ರತೋ ಇತಿ ಶತऽಕ್ರತೋ ।

ಜಠರೇ । ವಾಜಿನೀವಸೋ ಇತಿ ವಾಜಿನೀऽವಸೋ ॥ ೫ ॥

ಸಾಯಣಭಾಷ್ಯಂ

**ಹೇ ಶತಕ್ರತೋ ಇಂದ್ರ ಇಮೇ ಸೋಮಾಃ ಸುತಾಃ । ಗ್ರಾವಭಿಸ್ತ್ವದರ್ಥಮಭಿಷುತಾಃ । ಹೇ ವಾಜಿನೀವಸೋ ಅನ್ನಧನ । ಯದ್ವಾ । ವಾಜೋऽನ್ನಮಾಸು ಫಲತ್ವೇನಾಸ್ತೀತಿ ವಾಜಿನ್ಯಃ ಕ್ರಿಯಾಃ । ತಾಸಾಂ ವಾಸಕ ಹೇ ಇಂದ್ರ ತಾನ್ಸೋಮರಸಾನ್ ಜಠರೇ ದಧಿಷ್ವ । ಧಾರಯ ॥ ವಾಜಿನೀವಸೋ । ವಾಜಶಬ್ದಾನ್ಮತ್ವರ್ಥೇऽತ ಇನಿಠನಾವಿತೀನಿಪ್ರತ್ಯಯಃ । ಋನ್ನೇಭ್ಯೋ ಙೀಬಿತಿ ಙೀಪ್ । ತಾಸಾಂ ವಸೋ । ಸಂಬುದ್ಧೌ ಚೇತಿ ಗುಣಃ । ಆಮಂತ್ರಿತತ್ವಾದಾಷ್ಟಮಿಕಮನುದಾತ್ತತ್ವಂ ॥**

ಪ್ರತಿಪದಾರ್ಥ

**ಶತಕ್ರತೋ**—ಅನೇಕ ವೀರ್ಯಕರ್ಮಗಳ ಕರ್ತನಾದ । **ಇಂದ್ರ**—ಎಲೈ ಇಂದ್ರನೇ । **ಇಮೇ ಸೋಮಾಃ**—ಈ ಸೋಮರಸಗಳು । **ಸುತಾಃ**—ಹಿಂಡಲ್ಪಟ್ಟವೆ । **ವಾಜಿನೀವಸೋ**—ಅನ್ನರೂಪವಾದ ಧನವುಳ್ಳ ಎಲೈ ಇಂದ್ರನೇ । **ತಾನ್**—ಈ ಸೋಮರಸಗಳನ್ನು । **ಜಠರೇ**—ಜಠರದಲ್ಲಿ । **ದಧಿಷ್ವ**—ಧರಿಸು ।

ಭಾವಾರ್ಥ

ಅನೇಕ ವೀರ್ಯಕರ್ಮಗಳ ಕರ್ತನಾದ ಎಲೈ ಇಂದ್ರನೇ, ಈ ಸೋಮರಸಗಳು ಹಿಂಡಲ್ಪಟ್ಟುಸಿದ್ಧವಾಗಿವೆ. ಅನ್ನರೂಪವಾದ ಧನವುಳ್ಳ ಎಲೈ ಇಂದ್ರನೇ, ಈ ಸೋಮರಸಗಳನ್ನು ಜಠರದಲ್ಲಿ ಧರಿಸು.

English Translation

Indra, these Soma juices are poured out : take them, Shatakratu, into your stomach ; you who are rich in (abundant) food

ವಿಶೇಷವಿಷಯಗಳು

**ಶತಕ್ರತೋ**—ಶತ ಎಂದರೆ ನೂರಾರು, ಅನೇಕ, ಕ್ರತುವೆಂದರೆ ಕರ್ಮ. ಅನೇಕ ಸಾಹಸಕಾರ್ಯಗಳನ್ನು ಮಾಡಿರುವ ಎಲೈ ಇಂದ್ರನೇ, ಎಂದು ಈ ಶಬ್ದದ ಅರ್ಥವು.

CC-0. Jangamwadi Math Collection. Digitized by eGangotri

ವಾಜಿನೀವಸೋ—ಅನ್ನವೇ ಧನವಾಗಿ ಉಳ್ಳವನು ಎಂದರೆ ಬಹಳವಾದ ಅನ್ನವುಳ್ಳವನು. ಅಥವಾ ವಾಜವೆಂದರೆ ಅನ್ನವು, ವಾಜಿನೀ ಎಂದರೆ ಅನ್ನವನ್ನೇ ಫಲವಾಗಿವುಳ್ಳ ಯಜ್ಞಾದಿ ಕರ್ಮಗಳು. ಅಂತಹ ಕರ್ಮಗಳಲ್ಲಿ ನೆಲಸಿರುವವನಾದುದರಿಂದ ಎಂದರೆ ಅಂತಹ ಯಜ್ಞಾದಿಗಳಲ್ಲಿ ಸ್ತುತಿಸಲ್ಪಡುವವನಾದ್ದರಿಂದ ಇಂದ್ರನಿಗೆ ವಾಜಿನೀವಸು ಎಂಬ ಹೆಸರು ಎಂದು ಎರಡುವಿಧವಾದ ಅರ್ಥವನ್ನು ಭಾಷ್ಯಕಾರರು ವಿವರಿಸಿದ್ದಾರೆ.

---

ಸಂಹಿತಾಪಾಠಃ

ವಿದ್ಮಾ ಹಿ ತ್ವಾ ಧನಂಜಯಂ ವಾಜೇಷು ದಧೃಷಂ ಕವೇ ।

ಅಧಾ ತೇ ಸುಮ್ನಮೀಮಹೇ ॥ ೬ ॥

ಪದಪಾಠಃ

ವಿದ್ಮ । ಹಿ । ತ್ವಾ । ಧನಂऽಜಯಂ । ವಾಜೇಷು । ದಧೃಷಂ । ಕವೇ ।

ಅಥ । ತೇ । ಸುಮ್ನಂ । ಈಮಹೇ ॥ ೬ ॥

ಸಾಯಣಭಾಷ್ಯಂ

ಹೇ ಕವೇ ಕ್ರಾಂತದರ್ಶಿನ್ನಿಂದ್ರ ವಾಜೇಷು ಯುದ್ಧೇಷು ದಧೃಷಂ ಶತ್ರೂಣಾಮಭಿಭವಿತಾರಂ ಅತ ಏವ ಧನಂಜಯಂ । ಧನಂ ಜಯತೀತಿ ಧನಂಜಯಃ । ತಾದೃಶಂ ತ್ವಾ ತ್ವಾಂ ವಿದ್ಮ ಹಿ । ಜಾನೀಮಃ ಖಲು । ಅಥಾನಂತರಂ ತೇ ತವ ಸುಮ್ನಂ ಧನಮೀಮಹೇ । ಯಾಚಾಮಹೇ ॥ ವಿದ್ಮ । ವಿದೇರ್ಲಟಿ ವಿದೋ ಲಟೋ ವೇತಿ ಮಸೋ ಮಾದೇಶಃ । ಪಾದಾದಿತ್ವಾದನಿಘಾತಃ । ಧನಂಜಯಂ । ಜಿ ಜಯ ಇತ್ಯ-ಸ್ಮಾದ್ಧನ ಉಪಪದೇ ಸಂಜ್ಞಾಯಾಂ ಭೃತೃವೃಜಿಧಾರಿಸಹಿತಪಿದಮ ಇತಿ ಖಚ್ಪ್ರತ್ಯಯಃ । ಅರುರ್ದ್ವಿ-ಷದಜಂತಸ್ಯ ಮುಮಿತಿ ಪೂರ್ವಪದಸ್ಯ ಮುಮಾಗಮಃ । ಚಿತ್ತ್ವಾದಂತೋದಾತ್ತಃ । ದಧೃಷಂ । ಞಿಧೃಷಾ ಪ್ರಾಗಲ್ಭ್ಯೇ ಇತ್ಯಸ್ಯ ಯಙ್ಲುಕ್ಯಭ್ಯಾಸಸ್ಯ ರೀಗಭಾವಶ್ಛಾಂದಸಃ । ತದಂತಾತ್ಪಚಾದ್ಯಚಿ ಯಙೋಽಚಿ ಚೇತಿ ಯಙೋ ಲುಕ್ । ಲಘೂಪಧಗುಣೇ ಪ್ರಾಪ್ತೇ ನ ಧಾತುಲೋಪ ಇತಿ ತಸ್ಯ ಪ್ರತಿಷೇಧಃ । ಚಿತ್ತ್ವಾದಂತೋದಾತ್ತಃ ॥

ಪ್ರತಿಪದಾರ್ಥ

ಕವೇ—ಕ್ರಾಂತದರ್ಶಿಯಾದ ಇಂದ್ರನೇ । **ವಾಜೇಷು**—ಯುದ್ಧಗಳಲ್ಲಿ । **ತ್ವಾ**—ನಿನ್ನನ್ನು । **ದಧೃಷಂ**—ಶತ್ರುನಾಶಕನನ್ನಾಗಿಯೂ । **ಧನಂಜಯಂ**—ಶತ್ರುಧನಗಳನ್ನು ಸಂಗ್ರಹಿಸುವವನನ್ನಾಗಿಯೂ । **ವಿದ್ಮ ಹಿ**—ತಿಳಿದೇ ಇದ್ದೇವೆ । **ಅಥ**—ಆದುದರಿಂದಲೇ । **ತೇ**—ನಿನ್ನ (ನಿನ್ನಿಂದ) । **ಸುಮ್ನಂ**—ಧನವನ್ನು (ಸುಖವನ್ನು) । **ಈಮಹೇ**—ಪ್ರಾರ್ಥಿಸುತ್ತೇವೆ ।

CC-0. Jangamwadi Math Collection. Digitized by eGangotri

ಭಾವಾರ್ಥ

ಕ್ರಾಂತದರ್ಶಿಯಾದ ಇಂದ್ರನೇ, ಯುದ್ಧಗಳಲ್ಲಿ ನಿನ್ನನ್ನು ಶತ್ರುನಾಶಕನನ್ನಾಗಿಯೂ, ಶತ್ರುಧನಗಳನ್ನು ಸಂಗ್ರಹಿಸುವವನನ್ನಾಗಿಯೂ ತಿಳಿದೇ ಇದ್ದೇವೆ. ಆದುದರಿಂದಲೇ ನಿನ್ನ ಧನವನ್ನು ಪ್ರಾರ್ಥಿಸುತ್ತೇವೆ.

English Translation

Far-seeing Indra, we know you to be victorious and winner of wealth in battles: therefore we ask of you riches.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ವಿದ್ಮ ಮತ್ತು ಅಥ ಎಂಬ ಶಬ್ದಗಳ ಅಂತ್ಯಾಕ್ಷರಗಳು ಛಂದಸ್ಸಿನ ಅನುಕೂಲಕ್ಕಾಗಿ ಸಂಹಿತಾ ಪಾಠದಲ್ಲಿ ದೀರ್ಘವಾಗಿರುವವು.

**ವಾಜೇಷು ದಧೃಷಂ**—ವಾಜಃ ಶಬ್ದವು ಅನ್ನನಾಮಗಳಲ್ಲಿಯೂ (ನಿ. ೩-೯). ಸಂಗ್ರಾಮನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಇಲ್ಲಿ ಸಂಗ್ರಾಮ ಅಥವಾ ಯುದ್ಧವೆಂಬ ಅರ್ಥವನ್ನು ಸ್ವೀಕರಿಸಿ ಯುದ್ಧಗಳಲ್ಲಿ ಶತ್ರುಗಳನ್ನು ಪರಾಭವಗೊಳಿಸುವ ಎಂಬರ್ಥವನ್ನು ಭಾಷ್ಯಕಾರರು ವಿವರಿಸಿದಾರೆ.

**ಧನಂಜಯಂ**—ಯುದ್ಧಗಳಲ್ಲಿ ಶತ್ರುಗಳನ್ನು ಸೋಲಿಸಿ ಅವರ ಧನವನ್ನು ಗೆಲ್ಲುವ ಇಂದ್ರನನ್ನು ಎಂದರ್ಥವು.

**ಸುಮ್ನಂ**—ಸುಮ್ನಂ ಎಂಬ ಶಬ್ದವು ಸುಖನಾಮಗಳಲ್ಲಿ (ನಿ. ೩-೧೩) ಪಠಿತವಾಗಿರುವುದರಿಂದ ಸುಮ್ನಂ ಎಂದರೆ ಸುಖವನ್ನು ಎಂದರ್ಥವು.

ಸಂಹಿತಾಪಾಠಃ

ಇಮಮಿಂದ್ರ ಗವಾಶಿರಂ ಯವಾಶಿರಂ ಚ ನಃ ಪಿಬ ।
ಆಗತ್ಯಾ ವೃಷಭಿಃ ಸುತಂ ॥ ೭ ॥

ಪದಪಾಠಃ

ಇಮಂ । ಇಂದ್ರ । ಗೋಽಆಶಿರಂ । ಯವಽಆಶಿರಂ । ಚ । ನಃ । ಪಿಬ ।
ಆಽಗತ್ಯ । ವೃಷಽಭಿಃ । ಸುತಂ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ಗವಾಶಿರಂ ಗವ್ಯಮಿಶ್ರಣೋಪೇತಂ ಸೋಮಂ ತಥಾ ಯವಾಶಿರಂ ಯವಮಿಶ್ರಣೋಪೇತಂ ವೃಷಭಿರ್ಗ್ರಾವಭಿಃ ಸುತಮಭಿಷುತಂ ನೋಽಸ್ಮದೀಯಮಿಮಂ ಸೋಮಂ ದೇವಯಜನಮಾಗತ್ಯ ಪಿಬ ॥ ಗವಾಶಿರಂ ಯವಾಶಿರಮಿತ್ಯತ್ರ ಆಙ್ಪೂರ್ವಸ್ಯ ಶ್ರೀಣಾತೇಃ ಕ್ವಿಪ್ಯಪಸ್ಪೃಧೇಥಾ ಮಾನೃಚುರಿ-ತ್ಯಾದಿನಾಽಶಿರಿತ್ಯಾದೇಶಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಗವಾಶಿರಂ—ಗವ್ಯಮಿಶ್ರಿತವಾದುದೂ । ಯವಾಶಿರಂ—ಯವಧಾನ್ಯದಿಂದ ಮಿಶ್ರಿತವಾದುದೂ । ವೃಷಭಿಃ—ಹಿಂಡುವ ಕಲ್ಲುಗಳಿಂದ । ಸುತಂ—ಹಿಂಡಲ್ಪಟ್ಟುದೂ ಆದ । ನಃ—ನಮ್ಮ । ಇಮಂ—ಈ ಸೋಮಪಾನಕ್ಕಾಗಿ । ಆಗತ್ಯ—ಇಲ್ಲಿಗೆ ಬಂದು । ಪಿಬ—ಪಾನಮಾಡು । .

ಭಾವಾರ್ಥ

ಎಲೈ ಇಂದ್ರನೇ, ಗವ್ಯಮಿಶ್ರಿತವಾದುದೂ, ಯವಧಾನ್ಯದಿಂದ ಮಿಶ್ರಿತವಾದುದೂ ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟುದೂ ಆದ ನಮ್ಮ ಈ ಸೋಮಪಾನಕ್ಕಾಗಿ ಇಲ್ಲಿ ಬಂದು ಪಾನಮಾಡು.

English Translation

Having come (to our rite) drink, Indra, this our (libation), effused by the stones, and mixed with milk and curds and with barley.

ವಿಶೇಷವಿಷಯಗಳು

ವೃಷಭಿಃ ಸುತಂ—ಗ್ರಾವಭಿಃ ಅಭಿಷುತಂ । ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ತೆಗೆದ ಸೋಮರಸವನ್ನು ; ಗವಾಶಿರಂ ಮತ್ತು ಯವಾಶಿರಂ ಎಂಬ ಶಬ್ದಗಳ ಅರ್ಥವನ್ನು ನಾವು ಈ ಸೂಕ್ತದ ಮೊದಲನೆಯ ಋಕ್ಕಿನ ವಿಶೇಷವಿಷಯಗಳಲ್ಲಿಯೇ ವಿವರಿಸಿದ್ದೇವೆ.

---

ಸಂಹಿತಾಪಾಠಃ

ತುಭ್ಯೇದಿಂದ್ರ ಸ್ವ ಓಕ್ಯೇ ಸೋಮಂ ಚೋದಾಮಿ ಪೀತಯೇ ।
ಏಷ ರಾರಂತು ತೇ ಹೃದಿ ॥ ೮ ॥

ಪದಪಾಠಃ

ತುಭ್ಯ । ಇತ್ । ಇಂದ್ರ । ಸ್ವೇ । ಓಕ್ಯೇ । ಸೋಮಂ । ಚೋದಾಮಿ । ಪೀತಯೇ ।
ಏಷಃ । ರರಂತು । ತೇ । ಹೃದಿ ॥ ೮ ॥

ಸಾಯಣಭಾಷ್ಯಂ

ಹೇ ಇಂದ್ರ ತುಭ್ಯೇತ್ತುಭ್ಯಮೇವ ಪೀತಯೇ ಪಾನಾರ್ಥಂ ಸ್ವೇ ಸ್ವಕೀಯೇ ಓಕ್ಯೇ ಸ್ಥಾನೇ ಜಠರೇಽಭಿಷುತಮಿಮಂ ಸೋಮಂ ಚೋದಾಮಿ । ಪ್ರೇರಯಾಮಿ । ಏಷ ಪೀತಃ ಸೋಮಸ್ತೇ ತವ ಹೃದಿ ಹೃದಯೇ ರರಂತು । ಅತ್ಯರ್ಥಂ ರಮತಾಂ ॥ ತುಭ್ಯ । ಯುಷ್ಮಚ್ಛಬ್ದಸ್ಯ ಚತುರ್ಥ್ಯೇಕವಚನೇ ತುಭ್ಯಮಹ್ಯಾವಿತಿ ತುಭ್ಯಾದೇಶಃ । ಸುಪಾಂ ಸುಲುಗಿತಿ ಸುಪೋ ಲುಕ್ । ಜಯಿ ಚೇತ್ಯಾದ್ಯುದಾತ್ತಃ । ಓಕ್ಯೇ ।

CC-0. Jangamwadi Math Collection. Digitized by eGangotri

**ವಸ್ವಾದಿತ್ವಾತ್ಸ್ವಾರ್ಥಿಕೋ ಯತ್ಪ್ರತ್ಯಯಃ । ತಿತ್ಸ್ವರಿತಃ । ಚೋದಾಮಿ । ಚುದ ಪ್ರೇರಣೇ । ಣ್ಯಂತಸ್ಯ ಲಟಿ ರೂಪಂ । ಬಹುಲಮನ್ಯತ್ರಾಪೀತಿ ಣೇರ್ಲುಕ್ । ನಿಘಾತಃ । ರಾರಂತು । ರಮು ಕ್ರೀಡಾಯಾಮಿತ್ಯಸ್ಯ ಯಙ್‌ಲುಕಿ ಲೋಟಿ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರಾಭ್ಯಾಸಸ್ಯ ನುಮಭಾವಃ। ಸಂಹಿತಾಯಾ-ಮಾನ್ಯೇಷಾಮಪೀತ್ಯಭ್ಯಾಸಸ್ಯ ದೀರ್ಘಃ । ನಿಘಾತಃ । ಹೃದಿ । ಹೃದಯಶಬ್ದಸ್ಯ ಪದ್ದನ್ನೋಮಾಸ್ಹೃನ್ನಿತ್ಯಾ-ದಿನಾ ಹೃದಾದೇಶಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ತುಭ್ಯೇತ್**—ನಿನ್ನನ್ನುದ್ದೇಶಿಸಿಯೇ । **ಪೀತಯೇ**—ನಿನ್ನ ಪಾನಾರ್ಥವಾಗಿ । **ಸ್ವೇ**—ನಿನ್ನ । **ಓಕ್ಯೇ**—ಜಠರರೂಪವಾದ ಸ್ಥಾನದಲ್ಲಿ । **ಸೋಮಂ**—ಈ ಸೋಮವನ್ನು । **ಚೋದಾಮಿ**—ಅರ್ಪಿಸುತ್ತೇನೆ । **ಏಷಃ**—ಈ ಸೋಮವು । **ತೇ**—ನಿನ್ನ । **ಹೃದಿ**—ಹೃದಯದಲ್ಲಿ । **ರರಂತು**—ಹರ್ಷವನ್ನುಂಟು ಮಾಡಲಿ ।

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನುದ್ದೇಶಿಸಿಯೇ, ನಿನ್ನ ಪಾನಾರ್ಥವಾಗಿ ನಿನ್ನ ಜಠರರೂಪವಾದ ಸ್ಥಾನದಲ್ಲಿ ಈ ಸೋಮವನ್ನು ಅರ್ಪಿಸುತ್ತೇನೆ. ಈ ಸೋಮವು ನಿನ್ನ ಹೃದಯದಲ್ಲಿ ಹರ್ಷವನ್ನುಂಟುಮಾಡಲಿ.

English Translation

I offer to you, Indra, this Soma juice for your drinking, to be taken into its proper receptacle ; may it delight your heart.

ವಿಶೇಷವಿಷಯಗಳು

**ತುಭ್ಯ—ತುಭ್ಯಂ** । ಇಲ್ಲಿ ಛಂದಸ್ಸಿನ ಅನುಕೂಲಕ್ಕಾಗಿ ಅನುಸ್ವಾರವು ಲೋಪವಾಗಿ ತುಭ್ಯ ಎಂದಿದೆ. ತುಭ್ಯ+ಇತ್= ತುಭ್ಯೇತ್ ಎಂದರೆ ನಿನಗೋಸ್ಕರವಾಗಿಯೇ ಎಂದರ್ಥವು.

**ಸ್ವೇ ಓಕ್ಯೇ—ಯಾಸ್ಕರು—ಓಕ ಇತಿ ನಿವಾಸನಾಮೋಚ್ಯತೇ ಎಂದರೆ** ನಿವಾಸಸ್ಥಾನವೆಂದು ನಿರ್ವಚನ ವನ್ನು ಹೇಳಿದ್ದಾರೆ. ಇಲ್ಲಿ ಸ್ವೇ ಓಕ್ಯೇ ಎಂದರೆ ಸ್ವಕೀಯವಾದ ನಿವಾಸಸ್ಥಾನ, ಅಥವಾ ತನ್ನ ಉದರದಲ್ಲಿ ಎಂದರ್ಥವು.

---

ಸಂಹಿತಾಪಾಠಃ

ತ್ವಾಂ ಸುತಸ್ಯ ಪೀತಯೇ ಪ್ರತ್ನಮಿಂದ್ರ ಹವಾಮಹೇ ।
ಕುಶಿಕಾಸೋ ಅವಸ್ಯವಃ ॥ ೯ ॥

CC-0. Jangamwadi Math Collection. Digitized by eGangotri

ಪದಪಾಠಃ

ತ್ವಾಂ । ಸುತಸ್ಯ । ಪೀತಯೇ । ಪ್ರತ್ನಂ । ಇಂದ್ರ । ಹವಾಮಹೇ ।

ಕುಶಿಕಾಸಃ । ಅವಸ್ಯವಃ ॥ ೯ ॥

ಸಾಯಣಭಾಷ್ಯಂ

ಹೇ ಇಂದ್ರ ಅವಸ್ಯವಸ್ತ್ವತ್ತೋ ರಕ್ಷಣಮಿಚ್ಛಂತಃ ಕುಶಿಕಾಸಃ ಕುಶಿಕಗೋತ್ರೋತ್ಪನ್ನಾ ವಯಂ ಸುತಸ್ಯ ಗ್ರಾವಭಿರಭಿಷುತಸ್ಯ ಸೋಮಸ್ಯ ಪೀತಯೇ ಪಾನಾರ್ಥಂ ಪ್ರತ್ನಂ ಪುರಾತನಂ ತ್ವಾಂ ಹವಾಮಹೇ। ಸ್ತುತಿಲಕ್ಷಣಾಭಿರ್ಗೀರ್ಭಿರಾಹ್ವಯಾಮಃ ॥ ಪೀತಯೇ । ಸ್ಥಾಗಾಪಾಪಚೋ ಭಾವ ಇತಿ ಕ್ತಿನ್ । ಹಿಸ್ಮ-ವತ್ಸರತಿಶತ್ಥಾಂತಾನಾಂ । ಫಿ. ೧-೭ । ಇತ್ಯಂತೋದಾತ್ತತ್ವಂ । ಹವಾಮಹೇ । ಹ್ವಯತ್ತೇರ್ಲಟಿ ಬಹುಲಂ ಛಂದಸೀತಿ ಸಂಪ್ರಸಾರಣೇ ರೂಪಂ । ಅವಸ್ಯವಃ । ಅವ ಇಚ್ಛಂತೀತ್ಯರ್ಥೇ ಸುಪಃ ಕ್ಯಚ್ । ಕ್ಯಾಛಂದ-ಸೀತ್ಯುಪ್ರತ್ಯಯಃ । ಕುಶಿಕಾಸೋ ಅವಸ್ಯವ ಇತ್ಯತ್ರ ಸಂಹಿತಾಯಾಮವ್ಯಾದವದ್ಯಾದಿತ್ಯಾದಿನಾ । ಪಾ. ೬-೧-೧೧೬ । ಏಙಃ ಪ್ರಕೃತಿಭಾವಃ ॥

ಪ್ರತಿಪದಾರ್ಥ

ಇಂದ್ರ— ಎಲೈ ಇಂದ್ರನೇ । ಅವಸ್ಯವಃ— ನಿನ್ನ ರಕ್ಷಣೆಯನ್ನು ಪಡೆಯಲಿಚ್ಛೆಯುಳ್ಳವರೂ । ಕುಶಿಕಾಸಃ— ಕುಶಿಕವಂಶೋತ್ಪನ್ನರೂ ಆದ ನಾವು । ಸುತಸ್ಯ— ಹಿಂಡಲ್ಪಟ್ಟ ಈ ಸೋಮರಸದ । ಪೀತಯೇ— ಪಾನಾರ್ಥವಾಗಿ । ಪ್ರತ್ನಂ— ಪುರಾತನನಾದ । ತ್ವಾಂ— ನಿನ್ನನ್ನು । ಹವಾಮಹೇ— ಪ್ರಾರ್ಥಿಸಿ ಕರೆಯುತ್ತೇವೆ ।

ಭಾವಾರ್ಥ

ಎಲೈ ಇಂದ್ರನೇ, ನಿನ್ನ ರಕ್ಷಣೆಯನ್ನು ಪಡೆಯಲಿಚ್ಛೆಯುಳ್ಳವರೂ, ಕುಶಿಕವಂಶೋತ್ಪನ್ನರೂ ಆದ ನಾವು ಹಿಂಡಲ್ಪಟ್ಟ ಈ ಸೋಮರಸದ ಪಾನಾರ್ಥವಾಗಿ ಪುರಾತನನಾದ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation

Descendants of Kusha, desirous of protection, we invoke you, Indra, who are of old, to drink of the libation.

ವಿಶೇಷವಿಷಯಗಳು

ಪ್ರತ್ನಂ ಪುರಾತನಂ । ಪ್ರತ್ನಶಬ್ದವು ಪುರಾಣನಾಮಗಳಲ್ಲಿ ಪಠಿತವಾಗಿರುವುದರಿಂದ ಪುರಾತನನಾದ ಎಂದರೆ ಅನಾದಿಯಿಂದಲೂ ಇರುವ ಎಂದಭಿಪ್ರಾಯವು

ಕುಶಿಕಾಸಃ— ಕುಶಿಕಗೋತ್ರೋತ್ಪನ್ನಾ ವಯಂ । ಕುಶಿಕಗೋತ್ರದಲ್ಲಿ ಉತ್ಪನ್ನರಾದ ನಾವು ಎಂದು ವಿಶ್ವಾಮಿತ್ರ ಋಷಿಯು ಹೇಳಿರುವನು. ಕುಶಿಕಶಬ್ದಾರ್ಥ ವಿಚಾರದಲ್ಲಿ ಯಾಸ್ಕರು—

ಕುಶಿಕಸ್ಯ ಸೂನುಃ ಕುಶಿಕೋ ರಾಜಾ ಬಭೂವ । ಕ್ರೋಶತೇಃ ಶಬ್ದಕರ್ಮಣಃ । ಕ್ರಂಶತೇರ್ವಾ ಸ್ಯಾತ್ಪ್ರಕಾಶಯತಿ ಕರ್ಮಣಃ ಸಾಧುವಿಕ್ರೋಶಯಿತಾರ್ಥಾನಾಮಿತಿ ವಾ ॥

(ನಿ ೨-೨೫)

CC-0. Jangamwadi Math Collection. Digitized by eGangotri

ಎಂದು ನಿರ್ವಚನವನ್ನು ಹೇಳಿದಾರೆ. ಕುಶಿಕನೆಂಬುವನು ಒಬ್ಬ ರಾಜನು. ಅವನ ವಂಶಸ್ಥರಿಗೆ **ಕುಶಿಕಾಃ** ಅಥವಾ **ಕುಶಿಕಾಸಃ** ಎಂದು ಹೆಸರು. ಈ ಹೆಸರು ಈ ರಾಜನಿಗೆ ಬರಲು ಕಾರಣವೇನೆಂದರೆ—ಕುಶಿಕಶಬ್ದವು ಕ್ರಂಶತಿ ಧಾತುವಿನಿಂದ ನಿಷ್ಪನ್ನವಾಗಿ ಶಬ್ದಮಾಡುವುದು ಎಂದರ್ಥವನ್ನು ಕೊಡುವುದು. ಶಬ್ದಮಾಡುವುದು ಎಂದರೆ ವಾಕ್ಯಗಳನ್ನು ಉಚ್ಚರಿಸಿ ಸ್ತೋತ್ರಮಾಡುವುದು ಎಂದರ್ಥವು. ಆದುದರಿಂದ **ಕುಶಿಕಾಃ** ಎಂಬ ಪದಕ್ಕೆ ಸ್ತೋತ್ರಮಾಡುವ, ಮಂತ್ರಗಳನ್ನು ಉಚ್ಚರಿಸುವ ಋತ್ವಿಗಾದಿ ಜನರು ಎಂದೂ ಅರ್ಥವಾಗಬಹುದು ಅಥವಾ ಯಜ್ಞಾದಿ ಕರ್ಮಗಳನ್ನು ಅಥವಾ ಧರ್ಮಗಳನ್ನು ಪ್ರಕಾಶಪಡಿಸುವವನು ಎಂದರೆ ಪಾಲಿಸುವವನು, ಅಥವಾ ಸಜ್ಜನರಿಗೆ ಅರ್ಥ ಎಂದರೆ ಧನಾದಿಗಳನ್ನು ಕೊಡುವವನು ಎಂದೂ ಕುಶಿಕಶಬ್ದಕ್ಕೆ ಅರ್ಥಮಾಡಬಹುದೆಂದು ನಿರುಕ್ತಕಾರರ ಅಭಿಪ್ರಾಯವು. ಪ್ರಕೃತ ಋಕ್ಕಿನಲ್ಲಿ ಕುಶಿಕಾಸಃ ಎಂಬ ಶಬ್ದಕ್ಕೆ ಕುಶಿಕಗೋತ್ರೋತ್ಪನ್ನರಾದ ವಿಶ್ವಾಮಿತ್ರಾದಿ ಋಷಿಗಳು ಎಂದರ್ಥವು.

## ನಲವತ್ತ ಮೂರನೆಯ ಸೂಕ್ತವು.

**ಆ ಯಾಹ್ಯರ್ವಾಙುಪ ವಂಧುರೇಷ್ಠಾ ಇತ್ಯಷ್ಟರ್ಚಂ** ಪಂಚಮಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ । **ಆ ಯಾಹ್ಯಷ್ಟಾವಿತ್ಯನುಕ್ರಮಣಿಕಾ** ॥ ದಶರಾತ್ರೇ ಚತುರ್ಥೇಽಹನಿ ಸ್ತೋಮವೃದ್ಧೌ ಮಾಧ್ಯಂದಿನೇ ಸವನೇಽಚ್ಛಾವಾಕಶಸ್ತ್ರೇ ಸ್ತೋಮಾಭಿಶಂಸನಾರ್ಥಮಿದಂ ಸೂಕ್ತಂ। ಸೂತ್ರಿತಂ ಚ। ಆ ಯಾಹ್ಯರ್ವಾಙಿತ್ಯಷ್ಟರ್ಚಾನ್ಯಾವಪೇರನ್ । ಆ. ೭. ೧೨. । ಇತಿ ॥ ಮಹಾವ್ರತೇಽಪ್ಯಾವಪನೀಯಂ ॥

ಅನುವಾದವು—**ಆ ಯಾಹ್ಯರ್ವಾಙ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ **ಆ ಯಾಹ್ಯಷ್ಟೌ** ಎಂದು ಮೊದಲಾಗಿ ಹೇಳಿರುವುದು. ದಶರಾತ್ರವೆಂಬ ಯಾಗದಲ್ಲಿ ನಾಲ್ಕನೆಯ ದಿವಸ ಮಾಧ್ಯಂದಿನಸವನಕಾಲದಲ್ಲಿ ಸ್ತೋಮಾಭಿವೃದ್ಧಿಗಾಗಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಸ್ತೋಮಾಭಿಶಂಸನಾರ್ಥವಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಆ ಯಾಹ್ಯರ್ವಾಙಿತ್ಯಷ್ಟರ್ಚಾನ್ಯಾವಪೇರನ್** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೧೨) ಮಹಾವ್ರತವೆಂಬ ಯಾಗದಲ್ಲಿಯೂ ಇದರ ವಿನಿಯೋಗವಿರುವುದು.

॥ ಓಂ ॥

### ಸೂಕ್ತ—೪೩

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೩ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

। ಋಷಿಃ—ವಿಶ್ವಾಮಿತ್ರಃ ।

। ದೇವತಾ—ಇಂದ್ರಃ ।

। ಛಂದಃ—ತ್ರಿಷ್ಟುಪ್ ।

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಆ ಯಾಹ್ಯರ್ವಾಙುಪ ವಂಧುರೇಷ್ಠಾಸ್ತವೇದನು ಪ್ರದಿವಃ ಸೋಮಪೇಯಂ।
ಪ್ರಿಯಾ ಸಖಾಯಾ ವಿ ಮುಚೋಪ ಬರ್ಹಿಸ್ತ್ವಾಮಿಮೇ ಹವ್ಯವಾಹೋ ಹವಂತೇ ॥ ೧ ॥

ಪದಪಾಠಃ

ಆ । ಯಾಹಿ । ಅರ್ವಾಙ್ । ಉಪ । ವಂಧುರೇऽಸ್ಥಾಃ । ತವ । ಇತ್ । ಅನು । ಪ್ರऽದಿವಃ । ಸೋಮಽಪೇಯಂ ।
ಪ್ರಿಯಾ । ಸಖಾಯಾ । ವಿ । ಮುಚ । ಉಪ । ಬರ್ಹಿಃ । ತ್ವಾಂ । ಇಮೇ । ಹವ್ಯऽವಾಹಃ । ಹವಂತೇ ॥

ಸಾಯಣಭಾಷ್ಯಂ

ಹೇ ಇಂದ್ರ ವಂಧುರೇಷ್ಠಾಃ । ವಂಧುರಶಬ್ದೇನೇಷಾದ್ವಯಸಂಬಂಧಸ್ಥಾನಮಭಿಧೀಯತೇ । ತೇನ ತದ್ವಿಶಿಷ್ಟೋ ರಥೋ ಲಕ್ಷ್ಯತೇ । ತಸ್ಮಿನ್ ರಥೇ ತಿಷ್ಠನ್ ತ್ವಮರ್ವಾಙಸ್ಮದಭಿಮುಖಃ ಸನ್ ಆ ಅಭಿಲಕ್ಷ್ಯೋಪ ಯಾಹಿ । ಸಮೀಪ ಆಗಚ್ಛ। ಪ್ರದಿವಃ ಪ್ರತ್ನಂ ಪೂರ್ವಕ್ರಮಗತಂ ತವೇತ್ತವೈವ ಸಂಬಂಧಿ ಸೋಮಪೇಯಂ ಸೋಮಪಾನಂ ತ್ವಮನು ಉದ್ದಿಶ್ಯ ಪ್ರಿಯಾ ತವ ಪ್ರಿಯತಮೌ ಸಖಾಯಾ ಸಮಾನಖ್ಯಾನಾವಶ್ವೌ ಬರ್ಹಿರುಪ ಬರ್ಹಿಷಃ ಸಮೀಪೇ ವಿ ಮುಚ । ವಿಮುಂಚ । ಹವ್ಯವಾಹಃ । ಹವ್ಯಂ ವಹಂತೀತಿ ಹವ್ಯವಾಹಃ । ಇಮೇ ಋತ್ವಿಜಸ್ತ್ವಾಂ ಹವಂತೇ । ಸೋಮಪಾನಾರ್ಥಮಾಹ್ವಯಂತಿ । ತಸ್ಮಾದಾಗಚ್ಛೇತಿ ಭಾವಃ ॥ ವಂಧುರೇಷ್ಠಾಃ । ತಿಷ್ಠತೇರ್ವಿಚ್ । ತತ್ಪುರುಷೇ ಕೃತಿ ಬಹುಲಮಿತಿ ಸಪ್ತಮ್ಯಾ ಅಲುಕ್ । ಪ್ರದಿವಃ । ಸಕಾರಾಂತಮವ್ಯಯಂ । ಸೋಮಪೇಯಂ । ಪಾ ಪಾನ ಇತ್ಯಸ್ಯ ಭಾವೇऽಚೋ ಯದಿತಿ ಯತ್ಪ್ರತ್ಯಯಃ । ಈದ್ಯತೀತೀತ್ವಂ । ಆರ್ಧಧಾತುಕಲಕ್ಷಣೋ ಗುಣಃ। ಯತೋऽನಾವ ಇತ್ಯಾದ್ಯುದಾತ್ತತ್ವಂ । ಸಮಾಸೇ ಕೃದುತ್ತರಪದಸ್ವರಃ । ಮುಚ । ಮುಂಚತೇರ್ಲೋಟ್ಯಾಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ವಂಧುರೇಷ್ಠಾಃ**—ಉತ್ತಮವಾದ ಆಸನವುಳ್ಳ ರಥದಲ್ಲಿ ಕುಳಿತವನಾಗಿಯೂ **ಅರ್ವಾಙ್**—ನಮಗೆ ಅಭಿಮುಖನಾಗಿಯೂ । **ಆ ಉಪ ಯಾಹಿ**—ನಮ್ಮ ಸಮೀಪಕ್ಕೆ ದಯಮಾಡು । **ಪ್ರದಿವಃ**—ಪೂರ್ವಕಾಲದಿಂದಲೂ ಅರ್ಪಿಸಿದುದೂ । **ತವೇತ್**—ನಿನ್ನನ್ನೇ ಉದ್ದೇಶಿಸಿರುವುದೂ ಆದ । **ಸೋಮಪೇಯಂ ಅನು**—ಸೋಮಪಾನಾರ್ಥಕ್ಕಾಗಿ । **ಪ್ರಿಯಾ**—ನಿನ್ನ ಪ್ರೀತಿ ಪಾತ್ರವಾದವೂ । **ಸಖಾಯಾ**—ಒಟ್ಟಿಗಿರುವುವೂ ಆದ ಅಶ್ವಗಳನ್ನು । **ಬರ್ಹಿಃ ಉಪ**—ದರ್ಭಾಸನಗಳ ಸಮೀಪದಲ್ಲಿ । **ವಿ ಮುಂಚ**—ಬಿಚ್ಚಿ ನಿಲ್ಲಿಸು । **ಹವ್ಯವಾಹಃ**—ಹವಿಸ್ಸನ್ನು ಹಿಡಿದಿರುವ । **ಇಮೇ**—ಈ ಋತ್ವಿಕ್ಕುಗಳು । **ತ್ವಾಂ**—ನಿನ್ನನ್ನು । **ಹವಂತೇ**—ಕರೆಯುತ್ತಾರೆ ।



CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಇಂದ್ರನೇ, ಉತ್ತಮವಾದ ಆಸನವುಳ್ಳ ರಥದಲ್ಲಿ ಕುಳಿತವನಾಗಿಯೂ ನಮಗೆ ಅಭಿಮುಖನಾಗಿಯೂ ನಮ್ಮ ಸಮೀಪಕ್ಕೆ ದಯಮಾಡು. ಎಲ್ಲಕ್ಕಿಂತಲೂ ಮೊದಲು ಅರ್ಪಿಸಿದುದೂ ನಿನ್ನನ್ನೇ ಉದ್ದೇಶಿಸಿದದೂ ಆದ ಸೋಮಪಾನಕ್ಕಾಗಿ ನಿನ್ನ ಪ್ರೀತಿಪಾತ್ರವಾದವೂ ಒಟ್ಟಿಗಿರುವುವೂ ಆದ ಅಶ್ವಗಳನ್ನು ದರ್ಭಾಸನಗಳ ಸಮೀಪದಲ್ಲಿ ಬಿಚ್ಚಿ ನಿಲ್ಲಿಸು. ಹವಿಸ್ಸನ್ನು ಹಿಡಿದಿರುವ ಈ ಋತ್ವಿಕ್ಕುಗಳು ನಿನ್ನನ್ನು ಕರೆಯುತ್ತಾರೆ.

English Translation

Descend to us riding in your car, for verily yours is this ancient libation ; unharness your beloved and friendly (horses) near to the sacred grass, for these offerers of the oblation present it to you.

ವಿಶೇಷವಿಷಯಗಳು

**ವಂಧುರೇಷ್ಠಾಃ**—ವಂಧುರಶಬ್ದವು ರಥದ ಆಸನಕ್ಕೆ ಪರ್ಯಾಯ ಪದವಾಗಿ ಉಪಯೋಗಿಸಲ್ಪಟ್ಟಿದೆ. ಆದರೆ **ಈಷಾದ್ವಯಸಂಬಂಧಸ್ಥಾನ**ವೆಂದು ಸಾಯಣರು ವಿವರಿಸಿರುವುದರಿಂದ ಇಲ್ಲಿ ಎರಡು ಮೂಕಿಗಳು ಸೇರಿ ನಿರ್ಮಿತವಾಗಿರುವ ಆಸನವುಳ್ಳ ರಥವೆಂದರ್ಥಮಾಡಬಹುದು. ಹಿಂದೆ ಈ ಪದವು ಅಶ್ವಿನ್ಯಾದಿದೇವತೆಗಳ ಪ್ರಸಿದ್ಧವಾದ ರಥದ ಸ್ವರೂಪವನ್ನು ವರ್ಣಿಸುವಾಗ ಅನೇಕ ಕಡೆ ಉಪಯೋಗಿಸಲ್ಪಟ್ಟಿದೆ. **ಅಧಿ ವಾಂ ಸ್ಥಾಮ ವಂಧುರೇ** (ಋ. ಸಂ. ೧-೧೩೯-೪) ಇತ್ಯಾದಿ ಸ್ಥಳಗಳಲ್ಲಿ ಹಿಂದೆ ವಿವೃತವಾಗಿದೆ. **ರಥೋ ಯೋ ವಾಂ ತ್ರಿವಂಧುರಃ** (ಋ. ಸಂ. ೮-೨೨-೫)ಇತ್ಯಾದಿ ಸ್ಥಳಗಳಲ್ಲೂ ಸಹ ಮೂರು ಮೂಕಿಗಳುಳ್ಳ ರಥವೆಂದೇ ಅರ್ಥವಾಗುತ್ತದೆ ಪ್ರಕೃತದಲ್ಲಿ ಉತ್ತಮವಾದ ಆಸನವೆಂದರ್ಥವಾಗಬೇಕಾಗುತ್ತದೆ. ಉತ್ತಮವಾದ ಆಸನವುಳ್ಳ ರಥದಲ್ಲಿ ಕುಳಿತಿರತಕ್ಕವನು ಎಂದು ಇಂದ್ರನಿಗೆ ವಿಶೇಷಣವಾಗಿರುತ್ತದೆ

**ಪ್ರದಿವಃ**—**ಪ್ರತ್ನಂ, ಪ್ರದಿವಃ** (ನಿ. ೩-೧೯) ಇತ್ಯಾದಿ ಪುರಾಣನಾಮಗಳಲ್ಲಿ ಪಠಿತವಾಗಿದೆ. ನಿರುಕ್ತಕಾರರು "**ಮರುತ್ವಾ ಇಂದ್ರ ವೃಷಭೋ**" ಎಂಬ ಋಕ್ಕನ್ನು ಉದಾಹರಿಸಿ ಅಲ್ಲಿ ಈ ಪದಕ್ಕೆ ಪೂರ್ವೇಷ್ವಪ್ಯಹಸ್ಸು ಎಂದು ವಿವರಿಸಿದ್ದಾರೆ. ಎಂದರೆ ಹಿಂದಿನ ದಿನಗಳಂತೆಯೇ ಎಂಬ ತಾತ್ಪರ್ಯವಾಗುತ್ತದೆ. ಬಹು ಪ್ರಾಚೀನಕಾಲದಿಂದಲೂ ಯಾವ ರೀತಿ ಹವಿಸ್ಸು ಅರ್ಪಿತವಾಗುತ್ತಿದೆಯೋ ಅದೇ ರೀತಿ ಈಗಲೂ ಅರ್ಪಿತವಾಗುವುದೆಂದು ತಾತ್ಪರ್ಯ.

ಸಂಹಿತಾಪಾಠಃ

ಆ ಯಾಹಿ ಪೂರ್ವೀರತಿ ಚರ್ಷಣೀರಾ ಅರ್ಯ ಆಶಿಷ ಉಪ ನೋ
 ಹರಿಭ್ಯಾಂ ।
ಇಮಾ ಹಿ ತ್ವಾ ಮತಯಃ ಸ್ತೋಮತಷ್ಟಾ ಇಂದ್ರ ಹವಂತೇ ಸಖ್ಯಂ
 ಜುಷಾಣಾಃ ॥ ೨ ॥

CC-0. Jangamwadi Math Collection. Digitized by eGangotri

ಪದಪಾಠಃ

ಆ । ಯಾಹಿ । ಪೂರ್ವೀಃ । ಅತಿ । ಚರ್ಷಣೀಃ । ಆ । ಅರ್ಯಃ । ಆऽಶಿಷಃ । ಉಪ । ನಃ । ಹರಿऽಭ್ಯಾಂ।

ಇಮಾಃ । ಹಿ । ತ್ವಾ । ಮತಯಃ । ಸ್ತೋಮऽತಷ್ಟಾಃ । ಇಂದ್ರ । ಹವಂತೇ । ಸಖ್ಯಂ । ಜುಷಾಣಾಃ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ಪೂರ್ವೀಃ ಸರ್ವಾಶ್ಚರ್ಷಣೀಃ ಪ್ರಜಾ ಅತ್ಯಾ ಯಾಹಿ । ಅತಿಕ್ರಮ್ಯಾಗಚ್ಛ । ದ್ವಿತೀಯ ಆಙ್ ಪೂರಣಃ । ಆರ್ಯೋऽಸ್ಮಾಕಂ ಸ್ವಾಮೀ ತ್ವಂ ನ ಆಶಿಷಸ್ತ್ವಮುತ್ರಾಗತ್ಯ ಸೋಮಂ ಪಿಬೇತ್ಯೇವಮಾದಿಕಾ ಅಸ್ಮಾಕಂ ಪ್ರಾರ್ಥನಾ ಹರಿಭ್ಯಾಮಶ್ವಾಭ್ಯಾಂ ಯುಕ್ತಃ ಸನ್ ಉಪಾಗಚ್ಛ । ಕಿಂಚ ತೇ ತವ ಸಖ್ಯಂ ಜುಷಾಣಾಃ ಸೇವಮಾನಾಃ ಸ್ತೋಮತಷ್ಟಾಃ ಸ್ತೋಮಕಾರಿಭಿಃ ಸ್ತೋತೃಭಿಃ ಕೃತಾ ಇಮಾ ಮತಯಃ ಸ್ತುತಯೋ ಹವಂತೇ । ಸೋಮಪಾನಾರ್ಥಂ ತ್ವಾಮಾಹ್ವಯಂತಿ। ಹಿ ಪ್ರಸಿದ್ಧೌ । ಕರಣೇ ಕರ್ತೃವ್ಯಾಪಾರಃ। ಕಾಷ್ಠಾನಿ ಪಚಂತೀತಿವತ್ ॥ ಆ । ಸಂಹಿತಾಯಾಮಾಙೋऽನುನಾಸಿಕಶ್ಛಂದಸೀತ್ಯನುನಾಸಿಕಃ । ಅರ್ಯಃ । ಋ ಗತೌ । ಅರ್ಯಃ । ಸ್ವಾಮಿವೈಶ್ಯಯೋರಿತಿ ನಿಪಾತನಾದ್ಯತ್ಪ್ರತ್ಯಯಃ । ಯತೋऽನಾವ ಇತ್ಯಾದ್ಯುದಾತ್ತತ್ವೇ ಪ್ರಾಪ್ತೇऽರ್ಯಸ್ಯ ಸ್ವಾಮ್ಯಾಖ್ಯಾ ಚೇತ್ । ಫಿ. ೧-೧೮ । ಇತ್ಯಂತೋದಾತ್ತತ್ವಂ । ಆಶಿಷಃ । ಕ್ವಿಪಿ ಶಾಸ ಇದಙ್ಹಲೋರಿತ್ಯುಪಧಾಯಾ ಇತ್ವಂ । ಶಾಸಿವಸಿಘಸೀನಾಂಚೇತಿ ಷತ್ವಂ । ಸ್ತೋಮತಷ್ಟಾಃ । ತಕ್ಷೂ ತ್ವಕ್ಷೂ ತನೂಕರಣ ಇತ್ಯಸ್ಮಾತ್ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಪೂರ್ವೀಃ—ಸಮಸ್ತವಾದ । ಚರ್ಷಣೀಃ—ಪ್ರಜೆಗಳನ್ನೂ । ಅತಿ—ದಾಟಿಕೊಂಡು । ಆ ಯಾಹಿ—ನಮ್ಮಲ್ಲಿಗೆ ದಯಮಾಡು । ಆರ್ಯಃ—ಪೂಜ್ಯನಾದ ನೀನು । ನಃ—ನಮ್ಮ । ಆಶಿಷಃ—ಪ್ರಾರ್ಥನೆಗಳನ್ನಂಗೀಕರಿಸಿ । ಹರಿಭ್ಯಾಂ—ಅಶ್ವಗಳೊಡಗೂಡಿ । ಉಪ—ದಯಮಾಡು । ಸಖ್ಯಂ—ನಿನ್ನ ಸಖ್ಯವನ್ನು । ಜುಷಾಣಾಃ—ಇಚ್ಛಿಸುವುವೂ । ಸ್ತೋಮತಷ್ಟಾಃ—ಸ್ತೋತೃಗಳಿಂದ ನಿರ್ಮಿತವಾದವೂ ಆದ । ಇಮಾ ಮತಯಃ—ಈ ಸ್ತುತಿಗಳು । ತ್ವಾ—ನಿನ್ನನ್ನು । ಹವಂತೇ ಹಿ—(ಸೋಮಪಾನಾರ್ಥವಾಗಿ) ಕರೆಯುತ್ತವೆ ।

ಭಾವಾರ್ಥ

ಎಲೈ ಇಂದ್ರನೇ, ಸಮಸ್ತವಾದ ಪ್ರಜೆಗಳನ್ನೂ ದಾಟಿಕೊಂಡು ನಮ್ಮಲ್ಲಿಗೆ ದಯಮಾಡು. ಪೂಜ್ಯನಾದ ನೀನು ನಮ್ಮ ಪ್ರಾರ್ಥನೆಗಳನ್ನಂಗೀಕರಿಸಿ ಅಶ್ವಗಳೊಡಗೂಡಿ ದಯಮಾಡು. ನಿನ್ನ ಸಖ್ಯವನ್ನಿಚ್ಛಿಸುವುವೂ ಸ್ತೋತೃಗಳಿಂದ ನಿರ್ಮಿತವಾದವೂ ಆದ ಈ ಸ್ತುತಿಗಳು ನಿನ್ನನ್ನು ಸೋಮಪಾನಾರ್ಥವಾಗಿ ಕರೆಯುತ್ತವೆ.

## English Translation

Passing by multitudes, come hither, noble Indra, with your steeds, (to recive) our benedictions; for these praises, Indra, composed by the devout, invoke you, propitiating your friendship.

SRI JAGADGURU VISHWARADHYA
JNANA SIMHASAN JNANAMANDIR
LIBRARY
Jangamwadi Math, Varanasi
Acc. No. 4811

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಚರ್ಷಣೀಃ**—ಈ ಪದಕ್ಕೆ ವಿವರಣೆಯನ್ನು ಋಗ್ವೇದ ಸಂಹಿತೆಯ ೨ನೇ ಭಾಗದ ೪೯ನೇ ಪುಟದಲ್ಲಿ ವಿಶದವಾಗಿ ಕೊಟ್ಟಿದೆ. ಈ ಪದಕ್ಕೆ ಅನೇಕ ಸಂದರ್ಭಗಳಲ್ಲಿ **ದ್ರಷ್ಟಾ** ಎಂಬರ್ಥವಾಗುತ್ತದೆ. **ಮನುಷ್ಯ** ಎಂಬರ್ಥವೂ ಅನೇಕ ಸನ್ನಿವೇಶಗಳಲ್ಲಿ ಸೂಚಿತವಾಗಿದೆ. **ಚರ್ಷಣಿ, ಕೃಷ್ಟಿ** ಇತ್ಯಾದಿ ಪದಗಳಿಗೆ **ಮನುಷ್ಯ** ಎಂಬರ್ಥವು ಸಾಕ್ಷಾತ್ತಾಗಿಲ್ಲದೇ ಪಾರಂಪರ್ಯವಾಗಿ ಸೂಚಿತವಾಗುತ್ತದೆ. ಆದರೂ ಸಹ ರೂಢಿಯಲ್ಲಿ ಇದೇ ಅರ್ಥವು ಪ್ರಸಿದ್ಧವಾಗಿದೆ. ಋ. ಸಂ. ೫, ೮೬, ೨ : ೭, ೧೫, ೨; ೯, ೧೦೧, ೯ ಇತ್ಯಾದಿ ಸ್ಥಳಗಳಲ್ಲಿ **ಪಂಚಜನಾಃ** ಎನ್ನುವುದಕ್ಕೆ ಬದಲು **ಪಂಚಚರ್ಷಣಯಃ ; ಪಂಚಕೃಷ್ಟಯಃ** ಎಂಬ ಪದಗಳೇ ಪ್ರಯೋಗದಲ್ಲಿವೆ. ಅಗ್ನಿ, **ಇಂದ್ರ** ಇತ್ಯಾದಿ ದೇವತೆಗಳಿಗೆ **ಚರ್ಷಣೀನಾಂ ಪತಿಃ, ಚರ್ಷಣೀನಾಂ ರಾಜಾ,** ಇತ್ಯಾದಿ ವಿಶೇಷಣಗಳಿರುವಾಗ ಕೊಂಚ ಅರ್ಥವೈಶಾಲ್ಯವೂ ಇರುತ್ತದೆ ಇಂತಹ ಸಂದರ್ಭಗಳಲ್ಲಾಗತಕ್ಕ ವಿಶೇಷಾರ್ಥಗಳನ್ನು ಹಿಂದೆ ತಿಳಿಸಿದೆ. ಆದರೆ, ೫-೨೩-೪ ಇತ್ಯಾದಿ ಸನ್ನಿವೇಶಗಳಲ್ಲಿ **ವಿಶ್ವಚರ್ಷಣಿಃ** ಎಂಬ ಅಗ್ನಿಗೆ ವಿಶೇಷಣವಾಗಿರುವ ಈ ಪದಕ್ಕೆ **ವಿಶ್ವದ್ರಷ್ಟಾ** ಎಂಬರ್ಥವು ಸಹಜವಾಗಿರುತ್ತದೆ. ಹೀಗೆಯೇ ಆಯಾ ಸಂದರ್ಭಗಳಿಗನುಸಾರವಾಗಿ ಅರ್ಥವನ್ನು ಹೇಳಬೇಕಾಗುತ್ತದೆ.

**ಅರ್ಯಃ—ರಾಷ್ಟ್ರೀ,** ಅರ್ಯಃ ಇತ್ಯಾದಿ ಈಶ್ವರನಾಮಗಳಲ್ಲಿ ಈಪದವು ಪಠಿತವಾಗಿದೆ. (ನಿ. ೨-೨೨) ಈ ಸಂದರ್ಭದಲ್ಲಿ ಪೂಜ್ಯನೆಂದರ್ಥಮಾಡಿದೆ.

**ಆಶಿಷಃ**—ಆಶೀಃ ಎಂಬ ಪದವು ರೂಢಿಯಲ್ಲಿ ದೊಡ್ಡವರು ಚಿಕ್ಕವರಿಗೆ ಒಳ್ಳೆಯದನ್ನು ಕೋರುವುದು ಎಂಬರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಆದರೆ ಋಕ್ಸಂಹಿಯಲ್ಲಿ **ಪ್ರಾರ್ಥನೆ,** ಇಷ್ಟಾರ್ಥ ಎಂಬರ್ಥಗಳಲ್ಲಿ ಉಪಯುಕ್ತವಾಗಿದೆ. ಉದಾಹರಣೆಗೆ ಋ. ಸಂ. ೧-೧೭೯-೬ರಲ್ಲಿ **"ಸತ್ಯಾ ದೇವೇಷ್ವಾಶಿಷೋ ಜಗಾಮ"** ಎಂದಿರುವಾಗ ಅಗಸ್ತ್ಯಋಷಿಯು ತನ್ನ ಇಷ್ಟಾರ್ಥಗಳನ್ನೆಲ್ಲಾ ಪಡೆದನು ಎಂದು ತಾತ್ಪರ್ಯ. ಆದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ನಮ್ಮ ಪ್ರಾರ್ಥನೆಗಳು ಎಂಬರ್ಥವು.

---

ಸಂಹಿತಾಪಾಠಃ

ಆ ನೋ ಯಜ್ಞಂ ನಮೋವೃಧಂ ಸಜೋಷಾ ಇಂದ್ರ ದೇವ ಹರಿಭಿರ್ಯಾಹಿ ತೂಯಂ ।

ಅಹಂ ಹಿ ತ್ವಾ ಮತಿಭಿರ್ಜೋಹವೀಮಿ ಘೃತಪ್ರಯಾಃ ಸಧಮಾದೇ ಮಧೂನಾಂ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಆ । ನಃ । ಯಜ್ಞಂ । ನಮಃऽವೃಧಂ । ಸಽಜೋಷಾಃ । ಇಂದ್ರ । ದೇವ । ಹರಿಽಭಿಃ । ಯಾಹಿ । ತೂಯಂ ।

ಅಹಂ । ಹಿ । ತ್ವಾ । ಮತಿಽಭಿಃ । ಜೋಹವೀಮಿ । ಘೃತಽಪ್ರಯಾಃ । ಸಧಽಮಾದೇ । ಮಧೂನಾಂ ॥ ೩ ॥

ಸಾಯಣಭಾಷ್ಯಂ

ದೇವ ದ್ಯೋತಮಾನ ಹೇ ಇಂದ್ರ ನೋऽಸ್ಮಾಕಂ ನಮೋವೃಧಂ ನಮಸೋऽನ್ನಸ್ಯ ವರ್ಧಕಮಿಮಂ ಯಜ್ಞಂ ಹರಿಭಿರಶ್ವೈಃ ಸಜೋಷಾಃ ಸಹಪ್ರೀತಿಸ್ತ್ವಂ ತೂಯಂ ಕ್ಷಿಪ್ರಮಾ ಯಾಹಿ । ಘೃತಪ್ರಯಾಃ । ಘೃತಸಹಿತಾನಿ ಪ್ರಯಾಂಸ್ಯನ್ನರೂಪಾಣಿ ಹವೀಂಷಿ ಯಸ್ಯ ಸ ತಥೋಕ್ತಃ । ತಾದೃಶೋऽಹಂ ಮಧೂನಾಂ ಸೋಮಾನಾಂ ಸಧಮಾದೇ । ಸಹ ಮಾದ್ಯಂತಿ ಯತ್ರ ಸೋಮ ಇತಿ ಸಧಮಾದಃ । ತಸ್ಮಿನ್ ಸ್ಥಾನೇ ಮತಿಭಿಃ ಸ್ತುತಿಭಿಸ್ತ್ವಾ ತ್ವಾಂ ಜೋಹವೀಮಿ ಹಿ । ಭೃಶಮಾಹ್ವಯಾಮಿ ಖಲು ॥ ಜೋಹವೀಮಿ । ಯಙ್ಲುಕ್ಯಭ್ಯಸ್ತಸ್ಯ ಚೇತಿ ಸಂಪ್ರಸಾರಣಂ । ಗುಣೋ ಯಙ್ಲುಕೋರಿತ್ಯಭ್ಯಾಸಸ್ಯ ಗುಣಃ । ಯಙೋ ವೇತೀಡಾಗಮಃ । ಹಿಯೋಗಾದನಿಘಾತಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತಃ । ಘೃತಪ್ರಯಾಃ । ಘೃ ಕ್ಷರಣದೀಪ್ತ್ಯೋರಿತ್ಯಸ್ಮಾದಂಜಿಘೃಷಿಭ್ಯಃ ಕ್ತ ಇತಿ ಕ್ತಪ್ರತ್ಯಯಃ । ಬಹುವ್ರೀಹೌ ಪೂರ್ವಪದಸ್ವರಃ ॥

ಪ್ರತಿಪದಾರ್ಥ

ದೇವ—ಪ್ರಕಾಶಮಾನನಾದ । ಇಂದ್ರ—ಎಲೈ ಇಂದ್ರನೇ । ನಃ—ನಮ್ಮ । ನಮೋವೃಧಂ—ಅನ್ನವರ್ಧಕವಾದ । ಯಜ್ಞಂ—ಯಜ್ಞಕ್ಕೆ । ಹರಿಭಿಃ—ಅಶ್ವಗಳೊಡನೆ । ಸಜೋಷಾಃ—ಪ್ರೀತಿಯೊಡನೆ ಸೇರಿಕೊಂಡು । ತೂರ್ಯಂ—ಶೀಘ್ರವಾಗಿ । ಆ ಯಾಹಿ—ದಯಮಾಡು । ಘೃತಪ್ರಯಾಃ—ಘೃತಸಹಿತವಾದ ಹವಿಸ್ಸಿನೊಡಗೂಡಿದ । ಅಹಂ—ನಾನು । ಮಧೂನಾಂ—ಸೋಮರಸಗಳ । ಸಧಮಾದೇ—ಮದಕಾರಕವಾದ ಸ್ಥಾನದಲ್ಲಿ । ಮತಿಭಿಃ—ಸ್ತುತಿಗಳೊಡನೆ । ತ್ವಾ—ನಿನ್ನನ್ನು । ಜೋಹವೀಮಿ—ಪ್ರಾರ್ಥಿಸಿ ಕರೆಯುತ್ತೇನೆ.

ಭಾವಾರ್ಥ

ಪ್ರಕಾಶಮಾನನಾದ ಎಲೈ ಇಂದ್ರನೇ, ಅನ್ನವರ್ಧಕವಾದ ನಮ್ಮ ಯಜ್ಞಕ್ಕೆ ಅಶ್ವಗಳೊಡನೆ ಪ್ರೀತಿಯಿಂದ ಕೂಡಿಕೊಂಡು ಶೀಘ್ರವಾಗಿ ದಯಮಾಡು ಘೃತಸಹಿತವಾದ ಹವಿಸ್ಸಿನೊಡಗೂಡಿದ ನಾನು ಸೋಮರಸದ ಮದಕಾರಕವಾದ ಸ್ಥಾನದಲ್ಲಿ ಸ್ತುತಿಗಳಿಂದ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇನೆ.

English Translation

Divine Indra, come quickly with your steeds, and well pleased, to our food-augmenting sacrifice; offering (sacred) food with butter, I invoke you verily with praises in the chamber of the sweet libations.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಸಧಮಾದೇ**—**ಮದ್** ಧಾತುವಿನೊಡನೆ ಸಹ ಶಬ್ದವು ಸೇರಿ ಈ ಪದದ ನಿಷ್ಪತ್ತಿಯಾಗಿರುತ್ತದೆ. ಎಲ್ಲರೂ ಒಟ್ಟಿಗೆ ಸೋಮರಸದ ಪಾನವನ್ನು ಮಾಡಿ ತೃಪ್ತಿಯನ್ನು ಹೊಂದತಕ್ಕ ಪ್ರದೇಶವೆಂದರ್ಥ. ಸರ್ವರಿಗೂ ಮದಕಾರಕವಾದ ಯಜ್ಞಪ್ರದೇಶಕ್ಕೆ ವಿಶೇಷಣವಾಗಿದೆ.

**ಮತಿಭಿಃ**—**ಮತಿ**ಶಬ್ದಕ್ಕೆ ಸ್ತುತಿರೂಪವಾದ ವಾಕ್ಕೆಂದು ಹಿಂದೆ ಅನೇಕಕಡೆಗಳಲ್ಲಿ ಹೇಳಿ ಈ ಪದದ ವಿಶೇಷಾರ್ಥವನ್ನು ವಿವರಿಸಿದೆ.

**ನಮೋವೃಧಂ ಯಜ್ಞಂ**—ಅನ್ನವರ್ಧಕವಾದ ಯಜ್ಞವೆಂದರ್ಥ. **ಯಜ್ಞಾದ್ಭವತಿ ಪರ್ಜನ್ಯಃ, ಪರ್ಜನ್ಯಾದನ್ನಸಂಭವಃ** ಎಂಬ ಶ್ರುತಿಪ್ರಸಿದ್ಧವಾದ ಭಾವವು ಇಲ್ಲಿ ವ್ಯಕ್ತವಾಗಿದೆ. ಯಜ್ಞವು ವೃಷ್ಟಿಕಾರಕವಾಗಿ ತದ್ದ್ವಾರಾ ಅನ್ನಸಂಪತ್ತಿನ ವೃದ್ಧಿಯು ಆಗಬೇಕು. ವಿಶ್ವದ ಸಕಲಸೃಷ್ಟಿ ಮತ್ತು ಪಾಲನೆಗೂ ಯಜ್ಞವೇ ಮೂಲವು. ಮತ್ತು ಕೇವಲ ಮಾನವನಿಗೆ ಬೇಕಾದ ಅನ್ನವರ್ಧಕವೆಂದಲ್ಲದೇ ದೇವತೆಗಳ ಅನ್ನಸಂಪತ್ತಿನ ವೃದ್ಧಿಗೂ ಯಜ್ಞವೇ ಮೂಲವು. "**ಯಜ್ಞ ಉ ದೇವಾನಾಮನ್ನಂ**" (ಶ. ಬ್ರಾ. ೮-೧-೨-೧೦) ಇತ್ಯಾದಿ ವಾಕ್ಯಗಳಲ್ಲಿ ಹೇಳಿರುವಂತೆ ಯಜ್ಞವೇ ದೇವತೆಗಳ ಅನ್ನವೆಂದೂ ಪ್ರಶಂಸಿತವಾಗಿದೆ

ಸಂಹಿತಾಪಾಠಃ

ಆ ಚ ತ್ವಾಮೇತಾ ವೃಷಣಾ ವಹಾತೋ ಹರೀ ಸಖಾಯಾ ಸುಧುರಾ ಸ್ವಂಗಾ ।
ಧಾನಾವದಿಂದ್ರಃ ಸವನಂ ಜುಷಾಣಃ ಸಖಾ ಸಖ್ಯುಃ ಶೃಣವದ್ವಂದನಾನಿ॥೪॥

ಪದಪಾಠಃ

ಆ । ಚ । ತ್ವಾಂ । ಏತಾ । ವೃಷಣಾ । ವಹಾತಃ । ಹರೀ ಇತಿ । ಸಖಾಯಾ । ಸುऽಧುರಾ । ಸುऽಅಂಗಾ । ಧಾನಾऽವತ್ । ಇಂದ್ರಃ । ಸವನಂ । ಜುಷಾಣಃ । ಸಖಾ । ಸಖ್ಯುಃ । ಶೃಣವತ್ । ವಂದನಾನಿ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ವೃಷಣಾ ಸೇಚನಸಮರ್ಥೌ ಸುಧುರಾ ಶೋಭನಯಾ ಧುರಾನ್ವಿತೌ ಸ್ವಂಗಾ ಶೋಭನಾವಯವೋಪೇತೌ ಸಖಾಯಾ ಶೋಭನಾಖ್ಯಾನಾವೇತೈತೌ ಹರೀ ತ್ವಾಮಾ ವಹಾತಶ್ಚ । ಯಜ್ಞಂ ಪ್ರತ್ಯಾಗಮನಾಯ ರಥೇ ತ್ವಾಮಾವಹತಃ । ಅಥ ಧಾನಾವತ್ ಭೃಷ್ಟಯವೋಪೇತಂ ಸವನಂ ಜುಷಾಣಃ ಸೇವಮಾನಃ ಸಖಾ ಸಖಿಭೂತಃ ಸ ಇಂದ್ರಃ ಸಖ್ಯುಃ ಸ್ತೋತುರ್ಮಮ ವಂದನಾನಿ ಸ್ತೋತ್ರಾಣಿ ಶೃಣ-

CC-0. Jangamwadi Math Collection. Digitized by eGangotri

ವತ್ । ಶೃಣುಯಾತ್ ॥ ವಹಾತಃ । ವಹೇರ್ಲೇಟ್ಯಾಡಾಗಮೋ ರೂಪಂ । ಚವಾಯೋಗೇ। ಪ್ರಥಮೇತಿ ನ ನಿಘಾತಃ । ಶೃಣವತ್ । ಶ್ರು ಶ್ರವಣ ಇತ್ಯಸ್ಯ ಲೇಟ್ಯಡಾಗಮೋ ರೂಪಂ । ನಿಘಾತಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ವೃಷಣಾ**—ಸೇಚನಸಾಮರ್ಥ್ಯವುಳ್ಳವೂ । **ಸುಧುರಾ**—ಭಾರವನ್ನು ವಹಿಸಬಲ್ಲವೂ । **ಸ್ವಂಗಾ**—ಶ್ರೇಷ್ಠವಾದ ಅವಯವಗಳುಳ್ಳವೂ । **ಸಖಾಯಾ**—ಒಟ್ಟಿಗೆ ಸೇರಿರುವುವೂ ಆದ । **ಏತಾ ಹರೀ**—(ಇಂದ್ರನ) ಈ ಅಶ್ವಗಳು । **ತ್ವಾಂ**—ನಿನ್ನನ್ನು । **ಆ ವಹಾತಃ**—(ಯಜ್ಞಪ್ರದೇಶಕ್ಕೆ) ಕರೆತರುತ್ತವೆ । **ಧಾನಾವತ್**—ಪಕ್ವವಾದ ಯವಧಾನ್ಯದಿಂದ ಕೂಡಿರುವ । **ಸವನಂ**—ಯಜ್ಞವನ್ನು । **ಜುಷಾಣಃ**—ಸೇವಿಸತಕ್ಕವನೂ । **ಸಖಾ**—ಸಖಿಭೂತನೂ ಆದ । **ಇಂದ್ರಃ**—ಇಂದ್ರರೂಪಿಯಾದ ನೀನು । **ಸಖ್ಯುಃ**—ನಿನ್ನ ಸಖನಾದ ನನ್ನ । **ವಂದನಾನಿ**—ಸ್ತೋತ್ರಗಳನ್ನು । **ಶೃಣವತ್ ಚ**—ಕೇಳುವವನಾಗು ।

ಭಾವಾರ್ಥ

ಎಲೈ ಇಂದ್ರನೇ, ಸೇಚನಸಾಮರ್ಥ್ಯವುಳ್ಳವೂ, ಭಾರವನ್ನು ವಹಿಸಬಲ್ಲವೂ, ಶ್ರೇಷ್ಠವಾದ ಅವಯವಗಳುಳ್ಳವೂ, ಒಟ್ಟಿಗೆ ಸೇರಿರುವುವೂ ಆದ ಈ ಅಶ್ವಗಳು ನಿನ್ನನ್ನು ಯಜ್ಞಪ್ರದೇಶಕ್ಕೆ ಕರೆತರುತ್ತವೆ. ಪಕ್ವವಾದ ಯವಧಾನ್ಯದಿಂದ ಕೂಡಿರುವ ಯಜ್ಞವನ್ನು ಸೇವಿಸತಕ್ಕವನೂ, ಸಖಿಭೂತನೂ ಆದ ಇಂದ್ರರೂಪಿಯಾದ ನೀನು ನಿನ್ನ ಸಖನಾದ ನನ್ನ ಸ್ತೋತ್ರಗಳನ್ನು ಕೇಳುವವನಾಗು.

English Translation

May these two vigorous friendly burthen-bearing and well-limbed steeds convey you hither, where, Indra, approving of the ceremony (in which the offering) is parched grain, may hear as a friend the praises of his friend (the worshipper)

ವಿಶೇಷವಿಷಯಗಳು

ವಂದನಾನಿ—ವಂದನವೆಂದರೆ ನಮಸ್ಕಾರವೆಂದು ಅರ್ಥವು ರೂಢಿಯಲ್ಲಿದೆ. ಆದರೆ ಪ್ರಕೃತದಲ್ಲಿ ಸ್ತುತಿ ಯೆಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ಈ ಪದವು ವ್ಯಾಧಿ, ರಾಕ್ಷಸ ಇತ್ಯಾದಿಗಳಿಗೆ ಪರ್ಯಾಯಪದವಾಗಿಯೂ ಅನೇಕ ಕಡೆಗಳಲ್ಲಿ ಪ್ರಯುಕ್ತವಾಗಿದೆ. ಉದಾಹರಣೆಗೆ—

**ನ ಯಾತವ ಇಂದ್ರ ಜೂಜುವುರ್ನೋ ನ ವಂದನಾ ಶವಿಷ್ಠ ವೇದ್ಯಾಭಿಃ ।**

(ಋ. ಸಂ. ೭-೨೧-೫)

ಇತ್ಯಾದಿ ಋಕ್ಕುಗಳಲ್ಲಿ ಈ ಪದಕ್ಕೆ ರಾಕ್ಷಸನೆಂದರ್ಥ. **ವಂದನನೆಂಬ ಋಷಿನಾಮವೂ ಸಹ ಪ್ರಸಿದ್ಧವಾಗಿಯೇ** ಇದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಕುವಿನ್ಮಾ ಗೋಪಾಂ ಕರಸೇ ಜನಸ್ಯ ಕುವಿದ್ರಾಜಾನಂ ಮಘವನ್ನೃ-
ಜೀಷಿನ್ ।
ಕುವಿನ್ಮ ಋಷಿಂ ಪಪಿವಾಂಸಂ ಸುತಸ್ಯ ಕುವಿನ್ಮೇ ವಸ್ವೋ ಅಮೃತಸ್ಯ
ಶಿಕ್ಷಾಃ ॥ ೫ ॥

ಪದಪಾಠಃ

ಕುವಿತ್ । ಮಾ । ಗೋಪಾಂ । ಕರಸೇ । ಜನಸ್ಯ । ಕುವಿತ್ । ರಾಜಾನಂ । ಮಘ್ಽವನ್ । ಋಜೀಷಿನ್ ।
ಕುವಿತ್ । ಮಾ । ಋಷಿಂ । ಪಪ್ಽವಾಂಸಂ । ಸುತಸ್ಯ । ಕುವಿತ್ । ಮೇ । ವಸ್ವಃ । ಅಮೃತಸ್ಯ । ಶಿಕ್ಷಾಃ॥

ಸಾಯಣಭಾಷ್ಯಂ

ಹೇ ಇಂದ್ರ ಕುವಿದಪಿ ಚ ಮಾ ಮಾಂ ಜನಸ್ಯ ಗೋಪಾಂ ಗೋಪ್ತಾರಂ ಕರಸೇ । ಕುರು । ತಥಾ ಹೇ ಮಘವನ್ಧನವನ್ನೃಜೀಷಿನ್ಸೋಮವನ್ ಹೇ ಇಂದ್ರ ಮಾಂ ರಾಜಾನಂ ಸರ್ವಸ್ಯ ಸ್ವಾಮಿನಂ ಕುರು । ಕುವಿಚ್ಚ ಮಾ ಮಾಮೃಷಿಮತೀಂದ್ರಿಯಾರ್ಥಸ್ಯ ದ್ರಷ್ಟಾರಂ ಕುರು । ಋಷಿರ್ದರ್ಶನಾದಿತಿ ಯಾಸ್ಕಃ । ತಥಾ ಸುತಸ್ಯಾಭಿಷುತಸ್ಯ ಸೋಮಸ್ಯ ಪಪಿವಾಂಸಂ ಪಾತಾರಂ ಕುರು । ಅಪಿ ಚ ಮೇ ಮಹ್ಯಮಮೃತಸ್ಯ ಕ್ಷಯರಹಿತಂ ವಸ್ವೋ ವಸು ಶಿಕ್ಷಾಃ । ಪ್ರಯಚ್ಛ ॥ ಕರಸೇ । ಕೃಞ್ ಕರಣೇ । ಲೇಟ್ಯಡಾಗಮೋ ರೂಪಂ। ಕುವಿದ್ಯೋಗಾದನಿಘಾತಃ । ಮ ಋಷಿಮಿತ್ಯತ್ರ ಸಂಹಿತಾಯಾಮೃತ್ಯಕ ಇತಿ ಪ್ರಕೃತಿಭಾವೋ ಹ್ರಸ್ವಶ್ಚ । ಪಪಿವಾಂಸಂ । ಪಾ ಪಾನ ಇತ್ಯಸ್ಯ ಕ್ವಸೌ ವಸ್ವೇಕಾಜಾದ್ಘಸಾಮಿತೀಡಾಗಮಃ । ಪ್ರತ್ಯಯಸ್ವರಃ । ಶಿಕ್ಷಾಃ । ಶಿಕ್ಷತಿರ್ದಾನಕರ್ಮಾ । ಅಸ್ಮಾಲ್ಲೇಟ್ಯಡಾಗಮೋ ರೂಪಂ । ಕುವಿದ್ಯೋಗಾದನಿಘಾತಃ । ಆಗಮಾ ಅನು-ದಾತ್ತಾ ಇತ್ಯಾಟೋಽನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) **ಕುವಿತ್**—ಅನೇಕವಾಗಿ । **ಮಾ**—ನನ್ನನ್ನು । **ಜನಸ್ಯ**—ಪ್ರಜೆಗಳಿಗೆ । **ಗೋಪಾಂ**—ರಕ್ಷಕನನ್ನಾಗಿ। **ಕರಸೇ**—ಮಾಡು । **ಮಘವನ್**-ಧನವಂತನೂ । **ಋಜೀಷಿನ್**-ಸೋಮವಂತನೂ ಆದ ಇಂದ್ರನೇ। **ಮಾ**—ನನ್ನನ್ನು । **ಕುವಿತ್**—ಹಾಗೆಯೇ ।**ರಾಜಾನಂ**—ಪ್ರಭುವಾಗಿರುವಂತೆ ಮಾಡು । **ಕುವಿತ್**—ಇಲ್ಲದಿದ್ದರೆ । **ಋಷಿಂ**—ಅತೀಂದ್ರಿಯಾರ್ಥವನ್ನು ನೋಡುವ ಸಾಮರ್ಥ್ಯವುಳ್ಳವನನ್ನಾಗಿ ಮಾಡು । **ಸುತಸ್ಯ**—ಹಿಂಡಲ್ಪಟ್ಟ ಸೋಮರಸದ । **ಪಪಿವಾಂಸಂ**— ಪಾನಮಾಡುವವನನ್ನಾಗಿ ಮಾಡು । **ಮೇ**—ನನಗೆ । **ಅಮೃತಸ್ಯ**—ನಾಶರಹಿತವಾದ । **ವಸ್ವಃ**—ಧನವನ್ನು । **ಶಿಕ್ಷಾಃ**—ಕೊಡು ।

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಇಂದ್ರನೇ, ನನ್ನನ್ನು ಪ್ರಜೆಗಳಿಗೆ ರಕ್ಷಕನನ್ನಾಗಿ ಮಾಡು. ಧನವಂತನೂ, ಸೋಮವಂತನೂ ಆದ ಇಂದ್ರನೇ, ನನ್ನನ್ನು ಪ್ರಭುವಾಗಿರುವಂತೆ ಮಾಡು. ಇಲ್ಲದಿದ್ದರೆ ಅತೀಂದ್ರಿಯಾರ್ಥವನ್ನು ನೋಡುವ ಸಾಮರ್ಥ್ಯವುಳ್ಳವನನ್ನಾಗಿ ಮಾಡು. ಸೋಮರಸದ ಪಾನಕ್ಕೆ ಅಧಿಕಾರಿಯನ್ನಾಗಿ ಮಾಡು. ನನಗೆ ನಾಶರಹಿತವಾದ ಧನವನ್ನು ಕೊಡು.

English Translation

Possessor of wealth, accept of the spiritless Soma juice ; make me the protector, or rather a monarch of men ; make me verily a holy sage, a drinker of the libation ; make me verily the possessor of imperishable wealth.

ವಿಶೇಷವಿಷಯಗಳು

ಕುವಿತ್—ಈ ಪದವು ನಿರುಕ್ತದ ಬಹುನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧) ಋಕ್ಸಂಹಿತೆಯಲ್ಲಿಯೂ ಸಹ **ಕುವಿತ್ಸ ದೇವೀಃ ಸನಯೋ ನವೋ** ವಾ (ಋ. ಸಂ. ೪-೫೧-೪) ಇತ್ಯಾದಿ ಸ್ಥಳಗಳಲ್ಲಿ **ಬಹುವಾರಂ, ಅನೇಕಶಃ** ಎಂಬರ್ಥದಲ್ಲೇ ಪ್ರಯುಕ್ತವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಈ ಪದವು ಮೂರು ಅರ್ಥಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಮೊದಲನೆಯದಾಗಿ, **ಕುವಿತ್–ಅಪಿ ಚ** ಎಂದು ರೂಢವಾದ ಅರ್ಥದಲ್ಲೂ, ಎರಡನೆಯದನ್ನು ಸಂಯುಕ್ತಾರ್ಥದಲ್ಲಿ, ಮೂರನೆಯ ಸಲ **ಅಥವಾ** ಎಂಬ ವಿಪರ್ಯಯಾರ್ಥದಲ್ಲೂ ಪ್ರಯೋಗಿಸಲ್ಪಟ್ಟಿದೆ.

**ಋಷಿಂ—ಋಷಿ** ಶಬ್ದಕ್ಕೆ ಅತೀಂದ್ರಿಯಾರ್ಥಗಳನ್ನು ನೋಡತಕ್ಕ ಸಾಮರ್ಥ್ಯವುಳ್ಳ ತತ್ತ್ವಜ್ಞನೆಂದು ಇಲ್ಲಿ ಅರ್ಥಮಾಡಿದೆ. ಈ ಪದಕ್ಕೆ ಈ ಅರ್ಥವು ಸಾಧ್ಯವೆಂಬುದನ್ನು ಹಿಂದೆ ಋ. ಸಂ. ೧-೧೭-೬ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಸಾಧಾರಣವಾಗಿ **ಋಷಿ**ಶಬ್ದವು ಋಕ್ಸಂಹಿತೆಯಲ್ಲಿ ಕ್ರಾಂತದರ್ಶಿಯಾದ ಕವಿಯೆಂಬರ್ಥದಲ್ಲೇ ಉಪಯೋಗಿಸಲ್ಪಟ್ಟಿದೆ.

**ಅಗ್ನಿಃ ಪೂರ್ವೇಭಿರ್ಋಷಿಭಿರೀಡ್ಯಃ** (ಋ. ಸಂ. ೧-೧-೨) ;
**ಯೇ ಚ ಪೂರ್ವ ಋಷಯೋ ಯೇ ಚ ನೂತ್ನಾಃ** (ಋ. ಸಂ. ೭-೨೨-೯)
**ತಮೇವ ಋಷಿಂ ತಮು ಬ್ರಹ್ಮಾಣಮಾಹುಃ** (ಋ. ಸಂ. ೧೦-೧೦೭-೬)

ಇತ್ಯಾದಿ ಸನ್ನಿವೇಶಗಳಲ್ಲಿ ಕವಿಯೆಂಬರ್ಥವೂ, **ಅಗ್ನಿಂ ಮನುಷ್ಯಾ ಋಷಯಃ ಸಮೀಧಿರೇ** (೧೦-೧೫೦-೪) ಇತ್ಯಾದಿ ಸನ್ನಿವೇಶಗಳಲ್ಲಿ **ಸ್ತುತಿಕರ್ತ**ನೆಂಬರ್ಥವೂ ಪ್ರಸಿದ್ಧವಾಗಿದೆ. ಹೋತೃವೆಂಬರ್ಥವೂ ಕೆಲವು ಕಡೆಗಳಲ್ಲಿ ಸಾಧ್ಯವಾಗುತ್ತದೆ.

ಸಂಹಿತಾಪಾಠಃ

**ಆ ತ್ವಾ ಬೃಹಂತೋ ಹರಯೋ ಯುಜಾನಾ ಅರ್ವಾಗಿಂದ್ರ ಸಧಮಾದೋ ವಹಂತು ।**

CC-0. Jangamwadi Math Collection. Digitized by eGangotri

ಪ್ರ ಯೇ ದ್ವಿತಾ ದಿವ ಋಂಜಂತ್ಯಾತಾಃ ಸುಸಂಮೃಷ್ಟಾಸೋ ವೃಷಭಸ್ಯ ಮೂರಾಃ ॥ ೬ ॥

ಪದಪಾಠಃ

ಆ । ತ್ವಾ । ಬೃಹಂತಃ । ಹರಯಃ । ಯುಜಾನಾಃ । ಅರ್ವಾಕ್ । ಇಂದ್ರ । ಸಧಽಮಾದಃ । ವಹಂತು ।

ಪ್ರ । ಯೇ । ದ್ವಿತಾ । ದಿವಃ । ಋಂಜಂತಿ । ಆತಾಃ । ಸುಽಸಂಮೃಷ್ಟಾಸಃ । ವೃಷಭಸ್ಯ । ಮೂರಾಃ ॥ ೬ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಾ ತ್ವಾಂ ಬೃಹಂತೋ ಮಹಾಂತೋ ಯುಜಾನಾ ರಥೇ ಯುಜ್ಯಮಾನಾ ಹರಯೋಽಶ್ವಾಃ ಸಧಮಾದಃ ಸಹ ಮಾದಯಂತಃ ಸಂತೋಽರ್ವಾಕ್ ಅಸ್ಮದಭಿಮುಖಮಾ ವಹಂತು । ವೃಷಭಸ್ಯ ಕಾಮಾನಾಂ ವರ್ಷಿತುರಿಂದ್ರಸ್ಯ ಮೂರಾಃ ಶತ್ರೂಣಾಂ ಮಾರಕಾಃ ಸುಸಂಮೃಷ್ಟಾಸ ಇಂದ್ರಸ್ಯ ಹಸ್ತಾಭ್ಯಾಂ ಪೃಷ್ಠಭಾಗೇ ಸುಷ್ಠು ಸಂಸ್ಪೃಷ್ಟಾ ದಿವೋ ನಭಸಃ ಸಕಾಶಾದಾಗಚ್ಛಂತೋ ಯೇಽಶ್ವಾ ಆತಾಃ । ಅಭಿಮುಖ್ಯೇನ ಗಮ್ಯಂತೇ ಪ್ರಾಣಿಭಿಸ್ತತ್ತತ್ಕಾರ್ಯಂ ಪ್ರತೀತ್ಯಾತಾ ದಿಶಃ । ಸರ್ವಾ ದಿಶೋ ದ್ವಿತಾ ದ್ವೈಧಂ ಯಥಾ ಭವತಿ ತಥಾ ಪ್ರ ಋಂಜಂತಿ । ಪ್ರಕರ್ಷೇಣ ಸಾಧಯಂತಿ ॥ ಯುಜಾನಾಃ । ಯುಜಿರ್ ಯೋಗೇ ಯುಜಿಬುಧಿದೃಶಃ ಕಿಚ್ಚ । ಉ. ೨-೯೦. । ಇತ್ಯಾನಚ್ । ಚಿತ್ತ್ವಾದಂತೋದಾತ್ತಃ । ಸಧಮಾದಃ । ಮದೀ ಹರ್ಷ ಇತ್ಯಸ್ಮಾಣ್ಣ್ಯಂತಾತ್ ಕ್ವಿಪ್ । ಕೃದುತ್ತರಪದಸ್ವರಃ । ದ್ವಿತಾ । ದ್ವಿಶಬ್ದಾತ್ಸಂಖ್ಯಾಯಾ ವಿಧಾರ್ಥೇ ಧೇತಿ ಧಾಪ್ರತ್ಯಯಃ । ಧಕಾರಸ್ಯ ತಕಾರಶ್ಛಾಂದಸಃ । ಪ್ರತ್ಯಯಸ್ವರಃ । ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಆತಾಃ । ಅತ ಸಾತತ್ಯಗಮನ ಇತ್ಯಸ್ಮಾತ್ಕರ್ಮಣಿ ಘುಞ್ । ವ್ಯತ್ಯಯೇನಾದ್ಯುದಾತ್ತಃ ।

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ತ್ವಾ—ನಿನ್ನನ್ನು । ಬೃಹಂತಃ—ಮಹದಾಕಾರವುಳ್ಳವೂ । ಯುಜಾನಾಃ—ರಥಕ್ಕೆ ಸೇರಿಸಲ್ಪಟ್ಟಿರುವುವೂ ಆದ । ಹರಯಃ—ಅಶ್ವಗಳು । ಸಧಮಾದಃ—ಒಟ್ಟಿಗೆ ಸೇರಿಕೊಂಡು ಹರ್ಷಪಡುತ್ತಾ । ಅರ್ವಾಕ್—ನಮ್ಮ ಅಭಿಮುಖವಾಗಿ । ಆ ವಹಂತು—ಕರೆತರಲಿ । ವೃಷಭಸ್ಯ—ಕಾಮವರ್ಷಕನಾದ ಇಂದ್ರನ । ಮೂರಾಃ—(ಶತ್ರುಗಳನ್ನು) ನಾಶಮಾಡತಕ್ಕವೂ । ಸುಸಂಮೃಷ್ಟಾಸಃ—(ಆದರದಿಂದ) ಪೃಷ್ಠಭಾಗದಲ್ಲಿ ತಟ್ಟಲ್ಪಟ್ಟವೂ ಆಗಿ । ದಿವಃ—ಅಂತರಿಕ್ಷದಿಂದ । ಯೇ—ಯಾವ ಅದೇ ಅಶ್ವಗಳು । ಆತಾಃ—ಸಕಲ ದಿಕ್ಕುಗಳಲ್ಲಿಯೂ । ದ್ವಿತಾ—ದ್ವಿಗುಣಿತವಾಗಿ । ಪ್ರ ಋಂಜಂತಿ—(ಅಧಿಕವಾಗಿ) ಶೋಭಿಸುತ್ತವೆ ।

ಭಾವಾರ್ಥ

ಎಲೈ ಇಂದ್ರನೇ, ಮಹದಾಕಾರವುಳ್ಳವೂ, ರಥಕ್ಕೆ ಸೇರಿಸಲ್ಪಟ್ಟಿರುವುವೂ ಆದ ಅಶ್ವಗಳು ಒಟ್ಟಿಗೆ ಸೇರಿಕೊಂಡು ಹರ್ಷಪಡುತ್ತಾ ನಿನ್ನನ್ನು ನಮ್ಮ ಅಭಿಮುಖವಾಗಿ ಕರೆತರಲಿ. ಕಾಮವರ್ಷಕನಾದ ಇಂದ್ರನ ಶತ್ರುನಾಶಕವೂ, ಪೃಷ್ಠಭಾಗದಲ್ಲಿ ತಟ್ಟಲ್ಪಟ್ಟವೂ ಆದ ಅದೇ ಅಶ್ವಗಳು ಸಕಲ ದಿಕ್ಕುಗಳಲ್ಲಿಯೂ ಸಹ ದ್ವಿಗುಣಿತವಾಗಿ ಶೋಭಿಸುತ್ತವೆ.

CC-0. Jangamwadi Math Collection. Digitized by eGangotri

## English Translation

May your mighty horses, Indra, harnessed (in your car), and alike exhilarated (by the beverage) bring you to our presence, for they are the destroyers (of the foes) of the showerer (of benefits), and kindly rubbed by his hand they traverse, going quickly, the regions of the sky, making them as it were twofold.

### ವಿಶೇಷವಿಷಯಗಳು

ಮೂರಾಃ—ಮೂರ ಶಬ್ದಕ್ಕೆ ಸಾಧಾರಣವಾಗಿ **ಮೂಢ** ಎಂಬರ್ಥವೇ ಪ್ರಸಿದ್ಧವಾಗಿದೆ. ಅಜ್ಞಾನಿ ಯೆಂದರ್ಥ. **ಮೂರ**ನೆಂದರೆ ಅಜ್ಞಾನಿಯೆಂದೂ, **ಅಮೂರ**ನೆಂದರೆ **ಜ್ಞಾ**ನಿಯೆಂದೂ ರೂಢಿಯಲ್ಲಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಈ ಪದಕ್ಕೆ ನಾಶಕವಾದ ಶಕ್ತಿಯೆಂದರ್ಥಮಾಡಿದ್ದಾರೆ. Monier Wiliam ಎಂಬ ಪಂಡಿತನು ಈ ಪದದ ಅರ್ಥವನ್ನು ವಿವರಿಸುವಾಗ ಪ್ರಕೃತವಾದ ಋಕ್ಕನ್ನೇ ಉದಾಹರಿಸಿ ತನ್ನ ಕೋಶದಲ್ಲಿ, Rushing, impetuous, ಎಂದರ್ಥಮಾಡಿದ್ದಾನೆ. ಮತ್ತು ಮಾರಕ ಎಂದು ಸಾಯಣರ ಅಭಿಪ್ರಾಯ ವನ್ನೂ ತಿಳಿಸಿದ್ದಾನೆ. ಇದಲ್ಲದೇ, ಸ್ಥಿರವಾಗಿಯೂ ಭದ್ರವಾಗಿಯೂ ಪ್ರತಿಷ್ಠಿತವಾದುದ್ದು ಎಂದು ಸಹ ಅರ್ಥ ವಾಗುತ್ತದೆ. ಮೂಲ, ಬುಡ ಎಂಬರ್ಥದಲ್ಲೂ ಸಹ ಈ ಪದವ ಪ್ರಯೋಗವಿದೆ. (ಅ. ವೇ. ೧-೨೮-೩).

ಆತಾಃ—ಪಕ್ಷ್ಯಾದಿಗಳು ಇತಸ್ತತಃ ಸಂಚಾರಮಾಡತಕ್ಕ ಸಾಧನವಾದುದರಿಂದ ದಿಕ್ಕಿನ ಪಾರ್ಶ್ವಕ್ಕೆ ಆತಾ ಎಂಬ ಪರ್ಯಾಯಪದವಿದೆ. ಕವಾಟದ್ವಾರವೆಂದೂ ಅನೇಕ ಕಡೆಗಳಲ್ಲಿ ಅರ್ಥವಾಗುತ್ತದೆ.

---

### ಸಂಹಿತಾಪಾಠಃ

ಇಂದ್ರ ಪಿಬ ವೃಷಧೂತಸ್ಯ ವೃಷ್ಣ ಆ ಯಂ ತೇ ಶ್ಯೇನ ಉಶತೇ ಜಭಾರ ।
ಯಸ್ಯ ಮದೇ ಚ್ಯಾವಯಸಿ ಪ್ರ ಕೃಷ್ಟೀರ್ಯಸ್ಯ ಮದೇ ಅಪ ಗೋತ್ರಾ ವವರ್ಥ ॥ ೭ ॥

### ಪದಪಾಠಃ

ಇಂದ್ರ । ಪಿಬ । ವೃಷಽಧೂತಸ್ಯ । ವೃಷ್ಣಃ । ಆ । ಯಂ । ತೇ । ಶ್ಯೇನಃ । ಉಶತೇ । ಜಭಾರ ।
ಯಸ್ಯ । ಮದೇ । ಚ್ಯವಯಸಿ । ಪ್ರ । ಕೃಷ್ಟೀಃ । ಯಸ್ಯ । ಮದೇ । ಅಪ । ಗೋತ್ರಾ । ವವರ್ಥ ॥ ೭ ॥

### ಸಾಯಣಭಾಷ್ಯಂ

ಹೇ ಇಂದ್ರ ವೃಷಧೂತಸ್ಯ ಗ್ರಾವಭಿರಭಿಷುತಂ ವೃಷ್ಣೋಽಭಿಮತಫಲಸೇಚಕಂ ಸೋಮಂ ಪಿಬ । ಶ್ಯೇನಃ ಶಂಸನೀಯಗತಿಶ್ಛಂದೋರೂಪಃ ಸುಪರ್ಣ ಉಶತೇ ಸೋಮಂ ಕಾಮಯಮಾನಾಯ

CC-0. Jangamwadi Math Collection. Digitized by eGangotri

ತೇ ತುಭ್ಯಂ ಯಂ ಸೋಮಮಾ ಜಭಾರ । ಆಜಹಾರ । ಯಸ್ಯ ಸೋಮಸ್ಯ ಮದೇ ಹರ್ಷೇ ಸಂಜಾತೇ ಸತಿ ಕೃಷ್ಟೀಃ । ಆಕರ್ಷಂತಿ ವಶೀಕುರ್ವಂತಿ ಕರ್ಮಣಾ ಸರ್ವಾನಿತಿ ಕೃಷ್ಟಯೋ ಮನುಷ್ಯಾಃ । ತಾನ್ ಸಪತ್ನಭೂತಾನ್ಮನುಷ್ಯಾನ್ ಪ್ರ ಚ್ಯಾವಯಸಿ । ಪ್ರಕರ್ಷೇಣ ಪಾತಯಸಿ । ಯಸ್ಯ ಸೋಮಸ್ಯ ಮದೇ ಸಂಜಾತೇ ಸತಿ ಗೋತ್ರಾ । ಗಾಮುದಕಂ ರಶ್ಮಿಭಿರಾವೃತಂ ವರ್ಷಾಸ್ವ್ಯಷುಷು ತ್ರಾಯಂತೇ ಪಾಲಯಂತೀತಿ ಗೋತ್ರಾ ಮೇಘಾಃ । ತಾನಪ ವವರ್ಥ । ಅಪವೃಣೋಷಿ ॥ ವೃಷಧೂತಸ್ಯ । ಧೂಞ್ ಕಂಪನ ಇತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್‌ಪ್ರತಿಷೇಧಃ । ತೃತೀಯಾ ಕರ್ಮಣೀತಿ ಪೂರ್ವಪದಸ್ವರಃ । ಶ್ಯೇನಃ । ಶ್ಯೇಙ್ ಗತೌ । ಶ್ಯಾಸ್ತ್ಯಾಹೃಞವಿಭ್ಯ ಇನಚ್ । ಉ ೨-೪೬. । ಇತೀನಚ್‌ಪ್ರತ್ಯಯಃ । ಶ್ಯಾಯತ ಇತಿ ಶ್ಯೇನಃ । ಚಿತ್ತ್ವಾದಂತೋದಾತ್ತಃ । ಜಭಾರ । ಹರತೇರ್ಲಿಟಿ ಣಲಿ ರೂಪಂ । ಹೃಗ್ರಹೋರ್ಭಶ್ಛಂದಸೀತಿ ಭಕಾರಃ । ಯದ್ವೃತ್ತಯೋಗಾದನಿಘಾತಃ । ಲಿತ್ಸ್ವರಃ । ಮದೇ । ಮದೀ ಹರ್ಷೇ । ಮದೋಽನುಪಸರ್ಗ ಇತ್ಯಪ್ಪ್ರತ್ಯಯಃ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಗೋತ್ರಾ । ತ್ರೈಙ್ ಪಾಲನ ಇತ್ಯಸ್ಯಾತೋಽನುಪಸರ್ಗೇ ಕ ಇತಿ ಕಃ । ಸುಪೋ ಡಾದೇಶಃ । ಏಕಾದೇಶಸ್ವರಃ । ವವರ್ಥ । ವೃಞ್ ವರಣ ಇತ್ಯಸ್ಯ ಲಿಟಿ ಥಲ್ಯೃಸೋ ಭಾರದ್ವಾಜಸ್ಯೇತೀಟ್‌ಪ್ರತಿಷೇಧಃ । ಗುಣಃ ಲಿತ್ಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಯಂ—ಯಾವ ಸೋಮವನ್ನು । ಶ್ಯೇನಃ—ಛಂದೋರೂಪಿಯಾದ ಶ್ಯೇನ ಪಕ್ಷಿಯು । ಉಶತೇ—ಅದನ್ನು ಅಪೇಕ್ಷಿಸಿದ । ತೇ—ನಿನಗಾಗಿ । ಆ ಜಭಾರ—ತಂದಿತೋ (ಮತ್ತು) । ಯಸ್ಯ—ಯಾವ ಸೋಮರಸದ ಪಾನದಿಂದ । ಮದೇ—ಹರ್ಷಿತನಾಗಿ । ಕೃಷ್ಟೀಃ—(ಶತ್ರುರೂಪರಾದ) ಮಾನವರನ್ನು । ಪ್ರಚ್ಯಾವಯಸಿ—ಸದೆಬಡಿದು ತಳ್ಳುತ್ತೀಯೋ (ಅಲ್ಲದೇ) । ಯಸ್ಯ—ಯಾವ ಸೋಮರಸಪಾನದಿಂದ । ಮದೇ—ಹರ್ಷಿತನಾಗಿ । ಗೋತ್ರಾ—ಮೇಘಗಳನ್ನು । ಅಪ ವವರ್ಥ—ಸೀಳುತ್ತಿಯೋ ಅಂತಹ । ವೃಷಧೂತಸ್ಯ—ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟುದೂ । ವೃಷ್ಣಃ—ಕಾಮಪ್ರದವಾದುದೂ ಆದ ಸೋಮವನ್ನು । ಪಿಬ - ಪಾನಮಾಡು.

ಭಾವಾರ್ಥ

ಎಲೈ ಇಂದ್ರನೇ, ಯಾವ ಸೋಮವನ್ನು ಛಂದೋರೂಪಿಯಾದ ಶ್ಯೇನಪಕ್ಷಿಯು ಅದನ್ನು ಅಪೇಕ್ಷಿಸಿದ ನಿನಗಾಗಿ ತಂದಿತೋ, ಯಾವ ರಸದ ಪಾನದಿಂದ ಹೃಷ್ಟನಾಗಿ ಶತ್ರುಗಳನ್ನು ಸದೆಬಡಿಯುತ್ತೀಯೋ, ಮತ್ತು ಯಾವ ಸೋಮಪಾನದಿಂದ ಹರ್ಷಿತನಾಗಿ ಮೇಘಗಳನ್ನು ವೃಷ್ಟ್ಯರ್ಥವಾಗಿ ಸೀಳುತ್ತೀಯೋ ಅಂತಹ ಅಭಿಷುತವಾದುದೂ ಕಾಮಪ್ರದವಾದುದೂ ಆದ ಸೋಮರಸವನ್ನು ಪಾನಮಾಡು.

English Translation

Drink, Indra, of the bountiful (libation) expressed by the beneficent (stones); that which the falcon has borne to you desiring it, in whose exhilaration you cast down (opposing) men, in whose exhilaration you have set open the clouds.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಶ್ಯೇನಃ—ಗಾಯತ್ರ್ಯಾತ್ಮಕವಾದ ಶ್ಯೇನಪಕ್ಷಿಯು ಸೋಮವನ್ನು ತಂದ ಸನ್ನಿವೇಶವನ್ನು ಹಿಂದೆ ತಿಳಿಸಿದೆ. ಮತ್ತು ಮುಂದೆ ಗಾಯತ್ರಿಯ ಮಹತ್ತ್ವವನ್ನು ವಿವರಿಸುವಾಗ ತಿಳಿಸಲಾಗುತ್ತದೆ.

ಕೃಷ್ಟೀಃ—ಕೃಷ್ಟಿ, ಚರ್ಷಣಿ. ಎಂಬ ಪದಗಳ ವಿಶೇಷಾರ್ಥಗಳನ್ನು ಹಿಂದೆ ವಿವರಿಸಿದೆ. ಪಂಚಕೃಷ್ಟಯಃ, ಪಂಚಜನಾಃ ಎಂಬ ತಾದಾತ್ಮ್ಯಬೋಧಕಗಳಾದ ಪದಗಳ ಪ್ರಯೋಗಗಳನ್ನೂ ವಿವರಿಸಿದೆ.

ಗೋತ್ರಾ--ಗೋತ್ರ ಪದಕ್ಕೆ ಸಾಧಾರಣವಾಗಿ ಗೋವನ್ನು ರಕ್ಷಿಸತಕ್ಕ ಕೊಟ್ಟಿಗೆಯೆಂದರ್ಥವು ಪ್ರಸಿದ್ಧ ವಾಗಿದೆ. ನಿರುಕ್ತದಲ್ಲೂ ಇದೇ ಅರ್ಥವು ಸೂಚಿತವಾಗಿದೆ. (೧-೨೧) ಪ್ರಕೃತವಾದ ಋಕ್ಕಿನಲ್ಲಿ ಗೋತ್ರ ಪದಕ್ಕೆ ಮೇಘವೆಂದರ್ಥಮಾಡಿದೆ ಗೋ ಶಬ್ದವು ಉದಕಕ್ಕೆ ಪರ್ಯಾಯವಾದ ಪದವಾಗಿರುವುದರಿಂದಲೂ, ಉದಕವನ್ನು ಮೇಘವು ತಡೆದು ರಕ್ಷಿಸುವುದರಿಂದಲೂ ಸಹ ಗೋತ್ರವೆಂದರೆ ಮೇಘವೆಂದೂ ಅರ್ಥವಾಗುತ್ತದೆ. ಗೋತ್ರಭಿತ್ ಎಂದು ಇಂದ್ರನ ಪರಾಕ್ರಮವನ್ನು ವರ್ಣಿಸುವ ಕಾಲದಲ್ಲಿ ಈ ಪದದ ವಿಶೇಷಾರ್ಥವನ್ನು ವಿವರಿಸಲಾಗುತ್ತದೆ.

---

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ
ಧನಾನಾಂ ॥ ೮ ॥

ಪದಪಾಠಃ

ಶುನಂ । ಹುವೇಮ । ಮಘऽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃऽತಮಂ । ವಾಜऽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ऽಸು । ಘ್ನಂತಂ । ವೃತ್ರಾಣಿ । ಸಂऽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋऽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನ-ವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋऽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ

CC-0. Jangamwadi Math Collection. Digitized by eGangotri

**ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋ-ರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾ-ಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙಿ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾ-ದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧ್ವ್ಯಾಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾ-ಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥**

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । **ವಾಜಸಾತೌ**—ಅನ್ನಾರ್ಥವಾಗಿ ನಡೆಯತಕ್ಕ । **ಭರೇ**—ಯುದ್ಧದಲ್ಲಿ । **ಶುನಂ**—ಉತ್ಸಾಹದಿಂದ ವೃದ್ಧಿಯನ್ನು ಹೊಂದತಕ್ಕವನೂ ಅಥವಾ ಸುಖವನ್ನುಂಟುಮಾಡುವವನೂ । **ಮಘ-ವಾನಂ**—ಧನವಂತನೂ । **ಇಂದ್ರಂ**—ನಿರತಿಶಯವಾದ ಐಶ್ವರ್ಯಸಂಪನ್ನನೂ । **ನೃತಮಂ**—ನಾಯಕನಾದವನೂ ಆದ ನಿನ್ನನ್ನು । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ (ಹಾಗೆಯೇ) । **ಶೃಣ್ವಂತಂ**—(ನಮ್ಮ ಸ್ತುತಿಗಳನ್ನು) ಆಲಿಸಿಕೇಳುವವನೂ । **ಉಗ್ರಂ**—ಶತ್ರುಗಳಿಗೆ ಭಯಂಕರನಾದವನೂ । **ಸಮತ್ಸು**—ಯುದ್ಧಗಳಲ್ಲಿ । **ವೃತ್ರಾಣಿ**—ವೃತ್ರನೇಮೊದಲಾದ ಅಸುರರನ್ನು । **ಘ್ನಂತಂ**—ಹಿಂಸಿಸಿ ನಾಶಮಾಡುವವನೂ । **ಧನಾನಾಂ**—(ಶತ್ರುಗಳ) ಧನ ಗಳನ್ನು । **ಸಂಜಿತಂ**—(ನಮಗೆ) ಸೇರಿಸಿ ಕೊಡುವವನೂ ಆದ ನಿನ್ನನ್ನು । **ಊತಯೇ**—ರಕ್ಷಣಾರ್ಥವಾಗಿ । (**ಹವೇಮ**—ಪ್ರಾರ್ಥಿಸಿ ಕರೆಯುತ್ತೇವೆ) ।

ಭಾವಾರ್ಥ

ಎಲೈ ಇಂದ್ರನೇ, ಅನ್ನಾರ್ಥವಾಗಿ ನಡೆಯತಕ್ಕಯುದ್ಧದಲ್ಲಿ ಸುಖವನ್ನುಂಟುಮಾಡುವವನೂ, ಧನವಂತನೂ, ನಿರತಿಶಯವಾದ ಐಶ್ವರ್ಯಸಂಪನ್ನನೂ, ನೇತೃವಾದವನೂ ನಮ್ಮ ಸ್ತುತಿಗಳನ್ನು ಆಲಿಸಿಕೇಳುವವನೂ, ಶತ್ರುಗಳಿಗೆ ಭಯಂಕರನೂ, ಯುದ್ಧಗಳಲ್ಲಿ ವೃತ್ರನೇ ಮುಂತಾದ ಅಸುರರನ್ನು ಹಿಂಸಿಸಿ ನಾಶಮಾಡುವವನೂ, ಶತ್ರುಗಳ ಧನ ಗಳನ್ನು ನಮಗೆ ಸೇರಿಸಿ ಕೊಡುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.

ವಿಶೇಷವಿಷಯಗಳು

ಈ ಋಕ್ಕಿನ ವಿಶೇಷವಿಷಯಗಳನ್ನು ಹಿಂದೆಯೇ ವಿವರಿಸಿದೇವೆ.

CC-0. Jangamwadi Math Collection. Digitized by eGangotri

# ನಲವತ್ತನಾಲ್ಕನೆಯ ಸೂಕ್ತವು.

---

ಸಾಯಣಭಾಷ್ಯಂ

ಅಯಂ ತೇ ಅಸ್ತ್ವಿತಿ ಪಂಚರ್ಚಂ ಷಷ್ಠಂ ಸೂಕ್ತಂ ವೈಶ್ವಾಮಿತ್ರಂ ಬಾರ್ಹತಮೈಂದ್ರಂ । ಅತ್ರಾನುಕ್ರಮಣಿಕಾ । ಅಯಂ ತೇ ಪಂಚ ಬಾರ್ಹತಂ ತ್ವಿತಿ ॥ ಮಹಾವ್ರತೇ ಬಾರ್ಹತ್ಯಾಂ ತೃಚಾಶೀತಾವಿದಂ ಸೂಕ್ತಂ । ಐ. ಆ ೫-೨ ॥ ಷೋಡಶಿಶಸ್ತ್ರೇಽಯಂ ತೇ ಅಸ್ತು ಹರ್ಯತ ಇತ್ಯಾದ್ಯಸ್ತೃಚೋ ವಿನಿಯುಕ್ತಃ । ಸೂತ್ರಿತಂ ಚ । ಅಯಂ ತೇ ಅಸ್ತು ಹರ್ಯತ ಇತ್ಯೌಷ್ಣಿಹಬಾರ್ಹತಾ ತೃಚಾ । ಆ. ೬-೨ । ಇತಿ ॥

ಅನುವಾದವು—ಅಯಂ ತೇ ಅಸ್ತು ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು, ಇಂದ್ರನು ದೇವತೆಯು, ಬೃಹತೀ ಛಂದಸ್ಸು- ಅನುಕ್ರಮಣಿಕೆಯಲ್ಲಿ—ಅಯಂ ತೇ ಪಂಚ ಬಾರ್ಹತಂ ತು ಎಂದು ಹೇಳಿರುವುದು. ಮಹಾವ್ರತ ದಲ್ಲಿ ಬೃಹತೀ ಛಂದಸ್ಸಿನ ತೃಚ (ಮೂರು ಋಕ್ಕು) ಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಐತರೇಯಾರಣ್ಯಕದಲ್ಲಿಯೂ (ಐ. ಆ. ೫-೨) ಷೋಡಶಿಯೆಂಬ ಯಾಗದಲ್ಲಿ ಶಸ್ತ್ರಮಂತ್ರಪಠನಕಾಲದಲ್ಲಿ **ಅಯಂ ತೇ ಅಸ್ತು ಹರ್ಯತಃ** ಎಂಬ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಅಶ್ವಲಾಯನಶ್ರೌತ ಸೂತ್ರದ—ಅಯಂ ತೇ ಅಸ್ತು ಹರ್ಯತ ಇತ್ಯೌಷ್ಣಿಹಬಾರ್ಹತಾ ತೃಚಾ ಎಂಬ ಸೂತ್ರದಿಂದಲೂ ವಿವೃತವಾಗಿರುವುದು (ಆ. ೬-೨).

॥ ಓಂ ॥

## ಸೂಕ್ತ—೪೪

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೪ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ವಿಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ—ಬೃಹತೀ ॥

---

ಸಂಹಿತಾಪಾಠಃ

ಅಯಂ ತೇ ಅಸ್ತು ಹರ್ಯತಃ ಸೋಮ ಆ ಹರಿಭಿಃ ಸುತಃ ।

ಜುಷಾಣ ಇಂದ್ರ ಹರಿಭಿರ್ನ ಆ ಗಹ್ಯಾ ತಿಷ್ಠ ಹರಿತಂ ರಥಂ ॥ ೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಅಯಂ । ತೇ । ಅಸ್ತು । ಹರ್ಯತಃ । ಸೋಮಃ । ಆ । ಹರಿಽಭಿಃ । ಸುತಃ ।
ಜುಷಾಣಃ । ಇಂದ್ರ । ಹರಿಽಭಿಃ । ನಃ । ಆ । ಗಹಿ । ಆ । ತಿಷ್ಠ । ಹರಿತಂ । ರಥಂ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ಹರಿಭಿಃ । ಹರಂತಿ ಸೋಮರಸಾನೇಭಿರಿತಿ ಹರಯೋ ಗ್ರಾವಾಣಃ । ತೈರಾ ಸುತಃ ಸರ್ವತೋಽಭಿಷುತೋ ಹರ್ಯತಃ ಕಮನೀಯೋ ಜಷಾಣಃ ಪ್ರೀತಿವಿಷಯೋಽಯಂ ಸೋಮಸ್ತೇ ತುಭ್ಯಮಸ್ತು । ತ್ವಂ ಹರಿಭಿರಶ್ವೈರ್ಯುಕ್ತಂ ಹರಿತಂ ಹರಿದ್ವರ್ಣಂ ರಥಮಾ ತಿಷ್ಠ । ಅಧಿತಿಷ್ಠ । ತತೋ ನೋಽಸ್ಮಾನಭಿಲಕ್ಷ್ಯಾ ಗಹಿ । ಆಗಚ್ಛ ॥ ಹರ್ಯತಃ । ಹರ್ಯ ಗತಿಕಾಂತ್ಯೋರಿತ್ಯಸ್ಮಾದ್ಭೃಮೃದೃಶೀ-ತ್ಯಾದಿನಾತಚ್‌ಪ್ರತ್ಯಯಃ । ಚಿತ್ತ್ವಾದಂತೋದಾತ್ತಃ । ಹರಿತಂ । ಹೃಞ್ ಹರಣೇ । ಹೃಶ್ಯಾಭ್ಯಾಮಿತನ್ । ಉ. ೩-೯೩ । ಇತೀತನ್ಪ್ರತ್ಯಯಃ ! ನಿತ್ತ್ವಾದಾದ್ಯುದಾತ್ತಃ । ರಥಂ । ರಮು ಕ್ರೀಡಾಯಾಂ । ಹನಿ-ಕುಷಿನೀತ್ಯಾದಿನಾ ಕ್ಥನ್ಪ್ರತ್ಯಯಃ । ಕಿತ್ತ್ವದನುನಾಸಿಕಲೋಪಃ । ನಿತ್ಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ. । **ಹರಿಭಿಃ**—ಹಿಂಡುವ ಕಲ್ಲುಗಳಿಂದ । **ಆ ಸುತಃ**—ಪೂರ್ಣವಾಗಿ ಹಿಂಡಲ್ಪಟ್ಟುದೂ । **ಹರ್ಯತಃ**—ಆಕರ್ಷಕವಾದುದೂ । **ಜುಷಾಣಃ**—ಪ್ರೀತಿಪಾತ್ರವಾದುದೂ ಆದ। **ಅಯಂ ಸೋಮಃ**—ಈ ಸೋಮರಸವು । **ತೇ**—ನಿನ್ನನ್ನು ಉದ್ದೇಶಿಸಿ । **ಅಸ್ತು**—ಸಿದ್ಧವಾಗಿವೆ । **ಹರಿಭಿಃ**—ಅಶ್ವಗಳೊಡನೆ ಕೂಡಿದುದೂ । **ಹರಿತಂ**—ಪಚ್ಚೆ ವರ್ಣಯುಕ್ತವಾದುದೂ ಆದ । **ರಥಂ**—ರಥದಲ್ಲಿ । **ಆ ತಿಷ್ಠ**—ಏರಿ ಕುಳಿತುಕೊ । **ನಃ**—ನಮ್ಮ ಅಭಿಮುಖವಾಗಿ । **ಆ ಗಹಿ**—ದಯಮಾಡು.

ಭಾವಾರ್ಥ

ಎಲೈ ಇಂದ್ರನೇ, ಹಿಂಡುವ ಕಲ್ಲುಗಳಿಂದ ಪೂರ್ಣವಾಗಿ ಹಿಂಡಲ್ಪಟ್ಟುದೂ, ಆಕರ್ಷಕವಾದುದೂ ಪ್ರೀತಿಪಾತ್ರವಾದುದೂ ಆದ ಈ ಸೋಮರಸವು ನಿನ್ನನ್ನು ಉದ್ದೇಶಿಸಿ ಸಿದ್ಧವಾಗಿದೆ. ಅಶ್ವಗಳೊಡನೆ ಕೂಡಿದುದೂ ಪಚ್ಚೆವರ್ಣಯುಕ್ತವಾದುದೂ ಆದ ರಥದಲ್ಲಿ ಏರಿ ಕುಳಿತುಕೊ. ಮತ್ತು ನಮ್ಮ ಅಭಿಮುಖವಾಗಿ ದಯಮಾಡು.

English Translation

May this desirable and gratifying Soma expressed by the stones, be, Indra, for you : ascend the verdant chariot, and with your tawny (steeds) come to us.

—— :o: ——

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಹರ್ಯನ್ನುಷಸಮರ್ಚಯಃ ಸೂರ್ಯಂ ಹರ್ಯನ್ನರೋಚಯಃ ।
ವಿದ್ವಾಂಶ್ಚಿಕಿತ್ವಾನ್ಹರ್ಯಶ್ವ ವರ್ಧಸ ಇಂದ್ರ ವಿಶ್ವಾ ಅಭಿ ಶ್ರಿಯಃ ॥ ೨ ॥

ಪದಪಾಠಃ

ಹರ್ಯನ್ । ಉಷಸಂ । ಅರ್ಚಯಃ । ಸೂರ್ಯಂ । ಹರ್ಯನ್ । ಅರೋಚಯಃ ।
ವಿದ್ವಾನ್ । ಚಿಕಿತ್ವಾನ್ । ಹರಿ೨ಅಶ್ವ । ವರ್ಧಸೇ । ಇಂದ್ರ । ವಿಶ್ವಾಃ । ಅಭಿ । ಶ್ರಿಯಃ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ಹರ್ಯನ್ **ಸೋಮಂ ಕಾಮಯಮಾನಸ್ತ್ವಮುಷಸಮುಷಃಕಾಲಮರ್ಚಯಃ** । ಪೂಜಯಸಿ । ತಥಾ ಹರ್ಯನ್ನುದಿತೇ ಸೂರ್ಯೇ ಸೋಮಂ ಕಾಮಯಮಾನಸ್ತ್ವಂ ಸೂರ್ಯಮರೋಚಯಃ । ದೀಪಯಸಿ । ಹೇ ಹರ್ಯಶ್ವೇಂದ್ರ ವಿದ್ವಾನೇತತ್ಸರ್ವಂ ಜಾನಾನಶ್ಚಿಕಿತ್ವಾನಸ್ಮದಭಿಲಷಿತಫಲವಿಷಯಜ್ಞಾನವಾಂಸ್ತ್ವಂ ವಿಶ್ವಾಃ ಸರ್ವಾಃ ಶ್ರಿಯೋ ನಃ ಸಂಪದೋಽಭಿ ವರ್ಧಸೇ । ಅಭಿಮತಫಲಪ್ರದಾನೇನಾಭಿತೋ ವರ್ಧಯಸಿ ॥ ಚಿಕಿತ್ವಾನ್ । ಕಿತ ಜ್ಞಾನ ಇತ್ಯಸ್ಯ ಕ್ವಸೌ ರೂಪಂ । ಪ್ರತ್ಯಯಸ್ವರಃ । ವರ್ಧಸೇ । ವೃಧು ವರ್ಧನ ಇತ್ಯಸ್ಯಾಂತರ್ಭಾವಿತಣ್ಯರ್ಥಸ್ಯ ಲಟಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ ನೀನು। ಹರ್ಯನ್ ಸೋಮಪಾನವನ್ನಿಚ್ಛಿಸಿ । ಉಷಸಂ—ಉಷಃಕಾಲವನ್ನು। **ಅರ್ಚಯಃ**—ಪೂಜಿಸುತ್ತೀಯೆ । **ಹರ್ಯನ್**—(ಉದಯವಾದನಂತರ ಅರ್ಪಿತವಾಗುವ) ಸೋಮವನ್ನಿಚ್ಛಿಸಿ । **ಸೂರ್ಯಂ**—ಸೂರ್ಯನನ್ನು । **ಅರೋಚಯಃ**—ಪ್ರಕಾಶಿತನನ್ನಾಗಿ ಮಾಡುತ್ತೀಯೆ । **ಹರ್ಯಶ್ವ**—ಹರಿನಾಮಕವಾದ ಅಶ್ವಗಳುಳ್ಳ ಎಲೈಇಂದ್ರನೇ । **ವಿದ್ವಾನ್**—ಸಕಲವನ್ನೂ ತಿಳಿದವನಾಗಿಯೂ। **ಚಿಕಿತ್ವಾನ್**—ನಮ್ಮ ಇಷ್ಟಾರ್ಥಗಳನ್ನು ತಿಳಿದುಕೊಂಡವನಾಗಿಯೂ ಆದ ನೀನು । **ವಿಶ್ವಾಃ ಶ್ರಿಯಃ**—ಸಮಸ್ತವಾದ ಸಂಪತ್ತುಗಳನ್ನೂ । **ಅಭಿ ವರ್ಧಸೇ**—ನಮ್ಮಲ್ಲಿ ವೃದ್ಧಿಯಾಗುವಂತೆ ಮಾಡುತ್ತೀಯೆ.

ಭಾವಾರ್ಥ

ಎಲೈ ಇಂದ್ರನೇ, ನೀನು ಉದಯಕಾಲಕ್ಕೆ ಮುಂಚಿತವಾಗಿ ಅರ್ಪಿತವಾಗುವ ಸೋಮಪಾನವನ್ನಿಚ್ಛಿಸಿ ಉಷಃಕಾಲವನ್ನು ಪೂಜಿಸುತ್ತೀಯೆ. ಅನಂತರ ಅರ್ಪಿತವಾಗುವ ಸೋಮವನ್ನಿಚ್ಛಿಸಿ ಸೂರ್ಯನನ್ನು ಪ್ರಕಾಶಿತನನ್ನಾಗಿ ಮಾಡುತ್ತೀಯೆ. ಹರಿನಾಮಕವಾದ ಅಶ್ವಗಳುಳ್ಳ ಇಂದ್ರನೇ, ನೀನು ಸರ್ವಜ್ಞನಾಗಿಯೂ, ನಮ್ಮ ಇಷ್ಟಾರ್ಥಗಳನ್ನು ತಿಳಿದವನಾಗಿಯೂ ಇದ್ದು ನಮ್ಮಲ್ಲಿ ಸಮಸ್ತವಾದ ಸಂಪತ್ತುಗಳೂ ವೃದ್ಧಿಯಾಗುವಂತೆ ಮಾಡುತ್ತೀಯೆ.

## English Translation

Desiring (the Soma), you honour the dawn ; desiring the Soma, you have lighted up the sun ; knowing and discriminating (all our wishes), lord of the tawny steeds, you augment upon us all (sorts of) prosperity.



CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

"**ಉತ್ಸೀದೇಯುರಿಮೇ ಲೋಕಾಃ ನ ಕುರ್ಯಾಂ ಕರ್ಮ ಚೇದಹಂ**" ನಾನು ಕರ್ಮಾಚರಣೆಯನ್ನು ನೆರವೇರಿಸದಿದ್ದರೆ ಲೋಕವೆಲ್ಲವೂ ಕ್ಷಯವನ್ನು ಹೊಂದುತ್ತದೆ ಎಂದು ಪರಮಪುರುಷನ ವಾಕ್ಯವಿರುವಂತೆ ವಿಶ್ವಪ್ರಭು ವಾದ ಇಂದ್ರನು ಲೋಕವ್ಯವಹಾರಕ್ಕೆ ಉಪಯುಕ್ತವಾದ ಕರ್ಮಾಚರಣೆಯಲ್ಲಿ ಯಾವಾಗಲೂ ನಿರತನಾಗಿಲ್ಲದಿದ್ದರೆ ಲೋಕಕ್ಷಯವು ಸಿದ್ಧ. ಉಷಸ್ಸಿನ ಆವಿರ್ಭಾವಕ್ಕೂ ಮತ್ತು ಸೂರ್ಯನ ಉದಯಕ್ಕೂ ಅವನೇ ಕಾರಣನಾಗಿದ್ದಾನೆ. "**ಸ್ವರಾಜಃ, ಮಹತಃ, ತೇ**'' ಎಂದು ವರ್ಣಿತವಾಗಿರುವಂತೆ( ಋ. ಸಂ. ೩-೪೬-೧) ಅವನೇ ಸಕಲ ವಿಶ್ವಕ್ಕೂ ಪ್ರಭು ವಾಗಿ ಸ್ವಾರಾಜ್ಯಪದವಿಯನ್ನು ಹೊಂದಿದ್ದಾನೆ. ಆದರೂ ಸಹ ಯಜ್ಞಾಚರಣೆಯು ಲೋಕಪೋಷಕವಾಗಿರುವುದ ರಿಂದಲೂ, ದೇವಮಾನವಾದಿ ಸಮಸ್ತಲೋಕದ ಸಂಪದ್ವೃದ್ಧಿಗೂ ಕಾರಣವಾಗಿರುವುದರಿಂದಲೂ ಆ ಯಜ್ಞಕ್ಕೆ ಮೂಲ ಹೇತುಗಳಾದ ಉಷಸ್ಸನ್ನೂ, ಸೂರ್ಯನನ್ನೂ, ಇಂದ್ರನು ಪೂಜಿಸಿದನು ಎಂದಿದೆ. ತಾನೇ ಪ್ರಭುವಾದರೂ ಸಹ ಲೋಕ ಪೋಷಕವಾದ ತನ್ನ ಸೃಷ್ಟಿಯನ್ನೇ ತಾನು ಆರಾಧಿಸಿದನು ಎಂಬುದೇ ಪ್ರಕೃತವಾದ ಋಕ್ಕಿನ ತಾತ್ಪರ್ಯವಾಗಿದೆ. **ವಿದ್ವಾನ್, ಚಿಕಿತ್ವಾನ್** ಎಂಬ ಎರಡು ವಿಶೇಷಣಗಳೂ ಸಹ ಇಲ್ಲಿ ಗಮನಾರ್ಹವಾಗಿವೆ. ಇಂದ್ರನು ಸರ್ವಜ್ಞನು ಮತ್ತು ಯಜ್ಞಕರ್ತನ ಆಶಯವನ್ನು ತಿಳಿದವನು. ಆದುದರಿಂದಲೇ ದೇವಮಾನವರ ಪರಸ್ಪರ ವ್ಯವಹಾರಗಳಿಗೆ ಅನು ಕೂಲಿಸುವಂತೆ ಉಷಸ್ಸಿನ ಆವಿರ್ಭಾವಕ್ಕೆ ಕಾರಣನಾಗಿ ಆ ಮಹತ್ಸ್ವರೂಪವುಳ್ಳ ಉಷಸ್ಸನ್ನು ಆರಾಧಿಸಿದನು. ಈ ಸೂಕ್ತದಲ್ಲಿ ಮೊದಲಿನಿಂದ ಕೊನೆಯವರೆಗೂ ಆಧ್ಯಾತ್ಮಿಕತತ್ತ್ವವು ಅಡಗಿದೆ. ಹರ್ಯಶ್ವ ಎಂಬ ವಿಶೇಷಣವೂ, **ಸೂರ್ಯಂ ಅರೋಚಯಃ, ಉಷಸಂ ಅರ್ಚಯಃ** ಇತ್ಯಾದಿ ವರ್ಣನೆಗಳೂ ಈ ಗೂಢಾರ್ಥವನ್ನು ಸೂಚಿಸುತ್ತವೆ. ಇವುಗಳ ವಿವರಣೆಯು ಅತ್ಯವಶ್ಯವಾಗಿದ್ದರೂ ಸಹ ಇಲ್ಲಿ ಸ್ಥಳಸಂಕೋಚವಿರುವುದರಿಂದ ವಿಸ್ತೃತವಾಗಿ ವಿವರಿಸಲು ಅವಕಾಶವಿಲ್ಲ. ಮುಂದೆ ಯಥಾಸಂದರ್ಭವಾಗಿ ವಿವರಿಸಲಾಗುವುದು.

---

ಸಂಹಿತಾಪಾಠಃ

ದ್ಯಾಮಿಂದ್ರೋ ಹರಿಧಾಯಸಂ ಪೃಥಿವೀಂ ಹರಿವರ್ಪಸಂ ।

ಅಧಾರಯದ್ಧರಿತೋರ್ಭೂರಿ ಭೋಜನಂ ಯಯೋರಂತರ್ಹರಿಶ್ಚರತ್ ॥೩॥

ಪದಪಾಠಃ

ದ್ಯಾಂ । ಇಂದ್ರಃ । ಹರಿऽಧಾಯಸಂ । ಪೃಥಿವೀಂ । ಹರಿऽವರ್ಪಸಂ ।

ಅಧಾರಯತ್ । ಹರಿತೋಃ । ಭೂರಿ । ಭೋಜನಂ । ಯಯೋಃ । ಅಂತಃ । ಹರಿಃ । ಚರತ್ ॥ ೩ ॥

ಸಾಯಣಭಾಷ್ಯಂ

ಸೋऽಯಮಿಂದ್ರೋ ಹರಿಧಾಯಸಂ । ಹರಿತೋ ಹರಿತವರ್ಣಾ ಧಾಯಸೋ ಧಾರಕಾ ರಶ್ಮಯೋ ಯಸ್ಯಾಃ ಸಾ । ತಾಂ ದ್ಯಾಮಧಾರಯತ್ । ತಥಾ ಹರಿವರ್ಪಸಮೋಷಧೀಭಿರ್ಹರಿತವರ್ಣಾಂ

CC-0. Jangamwadi Math Collection. Digitized by eGangotri

ಪೃಥಿವೀಮುಧಾರಯತ್ । ಹರಿತೋರ್ಹರಿದ್ವರ್ಣಯೋರ್ಯಯೋರ್ದ್ಯಾವಾಪೃಥಿವ್ಯೋರ್ಮಧ್ಯೇ ಸ್ವಕೀ-ಯಯೋರಶ್ವಯೋರ್ಭೂರಿ ಪ್ರಭೂತಂ ಭೋಜನಂ । ಭುಜ್ಯತ ಇತಿ ಭೋಜನಂ ಯವಸಾದಿ । ಅಭ್ಯತೇ । ಯಯೋಶ್ಚ ದ್ಯಾವಾಪೃಥಿವ್ಯೋರಂತರ್ಮಧ್ಯೇ ಹರಿರಿಂದ್ರಶ್ಚರತ್ । ಚರತಿ । ತೇ ದ್ಯಾವಾಪೃಥಿವ್ಯಾ-ವಿಂದ್ರೋಽಧಾರಯದಿತ್ಯರ್ಥಃ ॥ ಹರಿಧಾಯಸಂ । ಡುಧಾಞ್ ಧಾರಣಪೋಷಣಯೋರಿತ್ಯಸ್ಮಾದ್ವಹಿ-ಹಾಧಾಞ್ಭ್ಯಶ್ಛಂದಸೀತ್ಯಸುನ್ । ಣಿದಿತ್ಯನುವೃತ್ತೇರಾತೋ ಯುಕ್ । ಬಹುವ್ರೀಹೌ ಪೂರ್ವಪದಸ್ವರಃ । ಪೃಥಿವೀಂ । ಪ್ರಥೇಃ ಷಿವನ್ ಸಂಪ್ರಸಾರಣಂ ಚೇತಿ ಷಿವನ್ಪ್ರತ್ಯಯಃ । ಷಿದ್ಗೌರಾದಿಭ್ಯಶ್ಚೇತಿ ಙೀಷ್ । ಪ್ರತ್ಯಯಸ್ವರೇಣಾಂತೋದಾತ್ತಃ । ಹರಿವರ್ಪಸಂ । ವೃಜ್ ಸಂಭಕ್ತೌ । ವೃಙ್ಶೀಙ್ಭ್ಯಾಂ ರೂಪಸ್ವಾಂಗ-ಯೋರಿತ್ಯಸುನ್ಪ್ರತ್ಯಯಃ। ಪುಗಾಗಮಶ್ಚ। ಸಂಭಜ್ಯತೇ ತದಿತಿ ವರ್ಪೋ ರೂಪಂ। ಬಹುವ್ರೀಹೌ ಪೂರ್ವ-ಪದಸ್ವರಃ । ಹರಿತೋಃ । ಹೃಞ್ ಹರಣ ಇತ್ಯಸ್ಮಾತ್ ಹೃಸೃರುಹಿ ಯುಷಿಭ್ಯ ಇತಿಃ । ಉ. ೧-೯೯ । ಇತೀತಿಪ್ರತ್ಯಯಃ । ಪ್ರತ್ಯಯಸ್ವರಃ । ಭೋಜನಂ । ಭುಜ ಪಾಲನಾಭ್ಯವಹಾರಯೋರಿತ್ಯಸ್ಮಾತ್ಕೃತ್ಯ-ಲ್ಯುಟೋ ಬಹುಲಮಿತಿ ಕರ್ಮಣಿ ಲ್ಯುಟ್ । ಲಿತ್ಸ್ವರಃ । ಅಂತಃ । ಸ್ವರಾದಿಷ್ವಂತೋದಾತ್ತತ್ವೇನ ಪಠಿತ-ತ್ವಾದಂತೋದಾತ್ತಃ । ಚರತ್ । ಚರತಿರ್ಗತ್ಯರ್ಥಃ । ಲೇಟಿ ರೂಪಂ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

**ಯಯೋಃ**— ಯಾವ ದ್ಯಾವಾಪೃಥಿವಿಗಳ । **ಅಂತಃ**— ನಡುವೆಯೆಲ್ಲಾ । **ಹರಿಃ**— ಇಂದ್ರನು। **ಹರಿತೋಃ**- ಹರಿದ್ವರ್ಣಾತ್ಮಕಗಳಾದ ತನ್ನ ಅಶ್ವಗಳಿಗೆ । **ಭೂರಿ**— ಪ್ರಭೂತವಾದ । **ಭೋಜನಂ**— ಯವಸಾದಿ ಭೋಜನವನ್ನು ನಿರ್ಮಿಸಿದ್ದಾನೋ (ಮತ್ತು) । **ಯಯೋಃ ಅಂತಃ**— ಯಾವ ದ್ಯಾವಾಪೃಥಿವಿಗಳ ನಡುವೆಯೆಲ್ಲಾ । **ಚರತ್**— ಸಂಚರಿಸುತ್ತಾನೆಯೋ ಅಂತಹ । **ಹರಿಧಾಯಸಂ**— ಹೊಂಬಣ್ಣದ ರಶ್ಮಿಗಳಿಂದ ಕೂಡಿದ । **ದ್ಯಾಂ**— ದ್ಯುಲೋಕ ವನ್ನೂ । **ಹರಿವರ್ಪಸಂ**— ಪೈರುಪಚ್ಚೆಗಳಿಂದ ಅಲಂಕೃತವಾದ । **ಪೃಥಿವೀಂ**— ಪೃಥಿವಿಯನ್ನೂ । **ಅಧಾರಯತ್**- ಎತ್ತಿ ಹಿಡಿದಿದ್ದಾನೆ. (ಸ್ಥಾಪಿಸಿದಾನೆ.)

ಭಾವಾರ್ಥ

ಯಾವ ದ್ಯಾವಾಪೃಥಿವಿಗಳ ನಡುವೆಯಲ್ಲಿ ಇಂದ್ರನು ತನ್ನ ಹರಿದ್ವರ್ಣಾತ್ಮಕಗಳಾದ ಅಶ್ವಗಳಿಗೆ ಪ್ರಭೂತ ವಾಗಿ ಯವಸಾದಿ ಭೋಜನವನ್ನು ನಿರ್ಮಿಸಿದ್ದಾನೆಯೋ, ಯಾವ ದ್ಯಾವಾಪೃಥಿವಿಗಳ ನಡುವೆಯೆಲ್ಲಾ ಇವನು ಸಂಚರಿಸುತ್ತಾನೆಯೋ ಅಂತಹ ಹೊಂಬಣ್ಣದ ರಶ್ಮಿಗಳಿಂದ ಕೂಡಿದ ದ್ಯುಲೋಕವನ್ನೂ ಪೈರುಪಚ್ಚೆಗಳಿಂದ ಅಲಂಕೃತ ವಾದ ಪೃಥಿವಿಯನ್ನೂ ಅವನು ಎತ್ತಿ ಹಿಡಿದಿದ್ದಾನೆ. (ಸೃಷ್ಟಿಸಿದಾನೆ).

English Translation

Indra has upheld the yellow-rayed heaven, the verdant tinted earth; there is abundant pasture (for his steeds) in the two azure spheres of heaven and earth, between which Hari travels.

ವಿಶೇಷವಿಷಯಗಳು

ದ್ಯಾವಾಪೃಥಿವಿಗಳ ಪರಸ್ಪರ ಸಂಪದ್ವೃದ್ಧಿಗೆ ಇಂದ್ರನು ಕಾರಣನಾಗಿದ್ದಾನೆ. ಎಂದು ಇಂದ್ರನ ಮಹತ್ತ್ವವು ವರ್ಣಿತವಾಗಿದೆ. **ಹರಿಧಾಯಸಂ ದ್ಯಾಂ ಹರಿವರ್ಪಸಂ ಪೃಥಿವೀಂ** ಎಂಬ ವರ್ಣನವು ಕಾವ್ಯಾತ್ಮಕ

CC-0. Jangamwadi Math Collection. Digitized by eGangotri

ವಾದ ಸೌಂದರ್ಯತತ್ತ್ವವನ್ನು ವರ್ಣಿಸುತ್ತದೆ ಇದು ಕೇವಲ ಭೌತಿಕಸಂಪತ್ತಿನ ವರ್ಣನೆಯಲ್ಲ. ಹೊಂಬಣ್ಣದ ರಶ್ಮಿಗಳಿಂದ ಕೂಡಿದ ಅಂತರಿಕ್ಷವೂ, ಪೈರುಪಚ್ಚೆಗಳಿಂದ ತುಂಬಿದ ಪೃಥ್ವಿಯೂ ಸಹ ವಿಶ್ವಸೌಂದರ್ಯವನ್ನು ವರ್ಣಿಸಿ ಆ ವಿಶ್ವಸೌಂದರ್ಯಕ್ಕೆ ಮೂಲಹೇತುವಾದ ಇಂದ್ರನ ಮಹತ್ತ್ವವನ್ನು ತಿಳಿಸುತ್ತದೆ. ದ್ಯಾವಾಪೃಥಿವಿಗಳ ಉತ್ಪತ್ತಿಗೂ, ಸ್ಥಿತಿಗೂ, ವೃದ್ಧಿಗೂ ಇಂದ್ರನೇ ಕಾರಣನು.

**ಹರಿಧಾಯಸಂ** ಎಂಬುದಕ್ಕೆ ಹೊಂಬಣ್ಣದ ರಶ್ಮಿಗಳಿಂದ ಕೂಡಿದ ಎಂದು ತಾತ್ಪರ್ಯವಾದರೂ ಸಹ **ಧಾಯಸೇ, ಧಾಯಸಾ** ಎಂಬ ಪದಗಳ ಪ್ರಯೋಗವಿರುವಾಗೆಲ್ಲಾ (ಋ. ಸಂ. ೭-೫೫-೧) ಇದಕ್ಕೆ ಧಾರಕವಾದ ಎಂದು ವಿವರಣೆಯಿದೆ. ಆದಿತ್ಯನ ರಶ್ಮಿಗಳು ವಿಶ್ವಧಾರಕವಾಗಿವೆ. ಆದುದರಿಂದ ವಿಶ್ವಧಾರಕವಾದ ಆದಿತ್ಯರಶ್ಮಿಗಳು ಎಂದ ತಾತ್ಪರ್ಯ ಇಂತಹ ರಶ್ಮಿಯುಕ್ತವಾದ ದ್ಯುಲೋಕವೆಂದರ್ಥ. ಹರಿಶಬ್ದಕ್ಕೆ ಇಲ್ಲಿ ಹೊಂಬಣ್ಣವೆಂದರ್ಥ.

**ಹರಿವರ್ಪಸಂ** ಎಂಬ ವಿಶೇಷಣದಲ್ಲಿ ಹರಿಶಬ್ದಕ್ಕೆ ಪಚ್ಚೆಯೆಂದರ್ಥ. **ವರ್ಪಸ್** ಎಂಬುದಕ್ಕೆ ಕಾಂತಿಯುತವಾದ ರೂಪವೆಂದರ್ಥ. ಲೋಕಾಕರ್ಷಕವಾದ ಪೈರುಪಚ್ಚೆಗಳಿಂದ ಕೂಡಿರುವುದರಿಂದ ಪೃಥಿವಿಗೆ ಹರಿವರ್ಪಸಂ ಎಂಬ ವಿಶೇಷಣವಿದೆ. ಇಂತಹ ಲೋಕಪೋಷಕವೂ ಲೋಕಾಕರ್ಷಕವಾದ ಕಾಂತಿಯಿಂದ ಕೂಡಿದವೂ ಆದ ದ್ಯಾವಾಪೃಥಿವಿಗಳನ್ನು ಇಂದ್ರನು ಸ್ಥಾಪಿಸಿದ್ದಾನೆ.

ಸಂಹಿತಾಪಾಠಃ

ಜಜ್ಞಾನೋ ಹರಿತೋ ವೃಷಾ ವಿಶ್ವಮಾ ಭಾತಿ ರೋಚನಂ ।

ಹರ್ಯಶ್ವೋ ಹರಿತಂ ಧತ್ತ ಆಯುಧಮಾ ವಜ್ರಂ ಬಾಹ್ವೋರ್ಹರಿಂ ॥ ೪ ॥

ಪದಪಾಠಃ

ಜಜ್ಞಾನಃ । ಹರಿತಃ । ವೃಷಾ । ವಿಶ್ವಂ । ಆ । ಭಾತಿ । ರೋಚನಂ ।

ಹರಿಽಅಶ್ವಃ । ಹರಿತಂ । ಧತ್ತೇ । ಆಯುಧಂ । ಆ । ವಜ್ರಂ । ಬಾಹ್ವೋಃ । ಹರಿಂ ॥ ೪ ॥

ಸಾಯಣಭಾಷ್ಯಂ

ವೃಷಾ ಕಾಮಾನಾಂ ವರ್ಷಕೋ ಹರಿತೋ ಹರಿದ್ವರ್ಣೋಪೇತೋ ಜಜ್ಞಾನೋ ಜಾತ ಇಂದ್ರೋ ವಿಶ್ವಂ ಸರ್ವಂ ರೋಚನಂ ದೀಪ್ಯಮಾನಂ ಲೋಕಮಾ ಭಾತಿ । ಸರ್ವತಃ ಪ್ರಕಾಶಯತಿ । ತಥಾ ಹರ್ಯಶ್ವ ಇಂದ್ರೋ ಹರಿತಂ ಹರಿದ್ವರ್ಣೋಪೇತಮಾಯುಧಂ ಧತ್ತೇ । ಬಾಹ್ವೋರ್ಧತ್ತೇ । ತಥಾ ಹರಿಂ ಶತ್ರೂಣಾಂ ಪ್ರಾಣಹಾರಕಂ ವಜ್ರಂ ಬಾಹ್ವೋರಾಧತ್ತೇ ॥ ಜಜ್ಞಾನಃ । ಜನೀ ಪ್ರಾದುರ್ಭಾವ ಇತ್ಯಸ್ಯ ಲಿಟಃ ಕಾನಚ್ । ಗಮಹನೇತ್ಯಾದಿನೋಪಧಾಲೋಪಃ । ಚಿತ್ತ್ವಾದಂತೋದಾತ್ತಃ । ಭಾತಿ । ಭಾ ದೀಪ್ತಾವಿತ್ಯಸ್ಯಾಂತರ್ಭಾವಿತಣ್ಯರ್ಥಸ್ಯ ಲಟಿ ರೂಪಂ । ರೋಚನಂ । ರುಚ ದೀಪ್ತಾವಿತ್ಯಸ್ಮಾದನುದಾತ್ತೇತಶ್ಚ ಹಲಾದೇರಿತಿ ಯುಚ್ । ಚಿತ್ತ್ವಾದಂತೋದಾತ್ತಃ । ಬಾಹ್ವೋಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ವೃಷಾ**—ಕಾಮವರ್ಷಕನೂ | **ಹರಿತಃ**—ಹೊಂಬಣ್ಣದ ರೂಪವುಳ್ಳವನೂ ಆದ ಇಂದ್ರನು | **ಜಜ್ಞಾನಃ**—ಹುಟ್ಟಿದೊಡನೆಯೇ | **ವಿಶ್ವಂ**—ಸಮಸ್ತವಾದುದೂ | **ರೋಚನಂ**—ಆಕರ್ಷಕವಾದುದೂ ಆದ ಲೋಕವನ್ನು | **ಆ ಭಾತಿ**—ಪ್ರಕಾಶಿಸುವಂತೆ ಮಾಡುತ್ತಾನೆ | **ಹರ್ಯಶ್ವಃ**—ಹರಿನಾಮಕವಾದ ಅಶ್ವಯುಕ್ತನಾದ ಇಂದ್ರನು | **ಹರಿತಂ**—ಹೊಂಬಣ್ಣವುಳ್ಳ | **ಆಯುಧಂ**—ಆಯುಧವನ್ನು | **ಧತ್ತೇ**—ಹಿಡಿದಿದ್ದಾನೆ | **ಹರಿಂ**—(ಶತ್ರುಗಳ ಪ್ರಾಣವನ್ನು) ಅಪಹರಿಸುವ | **ವಜ್ರಂ**—ವಜ್ರಾಯುಧವನ್ನು | **ಬಾಹ್ವೋಃ**—ತನ್ನ ಬಾಹುಗಳಲ್ಲಿ | (**ಆಧತ್ತೇ**)-ಹಿಡಿದಿದ್ದಾನೆ.

### ಭಾವಾರ್ಥ

ಕಾಮವರ್ಷಕನೂ ಹೊಂಬಣ್ಣದ ರೂಪವುಳ್ಳವನೂ ಆದ ಇಂದ್ರನು ಹುಟ್ಟಿದೊಡನೆಯೇ ಸಮಸ್ತವಾದುದೂ ಆಕರ್ಷಕವಾದುದೂ ಆದ ಲೋಕವನ್ನು ಪ್ರಕಾಶಿಸುವಂತೆ ಮಾಡುತ್ತಾನೆ. ಹರಿನಾಮಕವಾದ ಅಶ್ವಯುಕ್ತನಾದ ಇಂದ್ರನು ಹೊಂಬಣ್ಣದ ಆಯುಧವನ್ನು ಹಿಡಿದಿದ್ದಾನೆ. ಶತ್ರುಗಳ ಪ್ರಾಣವನ್ನು ಅಪಹರಿಸುವ ವಜ್ರಾಯುಧವನ್ನು ತನ್ನ ಬಾಹುಗಳಲ್ಲಿ ಹಿಡಿದಿದ್ದಾನೆ.

### English Translation

The azure-coloured showerer (of benefits), illumes, as soon as born, the whole illuminous region ; the lord of the tawny steeds holds in his hands the yellow weapon, the destroying thunderbolt.

### ವಿಶೇಷವಿಷಯಗಳು

ಲೋಕಸಂಪತ್ತಿಗೆ ಕಾರಣನಾದ ಇಂದ್ರನ ಮಹತ್ತ್ವವನ್ನು ವರ್ಣಿಸುವಾಗ **ಆಯುಧಂ ಧತ್ತೇ** ಇತ್ಯಾದಿ ವರ್ಣನವೂ ಜೊತೆಯಲ್ಲಿಯೇ ಇರುತ್ತದೆ. ಇಂದ್ರನು ರಕ್ಷಕನು ಹಾಗೆಯೇ (ಶತ್ರು) ಹಿಂಸಕನು. **ವಿಶ್ವಂ ರೋಚನಂ ಆ ಭಾತಿ** ಲೋಕವನ್ನು ಆಕರ್ಷಕವಾದ **ಕಾಂತಿಯುತವನ್ನಾಗಿ** ಮಾಡುತ್ತಾನೆ ಎಂಬುದರ ಜೊತೆಗೆ ಹಿಂಸಕವಾದ ಆಯುಧವನ್ನು ಎತ್ತಿ ಹಿಡಿದಿದ್ದಾನೆ ಎಂಬ ವರ್ಣನೆಯಲ್ಲಿ ಇಂದ್ರನ ಎರಡು ಸ್ವರೂಪವೂ ತಿಳಿಯುತ್ತದೆ. ಇಂದ್ರನ ವಜ್ರಾಯುಧ, ವಿಷ್ಣುವಿನ ಚಕ್ರಾಯುಧ, ಈಶ್ವರನ ತ್ರಿಶೂಲ, ಇವುಗಳ ವರ್ಣನೆಯೆಲ್ಲವೂ ಹೀಗೆಯೇ ಇರುತ್ತದೆ. ಅವು ಲೋಕಕ್ಕೆ ರಕ್ಷಣಶಿಕ್ಷಣಗಳ ಸಮನ್ವಯವಾಗಿರುತ್ತವೆ. ಸತ್ಯಸೌಂದರ್ಯಗಳ ಸಮನ್ವಯವಾಗಿರುತ್ತವೆ. ಅವುಗಳ ವರ್ಣನೆಯಲ್ಲಿ ಗೂಢವಾದ ಆಧ್ಯಾತ್ಮಿಕತತ್ತ್ವವು ಸೂಚಿತವಾಗುತ್ತದೆ. ಈ ಸಮನ್ವಯತತ್ತ್ವವನ್ನು ಮುಂದೆ ಇಂದ್ರನ ವಜ್ರಾಯುಧದ ಮಹತ್ಸ್ವರೂಪವನ್ನು ವಿವರಿಸಿ ತಿಳಿಸುವಾಗ ವಿಮರ್ಶಿಸಲಾಗುತ್ತದೆ.

---

### ಸಂಹಿತಾಪಾಠಃ

ಇಂದ್ರೋ ಹರ್ಯಂತಮರ್ಜುನಂ ವಜ್ರಂ ಶುಕ್ರೈರಭೀವೃತಂ ।

ಅಪಾವೃಣೋದ್ಧರಿಭಿರದ್ರಿಭಿಃ ಸುತಮುದ್ಗಾ ಹರಿಭಿರಾಜತ ॥ ೫ ॥

CC-0. Jangamwadi Math Collection. Digitized by eGangotri

ಪದಪಾಠಃ

ಇಂದ್ರಃ । ಹರ್ಯಂತಂ । ಅರ್ಜುನಂ । ವಜ್ರಂ । ಶುಕ್ರೈಃ । ಅಭಿऽವೃತಂ ।

ಅಪ । ಅವೃಣೋತ್ । ಹರಿऽಭಿಃ । ಅದ್ರಿऽಭಿಃ । ಸುತಂ । ಉತ್ । ಗಾಃ । ಹರಿऽಭಿಃ । ಆಜತ ॥ ೫ ॥

ಸಾಯಣಭಾಷ್ಯಂ

ಸೋಽಯಮಿಂದ್ರೋ ಹರ್ಯಂತಂ ಕಮನೀಯಮರ್ಜುನಂ ಶುಭ್ರಂ । ಶುಭ್ರತ್ವಮುಪಪಾದಯತಿ । ಶುಕ್ರೈಃ ಶುಭ್ರೈಃ ಕ್ಷೀರಾದಿಭಿರಭಿವೃತಂ ವ್ಯಾಪ್ತಂ ವಜ್ರಂ ವೇಗವಂತಂ ಹರಿಭಿಃ । ಹರಂತ್ಯೇಭಿಃ ಸೋಮರಸಾನಿತಿ ಹರಯಃ। ತೈರದ್ರಿಭಿರ್ಗ್ರಾವಭಿಃ ಸುತಮಭಿಷುತಂ ಸೋಮಮಪಾವೃಣೋತ್। ಆವರಣರಹಿತಮಕರೋತ್ । ತಥಾ ಚ ಮಂತ್ರವರ್ಣಃ । ಪೂಷಾ ರಾಜಾನಮಾಘೃಣಿರಪಗೂಳ್ಹಂ ಗುಹಾ ಹಿತಂ ಅವಿಂದತ್ । ಋಗ್ವೇ. ೧-೨೩-೧೪ । ಇತಿ । ತಥಾ ಗಾಃ ಪಣಿಭಿರಪಹೃತಾ ಗಾ ಹರಿಭಿರಶ್ವೈರುಪೇತಃ ಸ ಇಂದ್ರ ಉದಾಜತ । ಬಿಲಾನ್ನಿರಗಮಯತ್ ॥ ಅರ್ಜುನಂ । ಅರ್ಜ ಷರ್ಜ ಅರ್ಜನ ಇತ್ಯಸ್ಮಾದರ್ಜೇರ್ಣಿಲುಕ್ಚೇತ್ಯುನನ್ । ನಿತ್ಸ್ವರಃ । ಅಭಿವೃತಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಆಜತ । ಅಜ ಗತಿಕ್ಷೇಪಣಯೋಃ । ಲಙಿ ವ್ಯತ್ಯಯೇನಾತ್ಮನೇಪದಂ । ನಿಘಾತಃ ॥

ಪ್ರತಿಪದಾರ್ಥ

ಇಂದ್ರಃ—ಇಂದ್ರನು । ಹರ್ಯಂತಂ ಆಕರ್ಷಕವಾದುದೂ। ಅರ್ಜುನಂ—ಶುಭ್ರವಾದುದೂ । ಶುಕ್ರೈಃ- ಶುದ್ಧವಾದ ಕ್ಷೀರಾದಿಗಳೊಡನೆ । ಅಭಿವೃತಂ—ವ್ಯಾಪ್ತವಾದುದೂ । ವಜ್ರಂ—ವೇಗವಾಗಿ ಹರಿಯುತಕ್ಕದ್ದೂ । ಹರಿಭಿಃ—ಹಿಂಡಿ ರಸವನ್ನು ತೆಗೆಯುತಕ್ಕ । ಅದ್ರಿಭಿಃ—ಕಲ್ಲುಗಳಿಂದ । ಸುತಂ—ಜಜ್ಜಿ ಹಿಂಡಲ್ಪಟ್ಟುದೂ ಆದ ಸೋಮರಸವನ್ನು । ಅಪಾವೃಣೋತ್—ಮರೆಯಿಂದ ಬಿಡಿಸಿ ಪ್ರಕಾಶಿತವಾಗಿ ಕಾಣುವಂತೆ ಮಾಡಿದನು । ಗಾಃ— (ಪಣಿಗಳಿಂದ ಅಪಹೃತವಾದ) ಗೋವುಗಳನ್ನು । ಹರಿಭಿಃ—ಅಶ್ವಯುಕ್ತನಾದ ಇಂದ್ರನು । ಉತ್ ಆಜತ—ಗವಿಯಿಂದ ಹೊರಕ್ಕೆ ಬರುವಂತೆ ಮಾಡಿದನು.

ಭಾವಾರ್ಥ

ಇಂದ್ರನು ಆಕರ್ಷಕವಾದುದೂ ಶುಭ್ರವಾದುದೂ ಮತ್ತು ಶುದ್ಧವಾದ ಕ್ಷೀರಾದಿಗಳೊಡನೆ ವ್ಯಾಪ್ತವಾದುದೂ ವೇಗವಾಗಿ ಹರಿಯುತಕ್ಕದ್ದೂ, ಹಿಂಡುವ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟುದೂ ಆದ ಸೋಮರಸವನ್ನು ಮರೆಯಿಂದ ಬಿಡಿಸಿ ಪ್ರಕಾಶಿತವಾಗಿ ಕಾಣುವಂತೆ ಮಾಡಿದನು. ಪಣಿಗಳಿಂದ ಅಪಹೃತವಾದ ಗೋವುಗಳನ್ನು ಅಶ್ವಯುಕ್ತನಾದ ಇಂದ್ರನು ಗವಿಯಿಂದ ಹೊರಕ್ಕೆ ಬರುವಂತೆ ಮಾಡಿದನು.

English Translation

Indra has uncovered the desirable white-coloured, fast-flowing Soma, effused by the expressing stones, and overlaid with the shining (milk and other liquids), in like manner as when, borne by his tawny steeds, he rescued the cattle.

CC-0. Jangamwadi Math Collection. Digitized by eGangotri

## ವಿಶೇಷವಿಷಯಗಳು

ಈ ಮಂತ್ರದಲ್ಲಿ **ಅರ್ಜುನ, ವಜ್ರ** ಇತ್ಯಾದಿ ಪದಗಳೆಲ್ಲವೂ ಸೋಮರಸಕ್ಕೆ ವಿಶೇಷಣಗಳಾಗಿವೆ.

**ಅರ್ಜುನ** ಶಬ್ದಕ್ಕೆ ಶುಭ್ರವೆಂದರ್ಥಮಾಡಿದೆ. ಪ್ರಕಾಶಿಸು ಎಂಬರ್ಥವನ್ನು ಕೊಡುವ **ರಂಜ್** ಧಾತುವಿನಿಂದ ನಿಷ್ಪನ್ನವಾಗಿದೆ. ನಿರುಕ್ತದಲ್ಲಿ ಅರ್ಜುನ ಶಬ್ದವು **ಉಷೋ**ನಾಮಗಳಲ್ಲಿಯೂ (ನಿ. ೧-೮) ಮತ್ತು **ರೂಪ** ನಾಮಗಳಲ್ಲಿಯೂ (ನಿ ೩-೭) ಪಠಿತವಾಗಿದೆ. ನಿರುಕ್ತಕಾರರು—

**ಅಹಶ್ಚ ಕೃಷ್ಣಮಹರರ್ಜುನಂ ಚ ವಿ ವರ್ತೇತೇ ರಜಸೀ ವೇದ್ಯಾಭಿಃ ।**

(ಋ. ಸಂ. ೬-೯-೧)

ಎಂಬ ಋಕ್ಕನುದಾಹರಿಸಿ **ಕೃಷ್ಣ**ಶಬ್ದಕ್ಕೆ **ರಾತ್ರಿ**ಯೆಂದೂ; **ಅರ್ಜುನ**ಶಬ್ದಕ್ಕೆ ಶುಕ್ಲವರ್ಣವುಳ್ಳ **ಅಹಸ್ಸೆಂ**ದೂ ಅರ್ಥ ಮಾಡಿದ್ದಾರೆ. ಅಲ್ಲದೇ **ಭದ್ರಾ ವಸ್ತ್ರಾಣ್ಯರ್ಜುನಾ ವಸಾನಾ** (ಋ. ಸಂ. ೩-೯-೨) ಎಂಬಲ್ಲಿಯೂ ಸಹ ವಸ್ತ್ರದ ಶುಭ್ರವಾದ ವರ್ಣವನ್ನು ತಿಳಿಸುತ್ತದೆ. ಈ ರೀತಿ ಈ ಪದವು ಕೇವಲ ಭೌತಿಕವಾದ ತತ್ತ್ವವನ್ನು ತಿಳಿಸುವ ಸಂದರ್ಭದಲ್ಲಲ್ಲದೇ ಆಧ್ಯಾತ್ಮಿಕತತ್ತ್ವವನ್ನು ತಿಳಿಸುವಾಗಲೂ ಸಹ ಉಪಯುಕ್ತವಾಗಿದೆ. ಉದಾಹರಣೆಗೆ **ಕೃಷ್ಣ, ಅರ್ಜುನ** ಎಂಬ ಎರಡು ಹೆಸರುಗಳೂ ಈಶ್ವರನ ಗೂಢವಾದುದೂ ಪ್ರಕಾಶಿತವಾದುದೂ ಆದ ಎರಡು ತತ್ತ್ವಗಳನ್ನೂ ಪ್ರತಿಬಿಂಬಿಸತಕ್ಕವು ಎಂದು ಹೇಳಬಹುದು. ಬಾಹ್ಯಚಕ್ಷುಸ್ಸಿಗೆ ಗೋಚರವಾಗತಕ್ಕ ತತ್ತ್ವಗಳೆಲ್ಲವೂ **ಅರ್ಜುನ** ಪದದಿಂದಲೂ "**ಮಹತ್ತನ್ನಾಮ** ಗುಹ್ಯಂ" (ಋ ಸಂ. ೧೦-೫೫-೧); "**ವಿಕಸ್ಯದದೃಶೇ ನ ರೂಪಂ**" (೧-೧೬೪-೪೪) ಇತ್ಯಾದಿ ಗುಹ್ಯತತ್ತ್ವವನ್ನು ವರ್ಣಿಸುವ ಋಕ್ಸಂಹಿತಾವಾಕ್ಯಗಳು "**ಗುಹ್ಯಾದ್ಗುಹ್ಯತರಂ**'' ಎಂಬ ಭಗವದ್ಗೀತಾವಾಕ್ಯದ ಅರ್ಥವನ್ನು ಸೂಚಿಸುತ್ತವೆ. ಹೀಗೆ **ಗುಹ್ಯ** (ರಹಸ್ಯ), **ಗೋಚರ** (ಪ್ರಕಾಶ) ಎಂಬ ಅರ್ಥಗಳಲ್ಲಿ **ಕೃಷ್ಣ** ಮತ್ತು **ಅರ್ಜುನ** ಎಂಬ ಪದಗಳ ಪ್ರಯೋಗಗಳು ಆಧ್ಯಾತ್ಮಿಕತತ್ತ್ವವನ್ನು ತಿಳಿಸುತ್ತವೆ.

**ವಜ್ರಂ—ವಿವರ್ಜಯತಿ ಪ್ರಾಣಾನ್** ಎಂದು ಹಿಂಸಾಕಾರಕವಾದ ಶಕ್ತಿಯನ್ನುಳ್ಳ ವಜ್ರಾಯುಧವನ್ನು ವಿವರಿಸಿದೆ. ಇದರ ವಿಶೇಷಾಂಶವನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿ **ವೇಗಗಾಮಿ ಎಂಬರ್ಥ**ದಲ್ಲಿ ಪ್ರಯೋಗಿಸಿದೆ.

**ಅದ್ರಿಭಿಃ—ಆದ್ರಿರಾದೃಣಾತ್ಯೇತೇನ । ಅಪಿ ವಾ ಅತ್ತೇಃ ಸ್ಯಾತ್ । ಸೀಳು** ಎಂಬರ್ಥವನ್ನು ಕೊಡುವ **ದೃ** ಧಾತುವಿನಿಂದಾಗಲಿ, ತಿನ್ನು ಎಂಬರ್ಥವನ್ನು ಕೊಡುವ **ಅದ್** ಧಾತುವಿನಿಂದಾಗಲಿ **ಅದ್ರಿ** ಶಬ್ದವು ನಿಷ್ಪನ್ನವಾಗಿದೆ. ಸೋಮರಸವನ್ನು ಹಿಂಡುವ ಕಲ್ಲುಗಳಿಗೂ, ಇಂದ್ರನ ವಜ್ರಾಯುಧಕ್ಕೂ ಪರ್ಯಾಯಪದವಾಗಿ ಅನೇಕಕಡೆ ಪ್ರಯೋಗಿಸಲ್ಪಟ್ಟಿದೆ. ಇದರ ವಿಶೇಷಾಂಶಗಳನ್ನು ಋಗ್ವೇದ ಸಂಹಿತೆಯ ೧೧ನೇ ಭಾಗದಲ್ಲಿ ಋ. ಸಂ. ೮-೧೪೯-೧ನೇ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಿದೆ.

---

CC-0. Jangamwadi Math Collection. Digitized by eGangotri

# ನಲವತ್ತೈದನೆಯ ಸೂಕ್ತವು.

ಸಾಯಣಭಾಷ್ಯಂ

**ಆ ಮಂದ್ರೈರಿತಿ ಪಂಚರ್ಚಂ ಸಪ್ತಮಂ ಸೂಕ್ತಂ ವೈಶ್ವಾಮಿತ್ರಂ ಬಾರ್ಹತಮೈಂದ್ರಂ ; ಆ ಮಂದ್ರೈರಿತ್ಯನುಕ್ರಮಣಿಕಾ । ಪೂರ್ವಸೂಕ್ತೇ ಬಾರ್ಹತಂ ತ್ವಿತ್ಯುಕ್ತತ್ವಾದಸ್ಯಾಪಿ ಬಾರ್ಹತತ್ವಂ ॥ ವಿಶೇಷವಿನಿಯೋಗಸ್ತು ಯತ್ರ ಶ್ರುತ್ಯಾ ನ ಸೂತ್ರಿತಃ । ಸ್ಮಾರ್ತಂ ತತ್ರ ವಿಜಾನೀಯಾದೃಗ್ವಿಧಾನಾದಿ ಶಾಸ್ತ್ರತಃ ॥**

ಅನುವಾದವು— **ಆ ಮಂದ್ರೈಃ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು, ಇಂದ್ರನು ದೇವತೆಯು, ಬೃಹತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ ಆ ಮಂದ್ರೈಃ ಎಂದು ಮೊದಲಾಗಿ ಹೇಳಿರುವುದು. ಹಿಂದಿನ ಸೂಕ್ತದಲ್ಲಿ ಹೇಳಿರುವಂತೆ ಬೃಹತೀಛಂದಸ್ಸಿನ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು. ಯಾವ ಸೂಕ್ತ ಅಥವಾ ಮಂತ್ರಗಳಿಗೆ ಶ್ರೌತಸೂತ್ರಾದಿಗಳಲ್ಲಿ ವಿನಿಯೋಗವು ಹೇಳಲ್ಪಟ್ಟಿರುವುದಿಲ್ಲವೋ ಅವುಗಳಿಗೆ ಸ್ಮಾರ್ತಪ್ರಯೋಗ ಗದಲ್ಲಿಯೂ, ಶೌನಕೋಕ್ತವಾದ ಋಗ್ವಿಧಾನವೆಂಬ ಗ್ರಂಥದಲ್ಲಿ ಹೇಳಿರುವಂತೆಯೂ, ಇತರ ಶಾಸ್ತ್ರಗಳಲ್ಲಿ ಹೇಳಿರು ವಂತೆಯೂ ವಿನಿಯೋಗವಿರುವುದೆಂದು ಭಾವಿಸಬೇಕು.

॥ ಓಂ ॥

## ಸೂಕ್ತ—೪೫

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೫ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

। ಋಷಿಃ—ವಿಶ್ವಾಮಿತ್ರಃ

॥ ದೇವತಾ—ಇಂದ್ರಃ ॥

। ಛಂದಃ—ಬೃಹತೀ ॥

ಸಂಹಿತಾಪಾಠಃ

ಆ ಮಂದ್ರೈರಿಂದ್ರ ಹರಿಭಿರ್ಯಾಹಿ ಮಯೂರರೋಮಭಿಃ ।

ಮಾ ತ್ವಾ ಕೇ ಚಿನ್ನಿ ಯಮನ್ವಿಂ ನ ಪಾಶಿನೋಽತಿ ಧನ್ವೇವ ತಾँ ಇಹಿ ॥ ೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಆ । ಮಂದ್ರೈಃ । ಇಂದ್ರ । ಹರಿಽಭಿಃ । ಯಾಹಿ । ಮಯೂರರೋಮಽಭಿಃ ।

ಮಾ । ತ್ವಾ । ಕೇ । ಚಿತ್ । ನಿ । ಯೆಮುನ್ । ವಿಂ । ನ । ಪಾಶಿನಃ । ಅತಿ । ಧನ್ವಽಇವ । ತಾನ್ । ಇಹಿ॥೧॥

ಸಾಯಣಭಾಷ್ಯಂ

ಹೇ ಇಂದ್ರ ಮಂದ್ರೈರ್ಮಾದಯಿತೃಭಿರ್ಮಯೂರರೋಮಭಿರ್ಮಯೂರರೋಮಸದೃಶರೋಮಯುಕ್ತೈರ್ಹರಿಭಿರಶ್ವೈರುಪೇತಸ್ತ್ವಮಾ ಯಾಹಿ । ಯಜ್ಞಂ ಪ್ರತ್ಯಾಗಚ್ಛ । ಕೇಚಿದಪಿ ಜನಾಸ್ತ್ವಾ ತ್ವಾಂ ಮಾ ನಿ ಯಮುನ್ । ಮಾ ನಿಯಚ್ಛಂತು । ಗಮನಪ್ರತಿಬಂಧಂ ಮಾ ಕುರ್ವಂತ್ವಿತ್ಯಭಿಪ್ರಾಯಃ । ಪ್ರತಿಬಂಧೇ ದೃಷ್ಟಾಂತಃ । ವಿಂ ನ । ಯಥಾ ಪಾಶಿನಃ ಪಾಶಹಸ್ತಾ ವ್ಯಾಧಾ ವಿಂ ಗಚ್ಛಂತಂ ಪಕ್ಷಿಣಂ ನಿಯಚ್ಛಂತಿ ತದ್ವನ್ಮಾ ನಿಯಚ್ಛಂತು । ಕಿಂಚ ಧನ್ವೇವ । ಯಥಾ ಪಾಂಥಾ ಧನ್ವ ಮರುದೇಶಂ ಶೀಘ್ರಮತಿಗಚ್ಛಂತಿ । ತದ್ವದ್ಗಮನಪ್ರತಿಬಂಧಕಾನತೀತ್ಯ ಶೀಘ್ರಮಿಹಿ । ಆಗಚ್ಛ ॥ ಮಂದ್ರೈಃ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಸ್ಫಾಯಿತಂಚೀತ್ಯಾದಿನಾ ರಕ್ಪ್ರತ್ಯಯಃ । ಇದಿತ್ತ್ವಾನ್ನುಮ್ । ಪ್ರತ್ಯಯಸ್ವರಃ । ಮಯೂರರೋಮಭಿಃ । ಮಯೂರರೋಮವದ್ರೋಮಾಣಿ ಯೇಷಾಮಿತಿ ಸಪ್ತಮ್ಯುಪಮಾನಪೂರ್ವಪದಸ್ಯ ಬಹುವ್ರೀಹಿರುತ್ತರಪದಲೋಪಶ್ಚ । ಪಾ. ೨-೨-೨೪-೧೨ । ಇತಿ ಸಮಾಸ ಉತ್ತರಪದಲೋಪಶ್ಚ । ಮಯೂರಶಬ್ದೋ ಮೀನಾತೇರೂರನ್ । ಉ. ೧-೬೮ । ಇತ್ಯೂರನ್ಪ್ರತ್ಯಯಾಂತಃ । ಮೀನಾತಿ ಸರ್ಪಾನಿತಿ ಮಯೂರೋ ಬರ್ಹೀ । ನಿತ್ತ್ವಾದಾದ್ಯುದಾತ್ತತ್ವೇ ಪ್ರಾಪ್ತೇ ಮಾದೀನಾಂ । ಫಿ. ೩-೪ । ಇತಿ ಸೂತ್ರೇಣ ಮಧ್ಯೋದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಯೆಮುನ್ ಯಮ ಉಪರಮ ಇತ್ಯಸ್ಯ ಲೇಟ್ಯಡಾಗಮೋ ರೂಪಂ । ಇಹಿ । ಇಣ್ ಗತಾವಿತ್ಯಸ್ಯ ಲೋಟಿ ರೂಪಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಮಂದ್ರೈಃ—ಕಾಂತಿಯುತವಾದವೂ । ಮಯೂರರೋಮಭಿಃ—ನವಿಲುಗರಿಯಂತೆ ಆಕರ್ಷಕವಾದ ಕೂದಲುಳ್ಳವೂ ಆದ । ಹರಿಭಿಃ—ಅಶ್ವಗಳೊಡನೆ ಕೂಡಿದ ನೀನು । ಆ ಯಾಹಿ—ಯಜ್ಞಪ್ರದೇಶಕ್ಕೆ ದಯಮಾಡು । ಪಾಶಿನಃ—ಬಲೆಯನ್ನು ಹಿಡಿದಿರುವ ಬೇಡರು । ವಿಂ ನ ಪಕ್ಷಿಯನ್ನು ತಡೆದು ನಿಲ್ಲಿಸುವಂತೆ । ಕೇ ಚಿತ್—(ದಾರಿಯಲ್ಲಿ) ಯಾರೂ ಸಹ । ತ್ವಾ—ನಿನ್ನನ್ನು । ಮಾ ನಿ ಯೆಮುನ್—ತಡೆದು ನಿಲ್ಲಿಸದಿರಲಿ । ಧನ್ವೇವ—ಪ್ರಯಾಣಿಕರು । ಮರಳುಗಾಡಿನ ಪ್ರತಿಬಂಧಕವನ್ನು ದಾಟಲು ಶೀಘ್ರವಾಗಿ ನಡೆಯುವಂತೆ । ತಾನ್—(ನೀನು ಸಹ ದಾರಿಯಲ್ಲಿನ) ಪ್ರತಿಬಂಧಕಗಳನ್ನು । ಅತಿ—ದಾಟಿಕೊಂಡು । ಇಹಿ—ಶೀಘ್ರವಾಗಿ ಬಾ ।

ಭಾವಾರ್ಥ

ಎಲೈ ಇಂದ್ರನೇ, ಕಾಂತಿಯುತವಾದವೂ, ನವಿಲುಗರಿಯಂತೆ ಆಕರ್ಷಕವಾದ ಕೂದಲುಳ್ಳವೂ ಆದ ಅಶ್ವಗಳೊಡನೆ ಕೂಡಿದ ನೀನು ನಮ್ಮ ಯಜ್ಞಪ್ರದೇಶಕ್ಕೆ ದಯಮಾಡು. ಬಲೆಯನ್ನುಹಿಡಿದಿರುವ ಬೇಡರು ಪಕ್ಷಿಯನ್ನು

CC-0. Jangamwadi Math Collection. Digitized by eGangotri

ತಡೆದು ನಿಲ್ಲಿಸುವಂತೆ ದಾರಿಯಲ್ಲಿ ಯಾರೂ ಸಹ ನಿನ್ನನ್ನು ತಡೆದು ನಿಲ್ಲಿಸದಿರಲಿ. ಪ್ರಯಾಣಿಕರು ಶೀಘ್ರವಾಗಿ ನಡೆದು ಮರಳುಗಾಡನ್ನು ದಾಟುವಂತೆ ನೀನೂ ಸಹ ದಾರಿಯಲ್ಲಿ ಒದಗಬಹುದಾದ ಪ್ರತಿಬಂಧಕಗಳನ್ನು ದಾಟಿಕೊಂಡು ಶೀಘ್ರವಾಗಿ ಬಾ.

## English Translation

Come, Indra, with your exulting peacock-haired steeds; let no persons detain you as (fowlers) throwing snares catch a bird: pass them by (quickly) as (travellers cross) a desert.

### ವಿಶೇಷವಿಷಯಗಳು

ಇಂದ್ರನ ಅಪ್ರತಿಹತವಾದ ಶಕ್ತಿಯನ್ನು ವರ್ಣಿಸುವಾಗ ಅವನ ವೇಗಗಾಮಿತ್ವವನ್ನು ಪಕ್ಷಿಯ ಅಪ್ರತಿಹತವಾದ ಸಂಚಾರಕ್ಕೆ ಹೋಲಿಸಿದೆ. ಮತ್ತು ಧನ್ವೇವ ಎಂದು ಇನ್ನೊಂದು ಉಪಮಾನವಿದೆ. ಧನ್ವ ಶಬ್ದವು ನಿರುಕ್ತದಲ್ಲಿ **ಅಂತರಿಕ್ಷನಾಮಗಳಲ್ಲಿಯೂ** (ನಿ. ೧-೩) ಮತ್ತು **ಗತಿಕರ್ಮ** ನಾಮಗಳಲ್ಲೂ (ನಿ. ೪-೨) ಪಠಿತವಾಗಿದೆ. ಪ್ರಕೃತದಲ್ಲಿ ಗತಿಕರ್ಮವೆಂದರ್ಥವಾಗುತ್ತದೆ ಮರಳುಗಾಡಿನ ಪ್ರಯಾಣಿಕರ ಶೀಘ್ರಗಾಮಿತ್ವಕ್ಕೆ ಇಂದ್ರನ ಗಮನವೇಗವನ್ನು ಹೋಲಿಸಿದೆ.

**"ಧನ್ವಚರೋ ನ ವಂಸಗಸ್ತೃಷಾಣಶ್ಚಕಮಾನಃ"** (ಋ. ಸಂ. ೫-೩೬-೧) ಇತ್ಯಾದಿ ಸ್ಥಳಗಳಲ್ಲಿ **ಧನ್ವಚರ** ಎಂಬುದಕ್ಕೆ ಮರಳುಗಾಡಿನಲ್ಲಿ ವೇಗವಾಗಿ ಸಂಚರಿಸತಕ್ಕ ಪುರುಷನೆಂದರ್ಥಮಾಡಿದೆ. ಸಾಯಣರು ಒಂದೊಂದು ಸಲ ಧನುಸ್ಸನ್ನು ಹಿಡಿದು ಸಂಚರಿಸುವ ಪುರುಷನೆಂದೂ ಅರ್ಥಮಾಡಿದ್ದಾರೆ. ಪ್ರಕೃತದಲ್ಲಿ ಗಮನದ ವೇಗವೂ ಅಪ್ರತಿಹತವಾದ ಶಕ್ತಿಯೂ ಸೂಚಿತವಾಗಿದೆ.

### ಸಂಹಿತಾಪಾಠಃ

ವೃತ್ರಖಾದೋ ವಲಂರುಜಃ ಪುರಾಂ ದರ್ಮೋ ಅಪಾಮಜಃ ।
ಸ್ಥಾತಾ ರಥಸ್ಯ ಹರ್ಯೋರಭಿಸ್ವರ ಇಂದ್ರೋ ದೃಳ್ಹಾ ಚಿದಾರುಜಃ ॥ ೨ ॥

### ಪದಪಾಠಃ

ವೃತ್ರಽಖಾದಃ । ವಲಂಽರುಜಃ । ಪುರಾಂ । ದರ್ಮಃ । ಅಪಾಂ । ಅಜಃ ।
ಸ್ಥಾತಾ । ರಥಸ್ಯ । ಹರ್ಯೋಃ । ಅಭಿಽಸ್ವರೇ । ಇಂದ್ರಃ । ದೃಳ್ಹಾ । ಚಿತ್ । ಆಽರುಜಃ ॥ ೨ ॥

### ಸಾಯಣಭಾಷ್ಯಂ

ಸೋಽಯಮಿಂದ್ರೋ ವೃತ್ರಖಾದಃ । ವೃತ್ರಂ ಖಾದತಿ ಹಿನಸ್ತೀತಿ ವೃತ್ರಖಾದಃ । ವಲಂರುಜಃ । ವೃಣೋತ್ಯಾಕಾಶಮಿತಿ ವಲೋ ಮೇಘಃ । ತಸ್ಯ ಭಂಜಕಃ । ತಥಾ ಚ ಮಂತ್ರವರ್ಣಃ । ಬಿಭೇದ ವಲಂ ।

CC-0. Jangamwadi Math Collection. Digitized by eGangotri

ಋಗ್ವೇ. ೩-೩೪-೧೦ । ಇತಿ । ತತೋಽಪಾಮುಜೋ ಮೇಘಭೇದನದ್ವಾರಾಽಪಾಂ ಪ್ರೇರಕಃ ಪುರಾಂ ಶತ್ರು-ಸಂಬಂಧಿನಾಂ ಪುರಾಣಾಂ ದರ್ಮೋ ದಾರಕಃ । ತಥಾ ಹರ್ಯೋರಶ್ವಯೋರಭಿಸ್ವರೇಽಸ್ಮದಾಭಿಮುಖ್ಯೇನ ಪ್ರೇರಣೇ ನಿಮಿತ್ತಭೂತೇ ಸತಿ ರಥಸ್ಯ ಸ್ಥಾತಾ ರಥಮಧಿಷ್ಠಾತಾ । ತಥಾ ದೃಳ್ಹಾ ಚಿತ್ ದೃಢಾನಾಮತಿ-ಬಲವತಾಂ ಶತ್ರೂಣಾಮಪ್ಯಾರುಜಃ ಸಮಂತಾದ್ಭಂಜಕೋ ಭವತಿ ॥ ವೃತ್ರಖಾದಃ । ಖಾದೃ ಭಕ್ಷಣ ಇತ್ಯ-ಸ್ಮಾತ್ಕರ್ಮಣ್ಯಣ್ । ಕೃದುತ್ತರಪದಪ್ರಕೃತಿಸ್ವರತ್ವಂ । ವಲಂರುಜಃ । ರುಜೋ ಭಂಗೇ। ಕರ್ಮಣ್ಯುಪಪದೇ ಮೂಲ-ವಿಭುಜಾದಿತ್ವಾತ್ಕಪ್ರತ್ಯಯಃ । ತತ್ಪುರುಷೇ ಕೃತಿ ಬಹುಲಮಿತಿ ದ್ವಿತೀಯಾಯಾ ಅಲುಕ್ । ಥಾಥಾದಿಸ್ವರಃ। ಆರುಜಃ । ರುಜೋ ಭಂಗ ಇತ್ಯಸ್ಮಾದಿಗುಪಧಲಕ್ಷಣಃ ಕಃ । ಸಮಾಸೇ ಥಾಥಾದಿಸ್ವರಃ ॥

### ಪ್ರತಿಪದಾರ್ಥ

**ವೃತ್ರಖಾದಃ**—ವೃತ್ರಹಂತಕನೂ । **ವಲಂರುಜಃ**—ಮೇಘವನ್ನು ಸೀಳುವವನೂ । **ಅಪಾಮುಜಃ**—ವೃಷ್ಟಿರೂಪವಾದ ಉದಕವನ್ನು ಸುರಿಸುವವನೂ । **ಪುರಾಂ**—ಶತ್ರುಪಟ್ಟಣಗಳ । **ದರ್ಮಃ**—ನಾಶಕನೂ ಆದ । **ಇಂದ್ರಃ**—ಇಂದ್ರನು। **ಹರ್ಯೋಃ**—ತನ್ನ ಅಶ್ವಗಳನ್ನು। **ಅಭಿಸ್ವರೇ**—ನಮಗೆ ಅಭಿಮುಖವಾಗಿ ಓಡಲು ಪ್ರೇರಿಸುವುದಕ್ಕಾಗಿ । **ರಥಸ್ಯ**—ತನ್ನ ರಥದಲ್ಲಿ । **ಸ್ಥಾತಾ**—ಕುಳಿತುಕೊಂಡು । **ದೃಳ್ಹಾ ಚಿತ್**—ಅತ್ಯಂತ ಬಲಶಾಲಿಯಾದ ಶತ್ರುಗಳನ್ನೂ ಸಹ । **ಆರುಜಃ**—ನಾಶಮಾಡುವ ಶಕ್ತಿಯುಳ್ಳವನಾಗಿದ್ದಾನೆ ।

### ಭಾವಾರ್ಥ

ವೃತ್ರಹಂತಕನೂ ಮೇಘವನ್ನು ಸೀಳುವವನೂ, ವೃಷ್ಟಿರೂಪವಾದ ಉದಕವನ್ನು ಸುರಿಸುವವನೂ, ಶತ್ರುಪಟ್ಟಣಗಳ ನಾಶಕನೂ ಆದ ಇಂದ್ರನು ತನ್ನ ಅಶ್ವಗಳನ್ನು, ನಮಗೆ ಅಭಿಮುಖವಾಗಿ ಓಡಲು ಪ್ರೇರಿಸುವುದಕ್ಕಾಗಿ ತನ್ನ ರಥದಲ್ಲಿ ಕುಳಿತುಕೊಂಡು ಅತ್ಯಂತ ಬಲಶಾಲಿಯಾದ ಶತ್ರುಗಳನ್ನೂ ಸಹ ನಾಶಮಾಡುವ ಶಕ್ತಿಯುಳ್ಳವನಾಗಿದ್ದಾನೆ.

### English Translation

The devourer of Vritra, the fracturer of the cloud, the sender of the waters, the demolisher of cities, Indra, the destroyer of powerful enemies, has mounted his chariot to urge his horses to our presence.

### ವಿಶೇಷವಿಷಯಗಳು

**ವಲ, ವೃತ್ರ** ಇವರುಗಳ ವಿಷಯಗಳನ್ನು ವಿಶದವಾಗಿ ಹಿಂದೆ ತಿಳಿಸಿದೆ. **ವಲ, ವೃತ್ರ** ಇಬ್ಬರೂ ಸಹೋದರರೆಂದು ಕೆಲವರ ಮತ. ಅಂಧಕಾರವನ್ನು ಪ್ರತಿಬಿಂಬಿಸುವ ವ್ಯಕ್ತಿಗಳೆಂದೂ ಅರ್ಥಮಾಡಬಹುದು. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ವೃಣೋತೀತಿ ವಲಃ** ಅಂತರಿಕ್ಷವನ್ನು ಮುಚ್ಚುತ್ತದೆ ಎಂಬುದರಿಂದ **ಮೇಘಕ್ಕೆ ವಲ ಶಬ್ದವು** ಪರ್ಯಾಯಪದವಾಗಿದೆ.

**ಅಭಿಸ್ವರೇ**—ಅಭಿಸ್ವರಶಬ್ದವು ಬೇರೆ ಬೇರೆ ಅರ್ಥಗಳಲ್ಲಿ ಪ್ರಯುಕ್ತವಾಗಿದೆ. ಈ ಪದದ ವಿಶೇಷಾರ್ಥವನ್ನು ಹಿಂದೆ ಋ. ಸಂ. ೧-೧೬೪-೨೧ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. **"ಅಭಿಸ್ವರ್ತಾರೋ ಅರ್ಕಂ ನ**

CC-0. Jangamwadi Math Collection. Digitized by eGangotri

**ಸುಷ್ಟುಭಃ** (ಋ. ಸಂ. ೧೦-೭೮-೪) ಇತ್ಯಾದಿ ಕಡೆಗಳಲ್ಲಿ **ಅಭಿತಃ ಶಬ್ದಯಿತಾರಃ**, ದೇವತೆಗಳನ್ನು ಪ್ರೇರಿಸಲು ಸ್ತುತಿರೂಪವಾದ ಶಬ್ದವನ್ನು ಮಾಡುವವರು ಎಂದು ಸ್ತುತಿಕರ್ತರಿಗೆ ಪರ್ಯಾಯಪದವಾಗಿದೆ. ಪ್ರಕೃತದಲ್ಲಿ **"ಚತುಷ್ಪಾದೇತಿ ದ್ವಿಪದಾಮಭಿಸ್ವರೇ ಸಂಪಶ್ಯನ್ ಪಂಕ್ತೀರುಪತಿಷ್ಠಮಾನಃ"** (ಋ. ಸಂ ೧೦-೧೧೭-೮) ಇತ್ಯಾದಿ ಕಡೆಗಳಲ್ಲಿ ಅರ್ಥಮಾಡಿರುವಂತೆ **ಅಭಿಸ್ವರ**ಶಬ್ದಕ್ಕೆ ಅಭಿಗಮನವೆಂದರ್ಥಮಾಡಬಹುದು. ಎದುರಾಗಿ ಹೋಗು ಎಂದು ತಾತ್ಪರ್ಯ. ಅಶ್ವಗಳನ್ನು ನಮಗೆ ಅಭಿಮುಖವಾಗಿ ಓಡಲು ಪ್ರೇರಿಸಲು ಎಂದು ತಾತ್ಪರ್ಯ ಅಭಿಸ್ವರಂತಿ ಇತ್ಯಾದಿ ಪಾರಿಭಾಷಿಕ ಪ್ರಯೋಗಗಳನ್ನೂ ಸಹ ಹಿಂದೆ ತಿಳಿಸಿದೆ.

---

ಸಂಹಿತಾಪಾಠಃ

ಗಂಭೀರಾँ ಉದಧೀಁರಿವ ಕ್ರತುಂ ಪುಷ್ಯಸಿ ಗಾ ಇವ ।

ಪ್ರ ಸುಗೋಪಾ ಯವಸಂ ಧೇನವೋ ಯಥಾ ಹ್ರದಂ ಕುಲ್ಯಾ ಇವಾಶತ ॥

ಪದಪಾಠಃ

ಗಂಭೀರಾನ್ । ಉದಧೀನ್ಽಇವ । ಕ್ರತುಂ । ಪುಷ್ಯಸಿ । ಗಾಃಽಇವ ।

ಪ್ರ । ಸುಽಗೋಪಾಃ । ಯವಸಂ । ಧೇನವಃ । ಯಥಾ । ಹ್ರದಂ । ಕುಲ್ಯಾಃಽಇವ । ಆಶತ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಗಂಭೀರಾನ್ಮಹಾವಕಾಶಾನುದಧೀನ್ ಸಮುದ್ರಾನುದಕೈರ್ಯಥಾ ಪೋಷಯಸಿ ತದ್ವತ್ಕ್ರತುಂ ಯಜ್ಞಸ್ಯ ಕರ್ತಾರಮಿಮಂ ಯಜಮಾನಮಭಿಮತಫಲಪ್ರದಾನೇನ ಪುಷ್ಯಸಿ । ಪೋಷಯಸಿ । ಅತ್ರ ದೃಷ್ಟಾಂತಃ । ಯಥಾ ಸುಗೋಪಾಃ ಸಮೀಚೀನೋ ಗೋಪಾಲೋ ಯವಸೇನ ಗಾಃ ಪೋಷಯತಿ ತದ್ವತ್ । ಯಥಾ ಧೇನವೋ ಯವಸಂ ತೃಣಾದಿಕಂ ಪ್ರಾಪ್ನುವಂತಿ ತದ್ವತ್ತ್ವಂ ಸೋಮಾನ್ ಪ್ರಾಪ್ನೋಷಿ । ತೇ ಚ ಸೋಮಾಃ ಕುಲ್ಯಾ ಇವ ಕೃತ್ರಿಮಸರಿತೋ ಹ್ರದಂ ಮಹಾಜಲಾಶಯಂ ಯಥಾ ಪ್ರಾಪ್ನುವಂತಿ ತದ್ವತ್ತ್ವಾಮಾಶತ । ವ್ಯಾಪ್ನುವಂತಿ ॥ ಗಂಭೀರಾನ್ । ಗಾಧೃ ಪ್ರತಿಷ್ಠಾಲಿಪ್ಸಯೋರ್ಗ್ರಂಥೇ ಚೇತ್ಯಸ್ಮಾದ್ಗಂಭೀರಗಭೀರಾವಿತ್ಯನೇನ ಸೂತ್ರೇಣ ಇರಚ್ಪ್ರತ್ಯಯಃ । ನುಮಾಗಮೋಪಧಾಹ್ರಸ್ವಭಕಾರಾಃ ಸರ್ವೇ ನಿಪಾತ್ಯಂತೇ । ಚಿತ್ತ್ವಾದಂತೋದಾತ್ತಃ । ಉದಧೀನಿವ । ಉದಕಶಬ್ದ ಉಪಪದೇ ದಧಾತೇರಧಿಕರಣೇಽರ್ಥೇ ಕರ್ಮಣ್ಯಧಿಕರಣೇ ಚೇತಿ ಕಿಪ್ರತ್ಯಯಃ । ಉದಕಶಬ್ದಸ್ಯ ಪೇಷಂವಾಸವಾಹನಧಿಷು ಚ । ಪಾ. ೬-೩-೫೮ । ಇತ್ಯುದಭಾವಃ । ಕೃತ್ಸ್ವರಃ । ಇವೇನ ವಿಭಕ್ತ್ಯಲೋಪಃ । ಪುಷ್ಯಸಿ । ಪುಷ ಪುಷ್ಟಾವಿತ್ಯಸ್ಯಾಂತರ್ಣೀತಣ್ಯರ್ಥಸ್ಯ ಲಟಿ ರೂಪಂ । ನಿಘಾತಃ । ಸುಗೋಪಾಃ । ಗೋಪಾಯತೇಃ ಕ್ವಿಪಿ ರೂಪಂ । ಯಥಾ । ಯಥೇತಿ ಪಾದಾಂತೇ । ಫಿ ೪-೧೭ । ಇತಿ ನಿಘಾತಃ । ಆಶತ । ಅಶೂ ವ್ಯಾಪ್ತಾವಿತ್ಯಸ್ಮಾಲ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ನಿಘಾತಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಇಂದ್ರ—ಎಲೈ ಎಂದ್ರನೇ । ತ್ವಂ—ನೀನು) । **ಗಂಭೀರಾನ್**—ಬಹಳ ಆಳವಾದ । **ಉದಧೀನ್ ಇವ**—ಸಮುದ್ರಗಳನ್ನು (ಉದಕಗಳಿಂದ ತುಂಬುವಂತೆಯೂ) । (ಮತ್ತು) **ಸುಗೋಪಾಃ**—ಶ್ರೇಷ್ಠನಾದ ಗೋಪಾಲಕನು । **ಗಾಃ ಇವ**—ಗೋವುಗಳನ್ನು ಪೋಷಿಸುವಂತೆಯೂ । **ಕ್ರತುಂ**—ಯಜ್ಞಕರ್ತನನ್ನು । **ಪುಷ್ಯಸಿ**—(ಅಭಿಮತಪ್ರದಾನಗಳಿಂದ) ಪೋಷಿಸುತ್ತೀಯೆ । **ಯಥಾ**—ಯಾವ ರೀತಿಯಲ್ಲಿ । **ಧೇನವಃ**—ಧೇನುಗಳು । **ಯವಸಂ**—ತೃಣಾದಿಗಳನ್ನು ಪಡೆಯುವುವೋ (ಅದರಂತೆಯೇ ನೀನೂ ಸೋಮವನ್ನು ಪಡೆಯುತ್ತೀಯೆ) । **ಕುಲ್ಯಾಃ ಇವ**—ಸಣ್ಣನದಿಗಳು । **ಹ್ರದಂ**—ಸರೋವರವನ್ನು ಸೇರುವಂತೆ । **ಪ್ರ ಆಶತೆ**—(ಆ ಸೋಮರಸಗಳು) ನಿನ್ನ ಜಠರವನ್ನು ಸೇರುತ್ತವೆ ।

ಭಾವಾರ್ಥ

ಎಲೈ ಇಂದ್ರನೇ, ನೀನು ಬಹಳ ಆಳವಾದ ಸಮುದ್ರಗಳನ್ನು ಉದಕಗಳಿಂದ ತುಂಬುವಂತೆಯೂ, ಶ್ರೇಷ್ಠನಾದ ಗೋಪಾಲಕನು ಗೋವುಗಳನ್ನು ಪೋಷಿಸುವಂತೆಯೂ ಯಜ್ಞಕರ್ತನನ್ನು ಅವನ ಅಭಿಮತಪ್ರದಾನಗಳಿಂದ ಪೋಷಿಸುತ್ತೀಯೆ ಧೇನುಗಳು ಸಮೃದ್ಧವಾಗಿ ತೃಣಾದಿಗಳನ್ನು ಪಡೆಯುವಂತೆ ನೀನೂ ಸಹ ಸೋಮವನ್ನು ಪಡೆಯುತ್ತೀಯೆ. ಸಣ್ಣನದಿಗಳು ಸರೋವರವನ್ನು ಸೇರುವಂತೆ ಆ ಸೋಮರಸಪ್ರವಾಹಗಳು ನಿನ್ನ ಜಠರವನ್ನು ಸೇರುತ್ತವೆ.

English Translation

You cherish the celebrator of the pious rite as (you fill) the deep seas (with water) ; or as a careful herdsman (cherishes) the cows ; (you imbibe the Soma) as cows (obtain) fodder, (and the juices flow into you) as rivulets flow into a lake.

ವಿಶೇಷವಿಷಯಗಳು

ಉತ್ತಮವಾದ ಕರ್ಮಾಚರಣೆಯುಳ್ಳ ಯಜ್ಞಕರ್ತನಿಗೆ ಇಂದ್ರನು ಒದಗಿಸತಕ್ಕ ಸಂಪತ್ಸ್ವರೂಪವನ್ನು ಇಲ್ಲಿ ವರ್ಣಿಸಿದೆ. ಈ ಸಂಪತ್ಪ್ರದಾನದಲ್ಲಿ ಎರಡು ಅಂಶಗಳನ್ನು ಸೋಪಮವಾಗಿ ತಿಳಿಸಿದೆ. ಈ ಸಂಪತ್ತು ಉದಧಿಯಂತೆ ಗಭೀರವಾದುದು. ಮತ್ತು ಈ ಸಂಪತ್ಪ್ರದಾನದಲ್ಲಿ ಇಂದ್ರನು ಯಜ್ಞಕರ್ತನ ವಿಷಯದಲ್ಲಿ ತೋರಿಸುವ ಅಭಿಮಾನ. ಇವೆರಡೂ ಯಾವನಿಗೆ ಸಾಧ್ಯವೆಂದರೆ ಉತ್ತಮವಾದ ಯಜ್ಞಕರ್ತನಿಗೆ ಮಾತ್ರ ಸಾಧ್ಯ. ಈ ಋಕ್ಕಿನಲ್ಲಿ ಕ್ರತು ವೆಂಬ ಪದವು ಯಜ್ಞಕರ್ತನಿಗೆ ಪರ್ಯಾಯಪದವಾಗಿದೆ.

ಋಕ್ಸಂಹಿತೆಯಲ್ಲಿ ಕ್ರತುಶಬ್ದವು ಬಹುಶಃ ಕರ್ಮವನ್ನು ಸೂಚಿಸುವ ಪದವಾಗಿಯೇ ಇರುತ್ತದೆ. ಕೆಲವು ಲಸ ಕರ್ಮದ ಧ್ಯೇಯವನ್ನೂ ತಿಳಿಸುವುದಾಗಿದೆ. ಈ ಪದದ ಗಭೀರಾರ್ಥವನ್ನು ಋಗ್ವೇದಸಂಹಿತೆಯ ೧೩ನೇ ಭಾಗದಲ್ಲಿ ವಿಶದವಾಗಿ ತಿಳಿಸಿದೆ. ಇಲ್ಲಿ ಯಜ್ಞಕರ್ತನಿಗೆ ಪರ್ಯಾಯಪದವಾಗಿರುವುದರಿಂದ ಒಂದು ವಿಶೇಷಾರ್ಥದಲ್ಲಿ ಪ್ರಯೋಗಿಸಿದೆ. ಈ ಪದವು ಯಜ್ಞಕರ್ತನ ಧ್ಯೇಯ, ಅವನ ಕ್ರಿಯಾಶಕ್ತಿ ಎರಡನ್ನೂ ಸೂಚಿಸುತ್ತದೆ.

ಸಂಹಿತೆಯಲ್ಲೂ ಮತ್ತು ಉಪನಿಷತ್ತುಗಳಲ್ಲೂ ಸಹ **ಕ್ರತು** ಮತ್ತು **ದಕ್ಷ** ಎಂಬ ಎರಡು ಪದಗಳೂ ಪುರುಷನ ಇಚ್ಛಾಶಕ್ತಿಯನ್ನೂ ಕ್ರಿಯಾಶಕ್ತಿಯನ್ನು ತಿಳಿಸುತ್ತವೆ. ಅಥವಾ ಅಂತಃಶಕ್ತಿ ಮತ್ತು ಬಾಹ್ಯಕ್ರಿಯೆ ಎರಡನ್ನೂ

CC-0. Jangamwadi Math Collection. Digitized by eGangotri

ಸೂಚಿಸಬಹುದು. ಪುರುಷನ ಇಚ್ಛೆ ಅಥವಾ ಸಂಕಲ್ಪವು ಶುದ್ಧವಾಗಿದ್ದರೆ ಆಗ ಪುರುಷಾರ್ಥವನ್ನು ಪಡೆಯುವ ವ್ಯವಹಾರಶಕ್ತಿಯೂ ಬೆಳೆಯುವುದು ಎಂಬ ವಿಷಯವನ್ನು ಋಕ್ಸಂಹಿತೆಯಲ್ಲಿ ವಿಶದವಾಗಿ ತಿಳಿಸಿದೆ.

**ಇಂದ್ರಃ ಸುತೇಷು ಸೋಮೇಷು ಕ್ರತುಂ ಪುನೀತ ಉಕ್ಥ್ಯಂ ।**
**ವಿದೇ ವೃಧಸ್ಯ ದಕ್ಷಸೋ ಮಹಾನ್ಹಿ ಷಃ ॥**

(ಋ. ಸಂ. ೮-೧೩-೧)

ಎಂಬಲ್ಲಿ **ವೃಧಸ್ಯ ದಕ್ಷಸಃ ವಿದೇ** । ವರ್ಧಕವಾದ ಬಲವನ್ನು ಸಂಪಾದಿಸುವುದಕ್ಕಾಗಿ ಇಂದ್ರನು **ಕ್ರತುಂ ಪುನೀತೇ** ಯಜ್ಞಕರ್ತನನ್ನು (ಅವನ ಸಂಕಲ್ಪವನ್ನು) ಶುದ್ಧವಾಗುದನ್ನಾಗಿ ಮಾಡುತ್ತಾನೆ ಎಂದು ತಿಳಿಸಿದೆ. ಪುರುಷನ ಆಧ್ಯಾತ್ಮಿಕವಾದ ಧ್ಯೇಯವನ್ನು ತಿಳಿಸುವಾಗಲೂ ಸಹ **ಓಂ ಕ್ರತೋ ಸ್ಮರ ಕ್ರತುಗ್ँಸ್ಮರ** (ಈಶ. ೧೭) "**ಕ್ರತು-ಮಯಃಪುರುಷಃ**"(ಛಾ. ಉ ೩-೧೪-೨)ಇತ್ಯಾದಿ ವಾಕ್ಯಗಳಿಂದ ವಿವೃತವಾಗಿದೆ ಇಂತಹ ಸನ್ನಿವೇಶಗಳಲ್ಲಿ ಶಂಕರಾಚಾರ್ಯರು ಕ್ರತುಶಬ್ದಕ್ಕೆ ಅಧ್ಯವಸಾಯವೆಂದೂ ಅಥವಾ ಪುರುಷನ ಕರ್ತವ್ಯವೆಂದೂ ಅರ್ಥಮಾಡಿದ್ದಾರೆ. ಸಂಕಲ್ಪ ಮತ್ತು ಸಂಕಲ್ಪವನ್ನು ಸಾಧಿಸುವ ಕರ್ಮಶಕ್ತಿಯೆಂದು ತಾತ್ಪರ್ಯ. ಈ ಸಂಕಲ್ಪ ಮತ್ತು ಶಕ್ತಿಯನ್ನನುಸರಿಸಿ ಧ್ಯೇಯಸಾಧನೆಯಾಗುತ್ತದೆ. "**ಯಥಾಕ್ರತುರಸ್ಮಿಂಲ್ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ ಸ ಕ್ರತುಂ ಕುರ್ವೀತ**" ಇತ್ಯಾದಿಯಾಗಿ ಕ್ರತುವಿನ ಸ್ವರೂಪವನ್ನು ತಿಳಿಸಿದೆ. ಪ್ರಕೃತದಲ್ಲೂ ಸಹ ಇಂತಹ ಕ್ರತುಮಯನಾದ ಪುರುಷನಿಗೆ ಲಭಿಸುವ ಸಂಪತ್ಸ್ವರೂಪವನ್ನು ವರ್ಣಿಸಿದೆ.

———:o:———

ಸಂಹಿತಾಪಾಠಃ

ಆ ನಸ್ತುಜಂ ರಯಿಂ ಭರಾಂಶಂ ನ ಪ್ರತಿಜಾನತೇ ।
ವೃಕ್ಷಂ ಪಕ್ವಂ ಫಲಮಂಕೀವ ಧೂನುಹೀಂದ್ರ ಸಂಪಾರಣಂ ವಸು ॥ ೪ ॥

ಪದಪಾಠಃ

ಆ । ನಃ । ತುಜಂ । ರಯಿಂ । ಭರ । ಅಂಶಂ । ನ । ಪ್ರತಿऽಜಾನತೇ ।
ವೃಕ್ಷಂ । ಪಕ್ವಂ । ಫಲಂ । ಅಂಕೀऽಇವ । ಧೂನುಹಿ । ಇಂದ್ರ । ಸಂऽಪಾರಣಂ । ವಸು ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ನೋऽಸ್ಮಾಕಂ ತುಜಂ ಶತ್ರೂಣಾಂ ಬಾಧಕಂ ರಯಿಂ ಧನೇನೋಪಲಕ್ಷಿತಂ ಪುತ್ರ-ಮಾ ಭರ । ಸಂಪಾದಯ । ತತ್ರ ದೃಷ್ಟಾಂತಃ । ಅಂಶಂ ನ । ಯಥಾ ಪಿತಾ ಪ್ರತಿಜಾನತೇ ವ್ಯವಹಾರ-ಜ್ಞಾಯ ಪುತ್ರಾಯ ಸ್ವಕೀಯಸ್ಯ ಧನಸ್ಯ ಭಾಗಂ ದದಾತಿ ತದ್ವತ್ । ಕಿಂಚ ಪಕ್ವಂ ಫಲಂ ಪ್ರತಿ ವೃಕ್ಷ-ಮಂಕೀವಾಂಕುಶೀ ಯಥಾ ಧೂನೋತಿ ತಥಾ ತ್ವಂ ಸಂಪಾರಣಮಸ್ಮದಿಚ್ಛಾಯಾಃ ಸಮ್ಯಕ್ ಪೂರಕಂ ವಸು ಧನಂ ಧೂನುಹಿ । ಚಾಲಯ । ಪ್ರಯಚ್ಛೇತ್ಯರ್ಥಃ ।' ಪ್ರತಿಜಾನತೇ । ಜ್ಞಾ ಅವಬೋಧನ ಇತ್ಯಸ್ಯ

CC-0. Jangamwadi Math Collection. Digitized by eGangotri

ಶತರಿ ರೂಪಂ । ಪ್ರಾದಿಸಮಾಸಃ । ಶತುರನುಮು ಇತಿ ವಿಭಕ್ತೇರುದಾತ್ತತ್ವಂ । ಧೂನುಹಿ । ಧೂಞ್ ಕಂಪನೇ ಇತ್ಯಸ್ಯ ಲೋಟಿ ರೂಪಂ । ಸಂಪಾರಣಂ । ಪೄ ಪಾಲನಪೂರಣಯೋರಿತ್ಯಸ್ಯ ಣ್ಯಂತಸ್ಯ ಕರಣೇ ಲ್ಯುಟ್ । ಸಮಾಸೇ ಕೃತ್ಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಪ್ರತಿಜಾನತೇ—ವ್ಯವಹಾರಜ್ಞಾನವನ್ನು ಹೊಂದಿದ ಪುತ್ರನಿಗೆ । ಅಂಶಂ ನ—ತಂದೆಯು ಧನದ ಭಾಗವನ್ನು ಕೊಡುವಂತೆ । ನಃ—ನಮಗೆ । ತುಜಂ—ಶತ್ರುಗಳಿಗೆ ಹಿಂಸಾಕಾರಕವಾದುದೂ। ರಯಿಂ—ಪುತ್ರರೂಪವಾದುದೂ ಆದ ಧನವನ್ನು । ಆ ಭರ—ಒದಗಿಸು । ಪಕ್ವಂ—ಪಕ್ವವಾದ । ಫಲಂ—ಫಲಕ್ಕಾಗಿ । ಅಂಕೀ—ಕೊಕ್ಕೆಯು । ವೃಕ್ಷಂ ಇವ—ವೃಕ್ಷವನ್ನು ಅಲ್ಲಾಡಿಸಿ (ಫಲವನ್ನು ಒದಗಿಸುವಂತೆ) । ಸಂಪಾರಣಂ—ನಮಗೆ ತೃಪ್ತಿಯನ್ನುಂಟುಮಾಡತಕ್ಕ । ವಸು—ಧನವನ್ನು । ಧೂನುಹಿ—ಚಲಿಸುಂತೆ ಮಾಡು (ನಮಗೆ ಒದಗುವಂತೆ ಮಾಡು) ।

ಭಾವಾರ್ಥ

ಎಲೈ ಇಂದ್ರನೇ, ವ್ಯವಹಾರಜ್ಞಾನವನ್ನು ಹೊಂದಿದ ಪುತ್ರನಿಗೆ ತಂದೆಯು ಧನದ ಭಾಗವನ್ನು ಕೊಡುವಂತೆ, ಶತ್ರುಗಳಿಗೆ ಹಿಂಸಾಕಾರಕನಾದ ಪುತ್ರನನ್ನು ನಮಗೆ ಒದಗಿಸಿಕೊಡು. ಪಕ್ವವಾದ ಫಲಕ್ಕಾಗಿ ಕೊಕ್ಕೆಯು ವೃಕ್ಷವನ್ನಲ್ಲಾಡಿಸಿ ಫಲವನ್ನು ಒದಗಿಸುವಂತೆ ನಮಗೆ ತೃಪ್ತಿಯನ್ನುಂಟುಮಾಡತಕ್ಕ ಧನವನ್ನು ಚಲಿಸುವಂತೆ ಮಾಡಿ ನಮಗೆ ಒದಗಿಸಿಕೊಡು.

English Translation

Grant us riches, securing (us against foes), (as a father bestows) his portion on (a son) arrived at maturity; send down upon us, Indra, wealth adequate (to our desires), as a crook brings down the ripe fruit from a tree.

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಸಹ ಯಜ್ಞಕರ್ತವ್ಯಜ್ಞಾನವನ್ನು ತಿಳಿದ ಪುರುಷನಿಗೆ ಲಭಿಸತಕ್ಕ ಸಂಪತ್ತಿನ ವರ್ಣನೆ ಇದೆ.

ತುಜಂ ಎಂಬ ಪದವು ಹಿಂಸಾರ್ಥದಲ್ಲಿ ಪ್ರಯೋಗಿಸಲ್ಪಟ್ಟದೆ. ನಿರುಕ್ತದಲ್ಲಿ ಈ ಪದವು ವಜ್ರನಾಮಗಳಲ್ಲಿ ಪಠಿತವಾಗಿದೆ. ತುಜತಿಃ ದಾನಕರ್ಮಾ ಎಂದು ದಾನಾರ್ಥದಲ್ಲೂ ಇದರ ಪ್ರಯೋಗವಿದೆ. ಭೂಂ ಚಿದ್ಧಿ ತುಜಶೋ ಮರ್ತ್ಯಸ್ಯ (ಋ ಸಂ. ೩-೩೯-೮) ಇತ್ಯಾದಿ ಋಕ್ಕುಗಳಲ್ಲಿ ಭೂರಿಪ್ರದನಾದ ಎಂದು ಯಜಮಾನನ ಔದಾರ್ಯವನ್ನು ವರ್ಣಿಸಿದೆ. ಪ್ರಕೃತವಾದ ಋಕ್ಕಿನಲ್ಲೂ ಸಹ ತುಜಂ ರಯಿಂ ಆ ಭರ ಎಂದಿರುವಾಗ ಶತ್ರುಹಿಂಸಾಕಾರಕನಾದ ಪುತ್ರಸಂಪತ್ತನ್ನು ಒದಗಿಸು ಎಂದಾಗಲಿ ಅಥವಾ ಉದಾರಿಯಾದ ಪುತ್ರನನ್ನು ಕೊಡು ಎಂದಾಗಲಿ ಅರ್ಥಮಾಡಬಹುದು.

ಸಂಪಾರಣಂ—ಪೄ ಪಾಲನತರಣಯೋಃ : ಪಾಲಿಸು ಅಥವಾ ದಾಟಸು ಎಂಬರ್ಥದ ಪೄ ಧಾತುವಿನಿಂದ ನಿಷ್ಪನ್ನವಾಗಿದೆ. ದಾರಿದ್ರ್ಯದಿಂದ ರಕ್ಷಿಸತಕ್ಕ ವಸುವೆಂದಾಗಲಿ ಅಥವಾ ದಾರಿದ್ರ್ಯವನ್ನು ದಾಟಿಸಿ ಕೊನೆಯನ್ನು ಮುಟ್ಟಿಸತಕ್ಕ ಎಂದಾಗಲಿ ಅರ್ಥವಾಗಬಹುದು. ಒಟ್ಟಿನಲ್ಲಿ ತೃಪ್ತಿಕಾರಕವಾದುದು ಎಂದು ತಾತ್ಪರ್ಯ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸ್ವಯುರಿಂದ್ರ ಸ್ವರಾಳಸಿ ಸ್ಮದ್ದಿಷ್ಟಿಃ ಸ್ವಯಶಸ್ತರಃ ।

ಸ ವಾವೃಧಾನ ಓಜಸಾ ಪುರುಷ್ಟುತ ಭವಾ ನಃ ಸುಶ್ರವಸ್ತಮಃ ॥ ೫ ॥

ಪದಪಾಠಃ

ಸ್ವऽಯುಃ। ಇಂದ್ರ । ಸ್ವऽರಾಟ್ । ಅಸಿ । ಸ್ಮತ್ऽದಿಷ್ಟಿಃ । ಸ್ವಯಶಃऽತರಃ ।

ಸಃ । ವವೃಧಾನಃ । ಓಜಸಾ । ಪುರುऽಸ್ತುತ । ಭವ । ನಃ । ಸುಶ್ರವಃऽತಮಃ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ಸ್ವಯುರ್ಧನವಾನಸಿ । ತಥಾ ಸ್ವರಾಟ್ ಸ್ವರ್ಗಸ್ಯ ರಾಜಾಸಿ । ಸ್ಮದ್ದಿಷ್ಟಿರ್ಭದ್ರವಾಕ್ಯಃ ಸ್ವಯಶಸ್ತರೋऽತಿಶಯೇನ ಪ್ರಭೂತಕೀರ್ತಿರಸಿ । ಹೇ ಪುರುಷ್ಟುತ ಬಹುಭಿರಾಹೂತೇಂದ್ರ ಸ ತ್ವಮೋ-ಜಸಾ ಬಲೇನ ವಾವೃಧಾನಃ ವರ್ಧಮಾನಃ ಸನ್ ನೋऽಸ್ಮದರ್ಥಂ ಸುಶ್ರವಸ್ತಮೋऽತಿಶಯೇನ ಶೋಭ-ನಾನ್ನೋಪೇತೋ ಭವ ॥ ಸ್ವಯುಃ ಸ್ವಶಬ್ದಾನ್ಮತ್ವರ್ಥೀಯೋ ಯುಃ। ಸ್ವರಾಟ್ । ರಾಜೃ ದೀಪ್ತೌ । ಕ್ವಿಪ್। ವ್ರಶ್ಚಾದಿನಾ ಷತ್ವಂ । ಸ್ಮದ್ದಿಷ್ಟಿಃ । ಸ್ಮತ್ ಸುಮದಿತ್ಯರ್ಥೇ । ಉಕಾರಲೋಪಶ್ಛಾಂದಸಃ । ಬಹುವ್ರೀಹೌ ಪೂರ್ವಪದಸ್ವರಃ । ಪುರುಷ್ಟುತ । ಸಂಹಿತಾಯಾಂ ಸ್ತುತಸ್ತೋಮಯೋಶ್ಛಂದಸೀತಿ ಷತ್ವಂ । ಭವ । ಭವತೇರ್ಲೋಟಿ ರೂಪಂ । ದ್ವ್ಯಚೋऽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಸುಶ್ರವಸ್ತಮಃ । ಶ್ರವಃ ಶಬ್ದೋऽಸುನಂತಃ । ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ। ತದಂತಾ-ದತಿಶಾಯನೇ ತಮಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಬಹುವ್ರೀಹಿಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಸ್ವಯುಃ—(ನೀನು) ಸಂಪದ್ಯುಕ್ತನಾಗಿಯೂ । ಸ್ವರಾಟ್—ಸ್ವರ್ಗಕ್ಕೆಲ್ಲಾ ಪ್ರಭುವಾಗಿಯೂ । ಸ್ಮದ್ದಿಷ್ಟಿಃ—ಮಂಗಳವಾಕ್ಕುಳ್ಳವನಾಗಿಯೂ । ಸ್ವಯಶಸ್ತರಃ—ಅತ್ಯಂತ ಕೀರ್ತಿಶಾಲಿಯಾಗಿಯೂ । ಅಸಿ—ಆಗಿದ್ದೀಯೆ । ಪುರುಷ್ಟುತ—ಅನೇಕರಿಂದ ಸ್ತುತನಾಗತಕ್ಕ ಎಲೈ ಇಂದ್ರನೇ । ಸಃ—ಇಂತಹ ಮಾಹಾತ್ಮ್ಯವುಳ್ಳ ನೀನು । ಓಜಸಾ—ಬಲದಿಂದ । ವಾವೃಧಾನಃ—ವೃದ್ಧಿಯನ್ನು ಹೊಂದುತ್ತಾ । ನಃ—ನಮಗೆ । ಸುಶ್ರವಸ್ತಮಃ—ಶ್ರೇಷ್ಠವಾದ ಅನ್ನ ದಾತನಾಗಿ ಆಗು.

ಭಾವಾರ್ಥ

ಎಲೈ ಇಂದ್ರನೇ, ನೀನು ಸಂಪದ್ಯುಕ್ತನಾಗಿಯೂ, ಸ್ವರ್ಗಕ್ಕೆಲ್ಲಾ ಪ್ರಭುವಾಗಿಯೂ, ಮಂಗಳವಾಕ್ಕುಳ್ಳವನಾಗಿಯೂ ಅತ್ಯಂತ ಕೀರ್ತಿಶಾಲಿಯಾಗಿಯೂ ಆಗಿದ್ದೀಯೆ ಅನೇಕರಿಂದ ಸ್ತುತನಾಗತಕ್ಕ ಎಲೈ ಇಂದ್ರನೇ, ಇಂತಹ ಮಾಹಾತ್ಮ್ಯವುಳ್ಳ ನೀನು ಬಲದಿಂದ ವೃದ್ಧಿಯನ್ನು ಹೊಂದುತ್ತಾ ನಮಗೆ ಶ್ರೇಷ್ಠವಾದ ಅನ್ನದಾತನಾಗಿ ಆಗು

CC-0. Jangamwadi Math Collection. Digitized by eGangotri

English Translation

You are possessed of opulence, Indra ; you are the lord of heaven, auspicious and renowend : may you who are adored of many, increasing in vigour, be to us a most (bountiful bestower) of food·

ವಿಶೇಷವಿಷಯಗಳು

ಇಲ್ಲಿ ಇಂದ್ರನ ಸ್ವಾತಂತ್ರ್ಯವನ್ನೂ ಸಾರ್ವಭೌಮತ್ವವನ್ನೂ ವರ್ಣಿಸಿದೆ. **ಸ್ವಯುಃ, ಸ್ವರಾಟ್** ಎಂಬ ಪದಗಳೂ ಸ್ವಾತಂತ್ರ್ಯ ಸೂಚಕಗಳು.

**ಸ್ವಯುಃ**—ಈ ಪದವು ಎರಡು ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. " **ಪಶುರ್ನೈತಿ ಸ್ವಯುರಗೋಪಾಃ** " (ಋ ಸಂ ೨-೪-೭) ಎಂಬಲ್ಲಿ ಪಶುವಿನಂತೆ ಸ್ವಾತಂತ್ರ್ಯದಿಂದ ಸಂಚರಿಸತಕ್ಕವನು ಎಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಧನಯುಕ್ತನೆಂದರ್ಥಮಾಡಿದೆ. ಪರಾಪೇಕ್ಷೆಯೂ ಪರಾಧೀನತ್ವವೂ ಇಲ್ಲದಿರುವುದು ಎಂಬುದರಲ್ಲೇ ತಾತ್ಪರ್ಯ.

**ಸ್ವರಾಟ್**—ಸ್ವಯಂ ಪ್ರಭುವೆಂದರ್ಥ. ತನ್ನ ಮಹಿಮೆಯಿಂದ ತಾನೇ ಸ್ವಯಂ ಪ್ರಕಾಶಕನು ಎಂದಾಗಲಿ ಸಾರ್ವಭೌಮನು ಎಂದಾಗಲಿ ಅರ್ಥವಾಗುತ್ತದೆ. ಈ ಸಾರ್ವಭೌಮತ್ವವು ಆಧ್ಯಾತ್ಮಿಕ ಮತ್ತು ನೈತಿಕತತ್ತ್ವಪೂರಿತ ವಾಗಿದೆ. **ಸ್ವರಾಟ್** ಎಂದರೆ ತನಗೆ ತಾನೇ ಪ್ರಭುವೆಂದೂ ಅರ್ಥ. ಆ ದೃಷ್ಟಿಯಿಂದ ವಿಮರ್ಶಿಸಿದರೆ ಯಾವ ಪುರುಷನು ತನಗೆ ತಾನೇ ಪ್ರಭುವಾಗಿರುವನೋ ಅವನು ತಾನೇ ಲೋಕಕ್ಕೂ ಪ್ರಭುವಾಗಿರಲು ಅರ್ಹನು ಎಂದೂ ಅರ್ಥವಾಗುತ್ತದೆ. ಈ ಅಂಶವನ್ನೇ ಐತರೇಯಬ್ರಾಹ್ಮಣದಲ್ಲಿ ತಿಳಿಸಿದೆ. ಎಂದರೆ ಲೋಕಕ್ಕೆ ಪ್ರಭುವಾಗಿರತಕ್ಕ ವನು ಪೂರ್ಣವಾಗಿ ಆತ್ಮಸಂಯಮವನ್ನು ಪಡೆದು ಬಾಹ್ಯವಾದ ಶಕ್ತಿಗಳಿಗೆ ವಶನಾಗದೆ ಆತ್ಮಸ್ವಾತಂತ್ರ್ಯವನ್ನು ಪಡೆದಿರಬೇಕೆಂದು ತಾತ್ಪರ್ಯ. **ಸ್ವರಾಟ್** ಎಂಬ ಈ ಪದದಲ್ಲಿ ಆಧ್ಯಾತ್ಮಿಕ ಮತ್ತು ವೈದಿಕವ್ಯವಹಾರಗಳ ಸಮನ್ವ ಯವು ಕಾಣುತ್ತದೆ. ಈ ಎರಡು ವ್ಯವಹಾರಗಳ ಸಮನ್ವಯವಿರುವುದೇ ವೈದಿಕ ಸಂಸ್ಕೃತಿಯ ಮುಖ್ಯ ಲಕ್ಷಣವಾಗಿ ರುತ್ತದೆ. ಇದಲ್ಲದೇ, ಸ್ವರಾಟ್ ಶಬ್ದಕ್ಕೆ ಸ್ವರ್ಗಕ್ಕೆ ರಾಜನೆಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ. **ಸ ಏಕ ರಾಜೋ ಜಗತಃ** ಎಂಬ ಶ್ರುತಿವಾಕ್ಯದಂತೆ ಇಂದ್ರನೇ ಈ ಜಗತ್ತಿಗೂ ಸ್ವರ್ಗಕ್ಕೂರಾಜನು ಎಂಬ ಅರ್ಥವು ಋಗ್ವೇದ ಮತ್ತು ಯಜುರ್ವೇದಗಳಲ್ಲಿ ಅನೇಕಕಡೆ ವರ್ಣಿತವಾಗಿದೆ.

ಐತರೇಯಬ್ರಾಹ್ಮಣದಲ್ಲಿ ವರ್ಣಿತವಾಗಿರುವಂತೆ **ಸ್ವರಾಟ್** ಎಂಬ ಪದಕ್ಕೆ ಆತ್ಮಪ್ರಭು ಮತ್ತು ಲೋಕಪ್ರಭು ಎಂಬೆರಡು ಅಂಶಗಳೂ ಸಹ ಒಟ್ಟಿಗೆ ಸೇರಿರಬೇಕು. ಆತ್ಮಸಂಯಮಿಯಾಗಿರದವನು ಸಾರ್ವಭೌಮ ನಾಗಲಾರನು ಎಂಬುದೇ ತಾತ್ಪರ್ಯ. ಪ್ರಕೃತದಲ್ಲಿ **ಸ್ವಯುಃ, ಸ್ವರಾಟ್** ಎಂಬ ಎರಡು ಪದಗಳೂ ಇಂದ್ರನ ಈ ಎರಡು ವಿಶೇಷಗುಣಗಳನ್ನೂ ತಿಳಿಸುತ್ತವೆ **ಸ್ವರಾಟ್**ಎಂಬ ಪದಕ್ಕೆ ಅನೇಕ ದೃಷ್ಟಿಯಿಂದ ಅರ್ಥವನ್ನು ಹೇಳಬಹುದು

**ಸ್ಮದ್ದಿಷ್ಟಿಃ—ಸ್ಮತ್** ಶಬ್ದಕ್ಕೆ **ಸುಂದರ, ಮಂಗಳ, ಕಲ್ಯಾಣಾತ್ಮಕ** ಎಂಬರ್ಥಗಳಾಗುತ್ತವೆಯೆಂಬುದನ್ನು ಹಿಂದೆ ತಿಳಿಸಿದೆ. ದಿಷ್ಟಿಯೆಂದರೆ ಪ್ರಕೃತದಲ್ಲಿ ವಾಕ್ಕೆಂದು ತಿಳಿಸಿದೆ. ಮಂಗಳಕರವಾದ ವಾಕ್ಕುಳ್ಳವನೆಂದರ್ಥ. ಋ. ಸಂ. ೬-೩-೬೯ ಇತ್ಯಾದಿ ಸ್ಥಳಗಳಲ್ಲಿ ರಮ್ಯವಾದ ದರ್ಶನವುಳ್ಳದ್ದೆಂದರ್ಥ.



CC-0. Jangamwadi Math Collection. Digitized by eGangotri

# ನಲವತ್ತಾರನೆಯ ಸೂಕ್ತವು.

---

## ಸಾಯಣಭಾಷ್ಯಂ

**ಯುಧ್ಮಸ್ಯ ತೆ ಇತಿ ಪಂಚರ್ಚಮಷ್ಟಮಂ ಸೂಕ್ತಂ ವೈಶ್ವಾಮಿತ್ರಮೈಂದ್ರಂ । ಯುಧ್ಮಸ್ಯೇತ್ಯನು-ಕ್ರಮಣಿಕಾ ॥ ದಶರಾತ್ರೇ ಚತುರ್ಥೇಽಹನಿ ನಿಷ್ಕೇವಲ್ಯೇ ಯುಧ್ಮಸ್ಯ ತೆ ಇತಿ ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ಕುಹ ಶ್ರುತ ಇಂದ್ರೋ ಯುಧ್ಮಸ್ಯ ತೆ ಇತಿ ನಿಷ್ಕೇವಲ್ಯಂ । ಆ. ೭-೧೧ । ಇತಿ ॥ ಋಷಭ-ನಾಮ್ನ್ಯೇಕಾಹೇಽಪಿ ನಿಷ್ಕೇವಲ್ಯ ಇದಂ ಸೂಕ್ತಂ ನಿವಿದ್ಧಾನಂ । ಸೂತ್ರಿತಂ ಚ । ಯುಧ್ಮಸ್ಯ ತೆ ಇತಿ ಮಧ್ಯಂದಿನಃ । ಆ. ೯-೭ ಇತಿ ॥**

ಅನುವಾದವು— **ಯುಧ್ಮಸ್ಯ ತೇ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಯುಧ್ಮಸ್ಯ** ಎಂದು ಮೊದಲಾಗಿ ಹೇಳಿರುವುದು. ದಶರಾತ್ರವೆಂಬ ಯಾಗದ ನಾಲ್ಕನೆಯ ದಿವಸದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳನ್ನು ಪಠಿಸುವಾಗ **ಯುಧ್ಮಸ್ಯ ತೇ** ಎಂಬ ಈ ಸೂಕ್ತದ ಋಕ್ಕುಗಳು ನಿವಿನ್ಮಂತ್ರಗಳಿಗಾಗಿ ಉಪಯೋಗಿಸಲ್ಪಡುವುದೆಂದು ಆಶ್ವಲಾಯನಶ್ರೌತಸೂತ್ರದ— **ಕುಹ ಶ್ರುತ ಇಂದ್ರೋ ಯುಧ್ಮಸ್ಯ ತೆ ಇತಿ ನಿಷ್ಕೇವಲ್ಯಂ** ಎಂಬ ಸೂತ್ರದಿಂದಲೂ (ಆ. ೭-೧೧) ಋಷಭನಾಮ್ನಿ ಎಂಬ ಒಂದು ದಿವಸದ ಯಾಗದಲ್ಲಿ ನಿಷ್ಕೇವಲ್ಯಶಸ್ತ್ರದ ನಿವಿನ್ಮಂತ್ರಗಳಿಗಾಗಿ ಈ ಸೂತ್ರದ ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ— **ಯುಧ್ಮಸ್ಯ ತೆ ಇತಿ ಮಧ್ಯಂದಿನಃ** ಎಂಬ ಸೂತ್ರದಿಂದಲೂ (ಆ. ೯-೭) ವಿವೃತವಾಗಿರುವುದು.

---

॥ ಓಂ ॥

## ಸೂಕ್ತ—೪೬

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೬ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೦ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ವಿಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ— ತ್ರಿಷ್ಟುಪ್ ॥

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯುಧ್ಮಸ್ಯ ತೇ ವೃಷಭಸ್ಯ ಸ್ವರಾಜ ಉಗ್ರಸ್ಯ ಯೂನಃ ಸ್ಥವಿರಸ್ಯ ಘೃಷ್ವೇಃ ।
ಅಜೂರ್ಯತೋ ವಜ್ರಿಣೋ ವೀರ್ಯಾಣೀಂದ್ರ ಶ್ರುತಸ್ಯ ಮಹತೋ ಮಹಾನಿ ॥ ೧ ॥

ಪದಪಾಠಃ

ಯುಧ್ಮಸ್ಯ । ತೇ । ವೃಷಭಸ್ಯ । ಸ್ವಽರಾಜಃ । ಉಗ್ರಸ್ಯ । ಯೂನಃ । ಸ್ಥವಿರಸ್ಯ । ಘೃಷ್ವೇಃ ।
ಅಜೂರ್ಯತಃ । ವಜ್ರಿಣಃ । ವೀರ್ಯಾಣಿ । ಇಂದ್ರ । ಶ್ರುತಸ್ಯ । ಮಹತಃ । ಮಹಾನಿ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ಯುಧ್ಮಸ್ಯ ಯೋಧನಶೀಲಸ್ಯ ವೃಷಭಸ್ಯಾಭಿಮತಫಲಸೇಚಕಸ್ಯ ಸ್ವರಾಜೋ ಧನಾಧಿಪತೇರುಗ್ರಸ್ಯ ಸಮರ್ಥಸ್ಯ ಯೂನೋ ನಿತ್ಯತರುಣಸ್ಯ ಸ್ಥವಿರಸ್ಯ ಚಿರಂತನಸ್ಯ ಘೃಷ್ವೇಃ ಶತ್ರೂಣಾಂ ಸಂಘರ್ಷಕಸ್ಯಾಜೂರ್ಯತೋ ಜರಾರಹಿತಸ್ಯ ವಜ್ರಿಣಃ ಶ್ರುತಸ್ಯ ತ್ರಿಷು ಲೋಕೇಷು ಪ್ರಸಿದ್ಧಸ್ಯ ಅತ ಏವ ಮಹತಸ್ತೇ ತವ ವೀರ್ಯಾಣಿ ಮಹಾನಿ । ಮಹಾಂತಿ ಖಲು ॥ ಯುಧ್ಮಸ್ಯ । ಯುಧ ಸಂಪ್ರಹಾರೇ । ಇಷಿಯುಧೀಂಧಿದಸೀತ್ಯಾದಿನಾ ಮಕ್ಪ್ರತ್ಯಯಃ । ಯೂನಃ । ಯೌತೇಃ ಕನಿನ್ಯುವೃಷೀತ್ಯಾದಿನಾ ಕನಿನ್। ಶ್ವಯುವಮಘೋನಾಮತದ್ಧಿತ ಇತಿ ಸಂಪ್ರಸಾರಣಂ । ನಿತ್ಸ್ವರಃ । ಸ್ಥವಿರಸ್ಯ । ಅಜಿರಶಿಶಿರಶಿಥಿಲೇತ್ಯಾದಿನಾ ಕಿರನ್ಪ್ರತ್ಯಯಾಂತೋ ನಿಪಾತಿತಃ । ಘೃಷ್ವೇಃ । ಘೃಷು ಸಂಘರ್ಷೇ । ಕೃವಿಘೃಷ್ವಿಚ್ಛವೀತ್ಯಾದಿನಾ ಕ್ವಿನ್ಪ್ರತ್ಯಯಾಂತೋ ನಿಪಾತ್ಯತೇ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಯುಧ್ಮಸ್ಯ—ಶ್ರೇಷ್ಠನಾದ ಯೋಧನೂ । ವೃಷಭಸ್ಯ—ಕಾಮವರ್ಷಕನೂ । ಸ್ವರಾಜಃ—ಸಂಪತ್ತಿಗೆಲ್ಲಾ ಅಧಿಪತಿಯೂ । ಉಗ್ರಸ್ಯ—ಭಯಂಕರನೂ । ಯೂನಃ—ತರುಣನೂ । ಸ್ಥವಿರಸ್ಯ—(ಅದೇಕಾಲದಲ್ಲಿ) ವೃದ್ಧನೂ (ಪುರಾತನನೂ) । ಘೃಷ್ವೇಃ—ಶತ್ರುಗಳನ್ನು ಸದೆಬಡಿಯತಕ್ಕವನೂ । ಅಜೂರ್ಯತಃ—ಜರಾ (ವಾರ್ಧಕ್ಯ) ರಹಿತನೂ । ವಜ್ರಿಣಃ—ವಜ್ರಾಯುಧವನ್ನು ಹಿಡಿದಿರುವವನೂ । ಶ್ರುತಸ್ಯ—ಮೂರು ಲೋಕದಲ್ಲೂ ಪ್ರಸಿದ್ಧನೂ । ಮಹತಃ—(ಆದುದರಿಂದಲೇ) ಮಾಹಾತ್ಮ್ಯಯುಕ್ತನೂ ಆದ । ತೇ—ನಿನ್ನ । ವೀರ್ಯಾಣಿ—ಪರಾಕ್ರಮಕಾರ್ಯಗಳು । ಮಹಾನಿ—ಅತ್ಯದ್ಭುತವಾಗಿವೆ.

ಭಾವಾರ್ಥ

ಎಲೈ ಇಂದ್ರನೇ, ಶ್ರೇಷ್ಠನಾದ ಯೋಧನೂ, ಕಾಮವರ್ಷಕನೂ ಸಂಪತ್ತಿಗೆಲ್ಲಾ ಅಧಿಪತಿಯೂ, ತರುಣನೂ ಪುರಾತನನೂ, ಶತ್ರುಗಳ ಸದೆಬಡಿಯತಕ್ಕವನೂ, ವಾರ್ಧಕ್ಯರಹಿತನೂ ವಜ್ರಾಯುಧವನ್ನು ಹಿಡಿದಿರುವವನೂ ಆದುದರಿಂದಲೇ ಮಾಹಾತ್ಮ್ಯಯುಕ್ತನೂ ಆದ ನಿನ್ನ ಪರಾಕ್ರಮಕ್ಯಾಗಳು ಅತ್ಯದ್ಭುತವಾಗಿವೆ.

CC-0. Jangamwadi Math Collection. Digitized by eGangotri

## English Translation

Vast are the energies of you, Indra, the warrior, (the showerer of benefits), the lord of wealth, the fierce; you are (both) young and old; the overcomer of foes, the undecaying, the wielder of the thunderbolt; and you are mighty and renowned.

### ವಿಶೇಷವಿಷಯಗಳು

**ತೇ ವೀರ್ಯಾಣಿ ಮಹಾನಿ**—ನಿನ್ನ ವೀರ್ಯಕರ್ಮಗಳು ಅತ್ಯದ್ಭುತವಾಗಿವೆಯೆಂದು ಪ್ರಶಂಸಿಸುವಾಗ ಅಂತಹ ವೀರ್ಯಕರ್ಮಗಳಿಗೆ ಬೇಕಾದ ಮಹದ್ಗುಣಗಳನ್ನೂ ಸಹ ಜೊತೆಯಲ್ಲಿ ವರ್ಣಿಸಿದೆ. ಹಿಂದೆ, "ಅಹನ್ನಹಿಮನ್ವಪಸ್ತತರ್ದ ಪ್ರ ವಕ್ಷಣಾ ಅಭಿನತ್ಪರ್ವತಾನಾಂ ; ಆತ್ಸೂರ್ಯಂ ಜನಯನ್ದ್ಯಾಮುಷಾಸಂ" ಇಂದ್ರನು ಮೇಘವನ್ನು ಸೀಳಿದನು, ಮತ್ತು ಪರ್ವತಗಳಲ್ಲಿ ಹರಿಯುವ ಪ್ರವಾಹಗಳಿಗೆ ದಾರಿಯನ್ನು ಮಾಡಿದನು, ಸೂರ್ಯನನ್ನೂ, ಉಷಸ್ಸನ್ನೂ ಅವುಗಳ ಪ್ರಕಾಶಕ್ಕೆ ಅಂತರಿಕ್ಷವನ್ನೂ ಸೃಷ್ಟಿಸಿದನು ಇತ್ಯಾದಿಯಾಗಿ ಹಿಂದೆ ಇಂದ್ರನ ಪರಾಕ್ರಮವನ್ನು ವರ್ಣಿಸುತ್ತಾ "ಇಂದ್ರಸ್ಯ ನು ವೀರ್ಯಾಣಿ ಪ್ರವೋಚಂ" (ಋ. ಸಂ. ೧-೩೨) ಎಂದು ಇಂದ್ರನ ಮಹಿಮೆಯನ್ನು ವರ್ಣಿಸಿದೆ. ಇಂತಹ ಮಹತ್ಕಾರ್ಯಗಳಿಗೆ ಉಪಯುಕ್ತವಾದ ಯೋದ್ಧೃತ್ವವೂ, ಉಗ್ರತ್ವವೂ, ಸ್ವರಾಜತ್ವವೂ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದೆ.

---

### ಸಂಹಿತಾಪಾಠಃ

ಮಹಾ ಅಸಿ ಮಹಿಷ ವೃಷ್ಣ್ಯೇಭಿರ್ಧನಸ್ಪೃದುಗ್ರ ಸಹಮಾನೋ ಅನ್ಯಾನ್ ।
ಏಕೋ ವಿಶ್ವಸ್ಯ ಭುವನಸ್ಯ ರಾಜಾ ಸ ಯೋಧಯಾ ಚ ಕ್ಷಯಯಾ ಚ ಜನಾನ್ ॥ ೨ ॥

### ಪದಪಾಠಃ

ಮಹಾನ್ । ಅಸಿ । ಮಹಿಷ । ವೃಷ್ಣ್ಯೇಭಿಃ । ಧನಽಸ್ಪೃತ್ । ಉಗ್ರ । ಸಹಮಾನಃ । ಅನ್ಯಾನ್ ।
ಏಕಃ । ವಿಶ್ವಸ್ಯ । ಭುವನಸ್ಯ । ರಾಜಾ । ಸಃ । ಯೋಧಯ । ಚ । ಕ್ಷಯಯ । ಚ । ಜನಾನ್ ॥ ೨ ॥

### ಸಾಯಣಭಾಷ್ಯಂ

ಹೇ ಮಹಿಷ ಮಹನೀಯ ಉಗ್ರ ಇಂದ್ರ ತ್ವಂ ಮಹಾನಸಿ । ಧನಸ್ಪೃತ್ ಧನಾನಿ ದಾನಭೋಗತ್ಯಾಗೈಃ ಪಾರಂ ನಯಂಸ್ತ್ವಂ ವೃಷ್ಣ್ಯೇಭಿರ್ವೀರ್ಯೈರನ್ಯಾನ್ । ಶತ್ರೂನ್ಸಹಮಾನೋಽಭಿಭವನ್ವರ್ತಸೇ । ತಥಾ ವಿಶ್ವಸ್ಯ ಸರ್ವಸ್ಯ ಭುವನಸ್ಯೈಕೋಽಸಹಾಯೋ ರಾಜಾ ಸ ತ್ವಂ ಯೋಧಯ ಚ । ಸಪತ್ನಾನ್ ಪ್ರಹರ । ಜನಾನ್ ಕ್ಷಯಯ ಚ । ನಿವಾಸಯ । ಬಾಧಕಾನ್ಹತ್ವಾ ಸಾಧುಜನಾನ್ ಸ್ವಸ್ಥಾನೇ ಸ್ಥಾಪಯೇತ್ಯಭಿಪ್ರಾಯಃ ॥ ಮಹಿಷ । ಮಹ ಪೂಜಾಯಾಂ । ಅವಿಮಹ್ಯೋಸ್ಟಿಷಚ್ । ಉ. ೧-೪೬ । ಇತಿ ಟಿಷಚ್-

CC-0. Jangamwadi Math Collection. Digitized by eGangotri

**ಪ್ರತ್ಯಯಃ । ಆಮಂತ್ರಿತತ್ವಾನ್ನಿಘಾತಃ । ವೃಷ್ಣ್ಯೇಭಿಃ । ವೃಷ್ಣಿ ಭವಾನಿ ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತಃ । ಯೋಧಯ । ಯುಧ ಸಂಪ್ರಹಾರ ಇತ್ಯಸ್ಯ ಣ್ಯಂತಸ್ಯ ಲೋಟಿ ರೂಪಂ । ಚಾದಿಷು ಚೇತಿ ನ ನಿಘಾತಃ । ಣಿತ್ಸ್ವರಃ । ಕ್ಷಯಯ । ಕ್ಷಿ ನಿವಾಸಗತ್ಯೋರಿತ್ಯಸ್ಯ ಣ್ಯಂತಸ್ಯ ಲೋಟಿ ರೂಪಂ । ಅತ್ರಾಪಿ ಪೂರ್ವವದನಿಘಾತಃ ॥**

ಪ್ರತಿಪದಾರ್ಥ

**ಮಹಿಷ**—ಪೂಜ್ಯನಾದವನೂ । **ಉಗ್ರ**—ಭಯಂಕರನೂ ಆದ ಎಲೈ ಇಂದ್ರನೇ । (**ತ್ವಂ**—ನೀನು) । **ಮಹಾನ್ ಅಸಿ**—ಮಹತ್ಸ್ವರೂಪವುಳ್ಳವನಾಗಿದ್ದೀಯೆ । **ಧನಸ್ಪೃತ್**—ಧನಗಳಿಗೆ ದಾನಾದಿ ಪ್ರಯೋಜನಗಳನ್ನು ತೋರಿಸುವವನಾಗಿಯೂ । **ವೃಷ್ಣ್ಯೇಭಿಃ**—ನಿನ್ನ ವೀರ್ಯಗಳಿಂದ । **ಅನ್ಯಾನ್**—ಶತ್ರುಗಳನ್ನು । **ಸಹಮಾನಃ**—ಸೋಲಿಸುವವನೂ ಆಗಿದ್ದೀಯೆ । **ವಿಶ್ವಸ್ಯ**—ಸಮಸ್ತವಾದ । **ಭುವನಸ್ಯ**—ಪ್ರಪಂಚಕ್ಕೂ । **ಏಕಃ**—ಒಬ್ಬನೇ । **ರಾಜಾ**—ಪ್ರಭುವಾಗಿದ್ದೀಯೆ ! **ಸಃ**—ಅಂತಹ ನೀನು । **ಯೋಧಯ ಚ**—ನಮ್ಮ (ಶತ್ರುಗಳೊಡನೆ) ಯುದ್ಧ ಮಾಡು (ಮತ್ತು ಅವರನ್ನು ಸೋಲಿಸು) । **ಜನಾನ್**—ಯಜ್ಞಕರ್ತರಾದ ಜನರನ್ನು । **ಕ್ಷಯಯ ಚ**—ವಾಸಸ್ಥಾನವುಳ್ಳವರನ್ನಾಗಿ ಮಾಡು ।

ಭಾವಾರ್ಥ

ಪೂಜ್ಯನೂ ಭಯಂಕರನೂ ಆದ ಇಂದ್ರನೇ, ನೀನು ಮಹತ್ಸ್ವರೂಪವುಳ್ಳವನಾಗಿದ್ದೀಯೆ. ಧನಗಳಿಗೆ ದಾನಾದಿಪ್ರಯೋಜನಗಳನ್ನು ತೋರಿಸುವವನಾಗಿಯೂ, ನಿನ್ನ ಪರಾಕ್ರಮಗಳಿಂದ ಶತ್ರುಗಳನ್ನು ಸೋಲಿಸುವವನೂ ಆಗಿದ್ದೀಯೆ. ಸಮಸ್ತವಾದ ಪ್ರಪಂಚಕ್ಕೂ ನೀನೊಬ್ಬನೇ ಪ್ರಭುವಾಗಿದ್ದೀಯೆ. ಅಂತಹ ನೀನು ನಮ್ಮ ಶತ್ರುಗಳೊಡನೆ ಯುದ್ಧಮಾಡಿ ಸೋಲಿಸು. ಮತ್ತು ಯಜ್ಞಕರ್ತರಾದ ಮಾನವರಿಗೆ ಗೃಹಾದಿ ವಾಸಸ್ಥಾನಗಳನ್ನು ಕೊಟ್ಟು ರಕ್ಷಿಸು.

English Translation

Adorable and powerful Indra, you are great and magnificent, overcoming adversaries by your prowess ; you alone are lord of all the world ; war (upon our enemies), and give safe dwellings to men.

ವಿಶೇಷವಿಷಯಗಳು

**ಮಹಿಷ**—ಮಹಿಷಶಬ್ದವು ನಿರುಕ್ತದಲ್ಲಿ ಮಹನ್ನಾಮಗಳಲ್ಲಿ ಪಠಿತವಾಗಿದೆ. (ನಿ. ೩-೩). ಪೂಜ್ಯನೆಂದರ್ಥ, ಅಥವಾ ಮಹತ್ಕಾರ್ಯಸಾಧಕನು ಎಂದರ್ಥ. ನಿರುಕ್ತಕಾರರು "**ಅಪಾಮುಪಸ್ಥೇ ಮಹಿಷಾ....**" (ಋ. ಸಂ. ೬-೮-೪) ಎಂಬ ಋಕ್ಕನ್ನುದಾಹರಿಸಿ ಅಲ್ಲಿ ಈ ಪದಕ್ಕೆ ಗಭೀರನಾದ ಎಂದರ್ಥಮಾಡಿದ್ದಾರೆ. ಇಲ್ಲಿ ಇಂದ್ರನ ವೈಯಕ್ತಿಕವಾದ ಪ್ರಭಾವವು ಗಭೀರವಾದುದು ಎಂದು ತಾತ್ಪರ್ಯ. ಈ ಪ್ರಭಾವದಲ್ಲಿ ಸೌಂದರ್ಯವಿಕಾರಗಳೆರಡರ ಮಿಳನವೂ ಇರುತ್ತದೆ. ಆದುದರಿಂದಲೇ **ಉಗ್ರ** ಎಂಬ ವಿಶೇಷಣವು ಉಚಿತವಾಗಿದೆ. ಆದುದರಿಂದ ಇಲ್ಲಿ **ವೃಷ್ಣ್ಯೇಭಿಃ** ಎಂಬ ಪದಕ್ಕೆ ಸೇಚಕಾರ್ಥವನ್ನು ಹೇಳದೇ ಶಕ್ತ್ಯರ್ಥದಲ್ಲಿ ಇದರ ಪ್ರಯೋಗವಿದೆಯೆಂದು ತಿಳಿಸಿದೆ. **ವೃಷ್ಣ್ಯೇಭಿಃ** ಎಂದರೆ ಮಹತ್ಕಾರ್ಯಸಾಧಕವಾದ ಶಕ್ತಿಗಳಿಂದ ಎಂದರ್ಥ.

CC-0. Jangamwadi Math Collection. Digitized by eGangotri

ಐತರೇಯಬ್ರಾಹ್ಮಣದಲ್ಲಿ ವರ್ಣಿತವಾಗಿರುವಂತೆ ಅಭಿಷಿಕ್ತನಾದ ಇಂದ್ರನು ಸ್ವಾರಾಜ್ಯಪದವಿಯನ್ನು ಪಡೆದನು. ಅವನಲ್ಲದೇ ಲೋಕಕ್ಕೆ ಬೇರೆ ಪ್ರಭುವಿಲ್ಲ ಎಂಬಂಶವನ್ನು "ಭುವನಸ್ಯ ಏಕಃ ರಾಜಾಃ" ಎಂಬ ವರ್ಣನೆಯು ತಿಳಿಸುತ್ತದೆ. ಅಥವಾ ಆದಿತ್ಯಾತ್ಮಕನಾದ ಇಂದ್ರನಲ್ಲದೇ ಲೋಕಪ್ರಕಾಶಕರು ಇನ್ನಾರೂ ಇಲ್ಲ ಎಂಬಂಶವನ್ನೂ ಸಹ ಈ ವರ್ಣನೆಯು ತಿಳಿಸುವುದು.

---

ಸಂಹಿತಾಪಾಠಃ

ಪ್ರ ಮಾತ್ರಾಭೀ ರಿರಿಚೇ ರೋಚಮಾನಃ ಪ್ರ ದೇವೇಭಿರ್ವಿಶ್ವತೋ ಅಪ್ರತೀತಃ ।
ಪ್ರ ಮಜ್ಮನಾ ದಿವ ಇಂದ್ರಃ ಪೃಥಿವ್ಯಾಃ ಪ್ರೋರೋರ್ಮಹೋ ಅಂತರಿಕ್ಷಾದೃಜೀಷೀ ॥ ೩ ॥

ಪದಪಾಠಃ

ಪ್ರ । ಮಾತ್ರಾಭಿಃ । ರಿರಿಚೇ । ರೋಚಮಾನಃ । ಪ್ರ । ದೇವೇಭಿಃ । ವಿಶ್ವತಃ । ಅಪ್ರತಿಽಇತಃ ।
ಪ್ರ । ಮಜ್ಮನಾ । ದಿವಃ । ಇಂದ್ರಃ । ಪೃಥಿವ್ಯಾಃ । ಪ್ರ । ಉರೋಃ । ಮಹಃ । ಅಂತರಿಕ್ಷಾತ್ । ಋಜೀಷೀ ॥

ಸಾಯಣಭಾಷ್ಯಂ

ರೋಚಮಾನೋ ದೀಪ್ಯಮಾನೋ ವಿಶ್ವತಃ ಸರ್ವೈರಪ್ರತೀತ ಏತಾವದಸ್ಯ ಸಾಮರ್ಥ್ಯಮಿತ್ಯಪರಿಚ್ಛಿದ್ಯಮಾನ ಋಜೀಷೀ ಸೋಮವಾನಿಂದ್ರೋ ಮಾತ್ರಾಭಿಃ । ಮೀಯಂತೇ ಪರಿಚ್ಛಿದ್ಯಂತ ಇತಿ ಮಾತ್ರಾಃ ಶಿಲೋಚ್ಚಯಾಃ । ತೇಭ್ಯೋಽಪಿ ಪ್ರ ರಿರಿಚೇ । ಪ್ರಕರ್ಷೇಣ ಮಹತ್ತಯಾತಿರಿಕ್ತೋಽಭೂತ್ । ತಥಾ ದೇವೇಭಿರ್ದೇವೇಭ್ಯೋಽಪಿ ಮಜ್ಮನಾ । ಮಜ್ಜಯತಿ ಶತ್ರೂನ್ದುಃಖಸಾಗರ ಇತಿ ಮಜ್ಮ ಬಲಂ । ತೇನ ಬಲೇನ ಪ್ರರಿರಿಚೇ । ತಥಾ ದಿವಃ ಪೃಥಿವ್ಯಾ ದ್ಯಾವಾಪೃಥಿವೀಭ್ಯಾಂ ಚ ಪ್ರರಿರಿಚೇ । ತಥೋರೋರ್ವಿಸ್ತೀರ್ಣಾನ್ಮಹೋ ಮಹತೋಂತರಿಕ್ಷಾದಪಿ ಪ್ರರಿರಿಚೇ॥ ಮಾತ್ರಾಭಿಃ ಮಾಙ್ ಮಾನೇ ಶಬ್ದೇ ಚೇತ್ಯಸ್ಮಾತ್ ಹುಯಾಮಾಶ್ರುಭಸಿಭ್ಯಸ್ತ್ರನ್ನಿತಿ ತ್ರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಢ್ರಲೋಪೇ ಪೂರ್ವಸ್ಯ ದೀರ್ಘೋಽಣ ಇತಿ ಸಂಹಿತಾಯಾಂ ದೀರ್ಘಃ । ರೋಚಮಾನಃ । ರುಚ ದೀಪ್ತಾವಿತ್ಯಸ್ಮಾತ್ ಶಾನಚಿ ರೂಪಂ । ತಸ್ಯ ಲಸಾರ್ವಧಾತುಕಸ್ವರೇ ಧಾತುಸ್ವರಃ । ಅಪ್ರತೀತಃ। ಇಣ್ ಗತೌ । ಕರ್ಮಣಿ ಕ್ತಃ। ಪ್ರಾದಿಸಮಾಸಃ । ನಞಾ ಸಮಾಸೇ ತಸ್ಯ ಸ್ವರಃ । ಮಜ್ಮನಾ । ಟುಮಸ್ಜೋ ಶುದ್ಧೌ । ಔಣಾದಿಕೋ ಮನಿಚ್ಪ್ರತ್ಯಯಃ । ಝಲಾಂ ಝಶ್ ಝಶೀತಿ ಜಶ್ತ್ವಂ । ಚಿತ್ತ್ವಾದಂತೋದಾತ್ತಃ । ಪೃಥಿವ್ಯಾಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ರೋಚಮಾನಃ**—ಪ್ರಕಾಶಮಾನನೂ | **ವಿಶ್ವತಃ**—ಸಮಸ್ತಜನರಿಂದಲೂ (ಯಾರಿಂದಲೂ) | **ಅಪ್ರತೀತಃ**—ಅಳೆಯಲು ಸಾಧ್ಯವಿಲ್ಲದಿರುವವನೂ | **ಋಜೀಷೀ**—ಸೋಮವಂತನೂ ಆದ | **ಇಂದ್ರಃ**—ಇಂದ್ರನು | **ಮಾತ್ರಾಭಿಃ**—ಸಕಲಭೂತಗಳಿಗಿಂತಲೂ | **ಪ್ರ ರಿರಿಚೇ**—ಅಧಿಕವಾದ ಪರಿಮಾಣದಿಂದ ಬೆಳೆದಿದ್ದಾನೆ | **ಮಜ್ಮನಾ**-ಶಕ್ತಿಯಿಂದ | **ದೇವೇಭಿಃ**—ದೇವತೆಗಳಿಗಿಂತಲೂ | **ಪ್ರ**—ಅಧಿಕನಾಗಿದ್ದಾನೆ | **ದಿವಃ**—ಸ್ವರ್ಗಲೋಕಕ್ಕಿಂತಲೂ | **ಪೃಥಿವ್ಯಾಃ**—ಪೃಥಿವಿಗಿಂತಲೂ | **ಪ್ರ ರಿರಿಚೇ**—ಅಧಿಕನಾಗಿದ್ದಾನೆ | **ಉರೋಃ**—ವಿಸ್ತೃತವಾದುದೂ | **ಮಹಃ**-ಮಹತ್ತಾದುದೂ ಆದ | **ಅಂತರಿಕ್ಷಾತ್**—ಅಂತರಿಕ್ಷಕ್ಕಿಂತಲೂ | **ಪ್ರ (ರಿರಿಚೇ)**—ಅತ್ಯಧಿಕನಾಗಿದ್ದಾನೆ.

ಭಾವಾರ್ಥ

ಪ್ರಕಾಶಮಾನನೂ, ಯಾರಿಂದಲೂ ಅಳೆಯಲು ಸಾಧ್ಯವಿಲ್ಲದಿರುವವನೂ, ಸೋಮವಂತನೂ ಆದ ಇಂದ್ರನು ಸಕಲ ಭೂತಗಳಿಗಿಂತಲೂ ಅಧಿಕವಾದ ಪರಿಮಾಣದಿಂದ ಬೆಳೆದಿದ್ದಾನೆ. ಶಕ್ತಿಯಿಂದ ದೇವತೆಗಳಿಗಿಂತಲೂ ಅಧಿಕನಾಗಿದ್ದಾನೆ. ಪೃಥಿವಿಗಿಂತಲೂ ವಿಸ್ತೃತವಾದುದೂ, ಮಹತ್ತಾದುದೂ ಆದ ಅಂತರಿಕ್ಷಕ್ಕಿಂತಲೂ ಅತ್ಯಧಿಕನಾಗಿದ್ದಾನೆ.

English Translation

The resplendent and every way unlimited Indra, drinking the spiritless Soma juice, far surpasses the elements, (far exceeds) the gods in power; he is more vast than heaven and earth, or the widespread spacious firmament.

ವಿಶೇಷವಿಷಯಗಳು

ಇಂದ್ರನ ಅಪರಿಮಿತವಾದ ಸ್ವರೂಪವು ಇಲ್ಲಿ ವರ್ಣಿತವಾಗಿದೆ. ಪರಿಚ್ಛಿನ್ನವಾದ ಎಂದರೆ ಮಾನವನ ಅಳತೆಗೆ ಸಿಕ್ಕತಕ್ಕ ಸಕಲವಸ್ತುಗಳಿಗಿಂತಲೂ ಅತ್ಯಧಿಕನು ಎಂದರೆ ಮಾನವನ ಅಳತೆಗೆ ಸಿಕ್ಕತಕ್ಕ ಪದಾರ್ಥವಲ್ಲನೆಂಬುದೇ ತಾತ್ಪರ್ಯ.

ಮಾತ್ರಾಭಿಃ—ಹಿಂದೆ ಋ. ಸಂ. ೩-೩೮-೩ ನೇ ಋಕ್ಕಿನಲ್ಲಿ ವಿವರಿಸಿರುವಂತೆಯೇ ಇಲ್ಲಿಯೂ ಸಹ **ಮೀಯಂತೇ ಮಾಂತೀತಿ ವಾ ಮಾತ್ರಾಃ ಶಿಲೋಚ್ಚಯಾಃ** ಎಂದು ವಿವರಿಸಿದೆ. ಅಳತೆಮಾಡು ಎಂಬರ್ಥವುಳ್ಳ ಮಾ ಧಾತುವಿನಿಂದ ನಿಷ್ಪನ್ನವಾಗಿದೆ. ಪರಿಮಿತಿಯುಳ್ಳ ಸಕಲವಸ್ತುಗಳಿಗೂ ಅನ್ವಯಿಸಿದರೂ ಸಹ ಪ್ರಕೃತದಲ್ಲಿ ಉನ್ನತವಾದ ಶಿಲೋಚ್ಚಯವೆಂದರ್ಥಮಾಡಿದೆ. ಪೃಥಿವ್ಯಾದಿ ಸಕಲಭೂತಗಳ ಸ್ವರೂಪವನ್ನು ವರ್ಣಿಸುವಾಗಲೂ ಸಹ ಉಪನಿಷತ್ತುಗಳಲ್ಲಿ ಈ ಪದದ ಪ್ರಯೋಗವು ಈ ರೀತಿಯಿದೆ—

**ಪೃಥಿವೀ ಚ ಪೃಥಿವೀಮಾತ್ರಾ ಚಾಪಶ್ಚಾಪೋಮಾತ್ರಾಚ ತೇಜಶ್ಚ ತೇಜೋಮಾತ್ರಾ ಚ ವಾಯುಶ್ಚ ವಾಯುಮಾತ್ರಾ ಚ ಆಕಾಶಶ್ಚಾಕಾಶಮಾತ್ರಾ** ॥ (ಪ್ರಶ್ನ. ೪-೮).

ಉದಾಹೃತವಾಗಿರುವ ವಾಕ್ಯದಲ್ಲಿ ಮಾತ್ರಾ ಶಬ್ದಕ್ಕೆ ತನ್ಮಾತ್ರೆ ಎಂಬ ಪಾರಿಭಾಷಿಕವಾದ ಅರ್ಥವಿದೆ. ಪ್ರಕೃತದಲ್ಲಿ ದಾರ್ಶನಿಕವಾದ ವಿಮರ್ಶೆಗೆ ಅವಕಾಶವಿರುವುದಿಲ್ಲ ಒಟ್ಟಿನಲ್ಲಿ ಮನುಷ್ಯನ ಪರಿಮಿತಿಗೆ ನಿಯತವಾದ ವಸ್ತುಗಳೆಂದು ಹೇಳಬಹುದು. ಇಂದ್ರನು ಇವೆಲ್ಲಕ್ಕಿಂತಲೂ ಮೀರಿ ಬೆಳೆದವನು ಎಂದು ತಾತ್ಪರ್ಯ.

CC-0. Jangamwadi Math Collection. Digitized by eGangotri

**ಋಜೀಷೀ**—ಸೋಮಯುಕ್ತನಾಗಿರುವುದರಿಂದ ಈ ವಿಶೇಷಣವಿದೆ. ಮುಖ್ಯವಾಗಿ ಇಂದ್ರ ಮತ್ತು ಮರುತ್ತುಗಳ ಸ್ವರೂಪವನ್ನು ವರ್ಣಿಸುವಾಗ ಈ ವಿಶೇಷಣವನ್ನುಪಯೋಗಿಸಿದೆ. **ಅಮತ್ರೇಭಿರ್ಋಜೀಷಿಣ-ಮಿಂದ್ರಂ** ಇತ್ಯಾದಿ ಸನ್ನಿವೇಶಗಳಲ್ಲಿ (ಋ. ಸಂ. ೬-೪೨-೨) ಋಜೀಷಶಬ್ದಕ್ಕೆ ಶಕ್ತಿಯೆಂದರ್ಥಮಾಡಿದೆ. ಶತ್ರುನಿರೋಧಕವಾದ ಶಕ್ತಿಯನ್ನು ಪಡೆದಿರತಕ್ಕ ಇಂದ್ರನ ಎಂದು ವಿವರಿಸಿದೆ. ಆದರೆ ಅನೇಕಸಂದರ್ಭಗಳಲ್ಲಿ ಸೋಮಯುಕ್ತನಾಗಿರುವುದರಿಂದಲೇ ಈ ವಿಶೇಷಣವು ಪ್ರಸಿದ್ಧವಾಗಿದೆ.

**ಅಣೋರಣೀಯಾನ್ ಮಹತೋ ಮಹೀಯಾನ್** ಎಂದಿರುವಂತೆ ಇಲ್ಲಿಯೂ ಸಹ **ಉರೋಃ ಮಹಃ ಅಂತರಿಕ್ಷಾತ್ ಪ್ರ ರಿರಿಚೇ** ಎಂದು ಇಂದ್ರನ ಮಹತ್ತ್ವವನ್ನು ವರ್ಣಿಸಿದೆ. ಇಂದ್ರನು ವಾಯ್ವಾದಿತ್ಯಾದಿ ಸಕಲ ತತ್ತ್ವಗಳನ್ನೂ ಪ್ರತಿಬಿಂಬಿಸುವುದರಿಂದ ಉಪನಿಷತ್ತುಗಳಲ್ಲಿ ವರ್ಣಿಸಿರುವ ಪರತತ್ತ್ವವೇ ಸಂಹಿತೆಯಲ್ಲಿ ಒಂದೊಂದು ಸಲ ಇಂದ್ರರೂಪದಲ್ಲಿ ಪರಿಗಣಿತವಾಗಿದೆಯೆಂದು ಹೇಳಬಹುದು-ಈ ಅಂಶವನ್ನು ಮುಂದೆ ಇಂದ್ರಾದಿದೇವತೆಗಳ ಆಧ್ಯಾತ್ಮಿಕಸ್ವರೂಪ ವರ್ಣನೆಯಲ್ಲಿ ವಿವರಿಸಲಾಗುತ್ತದೆ.

ಸಂಹಿತಾಪಾಠಃ

ಉರುಂ ಗಭೀರಂ ಜನುಷಾಭ್ಯು೧ಗ್ರಂ ವಿಶ್ವವ್ಯಚಸಮವತಂ ಮತೀನಾಂ ।
ಇಂದ್ರಂ ಸೋಮಾಸಃ ಪ್ರದಿವಿ ಸುತಾಸಃ ಸಮುದ್ರಂ ನ ಸ್ರವತ ಆ ವಿಶಂತಿ ॥

ಪದಪಾಠಃ

ಉರುಂ । ಗಭೀರಂ । ಜನುಷಾ । ಅಭಿ । ಉಗ್ರಂ । ವಿಶ್ವऽವ್ಯಚಸಂ । ಅವತಂ । ಮತೀನಾಂ ।
ಇಂದ್ರಂ । ಸೋಮಾಸಃ । ಪ್ರऽದಿವಿ । ಸುತಾಸಃ । ಸಮುದ್ರಂ । ನ । ಸ್ರವತಃ । ಆ । ವಿಶಂತಿ ॥ ೪ ॥

ಸಾಯಣಭಾಷ್ಯಂ

ಉರುಂ ಮಹಾಂತಂ ಅತ ಏವ ಗಭೀರಂ ಮಹಾವಕಾಶಂ ಜನುಷಾ ಜನ್ಮನಾ ಸ್ವಭಾವತ ಏವೋಗ್ರಂ ಶತ್ರೂಣಾಂ ಭಯಂಕರಂ । ಗಭೀರತ್ವಮೇವೋಚ್ಯತೇ । ವಿಶ್ವವ್ಯಚಸಂ ವಿಶ್ವವ್ಯಾಪ್ತಂ ಮತೀನಾಂ ಸ್ತುತೀನಾಂ ಸ್ತೋತೄಣಾಂ ವಾವತಂ ರಕ್ಷಕಂ ಶಾದೃಶಮಿಂದ್ರಂ ಪ್ರದಿವಿ ಪೂರ್ವೇಷ್ವಹಃಸು ಸುತಾಸೋ ಗ್ರಾವಭಿರಭಿಷುತಾಃ ಸೋಮಾಸಃ ಸೋಮಾ ಅಭಿ ಅಭಿಮುಖ್ಯೇನಾ ವಿಶಂತಿ । ತತ್ರ ದೃಷ್ಟಾಂತಃ । ಸಮುದ್ರಂ ನ । ಯಥಾ ಸ್ರವತಃ ಸ್ರವಂತ್ಯೋ ನದ್ಯಃ ಸಮುದ್ರಮಾವಿಶಂತಿ ತದ್ವತ್ ॥ ಜನುಷಾ । ಜನೀ ಪ್ರಾದುರ್ಭಾವ ಇತ್ಯಸ್ಮಾಜ್ಜನೇರುಸಿರಿತ್ಯುಸಿಪ್ರತ್ಯಯಃ । ವಿಶ್ವವ್ಯಚಸಂ ! ವ್ಯಚ ವ್ಯಾಜೀಕರಣ ಇತ್ಯಸ್ಮಾದ-ಸುನ್ । ವ್ಯಚೇಃ ಕುಟಾದಿತ್ವಮನಸೀತಿ ವಕ್ತವ್ಯಮಿತ್ಯತ್ರಾನಸೀತಿ ಪರ್ಯುದಾಸಾತ್ ಸಂಪ್ರಸಾರಣಾಭಾವಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಸ್ಯಾಂತೋದಾತ್ತತ್ವಂ । ಅವತಂ । ಅವ ರಕ್ಷಣಾದಿಷು । ಔಣಾದಿಕೋऽತಚ್ಪ್ರತ್ಯಯಃ । ಚಿತ್ತ್ವಾದಂತೋದಾತ್ತಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಉರುಂ**—ಮಹತ್ಸ್ವರೂಪವುಳ್ಳವನೂ | **ಗಭೀರಂ**—ಅಗಾಧವಾದ ಜಠರವುಳ್ಳವನೂ | **ಜನುಷಾ**—ಸ್ವಾಭಾವಿಕವಾಗಿಯೇ (ಜನ್ಮದಿಂದಲೇ) | **ಉಗ್ರಂ**—ಶತ್ರುಗಳಿಗೆ ಭಯಂಕರನೂ | **ವಿಶ್ವವ್ಯಚಸಂ**—ವಿಶ್ವವ್ಯಾಪಕನೂ | **ಮತೀನಾಂ**—ಸ್ತುತಿಗಳಿಗೆ | **ಅವತಂ**—ರಕ್ಷಕನೂ ಆದ | **ಇಂದ್ರಂ**—ಇಂದ್ರನನ್ನು | **ಪ್ರದಿವಿ**—ಹಿಂದಿನ ಅಹಸ್ಸುಗಳಲ್ಲಿ | **ಸುತಾಸಃ**—ಹಿಂಡಲ್ಪಟ್ಟ | **ಸೋಮಾಸಃ**—ಸೋಮರಸಗಳು | **ಸ್ರವತಃ**—ಪ್ರವಹಿಸುವ ನದಿಗಳು | **ಸಮುದ್ರಂ ನ**—ಆಳವಾದ ಸಮುದ್ರವನ್ನು ಪ್ರವೇಶಿಸುವಂತೆ | **ಅಭಿ**—ಇಂದ್ರನ ಜಠರಾಭಿಮುಖವಾಗಿ | **ಆ ವಿಶಂತಿ**—ಹರಿಯುತ್ತಾ ಪ್ರವೇಶಿಸುತ್ತವೆ.

### ಭಾವಾರ್ಥ

ದೀರ್ಘವಾಗಿ ಪ್ರವಹಿಸುವ ನದಿಗಳು ಅಗಾಧವಾದ ಸಮುದ್ರವನ್ನು ಪ್ರವೇಶಿಸುವಂತೆ ಹಿಂದಿನ ದಿನಗಳಲ್ಲಿ ಹಿಂಡಲ್ಪಟ್ಟ ಸೋಮರಸಗಳು ಮಹತ್ಸ್ವರೂಪವುಳ್ಳವನೂ ಅಗಾಧವಾದ ಜಠರವುಳ್ಳವನೂ ಸ್ವಾಭಾವಿಕವಾಗಿಯೇ ಶತ್ರುಗಳಿಗೆ ಭಯಂಕರನೂ, ವಿಶ್ವವ್ಯಾಪಕನೂ ಸ್ತುತಿಗಳಿಗೆ ರಕ್ಷಕನೂ ಆದ ಇಂದ್ರನನ್ನು ಪ್ರವೇಶಿಸುತ್ತವೆ.

### English Translation

The Soma juices daily poured out enter into the vast and profound Indra, fierce from his birth, all-pervading, the protector of the pious (worshippers), as rivers flow into the sea.

### ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ವರ್ಣಿತವಾಗಿರುವಂತೆಯೇ ಇಲ್ಲಿಯೂ ಸಹ ಇಂದ್ರನ ವಿಶ್ವವ್ಯಾಪಕತ್ವವನ್ನು ವರ್ಣಿಸಿದೆ. ಇಂತಹ ಸಂದರ್ಭಗಳಲ್ಲಿ **ಸೋಮಾಸಃ** ಎಂಬುದಕ್ಕೆ ಕೇವಲ ಸೋಮರಸವೆಂದು. ಯಾಜ್ಞಿಕಪ್ರಕ್ರಿಯೆಯ ಅರ್ಥವನ್ನು ಹೇಳಲಾಗುವುದಿಲ್ಲ. ಅದರಲ್ಲೂ ಸಹ **ಸ್ರವತಃ ಸಮುದ್ರಂ ನ** ಎಂಬ ಉಪಮೆಯು ಇಂತಹ ಸಂದರ್ಭಗಳಲ್ಲಿರುವ ಅಸಾಧಾರಣವಾದ ಅರ್ಥವನ್ನು ತಿಳಿಸುತ್ತದೆ. ಇಂದ್ರನ ಜಠರವಾವುದು? ಅಲ್ಲಿ ಸೋಮದ ಪ್ರವಾಹವು ಹರಿಯುವುದು ಹೇಗೆ? ಈ ಮಹತ್ತ್ವರೂಪಕ್ಕೂ **ವಿಶ್ವವ್ಯಚಸಂ** ಎಂಬ ವಿಶೇಷಣದಿಂದ ವರ್ಣಿತವಾಗಿರುವ ಸ್ವರೂಪಕ್ಕೂ ಯಾವ ಸಾಧಾರಣಗುಣವಿದೆ ಎಂಬುದನ್ನು ಪರಿಶೀಲಿಸಬೇಕು. ಹಿಂದಿನಿಂದ ವರ್ಣಿತವಾಗಿರುವ ಇಂದ್ರನ ಅಸಾಧಾರಣಗುಣಗಳನ್ನೂ, ಮುಂದೆ ವರ್ಣಿಸಲ್ಪಡುವ ಗುಣಗಳನ್ನೂ ಪರಿಶೀಲಿಸಿದರೆ ಉಪನಿಷದಾದಿಗಳಲ್ಲಿ ವರ್ಣಿತವಾಗಿರುವ ಪರಬ್ರಹ್ಮತತ್ತ್ವಕ್ಕೂ ಇಂದ್ರತತ್ತ್ವಕ್ಕೂ ತಾದಾತ್ಮ್ಯವಿದೆಯೇ ಅಥವಾ ಆಧುನಿಕವಿದ್ವಾಂಸರು ವಿಮರ್ಶಿಸುವಂತೆ ಇಂದ್ರನು ಅಪರತತ್ತ್ವಕ್ಕೆ ಒಳಗಾದ ದೇವತೆಯೇ ಎಂಬುದನ್ನು ಮುಂದೆ ನಿರ್ಧರಿಸಬೇಕು.

---

### ಸಂಹಿತಾಪಾಠಃ

ಯಂ ಸೋಮಮಿಂದ್ರ ಪೃಥಿವೀದ್ಯಾವಾ ಗರ್ಭಂ ನ ಮಾತಾ ಬಿಭೃತಸ್ತ್ವಾಯಾ ।

CC-0. Jangamwadi Math Collection. Digitized by eGangotri

ತಂ ತೇ ಹಿನ್ವಂತಿ ತಮು ತೇ ಮೃಜಂತ್ಯಧ್ವರ್ಯವೋ ವೃಷಭ ಪಾತವಾ

ಉ ॥ ೫ ॥

ಪದಪಾಠಃ

ಯಂ । ಸೋಮಂ । ಇಂದ್ರ । ಪೃಥಿವೀದ್ಯಾವಾ । ಗರ್ಭಂ । ನ । ಮಾತಾ । ಬಿಭೃತಃ । ತ್ವಾಽಯಾ ।

ತಂ । ತೇ । ಹಿನ್ವಂತಿ । ತಂ । ಊಂ ಇತಿ । ತೇ । ಮೃಜಂತಿ । ಅಧ್ವರ್ಯವಃ । ವೃಷಭ । ಪಾತವೈ ।

ಊಂ ಇತಿ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ಪೃಥಿವೀದ್ಯಾವಾ ದ್ಯಾವಾಪೃಥಿವ್ಯೌ ತ್ವಾಯಾ ತ್ವತ್ಕಾಮನಯಾ ಯಂ ಸೋಮಂ ಬಿಭೃತೋಽಂತರ್ಧಾರಯತಃ । ಅತ್ರ ದೃಷ್ಟಾಂತಃ । ಗರ್ಭಂ ನ । ಯಥಾ ಮಾತಾ ಗರ್ಭಂ ಬಿಭರ್ತಿ ತದ್ವತ್ ಹೇ ವೃಷಭ ಕಾಮಾನಾಂ ವರ್ಷಕ ಹೇ ಇಂದ್ರ ಅಧ್ವರ್ಯವೋಽಧ್ವರಂ ಯಜಮಾನಾಯೇಚ್ಛಂತಸ್ತೇ ತ್ವದರ್ಥಂ ತಂ ಸೋಮಂ ಹಿನ್ವಂತಿ । ಪ್ರೇರಯಂತಿ । ಕಿಂಚ ತೇ ತವ ಪಾತವೈ ಪಾನಾಯ ತಂ ಸೋಮಂ ಮೃಜಂತಿ । ಶೋಧಯಂತಿ । ಉ ಪ್ರಸಿದ್ಧೌ ॥ ಪೃಥಿವೀದ್ಯಾವಾ । ದಿವೋ ದ್ಯಾವೇತಿ ದ್ಯಾವಾದೇಶಃ । ಆದ್ಯುದಾತ್ತಃ । ನೋತ್ತರಪದೇಽನುದಾತ್ತಾದಾವಪೃಥಿವೀರುದ್ರಪೂಷಮಂಥಿಷ್ವಿತ್ಯತ್ರ ಪರ್ಯುದಾಸಾದ್ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರಃ । ಕೃತಸಮಾಸಸ್ಯ ವಿಪರ್ಯಾಸಶ್ಛಾಂದಸಃ । ಬಿಭೃತಃ । ಡುಭೃಞ್ ಧಾರಣಪೋಷಣಯೋರಿತ್ಯಸ್ಮಾಲ್ಲಟಿ ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಯದ್ವೃತ್ತಯೋಗಾದನಿಘಾತಃ । ಅಜಾದಿಪ್ರತ್ಯಯಪರತ್ವಾಭಾವಾದತ್ರಾಭ್ಯಸ್ತಾನಾಮಾದಿರಿತಿ ಸ್ವರೋ ನ ಭವತಿ । ಪ್ರತ್ಯಯಸ್ವರಃ । ತ್ವಾಯಾ । ತ್ವಾಮಿಚ್ಛತೀತ್ಯರ್ಥೇ ಸುಪ ಆತ್ಮನಃ ಕ್ಯಚ್ । ಪೂರ್ವಪದವಕಾರಸ್ಯಾಕಾರಶ್ಛಾಂದಸಃ। ಅ ಪ್ರತ್ಯಯಾದಿತಿ ಭಾವೇಽಪ್ರತ್ಯಯಃ । ಸುಪಾಂ ಸುಲುಗಿತಿ ತೃತೀಯಾಯಾಃ ಸವರ್ಣದೀರ್ಘಃ । ಏಕಾದೇಶಸ್ವರಃ । ಅಧ್ವರ್ಯವಃ । ಅಧ್ವರಮಿಚ್ಛಂತಃ । ಸುಪಃ ಕ್ಯಚ್ । ಕವ್ಯಧ್ವರಪೃತನಸ್ಯರ್ಚಿ ಲೋಪ ಇತ್ಯಕಾರಲೋಪಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ। ಪ್ರತ್ಯಯಸ್ವರಃ । ಪಾತವೈ । ಪಾ ಪಾನೇ। ತುಮರ್ಥೇ ತವೈಪ್ರತ್ಯಯಃ । ಅಂತಶ್ಚ ತವೈ ಯುಗಪದಿತಿ ಧಾತ್ವಂತಸ್ಯ ಪ್ರತ್ಯಯಸ್ಯ ಚೋದಾತ್ತತ್ವಂ । ಊಞ ಇತಿ ಪ್ರಗೃಹ್ಯಸಂಜ್ಞಾ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಮಾತಾ—ತಾಯಿಯಾದವಳು । ಗರ್ಭಂ ನ—ತನ್ನ ಶಿಶುವನ್ನು ಗರ್ಭದಲ್ಲಿ ಮಮತೆಯಿಂದ ಸಂರಕ್ಷಿಸಿ ಧರಿಸಿರುವಂತೆ । ಪೃಥಿವೀದ್ಯಾವಾ—ದ್ಯಾವಾಪೃಥಿವಿಗಳೆರಡೂ ಸಹ । ತ್ವಾಯಾ—ನಿನ್ನನ್ನುದ್ದೇಶಿಸಿ । ಯಂ ಸೋಮಂ—ಯಾವ ಸೋಮವನ್ನು । ಬಿಭೃತಃ—ಹಿಡಿದಿರುವರೋ । ತಂ—ಅದೇ ಸೋಮವನ್ನು । ವೃಷಭ—ಕಾಮವರ್ಷಕನಾದ ಎಲೈ ಇಂದ್ರನೇ । ಅಧ್ವರ್ಯವಃ—ಅಧ್ವರ್ಯುಗಳು। ತೇ—ನಿನಗಾಗಿ । ಹಿನ್ವಂತಿ—ಹಿಂಡಿ ಹಿಡಿಯುತ್ತಾರೆ । ತೇ—ನಿನ್ನ । ಪಾತವೈ—ಪಾನಕ್ಕಾಗಿ । ತಂ—ಆ ಸೋಮವನ್ನು । ಮೃಜಂತಿ—ಶೋಧಿಸುತ್ತಾರೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಕಾಮವರ್ಷಕನಾದ ಎಲೈ ಇಂದ್ರನೇ, ತಾಯಿಯಾದವಳು ಶಿಶುವನ್ನು ತನ್ನ ಗರ್ಭದಲ್ಲಿ ಮಮತೆಯಿಂದ ಸಂರಕ್ಷಿಸಿ ಧರಿಸಿರುವಂತೆ, ದ್ಯಾವಾಪೃಥಿವಿಗಳೆರಡೂ ಸಹ ನಿನ್ನನ್ನುದ್ದೇಶಿಸಿ ಯಾವ ಸೋಮವನ್ನು ಹಿಡಿದಿರುವರೋ, ಅದರಂತೆ ಸೋಮವನ್ನು ಅಧ್ವರ್ಯುಗಳು ನಿನಗಾಗಿ ಹಿಡಿದಿದ್ದಾರೆ. ನಿನ್ನ ಪಾನಕ್ಕಾಗಿ ಅದೇ ಸೋಮವನ್ನು ಶೋಧಿಸುತ್ತಾರೆ

English Translation

Which Soma, Indra, the heaven and earth contain for you, as a mother contains the embryo; showerer (of benefits), the priests pour it out for you they purify it for your drinking.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ಸೂಚಿಸಿರುವಂತೆಯೇ ಸೋಮಶಬ್ದಕ್ಕೆ ಇಲ್ಲಿಯೂ ಸಹ ಒಂದು ವಿಶೇಷಾರ್ಥವಿರಬೇಕೆಂದು ತಿಳಿಯುತ್ತದೆ. ಶತಪಥಬ್ರಾಹ್ಮಣದಲ್ಲಿ (೧೧-೫-೯-೧೦-೧೧) ವರ್ಣಿತವಾಗಿರುವಂತೆ ಸೃಷ್ಟಿಶಕ್ತಿಗೆ ಸೌಂದರ್ಯವನ್ನು ಕೊಡತಕ್ಕ ಒಂದು ತೇಜೋವಿಶೇಷವೆಂದರ್ಥಮಾಡಬಹುದು. ಅಥವಾ ಆ ತೇಜಸ್ಸಿಗೆ ಕಾರಣವಾದ ರಸವಿಶೇಷವಾಗಬಹುದು. ಸೋಮದೇವನು ತೇಜಸ್ಸಿಗೆ ಅಧಿಪತಿಯಾದ ಆದಿತ್ಯರೂಪಿಯೂ ಆಗಿದ್ದಾನೆ. (ಶ. ಬ್ರಾ. ೧೧-೫.೯). ಸೋಮವು ಸೋಮನಿಗೇ ಅರ್ಪಿತವಾಗುತ್ತದೆ ಎಂದಿರುವ ಸನ್ನಿವೇಶಗಳಲ್ಲೂ ಸಹ ಇದೇ ವಿಧವಾದ ವಿಶೇಷಾರ್ಥವನ್ನು ಹೇಳಬೇಕಾಗುತ್ತದೆ- ದ್ಯಾವಾಪೃಥಿವಿಗಳು ಇಂದ್ರನ ವೃದ್ಧಿಗಾಗಿ ಸೋಮವನ್ನು ಹಿಡಿದಿರುವುವು ಎಂಬುದರಲ್ಲಿ ಗೂಢಾರ್ಥವಿದೆ- ವಿಶ್ವವ್ಯವಹಾರಕ್ಕೆ ಮೂಲಭೂತವಾದ ದ್ಯಾವಾಪೃಥಿವಿಗಳು ಯಾವ ರೀತಿ ಇಂದ್ರನ ತೇಜೋವೃದ್ಧಿಗೆ ಕಾರಣವಾಗುವುವೋ ಅದೇ ರೀತಿ ಅಧ್ವರ್ಯುಗಳೂ ಸಹ ಕಾರಣರಾಗಿರುತ್ತಾರೆಂದರ್ಥ. ಮೇಲೆ ಸೂಚಿತವಾಗಿರುವ ಶತಪಥಬ್ರಾಹ್ಮಣದ ವಾಕ್ಯದ ಆಧಾರದಮೇಲೆ ಈ ವಿಧವಾದ ತಾತ್ಪರ್ಯವನ್ನು ಹೇಳಲಾಗಿದೆ.

---

## ನಲವತ್ತೇಳನೆಯ ಸೂಕ್ತವು.

---

ಸಾಯಣಭಾಷ್ಯಂ

ಮರುತ್ವಾನಿತಿ ಪಂಚರ್ಚಂ ನವಮಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ । ಮರುತ್ವಾನಿತ್ಯನುಕ್ರಮಣಿಕಾ ॥ ದಶರಾತ್ರೇ ಚತುರ್ಥೇಽಹನಿ ಮರುತ್ವತೀಯಶಸ್ತ್ರ ಏತತ್ಸೂಕ್ತಂ ನಿವಿದ್ಧಾನೀಯಂ । ಸೂತ್ರಿತಂ ಚ । ಶ್ರುಧೀ ಹವಮಿಂದ್ರ ಮರುತ್ವಾँ ಇಂದ್ರೇತಿ ಮರುತ್ವತೀಯಂ । ಆ. ೭-೧೧ । ಇತಿ ॥ ಋಷಭನಾಮ್ನ್ಯೇಕಾಹೇಽಪಿ ಮರುತ್ವತೀಯಶಸ್ತ್ರ ಏತನ್ನಿವಿದ್ಧಾನಂ । ಸೂತ್ರಿತಂ ಚ । ಮರುತ್ವಾँ ಇಂದ್ರ ಯುಧ್ಮಸ್ಯ ತ ಇತಿ ಮಧ್ಯಂದಿನಃ । ಆ. ೯-೭ । ಇತಿ ॥

CC-0. Jangamwadi Math Collection. Digitized by eGangotri

**ಅನುವಾದವು—ಮರುತ್ವಾನ್** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು, ಇಂದ್ರನು ದೇವತೆಯು, ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಮರುತ್ವಾನ್** ಎಂದು ಮೊದಲಾಗಿ ಹೇಳಿರುವುದು ದಶರಾತ್ರವೆಂಬ ಯಾಗದ ನಾಲ್ಕನೆಯ ದಿವಸ ಮರುತ್ವತೀಯಶಸ್ತ್ರಮಂತ್ರಪಠನಕಾಲದಲ್ಲಿ ಈ ಸೂಕ್ತವನ್ನು ನಿವಿನ್ಮಂತ್ರಗಳಿಗಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಶ್ರುಧೀ ಹವಮಿಂದ್ರ ಮರುತ್ವಾँ ಇಂದ್ರೇತಿ ಮರುತ್ವತೀಯಂ** ಎಂಬ ಸೂತ್ರದಿಂದಲೂ (ಆ. ೭–೧೧), ಒಂದು ದಿವಸಮಾತ್ರ ಮಾಡಲ್ಪಡುವ ಋಷಭನಾಮ್ನಿಯೆಂಬ ಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರಗಳನ್ನು ಪಠಿಸುವಾಗ ನಿವಿನ್ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ—**ಮರುತ್ವಾँ ಇಂದ್ರ ಯುಧ್ಮಸ್ಯ ತೇ ಇತಿ ಮಧ್ಯಂದಿನಃ** ಎಂಬ ಸೂತ್ರದಿಂದಲೂ (ಆ. ೯–೭) ವಿವೃತವಾಗಿರುವುದು.

---

॥ ಓಂ ॥

## ಸೂಕ್ತ—೪೭

ಮಂಡಲ—೩ ॥ ಅನುವಾಕ—४ ॥ ಸೂಕ್ತ—೪೭ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

। ಋಷಿಃ—ವಿಶ್ವಾಮಿತ್ರಃ ।

॥ ದೇವತಾ—ಇಂದ್ರಃ ॥

। ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ಮರುತ್ವाँ ಇಂದ್ರ ವೃಷಭೋ ರಣಾಯ ಪಿಬಾ ಸೋಮಮನುಷ್ವಧಂ ಮದಾಯ ।

ಆ ಸಿಂಚಸ್ವ ಜಠರೇ ಮಧ್ವ ಊರ್ಮಿಂ ತ್ವಂ ರಾಜಾಸಿ ಪ್ರದಿವಃ ಸುತಾನಾಂ॥

ಮರುತ್ವಾನ್ । ಇಂದ್ರ । ವೃಷಭಃ । ರಣಾಯ । ಪಿಬ । ಸೋಮಂ । ಅನುಸ್ವಧಂ । ಮದಾಯ ।

ಆ । ಸಿಂಚಸ್ವ । ಜಠರೇ । ಮಧ್ವಃ । ಊರ್ಮಿಂ । ತ್ವಂ । ರಾಜಾ । ಅಸಿ । ಪ್ರದಿವಃ । ಸುತಾನಾಂ ॥ ೧ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಹೇ ಇಂದ್ರ ಯೋ ವೃಷಭೋऽಪಾಂ ವರ್ಷಿತಾ ಮರುತ್ವಾನ್ । ಮರುತೋ ದೇವವಿಶಸ್ತದ್ವಾನ್ । ಸ ತ್ವಮನುಷ್ವಧಂ ಸ್ವಧಯಾ ಸವನೀಯಪುರೋಡಾಶಾದಿರೂಪೇಣಾನ್ನೇನಾನುಗತಂ ಸೋಮಂ ರಣಾಯ ರಮಣೀಯಸಂಗ್ರಾಮಾರ್ಥಂ ಮದಾಯ ತಂ ಸೋಮಂ ಪಿಬ । ಕಿಂಚ ಮಧ್ವೋ ಮದಕರಸ್ಯ ಸೋಮಸ್ಯೋರ್ಮಿಂ ಸಂಘಾತಂ ಬಹುರಸಂ ಜಠರೇ । ಜಗ್ಧಮನ್ನಮಸ್ಮಿಂಸ್ತಿಷ್ಠತೀತಿ ಜಠರಮುದರಂ । ತಸ್ಮಿನ್ನುದರ ಆ ಸಿಂಚಸ್ವ । ಸರ್ವತಃ ಕ್ಷಾರಯ । ಯತಸ್ತ್ವಂ ಪ್ರದಿವಃ ಪೂರ್ವೇಷ್ವಹಃಸು ಸುತಾನಾಮಭಿಷುತಾನಾಂ ಸೋಮಾನಾಂ ರಾಜಾಸೀಶಿತಾಸಿ । ನ ಕೇವಲಮಧುನಾತನಾನಾಮಿತಿ ಭಾವಃ । ಉಕ್ತಮರ್ಥಂ ಯಾಸ್ಕೋ ಬ್ರವೀತಿ । ಮರುತ್ವಾನಿಂದ್ರ ಮರುದ್ಭಿಸ್ತದ್ವಾನ್ ವೃಷಭೋ ವರ್ಷಿತಾಪಾಂ ರಣಾಯ ರಮಣೀಯಾಯ ಸಂಗ್ರಾಮಾಯ ಪಿಬ ಸೋಮಮನುಷ್ವಧಮನ್ವನ್ನಂ ಮದಾಯ ಮದನೀಯಾಯ ಜೈತ್ರಾಯಾಸಿಂಚ ಸ್ವಜಠರೇ ಮಧುನ ಊರ್ಮಿಂ । ಮಧು ಸೋಮಮಿತ್ಯಾಪಮಿಕಂ ಮಾದ್ಯತೇರಿದಮಪೀತರನ್ಮಧ್ವೇತಸ್ಮಾದೇವ । ತ್ವಂ ರಾಜಾಸಿ ಪೂರ್ವೇಷ್ವಪ್ಯಹಃಸು ಸುತಾನಾಂ । ನಿ. ೪-೮ । ಇತಿ ॥ ಅನುಷ್ವಧಂ । ಸ್ವಧಾಮನುಗಮ್ಯ ವರ್ತಮಾನಂ । ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯೇತಿ ಸಮಾಸಃ । ಸಂಹಿತಾಯಾಂ ಪೂರ್ವಪದಾತ್ । ಪಾ. ೮-೩-೧೦೬ । ಇತಿ ಷತ್ವಂ । ನಿರುದಕಾದಿತ್ವಾದಂತೋದಾತ್ತತ್ವಂ । ಊರ್ಮಿಂ । ಅರ್ತೇರುಚ್ಚೇತಿ ಮಿಪ್ರತ್ಯಯಃ ಧಾತೋರೂ ಇತ್ಯಾದೇಶೋ ರಪರಃ । ಪ್ರತ್ಯಯಸ್ವರಃ ॥

### ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ವೃಷಭಃ—ವೃಷ್ಟಿಯನ್ನು ಸುರಿಸುವವನೂ । **ಮರುತ್ವಾನ್**—ಮರುತ್ತುಗಳೊಡಗೂಡಿದವನೂ ಆದ ನೀನು । **ಅನುಷ್ವಧಂ**—ಸ್ವಧಾರೂಪವಾದ ಅನ್ನದಿಂದ ಕೂಡಿದ । **ಸೋಮಂ**—ಸೋಮವನ್ನು । ರಣಾಯ—ಸಂಗ್ರಾಮದಲ್ಲಿ । **ಮದಾಯ**—ನಿನ್ನ ವೀರ್ಯವನ್ನು ವೃದ್ಧಿಗೊಳಿಸುವುದಕ್ಕಾಗಿ । ಪಿಬ—ಪಾನಮಾಡು । **ಮಧ್ವಃ**—ಮದಕಾರಕವಾದ ಸೋಮದ । **ಊರ್ಮಿ**—ಅಲೆಯ ರೂಪದಲ್ಲಿರುವ ರಸವನ್ನು । ಜಠರೇ—ನಿನ್ನ ಜಠರದಲ್ಲಿ । ಆ ಸಿಂಚಸ್ವ—ಪೂರ್ಣವಾಗಿ ಸುರಿ । **ತ್ವಂ**—ನೀನು । **ಪ್ರದಿವಃ**—ಹಿಂದಿನ ಅಹಸ್ಸುಗಳಲ್ಲಿ । **ಸುತಾನಾಂ**—ಹಿಂಡಲ್ಪಟ್ಟ ಸೋಮಗಳಿಗೆಲ್ಲಾ । ರಾಜಾ—ಪ್ರಭುವಾಗಿ । ಆಸಿ—ಆಗಿದ್ದೀಯೆ ।

### ಭಾವಾರ್ಥ

ಎಲೈ ಇಂದ್ರನೇ, ವೃಷ್ಟಿಯನ್ನು ಸುರಿಸುವವನೂ, ಮರುತ್ತುಗಳೊಡಗೂಡಿದವನೂ ಆದ ನೀನು ಸ್ವಧಾರೂಪವಾದ ಅನ್ನದಿಂದ ಕೂಡಿದ ಸೋಮವನ್ನು ಸಂಗ್ರಾಮದಲ್ಲಿ ನಿನ್ನ ವೀರ್ಯವನ್ನು ವೃದ್ಧಿಗೊಳಿಸುವುದಕ್ಕಾಗಿ ಪಾನಮಾಡು. ಮದಕಾರಕವಾದುದೂ, ಅಲೆಯರೂಪದಲ್ಲಿರುವುದೂ ಆದ ಸೋಮರಸವನ್ನು ನಿನ್ನಜಠರದಲ್ಲಿ ಪೂರ್ಣವಾಗಿ ಸುರಿ. ನೀನು ಹಿಂದಿನ ಅಹಸ್ಸುಗಳಲ್ಲಿ ಹಿಂಡಲ್ಪಟ್ಟ ಸೋಮಗಳಿಗೆಲ್ಲಾ ಪ್ರಭುವಾಗಿದ್ದೀಯೆ.

### English Translation

Indra, attended by the Maruts, the showerer (of benefits), drink the Soma offered after the other presentations, for your exhilaration for battle; take into your belly the (full) wave of the inebriating (Soma), for you are lord of libations from the days of old.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಅನುಷ್ವಧಂ**— ಅನು+ಸ್ವಧಾ ಎಂಬೆರಡು ಪದಗಳು ಸೇರಿವೆ. ಸ್ವಧಾರೂಪವಾದ ಅನ್ನಾರ್ಪಣೆಯಾದ ನಂತರ ಸೋಮಪಾನವೆಂದರ್ಥ. Monier Wilians ಎಂಬ ಪಂಡಿತನು ಅನುಷ್ವಧಂ ಎಂಬ ಪದದ ಅರ್ಥವನ್ನು ಹೇಳುವಾಗ According one's own will ; voluntary ; ಸ್ವೇಚ್ಛೆಯಿಂದ ಎಂದರೆ ಇತರರ ಪ್ರೇರಣೆ ಯಿಲ್ಲದೆ ಆತ್ಮಪ್ರೇರಣೆಯಿಂದ ಕಾರ್ಯ ಮಾಡುವುದು ಎಂದರ್ಥ ಮಾಡಿ ಋಕ್ಸಂಹಿತೆಯನ್ನು ನಿರ್ದೇಶಿಸಿದ್ದಾನೆ ಆದರೆ ಋಕ್ಸಂಹಿತೆಯಲ್ಲಿ ಯಾವ ಕಡೆಗಳಲ್ಲೂ ಸಾಯಣರು ಈ ಅರ್ಥವನ್ನು ಹೇಳಿಲ್ಲ.

**ಊರ್ಮಿ**— ಊರ್ಮಿರೂರ್ಣೋತೇಃ । ಆಚ್ಛಾದನಮಾಡು, ಮುಚ್ಚು ಆವರಿಸು ಎಂಬ ಅರ್ಥವುಳ್ಳ **ಊರ್ಣ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ನಿರುಕ್ತಕಾರರ ಮತ. (ನಿ. ೫-೨೭) (ಅರ್ತೇರಚ್ಚ ಎಂಬ ಉಣಾದಿಸೂತ್ರವು ಪಠಿತವಾಗಿದೆ). ತರಂಗ (ಅಲೆ) ವೆಂಬ ಅರ್ಥದಲ್ಲಿ ಉಪಯೋಗಿಸಿರುವಂತೆಯೇ ಜಲಸಂಘಾತ, ಜಲಸಮೂಹವೆಂಬ ಅರ್ಥದಲ್ಲಿಯೂ ಈ ಪದದ ಪ್ರಯೋಗವಿದೆ. ಇಲ್ಲಿ ಸೋಮರಸದ ಆಧಿಕ್ಯವನ್ನು ಸೂಚಿಸುತ್ತದೆ.

**ರಣಾಯ**— ರಮಣೀಯವಾದುದು ಎಂಬ ಮೂಲಾರ್ಥದ ಮೇಲೆ ರಣಶಬ್ದವು ಯುದ್ಧಪರ್ಯಾಯಪದ ವಾಗಿದೆ. ದೇವತೆಗಳು ಒಟ್ಟಿಗೆ ಸೇರಿಕೊಂಡು ಯುದ್ಧಮಾಡುತ್ತಿರುವಾಗ ಜಯವುಕ್ತ್ಸಿಸಿದ್ಧ ಎಂಬ ಹರ್ಷಧ್ವನಿಯಿರು ವುದರಿಂದ (ರಣಯಂತಿ) ಯುದ್ಧಭೂಮಿಯೂ ರಮಣೀಯವಾಗಿದೆಯೆಂದು ಈ ಪದವು ಸೂಚಿಸುತ್ತದೆ.

---

ಸಂಹಿತಾಪಾಠಃ

ಸಜೋಷಾ ಇಂದ್ರ ಸಗಣೋ ಮರುದ್ಭಿಃ ಸೋಮಂ ಪಿಬ ವೃತ್ರಹಾ ಶೂರ ವಿದ್ವಾನ್ ।

ಜಹಿ ಶತ್ರೂಁರಪ ಮೃಧೋ ನುದಸ್ವಾಥಾಭಯಂ ಕೃಣುಹಿ ವಿಶ್ವತೋ ನಃ

ಪದಪಾಠಃ

ಸಽಜೋಷಾಃ । ಇಂದ್ರ । ಸಽಗಣಃ । ಮರುತ್ಽಭಿಃ । ಸೋಮಂ । ಪಿಬ । ವೃತ್ರಽಹಾ । ಶೂರ । ವಿದ್ವಾನ್ ।

ಜಹಿ । ಶತ್ರೂನ್ । ಅಪ । ಮೃಧಃ । ನುದಸ್ವ । ಅಥ । ಅಭಯಂ । ಕೃಣುಹಿ । ವಿಶ್ವತಃ । ನಃ । ॥ ೨ ॥

ಸಾಯಣಭಾಷ್ಯಂ

ಸಜೋಷಾ ಇಂದ್ರೇತಿ ಮರುತ್ವತೀಯಗ್ರಹಸ್ಯ ಯಾಜ್ಯಾ । ಸೂತ್ರಿತಂ ಚ । ಸಜೋಷಾ ಇಂದ್ರ ಸಗಣೋ ಮರುದ್ಭಿರಿತಿ ಭಕ್ಷಯಿತ್ವೈತತ್ಪಾತ್ರಂ । ಆ. ೫-೧೪ । ಇತಿ ॥

ಹೇ ಶೂರ ಬಲವನ್ ಹೇ ಇಂದ್ರ ಸಜೋಷಾಃ ಸಂಗತೋ ದೇವೈರ್ಮರುದ್ಭಿಃ ಸಗಣೋ ಮರುದ್ಭಿರೇವ ವೃತ್ರಹಾ ವೃತ್ರಸ್ಯ ಹಂತಾ ವಿದ್ವಾನ್ಸರ್ವವಿಷಯಾಭಿಜ್ಞಸ್ತ್ವಂ ಸೋಮಂ ಪಿಬ । ತತೋ ನಃ

CC-0. Jangamwadi Math Collection. Digitized by eGangotri

ಶತ್ರೂನ್ ಜಹಿ । ಮೃಧೋ ಹಿಂಸಕಾನ್ ಶತ್ರೂನಪ ನುದಸ್ವ । ಯದ್ವಾ ಮೃಧಃ। ಹಿಂಸ್ಯಂತೇಽತ್ರ ಪ್ರಾಣಿನ ಇತಿ ಮೃಧಃ ಸಂಗ್ರಾಮಾಃ । ತತ್ರ ವರ್ತಮಾನಾನ್ ಶತ್ರೂನಪನುದಸ್ವ । ಅಥಾನಂತರಂ ನೋಽಸ್ಮಾಕಂ ವಿಶ್ವತಃ ಸರ್ವತೋಽಭಯಂ ಕೃಣುಹಿ । ಕುರು । ಸರ್ವತೋ ಭಯರಹಿತಾನಸ್ಮಾನ್ಕುರ್ವಿತ್ಯರ್ಥಃ ॥ ವೃತ್ರಹಾ । ಹಂತೇರ್ಬ್ರಹ್ಮಭ್ರೂಣವೃತ್ರೇಷು ಕ್ವಿಪ್ । ಅಭಯಂ । ಞಿಭೀ ಭಯೆ ಇತ್ಯಸ್ಮಾದೇರಚ್ । ನಞಾ ಸಮಾಸೇ ತಸ್ಯ ಸ್ವರಃ । ವಿಶ್ವತಃ । ಪಂಚಮ್ಯಾಸ್ತಸಿಲ್ । ಲಿತ್ಸ್ವರಃ ॥

ಪ್ರತಿಪದಾರ್ಥ

**ಶೂರ**—ಪರಕ್ರಮಶಾಲಿಯಾದ। **ಇಂದ್ರ**—ಇಂದ್ರನೇ । **ಮರುದ್ಭಿಃ**—ಮರುತ್ತುಗಳೊಡನೆ । **ಸಗಣಃ**—ಕೂಡಿಕೊಂಡವನಾಗಿಯೂ । **ಸಜೋಷಾಃ**—ಸಮಾನವಾದ ಪ್ರೀತಿಯುಳ್ಳವನಾಗಿಯೂ । **ವೃತ್ರಹಾ**—ವೃತ ಹಂತಕನೂ । **ವಿದ್ವಾನ್**— ಪ್ರಾಜ್ಞನೂ ಆದ ನೀನು । **ಸೋಮಂ**—ಸೋಮರಸವನ್ನು । **ಪಿಬ**—ಪಾನಮಾಡು । **ಶತ್ರೂನ್**—ನಮ್ಮ ಶತ್ರುಗಳನ್ನು । **ಜಹಿ**—ಸೋಲಿಸು । **ಮೃಧಃ**—ಸಂಗ್ರಾಮದಲ್ಲಿರುವ ಶತ್ರುಗಳನ್ನು । **ಅಪ ನುದಸ್ವ**—ನಾಶಮಾಡು । **ಅಥ**—ಅನಂತರ । **ನಃ**—ನಮಗೆ । **ವಿಶ್ವತಃ**—ಎಲ್ಲಾ ಕಡೆಗಳಿಂದಲೂ । **ಅಭಯಂ**—ಭಯರಾಹಿತ್ಯವನ್ನು । **ಕೃಣುಹಿ**—ಉಂಟುಮಾಡು ।

ಭಾವಾರ್ಥ

ಪರಾಕ್ರಮಶಾಲಿಯಾದ ಎಲೈ ಇಂದ್ರನೇ, ಮರುತ್ತುಗಳೊಡನೆ ಕೂಡಿಕೊಂಡವನಾಗಿಯೂ, ಅವರೊಡನೆ ಸಮಾನವಾದ ಪ್ರೀತಿಯುಳ್ಳವನಾಗಿಯೂ, ವೃತ್ರಹಂತಕನೂ, ಪ್ರಾಜ್ಞನೂ ಆದ ನೀನು ಸೋಮರಸವನ್ನು ಪಾನಮಾಡು. ನಮ್ಮ ಶತ್ರುಗಳನ್ನು ಸೋಲಿಸು. ಸಂಗ್ರಾಮದಲ್ಲಿ ಉದ್ಯುಕ್ತರಾದ ಶತ್ರುಗಳನ್ನು ನಾಶಮಾಡಿ ಅನಂತರ ನಮಗೆ ಎಲ್ಲಾ ಕಡೆಗಳಿಂದಲೂ ಭಯವಿಲ್ಲದಿರುವಂತೆ ಮಾಡು.

English Translation

Indra, hero, rejoicing with and accompanied by the host of Maruts, drink the Soma, for you are the slayer of Vritra, the sage; subdue our enemies, drive away the malevolent, make us safe on every side from peril.

ವಿಶೇಷವಿಷಯಗಳು

**ಸಜೋಷಾ ಇಂದ್ರ** ಎಂಬ ಈ ಋಕ್ಕನ್ನು ಮರುತ್ವತೀಯಗ್ರಹಕ್ಕೆ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಸಜೋಷಾ ಇಂದ್ರ ಸಗಣೋ ಮರುದ್ಭಿರಿತಿ ಭಕ್ಷಯಿತ್ವೈ-ಕಪಾತ್ರಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೧೪)

**ಮೃಧಃ**—**ಮೃಧಶಬ್ದವು ಸಂಗ್ರಾಮನಾಮಗಳಲ್ಲಿ** ಪಠಿತವಾಗಿದೆ. (ನಿ-೩-೯) ಬಹುಶಃ ಯುದ್ಧವೆಂಬರ್ಥದಲ್ಲಿಯೇ ಇದರ ಪ್ರಯೋಗವು ಅಧಿಕವಾಗಿದೆ. ಆದರೆ ಕೆಲವು ಸನ್ನಿವೇಶಗಳಲ್ಲಿ ಯುದ್ಧಕ್ಕೆ ಹೇತುವಾದ ಶತ್ರುವೆಂದೂ ಅರ್ಥವಾಗುತ್ತದೆ. ನಿರುಕ್ತಕಾರರು

**ವಿ ನ ಇಂದ್ರ ಮೃಧೋ ಜಹಿ ನೀಚಾ ಯಚ್ಛ ಪೃತನ್ಯತಃ ।**

**(ಋ. ಸಂ. ೧೦-೧೫೨-೪)**

CC-0. Jangamwadi Math Collection. Digitized by eGangotri

ಎಂಬ ಋಕ್ಕನ್ನುದಾಹರಿಸಿ ಅಲ್ಲಿ **ಸಂಗ್ರಾಮಕಾರಿಣಃ ಶತ್ರೂನ್** ಎಂಬ ಅರ್ಥವಿದೆಯೆಂದು ತೋರಿಸಿದ್ದಾರೆ. (ನಿ. ೭-೨) ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶತ್ರು ಪರ್ಯಾಯವಾಗಿಯೇ ಇದೆ.

ಸಂಹಿತಾಪಾಠಃ

**ಉತ ಋತುಭಿರ್ಋತುಪಾಃ ಪಾಹಿ ಸೋಮಮಿಂದ್ರ ದೇವೇಭಿಃ ಸಖಿಭಿಃ ಸುತಂ ನಃ ।**

**ಯಾँ ಆಭಜೋ ಮರುತೋ ಯೇ ತ್ವಾನ್ವಹನ್ವೃತ್ರಮದಧುಸ್ತುಭ್ಯಮೋಜಃ॥**

ಪದಪಾಠಃ

**ಉತ । ಋತುಽಭಿಃ । ಋತುಽಪಾಃ । ಪಾಹಿ । ಸೋಮಂ । ಇಂದ್ರ । ದೇವೇಭಿಃ । ಸಖಿಽಭಿಃ । ಸುತಂ । ನಃ ।**

**ಯಾನ್ । ಆ । ಅಭಜಃ । ಮರುತಃ । ಯೇ । ತ್ವಾ । ಅನು । ಅಹನ್ । ವೃತ್ರಂ । ಅದಧುಃ । ತುಭ್ಯಂ । ಓಜಃ ॥ ೩ ॥**

ಸಾಯಣಭಾಷ್ಯಂ

**ಉತ** ಅಪಿ ಚ ಹೇ **ಋತುಪಾಃ** ಕಾಲನಿರ್ವಾಹಕತಯಾ ಋತೂನಾಂ ಪಾತಃ । ಋತುಷು **ಸೋಮಂ** ಪಿಬತೀತಿ ವಾ ಋತುಪಾಃ । ಯದ್ವಾ ಋತುಭಿರ್ಮರುದ್ಭಿಃ ಸಹ ಸೋಮಂ ಪಿಬತೀತಿ ಋತುಪಾಃ । ತಾದೃಶ ಹೇ ಇಂದ್ರ ಸಖಿಭಿಃ ಸಮಾನಖ್ಯಾನೈರ್ಋತುಭಿರ್ಮರುದ್ಭಿರ್ದೇವೇಭಿರ್ದೇವೈಃ ಸಹಿತಸ್ತ್ವಂ ನಃ ಸಂಬಂಧಿನಂ ಸುತಮಭಿಷುತಂ ಸೋಮಂ ಪಾಹಿ । ಪಿಬ । ಕಿಂಚ ಯಾನ್ಮರುತ ಆಭಜೋ ಯುದ್ಧಸಹಾಯಾರ್ಥಮಸೇವಥಾ ಯೇ ಚ ಮರುತಸ್ತ್ವಾ ತ್ವಾಂ ಯುದ್ಧೇ ಸ್ವಾಮಿನಮನ್ವಭಜಂತ । ತತಸ್ತ್ವಂ ವೃತ್ರಮಹನ್ । ಹತವಾನಸಿ । ತೇ ಮರುತಸ್ತುಭ್ಯಂ ತ್ವದರ್ಥಮೋಜೋ ಯುದ್ಧೇ ಶತ್ರುಹನನಾದಿರೂಪಂ ಪರಾಕ್ರಮಮದಧುಃ । ಅಕುರ್ವನ್ ॥ ಅಭಜಃ । ಭಜ ಸೇವಾಯಾಮಿತ್ಯಸ್ಯ ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ । ಅಹನ್ । ಹನ ಹಿಂಸಾಗತ್ಯೋರಿತ್ಯಸ್ಯ ಲಙಿ ಸಿಪೋ ಹಲ್ಙ್ಯಾದಿನಾ ಲೋಪಃ । ಪಾದಾದಿತ್ವಾದನಿಘಾತಃ । ಅದಧುಃ । ದಧಾತೇರ್ಲಙಿ ಝೇಃ ಸಿಜಭ್ಯಸ್ತೇತಿ ಜುಸ್ । ವಾಕ್ಯಭೇದಾದನಿಘಾತಃ ॥

ಪ್ರತಿಪದಾರ್ಥ

**ಉತ**—ಮತ್ತು । **ಋತುಪಾಃ**—ಮರುತ್ತುಗಳೊಡನೆ ಸೋಮಪಾನವನ್ನು ಮಾಡತಕ್ಕ (ಅಥವಾ ಕಾಲ ನಿಯಮದಲ್ಲಿ ಸೋಮಪಾನವನ್ನು ಮಾಡತಕ್ಕ) । **ಇಂದ್ರ**—ಎಲೈ ಇಂದ್ರನೇ । **ಸಖಿಭಿಃ**—ನಿನ್ನ ಸಖರಾದ ।

CC-0. Jangamwadi Math Collection. Digitized by eGangotri

**ಋತುಭಿಃ**—ಮರುತ್ತುಗಳೊಡನೆಯೂ । **ದೇವೇಭಿಃ**—ದೇವತೆಗಳೊಡನೆಯೂ ಕೂಡಿದ ನೀನು । **ನಃ**—ನಮ್ಮಿಂದ । **ಸುತಂ**—ಹಿಂಡಲ್ಪಟ್ಟ । **ಸೋಮಂ**—ಸೋಮವನ್ನು । **ಪಾಹಿ**—ಪಾನಮಾಡು । **ಯಾನ್**—ಯಾವ ಮರುತ್ತುಗಳನ್ನು । **ಅಭಜಃ**—ನೀನು ಸೇವಿಸಿದೆಯೋ । **ಯೇ**—ಯಾವ ಮರುತ್ತುಗಳು । **ತ್ವಾ**—ನಿನ್ನನ್ನು । **ಅನು**—ಸೇವಿಸಿದರೋ (ಆದುದರಿಂದಲೇ) । **ವೃತ್ರಂ**—ವೃತ್ರನನ್ನು । **ಅಹನ್**—ಕೊಂದಿರುವೆ (ಅದೇ ಮರುತ್ತುಗಳು) । **ತುಭ್ಯಂ**—ನಿನಗೆ । **ಓಜಃ**—ಶತ್ರುನಾಶಕವಾದ ಶಕ್ತಿಯನ್ನು । **ಅದಧುಃ**—ಉಂಟು ಮಾಡಿದರು ।

ಭಾವಾರ್ಥ

ಕಾಲನಿಯಮಕ್ಕನುಗುಣವಾಗಿ ಸೋಮಪಾನವನ್ನು ಮಾಡತಕ್ಕ ಎಲೈ ಇಂದ್ರನೇ, ನಿನ್ನ ಸಖರಾದ ಮರುತ್ತುಗಳೊಡನೆಯೂ ದೇವತೆಗಳೊಡನೆಯೂ ಕೂಡಿದ ನೀನು ನಮ್ಮಿಂದ ಹಿಂಡಲ್ಪಟ್ಟ ಸೋಮವನ್ನು ಪಾನಮಾಡು. ಮರುತ್ತುಗಳನ್ನು ನೀನು ಸೇವಿಸಿದುದರಿಂದಲೂ, ನಿನ್ನನ್ನು ಮರುತ್ತುಗಳು ಸೇವಿಸಿದುದರಿಂದಲೂ ನೀನು ವೃತ್ರನನ್ನು ಕೊಲ್ಲಲು ಶಕ್ತನಾದೆ ಅದೇ ಮರುತ್ತುಗಳು ನಿನಗೆ ಶತ್ರುನಾಶಕವಾದ ಶಕ್ತಿಯನ್ನುಂಟು ಮಾಡಿದರು.

## English Translation

Drinker of the Soma in season, drink with your divine friends the Maruts, the Soma that is presented by us; those Maruts whose aid you have enjoyed (in battle), and who, following you, have given you the strength whereby you have slain Vritra.

ವಿಶೇಷವಿಷಯಗಳು

**ಋತುಪಾಃ, ಋತುಭಿಃ** ಎಂಬ ಪದಗಳಿಗೆ ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಬೇಕು. **ಋತು** ಶಬ್ದಕ್ಕೆ ನಿಯತವಾದ ಸ್ಥಿತಿ ಅಥವಾ ಕಾಲನಿಯಮ ವೆಂಬರ್ಥವು ರೂಢಿಯಲ್ಲಿದೆ. ಇಂತಹ ನಿಯತವಾದ ಋತು ಧರ್ಮವನ್ನನುಸರಿಸಿ ಯಥಾವಿಧಿಯಾಗಿ ಹವಿಸ್ಸುಗಳನ್ನರ್ಪಿಸುವುದರಿಂದ **ಋತ್ವಿಕ್** ಎಂಬ ಪದವು ನಿಷ್ಪನ್ನವಾಗಿದೆ.

ಅಥವಾ **ಋತು** ಶಬ್ದಕ್ಕೆ ಹವಿಸ್ಸನ್ನರ್ಪಿಸುವ ಪಾತ್ರೆಯೆಂದರ್ಥ ವೆಂದು ಕೆಲವರ ಅಭಿಪ್ರಾಯ. "**ಕೋ** ಅಗ್ನಿಮೀಟ್ಟೇ ಹವಿಷಾ ಘೃತೇನ ಸ್ರುಚಾ ಯಜಾತಾ ಋತುಭಿರ್ಧ್ರುವೇಭಿಃ" (ಋ. ಸಂ. ೧-೮೪-೧೮) ಎಂಬಲ್ಲಿ ನಿರ್ದೇಶಿಸಿರುವಂತೆ **ಸ್ರುಕ್, ಋತು** ಮತ್ತು **ಧ್ರುವ** ಈ ಮೂರೂ ಸಹ ಹವಿಸ್ಸನ್ನರ್ಪಿಸುವ ಪಾತ್ರೆಗಳು, **ಇಂದ್ರ ಸೋಮಂ ಪಿಬ ಋತುನಾ** (೧-೧೫-೧) ; **ಮರುತಃ ಪಿಬ ಋತುನಾ** (೧-೧೫-೨) ಇತ್ಯಾದಿ ಕಡೆಗಳಲ್ಲೆಲ್ಲಾ ಋತುಶಬ್ದಕ್ಕೆ ಪಾತ್ರೆಯೆಂದರ್ಥವೆಂದು ಒಂದಭಿಪ್ರಾಯ. ಆದರೆ ಸಾಯಣರು **ಋತುವೆಂದರೆ ಈ ಸಂದರ್ಭ** ಗಳಲ್ಲಿ **ಋತುದೇವತೆಯೆಂದು** ವಿವರಿಸಿದ್ದಾರೆ. ಸಂಹಿತೆಯೂ ಸಹ ದೇವತೆಯೆಂಬ ಅರ್ಥವನ್ನೇ **ತೋರಿಸುತ್ತದೆ.** ಮೇಲೆ ಉದಾಹೃತವಾಗಿರುವ ೧-೮೪-೧೮ನೇ ಋಕ್ಕಿನಲ್ಲಿಯೂ ಸಹ ಸಾಯಣರು **ಪಾತ್ರೆಯೆಂದರ್ಥಮಾಡಿಲ್ಲ.** ವಸಂತಾದಿ ಕಾಲವೆಂದೇ ತಿಳಿಸಿದ್ದಾರೆ

**ಋತುಪದವು** ದೇವತಾಪರ್ಯಾಯವಾಗಿದ್ದರೆ ಆಗ **ಋತ್ವಿಕ್** ಎಂದರೆ ದೇವತಾಪೂಜಕನು ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಋತುಪಾಃ** ಎಂಬುದಕ್ಕೆ **ಋತುಕಾಲಗಳಲ್ಲಿ ಸೋಮಪಾನವನ್ನು ಮಾಡತಕ್ಕ**



CC-0. Jangamwadi Math Collection. Digitized by eGangotri

ಇಂದ್ರನು ಎಂದೂ, **ಋತುಭಿಃ** ಎಂಬುದಕ್ಕೆ ಋತುನಾಮಕಗಳಾದ ದೇವತೆಗಳೊಡನೆ ಕೂಡಿದ ಇಂದ್ರನು ಎಂದೂ ಅರ್ಥಮಾಡಬಹುದು. ಸಾಯಣರು ಮರುದ್ದೇವತೆಗಳೆಂದರ್ಥಮಾಡಿದ್ದಾರೆ. **ಋತುಭಿಃ ದೇವೇಭಿಃ** ಎನ್ನುವಾಗ **ಋತುಭಿಃ** ಎಂಬುದನ್ನು **ದೇವೇಭಿಃ** ಎಂಬುದಕ್ಕೆ ವಿಶೇಷಣವನ್ನಾಗಿ ಮಾಡಿದರೆ ಆಗ ಋತುನಾಮಕಗಳಾದ ದೇವತೆಗಳೊಡನೆ ಎಂದೂ ಅರ್ಥವಾಗಬಹುದು.

---

ಸಂಹಿತಾಪಾಠಃ

ಯೇ ತ್ವಾಹಿಹತ್ಯೇ ಮಘವನ್ನವರ್ಧನ್ಯೇ ಶಾಂಬರೇ ಹರಿವೋ ಯೇ ಗವಿಷ್ಟೌ ।
ಯೇ ತ್ವಾ ನೂನಮನುಮದಂತಿ ವಿಪ್ರಾಃ ಪಿಬೇಂದ್ರ ಸೋಮಂ ಸಗಣೋ ಮರುದ್ಭಿಃ ॥ ೪ ॥

ಪದಪಾಠಃ

ಯೇ । ತ್ವಾ । ಅಹಿಽಹತ್ಯೇ । ಮಘಽವನ್ । ಅವರ್ಧನ್ । ಯೇ । ಶಾಂಬರೇ । ಹರಿಽವಃ । ಯೇ । ಗೋಽಇಷ್ಟೌ ।
ಯೇ । ತ್ವಾ । ನೂನಂ । ಅನುಽಮದಂತಿ । ವಿಪ್ರಾಃ । ಪಿಬ । ಇಂದ್ರ । ಸೋಮಂ । ಸಽಗಣಃ । ಮರುತ್ಽಭಿಃ ॥ ೪ ॥

ಸಾಯಣಭಾಷ್ಯಂ

ಮರುತ್ವತೀಯಶಸ್ತ್ರೇ ಯಾಜ್ಯಾ ಯೇ ತ್ವಾಹಿಹತ್ಯ ಇತ್ಯೇಷಾ । ಸೂತ್ರಿತಂ ಚ । ಯೇ ತ್ವಾಹಿ-ಹತ್ಯೇ ಮಘವನ್ನವರ್ಧನ್ನಿತಿ ಯಾಜ್ಯಾ । ಆ. ೫-೧೪ । ಇತಿ ॥

ಹೇ ಮಘವನ್ನಿಂದ್ರ ಯೇ ಮರುತೋಽಹಿಹತ್ಯೇ ವೃತ್ರಹನನರೂಪೇ ಕರ್ಮಣಿ ತ್ವಾ ತ್ವಾಮ-ವರ್ಧನ್ ಪ್ರಹರ ಭಗವೋ ಜಹಿ ವೀರಯಸ್ವೇತಿ ಬಲದಾನೇನಾವೀವೃಧನ್ । ಹೇ ಹರಿವೋಽಶ್ವವನ್ನಿಂದ್ರ ಯೇ ಚ ಶಾಂಬರೇ ಶಂಬರವಧಸಂಬಂಧಿನಿ ಯುದ್ಧೇ ತ್ವಾಮವೀವೃಧನ್ । ಇಂದ್ರಃ ಶಂಬರಮವಧೀದಿ-ತ್ಯಸ್ಮಿನ್ನರ್ಥೇ ಮಂತ್ರವರ್ಣಃ । ಯಃ ಶಂಬರಂ ಪರ್ವತೇಷು ಕ್ಷಿಯಂತಂ ಚತ್ವಾರಿಂಶ್ಯಾಂ ಶರದ್ಯನ್ವ-ವಿಂದತ್ । ಓಜಾಯಮಾನಂ ಯೋ ಅಹಿಂ ಜಘಾನ । ಋಗ್ವೇ. ೨-೧೨-೧೧ । ಇತಿ । ತಥಾ ಯೇ ಮರುತೋ ಗವಿಷ್ಟೌ ಪಣಿನಾಮಕೈರಸುರೈಃ ಸಹ ಗವಾರ್ಥೇ ಯುದ್ಧೇ ಚ ತ್ವಾಮವೀವೃಧನ್ । ವಿಪ್ರಾ

CC-0. Jangamwadi Math Collection. Digitized by eGangotri

ಮೇಧಾವಿನೋ ಯೇ ಚ ಮರುತೋ ನೂನಮಿದಾನೀಂ ತ್ವಾಮನುಮದಂತಿ ಮಾದಯಂತಿ ತಾದೃಶೈಸ್ತೈ-ರ್ಮರುದ್ಭಿಃ ಸಗಣಃ ಸನ್ ಇಮಂ ಸೋಮಂ ಪಿಬ ‖ ಅಹಿಹತ್ಯೇ । ಹಂತೇರ್ಭಾವೇ ಹನಸ್ತ ಚೇತಿ ಕ್ಯಪ್ । ಕೃದುತ್ತರಪದಸ್ವರಃ । ಅವರ್ಧನ್ । ವೃಧು ವೃದ್ಧಾವಿತ್ಯಸ್ಯ ಣ್ಯಂತಸ್ಯ ಲಙಿ ರೂಪಂ । ಛಂದಸ್ಯುಭಯಥೇತಿ ಘೇರಾರ್ಧಧಾತುಕತ್ವಾಣ್ಣೇರ್ಲೋಪಃ । ಯದ್ವೃತ್ತಯೋಗಾದನಿಘಾತಃ । ಶಾಂಬರೇ । ಶಂಬರಸ್ಯೇದ-ಮಿತ್ಯರ್ಥೇ ತಸ್ಯೇದಮಿತ್ಯಣ್ಪ್ರತ್ಯಯಃ । ಗವಿಷ್ಟೌ । ಇಷು ಇಚ್ಛಾಯಾಂ । ಭಾವೇ ಕ್ತಿನ್ । ಬಹುವ್ರೀಹೌ ಪೂರ್ವಪದಸ್ವರಃ । ಅನುಮದಂತಿ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಲಟಿ ವ್ಯತ್ಯಯೇನ ಪರಸ್ಮೈಪದಂ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ಘೇರ್ಲಸಾರ್ವಧಾತುಕಸ್ವರೇ ಕೃತೇ ಧಾತುಸ್ವರಃ । ತಿಙಂ ಚೋದಾತ್ತವತೀತಿ ಗತೇರ್ನಿಘಾತಃ ‖

## ಪ್ರತಿಪದಾರ್ಥ

**ಮಘವನ್**—ಧನವಂತನೂ । **ಹರಿವಃ**—ಅಶ್ವಯುಕ್ತನೂ ಆದ । **ಇಂದ್ರ**—ಎಲೈ ಇಂದ್ರನೇ । **ಯೇ**—ಯಾವ ಮರುತ್ತುಗಳು । **ಅಹಿಹತ್ಯೇ**—ವೃತ್ರವಧರೂಪವಾದ ಕರ್ಮದಲ್ಲಿ । **ತ್ವಾ**—ನಿನ್ನನ್ನು । **ಅವರ್ಧನ್**—ವೃದ್ಧನಾಗುವಂತೆ ಮಾಡಿದರೋ । **ಯೇ**—ಯಾವ ಮರುತ್ತುಗಳು । **ಶಾಂಬರೇ**—ಶಂಬರನೊಡನೆ ನಡೆದ ಯುದ್ಧದಲ್ಲಿ ಶಕ್ತಿದಾಯಕರಾದರೋ ! **ಯೇ**—ಯಾವ ಮರುತ್ತುಗಳು । **ಗವಿಷ್ಟೌ**—ಅಪಹೃತವಾದ ಗೋವುಗಳ ಗ್ರಹಣದಲ್ಲಿ ಸಹಾಯಮಾಡಿದರೋ (ಮತ್ತು) । **ವಿಪ್ರಾಃ**—ಮೇಧಾವಿಗಳಾದ । **ಯೇ**—ಯಾವ ಮರುತ್ತುಗಳು । **ನೂನಂ**—ಈಗ । **ಅನುಮದಂತಿ**—ನಿನಗೆ ತೃಪ್ತಿದಾಯಕರಾಗಿದ್ದಾರೋ । (ಅಂತಹ) **ಮರು-ದ್ಭಿಃ**—ಮರುತ್ತುಗಳೊಡನೆ । **ಸಗಣಃ**—ಒಟ್ಟಿಗೆ ಕೂಡಿಕೊಂಡು । **ಸೋಮಂ**—ಈ ಸೋಮವನ್ನು । **ಪಿಬ**—ಪಾನಮಾಡು ।

## ಭಾವಾರ್ಥ

ಧನವಂತನೂ ಅಶ್ವಯುಕ್ತನೂ ಆದ ಇಂದ್ರನೇ, ಯಾವ ಮರುತ್ತುಗಳು ವೃತ್ರವಧರೂಪವಾದ ಕರ್ಮದಲ್ಲಿ ನಿನ್ನನ್ನು ವೃದ್ಧನಾಗುವಂತೆ ಮಾಡಿದರೋ, ಯಾರು ಶಂಬರನೊಡನೆ ನಡೆದ ಯುದ್ಧದಲ್ಲಿ ನಿನಗೆ ಶಕ್ತಿದಾಯಕ ರಾದರೋ, ಯಾರು ಅಪಹೃತವಾದ ಗೋವುಗಳ ಗ್ರಹಣದಲ್ಲಿ ನಿನಗೆ ಸಹಾಯಮಾಡಿದರೋ ಮತ್ತು ಮೇಧಾವಿ ಗಳಾದ ಯಾರು ನಿನಗೆ ಈಗ ತೃಪ್ತಿದಾಯಕರಾಗಿದ್ದಾರೋ, ಅಂತಹ ಮರುತ್ತುಗಳೊಡನೆ ಕೂಡಿಕೊಂಡು ಈ ಸೋಮ ವನ್ನು ಪಾನಮಾಡು.

## English Translation

They who encouraged you Maghavan, to slay Ahi, who (aided you) in the conflict with Shambara, and in the recovery of the cattle, and who, possessed of wisdom, contribute verily to your exhilaration, with them, the troop of the Maruts, Indra, drink the Soma.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಯೇ ತ್ವಾಹಿಹತ್ಯೇ** ಎಂಬ ಈ ಋಕ್ಕನ್ನು ಮರುತ್ವತೀಯಶಸ್ತ್ರಮಂತಪಠನಕಾಲದಲ್ಲಿ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-ಯೇ ತ್ವಾಹಿಹತ್ಯೇ ಮಘವನ್ನವರ್ಧನ್ನಿತಿ ಯಾಜ್ಯಾ ಎಂಬ ಸೂಕ್ತದಿಂದ ವಿವೃತವಾಗಿರುವುದು. (ಆ. ೫-೧೪)

ಇಂದ್ರನಿಗೂ ಮರುತ್ತುಗಳಿಗೂ ಇರುವ ಸಖ್ಯವನ್ನೂ ಮರತ್ತುಗಳು ಅನೇಕ ಸನ್ನಿವೇಶಗಳಲ್ಲಿ ಇಂದ್ರನಿಗೆ ನೀಡಿದ ಸಹಾಯದ ಸ್ವರೂಪವನ್ನೂ ಹಿಂದೆ ವಿಶದವಾಗಿ ತಿಳಿಸಿದೆ. ಅವುಗಳಲ್ಲಿ ಇಲ್ಲಿ ಮೂರು ಸನ್ನಿವೇಶಗಳನ್ನು ನಿರ್ದೇಶಿಸಿದೆ.

**ಶಂಬರನ** ಹೆಸರು ಶುಷ್ಣ, ಪಿಪ್ರು, ವರ್ಚಿ ಎಂಬ ಅಸುರರ ಜೊತೆಯಲ್ಲಿ ಸೇರಿರುವುದು ವಾಡಿಕೆಯಾಗಿದೆ ಕೆಲವು ಋಕ್ಕುಗಳಲ್ಲಿ ಇವನನ್ನು ದಾಸನೆಂದು ಕರೆದಿದೆ. (೬-೨೬-೫) ಇಂದ್ರನ ಆಪ್ತಮಿತ್ರನಾದ ದಿವೋದಾಸನೆಂಬ ರಾಜನಿಗಾಗಿ ಇಂದ್ರನು ಶತ್ರುವಾದ ಶಂಬರನ ಅಸಂಖ್ಯಾಕವಾದ ಕೋಟೆಗಳನ್ನೆಲ್ಲಾ ಉರುಳಿಸಿ ಅವನ ಸ್ವತ್ತನ್ನು ಸ್ವಾಧೀನಪಡಿಸಿ ಕೊಂಡನೆಂದಿದೆ. ಈ ವಿಷಯುಗಳನ್ನೂ ಹಿಂದೆ ತಿಳಿಸಿದೆ. ಈ ಅಸುರನು ಬೆಟ್ಟಗುಡ್ಡಗಳಲ್ಲಿ ಅವಿತು ಕೊಂಡು ಅತಿಥಿಗ್ವನಿಗೂ ದಿವೋದಾಸನಿಗೂ ಅತ್ಯಂತವಾಗಿ ಹಿಂಸೆಯನ್ನು ಕೊಡುತ್ತಿದ್ದುದರಿಂದ ಇವನನ್ನು ಇಂದ್ರನು ನಾಶಮಾಡಿ ಅವರಿಬ್ಬರಿಗೂ ತನ್ನ ರಕ್ಷಣೆಯನ್ನು ನೀಡಿದನು ಎಂದೂ ಇದೆ. ಅಹಿ, ವೃತ್ರ ಇವರುಗಳ ಸ್ವರೂಪದಂತೆ ಶಂಬರನೂ ಸಹ ಒಂದು ಗಾಢವಾದ ಅಂಧಕಾರವನ್ನು ಸೂಚಿಸುವ ವ್ಯಕ್ತಿಯೆಂದೂ ಹೇಳಬಹುದು. " Sambara, meaning among other things the cloud, seems to be some mythical being connected with the powers of darkness ". Oldenberg.

---

ಸಂಹಿತಾಪಾಠಃ

ಮರುತ್ವಂತಂ ವೃಷಭಂ ವಾವೃಧಾನಮಕವಾರಿಂ ದಿವ್ಯಂ ಶಾಸಮಿಂದ್ರಂ ।
ವಿಶ್ವಾಸಾಹಮವಸೇ ನೂತನಾಯೋಗ್ರಂ ಸಹೋದಾಮಿಹ ತಂ ಹುವೇಮ ॥

ಪದಪಾಠಃ

ಮರುತ್ವಂತಂ । ವೃಷಭಂ । ವವೃಧಾನಂ । ಅಕವ‌ಅರಿಂ । ದಿವ್ಯಂ । ಶಾಸಂ । ಇಂದ್ರಂ ।
ವಿಶ್ವಸಹಂ । ಅವಸೇ । ನೂತನಾಯ । ಉಗ್ರಂ । ಸಹಃದಾಂ । ಇಹ । ತಂ । ಹುವೇಮ ॥ ೫ ॥

ಸಾಯಣಭಾಷ್ಯಂ

ಹೇ ಇಂದ್ರ ಮರುತ್ವಂತಂ ಮರುದ್ಭಿಸ್ತದ್ವಂತಂ ವೃಷಭಂ ಮೇಘಭೇದನದ್ವಾರಾಪಾಂ ವರ್ಷಕಂ ವವೃಧಾನಂ ವೃತ್ರಹನನಾದಿಕರ್ಮಸೂತ್ಸಾಹೇನ ವರ್ಧಮಾನಮಕವಾರಿಂ ಪ್ರಭೂತಶತ್ರುಕಂ ಯದ್ವಾ

CC-0. Jangamwadi Math Collection. Digitized by eGangotri

ಅಕುತ್ಸಿತಾರಿಂ । ತಥಾ ಚ ಮಂತ್ರಃ । ಸ್ವರಿರಮತ್ರೋ ವವಕ್ಷೇ ರಣಾಯ । ಋಗ್ವೇ. ೧-೬೧-೯ । ಇತಿ । ದಿವ್ಯಂ ದಿವಿ ಸ್ವರ್ಗಲೋಕೇ ವರ್ತಮಾನಂ ಶಾಸಂ ಹಿತೋಪದೇಶಾಹಿತಪರಿಹಾರಾಭ್ಯಾಂ ಶಾಸಿತಾರಂ ವಿಶ್ವಾಸಾಹಂ ವಿಶ್ವಸ್ಯ ಪ್ರತಿಪಕ್ಷಸ್ಯ ಸರ್ವಸ್ಯಾಭಿಭವಿತಾರಮುಗ್ರಂ ಶತ್ರುಷೂದ್ಗೂರ್ಣಂ ಸಹೋದಾಂ ಯುದ್ಧಸಹಕಾರಿಣಾಂ ಮರುತಾಂ ಬಲಪ್ರದಂ ತಂ ತಾದೃಶಸಾಮರ್ಥ್ಯೋಪೇತಮಿಂದ್ರಂ ನೂತನಾಯ ನವತರಾಯಾವಸೇ ರಕ್ಷಣಾಯೇಹ ಕರ್ಮಣಿ ಹುವೇಮ । ತ್ವಾಮಾಹ್ವಯೇಮ ॥ ನೂತನಾಯ । ನವತರಾಯಾವತಸೇ ರಕ್ಷಣಾಯೇಹ ಕರ್ಮಣಿ ಹುವೇಮ । ತ್ವಾಮಾಹ್ವಯೇಮ ॥ ನೂತನಾಯ । ನವಶಬ್ದಸ್ಯ ನೂ ಇತ್ಯಾದೇಶಃ । ತ್ನಪ್ತನಖಾಃ ಶ್ಚ ಪ್ರತ್ಯಯೋ ವಕ್ತವ್ಯಾ ಇತಿ ತನಪ್ರತ್ಯಯಃ ॥

### ಪ್ರತಿಪದಾರ್ಥ

ಮರುತ್ವಂತಂ ಮರುತ್ತುಗಳೊಡಗೂಡಿದವನೂ । ವೃಷಭಂ—ವೃಷ್ಟಿಯನ್ನು ಸುರಿಸುವವನೂ । ವವೃಧಾನಂ—(ಉತ್ಸಾಹದಿಂದ) ವೃದ್ಧಿಯನ್ನು ಹೊಂದುವವನೂ । ಅಕವಾರಿಂ—ಪ್ರಭೂತವಾಗಿ ಶತ್ರುಗಳುಳ್ಳವನೂ । ದಿವ್ಯಂ—ದೇವಲೋಕಸ್ಥಿತನೂ । ಶಾಸಂ—ಉಪದೇಶಕನೂ । ವಿಶ್ವಾಸಾಹಂ—ಸಕಲ ಶತ್ರುಗಳನ್ನೂ ಸೋಲಿಸುವವನೂ । ಉಗ್ರಂ—ಭಯಂಕರನೂ । ಸಹೋದಾಂ—ಜತೆಗಾರರಾದ ಮರುತ್ತುಗಳಿಗೆ ಶಕ್ತಿದಾಯಕನೂ ಆದ । ತಂ ಇಂದ್ರಂ—ಆ ಇಂದ್ರನನ್ನು । ನೂತನಾಯ—ನೂತನವಾದ । ಅವಸೇ—ರಕ್ಷಣೆಗಾಗಿ । ಇಹ—ಈ ಯಜ್ಞಕರ್ಮದಲ್ಲಿ । ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ.

### ಭಾವಾರ್ಥ

ಮರುತ್ತುಗಳೊಡಗೂಡಿದವನೂ, ವೃಷ್ಟಿಯನ್ನು ಸುರಿಸುವವನೂ, ಉತ್ಸಾಹದಿಂದ ವೃದ್ಧಿಯನ್ನು ಹೊಂದುವವನೂ, ಪ್ರಭೂತವಾಗಿ ಶತ್ರುಗಳುಳ್ಳವನೂ, ದೇವಲೋಕಸ್ಥಿತನೂ ಉಪದೇಶಕನೂ, ಸಕಲ ಶತ್ರುಗಳನ್ನೂ ಸೋಲಿಸುವವನೂ, ಭಯಂಕರನೂ, ಜತೆಗಾರರಾದ ಮರುತ್ತುಗಳಿಗೆ ಶಕ್ತಿದಾಯಕನೂ ಆದ ಇಂದ್ರನನ್ನು ನೂತನವಾದ ರಕ್ಷಣೆಗಾಗಿ ಈ ಯಜ್ಞಕರ್ಮದಲ್ಲಿ ಪ್ರಾರ್ಥಿಸಿ ಕರೆಯುತ್ತೇವೆ.

### English Translation

We inovke to this sacrifice for present protection Indra, the chief of the Maruts, the showerer (of benefits) ; augmenting (in glory), overcoming many foes, divine regulator (of good and ill), the subduer of all (enemies), the fierce· the bestower of strength·

### ವಿಶೇಷವಿಷಯಗಳು

ಅಕವಾರಿಂ—ಈ ಪದಕ್ಕೆ ಪ್ರಭೂತವಾದ ಶತ್ರುವೆಂದರ್ಥವಾಡಿದೆ ಕುತ್ಸಿತವಾದುದು ಎಂಬರ್ಥವನ್ನು ಕೊಡತಕ್ಕ ಕು ಧಾತುವಿನಿಂದ ನಿಷ್ಪನ್ನವಾದ ಕವ ಶಬ್ದಕ್ಕೆ ಅಲ್ಪವಾದುದು, ತಿರಸ್ಕೃತವಾದುದು, ದೂಷ್ಯವಾದುದು ಎಂದು ತಾತ್ಪರ್ಯವಾಗುತ್ತದೆ. ಈ ಧಾತುವಿನಿಂದ ಕವ, ಕವಾರಿ ಎಂಬ ಎರಡು ರೂಪಗಳೂ ನಿಷ್ಪನ್ನವಾಗುತ್ತವೆ.

SRI JAGADGURU VISHWARADHYA
JNANA SIMHASAN JNANAMANDIR
LIBRARY.
Jangamwadi Math, VARANASI
Acc· No. ... 4811
Acc No -
CC-0. Jangamwadi Math Collection. Digitized by eGangotri

ಕುವಾರಿಯೆಂಬ ಪದಕ್ಕೆ ಸಾಧಾರಣವಾಗಿ ಅತ್ಯಂತ ಸ್ವಾರ್ಥಿಯೂ, ಲೋಭಿಯೂ ಯಜ್ಞಮಾಡದಿರುವ ಕುತ್ಸಿತವಾದ ಜೀವನವುಳ್ಳವನೂ ಆದ ಪುರುಷನೆಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ **ಅಕವಾರಿಂ** ಎಂದಿರುವಾಗ, **ಕವ** ಶಬ್ದಕ್ಕೆ ಸಣ್ಣವನು, ತಿರಸ್ಕೃತನು ಎಂಬರ್ಥವಾಗಿ **ಕವನಾದ ಅರಿ**—ಅಲ್ಪನಾದ ಶತ್ರು ಎಂಬ ಸಮಸ್ತಪದವಾಗಿದೆ. ಕವಾರಿಯಲ್ಲದವನು ಅಕವಾರಿಯೆಂದರೆ ಮಹತ್ತಾದ ಶಕ್ತಿಯುಳ್ಳ ಶತ್ರುವೆಂದಾಗಬಹುದು ಅಥವಾ ಪ್ರಭೂತವಾದ ಸಂಖ್ಯೆಯೂ ಇದರಿಂದ ಸೂಚಿತವಾಗಬಹುದು. ಇಂತಹ ಶತ್ರುಗಳನ್ನು ಎದುರಿಸತಕ್ಕವನು ಎಂದು ಇಂದ್ರನ ಮಹತ್ತ್ವವನ್ನು ತೋರಿಸುವ ವಿಶೇಷಣಪದವಾಗಿದೆ

---

# ನಲವತ್ತೆಂಟನೆಯ ಸೂಕ್ತವು.

---

ಸಾಯಣಭಾಷ್ಯಂ

**ಸದ್ಯೋ ಹೇತಿ ಪಂಚರ್ಚಂ ದಶಮಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ । ಸದ್ಯೋ ಹೇತ್ಯನುಕ್ರಮಣಿಕಾ । ಅಗ್ನಿಷ್ಟೋಮೇ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರೇ ಸದ್ಯೋ ಹ ಜಾತ ಇತ್ಯೇತತ್ಸೂಕ್ತಂ । ಸೂತ್ರಿತಂ ಚ । ಸದ್ಯೋಹ ಜಾತ ಏವಾ ತ್ವಾಮಿಂದ್ರ । ಆ. ೫. ೧೬ । ಇತಿ ॥ ಚಾತುರ್ವಿಂಶಿಕೇಽಹನಿ ಮೈತ್ರಾವರುಣಶಸ್ತ್ರೇಽಹರಹಃ ಶಸ್ಯಸಂಜ್ಞಮೇತತ್ಸೂಕ್ತಂ।। ಸೂತ್ರಿತಂ ಚ । ಸದ್ಯೋ ಹ ಜಾತ ಇತ್ಯಹರಹಃಶಸ್ಯಂ ಮೈತ್ರಾವರುಣಃ । ಆ. ೭ ೪ । ಇತಿ ॥ ಅಹರ್ಗಣೇ ದ್ವಿತೀಯಾದಿಷ್ವಹಃಸು ಮಾಧ್ಯಂದಿನಸವನೇಽಸ್ಮಿನ್ ಶಸ್ತ್ರ ಏತತ್ಸೂಕ್ತಂ । ಅಹರಹಃ ಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ । ಆ. ೭. ೧ । ಇತಿ ಸೂತ್ರಿತಂ ॥ ಸಾದ್ಯಸ್ಕ್ರ ಏಕಾಹೇ ಮರುತ್ವತೀಯೇ ಶಸ್ತ್ರೇ ಸದ್ಯೋ ಹ ಜಾತ ಇತ್ಯಾದ್ಯಾ ಸೂಕ್ತಮುಖೀಯಾ । ಸೂತ್ರಿತಂ ಚ । ಸದ್ಯೋ ಹ ಜಾತೋ ವೃಷಭಃ ಕನೀನಸ್ತ್ವಂ ಸದ್ಯೋ ಅಪಿಬೋ ಜಾತ ಇಂದ್ರ । ಆ. ೯. ೫ । ಇತಿ ॥**

ಅನುವಾದವು—**ಸದ್ಯೋ** ಹ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. **ಸದ್ಯೋ** ಹ ಎಂದು ಮೊದಲಾಗಿ ಅನುಕ್ರಮಣಿಕೆಯಲ್ಲಿ ಹೇಳಿರುವುದು. ಅಗ್ನಿಷ್ಟೋಮಯಾಗದ ಮಾಧ್ಯಂದಿನಸವನಕಾಲದಲ್ಲಿ ಮೈತ್ರಾವರುಣಶಸ್ತ್ರಮಂತ್ರಗಳಿಗಾಗಿ **ಸದ್ಯೋ** ಹ ಜಾತಃ ಎಂಬ ಈ ಸೂಕ್ತದ ವಿನಿಯೋಗವಿರುವುವೆಂದು ಆಶ್ವಲಾಯನಶ್ರೌತಸೂತ್ರದ **ಸದ್ಯೋ** ಹ ಜಾತ ಏವಾ ತ್ವಾಮಿಂದ್ರ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೫-೧೬) ; ಚಾತುರ್ವಿಂಶಕವೆಂಬ ಇಪ್ಪತ್ತನಾಲ್ಕನೆಯ ದಿನದಲ್ಲಿ ಮೈತ್ರಾವರುಣಶಸ್ತ್ರ ಮಂತ್ರಗಳನ್ನು ಪಠಿಸುವಾಗ ಅಹರಹಃಶಸ್ತ್ರವೆಂಬ ಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಸದ್ಯೋ ಹ ಜಾತ ಇತ್ಯಹರಹಃ ಶಸ್ಯಂ** ಮೈತ್ರಾವರುಣಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೪) ; ಅಹರ್ಗಣವೆಂಬ ಯಾಗದ ಎರಡನೆಯ ದಿವಸವೇ ಮೊದಲಾದ ದಿನಗಳಲ್ಲಿ ಮಾಧ್ಯಂದಿನಸವನಕಾಲದಲ್ಲಿ ಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— **ಅಹರಹಃ ಶಸ್ಯಾನೀತಿ ಹೋತ್ರಕಾ ದ್ವಿತೀಯಾದಿಷ್ವೇವ** ಎಂಬ ಸೂತ್ರದಿಂದ ವಿವೃತವಾಗಿರುವುದು.

CC-0. Jangamwadi Math Collection. Digitized by eGangotri

(ಆ ೭-೧) ; ಸಾದ್ಯಸ್ಕ್ರ ಎಂಬ ಒಂದು ದಿನದ ಯಾಗದಲ್ಲಿ ಮರುತ್ವತೀಯಶಸ್ತ್ರಮಂತ್ರಗಳನ್ನು ಪಠಿಸುವಾಗ **ಸದ್ಯೋ ಹ ಜಾತಃ** ಎಂಬ ಈ ಸೂಕ್ತದ ಮೊದಲನೆಯ ಋಕ್ಕಿನ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ— **ಸದ್ಯೋ ಹ ಜಾತೋ ವೃಷಭಃ ಕನೀನಸ್ತ್ವಂ ಸದ್ಯೋ ಅಪಿಬೋ ಜಾತ ಇಂದ್ರ** ಎಂಬ ಸೂತ್ರ ದಿಂದ ವಿವೃತವಾಗಿರುವುದು. (ಆ. ೯-೫).

---

॥ ಓಂ ॥

## ಸೂಕ್ತ—೪೮

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೮ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ವಿಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

॥ ಛಂದಃ— ತ್ರಿಷ್ಟುಪ್ ॥

---

ಸಂಹಿತಾಪಾಠಃ

ಸದ್ಯೋ ಹ ಜಾತೋ ವೃಷಭಃ ಕನೀನಃ ಪ್ರಭರ್ತುಮಾವದಂಧಸಃ ಸುತಸ್ಯ। ಸಾಧೋಃ ಪಿಬ ಪ್ರತಿಕಾಮಂ ಯಥಾ ತೇ ರಸಾಶಿರಃ ಪ್ರಥಮಂ ಸೋಮ್ಯಸ್ಯ ॥ ೧ ॥

ಪದಪಾಠಃ

ಸದ್ಯಃ । ಹ । ಜಾತಃ । ವೃಷಭಃ । ಕನೀನಃ । ಪ್ರಭರ್ತುಂ । ಆವತ್ । ಅಂಧಸಃ । ಸುತಸ್ಯ ।

ಸಾಧೋಃ । ಪಿಬ । ಪ್ರತಿಕಾಮಂ । ಯಥಾ । ತೇ । ರಸಆಶಿರಃ । ಪ್ರಥಮಂ । ಸೋಮ್ಯಸ್ಯ ॥ ೧ ॥

ಸಾಯಣಭಾಷ್ಯಂ

ವೃಷಭೋ ವೃಷ್ಟಿದ್ವಾರಾಪಾಂ ವರ್ಷಿತಾ ಸದ್ಯಸ್ತದಾನೀಮೇವ ಜಾತ ಉತ್ಪನ್ನಃ ಕನೀನಃ ಕಮನೀಯ ಇಂದ್ರಃ ಸುತಸ್ಯಾಭಿಷುತಸ್ಯಾಂಧಸೋ ಹವಿರ್ಲಕ್ಷಣಸ್ಯಾನ್ನಸ್ಯ ಸೋಮಸ್ಯ ಪ್ರಭರ್ತುಂ

CC-0. Jangamwadi Math Collection. Digitized by eGangotri

**ಪ್ರಕರ್ಷೇಣ ಭರ್ತಾರಂ ಸಂಗ್ರಹೀತಾರಂ ಯಜಮಾನಮಾವತ್ । ರಕ್ಷತು । ಹ ಪ್ರಸಿದ್ಧೌ । ಕಿಂಚ ತಾದೃಶಸ್ತ್ವಂ ಪ್ರತಿಕಾಮಂ ಕಾಮೇ ಕಾಮೇ ಸೋಮಪಾನೇಚ್ಛಾಯಾಂ ಸತ್ಯಾಂ ತೇ ತವ ಯಥಾ ಕಾಮಸ್ಯ ಪೂರ್ತಿರ್ಭವತಿ ತಥಾ ಸಾಧೋ ರಸಾತ್ಮನಾ ಸಂಸಿದ್ಧಂ ರಸಾಶಿರೋ ಗೊಪಯೋಮಿಶ್ರಣೋಪೇತಂ ಸೋಮ್ಯಸ್ಯ ಸೋಮಮಯಂ ರಸಂ ಪ್ರಥಮಂ ಸರ್ವೇಭ್ಯೋ ದೇವೇಭ್ಯಃ ಪುರಸ್ತಾತ್ಪಿಬ ॥ ಪ್ರತಿಕಾಮಂ । ಕಾಮಂ ಕಾಮಂ ಪ್ರತಿ । ವೀಪ್ಸಾಯಾಮವ್ಯಯಿಭಾವಃ । ಸಮಾಸಸ್ವರಃ । ಯಥಾ । ಅಪಾದಾಂತತ್ವಾದೇವ ಲಿತ್ಸ್ವರಃ । ರಸಾಶಿರಃ । ಆಙ್ಪೂರ್ವಾತ್ ಶ್ರೀಣಾತೇಃ ಕ್ವಿಪ್ಯಪಸ್ಪೃಧೇಥಾಮಿತ್ಯಾದಿನಾಶಿರ್ ಇತ್ಯಾದೇಶಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಸೋಮ್ಯಸ್ಯ । ಸೋಮಶಬ್ದಾನ್ಮಯಡರ್ಥೇ ಮಯೇ ಚೇತಿ ಯಪ್ರತ್ಯಯಃ ॥**

ಪ್ರತಿಪದಾರ್ಥ

**ವೃಷಭಃ**—ವೃಷ್ಟಿಯನ್ನು ಸುರಿಸುವವನೂ । **ಸದ್ಯೋ ಹ ಜಾತಃ**-ಉತ್ಪನ್ನನಾದೊಡನೆಯೇ । **ಕನೀನಃ**—ಆಕರ್ಷಕವಾದ ರೂಪವುಳ್ಳವನೂ ಆದ ಇಂದ್ರನು । **ಸುತಸ್ಯ**—ಹಿಂಡಲ್ಪಟ್ಟ । **ಅಂಧಸಃ**—ಸೋಮರೂಪವಾದ ಅನ್ನವನ್ನು । **ಪ್ರಭರ್ತುಂ**—ಅತಿಶಯವಾಗಿ ಹಿಡಿದಿರುವ ಯಜಮಾನನನ್ನು । **ಆವತ್**—ರಕ್ಷಿಸಲಿ (ಎಲೈ ಇಂದ್ರನೇ) **ಪ್ರತಿಕಾಮಂ**—ನಿನ್ನ ಇಚ್ಛೆಯುಂಟಾದಾಗೆಲ್ಲ । **ತೇ**—ನಿನಗೆ । **ಯಥಾ**—ತೃಪ್ತಿಯಾಗುವಂತೆ । **ಸಾಧೋಃ**—ರಸಭರಿತವಾದುದೂ । **ರಸಾಶಿರಃ**—ಹಾಲುಮಿಶ್ರಿತವಾದುದೂ ಆದ । **ಸೋಮ್ಯಸ್ಯ**-ಸೋಮರಸವನ್ನು। **ಪ್ರಥಮಂ**-ಎಲ್ಲಾ ದೇವತೆಗಳಿಗಿಂತಲೂ ಮೊದಲೇ । **ಪಿಬ**—ಪಾನಮಾಡು.

ಭಾವಾರ್ಥ

ವೃಷ್ಟಿಯನ್ನು ಸುರಿಸುವವನೂ, ಉತ್ಪನ್ನನಾದೊಡನೆಯೇ ರಮಣೀಯವಾದ ರೂಪವುಳ್ಳವನೂ ಆದ ಇಂದ್ರನು ಹಿಂಡಿ ಸಿದ್ಧವಾದ ಸೋಮವನ್ನು ಭಕ್ತಿಯಿಂದ ಹಿಡಿದಿರುವ ಯಜಮಾನನನ್ನು ರಕ್ಷಿಸಲಿ. ಎಲೈ ಇಂದ್ರನೇ, ನಿನಗೆ ಇಚ್ಛೆಯುಂಟಾದಾಗೆಲ್ಲಾ ನಿನಗೆ ತೃಪ್ತಿಯಾಗುವಂತೆ ರಸಭರಿತವಾದುದೂ, ಹಾಲುಮಿಶ್ರಿತವಾದುದೂ ಆದ ಸೋಮರಸವನ್ನು ಎಲ್ಲಾ ದೇವತೆಗಳಿಗಿಂತಲೂ ಮೊದಲೇ ಪಾನಮಾಡು.

English Translation

May the showerer (of rain), who, as soon as born, is the object of affection, protect the offerer of the effused libation: drink at will, Indra, before (the other gods), of the pure Soma juice mixed with milk.

ವಿಶೇಷವಿಷಯಗಳು

**ಪ್ರತಿಕಾಮಂ ಯಥಾ ತೇ—ಕಾಮೇ ಕಾಮೇ ಸೋಮಪಾನೇಚ್ಛಾಯಾಂ ಸತ್ಯಾಂ ತೇ ತವ ಯಥಾ ಕಾಮಸ್ಯ ಪೂರ್ತಿರ್ಭವತಿ ತಥಾ (ಪಿಬ)** । ಎಲೈ ಇಂದ್ರನೇ, ನಿನಗೆ ಯಾವಾಗ ಯಾವಾಗ ಸೋಮಪಾನವನ್ನು ಮಾಡಬೇಕೆಂಬ ಇಚ್ಛೆಯುಂಟಾಗುವುದೋ ಎಂದರೆ ನಿನಗೆ ಯಾವಾಗ ಬೇಕಾದರೂ ನಿನಗೆ ತೃಪ್ತಿಯಾಗುವಷ್ಟು ಸೋಮರಸವನ್ನು ಪಾನಮಾಡು ಎಂದು ಋಷಿಯು ಪ್ರಾರ್ಥಿಸಿದಾನೆ.

CC-0. Jangamwadi Math Collection. Digitized by eGangotri

ರಸಾಶಿರಃ—ರಸವೆಂದರೆ ಇಲ್ಲಿ ದ್ರವರೂಪವಾದ ಹಾಲು ಎಂದರ್ಥ. ಅಂತಹ ಹಾಲಿನಿಂದ ಮಿಶ್ರಿತವಾದ ಸೋಮರಸ ಅಥವಾ ಗವಾಶಿರ ಎಂದಭಿಪ್ರಾಯವು.

ಪ್ರಥಮಂ ಸೋಮ್ಯಸ್ಯ—ಸೋಮಮಯಂ ರಸಂ ಪ್ರಥಮಂ ಸರ್ವೇಭ್ಯೋ ದೇವೇಭ್ಯಃ ಪುರ-ಸ್ತಾತ್ಪಿಬ—ರಸಾತ್ಮಕವಾಗಿರುವ ಶೋಧಿಸಿ ಸಿದ್ಧವಾಗಿರುವ ಸೋಮವನ್ನು ಇತರ ದೇವತೆಗಳು ಪಾನಮಾಡುವುದಕ್ಕಿಂತಲೂ ಮೊದಲೇ ಎಂದರೆ ಎಲ್ಲರಿಗಿಂತಲೂ ನೀನೇ ಮೊದಲು ಪಾನಮಾಡು ಎಂದಭಿಪ್ರಾಯವು.

---

ಸಂಹಿತಾಪಾಠಃ

ಯಜ್ಜಾಯಥಾಸ್ತದಹರಸ್ಯ ಕಾಮೇಂಽಶೋಃ ಪೀಯೂಷಮಪಿಬೋ ಗಿರಿಷ್ಠಾಂ ।

ತಂ ತೇ ಮಾತಾ ಪರಿ ಯೋಷಾ ಜನಿತ್ರೀ ಮಹಃ ಪಿತುರ್ದಮ ಆಸಿಂ-ಚದಗ್ರೇ ॥ ೨ ॥

ಪದಪಾಠಃ

ಯತ್ । ಜಾಯಥಾಃ । ತತ್ । ಅಹಃ । ಅಸ್ಯ । ಕಾಮೇ । ಅಂಶೋಃ । ಪೀಯೂಷಂ । ಅಪಿಬಃ । ಗಿರಿಽಸ್ಥಾಂ ।

ತಂ । ತೇ । ಮಾತಾ । ಪರಿ । ಯೋಷಾ । ಜನಿತ್ರೀ । ಮಹಃ । ಪಿತುಃ । ದಮೇ । ಆ । ಅಸಿಂಚತ್ । ಅಗ್ರೇ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಯದ್ಯಸ್ಮಿನ್ನಹನಿ ಜಾಯಥಾ ಅಜಾಯಥಾಃ ತದಹಸ್ತಸ್ಮಿನ್ನೇವಾಹನ್ಯಸ್ಯ ಸೋಮಸ್ಯ ಕಾಮೇ ಪಿಪಾಸಾಯಾಂ ಸತ್ಯಾಂ ಗಿರಿಷ್ಠಾಂ ಗಿರಿಸ್ಥಾಂ ಪರ್ವತೋಸ್ಯೋಚ್ಚಸ್ಥಾನೇ ವರ್ತಮಾನ-ಮಂಶೋಃ ಸೋಮಲತಾಖಂಡವಿಶಿಷ್ಟಸ್ಯ ಋಜೀಷಸ್ಯ ಪೀಯೂಷಮಭಿನವಂ ರಸಮಪಿಬಃ । ಪೀತ-ವಾನಸಿ । ಉತ್ಪತ್ತಿಕ್ಷಣ ಏವ ಸೋಮಪಾನೇ ಕಾರಣಂ ದರ್ಶಯತಿ । ತೇ ತವ ಜನಿತ್ರೀ ಮಾತಾ ಯೋಷಾ ಯುವತಿರದಿತಿರ್ಮಹೋ ಮಹತಃ ಪಿತುರ್ಜನಕಸ್ಯ ಕಶ್ಯಪಸ್ಯ ದಮೇ ಸೂತಿಕಾಗೃಹೇಽಗ್ರೇ ಸ್ತನ್ಯದಾ-ನಾತ್ ಪ್ರಾಕ್ ತಂ ತಾದೃಷಂ ಸೋಮಂ ಪರ್ಯಾಸಿಂಚತ್ । ತವಾಸ್ಯೇ ಪರಿತೋಽಕ್ಷಾರಯತ್ ॥

CC-0. Jangamwadi Math Collection. Digitized by eGangotri

**ಪ್ರಕರ್ಷೇಣ ಭರ್ತಾರಂ ಸಂಗ್ರಹೀತಾರಂ ಯಜಮಾನಮಾವತ್ । ರಕ್ಷತು । ಹ ಪ್ರಸಿದ್ಧೌ । ಕಿಂಚ ತಾದೃಶಸ್ತ್ವಂ ಪ್ರತಿಕಾಮಂ ಕಾಮೇ ಕಾಮೇ ಸೋಮಪಾನೇಚ್ಛಾಯಾಂ ಸತ್ಯಾಂ ತೇ ತವ ಯಥಾ ಕಾಮಸ್ಯ ಪೂರ್ತಿರ್ಭವತಿ ತಥಾ ಸಾಧೋಃ ರಸಾತ್ಮನಾ ಸಂಸಿದ್ಧಂ ರಸಾಶಿರೋಃ ಗೋಪಯೋಮಿಶ್ರಣೋಪೇತಂ ಸೋಮ್ಯಸ್ಯ ಸೋಮಮಯಂ ರಸಂ ಪ್ರಥಮಂ ಸರ್ವೇಭ್ಯೋ ದೇವೇಭ್ಯಃ ಪುರಸ್ತಾತ್ಪಿಬ ॥ ಪ್ರತಿಕಾಮಂ । ಕಾಮಂ ಕಾಮಂ ಪ್ರತಿ । ವೀಪ್ಸಾಯಾಮವ್ಯಯೀಭಾವಃ । ಸಮಾಸಸ್ವರಃ । ಯಥಾ । ಅಪಾದಾಂತತ್ವಾದೇವ ಲಿತ್ಸ್ವರಃ । ರಸಾಶಿರಃ । ಆಙ್‌ಪೂರ್ವಾತ್ ಶ್ರೀಣಾತೇಃ ಕ್ವಿಪ್ಯಪಸ್ಪೃಧೇಥಾಮಿತ್ಯಾದಿನಾಶಿರ್ ಇತ್ಯಾದೇಶಃ। ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ । ಸೋಮ್ಯಸ್ಯ । ಸೋಮಶಬ್ದಾನ್ಮಯಡರ್ಥೇ ಮಯೇ ಚೇತಿ ಯಪ್ರತ್ಯಯಃ ॥**

ಪ್ರತಿಪದಾರ್ಥ

**ವೃಷಭಃ**— ವೃಷ್ಟಿಯನ್ನು ಸುರಿಸುವವನೂ । **ಸದ್ಯೋ ಹ ಜಾತಃ**- ಉತ್ಪನ್ನನಾದೊಡನೆಯೇ । **ಕನೀನಃ**— ಆಕರ್ಷಕವಾದ ರೂಪವುಳ್ಳವನೂ ಆದ ಇಂದ್ರನು । **ಸುತಸ್ಯ**— ಹಿಂಡಲ್ಪಟ್ಟ । **ಅಂಧಸಃ**— ಸೋಮರೂಪವಾದ ಅನ್ನವನ್ನು । **ಪ್ರಭರ್ತಂ**— ಅತಿಶಯವಾಗಿ ಹಿಡಿದಿರುವ ಯಜಮಾನನನ್ನು । **ಆವತ್**— ರಕ್ಷಿಸಲಿ (ಎಲೈ ಇಂದ್ರನೇ) **ಪ್ರತಿಕಾಮಂ**— ನಿನ್ನ ಇಚ್ಛೆಯುಂಟಾದಾಗೆಲ್ಲ । **ತೇ**— ನಿನಗೆ । **ಯಥಾ**— ತೃಪ್ತಿಯಾಗುವಂತೆ । **ಸಾಧೋಃ**— ರಸಭರಿತವಾದುದೂ । **ರಸಾಶಿರಃ**— ಹಾಲುಮಿಶ್ರಿತವಾದುದೂ ಆದ । **ಸೋಮ್ಯಸ್ಯ**- ಸೋಮರಸವನ್ನು। **ಪ್ರಥಮಂ**- ಎಲ್ಲಾ ದೇವತೆಗಳಿಗಿಂತಲೂ ಮೊದಲೇ । **ಪಿಬ**— ಪಾನಮಾಡು.

ಭಾವಾರ್ಥ

ವೃಷ್ಟಿಯನ್ನು ಸುರಿಸುವವನೂ, ಉತ್ಪನ್ನವಾದೊಡನೆಯೇ ರಮಣೀಯವಾದ ರೂಪವುಳ್ಳವನೂ ಆದ ಇಂದ್ರನು ಹಿಂಡಿ ಸಿದ್ಧವಾದ ಸೋಮವನ್ನು ಭಕ್ತಿಯಿಂದ ಹಿಡಿದಿರುವ ಯಜಮಾನನನ್ನು ರಕ್ಷಿಸಲಿ. ಎಲೈ ಇಂದ್ರನೇ, ನಿನಗೆ ಇಚ್ಛೆಯುಂಟಾದಾಗೆಲ್ಲಾ ನಿನಗೆ ತೃಪ್ತಿಯಾಗುವಂತೆ ರಸಭರಿತವಾದುದೂ, ಹಾಲುಮಿಶ್ರಿತವಾದುದೂ ಆದ ಸೋಮರಸವನ್ನು ಎಲ್ಲಾ ದೇವತೆಗಳಿಗಿಂತಲೂ ಮೊದಲೇ ಪಾನಮಾಡು.

English Translation

May the showerer (of rain), who, as soon as born, is the object of affection, protect the offerer of the effused libation : drink at will, Indra, before (the other gods), of the pure Soma juice mixed with milk.

ವಿಶೇಷವಿಷಯಗಳು

**ಪ್ರತಿಕಾಮಂ ಯಥಾ ತೇ**— **ಕಾಮೇ ಕಾಮೇ ಸೋಮಪಾನೇಚ್ಛಾಯಾಂ ಸತ್ಯಾಂ ತೇ ತವ ಯಥಾ ಕಾಮಸ್ಯ ಪೂರ್ತಿರ್ಭವತಿ ತಥಾ (ಪಿಬ)** । ಎಲೈ ಇಂದ್ರನೇ, ನಿನಗೆ ಯಾವಾಗ ಯಾವಾಗ ಸೋಮಪಾನವನ್ನು ಮಾಡಬೇಕೆಂಬ ಇಚ್ಛೆಯುಂಟಾಗುವುದೋ ಎಂದರೆ ನಿನಗೆ ಯಾವಾಗ ಬೇಕಾದರೂ ನಿನಗೆ ತೃಪ್ತಿಯಾಗುವಷ್ಟು, ಸೋಮರಸವನ್ನು ಪಾನಮಾಡು ಎಂದು ಋಷಿಯು ಪ್ರಾರ್ಥಿಸಿದಾನೆ.

CC-0. Jangamwadi Math Collection. Digitized by eGangotri

**ರಸಾಶಿರಃ**—ರಸವೆಂದರೆ ಇಲ್ಲಿ ದ್ರವರೂಪವಾದ ಹಾಲು ಎಂದರ್ಥ. ಅಂತಹ ಹಾಲಿನಿಂದ ಮಿಶ್ರಿತವಾದ ಸೋಮರಸ ಅಥವಾ ಗವಾಶಿರ ಎಂದಭಿಪ್ರಾಯವು.

**ಪ್ರಥಮಂ ಸೋಮ್ಯಸ್ಯ—ಸೋಮಮಯಂ ರಸಂ ಪ್ರಥಮಂ ಸರ್ವೇಭ್ಯೋ ದೇವೇಭ್ಯಃ ಪುರ-ಸ್ತಾತ್ಪಿಬ**—ರಸಾತ್ಮಕವಾಗಿರುವ ಶೋಧಿಸಿ ಸಿದ್ಧವಾಗಿರುವ ಸೋಮವನ್ನು ಇತರ ದೇವತೆಗಳು ಪಾನಮಾಡುವುದಕ್ಕಿಂತಲೂ ಮೊದಲೇ ಎಂದರೆ ಎಲ್ಲರಿಗಿಂತಲೂ ನೀನೇ ಮೊದಲು ಪಾನಮಾಡು ಎಂದಭಿಪ್ರಾಯವು.

---

ಸಂಹಿತಾಪಾಠಃ

ಯಜ್ಜಾಯಥಾಸ್ತದಹರಸ್ಯ ಕಾಮೇಂಽಶೋಃ ಪೀಯೂಷಮಪಿಬೋ ಗಿರಿಷ್ಠಾಂ ।
ತಂ ತೇ ಮಾತಾ ಪರಿ ಯೋಷಾ ಜನಿತ್ರೀ ಮಹಃ ಪಿತುರ್ದಮ ಆಸಿಂ-ಚದಗ್ರೇ ॥ ೨ ॥

ಪದಪಾಠಃ

ಯತ್ । ಜಾಯಥಾಃ । ತತ್ । ಅಹಃ । ಅಸ್ಯ । ಕಾಮೇ । ಅಂಶೋಃ । ಪೀಯೂಷಂ । ಅಪಿಬಃ । ಗಿರಿಽಸ್ಥಾಂ ।
ತಂ । ತೇ । ಮಾತಾ । ಪರಿ । ಯೋಷಾ । ಜನಿತ್ರೀ । ಮಹಃ । ಪಿತುಃ । ದಮೇ । ಆ । ಅಸಿಂಚತ್ । ಅಗ್ರೇ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಯದ್ಯಸ್ಮಿನ್ನಹನಿ ಜಾಯಥಾ ಅಜಾಯಥಾಃ ತದಹಸ್ತಸ್ಮಿನ್ನೇವಾಹನ್ಯಸ್ಯ ಸೋಮಸ್ಯ ಕಾಮೇ ಪಿಪಾಸಾಯಾಂ ಸತ್ಯಾಂ ಗಿರಿಷ್ಠಾಂ ಗಿರಿಸ್ಥಂ ಪರ್ವತೋಸ್ಯೋಚ್ಚೈಸ್ಥಾನೇ ವರ್ತಮಾನ-ಮಂಶೋಃ ಸೋಮಲತಾಖಂಡವಿಶಿಷ್ಟಸ್ಯ ಋಜೀಷಸ್ಯ ಪೀಯೂಷಮಭಿನವಂ ರಸಮಪಿಬಃ । ಪೀತೆ-ವಾನಸಿ । ಉತ್ಪತ್ತಿಕ್ಷಣ ಏವ ಸೋಮಪಾನೇ ಕಾರಣಂ ದರ್ಶಯತಿ । ತೇ ತವ ಜನಿತ್ರೀ ಮಾತಾ ಯೋಷಾ ಯುವತಿರದಿತಿರ್ಮಹೋ ಮಹತಃ ಪಿತುರ್ಜನಕಸ್ಯ ಕಶ್ಯಪಸ್ಯ ದಮೇ ಸೂತಿಕಾಗೃಹೇಽಗ್ರೇ ಸ್ತನ್ಯದಾ-ನಾತ್ ಪ್ರಾಕ್ ತಂ ತಾದೃಷಂ ಸೋಮಂ ಪರ್ಯಾಸಿಂಚತ್ । ತವಾಸ್ಯೇ ಪರಿತೋಽಕ್ಷಾರಯೆತ್ ॥

CC-0. Jangamwadi Math Collection. Digitized by eGangotri

**ಜಾಯಥಾಃ । ಜನೀ ಪ್ರಾದುರ್ಭಾವ ಇತ್ಯಸ್ಯ ಲಙಿ ಬಹುಲಂ ಛಂದಸೀತ್ಯಡಭಾವಃ । ಯದ್ವೃತ್ತಯೋಗಾದನಿಘಾತಃ । ಜನಿತ್ರೀ । ಜನಿತಾ ಮಂತ್ರ ಇತಿ ನಿಪಾತನಾಣ್ಣೇರ್ಲೋಪಃ ॥**

ಪ್ರತಿಪದಾರ್ಥ

(ಎಲೈ ಇಂದ್ರನೇ) **ಯತ್**— ಯಾವಾಗ । **ಜಾಯಥಾಃ**—ನೀನು ಉತ್ಪನ್ನನಾದೆಯೋ । **ತದಹಃ**—ಆ ದಿನವೇ । **ಅಸ್ಯ**—ಈ ಸೋಮರಸದ । **ಕಾಮೇ**—ಪಾನೇಚ್ಛೆಯುಂಟಾದಾಗ । **ಗಿರಿಷ್ಠಾಂ**—ಪರ್ವತದ ಉಚ್ಛಸ್ಥಾನದಲ್ಲಿದ್ದ । **ಅಂಶೋಃ**—ಸೋಮಲತಾಖಂಡದ। **ಪೀಯೂಷಂ**-ರಸವನ್ನು । **ಅಪಿಬಃ**— ಪಾನಮಾಡಿದೆ । **ತೇ**—ನಿನ್ನ । **ಜನಿತ್ರೀ**—ಮಾತೆಯೂ । **ಯೋಷಾ**— ಯುವತಿಯೂ ಆದ ಅದಿತಿಯು । **ಮಹಃ**—ಮಹಾತ್ಮನೂ । **ಪಿತುಃ**—ನಿನ್ನ ಜನಕನೂ ಆದ ಕಶ್ಯಪನ । **ದಮೇ**—ಸೂತಿಕಾಗೃಹದಲ್ಲಿ । **ಅಗ್ರೇ**—(ನಿನಗೆ) ಸ್ತನ್ಯವನ್ನು ಕೊಡುವುದಕ್ಕೆ ಮೊದಲೇ । **ತಂ**—ಆ ಸೋಮವನ್ನು । **ಪರಿ ಆಸಿಂಚತ್**— ಪೂರ್ಣವಾಗಿ ಕುಡಿಸಿದಳು.

ಭಾವಾರ್ಥ

ಎಲೈ ಇಂದ್ರನೇ, ನೀನು ಉತ್ಪನ್ನನಾದೊಡನೆಯೇ, ಸೋಮರಸದ ಪಾನೇಚ್ಛೆಯುಂಟಾದಾಗ ಪರ್ವತದ ಉಚ್ಛಸ್ಥಾನದಲ್ಲಿದ್ದ ಸೋಮಲತಾಖಂಡದ ರಸವನ್ನು ಪಾನಮಾಡಿದೆ. ನಿನ್ನ ಮಾತೆಯೂ ಯುವತಿಯೂ ಆದ ಅದಿತಿಯು ಮಹಾತ್ಮನೂ ನಿನ್ನ ಜನಕನೂ ಆದ ಕಶ್ಯಪನ ಸೂತಿಕಾಗೃಹದಲ್ಲಿ ನಿನಗೆ ಸ್ತನ್ಯವನ್ನು ಕೊಡುವುದಕ್ಕೆ ಮೊದಲೇ ಆ ಸೋಮವನ್ನು ಪೂರ್ಣವಾಗಿ ಕುಡಿಸಿದಳು.

English Translation

On the day on which you were born, you drank at will the mountain-abiding nectar of this Soma plant, for your youthful parent mother (Aditi), in the dwelling of your great sire (Kashyapa), gave it to you before she gave the breast.

ವಿಶೇಷವಿಷಯಗಳು

ಇಂದ್ರನು ಉತ್ಪನ್ನನಾದ ದಿನವೇ ಅವನಿಗೆ ಸೋಮಪಾನೇಚ್ಛೆಯುಂಟಾಯಿತು ಮತ್ತು ಅಮೃತಸಮಾನವಾದ ಆ ಸೋಮರಸವನ್ನು ಪಾನಮಾಡಿದನು ಎಂದು ಈ ಋಕ್ಕಿನ ಪೂರ್ವಾರ್ಧದಲ್ಲಿ ವಿವರಿಸಿದೆ. ಮತ್ತು ಉತ್ತರಾರ್ಧದಲ್ಲಿ ಯುವತಿಯಾದ ಇಂದ್ರನ ತಾಯಿಯು ತನ್ನ ಪತಿಗೃಹದಲ್ಲಿ ಇಂದ್ರನು ಜನಿಸಿದ ಕೂಡಲೇ ಅವನಿಗೆ ಸ್ತನ್ಯಪಾನಮಾಡಿಸುವುದಕ್ಕೆ ಮೊದಲೇ ಸೋಮರಸವನ್ನು ಕುಡಿಸಿದಳು ಎಂಬ ವರ್ಣನೆ ಇದೆ ಇದರಿಂದ ಇಂದ್ರನಿಗೆ ಸೋಮಪಾನೇಚ್ಛೆಯು ಮೊದಲಿನಿಂದಲೂ ಬಹಳವಾಗಿರುವುದೆಂದು ಸೂಚಿತವಾಗಿರುವುದು. ಇಲ್ಲಿ ಇಂದ್ರನ ತಾಯಿಯು ಯಾರು ? ತಂದೆಯು ಯಾರು ಎಂಬ ವಿವರಣೆಯು ಇಲ್ಲದಿದ್ದರೂ ಭಾಷ್ಯಕಾರರು ದೇವಮಾತೆಯಾದ ಅದಿತಿಯೇ ಇಂದ್ರನ ತಾಯಿಯೆಂದೂ ತಂದೆಯು ಕಶ್ಯಪನೆಂದೂ ಹೇಳಿರುವರು. ಈ ವಿವರಣೆಯು ಪುರಾಣಾದಿಗಳಲ್ಲಿ ವಿವರಿಸಿರುವ ವರ್ಣನೆಗೆ ಸರಿಹೋಗುವುದಾದರೂ ವೇದಸಾಹಿತ್ಯಕ್ಕೆ ಅನುಸಾರವಾಗಿರುವುದೆಂದು ಹೇಳುವುದಕ್ಕಾಗುವುದಿಲ್ಲ. ಏಕೆಂದರೆ ಪುರಾಣಾದಿಗಳಲ್ಲಿ ಹೇಳಿರುವ ಇಂದ್ರನ ಸ್ಥಾನಮಾನಗಳಿಗೂ ಋಗ್ವೇದದಲ್ಲಿ ಉಕ್ತವಾಗಿರುವ ಇಂದ್ರನ ಸ್ಥಾನಮಾನ

CC-0. Jangamwadi Math Collection. Digitized by eGangotri

ಗಳಿಗೂ ಬಹಳ ವ್ಯತ್ಯಾಸವಿದೆ. ಪುರಾಣಾದಿಗಳಲ್ಲಿ ಇಂದ್ರನ ಸ್ಥಾನಮಾನಗಳು ಉಚ್ಚತರವಾದವುಗಳಲ್ಲ. ಅವನಿಗಿಂತ ಮೇಲ್ಪಟ್ಟ ದೇವತೆಗಳು ಇರುವರೆಂದೂ ಇಂದ್ರನು ಒಬ್ಬ ಸಾಧಾರಣ ದೇವತೆಯೆಂದೂ ಅವನು ಸ್ವರ್ಗಕ್ಕೆ ಮಾತ್ರ ಅಧಿಪತಿಯೆಂದೂ ಹೇಳಿದೆ. ಆದರೆ ವೇದಗಳಲ್ಲಿ ಇಂದ್ರನ ಸ್ಥಾನವು ಸಾರ್ವಭೌಮತ್ವವುಳ್ಳದ್ದೆಂದೂ ಹೇಳಿದೆ ಇಂದ್ರನೇ ದೇವತೆಗಳಲ್ಲೆಲ್ಲಾ ಶ್ರೇಷ್ಠನು. ಅವನೇ ಭೂಮ್ಯಂತರಿಕ್ಷಗಳನ್ನು ಸೃಷ್ಟಿಮಾಡಿದನು. ದ್ಯಾವಾಪೃಥಿವಿಗಳೂ, ಸೂರ್ಯ ಚಂದ್ರರೂ, ಇತರ ಸಮಸ್ತ ಪ್ರಾಣಿಗಳೂ, ಸೃಷ್ಟಿವರ್ಗವೂ ಎಲ್ಲವೂ ಇಂದ್ರನ ಆಜ್ಞಾಧಾರಕವಾಗಿರುವವೆಂದೂ ಇಂದ್ರನೇ ವಿಶ್ವಕ್ಕೆಲ್ಲಾ ಏಕೈಕಪ್ರಭುವೆಂದೂ, ದೇವತೆಗಳಲ್ಲೆಲ್ಲಾ ಶ್ರೇಷ್ಠನೆಂದೂ ಅನೇಕಕಡೆ ಹೇಳಿದೆ. ಆದ್ದರಿಂದ ವೇದಾಂತಗಳಲ್ಲಿ ಉಕ್ತವಾಗಿರುವ ಪರಬ್ರಹ್ಮತತ್ವವೇ ಋಗ್ವೇದದ ಇಂದ್ರನೆಂದು ಹೇಳಲು ಅವಕಾಶವಿರುವುದು. ಋಗ್ವೇದದಲ್ಲಿ ಇಂದ್ರನ ಪರವಾದ ಸೂಕ್ತಗಳಷ್ಟು ಬೇರೆ ಇತರ ದೇವತೆಗಳ ಪರವಾಗಿ ಇಲ್ಲ. ಸುಮಾರು ೨೫೦ ಸೂಕ್ತ ಗಳು ಮತ್ತು ಕೆಲವು ಸೂಕ್ತಭಾಗಗಳು ಇಂದ್ರನನ್ನು ಸ್ತುತಿಸುತ್ತವೆ. ಇಂದ್ರನು ಇತರ ಕೆಲವು ದೇವತೆಗಳೊಡನೆಯೂ ಸ್ತುತನಾಗಿದಾನೆ. ಇವೆಲ್ಲವನ್ನೂ ಸೇರಿಸಿದರೆ ಸುಮಾರು ೩೦೦ ಸೂಕ್ತಗಳೇ ಅವನ ಪರವಾಗಿರುವವು. ಎಂದರೆ ಸುಮಾರು ಋಗ್ವೇದದ ಕಾಲುಭಾಗವೇ ಆದಂತಾಯಿತು. ಎಲ್ಲಾ ದೇವತೆಗಳಿಗಿಂತಲೂ ಇಂದ್ರನ ಮಹತ್ತ್ವವೂ, ಸಾಹಸಕಾರ್ಯಗಳೂ ವಿಶೇಷವಾಗಿ ವರ್ಣಿತವಾಗಿವೆ.

ಇದಲ್ಲದೆ ಇಂದ್ರನು ದೇವಮಾತೆಯಾದ ಅದಿತಿಯ ಪುತ್ರನೆಂದು ಋಗ್ವೇದಸಂಹಿತೆಯಲ್ಲಿಯೂ, ಯಜುರ್ವೇದ ದಲ್ಲಿಯೂ ಹೇಳಿದೆ –

ಅಷ್ಟೌ ಪುತ್ರಾಸೋ ಅದಿತೇರ್ಯೇ ಜಾತಾಸ್ತನ್ವಸ್ಪರಿ ।

(ಋ. ಸಂ. ೧೦-೭೨-೮)

ಅಷ್ಟೌ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃಪರಿ । ದೇವಾꣳಉಪ ಪ್ರೈತ್ಸಪ್ತಭಿಃ । ಪರಾ-ಮಾರ್ತಾಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ । ಉಪ ಪ್ರೈತ್ಪೂರ್ವ್ಯಂ ಯುಗಂ । ಪ್ರಜಾಯೈ ಮೃತ್ಯವೇ ತತ್ । ಪರಾಮಾರ್ತಾಂಡಮಾಭರದಿತಿ । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್ಶ್ಚೇತ್ಯೇತೇ ॥

(ತೈ. ಆ. ೧-೧೩-೨, ೩)

ಇಲ್ಲಿ ಹೇಳಿರುವಂತೆ ಅದಿತಿಗೆ ಎಂಟುಮಂದಿ ಮಕ್ಕಳೆಂದೂ, ಅವರುಗಳ ಹೆಸರು—ಮಿತ್ರ, ವರುಣ, ಧಾತಾ, ಅರ್ಯಮಾ ಅಂಶು, ಭಗ, ಇಂದ್ರ, ವಿವಸ್ವಾನ್ ಎಂದೂ ಹೇಳಿದೆ. ಈ ಎಂಟುಮಂದಿಯಲ್ಲಿ ಇಂದ್ರನೂ ಒಬ್ಬನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ದೇವಮಾತೆಯಾದ ಅದಿತಿಯೇ ಇಂದ್ರನ ತಾಯಿಯೆಂಬ ವಿಚಾರದಲ್ಲಿ ಯಾವ ಅನುಮಾನವೂ ಇಲ್ಲ. ತಂದೆಯು ಕಶ್ಯಪನು ಎಂಬ ವಿಷಯದಲ್ಲಿ ಪುರಾಣೋಕ್ತಿಯಿರುವುದೇ ಹೊರತು ಋಗ್ವೇದದಲ್ಲಿ ಇದಕ್ಕೆ ಯಾವ ಆಧಾರವೂ ಇರುವುದಿಲ್ಲ

ಗಿರಿಸ್ಥಾಂ ಅಂಶೋಃ ಪೀಯೂಷಂ—ಇಲ್ಲಿ ಗಿರಿಸ್ಥಾಂ ಎಂಬ ಶಬ್ದಪ್ರಯೋಗವು ಬೆಟ್ಟಗಳಲ್ಲಿ ಬೆಳೆದಿರುವ ಸೋಮಲತೆಗಳೆಂಬುದನ್ನು ಸೂಚಿಸುತ್ತದೆ. ಬಯಲುಗಳಲ್ಲಿಯೂ, ನದೀತೀರಗಳಲ್ಲಿಯೂ ಸೋಮಲತೆಯು ಬೆಳೆಯು

CC-0. Jangamwadi Math Collection. Digitized by eGangotri

ವುದಾದರೂ ಬೆಟ್ಟಗಳಲ್ಲಿ ಬೆಳೆದಿರುವುದೇ ಶ್ರೇಷ್ಠವೆಂದು ಪ್ರಸಿದ್ಧವಾಗಿರುವುದು. ಅದರಲ್ಲಿಯೂ ಎಷ್ಟೆಷ್ಟು ಎತ್ತರದಲ್ಲಿ ಬೆಳೆದಿದ್ದರೆ ಅಷ್ಟೂ ಉತ್ತಮವೆಂದೂ, ರಸವು ಹೆಚ್ಚಾಗಿಯೂ, ರುಚಿಕರವಾಗಿಯೂ ಇರುವುದೆಂದೂ ಪ್ರಸಿದ್ಧಿಯು. ಈ ಸೋಮಲತೆಯು ಬೆಳೆಯುವ ಪರ್ವತಗಳಲ್ಲಿ ಮೌಜವತವೆಂಬ ಪರ್ವತವು ಪ್ರಸಿದ್ಧವಾಗಿ ಋಗ್ವೇದದಲ್ಲಿ ಅನೇಕಕಡೆ ಉಕ್ತವಾಗಿರುವುದು.

---

ಸಂಹಿತಾಪಾಠಃ

ಉಪಸ್ಥಾಯ ಮಾತರಮನ್ನಮೈಟ್ಟ ತಿಗ್ಮಮಪಶ್ಯದಭಿ ಸೋಮಮೂಧಃ ।
ಪ್ರಯಾವಯನ್ನಚರದ್ಗೃತ್ಸೋ ಅನ್ಯಾನ್ಮಹಾನಿ ಚಕ್ರೇ ಪುರುಧಪ್ರತೀಕಃ ॥
॥ ೩ ॥

ಪದಪಾಠಃ

ಉಪऽಸ್ಥಾಯ । ಮಾತರಂ । ಅನ್ನಂ । ಐಟ್ಟ । ತಿಗ್ಮಂ । ಅಪಶ್ಯತ್ । ಅಭಿ । ಸೋಮಂ । ಊಧಃ ।
ಪ್ರऽಯವಯನ್ । ಅಚರತ್ । ಗೃತ್ಸಃ । ಅನ್ಯಾನ್ । ಮಹಾನಿ । ಚಕ್ರೇ । ಪುರುಧऽಪ್ರತೀಕಃ ॥ ೩ ॥

ಸಾಯಣಭಾಷ್ಯಂ

ಸ ಇಂದ್ರೋ ಮಾತರಮುಪಸ್ಥಾಯ ಪ್ರಾರ್ಥಯಿತ್ವಾನ್ನಮೈಟ್ಟ । ತಾಮನ್ನಮಯಾಚತ । ಈಳಿರಧ್ಯೇಷಣಾಕರ್ಮೇತಿ ಯಾಸ್ಕಃ । ತತಸ್ತಸ್ಯಾ ಊಧ ಊಧಸಿ ಕ್ಷೀರರೂಪೇಣ ಸ್ಥಿತಂ ತಿಗ್ಮಂ ದೀಪ್ತಂ ಸೋಮಮಭ್ಯಪಶ್ಯತ್ । ಸರ್ವತೋऽದರ್ಶತ್ । ಗೃತ್ಸಃ । ಅಭಿಕಾಂಕ್ಷ್ಯತೇ ಸರ್ವೈರ್ದೇವೈಃ ಶತ್ರುಹನನಾರ್ಥಮಿತಿ ಗೃತ್ಸ ಇಂದ್ರಃ । ಅನ್ಯಾನ್ಸಪತ್ನಾನ್ಪ್ರಯವಯನ್ ಸ್ವಸ್ವಸ್ಥಾನಾತ್ಪ್ರಕರ್ಷೇಣೋಚ್ಚಾಲಯನ್ನಚರತ್ । ಸರ್ವತ್ರ ಚರತಿ । ಕಿಂಚ ಪುರುಧಪ್ರತೀಕಸ್ತೇಜೋಯೋಗಾದ್ಬಹುಧಾ ವಿಕ್ಷಿಪ್ತಾಂಗೋ ಮಹಾನಿ ಮಹಾಂತಿ ವೃತ್ರಹನನಾದೀನಿ ಕರ್ಮಾಣಿ ಚಕ್ರೇ ॥ ಉಪಸ್ಥಾಯ । ತಿಷ್ಠತೇರ್ಲ್ಯಪಿ ಘುಮಾಸ್ಥೇತೀತ್ವೇ ಪ್ರಾಪ್ತೇ ನ ಲ್ಯಪೀತಿ ಪ್ರತಿಷೇಧಃ । ಲಿತ್ಸ್ವರಃ । ಐಟ್ಟ । ಈಳಿರ್ಯಾಚ್ಞಾರ್ಥಃ । ತಸ್ಮಾಲ್ಲಙಿ ರೂಪಂ । ಆಡಜಾದೀನಾಮಿತ್ಯಾಡಾಗಮಃ । ಷ್ಟುತ್ವಂ । ನಿಘಾತಃ । ತಿಗ್ಮಂ । ತಿಜ ನಿಶಾನೇ । ಅಸ್ಮಾದ್ಯುಜಿರುಚಿತಿಜಾಂ ಕುಶ್ಚೇತಿ ಮಕ್ಪ್ರತ್ಯಯಃ ಕವರ್ಗಾದೇಶಶ್ಚ । ಪ್ರಯವಯನ್ । ಯು ಮಿಶ್ರಣಾಮಿಶ್ರಣಯೋರಿತ್ಯಸ್ಯ ಣ್ಯಂತಸ್ಯ ಶತರಿ ರೂಪಂ । ಲಿತ್ಸ್ವರಃ । ಗೃತ್ಸಃ । ಗೃಧು ಅಭಿಕಾಂಕ್ಷಾಯಾಂ । ಗೃಧಿಪಣ್ಯೋರ್ದಕೌ ಚೇತಿ ಸಪ್ರತ್ಯಯೋ ದಕಾರಶ್ಚಾಂತಾದೇಶಃ । ವೃಷಾದಿತ್ವಾದಾದ್ಯುದಾತ್ತಃ । ಪುರುಧಪ್ರತೀಕಃ । ಪುರುಶಬ್ದ ಇಹ ಸಂಖ್ಯಾವಾಚೀ । ಸಂಖ್ಯಾಯಾ ವಿಧಾರ್ಥೇ ಧೇತಿ ಧಾಪ್ರತ್ಯಯಃ । ಹ್ರಸ್ವಶ್ಛಾಂದಸಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

(ಇಂದ್ರಃ—ಇಂದ್ರನು) । ಮಾತರಂ—ತಾಯಿಯನ್ನು । ಉಪಸ್ಥಾಯ—ಸಮೀಪಿಸಿ । ಅನ್ನಂ—ಅನ್ನವನ್ನು । ಐಟ್ಟ—ಪ್ರಾರ್ಥಿಸಿದನು । ಊಧಃ—ಅವಳ ಮೊಲೆಯಲ್ಲಿ ಕ್ಷೀರರೂಪದಲ್ಲಿರತಕ್ಕದ್ದೂ । ತಿಗ್ಮಂ—ಪ್ರಕಾಶ

CC-0. Jangamwadi Math Collection. Digitized by eGangotri

ಮಾನವಾದುದೂ ಆದ । **ಸೋಮಂ**—ಸೋಮವನ್ನು । **ಅಭಿ ಅಪಶ್ಯತ್**—ಪೂರ್ಣವಾಗಿ ನೋಡಿದನು । **ಗೃತ್ಸಃ**—ದೇವತೆಗಳಿಂದ ಅಪೇಕ್ಷಿತನಾಗುವ ಇಂದ್ರನು । **ಅನ್ಯಾನ್**—ಶತ್ರುಗಳನ್ನು । **ಪ್ರಯುವಯನ್**—ಅವರವರ ಸ್ಥಾನಗಳಿಂದ ಓಡಿಸುತ್ತಾ । **ಅಚರತ್**—ಸರ್ವತ್ರ ಸಂಚರಿಸುತ್ತಾನೆ । **ಪುರುಧಪ್ರತೀಕಃ**—ತನ್ನ ತೇಜೋರೂಪದಿಂದ ಸರ್ವತ್ರ ಪರಡಿದವನಾಗಿ । **ಮಹಾನಿ**—ಮಹತ್ತರವಾದ ಕಾರ್ಯಗಳನ್ನು । **ಚಕ್ರೇ**—ಮಾಡಿದನು.

### ಭಾವಾರ್ಥ

ಇಂದ್ರನು ತನ್ನ ತಾಯಿಯನ್ನು ಸಮೀಪಿಸಿ ಅನ್ನವನ್ನು ಪ್ರಾರ್ಥಿಸಿದನು. ಅವಳ ಮೊಲೆಯಲ್ಲಿ ಕ್ಷೀರರೂಪದಲ್ಲಿರತಕ್ಕದ್ದೂ, ಪ್ರಕಾಶಮಾನವಾದುದೂ ಆದ ಸೋಮವನ್ನು ಪೂರ್ಣವಾಗಿ ನೋಡಿದನು. ದೇವತೆಗಳಿಂದ ಅಪೇಕ್ಷಿತನಾಗುವ ಇಂದ್ರನು ಶತ್ರುಗಳನ್ನು ಅವರವರ ಸ್ಥಾನಗಳಿಂದ ಓಡಿಸುತ್ತಾ ಸರ್ವತ್ರ ಸಂಚರಿಸುತ್ತಾನೆ. ತನ್ನ ತೇಜೋರೂಪದಿಂದ ಸರ್ವತ್ರ ಹರಡಿದವನಾಗಿ ಮಹತ್ತರ ಕಾರ್ಯಗಳನ್ನು ಮಾಡಿದನು.

### English Translation

Approaching his mother he asked for food, and beheld the acrid Soma upon her bosom : eager he proceeds, dislodging the adversaries (of the gods) ; and, putting forth manifold (energy), he performed great (deeds).

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನು ತನ್ನ ತಾಯಿಯನ್ನು ಅನ್ನಕ್ಕಾಗಿ (ಆಹಾರಕ್ಕಾಗಿ) ಪ್ರಾರ್ಥಿಸಿದನೆಂದೂ, ಅವಳ ಸ್ತನದಲ್ಲಿದ್ದ ಹಾಲು ಸೋಮರೂಪವಾಗಿರುವುದನ್ನು ಕಂಡನೆಂದೂ ವರ್ಣಿಸಿದೆ.

ಐಟ್ಟ—ಈಳಿರ್ಯಾಚ್ಞಾರ್ಥಃ । ಈಳಿರಧ್ಯೇಷಣಾಕರ್ಮೇತಿ ಯಾಸ್ಕಃ । ಅಪೇಕ್ಷಿಸಿದನು, ಪ್ರಾರ್ಥಿಸಿದನು ಎಂದಭಿಪ್ರಾಯವು

ಗೃತ್ಸಃ—**ಗೃಧು ಅಭಿಕಾಂಕ್ಷಾಯಾಂ** ಎಂಬ ಧಾತುವಿನಿಂದ ನಿಷ್ಪನ್ನವಾದ **ಗೃತ್ಸಃ** ಎಂಬ ಶಬ್ದಕ್ಕೆ-ಅಭಿಕಾಂಕ್ಷ್ಯತೇ ಸರ್ವೈರ್ದೇವೈಃ ಶತ್ರುಹನನಾರ್ಥಮಿತಿ ಗೃತ್ಸ ಇಂದ್ರಃ । ಶತ್ರುಸಂಹಾರಕಾರ್ಯಕ್ಕಾಗಿ ಸಮಸ್ತ ದೇವತೆಗಳೂ ಇಂದ್ರನನ್ನು ಅಪೇಕ್ಷಿಸುತ್ತಾರಾದ್ದರಿಂದ ಇಂದ್ರನಿಗೆ ಗೃತ್ಸನೆಂದು ಹೆಸರು ಎಂದು ಭಾಷ್ಯಕಾರರು ಈ ಶಬ್ದದ ಅವಯವಾರ್ಥವನ್ನು ಹೇಳಿದಾರೆ.



### ಸಂಹಿತಾಪಾಠಃ

ಉಗ್ರಸ್ತುರಾಷಾಳಭಿಭೂತ್ಯೋಜಾ ಯಥಾವಶಂ ತನ್ವಂ ಚಕ್ರ ಏಷಃ ।
ತ್ವಷ್ಟಾರಮಿಂದ್ರೋ ಜನುಷಾಭಿಭೂಯಾಮುಷ್ಯಾ ಸೋಮಮಪಿಬ-
ಚ್ಚಮೂಷು ॥ ೪ ॥

CC-0. Jangamwadi Math Collection. Digitized by eGangotri

ಪದಪಾಠಃ

ಉಗ್ರಃ । ತುರಾಷಾಟ್ । ಅಭಿಭೂತಿಽಓಜಾಃ । ಯಥಾವಶಂ । ತನ್ವಂ । ಚಕ್ರೇ । ಏಷಃ ।

ತ್ವಷ್ಟಾರಂ । ಇಂದ್ರಃ । ಜನುಷಾ । ಅಭಿಽಭೂಯ । ಆಽಮುಷ್ಯ । ಸೋಮಂ । ಅಪಿಬತ್ । ಚಮೂಷು ॥

ಸಾಯಣಭಾಷ್ಯಂ

ಯ ಏಷ ಇಂದ್ರ ಉಗ್ರಃ ಶತ್ರೂಣಾಂ ಭಯಂಕರಸ್ತುರಾಷಾಟ್ ತ್ವರಯಾ ಶತ್ರೂಣಾಮಭಿಭವಿತಾ ಅತ ಏವಾಭಿಭೂತ್ಯೋಜಾಃ ಶತ್ರೂಣಾಮಭಿಭವನಪರಾಕ್ರಮೋಪೇತಃ ಸನ್ ತನ್ವಮಾತ್ಮೀಯಂ ಶರೀರಂ ಯಥಾವಶಂ ಯಥಾಕಾಮಂ ನಾನಾವಿಧರೂಪೋಪೇತಂ ಚಕ್ರೇ । ತಥಾ ಚ ಮಂತ್ರವರ್ಣಃ । ರೂಪಂ-ರೂಪಂ ಮಘವಾ ಬೋಭವೀತಿ । ಋಗ್ವೇ. ೩-೫೩-೮ । ಇತಿ ಸ ಇಂದ್ರೋ ಜನುಷಾ ಜನ್ಮನಾ ಸಾಮ-ರ್ಥ್ಯೇನ ತ್ವಷ್ಟಾರಂ ತ್ವಷ್ಟೃನಾಮಕಮಸುರಮಭಿಭೂಯ ಚಮೂಷು ಚಮಸೇಷು ಸ್ಥಿತಮಾಮುಷ್ಯ ಚೋರಯಿತ್ವಾ ಸೋಮಮಪಿಬತ್ । ತ್ವಷ್ಟಾ ಹತಪುತ್ರೋ ವೀಂದ್ರಮಿತ್ಯಾದಿ ಪ್ರಾಸಹಾ ಸೋಮಮಪಿ-ಬತ್। ತೈ. ಸಂ. ೨-೪-೧೨। ಇತಿ ತೈತ್ತಿರೀಯಕಂ॥ ತುರಾಷಾಟ್। ಞಿತ್ವರಾ ಸಂಭ್ರಮೇ । ಕ್ವಿಪ್। ಜ್ವರತ್ವ-ರೇತ್ಯಾದಿನಾ ಊಟ್ । ಸಹೇಶ್ಛಂದಸಿ ಸಹ ಇತಿ ಣ್ವಿಃ । ಕರ್ತೃಕರಣೇ ಕೃತಾ ಬಹುಲಮಿತಿ ಸಮಾಸಃ । ತತ್ಪುರುಷೇ ಕೃತಿ ಬಹುಲಮಿತಿ ತೃತೀಯಾಯಾ ಅಲುಕ್ । ಸಹೇಃ ಸಾಡಃ ಸ ಇತಿ ಷತ್ವಂ । ಕೃದುತ್ತರ-ಪದಸ್ವರಃ । ಯಥಾವಶಂ । ವಶಂ ಕಾಮಮನತಿಕ್ರಮ್ಯೇತ್ಯವ್ಯಯೀಭಾವಸಮಾಸಃ । ಸಮಾಸಸ್ವರಃ । ಆಮುಷ್ಯ । ಮುಷ ಸ್ತೇಯೇ । ಲ್ಯಪ್ । ಚಮೂಷು । ಚಮು ಅದನೇ । ಕೃಷಿಚಮಿತನಿಧನಿಸರ್ಜಿ-ಖರ್ಜಿಭ್ಯ ಊರಿತ್ಯೂಪ್ರತ್ಯಯಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಏಷಃ— ಈ ಇಂದ್ರನು । ಉಗ್ರಃ—ಭಯಂಕರನಾಗಿಯೂ । ತುರಾಷಾಟ್—ಶತ್ರುಗಳನ್ನು ಸೋಲಿಸು ವವನಾಗಿಯೂ । ಅಭಿಭೂತ್ಯೋಜಾಃ—ಶತ್ರುಗಳನ್ನು ಜಯಿಸುವ ತೇಜಸ್ಸುಳ್ಳವನಾಗಿಯೂ ಆಗಿ । ತನ್ವಂ—ತನ್ನ ಶರೀರವನ್ನು । ಯಥಾವಶಂ—ತನ್ನ ಇಷ್ಟಬಂದಂತೆ । ಚಕ್ರೇ—ಮಾರ್ಪಡಿಸಿಕೊಂಡನು । ಇಂದ್ರಃ—ಅದೇ ಇಂದ್ರನು । ಜನುಷಾ—ತನ್ನ ಸ್ವಾಭಾವಿಕವಾದ ಸಾಮರ್ಥ್ಯದಿಂದ । ತ್ವಷ್ಟಾರಂ—ತ್ವಷ್ಟೃವೆಂಬ ಅಸುರನನ್ನು । ಅಭಿಭೂಯ—ಸೋಲಿಸಿ । ಚಮೂಷು—ಚಮಸಪಾತ್ರೆಯಲ್ಲಿದ್ದ । ಸೋಮಂ—ಸೋಮವನ್ನು । ಆಮುಷ್ಯ—ಅಪಹರಿಸಿ । ಅಪಿಬತ್—ಪಾನಮಾಡಿದನು.

ಭಾವಾರ್ಥ

ಈ ಇಂದ್ರನು ಭಯಂಕರನಾಗಿಯೂ, ಶತ್ರುಗಳನ್ನು ಸೋಲಿಸುವವನಾಗಿಯೂ, ಶತ್ರುಗಳನ್ನು ಜಯಿಸುವ ತೇಜಸ್ಸುಳ್ಳವನಾಗಿಯೂ ಆಗಿ ತನ್ನ ಶರೀರವನ್ನು ತನ್ನ ಇಷ್ಟಬಂದಂತೆ ಮಾರ್ಪಡಿಸಿಕೊಂಡನು. ಅದೇ ಇಂದ್ರನು ತನ್ನ ಸ್ವಾಭಾವಿಕವಾದ ಸಾಮರ್ಥ್ಯದಿಂದ ತ್ವಷ್ಟೃವೆಂಬ ಅಸುರನನ್ನು ಸೋಲಿಸಿ ಚಮಸಪಾತ್ರೆಯಲ್ಲಿದ್ದ ಸೋಮವನ್ನು ಅಪಹರಿಸಿ ಪಾನಮಾಡಿದನು.

CC-0. Jangamwadi Math Collection. Digitized by eGangotri

## English Translation

Fierce, rapid in assault, of overpowering strength, he made his form obedient to his will; having overcome Twashtri by his innate (vigour), and carried off the Soma juice, he drank it (deposited) in the ladles.

ವಿಶೇಷವಿಷಯಗಳು

ತುರಾಷಾಟ್—ತ್ವರಯಾ ಶತ್ರೂಣಾಮಭಿಭವಿತಾ | ಬಹಳ ಬೇಗನೆ ಶತ್ರುಗಳನ್ನು ಸೋಲಿಸುವವನಾದ್ದರಿಂದ ಇಂದ್ರನಿಗೆ ತುರಾಷಾಟ್ ಎಂಬ ಹೆಸರಿದೆ.

ಅಭಿಭೂತ್ಯೋಜಾಃ—ಶತ್ರೂಣಾಮಭಿಭವನಪರಾಕ್ರಮೋಪೇತಃ | ಶತ್ರುಗಳನ್ನು ಸೋಲಿಸುವುದಕ್ಕಾಗಿ ಇಂದ್ರನು ಅತ್ಯಂತ ಪರಾಕ್ರಮದಿಂದ ಕೂಡಿರುವನು ಎಂದಭಿಪ್ರಾಯವು. ಆದ್ದರಿಂದಲೇ ಇಲ್ಲಿ ಉಗ್ರಃ—ಶತ್ರುಗಳಿಗೆ ಭಯಂಕರನು ಎಂಬ ವಿಶೇಷಣವು ಉಕ್ತವಾಗಿದೆ.

ಯಥಾವಶಂ ತನ್ವಂ ಚಕ್ರೇ ಏಷಃ—ತನ್ವಮಾತ್ಮೀಯಂ ಶರೀರಂ ಯಥಾಕಾಮಂ ನಾನಾವಿಧ-ರೂಪೋಪೇತಂ ಚಕ್ರೇ | ಇಂದ್ರನು ಶತ್ರುಗಳನ್ನು ಸೋಲಿಸುವುದಕ್ಕಾಗಿ ತನಗೆ ಇಷ್ಟವಾದ ನಾನಾವಿಧ ರೂಪಗಳನ್ನು ಧರಿಸಲು ಸಾಮರ್ಥ್ಯವುಳ್ಳವನಾಗಿರುವವನಾದ್ದರಿಂದ ಶತ್ರುಸಂಹಾರಕಾಲದಲ್ಲಿ ತನ್ನಿಷ್ಟಬಂದ ರೂಪವನ್ನು (ಆಕಾರವನ್ನು) ಧರಿಸುವನೆಂದು ಇಲ್ಲಿ ಹೇಳಿದೆ. ಈ ವಿಷಯದಲ್ಲಿ --

ರೂಪಂರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನಸ್ತನ್ವಂ೧ ಪರಿ ಸ್ವಾಂ |
(ಋ. ಸಂ. ೩-೫೩-೮)

ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ |
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ||
(ಋ. ಸಂ. ೬-೪೭-೧೮)

ಇತ್ಯಾದಿ ಋಕ್ಕುಗಳಲ್ಲಿ ಮಾಯಾವಿಗಳಾದ ಅಸುರರನ್ನು ಜಯಿಸುವುದಕ್ಕಾಗಿ ಇಂದ್ರನು ತನಗೆ ಬೇಕಾದ ರೂಪಗಳನ್ನು ಧರಿಸುವನೆಂದು ಹೇಳಿದೆ.

ಇಂದ್ರಃ ಜನುಷಾ ತ್ವಷ್ಟಾರಂ ಅಭಿಭೂಯ ಆಮುಷ್ಯ ಚಮೂಷು ಸೋಮಂ ಅಪಿಬತ್—ಸ ಇಂದ್ರೋ ಜನ್ಮನಾ ಸಾಮರ್ಥ್ಯೇನ ತ್ವಷ್ಟ್ರನಾಮಕಮಸುರಮಭಿಭೂಯ ಅಸ್ಯ ಚಮಸಪಾತ್ರೇಷು ಸ್ಥಿತಂ ಸೋಮಂ ಚೋರಯಿತ್ವಾಪಿಬತ್ | ಆ ಇಂದ್ರನು ತನ್ನ ಸ್ವಸಾಮರ್ಥ್ಯದಿಂದ ತ್ವಷ್ಟೃ ಎಂಬ ಅಸುರನನ್ನು ಸೋಲಿಸಿ ಅವನು ಪಾನಮಾಡುವುದಕ್ಕಾಗಿ ಚಮಸಪಾತ್ರೆಯಲ್ಲಿ ಇಟ್ಟಿದ್ದ ಸೋಮರಸವನ್ನು ಅಪಹರಿಸಿ ಅದನ್ನು ತಾನೇ ಪಾನ ಮಾಡಿದನು. ಇಲ್ಲಿ ತ್ವಷ್ಟೃವೆಂಬುವನು ಒಬ್ಬ ಅಸುರನೆಂದು ವರ್ಣಿಸಿದೆ. ಆದರೆ ಈ ತ್ವಷ್ಟೃವು ಪ್ರಜಾಪತಿಗಳಲ್ಲಿ ಒಬ್ಬನೆಂದೂ, ದೇವಶಿಲ್ಪಿಯೆಂದೂ, ಇವನನ್ನು ಸ್ತುತಿಸುವ ಋಕ್ಕುಗಳು ಋಗ್ವೇದದಲ್ಲಿ ಬೇಕಾದಷ್ಟಿವೆ. ಆದರೆ ಇವನ ಪುತ್ರನಾದ ವಿಶ್ವರೂಪನೆಂಬುವನು ದೇವತೆಗಳಿಗೆ ಪುರೋಹಿತನಾಗಿದ್ದರೂ ಅಸುರಪಕ್ಷಪಾತಿಯಾಗಿದ್ದುದರಿಂದ ಇವನ ತಂದೆಯಾದ ತ್ವಷ್ಟೃವನ್ನೂ ಅಸುರನೆಂದೇ ಇಲ್ಲಿ ಹೇಳಿದೆ. ಈ ವಿಷಯದಲ್ಲಿ ಭಾಷ್ಯಕಾರರು ತೈತ್ತಿರೀಯಸಂಹಿತೆಯಲ್ಲಿ ಒಂದು ಇತಿಹಾಸವನ್ನು ಉದಾಹರಣೆಯಾಗಿ ಕೊಟ್ಟಿರುವರು—

CC-0. Jangamwadi Math Collection. Digitized by eGangotri

ತ್ವಷ್ಟಾ ಹತಪುತ್ರೋ ವೀಂದ್ರಗ್ಂ ಸೋಮಮಾಹರತ್ತಸ್ಮಿನ್ನಿಂದ್ರ ಉಪಹವಮೈಚ್ಛತ ತನ್ನೋ-
ಪಾಹ್ವಯತ ಪುತ್ರಂ ಮೇಽವಧೀರಿತಿ ಸ ಯಜ್ಞವೇಶಸಂ ಕೃತ್ವಾ ಪ್ರಾಸಹಾ ಸೋಮಮಪಿ-
ಬತ್ತಸ್ಯ ಯದತ್ಯಶಿಷ್ಯತ ತತ್ತ್ವಷ್ಟಾಹವನೀಯಮುಪ ಪ್ರಾವರ್ತಯತ್ಸ್ವಾಹೇಂದ್ರಶತ್ರು-
ರ್ವರ್ಧಸ್ವೇತಿ ।

(ತೈ. ಸಂ. ೨-೪-೧೨-೧)

ತ್ವಷ್ಟೃ ಪ್ರಜಾಪತಿಗೆ ವಿಶ್ವರೂಪನೆಂಬ ಪುತ್ರನಿದ್ದನು. ಅವನನ್ನು ಇಂದ್ರನು ಕಾರಣಾಂತರದಿಂದ ಸಂಹರಿಸಿದನು. ಅದರಿಂದ ಕೋಪಗೊಂಡ ತ್ವಷ್ಟೃವು ತನಗೆ ಇಂದ್ರನನ್ನು ಸಂಹರಿಸುವ ಪುತ್ರನಾಗಬೇಕೆಂದು ಬಯಸಿ ಯಜ್ಞವನ್ನು ಮಾಡಲುಪಕ್ರಮಿಸಿದನು. ಆದರೆ ಆ ಯಜ್ಞದಲ್ಲಿ ಇಂದ್ರನ ಮೇಲಿನ ಕೋಪದಿಂದ ಎಂದರೆ ಅವನು ತನ್ನ ಪುತ್ರನನ್ನು ಕೊಂದನೆಂಬ ಕೋಪದಿಂದ ಇಂದ್ರನನ್ನು ಯಜ್ಞಕ್ಕೆ ಕರೆಯಲಿಲ್ಲ ಅವನಿಗೆ ಸೋಮಪಾನವನ್ನೂ ಕೊಡಲಿಲ್ಲ. ಅದರಿಂದ ಇಂದ್ರನು ಕೋಪಗೊಂಡು ಅವನ ಯಜ್ಞಕ್ಕೆ ವಿಘ್ನವನ್ನುಂಟುಮಾಡಿ ಅಲ್ಲಿದ್ದ ಸೋಮರಸವನ್ನು ಬಲಾತ್ಕಾರದಿಂದ ಪಾನಮಾಡಿದನು. ಇದನ್ನು ಸಹಿಸಲಾರದೆ ತ್ವಷ್ಟೃವು ಇಂದ್ರನು ಪಾನಮಾಡಿ ಮಿಕ್ಕ ಸೋಮಶೇಷವನ್ನು ಆಹವನೀಯಾಗ್ನಿಯಲ್ಲಿ ಸುರಿದು, ತನಗೆ ಇಂದ್ರನನ್ನು ಕೊಲ್ಲುವ ಪುತ್ರನಾಗಬೇಕೆಂದು ಬಯಸಿದನು ಇತ್ಯಾದಿ. ಈರೀತಿ ಬಲಾತ್ಕಾರದಿಂದ ಇಂದ್ರನು ಸೋಮಪಾನಮಾಡಿದ ವಿಷಯವೇ ಇಲ್ಲಿ ಉಕ್ತವಾಗಿರುವುದೆಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ
ಧನಾನಾಂ ॥ ೫ ॥

ಪದಪಾಠಃ

ಶುನಂ । ಹುವೇಮ । ಮಘऽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃऽತಮಂ । ವಾಜಃऽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ऽಸು । ಘ್ನಂತಂ । ವೃತ್ರಾಣಿ । ಸಂऽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ। ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋऽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ

CC-0. Jangamwadi Math Collection. Digitized by eGangotri

ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋ-ರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾ-ಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙಃ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾ-ದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾ-ಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘುತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ವಾಜಸಾತೌ—ಅನ್ನಾರ್ಥವಾಗಿ ನಡೆಯತಕ್ಕ । ಭರೇ—ಯುದ್ಧದಲ್ಲಿ । ಶುನಂ—ಉತ್ಸಾಹದಿಂದ ವೃದ್ಧಿಯನ್ನು ಹೊಂದತಕ್ಕವನೂ ಅಥವಾ ಸುಖವನ್ನುಂಟುಮಾಡುವವನೂ । ಮಘ-ವಾನಂ—ಧನವಂತನೂ । ಇಂದ್ರಂ—ನಿರತಿಶಯವಾದ ಐಶ್ವರ್ಯಸಂಪನ್ನನೂ । ನೃತಮಂ—ನಾಯಕನಾದವನೂ ಆದ ನಿನ್ನನ್ನು । ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ (ಹಾಗೆಯೇ) । ಶೃಣ್ವಂತಂ—( ನಮ್ಮ ಸ್ತುತಿಗಳನ್ನು ) ಆಲಿಸಿಕೇಳುವವನೂ । ಉಗ್ರಂ—ಶತ್ರುಗಳಿಗೆ ಭಯಂಕರನಾದವನೂ । ಸಮತ್ಸು—ಯುದ್ಧಗಳಲ್ಲಿ । ವೃತ್ರಾಣಿ—ವೃತ್ರನೇ ಮೊದಲಾದ ಅಸುರರನ್ನು । ಘ್ನಂತಂ—ಹಿಂಸಿಸಿ ನಾಶಮಾಡುವವನೂ । ಧನಾನಾಂ—(ಶತ್ರುಗಳ) ಧನಗಳನ್ನು । ಸಂಜಿತಂ—(ನಮಗೆ) ಸೇರಿಸಿ ಕೊಡುವವನೂ ಆದ ನಿನ್ನನ್ನು । ಊತಯೇ—ರಕ್ಷಣಾರ್ಥವಾಗಿ । (ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ).

ಭಾವಾರ್ಥ

ಎಲೈ ಇಂದ್ರನೇ, ಅನ್ನಾರ್ಥವಾಗಿ ನಡೆಯತಕ್ಕ ಯುದ್ಧದಲ್ಲಿ ಸುಖವನ್ನುಂಟುಮಾಡುವವನೂ, ಧನವಂತನೂ, ನಿರತಿಶಯವಾದ ಐಶ್ವರ್ಯಸಂಪನ್ನನೂ, ನೇತೃವಾದವನೂ ನಮ್ಮ ಸ್ತುತಿಗಳನ್ನು ಆಲಿಸಿಕೇಳುವವನೂ, ಶತ್ರುಗಳಿಗೆ ಭಯಂಕರನೂ, ಯುದ್ಧಗಳಲ್ಲಿ ವೃತ್ರನೇ ಮುಂತಾದ ಅಸುರರನ್ನು ಹಿಂಸಿಸಿ ನಾಶಮಾಡುವವನೂ, ಶತ್ರುಗಳ ಧನಗಳನ್ನು ನಮಗೆ ಸೇರಿಸಿ ಕೊಡುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ

English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.

ವಿಶೇಷವಿಷಯಗಳು

ಈ ಋಕ್ಕಿನ ವಿಶೇಷವಿಷಯಗಳನ್ನು ಹಿಂದೆಯೇ ವಿವರಿಸಿದೇವೆ.



CC-0. Jangamwadi Math Collection. Digitized by eGangotri

# ನಲವತ್ತೊಂಭತ್ತನೆಯ ಸೂಕ್ತವು.

ಸಾಯಣಭಾಷ್ಯಂ.

**ಶಂಸಾ ಮಹಾಮಿತಿ ಪಂಚರ್ಚಮೇಕಾದಶಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ । ಶಂಸಾ ಮಹಾಮಿತ್ಯನುಕ್ರಮಣಿಕಾ ॥ ಸಮೂಳ್ಹೇ ದಶರಾತ್ರೇಽಷ್ಟಮೇಽಹನಿ ಮರುತ್ವತೀಯಶಸ್ತ್ರ ಏತ-ತ್ಸೂಕ್ತಂ । ಸೂತ್ರಿತಂ ಚ । ಶಂಸಾ ಮಹಾಂ ಮಹಶ್ಚಿತ್ತ್ವಮಿಂದ್ರ । ಆ. ೮-೭ । ಇತಿ ॥**

ಅನುವಾದವು—**ಶಂಸಾ ಮಹಾಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೊಂದನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಶಂಸಾ ಮಹಾಂ** ಎಂದು ಮೊದಲಾಗಿ ಹೇಳಿರುವುದು. ಸಮೂಳ್ಹ ದಶರಾತ್ರವೆಂಬ ಯಾಗದ ಎಂಟನೆಯ ದಿವಸ ಮರುತ್ವತೀಯ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗ ವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಶಂಸಾ ಮಹಾಂ ಮಹಶ್ಚಿತ್ತ್ವಮಿಂದ್ರ** ಎಂಬ ಸೂತ್ರದಿಂದ ವಿಸ್ಪತ ವಾಗಿರುವುದು (ಆ. ೮-೭).

॥ ಓಂ ॥

## ಸೂಕ್ತ—೪೯

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೪೯ ॥
ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

। ಋಷಿಃ—ವಿಶ್ವಾಮಿತ್ರಃ ।
॥ ದೇವತಾ—ಇಂದ್ರಃ ॥
। ಛಂದಃ—ತ್ರಿಷ್ಟುಪ್ ।

ಸಂಹಿತಾಪಾಠಃ

ಶಂಸಾ ಮಹಾಮಿಂದ್ರಂ ಯಸ್ಮಿನ್ವಿಶ್ವಾ ಆ ಕೃಷ್ಟಯಃ ಸೋಮಪಾಃ ಕಾಮಮವ್ಯನ್ ।
ಯಂ ಸುಕ್ರತುಂ ಧಿಷಣೇ । ವಿಭ್ವತಷ್ಟಂ ಘನಂ ವೃತ್ರಾಣಾಂ ಜನಯಂತ ದೇವಾಃ ॥ ೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಶಂಸ । ಮಹಾಂ । ಇಂದ್ರಂ । ಯಸ್ಮಿನ್ । ವಿಶ್ವಾಃ । ಆ । ಕೃಷ್ಟಯಃ । ಸೋಮಽಪಾಃ । ಕಾಮಂ । ಅವ್ಯನ್ ।

ಯಂ । ಸುಽಕ್ರತುಂ । ಧಿಷಣೇ ಇತಿ । ವಿಭ್ವಽತಷ್ಟಂ । ಘನಂ । ವೃತ್ರಾಣಾಂ । ಜನಯಂತ । ದೇವಾಃ ॥

ಸಾಯಣಭಾಷ್ಯಂ

ಹೇ ಹೋತಃ ಮಹಾಂ ಮಹಾಂತಮಿಂದ್ರಂ ಶಂಸ । ಶಸ್ತ್ರೈಃ ಸ್ತುಹಿ । ಯಸ್ಮಿನ್ನಿಂದ್ರೇ ರಕ್ಷಿತರಿ ಸತಿ ವಿಶ್ವಾಃ ಕೃಷ್ಟಯಃ ಸರ್ವೇ ಮನುಷ್ಯಾಃ ಸೋಮಪಾ ಯಜ್ಞಮನುಷ್ಠಾಯ ಸೋಮಪಾಃ ಸಂತಃ ಕಾಮಂ । ಕಾಮ್ಯತೇ ಇತಿ ಕಾಮಃ ಸ್ವರ್ಗಾದಿಃ । ತಮಾವ್ಯನ್ ಸರ್ವತಃ ಪ್ರಾಪ್ನುವಂತಿ । ಧಿಷಣೇ ದೇವಮನುಷ್ಯಾದೀನಾಂ ಧಾರಯಿತ್ರ್ಯೌ । ಯದ್ವಾ । ಪ್ರಗಲ್ಭೇ ಸಮರ್ಥೇ ಸ್ವಾಶ್ರಿತಾನ್ ರಕ್ಷಿತುಮಿತಿ ಧಿಷಣೇ ದ್ಯಾವಾಪೃಥಿವ್ಯೌ । ದೇವಾಶ್ಚ ಸುಕ್ರತುಂ । ಕ್ರತುಃ ಕರ್ಮ ಜಗತ್ಪಾಲನಾದಿ । ಶೋಭನಃ ಕ್ರತುರ್ಯಸ್ಯಾಸೌ ಸುಕ್ರತುಃ । ತಾದೃಶಂ ವಿಭ್ವತಷ್ಟಂ ವಿಭುನಾ ಬ್ರಹ್ಮಣಾ ಜಗದಾಧಿಪತ್ಯೇ ಸ್ಥಾಪಿತಂ ಮಹಾಂತಂ ವೃತ್ರಾಣಾಂ ಪಾಪರೂಪಾಣಾಂ ಘನಂ ಹಂತಾರಂ ಯಮಿಂದ್ರಂ ಜನಯಂತ । ಅಜನಯನ್ ॥ ಶಂಸ । ಶಂಸು ಸ್ತುತಾವಿತ್ಯಸ್ಯ ಲೋಟಿ ರೂಪಂ । ಪಾದಾದಿತ್ವಾದನಿಘಾತಃ ದ್ವ್ಯಚೋಽತಸ್ತಿಙ ಇತಿ ಸಂಹಿತಾಯಾಂ ದೀರ್ಘಃ । ಅವ್ಯನ್ । ವೀ ಕಾಂತಿಗತ್ಯಾದಿಷು । ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ । ಆಟ್ಸ್ವರಃ । ಸುಕ್ರತುಂ । ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತಃ । ಧಿಷಣೇ । ಞಿ ಧೃಷಾ ಪ್ರಾಗಲ್ಭ್ಯೇ ಇತ್ಯಸ್ಮಾದ್ಧೃಷೇರ್ಧಿಷ ಚ ಸಂಜ್ಞಾಯಾಮಿತಿ ಕ್ಯುಪ್ರತ್ಯಯಃ । ಧಿಷ ಇತ್ಯಾದೇಶಃ । ಪ್ರತ್ಯಯಸ್ವರಃ । ಘನಂ । ಹಂತೇಃ ಪುಂಸಿ ಸಂಜ್ಞಾಯಾಮಿತಿ ಘಃ । ಹೋ ಹಂತೇರಿತಿ ಕುತ್ವಂ । ಪ್ರತ್ಯಯಸ್ವರಃ । ಜನಯಂತ । ಜನೇರ್ಣ್ಯಂತಸ್ಯ ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

(ಎಲೈ ಹೋತೃವೇ) **ಯಸ್ಮಿನ್**-ಯಾವ ಇಂದ್ರನ ರಕ್ಷಣೆಯಲ್ಲಿ । **ವಿಶ್ವಾಃ**-ಸಮಸ್ತವಾದ । **ಕೃಷ್ಟಯಃ**-ಮಾನವರೂ । **ಸೋಮಪಾಃ**—(ಯಜ್ಞದ ಸಮಾಪ್ತಿಯಲ್ಲಿ) ಸೋಮವನ್ನು ಪಾನಮಾಡಿ । **ಕಾಮಂ**—ತಮ್ಮ ಇಷ್ಟಾರ್ಥವನ್ನು । **ಆ ಅವ್ಯನ್**—ಪೂರ್ಣವಾಗಿ ಪಡೆಯುತ್ತಾರೆಯೋ, (ಮತ್ತು) । **ಧಿಷಣೇ**—ಎಲ್ಲರನ್ನೂ ಧರಿಸ ತಕ್ಕ ದ್ಯಾವಾಪೃಥಿವಿಗಳೂ । **ದೇವಾಃ**- ಸಮಸ್ತ ದೇವತೆಗಳೂ ಸಹ । **ಸುಕ್ರತುಂ**—ಶ್ರೇಷ್ಠವಾದ ಕರ್ಮಕರ್ತನೂ । **ವಿಭ್ವತಷ್ಟಂ**—ಜಗದಾಧಿಪತ್ಯಕ್ಕಾಗಿ ವಿಭುವಿನಿಂದ ಸ್ಥಾಪಿತನಾದವನೂ । **ವೃತ್ರಾಣಾಂ**—ವೃತ್ರಾದ್ಯಸುರರ । **ಘನಂ**-ನಾಶಕನೂ ಆದ । **ಯಂ**—ಯಾವ ಇಂದ್ರನನ್ನು । **ಜನಯಂತ**—ಉತ್ಪನ್ನನಾಗುವಂತೆ ಮಾಡಿದರೋ ಅಂತಹ । **ಮಹಾಂ**—ಮಹತ್ಸ್ವರೂಪವುಳ್ಳವನಾದ । **ಇಂದ್ರಂ**—ಇಂದ್ರನನ್ನು । **ಶಂಸ**—ಶಸ್ತ್ರಗಳ ಪಠನದಿಂದ ಸ್ತುತಿಸು.

ಭಾವಾರ್ಥ

ಎಲೈ ಹೋತೃವೇ, ಯಾವ ಇಂದ್ರನ ರಕ್ಷಣೆಯಲ್ಲಿ ಸಮಸ್ತವಾದ ಮಾನವರೂ ಸಹ ಯಜ್ಞಮಾಡಿ ನಂತರ ಸೋಮಪಾನವನ್ನು ಮಾಡುವುದರ ಮೂಲಕ ತಮ್ಮ ಇಷ್ಟಾರ್ಥವನ್ನು ಪಡೆಯುತ್ತಾರೆಯೋ, ಮತ್ತು ಎಲ್ಲರನ್ನೂ

CC-0. Jangamwadi Math Collection. Digitized by eGangotri

ಧರಿಸತಕ್ಕ ದ್ಯಾವಾಪೃಥಿವಿಗಳೂ, ಸಮಸ್ತ ದೇವತೆಗಳೂ ಸಹ ಶ್ರೇಷ್ಠವಾದ ಕರ್ಮಕರ್ತನೂ. ಜಗದಾಧಿಪತ್ಯಕ್ಕಾಗಿ ವಿಭುವಿನಿಂದ ಸ್ಥಾಪಿತನಾದವನೂ, ವೃತ್ರಾದ್ಯಸುರರ ನಾಶಕನೂ ಆದ ಯಾವ ಇಂದ್ರನನ್ನು ಉತ್ಪನ್ನನಾಗುವಂತೆ ಮಾಡಿದರೋ ಅಂತಹ ಮಹತ್ಸ್ವರೂಪವುಳ್ಳವನಾದ ಇಂದ್ರನನ್ನು ಶಸ್ತ್ರಮಂತ್ರ ಪಠನದಿಂದ ಸ್ತುತಿಸು.

## English Translation

I glorify the mighty Indra, in whom all men, drinking the Soma juice, obtain their wishes ; whom the powerful (heaven and earth) and the gods begot, the doer of great deeds, the slayer of the Vritras, who was fashioned by Vibhu (the creator)

### ವಿಶೇಷವಿಷಯಗಳು

**ಶಂಸ ಮಹಾಂ ಇಂದ್ರಂ**—ಎಲೈ ಹೋತೃವೇ, ಈ ಯಜ್ಞದಲ್ಲಿ ಮಹಾಮಹಿಮನಾದ ಇಂದ್ರನನ್ನು ಶಸ್ತ್ರಮಂತ್ರಾದಿಗಳಿಂದ ಸ್ತುತಿಸು ಎಂದು ಯಜಮಾನನು ಹೋತೃವೆಂಬ ಋತ್ವಿಜನನ್ನು ಸಂಬೋಧಿಸಿ ಹೇಳುವನು. ಇಲ್ಲಿ **ಮಹಾಂ**—ಮಹಾಮಹಿಮನಾದ. ಎಂಬ ವಿಶೇಷಣದಲ್ಲಿರುವ ಇಂದ್ರನ ಮಹಿಮೆಯು ಯಾವುದು ಎಂದರೆ ಅದನ್ನು ಮುಂದಿನ ವಾಕ್ಯಗಳಲ್ಲಿ ಋಷಿಯು ವರ್ಣಿಸಿರುವನು.

**ಯಸ್ಮಿನ್ ವಿಶ್ವಾಃ ಆ ಕೃಷ್ಟಯಃ ಸೋಮಪಾಃ ಕಾಮಂ ಅವ್ಯನ್**-ಇಂದ್ರೇ ರಕ್ಷತರಿ ಸತಿ ಸರ್ವೇ **ಮನುಷ್ಯಾಃ ಯಜ್ಞಮನುಷ್ಠಾಯ ಸೋಮಪಾಃ ಸಂತಃ ಸ್ವರ್ಗಾದಿಕಾಮಂ ಸರ್ವತಃ ಪ್ರಾಪ್ನುವಂತಿ |** ಸರ್ವಶಕ್ತನಾದ ಇಂದ್ರನು ರಕ್ಷಿಸುತ್ತಿರುವಾಗ ಸಮಸ್ತ ಮನುಷ್ಯರೂ ಯಜ್ಞಾದಿ ಸತ್ಕರ್ಮಗಳನ್ನು ಮಾಡಿ ಆ ಯಜ್ಞಗಳಲ್ಲಿ ವಿಹಿತವಾದ ಸೋಮಪಾನವನ್ನು ಮಾಡಿ ಅದರ ಫಲವಾಗಿ ಸ್ವರ್ಗಾದಿಸುಖಗಳನ್ನು ಪಡೆಯುವರು. ಇದು ಇಂದ್ರನ ಮಹಿಮೆಯಿಂದಲೇ ಸಾಧ್ಯವು.

**ಧೀಷಣೇ ದೇವಾಃ ಸುಕ್ರತುಂ ವಿಭ್ವತಷ್ಟಂ ವೃತ್ರಾಣಾಂ ಹಂತಾರಂ ಯಂ ಜನಯಂತೆ**—ಧಿಶಬ್ದವು ಕರ್ಮನಾಮಗಳಲ್ಲಿ ಪಠಿತವಾಗಿರುವುದರಿಂದ ಜನರನ್ನು ಅಥವಾ ಭೂಮಿಯಮೇಲೆ ಇರುವ ಸಮಸ್ತ ಪ್ರಾಣಿಗಳನ್ನು ರಕ್ಷಿಸುವ ಕರ್ಮಗಳಲ್ಲಿ ಸಮರ್ಥರಾದ ದ್ಯಾವಾಪೃಥಿವಿಗಳು ಎಂದು **ಧಿಷಣೇ** ಎಂಬ ಶಬ್ದಕ್ಕೆ ಅರ್ಥಮಾಡಬಹುದು. ಅಂತಹ ದ್ಯಾವಾಪೃಥಿವಿಗಳೂ, ದೇವತೆಗಳೂ ಇಂದ್ರನನ್ನು ಉತ್ಪಾದನೆ ಮಾಡಿದರು ಎಂದು ಇಲ್ಲಿ ಹೇಳಿದೆ ಆ ಇಂದ್ರನಾದರೋ ಜಗತ್ಪಾಲನಾದಿಕರ್ಮವನ್ನು ಮಾಡಲು ಸಮರ್ಥನಾದವನಾದ್ದರಿಂದ **ಸುಕ್ರತುಂ** ಎಂದೂ ಬ್ರಹ್ಮನಿಂದ ಜಗದಾಧಿಪತ್ಯದಲ್ಲಿ ಸ್ಥಾಪಿತನಾಗಿರುವುದರಿಂದ **ವಿಭ್ವತಷ್ಟಂ** ಎಂದೂ ಪಾಪಗಳನ್ನು ನಾಶಮಾಡುವವನಾದ್ದರಿಂದ **ಘನಂ ವೃತ್ರಾಣಾಂ** ಎಂದೂ ವಿಶೇಷಣಪದಗಳಿಂದ ಸ್ತುತನಾಗಿದ್ದಾನೆ. ಅಂತಹ ಮಹಾಮಹಿಮನಾದ ಇಂದ್ರನನ್ನು ದ್ಯಾವಾಪೃಥಿವಿಗಳು ಮತ್ತು ದೇವತೆಗಳು ಉತ್ಪತ್ತಿಮಾಡಿದರು ಎಂದು ಇಲ್ಲಿ ಹೇಳಿದೆ. ದ್ಯಾವಾಪೃಥಿವಿಗಳು ಇಂದ್ರನನ್ನು ಉತ್ಪತ್ತಿಮಾಡಿದರೆಂಬ ವಿಷಯವನ್ನು ನಾವು ಹಿಂದೆಯೇ ಪ್ರಸ್ತಾಪಮಾಡಿದೇವೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯಂ ನು ನಕಿಃ ಪೃತನಾಸು ಸ್ವರಾಜಂ ದ್ವಿತಾ ತರತಿ ನೃತಮಂ ಹರಿಷ್ಠಾಂ।
ಇನತಮಃ ಸತ್ವಭಿರ್ಯೋ ಹ ಶೂಷೈಃ ಪೃಥುಜ್ರಯಾ ಅಮಿನಾದಾ-
ಯುರ್ದಸ್ಯೋಃ ॥ ೨ ॥

ಪದಪಾಠಃ

ಯಂ । ನು । ನಕಿಃ । ಪೃತನಾಸು । ಸ್ವऽರಾಜಂ । ದ್ವಿತಾ । ತರತಿ । ನೃऽತಮಂ । ಹರಿऽಸ್ಥಾಂ ।
ಇನऽತಮಃ । ಸತ್ವऽಭಿಃ । ಯಃ । ಹ । ಶೂಷೈಃ । ಪೃಥುऽಜ್ರಯಾಃ । ಅಮಿನಾತ್ । ಆಯುಃ ।
ದಸ್ಯೋಃ ॥ ೨ ॥

ಸಾಯಣಭಾಷ್ಯಂ

ಪೃತಾಸು । ವ್ಯಾಪ್ರಿಯಂತೇऽತ್ರ ಯೋದ್ಧಾರ ಇತಿ ಪೃತನಾಃ ಸಂಗ್ರಾಮಾಃ । ತೇಷು ಸ್ವರಾಜಂ ಹರಿಷ್ಠಾಂ ಹರಿಸ್ಥಾಂ ಹರಿಯುಕ್ತೇ ರಥೇ ವರ್ತಮಾನಂ ನೃತಮಂ ಬಲಸ್ಯ ಯುದ್ಧೇ ನೇತೃತಮಂ ದ್ವಿತಾ ಯುದ್ಧಮಾಸಾದ್ಯ ಸೇನಾಂ ದ್ವಿಧಾ ಕೃತ್ವಾ ವರ್ತಮಾನಂ ಯಮಿಂದ್ರಂ ನಕಿರ್ನ ಕಶ್ಚಿದಪಿ ತರತಿ ಉತ್ತೀ-ರ್ಯ ಗಚ್ಛತಿ । ನ ಕೋऽಪ್ಯಭ್ಯಸ್ತೀತ್ಯರ್ಥಃ । ನು ಪ್ರಸಿದ್ಧೌ । ಸ ಇಂದ್ರ ಇನತಮೋऽತಿಶಯೇನ ಸೇನಾ-ಸ್ವಾಮಿಾ ಸತ್ವಭಿಃ ಪರಿತಃ ಸೀದದ್ಭಿರ್ಮರುದ್ಭಿಃ ಸಹ ಯೋ ಯಾನ್ ಗಚ್ಛನ್ ಶೂಷೈಃ । ಶೋಷಯಂತಿ ಪರಬಲಾನೀತಿ ಶೂಷಾಣಿ ಬಲಾನಿ । ತೈಃ ಪೃಥುಜ್ರಯಾ ಯುದ್ಧಂ ಪ್ರತಿ ತೀವ್ರವೇಗಃ ಸನ್ ದಸ್ಯೋಃ ಶತ್ರೋರಾಯುರನ್ನಂ ಪ್ರಾಣಂ ವಾಮಿನಾತ್ । ಹಿನಸ್ತಿ । ಹ ಪ್ರಸಿದ್ಧೌ ॥ ಅತ್ರ ನಿರುಕ್ತಂ । ಪೃಥು-ಜ್ರಯಾಃ ಪೃಥುಜವಃ । ಪೃಥುಜ್ರಯಾ ಅಮಿನಾದಾಯುರ್ದಸ್ಯೋಃ । ಪ್ರಾಮಾಪಯುದಾಯುರ್ದಸ್ಯೋಃ । ೫-೯ । ಇತಿ ॥ ತರತಿ । ತೄ ಪ್ಲವನತರಣಯೋರಿತ್ಯಸ್ಯ ಲಟಿ ರೂಪಂ । ಯದ್ವೃತ್ತಯೋಗಾದನಿಘಾತಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಯಃ । ಯಾ ಪ್ರಾಪಣೇ । ಔಣಾದಿಕಃ ಕಪ್ರತ್ಯಯಃ । ಆತೋ ಲೋಪಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

ಪೃತನಾಸು— ಯುದ್ಧಗಳಲ್ಲಿ । ಸ್ವರಾಜಂ—ತನ್ನ ಪ್ರಭೆಯಿಂದ ಪ್ರಕಾಶಿಸುವವನೂ । **ಹರಿಷ್ಠಾಂ**—ಅಶ್ವಯುಕ್ತವಾದ ರಥದಲ್ಲಿ ಕುಳಿತಿರುವವನೂ । **ನೃತಮಂ**—ಶ್ರೇಷ್ಠವಾದ ನೇತೃವಾದವನೂ । **ದ್ವಿತಾ**—ಶತ್ರುಸೇನೆಯನ್ನು ಎರಡಾಗಿ ಭಾಗಿಸುವವನೂ ಆದ । **ಯಂ**—ಯಾವ ಆದೇ ಇಂದ್ರನನ್ನು । **ನಕಿಃ**—ಯಾವನೂ ಕೂಡ । **ತರತಿ**—ಮೀರಲಾಗುವುದಿಲ್ಲ । **ಇನತಮಃ**—ಶ್ರೇಷ್ಠನಾದ ಸೇನಾನಿಯಾಗಿ । **ಸತ್ವಭಿಃ**—ತನ್ನೊಡನಾಡಿಗಳಾದ ಮರುತ್ತುಗಳೊಡನೆ ಸಂಚರಿಸುತ್ತಾ । **ಯಃ**-ಯಾವ ಇಂದ್ರನು । **ಶೂಷೈಃ**-ಶತ್ರುಗಳನ್ನು ಶೋಷಿಸುವ ಬಲದಿಂದ । **ಪೃಥುಜ್ರಯಾಃ**-ಶೀಘ್ರವಾಗಿ ಯುದ್ಧಾಭಿಮುಖವಾಗಿ ಓಡುತ್ತಾ । **ಆಯುಃ**—ಶತ್ರುಪ್ರಾಣವನ್ನು । **ಅಮಿನಾತ್**—ನಾಶಪಡಿಸುತ್ತಾನೆ.

ಭಾವಾರ್ಥ

ಯುದ್ಧಗಳಲ್ಲಿ ತನ್ನ ಪ್ರಭೆಯಿಂದ ಪ್ರಕಾಶಿಸುವವನೂ, ಅಶ್ವಯುಕ್ತವಾದ ರಥದಲ್ಲಿ ಕುಳಿತಿರುವವನೂ, ಶ್ರೇಷ್ಠವಾದ ನೇತೃವಾದವನೂ, ಶತ್ರುಸೇನೆಯನ್ನು ಎರಡಾಗಿ ಭಾಗಿಸುವವನೂ ಆದ ಯಾವ ಆದೇ ಇಂದ್ರನನ್ನು

CC-0. Jangamwadi Math Collection. Digitized by eGangotri

ಯಾರೂ ಮೀರಲಾಗುವುದಿಲ್ಲ. ಶ್ರೇಷ್ಠನಾದ ಸೇನಾನಿಯಾಗಿ ತನ್ನೊಡನಾಡಿಗಳಾದ ಮರುತ್ತುಗಳೊಡನೆ ಸಂಚರಿಸುತ್ತಾ ಶತ್ರುಶೋಷಕವಾದ ತನ್ನ ಬಲದಿಂದ ಶೀಘ್ರವಾಗಿ ಯುದ್ಧಾಭಿಮುಖವಾಗಿ ಓಡುತ್ತಾ ಇಂದ್ರನು ಶತ್ರುಪ್ರಾಣಗಳನ್ನು ನಾಶಪಡಿಸುತ್ತಾನೆ.

## English Translation

Whom, when borne by his steeds, foremost and eminent in battles, breaking in two the (hostile host), no one ever surpasses : supreme in sway, attended by his faithful Maruts, and hastening to combat, he has destroyed with foe-withering (energies) the existence of the Dasyu.

## ವಿಶೇಷವಿಷಯಗಳು

**ನಕಿಃ**—**ನಕಿಃ** ಎಂಬ ಶಬ್ದವು **ಹಿಕಂ ನುಕಂ** ಮೊದಲಾದ ಒಂಭತ್ತು ಸರ್ವಪದಸಮಾಮ್ನಾಯವೆಂಬ ಅರ್ಥದಲ್ಲಿ ಪ್ರಯುಕ್ತವಾಗುವುದು ಎಂದು ಯಾಸ್ಕರು ಹೇಳಿದಾರೆ. (ನಿ. ೩-೧೩) ಈ ಶಬ್ದಕ್ಕೆ ಪ್ರಕೃತ ಋಕ್ಕಿನಲ್ಲಿ **ನ ಕಶ್ಚಿದಸಿ**—ಯಾರೂ ಸಹ ಸಮರ್ಥರಲ್ಲ ಎಂಬ ಅರ್ಥವು ಉಕ್ತವಾಗಿರುವುದು.

**ನೃತಮಂ**—**ನೇತೃತಮಂ** । ನಾಯಕರಲ್ಲಿ ಅಥವಾ ಮುಖಂಡರಲ್ಲಿ ಶ್ರೇಷ್ಠನಾದವನು

**ಹರಿಷ್ಠಾಂ**—**ಹರಿಯುಕ್ತೇರಥೇ ವರ್ತಮಾನಂ** । ಇಂದ್ರನ ಎರಡು ಅಶ್ವಗಳಿಗೆ ಹರೀ ಎಂದು ಹೆಸರು. (ನಿ. ೨-೨೮) ಅಂತಹ ಅಶ್ವಗಳನ್ನು ಹೂಡಿದ ರಥದಲ್ಲಿ ಕುಳಿತಿರುವ ಇಂದ್ರನನ್ನು ಎಂಬಭಿಪ್ರಾಯವು.

**ಇನತಮಃ**—ಇನಶಬ್ದಕ್ಕೆ ಸ್ವಾಮಿಯೆಂದರ್ಥವು. ಇನತಮಃ ಎಂದರೆ ವಿಶೇಷವಾಗಿ ಅಥವಾ ಅತಿಶಯವಾಗಿ ಸ್ವಾಮಿಯಾದವನು ಎಂದಭಿಪ್ರಾಯವು.

**ಪೃಥುಜ್ರಯಾಃ**—ಈ ಶಬ್ದಕ್ಕೆ ಯಾಸ್ಕರು ಈ ಋಕ್ಕನ್ನೇ ಉದಾಹರಣೆಯಾಗಿ ತೆಗೆದುಕೊಂಡು **ಪೃಥುಜ್ರಯಾಃ ಪೃಥುಜವಃ** । **ವಿಸ್ತೀರ್ಣಜವಃ**—ಬಹಳ ವೇಗವುಳ್ಳವನೆಂದು ನಿರ್ವಚನವನ್ನು ಹೇಳಿದಾರೆ (ನಿ. ೫-೯)

**ಆಯುಃ**—ಆಯುಃಶಬ್ದಕ್ಕೆ ಅನ್ನವೆಂಬೂ (ನಿ. ೩-೯) ಪ್ರಾಣ ಅಥವಾ ಆಯುಸ್ಸೆಂದೂ (ನಿ. ೧೦-೩೪) ಅರ್ಥವಿರುವುದರಿಂದ ಇಲ್ಲಿ ಎರಡರ್ಥವನ್ನೂ ಹೇಳಬಹುದು.

———:o:———

## ಸಂಹಿತಾಪಾಠಃ

ಸಹಾವಾ ಪೃತ್ಸು ತರಣಿರ್ನಾರ್ವಾ ವ್ಯಾನಶೀ ರೋದಸೀ ಮೇಹನಾವಾನ್ ।
ಭಗೋ ನ ಕಾರೇ ಹವ್ಯೋ ಮತೀನಾಂ ಪಿತೇವ ಚಾರುಃ ಸುಹವೋ ವಯೋಧಾಃ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಸಹ್ವಾ । ಪೃತ್ಽಸು । ತರಣಿಃ । ನ । ಅರ್ವಾ । ವಿಽಆನಶಿಃ । ರೋದಸೀ ಇತಿ । ಮೇಹನಾಽವಾನ್ ।

ಭಗಃ । ನ । ಕಾರೇ । ಹವ್ಯಃ । ಮತೀನಾಂ । ಪಿತಾಽಇವ । ಚಾರುಃ । ಸುಽಹವಃ । ವಯಃಽಧಾಃ ॥ ೩ ॥

ಸಾಯಣಭಾಷ್ಯಂ

ಯ ಇಂದ್ರಃ ಸಹವಾ ಬಲವಾನ್ಪೃತ್ಸು ಸಂಗ್ರಾಮೇಷು ತರಣಿಃ । ಶತ್ರೂನುತ್ತೀರ್ಯ ವರ್ತತ ಇತಿ ತರಣಿಃ । ತತ್ರ ದೃಷ್ಟಾಂತಃ । ಅರ್ವಾ ನ । ಯಥಾರ್ವಾ ಬಲವಾನಶ್ವಃ ಶತ್ರುಬಲಂ ತರತಿ ತಥಾ ರೋದಸೀ ದ್ಯಾವಾಪೃಥಿವ್ಯೌ ವ್ಯಾನಶಿರ್ವ್ಯಾಪ್ನುವನ್ಮೇಹನಾವಾನ್ । ಮಿಹ್ಯತೇ ಸಿಚ್ಯತೇ ದೀಯತೇಽರ್ಥಿಭ್ಯ ಇತಿ ಮೇಹನಂ ಧನಂ । ತದ್ವಾನ್ಭವತಿ । ತಾದೃಶ ಇಂದ್ರಃ ಕಾರೇ । ಕ್ರಿಯತ ಇತಿ ಕಾರೋ ಯಜ್ಞಾದಿಃ । ತಸ್ಮಿನ್ಯಜ್ಞೇ ಭಗೋ ನ ಪೂಷಾ ದೇವ ಇವ ಹವ್ಯೋ ಹವನೀಯೋ ಮತೀನಾಂ ಸ್ತೋತೄಣಾಂ ಸ್ತುತೀನಾಂ ವಾ ಪಿತೇವ ಪಾಲಯಿತಾ ಚಾರುಃ ಕಮನೀಯಃ ಸುಹವಃ ಸುಷ್ಠ್ವಾಹ್ವಾನೋಪೇತೋ ವಯೋಧಾ ಅನ್ನಸ್ಯ ದಾತಾ ಭವತಿ ॥ ಸಹಾವಾ । ಸಹೋಽಸ್ಯಾಸ್ತೀತಿ ಮತುಬರ್ಥೇ ಛಂದಸೀವನಿಪಾವಿತಿ ವನಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘಃ । ಪೃತ್ಸು । ಪೃತನಾಶಬ್ದಸ್ಯ ಸೌ ಪದಂತಃ ಮಾಂಸ್ಪೃತ್ಸ್ನೂನಾಮುಪಸಂಖ್ಯಾನಮಿತಿ ಪೃದಾದೇಶಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ವ್ಯಾನಶಿಃ । ಅಶೂ ವ್ಯಾಪ್ತಾವಿತ್ಯಸ್ಮಾಚ್ಛಂದಸಿ ಸದಾದಿತ್ವಾತ್ಕಿಪ್ರತ್ಯಯಃ । ತಸ್ಯ ಲಿಡ್ವದ್ಭಾವಃ । ಅತ ಆದೇರಿತ್ಯಭ್ಯಾಸಸ್ಯ ದೀರ್ಘೋ ಕೃತೇಽಶ್ನೋತೇಶ್ಚೇತಿ ನುಡಾಗಮಃ । ಪ್ರಾದಿಸಮಾಸಃ । ಕಾರೇ । ಕರೋತೇಃ ಕರ್ಮಣಿ ಘಞ್ । ಕರ್ಷಾತ್ವತೋ ಘಞೋಽಂತ ಉದಾತ್ತ ಇತ್ಯಂತೋದಾತ್ತತ್ವಂ । ಹವ್ಯಃ । ಜುಹೋತೇರಚೋ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಸುಹವಃ । ಹ್ವಯತೇರ್ಭಾವೇಽನುಪಸರ್ಗಸ್ಯ । ಪಾ. ೩-೩-೭೫ । ಇತ್ಯಪ್ಪ್ರತ್ಯಯಃ । ಸಂಪ್ರಸಾರಣಂ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಆದ್ಯುದಾತ್ತಂ ದ್ವ್ಯಚ್ಛಂದಸೀತಿ ಬಹುವ್ರೀಹಾವುತ್ತರಪದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ಸಹಾವಾ**—ಶಕ್ತಿಯುತನಾದ ಇಂದ್ರನು । **ಅರ್ವಾ ನ**—ವೇಗವಾಗಿ ಓಡತಕ್ಕ ಅಶ್ವದಂತೆ । **ಪೃತ್ಸು**—ಸಂಗ್ರಾಮಗಳಲ್ಲಿ । **ತರಣಿಃ**—ಶತ್ರುಸೇನೆಗಳನ್ನು ದಾಟುತ್ತಲೂ । **ರೋದಸೀ**-ದ್ಯಾವಾಪೃಥಿವಿಗಳನ್ನು । **ವ್ಯಾನಶಿಃ**-ವ್ಯಾಪಿಸುತ್ತಲೂ । **ಮೇಹನಾವಾನ್**—ವೃಷ್ಟಿರೂಪವಾದ ಧನವನ್ನು ಹಂಚುವವನಾಗಿದ್ದಾನೆ । **ಕಾರೇ**—ಯಜ್ಞದಲ್ಲಿ । **ಭಗೋ ನ**—ಭಗನಂತೆ । **ಹವ್ಯಃ**—ಹವಿಸ್ಸಿನ ಸ್ವೀಕಾರಕ್ಕೆ ಯೋಗ್ಯನಾಗಿಯೂ । **ಮತೀನಾಂ**—ಸ್ತುತಿಕರ್ತರಿಗೆ । **ಪಿತೇವ**—ಪಾಲಕನಾಗಿಯೂ । **ಚಾರುಃ**—ರಮಣೀಯರೂಪನಾಗಿಯೂ । **ಸುಹವಃ**—ಶ್ರೇಷ್ಠವಾದ ಆಹ್ವಾನಯುಕ್ತನಾಗಿಯೂ । **ವಯೋಧಾಃ**—ಅನ್ನದಾತನಾಗಿಯೂ ಇರುತ್ತಾನೆ.

ಭಾವಾರ್ಥ

ಶಕ್ತಿಯುತನಾದ ಇಂದ್ರನು ವೇಗವಾಗಿ ಓಡತಕ್ಕ ಅಶ್ವದಂತೆ ಸಂಗ್ರಾಮಗಳಲ್ಲಿ ಶತ್ರುಸೇನೆಗಳನ್ನು ದಾಟುತ್ತಲೂ ದ್ಯಾವಾಪೃಥಿವಿಗಳನ್ನು ವ್ಯಾಪಿಸುತ್ತಲೂ ವೃಷ್ಟಿರೂಪವಾದ ಧನವನ್ನು ಹಂಚುತ್ತಾನೆ. ಯಜ್ಞದಲ್ಲಿ ಭಗನಂತೆ

CC-0. Jangamwadi Math Collection. Digitized by eGangotri

ಹವಿಸ್ಸಿನ ಸ್ವೀಕಾರಕ್ಕೆ ಯೋಗ್ಯನಾಗಿಯೂ, ಸ್ತುತಿಕರ್ತರಿಗೆ ಪಾಲಕನಾಗಿಯೂ, ರಮಣೀಯರೂಪನಾಗಿಯೂ ಶ್ರೇಷ್ಠವಾದ ಆಹ್ವಾನಯುಕ್ತನಾಗಿಯೂ, ಅನ್ನದಾತನಾಗಿಯೂ ಇರುತ್ತಾನೆ.

## English Translation

Vigorous, rushing through (hostile), like a warhorse, he has pervaded heaven and earth, sending down rain : he is to be worshipped with oblations at the solemn (rite) like Bhaga : he is as the father of those who adore (him); he is beautiful, worthy of invocation, the bestower of food.

### ವಿಶೇಷವಿಷಯಗಳು

**ಸಹಾವಾ**— ಸಹಃಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಬಲವುಳ್ಳವನೆಂದಭಿಪ್ರಾಯವು

**ತರಣಿಃ— ಶತ್ರೂನುತ್ತೀರ್ಯ ವರ್ತತೆ ಇತಿ ತರಣಿಃ** । ಶತ್ರುಗಳನ್ನು ಅತಿಕ್ರಮಿಸಿ ಎಂದರೆ ಸೋಲಿಸಿ ಧೈರ್ಯದಿಂದ ಇರುವವನಾದ್ದರಿಂದ ಇಂದ್ರನನ್ನು ತರಣಿಃ ಎಂದು ಕರೆಯಲಾಗಿದೆ.

**ಮೇಹನಾವಾನ್— ಮಿಹ ಸೇಚನೇ । ಮಿಹ್ಯತೇ ಸಿಚ್ಯತೇ ದೀಯತೇsರ್ಥಿಭ್ಯ ಇತಿ ಮೇಹನಂ ಧನಂ ತದ್ವಾನ್** । ಪ್ರಾರ್ಥಿಸುವವರಿಗೆ ಕೊಡುವ ವಸ್ತುವೆಂದರೆ ಧನವು. ಅಂತಹ ಧನವುಳ್ಳವನೆಂದಭಿಪ್ರಾಯವು.

**ಮತೀನಾಂ**— ಮತಿಶಬ್ದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಇಲ್ಲಿ **ಮತೀನಾಂ** ಎಂದರೆ ಸ್ತೋತ್ರಗಳ ಅಥವಾ ಸ್ತೋತ್ರಮಾಡುವವರ ಎಂಬರ್ಥವನ್ನು ಭಾಷ್ಯಕಾರರು ವಿವರಿಸಿದಾರೆ.

**ಕಾರೇ— ಕ್ರಿಯತ ಇತಿ ಕಾರೋ ಯಜ್ಞಾದಿಃ** । ಮಾಡಲ್ಪಡುವ ಅಥವಾ ನೆರವೇರಿಸಲ್ಪಡುವ ಕರ್ಮವು ಎಂದರೆ ಯಜ್ಞಕರ್ಮವು ಎಂದಭಿಪ್ರಾಯವು.

**ಸುಹವಃ— ಸುಷ್ಠ್ವಾಹ್ವಾನೋಪೇತಃ** । ಚೆನ್ನಾಗಿ ಎಂದರೆ ಶ್ರದ್ಧೆಯಿಂದ ಆಹ್ವಾನಿಸಲ್ಪಡುವವನು. ಯಜ್ಞವೇದಿಗೆ ಬರಬೇಕೆಂದು ಹೋತೃ ಮೊದಲಾದ ಋತ್ವಿಜರಿಂದ ಮಂತ್ರಪೂರ್ವಕವಾಗಿ ಕರೆಯಲ್ಪಡುವವನು.

**ವಯೋಧಾಃ— ಅನ್ನಸ್ಯ ದಾತಾ** । ವಯಃಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಅನ್ನವನ್ನು ಧರಿಸಿರುವವನು ಎಂದರೆ ಪ್ರಾರ್ಥಿಸುವವರಿಗೆ ಅನ್ನವನ್ನು ಕೊಡುವವನು ಎಂದಭಿಪ್ರಾಯವು.

---

### ಸಂಹಿತಾಪಾಠಃ

ಧರ್ತಾ ದಿವೋ ರಜಸಸ್ಪೃಷ್ಟ ಊರ್ಧ್ವೋ ರಥೋ ನ ವಾಯುರ್ವಸುಭಿರ್ನಿಯುತ್ವಾನ್ ।

ಕ್ಷಪಾಂ ವಸ್ತಾ ಜನಿತಾ ಸೂರ್ಯಸ್ಯ ವಿಭಕ್ತಾ ಭಾಗಂ ಧಿಷಣೇವ ವಾಜಂ ॥೪॥

CC-0. Jangamwadi Math Collection. Digitized by eGangotri

ಪದಪಾಠಃ

ಧರ್ತಾ । ದಿವಃ । ರಜಸಃ । ಪೃಷ್ಟಃ । ಊರ್ಧ್ವಃ । ರಥಃ । ನ । ವಾಯುಃ । ವಸುಽಭಿಃ । ನಿಯುತ್ವಾನ್ । ಕ್ಷಪಾಂ । ವಸ್ತಾ । ಜನಿತಾ । ಸೂರ್ಯಸ್ಯ । ವಿಽಭಕ್ತಾ । ಭಾಗಂ । ಧಿಷಣಾಽಇವ । ವಾಜಂ ॥ ೪ ॥

ಸಾಯಣಭಾಷ್ಯಂ

ಸ ಇಂದ್ರೋ ದಿವೋ ದ್ಯುಲೋಕಸ್ಯ ರಜಸೋಽಂತರಿಕ್ಷಸ್ಯ ಚ ಧರ್ತಾ ಧಾರಕಃ ಪೃಷ್ಟಃ ಸರ್ವತ್ರ ವರ್ತಮಾನೋ ರಥೋ ನ ತದಿಯೋ ರಥ ಇವೋರ್ಧ್ವೋ ವಾಯುರೂರ್ಧ್ವಂ ಗಂತಾ ವಸುಭಿಃ ಸಹಾಯ-ತಯಾ ನಿವಸದ್ಭಿರ್ಮರುದ್ಭಿರ್ನಿಯುತ್ವಾನ್ಸಹಾಯವಾನ್ । ಯದ್ವಾ ನೇತ್ಯಯಮುತ್ತರೇಣಾಪಿ ಸಂಬಧ್ಯತೇ । ಯಥಾ ವಾಯುರ್ನಿಯುತ್ವಾನ್ನಿಯುನ್ನಾಮಕವಡವಾಭಿಸ್ತದ್ವಾನೇವಮಿಂದ್ರೋ ವಸುಭಿ-ರ್ಮರುದ್ಭಿಃ ಸಹಾಯವಾನ್। ತಥಾ ಕ್ಷಪಾಂ ವಸ್ತಾ ರಾತ್ರಿಮಾಚ್ಛಾದಯನ್ಸೂರ್ಯಸ್ಯ ಜಗತ್ಪ್ರಕಾಶಕಸ್ಯಾ-ದಿತ್ಯಸ್ಯ ಜನಿತಾ ಜನಯಿತಾ ಭಾಗಂ ಭಜನೀಯಂ ವಾಜಂ ಕರ್ಮಫಲರೂಪಮನ್ನಂ ವಿಭಕ್ತಾ ಸಾಧು ವಿಭಾಗಕರ್ತಾ ಭವತಿ । ತತ್ರ ದೃಷ್ಟಾಂತಃ । ಧಿಷಣೇವ । ಯಥಾಧ್ಯಾನಾಂ ವಾಗಸ್ಯೇದಮಿತಿ ವಿಭಾಗಂ ಕರೋತಿ ತದ್ವತ್ ॥ ರಜಸಃ । ರಂಜ ರಾಗ ಇತ್ಯಸ್ಮಾದ್ಭೂರಂಜಿಭ್ಯಾಂ ಕಿತ್ । ಉ. ೪-೨೧೬ । ಇತ್ಯಸುನ್ । ಕಿತ್ತ್ವಾನ್ನಲೋಪಃ । ರಜ್ಯತೇ ಪ್ರಕಾಶೇನೇತಿ ರಜೋಽಂತರಿಕ್ಷಂ । ನಿತ್ತ್ವಾದಾದ್ಯುದಾತ್ತಃ । ವಸ್ತಾ । ವಸ ಆಚ್ಛಾದನ ಇತ್ಯಸ್ಯ ತೃಚಿ ರೂಪಂ । ಜನಿತಾ । ಜನಯತೇಸ್ತೃಚಿ ಜನಿತಾ ಮಂತ್ರ ಇತಿ ನಿಪಾತನಾಣ್ಣಿ-ಲೋಪಃ । ಚಿತ್ತ್ವಾದಂತೋದಾತ್ತಃ ವಿಭಕ್ತಾ । ಭಜ ಸೇವಾಯಾಮಿತ್ಯಸ್ಮ ಸಾಧುಕಾರಿಣ್ಯರ್ಥೇ ತೃನ್ । ಏಕಾಚ ಉಪದೇಶ ಇತೀಟ್ಪ್ರತಿಷೇಧಃ । ತಾದೌ ಚ ನಿತಿ ಕೃತ್ಯತಾವಿತಿ ಗತೇಃ ಪ್ರಕೃತಿಸ್ವರತ್ವಂ ॥

ಪ್ರತಿಪದಾರ್ಥ

(ಇಂದ್ರಃ—ಇಂದ್ರನು) । ದಿವಃ—ದ್ಯುಲೋಕಕ್ಕೂ । ರಜಸಃ—ಅಂತರಿಕ್ಷಕ್ಕೂ । **ಧರ್ತಾ**—ಧಾರಕನಾಗಿಯೂ । ಪೃಷ್ಟಃ—ಸರ್ವತ್ರ ಸ್ಥಿತನಾಗಿಯೂ । **ರಥೋ ನ**—ತನ್ನ ರಥದಂತೆ । **ಊರ್ಧ್ವಃ ವಾಯುಃ**—ಊರ್ಧ್ವಗಾಮಿಯಾಗಿಯೂ । **ವಸುಭಿಃ**—ವಸುಗಳೊಡನೆ । ನಿಯುತ್ವಾನ್—ಸೇರಿಕೊಂಡಿರುವವನೂ ಆಗಿ । ಕ್ಷಪಾಂ—ರಾತ್ರಿಯನ್ನು । **ವಸ್ತಾ**—ಅಂಧಕಾರದಿಂದ ಮುಚ್ಚುವವನಾಗಿಯೂ। **ಸೂರ್ಯಸ್ಯ**-ಸೂರ್ಯನಿಗೆ । **ಜನಿತಾ**-ಜನ್ಮದಾತನಾಗಿಯೂ। ಧಿಷಣಾ ಇವ—ಐಶ್ವರ್ಯವಂತನ ಧನವನ್ನು ವಿಭಾಗಮಾಡಿಸುವ ವಾಕ್ಕಿನಂತೆ । **ಭಾಗಂ**—ಪೂಜ್ಯವಾದ । **ವಾಜಂ**-ಅನ್ನವನ್ನು । ವಿಭಕ್ತಾ—ಹಂಚುವವನಾಗಿಯೂ ಆಗಿದ್ದಾನೆ.

ಭಾವಾರ್ಥ

ಇಂದ್ರನು ದ್ಯುಲೋಕಕ್ಕೂ, ಅಂತರಿಕ್ಷಕ್ಕೂ ಧಾರಕನಾಗಿಯೂ, ಸರ್ವತ್ರ ಸ್ಥಿತನಾಗಿಯೂ, ತನ್ನ ರಥದಂತೆ ಊರ್ಧ್ವಗಾಮಿಯಾಗಿಯೂ, ವಸುಗಳೊಡನೆ ಸೇರಿಕೊಂಡಿರುವವನಾಗಿಯೂ ಇದ್ದು ರಾತ್ರಿಯನ್ನು ಅಂಧಕಾರದಿಂದ ಮುಚ್ಚುವವನಾಗಿಯೂ, ಸೂರ್ಯನಿಗೆ ಜನ್ಮದಾತನಾಗಿಯೂ, ಐಶ್ವರ್ಯವಂತನ ಧನವನ್ನು ವಿಭಾಗಮಾಡಿಸುವ ವಾಕ್ಕಿನಂತೆ ಪೂಜ್ಯವಾದ ಅನ್ನವನ್ನು ಹಂಚುವವನಾಗಿಯೂ ಆಗಿದ್ದಾನೆ.

CC-0. Jangamwadi Math Collection. Digitized by eGangotri

## English Translation

The upholder of heaven and of the firmament, the wind, like a chariot traversing the upper (region) accompanied by the Vasus; the clother of the night (with gloom). the parent of the sun, the distributor of the portion (allotted to the pious), like the words (of the wealthy appropriating to all) the food.

### ವಿಶೇಷವಿಷಯಗಳು

**ಧರ್ತಾ ದಿವೋ ರಜಸಃ**—ರಜಃಶಬ್ದಕ್ಕೆ ಯಾಸ್ಕರು **ರಜೋ ರಜತೇರ್ಜ್ಯೋತೀ ರಜ ಉಚ್ಯತೇ । ಉದಕಂ ರಜ ಉಚ್ಯತೇ । ಲೋಕಾ ರಜಾಂಸ್ಯುಚ್ಯಂತೇ** ಎಂದು ನಿರ್ವಚನವನ್ನು ಹೇಳಿದಾರೆ. (ನಿ. ೪-೧೯) **ರಜ್ಯತೇ ಪ್ರಕಾಶೇನೇತಿ ರಜೋಂತರಿಕ್ಷಂ**-- ಇಂದ್ರನು ಸ್ವರ್ಗಕ್ಕೂ ಅಂತರಿಕ್ಷಕ್ಕೂ ಎಂದರೆ ನಿಯಾಮಕನು ಎಂದಭಿಪ್ರಾಯವು.

**ಪೃಷ್ಟಃ ಊರ್ಧ್ವಃ ರಥಃ ನ ವಾಯುಃ**— ಇಂದ್ರನ ರಥವು ಸರ್ವತ್ರ ಎಂದರೆ ಎಲ್ಲಾ ಕಡೆಯಲ್ಲಿಯೂ ಊರ್ಧ್ವಭಾಗದಲ್ಲಿಯೂ ಸಂಚರಿಸುವಂತೆ ಇಂದ್ರನೂ ಸಹ ಮೇಲುಭಾಗದಲ್ಲಿರುವ ಸ್ವರ್ಗಾದಿ ಲೋಕಗಳಿಗೆ ಹೋಗವವನೆಂದು ಅರ್ಥವು ಅಥವಾ **ಪೃಷ್ಟಃ ಊರ್ಧ್ವ ರಥಃ** ಎಂಬ ಶಬ್ದಗಳಿಗೆ ಮಾತ್ರ ಅರ್ಥಮಾಡುವುದಾದರೆ ಮೇಲು ಭಾಗದಲ್ಲಿ ಎಂದರೆ ಸ್ವರ್ಗಾದಿಗಳಲ್ಲಿ ಸಂಚರಿಸಲು ಶಕ್ತಿಯುಳ್ಳ ರಥವುಳ್ಳವನೆಂದರ್ಥವು. ಈ ಸಂದರ್ಭದಲ್ಲಿ **ನ** ಎಂಬ ಉಪಮಾನ ಪದವನ್ನು **ವಾಯುಃ** ಎಂಬ ಪದದೊಡನೆ ಸೇರಿಸಿ ಅರ್ಥಮಾಡಬೇಕಾಗುವುದು. ಆಗ—

**ವಾಯುಃ ನ ವಸುಭಿಃ ನಿಯುತ್ವಾನ್**—ನಿಯುತವೆಂಬ ವಾಹನವುಳ್ಳ ವಾಯುವಿನಂತೆ ಮರುದ್ದೇವತೆಗಳಿಂದ ಸಹಾಯವನ್ನು ಹೊಂದಿರುವ ಇಂದ್ರನು ಎಂಬ ಅರ್ಥವನ್ನು ಹೇಳಬಹುದು. ಅಥವಾ **ವಸುಭಿರ್ನಿಯುತ್ವಾನ**—**ನಿವಸದ್ಭಿರ್ಮರುದ್ಭಿರ್ನಿಯುತ್ವಾನ್ ಸಹಾಯವಾನ್**—ಯಾವಾಗಲೂ ಇಂದ್ರನ ಜತೆಯಲ್ಲಿರುವ ಮರುತ್ತುಗಳಿಂದ ಸಹಾಯವನ್ನು ಪಡೆದಿರುವವನು ಎಂದೂ ಅರ್ಥವನ್ನು ಹೇಳಬಹುದು.

**ಕ್ಷಪಾಂ**—ಕ್ಷಪಾಶಬ್ದವು ರಾತ್ರಿನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೨-೨೦) ಕ್ಷಪಾಂ ಎಂದರೆ ಕತ್ತಲೆಯಿಂದ ಕೂಡಿದ ರಾತ್ರಿಯನ್ನು ಎಂದರ್ಥವು.

**ಜನಿತಾ ಸೂರ್ಯಸ್ಯ**— ಇಂದ್ರನ ಪ್ರಭಾವದಿಂದಲೇ ಸೂರ್ಯನು ಉದಯಿಸಿ ಬೆಳಗುವನೆಂದು ಹಿಂದೆ ವಿವರಿಸಲಾಗಿದೆ.

**ವಿಭಕ್ತಾ ಭಾಗಂ ಧಿಷಣೇವ ವಾಜಂ— ಯಥಾಢ್ಯಾನಾಂ ವಾಗಸ್ಯೇದಮಿತಿ ಕರೋತಿ ತದ್ವತ್ ಕರ್ಮಫಲರೂಪಮನ್ನಂ ಸಾಧು ವಿಭಾಗಕರ್ತಾ ಭವತಿ ।** ಐಶ್ವರ್ಯವಂತರಾದವರು ಇದು ನಿನಗೆ, ಇದು ಅವನಿಗೆ ಎಂದು ಭಾಗಮಾಡಿಕೊಡುವಂತೆ ಇಂದ್ರನು ಯಜ್ಞಾದಿಕರ್ಮಗಳನ್ನು ನೆರವೇರಿಸಿದವರಿಗೆ ಆಯಾ ಕರ್ಮಗಳಿಗೆ ಅನುಸಾರವಾದ ಫಲರೂಪವಾದ ಅನ್ನಾದಿಗಳನ್ನು ಹಂಚಿಕೊಡುವವನೆಂದು ಈ ವಾಕ್ಯದ ಅಭಿಪ್ರಾಯವು.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ
ಧನಾನಾಂ ॥ ೫ ॥

ಪದಪಾಠಃ

ಶುನಂ । ಹುವೇಮ । ಮಘsವಾನಂ । ಇಂದ್ರಂ । ಅಸ್ಮಿನ್ । ಭರೇ । ನೃsತಮಂ । ವಾಜsಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್sಸು । ಘ್ನಂತಂ । ವೃತ್ರಾಣಿ । ಸಂsಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋऽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋऽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙಿ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು । ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ವಾಜಸಾತೌ—ಅನ್ನಾರ್ಥವಾಗಿ ನಡೆಯತಕ್ಕ । ಭರೇ—ಯುದ್ಧದಲ್ಲಿ । ಶುನಂ—ಉತ್ಸಾಹದಿಂದ ವೃದ್ಧಿಯನ್ನು ಹೊಂದತಕ್ಕವನೂ ಅಥವಾ ಸುಖವನ್ನುಂಟುಮಾಡುವವನೂ । ಮಘ-

CC-0. Jangamwadi Math Collection. Digitized by eGangotri

**ವಾನಂ**—ಧನವಂತನೂ । **ಇಂದ್ರಂ**—ನಿರತಿಶಯವಾದ ಐಶ್ವರ್ಯಸಂಪನ್ನನೂ । **ನೃತಮಂ**—ನಾಯಕನಾದವನೂ ಆದ ನಿನ್ನನ್ನು । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ (ಹಾಗೆಯೇ) । **ಶೃಣ್ವಂತಂ**—(ನಮ್ಮ ಸ್ತುತಿಗಳನ್ನು) ಆಲಿಸಿಕೇಳುವವನೂ । **ಉಗ್ರಂ**—ಶತ್ರುಗಳಿಗೆ ಭಯಂಕರನಾದವನೂ । **ಸಮತ್ಸು**—ಯುದ್ಧಗಳಲ್ಲಿ । **ವೃತ್ರಾಣಿ**—ವೃತ್ರನೇ ಮೊದಲಾದ ಅಸುರರನ್ನು । **ಘ್ನಂತಂ**—ಹಿಂಸಿಸಿ ನಾಶಮಾಡುವವನೂ । **ಧನಾನಾಂ**—(ಶತ್ರುಗಳ) ಧನಗಳನ್ನು । **ಸಂಜಿತಂ**—(ನಮಗೆ) ಸೇರಿಸಿ ಕೊಡುವವನೂ ಆದ ನಿನ್ನನ್ನು । **ಊತಯೇ**—ರಕ್ಷಣಾರ್ಥವಾಗಿ । (**ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ).

ಭಾವಾರ್ಥ

ಎಲೈ ಇಂದ್ರನೇ, ಅನ್ನಾರ್ಥವಾಗಿ ನಡೆಯತಕ್ಕ ಯುದ್ಧದಲ್ಲಿ ಸುಖವನ್ನುಂಟುಮಾಡುವವನೂ, ಧನವಂತನೂ, ನಿರತಿಶಯವಾದ ಐಶ್ವರ್ಯಸಂಪನ್ನನೂ, ನೇತೃವಾದವನೂ ನಮ್ಮ ಸ್ತುತಿಗಳನ್ನು ಆಲಿಸಿಕೇಳುವವನೂ, ಶತ್ರುಗಳಿಗೆ ಭಯಂಕರನೂ, ಯುದ್ಧಗಳಲ್ಲಿ ವೃತ್ರನೇ ಮುಂತಾದ ಅಸುರರನ್ನು ಹಿಂಸಿಸಿ ನಾಶಮಾಡುವವನೂ, ಶತ್ರುಗಳ ಧನಗಳನ್ನು ನಮಗೆ ಸೇರಿಸಿ ಕೊಡುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.

ವಿಶೇಷವಿಷಯಗಳು

ಈ ಋಕ್ಕಿನ ವಿಶೇಷವಿಷಯಗಳನ್ನು ಹಿಂದೆಯೇ ವಿವರಿಸಿದೇವೆ.

## ಐವತ್ತನೆಯ ಸೂಕ್ತವು.

---

ಸಾಯಣಭಾಷ್ಯಂ

**ಇಂದ್ರಃ ಸ್ವಾಹೇತಿ ಪಂಚರ್ಚಂ ದ್ವಾದಶಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮೈಂದ್ರಂ ॥ ದಶರಾತ್ರೇ ನವಮೇಽಹನಿ ಮರುತ್ವತೀಯಶಸ್ತ್ರ ಇದಂ ಸೂಕ್ತಂ । ಸೂತ್ರಿತಂ ಚ । ತೃತೀಯಸ್ಯೇಂದ್ರಃ ಸ್ವಾಹಾ ಗಾಯತ್ಸಾಮ । ಆ. ೮-೭ । ಇತಿ ॥**

ಅನುವಾದವು—ಇಂದ್ರಃ **ಸ್ವಾಹಾ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹನ್ನೆರಡನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ತ್ರಿಷ್ಟುಪ್‌ಛಂದಸ್ಸು. ದಶರಾತ್ರನೆಂಬ ಯಾಗದ ಒಂಭತ್ತನೆಯ ದಿನದಲ್ಲಿ ಮರುತ್ವತೀಯಶಸ್ತ್ರಮಂತ್ರಗಳನ್ನುಪಠಿಸುವಾಗ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ-**ತೃತೀಯಸ್ಯೇಂದ್ರಃ ಸ್ವಾಹಾ ಗಾಯತ್ಸಾಮ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೭)

CC-0. Jangamwadi Math Collection. Digitized by eGangotri

॥ ಓಂ ॥

## ಸೂಕ್ತ—೫೦

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೫೦ ॥
ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೪ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥

॥ ಋಷಿಃ—ವಿಶ್ವಾಮಿತ್ರಃ ॥
॥ ದೇವತಾ—ಇಂದ್ರಃ ॥
॥ ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

ಇಂದ್ರಃ ಸ್ವಾಹಾ ಪಿಬತು ಯಸ್ಯ ಸೋಮ ಆಗತ್ಯಾ ತುಮ್ರೋ ವೃಷಭೋ ಮರುತ್ವಾನ್ ।
ಓರುವ್ಯಚಾಃ ಪೃಣತಾಮೇಭಿರನ್ನೈರಾಸ್ಯ ಹವಿಸ್ತನ್ವಃ ಕಾಮಮೃಧ್ಯಾಃ ॥೧॥

ಪದಪಾಠಃ

ಇಂದ್ರಃ । ಸ್ವಾಹಾ । ಪಿಬತು । ಯಸ್ಯ । ಸೋಮಃ । ಆಽಗತ್ಯ । ತುಮ್ರಃ । ವೃಷಭಃ । ಮರುತ್ವಾನ್ ।
ಆ । ಉರುಽವ್ಯಚಾಃ । ಪೃಣತಾಂ । ಏಭಿಃ । ಅನ್ನೈಃ । ಆ । ಅಸ್ಯ । ಹವಿಃ । ತನ್ವಃ । ಕಾಮಂ । ಋಧ್ಯಾಃ ॥

ಸಾಯಣಭಾಷ್ಯಂ

ಅಯಮಿಂದ್ರಃ ಸ್ವಾಹಾ ಸ್ವಾಹಾಕೃತಮಿಮಂ ಸೋಮಂ ಪಿಬತು । ಯಸ್ಯೇಂದ್ರಸ್ಯಾಯಂ ಸೋಮಃ ಸ ಇಂದ್ರೋ ಯಜ್ಞಂ ಪ್ರತ್ಯಾಗತ್ಯ ತುಮ್ರಃ ಕರ್ಮವಿಘ್ನಕಾರಿಣಾಂ ಹಿಂಸಕೋ ವೃಷಭೋ ಯಷ್ಟೄಣಾಮಭಿಮತಫಲವರ್ಷಕೋ ಮರುತ್ವಾನ್ಮರುದ್ಭಿಸ್ತದ್ವಾನ್ ಉರುವ್ಯಚಾಃ ಪ್ರಭೂತವ್ಯಾಪ್ತಿಃ ಸನ್ ಏಭಿರಸ್ಮಾಭಿರ್ದತ್ತೈರನ್ನೈಃ ಸೋಮಾದಿಲಕ್ಷಣೈರ್ಹವಿರ್ಭಿರಾ ಪೃಣತಾಂ । ಸಮಂತಾತ್ಪೂರಯತು । ತತೋಽಸ್ಯೇಂದ್ರಸ್ಯ ಸಂಬಂಧಿನಸ್ತನ್ವಃ ಶರೀರಸ್ಯ ಕಾಮಂ ಪುಷ್ಟ್ಯಾದಿಲಕ್ಷಣವಿಷಯಮಭಿಲಾಷಂ ಹವಿರಸ್ಮಾಭಿರ್ದತ್ತಮಾ ಋಧ್ಯಾಃ । ಸರ್ವತಃ ಪೂರಯತು ॥ ತುಮ್ರಃ । ತುಮಿರಾಹನನಾರ್ಥಃ । ಉರುವ್ಯಚಾಃ । ವ್ಯಚೇರಸುನ್ । ವ್ಯಚೇಃ ಕುಟಾದಿತ್ವಮನಸೀತಿ ವಕ್ತವ್ಯಮಿತ್ಯತ್ರಾನಸೀತಿ ಪರ್ಯುದಾಸಾತ್ ಙಿತ್ತ್ವಾಭಾವಃ । ಕೃದುತ್ತರಪದಸ್ವರಃ । ಋಧ್ಯಾಃ । ಋಧ್ನೋತೇರಾಶೀರ್ಲಿಙಿ ರೂಪಂ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಇಂದ್ರಃ**— ಇಂದ್ರನು | **ಸ್ವಾಹಾ**— ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾದ ಸೋಮವನ್ನು | **ಪಿಬತು**— ಪಾನಮಾಡಲಿ | **ಸೋಮಃ**— ಈ ಸೋಮವು | **ಯಸ್ಯ**— ಯಾವ ಇಂದ್ರನನ್ನುದ್ದೇಶಿಸಿದೆಯೋ ಆ ಇಂದ್ರನು | **ಆಗತ್ಯ**— ಯಜ್ಞಕ್ಕೆ ಬಂದು | **ತುಮ್ರಃ**— (ಯಜ್ಞಕ್ಕೆ ವಿಘ್ನವನ್ನುಂಟುಮಾಡುವವರಿಗೆ) ಹಿಂಸಕನಾಗಿಯೂ | **ವೃಷಭಃ**— ಯಜ್ಞಕರ್ತರಿಗೆ ಕಾಮವರ್ಷಕನಾಗಿಯೂ | **ಮರುತ್ವಾನ್**— ಮರುತ್ತುಗಳೊಡನೆ ಕೂಡಿದವನಾಗಿಯೂ | **ಉರುವ್ಯಚಾಃ**— ಪ್ರಭೂತವಾಗಿ ವ್ಯಾಪಿಸಿದವನಾಗಿಯೂ ಆಗಿ | **ಏಭಿಃ**— ಈ ನಮ್ಮಿಂದ ದತ್ತವಾದ | **ಅನ್ನೈಃ**— ಸೋಮರೂಪವಾದ ಹವಿಸ್ಸುಗಳಿಂದ | **ಆ ಪೃಣತಾಂ**— ಪೂರ್ಣವಾದ ತೃಪ್ತಿಯನ್ನು ಹೊಂದಲಿ | **ಅಸ್ಯ**— ಈ ಇಂದ್ರನ | **ತನ್ವಃ**— ಶರೀರಕ್ಕೆ | **ಕಾಮಂ**— ಪುಷ್ಟಿಯನ್ನು | **ಹವಿಃ**— (ನಮ್ಮಿಂದ ದತ್ತವಾದ ಈ) ಹವಿಸ್ಸು | **ಆ ಋಧ್ಯಾಃ**— ಪೂರ್ಣವಾಗಿ ಉಂಟುಮಾಡಲಿ.

ಭಾವಾರ್ಥ

ಇಂದ್ರನು ಸ್ವಾಹಾಕಾರಪೂರ್ವಕವಾಗಿ ಅರ್ಪಿತವಾದ ಸೋಮವನ್ನು ಪಾನಮಾಡಲಿ. ಈ ಸೋಮವು ಯಾವ ಇಂದ್ರನನ್ನುದ್ದೇಶಿಸಿದೆಯೋ ಆ ಇಂದ್ರನು ಯಜ್ಞಕ್ಕೆ ಬಂದು ಯಜ್ಞಕ್ಕೆ ವಿಘ್ನವನ್ನುಂಟುಮಾಡುವವರಿಗೆ ಹಿಂಸಕನಾಗಿಯೂ, ಕಾಮವರ್ಷಕನಾಗಿಯೂ, ಮರುತ್ತುಗಳೊಡನೆ ಕೂಡಿದವನಾಗಿಯೂ, ಪ್ರಭೂತವಾಗಿ ವ್ಯಾಪಿಸಿದವನಾಗಿಯೂ ಆಗಿ ಈ ನಮ್ಮಿಂದ ದತ್ತವಾದ ಸೋಮರೂಪವಾದ ಹವಿಸ್ಸುಗಳಿಂದ ಪೂರ್ಣವಾದ ತೃಪ್ತಿಯನ್ನು ಹೊಂದಲಿ. ನಮ್ಮಿಂದ ದತ್ತವಾದ ಈ ಹವಿಸ್ಸು ಇಂದ್ರನ ಶರೀರಕ್ಕೆ ಪೂರ್ಣವಾದ ಪುಷ್ಟಿಯನ್ನುಂಟುಮಾಡಲಿ.

English Translation

May Indra drink the libation ; he of whom is the Soma, having come to the sacrifice ; he who is the repeller (of adversaries), the showerer (of benefits), the lord of the Maruts ; may he, the wide-pervading, be pleased with these (sacrificial) viands ; may the oblation be adequate to the wants of his body.

---

ಸಂಹಿತಾಪಾಠಃ

ಆ ತೇ ಸಪರ್ಯೂ ಜವಸೇ ಯುನಜ್ಮಿ ಯಯೋರನು ಪ್ರದಿವಃ ಶ್ರುಷ್ಟಿ-
ಮಾವಃ |
ಇಹ ತ್ವಾ ಧೇಯುರ್ಹರಯಃ ಸುಶಿಪ್ರ ಪಿಬಾ ತ್ವ೧ಸ್ಯ ಸುಷುತಸ್ಯ
ಚಾರೋಃ || ೨ ||

CC-0. Jangamwadi Math Collection. Digitized by eGangotri

## ಪದಪಾಠಃ

ಆ । ತೇ । ಸಪರ್ಯೂ ಇತಿ । ಜವಸೇ । ಯುನಜ್ಮಿ । ಯಯೋಃ । ಅನು । ಪ್ರದಿವಃ । ಶ್ರುಷ್ಟಿಂ । ಆವಃ ।
ಇಹ । ತ್ವಾ । ಧೇಯುಃ । ಹರಯಃ । ಸುಶಿಪ್ರ । ಪಿಬ । ತು । ಅಸ್ಯ । ಸುಸುತಸ್ಯ । ಚಾರೋಃ ॥ ೨ ॥

## ಸಾಯಣಭಾಷ್ಯಂ

ಹೇ ಇಂದ್ರ ತೇ ತವ ಜವಸೇ ಯಜ್ಞಂ ಪ್ರತ್ಯಾಗಮನಾಯ ಸಪರ್ಯೂ ಪರಿಚಾರಕೌ ಹರೀ ಆ ಯುನಜ್ಮಿ । ರಥೇ ಯೋಜಯಾಮಿ । ಪ್ರದಿವಃ ಪುರಾತನಸ್ತ್ವಂ ಯಯೋರಶ್ವಯೋಃ ಶ್ರುಷ್ಟಿಂ ವೇಗಂ । ಶ್ರುಷ್ಟೀತಿ ಕ್ಷಿಪ್ರನಾಮೇತಿ ಯಾಸ್ಕಃ । ತಮನ್ವಾವಃ । ಅನುಗಚ್ಛಸಿ । ಹೇ ಸುಶಿಪ್ರ ಶೋಭನಹನೋ ಇಂದ್ರ ಹರಯೋ ರಥೇ ಯೋಜಿತಾಸ್ತೇಽಶ್ವಾ ಇಹ ಕರ್ಮಣಿ ತ್ವಾಂ ತ್ವಾಂ ಧೇಯುಃ । ಯಜ್ಞಂ ಪ್ರತಿ ಧಾರಯಂತು । ತತ ಆಗತಸ್ತ್ವಂ ಸುಷುತಸ್ಯ ಸುಷ್ಠ್ವಭಿಷುತಂ ಚಾರೋಃ ಕಮನೀಯಮಸ್ಯೇಮಂ ಸೋಮಂ ತು ಕ್ಷಿಪ್ರಂ ಪಿಬ ॥ ಸಪರ್ಯೂ । ಸಪರಶಬ್ದಃ ಕಂಡ್ವಾದಿಃ । ತದಂತಾದೌಣಾದಿಕಃ ಕುಪ್ರತ್ಯಯಃ । ಆವಃ । ಅವ ರಕ್ಷಣಾದಿಷು । ಛಾಂದಸೇ ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ । ಧೇಯುಃ । ದಧಾತೇರಾಶೀರ್ಲಿಙಿ ಕಿದಾಶಿಷೀತಿ ಯಾಸುಟ್ । ಏರ್ಲಿಙಿ । ಪಾ. ೬-೪-೬೭ । ಇತ್ಯೇಕಾರಾದೇಶಃ । ನಿಘಾತಃ । ಪಿಬ । ಪಾದಾದಿತ್ವಾದನಿಘಾತಃ । ಸುಷುತಸ್ಯ । ಷುಞ್ ಅಭಿಷವೇ । ಕರ್ಮಣಿ ಕ್ತಃ । ಗತಿರನಂತರ ಇತಿ ಗತಿಸ್ವರಃ । ಉಪಸರ್ಗಾತ್ಸುನೋತೀತ್ಯಾದಿನಾ ಸಂಹಿತಾಯಾಂ ಷತ್ವಂ ॥

## ಪ್ರತಿಪದಾರ್ಥ

(ಎಲೈ ಇಂದ್ರನೇ) **ಪ್ರದಿವಃ**—ಪುರಾತನನಾದ ನೀನು । **ಯಯೋಃ**—ಯಾವ ಅಶ್ವಗಳ । **ಶ್ರುಷ್ಟಿಂ**—ವೇಗವನ್ನು । **ಅನು ಆವಃ**—ಅನುಸರಿಸುತ್ತೀಯೋ ಅಂತಹ । **ಸಪರ್ಯೂ**—ನಿನ್ನನ್ನು ಸೇವಿಸತಕ್ಕ ಅಶ್ವಗಳನ್ನು । **ತೇ**-ನಿನ್ನ । **ಜವಸೇ**-(ಯಜ್ಞಕ್ಕೆ ಬರಲು) ವೇಗವಾದ ಗಮನಕ್ಕಾಗಿ । **ಆ ಯುನಜ್ಮಿ**-ರಥಕ್ಕೆ ಸೇರಿಸಿ ಕಟ್ಟುತ್ತೇನೆ । **ಸುಶಿಪ್ರ**—ಶ್ರೇಷ್ಠವಾದ ಕೆನ್ನೆಯುಳ್ಳ ಇಂದ್ರನೇ । **ಹರಯಃ**—ನಿನ್ನ ಅಶ್ವಗಳು । **ಇಹ**—ಈ ಕರ್ಮದಲ್ಲಿ । **ತ್ವಾ**—ನಿನ್ನನ್ನು । **ಧೇಯುಃ**—ವಹಿಸಿಕೊಂಡು ಬರಲಿ । **ಸುಷ್ಟುತಸ್ಯ**—ಶ್ರೇಷ್ಠವಾಗಿ ಹಿಂಡಲ್ಪಟ್ಟುದೂ । **ಚಾರೋಃ**—ರಮಣೀಯವಾದುದೂ ಆದ । **ಅಸ್ಯ**—ಈ ಸೋಮವನ್ನು । **ತು**—ಶೀಘ್ರವಾಗಿ । **ಪಿಬ**—ಪಾನಮಾಡು.

## ಭಾವಾರ್ಥ

ಎಲೈ ಇಂದ್ರನೇ, ಪುರಾತನವಾದ ನೀನು ಯಾವ ಅಶ್ವಗಳ ವೇಗವನ್ನು ಅನುಸರಿಸುತ್ತೀಯೋ ಅಂತಹ ನಿನ್ನನ್ನುಪಚರಿಸತಕ್ಕ ಅಶ್ವಗಳನ್ನು ನಿನ್ನನ್ನು ವೇಗವಾಗಿ ಈ ಯಜ್ಞಕ್ಕೆ ಕರೆತರಲು ನಿನ್ನ ರಥಕ್ಕೆ ಸೇರಿಸಿ ಕಟ್ಟುತ್ತೇನೆ. ಶ್ರೇಷ್ಠವಾದ ಕೆನ್ನೆಯುಳ್ಳ ಇಂದ್ರನೇ ನಿನ್ನ ಅಶ್ವಗಳು ಈ ಕರ್ಮದಲ್ಲಿ ನಿನ್ನನ್ನು ವಹಿಸಿಕೊಂಡು ಬರಲಿ. ಶ್ರೇಷ್ಠವಾಗಿ ಹಿಂಡಲ್ಪಟ್ಟುದೂ ರಮಣೀಯವಾದುದೂ ಆದ ಈ ಸೋಮವನ್ನು ಶೀಘ್ರವಾಗಿ ಪಾನಮಾಡು.

CC-0. Jangamwadi Math Collection. Digitized by eGangotri

## English Translation

I yoke (to your car), to bring you quickly, your two docile horses, whose speed you have of old employed: may your horses, handsome Indra, bring you hither, and drink promptly of this well-effused agreeable libation.

ಸಂಹಿತಾಪಾಠಃ

ಗೋಭಿರ್ಮಿಮಿಕ್ಷುಂ ದಧಿರೇ ಸುಪಾರಮಿಂದ್ರಂ ಜ್ಯೈಷ್ಠ್ಯಾಯ ಧಾಯಸೇ
ಗೃಣಾನಾಃ ।
ಮಂದಾನಃ ಸೋಮಂ ಪಪಿವಾँ ಋಜೀಷಿನ್ತ್ಸಮಸ್ಮಭ್ಯಂ ಪುರುಧಾ ಗಾ
ಇಷಣ್ಯ ॥ ೩ ॥

ಪದಪಾಠಃ

ಗೋಭಿಃ । ಮಿಮಿಕ್ಷುಂ । ದಧಿರೇ । ಸುऽಪಾರಂ । ಇಂದ್ರಂ। ಜ್ಯೈಷ್ಠ್ಯಾಯ । ಧಾಯಸೇ । ಗೃಣಾನಾಃ ।
ಮಂದಾನಃ । ಸೋಮಂ । ಪಪಿऽವಾನ್ । ಋಜೀಷಿನ್ । ಸಂ । ಅಸ್ಮಭ್ಯಂ । ಪುರುಧಾ । ಗಾಃ । ಇಷಣ್ಯ ॥

ಸಾಯಣಭಾಷ್ಯಂ

ಗೃಣಾನಾಃ ಸ್ತೋತ್ರಂ ಕುರ್ವಾಣಾ ಋತ್ವಿಜೋ ಮಿಮಿಕ್ಷುಂ ಸ್ತೋತೃಣಾಮಭಿಮತಫಲಂ ವರ್ಷಿತುಮಿಚ್ಛಂತಂ ಸುಪಾರಂ ಶೋಭನಪಾರಂ ಸ್ತುತಿಭಿರಭಿಮುಖೀಕರ್ತುಂ ಶಕ್ಯಮಿತ್ಯರ್ಥಃ । ತಾದೃಶಮಿಂದ್ರಂ ಜ್ಯೈಷ್ಠ್ಯಾಯ ಧನಾದಿಸಂಪತ್ತ್ಯಾ ಶ್ರೇಷ್ಠತ್ವಾಯ ಧಾಯಸೇ ಚಿರಕಾಲಮಾಯುರ್ಧಾರಣಾಯ ಚ ಗೋಭಿರ್ಗೋಮಿಶ್ರಿತೈಃ ಸೋಮೈರ್ದಧಿರೇ । ಧಾರಯಂತಿ । ಶೇಷಃ ಪ್ರತ್ಯಕ್ಷಃ । ಹೇ ಋಜೀಷಿನ್ ಸೋಮವನ್ನಿಂದ್ರ ಸ ತ್ವಂ ಮಂದಾನೋ ಮೋದಮಾನಃ ಸೋಮಂ ಪಪಿವಾನ್ ಸೋಮಸ್ಯ ಪಾತಾ ಸನ್ ಸ್ತೋತೃಭ್ಯೋऽಸ್ಮಭ್ಯಂ ಪುರುಧಾ ಬಹುಧಾ ಗಾ ಅಗ್ನಿಹೋತ್ರಾದಿಕರ್ಮಸಿದ್ಧ್ಯರ್ಥಂ ಧೇನೂಃ ಸಮಿಷಣ್ಯ। ಸಮ್ಯಕ್ ಪ್ರೇರಯ ॥ ಗೋಭಿಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವೇ ಪ್ರಾಪ್ತೇ ನ ಗೋಶ್ವನ್ಸಾವವರ್ಣೇತಿ ಪ್ರತಿಷೇಧಃ । ಮಿಮಿಕ್ಷುಂ। ಮಿಹ ಸೇಚನ ಇತ್ಯಸ್ಯ ಸನ್ಯೇಕಾಚ ಇತೀಟ್ಪ್ರತಿಷೇಧೇ ಹಲಂತಾಚ್ಚೇತಿ ಕಿದ್ವದ್ಭಾವಃ । ಸನಾಶಂಸಭಿಕ್ಷ ಉಃ । ಪ್ರತ್ಯಯಸ್ವರಃ । ಜ್ಯೈಷ್ಠ್ಯಾಯ । ಜ್ಯೇಷ್ಠಸ್ಯ ಭಾವ ಇತ್ಯರ್ಥೇ ಬ್ರಾಹ್ಮಣಾದಿತ್ವಾತ್ ಷ್ಯಞ್ । ಞಿತ್ತ್ವಾದಾದ್ಯುದಾತ್ತಃ । ಗೃಣಾನಾಃ । ಗೄ ಶಬ್ದೇ । ಕ್ರ್ಯಾದಿತ್ವಾತ್ ಶ್ನಾ । ಚಿತ್ತ್ವಾದಂತೋದಾತ್ತಃ । ಮಂದಾನಃ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಶಾನಚಿ ಬಹುಲಂ

CC-0. Jangamwadi Math Collection. Digitized by eGangotri

ಛಂದಸೀತಿ ಶಪೋ ಲುಕ್ । ಪುರುಧಾ । ಪುರುಶಬ್ದ ಇಹ ಸಂಖ್ಯಾವಾಚೀ । ಸಂಖ್ಯಾಯಾ ವಿಧಾರ್ಥೇ ಧೇತಿ ಧಾಪ್ರತ್ಯಯಃ । ಇಷಣ್ಯ । ಇಷ ಗತೌ । ಇಷಣಮಿಚ್ಛತೀತಿ ಛಂದಸಿ ಪರೇಚ್ಛಾಯಾಂ ಕ್ಯಚ್ ತದಂತಾದಂತರ್ಭಾವಿತಣ್ಯರ್ಥಾಲ್ಲೋಟಿ ರೂಪಂ ॥

ಪ್ರತಿಪದಾರ್ಥ

ಗೃಣಾನಾಃ—ಸ್ತುತಿಕರ್ತರಾದ ಋತ್ವಿಕ್ಕುಗಳು । ಮಿಮಿಕ್ಷುಂ—ಅಭಿಮತವಾದ ಫಲವನ್ನು ಸುರಿಸಲಿಚ್ಛಿಸುವವನೂ । ಸುಪಾರಂ—ಸ್ತುತಿಯಿಂದ ಅಭಿಮುಖನನ್ನಾಗಿ ಮಾಡಿಕೊಳ್ಳಲು ಸಾಧ್ಯನೂ ಆದ । ಇಂದ್ರಂ—ಇಂದ್ರನನ್ನು । ಜ್ಯೈಷ್ಠ್ಯಾಯ—ಉತ್ಕೃಷ್ಟವಾದ ಧನಾದಿ ಸಂಪತ್ತಿಗಾಗಿಯೂ । ಧಾಯಸೇ—ದೀರ್ಘಕಾಲ ಆಯುಸ್ಸನ್ನು ಪಡೆಯುವುದಕ್ಕೂ । ಗೋಭಿಃ—ಗೋಮಿಶ್ರಿತವಾದ ಸೋಮಗಳಿಂದ । ದಧಿರೇ—(ತುಂಬಿದ ಪಾತ್ರೆಗಳನ್ನು) ಹಿಡಿದಿದ್ದಾರೆ । ಋಜೀಷಿನ್—ಸೋಮವಂತನಾದ ಎಲೈ ಇಂದ್ರನೇ । ಮಂದಾನಃ—ಹರ್ಷಪಡತಕ್ಕವನಾಗಿ । ಸೋಮಂ—ಸೋಮವನ್ನು । ಪಪಿವಾನ್—ಪಾನಮಾಡುತ್ತಾ । ಅಸ್ಮಭ್ಯಂ-ಸ್ತೋತೃಗಳಾದ ನಮಗೆ । ಪುರುಧಾ-ಅತ್ಯಧಿಕವಾಗಿ । ಗಾಃ—ಯಜ್ಞಾರ್ಥವಾದ ಸಾಧನಗಳನ್ನು ಒದಗಿಸುವ ಧೇನುಗಳನ್ನು । ಸಂ ಇಷಣ್ಯ—ಒದಗಿಸಿಕೊಡು.

ಭಾವಾರ್ಥ

ಸ್ತುತಿಕರ್ತರಾದ ಋತ್ವಿಕ್ಕುಗಳು ಅಭಿಮತವಾದ ಫಲವನ್ನು ಸುರಿಸಲಿಚ್ಛಿಸುವವನೂ, ಸ್ತುತಿಯಿಂದ ಅಭಿಮುಖನನ್ನಾಗಿ ಮಾಡಿಕೊಳ್ಳಲು ಸಾಧ್ಯನೂ ಆದ ಇಂದ್ರನನ್ನು ಉತ್ಕೃಷ್ಟವಾದ ಧನಾದಿಸಂಪತ್ತಿಗಾಗಿಯೂ ದೀರ್ಘಕಾಲ ಆಯುಸ್ಸನ್ನು ಪಡೆಯುವುದಕ್ಕಾಗಿಯೂ ಗೋಮಿಶ್ರಿತವಾದ ಸೋಮಗಳಿಂದ ತುಂಬಿದ ಪಾತ್ರೆಗಳನ್ನು ಹಿಡಿದಿದ್ದಾರೆ. ಸೋಮವಂತನಾದ ಎಲೈ ಇಂದ್ರನೇ, ಹರ್ಷವನ್ನು ಪಡುತ್ತಲೂ ಸೋಮವನ್ನು ಪಾನಮಾಡುತ್ತಲೂ ಸ್ತೋತೃಗಳಾದ ನಮಗೆ ಯಜ್ಞಕ್ಕೆ ಉಪಯುಕ್ತವಾಗುವ ಧೇನುಗಳನ್ನು ಅತ್ಯಧಿಕವಾಗಿ ಒದಗಿಸಿಕೊಡು.

English Translation

His adorers support with cattle, Indra, who is willing to bestow upon them their desires, and ready to come to the sacrifice, for the sake of obtaining eminent prosperity and prolonged life : acceptor of the spiritless Soma, who are the drinker of the Soma juice, and are exhilarated (by the draught), grant to us freely cattle in abundance.

---

ಸಂಹಿತಾಪಾಠಃ

ಇಮಂ ಕಾಮಂ ಮಂದಯಾ ಗೋಭಿರಶ್ವೈಶ್ಚಂದ್ರವತಾ ರಾಧಸಾ ಪಪ್ರಥಶ್ಚ ।



CC-0. Jangamwadi Math Collection. Digitized by eGangotri

ಸ್ವರ್ಯವೋ ಮತಿಭಿಸ್ತುಭ್ಯಂ ವಿಪ್ರಾ ಇಂದ್ರಾಯ ವಾಹಃ ಕುಶಿಕಾಸೋ ಅಕ್ರನ್ ॥ ೪ ॥

ಪದಪಾಠಃ

ಇಮಂ । ಕಾಮಂ । ಮಂದಯ । ಗೋಭಿಃ । ಅಶ್ವೈಃ । ಚಂದ್ರವತಾ । ರಾಧಸಾ । ಪಪ್ರಥಃ । ಚ ।

ಸ್ವಃಯವಃ । ಮತಿಭಿಃ । ತುಭ್ಯಂ । ವಿಪ್ರಾಃ । ಇಂದ್ರಾಯ । ವಾಹಃ । ಕುಶಿಕಾಸಃ । ಅಕ್ರನ್ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ಇಮಂ ಧನಾದಿವಿಷಯಂ ಕಾಮಮಸ್ಮದೀಯಮಭಿಲಾಷಂ ಗೋಭಿರಗ್ನಿಹೋತ್ರಾದಿ-ಕರ್ಮಸಾಧನಭೂತೈರ್ಗವಾದಿಭಿರ್ವಾಹನಸಾಧನಭೂತೈರಶ್ವೈಶ್ಚ ಚಂದ್ರವತಾ ದೀಪ್ತಿಯುಕ್ತೇನ ರಾಧಸಾ ಧನೇನ ಚ ಮಂದಯ । ಏತಾನಿ ದತ್ತ್ವೇಮಮಭಿಲಾಷಂ ಪೂರಯ । ಕಿಂಚ । ಏತೈರಸ್ಮಾನ್ಪಪ್ರಥಃ । ಪ್ರಥಿತಾಂಶ್ಚ ಕುರು । ಪಶ್ಚಾತ್ಸ್ವರ್ಯವಃ ಸ್ವರ್ಗಾದಿಸುಖಮಾತ್ಮನ ಇಚ್ಛಂತೋ ವಿಪ್ರಾಃ ಕರ್ಮಕುಶಲಾಃ ಕುಶಿಕಾಸಃ ಕುಶಿಕಾ ಮತಿಭಿರ್ಮನನೀಯೈರ್ಮಂತ್ರೈರ್ವಾಹಃ ಸ್ತೋತ್ರಮಿಂದ್ರಾಯ ತುಭ್ಯಮಕ್ರನ್ । ಅಕಾರ್ಷುಃ ॥ ಮಂದಯ । ಮದಿ ಸ್ತುತ್ಯಾದಿಷ್ವಿತ್ಯಸ್ಯ ಲೋಟಿ ರೂಪಂ । ಗೋಭಿಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವೇ ಪ್ರಾಪ್ತೇ ನ ಗೋಶ್ವನ್ಸಾವವರ್ಣೇತ್ಯಾದಿನಾ ಪ್ರತಿಷೇಧಃ । ಪ್ರಕೃತಿಸ್ವರಃ । ಪಪ್ರಥಃ । ಪ್ರಥ ಪ್ರಖ್ಯಾನೇ । ಕ್ವಿಪ್ । ಛಂದಸ್ಯುಭಯಥೇತಿ ತಸ್ಯ ಸಾರ್ವಧಾತುಕತ್ವಾತ್ ಶಪ್ । ತಸ್ಯ ಬಹುಲಂ ಛಂದಸೀತಿ ಶ್ಲುಃ । ಧಾತುಸ್ವರಃ । ಅಕ್ರನ್ । ಕರೋತೇರ್ಲುಙಿ ಮಂತ್ರೇ ಘಸಹ್ವರೇತ್ಯಾದಿನಾ ಲುಕ್ । ನಿಘಾತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಇಮಂ ಕಾಮಂ—ಧನವಿಷಯಕವಾದ ನಮ್ಮ ಈ ಅಭಿಲಾಷೆಯನ್ನು । ಗೋಭಿಃ—ಗೋವುಗಳನ್ನು ಒದಗಿಸುವುದರಿಂದಲೂ । ಅಶ್ವೈಃ—ಅಶ್ವಗಳಿಂದಲೂ । ಚಂದ್ರವತಾ—ಕಾಂತಿಯುಕ್ತವಾದ । ರಾಧಸಾ—ಧನದಿಂದಲೂ । ಮಂದಯ—ತೃಪ್ತಿಗೊಳಿಸು । ಪಪ್ರಥಃ—(ನಮ್ಮನ್ನು) ಯಶಸ್ವಿಗಳನ್ನಾಗಿ ಮಾಡು । ಸ್ವರ್ಯವಃ—ಸ್ವರ್ಗಾದಿ ಸುಖವನ್ನಿಚ್ಛಿಸುವವರೂ । ವಿಪ್ರಾಃ—ಕರ್ಮಕುಶಲರೂ । ಕುಶಿಕಾಸಃ—ಕುಶಿಕ ವಂಶೋತ್ಪನ್ನರೂ ಆದ ಋಷಿಗಳು । ಮತಿಭಿಃ—ಮಂತ್ರಾತ್ಮಕವಾದ ವಾಕ್ಯಗಳಿಂದ । ವಾಹಃ—ಸ್ತೋತ್ರವನ್ನು । ಇಂದ್ರಾಯ—ಇಂದ್ರನಾದ ನಿನ್ನನ್ನುದ್ದೇಶಿಸಿ । ಅಕ್ರನ್—ನಿರ್ಮಿಸಿದ್ದಾರೆ.

ಭಾವಾರ್ಥ

ಎಲೈ ಇಂದ್ರನೇ, ಧನವಿಷಯಕವಾದ ನಮ್ಮ ಈ ಅಭಿಲಾಷೆಯನ್ನು ನಮಗೆ ಗೋವುಗಳನ್ನು ಒದಗಿಸುವುದರಿಂದಲೂ, ಅಶ್ವಗಳನ್ನೂ ಕಾಂತಿಯುಕ್ತವಾದ ಧನಗಳನ್ನೂ ಕೊಡುವುದರಿಂದಲೂ ತೃಪ್ತಿಗೊಳಿಸು. ನಮ್ಮನ್ನು ಯಶಸ್ವಿಗಳನ್ನಾಗಿ ಮಾಡು. ಸ್ವರ್ಗಾದಿಸುಖವನ್ನಿಚ್ಛಿಸುವವರೂ, ಕರ್ಮಕುಶಲರೂ, ಕುಶಿಕವಂಶೋತ್ಪನ್ನನೂ ಆದ ಋಷಿಗಳು ಮಂತ್ರಾತ್ಮಕವಾದ ವಾಕ್ಯಗಳಿಂದ ಸ್ತೋತ್ರವನ್ನು ಇಂದ್ರನಾದ ನಿನ್ನನ್ನುದ್ದೇಶಿಸಿ ನಿರ್ಮಿಸಿದ್ದಾರೆ.

CC-0. Jangamwadi Math Collection. Digitized by eGangotri

English Translation

Gratify this our desire (of wealth) with cows, with horses, with shining treasure, and make us renowned: the wise Kushikas, desirous of heaven, offer praise to you, Indra, with pious (prayers).

———

ಸಂಹಿತಾಪಾಠಃ

ಶುನಂ ಹುವೇಮ ಮಘವಾನಮಿಂದ್ರಮಸ್ಮಿನ್ಭರೇ ನೃತಮಂ ವಾಜಸಾತೌ ।
ಶೃಣ್ವಂತಮುಗ್ರಮೂತಯೇ ಸಮತ್ಸು ಘ್ನಂತಂ ವೃತ್ರಾಣಿ ಸಂಜಿತಂ
ಧನಾನಾಂ ॥ ೫ ॥

ಪದಪಾಠಃ

ಶುನಂ । ಹುವೇಮ । ಮಘಽವಾನಂ । ಇಂದ್ರಂ । ಅಸ್ಮಿನ್ । ಭರೇ । ನೃಽತಮಂ । ವಾಜಽಸಾತೌ ।
ಶೃಣ್ವಂತಂ । ಉಗ್ರಂ । ಊತಯೇ । ಸಮತ್ಽಸು । ಘ್ನಂತಂ । ವೃತ್ರಾಣಿ । ಸಂಽಜಿತಂ । ಧನಾನಾಂ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಸಾತೌ । ವಾಜಸ್ಯಾನ್ನಸ್ಯ ಸಾತಿರ್ಲಾಭೋ ಯಸ್ಮಿನ್ ಸೋಽಯಂ ವಾಜಸಾತಿಃ। ಅಸ್ಮಿನ್ಭರೇ । ಬಿಭ್ರತಿ ಜಯಲಕ್ಷ್ಮೀಮನೇನ ಯೋದ್ಧಾರ ಇತಿ ಭರಃ ಸಂಗ್ರಾಮಃ । ತಸ್ಮಿನ್ ಸಂಗ್ರಾಮೇ ಶುನಂ ಶೂನಮುತ್ಸಾಹೇನ ಪ್ರವೃದ್ಧಂ । ಯದ್ವಾ ಶುನಮಿತಿ ಸುಖನಾಮ । ಸುಖಕರಂ ಮಘವಾನಂ ಧನವಂತಂ ಅತ ಏವೇಂದ್ರಂ ನಿರತಿಶಯೈಶ್ವರ್ಯಸಂಪನ್ನಂ ನೃತಮಂ ಸರ್ವಸ್ಯ ಜಗತೋಽತಿಶಯೇನ ನೇತಾರಂ ತ್ವಾಂ ಹುವೇಮ । ಕುಶಿಕಾ ವಯಂ । ಯಜ್ಞಾರ್ಥಮಾಹ್ವಯೇಮ । ತಥಾ ಶೃಣ್ವಂತಮಸ್ಮಾಭಿಃ ಕ್ರಿಯಮಾಣಾಂ ಸ್ತುತಿಂ ಶೃಣ್ವಂತಮುಗ್ರಂ ಶತ್ರೂಣಾಂ ಭಯಂಕರಂ ಸಮತ್ಸು ಸಂಗ್ರಾಮೇಷು ವೃತ್ರಾಣಿ ವೃತ್ರೋಪಲಕ್ಷಿತಾನಿ ಸರ್ವಾಣಿ ರಕ್ಷಾಂಸಿ ಘ್ನಂತಂ ಹಿಂಸಂತಂ ಧನಾನಾಂ ಶತ್ರುಸಂಬಂಧಿನಾಂ ಸಂಜಿತಂ ಸಮ್ಯಗ್ಜೇತಾರಂ ತ್ವಾಮೂತಯೇ ರಕ್ಷಣಾಯ ವಯಮಾಹ್ವಯೇಮ ॥ ಶುನಂ । ಟುಓಶ್ವಿ ಗತಿವೃದ್ಧ್ಯೋ-ರಿತ್ಯಸ್ಯ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಯಜಾದಿತ್ವಾತ್ಸಂಪ್ರಸಾರಣಂ । ದೀರ್ಘಾ-ಭಾವಶ್ಛಾಂದಸಃ । ಪ್ರತ್ಯಯಸ್ವರಃ । ಹುವೇಮ । ಹ್ವಯತೇರ್ಬಹುಲಂ ಛಂದಸೀತಿ ಸಂಪ್ರಸಾರಣೇ ಕೃತೇ ಶಪೋ ಲುಕಿ ಕೃತೇ ಚ ಲಿಙಿ ರೂಪಂ । ನಿಘಾತಃ । ಭರೇ । ಭೃಞ್ ಭರಣೇ । ಘಃ । ವೃಷಾದಿತ್ವಾದಾ-ದ್ಯುದಾತ್ತಃ । ವಾಜಸಾತೌ । ಷಣು ದಾನೇ । ಭಾವೇ ಕ್ತಿನ್ । ಜನಸನೇತ್ಯಾದಿನಾನುನಾಸಿಕಸ್ಯಾತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಸಮತ್ಸು ಅದ ಭಕ್ಷಣೇ । ಸಂಪೂರ್ವಾತ್ ಕ್ವಿಪ್ । ಸಂಭಕ್ಷಯಂತಿ ಯೋದ್ಧೄಣಾಮಾಯೂಂಷೀತಿ ಸಮದಃ ಸಂಗ್ರಾಮಾಃ । ಕೃದುತ್ತರಪದಸ್ವರಃ । ಘ್ನಂತಂ । ಹನ ಹಿಂಸಾ-ಗತ್ಯೋರಿತ್ಯಸ್ಯ ಶತರಿ ಗಮಹನೇತ್ಯಾದಿನೋಪಧಾಲೋಪಃ । ಹೋ ಹಂತೇರಿತಿ ಘುತ್ವಂ । ಸಂಜಿತಂ । ಜಿ ಜಯೇ । ಕ್ವಿಪ್ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । **ವಾಜಸಾತೌ**—ಅನ್ನಾರ್ಥವಾಗಿ ನಡೆಯುತಕ್ಕ । **ಭರೇ**—ಯುದ್ಧದಲ್ಲಿ । **ಶುನಂ**—ಉತ್ಸಾಹದಿಂದ ವೃದ್ಧಿಯನ್ನು ಹೊಂದತಕ್ಕವನೂ ಅಥವಾ ಸುಖವನ್ನುಂಟುಮಾಡುವವನೂ । **ಮಘವಾನಂ**—ಧನವಂತನೂ । **ಇಂದ್ರಂ**—ನಿರತಿಶಯವಾದ ಐಶ್ವರ್ಯಸಂಪನ್ನನೂ । **ನೃತಮಂ**—ನಾಯಕನಾದವನೂ ಆದ ನಿನ್ನನ್ನು । **ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ (ಹಾಗೆಯೇ) । **ಶೃಣ್ವಂತಂ**—( ನಮ್ಮ ಸ್ತುತಿಗಳನ್ನು ) ಆಲಿಸಿಕೇಳುವವನೂ । **ಉಗ್ರಂ**—ಶತ್ರುಗಳಿಗೆ ಭಯಂಕರನಾದವನೂ । **ಸಮತ್ಸು**—ಯುದ್ಧಗಳಲ್ಲಿ । **ವೃತ್ರಾಣಿ**—ವೃತ್ರನೇ ಮೊದಲಾದ ಅಸುರರನ್ನು । **ಘ್ನಂತಂ**—ಹಿಂಸಿಸಿ ನಾಶಮಾಡುವವನೂ । **ಧನಾನಾಂ**—(ಶತ್ರುಗಳ) ಧನಗಳನ್ನು । **ಸಂಜಿತಂ**—(ನಮಗೆ) ಸೇರಿಸಿ ಕೊಡುವವನೂ ಆದ ನಿನ್ನನ್ನು । **ಊತಯೇ**—ರಕ್ಷಣಾರ್ಥವಾಗಿ । (**ಹುವೇಮ**—ಪ್ರಾರ್ಥಿಸಿ ಕರೆಯುತ್ತೇವೆ).

ಭಾವಾರ್ಥ

ಎಲೈ ಇಂದ್ರನೇ, ಅನ್ನಾರ್ಥವಾಗಿ ನಡೆಯುತಕ್ಕ ಯುದ್ಧದಲ್ಲಿ ಸುಖವನ್ನುಂಟುಮಾಡುವವನೂ, ಧನವಂತನೂ, ನಿರತಿಶಯವಾದ ಐಶ್ವರ್ಯಸಂಪನ್ನನೂ, ನೇತೃವಾದವನೂ ನಮ್ಮ ಸ್ತುತಿಗಳನ್ನು ಆಲಿಸಿಕೇಳುವವನೂ, ಶತ್ರುಗಳಿಗೆ ಭಯಂಕರನೂ, ಯುದ್ಧಗಳಲ್ಲಿ ವೃತ್ರನೇ ಮುಂತಾದ ಅಸುರರನ್ನು ಹಿಂಸಿಸಿ ನಾಶಮಾಡುವವನೂ, ಶತ್ರುಗಳ ಧನಗಳನ್ನು ನಮಗೆ ಸೇರಿಸಿ ಕೊಡುವವನೂ ಆದ ನಿನ್ನನ್ನು ರಕ್ಷಣಾರ್ಥವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

English Translation

We invoke for our protection the opulent Indra, distinguished in this combat, the leader in the food-bestowing (strife), hearing (our praises), terrible in battles, the destroyer of foes, the conqueror of wealth.

## ಐವತ್ತೊಂದನೆಯ ಸೂಕ್ತವು.

ಸಾಯಣಭಾಷ್ಯಂ

**ಚರ್ಷಣೀಧೃತಮಿತಿ ದ್ವಾದಶರ್ಚಂ ತ್ರಯೋದಶಂ ಸೂಕ್ತಂ ವೈಶ್ವಾಮಿತ್ರಮೈಂದ್ರಂ । ಅತ್ರಾನುಕ್ರಮಣಿಕಾ । ಚರ್ಷಣೀಧೃತಂ ದ್ವಾದಶಾದ್ಯಾಂತ್ಯೌ ತೃಚೌ ಜಾಗತಗಾಯತ್ರಾವಿತಿ । ಆದ್ಯಸ್ತೃಚೋ ಜಾಗತೋಽಂತ್ಯಸ್ತೃಚೋ ಗಾಯತ್ರಃ ಶಿಷ್ಟಾ ಋಚಸ್ತ್ರಿಷ್ಟುಭಃ ॥ ಸೂಕ್ತವಿನಿಯೋಗೋ ಲೈಂಗಿಕಃ । ಉಕ್ಥೇ ಕ್ರತೌ ಮೈತ್ರಾವರುಣಶಸ್ತ್ರೇಽನುರೂಪತೃಚಾನಂತರಮಾದ್ಯಸ್ತೃಚಃ ಶಂಸನೀಯಃ । ಸೂತ್ರಿತಂ । ಚ ಚರ್ಷಣೀಧೃತಮಸ್ತಭ್ನಾದ್ದ್ಯಾಮಸುರ ಇತಿ ತೃಚೌ। ಆ. ೬-೧ । ಇತಿ ॥ ವಿಷುವತಿ ನಿಷ್ಕೇವಲ್ಯೇ ನೃಣಾಮು ತ್ವೇತಿ ತೃಚಃ । ವಿಷುವಾನಿತಿ ಖಂಡೇ ಸೂತ್ರಿತಂ । ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈರಿತಿ ತಿಸ್ರಃ । ಆ. ೮-೬ । ಇತಿ ॥ ಬೃಹಸ್ಪತಿಸವೇಽಪ್ಯಯಂ ತೃಚೋ ನಿಷ್ಕೇವಲ್ಯೇ ನಿವಿದ್ಧಾನೀಯಃ । ಸೂತ್ರಿತಂ ಚ । ನೃಣಾಮು ತ್ವೇತಿ ಮಧ್ಯಂದಿನಃ । ಆ. ೯-೫ । ಇತಿ ॥ ಮಹಾವ್ರತೇಽಪಿ ನಿಷ್ಕೇವಲ್ಯೇಽಯಂ ತೃಚಃ ॥**

CC-0. Jangamwadi Math Collection. Digitized by eGangotri

**ದಶರಾತ್ರೇ ಚತುರ್ಥೇಽಹನಿ ಮರುತ್ವತೀಯ ಇಂದ್ರ ಮರುತ್ವ ಇತಿ ತಿಸ್ರಃ । ಷಷ್ಠ್ಯೇಽಹನಿ ಷಷ್ಠಸ್ಯೇತಿ ಖಂಡೇ ಸೂತ್ರಿತಂ । ಇಂದ್ರ ಮರುತ್ವ ಇತಿ ತಿಸ್ರ ಇತಿ ಮರುತ್ವತೀಯಂ । ಆ. ೮-೧ । ಇತಿ ॥ ಬೃಹಸ್ಪತಿಸವೇಽಪಿ ಮರುತ್ವತೀಯಶಸ್ತ್ರೇಽಯಂ ತೃಚೋ ನಿವಿದ್ಧಾನೀಯಃ । ಸೂತ್ರಿತಂ ಚ । ಇಂದ್ರ ಮರುತ್ವ ಇಹ ನೃಣಾಮು ತ್ವೇತಿ ಮಧ್ಯಂದಿನಃ । ಆ ೯-೫ । ಇತಿ । ಆದ್ಯಾ ಮರುತ್ವತೀಯಗ್ರಹಸ್ಯಾನುವಾಕ್ಯಾ । ಸೂತ್ರಿತಂ ಚ । ಮರುತ್ವತೀಯೇನ ಗ್ರಹೇಣ ಚರಂತೀಂದ್ರ ಮರುತ್ವ ಇಹ ಪಾಹಿ ಸೋಮಂ । ಆ. ೫-೧೪ । ಇತಿ ॥ ತೃತೀಯೇ ಪರ್ಯಾಯೇ ಹೋತುಃ ಶಸ್ತ್ರ ಇದಂ ಹ್ಯನ್ವೋಜಸೇತಿ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಇದಂ ಹ್ಯನ್ವೋಜಸಾ ಮಹಾँ ಇಂದ್ರೋ ಯ ಓಜಸಾ । ಆ. ೬-೪ । ಇತಿ ॥**

ಅನುವಾದವು— **ಚರ್ಷಣೀಧೃತಂ** ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿಮೂರನೆಯ ಸೂಕ್ತವು. ಇದರಲ್ಲಿ ಹನ್ನೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ; ಅನುಕ್ರಮಣಿಕೆಯಲ್ಲಿ— **ಚರ್ಷಣೀಧೃತಂ ದ್ವಾದಶಾದ್ಯಾಂತ್ಯೌ ತೃಚೌ ಜಾಗತಗಾಯತ್ರಾವಿತಿ** ಎಂದು ಹೇಳಿರುವುದು. ಎಂದರೆ ಮೊದಲಿನ ಮೂರು ಋಕ್ಕುಗಳು ಜಗತೀಛಂದಸ್ಕವು ; ಕೊನೆಯ ಮೂರು ಋಕ್ಕುಗಳು ಗಾಯತ್ರೀಛಂದಸ್ಕವು ; ಉಳಿದ ಋಕ್ಕುಗಳು ತ್ರಿಸ್ಟುಪ್‌ಛಂದಸ್ಸಿನವು. ಸೂಕ್ತವಿನಿಯೋಗವು ಲೈಂಗಿಕವು. ಉಕ್ಥವೆಂಬ ಯಾಗದಲ್ಲಿ ಮೈತ್ರಾವರುಣಶಸ್ತ್ರಮಂತ್ರಪಠನಕಾಲದಲ್ಲಿ ಅನುರೂಪ ಋಕ್ಕುಗಳನ್ನು (ತೃಚ) ಪಠಿಸಿದಮೇಲೆ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಚರ್ಷಣೀಧೃತಮಸ್ತಭ್ನಾದ್ಯಾಮಸುರ ಇತಿ ತೃಚೌ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೧) ; ವಿಷುವದ್ಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ **ನೃಣಾಮು ತ್ವಾ** ಎಂದು ಮೊದಲಾಗುವ ಮೂರು ಋಕ್ಕುಗಳ (ಈ ಸೂಕ್ತದ ೩-೫ ಋಕ್ಕುಗಳು) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ವಿಷುವಾನ್** ಎಂಬ ಖಂಡದ— **ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈರಿತಿ ತಿಸ್ರಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೬) ; ಬೃಹಸ್ಪತಿಸವವೆಂಬ ಯಾಗದಲ್ಲಿಯೂ ಸಹ ಮೇಲೆ ಹೇಳಿದ **ನೃಣಾಮು ತ್ವಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ನಿಷ್ಕೇವಲ್ಯಶಸ್ತ್ರಮಂತ್ರಗಳ ಪಠನಕಾಲದಲ್ಲಿ ನಿವಿನ್ಮಂತ್ರಗಳನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ನೃಣಾಮು ತ್ವೇತಿ ಮಧ್ಯಂದಿನಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯-೫) ; ಮಹಾವ್ರತದಲ್ಲಿಯೂ ಈ ಮೂರು ಋಕ್ಕುಗಳು ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಪಠಿಸಲ್ಪಡುವವು ; ದಶರಾತ್ರವೆಂಬ ಯಾಗದ ನಾಲ್ಕನೆಯದಿವಸ ಮರುತ್ವತೀಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ **ಇಂದ್ರ ಮರುತ್ವ** ಎಂದು ಮೊದಲಾಗುವ ಮೂರು ಋಕ್ಕುಗಳ (ಈ ಸೂಕ್ತದ ೬-೮ ಋಕ್ಕುಗಳು) ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ- **ಷಷ್ಠ್ಯೇಽಹನಿ ಷಷ್ಠಸ್ಯ** ಎಂಬ ಖಂಡದ ಇಂದ್ರಮರುತ್ವ ಇತಿ ತಿಸ್ರ ಇತಿ **ಮರುತ್ವತೀಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ ೮-೧); ಬೃಹಸ್ಪತಿಸವವೆಂಬ ಯಾಗದಲ್ಲಿಯೂ ಈ ಮೇಲೆ ಹೇಳಿದ ಮೂರು ಋಕ್ಕುಗಳು ಮರುತ್ವತೀಯಶಸ್ತ್ರಮಂತ್ರಗಳಿಗೆ ನಿವಿನ್ಮಂತ್ರಗಳಿಗಾಗಿ ಉಪಯೋಗಿಸಲ್ಪಡಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಇಂದ್ರ ಮರುತ್ವ ಇಹ ನೃಣಾಮು ತ್ವೇತಿ ಮಧ್ಯಂದಿನಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯-೫) ; ಈ ಸೂಕ್ತದ ಮೊದಲನೆಯ ಋಕ್ಕನ್ನು ಮರುತ್ವತೀಯಗ್ರಹದ ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಮರುತ್ವತೀಯೇನ ಗ್ರಹೇಣ ಚರಂತೀಂದ್ರ ಮರುತ್ವ ಇಹ ಪಾಹಿ ಸೋಮಂ**

CC-0. Jangamwadi Math Collection. Digitized by eGangotri

ಎಂಬ ಸೂತ್ರದಿಂದ ವಿವೃತವಾಗುವುದು (ಆ ೫-೧೪); ಇದಲ್ಲದೆ ತೃತೀಯ ಪರ್ಯಾಯದಲ್ಲಿ ಹೋತೃವು ಶಸ್ತ್ರಮಂತ್ರವನ್ನು ಪಠಿಸುವಾಗ— **ಇದಂ ಹ್ಯನ್ವೋಜಸಾ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೧೦-೧೨ ಋಕ್ಕುಗಳು) ಸ್ತೋತ್ರಿಯಸ್ತೃಚವನ್ನಾಗಿ (ಮೂರು ಋಕ್ಕುಗಳನ್ನಾಗಿ) ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಇದಂ ಹ್ಯನ್ವೋಜಸಾ ಮಹಾ ಇಂದ್ರೋ ಯ ಓಜಸಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೪).

---

॥ ಓಂ ॥

## ಸೂಕ್ತ—೫೧

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೫೧ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೫, ೧೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೨ ॥

॥ ಋಷಿಃ—ವಿಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

ಛಂದಃ—೧-೩. ಜಗತೀ । ೪-೯. ತ್ರಿಷ್ಟುಪ್ । ೧೦-೧೨ ಗಾಯತ್ರೀ ॥

---

ಸಂಹಿತಾಪಾಠಃ

ಚರ್ಷಣೀಧೃತಂ ಮಘವಾನಮುಕ್ಥ್ಯ೧ಮಿಂದ್ರಂ ಗಿರೋ ಬೃಹತೀರಭ್ಯನೂಷತ ।
ವಾವೃಧಾನಂ ಪುರುಹೂತಂ ಸುವೃಕ್ತಿಭಿರಮರ್ತ್ಯಂ ಜರಮಾಣಂ ದಿವೇದಿವೇ ॥ ೧ ॥

ಪದಪಾಠಃ

ಚರ್ಷಣಿऽಧೃತಂ । ಮಘऽವಾನಂ । ಉಕ್ಥ್ಯಂ । ಇಂದ್ರಂ । ಗಿರಃ । ಬೃಹತೀಃ । ಅಭಿ । ಅನೂಷತ ।
ವಾವೃಧಾನಂ । ಪುರುऽಹೂತಂ । ಸುವೃಕ್ತಿऽಭಿಃ । ಅಮರ್ತ್ಯಂ । ಜರಮಾಣಂ । ದಿವೇऽದಿವೇ ॥ ೧ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಬೃಹತೀಃ ಪ್ರಭೂತಾ ಗಿರೋಽಸ್ಮದೀಯಾಃ ಸ್ತುತಿಲಕ್ಷಣಾ ವಾಚಶ್ಚರ್ಷಣೀಧೃತಂ ಚರ್ಷಣೀನಾಂ ಮನುಷ್ಯಾಣಾಮಭಿಮತಫಲಪ್ರದಾನೇನ ಧಾರಕಂ ಪೋಷಕಂ । ಯದ್ವಾ । ಆಕೃಷಂತ್ಯನೇನ ಸರ್ವಮಿತಿ ಚರ್ಷಣಿ ಬಲಂ ತದ್ಧಾರಕಂ । ಮಘವಾನಂ ಧನವಂತಮುಕ್ಥ್ಯಮುಕ್ಥೈಃ ಶಸ್ತ್ರೈಃ ಶಂಸನೀಯಂ ವಾವೃಧಾನಂ ಬಲಧನಾದಿಸಂಪತ್ತ್ಯಾ ಪ್ರತಿಕ್ಷಣಂ ವರ್ಧಮಾನಂ ಪುರುಹೂತಂ ಸ್ತೋತೃಭಿರ್ಬಹುವಾರಮಾಹೂತಮಮರ್ತ್ಯಂ ಮರಣಧರ್ಮರಹಿತಂ ಸುವೃಕ್ತಿಭಿಃ ಶೋಭನಸ್ತುತಿವಾಕ್ಯೈರ್ದಿವೇ ಪ್ರತ್ಯಹಂ ಜರಮಾಣಂ ಸ್ತೂಯಮಾನಂ ತಮಿಮಮಿಂದ್ರಮಭ್ಯನೂಷತ । ಅಭಿತಃ ಸರ್ವತಃ ಸ್ತುವಂತು ॥ ಬೃಹತೀಃ । ವಾ ಛಂದಸೀತಿ ಸವರ್ಣದೀರ್ಘಃ। ಅನೂಷತ । ಣೂ ಸ್ತವನೇ । ಅಸ್ಮಾಲ್ಲುಙಃ ಸಿಚ್ । ಧಾತೋಃ ಕುಟಾದಿತ್ವಾತ್ಸಿಚೋ ಙಿತ್ತ್ವೇನ ಗುಣಾಭಾವಃ । ಸುವೃಕ್ತಿಭಿಃ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ। ಯದ್ವಾ । ಸುವೃಕ್ತಯ ಇತಿ ಸ್ತುತಿಕರಣಭೂತಾ ಋಚೋ ವೃಕ್ತಿಶಬ್ದೇನೋಚ್ಯಂತೇ । ಕ್ತಿಚ್ಕ್ತೌ ಚೇತಿ ಕ್ತಿಚ್ । ಕೃತ್ಸ್ವರೇಣಾಂತೋದಾತ್ತಃ । ದಿವೇ ದಿವೇ । ನಿತ್ಯವೀಪ್ಸಯೋರಿತಿ ದ್ವಿರ್ವಚನಂ । ಪರಸ್ಯಾಮ್ರೇಡಿತತ್ವಾದನುದಾತ್ತತ್ವೇ ಪೂರ್ವಪದಸ್ವರಃ ॥

### ಪ್ರತಿಪದಾರ್ಥ

ಚರ್ಷಣೀಧೃತಂ—ಮಾನವರನ್ನು ಪೋಷಿಸುವವನೂ । ಮಘವಾನಂ—ಧನವಂತನೂ । ಉಕ್ಥ್ಯಂ—ಉಕ್ಥರೂಪವಾದ ಸ್ತೋತ್ರದಿಂದ ಸ್ತುತಿಸಲ್ಪಡುವವನೂ । ವಾವೃಧಾನಂ—ಸಂಪತ್ತಿನಿಂದ ವೃದ್ಧಿಯನ್ನು ಹೊಂದುವವನೂ । ಪುರುಹೂತಂ—ಅನೇಕರಿಂದ ಕರೆಯಲ್ಪಡುವವನೂ । ಅಮರ್ತ್ಯಂ—ಮರಣಧರ್ಮರಹಿತನೂ । ಸುವೃಕ್ತಿಭಿಃ—ಶ್ರೇಷ್ಠವಾದ ಸ್ತುತಿವಾಕ್ಯಗಳಿಂದ। ದಿವೇ ದಿವೇ—ಪ್ರತಿದಿನವೂ । ಜರಮಾಣಂ—ಸ್ತುತಿಸಲ್ಪಡುವವನೂ ಆದ । ಇಂದ್ರಂ—ಇಂದ್ರನನ್ನು । ಬೃಹತೀಃ—ಪ್ರಭೂತಗಳಾದ । ಗಿರಃ—ನಮ್ಮ ಸ್ತುತಿವಾಕ್ಯಗಳು । ಅಭ್ಯನೂಷತ—ಪೂರ್ಣವಾಗಿ ಸ್ತುತಿಸಲಿ.

### ಭಾವಾರ್ಥ

ಮಾನವರನ್ನು ಪೋಷಿಸುವವನೂ, ಧನವಂತನೂ, ಉಕ್ಥರೂಪವಾದ ಸ್ತೋತ್ರದಿಂದ ಸ್ತುತಿಸಲ್ಪಡುವವನೂ, ಸಂಪತ್ತಿನಿಂದ ವೃದ್ಧಿಯನ್ನು ಹೊಂದುವವನೂ, ಅನೇಕರಿಂದ ಕರೆಯಲ್ಪಡುವವನೂ, ಮರಣಧರ್ಮರಹಿತನೂ, ಶ್ರೇಷ್ಠವಾದ ಸ್ತುತಿವಾಕ್ಯಗಳಿಂದ ಪ್ರತಿದಿನವೂ ಸ್ತುತಿಸಲ್ಪಡುವವನೂ ಆದ ಇಂದ್ರನನ್ನು ಪ್ರಭೂತಗಳಾದ ನಮ್ಮ ಸ್ತುತಿವಾಕ್ಯಗಳು ಪೂರ್ಣವಾಗಿ ಸ್ತುತಿಸಲಿ.

### English Translation

Let abundant praises celebrate Indra, the stay of man, the possessor of opulence, the adorable, prospering with increase, the invoked of many, the immortal, who is daily to be propitiated with sacred hymns.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಚರ್ಷಣೀಧೃತಂ—ಮನುಷ್ಯಾಣಾಮಭಿಮತಫಲಪ್ರದಾನೇನ ಧಾರಕಂ ಪೋಷಕಂ । ಯದ್ವಾ ಆಕೃಷಂತ್ಯನೇನ ಸರ್ವಮಿತಿ ಚರ್ಷಣಿ ಬಲಂ ತದ್ಧಾರಕಂ ।** ಚರ್ಷಣೀ ಶಬ್ದವು ಮನುಷ್ಯನಾಮಗಳಲ್ಲಿ ಪಠಿತವಾಗಿದೆ (ನಿ. ೩-೭). ಮನುಷ್ಯರು ಮಾಡುವ ಯಜ್ಞಾದಿ ಕರ್ಮಗಳಿಗೆ ಅನುರೂಪವಾದ ಫಲಗಳನ್ನು ಕೊಟ್ಟು ಕಾಪಾಡುವವನಾದ್ದರಿಂದ ಇಂದ್ರನನ್ನು **ಚರ್ಷಣೀಧೃತಂ** ಎಂದು ಕರೆಯಲಾಗಿದೆ. ಅಥವಾ ಸಮಸ್ತವೂ ಆಕರ್ಷಿಸಲ್ಪಡುವುದರಿಂದ ಚರ್ಷಣಿಶಬ್ದಕ್ಕೆ ಬಲವೆಂದು ಅರ್ಥವಾಗುವುದು. ಅಂತಹ ಬಲವನ್ನು ಧರಿಸಿರುವವನು ಎಂದರೆ ಬಲಾಢ್ಯನು ಎಂದು ಇಂದ್ರನನ್ನು ಪ್ರಶಂಸಿಸಿದೆ.

**ಉಕ್ಥ್ಯಂ—ಉಕ್ಥೈಃ ಶಸ್ತ್ರೈಃ ಶಂಸನೀಯಂ ।** ಉಕ್ಥವೆಂದರೆ ಸ್ತೋತ್ರ. ಸ್ತೋತ್ರಗಳಿಂದಲೂ, ಶಸ್ತ್ರಮಂತ್ರಗಳಿಂದಲೂ ಸ್ತುತಿಸಲ್ಪಡುವ ಇಂದ್ರನನ್ನು ಎಂದಭಿಪ್ರಾಯವು.

**ಪುರುಹೂತಂ—ಸ್ತೋತೃಭಿರ್ಬಹುವಾರಮಾಹೂತಂ ।** ಸ್ತೋತ್ರಮಾಡುವ ಜನರಿಂದ ಅನೇಕಾವರ್ತಿ ಕರೆಯಲ್ಪಡುವವನು ಅಥವಾ ಅನೇಕ ಜನರಿಂದ ಎಂದರೆ, ಯಜ್ಞಮಾಡುವ ಯಜಮಾನರು, ಋತ್ವಿಗ್ಜನರು, ಇತರ ಸ್ತೋತೃಗಳು ಮುಂತಾದವರಿಂದ ಆಹ್ವಾನಿಸಲ್ಪಡುವವನು

**ಸುವೃಕ್ತಿಭಿಃ—ಸ್ತುತಿಕರಣಭೂತಾ ಋಚೋ ವೃಕ್ತಿಶಬ್ದೇನೋಚ್ಯಂತೇ ।** ಸ್ತುತಿಪರವಾದ ಋಕ್ಕುಗಳಿಗೆ ವೃಕ್ತಿ ಎಂದು ಹೆಸರು ಯಾಸ್ಕರು ಈ ಶಬ್ದಕ್ಕೆ **ಸುಪ್ರವೃತ್ತಾಭಿಃ ಶೋಭನಾಭಿಃ ಸ್ತುತಿಭಿಃ** (ನಿ. ೨-೨೪) ಉತ್ತಮವಾದ ಸ್ತುತಿವಾಕ್ಯಗಳಿಂದ ಎಂದು ನಿರ್ವಚನವನ್ನು ಹೇಳಿದ್ದಾರೆ.

---

ಸಂಹಿತಾಪಾಠಃ

ಶತಕ್ರತುಮರ್ಣವಂ ಶಾಕಿನಂ ನರಂ ಗಿರೋ ಮ ಇಂದ್ರಮುಪ ಯಂತಿ ವಿಶ್ವತಃ ।
ವಾಜಸನಿಂ ಪೂರ್ಭಿದಂ ತೂರ್ಣಿಮಪ್ತುರಂ ಧಾಮಸಾಚಮಭಿಷಾಚಂ ಸ್ವರ್ವಿದಂ ॥ ೨ ॥

ಪದಪಾಠಃ

ಶತಽಕ್ರತುಂ । ಅರ್ಣವಂ । ಶಾಕಿನಂ । ನರಂ । ಗಿರಃ । ಮೇ । ಇಂದ್ರಂ । ಉಪ । ಯಂತಿ । ವಿಶ್ವತಃ । ವಾಜಽಸನಿಂ । ಪೂಃಽಭಿದಂ । ತೂರ್ಣಿಂ । ಅಪ್ಽತುರಂ । ಧಾಮಽಸಾಚಂ । ಅಭಿಽಸಾಚಂ । ಸ್ವಃಽವಿದಮ್ ॥ ೨ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಮೇ ಮದೀಯಾ ಗಿರಃ ಸ್ತುತಿಲಕ್ಷಣಾ ವಾಚಃ ಶತಕ್ರತುಂ । ಶತಂ ಕ್ರತವೋ ಯಜ್ಞಾ ಯಸ್ಯ ತಂ । ಅರ್ಣವಂ ಪರ್ಜನ್ಯಾತ್ಮನೋದಕವಂತಂ ಶಾಕಿನಂ । ಶಕ್ನೋತ್ಯೇಭಿರಿಂದ್ರ ಇತಿ ಶಾಕಾಃ ಸಹಾಯಭೂತಾ ಮರುತಃ । ತದ್ವಂತಂ। ನರಂ ಸರ್ವಸ್ಯ ಜಗತೋ ನೇತಾರಂ ವಾಜಸನಿಂ ವಾಜಸ್ಯಾನ್ನಸ್ಯ ದಾತಾರಂ ಪೂರ್ಭಿದಂ ಶತ್ರುಪುರಾಂ ಭೇತ್ತಾರಂ ತೂರ್ಣಿಂ ಯುದ್ಧಂ ಪ್ರತಿ ಶೀಘ್ರಂ ಗಂತಾರಮಪ್ತುರಂ ಮೇಘಭೇದನದ್ವಾರಾಪಾಂ ಪ್ರೇರಕಂ ಧಾಮಸಾಚಂ ತೇಜೋ ಭಜಮಾನಂ । ಯದ್ವಾ ಧನಂ ಧಾಮ । ತದರ್ಥಿಭಿಃ ಸಹ ಯೋಜಯಿತಾರಂ । ಅಭಿಷಾಚಂ ಶತ್ರೂಣಾಮಭಿಭವಿತಾರಂ ಸ್ವರ್ವಿದಂ ಸ್ವರ್ಗಸ್ಯ ಲಂಭಕಂ ತಮಿಮಮಿಂದ್ರಂ ವಿಶ್ವತಃ ಸರ್ವತ ಉಪ ಯಂತಿ । ಉಪಗಚ್ಛಂತು ॥ ಅರ್ಣವಂ । ಅರ್ಣೋಽಸ್ಯಾಸ್ತೀತಿ ಮತ್ವರ್ಥೇಽರ್ಣಸಃ ಸಲೋಪಶ್ಚೇತಿ ವಪ್ರತ್ಯಯಃ ಸಕಾರಲೋಪಶ್ಚ । ಪ್ರತ್ಯಯಸ್ವರಃ । ನರಂ । ನಯತೇರ್ಡಿಚ್ಚೇತ್ಯೃಪ್ರತ್ಯಯಃ । ಅಮಃ ಸುಪ್ತ್ವಾದನುದಾತ್ತತ್ವೇ ಪ್ರತ್ಯಯಸ್ವರಃ । ಯಂತಿ । ಇಣ್ ಗತಾವಿತ್ಯಸ್ಯ ಲಟೀಣೋ ಯಣಿತಿ ಯಣ್ । ನಿಘಾತಃ । ವಾಜಸನಿಂ । ಷಣು ದಾನೇ । ಖನಿಕಷ್ಯಂಜ್ಯಸಿವಸೀತ್ಯಾದಿನಾ ಇಪ್ರತ್ಯಯಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ತೂರ್ಣಿಂ । ಞಿತ್ವರಾ ಸಂಭ್ರಮೇ । ವಹಿಶ್ರಿಶ್ರ್ಯಾದಿನಾ ನಿಪ್ರತ್ಯಯಃ । ಜ್ವರತ್ವರೇತ್ಯಾದಿನಾ ಊಟ್ । ನಿದಿತ್ಯತಿದೇಶಾದಾದ್ಯುದಾತ್ತಃ । ಅಪ್ತುರಂ । ತುರ ತ್ವರಣೇ । ಕ್ವಿಪ್ । ಕೃದುತ್ತರಪದಸ್ವರಃ । ಅಭಿಷಾಚಂ । ಷಚ ಸಮವಾಯೇ । ಣ್ಯಂತಸ್ಯ ಕ್ವಿಪ್ ॥

## ಪ್ರತಿಪದಾರ್ಥ

ಮೇ—ನನ್ನ । ಗಿರಃ—ಸ್ತುತಿರೂಪವಾದ ವಾಕ್ಯಗಳು । **ಶತಕ್ರತುಂ**—ಅನೇಕ ಯಜ್ಞಗಳಿಗೆ ಕರ್ತನೂ । **ಅರ್ಣವಂ**—ಪರ್ಜನ್ಯಾತ್ಮನಾಗಿ ಉದಕಪೂರಿತನೂ । **ಶಾಕಿನಂ**—ಮರುತ್ತುಗಳೊಡಗೂಡಿದವನೂ । **ನರಂ**—ನೇತೃವಾದವನೂ । **ವಾಜಸನಿಂ**—ಅನ್ನಕ್ಕೆ ದಾತೃವಾದವನೂ । **ಪೂರ್ಭಿದಂ**—ಶತ್ರುಪಟ್ಟಣಗಳನ್ನು ನಾಶಮಾಡುವವನೂ । **ತೂರ್ಣಿಂ**—ಯುದ್ಧಾಭಿಮುಖವಾಗಿ ಓಡುವವನೂ । **ಅಪ್ತುರಂ**—ವೃಷ್ಟಿಯನ್ನು ಸುರಿಸುವವನೂ । **ಧಾಮಸಾಚಂ**—ತೇಜೋಯುತನೂ । **ಅಭಿಷಾಚಂ**—ಶತ್ರುಗಳನ್ನು ಸೋಲಿಸುವವನೂ । **ಸ್ವರ್ವಿದಂ**—ಸ್ವರ್ಗಪ್ರಾಪಕನೂ ಆದ । **ಇಂದ್ರಂ**—ಇಂದ್ರನನ್ನು । **ವಿಶ್ವತಃ**—ಎಲ್ಲಾ ಕಡೆಗಳಿಂದಲೂ । **ಉಪ ಯಂತಿ**—ಸಮೀಪಿಸಿ ಸೇರಿಕೊಳ್ಳಲಿ.

## ಭಾವಾರ್ಥ

ನನ್ನ ಸ್ತುತಿರೂಪವಾದ ವಾಕ್ಯಗಳು ಅನೇಕ ಯಜ್ಞಗಳಿಗೆ ಕರ್ತನೂ, ಪರ್ಜನ್ಯಾತ್ಮನಾಗಿ ಉದಕಪೂರಿತನೂ ಮರುತ್ತುಗಳೊಡಗೂಡಿದವನೂ, ನೇತೃವಾದವನೂ, ಅನ್ನಕ್ಕೆ ದಾತೃವಾದವನೂ, ಶತ್ರುಪಟ್ಟಣಗಳನ್ನು ನಾಶಮಾಡುವವನೂ, ಯುದ್ಧಾಭಿಮುಖವಾಗಿ ಓಡುವವನೂ, ವೃಷ್ಟಿಯನ್ನು ಸುರಿಸುವವನೂ, ತೇಜೋಯುತನೂ, ಶತ್ರುಗಳನ್ನು ಸೋಲಿಸುವವನೂ, ಸ್ವರ್ಗಪ್ರಾಪಕನೂ ಆದ ಇಂದ್ರನನ್ನು ಎಲ್ಲಾ ಕಡೆಗಳಿಂದಲೂ ಸಮೀಪಿಸಿ ಸೇರಿಕೊಳ್ಳಲಿ.

## English Translation

My praises constantly propitiate Indra, the object of many rites, the sender of rian attended by the Maruts, the leader (of all), the giver of food,

CC-0. Jangamwadi Math Collection. Digitized by eGangotri

the destroyer of cities, the swift (in combat), the prompt (dispenser) of waters, the distributors of riches, the subduer of foes, the conferrer of heaven.

ವಿಶೇಷವಿಷಯಗಳು

**ಶತಕ್ರತುಂ—ಶತಂ ಕ್ರತವೋ ಯಜ್ಞಾ ಯಸ್ಯ ತಂ ।** ನೂರು ಯಜ್ಞಗಳನ್ನು ಮಾಡಿರುವುದರಿಂದ ಇಂದ್ರನನ್ನು ಶತಕ್ರತುವೆಂದು ಭಾಷ್ಯಕಾರರು ವಿವರಿಸಿದಾರೆ. ಆದರೆ ಈ ವಿವರಣೆಯು ಪುರಾಣವಾಕ್ಯಕ್ಕನುಸಾರ ವಾಗಿದೆ. ವೇದಗಳಲ್ಲಿ ಇಂದ್ರನು ನೂರು ಯಜ್ಞಗಳನ್ನು ಮಾಡಿ ಇಂದ್ರಪದವಿಯನ್ನು ಪಡೆದನೆಂದು ಎಲ್ಲಿಯೂ ಹೇಳಿಲ್ಲ. ಈ ಶಬ್ದಕ್ಕೆ ವೇದಾರ್ಥಕ್ಕೆ ಅನುಸಾರವಾಗಿ ಅರ್ಥಮಾಡುವುದಾದರೆ ಶತ ಎಂದರೆ ನೂರಾರು ಅಥವಾ ಅನೇಕವೆಂದೂ ಕ್ರತು ಶಬ್ದಕ್ಕೆ ಕರ್ಮ ಅಥವಾ ಸಾಹಸಕಾರ್ಯವೆಂದೂ ಅರ್ಥಮಾಡಿ ಶತಕ್ರತುವೆಂದರೆ—ವೃತ್ರಹನನವೇ ಮೊದಲಾದ ನೂರಾರು (ಅನೇಕ) ಸಾಹಸಕಾರ್ಯಗಳನ್ನು ಮಾಡಿದವನು ಎಂದು ಅರ್ಥವಿವರಣೆಮಾಡುವುದೇ ಯುಕ್ತವಾಗಿದೆ.

**ಶಾಕಿನಂ—ಶಕ್ನೋತ್ಯೇಭಿರಿಂದ್ರ ಇತಿ ಶಾಕಾಃ ಸಹಾಯಭೂತಾ ಮರುತಃ ತದ್ವಂತಂ ।** ಸಹಾಯ ಮಾಡುವವರಾದ್ದರಿಂದ ಮರುತ್ತುಗಳಿಗೆ ಶಾಕಾಃ ಎಂದು ಹೆಸರು. ಅಂತಹ ಮರುದ್ದೇವತೆಗಳ ಸಹಾಯವನ್ನು ಪಡೆದಿರುವ ಇಂದ್ರನನ್ನು ಶಾಕೀ ಎಂದು ಕರೆಯಲಾಗಿದೆ.

**ಪೂರ್ಭಿದಂ—ಶತ್ರುಪುರಾಂ ಭೇತ್ತಾರಂ ।** ಶತ್ರುಪಟ್ಟಣಗಳನ್ನು ನಾಶಮಾಡುವವನು. ಪುರಾಂ ಭಿಂದುಃ ಇತ್ಯಾದಿ ವಿಶೇಷಣಗಳು ಇಂದ್ರನು ಶತ್ರುನಗರಗಳನ್ನು ನಾಶಮಾಡುವವನೆಂದು ಅನೇಕ ಋಕ್ಕುಗಳಲ್ಲಿ ವರ್ಣಿತವಾಗಿದೆ.

**ಧಾಮಸಾಚಂ—ತೇಜೋ ಭಜಮಾನಂ । ಯದ್ವಾ ಧನಂ ಧಾಮ । ತದರ್ಥಿಭಿಃ ಸಹ ಯೋಜಯಿತಾರಂ ।** ತೇಜಸ್ಸಿನಿಂದ ಬೆಳಗುವ ; ಅಥವಾ ಧಾಮಶಬ್ದಕ್ಕೆ ಧನವೆಂದು ಅರ್ಥಮಾಡಿದಲ್ಲಿ ಧನವನ್ನು ತನ್ನನ್ನು ಸ್ತುತಿಸುವ ಜನರಿಗೆ ಒದಗಿಸಿಕೊಡುವವನೆಂದು ಎರಡುವಿಧವಾದ ಅರ್ಥವನ್ನು ಭಾಷ್ಯಕಾರರು ವಿವರಿಸಿದಾರೆ

**ಸ್ವರ್ವಿದಂ—ಸ್ವರ್ಗಸ್ಯ ಲಂಭಕಂ ।** ಸ್ವರ್ಗವನ್ನು ಹೊಂದುವವನು ಎಂದರೆ ಸ್ವರ್ಗಕ್ಕೆ ಹೋಗುವವನು ಅಥವಾ ಸ್ವರ್ಗದಲ್ಲಿ ವಾಸಿಸುವವನು ಅಥವಾ ಜನರಿಗೆ ಸ್ವರ್ಗವನ್ನು ದೊರಕಿಸಿಕೊಡುವವನು ಎಂದಭಿಪ್ರಾಯವು.

ಸಂಹಿತಾಪಾಠಃ

ಆಕರೇ ವಸೋರ್ಜರಿತಾ ಪನಸ್ಯತೇಽನೇಹಸಃ ಸ್ತುಭ ಇಂದ್ರೋ ದುವಸ್ಯತಿ ।

ವಿವಸ್ವತಃ ಸದನ ಆ ಹಿ ಪಿಪ್ರಿಯೇ ಸತ್ರಾಸಾಹಮಭಿಮಾತಿಹನಂ ಸ್ತುಹಿ ॥

ಪದಪಾಠಃ

ಆಽಕರೇ । ವಸೋಃ । ಜರಿತಾ । ಪನಸ್ಯತೇ । ಅನೇಹಸಃ । ಸ್ತುಭಃ । ಇಂದ್ರಃ । ದುವಸ್ಯತಿ ।

ವಿವಸ್ವತಃ । ಸದನೇ । ಆ । ಹಿ । ಪಿಪ್ರಿಯೇ । ಸತ್ರಾಽಸಹಂ । ಅಭಿಮಾತಿಽಹನಂ । ಸ್ತುಹಿ ॥ ೩ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಜರಿತಾ ಶತ್ರೂಣಾಂ ಜರಯಿತೇಂದ್ರ ಆಕರೇ । ಆಕೀರ್ಯತೇ ಯದ್ವಾರ್ಥಂ ಧನಮತ್ರೇತ್ಯಾ-ಕರೋ ಯುದ್ಧಂ । ತಸ್ಮಿನ್ನಸೋರ್ಥನಸ್ಯ ಸ್ಥಾನಭೂತೇ ಯುದ್ಧೇ ಪನಸ್ಯತೇ । ಸರ್ವೈಃ ಸ್ತೂಯತೇ । ಯದ್ವಾ ವಸೋಃ । ವಸತ್ಯಾಭಿಮುಖ್ಯೇನ ತಿಷ್ಠತೀತಿ ವಸುಃ ಶತ್ರುಸ್ತಸ್ಯ ಜರಯಿತೇತಿ ಯೋಜನೀಯಂ । ಸ ಇಂದ್ರೋಽನೇಹಸೋಽಪಾಪಾಃ ಸ್ತುಭಃ ಸ್ತುತೀರ್ದುವಸ್ಯತಿ । ಪರಿಚರತಿ । ತಾಸಾಂ ಫಲಂ ಪ್ರಯ-ಚ್ಛನ್ ಪೂಜಯತೀತ್ಯರ್ಥಃ । ಕಿಂಚ ಸ ಇಂದ್ರೋ ವಿವಸ್ವತೋ ವಿಶೇಷೇಣಾಗ್ನಿಹೋತ್ರಾರ್ಥಂ ವಸತೋ ಹವಿಷ್ಮತೋ ವಾ ಯಜಮಾನಸ್ಯ ಸದನೇ ಗೃಹ ಆ ಪಪ್ರಿಯೇ ಹಿ । ಸೋಮಪಾನಾದಿನಾತ್ಯಂತಂ ಪ್ರೀತೋ ಭವತಿ ಖಲು । ಸತ್ರಾಸಾಹಂ ಶತ್ರೂಣಾಮೇವ ಹಂತಾರಂ ಯದ್ವಾ ಮರುದ್ಭಿಃ ಸಹ ಶತ್ರೂಣಾಮಭಿಭವಿ-ತಾರಂ ಅತ ಏವಾಭಿಮಾತಿಹನಂ ಶತ್ರೂಣಾಂ ಹಂತಾರಮಿಂದ್ರಂ ಸ್ತುಹಿ । ಹೇ ವಿಶ್ವಾಮಿತ್ರೇತಿ ॥ ಆಕರೇ ಕ್ಟಾ ವಿಕ್ಷೇಪೇ ।. ಅಧಿಕರಣ ಋದೋರಬಿತ್ಯಪ್ । ಥಾಥಾದಿಸ್ವರೇಣಾಂತೋದಾತ್ತಃ । ಜರಿತಾ । ಜೄಷ್ ವಯೋಹಾನಾವಿತ್ಯಸ್ಯಾಂತರ್ಭಾವಿತಣ್ಯರ್ಥಸ್ಯ ತೃಚಿ ರೂಪಂ । ಚಿತ್ತ್ವಾದಂತೋದಾತ್ತಃ । ಪನಸ್ಯತೇ । ಪನಸ್ಯತಿಃ ಸ್ತುತಿಕರ್ಮಾ । ತಸ್ಯ ಕರ್ಮಣಿ ಲಟಿ ರೂಪಂ । ನಿಘಾತಃ । ಅನೇಹಸಃ । ಹಂತೇರ್ನಞ್ಯು-ಪಪದೇ ನಞ್ ಹನ ಏಹ ಚೇತ್ಯಸಿಪ್ರತ್ಯಯ ಏಹ ಇತ್ಯಯಂ ಚಾದೇಶೋ ಧಾತೋಃ । ನಞ್‌ಸುಭ್ಯಾಮಿತಿ ಸ್ವರೇಣಾಂತೋದಾತ್ತಃ । ಸ್ತುಭಃ । ಸ್ತೋಭತಿರರ್ಚತಿಕರ್ಮಾ । ಕ್ವಿಪ್ । ದುವಸ್ಯತಿ । ದುವಃ ಪರಿಚರಣ-ಮಾತ್ಮನ ಇಚ್ಛತೀತ್ಯರ್ಥೇ ಕ್ಯಚ್ । ನಿಘಾತಃ । ಪಪ್ರಿಯೇ । ಪ್ರೀಞ್ ತರ್ಪಣೇ । ಲಿಟಿ ರೂಪಂ । ಹಿಯೋಗಾದನಿಘಾತಃ ॥

ಪ್ರತಿಪದಾರ್ಥ

ಜರಿತಾ—ಶತ್ರುನಾಶಕನಾದ । ಇಂದ್ರಃ—ಇಂದ್ರನು । ಆಕರೇ—ಯುದ್ಧದಲ್ಲಿ । **ವಸೋಃ**—ಧನ ಲಾಭಾರ್ಥವಾಗಿ । **ಪನಸ್ಯತೇ**—(ಎಲ್ಲರಿಂದಲೂ) ಸ್ತುತಿಸಲ್ಪಡುತ್ತಾನೆ । **ಅನೇಹಸಃ**—ಪಾಪರಹಿತಗಳಾದ । **ಸ್ತುಭಃ**—ಸ್ತುತಿಗಳನ್ನು । **ದುವಸ್ಯತಿ**—ಸೇವಿಸುತ್ತಾನೆ । **ವಿವಸ್ವತಃ**—ಯಜಮಾನನ । **ಸದನೇ**—ಯಜ್ಞಗೃಹ ದಲ್ಲಿ । **ಆ ಪಪ್ರಿಯೇ**—ಸೋಮಾದಿ ಪಾನಗಳಿಂದ ತೃಪ್ತನಾಗುತ್ತಾನೆ । (ಎಲೈ ವಿಶ್ವಾಮಿತ್ರನೇ) **ಸತ್ರಾಸಾಹಂ**—ಶತ್ರುಗಳನ್ನು ಜಯಿಸುವವನೂ । **ಅಭಿಮಾತಿಹನಂ**—ಅಹಂಕಾರಿಯಾದ ಶತ್ರುಗಳನ್ನು ಕೊಲ್ಲುವವನೂ ಆದ ಇಂದ್ರನನ್ನು । **ಸ್ತುಹಿ**—ಸ್ತುತಿಸು.

ಭಾವಾರ್ಥ

ಶತ್ರುನಾಶಕನಾದ ಇಂದ್ರನು ಯುದ್ಧದಲ್ಲಿ ಧನಲಾಭಾರ್ಥವಾಗಿ ಎಲ್ಲರಿಂದಲೂ ಸ್ತುತಿಸಲ್ಪಡುತ್ತಾನೆ. ಪಾಪರಹಿತಗಳಾದ ಸ್ತುತಿಗಳನ್ನು ಸೇವಿಸುತ್ತಾನೆ. ಯಜಮಾನನ ಯಜ್ಞಗೃಹಗಳಲ್ಲಿ ಸೋಮಾದಿಪಾನಗಳಿಂದ ತೃಪ್ತನಾಗುತ್ತಾನೆ. ಎಲೈ ವಿಶ್ವಾಮಿತ್ರನೇ, ಶತ್ರುಗಳನ್ನು ಜಯಿಸುವವನೂ, ಅಹಂಕಾರಿಯಾದ ಶತ್ರುಗಳನ್ನು ಕೊಲ್ಲುವವನೂ ಆದ ಇಂದ್ರನನ್ನು ಸ್ತುತಿಸು.

CC-0. Jangamwadi Math Collection. Digitized by eGangotri

## English Translation

Indra, the enfeebler (of adversaries), is praised as a mine of wealth; he is propitiated by righteous commendations; he is gratified in the dwelling of the offerer of oblations: glorify Indra, the conquerer, the destroyer of his enemies.

### ವಿಶೇಷವಿಷಯಗಳು

**ಆಕರೇ ವಸೋಃ— ಕ್ಯಾ ವಿಕ್ಷೇಪೇ । ಆಕೀರ್ಯತೇ ಧನಮತ್ರೇತ್ಯಾಕರೋ ಯುದ್ಧಂ ತಸ್ಮಿನ್ ।** ಇಡು, ಸಂಗ್ರಹಿಸು ಎಂಬರ್ಥವುಳ್ಳ ಕ್ಯಾ ಧಾತುವಿನಿಂದ ಆಕರಶಬ್ದವು ನಿಷ್ಪನ್ನವಾಗಿದೆ. ಯುದ್ಧದಲ್ಲಿ ಶತ್ರುಗಳನ್ನು ಸೋಲಿಸಿ ಅವರಲ್ಲಿರುವ ಧನವನ್ನು ಜಯಿಸುವವರು ಶೇಖರಿಸುವುದರಿಂದ ಯುದ್ಧಕ್ಕೆ ಆಕರವೆಂದು ಹೆಸರು ಎಂದು ಭಾಷ್ಯಕಾರರು ವಿವರಿಸಿದಾರೆ.

**ಅನೇಹಸಃ ಸ್ತುಭ ಇಂದ್ರೋ ದುವಸ್ಯತಿ— ಅಪಾಪಾಃ ಸ್ತುತೀಃ ಪರಿಚರತಿ । ತಾಸಾಂ ಫಲಂ ಪ್ರಯಚ್ಛನ್ ಪೂಜಯತೀತ್ಯರ್ಥಃ ।** ಪಾಪರಹಿತವಾದ ಸ್ತುತಿಗಳಿಂದ ಇಂದ್ರನನ್ನು ಸ್ತೋತ್ರಮಾಡುವರು. ಅಂತಹ ಜನರಿಗೆ ಇಂದ್ರನು ಫಲವನ್ನು ಕೊಟ್ಟು ಗೌರವಿಸುವನೆಂದಭಿಪ್ರಾಯವು.

**ವಿವಸ್ವತಃ ಸದನೇ ಆ ಹಿ ಪಿಪ್ರಿಯೇ ವಿಶೇಷೇಣಾಗ್ನಿಹೋತ್ರಾರ್ಥಂ ವಸತೋ ಹವಿಷ್ಮತೋ ವಾ ಯಜಮಾನಸ್ಯ ಗೃಹೇ ಸೋಮಪಾನಾದಿನಾತ್ಯಂತಂ ಪ್ರೀತೋ ಭವತಿ ಖಲು ।** ಅಗ್ನಿಹೋತ್ರವೇ ಮೊದಲಾದ ಸತ್ಕರ್ಮಾನುಷ್ಠಾನದಿಂದ ವಾಸಮಾಡುತ್ತಾ ಹವಿರಾದಿಗಳನ್ನು ಅರ್ಪಿಸಲು ಸಿದ್ಧರಾಗಿರುವ ಯಜಮಾನರ ಮನೆಯಲ್ಲಿ ಇಂದ್ರನು ಸೋಮಪಾನಮಾಡುತ್ತಾ ಸಂತೋಷದಿಂದಿರುವನೆಂದು ಇಲ್ಲಿ ವರ್ಣಿಸಿದೆ

---

### ಸಂಹಿತಾಪಾಠಃ

ನೃಣಾಮು ತ್ವಾ ನೃತಮಂ ಗೀರ್ಭಿರುಕ್ಥೈರಭಿ ಪ್ರ ವೀರಮರ್ಚತಾ ಸಬಾಧಃ ।
ಸಂ ಸಹಸೇ ಪುರುಮಾಯೋ ಜಿಹೀತೇ ನಮೋ ಅಸ್ಯ ಪ್ರದಿವ ಏಕ ಈಶೇ ॥

### ಪದಪಾಠಃ

ನೃಣಾಂ । ಊಂ ಇತಿ । ತ್ವಾ । ನೃಽತಮಂ । ಗೀಃಽಭಿಃ । ಉಕ್ಥೈಃ । ಅಭಿ । ಪ್ರ । ವೀರಂ । ಅರ್ಚತ । ಸಽಬಾಧಃ ।
ಸಂ । ಸಹಸೇ । ಪುರುಽಮಾಯಃ । ಜಿಹೀತೇ । ನಮಃ । ಅಸ್ಯ । ಪ್ರಽದಿವಃ । ಏಕಃ । ಈಶೇ ॥ ೪ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಹೇ ಇಂದ್ರ ಸಬಾಧಃ। ರಕ್ಷೋಘ್ನಮಂತ್ರೋಚ್ಚಾರಣೇನ ತದ್ವಿಷಯಬಾಧಯಾ ಸಹ ವರ್ತಂತ ಇತಿ ಸಬಾಧ ಋತ್ವಿಜಃ। ನೃಣಾಂ ನೃತಮಂ ಮನುಷ್ಯಾಣಾಮತಿಶಯೇನ ಸ್ವಕರ್ಮಣಿ ನೇತಾರಂ ವೀರಂ ಸಾಮರ್ಥ್ಯೋಪೇತಂ ತ್ವಾಂ ಗೀರ್ಭಿಃ ಸ್ತುತಿಸಾಧನಭೂತೈರ್ವಾಕ್ಯೈರುಕ್ಥೈಃ ಶಸ್ತ್ರೈಶ್ಚಾಭ್ಯಾಭಿಮುಖ್ಯೇನ ಪ್ರಾರ್ಚತ। ಪ್ರಕರ್ಷೇಣಾರ್ಚಂತಿ। ಪುರುಮಾಯೋ ವೃತ್ರಹನನಾದಿಬಹುಕರ್ಮಾ ಸ ಇಂದ್ರಃ ಸಹಸೇ ಬಲಾಯ ಸಂ ಜಿಹೀತೇ। ಗಮನೋದ್ಯಮಂ ಕರೋತಿ। ಕಿಂಚ ಪ್ರದಿವಃ ಪುರಾತನ ಏಕೋಽಸಹಾಯಃ ಸ ಇಂದ್ರೋ ನಮೋ ನಮಸೋಽಸ್ಯ ಹವಿರ್ಲಕ್ಷಣಸ್ಯಾನ್ನಸ್ಯೇಶೇ। ಈಷ್ಟೇ। ಯದ್ವಾ ಅಸ್ಯ ಸರ್ವಸ್ಯ ಜಗತ ಈಷ್ಟೇ। ತಸ್ಮಾ ಇಂದ್ರಾಯ ನಮಃ॥ ನೃಣಾಂ। ನಾಮನ್ಯತರಸ್ಯಾಮಿತಿ ವಿಭಕ್ತೇರುದಾತ್ತತ್ವಂ। ಅರ್ಚತ। ಅರ್ಚತೇರ್ಲಟಿ ಝೋಸ್ತ್ರಾದೇಶಃ ತಿಙಾಂ ಙಃೋ ಭವಂತೀತಿ ವಚನಾತ್। ಸಬಾಧಃ। ಬಾಧೃ ವಿಲೋಡನೇ। ಕ್ವಿಪ್। ವೋಪಸರ್ಜನಸ್ಯೇತಿ ಸಹಸ್ಯ ಸತ್ವಂ। ಕೃದುತ್ತರಪದಸ್ವರಃ। ಪುರುಮಾಯಃ। ಅಂತೋದಾತ್ತಪ್ರಕರಣೇ ತ್ರಿಚಕ್ರಾದೀನಾಮುಪಸಂಖ್ಯಾನಮಿತ್ಯಂತೋದಾತ್ತತ್ವಂ। ಈಶೇ। ಈಶ ಐಶ್ವರ್ಯೇ ಇತ್ಯಸ್ಯ ಲಟಿ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ। ನಿಘಾತಃ॥

### ಪ್ರತಿಪದಾರ್ಥ

(ಎಲೈ ಇಂದ್ರನೇ) ಸಬಾಧಃ—ಋತ್ವಿಕ್ಕುಗಳು। ನೃಣಾಂ—ಮಾನವರಿಗೆಲ್ಲಾ। ನೃತಮಂ—ಅತಿಶಯವಾಗಿ ನೇತೃವಾದವನೂ। ವೀರಂ—ಸಾಮರ್ಥ್ಯಯುಕ್ತನೂ ಆದ। ತ್ವಾ—ನಿನ್ನನ್ನು। ಗೀರ್ಭಿಃ—ಸ್ತುತಿರೂಪವಾದ ವಾಕ್ಯಗಳಿಂದಲೂ। ಉಕ್ಥೈಃ—ಶಸ್ತ್ರರೂಪವಾದ ಮಂತ್ರಗಳಿಂದಲೂ। ಅಭಿ—ನಿನ್ನ ಎದುರಾಗಿ ಕುಳಿತು। ಪ್ರ ಅರ್ಚತ—ಅತಿಶಯವಾಗಿ ಪೂಜಿಸುತ್ತಾರೆ। ಪುರುಮಾಯಃ—ಅನೇಕ ಪರಾಕ್ರಮ ಕಾರ್ಯಕರ್ತನಾದ ಇಂದ್ರನು। ಸಹಸೇ—ಬಲದ ಸಂಪಾದನೆಗಾಗಿ। ಸಂ ಜಿಹೀತೇ—ಸಂಚರಿಸಲಿಚ್ಛಿಸುತ್ತಾನೆ। ಪ್ರದಿವಃ—ಪುರಾತನನೂ। ಏಕಃ—ಅಸಹಾಯನೂ ಆದ ಇಂದ್ರನು। ನಮಃ ಅಸ್ಯ—ಹವಿಸ್ಸಿನ ರೂಪದ ಈ ಅನ್ನಕ್ಕಾಗಿ। ಈಶೇ—ಇಚ್ಛಿಸುತ್ತಾನೆ.

### ಭಾವಾರ್ಥ

ಎಲೈ ಇಂದ್ರನೇ, ಋತ್ವಿಕ್ಕುಗಳು ಮಾನವರಿಗೆಲ್ಲಾ ಅತಿಶಯವಾಗಿ ನೇತೃವಾದವನೂ, ಸಾಮರ್ಥ್ಯಯುಕ್ತನೂ ಆದ ನಿನ್ನನ್ನು ಸ್ತುತಿರೂಪವಾದ ವಾಕ್ಯಗಳಿಂದಲೂ, ಶಸ್ತ್ರರೂಪವಾದ ಮಂತ್ರಗಳಿಂದಲೂ ನಿನ್ನ ಎದುರಾಗಿ ಕುಳಿತು ಅತಿಶಯವಾಗಿ ಪೂಜಿಸುತ್ತಾರೆ. ಅನೇಕ ಪರಾಕ್ರಮಕಾರ್ಯಕರ್ತನಾದ ಇಂದ್ರನು ಬಲದ ಸಂಪಾದನೆಗಾಗಿ ಸಂಚರಿಸಲಿಚ್ಛಿಸುತ್ತಾನೆ. ಪುರಾತನನೂ, ಅಸಹಾಯನೂ ಆದ ಇಂದ್ರನು ಹವಿಸ್ಸಿನ ರೂಪದ ಈ ಅನ್ನಕ್ಕಾಗಿ ಇಚ್ಛಿಸುತ್ತಾನೆ.

### English Translation

The priests glorify you, heroic leader of men, with praises and with prayers: Indra, the author of many delusions, exerts himself for (the acquirement of) strength: he from of old is the lord of this (oblation).

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಸಬಾಧಃ—ರಕ್ಷೋಘ್ನಮಂತ್ರೋಚ್ಚಾರಣೇನ ತದ್ವಿಷಯಬಾಧಯಾ ಸಹ ವರ್ತಂತ ಇತಿ ಸಬಾಧ ಋತ್ವಿಜಃ ।** ಯಜ್ಞಾದಿಗಳಲ್ಲಿ ರಾಕ್ಷಸರೇ ಮೊದಲಾದವರು ವಿಘ್ನವನ್ನುಂಟುಮಾಡುವರು. ಅದರ ಪರಿಹಾರಕ್ಕಾಗಿ ಋತ್ವಿಜರು ರಕ್ಷೋಘ್ನಮಂತ್ರಗಳನ್ನು ಪಠಿಸುವರು. ಆದುದರಿಂದ ರಾಕ್ಷಸಬಾಧೆಯಿಂದ ಸಹಿತರಾದ ಋತ್ವಿಜರಿಗೆ ಸಬಾಧಃ ಎಂದು ಹೆಸರು ಎಂದು ಸಬಾಧಶಬ್ದದ ಅವಯವಾರ್ಥವನ್ನು ವಿವರಿಸಿರುವರು. ಯಾಸ್ಕರು ಸಬಾಧಃ ಎಂಬ ಶಬ್ದವನ್ನು ಋತ್ವಿಜ್ನಾಮಗಳಲ್ಲಿ ಪಠಿಸಿರುವರು. (ನಿ ೩-೧೮)

**ಪುರುಮಾಯಃ - ವೃತ್ರಹನನಾದಿ ಬಹುಕರ್ಮಾ ।** ಶತ್ರುಸಂಹಾರಕಾರ್ಯದಲ್ಲಿ ಇಂದ್ರನು ಅನೇಕವಿಧವಾದ ಮಾಯಗಳನ್ನೂ (ಉಪಾಯ, ಯುಕ್ತಿ) ಸಾಹಸವನ್ನೂ ಪ್ರದರ್ಶಿಸುವುದರಿಂದ ಇಂದ್ರನನ್ನು ಪುರುಮಾಯಃ— ಅನೇಕ ಸಾಹಸಕೃತ್ಯಗಳನ್ನು ಮಾಡಿದವನು ಎಂದು ವರ್ಣಿಸಿದೆ

**ನಮಃ ಅಸ್ಯ ಪ್ರದಿವಃ ಏಕಃ ಈಶೇ— ಪುರಾತನಃ ಅಸಹಾಯಃ ಸ ಇಂದ್ರೋ ಹವಿರ್ಲಕ್ಷಣಸ್ಯಾನ್ನಸ್ಯ ಈಷ್ಟೇ । ಯದ್ವಾ ಅಸ್ಯ ಸರ್ವಸ್ಯ ಜಗತ ಈಷ್ಟೇ । ತಸ್ಮಾ ಇಂದ್ರಾಯ ನಮಃ ।** ನಮಃ ಎಂಬ ಶಬ್ದಕ್ಕೆ ಅನ್ನವೆಂದು ಅರ್ಥಮಾಡುವುದಾದರೆ (ನಿ. ೩-೯) ಪುರಾತನನೂ, ಅಸಹಾಯಶೂರನೂ ಆದ ಇಂದ್ರನು ಹವಿರ್ಲಕ್ಷಣಭೂತವಾದ ಅನ್ನಕ್ಕೆ ಸ್ವಾಮಿಯು ಎಂದರೆ ಹವಿಸ್ಸನ್ನು ಇಂದ್ರನಿಗೆ ಅರ್ಪಿಸಬೇಕು ಎಂದೂ ನಮಃ ಶಬ್ದಕ್ಕೆ ನಮಸ್ಕಾರವೆಂದು ಅರ್ಥಮಾಡುವುದಾದರೆ— ಈ ಸಮಸ್ತ ಜಗತ್ತಿಗೂ ಇಂದ್ರನೇ ಸ್ವಾಮಿಯು. ಅಂತಹ ಇಂದ್ರನಿಗೆ ನಮಸ್ಕಾರವು ಎಂದೂ ಈ ವಾಕ್ಯಕ್ಕೆ ಎರಡು ವಿಧವಾದ ಅರ್ಥಮಾಡಬಹುದೆಂದು ಭಾಷ್ಯಕಾರರ ವಿವರಣೆಯು.

---

ಸಂಹಿತಾಪಾಠಃ

ಪೂರ್ವೀರಸ್ಯ ನಿಷ್ಷಿಧೋ ಮರ್ತ್ಯೇಷು ಪುರೂ ವಸೂನಿ ಪೃಥಿವೀ ಬಿಭರ್ತಿ ।
ಇಂದ್ರಾಯ ದ್ಯಾವ ಓಷಧೀರುತಾಪೋ ರಯಿಂ ರಕ್ಷಂತಿ ಜೀರಯೋ ವನಾನಿ ॥ ೫ ॥

ಪದಪಾಠಃ

ಪೂರ್ವೀಃ । ಅಸ್ಯ । ನಿಃಽಸಿಧಃ । ಮರ್ತ್ಯೇಷು । ಪುರು । ವಸೂನಿ । ಪೃಥಿವೀ । ಬಿಭರ್ತಿ ।
ಇಂದ್ರಾಯ । ದ್ಯಾವಃ । ಓಷಧೀಃ । ಉತ । ಆಪಃ । ರಯಿಂ । ರಕ್ಷಂತಿ । ಜೀರಯಃ । ವನಾನಿ ॥ ೫ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

**ಮರ್ತ್ಯೇಷು ಮನುಷ್ಯೇಷ್ವಸ್ಯೇಂದ್ರಸ್ಯ ನಿಷ್ಷಿಧೋಽನುಶಾಸನಾನಿ ಪೂರ್ವೀರ್ಹಿತೋಪದೇಶಾದಿಭಿಃ ಪ್ರಭೂತಾನಿ ನಾನಾಪ್ರಕಾರಾಣಿ ಭವಂತಿ । ಇಂದ್ರಸ್ಯ ಶಾಸಿತೃತ್ವೇ ಮಂತ್ರಃ । ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ ಪುರುನಿಷ್ಷಿಧೇ । ಋಗ್ವೇ. ೧-೧೦-೫ । ಇತಿ । ತಥಾ ಶಾಸಕಾಯ ತಸ್ಮಾ ಇಂದ್ರಾಯ ಪೃಥಿವೀ ಪುರು ಪುರೂಣಿ ಬಹೂನಿ ವಸೂನಿ ಧನಾನಿ ಬಿಭರ್ತಿ । ಅಂತರ್ಧಾರಯತಿ । ಕಿಂಚ ದ್ಯಾವೋ ದ್ಯುಲೋಕಾ ಓಷಧೀರೋಷಧಯ ಉತ ಅಪಿ ಚಾಪೋ ಜಲಾನಿ ಜೀರಯಃ । ಜೀರ್ಯಂತ ಇತಿ ಜೀರಯೋ ಮನುಷ್ಯಾಃ । ವನಾನಿ ವೃಕ್ಷಾಶ್ಚ ಏತೇ ಸರ್ವ ಇಂದ್ರಸ್ಯಾಜ್ಞಯಾ ತದುಪಭೋಗಯೋಗ್ಯಂ ರಯಿಂ ಧನಂ ರಕ್ಷಂತಿ ॥ ನಿಷ್ಷಿಧಃ । ಷಿಧು ಗತ್ಯಾಂ । ಕ್ವಿಪ್ । ಸಂಹಿತಾಯಾಂ ನಿಸಃ ಸಕಾರೇಣೇಣೋ ವ್ಯವಧಾನಂ ಛಾಂದಸತ್ವಾದನಾದೃತ್ಯೋಪಸರ್ಗಾತ್ಸುನೋತೀತ್ಯಾದಿನಾ ಷತ್ವಂ । ನಿಸಃ ಸಕಾರಸ್ಯ ಷ್ಟುನಾ ಷ್ಟುರಿತಿ ಷತ್ವಂ ॥**

## ಪ್ರತಿಪದಾರ್ಥ

**ಮರ್ತ್ಯೇಷು**—ಮಾನವರಲ್ಲಿ । **ಅಸ್ಯ**—ಈ ಇಂದ್ರನ । **ನಿಃಷಿಧಃ**—ಅನುಗ್ರಹರೂಪವಾದ ಉಪದೇಶಗಳು । **ಪೂರ್ವೀಃ**—ಅನೇಕವಾಗಿವೆ । **ಇಂದ್ರಾಯ**—ಉಪದೇಶಕನಾದ ಈ ಇಂದ್ರನಿಗಾಗಿ । **ಪೃಥಿವೀ**—ಪೃಥಿವಿಯು । **ಪುರು**—ಅನೇಕವಾದ । **ವಸೂನಿ**—ಧನಗಳನ್ನು । **ಬಿಭರ್ತಿ**—ಧರಿಸಿರುತ್ತದೆ । **ದ್ಯಾವಃ**—ದ್ಯುಲೋಕಗಳೂ । **ಓಷಧೀಃ**—ಓಷಧಿಗಳೂ । **ಉತ**—ಮತ್ತು । **ಆಪಃ**—ಉದಕಗಳೂ । **ಜೀರಯಃ**—ಮಾನವರೂ । **ವನಾನಿ**—ವೃಕ್ಷಗಳೂ । **ರಯಿಂ**—ಧನವನ್ನು । **ರಕ್ಷಂತಿ**—ರಕ್ಷಿಸಿಡುತ್ತವೆ

## ಭಾವಾರ್ಥ

ಈ ಇಂದ್ರನ ಅನುಗ್ರಹರೂಪವಾದ ಉಪದೇಶಗಳು ಮಾನವರಲ್ಲಿ ಅನೇಕವಾಗಿವೆ ಉಪದೇಶಕನಾದ **ಈ** ಇಂದ್ರನಿಗಾಗಿ ಪೃಥಿವಿಯು ಅನೇಕವಾದ ಧನಗಳನ್ನು ಧರಿಸಿರುತ್ತದೆ. ದ್ಯುಲೋಕಗಳೂ, ಓಷಧಿಗಳೂ ಮತ್ತು ಉದಕಗಳೂ, ಮಾನವರೂ, ವೃಕ್ಷಗಳೂ ಸಹ ಇವನಿಗಾಗಿ ಧನವನ್ನು ರಕ್ಷಿಸಿ ಇಡುತ್ತವೆ.

## English Translation

Many are his prohibitions (against evil enjoined) to men : many are the treasures that the earth enshrines : for Indra the heavens, the plants, the waters, men and priests, preserve their riches.

## ವಿಶೇಷವಿಷಯಗಳು

**ಪೂರ್ವೀಃ ಅಸ್ಯ ನಿಷ್ಷಿಧಃ ಮರ್ತ್ಯೇಷು-ಅನುಶಾಸನಾನಿ ಹಿತೋಪದೇಶಾದಿಭಿಃ ನಾನಾಪ್ರಕಾರಾಣಿ ಭವಂತಿ** । ಇಂದ್ರನ ಅನುಶಾಸನೆಗಳು ಅಥವಾ ನಿಯಮಗಳು ಮನುಷ್ಯರ ವಿಷಯದಲ್ಲಿ ಹಿತೋಪದೇಶರೂಪವಾಗಿ ಬಹಳವಾಗಿರುವವು. ಇಲ್ಲಿ ನಿಷ್ಷಿಧಃ ಎಂಬ ಶಬ್ದಕ್ಕೆ ಅನುಶಾಸನಗಳು, ನಿಯಮಗಳು ಎಂದು ಭಾಷ್ಯಕಾರರು ಅರ್ಥ-ವಿವರಣೆಮಾಡಿದಾರೆ. ಎಂದರೆ ದುಷ್ಟರನ್ನು ಶಿಕ್ಷಿಸಿ ನಿಯಮನಮಾಡುವುದೇ ಅನುಶಾಸನವೆಂದು ಹೇಳಲ್ಪಡುವುದು. ಈ ಅಭಿಪ್ರಾಯವುಳ್ಳ—

CC-0. Jangamwadi Math Collection. Digitized by eGangotri

**ಉಕ್ಥಮಿಂದ್ರಾಯ ಶಂಸ್ಯಂ ವರ್ಧನಂ ಪುರುನಿಷ್ಷಿಧೇ ।**

(ಋ. ಸಂ. ೧-೧೦-೫)

ಎಂಬ **ಋಕ್ಕನ್ನು** ಉದಾಹರಣೆಯಾಗಿ ಹೇಳಿರುವರು. ಈ ಋಕ್ಕಿನಲ್ಲಿರುವ ಪುರುನಿಷ್ಷಿಧೇ ಎಂಬ ಶಬ್ದಕ್ಕೆ— **ಬಹೂನಾಂ ಶತ್ರೂಣಾಂ ನಿಷೇಧಕಾರಿಣೇ** ಎಂದರೆ ಅನೇಕ ಶತ್ರುಗಳನ್ನು ಸೋಲಿಸಿ ಅವರನ್ನು ನಿಯಮನದಲ್ಲಿಟ್ಟಿರುವವನು ಎಂದು ಅರ್ಥವಿವರಣೆ ಮಾಡಿದಾರೆ. ಆದುದರಿಂದ ನಿಷ್ಷಿಧವೆಂದರೆ ದುಷ್ಟಶಿಕ್ಷಣ ಮತ್ತು ಶಿಷ್ಟರಕ್ಷಣವೆಂಬ ಶಾಸನಗಳು ಇಂದ್ರನಿಂದ ಆಚರಿಸಲ್ಪಡುವವೆಂದು ಸೂಚಿತವಾಗುವುದು.

**ಪುರು ವಸೂನಿ**.......**ವನಾನಿ**— ಇಂತಹ ಮಹಾಮಹಿಮನಾದ ಇಂದ್ರನ ಆಜ್ಞಾನುಸಾರವಾಗಿ ಭೂಮಿಯು ಅನೇಕವಿಧವಾದ ಸಸ್ಯಾದಿರೂಪವಾದ ಧನಗಳನ್ನು ಧರಿಸುವುದು ; ದ್ಯುಲೋಕ ಓಷಧಿಗಳು, ಜಲ, ವೃಕ್ಷಗಳು ಇವುಗಳೆಲ್ಲವೂ ಇಂದ್ರನ ಆಜ್ಞೆಯಂತೆ ತಮ್ಮ ತಮ್ಮಲ್ಲಿರುವ ಧನಗಳನ್ನು ಎಂದರೆ ಸಾರಭೂತವಾದ ಶ್ರೇಷ್ಠವಸ್ತುಗಳನ್ನು ಇಂದ್ರನ ಭೋಗಸಾಧನೆಗಾಗಿ ರಕ್ಷಿಸುವವು ಎಂದು ಋಕ್ಕಿನ ಮುಖ್ಯಾಭಿಪ್ರಾಯವು.

ಸಂಹಿತಾಪಾಠಃ

ತುಭ್ಯಂ ಬ್ರಹ್ಮಾಣಿ ಗಿರ ಇಂದ್ರ ತುಭ್ಯಂ ಸತ್ರಾ ದಧಿರೇ ಹರಿವೋ ಜುಷಸ್ವ।

ಬೋಧ್ಯಾಪಿರವಸೋ ನೂತನಸ್ಯ ಸಖೇ ವಸೋ ಜರಿತೃಭ್ಯೋ ವಯೋ ಧಾಃ ॥ ೬ ॥

ಪದಪಾಠಃ

ತುಭ್ಯಂ । ಬ್ರಹ್ಮಾಣಿ । ಗಿರಃ । ಇಂದ್ರ । ತುಭ್ಯಂ । ಸತ್ರಾ । ದಧಿರೇ । ಹರಿऽವಃ । ಜುಷಸ್ವ ।

ಬೋಧಿ । ಆಪಿಃ । ಅವಸಃ । ನೂತನಸ್ಯ । ಸಖೇ । ವಸೋ ಇತಿ । ಜರಿತೃಽಭ್ಯಃ । ವಯಃ । ಧಾಃ ॥ ೬ ॥

ಸಾಯಣಭಾಷ್ಯಂ

ಹೇ ಹರಿವೋಽಶ್ವವನ್ನಿಂದ್ರ ತುಭ್ಯಂ ತ್ವದರ್ಥಂ ಬ್ರಹ್ಮಾಣಿ ಸ್ತೋತ್ರಾಣಿ ತಥಾ ತುಭ್ಯಂ ಗಿರಃ ಶಾಸ್ತ್ರಾಣಿ ಚ ಸತ್ರಾ ಸತ್ಯಮೇವ ದಧಿರೇ । ಋತ್ವಿಜೋ ಧಾರಯಂತಿ । ತಾನಿ ಜುಷಸ್ವ । ಸೇವಸ್ವ । ಹೇ ವಸೋ ಸರ್ವಸ್ಯ ವಾಸಯಿತಃ ಸಖೇ ಸಖಿಭೂತ ಹೇ ಇಂದ್ರ ಆಪಿರ್ವ್ಯಾಪ್ತಸ್ತ್ವಂ ನೂತನಸ್ಯ ನವತರಮವಸೋಽನ್ನಲಕ್ಷಣಂ ಹವಿರ್ಬೋಧಿ । ತ್ವದರ್ಥಂ ದೀಯಮಾನಂ ಜಾನೀಹಿ । ಅತಸ್ತ್ವಂ ಜರಿತೃಭ್ಯಃ ಸ್ತೋತೃಭ್ಯೋಽಸ್ಮಭ್ಯಂ ವಯೋಽನ್ನಂ ಧಾಃ । ದೇಹಿ ॥ ತುಭ್ಯಂ। ಜಯಿ ಚೇತ್ಯಾದ್ಯುದಾತ್ತತ್ವಂ। ಜುಷಸ್ವ। ಜುಷೀ ಪ್ರೀತಿಸೇವನಯೋರಿತ್ಯಸ್ಯ ಲೋಟಿ ರೂಪಂ । ವಾಕ್ಯಭೇದಾದನಿಘಾತಃ । ಬೋಧಿ । ಬುಧ ಅವಗಮನ ಇತ್ಯಸ್ಯ ಲೋಟಿ ವಾ ಛಂದಸೀತಿ ಹೇರ್ವಿಕಲ್ಪೇನ ಪಿತ್ತ್ವಾದತ್ರ ಪಿತ್ತ್ವಾದ್ಗುಣಃ । ಹುಝಲ್ಭ್ಯೋ ಹೇರ್ಧಿರಿತಿ ಧ್ಯಾದೇಶಃ । ಜಃತ್ವಾದಂತೋದಾತ್ತಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಹರಿವಃ**—ಅಶ್ವಯುಕ್ತನಾದ । **ಇಂದ್ರ**—ಇಂದ್ರನೇ । **ತುಭ್ಯಂ**—ನಿನ್ನನ್ನುದ್ದೇಶಿಸಿಯೇ । **ಬ್ರಹ್ಮಾಣಿ**—ಸ್ತೋತ್ರಗಳನ್ನೂ । **ತುಭ್ಯಂ**-ನಿನಗಾಗಿಯೇ । **ಗಿರಃ**-ಶಸ್ತ್ರಮಂತ್ರಗಳನ್ನೂ । **ಸತ್ರಾ**-ಸತ್ಯವಾಗಿಯೂ । **ದಧಿರೇ**-(ಋತ್ವಿಕ್ಕುಗಳು) ಹಿಡಿದಿದ್ದಾರೆ । **ಜುಷಸ್ವ**—(ಅವುಗಳನ್ನು) ಸೇವಿಸು । **ವಸೋ** ವಾಸಸ್ಥಾನಗಳನ್ನು ಕಲ್ಪಿಸುವವನೂ । **ಸಖೇ**—ಸಖಿಭೂತನೂ ಆದ ಇಂದ್ರನೇ । **ಆಪಿಃ**—ಸರ್ವತ್ರವ್ಯಾಪ್ತನಾದ ನೀನು । **ನೂತನಸ್ಯ**—ನವೀನವಾದುದೂ । **ಅವಸಃ**—ಹವಿಸ್ಸಿನ ರೂಪದ್ದೂ ಆದ ಅನ್ನವನ್ನು । **ಬೋಧಿ**—ತಿಳಿ । **ಜರಿತೃಭ್ಯಃ**—ಸ್ತೋತೃಗಳಾದ ನಮಗೆ । **ವಯಃ**—ಅನ್ನವನ್ನು । **ಧಾಃ**—ಕೊಡು ।

### ಭಾವಾರ್ಥ

ಅಶ್ವಯುಕ್ತನಾದ ಇಂದ್ರನೇ, ನಿನ್ನನ್ನುದ್ದೇಶಿಸಿಯೇ ಋತ್ವಿಕ್ಕುಗಳು ಸ್ತೋತ್ರಗಳನ್ನೂ, ಶಸ್ತ್ರಮಂತ್ರಗಳನ್ನೂ ಹಿಡಿದಿದ್ದಾರೆ. ಅವುಗಳನ್ನು ಸೇವಿಸು. ವಾಸಸ್ಥಾನಗಳನ್ನು ಕಲ್ಪಿಸುವವನೂ, ಸಖೀಭೂತನೂ ಆದ ಇಂದ್ರನೇ, ಸರ್ವತ್ರವ್ಯಾಪ್ತನಾದ ನೀನು ನವೀನವಾದುದೂ, ಹವಿಸ್ಸಿನ ರೂಪದ್ದೂ ಆದ ಅನ್ನವನ್ನು ತಿಳಿದು ಅದನ್ನು ಸ್ವೀಕರಿಸಿ ಸ್ತೋತ್ರಗಳಾದ ನಮ್ಮಿಂದ ಅಪೇಕ್ಷಿತವಾದ ಅನ್ನವನ್ನು ಕೊಡು.

### English Translation

To you, Indra, (the pious) address prayers, and praises, and sacrifices: accept them, lord of horses: giver of dwellings, friend (of man), you are the pervader (of all things), partake of this present oblations, and grant food to the worshippers.

### ವಿಶೇಷವಿಷಯಗಳು

**ಹರಿವಃ**—ಅಶ್ವವನ್ನಿಂದ್ರ । ಇಂದ್ರನ ಕುದುರೆಗಳಿಗೆ ಹರೀ ಎಂದು ಹೆಸರು (ನಿ. ೨-೨೮) ಅಂತಹ ಅಶ್ವಗಳುಳ್ಳ ಎಲೈ ಇಂದ್ರನೇ ಎಂದು ಇಂದ್ರನನ್ನು ಹರಿವಃ ಎಂಬ ಶಬ್ದದಿಂದ ಸಂಬೋಧಿಸಿದೆ.

**ತುಭ್ಯಂ ಬ್ರಹ್ಮಾಣಿ ತುಭ್ಯಂ ಗಿರಃ ಸತ್ರಾ ದಧಿರೇ ಜುಷಸ್ವ**—ಎಲೈ ಇಂದ್ರನೇ, ಋತ್ವಿಜರು ನಿನಗಾಗಿ ಸ್ತೋತ್ರಗಳನ್ನೂ, ಸ್ತುತಿವಾಕ್ಯಗಳನ್ನೂ ಪಠಿಸುತ್ತಿರುವರು. ಅದನ್ನು ಸೇವಿಸು ಎಂದರೆ ಕೇಳಿ ಪ್ರೀತನಾಗು ಎಂದು ಮುಖ್ಯಾಭಿಪ್ರಾಯವು. ಇಲ್ಲಿ ತುಭ್ಯಂ ಎಂಬ ಶಬ್ದವು ಇಂದ್ರನಲ್ಲಿ ಸ್ತೋತೃಜನಕ್ಕೆ ಇರುವ ಪ್ರೀತ್ಯತಿಶಯವನ್ನು ಸೂಚಿಸುವುದಕ್ಕಾಗಿ ಎರಡಾವರ್ತಿ ಪಠಿತವಾಗಿದೆ.

**ಸಖೇ ವಸೋ ಆಪಿಃ ನೂತನಸ್ಯ ಅವಸಃ ಬೋಧಿ—ಸರ್ವಸ್ಯ ವಾಸಯಿತಃ ಸಖಿಭೂತ ಹೇ ಇಂದ್ರ ವ್ಯಾಪ್ತಸ್ತ್ವಂ ನೂತನಸ್ಯ ಅನ್ನಲಕ್ಷಣಂ ಹವಿಃ ತ್ವದರ್ಥಂ ದೀಯಮಾನಂ ಜಾನೀಹಿ ।** ಸರ್ವರಿಗೂ ನಿವಾಸ ಸ್ಥಾನವನ್ನು ಕಲ್ಪಿಸುವ ಮತ್ತು ಸ್ನೇಹಿತನಂತೆ ಹಿತಕಾರಿಯಾದ ಎಲೈ ಇಂದ್ರನೇ, ಸರ್ವವ್ಯಾಪಿಯಾದ ನೀನು ಈಗತಾನೆ ಹೊಸದಾಗಿ ನಾವು ನಿನಗಾಗಿ ಅರ್ಪಿಸಲು ಸಿದ್ಧಪಡಿಸಿರುವ ಹವೀರೂಪವಾದ ಅನ್ನವು ನಿನಗಾಗಿಯೇ ಸಿದ್ಧವಾಗಿದೆಯೆಂದು ತಿಳಿ.



CC-0. Jangamwadi Math Collection. Digitized by eGangotri

**ಜರಿತೃಭ್ಯಃ ವಯಃ** ಧಾಃ—ಸ್ತೋತೃಭ್ಯೋಽಸ್ಮಭ್ಯಮನ್ನಂ ದೇಹಿ । ಸ್ತೋತ್ರಮಾಡುತ್ತಿರುವ ನನಗೆ ಅನ್ನವನ್ನು ಕೊಟ್ಟು ಅನುಗ್ರಹಿಸು. **ಅವಃ, ವಯಃ** ಎಂಬ ಶಬ್ದಗಳು ಅನ್ನನಾಮಗಳಲ್ಲಿ ಪಠಿತವಾಗಿವೆ. (ನಿ ೨-೯)

---

ಸಂಹಿತಾಪಾಠಃ

ಇಂದ್ರ ಮರುತ್ವ ಇಹ ಪಾಹಿ ಸೋಮಂ ಯಥಾ ಶಾರ್ಯಾತೇ ಅಪಿಬಃ ಸುತಸ್ಯ ।

ತವ ಪ್ರಣೀತೀ ತವ ಶೂರ ಶರ್ಮನ್ನಾ ವಿವಾಸಂತಿ ಕವಯಃ ಸುಯಜ್ಞಾಃ ॥

ಪದಪಾಠಃ

ಇಂದ್ರ । ಮರುತ್ವಃ । ಇಹ । ಪಾಹಿ । ಸೋಮಂ । ಯಥಾ । ಶಾರ್ಯಾತೇ । ಅಪಿಬಃ । ಸುತಸ್ಯ ।

ತವ । ಪ್ರಽನೀತೀ । ತವ । ಶೂರ । ಶರ್ಮನ್ । ಆ । ವಿವಾಸಂತಿ । ಕವಯಃ । ಸುಽಯಜ್ಞಾಃ ॥ ೭ ॥

ಸಾಯಣಭಾಷ್ಯಂ

ಹೇ ಮರುತ್ವೋ ಮರುದ್ಭಿಸ್ತದ್ವನ್ ಹೇ ಇಂದ್ರ ತ್ವಮಿಹಾಸ್ಮದೀಯೇ ಯಜ್ಞ ಆಗತ್ಯ ಸೋಮಂ ಪಾಹಿ । ಪಿಬ । ಯಥಾ ತ್ವಂ ಪೂರ್ವಂ ಶಾರ್ಯಾತೇ ಶರ್ಯಾತೇಃ ಪುತ್ರೇ ತಸ್ಮಿನ್ರಾಜನಿ ಯಜ್ಞಂ ಕುರ್ವಾಣೇ ಸುತಸ್ಯಾಭಿಷುತಂ ಸೋಮಮಪಿಬಃ ತಥಾತ್ರಾಪಿ ಪಿಬೇತ್ಯರ್ಥಃ । ಇಂದ್ರಃ ಶಾರ್ಯಾತಸ್ಯ ಯಜ್ಞೇ ಸೋಮರಸಾನಪಿಬದಿತ್ಯೇಷೋಽರ್ಥಃ ಕೌಷೀತಕೇ ಸ್ಪಷ್ಟಮುಕ್ತಃ । ತಥಾ ಮಂತ್ರವರ್ಣಶ್ಚ । ಆ ಸ್ಮಾ ರಥಂ ವೃಷಪಾಣೇಷು ತಿಷ್ಠಸಿ ಶಾರ್ಯಾತಸ್ಯ ಪ್ರಭೃತಾ ಯೇಷು ಮಂದಸೇ । ಋಗ್ವೇ. ೧-೫೧-೧೨ । ಇತಿ । ಹೇ ಶೂರೇಂದ್ರ ತವ ಸಂಬಂಧಿನಿ ಶರ್ಮನ್ ಶರ್ಮಣಿ ನಿರ್ಭಾಧಸ್ಥಾನೇ ಸ್ಥಿತಾಃ ಸುಯಜ್ಞಾಃ ಸುಷ್ಠು ಕೃತಯಜ್ಞಾಃ ಕವಯೋ ಮೇಧಾವಿನೋ ಯಜಮಾನಾಃ ಪ್ರಣೀತೀ ತವ ಹವಿಷಾಂ ಪ್ರಣಯನೇನ ಪ್ರಾಪಣೇನ ಆ ಸಮಂತಾದ್ವಿವಾಸಂತಿ । ತ್ವಾಮೇವ ಪರಿಚರಂತಿ । ವಿವಾಸತಿಃ ಪರಿಚರಣಕರ್ಮಾ ॥ ಶಾರ್ಯಾತೇ । ಶರ್ಯಾತೇರಪತ್ಯಮಿತ್ಯರ್ಥೇ ತಸ್ಯೇದಮಿತ್ಯಣ್‌ಪ್ರತ್ಯಯಃ । ಅಪಿಬಃ । ಯಥಾಯೋಗಾದ-ನಿಘಾತಃ । ಅಡಾಗಮಸ್ವರಃ । ಪ್ರಣೀತೀ । ನಯತೇರ್ಭಾವೇ ಕ್ತಿನ್ । ತಾದೌ ಚ ನಿತಿ ಕೃತೀತಿ ಗತೇಃ ಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ತೃತೀಯಾಯಾಃ ಸವರ್ಣದೀರ್ಘಃ । ಉಪಸರ್ಗಾದಸಮಾಸೇಽಪಿ ಣತ್ವಂ ॥

ಪ್ರತಿಪದಾರ್ಥ

**ಮರುತ್ವಃ**—ಮರುತ್ತುಗಳೊಡನೆ ಕೂಡಿದ । **ಇಂದ್ರ**—ಇಂದ್ರನೇ । **ಯಥಾ**—ಯಾವ ರೀತಿಯಲ್ಲಿ । **ಶಾರ್ಯಾತೇ**—ಶರ್ಯಾತನ ಪುತ್ರನ ಯಜ್ಞಕಾಲದಲ್ಲಿ । **ಸುತಸ್ಯ**—ಹಿಂಡಲ್ಪಟ್ಟ ಸೋಮವನ್ನು । **ಅಪಿಬಃ**—ಪಾನ ಮಾಡಿದೆಯೋ ಅದರಂತೆ । **ಇಹ**— ಈ ಯಜ್ಞಕರ್ಮದಲ್ಲಿ । **ಸೋಮಂ**—ಸೋಮರಸವನ್ನು । **ಪಾಹಿ**— ಪಾನ

CC-0. Jangamwadi Math Collection. Digitized by eGangotri

ಮಾಡು । **ಶೂರ**—ಪರಾಕ್ರಮಿಯಾದ ಇಂದ್ರನೇ । **ತವ**—ನಿನ್ನ ಪೂಜಾವಿಷಯವಾದ । **ಶರ್ಮನ್**—ಕಾರ್ಯಗಳಲ್ಲಿ ನಿರತರಾದವರೂ । **ಸುಯಜ್ಞಾಃ**—ಶ್ರೇಷ್ಠವಾದ ಯಜ್ಞಕರ್ತರೂ। **ಕವಯಃ**—ಮೇಧಾವಿಗಳೂ ಆದ ಯಜಮಾನರ **ತವ**—ನಿನಗೆ । **ಪ್ರಣೀತೀ**—ಹವಿಸ್ಸನ್ನು ಅರ್ಪಿಸುವುದರ ಮೂಲಕ । **ಆ ವಿವಾಸಂತಿ**—(ನಿನ್ನನ್ನು) ಸುತ್ತಲೂ ಪೂಜಿಸುತ್ತಾರೆ.

ಭಾವಾರ್ಥ

ಮರುತ್ತುಗಳೊಡಗೂಡಿದ ಇಂದ್ರನೇ, ಹಿಂದೆ ಯಾವ ರೀತಿಯಲ್ಲಿ ಶರ್ಯಾತಪುತ್ರನ ಯಜ್ಞಕಾಲದಲ್ಲಿ ಹಿಂಡಲ್ಪಟ್ಟ ಸೋಮರಸವನ್ನು ಪಾನಮಾಡಿದೆಯೋ ಆದರಂತೆ ಈ ಯಜ್ಞಕರ್ಮದಲ್ಲೂ ಅರ್ಪಿತವಾದ ಸೋಮವನ್ನು ಪಾನಮಾಡು. ಪರಾಕ್ರಮಿಯಾದ ಇಂದ್ರನೇ, ನಿನ್ನ ಪೂಜಾವಿಷಯವಾದ ಕಾರ್ಯಗಳಲ್ಲಿ ನಿರತರಾದವರೂ, ಶ್ರೇಷ್ಠವಾದ ಯಜ್ಞಕರ್ತರೂ, ಮೇಧಾವಿಗಳೂ ಆದ ಯಜಮಾನರು ಹವಿಸ್ಸನ್ನು ಅರ್ಪಿಸುವುದರ ಮೂಲಕ ನಿನ್ನನ್ನು ಸುತ್ತಲೂ ಸೇವಿಸುತ್ತಾರೆ.

English Translation

Indra, accompanied by the Maruts, drink the soma at this ceremony as you have drunk of the libation of the son of Sharyati : your far-seeing and devout worshippers, being in security, adore you through their offerings

ವಿಶೇಷವಿಷಯಗಳು

**ಮರುತ್ವಃ—ಮರುದ್ಭಿಸ್ತದ್ವನ್** । ಮರುದ್ದೇವತೆಗಳೊಡನೆ ಸಹಿತನಾದ ಎಲೈ ಇಂದ್ರನೇ ಎಂದರ್ಥವು. ಇಲ್ಲಿ ಇಂದ್ರನನ್ನು ಮರುದ್ದೇವತೆಗಳೊಡನೆ ನಮ್ಮ ಯಜ್ಞಭೂಮಿಗೆ ಬಂದು ಸೋಮಪಾನಮಾಡಬೇಕೆಂದು ಪ್ರಾರ್ಥಿಸಿದೆ.

**ಯಥಾ ಶಾರ್ಯಾತೇ ಅಪಿಬಃ ಸುತಸ್ಯ**—ಎಲೈ ಇಂದ್ರನೇ, ನೀನು ಹಿಂದೆ ಶರ್ಯಾತಿ ಎಂಬುವನ ಪುತ್ರನು ಮಾಡಿದ ಯಜ್ಞದಲ್ಲಿ ಬಂದು ಯಾವ ರೀತಿ ಸೋಮಪಾನಮಾಡಿದೆಯೋ ಅದೇರೀತಿ ನಮ್ಮ ಯಜ್ಞಭೂಮಿಗೂ ಬಂದು ಸೋಮವನ್ನು ಪಾನಮಾಡಬೇಕೆಂದು ಋಷಿಯು ಪ್ರಾರ್ಥಿಸಿದ್ದಾನೆ. ಇಂದ್ರನು ಶರ್ಯಾತಿಪುತ್ರನ ಯಜ್ಞದಲ್ಲಿ ಸೋಮಪಾನಮಾಡಿದ ವಿಷಯವು ಕೌಶೀತಕೀಬ್ರಾಹ್ಮಣದಲ್ಲಿ ಸ್ಪಷ್ಟವಾಗಿ ಹೇಳಿದೆಯೆಂದು ಭಾಷ್ಯಕಾರರು ಹೇಳಿ ಋಗ್ವೇದದಲ್ಲಿಯೂ ಸಹ ಈ ವಿಷಯದ ಪ್ರಸ್ತಾಪವಿರುವ—

**ಆ ಸ್ಮಾ ರಥಂ ವೃಷಪಾಣೇಷು ತಿಷ್ಠಸಿ ಶಾರ್ಯಾತಸ್ಯ ಪ್ರಭೃತಾ ಯೇಷು ಮಂದಸೇ ।**
(ಋ ಸಂ. ೧-೫೧-೧೨)

ಎಂಬ ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದಾರೆ.

ಶರ್ಯಾತಿಃ ಎಂಬುವನು ಒಬ್ಬ ರಾಜರ್ಷಿಯು. ಅವನ ಪುತ್ರನನ್ನು ಶಾರ್ಯಾತನೆಂದು ಕರೆಯುವ ರೂಢಿ ಇದೆ. ಹಿಂದೆ ಈ ಶಾರ್ಯಾತನು ಯಾಗಮಾಡಿದಾಗ ಭೃಗುಗೋತ್ರೋದ್ಭವನಾದ ಚ್ಯವನಮಹರ್ಷಿಯು ಅಶ್ವಿನೀ ದೇವತೆಗಳಿಗೆ ಮೊದಲು ಹವಿರ್ಭಾಗವನ್ನು ಕೊಟ್ಟನು. ಆಗ ಇಂದ್ರನಿಗೆ ವಿಶೇಷವಾಗಿ ಕೋಪಬಂದಿತು. ಶಾರ್ಯಾತನು ಇದನ್ನರಿತು ಇಂದ್ರನನ್ನು ನಾನಾರೀತಿ ಸ್ತುತಿಸಿ ಅವನನ್ನು ಪ್ರಸನ್ನನನ್ನಾಗಿ ಮಾಡಿಕೊಂಡು ಅಭಿಷವಾದಿಕರ್ಮ

CC-0. Jangamwadi Math Collection. Digitized by eGangotri

ಗಳಿಂದ ಸೋಮರಸವನ್ನು ಸಂಸ್ಕರಿಸಿ ಶುದ್ಧವಾದ ಆ ಸೋಮವನ್ನು ಇಂದ್ರನಿಗೆ ಸಮರ್ಪಿಸಿದನು. ಇಂದ್ರನು ಸಂತುಷ್ಟನಾಗಿ ಶಾರ್ಯಾತನ ಯಜ್ಞದಲ್ಲಿ ಸೋಮರಸವನ್ನು ಯಥೇಷ್ಟವಾಗಿ ಪಾನಮಾಡಿದನು ಎಂಬ ಇತಿಹಾಸವಿದೆ. ಅದನ್ನೇ ಇಲ್ಲಿ ಋಷಿಯು ವರ್ಣಿಸಿದಾನೆ. ಈ ಶಾರ್ಯಾತನ ಹೆಸರು ಪ್ರಕೃತ ಋಕ್ಕಿನಲ್ಲಿಯೂ, ಋ ಸಂ ೧-೫೧-೧೨ ರಲ್ಲಿಯೂ, ಐತರೇಯಬ್ರಾಹ್ಮಣ ೪-೩೨-೭, ಶತಪಥಬ್ರಾಹ್ಮಣ ೪-೧-೫-೧, ಜೈಮಿನೀಯಬ್ರಾಹ್ಮಣ ೩-೧೨೧ ಮೊದಲಾದ ಸ್ಥಳಗಳಲ್ಲಿ ಸೂಚಿತವಾಗಿರುವುದು.

---

ಸಂಹಿತಾಪಾಠಃ

ಸ ವಾವಶಾನ ಇಹ ಪಾಹಿ ಸೋಮಂ ಮರುದ್ಭಿರಿಂದ್ರ ಸಖಿಭಿಃ ಸುತಂ ನಃ ।
ಜಾತಂ ಯತ್ತ್ವಾ ಪರಿ ದೇವಾ ಅಭೂಷನ್ಮಹೇ ಭರಾಯ ಪುರುಹೂತ ವಿಶ್ವೇ ॥ ೮ ॥

ಪದಪಾಠಃ

ಸಃ । ವಾವಶಾನಃ । ಇಹ । ಪಾಹಿ । ಸೋಮಂ । ಮರುತ್ಽಭಿಃ । ಇಂದ್ರ । ಸಖಿಽಭಿಃ । ಸುತಂ । ನಃ । ಜಾತಂ । ಯತ್ । ತ್ವಾ । ಪರಿ । ದೇವಾಃ । ಅಭೂಷನ್ । ಮಹೇ । ಭರಾಯ । ಪುರುಽಹೂತ । ವಿಶ್ವೇ ॥

ಸಾಯಣಭಾಷ್ಯಂ

ಹೇ ಇಂದ್ರ ವಾವಶಾನಃ ಸೋಮಂ ಕಾಮಯಮಾನಃ ಸ ತಾದೃಶಸ್ತ್ವಂ ಸಖಿಭಿಃ ಸಮಾನಖ್ಯಾನೈರ್ಮರುದ್ಭಿಃ ಸಹ ನೋಽಸ್ಮತ್ಸಂಬಂಧಿನೀಹಾಸ್ಮಿನ್ಯಜ್ಞೇ ಸುತಮಭಿಷುತಂ ಸೋಮಂ ಪಾಹಿ । ಪಿಬ । ಹೇ ಪುರುಹೂತ ಪುರುಭಿರಾಹೂತೇಂದ್ರ ಜಾತಂ ಪಾನೇನ ಪ್ರಬಲಂ ಸಂಪನ್ನಂ ಯತ್ ಯಂ ತ್ವಾಂ ವಿಶ್ವೇ ಸರ್ವೇ ದೇವಾ ಮಹೇ ಮಹತೇ ಭರಾಯ । ಹ್ರಿಯಂತೇ ಯೋಧಾನಾಮಾಯೂಂಷ್ಯತ್ರೇತಿ ಭರಃ ಸಂಗ್ರಾಮಃ । ತಸ್ಮೈ ಸಂಗ್ರಾಮಾಯ ಪರ್ಯಭೂಷನ್ । ಸರ್ವತೋಽಲಮಕುರ್ವನ್ ॥ ವಾವಶಾನಃ । ವಶೇರ್ಯಙ್ಲುಕಿ ಚಾನಶಿ ರೂಪಂ । ಚಿತ್ತ್ವಾದಂತೋದಾತ್ತಃ । ಅಭೂಷನ್ । ಭೂಷ ಅಲಂಕಾರೇ । ಭ್ವಾದಿಃ । ಲಙಿ ರೂಪಂ । ಯದ್ವೃತ್ತಯೋಗಾದನಿಘಾತಃ । ಭರಾಯ । ಹೃಞ್ ಹರಣೇ । ಅಧಿಕರಣೇ ಘಃ । ಹೃಗ್ರಹೋರ್ಭಶ್ಛಂದಸೀತಿ ಹಕಾರಸ್ಯ ಭಕಾರಃ । ವೃಷಾದಿತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ಪುರುಹೂತ—ಅನೇಕರಿಂದ ಕರೆಯಲ್ಪಡತಕ್ಕ । ಇಂದ್ರ—ಇಂದ್ರನೇ । ಜಾತಂ—ಹುಟ್ಟಿದೊಡನೆಯೇ ಸೋಮಪಾನವನ್ನು ಮಾಡುವುದರಿಂದ ಶಕ್ತಿಯುತನಾದ । ಯತ್ ತ್ವಾ—ಯಾವ ನಿನ್ನನ್ನು । ವಿಶ್ವೇ ದೇವಾಃ—

CC-0. Jangamwadi Math Collection. Digitized by eGangotri

ಸಮಸ್ತ ದೇವತೆಗಳೂ | **ಮಹೇ**—ಮಹತ್ತಾದ | **ಭರಾಯೆ**—ಸಂಗ್ರಾಮಕಾರ್ಯಕ್ಕಾಗಿ | **ಪರಿ ಅಭೂಷನ್**—ಸಿದ್ಧ ಪಡಿಸಿದರೋ | **ಸಃ**—ಅಂತಹ ನೀನು | **ಪಾವಶಾನಃ**—ಸೋಮಪಾನಮಾಡಲಿಚ್ಛೆಯುಳ್ಳವನಾಗಿ | **ಸಖಿಭಿಃ**—ನಿನ್ನ ಸಖರಾದ | **ಮರುದ್ಭಿಃ**—ಮರುತ್ತುಗಳೊಡನೆ | **ನಃ**—ನಮ್ಮ | **ಇಹ**—ಈ ಯಜ್ಞದಲ್ಲಿ | **ಸುತಂ**—ಹಿಂಡಲ್ಪಟ್ಟಿರುವ | **ಸೋಮಂ**—ಸೋಮವನ್ನು | **ಪಾಹಿ**—ಪಾನಮಾಡು.

ಭಾವಾರ್ಥ

ಅನೇಕರಿಂದ ಆಹೂತನಾಗುವ ಇಂದ್ರನೇ, ಹುಟ್ಟಿದೊಡನೆಯೇ ಸೋಮಪಾನವನ್ನು ಮಾಡುವುದರಿಂದ ಶಕ್ತಿಯುತನಾದ ಯಾವ ನಿನ್ನನ್ನು ಸಮಸ್ತ ದೇವತೆಗಳೂ ಮಹತ್ತಾದ ಸಂಗ್ರಾಮಕಾರ್ಯಕ್ಕಾಗಿ ಸಿದ್ಧಪಡಿಸಿದರೋ ಅಂತಹ ನೀನು ಸೋಮಪಾನಮಾಡಲಿಚ್ಛೆಯುಳ್ಳವನಾಗಿ ನಿನ್ನ ಸಖರಾದ ಮರುತ್ತುಗಳೊಡನೆ ನಮ್ಮ ಈ ಯಜ್ಞದಲ್ಲಿ ಹಿಂಡಲ್ಪಟ್ಟಿರುವ ಸೋಮವನ್ನು ಪಾನಮಾಡು.

English Translation

Indra, yoo are gratified by the beverage, drink the Soma that has been effused by us, together with your friends, the Maruts, at this ceremony: you who are invoked of many, and whom all the gods equipped as soon as born for the great battle (with the Asuras).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ತನ್ನ ಸ್ನೇಹಿತರಾದ ಮರುದ್ದೇವತೆಗಳೊಡನೆ ಯಜ್ಞಭೂಮಿಗೆ ಬಂದು ಸೋಮಪಾನಮಾಡಬೇಕೆಂದೂ ಆ ಸೋಮಪಾನದಿಂದ ಬಲವಿಶಿಷ್ಟನಾದ ಇಂದ್ರನನ್ನು ಸಮಸ್ತ ದೇವತೆಗಳೂ ಯುದ್ಧದಲ್ಲಿ ಜಯವನ್ನು ಪಡೆಯುವುದಕ್ಕಾಗಿ ಸೇವಿಸಿದರು ಎಂದೂ ಋಷಿಯು ವರ್ಣಿಸಿದಾನೆ.

ಇಂದ್ರನಿಗೂ, ಮರುತ್ತುಗಳಿಗೂ ಇರುವ ಶಾಶ್ವತವಾದ ಸಾಹಚರ್ಯವೂ, ಸ್ನೇಹವೂ ಅವರವರಿಗೆ ಇರುವ ರಾಜಪ್ರಜಾಸಂಬಂಧವೂ, ಮರುತ್ತುಗಳೊಡಗೂಡಿದ ಇಂದ್ರನಿಗೆ ಮುಖ್ಯವಾದ ಯಜ್ಞಕ್ರಿಯೆಗಳಲ್ಲಿ ಹವಿಸ್ಸಿನ ಅರ್ಪಣೆಯೂ ಮತ್ತು ವೃತ್ರಾಸುರನೊಡನೆ ಯುದ್ಧವನ್ನು ನಡೆಸುವಾಗ ಇಂದ್ರನಿಗೆ ಮರುತ್ತುಗಳು ಸಹಾಯಮಾಡಿರುವುದೂ ಸಂಹಿತೆಗಳಲ್ಲಿಯೂ, ಬ್ರಾಹ್ಮಣಗಳಲ್ಲಿಯೂ ಅನೇಕಕಡೆ ಸ್ತುತಿಸಲ್ಪಟ್ಟಿದೆ. ಇಂದ್ರನು ಮರುತ್ತುಗಳೊಡನೆ ಸೇರಿಕೊಂಡು ಉಳಿದ ದೇವತೆಗಳಿಂದ ಪ್ರತ್ಯೇಕವಾಗಿ ಇದ್ದುದನ್ನು ತಿಳಿಸುವ ಇತಿಹಾಸವು ಶತಪಥಬ್ರಾಹ್ಮಣದಲ್ಲಿ ಹೇಳಿದೆ.

ಇದಲ್ಲದೆ ಇಂದ್ರನೇ ರಾಜನೆಂದೂ, ಮರುತ್ತುಗಳೇ ಪ್ರಜೆಗಳೆಂದು ಅನೇಕಕಡೆ ಹೇಳಿದೆ. ಮತ್ತು ಮರುತ್ತುಗಳ ಸಹಾಯದಿಂದ ಇಂದ್ರನ ಪರಾಕ್ರಮವು ವೃದ್ಧಿಯನ್ನು ಪಡೆಯಿತೆಂದೂ ಸೂಚಿಸಿದೆ. ಈ ರೀತಿಯಾದ ನಿಕಟವಾದ ಸಂಬಂಧವೂ, ಸಾಹಚರ್ಯವೂ ಇರುವುದರಿಂದಲೇ ಇಂದ್ರನನ್ನೂ, ಮರುತ್ತುಗಳನ್ನೂ ಒಟ್ಟಿಗೆ ಉದ್ದೇಶಿಸಿ ಹವಿಸ್ಸುಗಳನ್ನು ಅರ್ಪಿಸುವ ಕ್ರಮವು ಶ್ರುತಿಗಳಲ್ಲಿ ಕಂಡುಬರುತ್ತದೆ.

**ಸ ನೋ ಮರುದ್ಭಿರ್ವೃಷಭ ಶ್ರವೋ ಧಾ ಉಗ್ರ ಉಗ್ರೇಭಿಃ ಸ್ಥವಿರಃ ಸಹೋದಾಃ |**

(ಋ. ಸಂ. ೧-೧೭೧-೫)

CC-0. Jangamwadi Math Collection. Digitized by eGangotri

ಮುಂತಾದ ಋಕ್ಕುಗಳಲ್ಲಿ ಇಂದ್ರನಿಗೂ, ಮರುತ್ತುಗಳಿಗೂ ಒಟ್ಟಿಗೆ ಸೇರಿಸಿ ಆಹ್ವಾನವೂ ಹವಿಸ್ಸಿನ ಅರ್ಪಣೆಯೂ ಇದೆ. ಮತ್ತು ಬೃಹದ್ದೇವತೆಯಲ್ಲಿಯೂ—

ಮರುದ್ಭಿಃ ಸಹ ಯತ್ರೇಂದ್ರೋ ಮರುತ್ವಾಂಸ್ತತ್ರ ಸೋಽಭವತ್ ।

(ಬೃ. ದೇ. ೪-೫೬)

ಇಂದ್ರನಿಗೂ ಮರುತ್ತುಗಳಿಗೂ ಇರುವ ಸಾಹಚರ್ಯದ ವಿವರಣೆ ಇದೆ.

---

ಸಂಹಿತಾಪಾಠಃ

ಅಪ್ತೂರ್ಯೇ ಮರುತ ಆಪಿರೇಷೋಽಮಂದನ್ನಿಂದ್ರಮನು ದಾತಿವಾರಾಃ ।

ತೇಭಿಃ ಸಾಕಂ ಪಿಬತು ವೃತ್ರಖಾದಃ ಸುತಂ ಸೋಮಂ ದಾಶುಷಃ ಸ್ವೇ

ಸಧಸ್ಥೇ ॥ ೯ ॥

ಪದಪಾಠಃ

ಅಪ್ಽತೂರ್ಯೇ । ಮರುತಃ । ಆಪಿಃ । ಏಷಃ । ಅಮಂದನ್ । ಇಂದ್ರಂ । ಅನು । ದಾತಿಽವಾರಾಃ ।

ತೇಭಿಃ ಸಾಕಂ । ಪಿಬತು । ವೃತ್ರಽಖಾದಃ । ಸುತಂ । ಸೋಮಂ । ದಾಶುಷಃ । ಸ್ವೇ । ಸಧಽಸ್ಥೇ ॥ ೯ ॥

ಸಾಯಣಭಾಷ್ಯಂ

ಹೇ ಮರುತೋ ಯ ಏಷ ಇಂದ್ರೋಽಪ್ತೂರ್ಯೇಽಪಾಂ ಪ್ರೇರಣ ಆಪಿರ್ಯುಷ್ಮಾಕಂ ಸಖಾ ಸನ್ ವರ್ತತೇ ದಾತಿವಾರಾಃ । ವಾರೋ ವರಣೀಯಂ ಬಲಂ ಧನಂ ವಾ । ದತ್ತಬಲಾ ದತ್ತಧನಾ ವಾ ತೇ ಮರುತಸ್ತಮಿಂದ್ರಮನ್ವಮಂದನ್ । ಅಹೃಷ್ಯನ್ । ವೃತ್ರಖಾದೋ ವೃತ್ರಸ್ಯ ಹಿಂಸಕಃ ಸ ಇಂದ್ರಸ್ತೇಭಿಸ್ತೈರ್ಮರುದ್ಭಿಃ ಸಾಕಂ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಸ್ವೇ ಸ್ವಕೀಯೇ ಸಧಸ್ಥೇ । ಸಹ ತಿಷ್ಠಂತ್ಯಸ್ಮಿನ್ನಿತಿ ಸಧಸ್ಥಂ ಗೃಹಂ । ತಸ್ಮಿನ್ ಸುತಮಭಿಷುತಂ ಸೋಮಂ ಪಿಬತು ॥ ಅಪ್ತೂರ್ಯೇ । ತುರೀ ತ್ವರಾಹಿಂಸಯೋರಿತ್ಯಸ್ಮಾದಘ್ನ್ಯಾದಯಶ್ಚೇತಿ ಯತ್ಪ್ರತ್ಯಯಃ । ಯತೋಽನಾವ ಇತ್ಯಾದ್ಯುದಾತ್ತಃ । ಸಮಾಸೇ ಕೃದುತ್ತರಪದಸ್ವರಃ । ಅಮಂದನ್ । ಮದಿ ಸ್ತುತ್ಯಾದಿಷು । ಪರಸ್ಮೈಪದೀ । ಪಾದಾದಿತ್ವಾದನಿಘಾತಃ । ವೃತ್ರಖಾದಃ । ಖಾದೃ ಭಕ್ಷಣೇ । ಕರ್ಮಣ್ಯಣ್ । ದಾಶುಷಃ । ದಾಶೃ ದಾನ ಇತ್ಯಸ್ಯ ಕ್ವಸೌ ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚೇತಿ ದ್ವಿರ್ವಚನಾಭ್ಯಭಾವಃ । ವಸೋಃ ಸಂಪ್ರಸಾರಣಂ । ಪ್ರತ್ಯಯಸ್ವರಃ । ಸಧಸ್ಥೇ । ಸಧ ಮಾದಸ್ಥಯೋಶ್ಛಂದಸೀತಿ ಸಹಸ್ಯ ಸಧಾದೇಶಃ ॥

ಪ್ರತಿಪದಾರ್ಥ

ಮರುತಃ—ಎಲೈ ಮರುತ್ತುಗಳೇ । ಏಷಃ—ಈ ಇಂದ್ರನು । ಅಪ್ತೂರ್ಯೇ—ವೃಷ್ಟಿಯನ್ನು ಸುರಿಸುವ ಕಾಲದಲ್ಲಿ । ಆಪಿ—ನಿಮ್ಮ ಮಿತ್ರನಾಗಿದ್ದಾನೆ । ದಾತಿವಾರಾಃ—(ಅವನಿಗೆ) ಶಕ್ತಿಸಂಪಾದಕರಾದ ಆ ಮರುತ್ತುಗಳು।

CC-0. Jangamwadi Math Collection. Digitized by eGangotri

**ಇಂದ್ರಂ ಅನು**—ಇಂದ್ರನಿಗೆ | **ಅಮುಂದನ್**—ಸಂತೋಷದಾಯಕರಾದರು | **ವೃತ್ರಖಾದಃ**—ವೃತ್ರಹಿಂಸಕನಾದ ಇಂದ್ರನು | **ತೇಭಿಃ ಸಾಕಂ**—ಆ ಮರುತ್ತುಗಳೊಡಗೂಡಿ | **ದಾಶುಷಃ**—ಹವಿಸ್ಸನ್ನು ಅರ್ಪಿಸುವ ಯಜಮಾನನ | **ಸ್ವೇ ಸಧಸ್ಥೇ**—ಸ್ವಂತವಾದ ಯಜ್ಞಗೃಹದಲ್ಲಿ | **ಸುತಂ**—ಹಿಂಡಲ್ಪಟ್ಟ | **ಸೋಮಂ**—ಸೋಮವನ್ನು | **ಪಿಬತು**—ಪಾನಮಾಡಲಿ.

ಭಾವಾರ್ಥ

ಎಲೈ ಮರುತ್ತುಗಳೇ, ಈ ಇಂದ್ರನು ವೃಷ್ಟಿಯನ್ನು ಸುರಿಸುವ ಕಾಲದಲ್ಲಿ ನಿಮ್ಮ ಮಿತ್ರನಾಗಿದ್ದಾನೆ. ಅವನಿಗೆ ಶಕ್ತಿಸಂಪಾದಕರಾದ ಆ ಮರುತ್ತುಗಳು ಇಂದ್ರನಿಗೆ ಸಂತೋಷದಾಯಕರಾದರು. ವೃತ್ರಹಿಂಸಕನಾದ ಇಂದ್ರನು ಆ ಮರುತ್ತುಗಳೊಡಗೂಡಿ ಹವಿಸ್ಸನ್ನು ಅರ್ಪಿಸುವ ಯಜಮಾನನ ಸ್ವಂತವಾದ ಯಜ್ಞಗೃಹದಲ್ಲಿ ಹಿಂಡಲ್ಪಟ್ಟ ಸೋಮವನ್ನು ಪಾನಮಾಡಲಿ.

English Translation

Maruts, this is your friend for sending of the waters: they (the Maruts), the givers of strength, have yielded Indra gratification: may the devourer of Vritra drink with them the libation offered by the worshipper in his own abode.

ವಿಶೇಷವಿಷಯಗಳು

ಇಂದ್ರನಿಗೂ ಮರುತ್ತುಗಳಿಗೂ ಇರುವ ಸ್ನೇಹಭಾವವನ್ನೂ, ಸಾಹಚರ್ಯವನ್ನೂ ಹಿಂದಿನ ಋಕ್ಕಿನಲ್ಲಿಯೇ ಸೂಕ್ಷ್ಮವಾಗಿ ವಿವರಿಸಿದೆ. ವೃಷ್ಟಿವರ್ಷಣದಲ್ಲಿಯೂ ಸಹ ಇಂದ್ರನು ಮರುದ್ದೇವತೆಗಳಿಗೆ ಸಹಾಯಮಾಡುವನೆಂದು ಈ ಋಕ್ಕಿನಲ್ಲಿ ತಿಳಿಸಿದೆ. ವೃಷ್ಟಿಯನ್ನು ಹುಯ್ಯದಂತೆ ತಡೆದಿರುವ ವೃತ್ರಾಸುರನನ್ನು ಇಂದ್ರನು ವಜ್ರಾಯುಧದಿಂದ ಪ್ರಹರಿಸಿ ವೃಷ್ಟಿವರ್ಷಣಕ್ಕೆ ಸಹಾಯಮಾಡುವುದೇ ಮರುದ್ದೇವತೆಗಳಿಗೆ ಮಾಡುವ ಸಹಾಯವು. ಇಂತಹ ಮರುದ್ದೇವತೆಗಳೊಡನೆ ಬಂದು ಯಜಮಾನನ ಯಜ್ಞಗೃಹದಲ್ಲಿ ಸೋಮಪಾನಮಾಡಬೇಕೆಂದು ಋಷಿಯು ಪ್ರಾರ್ಥಿಸಿದಾನೆ.

---

ಸಂಹಿತಾಪಾಠಃ

ಇದಂ ಹ್ಯನ್ವೋಜಸಾ ಸುತಂ ರಾಧಾನಾಂ ಪತೇ |

ಪಿಬಾ ತ್ವ೧ಸ್ಯ ಗಿರ್ವಣಃ || ೧೦ ||

ಪದಪಾಠಃ

ಇದಂ | ಹಿ | ಅನು | ಓಜಸಾ | ಸುತಂ | ರಾಧಾನಾಂ | ಪತೇ |

ಪಿಬ | ತು | ಅಸ್ಯ | ಗಿರ್ವಣಃ || ೧೦ ||

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

**ಹೇ ರಾಧಾನಾಂ ಪತೇ ಧನಾನಾಂ ಸ್ವಾಮಿನ್ ಗಿರ್ವಣೋ ಗೀರ್ಭಿಃ ಸ್ತುತಿಭಿರ್ವನನೀಯ ಹೇ ಇಂದ್ರ ಇದಮನು ಅನೇನಾನುಕ್ರಮೇಣ । ಉದ್ದೇಶಾನುಕ್ರಮೇಣೇತ್ಯರ್ಥಃ । ಓಜಸಾ ಬಲೇನ ಗ್ರಾವಭಿಃ ಸುತಮಭಿಷುತಂ ಸೋಮಂ ತು ಕ್ಷಿಪ್ರಂ ಪಿಬ ಹಿ ॥**

### ಪ್ರತಿಪದಾರ್ಥ

**ರಾಧಾನಾಂ**—ಧನಗಳಿಗೆ । **ಪತೇ**—ಪತಿಯಾದವನೂ । **ಗಿರ್ವಣಃ**—ಸ್ತುತಿಗಳಿಂದ ಪ್ರಶಂಸಿತನಾಗುವವನೂ ಆದ ಇಂದ್ರನೇ । **ಇದಂ ಅನು**—ಉದ್ದೇಶಾನುಕ್ರಮವಾಗಿ । **ಓಜಸಾ**—ಶಕ್ತಿಯುತವಾದ ಕಲ್ಲುಗಳಿಂದ । **ಸುತಂ**—ಜಜ್ಜಿಹಿಂಡಲ್ಪಟ್ಟ । ಅಸ್ಯ—ಈ ಸೋಮವನ್ನು । ತು—ಶೀಘ್ರವಾಗಿ । ಪಿಬ ಹಿ—ಪಾನಮಾಡು.

### ಭಾವಾರ್ಥ

ಧನಗಳಿಗೆ ಪತಿಯಾದವನೂ, ಸ್ತುತಿಗಳಿಂದ ಪ್ರಶಂಸಿತನಾಗುವವನೂ ಆದ ಇಂದ್ರನೇ, ಉದ್ದೇಶಾನುಕ್ರಮವಾಗಿ ಶಕ್ತಿಯುತವಾದ ಕಲ್ಲುಗಳಿಂದ ಹಿಂಡಲ್ಪಟ್ಟ ಈ ಸೋಮವನ್ನು ಶೀಘ್ರವಾಗಿ ಪಾನಮಾಡು.

### English Translation

Lord of riches, entitled to praise, this libation has been effused agreeably to (our) strength : drink of it quickly.

### ವಿಶೇಷವಿಷಯಗಳು

**ಗಿರ್ವಣಃ—ಗೀರ್ಭಿರ್ವನನೀಯಃ** । ಸ್ತುತಿವಾಕ್ಯಗಳಿಂದ ಸಮೀಪಿಸಲ್ಪಡುವವನು ಎಂದರೆ ಸ್ತೋತ್ರಾದಿಗಳಿಂದ ಆಹ್ವಾನಮಾಡಿದರೆ ಇಂದ್ರನು ಅವರ ಅನುಗ್ರಹಾರ್ಥವಾಗಿ ಯಜ್ಞಭೂಮಿಗೆ ಬಂದು ಸೋಮಪಾನ ಮಾಡುವನು ಎಂದಭಿಪ್ರಾಯವು.

**ಓಜಸಾ ಸುತಂ—ಬಲೇನ ಗ್ರಾವಭಿಃ ಅಭಿಷುತಂ ಸೋಮಂ** । ಸೋಮಲತೆಗಳನ್ನು ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆಯುವಾಗ ಬಲಪ್ರಯೋಗಮಾಡಿ ಜಜ್ಜಬೇಕಾಗಿರುವುದರಿಂದ **ಓಜಸಾ ಸುತಂ** ಎಂಬ ಪದ ಪ್ರಯೋಗವು ವಿಹಿತವಾಗಿರುವುದು.



### ಸಂಹಿತಾಪಾಠಃ

ಯಸ್ತೇ ಅನು ಸ್ವಧಾಮಸತ್ಸುತೇ ನಿ ಯಚ್ಛ ತನ್ವಂ ।

ಸ ತ್ವಾ ಮಮತ್ತು ಸೋಮ್ಯಂ ॥ ೧೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಯಃ । ತೇ । ಅನು । ಸ್ವಧಾಂ । ಅಸತ್ । ಸುತೇ । ನಿ । ಯಚ್ಛ । ತನ್ವಂ ।

ಸಃ । ತ್ವಾ । ಮಮತ್ತು । ಸೋಮ್ಯಂ ॥ ೧೧ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವದರ್ಥಂ ಯಃ ಸೋಮಃ ಸ್ವಧಾಮನ್ನಮನು ಅನುಸೃತ್ಯ ಗ್ರಾವಭಿರಭಿಷುತೋಽ-ಸತ್ ಸುತೇ ತಸ್ಮಿನ್ ಸೋಮೇ ತನ್ವಂ ಸ್ವಕೀಯಂ ಶರೀರಂ ನಿ ಯಚ್ಛ । ಪ್ರೇರಯ । ಸ ಸೋಮಃ ಸೋಮ್ಯಂ ಸೋಮಾರ್ಹಂ ತ್ವಾ ತ್ವಾಂ ಮಮತ್ತು । ಮಾದಯಾತು ॥ ಅಸತ್ । ಅಸ್ತೇರ್ಲೇಟ್ಯಡಾಗಮೋ ರೂಪಂ । ಯದ್ವೃತ್ತಯೋಗಾದನಿಘಾತಃ । ಆಗಮಸ್ಯಾನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ತೇ—ನಿನ್ನನ್ನುದ್ದೇಶಿಸಿ । ಯಃ—ಯಾವ ಸೋಮವು । ಸ್ವಧಾಂ ಅನು—ಸ್ವಧೆಗೆ ಅನುರೂಪವಾಗಿ ಹಿಂಡಲ್ಪಟ್ಟು । ಅಸತ್—ಸಿದ್ಧವಾಗಿ ಇದೆಯೋ । ಸುತೇ—ಹಿಂಡಿದ ಈ ಸೋಮದಲ್ಲಿ । ತನ್ವಂ—ನಿನ್ನ ಶರೀರವನ್ನು । ನಿ ಯಚ್ಛ—ಹುರಿದುಂಬಿಸು । ಸಃ—ಅದೇ ಸೋಮವು । ಸೋಮ್ಯಂ—ಸೋಮ ಪಾನಕ್ಕೆ ಯೋಗ್ಯನಾದ । ತ್ವಾ—ನಿನ್ನನ್ನು । ಮಮತ್ತು—ಹರ್ಷಗೊಳಿಸಲಿ.

ಭಾವಾರ್ಥ

ಎಲೈ ಇಂದ್ರನೇ, ಯಾವ ಸೋಮವು ನಿನ್ನನ್ನುದ್ದೇಶಿಸಿ ಸ್ವಧೆಗೆ ಅನುರೂಪವಾಗಿ ಹಿಂಡಲ್ಪಟ್ಟು ಸಿದ್ಧ ವಾಗಿದೆಯೋ, ಹಿಂಡಿ ಸಿದ್ಧವಾಗಿರುವ ಈ ಸೋಮದಲ್ಲಿ ನಿನ್ನ ಶರೀರವನ್ನು ಹುರಿದುಂಬಿಸು. ಅದೇ ಸೋಮವು ಸೋಮಪಾನಕ್ಕೆ ಯೋಗ್ಯನಾದ ನಿನ್ನನ್ನು ಹರ್ಷಗೊಳಿಸಲಿ.

English Translation

Invigorate your body with the soma that has been poured out as food for you: may it exhilarate you, delighting in the Soma draught.

ವಿಶೇಷವಿಷಯಗಳು

ಸ್ವಧಾಂ ಅನು—ಸ್ವಧಾಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. ಎಲೈ ಇಂದ್ರನೇ ನಿನಗೆ ಆಹಾರರೂಪ-ವಾಗಿರುವ ಎಂದರೆ ಅನ್ನದ ಸ್ಥಾನದಲ್ಲಿರುವ ಆಹಾರಯೋಗ್ಯವಾದ ಸೋಮರಸವನ್ನು ಎಂದಭಿಪ್ರಾಯವು. ಅಥವಾ ಅನ್ನಾದ್ಯಾಹಾರದ ಭಕ್ಷಣಾನಂತರ ಪಾನಾರ್ಥವಾಗಿ ಈ ಸೋಮರಸವು ಸಿದ್ಧಪಡಿಸಲ್ಪಟ್ಟಿದೆ ಎಂದಾದರೂ ಅರ್ಥ ಮಾಡಬಹುದು.

ಸುತೇ ನಿ ಯಚ್ಛ ತನ್ವಂ—ಸೋಮರಸವು ಸಿದ್ಧವಾಗಿರುವಾಗ ನಿನ್ನ ಶರೀರವನ್ನು ಪ್ರೇರಿಸು ಎಂದರೆ ಸೋಮಪಾನಾರ್ಥವಾಗಿ ಸಿದ್ಧನಾಗು ಅಥವಾ ಮನಸ್ಸುಮಾಡು ಎಂದಭಿಪ್ರಾಯವು.

CC-0. Jangamwadi Math Collection. Digitized by eGangotri

**ಸ ತ್ವಾ ಸೋಮ್ಯಂ ಮಮತ್ತು**—ಸೋಮಪಾನಾರ್ಹನಾದ ನಿನ್ನನ್ನು ನಾವು ಸಿದ್ಧಪಡಿಸಿರುವ ಈ ಸೋಮರಸವು ಸಂತೋಷಗೊಳಿಸಲಿ ಎಂದು ಋಷಿಯು ಪ್ರಾರ್ಥಿಸಿರುವನು.

---

ಸಂಹಿತಾಪಾಠಃ

**ಪ್ರ ತೇ ಅಶ್ನೋತು ಕುಕ್ಷ್ಯೋಃ ಪ್ರೇಂದ್ರ ಬ್ರಹ್ಮಣಾ ಶಿರಃ ।**

**ಪ್ರ ಬಾಹೂ ಶೂರ ರಾಧಸೇ ॥ ೧೨ ॥**

ಪದಪಾಠಃ

**ಪ್ರ । ತೇ । ಅಶ್ನೋತು । ಕುಕ್ಷ್ಯೋಃ । ಪ್ರ । ಇಂದ್ರ । ಬ್ರಹ್ಮಣಾ । ಶಿರಃ ।**

**ಪ್ರ । ಬಾಹೂ ಇತಿ । ಶೂರ । ರಾಧಸೇ ॥ ೧೨ ॥**

ಸಾಯಣಭಾಷ್ಯಂ

**ಹೇ ಇಂದ್ರ ಸ ಸೋಮಸ್ತೇ ತವ ಕುಕ್ಷ್ಯೋಃ ಕುಕ್ಷೇರುಭಯೋಃ ಪಾರ್ಶ್ವಯೋರುಭೌ ಪಾರ್ಶ್ವೌ ಪ್ರಾಶ್ನೋತು । ಪ್ರಕರ್ಷೇಣ ವ್ಯಾಪ್ನೋತು । ತಥಾ ಬ್ರಹ್ಮಣಾ ಸ್ತೋತ್ರೇಣ ಸಹಿತಃ ಸ ಸೋಮಃ ಶಿರಃ ಶರೀರಂ ಅವಯವಾದಿನಾವಯವೀ ಲಕ್ಷ್ಯತೇ । ತ್ವಚ್ಛರೀರಂ ಪ್ರಾಶ್ನೋತು । ಹೇ ಶೂರ ಇಂದ್ರ ರಾಧಸೇ ಧನಾಯ ತವ ಬಾಹೂ ಅಪಿ ಪ್ರಾಶ್ನೋತು ॥ ಅಶ್ನೋತು । ಅಶೂ ವ್ಯಾಪ್ತಾವಿತ್ಯಸ್ಯ ಲೋಟಿ ವ್ಯತ್ಯಯೇನ ಪರಸ್ಮೈಪದಂ । ನಿಘಾತಃ । ಕುಕ್ಷ್ಯೋಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । (**ಸಃ**—ಅದೇ ಸೋಮವು) । **ತೇ**—ನಿನ್ನ । **ಕುಕ್ಷ್ಯೋಃ**—ಕುಕ್ಷಿಯ ಎರಡು ಪಾರ್ಶ್ವಗಳಲ್ಲೂ । **ಪ್ರ ಅಶ್ನೋತು**—ಪೂರ್ಣವಾಗಿ ವ್ಯಾಪಿಸಲಿ । **ಬ್ರಹ್ಮಣಾ**—ಸ್ತುತಿಯಿಂದ ಕೂಡಿದ ಆ ಸೋಮವು। **ಶಿರಃ**—ನಿನ್ನ ಶರೀರವನ್ನು । **ಪ್ರ**—ಪೂರ್ಣವಾಗಿ ವ್ಯಾಪಿಸಲಿ । **ಶೂರ**— ಪರಾಕ್ರಮಿಯಾದ ಇಂದ್ರನೇ । **ರಾಧಸೇ**—ಧನಲಾಭಕ್ಕಾಗಿ । **ಬಾಹೂ**—ನಿನ್ನ ಬಾಹುಗಳಲ್ಲೂ । **ಪ್ರ** (**ಅಶ್ನೋತು**)—ಪೂರ್ಣವಾಗಿ ವ್ಯಾಪಿಸಲಿ.

ಭಾವಾರ್ಥ

ಎಲೈ ಇಂದ್ರನೇ, ನಿನಗೆ ಅರ್ಪಿತವಾದ ಸೋಮವು ನಿನ್ನ ಕುಕ್ಷಿಯ ಎರಡು ಪಾರ್ಶ್ವಗಳಲ್ಲೂ, ನಿನ್ನ ಶಿರಸ್ಸಿನಲ್ಲೂ, ನಿನ್ನ ಬಾಹುಗಳಲ್ಲೂ, ನಿನ್ನ ಸಕಲ ಶರೀರದಲ್ಲಿಯೂ ಸಹ ನಮ್ಮ ಧನಲಾಭಾರ್ಥವಾಗಿ ಪೂರ್ಣವಾಗಿ ವ್ಯಾಪಿಸಲಿ.

English Translation

May this libation, Indra, penetrate to your flanks; may it, (aided) by prayer, reach your head; may it spread, hero, through your arms, (that they may distribute) wealth.

CC-0. Jangamwadi Math Collection. Digitized by eGangotri

### ವಿಶೇಷವಿಷಯಗಳು

ಈ ಋಕ್ಕಿನಲ್ಲಿ ನಾವು ಸಿದ್ಧಪಡಿಸಿರುವ ಸೋಮರಸವು ಇಂದ್ರನ ಉದರದ ಎರಡು ಭಾಗಗಳನ್ನೂ ಇತರ ಶರೀರಭಾಗವನ್ನೂ ವಿಶೇಷವಾಗಿ ಶಿರಸ್ಸನ್ನೂ, ಬಾಹುಗಳನ್ನೂ ಚೆನ್ನಾಗಿ ವ್ಯಾಪಿಸಿ ಹರ್ಷವನ್ನುಂಟುಮಾಡಲಿ. ಆ ಸೋಮಪಾನದಿಂದ ಹರ್ಷಿತನಾದ ಇಂದ್ರನು ನಮಗೆ ಧನಲಾಭವನ್ನುಂಟುಮಾಡಲಿ ಎಂಬ ಆಶಂಸನೆಯನ್ನು ಋಷಿಯು ವ್ಯಕ್ತಪಡಿಸಿರುವನು.

## ಐವತ್ತೆರಡನೆಯ ಸೂಕ್ತವು

### ಸಾಯಣಭಾಷ್ಯಂ

ಧಾನಾವಂತಮಿತ್ಯಷ್ಟರ್ಚಂ ಚತುರ್ದಶಂ ಸೂಕ್ತಂ ವೈಶ್ವಾಮಿತ್ರಮೈಂದ್ರಂ । ಅತ್ರೇಯಮನು- ಕ್ರಮಣಿಕಾ । ಧಾನಾವಂತಮಷ್ಟೌ ಪೂರ್ವಾರ್ಧಂ ಗಾಯತ್ರಂ ಷಷ್ಠೀ ಜಗತೀತಿ । ಆದಿತಶ್ಚತಸ್ರೋ ಗಾಯತ್ರ್ಯಸ್ತೃತೀಯೇ ಧಾನಾ ಇತಿ ಷಷ್ಠೀ ಜಗತೀ ಶಿಷ್ಟಾಸ್ತ್ರಿಷ್ಟುಭಃ ॥ ಸೂಕ್ತವಿನಿಯೋಗೋ ಲಿಂಗಾ- ದವಗಂತವ್ಯಃ । ಪ್ರಾತಃಸವನೀಯಪುರೋಡಾಶಸ್ಯಾನುವಾಕ್ಯಾ ಧಾನಾವಂತಮಿತ್ಯಾದ್ಯಾ । ಸೂತ್ರಿತಂ ಚ । ಧಾನಾವಂತಂ ಕರಂಭಿಣಮಿತಿ ಪ್ರಾತಃಸವನೇಽನುವಾಕ್ಯಾ । ಆ. ೫-೪ । ಇತಿ ॥

ಅನುವಾದವು—ಧಾನಾವಂತಂ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನಾಲ್ಕನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಇಂದ್ರನು ದೇವತೆಯು ; ಅನು ಕ್ರಮಣಿಕೆಯಲ್ಲಿ—ಧಾನಾವಂತಮಷ್ಟೌ ಪೂರ್ವಾರ್ಧಂ ಗಾಯತ್ರಂ ಷಷ್ಠೀ ಜಗತೀ ಎಂದು ಹೇಳಿರುವುದು. ಈ ಸೂಕ್ತದ ಮೊದಲಿನ ನಾಲ್ಕು ಋಕ್ಕುಗಳು ಗಾಯತ್ರೀಛಂದಸ್ಕವು ; ತೃತೀಯೇ ಧಾನಾಃ ಎಂಬ ಆರನೆಯ ಋಕ್ಕು ಜಗತೀಛಂದಸ್ಕವು ; ಉಳಿದ ಮೂರು ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಸಿನವು. ಸೂಕ್ತದ ವಿನಿಯೋಗವು ಆಯಾ ಋಕ್ಕುಗಳ ಅರ್ಥವನ್ನನುಸರಿಸಿರುವುದು. ಈ ಸೂಕ್ತದ ಧಾನಾವಂತಂ ಎಂಬ ಮೊದಲನೆಯ ಋಕ್ಕನ್ನು ಪ್ರಾತಃಸವನಸಂಬಂಧವಾದ ಪುರೋಡಾಶಹೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವ ಲಾಯನಶ್ರೌತಸೂತ್ರದ—ಧಾನಾವಂತಂ ಕರಂಭಿಣಮಿತಿ ಪ್ರಾತಸ್ಸವನೇಽನುವಾಕ್ಯಾ ಎಂಬ ಸೂತ್ರದಿಂದ ವಿವೃತ ವಾಗಿರುವುದು (ಆ. ೫-೪).

---

CC-0. Jangamwadi Math Collection. Digitized by eGangotri

॥ ಓಂ ॥

## ಸೂಕ್ತ—೫೨

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೫೨ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೭, ೧೮ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

॥ ಋಷಿಃ—ವಿಶ್ವಾಮಿತ್ರಃ ॥

॥ ದೇವತಾ—ಇಂದ್ರಃ ॥

ಛಂದಃ—೧-೪. ಗಾಯತ್ರೀ । ೫, ೭, ೮ ತ್ರಿಷ್ಟುಪ್ । ೬ ಜಗತೀ ॥

---

ಸಂಹಿತಾಪಾಠಃ

ಧಾನಾವಂತಂ ಕರಂಭಿಣಮಪೂಪವಂತಮುಕ್ಥಿನಮ್ ।

ಇಂದ್ರ ಪ್ರಾತರ್ಜುಷಸ್ವ ನಃ ॥ ೧ ॥

ಪದಪಾಠಃ

ಧಾನಾಽವಂತಂ । ಕರಂಭಿಣಂ । ಅಪೂಪಽವಂತಂ । ಉಕ್ಥಿನಂ ।

ಇಂದ್ರ । ಪ್ರಾತಃ । ಜುಷಸ್ವ । ನಃ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರ ಧಾನಾವಂತಂ । ಧಾನಾ ಭೃಷ್ಟಯವಾಃ । ತದ್ವಂತಂ ಕರಂಭಿಣಂ । ಕರಂಭೋ ದಧಿಮಿಶ್ರಾಃ ಸಕ್ತವಃ । ತದ್ವಂತಮಪೂಪವಂತಂ ಸವನೀಯಪುರೋಡಾಶೋಪೇತಮುಕ್ಥಿನಂ ಶಸ್ತ್ರಿಣಂ ನೋಽಸ್ಮದೀಯಮಿಮಂ ಸೋಮಂ ಪ್ರಾತಃ ಪ್ರಾತಃಸವನೇ ಜುಷಸ್ವ । ಸೇವಸ್ವ ॥ ಪ್ರಾತಃ । ಸ್ವರಾದಿಷ್ವಂತೋದಾತ್ತತ್ವೇನ ಪಠಿತತ್ವಾದಂತೋದಾತ್ತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಧಾನಾವಂತಂ—ಯವಧಾನ್ಯದಿಂದ ಮಿಶ್ರಿತವಾದುದೂ । ಕರಂಭಿಣಂ—ದಧಿಮಿಶ್ರಿತವಾದುದೂ । ಅಪೂಪವಂತಂ—ಪುರೋಡಾಶಾದಿಗಳಿಂದ ಕೂಡಿದುದೂ। ಉಕ್ಥಿನಂ—ಶಸ್ತ್ರಮಂತ್ರದಿಂದ ಪೂತವಾದುದೂ ಆದ। ನಃ—ನಮ್ಮ ಈ ಸೋಮವನ್ನು। ಪ್ರಾತಃ—ಪ್ರಾತಃಸವನಕಾಲನದಲ್ಲಿ । ಜುಷಸ್ವ—ಸೇವಿಸು.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಇಂದ್ರನೇ, ಯವಧಾನ್ಯದಿಂದ ಮಿಶ್ರಿತವಾದುದೂ, ದಧಿಮಿಶ್ರಿತವಾದುದೂ, ಪುರೋಡಾಶಾದಿಗಳಿಂದ ಕೂಡಿರುದೂ, ಶಸ್ತ್ರಮಂತ್ರದಿಂದ ಪೂತವಾದುದೂ ಆದ ನಮ್ಮ ಈ ಸೋಮವನ್ನು ಪ್ರಾತಃಸವನಕಾಲದಲ್ಲಿ ಸೇವಿಸು

English Translation

Accept, Indra, at our morning sacrifice, this libation, combined with fresh barley, with parched grain and curds, and with cakes, and sanctified by holy prayer.

ವಿಶೇಷವಿಷಯಗಳು

ಧಾನಾವಂತಂ—ಹೊಟ್ಟು, ಸಿಪ್ಪೆ ಮುಂತಾದವುಗಳನ್ನು ತೆಗೆದು ಶುದ್ಧವಾಗಿ ಮಾಡಿದ ಯವಧಾನ್ಯದ ಹಿಟ್ಟನ್ನು ಬೆರಸಿ ಸಿದ್ಧಪಡಿಸಿದ ಸೋಮರಸವು. ಸೋಮರಸವನ್ನು ಶೋಧಿಸಿ ಹಾಗೆಯೇ ಪಾನಮಾಡುವುದಲ್ಲದೆ ಅದು ರುಚಿಕರವಾಗುವುದಕ್ಕಾಗಿ ಅದಕ್ಕೆ ಹಾಲು, ಮೊಸರು, ಯವಧಾನ್ಯದ ಹಿಟ್ಟು ಎಂಬ ಆಶಿರದ್ರವ್ಯಗಳನ್ನು ಬೆರಸುವರು. ಹಾಲುಬೆರಸಿದ ಸೋಮರಸಕ್ಕೆ ಗವಾಶಿರವೆಂದೂ, ಮೊಸರನ್ನು ಬೆರಸಿದ ಸೋಮರಸಕ್ಕೆ ದಧ್ಯಾಶಿರ ವೆಂದೂ, ಯವಧಾನ್ಯದ ಹಿಟ್ಟನ್ನು ಬೆರಸಿದ ಸೋಮರಸಕ್ಕೆ ಯವಾಶಿರವೆಂದೂ ಹೆಸರು. ಈ ವಿಷಯವನ್ನು ನಾವು ಹಿಂದೆ ವಿಸ್ತಾರವಾಗಿ ವಿವರಿಸಿದೇವೆ. ಇಲ್ಲಿ ಧಾನಾವಂತಂ ಎಂಬ ಶಬ್ದವು ಯವಾಶಿರವೆಂಬ ಹಿಟ್ಟು ಮಿಶ್ರಿತವಾದ ಸೋಮರಸವನ್ನು ಸೂಚಿಸುವುದು.

ಕರಂಭಿಣಂ—ಕರಂಭೋ ದಧಿಮಿಶ್ರಾಃ ಸಕ್ತವಃ । ತದ್ವಂತಂ । ಮೊಸರು ಮತ್ತು ಹಿಟ್ಟಿನಿಂದ ಮಿಶ್ರಿತವಾದ ಸೋಮರಸವು. ಇದನ್ನು ದಧ್ಯಾಶಿರವೆಂತಲೂ ಹೇಳುವರು.

ಅಪೂಪವಂತಂ—ಪುರೋಡಾಶೋಪೇತಂ । ಯವಧಾನ್ಯದ ಹಿಟ್ಟನ್ನು ಕಲಸಿ ಅದನ್ನು ರೊಟ್ಟಿಮಾಡು ವಂತೆ ಮಣ್ಣಿನ ತವೆಯಲ್ಲಿ ಸುಟ್ಟು ಅದನ್ನು ಹೋಮಮಾಡುವರು. ಇದಕ್ಕೆ ಪುರೋಡಾಶವೆಂದು ಹೆಸರು. ಇಲ್ಲಿ ಅಪೂಪವಂತಂ ಎಂಬ ಶಬ್ದವು ಪುರೋಡಾಶವೆಂಬ ಹವಿಸ್ಸನ್ನು ಸೂಚಿಸುವುದು.

ಉಕ್ಥಿನಂ—ಶಸ್ತ್ರಿಣಂ । ಶಸ್ತ್ರಮಂತ್ರಪಠನಾದಿಗಳಿಂದ ಪೂತವಾದ ಎಂದರ್ಥವು. ಹೋಮದ್ರವ್ಯಗಳನ್ನು ಹೋಮಮಾಡುವುದಕ್ಕೆ ಮೊದಲು ಮಂತ್ರಪಠನದಿಂದಲೂ ಜಲಪ್ರೋಕ್ಷಣೆ ಮೊದಲಾದವುಗಳಿಂದಲೂ ಶುದ್ಧಿಮಾಡು ವುದು ರೂಢಿಯು. ಇಲ್ಲಿ ಮಂತ್ರಪೂತವಾದ ಹೋಮದ್ರವ್ಯವನ್ನು ಉಕ್ಥಿನಂ ಎಂಬ ವಿಶೇಷಣಪದದಿಂದ ವರ್ಣಿಸಿದೆ.

ಇಂದ್ರ ಪ್ರಾತಃ ಜುಷಸ್ವ ನಃ—ಎಲೈ ಇಂದ್ರನೇ, ನಾವು ಸಮರ್ಪಿಸುವ ಮೇಲೆ ಹೇಳಿದ ಯವಾಶಿರ, ದಧ್ಯಾಶಿರ, ಪುರೋಡಾಶ ಮೊದಲಾದವುಗಳು ಮಂತ್ರಪೂತವಾಗಿ ಸಿದ್ಧವಾಗಿವೆ. ಅವುಗಳನ್ನು ಈ ಪ್ರಾತಃಸವನಕಾಲ ದಲ್ಲಿ ಸೇವಿಸು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಪುರೋಳಾಶಂ ಪಚತ್ಯಂ ಜುಷಸ್ವೇಂದ್ರಾ ಗುರಸ್ವ ಚ ।

ತುಭ್ಯಂ ಹವ್ಯಾನಿ ಸಿಸ್ರತೇ ॥ ೨ ॥

ಪದಪಾಠಃ

ಪುರೋಳಾಶಂ । ಪಚತ್ಯಂ । ಜುಷಸ್ವ । ಇಂದ್ರ । ಆ । ಗುರಸ್ವ । ಚ ।

ತುಭ್ಯಂ । ಹವ್ಯಾನಿ । ಸಿಸ್ರತೇ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ಪಚತ್ಯಂ ಪಚನೇ ಸಾಧುಂ ಪುರೋಡಾಶಂ । ಪುರೋ ದಾಶಂತ ಏನಮಿತಿ ಪುರೋಡಾಶೋ ಹವಿಃ । ಜುಷಸ್ವ । ಕಿಂಚ ಆ ಗುರಸ್ವ । ಪುರೋಡಾಶಭಕ್ಷಣಾರ್ಥಮುದ್ಯಮಂ ಕುರು । ಹವ್ಯಾನಿ ಹವನಯೋಗ್ಯಾನಿ ಪುರೋಡಾಶಾದೀನಿ ಹವೀಂಷಿ ತುಭ್ಯಂ ತ್ವದರ್ಥಂ ಸಿಸ್ರತೇ । ಆಹವನೀಯಂ ಗಚ್ಛಂತಿ । ತಾನಿ ಸೇವಸ್ವೇತಿ ಭಾವಃ ॥ ಪಚತ್ಯಂ । ಪಚತೇಶಬ್ದಾತ್ತತ್ರ ಸಾಧುರಿತಿ ಯತ್ಪ್ರತ್ಯಯಾಂತಸ್ಯ ಪದಸ್ಯ ದ್ವ್ಯಚ್ತ್ವಾಭಾವಾದತ್ರ ಯತೋಽನಾವ ಇತ್ಯಸ್ಯ ಪ್ರಾಪ್ತಿರ್ನಾಸ್ತಿ । ತಿತ್ಸ್ವರಿತಃ । ಗುರಸ್ವ ! ಗುರೀ ಉದ್ಯಮನೇ । ಶವಿಕರಣೀ । ನಿಘಾತಃ । ಸಿಸ್ರತೇ । ಸೃ ಗತೌ । ಛಂದಸಿ ಜುಹೋತ್ಯಾದಿಃ । ವ್ಯತ್ಯಯೇನಾತ್ಮನೇಪದಂ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಪಚತ್ಯಂ—ಪಕ್ವವಾಗಿರತಕ್ಕ । ಪುರೋಡಾಶಂ—ಪುರೋಡಾಶರೂಪವಾದ ಹವಿಸ್ಸನ್ನು । ಜುಷಸ್ವ—ಸೇವಿಸು । ಆ ಗುರಸ್ವ—ಅದಕ್ಕಾಗಿ ಪ್ರಯತ್ನಿಸು । ಹವ್ಯಾನಿ—ಹವಿಸ್ಸುಗಳೆಲ್ಲಾ । ತುಭ್ಯಂ—ನಿನ್ನನ್ನುದ್ದೇಶಿಸಿಯೇ । ಸಿಸ್ರತೇ—ಪ್ರವಹಿಸಿ ಹರಿಯುತ್ತವೆ (ಅವನ್ನು ಸ್ವೀಕರಿಸು).

ಭಾವಾರ್ಥ

ಎಲೈ ಇಂದ್ರನೇ, ಪಕ್ವವಾಗಿರತಕ್ಕ ಪುರೋಡಾಶರೂಪವಾದ ಹವಿಸ್ಸನ್ನು ಸೇವಿಸು. ಅದಕ್ಕಾಗಿ ಪ್ರಯತ್ನಿಸು. ಹವಿಸ್ಸುಗಳೆಲ್ಲಾ ನಿನ್ನನ್ನುದ್ದೇಶಿಸಿಯೇ ಪ್ರವಹಿಸಿ ಹರಿಯುತ್ತವೆ. ಅವನ್ನು ಸ್ವೀಕರಿಸು.

English Translation

Accept, Indra, the prepared cakes and butter; eat them eagerly: the oblations flow for you.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಪುರೋಳಾಶಂ ಪಚತ್ಯಂ—ಪಚನೇ ಸಾಧುಂ ಪುರೋಡಾಶಂ । ಪುರೋ ದಾಶಂತೆ ಏನಮಿತಿ ಪುರೋಡಾಶೋ ಹವಿಃ । ದೇವತೆಗಳಿಗೆ ಹವಿಸ್ಸನ್ನರ್ಪಿಸುವಾಗ ಎಲ್ಲಕ್ಕಿಂತಲೂ ಮೊದಲು ಕೊಡುವ ಹವಿಸ್ಸಿಗೆ ಪುರೋಡಾಶವೆಂದು ಹೆಸರು ಎಂದು ಪುರೋಡಾಶಶಬ್ದದ ಅವಯವಾರ್ಥವನ್ನು ವಿವರಿಸಿರುವರು. ಈ ಪುರೋಡಾಶವು ಚೆನ್ನಾಗಿ ಪಕ್ವವಾಗಿ ಭಕ್ಷಿಸುವುದಕ್ಕೆ ಯೋಗ್ಯವಾಗಿದೆ ಎಂದಭಿಪ್ರಾಯವು.

ತುಭ್ಯಂ ಹವ್ಯಾನಿ ಸಿಸ್ರತೇ—ಹವನಯೋಗ್ಯಾನಿ ಪುರೋಡಾಶಾದೀನಿ ಹವೀಂಷ ತ್ವದರ್ಥಂ ಆಹವನೀಯಂ ಗಚ್ಛಂತಿ । ಹೋಮಮಾಡುವುದಕ್ಕೆ ಅರ್ಹವಾದ ಪುರೋಡಾಶವೇ ಮೊದಲಾದ ಹವಿಸ್ಸುಗಳು ಆಹವನೀಯಾಗ್ನಿಯ ಸಮೀಪದಲ್ಲಿ ಇಂದ್ರನಾದ ನಿನಗಾಗಿ ಸಿದ್ಧಪಡಿಸಲ್ಪಟ್ಟು ಇಡಲಾಗಿದೆ. ಅದನ್ನು ಸೇವಿಸು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

ಪುರೋಡಾಶಾದಿ ಹವಿಸ್ಸನ್ನು ಆಹನೀಯಾಗ್ನಿಯ ಸಮೀಪದಲ್ಲೇಕೆ ಇಡಬೇಕು ? ಇಂದ್ರನಿಗೆ ನೇರವಾಗಿ ಅರ್ಪಿಸಬಹುದಲ್ಲಾ ಎಂದರೆ, ಇಂದ್ರನು ಪ್ರತ್ಯಕ್ಷದೇವತೆಯಲ್ಲ. ಆದ್ದರಿಂದಲೂ ದೇವತೆಗಳಿಗೆ ಅರ್ಪಿಸುವ ಹವಿಸ್ಸನ್ನು ಸಂಸ್ಕೃತಾಗ್ನಿಯಲ್ಲಿ ಮಂತ್ರಪೂರ್ವಕವಾಗಿ ಹೋಮಮಾಡುವುದರಿಂದ ಮಾತ್ರವೇ ಅರ್ಪಿಸುವ ಪದ್ಧತಿ ಇರುವುದರಿಂದಲೂ ಆರೀತಿ ಅಗ್ನಿಯಲ್ಲಿ ಹೋಮಮಾಡುವುದಕ್ಕಾಗಿ ಆಹವನೀಯಾಗ್ನಿಯ ಸಮೀಪದಲ್ಲಿ ಹವಿಸ್ಸನ್ನು ಸಿದ್ಧಪಡಿಸಿ ಇಡಲಾಗಿದೆ ಎಂದು ವಿವರಿಸಲಾಗಿದೆ.

---

ಸಂಹಿತಾಪಾಠಃ

ಪುರೋಳಾಶಂ ಚ ನೋ ಘಸೋ ಜೋಷಯಾಸೇ ಗಿರಶ್ಚ ನಃ ।

ವಧೂಯುರಿವ ಯೋಷಣಾಂ ॥ ೩ ॥

ಪದಪಾಠಃ

ಪುರೋಳಾಶಂ । ಚ । ನಃ । ಘಸಃ । ಜೋಷಯಾಸೇ । ಗಿರಃ । ಚ । ನಃ ।

ವಧೂಯುಃऽಇವ । ಯೋಷಣಾಂ ॥ ೩ ॥

ಸಾಯಣಭಾಷ್ಯಂ

ಹೇ ಇ ದ್ರ ನೋಽಸ್ಮತ್ಸಂಬಂಧಿನಂ ಪುರೋಡಾಶಂ ಘಸಃ । ಭಕ್ಷಯ ಚ । ನೋಽಸ್ಮದೀಯಾಃ ಸ್ತುತಿಲಕ್ಷಣಾ ಗಿರೋ ಜೋಷಯಾಸೇ । ಸೇವಸ್ವ ಚ । ತತ್ರ ದೃಷ್ಟಾಂತಃ । ವಧೂಯುರಿವ ಯೋಷಣಾಂ। ಯಥಾ ವಧೂಯುಃ ಸ್ತ್ರೀಕಾಮೋ ಯೋಷಣಾಂ ಭಜನೀಯಾಂ ಯುವತಿಂ ಸೇವತೇ ತದ್ವತ್ ॥ ಘಸಃ । ಘಸ್ಲ್ಬ ಅದನ ಇತ್ಯಸ್ಯ ಲೇಟ್ಯಡಾಗಮೋ ರೂಪಂ । ಚವಾಯೋಗೇ ಪ್ರಥಮೇತಿ ನ ನಿಘಾತಃ । ಜೋಷ-

CC-0. Jangamwadi Math Collection. Digitized by eGangotri

ಯಾಸೇ । ಜುಷೀ ಪ್ರೀತಿಸೇವನಯೋರಿತ್ಯಸ್ಯ ಣ್ಯಂತಸ್ಯ ಲೇಟ್ಯಾಡಾಗಮೋ ರೂಪಂ । ಆಗಮಸ್ಯಾನುದಾತ್ತತ್ವೇ ಣಿಚ್‌ಸ್ವರಃ । ಪಾದಾದಿತ್ವಾದನಿಘಾತಃ । ವಧೂಯುರಿವ । ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಪ್ರತ್ಯಯಸ್ವರಃ । ಯೋಷಣಾಂ । ಯುಷ ಭಜನ ಇತಿ ಸೌತ್ರೋ ಧಾತುಃ । ಕೃತ್ಯಲ್ಯುಟೋ ಬಹುಲಮಿತಿ ಲ್ಯುಟ್ । ಲಿತ್ಸ್ವರಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ನಃ—ನಮ್ಮ । ಪುರೋಡಾಶಂ—ಪುರೋಡಾಶವನ್ನು । ಘಸ—ಭಕ್ಷಿಸು । ನಃ—ನಮ್ಮ । ಗಿರಃ ಚ—ಸ್ತುತಿರೂಪವಾದ ವಾಕ್ಕನ್ನು । ಯೋಷಣಾಂ—ಸುಂದರಸ್ತ್ರೀಯನ್ನು । ವಧೂಯುಃ ಇವ—ಸ್ತ್ರೀಕಾಮನಾದ ಪುರುಷನು ಸೇವಿಸುವಂತೆ । ಜೋಷಯಾಸೇ—ಸೇವಿಸು.

ಭಾವಾರ್ಥ

ಎಲೈ ಇಂದ್ರನೇ, ನಮ್ಮ ಪುರೋಡಾಶವನ್ನು ಭಕ್ಷಿಸು. ಸ್ತ್ರೀಕಾಮನಾದ ಪುರುಷನು ಸುಂದರ ಸ್ತ್ರೀಯನ್ನು ಸೇವಿಸುವಂತೆ ನಮ್ಮ ಸ್ತುತಿರೂಪವಾದ ವಾಕ್ಕನ್ನು ನೀನು ಸೇವಿಸು.

English Translation

Eat, Indra, our (offered) cakes and butter : derive enjoyment from our praises, as a lover from his mistress.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನನ್ನು ಪ್ರಾರ್ಥಿಸುವಾಗ ಪುರೋಡಾಶವೆಂಬ ಹವಿಸ್ಸನ್ನು ಆದರದಿಂದ ಭಕ್ಷಿಸಬೇಕೆಂದೂ ನಮ್ಮ ಸ್ತುತಿಗಳನ್ನು ಆಲಿಸಿ ಕೇಳಬೇಕೆಂದೂ ಪ್ರಾರ್ಥನೆ ಇದೆ. ಈ ವಿಷಯದಲ್ಲಿ ಒಂದು ದೃಷ್ಟಾಂತವನ್ನು ಋಷಿಯು ಹೇಳಿದಾನೆ. ಸ್ತ್ರೀಯರಲ್ಲಿ ಎಂದರೆ ಹೊಸದಾಗಿ ಮದುವೆಯಾದ ನವಯುವತಿಯಲ್ಲಿ ಆಸಕ್ತನಾದ ತರುಣನು ಯಾವ ರೀತಿ ಆ ಸ್ತ್ರೀಯನ್ನು ಸೇರಲು ಆತುರಪಡುವನೋ ಅದರಂತೆ ಇಂದ್ರನು ಅತ್ಯಾದರದಿಂದ ನಮ್ಮ ಸ್ತುತಿಯನ್ನು ಕೇಳಿ ನಾವು ಅರ್ಪಿಸುವ ಹವಿರಾದಿಗಳನ್ನು ಭಕ್ಷಿಸಲಿ ಎಂಬ ಉಪಮಾನವು ಇಲ್ಲಿ ಉಕ್ತವಾಗಿದೆ.

———

ಸಂಹಿತಾಪಾಠಃ

ಪುರೋಳಾಶಂ ಸನಶ್ರುತ ಪ್ರಾತಃ ಸಾವೇ ಜುಷಸ್ವ ನಃ ।

ಇಂದ್ರ ಕ್ರತುರ್ಹಿ ತೇ ಬೃಹನ್ ॥ ೪ ॥

ಪದಪಾಠಃ

ಪುರೋಳಾಶಂ । ಸನ್ಽಶ್ರುತ । ಪ್ರಾತಃಽಸಾವೇ । ಜುಷಸ್ವ । ನಃ ।

ಇಂದ್ರ । ಕ್ರತುಃ । ಹಿ । ತೇ । ಬೃಹನ್ ॥ ೪ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಹೇ ಸನಶ್ರುತ ಪುರಾಣತಯಾ ಪ್ರಸಿದ್ಧ ಹೇ ಇಂದ್ರ ನೋಽಸ್ಮತ್ಸಂಬಂಧಿನಮಿಮಂ ಪುರೋಳಾಶಂ ಪ್ರಾತಃಸಾವೇ । ಸೂಯತೇಽತ್ರ ಸೋಮ ಇತಿ ಸಾವಃ । ತಸ್ಮಿನ್ ಪ್ರಾತಃಸವನೇ ಜುಷಸ್ವ । ಯತಸ್ತೇ ಪ ತವ ಕ್ರತುಃ ಕರ್ಮ ಬೃಹನ್ ಮಹದ್ಧಿ ॥ ಪ್ರಾತಃಸಾವೇ । ಷುಞ್ ಅಭಿಷವೇ । ಕರ್ಮಣಿ ಘಞ್ । ಪ್ರಾದಿಸಮಾಸಃ । ಥಾಥಾದಿಸ್ವರೇಣಾಂತೋದಾತ್ತಃ ॥

## ಪ್ರತಿಪದಾರ್ಥ

**ಸನಶ್ರುತ**—ಪುರಾತನನೆಂದು ಪ್ರಸಿದ್ಧನಾದ । **ಇಂದ್ರ**—ಇಂದ್ರನೇ । **ನಃ**--ನಮ್ಮಿಂದ ದತ್ತವಾದ । **ಪುರೋಳಾಶಂ**—ಪುರೋಡಾಶವನ್ನು । **ಪ್ರಾತಃಸಾವೇ**—ಪ್ರಾತಃಸವನದಲ್ಲಿ । **ಜುಷಸ್ವ**—ಸೇವಿಸು । **ತೇ**—ನಿನ್ನ **ಕ್ರತುಃ**—ಕರ್ಮವು । **ಬೃಹನ್ ಹಿ**—ಮಹತ್ಸ್ವರೂಪವುಳ್ಳದಲ್ಲವೇ.

## ಭಾವಾರ್ಥ

ಪುರಾತನನೆಂದು ಪ್ರಸಿದ್ಧನಾದ ಎಲೈ ಇಂದ್ರನೇ, ನಮ್ಮಿಂದ ದತ್ತವಾದ ಪುರೋಡಾಶವನ್ನು ಪ್ರಾತಃಸವನ ಕಾಲದಲ್ಲಿ ಸೇವಿಸು. ನಿನ್ನ ಕರ್ಮವು ಮಹತ್ಸ್ವರೂಪವುಳ್ಳದ್ದೆಂದು ಪ್ರಸಿದ್ಧವಾಗಿದೆ.

## English Translation

Indra, renowned of old, accept our cakes and butter, offered at dawn; for great are your deeds.

## ವಿಶೇಷವಿಷಯಗಳು

**ಪ್ರಾತಃಸಾವೇ—ಸೂಯತೇಽತ್ರ ಸೋಮ ಇತಿ ಸಾವಃ । ತಸ್ಮಿನ್ ಪ್ರಾತಸ್ಸವನೇ ।** ಈ ಕರ್ಮದಲ್ಲಿ ಸೋಮರಸವನ್ನು ಹಿಂಡಿ ಸಿದ್ಧಪಡಿಸುವುದರಿಂದ ಇದಕ್ಕೆ **ಸಾವಃ** ಅಥವಾ **ಸವನವೆಂದು** ಹೆಸರು. ಪ್ರಾತಃಕಾಲದಲ್ಲಿ ಆಚರಿಸುವ ಈ ಕರ್ಮಕ್ಕೆ ಪ್ರಾತಃಸವನವೆಂದೂ, ಮಧ್ಯಾಹ್ನ ಆಚರಿಸುವುದಕ್ಕೆ ಮಾಧ್ಯಂದಿನ ಸವನವೆಂದೂ, ಸಾಯಂ ಕಾಲ ಆಚರಿಸುವುದಕ್ಕೆ ತೃತೀಯಸವನವೆಂದೂ ಹೆಸರು **ತ್ರೀಣಿ ವಾವ ಸವನಾನಿ** ಎಂಬ ಶ್ರುತಿವಾಕ್ಯದಂತೆ ಈ ವಿಧವಾದ ಸವನಗಳು ಮೂರು ಮಾತ್ರ ಇರುವವು. ಇಲ್ಲಿ ಪ್ರಾತಃಸವನವನ್ನು ಮಾತ್ರ ಸೂಚಿಸಲಾಗಿದೆ ಈ ಸೂಕ್ತದ ೧-೪ ಋಕ್ಕುಗಳಲ್ಲಿ ಪ್ರಾತಸ್ಸವನದ ವಿಷಯವೂ, ೫ನೆಯ ಋಕ್ಕಿನಲ್ಲಿ ಮಾಧ್ಯಂದಿನಸವನ ವಿಷಯವೂ, ೬ನೇಯ ಋಕ್ಕಿನಲ್ಲಿ ತೃತೀಯಸವನ ವಿಷಯವೂ ಉಕ್ತವಾಗಿದೆ

**ಇಂದ್ರ ಕ್ರತುಃ ಹಿ ತೇ ಬೃಹತ್**—ಇಂದ್ರನು ವೃತ್ರಹನನವೇ ಮೊದಲಾದ ಅನೇಕ ಸಾಹಸಕಾರ್ಯಗಳನ್ನು ಮಾಡಿರುವುದರಿಂದ ಇಲ್ಲಿ--ಎಲೈ ಇಂದ್ರನೇ, ನಿನ್ನ ಸಾಹಸಕಾರ್ಯವು ಬಹಳ ದೊಡ್ಡದಾಗಿರುವುದು ಎಂದರೆ ಅತಿಶಯವಾಗಿರುವುದು ಎಂದು ಇಂದ್ರನನ್ನು ಪ್ರಶಂಸಿಸಲಾಗಿದೆ.

———:o:———



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಮಾಧ್ಯಂದಿನಸ್ಯ ಸವನಸ್ಯ ಧಾನಾಃ ಪುರೋಳಾಶಮಿಂದ್ರ ಕೃಷ್ವೇಹ ಚಾರುಂ।
ಪ್ರ ಯತ್ಸ್ತೋತಾ ಜರಿತಾ ತೂರ್ಣ್ಯರ್ಥೋ ವೃಷಾಯಮಾಣ ಉಪ
ಗೀರ್ಭಿರೀಟ್ಟೇ ॥ ೫ ॥

ಪದಪಾಠಃ

ಮಾಧ್ಯಂದಿನಸ್ಯ । ಸವನಸ್ಯ । ಧಾನಾಃ । ಪುರೋಳಾಶಂ । ಇಂದ್ರ । ಕೃಷ್ವ । ಇಹ । ಚಾರುಂ ।
ಪ್ರ । ಯತ್ । ಸ್ತೋತಾ । ಜರಿತಾ । ತೂರ್ಣಿऽಅರ್ಥಃ । ವೃಷऽಯಮಾಣಃ । ಉಪ । ಗೀಃऽಭಿಃ । ಈಟ್ಟೇ ॥

ಸಾಯಣಭಾಷ್ಯಂ

ಮಾಧ್ಯಂದಿನಸವನೇ ಸವನೀಯಪುರೋಡಾಶಸ್ಯ ಮಾಧ್ಯಂದಿನಸ್ಯ ಸವನಸ್ಯ ಧಾನಾ ಇತ್ಯನು-ವಾಕ್ಯಾ । ಸೂತ್ರಿತಂ ಚ । ಮಾಧ್ಯಂದಿನಸ್ಯ ಸವನಸ್ಯ ಧಾನಾ ಇತಿ ಮಾಧ್ಯಂದಿನೇ । ಆ. ೫-೪ । ಇತಿ ॥

ಹೇ ಇಂದ್ರ ಮಾಧ್ಯಂದಿನಸ್ಯ ಮಧ್ಯಂದಿನೇ ಭವಸ್ಯ ಸವನಸ್ಯ ಸಂಬಂಧಿನೀರ್ಧಾನಾ ಭೃಷ್ಟಯ-ವಾನ್ ಚಾರುಂ ಕಮನೀಯಂ ಪುರೋಡಾಶಂ ಚೇಹ ಕರ್ಮಣ್ಯಾಗತ್ಯ ಕೃಷ್ವ । ಭಕ್ಷಣೇನ ಸಂಸ್ಕುರು । ಯದ್ಯದಾ ಜರಿತಾ ಭವತ್ಪರಿಚರಣಂ ಕುರ್ವಾಣಸ್ತೂರ್ಣ್ಯರ್ಥಸ್ತ್ವಾಂ ಸ್ತೋತುಮಿತಸ್ತತಸ್ತ್ವರಿತಗಮನಃ ಅತ ಏವ ವೃಷಾಯಮಾಣೋ ವೃಷೇವಾಚರನ್ ಸ್ತೋತಾ ಗೀರ್ಭಿಃ ಸ್ತುತಿಲಕ್ಷಣಾಭಿರ್ವಾಗ್ಭಿರುಪ ಸಮೀಪೇ ಪ್ರೇಟ್ಟೇ ಪ್ರಕರ್ಷೇಣ ಸ್ತೌತಿ । ತದಾ ಪುರೋಡಾಶಾದಿಹವೀಂಷಿ ಭಕ್ಷಯೇತಿ ಭಾವಃ ॥ ಮಾಧ್ಯಂದಿನಸ್ಯ । ಮಧ್ಯಂದಿನಶಬ್ದಾತ್ತತ್ರ ಭವಾರ್ಥ ಉತ್ಸಾದಿತ್ವಾದಞ್ । ಞಿತ್ತ್ವಾದಾದ್ಯುದಾತ್ತಃ। ಚಾರುಂ। ಚರ ಗತಿಭ-ಕ್ಷಣಯೋಃ । ದೃಸನಿಜನಿಚರಿಚಟಿರಹಿಭ್ಯೋ ಞುಣ್ಣಿತಿ ಞುಣ್ । ಣಿತ್ತ್ವಾದುಪಧಾವೃದ್ಧಿಃ । ಞಿತ್ತ್ವಾ-ದಾದ್ಯುದಾತ್ತಃ । ತೂರ್ಣ್ಯರ್ಥಃ । ತೂರ್ಣಿಃ । ಞಿತ್ವರಾ ಸಂಭ್ರಮ ಇತ್ಯಸ್ಮಾದ್ವಹಿಶ್ರೀತ್ಯಾದಿನಾ ನಿಪ್ರತ್ಯ-ಯೋ ನಿಚ್ಚ । ಅರ್ಥಃ । ಋ ಗತೌ । ಉಷಿಕುಷಿಗಾರ್ತಿಭ್ಯಸ್ಥನ್ನಿತಿ ಥನ್ । ಬಹುವ್ರೀಹೌ ಪೂರ್ವಪದ-ಸ್ವರಃ । ವೃಷಾಯಮಾಣಃ । ವೃಷೇವಾಚರತೀತ್ಯರ್ಥೇ ಕರ್ತುಃ ಕ್ಯಙ್ ಸಲೋಪಶ್ಚೇತಿ ಕ್ಯಙ್ । ಅಕೃ-ತ್ಸಾರ್ವಧಾತುಕಯೋರ್ದೀರ್ಘಃ । ಙಿತ್ತ್ವಾದನುದಾತ್ತಙಿತ ಇತ್ಯಾತ್ಮನೇಪದಂ । ಲಟ್ । ಶಾನಚ್ । ತಸ್ಯ ಲಸಾರ್ವಧಾತುಕಸ್ವರೇ ಧಾತುಸ್ವರಃ । ಈಟ್ಟೇ । ಈಡ ಸ್ತುತಾವಿತ್ಯಸ್ಯ ಲಟಿ ರೂಪಂ । ಯದ್ಯೋ-ಗಾದನಿಘಾತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಯತ್—ಯಾವಾಗ । ಜರಿತಾ—ಸ್ತುತಿಕರ್ತನೂ । ತೂರ್ಣ್ಯರ್ಥಃ—ನಿನ್ನನ್ನು ಸ್ತುತಿಸಲು ಸಂಭ್ರಮದಿಂದ ಓಡಾಡುವವನೂ । ವೃಷಾಯಮಾಣಃ—ವೃಷಭದಂತೆ ವೇಗಗಾಮಿಯೂ

CC-0. Jangamwadi Math Collection. Digitized by eGangotri

(ಕರ್ತವ್ಯ ತತ್ಪರನೂ) ಆದ | **ಸ್ತೋತಾ**—ಸ್ತೋತೃವು | **ಗೀರ್ಭಿಃ**—ಸ್ತುತಿರೂಪವಾದ ವಾಕ್ಯಗಳಿಂದ | **ಉಪ**—(ನಿನ್ನನ್ನು) ಸಮೀಪಿಸಿ | **ಪ್ರ ಈಟ್ಟೇ**-ಅತಿಶಯವಾಗಿ ಸ್ತುತಿಸುತ್ತಾನೆಯೋ (ಆಗ) | **ಮಾಧ್ಯಂದಿನಸ್ಯ ಸವನಸ್ಯ**-ಮಾಧ್ಯಂದಿನಸವನಕಾಲವಲ್ಲಿ ಅರ್ಪಿಸಿದ | **ಧಾನಾಃ**—ಯವಧಾನ್ಯಗಳನ್ನೂ | **ಚಾರುಂ**—ತೃಪ್ತಿಕರವಾದ | **ಪುರೋ-ಡಾಶಂ**—ಪುರೋಡಾಶವನ್ನೂ | **ಇಹ**—ಈ ಯಜ್ಞಕರ್ಮದಲ್ಲಿ | **ಕೃಷ್ವ**—(ನೀನು ಭಕ್ಷಿಸುವುದರಿಂದ) ಸಂಸ್ಕರಿಸು.

### ಭಾವಾರ್ಥ

ಎಲೈ ಇಂದ್ರನೇ, ಸ್ತುತಿಕರ್ತನೂ, ನಿನ್ನನ್ನು ಸ್ತುತಿಸಲು ವೃಷಭದಂತೆ ಸಂಭ್ರಮದಿಂದ ಓಡಾಡುವವನೂ ಆದ ಸ್ತೋತೃವು ಸ್ತುತಿರೂಪವಾದ ವಾಕ್ಯಗಳಿಂದ ನಿನ್ನನ್ನು ಸಮೀಪಿಸಿ ಯಾವಾಗ ನಿನ್ನನ್ನು ಅತಿಶಯವಾಗಿ ಸ್ತುತಿಸುತ್ತಾನೆಯೋ ಆಗ, ಆ ಮಾಧ್ಯಂದಿನಸವನಕಾಲದಲ್ಲಿ ಅರ್ಪಿಸಿದ ಯವದಾನ್ಯಗಳನ್ನೂ, ತೃಪ್ತಿಕರವಾದ ಪುರೋಡಾಶವನ್ನೂ ಈ ಯಜ್ಞಕರ್ಮದಲ್ಲಿ ನೀನು ಭಕ್ಷಿಸಿ ಸಂಸ್ಕರಿಸು.

### English Translation

Partake, Indra, of the barley and the delicious cakes and butter of the mid-day sacrifice, when by your zealous worshipper, hastening to adore you, and eager as a bull, is present, and celebrates (you) with hymns.

### ವಿಶೇಷವಿಷಯಗಳು

ಮಾಧ್ಯಂದಿನಸವನಸಂಬಂಧವಾದ ಪುರೋಡಾಶಹೋಮದಲ್ಲಿ **ಮಾಧ್ಯಂದಿನಸ್ಯ ಸವನಸ್ಯ ಧಾನಾ** ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಮಾಧ್ಯಂದಿನಸ್ಯ ಸವನಸ್ಯ ಧಾನಾ ಇತಿ ಮಾಧ್ಯಂದಿನೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ, ೫-೪)

**ಸ್ತೋತಾ** ಜರಿತಾ—ಈ ಎರಡು ಶಬ್ದಗಳೂ ಸ್ತೋತ್ರಮಾಡುವವನು ಎಂಬ ಒಂದೇ ಅರ್ಥವನ್ನು ಸೂಚಿಸುವ ಪದಗಳಾದರೂ ಭಾಷ್ಯಕಾರರು **ಸ್ತೋತಾ** ಎಂಬ ಶಬ್ದಕ್ಕೆ ಸ್ತುತಿರೂಪವಾದ ವಾಕ್ಯಗಳಿಂದ ಸ್ತೋತ್ರಮಾಡುವವನೆಂದೂ, ಜರಿತಾ ಎಂಬ ಶಬ್ದಕ್ಕೆ **ಭವತ್ಪರಿಚರಣಂ ಕುರ್ವಾಣಃ** ನಿನ್ನ ಸೇವೆ (ಶುಶ್ರೂಷೆ) ಯನ್ನು ಮಾಡತಕ್ಕವನೆಂದೂ ಅರ್ಥವ್ಯತ್ಯಾಸವನ್ನು ವಿವರಿಸಿದಾರೆ.

**ತೂರ್ಣ್ಯರ್ಥಃ—ತ್ವಾಂ ಸ್ತೋತುಮಿತಸ್ತತಸ್ತ್ವರಿತೆಗಮನಃ** | ಞಿತ್ವರಾ ಸಂಭ್ರಮೇ ಎಂಬ ಶಬ್ದದಿಂದ ನಿಷ್ಪನ್ನವಾದ ತೂರ್ಣಿಶಬ್ದಕ್ಕೆ ಸಂಭ್ರಮದಿಂದ ಓಡಾಡುವುದು ಎಂದರ್ಥವು. ಇಲ್ಲಿ ಇಂದ್ರನನ್ನು ಸ್ತೋತ್ರಮಾಡುವುದಕ್ಕಾಗಿ ಇಲ್ಲಿಂದಲ್ಲಿಗೆ ಸಂಭ್ರಮದಿಂದ ಓಡಾಡುತ್ತಿರುವ ಋತ್ವಿಜನು ಅಥವಾ ಸ್ತೋತ್ರಕರ್ತನು ಎಂದರ್ಥವು.

**ವೃಷಾಯಮಾಣಃ**—ಈ ಶಬ್ದವು **ಸ್ತೋತಾ** ಎಂಬ ಶಬ್ದಕ್ಕೆ ವಿಶೇಷಣವಾಗಿ ವೃಷಭದಂತೆ ತ್ವರೆಯಿಂದ ಓಡಾಡುವ ಸ್ತೋತೃವನ್ನು ವರ್ಣಿಸಿ ವೃಷಭವು ಯಾವ ರೀತಿ ಸ್ವೇಚ್ಛೆಯಿಂದ ತ್ವರಿತವಾದ ಗಮನವುಳ್ಳದ್ದಾಗಿರುವುದೋ ಅದರಂತೆ ಸಂಭ್ರಮದಿಂದ ಓಡಾಡುತ್ತಿರುವ ಋತ್ವಿಜನೆಂದು ವೃಷಭದ ಹೋಲಿಕೆಯನ್ನು ವಿವರಿಸಿದೆ. ಯಜ್ಞಮಾಡುವಾಗ ಸ್ತೋತ್ರಮಾಡುವವರೂ, ಋತ್ವಿಗ್ಜನರೂ ಪರಸ್ಪರ ಸಹಕರಿಸುತ್ತಾ ತಮ್ಮ ತಮ್ಮ ಕರ್ತವ್ಯಕರ್ಮಗಳಲ್ಲಿ ಶ್ರದ್ಧೆ

CC-0. Jangamwadi Math Collection. Digitized by eGangotri

ಯಿಂದ ಕೆಲಸಮಾಡುವುದಕ್ಕಾಗಿ ಯಾವ ಶ್ರಮವನ್ನೂ ಲೆಕ್ಕಿಸದೆ ಸಂಭ್ರಮದಿಂದ ಓಡಾಡುತ್ತಿರುವರು ಎಂಬುದನ್ನು ಸೂಚಿಸುವುದಕ್ಕಾಗಿ ಋಷಿಯು ತೂರ್ಣ್ಯರ್ಥಃ, ವೃಷಾಯಮಾಣಃ ಎಂಬ ಶಬ್ದಪ್ರಯೋಗವನ್ನು ಮಾಡಿ ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸಿರುವನು.



ಸಂಹಿತಾಪಾಠಃ

ತೃತೀಯೇ ಧಾನಾಃ ಸವನೇ ಪುರುಷ್ಟುತ ಪುರೋಳಾಶಮಾಹುತಂ ಮಾಮಹಸ್ವ ನಃ ।
ಋಭುಮಂತಂ ವಾಜವಂತಂ ತ್ವಾ ಕವೇ ಪ್ರಯಸ್ವಂತ ಉಪ ಶಿಕ್ಷೇಮ ಧೀತಿಭಿಃ ॥ ೬ ॥

ಪದಪಾಠಃ

ತೃತೀಯೇ । ಧಾನಾಃ । ಸವನೇ । ಪುರುऽಸ್ತುತ । ಪುರೋಳಾಶಂ । ಆऽಹುತಮ್ । ಮಮಹಸ್ವ । ನಃ ।
ಋಭುऽಮಂತಂ । ವಾಜऽವಂತಂ । ತ್ವಾ । ಕವೇ । ಪ್ರಯಸ್ವಂತಃ । ಉಪ । ಶಿಕ್ಷೇಮ । ಧೀತಿಭಿಃ ॥ ೬ ॥

ಸಾಯಣಭಾಷ್ಯಂ

ತೃತೀಯಸವನೇ ಸವನೀಯಪುರೋಡಾಶಸ್ಯ ತೃತೀಯೇ ಧಾನಾ ಇತ್ಯನುವಾಕ್ಯಾ । ಸೂತ್ರಿತಂ ಚ । ತೃತೀಯೇ ಧಾನಾಃ ಸವನೇ ಪುರುಷ್ಟುತೇತಿ ತೃತೀಯಸವನೇ । ಆ. ೫-೪ । ಇತಿ ॥

ಹೇ ಪುರುಷ್ಟುತ ಪುರುಭಿರ್ಬಹುಭಿಃ ಸ್ತೋತೃಭಿಃ ಸ್ತುತ ಹೇ ಇಂದ್ರ ತೃತೀಯೇ ಸವನೇ ನೋऽಸ್ಮದೀಯಾನ್ಧಾನಾ ಹುತಾನ್ ಭೃಷ್ಟಯವಾನಾಹುತಂ ಪುರೋಡಾಶಂ ಚ ಮಾಮಹಸ್ವ । ಭಕ್ಷಣೇನ ಮಹಯ । ಸಂಭಾವಯ । ಹೇ ಕವೇ ಇಂದ್ರ ಪ್ರಯಸ್ವಂತಃ ಸಂಭೃತಹವಿಷ್ಕಾ ವಯಮೃಭುಮಂತಂ । ಋಭವೋ ಯೇ ಕೇಚನ ದೇವಾಸ್ತದ್ವಂತಂ । ವಾಜವಂತಂ । ವಾಜೋ ನಾಮ ಸುಧನ್ವನಃ ಪುತ್ರಸ್ತದ್ವಂತಂ ತ್ವಾಂ ಧೀತಿಭಿಃ ಸ್ತುತಿಭಿರುಪ ಶಿಕ್ಷೇಮ । ಸಮೀಪೇ ಪರಿಚರೇಮ ॥ ಆಹುತಂ । ಜುಹೋತೇಃ ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಸ್ವರಃ । ಮಾಮಹಸ್ವ । ಮಹ ಪೂಜಾಯಾಮಿತ್ಯಸ್ಯ ಯಙ್‌ಲುಗಂತಸ್ಯ ಲೋಟಿ ವ್ಯತ್ಯಯೇನಾತ್ಮನೇಪದಂ । ಶಪೋ ಲುಗಭಾವಶ್ಛಾಂದಸಃ । ಶಿಕ್ಷೇಮ । ಶಿಕ್ಷತೇರಾಶೀರ್ಲಿಙಃ ಲಿಙ್ಯಾಶಿಷ್ಯಙ್ಙಿತ್ಯಙ್‌ಪ್ರತ್ಯಯಃ । ನಿಘಾತಃ । ಧೀತಿಭಿಃ । ಹಿಷ್ಮವತ್ಸರತಿಶತ್ಥಾಂತಾನಾಮಿತ್ಯಂತೋದಾತ್ತತ್ವಂ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಪುರುಷ್ಟುತ**—ಅನೇಕರಿಂದ ಸ್ತುತನಾಗತಕ್ಕ ಇಂದ್ರನೇ । **ತೃತೀಯೇ ಸವನೇ**—ತೃತೀಯಸವನಕಾಲದಲ್ಲಿ । **ನಃ**—ನಮ್ಮಿಂದ ಅರ್ಪಿತವಾದ । **ಧಾನಾಃ**—ಯವಧಾನ್ಯಗಳನ್ನೂ । **ಆಹುತಂ**-ಆಹುತಿರೂಪದಲ್ಲಿ ಅರ್ಪಿಸಿದ । **ಪುರೋಳಾಶಂ**—ಪುರೋಡಾಶವನ್ನೂ। **ಪ್ರಾಮಹಸ್ವ**—ಭಕ್ಷಿಸು ಮತ್ತು ತೃಪ್ತನಾಗು । **ಕವೇ**—ಕ್ರಾಂತಪ್ರಜ್ಞನಾದ ಇಂದ್ರನೇ । **ಪ್ರಯಸ್ವಂತಃ**—ಹವಿಸ್ಸನ್ನು ಸಿದ್ಧಪಡಿಸಿರುವ ನಾವು । **ಋಭುಮಂತಂ**—ಋಭುವಿನೊಂದಿಗೆ ಕೂಡಿದವನೂ । **ವಾಜವಂತಂ**—ವಾಜನೊಂದಿಗೆ ಕೂಡಿದವನೂ ಆದ । **ತ್ವಾ**—ನಿನ್ನನ್ನು । **ಧೀತಿಭಿಃ**—ಸ್ತುತಿಗಳಿಂದ । **ಉಪ ಶಿಕ್ಷೇಮ**—ಸಮೀಪಿಸಿ ಸೇವಿಸುತ್ತೇವೆ.

### ಭಾವಾರ್ಥ

ಅನೇಕರಿಂದ ಸ್ತುತನಾಗತಕ್ಕ ಇಂದ್ರನೇ, ತೃತೀಯಸವನಕಾಲದಲ್ಲಿ ನಮ್ಮಿಂದ ಅರ್ಪಿತವಾದ ಯವಧಾನ್ಯಗಳನ್ನೂ, ಆಹುತಿರೂಪದಲ್ಲಿ ಅರ್ಪಿಸಿದ ಪುರೋಡಾಶವನ್ನೂ ಭಕ್ಷಿಸಿ ತೃಪ್ತನಾಗು. ಕ್ರಾಂತಪ್ರಜ್ಞನಾದ ಇಂದ್ರನೇ, ಹವಿಸ್ಸನ್ನು ಸಿದ್ಧಪಡಿಸಿರುವ ನಾವು ಋಭುಯುಕ್ತನೂ, ವಾಜಯುಕ್ತನೂ ಆದ ನಿನ್ನನ್ನು ಸ್ತುತಿದ್ವಾರಾ ಸಮೀಪಿಸಿ ಸೇವಿಸುತ್ತೇವೆ.

### English Translation

Indra, you are praised of many, accept readily from our friend of barley, and cakes, and butter, offered at the third (or evening) sacrifice: laden with sacrificial viands, we approach with praises to you, sage Indra, who are accompanied by the Ribhus and by Vaja.

### ವಿಶೇಷವಿಷಯಗಳು

ತೃತೀಯಸವನಕಾಲದಲ್ಲಿ ಆ ಸವನಸಂಬಂಧವಾದ ಪುರೋಡಾಶಹೋಮದಲ್ಲಿ **ತೃತೀಯೇ ಧಾನಾಃ** ಎಂಬ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ತೃತೀಯೇ ಧಾನಾಃ ಸವನೇ ಪುರುಷ್ಟುತೇತಿ ತೃತೀಯಸವನೇ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೫-೪)

**ಪ್ರಯಸ್ವಂತಃ—ಸಂಭೃತಹವಿಷ್ಕಾಃ । ಪ್ರಯಃ** ಎಂಬ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ (ನಿ. ೩-೯) ಪ್ರಯಸ್ವಂತಃ ಎಂದರೆ ಅನ್ನರೂಪವಾದ ಹವಿಸ್ಸನ್ನು ಇಂದ್ರನಾದ ನಿನಗಾಗಿ ಅರ್ಪಿಸಲು ಸಿದ್ಧಪಡಿಸಿ ಕೈಗಳಲ್ಲಿ ಹಿಡಿದುಕೊಂಡು ನಿಂತಿರುವ ನಾವು ಎಂದಭಿಪ್ರಾಯವು.

**ಋಭುಮಂತಂ ವಾಜವಂತಂ**—ಈ ಋಕ್ಕಿನಲ್ಲಿ ವಿಭುವಿನೊಡನೆ ಮತ್ತು ವಾಜ ಎಂಬುವನೊಡನೆ ಇರುವವನಾದ ಇಂದ್ರನನ್ನು ಎಂದು ವರ್ಣಿಸಲಾಗಿದೆ. ಋಭು ಮತ್ತು ವಾಜ ಎಂಬುವರು ಯಾರು ಎಂಬ ವಿಷಯದಲ್ಲಿ ವಿವರಣೆಯು ಆವಶ್ಯಕವಾಗಿದೆ—

ಋಭುಗಳೆಂಬುವರು ಪೂರ್ವದಲ್ಲಿ ಮನುಷ್ಯರಾಗಿದ್ದು ತಮ್ಮ ಉತ್ತಮವಾದ ನಡವಳಿಕೆಗಳಿಂದಲೂ, ಸತ್ಕರ್ಮಾನುಷ್ಠಾನದಿಂದಲೂ ದೇವತ್ವವನ್ನು ಪಡೆದರೆಂದು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿರುವುದು. ಪೂರ್ವ

CC-0. Jangamwadi Math Collection. Digitized by eGangotri

ದಲ್ಲಿ ಅಂಗಿರಾಋಷಿಗೆ ನೀತಿಮಂಜರಿ ಎಂಬ ಓರ್ವ ಪುತ್ರನಿದ್ದನು ಇವನ ವಂಶದಲ್ಲಿ ಹುಟ್ಟಿದ ಸುಧನ್ವಾ ಎಂಬ ಋಷಿಗೆ ಋಭು, ವಿಭು, ವಾಜ ಎಂಬ ಮೂವರು ಪುತ್ರರಿದ್ದರು. ಇವರು ಸತ್ಕರ್ಮಾನುಷ್ಠಾನ, ದೇವತೆಗಳಿಗೆ ಸಹಾಯಮಾಡುವುದು, ಯಜ್ಞಪಾತ್ರಾದಿ ಸಲಕರಣೆಗಳನ್ನು ನಿರ್ಮಿಸುವುದು ಮೊದಲಾದ ಒಳ್ಳೆಯ ಕೆಲಸಗಳಿಂದ ದೇವತೆಗಳ ಜನ್ಮವನ್ನು ಪಡೆದರು ಅಥವಾ ದೇವತೆಗಳಾದರು ಎಂದು ಪ್ರತೀತಿ ಇದೆ. ಈ ಋಭು ಮೊದಲಾದ ಸುಧನ್ವನ ಮೂವರು ಪುತ್ರರಿಗೂ ಒಟ್ಟಿಗೆ ಋಭುಗಳೆಂದು ಹೇಳುವ ರೂಢಿ ಇದೆ. ಹಿರಿಯವನ ಹೆಸರಿನಿಂದಲೇ ಈ ಮೂವರು ಪುತ್ರರೂ ಕರೆಯಲ್ಪಡುವರು. ಇವರು ತ್ವಷ್ಟೃವಿನ ಶಿಷ್ಯರಾದುದರಿಂದ ಇವರನ್ನು ದೇವಶಿಲ್ಪಿಗಳೆಂದೂ ಹೇಳುವರು. ಇಂದ್ರನೇ ಮೊದಲಾದ ದೇವತೆಗಳಿಗೆ ಬೇಕಾದ ಸಲಕರಣೆಗಳನ್ನು ಎಂದರೆ ಇಂದ್ರನಿಗೆ ರಥವನ್ನೂ, ಅಗ್ನಿಗೆ ಚಮಸಪಾತ್ರೆಯನ್ನೂ ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಇವರಿಗೆ ಅದ್ಭುತವಾದ ಶಕ್ತಿ ಇರುವುದೆಂದೂ, ಇವರು ಎಂತಹ ಕೆಲಸಗಳನ್ನಾದರೂ ಮಾಡಲು ಸಮರ್ಥರೆಂದೂ ಅಲ್ಲಲ್ಲಿ ವರ್ಣನೆಗಳಿವೆ. ಋ. ಸಂ. ೧-೨೦ ನೆಯ ಸೂಕ್ತದಲ್ಲಿ ಇವರು ಮಾಡಿದ ಕೆಲವು ಕೆಲಸಗಳ ವಿವರಣೆ ಇರುವುದು. ದೇವತೆಗಳಿಗಿರುವ ಶಕ್ತಿಸಾಮರ್ಥ್ಯಗಳೇ ಇವರಿಗೂ ಇರುವುದರಿಂದ ಇವರನ್ನು ದೇವತೆಗಳ ಗುಂಪಿಗೆ ಸೇರಿದವರೆಂದು ಭಾವಿಸಿ ಋಷಿಗಳು ಇವರನ್ನೂ, ಇವರು ಮಾಡಿರುವ ಕಾರ್ಯಗಳನ್ನೂ ವಿಧವಿಧವಾಗಿ ವರ್ಣಿಸಿರುವರು. ಋಭುಗಳ ವಿಸ್ತಾರವಾದ ವಿವರಣೆಯನ್ನು ನಾವು ಋ. ಸಂ. ಭಾಗ ೫ ಪುಟ 658-662 ಗಳಲ್ಲಿಯೂ, ಋಭುಶಬ್ದದ ರೂಪನಿಷ್ಪತ್ತಿ—ಭಾಗ 5-156 ; 8-685 ; ರಲ್ಲಿಯೂ, ಋಭುಗಳು ಆದಿತ್ಯನ ಆತಿಥ್ಯವನ್ನು ಪಡೆದು ಯಜ್ಞದಲ್ಲಿ ಸೋಮಪಾನಾರ್ಹರಾದ ವಿಷಯವರ್ಣನೆ, ಭಾಗ 8-666 ; ಋಭುಗಳು ಚಮಸಾದಿಯಜ್ಞಪಾತ್ರೆಗಳನ್ನು ನಿರ್ಮಿಸಿದ ವಿಚಾರ, ಭಾಗ 8-671 ; ಋಭುಗಳು ತಾಯಿಯಿಲ್ಲದ ಕರುವನ್ನು ಕಾಪಾಡಿದ ವಿಚಾರ, ಭಾಗ 8-693 ; ಋಭುಗಳೊಡನೆ ಇಂದ್ರನ ಸಾಹಚರ್ಯ, ಭಾಗ 8-699 ; ಋಭುಗಳ ಕಲಾಕೌಶಲ್ಯವಿವರಣೆ ಭಾಗ 8-704 ಪುಟಗಳಲ್ಲಿಯೂ ವಿಸ್ತಾರವಾಗಿ ವಿವರಿಸಿದೇವೆ

ಸಂಹಿತಾಪಾಠಃ

ಪೂಷಣ್ವತೇ ತೇ ಚಕೃಮಾ ಕರಂಭಂ ಹರಿವತೇ ಹರ್ಯಶ್ವಾಯ ಧಾನಾಃ ।
ಅಪೂಪಮದ್ಧಿ ಸಗಣೋ ಮರುದ್ಭಿಃ ಸೋಮಂ ಪಿಬ ವೃತ್ರಹಾ ಶೂರ ವಿದ್ವಾನ್ ॥ ೭ ॥

ಪದಪಾಠಃ

ಪೂಷಣ್ಽವತೇ । ತೇ । ಚಕೃಮ । ಕರಂಭಂ । ಹರಿಽವತೇ । ಹರಿಽಅಶ್ವಾಯ । ಧಾನಾಃ ।
ಅಪೂಪಂ । ಅದ್ಧಿ । ಸಽಗಣಃ । ಮರುತ್ಽಭಿಃ । ಸೋಮಂ । ಪಿಬ । ವೃತ್ರಽಹಾ । ಶೂರ । ವಿದ್ವಾನ್ ॥೭॥

ಸಾಯಣಭಾಷ್ಯಂ

ಹೇ ಇಂದ್ರ ಪೂಷಣ್ವತೇ । ಪೂಷಾ ನಾಮ ಕಶ್ಚಿದ್ದೇವೋಽದಂತಕಃ । ತದ್ವತೇ ತೇ ತುಭ್ಯಂ ಕರಂಭಂ ದಧಿಮಿಶ್ರಂ ಸಕ್ತುಂ ಚಕೃಮ । ಭಕ್ಷಣಾರ್ಥಂ ಕುರ್ಮಃ । ತಥಾ ಚ ಶ್ರುತಿಃ । ಪೂಷಾ ಪ್ರಪಿಷ್ಟ-

CC-0. Jangamwadi Math Collection. Digitized by eGangotri

ಭಾಗೋsದಂತಕೋ ಹಿ । ತೈ. ಸಂ, ೨-೬.೮ । ಇತಿ । ಹರಿವತೇ । ಹರಿನಾಮಕಾವಶ್ವೌ । ತದ್ವತೇ ಹರ್ಯಶ್ವಾಯ ಹರಿತವರ್ಣಾಶ್ವಯುಕ್ತಾಯೇಂದ್ರಾಯ ತುಭ್ಯಂ ಧಾನಾ ಭಕ್ಷಣಾರ್ಥಂ ಕುರ್ಮಃ । ತಥಾ ಚ ಮಂತ್ರವರ್ಣಃ । ಗ್ರಸೇತಾಮಶ್ವಾ ವಿ ಮುಚೇಹ ಶೋಣಾ ದಿವೇದಿವೇ ಸದೃಶೀರದ್ಧಿ ಧಾನಾಃ । ಋಗ್ವೇ. ૩-૩૩-૩ । ಇತಿ । ಮರುದ್ಭಿಃ ಸಗಣಸ್ತ್ವಮಪೂಪಂ ಪುರೋಡಾಶಮದ್ಧಿ । ಭಕ್ಷಯ । ಹೇ ಶೂರ ಅಸಹಾಯ ಹೇ ಇಂದ್ರ ವೃತ್ರಹಾ ವೃತ್ರಸ್ಯ ಹಂತಾ ವಿದ್ವಾನ್ ಸರ್ವಂ ಜಾನಾನಸ್ತ್ವಂ ಸೋಮಂ ಪಿಬ ॥ ಪೂಷಣ್ವತೇ । ಪೂಷಶಬ್ದಸ್ಯ ಮತುಪ್ । ಅನೋ ನುಡಿತಿ ನುಡಾಗಮಃ । ರಷಾಭ್ಯಾಮಿತಿ ಣತ್ವಂ । ಚಕೃಮ । ಕರೋತೇಃ ಶ್ಛಂದಸೇ ವರ್ತಮಾನೇ ಲಿಟಿ ಕ್ರಾದಿತ್ವಾದಿಡಭಾವಃ । ನಿಘಾತಃ । ಹರಿವತೇ । ಛಂದಸೀರ ಇತಿ ಮತುಪೋ ವತ್ವಂ ॥

ಪ್ರತಿಪದಾರ್ಥ

(ಇಂದ್ರ—ಎಲೈ ಇಂದ್ರನೇ) । ಪೂಷಣ್ವತೇ—ಪೂಷನೊಡನೆ ಕೂಡಿದವನೂ । ಹರಿವತೇ—ಹರಿನಾಮಕನಾದ ಅಶ್ವಯುಕ್ತನೂ । ಹರ್ಯಶ್ವಾಯ—ಹರಿತವರ್ಣವುಳ್ಳ ಅಶ್ವಯುಕ್ತನೂ ಆದ । ತೇ—ನಿನಗಾಗಿ । ಧಾನಾಃ—ಯವಧಾನ್ಯವನ್ನೂ । ಕರಂಭಂ—ದಧಿಮಿಶ್ರಿತವಾದ ಪುರೋಡಾಶವನ್ನೂ । ಚಕೃಮ—ಸಿದ್ಧಪಡಿಸಿದ್ದೇವೆ । ಮರುದ್ಭಿಃ—ಮರುತ್ತುಗಳೊಡನೆ । ಸಗಣಃ—ಕೂಡಿಕೊಂಡಿರುವ ನೀನು । ಅಪೂಪಂ—ಪುರೋಡಾಶವನ್ನು । ಅದ್ಧಿ—ಭಕ್ಷಿಸು । ಶೂರ—ಪರಾಕ್ರಮಿಯಾದವನೂ । ವೃತ್ರಹಾ—ವೃತ್ರಹಂತಕನೂ । ವಿದ್ವಾನ್—ಸರ್ವಜ್ಞನೂ ಆದ ನೀನು । ಸೋಮಂ—ಸೋಮವನ್ನು । ಪಿಬ—ಪಾನಮಾಡು.

ಭಾವಾರ್ಥ

ಎಲೈ ಇಂದ್ರನೇ, ಪೂಷನೊಡನೆ ಕೂಡಿದವನೂ, ಹರಿನಾಮಕವಾದ ಅಶ್ವಯುಕ್ತನೂ, ಹರಿತವರ್ಣವುಳ್ಳ ಅಶ್ವಯುಕ್ತನೂ ಆದ ನಿನಗಾಗಿ ಯವಧಾನ್ಯವನ್ನೂ, ದಧಿಮಿಶ್ರಿತವಾದ ಪುರೋಡಾಶವನ್ನೂ ಸಿದ್ಧಪಡಿಸಿದ್ದೇವೆ. ಮರುತ್ತುಗಳೊಡನೆ ಕೂಡಿಕೊಂಡಿರುವ ನೀನು ಪುರೋಡಾಶವನ್ನು ಭಕ್ಷಿಸು. ಪರಾಕ್ರಮಿಯಾದವನೂ, ವೃತ್ರಹಂತಕನೂ, ಸರ್ವಜ್ಞನೂ ಆದ ನೀನು ಸೋಮವನ್ನು ಪಾನಮಾಡು.

English Translation

We have prepared the parched grain and curds for you, associated with Pushan ; the fried barley for you, lord of the tawny horses, associated with your steeds : attended by the troop of Maruts, eat the cakes ; hero, you are wise, the slayer of Vritra, drink the libation.

ವಿಶೇಷವಿಷಯಗಳು

ಪೂಷಣ್ವತೇ— ಪೂಷಾನಾಮ ಕಶ್ಚಿದ್ದೇವೋsದಂತಕಃ । ತದ್ವತೇ । ಪೂಷನೆಂಬುವನು ಹಲ್ಲಿಲ್ಲದ ಒಬ್ಬ ದೇವತೆಯು ; ಅವನೊಡನೆ ಇರುವ ಇಂದ್ರನಿಗೆ ಎಂದು ಇಲ್ಲಿ ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

ಪೂಷನ್ ಎಂಬುವನು ಋಗ್ವೇದದಲ್ಲಿ ಒಬ್ಬ ಮುಖ್ಯ ದೇವತೆ ಇವನ ಪರವಾಗಿ ಋಗ್ವೇದದಲ್ಲಿ ಎಂಟು ಸೂಕ್ತಗಳಿವೆ. ಇಷ್ಟಲ್ಲದೆ ಋ. ಸಂ. ೬-೫೭ನೆಯ ಸೂಕ್ತದಲ್ಲಿ ಇಂದ್ರನೊಡನೆಯೂ, ಋ. ಸಂ. ೨-೪೦ನೆಯ ಸೂಕ್ತ

CC-0. Jangamwadi Math Collection. Digitized by eGangotri

[illegible]

[illegible]

---

ಸಂಹಿತಾಪಾಠಃ

ಪ್ರತಿ ಧಾನಾ ಭರತ ತೂಯುಮಸ್ಮೈ ಪುರೋಳಾಶಂ ವೀರತಮಾಯ ನೃಣಾಂ।

ದಿವೇದಿವೇ ಸದೃಶೀರಿಂದ್ರ ತುಭ್ಯಂ ವರ್ಧಂತು ತ್ವಾ ಸೋಮಪೇಯಾಯ

ಧೃಷ್ಣೋ ॥ ೮ ॥

ಪದಪಾಠಃ

ಪ್ರತಿ । ಧಾನಾಃ । ಭರತ । ತೂಯಮ್ । ಅಸ್ಮೈ । ಪುರೋಳಾಶಂ । ವೀರऽತಮಾಯ । ನೃಣಾಂ ।

ದಿವೇऽದಿವೇ । ಸऽದೃಶೀಃ । ಇಂದ್ರ । ತುಭ್ಯಂ । ವರ್ಧಂತು । ತ್ವಾ । ಸೋಮऽಪೇಯಾಯ । ಧೃಷ್ಣೋ-

ಇತಿ ॥ ೮ ॥

ಸಾಯಣಭಾಷ್ಯಂ

ಯಜಮಾನೋಽಧ್ವರ್ಯ್ವಾದೀನ್ಪ್ರತಿ ಬ್ರೂತೇ । ಹೇ ಅಧ್ವರ್ಯ್ವಾದಯಃ ಅಸ್ಮಾ ಇಂದ್ರಾಯ ಧಾನಾಸ್ತೂಯಂ ಕ್ಷಿಪ್ರಂ ಪ್ರತಿ ಭರತ । ಸಂಪಾದಯತ । ನೃಣಾಂ ವೀರತಮಾಯಾಸ್ಮಾ ಇಂದ್ರಾಯ ಪುರೋಡಾಶಂ ಚ ಸಂಪಾದಯತ । ಅಥ ಪ್ರತ್ಯಕ್ಷಕೃತಃ । ಹೇ ಧೃಷ್ಣೋ ಶತ್ರೂಣಾಮಭಿಭವನಶೀಲ ಹೇ ಇಂದ್ರ, ಸದೃಶೀರೇಕವಿಧಾಃ ಸ್ತುತಯಸ್ತುಭ್ಯಂ ತ್ವದರ್ಥಂ ದಿವೇ ದಿವೇ ಪ್ರತಿದಿವಸಮಸ್ಮಾಭಿಃ ಕ್ರಿಯಂತೇ ।

CC-0. Jangamwadi Math Collection. Digitized by eGangotri

ತಾಃ ಸ್ತುತಯಃ ಸೋಮಪೇಯಾಯ ಸೋಮಪಾನಾರ್ಥಂ ತ್ವಾಂ ವರ್ಧಂತು ! ಉತ್ಸಾಹೇನ ಪ್ರವೃದ್ಧಂ ಕುರ್ವಂತು ॥ ಸದೃಶೀಃ । ಸಮಾನಾನ್ಯಯೋಶ್ಚೇತಿ ಕಞ್ಪ್ರತ್ಯಯಃ । ಟಿಡ್ಢಾಣಞಿತ್ಯಾದಿನಾ ಙೀಪ್ ದೃಗ್ದೃಶವತುಷ್ವಿತಿ ಸಮಾನಸ್ಯ ಸಭಾವಃ ॥

## ಪ್ರತಿಪದಾರ್ಥ

(ಎಲೈ ಅಧ್ವರ್ಯುಗಳೇ) ಅಸ್ಮೈ— ಇಂದ್ರನನ್ನುದ್ದೇಶಿಸಿ । ಧಾನಾಃ— ಯವಧಾನ್ಯಗಳನ್ನು । ತೂಯಂ— ಕ್ಷಿಪ್ರವಾಗಿ । ಪ್ರತಿ ಭರತ—ಸಂಪಾದಿಸಿ । ನೃಣಾಂ—ನೇತೃಗಳಲ್ಲೆಲ್ಲಾ । ವೀರತಮಾಯ—ಅತಿಶಯವಾದ ವೀರ್ಯವಂತನಾದ ನಿನಗಾಗಿ । ಪುರೋಡಾಶಂ—ಪುರೋಡಾಶವನ್ನು ಸಂಪಾದಿಸಿ । ಧೃಷ್ಣೋ—ಶತ್ರುಗಳನ್ನು ಸೋಲಿಸಲು ಸಮರ್ಥನಾದ । ಇಂದ್ರ—ಎಲೈ ಇಂದ್ರನೇ । ಸದೃಶೀಃ—ಒಂದೇವಿಧವಾದ ಸ್ತುತಿಗಳು । ತುಭ್ಯಂ—ನಿನ್ನ ಸ್ತುತಿಗಾಗಿ । ದಿವೇದಿವೇ—ಪ್ರತಿದಿನವೂ ನಿರ್ಮಿತವಾಗುತ್ತವೆ (ಅದೇ ಸ್ತುತಿಗಳು) । ತ್ವಾ—ನಿನ್ನನ್ನು । ಸೋಮಪೇಯಾಯ—ಸೋಮಪಾನಾರ್ಥವಾಗಿ । ವರ್ಧಂತು—ಅಭಿವೃದ್ಧಿಯಾಗುವಂತೆ ಮಾಡಲಿ.

## ಭಾವಾರ್ಥ

ಎಲೈ ಅಧ್ವರ್ಯುಗಳೇ, ಈ ಇಂದ್ರನನ್ನುದ್ದೇಶಿಸಿ ಯವಧಾನ್ಯಗಳನ್ನು ಕ್ಷಿಪ್ರವಾಗಿ ಸಂಪಾದಿಸಿ. ನೇತೃಗಳಲ್ಲೆಲ್ಲಾ ಅತಿಶಯವಾಗಿ ವೀರ್ಯವಂತನಾದ ಇಂದ್ರನಿಗಾಗಿ ಪುರೋಡಾಶವನ್ನು ಸಂಪಾದಿಸಿ. ಶತ್ರುಗಳನ್ನು ಸೋಲಿಸಲು ಸಮರ್ಥನಾದ ಎಲೈ ಇಂದ್ರನೇ, ಸಮಾನವಾದ ಸೌಂದರ್ಯವುಳ್ಳ ಸ್ತುತಿಗಳು ನಿನ್ನನ್ನುದ್ದೇಶಿಸಿ ಪ್ರತಿದಿನವೂ ನಿರ್ಮಿತವಾಗುತ್ತವೆ. ಆ ಸ್ತುತಿಗಳು ಸೋಮಪಾನಾರ್ಥವಾಗಿ ನಿನ್ನನ್ನು ಅಭಿವೃದ್ಧನಾಗುವಂತೆ ಮಾಡಲಿ.

## English Translation

Offer to him quickly (priests) the fried barley: offer to the most heroic of leaders the cakes and butter: may the like offerings, victorious Indra, presented to you daily, augment your vigour for the drinking of the Soma juice.

## ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವರ್ಣನೆಯೆಂದೂ, ಉತ್ತರಾರ್ಧವು ಪ್ರತ್ಯಕ್ಷಕೃತವರ್ಣನೆಯೆಂದೂ ಭಾಷ್ಯದಲ್ಲಿ ವಿವರಿಸಲಾಗಿದೆ. ಪರೋಕ್ಷಕೃತವೆಂದರೇನು, ಪ್ರತ್ಯಕ್ಷಕೃತವೆಂದರೇನು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವೆವು. ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ವಿಷಯವಾಗಿ—

> ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ । ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕಾಶ್ಚ । ತತ್ರಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ ಪ್ರಥಮಪುರುಷೈಶ್ಚಾಖ್ಯಾತಸ್ಯ। ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ।

CC-0. Jangamwadi Math Collection. Digitized by eGangotri

ದಲ್ಲಿ ಸೋಮನೊಡನೆಯೂ ಸ್ತುತನಾಗಿದಾನೆ. ದಾರಿತಪ್ಪಿದವರಿಗೆ ದಾರಿತೋರಿಸುವುದೂ, ಕಳೆದುಹೋದ ವಸ್ತುಗಳನ್ನು ಪುನಃ ದೊರಕಿಸಿಕೊಡುವುದೂ, ತಪ್ಪಿಸಿಕೊಂಡ ದನಕರುಗಳನ್ನು ಸುರಕ್ಷಿತವಾಗಿ ಮನೆಗೆ ತಂದು ಸೇರಿಸುವುದೂ ಈ ದೇವತೆಯ ಮುಖ್ಯ ಕಾರ್ಯಗಳು. ಶತ್ರುಗಳನ್ನು ಚದುರಿಸು, ನಮ್ಮ ದಾರಿಯು ಇಷ್ಟವಾದ ವಸ್ತುಗಳೆಡೆಗೆ ನಮ್ಮನ್ನು ಒಯ್ಯಲಿ (ಋ. ಸಂ. ೬-೫೩-೪) ರಸ್ತೆಯನ್ನು ಚೆನ್ನಾಗಿರುವಂತೆ ಮಾಡು ಮತ್ತು ರಸ್ತೆಯು ಒಳ್ಳೆಯ ಮೇವಿರುವ ಸ್ಥಳವನ್ನು ಸೇರಲಿ (ಋ. ಸಂ. ೧-೪೨-೭) ದಾರಿಯಲ್ಲಿ ಒದಗಬಹುದಾದ ತೊಂದರೆಯನ್ನು ಪರಿಹರಿಸಿ ದಾರಿಯನ್ನು ಶುಭಪ್ರದವನ್ನಾಗಿ ಮಾಡಲಿ (ಋ. ಸಂ. ೬-೫೪-೯; ೧೦-೫೯-೭) ಎಲ್ಲಾ ದಾರಿಗೂ ಅವನೇ ರಕ್ಷಕ (೬-೪೯-೮) ಇತ್ಯಾದಿ ವರ್ಣನೆಗಳಿವೆ. ಆದ್ದರಿಂದಲೇ ಪ್ರಯಾಣೋನ್ಮುಖನಾದ ಪ್ರತಿಯೊಬ್ಬನೂ ರಸ್ತೆಗಳ ಶಿಲ್ಪಿಯಾದ ಪೂಷಣನಿಗೆ ಋ. ಸಂ. ೬-೫೩ನೆಯ ಸೂಕ್ತವನ್ನುಚ್ಚರಿಸುತ್ತಾ ಪೂಜೆ ಸಲ್ಲಿಸಬೇಕು ಮತ್ತು ದಾರಿತಪ್ಪಿದವರೆಲ್ಲಾ ಪೂಷಣನನ್ನೇ ಮರೆಹೋಗಬೇಕೆಂದು ಆಶ್ವಲಾಯನ ಗೃಹ್ಯಸೂತ್ರದಲ್ಲಿಯೂ (ಆ. ಗೃ. ಸೂ. ೩-೭-೮, ೯) ಸಾಂಖ್ಯಾಯನಶ್ರೌತಸೂತ್ರದಲ್ಲಿಯೂ (ಸಾಂ. ಶ್ರೌ. ಸೂ. ೩-೪-೯) ಹೇಳಿದೆ.

ಪೂಷನ್‌ದೇವತೆಯ ವಿಸ್ತಾರವಾದ ವಿಷಯವರ್ಣನೆಯು ಋ. ಸಂ. ಭಾಗ ೫ ಪುಟ 547-550 ಗಳಲ್ಲಿ ಇರುವುದನ್ನು ನೋಡಿ.

ಸಂಹಿತಾಪಾಠಃ

ಪ್ರತಿ ಧಾನಾ ಭರತ ತೂಯಮಸ್ಮೈ ಪುರೋಳಾಶಂ ವೀರತಮಾಯ ನೃಣಾಂ।
ದಿವೇದಿವೇ ಸದೃಶೀರಿಂದ್ರ ತುಭ್ಯಂ ವರ್ಧಂತು ತ್ವಾ ಸೋಮಪೇಯಾಯ ಧೃಷ್ಣೋ ॥ ೮ ॥

ಪದಪಾಠಃ

ಪ್ರತಿ । ಧಾನಾಃ । ಭರತ । ತೂಯಮ್ । ಅಸ್ಮೈ । ಪುರೋಳಾಶಂ । ವೀರಽತಮಾಯ । ನೃಣಾಂ ।
ದಿವೇಽದಿವೇ । ಸಽದೃಶೀಃ । ಇಂದ್ರ । ತುಭ್ಯಂ । ವರ್ಧಂತು । ತ್ವಾ । ಸೋಮಽಪೇಯಾಯ । ಧೃಷ್ಣೋ-ಇತಿ ॥ ೮ ॥

ಸಾಯಣಭಾಷ್ಯಂ

ಯಜಮಾನೋಽಧ್ವರ್ಯ್ವಾದೀನ್ಪ್ರತಿ ಬ್ರೂತೇ । ಹೇ ಅಧ್ವರ್ಯ್ವಾದಯಃ ಅಸ್ಮಾ ಇಂದ್ರಾಯ ಧಾನಾಸ್ತೂಯಂ ಕ್ಷಿಪ್ರಂ ಪ್ರತಿ ಭರತ । ಸಂಪಾದಯತ । ನೃಣಾಂ ವೀರತಮಾಯಾಸ್ಮಾ ಇಂದ್ರಾಯ ಪುರೋಡಾಶಂ ಚ ಸಂಪಾದಯತ । ಅಥ ಪ್ರತ್ಯಕ್ಷಕೃತಃ । ಹೇ ಧೃಷ್ಣೋ ಶತ್ರೂಣಾಮಭಿಭವನಶೀಲ ಹೇ ಇಂದ್ರ ಸದೃಶೀರೇಕವಿಧಾಃ ಸ್ತುತಯಸ್ತುಭ್ಯಂ ತ್ವದರ್ಥಂ ದಿವೇ ದಿವೇ ಪ್ರತಿದಿವಸಮಸ್ಮಾಭಿಃ ಕ್ರಿಯಂತೇ।

CC-0. Jangamwadi Math Collection. Digitized by eGangotri

ತಾಃ ಸ್ತುತಯಃ ಸೋಮಪೇಯಾಯ ಸೋಮಪಾನಾರ್ಥಂ ತ್ವಾಂ ವರ್ಧಂತು ! ಉತ್ಸಾಹೇನ ಪ್ರವೃದ್ಧಂ ಕುರ್ವಂತು ॥ ಸದೃಶೀಃ । ಸಮಾನಾನ್ಯಯೋಃ ಶ್ಚೇತಿ ಕಞ್ಪ್ರತ್ಯಯಃ । ಟಿಡ್ಢಾಣಞಿತ್ಯಾದಿನಾ ಙೀಪ್ ದೃಗ್ದೃಶವತುಷ್ವಿತಿ ಸಮಾನಸ್ಯ ಸಭಾವಃ ॥

ಪ್ರತಿಪದಾರ್ಥ

(ಎಲೈ ಅಧ್ವರ್ಯುಗಳೇ) ಅಸ್ಮೈ— ಇಂದ್ರನನ್ನುದ್ದೇಶಿಸಿ । ಧಾನಾಃ— ಯವಧಾನ್ಯಗಳನ್ನು । ತೂಯಂ— ಕ್ಷಿಪ್ರವಾಗಿ । ಪ್ರತಿ ಭರತ— ಸಂಪಾದಿಸಿ । ನೃಣಾಂ— ನೇತೃಗಳಲ್ಲೆಲ್ಲಾ । ವೀರತಮಾಯ— ಅತಿಶಯವಾದ ವೀರ್ಯವಂತನಾದ ನಿನಗಾಗಿ । ಪುರೋಡಾಶಂ— ಪುರೋಡಾಶವನ್ನು ಸಂಪಾದಿಸಿ । ಧೃಷ್ಣೋ— ಶತ್ರುಗಳನ್ನು ಸೋಲಿಸಲು ಸಮರ್ಥನಾದ । ಇಂದ್ರ— ಎಲೈ ಇಂದ್ರನೇ । ಸದೃಶೀಃ— ಒಂದೇವಿಧವಾದ ಸ್ತುತಿಗಳು । ತುಭ್ಯಂ— ನಿನ್ನ ಸ್ತುತಿಗಾಗಿ । ದಿವೇದಿವೇ— ಪ್ರತಿದಿನವೂ ನಿರ್ಮಿತವಾಗುತ್ತವೆ (ಅದೇ ಸ್ತುತಿಗಳು) । ತ್ವಾ— ನಿನ್ನನ್ನು । ಸೋಮಪೇಯಾಯ— ಸೋಮಪಾನಾರ್ಥವಾಗಿ । ವರ್ಧಂತು— ಅಭಿವೃದ್ಧಿಯಾಗುವಂತೆ ಮಾಡಲಿ.

ಭಾವಾರ್ಥ

ಎಲೈ ಅಧ್ವರ್ಯುಗಳೇ, ಈ ಇಂದ್ರನನ್ನುದ್ದೇಶಿಸಿ ಯವಧಾನ್ಯಗಳನ್ನು ಕ್ಷಿಪ್ರವಾಗಿ ಸಂಪಾದಿಸಿ. ನೇತೃಗಳಲ್ಲೆಲ್ಲಾ ಅತಿಶಯವಾಗಿ ವೀರ್ಯವಂತನಾದ ಇಂದ್ರನಿಗಾಗಿ ಪುರೋಡಾಶವನ್ನು ಸಂಪಾದಿಸಿ. ಶತ್ರುಗಳನ್ನು ಸೋಲಿಸಲು ಸಮರ್ಥನಾದ ಎಲೈ ಇಂದ್ರನೇ, ಸಮಾನವಾದ ಸೌಂದರ್ಯವುಳ್ಳ ಸ್ತುತಿಗಳು ನಿನ್ನನ್ನುದ್ದೇಶಿಸಿ ಪ್ರತಿದಿನವೂ ನಿರ್ಮಿತವಾಗುತ್ತವೆ. ಆ ಸ್ತುತಿಗಳು ಸೋಮಪಾನಾರ್ಥವಾಗಿ ನಿನ್ನನ್ನು ಅಭಿವೃದ್ಧನಾಗುವಂತೆ ಮಾಡಲಿ.

English Translation

Offer to him quickly (priests) the fried barley: offer to the most heroic of leaders the cakes and butter: may the like offerings, victorious Indra, presented to you daily, augment your vigour for the drinking of the Soma juice.

ವಿಶೇಷವಿಷಯಗಳು

ಈ ಋಕ್ಕಿನ ಪೂರ್ವಾರ್ಧವು ಪರೋಕ್ಷಕೃತವರ್ಣನೆಯೆಂದೂ, ಉತ್ತರಾರ್ಧವು ಪ್ರತ್ಯಕ್ಷಕೃತವರ್ಣನೆಯೆಂದೂ ಭಾಷ್ಯದಲ್ಲಿ ವಿವರಿಸಲಾಗಿದೆ. ಪರೋಕ್ಷಕೃತವೆಂದರೇನು, ಪ್ರತ್ಯಕ್ಷಕೃತವೆಂದರೇನು ಎಂಬ ವಿಷಯವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸುವೆವು. ಯಾಸ್ಕರು ತಮ್ಮ ನಿರುಕ್ತದಲ್ಲಿ ಈ ವಿಷಯವಾಗಿ—

> ತದ್ಯಾನಿ ನಾಮಾನಿ ಪ್ರಾಧಾನ್ಯಸ್ತುತೀನಾಂ ದೇವತಾನಾಂ ತದ್ದೈವತಮಿತ್ಯಾಚಕ್ಷತೇ । ಯತ್ಕಾಮ ಋಷಿರ್ಯಸ್ಯಾಂ ದೇವತಾಯಾಮಾರ್ಥಪತ್ಯಮಿಚ್ಛನ್ ಸ್ತುತಿಂ ಪ್ರಯುಂಕ್ತೇ ತದ್ದೈವತಃ ಸ ಮಂತ್ರೋ ಭವತಿ । ತಾಸ್ತ್ರಿವಿಧಾ ಋಚಃ ಪರೋಕ್ಷಕೃತಾಃ ಪ್ರತ್ಯಕ್ಷಕೃತಾ ಆಧ್ಯಾತ್ಮಿಕಾಶ್ಚ । ತತ್ರ ಪರೋಕ್ಷಕೃತಾಃ ಸರ್ವಾಭಿರ್ನಾಮವಿಭಕ್ತಿಭಿರ್ಯುಜ್ಯಂತೇ ಪ್ರಥಮಪುರುಷೈಶ್ಚಾಖ್ಯಾತಸ್ಯ । ಅಥ ಪ್ರತ್ಯಕ್ಷಕೃತಾ ಮಧ್ಯಮಪುರುಷಯೋಗಾಸ್ತ್ವಮಿತಿ ಚೈತೇನ ಸರ್ವನಾಮ್ನಾ ।

CC-0. Jangamwadi Math Collection. Digitized by eGangotri

ಅಥಾಧ್ಯಾತ್ಮಿಕ್ಯ ಉತ್ತಮಪುರುಷಯೋಗಾ ಅಹಮಿತಿ ಚೈತೇನ ಸರ್ವನಾಮ್ನಾ । ಪರೋಕ್ಷ-ಕೃತಾಃ ಪ್ರತ್ಯಕ್ಷಕೃತಾಶ್ಚ ಮಂತ್ರಾ ಭೂಯಿಷ್ಠಾ ಅಲ್ಪಶ ಆಧ್ಯಾತ್ಮಿಕಾಃ ॥

(ನಿ. ೭-೧ರಿಂದ ೩)

ಎಂದರೆ ಮಂತ್ರಗಳಲ್ಲಿ ದೈವತಮಂತ್ರ, ಸ್ತುತಿಮಂತ್ರ, ಆಶೀರ್ಮಂತ್ರ, ಶಪಥ, ಅಭಿಶಾಪ, ಕಶ್ಚಿದ್ಭಾವ, ಪರಿದೇವನಾ, ನಿಂದಾ, ಪ್ರಶಂಸಾ ಎಂದು ಅನೇಕವಿಧವಾಗಿರುವುದು. ದೈವತಮಂತ್ರವೆಂದರೆ ದೇವತೆಗಳ ಮಹಿಮೆಯನ್ನು ವರ್ಣಿಸುವ ಮಂತ್ರ ; ಸ್ತುತಿಯೆಂದರೆ ಸ್ತೋತ್ರ, ಪ್ರಾರ್ಥನೆಗಳನ್ನೊಳಗೊಂಡಿರುವ ಮಂತ್ರ ; ಆಶೀರ್ಮಂತ್ರವೆಂದರೆ—ಆಶೀರ್ವಾದ, ಒಳ್ಳೆಯದನ್ನು ಹಾರೈಸುವ ಮಂತ್ರ ; ಶಪಥ ಎಂದರೆ ಪ್ರತಿಜ್ಞೆ ; ಅಭಿಶಾಪ ಎಂದರೆ ಕೆಟ್ಟಹಾರೈಕೆ ; ಕಶ್ಚಿದ್ಭಾವ ಎಂದರೆ ಒಂದು ವಿಷಯ ಅಥವಾ ತತ್ತ್ವದ ವಿವರಣೆ. ಪರಿದೇವನಾ ಎಂದರೆ ವ್ಯಸನ, ಸಂತಾಪ ; ನಿಂದಾ ಎಂದರೆ ನಿಂದೆಯು ; ಪ್ರಶಂಸಾ ಎಂದರೆ ಹೊಗಳುವಿಕೆ, ದಾನಸ್ತುತಿ ಇತ್ಯಾದಿ.

ಮೇಲೆ ಹೇಳಿದ ಅನೇಕ ವಿಧಗಳಲ್ಲಿ ದೈವತವೆಂಬ ಋಕ್ಕುಗಳು—ಪರೋಕ್ಷಕೃತ, ಪ್ರತ್ಯಕ್ಷಕೃತ, ಆಧ್ಯಾತ್ಮಿಕ ಎಂದು ಮೂರು ವಿಧವಾಗಿರುವವು ಪರೋಕ್ಷಕೃತವೆಂದರೆ—ಸ್ತುತಿಸಲ್ಪಡುವ ದೇವತೆಯು ಎದುರಿಗಿಲ್ಲದಿರುವುದರಿಂದ ಆ ದೇವತೆಯ ವಿಷಯದಲ್ಲಿ ಪ್ರಥಮಪುರುಷನಾಮಪದಗಳನ್ನೂ, ಕ್ರಿಯಾಪದಗಳನ್ನೂ (Third person both in subject and predicate) ಉಪಯೋಗಿಸಿರುವ ಮಂತ್ರಗಳು ; ಪ್ರತ್ಯಕ್ಷಕೃತವೆಂದರೆ—ಸ್ತುತಿಸಲ್ಪಡುವ ದೇವತೆಯು ಎದುರಿಗೆ ಇದ್ದಂತೆ ಭಾವಿಸಿ ಅದನ್ನು ನೀನು, ನಿನ್ನ ಮೊದಲಾದ ಮಧ್ಯಮಪುರುಷಶಬ್ದಗಳಿಂದ (Second person) ಸಂಬೋಧನೆಮಾಡಿ ಸ್ತುತಿಸುವ ಋಕ್ಕುಗಳು ; ಆಧ್ಯಾತ್ಮಿಕವೆಂದರೆ—ಉತ್ತಮ ಪುರುಷ (First person) ಪ್ರಯೋಗವನ್ನು ಮಾಡಿ ಸ್ತುತಿಸಿರುವ ಮಂತ್ರಗಳು. ಈ ಮೂರುವಿಧ ಮಂತ್ರಗಳಲ್ಲಿ ಪರೋಕ್ಷಕೃತ ಮತ್ತು ಪ್ರತ್ಯಕ್ಷಕೃತವೆಂಬ ಎರಡುವಿಧ ಮಂತ್ರಗಳೇ ಹೆಚ್ಚಾಗಿರುವವು ಆಧ್ಯಾತ್ಮಿಕಮಂತ್ರಗಳು ಕೇವಲ ಸ್ವಲ್ಪ ಮಾತ್ರವಿರುವವು.

---

## ಐವತ್ತಮೂರನೆಯ ಸೂಕ್ತವು

### ಸಾಯಣಭಾಷ್ಯಂ

ಇಂದ್ರಾಪರ್ವತೇತಿ ಚತುರ್ವಿಂಶತ್ಯೃಚಂ ಪಂಚದಶಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಇಂದ್ರಾಪರ್ವತಾ ಚತುರ್ವಿಂಶತಿರಾದ್ಯೈಂದ್ರಾಪಾರ್ವತೀ ಪಂಚದಶ್ಯಾದಿದ್ವೇ ವಾಚೇ ಸಸರ್ಪರ್ಯೌ ಚತಸ್ರೋ ರಥಾಂಗಸ್ತುತಯೋಽಂತ್ಯಾ ಅಭಿಶಾಪಾಸ್ತಾ ವಸಿಷ್ಠದ್ವೇಷಿಣ್ಯೋ ನ ವಸಿಷ್ಠಾ ಶೃಣ್ವಂತಿ । ದಶಮೀ ಷೋಡಶ್ಯೌ ಜಗತ್ಯೌ ತ್ರಯೋದಶೀ ಗಾಯತ್ರೀ ದ್ವಾದಶೀವಿಂಶೀದ್ವಾವಿಂಶ್ಯೋಽನುಷ್ಟುಭೋಽಷ್ಟಾದಶೀ ಬೃಹತೀತಿ । ವಿಶ್ವಾಮಿತ್ರ ಋಷಿಃ । ದಶಮೀ ಷೋಡಶೀ ಚ ದ್ವೇ ಜಗತ್ಯೌ ತ್ರಯೋದಶೀ ಗಾಯತ್ರೀ ದ್ವಾದಶೀವಿಂಶೀದ್ವಾವಿಂಶ್ಯಸ್ತಿಸ್ರೋಽನುಷ್ಟುಭೋಽಷ್ಟಾದಶೀ ಬೃಹತೀ ಶಿಷ್ಟಾಸ್ತ್ರಿಷ್ಟುಭಃ । ಆದ್ಯೇಂದ್ರಾಪರ್ವತದೇವತಾಕಾ ಪಂಚದಶೀಷೋಡಶ್ಯೌ ವಾಗ್ದೇವತ್ಯೇ ತದುತ್ತರಾಶ್ಚತಸ್ರೋ ರಥಾಂಗ-ದೇವತಾಕಾಃ ಶಿಷ್ಟಾ ಐಂದ್ರ್ಯಃ ॥

CC-0. Jangamwadi Math Collection. Digitized by eGangotri

ಅನುವಾದವು—ಇಂದ್ರಾಪರ್ವತಾ ಎಂಬ ಈ ಸೂಕ್ತವು ನಾಲ್ಕನೆಯ ಅನುವಾಕದಲ್ಲಿ ಹದಿನೈದನೆಯ ಸೂಕ್ತವು. ಇದರಲ್ಲಿ ಇಪ್ಪತ್ತನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—**ಇಂದ್ರಾಪರ್ವತಾ ಚತುರ್ವಿಂಶತಿರಾದ್ಯೈಂದ್ರಾಪಾರ್ವತೀ ಪಂಚದಶ್ಯಾದಿದ್ವೇ ವಾಚೇ ಸಸರ್ಪರ್ಯೌ ಚತಸ್ರೋ ರಥಾಂಗಸ್ತುತಯೋಽನ್ತ್ಯಾ ಅಭಿಶಾಪಾಸ್ತಾ ವಸಿಷ್ಠದ್ವೇಷಿಣ್ಯೋ ನ ವಸಿಷ್ಠಾಃ ಶೃಣ್ವಂತಿ । ದಶಮೀಷೋಡಶ್ಯೌ ಜಗತ್ಯೌ ತ್ರಯೋದಶೀ ಗಾಯತ್ರೀ ದ್ವಾದಶೀವಿಂಶೀದ್ವಾವಿಂಶ್ಯೋಽನುಷ್ಟುಭೋಽಷ್ಟಾದಶೀ ಬೃಹತೀತಿ** ಎಂದು ಹೇಳಿರುವುದು. ಎಂದರೆ—ಇಂದ್ರಾಪರ್ವತಾ ಎಂಬು ಮೊದಲಾಗುವ ಇಪ್ಪತ್ತುನಾಲ್ಕು ಋಕ್ಕುಗಳುಳ್ಳ ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು. ಮೊದಲನೆಯ ಋಕ್ಕು ಇಂದ್ರಾಪರ್ವತಾ ಎಂಬ ದೇವತಾಕವು; ಹದಿನೈದು ಮತ್ತು ಹದಿನಾರನೇ ಋಕ್ಕುಗಳಿಗೆ ವಾಕ್ಕೇ ದೇವತೆಯು; **ಸಸರ್ಪರೀಃ** ಎಂದು ಮೊದಲಾಗುವ ನಾಲ್ಕು ಋಕ್ಕುಗಳಿಗೆ (೧೭-೨೦ ಋಕ್ಕುಗಳಿಗೆ) ರಥಾಂಗಗಳೇ ದೇವತೆಯು; ೨-೧೯ ಮತ್ತು ೨೧-೨೪ ಋಕ್ಕುಗಳಿಗೆ ಇಂದ್ರನು ದೇವತೆಯು; ಕೊನೆಯ ನಾಲ್ಕು ಋಕ್ಕುಗಳಿಗೆ (೨೧-೨೪) ಇಂದ್ರನು ದೇವತೆಯಾಗಿದ್ದರೂ ಈ ಋಕ್ಕುಗಳು ಅಭಿಶಾಪಾರ್ಥಗಳನ್ನು ಸೂಚಿಸುವವು; (ಅಭಿಶಾಪ ಎಂಬ ಋಕ್ಕುಗಳ ವಿಷಯವನ್ನು ನಾವು 170ನೇ ಪುಟದಲ್ಲಿ ವಿವರಿಸಿದೇವೆ). ಈ ಅಭಿಶಾಪವನ್ನು ಸೂಚಿಸುವ ಕೊನೆಯ ನಾಲ್ಕು ಋಕ್ಕುಗಳು ವಸಿಷ್ಠರನ್ನೂ ಅವರ ವಂಶಸ್ಥರನ್ನೂ ಅನುಯಾಯಿಗಳನ್ನೂ ನಿಂದಿಸುವುದರಿಂದ ಅವುಗಳನ್ನು ವಸಿಷ್ಠಗೋತ್ರೋತ್ಪನ್ನರಾದವರು ಪಠಿಸುವುದಿಲ್ಲ, ಕೇಳುವುದೂ ಇಲ್ಲ ಈ ಸೂಕ್ತದ ಹತ್ತು ಮತ್ತು ಹದಿನಾರನೆಯ ಋಕ್ಕುಗಳು ಜಗತೀಛಂದಸ್ಕವು; ಹದಿಮೂರನೆಯ ಋಕ್ಕು ಗಾಯತ್ರೀಛಂದಸ್ಕವು; ಹನ್ನೆರಡು, ಇಪ್ಪತ್ತು ಮತ್ತು ಇಪ್ಪತ್ತೆರಡನೆಯ ಋಕ್ಕುಗಳು ಅನುಷ್ಟುಪ್‌ಛಂದಸ್ಕವು; ಹದಿನೆಂಟನೆಯ ಋಕ್ಕು ಬೃಹತೀಛಂದಸ್ಕವು; ಉಳಿದ ಋಕ್ಕುಗಳು (ಎಂದರೆ; ೧-೯, ೧೧, ೧೪, ೧೫, ೧೭, ೧೯, ೨೧, ೨೩, ೨೪ ನೇ ಋಕ್ಕುಗಳು) ತ್ರಿಷ್ಟುಪ್‌ಛಂದಸ್ಕವು.

---

॥ ಓಂ ॥

## ಸೂಕ್ತ—೫೩

ಮಂಡಲ—೩ ॥ ಅನುವಾಕ—೪ ॥ ಸೂಕ್ತ—೫೩ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೧೯, ೨೦, ೨೧, ೨೨, ೨೩ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೪ ॥

। ಋಷಿಃ—ವಿಶ್ವಾಮಿತ್ರಃ ॥

ದೇವತಾ—೧. ಇಂದ್ರಾಪರ್ವತೌ । ೨-೧೪, ೨೧-೨೪ । ಇಂದ್ರಃ ।

೧೫-೧೬ ವಾಕ್ । ೧೭-೨೦ ರಥಾಂಗಾನಿ ॥

ಛಂದಃ—೧-೯, ೧೧, ೧೪, ೧೫, ೧೭, ೧೯, ೨೧, ೨೩, ೨೪ ತ್ರಿಷ್ಟುಪ್ ।

೧೦, ೧೬. ಜಗತೀ । ೧೨, ೨೦,। ೨೨ ಅನುಷ್ಟುಪ್ ।

೧೩ ಗಾಯತ್ರೀ । ೧೮ ಬೃಹತೀ ॥

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।
ವೀತಂ ಹವ್ಯಾನ್ಯಧ್ವರೇಷು ದೇವಾ ವರ್ಧೇಥಾಂ ಗೀರ್ಭಿರಿಳಯಾ ಮದಂತಾ॥

ಪದಪಾಠಃ

ಇಂದ್ರಾಪರ್ವತಾ । ಬೃಹತಾ । ರಥೇನ । ವಾಮೀಃ । ಇಷಃ । ಆ । ವಹತಂ । ಸುಽವೀರಾಃ ।

ವೀತಂ । ಹವ್ಯಾನಿ । ಅಧ್ವರೇಷು । ದೇವಾ । ವರ್ಧೇಥಾಂ । ಗೀಃಽಭಿಃ । ಇಳಯಾ । ಮದಂತಾ ॥ ೧ ॥

ಸಾಯಣಭಾಷ್ಯಂ

ಇಂದ್ರಾಪರ್ವತಾ ಇಂದ್ರಶ್ಚ ಪರ್ವತಶ್ಚ । ಹೇ ಇಂದ್ರಾಪರ್ವತೌ ಬೃಹತಾ ರಥೇನಾಗತ್ಯ ವಾಮೀರ್ವನನೀಯಾಃ ಸುವೀರಾಃ ಶೋಭನಪುತ್ರೋಪೇತಾ ಇಷೋಽನ್ನಾನ್ಯಾ ವಹತಂ । ಅಸ್ಮದರ್ಥಂ ಧಾರಯತಂ। ಪ್ರಯಚ್ಛತಮಿತ್ಯರ್ಥಃ। ಕಿಂಚ ಹೇ ದೇವೌ ದ್ಯೋತಮಾನಾವಧ್ವರೇಷ್ವಸ್ಮತ್ಸಂಬಂಧಿಷು ಯಜ್ಞೇಷು ಹವ್ಯಾನಿ ಹವನಯೋಗ್ಯಾನಿ ಪುರೋಡಾಶಾದೀನಿ ಹವೀಂಷಿ ವೀತಂ। ಭಕ್ಷಯತಂ। ತಥೇಳಯಾಸ್ಮಾಭಿರ್ದತ್ತೇನ ಹವಿಷಾ ಮದಂತಾ ಹೃಷ್ಯಂತೌ ಯುವಾಂ ಗೀರ್ಭಿಃ ಸ್ತುತಿಲಕ್ಷಣಾಭಿರಸ್ಮದೀಯಾಭಿರ್ವಾಗ್ಭಿರ್ವರ್ಧೇಥಾಂ । ಸಮೃದ್ಧೌ ಭವತಂ ॥ ಇಂದ್ರಾಪರ್ವತಾ । ಆಮಂತ್ರಿತಸ್ಯ ಪಾದಾದಿತ್ವಾತ್ಷಾಷ್ಠಿಕಮಾದ್ಯುದಾತ್ತತ್ವಂ । ಸುವೀರಾಃ । ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ವೀತಂ । ವೀ ಕಾಂತ್ಯಾದಿಷ್ವಿತ್ಯಸ್ಯ ಲೋಟ್ಯದಾದಿತ್ವಾಚ್ಛಪೋ ಲುಕ್ । ಪ್ರತ್ಯಯಸ್ವರಃ । ವರ್ಧೇಥಾಂ । ವೃಧು ವೃದ್ಧಾವಿತ್ಯಸ್ಯ ಲೋಟ್ಯಾಥಾಮೋ ಲಸಾರ್ವಧಾತುಕಸ್ವರೇ ಧಾತುಸ್ವರಃ ॥

ಪ್ರತಿಪದಾರ್ಥ

**ಇಂದ್ರಾಪರ್ವತಾ**—ಎಲೈ ಇಂದ್ರ ಮತ್ತು ಪರ್ವತರೇ । **ಬೃಹತಾ**—ಮಹತ್ತ್ವರೂಪವುಳ್ಳ । **ರಥೇನ**—(ನಿಮ್ಮ) ರಥದಲ್ಲಿ । **ವಾಮೀಃ**—ಶ್ಲಾಘ್ಯವಾದುದೂ । **ಸುವೀರಾಃ**—ಶ್ರೇಷ್ಠರಾದ ಪುತ್ರರೊಡಗೂಡಿದುದೂ ಆದ । **ಇಷಃ**—ಅನ್ನವನ್ನು । **ಆ ವಹತಂ**—ತೆಗೆದುಕೊಂಡು ಬನ್ನಿ । **ದೇವಾ**-ಪ್ರಕಾಶಮಾನರಾದ ನೀವು । **ಅಧ್ವರೇಷು**-ಯಜ್ಞಗಳಲ್ಲಿ । **ಹವ್ಯಾನಿ**—ಪೂಜಾಯೋಗ್ಯವಾದ ಪುರೋಡಾಶಾದಿಗಳನ್ನು । **ವೀತಂ**—ಭಕ್ಷಿಸಿ । **ಇಳಯಾ**—ಹವಿಸ್ಸಿನಿಂದ । **ಮದಂತಾ**—ಸಂತುಷ್ಟರಾದ ನೀವು । **ಗೀರ್ಭಿಃ**—ನಮ್ಮ ಸ್ತುತಿರೂಪವಾದ ವಾಕ್ಕುಗಳಿಂದ । **ವರ್ಧೇಥಾಂ**—ಸಮೃದ್ಧಿಯನ್ನು ಪಡೆಯಿರಿ.

ಭಾವಾರ್ಥ

ಎಲೈ ಇಂದ್ರ ಮತ್ತು ಪರ್ವತರೇ, ಮಹತ್ತ್ವರೂಪವುಳ್ಳ ನಿಮ್ಮ ರಥದಲ್ಲಿ ಶ್ಲಾಘ್ಯವಾದುದೂ ಶ್ರೇಷ್ಠವಾದ ಪುತ್ರರೊಡಗೂಡಿದುದೂ ಆದ ಅನ್ನವನ್ನು ತೆಗೆದುಕೊಂಡು ಬನ್ನಿ. ಪ್ರಕಾಶಮಾನರಾದ ನೀವು ಯಜ್ಞಗಳಲ್ಲಿ

CC-0. Jangamwadi Math Collection. Digitized by eGangotri

ಪೂಜಾಯೋಗ್ಯವಾದ ಪುರೋಡಾಶಾದಿಗಳನ್ನು ಭಕ್ಷಿಸಿ. ಹವಿಸ್ಸಿನಿಂದ ಸಂತುಷ್ಟರಾದ ನೀವು ನಮ್ಮಸ್ತುತಿರೂಪವಾದ ವಾಕ್ಕುಗಳಿಂದ ಸಮೃದ್ಧಿಯನ್ನು ಪಡೆಯಿರಿ.

### English Translation

Indra and Parvata, bring hither, in a spacious car, delightful viands (generative of) good progeny : partake, deities, of the oblations (offered) at (our) sacrifices, and, gratified by the (sacrificial) food, be elevated by our praises.

### ವಿಶೇಷವಿಷಯಗಳು

**ಇಂದ್ರಾಪರ್ವತಾ**— ಈ ಶಬ್ದದಿಂದ ಇಂದ್ರನನ್ನೂ ಮೇಘ ಅಥವಾ ಮೇಘಾಭಿಮಾನಿದೇವತೆ ಎಂದರೆ ಪರ್ಜನ್ಯನನ್ನು ಸಂಬೋಧಿಸಲಾಗಿದೆ. ಈ ಶಬ್ದವು ಋಗ್ವೇದದಲ್ಲಿ ಪ್ರಕೃತ ಋಕ್ಕಿನಲ್ಲಿಯೂ, ಋ. ಸಂ. ೧-೧೩೨-೩ ಮತ್ತು ೧-೧೩೨-೬ ನೇ ಋಕ್ಕುಗಳಲ್ಲಿಯೂ ಮಾತ್ರ ಪಠಿತವಾಗಿರುವುದು. ಇನ್ನೆಲ್ಲಿಯೂ ಇರುವುದಿಲ್ಲ- ಈ ಋಕ್ಕುಗಳಲ್ಲಿರುವ ಇಂದ್ರಾಪರ್ವತಾ ಎಂಬ ಶಬ್ದಾರ್ಥವನ್ನು ವಿವರಿಸುವಾಗ ಭಾಷ್ಯಕಾರರು—

**ಇಂದ್ರಾಪರ್ವತಾ । ಇಂದ್ರಃ ಪ್ರಸಿದ್ಧಃ । ಪರ್ವತಃ ಪರ್ವವಾನ್ ವೃಷ್ಟ್ಯಾದಿಪೂರಣವಾನ್ ಪರ್ಜನ್ಯಃ ॥**

ಎಂದರೆ ಇಂದ್ರನು ಪ್ರಸಿದ್ಧನಾದ ದೇವತೆಯು ; ಪರ್ವತವೆಂದರೆ ವೃಷ್ಟ್ಯಾದಿಗಳಿಂದ ಭೂಮಿಯನ್ನು ತುಂಬುವ ವೃಷ್ಟ್ಯಭಿಮಾನಿದೇವತೆಯಾದ ಪರ್ಜನ್ಯನೆಂಬ ದೇವತೆ ಎಂದು ಹೇಳಿರುವರು. **ಪರ್ವತಃಸಂವತ್ಸರಃ**— ಪರ್ವತ ಶಬ್ದಕ್ಕೆ ಸಂವತ್ಸರವೆಂಬ ಅರ್ಥವೂ ಉಂಟೆಂದು ಭಟ್ಟಭಾಸ್ಕರರು ಹೇಳಿದ್ದಾರೆ. ಪರ್ವತಶಬ್ದಕ್ಕೆ ಯಾವ ಅರ್ಥವನ್ನು ಹೇಳಿದರೂ ಇಲ್ಲಿ ಪರ್ವತ ಶಬ್ದವು ಒಂದು ಆರಾಧ್ಯದೇವತೆಯ ಪರ್ಯಾಯಪದವಾಗಿದೆಯೆಂಬುದು ಸ್ಪಷ್ಟವಾಗಿದೆ. ಈ ಪದವನ್ನು ಶತ್ರುಪರ್ಯಾಯವಾಗಿಯೂ ಉಪಯೋಗಿಸಿ ಪರ್ವತಚ್ಛೇದನದಿಂದ (ಪರ್ವತಶಬ್ದವು ಮೇಘನಾಮಗಳಲ್ಲಿ ಪಠಿತವಾಗಿದೆ. ನಿ. ೨-೨೧) ಇಂದ್ರನು ವೃಷ್ಟಿಯನ್ನು ಸುರಿಸಿದನು. ಇತ್ಯಾದಿಯಾಗಿ ಅನೇಕಕಡೆಗಳಲ್ಲಿ ಹೇಳಿರುವುದರಿಂದ ಈ ಪದಪ್ರಯೋಗವಿಷಯದಲ್ಲಿ ವಿಮರ್ಶೆಯು ಉಚಿತವಾಗಿದೆ.

**ಪರ್ವತ** ಶಬ್ದದ ಪ್ರಯೋಗವು **ಇಂದ್ರ** ಮತ್ತು **ಮರುತ್ತು**ಗಳ ಸೂಕ್ತದಲ್ಲಿಯೇ ಅಧಿಕವಾಗಿದೆ. ಇದರ ಸಾಧಾರಣವಾದ ಅರ್ಥವು ಪರ್ವತ (ಬೆಟ್ಟ) ವೆಂದೇ ಆದರೂ ಇದು **ಮೇಘ** ಪರ್ಯಾಯವಾಗಿರುವುದು ವಾಡಿಕೆಯಾಗಿದೆ. ನಿರುಕ್ತಕಾರರು **ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ಮೇಘೋಽಪಿ ಗಿರಿರೇತಸ್ಮಾದೇವ ।** (ನಿ. ೧-೨೦) **ತುಂಬು** ಎಂಬರ್ಥವನ್ನು ಕೊಡುವ **ಪೃ**ಧಾತುವಿನಿಂದಾಗಲೀ ಆರಾಧಿಸು ಅಥವಾ ತೃಪ್ತಿಗೊಳಿಸು ಎಂಬರ್ಥವನ್ನು ಕೊಡುವ **ಪ್ರೀ** ಧಾತುವಿನಿಂದಾಗಲೀ ನಿಷ್ಪನ್ನವಾದ **ಪರ್ವ** ಶಬ್ದದಿಂದ **ಪರ್ವತ**ವೆಂದಾಗಿದೆಯೆಂದು ತೋರಿಸಿ **ಪರ್ವತ** (ಬೆಟ್ಟ) ಅಥವಾ **ಮೇಘ** ಎಂದಾಗುತ್ತದೆಯೆಂದು ನಿರ್ವಚನವನ್ನು ಮಾಡಿದ್ದಾರೆ. ಈ ಶಬ್ದವ್ಯುತ್ಪತ್ತಿಯು ಬರಿದಾಗಿರುವ ಪ್ರದೇಶವನ್ನು ತುಂಬುವುದು ಎಂದಭಿಪ್ರಾಯವನ್ನಾಗಲೀ ಅಥವಾ ಭೂತಗಳನ್ನು (ವೃಷ್ಟ್ಯಾದಿಗಳಿಂದ) ತೃಪ್ತಿಪಡಿಸುವುದು ಎಂಬಭಿಪ್ರಾಯವನ್ನಾಗಲಿ ಕೊಡುತ್ತದೆ. ಇದರಲ್ಲಿ ನಿರೋಧಕವಾದ ಪರ್ವತವಾವುದು, ಉಪಕಾರಕವಾದ ಪರ್ವತವಾವುದು ಎಂಬುದನ್ನು ಗಮನಿಸಬೇಕು.

CC-0. Jangamwadi Math Collection. Digitized by eGangotri

ಸಾಧಾರಣವಾಗಿ ಅಸುರರೊಂದಿಗೂ, ಪರ್ವತಗಳೊಂದಿಗೂ ಇಂದ್ರನ ಹೋರಾಟವನ್ನು ತಮಸ್ತೇಜಸ್ಸುಗಳ ಹೋರಾಟವೆಂದು ಹೇಳಬಹುದು.

**ವಿ ಚಿದ್ವೃತ್ರಸ್ಯ ದೋಧತೋ ವಜ್ರೇಣ ಶತಪರ್ವಣಾ । ಶಿರೋ ಬಿಭೇದ ವೃಷ್ಣಿನಾ ॥**

(ಋ. ಸಂ ೮-೬-೬)

ಎಂಬ ಋಕ್ಕಿನಲ್ಲಿ ಶತಸಂಖ್ಯಾಕವಾದುದೂ, ರಶ್ಮಿರೂಪವಾದುದೂ ಆದ ಪರ್ವಗಳುಳ್ಳ ವಜ್ರಾಯುಧದಿಂದ ತಮೋರೂಪನಾದವನೂ, ಆವರಕನಾದವನೂ ಆದ ಅಸುರನನ್ನು ನಾಶಮಾಡಿದನು. ಇತ್ಯಾದ್ಯುದಾಹರಣೆಗಳಿಂದ ವೃತ್ರಾದಿ ಪ್ರದಗಳೂ ಸಹ ಜಗತ್ತನ್ನು ಆವರಿಸುವ ತಮಸ್ಸಿನ ಭೂತಾಕಾರವನ್ನು ತೋರಿಸುವಂತೆ ಪರ್ವತಶಬ್ದವೂ ಸಹ ಪರ್ವತಾಕಾರದ ತಮಸ್ಸನ್ನು ನಿರ್ದೇಶಿಸುತ್ತದೆಯೆಂದು ಹೇಳಬಹುದು. ಇದಲ್ಲದೆ ಕೇವಲ ಬೆಟ್ಟ ಅಥವಾ ಮೇಘವೆಂದು ಸಾಧಾರಣವಾದ ಅರ್ಥವನ್ನು ಮಾಡಿದರೆ ಅಗ ಸನ್ನಿವೇಶಗಳಿಗನುಗುಣವಾದ ಪೂರ್ಣಾರ್ಥವನ್ನು ಕೊಡುವುದಿಲ್ಲ ಹೇಗೆಂದರೆ, ಪರ್ವತ ಹನನದಿಂದ ಮರೆಮಾಡಿ ಇರಿಸಿದ ಗೋವುಗಳನ್ನೂ ಉದಕಗಳನ್ನೂ ಬಿಡಿಸುವುದೂ ಮತ್ತು ಉಷಸ್ಸನ್ನೂ ಸೂರ್ಯನನ್ನೂ ಆವಿರ್ಭಾವವಾಗುವಂತೆ ಮಾಡುವುದೂ ಹೀಗೆ ನಾಲ್ಕುವಿಧವಾದ ಕಾರ್ಯ ಸಾಧನೆಯು ವರ್ಣಿತವಾಗಿದೆ. ಆದುದರಿಂದ ಪರ್ವತಶಬ್ದಕ್ಕೆ ಕೇವಲ ಮೇಘವೆಂದೇ ಅರ್ಥಮಾಡಿದರೆ ಅದು ಸನ್ನಿವೇಶಗಳಿಗನುಗುಣವಾಗಿರುವುದಿಲ್ಲ.

**ಅದರ್ದರುತ್ಸಮಸೃಜೋ ವಿ ಖಾನಿ ತ್ವಮರ್ಣವಾನ್ಬದ್ಬಧಾನಾँ ಅರಮ್ಣಾಃ ।**
**ಮಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವ ದಾನವಂ ಹನ್ ।**

(ಋ. ಸಂ. ೫-೩೨-೧)

ಎಂಬ ಋಕ್ಕಿನಲ್ಲಿಯೂ,

**ಶಿಶುಂ ನದೀನಾಂ ಹರಿಮದ್ರಿಬುಧ್ನಮಿತಿ ಗಿರಿರ್ವಾ ಅದ್ರಿರ್ಗಿರಿಬುಧ್ನಾ ॥**

(ಶ. ಬ್ರಾ. ೭-೫-೨-೧೮)

ಎಂಬ ಬ್ರಾಹ್ಮಣವಾಕ್ಯದಲ್ಲಿಯೂ ಸಹ **ಪರ್ವತ, ಮೇಘ** ಎಂಬ ಪದಗಳಿಗೆ ಒಂದು ಅತಿಶಯವಾದುದೂ ಅಲೌಕಿಕವಾದುದೂ ಆದ ಅರ್ಥವಿರುವುದಾಗಿ ತಿಳಿಯುತ್ತದೆ. ಇದು ಪರ್ವತಾಕಾರವಾದ ತಮೋರಾಶಿಯೆಂದೂ, ದ್ಯುಲೋಕಸ್ಥವೆಂದೂ, ಉದಕವನ್ನೂ ಗೋವನ್ನೂ ಮರೆಸಿಕೊಂಡಿರುವುದಾಗಿಯೂ ವರ್ಣಿತವಾಗಿದೆ. ಈ ತಮಸ್ಸನ್ನು ಭೇದಿಸಿ ಇಂದ್ರನೂ ಮರುತ್ತುಗಳೂ ಉದಕವನ್ನೂ, ತೇಜಸ್ಸನ್ನೂ ಪ್ರಸರಿಸುವಂತೆ ಮಾಡುತ್ತಾರೆ.

**ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ।**

(ಋ. ಸಂ. ೧-೩೨-೨)

ಇತ್ಯಾದಿ ಋಕ್ಕುಗಳಲ್ಲಿ ಅಹಿ, ಶಂಬರ, ವೃತ್ರ ಇತ್ಯಾದ್ಯಸುರರು ಈ ಪರ್ವತರೂಪವಾದ ತಮೋರಾಶಿಯಲ್ಲಿ ಅಡಗಿ ಪ್ರವಹಿಸುವ ನೀರನ್ನು ತಡೆಯುವುದರಿಂದ ಅವರನ್ನು ನಾಶಮಾಡುವ ಇಂದ್ರನು ಸ್ತುತ್ಯನು ಎಂದಿದೆ. ಹೀಗೆಯೇ ಅನೇಕ ಕಡೆಗಳಲ್ಲಿ ಪರ್ವತ ಪದವು ಶತ್ರುಪರ್ಯಾಯವಾಗಿಯೂ, ಅಥವಾ ಶತ್ರುಗಳಿಗೆ ಆಶ್ರಯವಾಗಿಯೂ ಇರುವ ವರ್ಣನೆಯಿದೆ. ಆದುದರಿಂದಲೇ, **ಅರಂಸ್ತ ಪರ್ವತಶ್ಚಿತ್ಸರಿಷ್ಯನ್** (ಋ. ಸಂ. ೨-೧೧-೭) ; **ಶುಷ್ಮಾಚಿದಸ್ಯ ಪರ್ವತಾ ಭಯಂತೇ** (ಋ. ಸಂ. ೨-೧೨-೧೩) ಇತ್ಯಾದಿ ಋಕ್ಕುಗಳಲ್ಲಿ ತೇಜೋರೂಪಿಯಾದ ಇಂದ್ರನು ಪ್ರತ್ಯಕ್ಷವಾದೊಡನೆಯೇ ಪರ್ವತರೂಪಿಗಳಾದ ತಮೋರಾಶಿಗಳು ಭಯದಿಂದ ನಡುಗಿದವೆಂದೂ, ಅವನ್ನು ಇಂದ್ರನು ಪಾತಾಳದಲ್ಲಿ ಅಡಗಿಸಿದನೆಂದೂ ಹೇಳಿದೆ—

CC-0. Jangamwadi Math Collection. Digitized by eGangotri

ಈ ವರ್ಣನೆಗಳಿಗೆ ವಿರುದ್ಧವಾಗಿ ಪರ್ವತವು ತೇಜೋರೂಪಿಯಾದ ವಜ್ರಾಯುಧವೆಂದೂ, ವೃಷ್ಟ್ಯುದಕಾದಿಗಳಿಗೆ ಅಧಿದೇವತೆಯಾದ ಪರ್ಜನ್ಯನೆಂದೂ ಸಹ ಅನೇಕ ಕಡೆಗಳಲ್ಲಿ ಹೇಳಿದೆ.

ಪ್ರಾಕ್ತಾದಪಾಕ್ತಾದಧರಾದುದಕ್ತಾದಭಿ ಜಹಿ ರಕ್ಷಸಃ ಪರ್ವತೇನ ।

(ಋ. ಸಂ. ೭-೧೦೪-೧೯)

ಅಸ್ಮೇ ರುದ್ರಾ ಮೇಹನಾ ಪರ್ವತಾಸೋ ವೃತ್ರಹತ್ಯೇ ಭರಹೂತೌ ಸಜೋಷಾಃ ।

(ಋ. ಸಂ. ೮-೬೩-೧೨)

ಇತ್ಯಾದಿ ಋಕ್ಕುಗಳಲ್ಲಿ ಪರ್ವತಗಳು ಶತ್ರುನಾಶಕಾರ್ಯದಲ್ಲಿ ಇಂದ್ರನಿಗೆ ಸಹಾಯಕಗಳಾದ ಸಾಧನಗಳಾಗಿವೆ.

ಪ್ರ ಪೂಷಣಂ ವಿಷ್ಣುಮಗ್ನಿಂ ಪುರಂಧಿಂ ಸವಿತಾರಮೋಷಧೀಃ ಪರ್ವತಾಂಶ್ಚ ।

(ಋ ಸಂ. ೬-೨೧-೯)

ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸನ್ತ್ವಾಪಃ ।

(ಋ. ಸಂ. ೭-೩೫-೮)

ಇತ್ಯಾದಿ ಋಕ್ಕುಗಳಲ್ಲಿ ಪರ್ವತಕ್ಕೆ ಮಿತ್ರ, ವರುಣ, ಪೂಷ ಮುಂತಾದ ದೇವತೆಗಳೊಡನೆ ಆಹ್ವಾನವಿದೆ

ಯುವಂ ತಮಿಂದ್ರಾಪರ್ವತಾ ಪುರೋಯುಧಾ ಯೋ ನಃ ಪೃತನ್ಯಾದಪ ತಂತಮಿದ್ಧತಂ ವಜ್ರೇಣ ತಂತಮಿದ್ಧತಂ ।

(ಋ. ಸಂ. ೧-೧೩೨-೬)

ಇಂದ್ರಾಪರ್ವತಾ ಬೃಹತಾ ರಥೇನ ವಾಮೀರಿಷ ಆ ವಹತಂ ಸುವೀರಾಃ ।

(ಋ. ಸಂ. ೩-೫೩-೧)

ಎಂಬ ಕಡೆಗಳಲ್ಲಿಯೂ, ಪ್ರಕೃತವಾದ ಋಕ್ಕಿನಲ್ಲಿಯೂ ಇಂದ್ರನಿಗೂ, ಪರ್ವತಕ್ಕೂ ಜೊತೆಯಲ್ಲಿ ಆಹ್ವಾನವೂ ಸ್ತುತಿಯೂ ಇದೆ. ಇಲ್ಲಿ ಪರ್ವತವೆಂದರೆ ಪರ್ಜನ್ಯನೆಂಬರ್ಥವೆಂದು ಸಾಯಣರು ಹೇಳಿದ್ದಾರೆ. ಇಲ್ಲಿ ಪರ್ವತವು ಆರಾಧ್ಯ ದೇವತೆ.

ವಾಮೀಃ ಸುವೀರಾಃ ಇಷಃ—ಇಷಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯) ಇಲ್ಲಿ ವಾಮೀಃ ಸುವೀರಾಃ ಎಂಬ ಶಬ್ದಗಳು ಇಷಃ ಎಂಬ ಪದಕ್ಕೆ ವಿಶೇಷಣವಾಗಿವೆ. ಹೊಂದಲ್ಪಡಬೇಕಾದ ಮತ್ತು ವೀರರಾದ ಪುತ್ರರೊಡಗೂಡಿದ ಅನ್ನವನ್ನು ಎಂದರೆ, ನಾವು ನಿನ್ನ ಅನುಗ್ರಹದಿಂದ ನಮಗೆ ದೊರೆಯಬಹುದಾದ ವೀರರಾದ ಪುತ್ರರನ್ನೂ ಅನ್ನವನ್ನೂ ತೆಗೆದುಕೊಂಡು ಬನ್ನಿ ಎಂದಭಿಪ್ರಾಯವು.

---

ಸಂಹಿತಾಪಾಠಃ

ತಿಷ್ಠಾ ಸು ಕಂ ಮಘವನ್ಮಾ ಪರಾ ಗಾಃ ಸೋಮಸ್ಯ ನು ತ್ವಾ ಸುಷುತಸ್ಯ ಯಕ್ಷಿ ।

ಪಿತುರ್ನ ಪುತ್ರಃ ಸಿಚಮಾ ರಭೇ ತ ಇಂದ್ರ ಸ್ವಾದಿಷ್ಠಯಾ ಗಿರಾ ಶಚೀವಃ ॥

CC-0. Jangamwadi Math Collection. Digitized by eGangotri

ಪದಪಾಠಃ

ತಿಷ್ಠ । ಸು । ಕಂ । ಮಘಽವನ್ । ಮಾ । ಪರಾ । ಗಾಃ । ಸೋಮಸ್ಯ । ನು । ತ್ವಾ । ಸುಽಸುತಸ್ಯ । ಯಕ್ಷಿ ।

ಪಿತುಃ । ನಃ । ಪುತ್ರಃ । ಸಿಚಂ । ಆ । ರಭೇ । ತೇ । ಇಂದ್ರ । ಸ್ವಾದಿಷ್ಠಯಾ । ಗಿರಾ । ಶಚೀಽವಃ ॥ ೨ ॥

ಸಾಯಣಭಾಷ್ಯಂ

ಅಹರ್ಗಣೇಷ್ವಂತ್ಯವರ್ಜಿತೇಷ್ವಹಃಸು ಹಾರಿಯೋಜನಸ್ಯ ತಿಷ್ಠಾ ಸು ಕಮಿತ್ಯನುವಾಕ್ಯಾ । ಸೂತ್ರಿತಂ ಚ। ತಿಷ್ಠಾ ಸು ಕಂ ಮಘವನ್ಮಾ ಪರಾ ಗಾ ಅಯಂ ಯಜ್ಞೋ ದೇವಯಾ ಅಯಂ ಮಿಯೇಧಃ । ಆ. ೬-೧೧ । ಇತಿ ॥

ಹೇ ಮಘವನ್ಧನವನ್ನಿಂದ್ರ ಕಂ ಸುಖೇನಾಸ್ಮಿನ್ಯಜ್ಞೇ ಸು ತಿಷ್ಠ । ಸುಷ್ಠು ಕಂಚಿತ್ಕಾಲಮತ ತಿಷ್ಠ । ಮಾ ಪರಾ ಗಾಃ । ಅಸ್ಮದೀಯಾದ್ಯಜ್ಞಾನ್ಮಾ ಗಚ್ಛ ॥ ತತ್ರ ಕಾರಣಮಾಹ । ಸುಷುತಸ್ಯ ಸುಷ್ಠ್ವಭಿಷುತೇನ ಸೋಮಸ್ಯ ಸೋಮೇನ ನು ಕ್ಷಿಪ್ರಂ ತ್ವಾಂ ಯಕ್ಷಿ । ಯಜೇ । ಹೇ ಶಚೀವಃ ಶಕ್ತಿಮನ್ನಿಂದ್ರ ತೇ ತವ ಸಿಚಂ ವಸ್ತ್ರಪ್ರಾಂತಂ ಸ್ವಾದಿಷ್ಠಯಾ ಸ್ವಾದುತರಯಾ ಸ್ತುತಿಲಕ್ಷಣಯಾ ಗಿರಾ ಆ ರಭೇ । ಆಲಭೇ। ಗೃಹ್ಣಾಮೀತ್ಯರ್ಥಃ । ತತ್ರ ದೃಷ್ಟಾಂತಃ । ಪಿತುರ್ನ । ಯಥಾ ಪುತ್ರೋ ಮಧುರಯಾ ವಾಚಾ ಪಿತುರ್ಜನಕಸ್ಯ ಚೇಲಾಂಚಲಂ ಗೃಹ್ಣಾತಿ ತದ್ವತ್ ॥ ಸು ಕಮಿತಿ ನಿಪಾತದ್ವಯಂ । ಪ್ರಥಮಸ್ಯ ನಿಪಾತಾ ಆದ್ಯುದಾತ್ತಾ ಇತ್ಯಾದ್ಯುದಾತ್ತತ್ವಂ । ದ್ವಿತೀಯಸ್ಯ ಚಾದಯೋಽನುದಾತ್ತಾ ಇತ್ಯನುದಾತ್ತತ್ವಂ । ಸೋಮಸ್ಯ ಯಕ್ಷಿ । ಯಜ ದೇವಪೂಜಾಸಂಗತಿಕರಣದಾನೇಷು । ಸ್ವರಿತಞಿತ ಇತ್ಯಾತ್ಮನೇಪದಂ । ತಸ್ಯ ಲಃ ಜಾ ಸಿಚ್ಯೇಕಾಚ ಇತೀಟ್‌ಪ್ರತಿಷೇಧಃ । ವ್ರಶ್ಚಾದಿನಾ ಷತ್ವಂ । ಷಢೋಃ ಕಃ ಸೀತಿ ಕತ್ವಂ । ಸಿಚಃ ಸಕಾರಸ್ಯ ಷತ್ವಂ । ನಿಘಾತಃ । ರಭೇ । ಡುಲಭಷ್ ಪ್ರಾಪ್ತೌ । ಲಟ್ಯುತ್ತಮ ಇಟಿ ರೂಪಂ । ರಲಯೋರಭೇದಃ । ನಿಘಾತಃ । ಸ್ವಾದಿಷ್ಠಯಾ । ಸ್ವಾದುಶಬ್ದಾದಿಷ್ಠನಿ ರೂಪಂ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ ಇಂದ್ರನೇ । **ಕಂ**—ಸುಖವಾಗಿ । **ಸು ತಿಷ್ಠ**—ಈ ಯಜ್ಞಪ್ರದೇಶದಲ್ಲೇ ಇರು। **ಮಾ ಪರಾಗಾಃ**—ಈ ಪ್ರದೇಶದಿಂದ ಬೇರೆ ಕಡೆಗೆ ಹೋಗಬೇಡ (ಏತಕ್ಕೆಂದರೆ)। **ಸುಷುತಸ್ಯ**—ಶ್ರೇಷ್ಠವಾಗಿ ಹಿಂಡಲ್ಪಟ್ಟ । **ಸೋಮಸ್ಯ**—ಸೋಮದಿಂದ । **ನು**—ಶೀಘ್ರವಾಗಿ । **ತ್ವಾ**—ನಿನ್ನನ್ನು । **ಯಕ್ಷಿ**—ಪೂಜಿಸುತ್ತೇನೆ । **ಶಚೀವಃ**—ಶಕ್ತಿವಂತನಾದ । **ಇಂದ್ರ**—ಇಂದ್ರನೇ । **ಪುತ್ರಃ**—ಪುತ್ರನಾದವನು । **ಪಿತುಃ ನ**—(ಮಧುರವಾಕ್ಕಿನಿಂದ) ತಂದೆಯ ವಸ್ತ್ರಾಂತವನ್ನು ಹಿಡಿದು ಮಾತನಾಡಿಸುವಂತೆ । **ತೇ**—ನಿನ್ನ । **ಸಿಚಂ**-ವಸ್ತ್ರಾಂತವನ್ನು । **ಸ್ವಾದಿಷ್ಠಯಾ**—ಅತ್ಯಂತ ಹೃದಯಂಗಮವಾದ । **ಗಿರಾ**—ಸ್ತುತಿರೂಪವಾದ ವಾಕ್ಕಿನೊಡನೆ । **ಆ ರಭೇ**—ಹಿಡಿದಿರುತ್ತೇನೆ.

ಭಾವಾರ್ಥ

ಧನವಂತನಾದ ಇಂದ್ರನೇ, ನೀನು ಸುಖವಾಗಿ ಈ ಯಜ್ಞಪ್ರದೇಶದಲ್ಲೇ ಇರು. ಶ್ರೇಷ್ಠವಾಗಿ ಹಿಂಡಲ್ಪಟ್ಟ ಸೋಮದಿಂದ ನಿನ್ನನ್ನು ಶೀಘ್ರವಾಗಿ ಪೂಜಿಸುತ್ತೇನೆ ಆದುದರಿಂದ ಈ ಪ್ರದೇಶವನ್ನು ಬಿಟ್ಟು ಬೇರೆ ಕಡೆ ಹೋಗಬೇಡ

CC-0. Jangamwadi Math Collection. Digitized by eGangotri

ಶಕ್ತಿವಂತನಾದ ಇಂದ್ರನೇ, ಪುತ್ರನಾದವನು ಮಧುರವಾದ ಮಾತನಾಡುತ್ತಾ ತಂದೆಯ ವಸ್ತ್ರಾಂತವನ್ನು ಹಿಡಿದಿರುವಂತೆ ನಾನೂ ಸಹ ಅತ್ಯಂತ ಹೃದಯಂಗಮವಾದ ವಾಕ್ಕಿನೊಡನೆ ನಿನ್ನ ವಸ್ತ್ರಾಂತವನ್ನು ಹಿಡಿದಿರುತ್ತೇನೆ ಮತ್ತು ನಿನ್ನನ್ನು ಸ್ತುತಿಸುತ್ತೇನೆ.

## English Translation

Tarry awhile contentedly, Maghavan, (at our rite): go not away; for I offer to you (the libation) of the copiously-effused Soma: powerful Indra, I lay hold of the skirts (of your robe) with sweet flavoured commendations, as a son (clings to the garment) of a father.

## ವಿಶೇಷವಿಷಯಗಳು

ಅಹರ್ಗಣವೆಂಬ ಯಾಗದ ಕೊನೆಯ ದಿವಸದ ಹಿಂದಿನ ದಿವಸದಲ್ಲಿ ಹಾರಿಯೋಜನವೆಂಬ ಕರ್ಮದಲ್ಲಿ ತಿಷ್ಠಾಸು ಕಂ ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ತಿಷ್ಠಾ ಸು ಕಂ ಮಘವನ್ಮಾ ಪರಾ ಗಾ ಅಯಂ ಯಜ್ಞೋ ದೇವಯಾ ವಯಂ ಮಿಯೇಥಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೧೧)

**ಶಚಿವಃ ಇಂದ್ರ ಪಿತುಃ ನ ಪುತ್ರಃ ಸ್ವಾದಿಷ್ಠಯಾ ಗಿರಾ ತೇ ಸಿಚಂ ಆ ರಭೇ— ಹೇ ಶಕ್ತಿಮನ್ನಿಂದ್ರ ತವ ವಸ್ತ್ರಪ್ರಾಂತಂ ಯಥಾ ಜನಕಸ್ಯ ಚೇಲಾಂಚಲಂ ಪುತ್ರೋ ಮಧುರಯಾ ವಾಚಾ ಗೃಹ್ಣಾತಿ ತದ್ವತ್ ಸ್ವಾದುತರಯಾ ಸ್ತುತಿಲಕ್ಷಣಯಾ ಗಿರಾ ತವ ವಸ್ತ್ರಪ್ರಾಂತಂ ಆಲಭೇ ।** ಇಲ್ಲಿ ಶಚೀಶಬ್ದವು ವಾಙ್ನಾಮಗಳಲ್ಲಿಯೂ (ನಿ. ೨-೨೩) ಕರ್ಮನಾಮಗಳಲ್ಲಿಯೂ (ನಿ. ೩-೧) ಪ್ರಜ್ಞಾನಾಮಗಳಲ್ಲಿಯೂ (ನಿ. ೩-೧೩) ಪಠಿತವಾಗಿದೆ. ಇಲ್ಲಿ ಭಾಷ್ಯಕಾರರು ಬಲವೆಂದು ಅರ್ಥಮಾಡಿ ಶಕ್ತಿಯುಳ್ಳ ಇಂದ್ರನೆಂದು ಅರ್ಥವಿವರಣೆಮಾಡಿದಾರೆ. ಮೇಲೆ ಹೇಳಿರುವ ವಾಕ್ಯದಲ್ಲಿ— ಎಲೈ ಇಂದ್ರನೇ, ಪುತ್ರನು ತನ್ನ ತಂದೆಯೊಡನೆ ಪ್ರೀತ್ಯಾದರಗಳಿಂದ ಮಾತನಾಡುವಾಗ ತಂದೆಯು ಧರಿಸಿರುವ ವಸ್ತ್ರದ ತುದಿಯನ್ನು ಹಿಡಿದುಕೊಂಡಿರುವಂತೆ ನಾನೂ ಸಹ ನಿನ್ನ ವಸ್ತ್ರದ ತುದಿಯನ್ನು ಹಿಡಿದುಕೊಂಡು ಪ್ರೀತಿಯುತವಾದ ಮಧುರವಾಕ್ಯಗಳನ್ನು ಹೇಳುವೆನು ಎಂದು ದೃಷ್ಟಾಂತಸಹಿತವಾಗಿ ಋಷಿಯು ವರ್ಣನೆಮಾಡಿದಾನೆ.

---

## ಸಂಹಿತಾಪಾಠಃ

ಶಂಸಾವಾಧ್ವರ್ಯೋ ಪ್ರತಿ ಮೇ ಗೃಣೀಹೀಂದ್ರಾಯ ವಾಹಃ ಕೃಣವಾವ ಜುಷ್ಟಂ ।
ಏದಂ ಬರ್ಹಿರ್ಯಜಮಾನಸ್ಯ ಸೀದಾಥಾ ಚ ಭೂದುಕ್ಥಮಿಂದ್ರಾಯ ಶಸ್ತಂ ॥ ೩ ॥



CC-0. Jangamwadi Math Collection. Digitized by eGangotri

ಪದಪಾಠಃ

ಶಂಸಾವ । ಅಧ್ವರ್ಯೋ ಇತಿ । ಪ್ರತಿ । ಮೇ । ಗೃಣೀಹಿ । ಇಂದ್ರಾಯ । ವಾಹಃ । ಕೃಣವಾವ । ಜುಷ್ಟಂ ಆ । ಇದಂ । ಬರ್ಹಿಃ । ಯಜಮಾನಸ್ಯ । ಸೀದ । ಅಥ । ಚ । ಭೂತ್ । ಉಕ್ಥಂ । ಇಂದ್ರಾಯ । ಶಸ್ತಂ ॥

ಸಂಹಿತಾಪಾಠಃ

ಶಂಸಿಷ್ಯನ್ ಹೋತಾಧ್ವರ್ಯುಂ ಬ್ರೂತೇ । ಹೇ ಅಧ್ವರ್ಯೋ ಆವಾಂ ಶಂಸಾವ । ಹೋತಸ್ತ್ವಮೇವ ಶಂಸಸಿ । ಕಥಮಹಂ ಶಂಸಾನಿ । ಅತ ಆಹ । ಪ್ರತಿ ಮೇ ಗೃಣೀಹೀತಿ । ತ್ವಂ ಮೇ ಪ್ರತಿಗೃಣೀಹಿ । ಓಥಾಮೋದೈವೇತ್ಯಾದಿಕೋ ಹೋತುರುತ್ಸಾಹಜನನಃ ಪ್ರತಿಗರಃ । ಆ. ೭-೧೧ । ತಂ ಪತ್ಸ್ವ । ತಥೇಂದ್ರಾಯ ಜುಷ್ಟಂ ಪ್ರೀತಿಯುಕ್ತಂ ವಾಹಃ ಸ್ತೋತ್ರಂ ಕೃಣವಾವ । ತ್ವಂ ಯಜಮಾನಸ್ಯೇದಂ ಬರ್ಹಿರಸ್ಮಿನ್ಬರ್ಹಿಷ್ಯಾ ಸೀದ । ಉಪವಿಶ । ಅಥ ಚಾನಂತರಮಿಂದ್ರಾಯೇಂದ್ರಾರ್ಥಮಾವಾಭ್ಯಾಂ ಕ್ರಿಯಮಾಣಮುಕ್ಥಂ ಶಸ್ತ್ರಂ ಶಸ್ತಂ ಪ್ರಶಸ್ತಂ ಭೂತ್ । ಭವತು ॥ ಶಂಸಾವ । ಶನ್ಸು ಸ್ತುತಃವಿತ್ಯಸ್ಯ ಲೋಟ್ಯುತ್ತಮದ್ವಿವಚನೇ ರೂಪಂ । ಆಡುತ್ತಮಸ್ಯೇತ್ಯಾಡಾಗಮಃ। ಉತ್ತಮಸ್ಯ ಪಿದ್ವದ್ಭಾವಾದನುದಾತ್ತತ್ವೇ ಧಾತುಸ್ವರಃ ಮೇ । ಅನುಪ್ರತಿಗೃಣಶ್ಚ । ಪಾ. ೧-೪-೪೧ । ಇತಿ ಸಂಪ್ರದಾನಸಂಜ್ಞಾ । ಜುಷ್ಟಂ । ನಿತ್ಯಂ ಮಂತ್ರ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ಅಧ್ವರ್ಯೋ**—ಎಲೈ ಅಧ್ವರ್ಯುವೇ । **ಶಂಸಾವ**—ನಾವಿಬ್ಬರೂ (ಇಂದ್ರನನ್ನು) ಸ್ತುತಿಸೋಣ । **ಪ್ರತಿ ಮೇ ಗೃಣೀಹಿ**—ನೀನು ನನ್ನೊಡನೆ ಅನುಮೋದಿಸು । **ಇಂದ್ರಾಯ**—ಇಂದ್ರನನ್ನುದ್ದೇಶಿಸಿ । **ಜುಷ್ಟಂ**—ಪ್ರೀತಿಯುಕ್ತವಾದ । **ವಾಹಃ**—ಸ್ತೋತ್ರವನ್ನು । **ಕೃಣವಾವ**—ನಿರ್ಮಿಸೋಣ । **ಯಜಮಾನಸ್ಯ**—ಯಜಮಾನನ । **ಇದಂ ಬರ್ಹಿಃ**—ಈ ದರ್ಭಾಸನದ ಮೇಲೆ । **ಆ ಸೀದ**—ಕುಳಿತುಕೊ । **ಅಥ ಚ**—ಅನಂತರ । **ಇಂದ್ರಾಯ**—ಇಂದ್ರನಿಗಾಗಿ ನಿರ್ಮಿತವಾಗುವ । **ಉಕ್ಥಂ**—ಶಸ್ತ್ರಮಂತ್ರಪಠನವು । **ಶಸ್ತಂ ಭೂತ್**—ಪ್ರಶಸ್ತವಾಗಿ ಆಗಲಿ.

ಭಾವಾರ್ಥ

ಎಲೈ ಅಧ್ವರ್ಯುವೇ, ನಾವಿಬ್ಬರೂ ಇಂದ್ರನನ್ನು ಸ್ತುತಿಸೋಣ. ನೀನು ನನ್ನೊಡನೆ ಅನುಮೋದಿಸು. ಇಂದ್ರನನ್ನುದ್ದೇಶಿಸಿ ಪ್ರೀತಿಯುಕ್ತವಾದ ಸ್ತುತಿಯನ್ನು ನಿರ್ಮಿಸೋಣ. ಯಜಮಾನನ ಈ ದರ್ಭಾಸನದ ಮೇಲೆ ಕುಳಿತುಕೊ. ಅನಂತರ ಇಂದ್ರನಿಗಾಗಿ ನಿರ್ಮಿತವಾಗುವ ಶಸ್ತ್ರಮಂತ್ರಪಠನವು ಪ್ರಶಸ್ತವಾಗಿ ಆಗಲಿ.

## English Translation

Adhwaryu, let us two offer praise : do you concur with me : let us address pleasing praise to Indra : sit down, Indra, on the sacred grass (prepared by) the institutor of the rite : and may our commendations be most acceptable to Indra.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಹೋತೃವು ಅಧ್ವರ್ಯುವೆಂಬ ಋತ್ವಿಜನನ್ನು ಸಂಬೋಧಿಸಿ—ತಾವಿಬ್ಬರೂ ಯಜಮಾನನು ನೆರವೇರಿಸುವ ಈ ಯಜ್ಞದಲ್ಲಿ ದರ್ಭಾಸನದ ಮೇಲೆ ಕುಳಿತುಕೊಂಡು ಉತ್ಕೃಷ್ಟವಾದ ಶಸ್ತ್ರಮಂತ್ರಗಳಿಂದ ಇಂದ್ರನನ್ನು ಸ್ತುತಿಸೋಣ ಎಂದು ಹೇಳುತ್ತಿರುವುದನ್ನು ಋಷಿಯು ವಿವರಿಸಿದಾನೆ.

ಸಂಹಿತಾಪಾಠಃ

ಜಾಯೇದಸ್ತಂ ಮಘವನ್ತ್ಸೇದು ಯೋನಿಸ್ತದಿತ್ತ್ವಾ ಯುಕ್ತಾ ಹರಯೋ ವಹಂತು ।
ಯದಾ ಕದಾ ಚ ಸುನವಾಮ ಸೋಮಮಗ್ನಿಷ್ಟ್ವಾ ದೂತೋ ಧನ್ವಾತ್ಯಚ್ಛ ॥

ಪದಪಾಠಃ

ಜಾಯಾ । ಇತ್ । ಅಸ್ತಂ । ಮಘ್ಽವನ್ । ಸಾ । ಇತ್ । ಊಂ ಇತಿ । ಯೋನಿಃ । ತತ್ । ಇತ್ । ತ್ವಾ । ಯುಕ್ತಾಃ । ಹರಯಃ । ವಹಂತು ।

ಯದಾ । ಕದಾ । ಚ । ಸುನವಾಮ । ಸೋಮಂ । ಅಗ್ನಿಃ । ತ್ವಾ । ದೂತಃ । ಧನ್ವಾತಿ । ಅಚ್ಛ ॥ ೪ ॥

ಸಾಯಣಭಾಷ್ಯಂ

ಹೇ ಮಘವನ್ಧನವನ್ನಿಂದ್ರ ಅಸ್ತಂ । ಅಸ್ಯಂತೇ ಕ್ಷಿಪ್ಯಂತೇ ಪದಾರ್ಥಾ ಅತ್ರೇತ್ಯಸ್ತಂ ಗೃಹಂ । ಜಾಯೇಜ್ಜಾಯೈವ ಗೃಹಂ ಭವತಿ । ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತ ಇತಿ ಸ್ಮೃತೇಃ । ತಥಾ ಸೇತ್ ಸಾ ಜಾಯೈವ ಯೋನಿಃ ಪುರುಷಸ್ಯ ಮಿಶ್ರಣಸ್ಥಾನಂ । ಉ ಪ್ರಸಿದ್ಧ್ಯರ್ಥಃ । ತಸ್ಮಾತ್ತದಿತ್ ತತ್ರ ಗೃಹ ಏವ ಯುಕ್ತಾ ರಥೇ ಯೋಜಿತಾ ಹರಯೋಽಶ್ವಾಸ್ತ್ವಾ ತ್ವಾಂ ವಹಂತು । ವಯಂ ತು ಯದಾ ಕದಾ ಚ ತ್ವದರ್ಥಂ ಸೋಮಂ ಸುನವಾಮ ಅಭಿಷುತಂ ಕರವಾಮ ತದಾಸ್ಮಾಭಿಃ ಪ್ರಹಿತೋ ದೂತೋಽಗ್ನಿಸ್ತ್ವಾ ತ್ವಾಮಚ್ಛಾಭಿಮುಖ್ಯೇನ ಧನ್ವಾತಿ । ಗಚ್ಛೇತ್ ॥ ಅಸ್ತಂ। ಅಸು ಕ್ಷೇಪಣೇ । ಅಸಿಹಸಿಮೃಗ್ರಿಣ್ವಾಮಿತ್ಯಾದಿನಾ ತನ್ಪ್ರತ್ಯಯಃ। ನಿತ್ತ್ವಾದಾದ್ಯುದಾತ್ತಃ । ಸುನವಾಮ । ಷುಞ್ ಅಭಿಷವ ಇತ್ಯಸ್ಯ ಲೋಟಿ ರೂಪಂ । ಯದ್ವೃತ್ತಯೋಗಾದನಿಘಾತಃ । ತ್ವಾ । ಯುಷ್ಮತ್ತತ್ತತಕ್ಷುಃಷ್ವಂತಃಪಾದಮಿತಿ ಸಂಹಿತಾಯಾಂ ಷತ್ವಂ । ಧನ್ವಾತಿ । ಧವಿ ಗತ್ಯರ್ಥಃ । ಲೇಟ್ಯಾಡಾಗಮೋ ರೂಪಂ । ನಿಘಾತಃ ॥

ಪ್ರತಿಪದಾರ್ಥ

ಮಘವನ್—ಧನವಂತನಾದ ಇಂದ್ರನೇ । ಜಾಯೇತ್—ಪತ್ನಿಯೇ । ಅಸ್ತಂ—(ಪುರುಷನಿಗೆ) ಗೃಹವಾಗಿದ್ದಾಳೆ । ಸೇತ್—ಅವಳೇ । ಯೋನಿಃ—(ಇವನೊಡನೆ) ಉತ್ಪತ್ತಿಸ್ಥಾನವು. । ತದಿತ್—ಅದೇ (ಯಜ್ಞ)

CC-0. Jangamwadi Math Collection. Digitized by eGangotri

ಗೃಹಕ್ಕೆ । ಯುಕ್ತಾಃ—(ನಿನ್ನ) ರಥಕ್ಕೆ ಕಟ್ಟಲ್ಪಟ್ಟ । ಹರಯಃ—ಅಶ್ವಗಳು । ತ್ವಾ—ನಿನ್ನನ್ನು । ವಹಂತು—ಕರೆತರಲಿ । ಯದಾ ಕದಾ ಚ—ಯಾವ ಯಾವ ಸಂದರ್ಭಗಳಲ್ಲಿ । ಸೋಮಂ—ಸೋಮವನ್ನು । ಸುನವಾಮ—(ನಿನಗಾಗಿ) ಸಿದ್ಧಪಡಿಸುತ್ತೇವೆಯೋ (ಆಗಲ್ಲಾ) । ದೂತಃ—ದೇವದೂತನಾದ । ಅಗ್ನಿಃ—ಅಗ್ನಿಯು । ತ್ವಾ—ನಿನಗೆ । ಅಚ್ಛ—ಅಭಿಮುಖನಾಗಿ । ಧನ್ವತಿ—ಬರಲಿ.

ಭಾವಾರ್ಥ

ಎಲೈ ಧನವಂತವಾದ ಇಂದ್ರನೇ, ಪುರುಷನಿಗೆ ಪತ್ನಿಯೇ ಗೃಹವಾಗಿದ್ದಾಳೆ. ಅವಳೇ ಉತ್ಪತ್ತಿಸ್ಥಾನವು. ನಿನಗೆ ಪತ್ನೀಭೂತವಾದ ಅದೇ ಯಜ್ಞಗೃಹಕ್ಕೆ ನಿನ್ನ ರಥಕ್ಕೆ ಯೋಜಿಸಲ್ಪಟ್ಟ ಅಶ್ವಗಳು ನಿನ್ನನ್ನು ಕರೆತರಲಿ. ಯಾವ ಸಂದರ್ಭಗಳಲ್ಲಿ ನಿನಗಾಗಿ ಸೋಮವನ್ನು ಸಿದ್ಧಪಡಿಸುತ್ತೇವೆಯೋ, ಆಗೆಲ್ಲಾ ದೇವದೂತನಾದ ಅಗ್ನಿಯು ನಿನಗೆ ಅಭಿಮುಖನಾಗಿ ಬರಲಿ.

English Translation

A man's wife, Maghavan, is his dwelling ; verily she is his place of birth : thither let your horses, harnessed (to your car), convey you : we prepare the soma juice at the fit season : may Agni come as our messenger before you.

ವಿಶೇಷವಿಷಯಗಳು

**ಅಸ್ತಂ—ಅಸ್ಯಂತೇ ಕ್ಷಿಪ್ಯಂತೇ ಪದಾರ್ಥಾ ಅತ್ರೇತ್ಯಸ್ತಂ ಗೃಹಂ** । ಪದಾರ್ಥಗಳು ಯಾವ ಸ್ಥಳಗಳಲ್ಲಿ ಇಡಲ್ಪಡುತ್ತವೆಯೋ ಆ ಸ್ಥಳಕ್ಕೆ ಗೃಹವು ಎಂದರೆ **ಅಸ್ತಂ** ಎಂಬ ಶಬ್ದಕ್ಕೆ ಮನೆಯೆಂದು ಭಾಷ್ಯಕಾರರು ಅರ್ಥವಿವರಣೆ ಮಾಡಿದಾರೆ.

**ಜಾಯೇ ಇತ್—ಜಾಯೈವ ಗೃಹಂ ಭವತಿ** । ಜಾಯಾ ಎಂದರೆ ಪತ್ನಿಯು ಅಥವಾ ಗೃಹಿಣಿಯು. ಪುರುಷನಿಗೆ ತನ್ನ ಪತ್ನಿಯು ಅಥವಾ ತನ್ನ ಪತ್ನಿಯು ಇರುವ ಸ್ಥಳವೇ ಮನೆಯೆಂದು ಭಾವಿಸಲ್ಪಡುವುದು ಎಂದು ಗೃಹ ಶಬ್ದಕ್ಕೆ ಅರ್ಥವನ್ನು ವಿವರಿಸಿ ಅದರ ಸಮರ್ಥನೆಗಾಗಿ—**ನ ಗೃಹಂ ಗೃಹಮಿತ್ಯಾಹುರ್ಗೃಹಿಣೀ ಗೃಹಮುಚ್ಯತೇ** ಎಂಬ ಸ್ಮೃತಿವಾಕ್ಯವನ್ನು ಉದಾಹರಣೆಯಾಗಿ ಕೊಟ್ಟಿದಾರೆ. ಗೃಹವೆಂದರೆ ವಾಸಮಾಡಲು ಕಟ್ಟಿರುವ ಮನೆ ಅಥವಾ ಕಟ್ಟಡ ಎಂದರ್ಥವಾಗುವುದಿಲ್ಲ. ಗೃಹಸ್ಥನಾದವನಿಗೆ ತನ್ನ ಪತ್ನಿಯೇ ಅಥವಾ ಪತ್ನಿಯಿರುವ ಸ್ಥಳವೇ ಗೃಹವೆನಿಸುವುದು. ಪತ್ನಿಯಿಲ್ಲದ ಮನೆಯು ಮನೆಯೆನಿಸುವುದಿಲ್ಲ ಎಂದು ಈ ವಾಕ್ಯದ ಅಭಿಪ್ರಾಯವು. ಆದ್ದರಿಂದ ಗೃಹಸ್ಥನ ಗೃಹದಲ್ಲಿ ಪತ್ನಿಯ ಪಾತ್ರವು ಬಹುಮುಖ್ಯವಾದುದೆಂದು ಸೂಚಿತವಾಗುವುದು.

**ಸಾ ಇತ್ ಯೋನಿಃ ಉ—ಸಾ ಜಾಯೇವ ಪುರುಷಸ್ಯ ಯೋನಿಃ ಮಿಶ್ರಣಸ್ಥಾನಂ** । ಆ ಪತ್ನಿಯೇ ಪುರುಷನಿಗೆ ಸುಖದುಃಖಗಳಿಗೆ ಉತ್ಪತ್ತಿಸ್ಥಾನವು, ಇದು ಪ್ರಸಿದ್ಧವು ಎಂದರೆ ಪುರುಷನಿಗೆ ಪತ್ನಿಯಿಂದಲೇ ಸುಖವು ಲಭಿಸುವುದಲ್ಲದೆ ಅನೇಕ ಸಂದರ್ಭಗಳಲ್ಲಿ ಗೃಹಕೃತ್ಯಾದಿಗಳನ್ನು ನಿರ್ವಹಿಸುವಾಗ ದುಃಖವೂ ಉಂಟಾಗುವುದು. ಆದ್ದರಿಂದಲೇ ಯೋನಿಶಬ್ದಕ್ಕೆ ಭಾಷ್ಯಕಾರರು **ಮಿಶ್ರಣಸ್ಥಾನಂ**—ಸುಖದುಃಖಗಳಿಂದ ಸಹಿತವಾದ ಸ್ಥಾನವು ಎಂದು ಅರ್ಥ ವಿವರಣೆ ಮಾಡಿರುವರು. ಈ ವಿಷಯವು ಪ್ರಸಿದ್ಧವಾಗಿದೆ ಎಂದರೆ ಎಲ್ಲರಿಗೂ ತಿಳಿದೇ ಇದೆ ಎಂದಭಿಪ್ರಾಯವು.

CC-0. Jangamwadi Math Collection. Digitized by eGangotri

ತೇತ್ ಇತ್ ತ್ವಾ ಯುಕ್ತಾಃ ಹರಯಃ ವಹಂತು—ತಸ್ಮಾತ್ತತ್ರ ಗೃಹ ಏವ ರಥೇ ಯೋಜಯಿತಾ ಹರಯೋಽಶ್ವಾಸ್ತ್ವಾಂ ವಹಂತು । ಆದುದರಿಂದಲೇ ಅಂತಹ ಗೃಹದ ಸಮೀಪಕ್ಕೆ ನಿನ್ನ ಕುದುರೆಗಳು ರಥದಲ್ಲಿ ನಿನ್ನನ್ನು ಕರೆತರಲಿ ಇಲ್ಲಿ ಗೃಹವೆಂದರೆ ಯಜಮಾನನ ಯಜ್ಞಗೃಹವೆಂದು ಅರ್ಥಮಾಡಬೇಕು. ಪುರುಷ ತನ್ನ ಗೃಹಿಣಿ ಅಥವಾ ಪತ್ನಿ ಇರುವ ಮನೆಗೆ ಯಾವ ರೀತಿ ಆತುರದಿಂದ ಬರುವನೋ ಅದೇರೀತಿ ಇಂದ್ರನಿಗೆ ಪತ್ನಿಯಂತೆ ಪ್ರಿಯವಾಗಿರುವ ಯಜ್ಞ ಅಥವಾ ಸೋಮರಸವು ಸಿದ್ಧವಾಗಿರುವ ಯಜಮಾನನ ಯಜ್ಞಗೃಹವು ಇಷ್ಟವಾಗಿರುವುದು. ಅಂತಹ ಯಜ್ಞಗೃಹಕ್ಕೆ ಇಂದ್ರನನ್ನು ಅವನ ಕುದುರೆಗಳು ರಥದಲ್ಲಿ ಕರೆತರಲಿ ಎಂದು ಋಷಿಯು ಪ್ರಾರ್ಥಿಸಿದಾನೆ.

ಯದಾ ಕದಾ ಚ ಸೋಮಂ ಸುನವಾಮ ಅಗ್ನಿಃ ತ್ವಾ ದೂತಃ ಅಚ್ಛ ಧನ್ವತಿ । ಎಲೈ ಇಂದ್ರನೇ, ನಾವು ನಿನಗಾಗಿ ಸೋಮರಸವನ್ನು ಹಿಂಡಿ ಸಿದ್ಧಪಡಿಸುವಾಗೆಲ್ಲಾ ನೀನು ನಮ್ಮ ಯಜ್ಞಗೃಹಾಭಿಮುಖವಾಗಿ ಬರಬೇಕು ಅದಕ್ಕಾಗಿ ಅಗ್ನಿಯು ದೂತನಾಗಿ ನಿನ್ನ ಅಭಿಮುಖವಾಗಿ (ನಿನ್ನಬಳಿಗೆ) ಬರುವನು ಎಂದು ಈ ವಾಕ್ಯದ ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ಪರಾ ಯಾಹಿ ಮಘವನ್ನಾ ಚ ಯಾಹೀಂದ್ರ ಭ್ರಾತರುಭಯತ್ರಾ ತೇ ಅರ್ಥಂ ।
ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ರಾಸಭಸ್ಯ ॥

ಪದಪಾಠಃ

ಪರಾ । ಯಾಹಿ । ಮಘವನ್ । ಆ । ಚ । ಯಾಹಿ । ಇಂದ್ರ । ಭ್ರಾತಃ । ಉಭಯತ್ರ । ತೇ । ಅರ್ಥಂ ।
ಯತ್ರ । ರಥಸ್ಯ । ಬೃಹತಃ । ನಿऽಧಾನಂ । ವಿऽಮೋಚನಂ । ವಾಜಿನಃ । ರಾಸಭಸ್ಯ ॥ ೩ ॥

ಸಾಯಣಭಾಷ್ಯಂ

ಅಹರ್ಗಣೇಽಂತ್ಯವರ್ಜಿತೇಷ್ವಹಃಸು ಹಾರಿಯೋಜನಸ್ಯ ವೈಕಲ್ಪಿಕೀ ಪರಾ ಯಾಹೀತ್ಯನುವಾಕ್ಯಾ । ಪರಾ ಯಾಹಿ ಮಘವನ್ನಾ ಚ ಯಾಹೀತಿ ವಾನುವಾಕ್ಯೇತಿ ಸೂತ್ರಿತಂ । ಆ. ೬–೧೧ ॥

ಹೇ ಮಘವನ್ಧನವನ್ನಿಂದ್ರ ತ್ವಂ ಪರಾ ಯಾಹಿ । ಅಸ್ಮಾದ್ದೇವಯಜನಾತ್ಪರಾಙ್ಮುಖೋ ಗೃಹಂ ಪ್ರತಿ ಗಚ್ಛ । ಅಥವಾ ದೇವಯಜನಂ ಪ್ರತ್ಯಾಯಾಹಿ । ಹೇ ಭ್ರಾತಃ ಪೋಷಕೋಭಯತ್ರಾಪಿ ತೇ ತವಾರ್ಥಂ ಅರ್ಯತೇ ಪ್ರಾಪ್ಯತ ಇತ್ಯರ್ಥಃ ಪ್ರಯೋಜನಂ । ಅಸ್ತಿ ತತ್ರ ಜಾಯಾತ್ರ ಸೋಮಃ । ಪ್ರಯೋಜನಾಂತರಮಾಹ । ಯತ್ರ ಗೃಹಂ ಪ್ರತಿ ಗಮನೇ ಬೃಹತೋ ಮಹತೋ ರಥಸ್ಯೋಪರಿ ನಿಧಾನಮವಸ್ಥಾನಂ ಪ್ರಯೋಜನಂ । ಅತ್ರ ಸ್ಥಿತಾ ರಾಸಭಸ್ಯ ಹೇಷಾರವಂ ಕುರ್ವತೋ ವಾಜಿನೋಽಶ್ವಸ್ಯ

CC-0. Jangamwadi Math Collection. Digitized by eGangotri

ರಥಾದ್ವಿಮೋಚನಂ ಪ್ರಯೋಜನಂ ॥ ಅರ್ಥಂ । ಋ ಗತೌ । ಉಷಿಕುಷಿಗಾರ್ತಿಭ್ಯಸ್ಥನ್ನಿತಿ ಥನ್ । ನಿಷ್ಟ್ವರಃ । ನಿಧಾನಂ । ದಧಾತೇರ್ಭಾವೇ ಲ್ಯುಟ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ರಾಸಭಸ್ಯ । ರಾಸೃ ಶಬ್ದೇ । ರಾಸಿವಲ್ಲಿಭ್ಯಾಂ ಚ । ಉ. ೩-೧೨೫ । ಇತಿ ಕರ್ತರ್ಯಭಚ್‌ಪ್ರತ್ಯಯಃ । ಗ್ರಾಮಾದಿತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ । **ಇಂದ್ರ**—ಎಲೈ ಇಂದ್ರನೇ । **ಪರಾ**—ಯಜ್ಞಗೃಹದಿಂದ । **ಯಾಹಿ**—ಹೋಗಬಹುದು (ಅಥವಾ) । **ಆ ಯಾಹಿ**—ಈ ಯಜ್ಞಗೃಹಕ್ಕೆ ಬಾ । **ಭ್ರಾತಃ**—ಪೋಷಕನಾದ ಇಂದ್ರನೇ । **ತೇ**—ನಿನ್ನ । **ಅರ್ಥಂ**—ಪ್ರಯೋಜನವು । **ಉಭಯತ್ರ**—ಎರಡು ವಿಧದಲ್ಲೂ ಆಗುತ್ತದೆ । **ಯತ್ರ**—ನಿನ್ನ ಗಮನಕ್ರಿಯೆಯಿಂದ । **ಬೃಹತಃ**—ಮಹತ್ತಾದ । **ರಥಸ್ಯ**—ರಥದ ಮೇಲೆ । **ನಿಧಾನಂ**—ನಿನ್ನ ಸ್ಥಾಪನವು (ಪ್ರಯೋಜಕವಾಗುತ್ತದೆ) (ಇಲ್ಲೇ ಇದ್ದರೆ) । **ರಾಸಭಸ್ಯ**—ನಿನ್ನ ಹೇಷಾಧ್ವನಿಮಾಡುತ್ತಿರುವ । **ವಾಜಿನಃ**—ಅಶ್ವದ । **ವಿಮೋಚನಂ**—(ರಥದಿಂದ) ಬಿಡುಗಡೆಯು (ಎರಡನೆಯ ಪ್ರಯೋಜನವಾಗುತ್ತದೆ).

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ನೀನು ಈ ಯಜ್ಞಗೃಹದಿಂದ ಹೊರಟರೂ, ಅಥವಾ ಇಲ್ಲಿಗೆ ಬಂದರೂ, ಉಭಯವಿಧ ಕ್ರಿಯೆಗಳಿಂದಲೂ ಸಹ ಎರಡು ವಿಧವಾದ ಪ್ರಯೋಜನವಿರುತ್ತದೆ. ಇಲ್ಲಿಂದ ಹೊರಡುವುದರಿಂದ ನಿನ್ನ ರಥದಲ್ಲಿ ನಿನ್ನ ಸ್ಥಾಪನವು ಒಂದು ಪ್ರಯೋಜನ. ಅಥವಾ ಇಲ್ಲೇ ಇದ್ದರೆ ಧ್ವನಿಗೈಯ್ಯುತ್ತಿರುವ ನಿನ್ನ ಅಶ್ವದ ವಿಮೋಚನವು ಇನ್ನೊಂದು ಪ್ರಯೋಜನವಾಗುತ್ತದೆ.

English Translation

Depart, Maghavan ; come Indra : both ways, protector, there is a motive for you, whether it be standing in your vast chariot, or liberating your neighing steed.

ವಿಶೇಷವಿಷಯಗಳು

ಅಹರ್ಗಣವೆಂಬ ಯಾಗದ ಕೊನೆಯದಿವಸದ ಹಿಂದಿನ ದಿವಸದಲ್ಲಿ ಹಾರಿಯೋಜನವೆಂಬ ಕರ್ಮದಲ್ಲಿ ಪರಾ ಯಾಹಿ ಎಂಬ ಈ ಋಕ್ಕನ್ನು ವಿಕಲ್ಪದಿಂದ ಅನುವಾಕ್ಯಾಮಂತ್ರವನ್ನಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತ ಸೂತ್ರದ—**ಪರಾ ಯಾಹಿ ಮಘವನ್ನಾ ಚ ಯಾಹೀತಿ ವಾನುವಾಕ್ಯಾ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೬-೧೧).

**ಭ್ರಾತಃ**—**ಭೃಞ್ ಭರಣೇ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಭಾಷ್ಯಕಾರರು ಪೋಷಕನಾದ ಇಂದ್ರನು ಎಂದರ್ಥಮಾಡಿದಾರೆ. ಅಥವಾ ಭ್ರಾತೃಶಬ್ದಕ್ಕಿರುವ ಸಹೋದರನೆಂಬ ಅರ್ಥವನ್ನೇ ಬೇಕಾದರೂ ಹೇಳಬಹುದು. ಆದರಾತಿಶಯದಿಂದ ಇಂದ್ರನನ್ನು ಸಹೋದರನೆಂದು ಸಂಬೋಧಿಸಲಾಗಿದೆ ಎಂದು ತಿಳಿಯಬೇಕು.

CC-0. Jangamwadi Math Collection. Digitized by eGangotri

**ರಾಸಭಸ್ಯ—ರಾಸೃ ಶಬ್ದೇ । ಹೇಷಾರವಂ ಕುರ್ವತಃ ವಾಜಿನಃ ।** ಶಬ್ದಮಾಡು ಎಂಬರ್ಥವುಳ್ಳ ರಾಸೃ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿರುವುದೆಂದೂ ಆದುದರಿಂದ ಈ ಶಬ್ದಕ್ಕೆ ಶಬ್ದಮಾಡುವ ಅಥವಾ ಹೇಷಾರವ ವನ್ನು ಮಾಡುತ್ತಿರುವ ಕುದುರೆಯ ಎಂಬರ್ಥವನ್ನು ಭಾಷ್ಯಕಾರರು ಹೇಳಿದಾರೆ.

ಈ ಋಕ್ಕಿನಲ್ಲಿ—ಇಂದ್ರನು (ಯಜ್ಞಭೂಮಿಗೆ ಬಂದು ಸೋಮಪಾನಮಾಡಿದಮೇಲೆ) ಇಲ್ಲಿಯೇ ಎಂದರೆ ಯಜ್ಞಭೂಮಿಯಲ್ಲಿಯೇ ಇಂದ್ರನು ಇಷ್ಟಪಟ್ಟರೆ ಇರಬಹುದು, ಇಲ್ಲದಿದ್ದರೆ ತನ್ನ ಸ್ವಸ್ಥಾನಕ್ಕೆ ಹೊರಡಬಹುದು. ಈ ಎರಡು ವಿಧವಾದ ಕಾರ್ಯಗಳಲ್ಲಿಯೂ ಪ್ರಯೋಜನವಿದ್ದೇ ಇದೆ ಎಂದು ವಿವರಿಸಲಾಗಿದೆ. ಹೇಗೆಂದರೆ—ಇಂದ್ರನು ತನ್ನ ಗೃಹಾಭಿಮುಖವಾಗಿ ಹಿಂದಕ್ಕೆ ಹೋಗುವುದಾದರೆ ತನ್ನ ದೊಡ್ಡದಾದ ರಥದಲ್ಲಿ ಕುಳಿತುಕೊಳ್ಳುವನು. ಇದನ್ನು ನಾವು ನೋಡುವುದೇ ಪ್ರಯೋಜನವು ಅಥವಾ ಇಂದ್ರನು ಇಲ್ಲಿಯೇ ಇರುವುದಾದರೆ ಆಗ ರಥಕ್ಕೆ ಕಟ್ಟಿರುವ ಅಶ್ವವನ್ನು ರಥಕ್ಕೆ ಹೂಡದೆ ಬಿಚ್ಚಿಬಿಡಲಾಗುವುದು. ಅದು ಹರ್ಷದಿಂದ ಹೇಷಾಧ್ವನಿಯನ್ನು ಮಾಡುವುದು ಎಂದು ಇಂದ್ರನ ಆಗಮನಪ್ರತ್ಯಾಗಮನಗಳಲ್ಲಿ ಇರುವ ಪ್ರಯೋಜನವನ್ನು ಋಷಿಯು ವಿವರಿಸಿದಾನೆ.

———

ಸಂಹಿತಾಪಾಠಃ

**ಅಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ ಕಲ್ಯಾಣೀರ್ಜಾಯಾ ಸುರಣಂ ಗೃಹೇ ತೇ ।**

**ಯತ್ರಾ ರಥಸ್ಯ ಬೃಹತೋ ನಿಧಾನಂ ವಿಮೋಚನಂ ವಾಜಿನೋ ದಕ್ಷಿಣಾವತ್ ॥ ೬ ॥**

ಪದಪಾಠಃ

ಅಪಾಃ । ಸೋಮಂ । ಅಸ್ತಂ । ಇಂದ್ರ । ಪ್ರ । ಯಾಹಿ । ಕಲ್ಯಾಣೀಃ । ಜಾಯಾ । ಸುऽರಣಂ । ಗೃಹೇ । ತೇ ।

ಯತ್ರ । ರಥಸ್ಯ । ಬೃಹತಃ । ನಿऽಧಾನಂ । ವಿऽಮೋಚನಂ । ವಾಜಿನಃ । ದಕ್ಷಿಣಾऽವತ್ ॥ ೬॥

ಸಾಯಣಭಾಷ್ಯಂ

ಅಂತ್ಯೇಷ್ವಹಃಸು ಹಾರಿಯೋಜನಸ್ಯಾಪಾಃ ಸೋಮಮಿತ್ಯನುವಾಕ್ಯಾ । ಸೂತ್ರಿತಂ ಚ । ಹಾರಿಯೋಜನೋऽಪಾಃ ಸೋಮಮಸ್ತಮಿಂದ್ರ ಪ್ರ ಯಾಹಿ । ಆ. ೬-೧೧ । ಇತಿ ॥

ಹೇ ಇಂದ್ರ ಸೋಮಮಪಾಃ । ಅತ್ರೈವ ಸ್ಥಿತ್ವಾ ಸೋಮಂ ಪಿಬ । ಪೀತ್ವಾಸ್ತಂ ಗೃಹಂ ಪ್ರ ಯಾಹಿ । ಪ್ರಕರ್ಷೇಣ ಗಚ್ಛ । ತೇ ತವ ಗೃಹೇ ಕಲ್ಯಾಣೀರ್ಮಂಗಲಕಾರಿಣೀ ಜಾಯಾ ಶಚೀ ವಿದ್ಯತೇ । ಸುರಣಂ ಶೋಭನಗೀತಾದಿಧ್ವನಿಶ್ಚಾಸ್ತಿ । ಯದ್ವಾ ।ಸುರಣಂ ಸುರಮಣೀಯಂ ಯಥಾ ಭವತಿ ತಥಾ ಗೃಹೇ

CC-0. Jangamwadi Math Collection. Digitized by eGangotri

ಜಾಯಾ ತಿಷ್ಠತಿ। ಯತ್ರೇತ್ಯಾದಿ ಗತಂ। ದಕ್ಷಿಣಾವತ್ । ಅತ್ರ ಸ್ಥಿತಾ ಸತ್ಯಾಂ ರಥೇ ಯೋಜಿತಾನಾಂ ವಾಜಿನಾಂ ವಿಮೋಚನಂ ಖಾದನಪಾನಾದಿನಾ ದಕ್ಷಿಣಾವತ್ ಪ್ರಯೋಜನವದ್ಭವತಿ। ವಿಮುಕ್ತೇಭ್ಯೋ ವಾಜಿಭ್ಯೋ ಖಾದನಂ ಪಾನಂ ಚೋಪಹರಂತಿ ॥ ಅಪಾಃ। ಪಾ ಪಾನೇ। ಲುಙಿ ಗಾತಿಸ್ಥೇತಿ ಸಿಚೋ ಲುಕ್। ಅಡಾಗಮಃಸ್ವರಃ। ಕಲ್ಯಾಣೀಃ। ಕಲ್ಯಾಣಮಸ್ಯಾಸ್ತೀತಿ ಮತ್ವರ್ಥೇ ಛಂದಸೀವನಿಪಾವಿತಿ ಈಪ್ರತ್ಯಯಃ। ಪ್ರತ್ಯಯಸ್ವರಃ। ಸುರಣಂ। ರಣ ಶಬ್ದಾರ್ಥಃ। ಆಸ್ಮಾದಕೃಚ್ಛ್ರಾರ್ಥೇ ಖಲ್। ಲಿತ್ಸ್ವರಃ। ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ। ಸಮಾಸೇ ಕೃದುತ್ತರಪದಸ್ವರಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ। **ಸೋಮಂ**—ಸೋಮವನ್ನು। **ಅಪಾಃ**-ಪಾನಮಾಡು (ಅನಂತರ) **ಅಸ್ತಂ**-ಗೃಹಕ್ಕೆ। **ಪ್ರ ಯಾಹಿ**—ಹೋಗು। **ತೇ**—ನಿನ್ನ। **ಗೃಹೇ**—ಗೃಹದಲ್ಲಿ। **ಕಲ್ಯಾಣೀಃ**—ಮಂಗಳಕಾರಿಣಿಯಾದ। **ಜಾಯಾ**—ನಿನ್ನ ಪತ್ನಿಯು। **ಸುರಣಂ**—ನಿನಗೆ ಆಹ್ಲಾದಕರಳಾಗಿದ್ದಾಳೆ। **ಬೃಹತಃ**—ಮಹತ್ತಾದ। **ರಥಸ್ಯ**—ರಥದ ಮೇಲೆ। **ನಿಧಾನಂ**—ನಿನ್ನ ಸ್ಥಾಪನವು। **ದಕ್ಷಿಣಾವತ್**—ಪ್ರಯೋಜನಕಾರಿಯಾಗುತ್ತದೆ (ಅಥವಾ ಇಲ್ಲೇ ಇದ್ದರೆ)। **ವಾಜಿನಃ**—ಅಶ್ವದ। **ವಿಮೋಚನಂ**—(ರಥದಿಂದ) ಬಿಡುಗಡೆಯಾಗುತ್ತದೆ.

ಭಾವಾರ್ಥ

ಎಲೈ ಇಂದ್ರನೇ, ನೀನು ಸೋಮವನ್ನು ಮೊದಲು ಪಾನಮಾಡು. ಅನಂತರ ನಿನ್ನ ಗೃಹಕ್ಕೆ ಹೋಗು. ನಿನ್ನ ಗೃಹದಲ್ಲಿ ಮಂಗಳಕಾರಿಣಿಯಾದ ನಿನ್ನ ಪತ್ನಿಯು ನಿನಗೆ ಆಹ್ಲಾದಕರಳಾಗಿದ್ದಾಳೆ. ಮಹತ್ತಾದ ರಥದಮೇಲೆ ನಿನ್ನ ಸ್ಥಾಪನವು ಪ್ರಯೋಜನಕಾರಕವಾಗುತ್ತದೆ. ಅಥವಾ ಇಲ್ಲೇ ಇದ್ದರೆ ನಿನ್ನ ರಥದಿಂದ ಅಶ್ವದ ವಿಮೋಚನವಾಗುತ್ತದೆ.

English Translation

When you have drunk the Soma, then, Indra, go home: an auspicious life (abides) pleasantly in your dwelling: in either (case) there is the standing in your car or liberating the steeds for provender.

ವಿಶೇಷವಿಷಯಗಳು

ಅಹರ್ಗಣವೆಂಬ ಯಾಗದ ಕೊನೆಯ ದಿನದಲ್ಲಿ ಅಪಾಃ ಸೋಮಂ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಹಾರಿಯೋಜನಾಪಾಃ ಸೋಮಮಸ್ತಮಿಂದ್ರ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೬-೧೧)

ಈ ಋಕ್ಕಿನಲ್ಲಿಯೂ ಹಿಂದಿನ ಋಕ್ಕಿನಲ್ಲಿ ಹೇಳಿದ ವಿಷಯವನ್ನೇ ವಿಶದವಾಗಿ ತಿಳಿಸಿದೆ. ಮತ್ತು ಇಂದ್ರನ ಮನೆಯಲ್ಲಿ ಇಂದ್ರನ ಪತ್ನಿಯು ಅವನನ್ನು ಮಂಗಳಗೀತಾಧ್ವನಿಯಿಂದ ಸ್ವಾಗತಿಸುತ್ತಾಳೆಂಬ ವರ್ಣನೆಯೂ ಇದೆ.

ಇಂದ್ರ ಸೋಮಮಪಾಃ ಅಸ್ತಂ ಪ್ರ ಯಾಹಿ—ಎಲೈ ಇಂದ್ರನೇ, ನೀನು ನಮ್ಮ ಯಜ್ಞಭೂಮಿಯಲ್ಲಿ ಸೋಮವನ್ನು ಪಾನಮಾಡು- ಪಾನಮಾಡಿದ ನಂತರ ನಿನ್ನ ಗೃಹಾಭಿಮುಖವಾಗಿ ಹೊರಡು. ೪ನೆಯ ಋಕ್ಕಿನಲ್ಲಿ ಹೇಳಿದಂತೆ ಇಲ್ಲಿಯೂ ಸಹ ಅಸ್ತಂ ಎಂಬ ಶಬ್ದಕ್ಕೆ ಗೃಹವೆಂದು ಅರ್ಥವಿವರಣೆಮಾಡಿರುವರು.

CC-0. Jangamwadi Math Collection. Digitized by eGangotri

ಕಲ್ಯಾಣೀಃ ಜಾಯಾ ತೇ ಗೃಹೇ ಸುರಣಂ—ತವ ಗೃಹೇ ಮಂಗಲಕಾರಿಣೀ ತವ ಜಾಯಾ (ಶಚೀ) ವಿದ್ಯತೇ । ಶೋಭನಗೀತಾದಿಧ್ವನಿಶ್ಚಾಸ್ತಿ । ನಿನ್ನ ಗೃಹದಲ್ಲಿ ರಮಣೀಯವಾಗಿ ಶೋಭಿಸುತ್ತಿರುವ ಎಂದರೆ ಗೃಹಕ್ಕೆ ಅಲಂಕಾರಪ್ರಾಯಳಾದ ನಿನ್ನ ಪತ್ನಿಯು (ಶಚೀದೇವಿಯು) ಇರುವಳು. ಮತ್ತು ಅವಳು ನಿನ್ನ ಸ್ವಾಗತಾರ್ಥವಾಗಿ ಹಾಡುವ ಮಧುರವಾದ ಗೀತಾದಿ ಧ್ವನಿಯು ಇರುವುದು ಎಂದರೆ ಕೇಳಬರುತ್ತಿರುವುದು ಎಂದಭಿಪ್ರಾಯವು.

ಯತ್ರ ರಥಸ್ಯ........ದಕ್ಷಿಣಾವತ್—ಹಿಂದಿನ ಋಕ್ಕಿನ ಉತ್ತರಾರ್ಧದಲ್ಲಿ ಹೇಳಿರುವುದನ್ನೇ ಇಲ್ಲಿ ಮತ್ತೆ ಹೇಳಲಾಗಿರುವುದು. ಇಂದ್ರನು ಹೊರಡುವುದಾದರೆ ತನ್ನ ದೊಡ್ಡದಾದ ರಥದಲ್ಲಿ ಕುಳಿತು ಎಲ್ಲರಿಗೂ ದರ್ಶನವನ್ನು ಕೊಡುವುದೂ, ಹೊರಡದೆ ಇಲ್ಲಿಯೇ ಇದ್ದರೆ ತನ್ನ ರಥದ ಅಶ್ವಗಳನ್ನು ಬಿಚ್ಚಿ ಅವುಗಳಿಗೆ ಆಹಾರ, ಪಾನಗಳು ದೊರಕುವಂತೆ ಮಾಡುವುದು ಎಂಬ ಎರಡು ವಿಧವಾದ ಪ್ರಯೋಜನಗಳು ಇರುವವು ಎಂದು ಋಷಿಯು ಮತ್ತೆ ಹೇಳಿದಾನೆ.

---

ಸಂಹಿತಾಪಾಠಃ

ಇಮೇ ಭೋಜಾ ಅಂಗಿರಸೋ ವಿರೂಪಾ ದಿವಸ್ಪುತ್ರಾಸೋ ಅಸುರಸ್ಯ ವೀರಾಃ ।

ವಿಶ್ವಾಮಿತ್ರಾಯ ದದತೋ ಮಘಾನಿ ಸಹಸ್ರಸಾವೇ ಪ್ರ ತಿರಂತ ಆಯುಃ ॥

ಪದಪಾಠಃ

ಇಮೇ । ಭೋಜಾಃ । ಅಂಗಿರಸಃ । ವಿಽರೂಪಾಃ । ದಿವಃ । ಪುತ್ರಾಸಃ । ಅಸುರಸ್ಯ । ವೀರಾಃ ।

ವಿಶ್ವಾಮಿತ್ರಾಯ । ದದತಃ । ಮಘಾನಿ । ಸಹಸ್ರಽಸಾವೇ । ಪ್ರ । ತಿರಂತೇ । ಆಯುಃ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ಇಮೇ ಯಾಗಂ ಕುರ್ವಾಣಾ ಭೋಜಾಃ ಸೌದಾಸಾಃ ಕ್ಷತ್ರಿಯಾಃ ತೇಷಾಂ ಯಾಜಕಾ ವಿರೂಪಾ ನಾನಾರೂಪಾ ಮೇಧಾತಿಥಿಪ್ರಭೃತಯೋಽಂಗಿರಸಶ್ಚ ದಿವೋಽಸುರಸ್ಯ ದೇವೇಭ್ಯೋಽಪಿ ಬಲವತೋ ರುದ್ರಸ್ಯ ಪುತ್ರಾಸಃ ಪುತ್ರಾ ವೀರಾ ಬಲವಂತೋ ಮರುತಃ ತೇ ಸರ್ವೇ ವಿಶ್ವಾಮಿತ್ರಾಯ ಮಹ್ಯಂ ಸಹಸ್ರಸಾವೇ । ಸಹಸ್ರಂ ಸೂಯತೇಽತ್ರೇತಿ ಸಹಸ್ರಸಾವೋಽಶ್ವಮೇಧಃ । ತಸ್ಮಿನ್ನಶ್ವಮೇಧೇ ಮಘಾನಿ ಮಹನೀಯಾನಿ ಧನಾನಿ ದದತಃ ಪ್ರಯಚ್ಛಂತಃ ಸಂತ ಆಯುರ್ಜೀವನಮಸ್ಮಾಂ ವಾ ಪ್ರ ತಿರಂತೇ । ಪ್ರಕರ್ಷೇಣ ವರ್ಧಯಂತಿ ॥ ದಿವಸ್ಪುತ್ರಾಸ ಇತಿ ಸಂಹಿತಾಯಾಂ ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ । ದದತಃ । ಡುದಾಞ್ ದಾನ ಇತ್ಯಸ್ಯ ಶತರಿ ರೂಪಂ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ತಿರಂತೇ । ತರತೇರ್ವ್ಯತ್ಯಯೇನ ಶಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಎಲೈ ಇಂದ್ರನೇ) **ಇಮೇ**—ಇಲ್ಲಿ ಯಜ್ಞಮಾಡತಕ್ಕ ಯಜಮಾನರು । **ಭೋಜಾಃ**—ಸುದಾಸನೆಂಬ ಕ್ಷತ್ರಿಯನ ಪುತ್ರರು । **ವಿರೂಪಾಃ**—ನಾನಾರೂಪವುಳ್ಳ ಮೇಧಾತಿಥಿಯೇ ಮುಂತಾದ । **ಅಂಗಿರಸಃ**—ಅಂಗಿರಸ್ಸುಗಳು (ಈ ಯಜಮಾನರಿಗೆ ಋತ್ವಿಕ್ಕುಗಳಾಗಿದ್ದಾರೆ) । **ದಿವಃ**—ದೇವತೆಗಳಿಗಿಂತಲೂ । **ಅಸುರಸ್ಯ**—ಅಧಿಕವಾದ ಶಕ್ತಿಯುಳ್ಳ ರುದ್ರನ । **ಪುತ್ರಾಸಃ**—ಪುತ್ರರೂಪರೂ । **ವೀರಾಃ**—ಶಕ್ತಿಯುತರೂ ಆದ ಮರುತ್ತುಗಳು । **ವಿಶ್ವಾಮಿತ್ರಾಯ**—ವಿಶ್ವಾಮಿತ್ರನಾದ ನನಗೆ । **ಸಹಸ್ರಸಾವೇ**—ಈ ಅಶ್ವಮೇಧಯಾಗದಲ್ಲಿ । **ಮಘಾನಿ**—ಧನಸಂಪತ್ತುಗಳನ್ನು । **ದದತಃ**—ಕೊಡುತ್ತಾ । **ಆಯುಃ**—ಆಯುಸ್ಸನ್ನು । **ಪ್ರ ತಿರಂತೇ**—ವೃದ್ಧಿ ಪಡಿಸುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ಇಲ್ಲಿ ಯಜ್ಞಮಾಡತಕ್ಕ ಯಜಮಾನರು ಸುದಾಸನೆಂಬ ಕ್ಷತ್ರಿಯನ ಪುತ್ರರು. ನಾನಾ ರೂಪವುಳ್ಳ ಮೇಧಾತಿಥಿಯೇ ಮುಂತಾದ ಅಂಗಿರಸ್ಸುಗಳು ಈ ಯಜಮಾನನಿಗೆ ಋತ್ವಿಕ್ಕುಗಳಾಗಿದ್ದಾರೆ. ದೇವತೆಗಳಿಗಿಂತಲೂ ಅಧಿಕವಾದ ಶಕ್ತಿಯುಳ್ಳ ರುದ್ರನ ಪುತ್ರರೂಪರೂ ಶಕ್ತಿಯುತರೂ ಆದ ಮರುತ್ತುಗಳು ವಿಶ್ವಾಮಿತ್ರನಾದ ನನಗೆ ಈ ಅಶ್ವಮೇಧಯಾಗದಲ್ಲಿ ಧನಸಂಪತ್ತುಗಳನ್ನು ಕೊಡುತ್ತಾ ಆಯುಸ್ಸನ್ನು ವೃದ್ಧಿ ಪಡಿಸುತ್ತಾರೆ.

English Translation

These (sacrificers) are the Bhojas, of whom the diversified Angirasas (are the priests) : and the heroic sons of the expeller (of the foes of the gods) from heaven, bestowing riches upon Vishwamitra at the sacrifice of a thousand (victims), prolong (his) life.

ವಿಶೇಷವಿಷಯಗಳು

**ಭೋಜಾಃ—ಸೌದಾಸಃ ಕ್ಷತ್ರಿಯಾಃ** । ಸುದಾಸನೆಂಬ ರಾಜನ ಪುತ್ರರು ಎಂದು ಸಾಯಣರು ಅರ್ಥ ವಿವರಣೆಮಾಡಿದಾರೆ. ಸುದಾಸನೆಂಬುವನು ಪಿಜವನನೆಂಬ ಪ್ರಸಿದ್ಧನಾದ ಒಬ್ಬ ರಾಜನ ಪುತ್ರನು. ವಿಷ್ಣುಪುರಾಣದಲ್ಲಿ ಸುದಾಸನೆಂಬ ರಾಜನು ಸೂರ್ಯವಂಶದಲ್ಲಿ ಒಬ್ಬನಿದ್ದನೆಂದೂ, ಅದೇ ಹೆಸರಿನ ಮತ್ತೊಬ್ಬರಾಜನು ಚಂದ್ರವಂಶದಲ್ಲಿ ಮತ್ತೊಬ್ಬನಿದ್ದನೆಂದೂ, ಅದೇ ಹೆಸರಿನ ಮತ್ತೊಬ್ಬ ರಾಜನು ಚಂದ್ರವಂಶದಲ್ಲಿ ದಿವೋದಾಸನೆಂಬ ರಾಜನ ಪುತ್ರನಾಗಿದ್ದನೆಂದೂ ವಿವರಣೆ ಇದೆ. ದಿವೋದಾಸನ ಹೆಸರು ಋಗ್ವೇದದಲ್ಲಿ ಅನೇಕಕಡೆ ಉಕ್ತವಾಗಿರುವುದು

ಸುದಾಸನೆಂಬ ರಾಜನ ವಿಷಯದಲ್ಲಿ ಭಾಷ್ಯಕಾರರು ಋ ಸಂ ೧-೧೧೨-೯ ನೆಯ ಋಕ್ಕನ್ನು ವ್ಯಾಖ್ಯಾನ ಮಾಡುವಾಗ ಒಂದು ಪೂರ್ವೇತಿಹಾಸವನ್ನು ಹೇಳಿರುವರು—

**ಅತ್ರಾಪೀತಿಹಾಸಮಾಚಕ್ಷತೇ । ಸುದಾಸನಾಮಾ ಪೈಜವನೋ ರಾಜಾ ಯಸ್ಯ ವಿಶ್ವಾಮಿತ್ರಃ ಪುರೋಹಿತೋ ಬಭೂವ । ಸ ಯಷ್ಟುಕಾಮಃ ಸಾರವತ್ತ್ರಭೂತಂ ಧನಮಶ್ವಿನೌ ಯಯಾಚೇ। ತಸ್ಮೈ ರಥೇನಾನೀಯಾಶ್ವಿನೌ ದದತುರಿತಿ ॥**

CC-0. Jangamwadi Math Collection. Digitized by eGangotri

ಎಂದರೆ ಪಿಜವನಪುತ್ರನಾದ ಸುದಾಸನೆಂಬ ರಾಜಪುತ್ರನಿಗೆ ವಿಶ್ವಾಮಿತ್ರನು ಪುರೋಹಿತನಾಗಿದ್ದನು ಆ ರಾಜನು ವಿಶ್ವಾಮಿತ್ರನ ಸಹಾಯದಿಂದ ಯಾಗಮಾಡಬೇಕೆಂದು ಬಯಸಿ ಅದಕ್ಕಾಗಿ ಬಹಳವಾದ ಧನವನ್ನೊದಗಿಸಬೇಕೆಂದು ಅಶ್ವಿನೀದೇವತೆಗಳನ್ನು ಪ್ರಾರ್ಥಿಸಿದನು. ಅವರು ತಮ್ಮ ರಥದ ತುಂಬ ಧನವನ್ನು ತಂದು ಇವನಿಗೆ ಒಡಗಿಸಿದರು ಎಂಬ ಕಥೆ ಇದೆ ಇದನ್ನೇ—

**ಸುದಾಸೇ ದಸ್ರಾ ವಸು ಬಿಭ್ರತಾ ರಥೇ ಪೃಕ್ಷೋ ವಹತಮಶ್ವಿನಾ ।**

(ಋ. ಸಂ. ೧-೪೭-೬)

ಎಂಬ ಋಕ್ಕಿನಲ್ಲಿ ಪ್ರಸ್ಕಣ್ವನೆಂಬ ಋಷಿಯು ಹೇಳಿರುವನು. ನಿರುಕ್ತಕಾರರು ಇವನ ವಿಷಯವಾಗಿ ಸೂಕ್ಷ್ಮವಾಗಿ ಹೇಳಿದ್ದಾರೆ—**ವಿಶ್ವಾಮಿತ್ರಋಷಿಃ ಸುದಾಸಃ ಪೈಜವನಸ್ಯ ಪುರೋಹಿತೋ ಬಭೂವ । ಪೈಜವನಃ ಪಿಜವನಸ್ಯ ಪುತ್ರಃ** (ನಿ. ೨-೨೪) ಎಂದರೆ ಪಿಜವನಪುತ್ರನಾನ ಸುದಾಸನಿಗೆ ವಿಶ್ವಾಮಿತ್ರನು ಪುರೋಹಿತನಾಗಿದ್ದನೆಂದೂ ಅವನಿಂದ ಸುದಾಸನಿಗೆ ಸಹಾಯವಾಯಿತೆಂದೂ ನಿರುಕ್ತವಾಕ್ಯದಿಂದ ತಿಳಿಯುತ್ತದೆ. ಈ ನಿರ್ವಚನದಿಂದ ದಿವೋದಾಸನು ಸುದಾಸನ ಪಿತಾಮಹನೆಂದು ಹೇಳಬಹುದು.

**ಅರ್ಣಾಂಸಿ ಚಿತ್ಪಪ್ರಥಾನಾ ಸುದಾಸ ಇಂದ್ರೋ ಗಾಧ್ಯಾನ್ಯಕೃಣೋತ್ಸುಪಾರಾ ।**

(ಋ ಸಂ. ೭-೧೮-೫)

**ಕರ್ತಾ ಸುದಾಸೇ ಅಹ ವಾ ಉ ಲೋಕಂ ದಾತಾ ವಸು ಮುಹುರಾ ದಾಶುಷೇ ಭೂತ್ ।**

(ಋ. ಸಂ. ೭-೨೦-೨)

ಇತ್ಯಾದಿ ಋಕ್ಕುಗಳಿಂದ, ಇಂದ್ರಾದಿದೇವತೆಗಳ ಸಹಾಯದಿಂದ ಸುದಾಸನು ಹತ್ತುಮಂದಿ ರಾಜರುಗಳನ್ನು ಗೆದ್ದು ಮೆರೆದನೆಂದು ತಿಳಿಯುತ್ತದೆ.

**ಮಹಾಁ ಋಷಿರ್ದೇವಜಾ ದೇವಜಾತೋಽಸ್ತಭ್ನಾತ್ಸಿಂಧುಮರ್ಣವಂ ನೃಚಕ್ಷಾಃ ।**
**ವಿಶ್ವಾಮಿತ್ರೋ ಯದವಹತ್ಸುದಾಸಮಪ್ರಿಯಾಯತ ಕುಶಿಕೇಭಿರಿಂದ್ರಃ ॥**

(ಋ. ಸಂ. ೩-೫೩-೯)

ಎಂಬ ಋಕ್ಕಿನಲ್ಲಿ ಸುದಾಸನು ತನ್ನ ಪುರೋಹಿತನಾದ ವಿಶ್ವಾಮಿತ್ರನೊಡನೆ ವಿಪಾಟ್ ಮತ್ತು ಶುತುದ್ರಿ ನದಿಗಳ ದಡದ ಮೇಲೆ ತನ್ನ ದಂಡಯಾತ್ರೆಯನ್ನು ಮಾಡಿದುದು ವರ್ಣಿತವಾಗಿದೆ.

**ತ್ವಂ ಧೃಷ್ಣೋ ಧೃಷತಾ ವೀತಹವ್ಯಂ ಪ್ರಾವೋ ವಿಶ್ವಾಭಿರೂತಿಭಿಃ ಸುದಾಸಂ ।**
**ಪ್ರ ಪೌರುಕುತ್ಸಿಂ ತ್ರಸದಸ್ಯುಮಾವಃ ಕ್ಷೇತ್ರಸಾತಾ ವೃತ್ರಹತ್ಯೇಷು ಪೂರುಂ ॥**

(ಋ. ಸಂ.೭-೧೯-೩)

ಎಂಬ ಋಕ್ಕಿನಲ್ಲಿ ಪುರುಕುತ್ಸುವಿನ ಪುತ್ರನಾದ ತ್ರಸದಸ್ಯುವಿನೊಡನೆ ಸುದಾಸನ ಹೆಸರೂ ಹೇಳಲ್ಪಟ್ಟಿದೆ. ಇಬ್ಬರೂ ಇಂದ್ರಾದಿಗಳ ರಕ್ಷಣೆಗೆ ಅರ್ಹರೆಂದೂ, ಆದುದರಿಂದ ದೇವತೆಗಳ ರಕ್ಷಣೆಗಳನ್ನು ಪಡೆದರೆಂದೂ ಅವರನ್ನು ಸ್ತುತಿಸಿದೆ. ಐತರೇಯಬ್ರಾಹ್ಮಣದಲ್ಲಿ—

**ಪ್ರೋವಾಚ ವಸಿಷ್ಠಃ ಸುದಾಸೇ ಪೈಜವನಾಯ ತೇ ಹ ತೇ ಸರ್ವ ಏವ ಮಹಜ್ಜಗ್ಮುಃ ।**

(ಐ. ಬ್ರಾ. ೩೫-೮)

CC-0. Jangamwadi Math Collection. Digitized by eGangotri

ಎಂಬ ವಾಕ್ಯದಿಂದ ವಸಿಷ್ಠನು ಸುದಾಸನ ಪುರೋಹಿತನೆಂದೂ, ಋಷಿಗಳಲ್ಲಿ ಅತ್ಯಂತ ಶ್ರೇಷ್ಠನಾದ ವಸಿಷ್ಠನಿಂದಲೂ ಸುದಾಸನು ಗೌರವಿಸಲ್ಪಟ್ಟನೆಂದೂ, ಮಹತ್ವದವಿಯನ್ನು ಹೊಂದಿದನೆಂದೂ ತಿಳಿಯಬರುತ್ತದೆ.

ಆ ಸುದಾಸನು ಮಾಡಿದ ಅಶ್ವಮೇಧಯಜ್ಞದಲ್ಲಿ ವಿಶ್ವಾಮಿತ್ರನು ಮುಖ್ಯ ಪುರೋಹಿತನಾಗಿದ್ದನು ಮೇಧಾತಿಥಿ ಮೊದಲಾದವರೂ, ಅಂಗಿರಾ ಋಷಿಗಳೂ ಇನ್ನೂ ಇತರ ಋಷಿಗಳೂ ಯಾಜಕರಾಗಿದ್ದರು. ರುದ್ರ ಪುತ್ರರಾದ ಮರುದ್ದೇವತೆಗಳೂ ಅಲ್ಲಿದ್ದರು. ಇವರೆಲ್ಲರೂ ವಿಶ್ವಾಮಿತ್ರಋಷಿಗೆ ಬಹಳವಾದ ಧನವನ್ನೂ, ಅನ್ನವನ್ನೂ ದೀರ್ಘಾಯುಸ್ಸನ್ನೂ ಅನುಗ್ರಹಿಸಿದರು ಎಂದು ಇಲ್ಲಿ ವಿವರಿಸಲಾಗಿದೆ.

**ದಿವಃ ಪುತ್ರಾಸಃ ಅಸುರಸ್ಯ ವೀರಾಃ**—ದೇವೇಭ್ಯೋಽಪಿ ಬಲವತೋ ರುದ್ರಸ್ಯ ಪುತ್ರಾ ವೀರಾ ಬಲವಂತೋ ಮರುತಃ । ಇಲ್ಲಿ ದಿವಃ ಅಸುರಸ್ಯ ಎಂಬ ಶಬ್ದಗಳಿಗೆ ದೇವತೆಗಳಿಗಿಂತಲೂ ಅತ್ಯಂತ ಬಲಶಾಲಿಯಾದ ರುದ್ರನ ಎಂದು ಅರ್ಥವಿವರಣೆಮಾಡಿ ರುದ್ರನ ಪುತ್ರರು ಮರುತ್ತುಗಳು ಎಂದು ಹೇಳಿದಾರೆ. ಮರುತ್ತುಗಳು ರುದ್ರ ಪುತ್ರರೆಂದು ಶ್ರುತಿಪ್ರಸಿದ್ಧವಾಗಿದೆ.

**ರುದ್ರೋ ಯದ್ವೋ ಮರುತೋ ರುಕ್ಮವಕ್ಷಸೋ ವೃಷಾಜನಿ ಪೃಶ್ನ್ಯಾಃ ಶುಕ್ರ ಊಧನಿ ।**

(ಋ. ಸಂ. ೨-೩೪-೨)

ಎಂಬ ಋಕ್ಕಿನಲ್ಲಿ ಹೇಳುವಂತೆ ಮರುತ್ತುಗಳು ರುದ್ರಪುತ್ರರಾಗಿ ಪೃಶ್ನಿಯಲ್ಲಿ ಹುಟ್ಟಿದರೆಂದು ಪ್ರಸಿದ್ಧವಾದ ಕಥೆಯಿರುವುದರಿಂದ ಇವರನ್ನು ಸಂಬೋಧಿಸುವಾಗಲೆಲ್ಲಾ ಈ ವಿಶೇಷಣವನ್ನೇ ಹೆಚ್ಚಾಗಿ ಉಪಯೋಗಿಸಿದೆ. ಈ ಋಕ್ಕನ್ನು ವಿವರಿಸುವಾಗ ಸಾಯಣಾಚಾರ್ಯರು ಇನ್ನೊಂದು ಕಥೆಯನ್ನೂ ಹೇಳುತ್ತಾರೆ.

**ಪೃಶ್ನಿರ್ನಾನಾವರ್ಣಾ ಇಯಂ ಭೂಮಿಃ ಪುರಾ ಗೋರೂಪಧರಾಸೀತ್ । ತಸ್ಯಾಂ ಮಹೇಶೋ ವೃಷೋ ಭೂತ್ವಾ ಮರುತ ಉತ್ಪಾದಯಾಮಾಸೇತ್ಯಾಚಕ್ಷತೇ ।**

(ಸಾಯಣಭಾಷ್ಯ ಋ. ಸಂ. ೨-೩೪-೨)

ನಾನಾವರ್ಣವುಳ್ಳ ಪೃಥ್ವಿಯು ಹಿಂದೆ ಗೋರೂಪವನ್ನು ಧರಿಸಿದ್ದಾಗ ಮಹೇಶನು ಎತ್ತಿನ ರೂಪದಿಂದ ಮರುತ್ತುಗಳನ್ನು ಉತ್ಪನ್ನಮಾಡಿದನು ಎಂಬ ಕಥೆಯಿದೆ ಎಂದು ಸಾಯಣರು ರುದ್ರನ ಮತ್ತು ಮರುತ್ತುಗಳ ಪಿತಾಪುತ್ರ ಸಂಬಂಧವನ್ನು ತಿಳಿಸಿದ್ದಾರೆ. ಮತ್ತು, ಮೇಲಿನ ೨-೩೪-೨ ನೇ ಋಕ್ಕಿನಲ್ಲಿ ಹೇಳಿರುವ ಕಥೆಯು ತೈತ್ತಿರೀಯ ಸಂಹಿತೆಯಲ್ಲಿಯೂ ಉಕ್ತವಾಗಿರುವುದರಿಂದ ಅಲ್ಲಿನ ವಾಕ್ಯವನ್ನೂ ಉದಹರಿಸಿದ್ದಾರೆ.

**ಪೃಶ್ನಿಯೈ ವೈ ಪಯಸೋ ಮರುತೋ ಜಾತಾಃ ।**

(ತೈ. ಸಂ. ೨-೨-೧೧-೪)

ಆದುದರಿಂದಲೇ ಅನೇಕ ಕಡೆಗಳಲ್ಲಿ ಮರುತ್ತುಗಳಿಗೆ ರುದ್ರಪುತ್ರರೆಂದೇ ಸಂಬೋಧನೆಯಿದೆ. ಉದಾಹರಣೆಗೆ—

**ಪ್ರ ಯೇ ಶುಂಭಂತೇ ಜನಯೋ ನ ಸಪ್ತಯೋ ಯಾಮನ್ರುದ್ರಸ್ಯ ಸೂನವಃ ಸುದಂಸಸಃ ।**

(ಋ. ಸಂ. ೧-೮೫-೧)

**ಇದಂ ಪಿತ್ರೇ ಮರುತಾಮುಚ್ಯತೇ ವಚಃ ಸ್ವಾದೋಃ ಸ್ವಾದೀಯೋ ರುದ್ರಾಯ ವರ್ಧನಂ ।**
**ರಾಸ್ವಾ ಚ ನೋ ಅಮೃತ ಮರ್ತಭೋಜನಂ ತ್ಮನೇ ತೋಕಾಯ ತನಯಾಯ ಮೃಳ ॥**

(ಋ. ಸಂ. ೧-೧೧೪-೬)

CC-0. Jangamwadi Math Collection. Digitized by eGangotri

ಎಂಬ ಋಕ್ಕುಗಳಲ್ಲಿಯೂ ಹೀಗೆಯೇ, ೧-೧೬೮-೯ ; ೨-೩೩-೧ ; ಮುಂತಾದ ಅನೇಕ ಕಡೆಗಳಲ್ಲಿಯೂ ಮರುತ್ತು ಗಳಿಗೆ ರುದ್ರಪುತ್ರರೆಂಬ ವಿಶೇಷಣವಿದೆ. ಮೇಲೆ ಉದಹರಿಸಿರುವ ೧-೧೧೪-೬ ನೇ ಋಕ್ಕನ್ನು ವಿವರಿಸುವಾಗ ಸಾಯಣರು ಇನ್ನೊಂದು ಕಥೆಯನ್ನು ಹೇಳಿದ್ದಾರೆ.

ರುದ್ರಸ್ಯ ಚ ಮರುತಾಂ ಪಿತೃತ್ವಮೇವಮಾಖ್ಯಾಯತೇ । ಪುರಾ ಕದಾಚಿದಿಂದ್ರೋಽಸುರಾನ್ ಜಿಗಾಯ । ತದಾನೀಂ ದಿತಿರಸುರಮಾತಾ ಇಂದ್ರಹನನಸಮರ್ಥಂ ಪುತ್ರಂ ಕಾಮಯಮಾನಾ ತಪಸಾ ಭರ್ತುಃ ಸಕಾಶಾದ್ಗರ್ಭಂ ಲೇಭೇ । ಇಮಂ ವೃತ್ತಾಂತಮವಗಚ್ಛನ್ನಿಂದ್ರೋ ವಜ್ರಹಸ್ತಃ ಸನ್ ಸೂಕ್ಷ್ಮರೂಪೋ ಭೂತ್ವಾ ತಸ್ಯಾ ಉದರಂ ಪ್ರವಿಶ್ಯ ತಂ ಗರ್ಭಂ ಸಪ್ತಧಾ ಬಿಭೇದ । ಪುನರಪ್ಯೇಕೈಕಂ ಸಪ್ತಖಂಡಮಕರೋತ್ । ತೇ ಸರ್ವೇ ಗರ್ಭೈಕದೇಶಾಯೋನೇರ್ನಿರ್ಗತ್ಯ ಅರುದನ್ । ಏತಸ್ಮಿನ್ನವಸರೇ ಲೀಲಾರ್ಥಂ ಗಚ್ಛಂತೌ ಪಾರ್ವತೀಪರಮೇಶ್ವರೌ ಇಮಾನ್ ದದೃಶತುಃ । ಮಹೇಶಂ ಪ್ರತಿ ಪಾರ್ವತೀ ಏವಮುವಾಚ । ಇಮೇ ಮಾಂಸಖಂಡಾ ಯಥಾ ಪ್ರತ್ಯೇಕಂ ಪುತ್ರಾಃ ಸಂಪದ್ಯಂತಾಮೇವಂ ತ್ವಯಾ ಕಾರ್ಯಂ ಮಯಿ ಚೇತ್ಪ್ರೀತಿರಸ್ತೀತಿ । ಸ ಚ ಮಹೇಶ್ವರಸ್ತಾನ್ ಸಮಾನರೂಪಾನ್ ಸಮಾನವಯಸಃ ಸಮಾನಾಲಂಕಾರಾನ್ ಪುತ್ರಾನ್ ಕೃತ್ವಾ ಗೌರ್ಯೈ ಪ್ರದದೌ ತವೇಮೇ ಪುತ್ರಾಃ ಸಂತ್ವಿತಿ । ಅತಃ ಸರ್ವೇಷು ಮಾರುತೇಷು ಸೂಕ್ತೇಷು ಮರುತೋ ರುದ್ರಪುತ್ರಾ ಇತಿ ಸ್ತೂಯಂತೇ । ರೌದ್ರೇಷು ಚ ಮರುತಾಂ ಪಿತಾ ರುದ್ರ ಇತಿ ।

(ಸಾಯಣಭಾಷ್ಯ ಋ ಸಂ. ೧-೧೧೪-೬)

ಪೂರ್ವದಲ್ಲಿ ಒಂದುಸಲ ಇಂದ್ರನು ಅಸುರರನ್ನು ಜಯಿಸಿದನು. ಆಗ ಅಸುರ ಮಾತೆಯಾದ ದಿತಿಯು ಇಂದ್ರನನ್ನು ಕೊಲ್ಲಲು ಸಮರ್ಥನಾದ ಒಬ್ಬ ಪುತ್ರನನ್ನು ಪಡೆಯಬೇಕೆಂಬ ಆಸೆಯಿಂದ ತಪಸ್ಸನ್ನಾಚರಿಸಿ ತನ್ನ ಪತಿಯ ಅನುಗ್ರಹದಿಂದ ಗರ್ಭವನ್ನು ಹೊಂದಿದಳು. ಇಂದ್ರನು ಈ ಸಮಾಚಾರವನ್ನು ತಿಳಿದು ವಜ್ರಾಯುಧವನ್ನು ಹಿಡಿದುಕೊಂಡು ಸೂಕ್ಷ್ಮರೂಪವಾಗಿ ಬಂದು ಅವಳ ಹೊಟ್ಟೆಯನ್ನು ಪ್ರವೇಶಿಸಿ ಆ ಗರ್ಭವನ್ನು ಏಳು ಭಾಗಗಳಾಗಿ ಸೀಳಿದನು ಪುನಃ ಏಳೇಳು ತುಂಡುಗಳನ್ನಾಗಿ ಮಾಡಿದನು. ಆಗ ಅವೆಲ್ಲವೂ ಹೊರಕ್ಕೆ ಬಂದು ಅಳುತ್ತಿದ್ದುವು. ಆಗ ಲೀಲಾರ್ಥವಾಗಿ ಪಾರ್ವತೀ ಪರಮೇಶ್ವರರಿಬ್ಬರೂ ಸಂಚರಿಸುತ್ತಿದ್ದಾಗ ಇವನ್ನು ನೋಡಿ, ಪಾರ್ವತಿಯು ಮರುಕಗೊಂಡು ಮಹೇಶ್ವರನನ್ನು ಕುರಿತು ಅವೆಲ್ಲವನ್ನೂ ಮಕ್ಕಳನ್ನಾಗಿ ಪರಿವರ್ತಿಬೇಕೆಂದು ಬೇಡಿದಳು. ಆಗ ಈಶ್ವರನು ಅವೆಲ್ಲವನ್ನು ಒಂದೇ ರೂಪವುಳ್ಳವರನ್ನಾಗಿಯೂ, ಒಂದೇ ವಯಸ್ಸುಳ್ಳವರನ್ನಾಗಿಯೂ, ಒಂದೇ ಅಲಂಕಾರವುಳ್ಳವರನ್ನಾಗಿಯೂ ಮಾಡಿ ಪುತ್ರರೂಪರಾದ ಅವರನ್ನು ಇವು ನಿನ್ನ ಪುತ್ರರಾಗಿರಲಿ ಎಂದು ಗೌರಿಗೆ ಕೊಟ್ಟನು. ಆದುದರಿಂದ **ಮರುತ್ಸೂಕ್ತ** ಗಳಲ್ಲೆಲ್ಲಾ ಮರುತ್ತುಗಳಿಗೆ ರುದ್ರಪುತ್ರರೆಂದೂ, **ರುದ್ರಸೂಕ್ತ**ಗಳಲ್ಲಿ ರುದ್ರನಿಗೆ ಮರುತ್ತುಗಳ ಪಿತೃವೆಂದೂ ಹೇಳುವ ಕ್ರಮವಿದೆಯೆಂದು ಸಾಯಣರು ಈ ಕಥೆಯನ್ನು ಹೇಳಿರುತ್ತಾರೆ.

**ಸಹಸ್ರಸಾವೇ**—ಸಹಸ್ರಂ ಸೂಯತೇ ಚೇತಿ ಸಹಸ್ರಸಾವೋಽಶ್ವಮೇಧಃ । ಈ ಯಾಗದಲ್ಲಿ ಸೋಮಾಭಿಷವಕರ್ಮವು ಅನೇಕಸಲ (ಸಹಸ್ರಶಬ್ದಕ್ಕೆ ಅನೇಕವೆಂಬರ್ಥ) ನಡೆಯುವುದರಿಂದ (ಅಥವಾ ಅನೇಕ ಪಶುಗಳಿರುವುದರಿಂದ) ಸಹಸ್ರಸಾವವೆಂದರೆ ಅಶ್ವಮೇಧಯಾಗವೆಂದು ಭಾಷ್ಯಕಾರರು ಅರ್ಥವಿವರಣೆಮಾಡಿದಾರೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ರೂಪಂರೂಪಂ ಮಘವಾ ಬೋಭವೀತಿ ಮಾಯಾಃ ಕೃಣ್ವಾನಸ್ತನ್ವಂ೧ಪರಿ ಸ್ವಾಂ ।
ತ್ರಿರ್ಯದ್ದಿವಃ ಪರಿ ಮುಹೂರ್ತಮಾಗಾತ್ಸ್ವೈರ್ಮಂತ್ರೈರನೃತುಪಾ ಋತಾವಾ ॥ ೮ ॥

ಪದಪಾಠಃ

ರೂಪಂಽರೂಪಂ । ಮಘಽವಾ । ಬೋಭವೀತಿ । ಮಾಯಾಃ । ಕೃಣ್ವಾನಃ । ತನ್ವಂ । ಪರಿ । ಸ್ವಾಂ । ತ್ರಿಃ । ಯತ್ । ದಿವಃ । ಪರಿ । ಮುಹೂರ್ತಂ । ಆ । ಅಗಾತ್ । ಸ್ವೈಃ । ಮಂತ್ರೈಃ । ಅನೃತುಽಪಾಃ । ಋತಽವಾ ॥ ೮ ॥

ಸಾಯಣಭಾಷ್ಯಂ

ಮಘವಾ ಧನವಾನಿಂದ್ರೋ ರೂಪಂರೂಪಂ ಯದ್ಯದ್ರೂಪಂ ಕಾಮಯತೇ ತತ್ತದ್ರೂಪಂ ಬೋಭವೀತಿ । ಭೃಶಂ ಪ್ರಾಪ್ನೋತಿ ತತ್ತದ್ರೂಪಾತ್ಮಕೋ ಭವತಿ । ತತ್ರ ಕಾರಣಮುಚ್ಯತೇ । ಮಾಯಾ ಅನೇಕರೂಪಗ್ರಹಣಸಾಮರ್ಥ್ಯೋಪೇತಾಃ ಕೃಣ್ವಾನಃ ಕುರ್ವಾಣಃ ಸ್ವಾಂ ತನ್ವಂ ಸ್ವಕೀಯಾಂ ತನೂಂ ಪರಿ । ಪಂಚಮ್ಯರ್ಥೇ । ಸ್ವಸ್ಮಾಚ್ಛರೀರಾನ್ನಾನಾವಿಧಾನಿ ಶರೀರಾಣಿ ನಿರ್ಮಿಮೀತೇ । ಯದ್ವಾ । ಸ್ವಾಂ ತನೂಂ ನಾನಾವಿಧರೂಪೋಪೇತಾಂ ಕರೋತಿ । ತಥಾ ಚ ಮಂತ್ರವರ್ಣಃ । ಇಂದ್ರೋ ಮಾಯಾಭಿಃ ಪುರುರೂಪಃ । ಋಗ್ವೇ. ೬-೪೭-೧೮ । ಇತಿ । ಯದ್ಯಸ್ಮಾತ್ಸ್ವೈರ್ಮಂತ್ರೈಃ ಸ್ವಕೀಯೈಃ ಸ್ತುತಿಲಕ್ಷಣೈರ್ವಾಕ್ಯೈರಾಹೂತೋಽನೃತುಪಾಃ । ನ ಕೇವಲಮೃತುಷ್ವೇವ ಪಿಬತಿ ಕಿಂತ್ವನೃತುಷ್ವಪಿ। ಬಹುಶಃ ಸೋಮಂ ಪಿಬನ್ನಿತ್ಯರ್ಥಃ । ಋತಾವಾ ಸತ್ಯವಾನ್ ತಾದೃಶ ಇಂದ್ರೋ ದಿವಃ ಸ್ವರ್ಗಲೋಕಾತ್ಪರಿ ಮುಹೂರ್ತಮೇಕಸ್ಮಿನ್ನೇವ ಮುಹೂರ್ತೇ ನಾನಾದೇಶವರ್ತಿಷು ಯಜ್ಞೇಷು ತತ್ರಾಪಿ ತ್ರಿಃ ತ್ರಿಷು ಸವನೇಷ್ವಾಗಾತ್ । ಆಗಚ್ಛತಿ ॥ ಬೋಭವೀತಿ । ಭವತೇರ್ಯಙ್ಲುಕಿ ತಿಪಿ ಯಙೋ ವೇತೀಡಾಗಮಃ । ನಿಘಾತಃ । ಅಗಾತ್। ಇಣೋ ಲುಙಿ ರೂಪಂ । ಯದ್ವೃತ್ತಯೋಗಾದನಿಘಾತಃ ॥

ಪ್ರತಿಪದಾರ್ಥ

ಮಘವಾ—ಧನವಂತನಾದ ಇಂದ್ರನು । ರೂಪಂರೂಪಂ—ಅನೇಕವಿಧವಾದ ರೂಪಗಳನ್ನು । ಬೋಭವೀತಿ—ಧರಿಸಿಕೊಂಡು ಕಾಣಿಸಿಕೊಳ್ಳುತ್ತಾನೆ । ಮಾಯಾಃ-ನಾನಾ ವಿಧವಾದ ಶಕ್ತಿಯುತಗಳನ್ನಾಗಿ । ಕೃಣ್ವಾನಃ-ಮಾಡುತ್ತಾ । ಸ್ವಾಂ ತನ್ವಂ—ತನ್ನ ಶರೀರವನ್ನು । ಪರಿ—ಮೂಲರೂಪಕ್ಕಿಂತಲೂ ಬೇರೆಯಾದ । ಯತ್—ಯಾವ ಅದೇ ಶಕ್ತಿಯಿಂದಲೇ । ಸ್ವೈಃ ಮಂತ್ರೈಃ—ತನ್ನನ್ನು ಪ್ರಶಂಸಿಸುವ ಮಂತ್ರಗಳಿಂದ । ಅನೃತುಪಾಃ--

CC-0. Jangamwadi Math Collection. Digitized by eGangotri

ಋತುಕಾಲವಲ್ಲದಿದ್ದರೂ ಸಹ ಸೋಮಪಾನವನ್ನು ಮಾಡುತ್ತಾನೆ । **ಋತಾವಾ**—ಸತ್ಯವಂತನಾದ ಇಂದ್ರನು । **ದಿವಃ**—ಸ್ವರ್ಗಲೋಕದಿಂದ । **ಮುಹೂರ್ತಂ**—ಒಂದೇ ಮುಹೂರ್ತದಲ್ಲಿ । **ಪರಿ**—ನಾನಾ ದೇಶಗಳಲ್ಲಿ ನಡೆಯತಕ್ಕ । **ತ್ರಿಃ**—ಸವನತ್ರಯ ಕಾಲದಲ್ಲೂ । **ಆಗಾತ್**—ಬರುತ್ತಾನೆ

ಭಾವಾರ್ಥ

ಧನವಂತನಾದ ಇಂದ್ರನು ಅನೇಕ ವಿಧವಾದ ರೂಪಗಳನ್ನು ಧರಿಸಿಕೊಂಡು ಕಾಣಿಸಿಕೊಳ್ಳುತ್ತಾನೆ. ನಾನಾ ವಿಧವಾದ ಶಕ್ತಿಯುತಗಳನ್ನಾಗಿ ಮಾಡುತ್ತಾ ತನ್ನ ಶರೀರವನ್ನು ಅದರ ಮೂಲರೂಪಕ್ಕಿಂತಲೂ ಬೇರೆಯಾದ ಅನೇಕ ರೂಪವುಳ್ಳದ್ದನ್ನಾಗಿ ಮಾಡುತ್ತಾನೆ. ಯಾವ ಅದೇ ಶಕ್ತಿಯಿಂದಲೇ ತನ್ನನ್ನು ಪ್ರಶಂಸಿಸುವ ಮಂತ್ರಗಳಿಂದ ಆಹೂತನಾಗಿ ಋತುಕಾಲವಲ್ಲದಿದ್ದರೂ ಸಹ ಸೋಮಪಾನವನ್ನು ಮಾಡುತ್ತಾನೆ. ಸತ್ಯವಂತನಾದ ಇಂದ್ರನು ಸ್ವರ್ಗಲೋಕದಿಂದ ಒಂದೇ ಮುಹೂರ್ತದಲ್ಲಿ ನಾನಾ ದೇಶಗಳಲ್ಲಿ ನಡೆಯತಕ್ಕ ಯಜ್ಞಗಳಲ್ಲಿಯೂ ಸಹ ಸವನತ್ರಯಕಾಲದಲ್ಲೂ ಬರುತ್ತಾನೆ.

## English Translation

Maghavan becomes repeatedly (manifest) in various forms, practising delusions with respect to his own peculiar person; and invoked by his appropriate prayers, he comes in a moment from heaven to the three (daily rites), and, although observant of seasons, is the drinker (of the Soma) irrespective of season.

ವಿಶೇಷವಿಷಯಗಳು

**ರೂಪಂರೂಪಂ ಮಘವಾ ಬೋಭವೀತಿ**—**ಧನವಾನಿಂದ್ರೋ ಯದ್ಯದ್ರೂಪಂ ಕಾಮಯತೇ ತತ್ತದ್ರೂಪಂ ಪ್ರಾಪ್ನೋತಿ, ತತ್ತದ್ರೂಪಾತ್ಮಕೋ ಭವತಿ** । ಸಕಲೈಶ್ವರ್ಯಸಂಪನ್ನನಾದ ಇಂದ್ರನು ತನಗೆ ಬೇಕಾದಾಗ ಬೇಕಾದ ರೂಪಗಳನ್ನು ಧರಿಸುತ್ತಾನೆ. ಎಂದರೆ ಆಯಾ ರೂಪಾತ್ಮಕನಾಗಿ ಆಗುತ್ತಾನೆ. ಈ ವಿಷಯದಲ್ಲಿ—ಇಂದ್ರನು ಗೃತ್ಸಮದ ಋಷಿಯ ಯಜ್ಞವೇದಿಕೆಯಲ್ಲಿ ಕುಳಿತುಕೊಂಡಿರುವುದನ್ನು ಕೆಲವು ಅಸುರರು ತಿಳಿದು ಅವನನು ಹೊರಕ್ಕೆ ಬಂದಕೂಡಲೇ ಕೊಲ್ಲಬೇಕೆಂದು ಹೊಂಚುಹಾಕುತ್ತಿದ್ದರು. ಈ ಸುಳುವನ್ನು ಇಂದ್ರನು ತಿಳಿದು ಯಜ್ಞಭೂಮಿಯಿಂದ ಹೊರಕ್ಕೆ ಹೋಗುವಾಗ ಗೃತ್ಸಮದ ಋಷಿಯ ರೂಪವನ್ನು ಧರಿಸಿ ಹೊರಟುಹೋದನು. ಗೃತ್ಸಮದನು ಹೋಗುತ್ತಿರುವನೆಂದು ಅಸುರರು ತಿಳಿದು ಇಂದ್ರನನ್ನು ಹಿಂಸೆಪಡಿಸಲಿಲ್ಲ. ಅನಂತರ ಅಸುರರಿಗೆ ಈ ವಿಷಯವು ತಿಳಿಯಿತು ಎಂಬ ಕಥೆಯನ್ನು ನಾವು ಈ ಮಂಡಲದ ಪೀಠಿಕೆಯಲ್ಲಿ ವಿವರಿಸಿದೇವೆ.

**ಮಾಯಾಃ ಕೃಣ್ವಾನಃ ತನ್ವಂ ಪರಿ ಸ್ವಾಂ**—**ಸ್ವಸ್ಮಾಚ್ಛರೀರಾತ್ ನಾನಾವಿಧಾನಿ ಶರೀರಾಣಿ ನಿರ್ಮಿಮೀತೇ । ಯದ್ವಾ ಸ್ವಾಂ ತನೂಂ ನಾನಾವಿಧರೂಪೋಪೇತಾಂ ಕರೋತಿ** । ಇದಲ್ಲದೆ ಇಂದ್ರನು ತನ್ನ ಶರೀರದಿಂದ ನಾನಾವಿಧ ರೂಪಗಳನ್ನೂ ಶರೀರಗಳನ್ನೂ ನಿರ್ಮಿಸಬಲ್ಲನು ಅಥವಾ ತನ್ನ ಶರೀರವನ್ನು ನಾನಾವಿಧರೂಪಗಳುಳ್ಳದ್ದನ್ನಾಗಿಯೂ ಮಾಡಿಕೊಳ್ಳಬಲ್ಲನು. ಈ ವಿಷಯದಲ್ಲಿ—

CC-0. Jangamwadi Math Collection. Digitized by eGangotri

ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।
ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥
(ಋ. ಸಂ. ೬-೪೭-೧೮)

ಎಂಬ ಋಕ್ಕನ್ನು ಭಾಷ್ಯಕಾರರು ಉದಾಹರಣೆಯಾಗಿ ಕೊಟ್ಟಿರುವರು. ಎಂದರೆ ಇಂದ್ರನು ತನ್ನ ಮಾಯಾಶಕ್ತಿಗಳಿಂದ ಅನೇಕವಿಧವಾದ ರೂಪಗಳನ್ನು ಧರಿಸಲು ಸಮರ್ಥನೆಂದು ಇದರ ಮುಖ್ಯಾಭಿಪ್ರಾಯವು. ಹೇಗೆಂದರೆ—

ಯತ್ ಸ್ವೈಃ ಮಂತ್ರೈಃ ಅನೃತುಪಾಃ ಋತಾವಾ ದಿವಃ ಮುಹೂರ್ತಂ ಪರಿ ತ್ರಿಃ ಆಗಾತ್— ಸತ್ಯವಾನ್ ಇಂದ್ರ ಸ್ವರ್ಗಲೋಕಾತ್ಪರಿ ಏಕಸ್ಮಿನ್ನೇನ ಮುಹೂರ್ತೇ ನಾನಾದೇಶವರ್ತಿಷು ಯಜ್ಞೇಷು ತತ್ರಾಪಿ ತ್ರಿಷು ಸವನಕಾಲೇಷು ಆಗಚ್ಛತಿ । ನಾನಾದೇಶಗಳಲ್ಲಿ ಅನೇಕ ಯಜಮಾನರು ಮಾಡುವ ಅನೇಕ ಯಜ್ಞಗಳಲ್ಲಿಯೂ ಆ ಪ್ರತಿಯೊಂದು ಯಜ್ಞದ ಮೂರುಸವನಕಾಲಗಳಲ್ಲಿಯೂ ತಾವು ಪಠಿಸುವ ಮಂತ್ರಗಳಿಂದ ಕರೆಯಲ್ಪಟ್ಟಕೂಡಲೇ ಏಕಕಾಲದಲ್ಲಿ ಇಂದ್ರನು ಕ್ಷಣಮಾತ್ರದಲ್ಲಿ ಸ್ವರ್ಗದಿಂದ ಬಂದು ಸೋಮಪಾನಮಾಡುವನು. ಈರೀತಿ ಏಕಕಾಲದಲ್ಲಿ ಇಂದ್ರನು ಅನೇಕ ಯಜ್ಞಗಳಿಗೆ ಹೋಗಲು ಅನೇಕ ರೂಪಗಳನ್ನು ಧರಿಸಿ ಹೋಗುವನು ಎಂದಭಿಪ್ರಾಯವು.



ಸಂಹಿತಾಪಾಠಃ

ಮಹಾಁ ಋಷಿರ್ದೇವಜಾ ದೇವಜೂತೋಽಸ್ತಭ್ನಾತ್ಸಿಂಧುಮರ್ಣವಂ ನೃಚಕ್ಷಾಃ ।
ವಿಶ್ವಾಮಿತ್ರೋ ಯದವಹತ್ಸುದಾಸಮಪ್ರಿಯಾಯತ ಕುಶಿಕೇಭಿರಿಂದ್ರಃ ॥ ೯ ॥

ಪದಪಾಠಃ

ಮಹಾನ್ । ಋಷಿಃ । ದೇವಽಜಾಃ । ದೇವಽಜೂತಃ । ಅಸ್ತಭ್ನಾತ್ । ಸಿಂಧುಂ । ಅರ್ಣವಂ । ನೃಽಚಕ್ಷಾಃ । ವಿಶ್ವಾಮಿತ್ರಃ । ಯತ್ । ಅವಹತ್ । ಸುಽದಾಸಂ । ಅಪ್ರಿಯಾಯತ । ಕುಶಿಕೇಭಿಃ । ಇಂದ್ರಃ ॥ ೯ ॥

ಸಾಯಣಭಾಷ್ಯಂ

ಮಹಾನ್ ತಪಸಾತಿಶಯಿತಸಾಮರ್ಥ್ಯವಾನೃಷಿರತೀಂದ್ರಿಯಾರ್ಥದ್ರಷ್ಟಾ ದೇವಜಾ ದ್ಯೋತಮಾನಾನಾಂ ತೇಜಸಾಂ ಜನಯಿತಾ ದೇವಜೂತಸ್ತೈಸ್ತೇಜೋಭಿರಾಕೃಷ್ಟೋ ನೃಚಕ್ಷಾ ನೃಣಾಂ ಕರ್ಮನೇತೃಣಾಮಧ್ವರ್ಯ್ವಾದೀನಾಮುಪದ್ರಷ್ಟಾ ಸ ವಿಶ್ವಾಮಿತ್ರೋಽರ್ಣವಮುದಕವಂತಂ ಸಿಂಧುಂ ವಿಪಾಟ್-

CC-0. Jangamwadi Math Collection. Digitized by eGangotri

ಚ್ಛುತೆದ್ರ್ಯೋಃ ಸಂಭೇದಮಸ್ತಭ್ನಾತ್ । ನಿರುದ್ಧವೇಗಮಕರೋತ್ । ಕಿಂಚ ಸ ವಿಶ್ವಾಮಿತ್ರಃ ಸುದಾಸಂ ಪೈಜವನಂ ರಾಜಾನಂ ಯದ್ಯದಾಹವತ್ ಅಯಾಜಯತ್ ತದಾನೀಮಿಂದ್ರಃ ಕುಶಿಕೇಭಿಃ ಕುಶಿಕಗೋತ್ರೋತ್ಪನ್ನೈರೃಷಿಭಿಃ ಸಹಾಪ್ರಿಯಾಯತ । ಪ್ರಿಯ ಇವಾಚರತ್ ॥ ಅವಹತ್ । ವಹ ಪ್ರಾಪಣ ಇತ್ಯಸ್ಯ ಲಙಿ ರೂಪಂ । ಯದ್ಯೋಗಾದನಿಘಾತಃ । ಅಪ್ರಿಯಾಯತೆ । ಪ್ರಿಯ ಇವಾಚರತೀತ್ಯರ್ಥೇ ಕರ್ತುಃ ಕ್ಯಙ್ ಸಲೋಪಶ್ಚೇತಿ ಕ್ಯಙ್ । ತದಂತಾಲ್ಲಙಿ ರೂಪಂ । ಪಾದಾದಿತ್ವಾದನಿಘಾತಃ ॥

ಪ್ರತಿಪದಾರ್ಥ

ಮಹಾನ್—(ತಪಸ್ಸಿನಿಂದ) ಅತಿಶಯವಾದ ಸಾಮರ್ಥ್ಯವನ್ನು ಪಡೆದವನೂ । ಋಷಿಃ—ಅತೀಂದ್ರಿಯ ದ್ರಷ್ಟೃವೂ । **ದೇವಜಾಃ**—ಪ್ರಕಾಶಮಾನವಾದ ತೇಜಸ್ಸುಗಳಿಗೆ ಉತ್ಪತ್ತಿಸ್ಥಾನವೂ । **ದೇವಜೂತಃ**—ತೇಜಸ್ಸುಗಳಿಂದ ಆಕರ್ಷಕವಾದ ರೂಪವುಳ್ಳವನೂ । ನೃಚಕ್ಷಾಃ—ಅಧ್ವರ್ಯುಗಳೇ ಮುಂತಾದ ಋತ್ವಿಗ್ರೂಪವಾದ ಚಕ್ಷುಸ್ಸುಳ್ಳವನೂ ಆದ । ವಿಶ್ವಾಮಿತ್ರಃ—ವಿಶ್ವಾಮಿತ್ರನು । **ಅರ್ಣವಂ**—ಉದಕದಿಂದ ತುಂಬಿದ । **ಸಿಂಧುಂ**—ವಿಪಾಟ್ ಮತ್ತು ಶುತುದ್ರು ನದಿಗಳ ಪ್ರವಾಹಗಳ ಸಂಗಮವನ್ನು । **ಅಸ್ತಭ್ನಾತ್**—ತಡೆದನು (ಮತ್ತು) । **ಸುದಾಸಂ**—ಸುದಾಸನೆಂಬ ರಾಜನಿಂದ । **ಯತ್**—ಯಾವಾಗ । **ಅವಹತ್**—ಯಜ್ಞವನ್ನು ಮಾಡಿಸಿದನೋ ಆಗ । **ಇಂದ್ರಃ**—ಇಂದ್ರನು । **ಕುಶಿಕೇಭಿಃ**—ಕುಶಿಕಗೋತ್ರೋತ್ಪನ್ನರಾದ ಋಷಿಗಳೊಂದಿಗೆ । **ಅಪ್ರಿಯಾಯತ**—ಪ್ರೀತಿಯನ್ನು ವ್ಯಕ್ತಪಡಿಸಿದನು.

ಭಾವಾರ್ಥ

ತಪಸ್ಸಿನಿಂದ ಅತಿಶಯವಾದ ಸಾಮರ್ಥ್ಯವನ್ನು ಪಡೆದವನೂ, ಅತೀಂದ್ರಿಯದ್ರಷ್ಟೃವೂ, ಪ್ರಕಾಶಮಾನವಾದ ತೇಜಸ್ಸುಗಳಿಗೆ ಉತ್ಪತ್ತಿಸ್ಥಾನನೂ, ತೇಜಸ್ಸುಗಳಿಂದ ಆಕರ್ಷಕವಾದ ರೂಪವುಳ್ಳವನೂ, ಅಧ್ವರ್ಯುಗಳೇ ಮುಂತಾದ ಋತ್ವಿಗ್ರೂಪವಾದ ಚಕ್ಷುಸ್ಸುಳ್ಳವನೂ ಆದ ವಿಶ್ವಾಮಿತ್ರನು ಉದಕದಿಂದ ತುಂಬಿದ ವಿಪಾಟ್ ಮತ್ತು ಶುತುದ್ರು ನದಿಗಳ ಪ್ರವಾಹಗಳ ಸಂಗಮವನ್ನು ತಡೆದನು. ಮತ್ತು ಇವನು ಸುದಾಸನೆಂಬ ರಾಜನಿಂದ ಯಜ್ಞವನ್ನು ಮಾಡಿಸಿದಾಗ ಇಂದ್ರನು ಕುಶಿಕಗೋತ್ರೋತ್ಪನ್ನರಾದ ಋಷಿಗಳೊಂದಿಗೆ ತನ್ನ ಪ್ರೀತಿಯನ್ನು ವ್ಯಕ್ತಪಡಿಸಿದನು.

English Translation

The great Rishi, the generator of the gods, the attracted by the deities, the overlooker of the leaders (at holy rites), Vishwamitra arrested the watery stream when he sacrificed for Sudas ; Indra, with the Kushikas, was pleased.

ವಿಶೇಷವಿಷಯಗಳು

**ಋಷಿಃ**—ಅತೀಂದ್ರಿಯಾರ್ಥದ್ರಷ್ಟಾ । ಬಾಹ್ಯೇಂದ್ರಿಯಗಳಿಗೂ, ಮಾನಸೇಂದ್ರಿಯಕ್ಕೂ ಗೋಚರವಾಗದ ಅನೇಕ ವಿಷಯಗಳನ್ನು ತನ್ನ ಮಂತ್ರಶಕ್ತಿಯಿಂದಲೂ ತಪಶ್ಶಕ್ತಿಯಿಂದಲೂ ತಿಳಿಯಬಲ್ಲ ಸಾಮರ್ಥ್ಯವುಳ್ಳವನು.

**ದೇವಜಾಃ**—ದ್ಯೋತಮಾನಾನಾಂ ತೇಜಸಾಂ ಜನಯಿತಾ । ಪ್ರಕಾಶಮಾನವಾದ ತೇಜಸ್ಸುಗಳಿಗೆ ಉತ್ಪತ್ತಿಸ್ಥಾನನು ಎಂದರೆ ಅಪೂರ್ವವಾದ ತೇಜಸ್ಸಿನಿಂದ (ಅಥವಾ ಬ್ರಹ್ಮತೇಜಸ್ಸಿನಿಂದ) ಬೆಳಗುತ್ತಿರುವವನು.



CC-0. Jangamwadi Math Collection. Digitized by eGangotri

ಬ್ರಹ್ಮಜ್ಞಾನಿಯಾದವನ ಮುಖದಲ್ಲಿ ಒಂದು ಅಪೂರ್ವವಾದ ತೇಜಸ್ಸು ಬೆಳಗುತ್ತಿರುವುದು. ಅವನಿಗೆ ಯಾವ ವಿಧವಾದ ಸಂಶಯಗಳೂ ಇಲ್ಲದೆ ಸದಾಕಾಲದಲ್ಲಿಯೂ ತೃಪ್ತಿಸಂತೋಷಗಳಿಂದ ಮನಸ್ಸಮಾಧಾನವನ್ನು ಹೊಂದಿ ಸರ್ವದಾ ಸಂತೋಷಚಿತ್ತನಾಗಿರುವನು.

**ದೇವಜೂತಃ**—ಮೇಲೆ ಹೇಳಿದ ದಿವ್ಯ ತೇಜಸ್ಸಿನಿಂದ ಆಕರ್ಷಣೀಯವಾದ ರೂಪವುಳ್ಳವನು. ಅವನ ಶರೀರಾಕೃತಿಯೂ ಸಹ ನೋಡುವುದಕ್ಕೆ ರಮ್ಯವಾಗಿರುವುದೆಂದಭಿಪ್ರಾಯವು.

**ವಿಶ್ವಾಮಿತ್ರಃ ಯತ್ ಸುದಾಸಂ ಕುಶಿಕೇಭಿಃ ಅವಹತ್ ಇಂದ್ರಃ ಆಪ್ರಿಯಾಯತೆ**—ವಿಶ್ವಾಮಿತ್ರ ಋಷಿಯು ಸುದಾಸನೆಂಬ ರಾಜನಿಗೆ ಅಶ್ವಮೇಧಯಾಗವನ್ನು ಮಾಡಿಸಿದಾಗ ವಿಶ್ವಾಮಿತ್ರನ ವಿಷಯದಲ್ಲಿಯೂ, ಅವನ ಸಂಬಂಧಿಗಳು ಕುಶಿಕಗೋತ್ರೋತ್ಪನ್ನರಾದ ಇತರ ಋಷಿಗಳ ವಿಷಯದಲ್ಲಿಯೂ ಇಂದ್ರನು ಅತ್ಯಂತ ಹಿತಕಾರಿಯಾದ ಸ್ನೇಹಿತನಂತೆ ವರ್ತಿಸಿದನು ಎಂದಭಿಪ್ರಾಯವು.

**ನೃಚಕ್ಷಾಃ**—**ಕರ್ಮನೇತೄಣಾಮಧ್ವರ್ಯ್ವಾದೀನಾಮುಪದ್ರಷ್ಟಾ** । ಯಜ್ಞಕರ್ಮವನ್ನು ನೆರವೇರಿಸುವ ಅಧ್ವರ್ಯುವೇ ಮೊದಲಾದ ಋತ್ವಿಜರಿಗೆ ಎರಡನೇ ಕಣ್ಣಿನಂತಿರುವನು ಎಂದರೆ ಅವರು ಮಾಡುವ ಕರ್ಮಗಳಿಗೆ ಮಾರ್ಗದರ್ಶಕನಾಗಿ ಸರ್ವವನ್ನೂ ತಿಳಿದು ಋತ್ವಿಗ್ಜನರಲ್ಲಿ ಶ್ರೇಷ್ಠನೆನಿಸಿರುವವನು.

**ಸಿಂಧುಂ ಅರ್ಣವಂ ಅಸ್ತಭ್ನಾತ್**—ಪ್ರವಾಹೋದಕಗಳಿಂದ ತುಂಬಿ ಹರಿಯುತ್ತಿರುವ ಎಂದರೆ ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳ ಪ್ರವಾಹಗಳನ್ನು ತಡೆದು ನಿಲ್ಲಿಸಿದನು. ವಿಶ್ವಾಮಿತ್ರನು ಆಚರಿಸಿದ ಈ ನದೀಪ್ರವಾಹ ಸ್ತಂಭನವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು—

ವಿಶ್ವಾಮಿತ್ರಋಷಿಯು ಪಿಜವನಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು ಸುದಾಸನು ವಿಶ್ವಾಮಿತ್ರನ ಸಹಾಯದಿಂದ ಅಶ್ವಮೇಧಯಾಗವನ್ನು ಮಾಡಿದಾಗ ವಿಶ್ವಾಮಿತ್ರನಿಗೆ ಬಹುಮಾನವಾಗಿ ಬಹಳವಾಗಿ ಧನವನ್ನು ಕೊಟ್ಟನು. ಆ ರಾಜನು ಕೊಟ್ಟ ಧನವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗಬೇಕೆಂದು ಹೊರಟು **ವಿಪಾಟ್** ಮತ್ತು **ಶುತುದ್ರಿ** ಎಂಬ ನದಿಗಳ (ಪಂಜಾಬಿನಲ್ಲಿರುವ ಈಗಿನ Beas and Sutlej ಎಂಬ ನದಿಗಳು.) ಸಂಗಮಸ್ಥಾನಕ್ಕೆ ಬಂದನು. ಇವನಲ್ಲಿದ್ದ ದ್ರವ್ಯವನ್ನು ಅಪಹರಿಸಬೇಕೆಂದು ಕಳ್ಳರು ಇವನ ಹಿಂದೆಯೇ ಇವನನ್ನನು ಸರಿಸುತ್ತಾ ಬರುತ್ತಿದ್ದರು. ಇದನ್ನು ತಿಳಿದ ವಿಶ್ವಾಮಿತ್ರನು ಹೇಗಾದರೂ ಮಾಡಿ ದಾರಿಗೆ ಅಡ್ಡಲಾಗಿರುವ ಈ ನದಿ ಗಳನ್ನು ದಾಟಬೇಕೆಂದು ಪ್ರಯತ್ನಿಸಲು ಅವು ಪ್ರವಾಹದಿಂದ ವೇಗವಾಗಿ ಹರಿಯುತ್ತಾ ಬಹಳ ಆಳವಾಗಿದ್ದುದರಿಂದ ಸಾಧ್ಯವಾಗಲಿಲ್ಲ. ಆಗ ಋಷಿಯು ಆ ನದಿಗಳನ್ನು ಪ್ರಾರ್ಥಿಸುತ್ತಾ ತಮ್ಮ ನೀರನ್ನು ಕಡಮೆಮಾಡಿಕೊಂಡು ತಾನು ಹಾದುಹೋಗಲು ಅನುಕೂಲವಾಗುವಂತೆ ಮಾಡಬೇಕೆಂದು ಸ್ತೋತ್ರಮಾಡಿದನೆಂದು ಇತಿಹಾಸವಿದೆ. ಅದನ್ನೇ ಈ ಋಕ್ಕಿನಲ್ಲಿ ಸೂಚಿಸಲ್ಪಟ್ಟಿದೆ. ಈ ವಿಷಯವಾಗಿ ವಿಸ್ತಾರವಾದ ವಿವರಣೆಯು ಋ. ಸಂ. ೩-೩೩ ನೆಯ ಸೂಕ್ತದಲ್ಲಿ ಹೇಳಲ್ಪಟ್ಟಿದೆ. ಅದರ ಸಾರಾಂಶವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಲಾಗಿದೆ.

**ಪ್ರ ಪರ್ವತಾನಾಮುಶತೀ ಉಪಸ್ಥಾದಶ್ವೇ ಇವ ವಿಷಿತೇ ಹಾಸಮಾನೇ ।**
**ಗಾವೇವ ಶುಭ್ರೇ ಮಾತರಾ ರಿಹಾಣೇ ವಿಪಾಟ್ಛುತುದ್ರೀ ಪಯಸಾ ಜವೇತೇ** ॥ ೧ ॥

**ಇಂದ್ರೇಷಿತೇ ಪ್ರಸವಂ ಭಿಕ್ಷಮಾಣೇ ಅಚ್ಛಾ ಸಮುದ್ರಂ ರಥ್ಯೇವ ಯಾಥಃ ।**
**ಸಮಾರಾಣೇ ಊರ್ಮಿಭಿಃ ಪಿನ್ವಮಾನೇ ಅನ್ಯಾ ವಾಮನ್ಯಾಮಪ್ಯೇತಿ ಶುಭ್ರೇ** ॥ ೨ ॥

CC-0. Jangamwadi Math Collection. Digitized by eGangotri

ಅಚ್ಛಾ ಸಿಂಧುಂ ಮಾತೃತಮಾಮಯಾಸಂ ವಿಪಾಶಮುರ್ವೀಂ ಸುಭಗಾಮಗನ್ಮ ।
ವತ್ಸಮಿವ ಮಾತರಾ ಸಂರಿಹಾಣೇ ಸಮಾನಂ ಯೋನಿಮನು ಸಂಚರಂತೀ ॥ ೩ ॥

ಏನಾ ವಯಂ ಪಯಸಾ ಪಿನ್ವಮಾನಾ ಅನು ಯೋನಿಂ ದೇವಕೃತಂ ಚರಂತೀಃ ।
ನ ವರ್ತವೇ ಪ್ರಸವಃ ಸರ್ಗತಕ್ತಃ ಕಿಂಯುರ್ವಿಪ್ರೋ ನದ್ಯೋ ಜೋಹವೀತಿ ॥ ೪ ॥

ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ ।
ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ ॥ ೫ ॥

ಇಂದ್ರೋ ಅಸ್ಮಾಁ ಅರದದ್ವಜ್ರಬಾಹುರಪಾಹನ್ವೃತ್ರಂ ಪರಿಧಿಂ ನದೀನಾಂ ।
ದೇವೋಽನಯತ್ಸವಿತಾ ಸುಪಾಣಿಸ್ತಸ್ಯ ವಯಂ ಪ್ರಸವೇ ಯಾಮ ಉರ್ವೀಃ ॥ ೬ ॥

ಪ್ರವಾಚ್ಯಂ ಶಶ್ವಧಾ ವೀರ್ಯಂ೧ತದಿಂದ್ರಸ್ಯ ಕರ್ಮ ಯದಹಿಂ ವಿವೃಶ್ಚತ್ ।
ವಿ ವಜ್ರೇಣ ಪರಿಷದೋ ಜಘಾನಾಯನ್ನಾಪೋಽಯನಮಿಚ್ಛಮಾನಾಃ । ॥ ೭ ॥

ಏತದ್ವಚೋ ಜರಿತರ್ಮಾಪಿ ಮೃಷ್ಠಾ ಆ ಯತ್ತೇ ಘೋಷಾನುತ್ತರಾ ಯುಗಾನಿ ।
ಉಕ್ಥೇಷು ಕಾರೋ ಪ್ರತಿ ನೋ ಜುಷಸ್ವ ಮಾ ನೋ ನಿ ಕಃ ಪುರುಷತ್ರಾ ನಮಸ್ತೇ ॥ ೮ ॥

ಓ ಷು ಸ್ವಸಾರಃ ಕಾರವೇ ಶೃಣೋತ ಯಯೌ ವೋ ದೂರಾದನಸಾ ರಥೇನ ।
ನಿ ಷೂ ನಮಧ್ವಂ ಭವತಾ ಸುಪಾರಾ ಅಧೋಅಕ್ಷಾಃ ಸಿಂಧವಃ ಸ್ರೋತ್ಯಾಭಿಃ ॥ ೯ ॥

ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾದನಸಾ ರಥೇನ ।
ನಿ ತೇ ನಂಸೈ ಪೀಪ್ಯಾನೇವ ಯೋಷಾ ಮರ್ಯಾಯೇವ ಕನ್ಯಾ ಶಶ್ವಚೈ ತೇ ॥ ೧೦ ॥

ಯದಂಗ ತ್ವಾ ಭರತಾಃ ಸಂತರೇಯುರ್ಗವ್ಯನ್ ಗ್ರಾಮ ಇಷಿತ ಇಂದ್ರಜೂತಃ ।
ಅರ್ಷಾದಹ ಪ್ರಸವಃ ಸರ್ಗತಕ್ತ ಆ ವೋ ವೃಣೇ ಸುಮತಿಂ ಯಜ್ಞಿಯಾನಾಂ ॥ ೧೧ ॥

ಅತಾರಿಷುರ್ಭರತಾ ಗವ್ಯವಃ ಸಮಭಕ್ತ ವಿಪ್ರಃ ಸುಮತಿಂ ನದೀನಾಂ ।
ಪ್ರ ಪಿನ್ವಧ್ವಮಿಷಯಂತೀಃ ಸುರಾಧಾ ಆ ವಕ್ಷಣಾಃ ಪೃಣಧ್ವಂ ಯಾತ ಶೀಭಂ ॥ ೧೨ ॥

ಉದ್ವ ಊರ್ಮಿಃ ಶಮ್ಯಾ ಹಂತ್ವಾಪೋ ಯೋಕ್ತ್ರಾಣಿ ಮುಂಚತ ।
ಮಾದುಷ್ಕೃತೌ ವ್ಯೇನಸಾಘ್ನ್ಯೌ ಶೂನಮಾರತಾಂ ॥ ೧೩ ॥

(ಋ. ಸಂ. ೩-೩೩-೧ ರಿಂದ ೧೩)

ವಿಶ್ವಾಮಿತ್ರನು ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳನ್ನು ಈರೀತಿ ಪ್ರಾರ್ಥಿಸುವನು—ಲಾಯದಲ್ಲಿ ಕಟ್ಟಿಹಾಕಿದ್ದ ಬಂಧನದಿಂದ ಬಿಚ್ಚಿದಮೇಲೆ ಪರಸ್ಪರ ಸ್ಪರ್ಧಿಸುತ್ತಾ ಈಚೆಗೆ ಬರುವ ಅಶ್ವಗಳು ವೇಗವಾಗಿ ಓಡುವಂತೆಯೂ, ತಮ್ಮ ತಮ್ಮ ಕರುಗಳನ್ನು ನೆನೆಸಿಕೊಂಡು ಅವುಗಳನ್ನು ಪ್ರೀತಿಯಿಂದ ನೆಕ್ಕಲಿಚ್ಛೆಯುಳ್ಳ ಗೋವುಗಳು ಕರುಗಳಿರುವೆಡೆಗೆ ಓಡಿಬರುವಂತೆಯೂ ಸಹ, ಉದಕದಿಂದ ಪೂರ್ಣವಾದ ವಿಪಾಟ್ ನದಿಯೂ, ಶುತುದ್ರಿ ಎಂಬ ನದಿಯೂ ಸಹ

CC-0. Jangamwadi Math Collection. Digitized by eGangotri

ಬ್ರಹ್ಮಜ್ಞಾನಿಯಾದವನ ಮುಖದಲ್ಲಿ ಒಂದು ಅಪೂರ್ವವಾದ ತೇಜಸ್ಸು ಬೆಳಗುತ್ತಿರುವುದು. ಅವನಿಗೆ ಯಾವ ವಿಧವಾದ ಸಂಶಯಗಳೂ ಇಲ್ಲದೆ ಸದಾಕಾಲದಲ್ಲಿಯೂ ತೃಪ್ತಿಸಂತೋಷಗಳಿಂದ ಮನಸ್ಸಮಾಧಾನವನ್ನು ಹೊಂದಿ ಸರ್ವದಾ ಸಂತೋಷಚಿತ್ತನಾಗಿರುವನು.

**ದೇವಜೂತಃ**—ಮೇಲೆ ಹೇಳಿದ ದಿವ್ಯ ತೇಜಸ್ಸಿನಿಂದ ಆಕರ್ಷಣೀಯವಾದ ರೂಪವುಳ್ಳವನು. ಅವನ ಶರೀರಾಕೃತಿಯೂ ಸಹ ನೋಡುವುದಕ್ಕೆ ರಮ್ಯವಾಗಿರುವುದೆಂದಭಿಪ್ರಾಯವು.

**ವಿಶ್ವಾಮಿತ್ರಃ ಯತ್ ಸುದಾಸಂ ಕುಶಿಕೇಭಿಃ ಅವಹತ್ ಇಂದ್ರಃ ಅಪ್ರಿಯಾಯತ**—ವಿಶ್ವಾಮಿತ್ರ ಋಷಿಯು ಸುದಾಸನೆಂಬ ರಾಜನಿಗೆ ಅಶ್ವಮೇಧಯಾಗವನ್ನು ಮಾಡಿಸಿದಾಗ ವಿಶ್ವಾಮಿತ್ರನ ವಿಷಯದಲ್ಲಿಯೂ, ಅವನ ಸಂಬಂಧಿಗಳು ಕುಶಿಕಗೋತ್ರೋತ್ಪನ್ನರಾದ ಇತರ ಋಷಿಗಳ ವಿಷಯದಲ್ಲಿಯೂ ಇಂದ್ರನು ಅತ್ಯಂತ ಹಿತಕಾರಿಯಾದ ಸ್ನೇಹಿತನಂತೆ ವರ್ತಿಸಿದನು ಎಂದಭಿಪ್ರಾಯವು.

**ನೃಚಕ್ಷಾಃ—ಕರ್ಮನೇತೄಣಾಮಧ್ವರ್ಯ್ವಾದೀನಾಮುಪದ್ರಷ್ಟಾ ।** ಯಜ್ಞಕರ್ಮವನ್ನು ನೆರವೇರಿಸುವ ಅಧ್ವರ್ಯುವೇ ಮೊದಲಾದ ಋತ್ವಿಜರಿಗೆ ಎರಡನೇ ಕಣ್ಣಿನಂತಿರುವನು ಎಂದರೆ ಅವರು ಮಾಡುವ ಕರ್ಮಗಳಿಗೆ ಮಾರ್ಗದರ್ಶಕನಾಗಿ ಸರ್ವವನ್ನೂ ತಿಳಿದು ಋತ್ವಿಗ್ಜನರಲ್ಲಿ ಶ್ರೇಷ್ಠನೆನಿಸಿರುವವನು.

**ಸಿಂಧುಂ ಅರ್ಣವಂ ಅಸ್ತಭ್ನಾತ್**—ಪ್ರವಾಹೋದಕಗಳಿಂದ ತುಂಬಿ ಹರಿಯುತ್ತಿರುವ ಎಂದರೆ ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳ ಪ್ರವಾಹಗಳನ್ನು ತಡೆದು ನಿಲ್ಲಿಸಿದನು. ವಿಶ್ವಾಮಿತ್ರನು ಆಚರಿಸಿದ ಈ ನದೀಪ್ರವಾಹ ಸ್ತಂಭನವಿಷಯದಲ್ಲಿ ಒಂದು ಪೂರ್ವೇತಿಹಾಸವಿರುವುದು—

ವಿಶ್ವಾಮಿತ್ರಋಷಿಯು ಪಿಜವನಪುತ್ರನಾದ ಸುದಾಸನೆಂಬ ರಾಜನಿಗೆ ಪುರೋಹಿತನಾಗಿದ್ದನು ಸುದಾಸನು ವಿಶ್ವಾಮಿತ್ರನ ಸಹಾಯದಿಂದ ಅಶ್ವಮೇಧಯಾಗವನ್ನು ಮಾಡಿದಾಗ ವಿಶ್ವಾಮಿತ್ರನಿಗೆ ಬಹುಮಾನವಾಗಿ ಬಹಳವಾಗಿ ಧನವನ್ನು ಕೊಟ್ಟನು. ಆ ರಾಜನು ಕೊಟ್ಟ ಧನವನ್ನು ತೆಗೆದುಕೊಂಡು ತನ್ನ ಆಶ್ರಮಕ್ಕೆ ಹೋಗಬೇಕೆಂದು ಹೊರಟು **ವಿಪಾಟ್** ಮತ್ತು **ಶುತುದ್ರಿ** ಎಂಬ ನದಿಗಳ (ಪಂಜಾಬಿನಲ್ಲಿರುವ ಈಗಿನ Beas and Sutlej ಎಂಬ ನದಿಗಳು.) ಸಂಗಮಸ್ಥಾನಕ್ಕೆ ಬಂದನು. ಇವನಲ್ಲಿದ್ದ ದ್ರವ್ಯವನ್ನು ಅಪಹರಿಸಬೇಕೆಂದು ಕಳ್ಳರು ಇವನ ಹಿಂದೆಯೇ ಇವನನ್ನನು ಸರಿಸುತ್ತಾ ಬರುತ್ತಿದ್ದರು. ಇದನ್ನು ತಿಳಿದ ವಿಶ್ವಾಮಿತ್ರನು ಹೇಗಾದರೂ ಮಾಡಿ ದಾರಿಗೆ ಅಡ್ಡಲಾಗಿರುವ ಈ ನದಿಗಳನ್ನು ದಾಟಬೇಕೆಂದು ಪ್ರಯತ್ನಿಸಲು ಅವು ಪ್ರವಾಹದಿಂದ ವೇಗವಾಗಿ ಹರಿಯುತ್ತಾ ಬಹಳ ಆಳವಾಗಿದ್ದುದರಿಂದ ಸಾಧ್ಯವಾಗಲಿಲ್ಲ. ಆಗ ಋಷಿಯು ಆ ನದಿಗಳನ್ನು ಪ್ರಾರ್ಥಿಸುತ್ತಾ ತಮ್ಮ ನೀರನ್ನು ಕಡಮೆಮಾಡಿಕೊಂಡು ತಾನು ಹಾದುಹೋಗಲು ಅನುಕೂಲವಾಗುವಂತೆ ಮಾಡಬೇಕೆಂದು ಸ್ತೋತ್ರಮಾಡಿದನೆಂದು ಇತಿಹಾಸವಿದೆ. ಅದನ್ನೇ ಈ ಋಕ್ಕಿನಲ್ಲಿ ಸೂಚಿಸಲ್ಪಟ್ಟಿದೆ. ಈ ವಿಷಯವಾಗಿ ವಿಸ್ತಾರವಾದ ವಿವರಣೆಯು ಋ. ಸಂ. ೩-೩೩ ನೆಯ ಸೂಕ್ತದಲ್ಲಿ ಹೇಳಲ್ಪಟ್ಟಿದೆ. ಅದರ ಸಾರಾಂಶವನ್ನು ಇಲ್ಲಿ ಸೂಕ್ಷ್ಮವಾಗಿ ವಿವರಿಸಲಾಗಿದೆ.

**ಪ್ರ ಪರ್ವತಾನಾಮುಶತೀ ಉಪಸ್ಥಾದಶ್ವೇ ಇವ ವಿಷಿತೇ ಹಾಸಮಾನೇ ।**
**ಗಾವೇವ ಶುಭ್ರೇ ಮಾತರಾ ರಿಹಾಣೇ ವಿಪಾಟ್ಛುತುದ್ರೀ ಪಯಸಾ ಜವೇತೇ ॥ ೧ ॥**

**ಇಂದ್ರೇಷಿತೇ ಪ್ರಸವಂ ಭಿಕ್ಷಮಾಣೇ ಅಚ್ಛಾ ಸಮುದ್ರಂ ರಥ್ಯೇವ ಯಾಥಃ ।**
**ಸಮಾರಾಣೇ ಊರ್ಮಿಭಿಃ ಪಿನ್ವಮಾನೇ ಅನ್ಯಾ ವಾಮನ್ಯಾಮಪ್ಯೇತಿ ಶುಭ್ರೇ ॥ ೨ ॥**

CC-0. Jangamwadi Math Collection. Digitized by eGangotri

ಅಚ್ಛಾ ಸಿಂಧುಂ ಮಾತೃತಮಾಮಯಾಸಂ ವಿಪಾಶಮುರ್ವೀಂ ಸುಭಗಾಮಗನ್ಮ ।
ವತ್ಸಮಿವ ಮಾತರಾ ಸಂರಿಹಾಣೇ ಸಮಾನಂ ಯೋನಿಮನು ಸಂಚರಂತೀ　　॥ ೩ ॥

ಏನಾ ವಯಂ ಪಯಸಾ ಪಿನ್ವಮಾನಾ ಅನು ಯೋನಿಂ ದೇವಕೃತಂ ಚರಂತೀಃ ।
ನ ವರ್ತವೇ ಪ್ರಸವಃ ಸರ್ಗತಕ್ತಃ ಕಿಂಯುರ್ವಿಪ್ರೋ ನದ್ಯೋ ಜೋಹವೀತಿ　　॥ ೪ ॥

ರಮಧ್ವಂ ಮೇ ವಚಸೇ ಸೋಮ್ಯಾಯ ಋತಾವರೀರುಪ ಮುಹೂರ್ತಮೇವೈಃ ।
ಪ್ರ ಸಿಂಧುಮಚ್ಛಾ ಬೃಹತೀ ಮನೀಷಾವಸ್ಯುರಹ್ವೇ ಕುಶಿಕಸ್ಯ ಸೂನುಃ　　॥ ೫ ॥

ಇಂದ್ರೋ ಅಸ್ಮಾँ ಅರದದ್ವಜ್ರಬಾಹುರಪಾಹನ್ವೃತ್ರಂ ಪರಿಧಿಂ ನದೀನಾಂ ।
ದೇವೋಽನಯತ್ಸವಿತಾ ಸುಪಾಣಿಸ್ತಸ್ಯ ವಯಂ ಪ್ರಸವೇ ಯಾಮ ಉರ್ವೀಃ　　॥ ೬ ॥

ಪ್ರವಾಚ್ಯಂ ಶಶ್ವಧಾ ವೀರ್ಯ೦ ತದಿಂದ್ರಸ್ಯ ಕರ್ಮ ಯದಹಿಂ ವಿವೃಶ್ಚತ್ ।
ವಿ ವಜ್ರೇಣ ಪರಿಷದೋ ಜಘಾನಾಯನ್ನಾಪೋಽಯನಮಿಚ್ಛಮಾನಾಃ ।　　॥ ೭ ॥

ಏತದ್ವಚೋ ಜರಿತರ್ಮಾಪಿ ಮೃಷ್ಠಾ ಆ ಯತ್ತೇ ಘೋಷಾನುತ್ತರಾ ಯುಗಾನಿ ।
ಉಕ್ಥೇಷು ಕಾರೋ ಪ್ರತಿ ನೋ ಜುಷಸ್ವ ಮಾ ನೋ ನಿ ಕಃ ಪುರುಷತ್ರಾ ನಮಸ್ತೇ　　॥ ೮ ॥

ಓ ಷು ಸ್ವಸಾರಃ ಕಾರವೇ ಶೃಣೋತ ಯಯೌ ವೋ ದೂರಾದನಸಾ ರಥೇನ ।
ನಿ ಷೂ ನಮಧ್ವಂ ಭವತಾ ಸುಪಾರಾ ಅಧೋಅಕ್ಷಾಃ ಸಿಂಧವಃ ಸ್ರೋತ್ಯಾಭಿಃ　　॥ ೯ ॥

ಆ ತೇ ಕಾರೋ ಶೃಣವಾಮಾ ವಚಾಂಸಿ ಯಯಾಥ ದೂರಾದನಸಾ ರಥೇನ ।
ನಿ ತೇ ನಂಸೈ ಪೀಪ್ಯಾನೇವ ಯೋಷಾ ಮರ್ಯಾಯೇವ ಕನ್ಯಾ ಶಶ್ವಚೈ ತೇ　　॥ ೧೦ ॥

ಯದಂಗ ತ್ವಾ ಭರತಾಃ ಸಂತರೇಯುರ್ಗವ್ಯನ್ ಗ್ರಾಮ ಇಷಿತ ಇಂದ್ರಜೂತಃ ।
ಅರ್ಷಾದಹ ಪ್ರಸವಃ ಸರ್ಗತಕ್ತ ಆ ವೋ ವೃಣೇ ಸುಮತಿಂ ಯಜ್ಞಿಯಾನಾಂ　　॥ ೧೧ ॥

ಅತಾರಿಷುರ್ಭರತಾ ಗವ್ಯವಃ ಸಮಭಕ್ತ ವಿಪ್ರಃ ಸುಮತಿಂ ನದೀನಾಂ ।
ಪ್ರ ಪಿನ್ವಧ್ವಮಿಷಯಂತೀಃ ಸುರಾಧಾ ಆ ವಕ್ಷಣಾಃ ಪೃಣಧ್ವಂ ಯಾತ ಶೀಭಂ　　॥ ೧೨ ॥

ಉದ್ವ ಊರ್ಮಿಃ ಶಮ್ಯಾ ಹಂತ್ವಾಪೋ ಯೋಕ್ತ್ರಾಣಿ ಮುಂಚತ ।
ಮಾದುಷ್ಕೃತೌ ವ್ಯೇನಸಾಘ್ನ್ಯೌ ಶೂನಮಾರತಾಂ　　॥ ೧೩ ॥

(ಋ. ಸಂ. ೩-೩೩-೧ ರಿಂದ ೧೩)

ವಿಶ್ವಾಮಿತ್ರನು ವಿಪಾಟ್ ಮತ್ತು ಶುತುದ್ರಿ ಎಂಬ ನದಿಗಳನ್ನು ಈರೀತಿ ಪ್ರಾರ್ಥಿಸುವನು—ಲಾಯದಲ್ಲಿ ಕಟ್ಟಿಹಾಕಿದ್ದ ಬಂಧನದಿಂದ ಬಿಚ್ಚಿದಮೇಲೆ ಪರಸ್ಪರ ಸ್ಪರ್ಧಿಸುತ್ತಾ ಈಚೆಗೆ ಬರುವ ಅಶ್ವಗಳು ವೇಗವಾಗಿ ಓಡುವಂತೆಯೂ, ತಮ್ಮ ತಮ್ಮ ಕರುಗಳನ್ನು ನೆನೆಸಿಕೊಂಡು ಅವುಗಳನ್ನು ಪ್ರೀತಿಯಿಂದ ನೆಕ್ಕಲಿಚ್ಛೆಯುಳ್ಳ ಗೋವುಗಳು ಕರುಗಳಿರುವೆಡೆಗೆ ಓಡಿಬರುವಂತೆಯೂ ಸಹ, ಉದಕದಿಂದ ಪೂರ್ಣವಾದ ವಿಪಾಟ್ ನದಿಯೂ, ಶುತುದ್ರಿ ಎಂಬ ನದಿಯೂ ಸಹ

CC-0. Jangamwadi Math Collection. Digitized by eGangotri

ಪರ್ವತಗಳ ಪಾರ್ಶ್ವಪ್ರದೇಶಗಳಿಂದ ಹೊರಹೊರಟು ಸಮುದ್ರವನ್ನು ಸೇರಲಿಚ್ಛಿಸಿ ವೇಗವಾದ ಪ್ರವಾಹದಿಂದ ಹರಿಯುತ್ತವೆ.

ಎಲೈ ನದಿಗಳೇ, ನೀವಿಬ್ಬರೂ ಪರಸ್ಪರ ಸೇರಿ ಪ್ರವಹಿಸುತ್ತಾ, ಅಲೆಗಳಿಂದ ಸುತ್ತುಮುತ್ತಲಿನ ಪ್ರದೇಶಗಳನ್ನು ತಂಪುಗೊಳಿಸುತ್ತಾ ಇಂದ್ರನಿಂದ ಪ್ರೇರಿತರಾಗಿ ಅವನ ಅನುಜ್ಞೆಯನ್ನು ಯಾಚಿಸುತ್ತಾ ಇದ್ದು ಸಮುದ್ರದ ಅಭಿಮುಖವಾಗಿ ಇಬ್ಬರು ರಥಿಕರಂತೆ ಗಂಭೀರವಾಗಿ ಪ್ರವಹಿಸುತ್ತಿದ್ದೀರಿ. ನಿಮ್ಮಿಬ್ಬರಲ್ಲಿ ಒಬ್ಬಳು ಇನ್ನೊಬ್ಬಳನ್ನು ಸೇರಿಕೊಳ್ಳುತ್ತಾಳೆ

ಎಲೈ ನದಿಗಳೇ, ತಮ್ಮ ಕರುಗಳನ್ನು ಆಘ್ರಾಣಿಸಿ ಪ್ರೀತಿಸಲು ತಾಯಂದಿರಾದ ಗೋವುಗಳು ಒಟ್ಟಿಗೆ ಗುಂಪಾಗಿ ಸೇರಿ ತಮ್ಮ ಆಶ್ರಯವಾದ ಕೊಟ್ಟಿಗೆಗೆ ಅಭಿಮುಖವಾಗಿ ಓಡಿಬರುವಂತೆ ನಿಮ್ಮಿಬ್ಬರಿಗೂ ಸಮಾನಾಶ್ರಯವಾದ ಸಮುದ್ರಾಭಿಮುಖವಾಗಿ ಪ್ರವಹಿಸುತ್ತಿದ್ದೀರಿ. ನಿಮ್ಮಲ್ಲಿ ಶುತುದ್ರಿ ಎಂಬ ನದಿಯು ಪೋಷಕರಾದ ಮಾತೆಯರಲ್ಲೆಲ್ಲಾ ಶ್ರೇಷ್ಠಳಾದ ಮಾತೆಯಾಗಿದ್ದಾಳೆ. ವಿಪಾಟ್ ಎಂಬುವಳು ಮಹತ್ತ್ವರೂಪವುಳ್ಳವಳೂ ಸೌಭಾಗ್ಯವತಿಯೂ ಆಗಿದ್ದಾಳೆ ನಿಮ್ಮಿಬ್ಬರನ್ನೂ ನಾನು ಪೋಷಣೆಗಾಗಿ ಬಂದು ಆಶ್ರಯಿಸುತ್ತೇನೆ.

ನದಿಗಳಂತೆಂದವು— (ಎಲೈ ವಿಶ್ವಾಮಿತ್ರನೇ), ವಿಪಾಟ್ ಮತ್ತು ಶುತುದ್ರಿ ಎಂಬ ಹೆಸರಿನ ನಾವಿಬ್ಬರೂ ಸಹ ಪ್ರಭೂತವಾದ ನಮ್ಮ ಉದಕಗಳಿಂದ ಲೋಕಕ್ಕೆಲ್ಲಾ ಸಂತೃಪ್ತಿಯನ್ನುಂಟುಮಾಡುತ್ತಾ, ಪ್ರಭುವಾದ ಇಂದ್ರನಿಂದ ಸಂದಿಷ್ಟವಾದ ಸಮುದ್ರಸ್ಥಾನವನ್ನು ಲಕ್ಷೀಕರಿಸಿ ಪ್ರವಹಿಸುತ್ತಿದ್ದೇವೆ ನಮ್ಮ ಪ್ರವಾಹದ ಉದ್ಯೋಗವು ನಿಲ್ಲುವುದೇ ಇಲ್ಲ ಯಾವ ಇಚ್ಛೆಯನ್ನು ಮನಸ್ಸಿನಲ್ಲಿಟ್ಟುಕೊಂಡು ಈ ವಿಶ್ವಾಮಿತ್ರನು ನಮ್ಮನ್ನು ಕರೆಯುತ್ತಿದ್ದಾನೆ?

ವಿಶ್ವಾಮಿತ್ರನು ಮತ್ತಿಂತೆದನು— ಉದಕ ಪೂರ್ಣವಾದ ಎಲೈ ನದಿಗಳೇ, ಸೋಮಾಹರಣಾರ್ಥವಾಗಿ ಹೊರಟಿರುವ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಶೀಘ್ರಗಾಮಿಗಳಾದ ನಿಮ್ಮ ಪ್ರವಾಹಗಳನ್ನು ಕೊಂಚಕಾಲ ತಡೆಯಿರಿ. ಎಲೈ ಶುತುದ್ರಿಯೇ, ಕುಶಿಕಪುತ್ರನಾದ ನಾನು ಆತ್ಮರಕ್ಷಣಾರ್ಥವಾಗಿ ಮಹತ್ತಾದ ಸ್ತುತಿಯಿಂದ ನಿನ್ನನ್ನು ನಮ್ರನಾಗಿ ಪ್ರಾರ್ಥಿಸುತ್ತೇನೆ.

ನದಿಗಳು— ಎಲೈ ವಿಶ್ವಾಮಿತ್ರನೇ, ವಜ್ರಹಸ್ತನಾದ ಇಂದ್ರನು ನದ್ಯುದಕಳಿಗೆ ತಡೆಯಾಗಿ ಸುತ್ತಲೂ ಆವರಿಸಿ ನಿಂತಿದ್ದ ಮೇಘರೂಪಿಯಾದ ಅಸುರನನ್ನು ನಾಶಮಾಡಿ ನಮ್ಮ ಪ್ರವಾಹ ದ್ವಾರಗಳನ್ನು ಬಿಡಿಸಿದನು. ಜಗತ್ಪ್ರೇಕ್ಷಕನಾದವನೂ, ಶ್ರೇಷ್ಠವಾದ ಹಸ್ತವುಳ್ಳವನೂ ಪ್ರಕಾಶಮಾನನೂ ಆದ ಆ ಇಂದ್ರನು ನಮ್ಮ ಪ್ರವಾಹಕೆ ಅನುಕೂಲವನ್ನುಂಟುಮಾಡಿದನು. ಪ್ರಭೂತವಾದ ಉದಕಗಳಿಂದ ತುಂಬಿ ಹರಿಯುವ ನಾವು ಆ ಇಂದ್ರನ ಆಜ್ಞಾನುವರ್ತಿಗಳಾಗಿ ಪ್ರವಹಿಸುತ್ತಿದ್ದೇವೆ.

ಉದಕಪ್ರವಾಹಕ್ಕೆ ಅನುಕೂಲವಾಗಲೆಂದು ಮೇಘರೂಪಿಯಾದ ಅಸುರನನ್ನು ಇಂದ್ರನು ಕೊಂದನು. ಇಂದ್ರನ ಈ ಮಹತ್ಕರ್ಮವೂ ಸಾಮರ್ಥ್ಯವೂ ಸಹ ಯಾವಾಗಲೂ ಅತ್ಯತಿಶಯವಾಗಿ ಸ್ತುತಿಸಲ್ಪಡತಕ್ಕದ್ದಾಗಿದೆ. ಇಂದ್ರನು ಸುತ್ತಲೂ ವ್ಯಾಪಿಸಿದ್ದ ಅಸುರರನ್ನು ವಜ್ರಾಯುಧದಿಂದ ಕೊಂದನು. ಅನಂತರ ತಡೆದಿದ್ದ ಉದಕಗಳು ತಮ್ಮ ಗಮ್ಯಸ್ಥಾನವನ್ನಪೇಕ್ಷಿಸಿ ಪ್ರವಹಿಸುತ್ತಿರುತ್ತವೆ.

ಸ್ತುತಿಕರ್ತನಾದ ಎಲೈ ವಿಶ್ವಾಮಿತ್ರನೇ, ನಮ್ಮನ್ನು ಪ್ರಶಂಸೆಮಾಡತಕ್ಕ ಸ್ತುತಿವಾಕ್ಯಗಳನ್ನು ಖಂಡಿತವಾಗಿ ಯಾವಾಗಲೂ ಮರೆಯಬೇಡ. ಉತ್ತಮವಾದ ಶಸ್ತ್ರಮಂತ್ರಗಳ ಕರ್ತೃವಾದ ನೀನು ಮುಂದಿನ ಯಜ್ಞಕಾಲ

CC-0. Jangamwadi Math Collection. Digitized by eGangotri

ಗಳಲ್ಲಿ ನಡೆಯುವ ಪ್ರಾರ್ಥನೆಗಳಲ್ಲಿ ನಮ್ಮನ್ನೂ ಸೇವಿಸು. ನಮ್ಮನ್ನು ಇತರ ಪುರುಷರ ನಡುವೆ ಕಠಿನವಾದ ಮಾತು ಗಳಿಗೆ ಎಡೆಮಾಡಬೇಡ. ಇಗೋ, ನಿನಗೆ ನಮಸ್ಕಾರವು.

ವಿಶ್ವಾಮಿತ್ರನು— ಸಹೋದರಿಪ್ರಾಯರಾದ ಎಲೈ ನದಿಗಳೇ, ಸ್ತುತಿಕರ್ತನಾದ ನನ್ನ ಪ್ರಾರ್ಥನೆಯನ್ನು ಚೆನ್ನಾಗಿ ಆಲಿಸಿ ಕೇಳಿರಿ. ಗಾಡಿಯೊಡನೆಯೂ ರಥದೊಡನೆಯೂ ಸಹ ಬಹಳ ದೂರಪ್ರದೇಶದಿಂದ ನಿಮ್ಮ ಸಮೀಪಕ್ಕೆ ಬಂದು ಸೇರಿದ್ದೇನೆ. ನಿಮ್ಮ ಪ್ರವಾಹವನ್ನು ಕಡಿಮೆಮಾಡಿರಿ. ಮತ್ತು ನಮ್ಮ ಗಾಡಿಯ ಇರುಚಿಗಿಂತ (ಅಚ್ಚು) ಕೆಳಭಾಗಕ್ಕೆ ನಿಮ್ಮ ಪ್ರವಾಹವಿರಲಿ. ನನಗೆ ದಾಟಲು ಸುಲಭವಾಗುವಂತೆ ನಿಮ್ಮ ದಡವಿರಲಿ.

ನದಿಗಳು— ಸ್ತುತಿಕರ್ತನಾದ ಎಲೈ ವಿಶ್ವಾಮಿತ್ರನೇ, ನಿನ್ನ ಸ್ತುತಿವಾಕ್ಯಗಳನ್ನು ನಾವು ಆಲಿಸಿ ಕೇಳಿದ್ದೇವೆ. ಗಾಡಿಯೊಡನೆಯೂ ರಥದೊಡನೆಯೂ ಬಹು ದೂರಪ್ರದೇಶದಿಂದ ಬಂದಿದ್ದೀಯೆ. ಮಗುವಿಗೆ ಸ್ತನ್ಯಪಾನ ಮಾಡಿಸು ವುದಕ್ಕಾಗಿ ಮಾತೆಯಾದ ಸ್ತ್ರೀಯು ಬಗ್ಗುವಂತೆಯೂ, ಪುರುಷನಿಗೆ ಆಲಿಂಗನಕ್ಕೆ (ಚುಂಬನಕ್ಕೆ) ಅನುಕೂಲವಾಗಲು ಯುವತಿಯು ಬಗ್ಗುವಂತೆಯೂ ನಾವು ನಿನಗಾಗಿ ನಮ್ಮ ಪ್ರವಾಹವನ್ನು ತಗ್ಗಿಸಿ ಬಾಗುತ್ತೇವೆ.

ವಿಶ್ವಾಮಿತ್ರನು—ಎಲೈ ನದಿಗಳೇ, ನಿಮ್ಮ ಅನುಗ್ರಹದಿಂದ ನನಗೆ ದಾಟಲು ಅವಕಾಶವುಂಟಾಯಿತು. ಅದೇ ಅನುಗ್ರಹದಿಂದ ಭರತಕುಲೋತ್ಪನ್ನರಾದ ನನ್ನ ಸಂಬಂಧಿಗಳೆಲ್ಲರೂ ಸಂಗಮರೂಪದಲ್ಲಿ ಒಂದಾದ ನಿಮ್ಮನ್ನು ದಾಟಲನುಕೂಲವಾಗಲಿ. ನೀರನ್ನು ದಾಟಲಿಚ್ಛಿಸುವವರೂ, ನಿಮ್ಮಿಂದ ಅನುಜ್ಞಾತರಾದವರೂ ಇಂದ್ರನಿಂದ ಪ್ರೇರಿತ ರಾದವರೂ ಆದ ಭರತವಂಶೋತ್ಪನ್ನರ ಸಮೂಹವು ನಿಮ್ಮನ್ನು ದಾಟಲಿ. ಸಂಚಾರಕ್ಕಾಗಿ ಪ್ರವೃತ್ತರಾದ ಅವರ ಉದ್ಯಮವು ನಿಮ್ಮಿಂದ ಅನುಜ್ಞಾತವಾಗಿದೆ. ಯಜ್ಞಾರ್ಹರಾದ ನಿಮ್ಮ ಶ್ರೇಷ್ಠವಾದ ಸ್ತುತಿಯನ್ನು ನಾನು ಪೂರ್ಣ ವಾಗಿ ಪಠಿಸುತ್ತೇನೆ.

ಎಲೈ ನದಿಗಳೇ, ಗೋವುಗಳನ್ನು ಇಚ್ಛಿಸಿದ ಭರತಕುಲೋತ್ಪನ್ನರೆಲ್ಲಾ ನಿಮ್ಮನ್ನು ದಾಟಿದರು. ಮೇಧಾವಿಯಾದ ವಿಶ್ವಾಮಿತ್ರನು ನದಿಗಳ ಅನುಗ್ರಹವನ್ನು ಪಡೆದು ಅವುಗಳನ್ನು ಸ್ತುತಿಸಿದನು. ಎಲೈ ನದಿಗಳೇ, ಅನ್ನಸಂಪತ್ತನ್ನು ಬೆಳೆಸುತ್ತಲೂ ಶ್ರೇಷ್ಠವಾದ ಧನದಿಂದ ಕೂಡಿಯೂ ಇರುವ ನೀವು ನಿಮ್ಮ ಆಶ್ರಯದಲ್ಲಿ ಪ್ರವ ಹಿಸುವ ಕಾಲುವೆಯೇ ಮೊದಲಾದ ಉಪನದಿಗಳನ್ನೂ ಸಹ ಉದಕದಿಂದ ತುಂಬಿರಿ.

ಎಲೈ ವಿಪಾಟ್ ಮತ್ತು ಶುತುದ್ರಿ ನದಿಗಳೇ, ನಿಮ್ಮ ನೀರಿನ ಅಲೆಗಳು ನಮ್ಮ ವಾಹನದ ಕತ್ತಿನ ಹಗ್ಗ ಗಳನ್ನು ಸ್ಪರ್ಶಿಸದೆ ಅದಕ್ಕಿಂತ ಕೆಳಭಾಗದಲ್ಲೇ ಪ್ರವಹಿಸಲಿ. ಪಾಪರಹಿತರೂ ಸತ್ಕರ್ಮಕಾರಕರೂ, ದೂಷಣಾರಹಿತರೂ ಆದ ನೀವು ನಿಮ್ಮನ್ನು ನಾವು ದಾಟುವವರೆಗೆ ಸಮೃದ್ಧವಾದ ಪ್ರವಾಹವನ್ನು ಹೊಂದಬೇಡಿ.

ಈ ವಿಷಯವೇ ಪ್ರಕೃತ ಋಕ್ಕಿನಲ್ಲಿ ಸೂಚಿತವಾಗಿದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಹಂಸಾ ಇವ ಕೃಣುಥ ಶ್ಲೋಕಮದ್ರಿಭಿರ್ಮದಂತೋ ಗೀರ್ಭಿರಧ್ವರೇ ಸುತೇ ಸಚಾ ।

ದೇವೇಭಿರ್ವಿಪ್ರಾ ಋಷಯೋ ನೃಚಕ್ಷಸೋ ವಿ ಪಿಬಧ್ವಂ ಕುಶಿಕಾಃ ಸೋಮ್ಯಂ ಮಧು ॥ ೧೦ ॥

ಪದಪಾಠಃ

ಹಂಸಾಃऽಇವ । ಕೃಣುಥ । ಶ್ಲೋಕಂ । ಅದ್ರಿऽಭಿಃ । ಮದಂತಃ । ಗೀಃऽಭಿಃ । ಅಧ್ವರೇ । ಸುತೇ । ಸಚಾ । ದೇವೇಭಿಃ । ವಿಪ್ರಾಃ । ಋಷಯಃ । ನೃऽಚಕ್ಷಸಃ । ವಿ । ಪಿಬಧ್ವಂ । ಕುಶಿಕಾಃ । ಸೋಮ್ಯಂ । ಮಧು ॥

ಸಾಯಣಭಾಷ್ಯಂ

ಹೇ ವಿಪ್ರಾ ಮೇಧಾವಿನೋ ಹೇ ಋಷಯೋऽತೀಂದ್ರಿಯಾರ್ಥಸ್ಯ ದ್ರಷ್ಟಾರೋ ಹೇ ನೃಚಕ್ಷಸೋ ನೃಣಾಂ ಕರ್ಮನೇತೄಣಾಂ ವಿಶೇಷೇಣ ದ್ರಷ್ಟಾರೋ ಹೇ ಕುಶಿಕಾಃ ಕುಶಿಕಗೋತ್ರೋತ್ಪನ್ನಾ ಹೇ ಪುತ್ರಾ ಅಧ್ವರೇ ಯಜ್ಞೇऽದ್ರಿಭಿರ್ಗ್ರಾವಭಿಃ ಸೋಮೇ ಸುತೇऽಭಿಷುತೇ ಸತಿ ಗೀರ್ಭಿರ್ಮದಂತಃ ಸ್ತುತಿಭಿರ್ದೇವಾನ್ಮಾದಯಂತೋ ಯೂಯಂ ಶ್ಲೋಕಂ । ಶ್ಲೋಕ್ಯತೇ ಶಸ್ಯತೇऽನೇನೇತಿ ಶ್ಲೋಕಃ ಶಸ್ತ್ರಂ । ಕೃಣುಥ । ಸಮ್ಯಗುಚ್ಚಾರಯತ । ತತ್ರ ದೃಷ್ಟಾಂತಃ । ಹಂಸಾ ಇವ । ಯಥಾ ಹಂಸಾಃ ಸಮ್ಯಕ್ ಶಬ್ದಂ ಕುರ್ವಂತಿ ತದ್ವತ್ । ಕಿಂಚ ದೇವೇಭಿಃ ಸಚಾ ಯಷ್ಟವ್ಯದೇವೈಃ ಸಹಿತಾ ಯೂಯಂ ಸೋಮ್ಯಂ ಸೋಮಮಯಂ ಮಧು ಮಧುಕರಂ ರಸಂ ವಿ ಪಿಬಧ್ವಂ । ಪರಸ್ಪರವ್ಯತಿಹಾರೇಣ ಪಿಬತ ॥ ಶ್ಲೋಕಂ । ಶ್ಲೋಕೃ ಶಬ್ದೇ । ಕರಣೇ ಘಞ್ । ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ । ಮದಂತಃ । ಮದೀ ಹರ್ಷ ಇತ್ಯಸ್ಯಾಂತರ್ಭಾವಿತಣ್ಯರ್ಥಸ್ಯ ವ್ಯತ್ಯಯೇನ ಶಪ್ । ಪಿಬಧ್ವಂ ಪಾ ಪಾನೇ । ಕರ್ತರಿ ಕರ್ಮವ್ಯತಿಹಾರ ಇತ್ಯಾತ್ಮನೇಪದಂ । ಸೋಮ್ಯಂ ಸೋಮಶಬ್ದಾನ್ಮಯೇ ಚೇತಿ ಯಪ್ರತ್ಯಯಃ ॥

ಪ್ರತಿಪದಾರ್ಥ

ವಿಪ್ರಾಃ—ಮೇಧಾವಿಗಳೂ । ಋಷಯಃ—ಅತೀಂದ್ರಿಯದ್ರಷ್ಟೃಗಳೂ । ನೃಚಕ್ಷಸಃ ಋತ್ವಿಗ್ರೂಪರಾದ ಮಾನವರೇ ಕಣ್ಣಾಗಿ ಉಳ್ಳವರೂ । ಕುಶಿಕಾಃ—ಕುಶಿಕವಂಶೋತ್ಪನ್ನರೂ ಆದ ಎಲೈ ಮಹರ್ಷಿಗಳೇ । ಅಧ್ವರೇ—ಯಜ್ಞದಲ್ಲಿ । ಅದ್ರಿಭಿಃ—ಗ್ರಾವಗಳಿಂದ (ಹಿಂಡುವ ಕಲ್ಲುಗಳಿಂದ) । ಸುತೇ—ಸೋಮವನ್ನು ಹಿಂಡಿರಲಾಗಿ । ಗೀರ್ಭಿಃ—ಸ್ತುತಿರೂಪವಾದ ವಾಕ್ಕುಗಳಿಂದ । ಮದಂತಃ—ದೇವತೆಗಳನ್ನು ಸಂತೋಷಪಡಿಸುತ್ತಾ । ಶ್ಲೋಕಂ—ಶಸ್ತ್ರರೂಪವಾದ ಸ್ತುತಿಯನ್ನು । ಹಂಸಾ ಇವ—ಹಂಸಗಳು ರಮಣೀಯವಾಗಿ ಶಬ್ದಮಾಡುವಂತೆ । ಕೃಣುಥ—ಪಠಿಸಿರಿ । ದೇವೇಭಿಃ ಸಚಾ—ದೇವತೆಗಳೊಡಗೂಡಿದ ನೀವು । ಸೋಮ್ಯಂ—ಸೋಮಾತ್ಮಕವಾದುದೂ । ಮಧು—ಮಾಧುರ್ಯಯುಕ್ತವಾದುದೂ ಆದ ರಸವನ್ನು । ವಿ ಪಿಬಧ್ವಂ—ಪಾನಮಾಡಿರಿ.

CC-0. Jangamwadi Math Collection. Digitized by eGangotri

ಭಾವಾರ್ಥ

ಮೇಧಾವಿಗಳೂ, ಅತೀಂದ್ರಿಯದ್ರಷ್ಟ್ರುಗಳೂ, ಋತ್ವಿಗ್ರೂಪರಾದ ಮಾನವರೇ ಕಣ್ಣಾಗಿ ಉಳ್ಳವರೂ, ಕುಶಿಕವಂಶೋತ್ಪನ್ನರೂ ಆದ ಎಲೈ ಮಹರ್ಷಿಗಳೇ, ಯಜ್ಞದಲ್ಲಿ ಗ್ರಾವಗಳಿಂದ ಸೋಮವನ್ನು ಹಿಂಡಿರಲಾಗಿ ಸ್ತುತಿ ರೂಪವಾದ ವಾಕ್ಕುಗಳಿಂದ ದೇವತೆಗಳನ್ನು ಸಂತೋಷಪಡಿಸುತ್ತಾ ಹಂಸಗಳು ರಮಣೀಯವಾಗಿ ಶಬ್ದಮಾಡುವಂತೆ ನೀವೂ ಸಹ ಶಸ್ತ್ರರೂಪವಾದ ಸ್ತುತಿಯನ್ನು ಪಠಿಸಿರಿ. ದೇವತೆಗಳೊಡಗೂಡಿದ ನೀವು ಸೋಮಾತ್ಮಕವಾದುದೂ, ಮಾಧುರ್ಯಯುಕ್ತವಾದುದೂ ಆದ ರಸವನ್ನು ಪಾನಮಾಡಿ.

English Translation

Sages and saints, overlookers of the leaders (of sacred rites), Kushikas, when the Soma is expressed with stones at the sacrifice, then exhilarating (the gods) with praise, sing the holy strain (aloud) like (screaming) swans, and, together with the gods, drink the sweet juice of the Soma.

ವಿಶೇಷವಿಷಯಗಳು

ವಿಪ್ರಾಃ—ಮೇಧಾವಿನಃ । ವಿಪ್ರಶಬ್ದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೯) ಬುದ್ಧಿ ವಂತನು, ವಿವೇಕಿಯಾದವನು ಎಂದರ್ಥವು. ವಿವಿಧಾನರ್ಥಾನಸ್ಯ ಪ್ರಾಪ್ತುಂ ಧಾತೀತಿ ವಿಪ್ರಾಃ ಎಂದು ನಿರುಕ್ತ ವ್ಯಾಖ್ಯಾಕಾರರ ವಿವರಣೆ ಇದೆ.

ಶ್ಲೋಕಂ—ಶ್ಲೋಕ್ಯತೇ ಶಸ್ಯತೇಽನೇನೇತಿ ಶ್ಲೋಕಃ ಶಸ್ತ್ರಂ । ಚೆನ್ನಾಗಿ ಪಠಿಸಲ್ಪಡುವುದರಿಂದ ಶ್ಲೋಕವೆಂದರೆ ಮಂತ್ರಪಠನವು. ಇಲ್ಲಿ ಶಸ್ತ್ರಮಂತ್ರಪಠನವೆಂದರ್ಥವು ಉಕ್ತವಾಗಿದೆ

ಹಂಸಾ ಇವ—ಯಥಾ ಹಂಸಾಃ ಸಮ್ಯಕ್‌ಶಬ್ದಂ ಕುರ್ವಂತಿ ತದ್ವತ್ । ಹಂಸಪಕ್ಷಿಗಳು ಯಾವರೀತಿ ಮಧುರವಾಗಿ ಕಲಕಲಧ್ವನಿಮಾಡುವವೋ ಅದರಂತೆ ಋತ್ವಿಗ್ಜನರಾದ ನೀವು ಶಸ್ತ್ರಮಂತ್ರಪಠನವನ್ನು ಮಧುರಧ್ವನಿ ಯುಕ್ತರಾಗಿ ಮಾಡಿರಿ ಎಂದು ಹಂಸಪಕ್ಷಿಗಳ ದೃಷ್ಟಾಂತವನ್ನು ಹೇಳಿದೆ.

ಕುಶಿಕಾಃ—ಯಾಸ್ಕರು ಕುಶಿಕಶಬ್ದದ ನಿರ್ವಚನವನ್ನು ಹೇಳುತ್ತಾ—

ಕುಶಿಕಸ್ಯ ಸೂನುಃ ಕುಶಿಕೋ ರಾಜಾ ಬಭೂವ । ಕ್ರೋಶತೇಃ ಶಬ್ದಕರ್ಮಣಃ । ಕ್ರಂಶತೇರ್ವಾ ಸ್ಯಾತ್ ಪ್ರಕಾಶಯತಿಕರ್ಮಣಃ ಸಾಧುವಿಕ್ರೋಶಯಿತಾರ್ಥಾನಾಮಿತಿ ವಾ ॥

(ನಿ. ೨-೨೫)

ಎಂದು ವಿವರಿಸಿದಾರೆ. ಎಂದರೆ ಕುಶಿಕನೆಂಬ ಒಬ್ಬ ರಾಜನಿದ್ದನು. ಅವನಿಗೆ ಒಬ್ಬ ಪುತ್ರನಿದ್ದನು. ಅವನ ಹೆಸರು ಕುಶಿಕನೆಂದೇ ಇದ್ದಿತು. ಈ ಹೆಸರು ಇವನಿಗೆ ಹೇಗೆ ಬಂತೆಂದರೆ—ಇವನು ಯಾವಾಗಲೂ ಒಳ್ಳೆಯದನ್ನೇ ಮಾಡ ಬೇಕೆಂದು ಹೇಳುತ್ತಿದ್ದುದರಿಂದ ಶಬ್ದಮಾಡು ಎಂಬರ್ಥವುಳ್ಳ ಕ್ರೋಶತಿಧಾತುವಿನಿಂದ ನಿಷ್ಪನ್ನವಾದ ಕುಶಿಕನೆಂಬ ಹೆಸರು ಇವನಿಗೆ ಬಂದಿತು; ಅಥವಾ ಒಳ್ಳೆಯ ಕರ್ಮಗಳನ್ನೂ, ಧರ್ಮಗಳನ್ನೂ ಪ್ರಕಾಶಪಡಿಸುತ್ತಿದ್ದುದರಿಂದ

CC-0. Jangamwadi Math Collection. Digitized by eGangotri

ಪ್ರಕಾಶಪಡಿಸು ಎಂಬರ್ಥವುಳ್ಳ ಕ್ರುಂಶತಿಧಾತುವಿನಿಂದ ನಿಷ್ಪನ್ನವಾದ ಕುಶಿಕ ಶಬ್ದವು ಈ ರಾಜನ ಹೆಸರಾಯಿತು ; ಅಥವಾ ಸಾಧುಸಜ್ಜನರಿಗೆ ದಾನಮಾಡುತ್ತಿದ್ದುದರಿಂದ ಈ ರಾಜನಿಗೆ ಕುಶಿಕನೆಂಬ ಹೆಸರಾಯಿತು ಎಂದು ಕುಶಿಕಶಬ್ದದ ನಿರ್ವಚನವನ್ನು ಹೇಳಿದಾರೆ

ಕುಶಿಕನೆಂಬ ರಾಜನು ಕುಶಿಕರೆಂದು ಪ್ರಸಿದ್ಧರಾದ ಜನರಿಗೆ ಮೂಲಪುರುಷನೆಂಬ ಪ್ರತೀತಿ ಇದೆ. ವಿಶ್ವಾಮಿತ್ರನೂ ಈ ಕುಶಿಕವಂಶಸ್ಥನೇ ಆಗಿದ್ದಾನೆ. ಈ ಕುಶಿಕರ ಹೆಸರು ಋಗ್ವೇದದಲ್ಲಿ ಮೂರನೆಯ ಮಂಡಲದಲ್ಲಿಯೇ ವಿಶೇಷವಾಗಿದೆ ಋ ಸಂ. ೩-೨೬-೧ ; ೩-೨೯-೧೫ ; ೩-೩೦-೨೦ ; ೩-೩೩-೫ ; ೩-೪೨-೯ ; ೩-೫೦-೪ ; ೩-೫೩-೯, ೧೦ ಎಂಬ ಋಕ್ಕುಗಳಲ್ಲಿ ಕುಶಿಕಾಃ ಎಂಬ ಹೆಸರು ಪಠಿತವಾಗಿದೆ. ಇವರ ಹೆಸರು ಐತರೇಯಬ್ರಾಹ್ಮಣದಲ್ಲಿರುವ ಶುನಶ್ಶೇಪೋಪಾಖ್ಯಾನದಲ್ಲಿಯೂ (ಐ ಬ್ರಾ. ೭-೧೮ ; ಸಾಂಖ್ಯಾಯನಶ್ರೌತಸೂತ್ರ ೧೫-೨೭) ಸಾಂಖ್ಯಾಯನಶ್ರೌತಸೂತ್ರದಲ್ಲಿಯೂ ಸೂಚಿತವಾಗಿದೆ. ಈ ಕುಶಿಕರು ಪುರೋಹಿತವಂಶದವರು. ಮುಖ್ಯವಾಗಿ ಭರತಕುಲೋತ್ಪನ್ನರಾದ ರಾಜರಿಗೆ ಪುರೋಹಿತರೆಂದು ಪ್ರಸಿದ್ಧಿ ಇದೆ. ಇವರು ಯಾವಾಗಲೂ ಇಂದ್ರನನ್ನೇ ವಿಶೇಷವಾಗಿ ಸ್ತುತಿಸುತ್ತಾ ಅವನಲ್ಲಿಯೇ ಆಶ್ರಯವನ್ನು ಪಡೆದಿದ್ದರು ಎಂಬದಕ್ಕೆ ಅನೇಕ ಆಧಾರಗಳಿವೆ. (ಆದ್ದರಿಂದ ಋ. ಸಂ. ೧-೧೦-೧೧ ನೆಯ ಋಕ್ಕಿನಲ್ಲಿ ಕುಶಿಕರ ಪಕ್ಷಪಾತಿಯಾದ ಇಂದ್ರನನ್ನು ಕೌಶಿಕನೆಂಬ ಹೆಸರಿನಿಂದಲೇ ಕರೆಯಲಾಗಿದೆ. ಈ ವಿಷಯದಲ್ಲಿ ಭಾಷ್ಯಕಾರರು ಅನುಕ್ರಮಣಿಕೆಯಲ್ಲಿ ಹೇಳಿರುವ ವೃತ್ತಾಂತವನ್ನು ಉದಾಹರಿಸಿದಾರೆ—

ಕುಶಿಕಸ್ತ್ವೈಷೀರಥಿರಿಂದ್ರತುಲ್ಯಂ ಪುತ್ರಮಿಚ್ಛನ್ ಬ್ರಹ್ಮಚರ್ಯಂ ಚಚಾರ । ತಸ್ಯೇಂದ್ರ ಏವ ಗಾಥೀ ಪುತ್ರೋ ಜಜ್ಞೇ ॥

(ಋ. ಅನು. ೩-೧)

ಸ್ಕಂದಸ್ವಾಮಿಯು ಈ ವಿಷಯದಲ್ಲಿ—

ಅತ್ರ ಚೇತಿಹಾಸಮಾಚಕ್ಷತೇ । ಇಷೀರಥಪುತ್ರಃ ಕುಶಿಕೋ ನಾಮರಾಜಾ ಪುತ್ರಮಿಂದ್ರತುಲ್ಯಂ ಕಾಮಯಮಾನೋ ಬ್ರಹ್ಮಚರ್ಯಂ ಚಚಾರ । ತಸ್ಯ ಗಾಥೀ ನಾಮೇಂದ್ರ ಏವ ಸ್ವಯಂ ಪುತ್ರೋ ಜಾತ ಇತಿ ॥

ವೆಂಕಟಮಾಧವರು—

ಪುತ್ರಮಿಂದ್ರಸಮಮಿಚ್ಛನ್ ಕುಶಿಕೋ ಬ್ರಹ್ಮಚರ್ಯಂ ಚಚಾರ । ತಸ್ಯೇಂದ್ರಃ ಸ್ವಯಮೇವ ಪುತ್ರೋಽಭತ್ । ಸಾಸ್ಯ ಕೌಶಿಕತಾ ॥

ಎಂದು ಹೇಳಿರುವರು ಮುಖ್ಯಾಭಿಪ್ರಾಯವೇನೆಂದರೆ— ಹಿಂದೆ ಇಷೀರಥನೆಂಬ ರಾಜನಿಗೆ ಕುಶಿಕನೆಂಬ ಪುತ್ರನಿದ್ದನು. ಅವನು ತನಗೆ ಇಂದ್ರನಿಗೆ ಸಮಾನನಾದ ಪುತ್ರನಾಗಬೇಕೆಂದು ಬಯಸಿ ಬ್ರಹ್ಮಚರ್ಯವನ್ನಾಚರಿಸುತ್ತಿದ್ದನು. ಆಗ ಇಂದ್ರನು ಗಾಥಿಯೆಂಬ ಹೆಸರಿನಿಂದ ತಾನೇ ಅವನ ಮಗನಾಗಿ ಹುಟ್ಟಿದನು ಎಂದು. ವಿಶ್ವಾಮಿತ್ರಋಷಿಯು ಗಾಥಿರಾಜನ ಮಗನು ಮತ್ತು ಮೂರನೆಯ ಮಂಡಲದ ದೃಷ್ಟೃವಾದ ಋಷಿಯು. ಆದುದರಿಂದ ಕುಶಿಕರಿಗೂ ವಿಶ್ವಾಮಿತ್ರನಿಗೂ ಮುಖ್ಯವಾದ ಸಂಬಂಧವಿದೆ ಮತ್ತು ಕುಶಿಕರು ಇಂದ್ರನನ್ನು ವಿಶೇಷವಾಗಿ ಆರಾಧಿಸುವರು ಎಂಬದಕ್ಕೂ ಕಾರಣವಿದೆ.

——— : o : ———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಉಪ ಪ್ರೇತ ಕುಶಿಕಾಶ್ಚೇತಯಧ್ವಮಶ್ವಂ ರಾಯೇ ಪ್ರ ಮುಂಚತಾ ಸುದಾಸಃ ।

ರಾಜಾ ವೃತ್ರಂ ಜಂಘನತ್ಪ್ರಾಗಪಾಗುದಗಥಾ ಯಜಾತೇ ವರ ಆ ಪೃಥಿವ್ಯಾಃ ॥ ೧೧ ॥

ಪದಪಾಠಃ

ಉಪ । ಪ್ರ । ಇತ । ಕುಶಿಕಾಃ । ಚೇತಯಧ್ವಂ । ಅಶ್ವಂ । ರಾಯೇ । ಪ್ರ । ಮುಂಚತ । ಸುಽದಾಸಃ । ರಾಜಾ । ವೃತ್ರಂ । ಜಂಘನತ್ । ಪ್ರಾಕ್ । ಅಪಾಕ್ । ಉದಕ್ । ಅಥ । ಯಜಾತೇ । ವರೇ । ಆ । ಪೃಥಿವ್ಯಾಃ । ೧೧ ॥

ಸಾಯಣಭಾಷ್ಯಂ

ಹೇ ಕುಶಿಕಾಃ ಕುಶಿಕಗೋತ್ರೋತ್ಪನ್ನಾ ಹೇ ಪುತ್ರಾ ಉಪ ಪ್ರೇತ । ಅಶ್ವಸ್ಯ ಸಮೀಪೇ ಪ್ರಕರ್ಷೇಣ ಗಚ್ಛತ । ತತ್ರ ಗತ್ವಾ ಚೇತಯಧ್ವಂ । ಸಾವಧಾನಾ ಭವತ । ಯದ್ವಾ । ಅಶ್ವರಕ್ಷಿಣಃ ಸಾವಧಾನಾನ್ ಕುರುತ । ಸುದಾಸಃ ಪೈಜವನಸ್ಯ ರಾಜ್ಞೋಽಶ್ವಂ ರಾಯೇ ತಸ್ಯ ದಿಗ್ವಿಜಯೇನ ಧನಲಾಭಾಯ ಪ್ರ ಮುಂಚತ । ರಾಜಾ ದೇವಾನಾಂ ಸ್ವಾಮೀಂದ್ರೋ ವೃತ್ರಂ ಕರ್ಮವಿಘ್ನಕಾರಿಣಮಸುರಂ ಪ್ರಾಗಪಾಗುದಕ್ ಪೂರ್ವಪಶ್ಚಿಮೋತ್ತರೇಷು ದೇಶೇಷು ಜಂಘನತ್ । ಭೃಶಂ ಹತವಾನ್ । ತಸ್ಮಾದಶ್ವಂ ವಿಮುಂಚೇತೀತಿ ಭಾವಃ । ಅಥಾನಂತರಂ ಪೃಥಿವ್ಯಾ ವರ ಉತ್ತಮೇ ದೇವಯಜನದೇಶೇ ಯಜಾತೇ । ಸ ರಾಜಾ ಯಜೇತ ॥ ಚೇತಯಧ್ವಂ । ಚಿತೀ ಸಂಜ್ಞಾನ ಇತ್ಯಸ್ಯ ಣ್ಯಂತಸ್ಯ ಲೋಟಿ ರೂಪಂ । ಆಮಂತ್ರಿತಸ್ಯಾವಿದ್ಯಮಾನವತ್ತ್ವೇನ ತಿಙ ಉತ್ತರತ್ವಾನ್ನ ನಿಘಾತಃ । ಜಂಘನತ್ । ಹನ ಹಿಂಸಾಗತ್ಯೋರಿತ್ಯಸ್ಯ ಯಙ್ಲುಕಿ ನುಗತೋಽನುನಾಸಿಕಾಂತಸ್ಯೇತ್ಯಭ್ಯಾಸಸ್ಯ ನುಗಾಗಮಃ । ತದಂತಾಲ್ಲೇಟ್ಯಡಾಗಮಃ । ಪ್ರಾಕ್ । ಅಂಚತೇಃ ಕ್ವಿನಿ ರೂಪಂ । ಅನಿಗಂತೋಽಂಚತಾವಪ್ರತ್ಯಯ ಇತಿ ಗತೇಃ ಸ್ವರಃ । ಯಜಾತೇ । ಯಜತೇರ್ಲೇಟ್ಯಾಡಾಗಮಃ । ನಿಘಾತಃ । ವರೇ । ವೃಞ್ ವರಣ ಇತ್ಯಸ್ಮಾತ್ ಗ್ರಹವೃದೃನಿಶ್ಚಿಗಮಶ್ಚೇತ್ಯಪ್ಪ್ರತ್ಯಯಃ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

ಕುಶಿಕಾಃ— ಕುಶಿಕವಂಶೋತ್ಪನ್ನರಾದ ಋಷಿಗಳೇ । ಉಪ ಪ್ರೇತ—(ಅಶ್ವವನ್ನು) ಸಮೀಪಿಸಿ ನಡೆಯಿರಿ । ಚೇತಯಧ್ವಂ—ಸಾವಧಾನಚಿತ್ತವುಳ್ಳವರಾಗಿರಿ ಅಥವಾ ಅಶ್ವರಕ್ಷಕರನ್ನು ಸಾವಧಾನಚಿತ್ತವುಳ್ಳವರನ್ನಾಗಿ ಮಾಡಿರಿ । ರಾಜಾ— ದೇವತೆಗಳಿಗೆಲ್ಲಾ ಪ್ರಭುವಾದ ಇಂದ್ರನು । ವೃತ್ರಂ—(ಯಜ್ಞಕರ್ಮಕ್ಕೆ ವಿಘ್ನವನ್ನುಂಟು

CC-0. Jangamwadi Math Collection. Digitized by eGangotri

ಮಾಡುವ) ವೃತ್ರಾಸುರನನ್ನು । **ಪ್ರಾಕ್**—ಪೂರ್ವದಿಕ್ಕಿನಲ್ಲೂ । **ಅಪಾಕ್**—ಪಶ್ಚಿಮದಿಕ್ಕಿನಲ್ಲೂ । **ಉದಕ್**—ಉತ್ತರದಿಕ್ಕಿನಲ್ಲೂ । **ಜಂಘನತ್**—ನಾಶಪಡಿಸಿದ್ದಾನೆ (ಆದುದರಿಂದ) । **ಸುದಾಸಃ**—ಸುದಾಸನೆಂಬ ರಾಜನ । **ಅಶ್ವಂ**—ಅಶ್ವವನ್ನು । **ರಾಯೇ**—ಧನಸಂಪಾದನೆಗಾಗಿ । **ಪ್ರ ಮುಂಚತ**—ಸಡಿಲಿಸಿ ಬಿಡಿರಿ । **ಅಥ**—ಅನಂತರ । **ಪೃಥಿವ್ಯಾಃ**—ಪೃಥಿವಿಯ । **ವರೇ**—ಉತ್ತಮವಾದ ಪ್ರದೇಶದಲ್ಲಿ । **ಯಜಾತೇ**—(ನಿರ್ಭೀತರಾಗಿ) ಯಜ್ಞ ಮಾಡಿರಿ ।

ಭಾವಾರ್ಥ

ಕುಶಿಕವಂಶೋತ್ಪನ್ನರಾದ ಎಲೈ ಋಷಿಗಳೇ, ಅಶ್ವದ ಸಮೀಪಕ್ಕೆ ಹೋಗಿ ಅಶ್ವರಕ್ಷಕರನ್ನು ಸಾವಧಾನಚಿತ್ತರಾಗಿರುವಂತೆ ಮಾಡಿರಿ. ದೇವತೆಗಳಿಗೆಲ್ಲಾ ಪ್ರಭುವಾದ ಇಂದ್ರನು ಯಜ್ಞಕರ್ಮಕ್ಕೆ ವಿಘ್ನವನ್ನುಂಟುಮಾಡುವ ವೃತ್ರಾಸುರನನ್ನು ಪೂರ್ವಾದಿ ಸಮಸ್ತದಿಕ್ಕಿನಲ್ಲೂ ನಾಶಪಡಿಸಿದ್ದಾನೆ. ಆದುದರಿಂದ ನೀವು ಕೊಂಚವೂ ಭಯವಿಲ್ಲದೇ, ಸುದಾಸನೆಂಬ ರಾಜನ ಅಶ್ವವನ್ನು ಧನಸಂಪಾದನೆಗಾಗಿ ಸಡಿಲಿಸಿ ಬಿಡಿರಿ. ಅನಂತರ ಪೃಥಿವಿಯ ಉತ್ತಮವಾದ ಪ್ರದೇಶದಲ್ಲಿ ನಿರ್ಭೀತರಾಗಿ ಯಜ್ಞಮಾಡಿರಿ.

English Translation

Approach, Kushikas, the steed of Sudas; animate (him), and let him loose to (win) riches (for the raja); for the king (of the gods) has slain Vritra in the East, in the West, in the North, therefore let (Sudas) worship him in the best (regions) of the earth.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಸುದಾಸನೆಂಬ ರಾಜನು ವಿಶ್ವಾಮಿತ್ರನ ಸಹಾಯದಿಂದ ಅಶ್ವಮೇಧಯಾಗವನ್ನು ಮಾಡಿದ ವಿಷಯುಕವಾದ ವರ್ಣನೆ ಇದೆ.

**ಕುಶಿಕಾಃ ಉಪ ಪ್ರ ಇತ ಚೇತಯಧ್ವಂ**—ಕುಶಿಕಗೋತ್ರೋತ್ಪನ್ನಾ ಪುತ್ರಾ ಅಶ್ವಸ್ಯ ಸಮೀಪೇ **ಗಚ್ಛತ**। ಗತ್ವಾ ಚ **ಸಾವಧಾನಾ ಭವತ**। ಅಶ್ವರಕ್ಷಿಣಃ **ಸಾವಧಾನಾನ್ ಕುರುತ**। ವಿಶ್ವಾಮಿತ್ರಋಷಿಯು ಕುಶಿಕಗೋತ್ರೋತ್ಪನ್ನರಾದ ತನ್ನ ಪುತ್ರರನ್ನೂ ಬಂಧುಗಳನ್ನೂ ಸಂಬೋಧಿಸಿ ಈರೀತಿ ಹೇಳುವನು—ಎಲೈ ಕುಶಿಕಗೋತ್ರೋದ್ಭವರಾದ ಪುತ್ರಾದಿಗಳೇ, ನಾನು ಹೇಳುವ ಮಾತನ್ನು ಕೇಳಿ. ಈ ಸುದಾಸರಾಜನು ಮಾಡುತ್ತಿರುವ ಅಶ್ವಮೇಧಯಾಗದಲ್ಲಿ ಯಜ್ಞಾಶ್ವದ ಸಮೀಪಕ್ಕೆ ಹೋಗಿ ಅಲ್ಲಿ ಎಚ್ಚರಿಕೆಯಿಂದ ಇದ್ದು ಅದನ್ನು ರಕ್ಷಿಸುವುದಕ್ಕೆ ಸಹಾಯ ಮಾಡಿರಿ.

**ಸುದಾಸಃ ಅಶ್ವಂ ರಾಯೇ ಪ್ರ ಮುಂಚತ**—ಧನಲಾಭಕ್ಕಾಗಿ ಮಾಡುವ ಸುದಾಸನ ಯಜ್ಞದಲ್ಲಿ (ಅಥವಾ ಜೈತ್ರಯಾತ್ರೆಯಲ್ಲಿ) ಯಜ್ಞಾಶ್ವವನ್ನು ಸಂಚಾರಾರ್ಥವಾಗಿ ಬಿಡಿರಿ. ಇಲ್ಲಿ ಯಜ್ಞಾಶ್ವವನ್ನು ಸಂಚಾರಾರ್ಥವಾಗಿ ಬಿಡಿರಿ ಎಂಬ ವಿಷಯದಲ್ಲಿ ವಿವರಣೆಯು ಅವಶ್ಯಕವಾಗಿದೆ. ಅಶ್ವಮೇಧವೆಂಬ ಯಜ್ಞವನ್ನು ಕ್ಷತ್ರಿಯರಾದ ರಾಜರು ಮಾತ್ರವೇ ಮಾಡುವ ಯಾಗವು. ಈ ಯಾಗವನ್ನು ಮಾಡುವುದಕ್ಕೆ ಬಹಳವಾಗಿ ದ್ರವ್ಯವು ಬೇಕಾಗುವುದು. ಆದುದರಿಂದ ಯಜ್ಞಮಾಡುವ ರಾಜನು ಯಜ್ಞದೀಕ್ಷೆಯನ್ನು ಕೈಗೊಂಡು ಯಜ್ಞಾಶ್ವವನ್ನು ವಿಧ್ಯುಕ್ತಪೂಜಾದಿಗಳಿಂದ

CC-0. Jangamwadi Math Collection. Digitized by eGangotri

ಉಪಚರಿಸಿ ಅದನ್ನು ಒಂದು ವರ್ಷಕಾಲದವರೆಗೆ ಸ್ವೇಚ್ಛೆಯಾಗಿ ಸಂಚಾರಮಾಡಲು ಬಿಡುವನು. ಆ ಅಶ್ವವನ್ನನು ಸರಿಸಿ ರಾಜನ ಕಡೆಯವರು ಸೈನ್ಯಸಮೇತವಾಗಿ ಹೊರಟು ಅಶ್ವವು ಯಾವ ಯಾವ ದೇಶಗಳಿಗೆ ಹೋಗುವುದೋ ಆ ದೇಶದ ರಾಜರುಗಳನ್ನು ಗೆದ್ದು ಅವರಿಂದ ಕಪ್ಪಕಾಣಿಕೆಗಳನ್ನು ಸಂಗ್ರಹಿಸುತ್ತಾ ಒಂದು ಸಂವತ್ಸರಾನಂತರ ಸ್ವದೇಶಕ್ಕೆ ಬಂದು ಸೇರುವರು. ಅದುವರೆಗೂ ರಾಜನು ಬ್ರಹ್ಮಚರ್ಯಾದಿನಿಯಮದಿಂದಿದ್ದು ಅಶ್ವವು ಹಿಂತಿರುಗಿ ಬಂದ ಬಳಿಕ ಯಜ್ಞವನ್ನು ನೆರವೇರಿಸುವುದು ಪದ್ಧತಿಯಾಗಿದೆ. ಈ ವಿಷಯವನ್ನೇ ಇಲ್ಲಿ—**ರಾಯೇ ಅಶ್ವಂ ಪ್ರ ಮುಂಚತ**—ಅಶ್ವವನ್ನು ಧನಾರ್ಜನೆಗಾಗಿ ಬಿಡಿ ಎಂಬ ವಾಕ್ಯದಿಂದ ಸೂಚಿಸಲಾಗಿದೆ. ಇದು ಪಿಜವನಪುತ್ರನಾದ ಸುದಾಸನೆಂಬ ರಾಜನು ಧನಲಾಭಕ್ಕಾಗಿ ಕೈಗೊಂಡ ದಿಗ್ವಿಜಯವರ್ಣನೆಯೂ ಆಗಿರುವುದು. ಈ ಋಕ್ಕಿನ ಉತ್ತರಾರ್ಧದ ಅರ್ಥವು ಸ್ಪಷ್ಟವಾಗಿರುವುದು.

---

ಸಂಹಿತಾಪಾಠಃ

ಯ ಇಮೇ ರೋದಸೀ ಉಭೇ ಅಹಮಿಂದ್ರಮತುಷ್ಟವಂ ।
ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಂ ॥ ೧೨ ॥

ಪದಪಾಠಃ

ಯಃ । ಇಮೇ ಇತಿ । ರೋದಸೀ ಇತಿ । ಉಭೇ ಇತಿ । ಅಹಂ । ಇಂದ್ರಂ । ಅತುಸ್ತವಂ ।
ವಿಶ್ವಾಮಿತ್ರಸ್ಯ । ರಕ್ಷತಿ । ಬ್ರಹ್ಮ । ಇದಂ । ಭಾರತಂ । ಜನಂ ॥ ೧೨ ॥

ಸಾಯಣಭಾಷ್ಯಂ

ಹೇ ಕುಶಿಕಾಃ ಕುಶಿಕಪುತ್ರಾ ಯೋಽಹಂ ವಿಶ್ವಾಮಿತ್ರ ಉಭೇ ಇಮೇ ರೋದಸೀ ದ್ಯಾವಾಪೃಥಿವ್ಯಾವಿಂದ್ರಮತುಷ್ಟವಂ ಸ್ತಾವಯಾಮಿ । ದ್ಯಾವಾಪೃಥಿವೀಭ್ಯಾಮಿಂದ್ರಸ್ಯ ಸ್ತೋತ್ರಂ ಮಯಾ ಕಾರಿತಮಿತ್ಯರ್ಥಃ । ಯದ್ವಾ । ಉಭಯೋ ರೋದಸ್ಯೋರಂತರವಸ್ಥಿತಮಿಂದ್ರಂ ಸ್ತೌಮಿ । ಸ್ತೋತ್ರಂ ಕುರ್ವಾಣಸ್ಯ ವಿಶ್ವಾಮಿತ್ರಸ್ಯ ಮಮೇದಮಿಂದ್ರವಿಷಯಂ ಬ್ರಹ್ಮ ಸ್ತೋತ್ರಂ ಭಾರತಂ ಭರತಕುಲಂ ಜನಂ ರಕ್ಷತಿ । ಪಾಲಯತಿ ॥ ಅತುಷ್ಟವಂ । ಷ್ಟುಞ್ ಸ್ತುತೌ । ಣ್ಯಂತಸ್ಯ ಲುಙಿ ಚಙಿ ರೂಪಂ । ಯದ್ವೃತ್ತಯೋಗಾದನಿಘಾತಃ । ಭಾರತಂ । ಭರತಶಬ್ದ ಉತ್ಸಾದಿಃ । ಞಿಂತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ಯಃ ಅಹಂ—ವಿಶ್ವಾಮಿತ್ರನೆಂದು ಪ್ರಸಿದ್ಧನಾದ ನಾನು । **ಉಭೇ ಇಮೇ ರೋದಸೀ**—ಈ ದ್ಯಾವಾಪೃಥಿವಿಗಳೆರಡರ ನಡುವೆಯೂ ವ್ಯಾಪಿಸಿರತಕ್ಕ । **ಇಂದ್ರಂ**—ಇಂದ್ರನನ್ನು । **ಅತುಷ್ಟವಂ**—ಸ್ತುತಿಸುತ್ತೇನೆ । **ವಿಶ್ವಾಮಿತ್ರಸ್ಯ**—ಇಂತಹ ಸ್ತುತಿಕರ್ತನಾದ ನನ್ನ । **ಇದಂ ಬ್ರಹ್ಮ**—ಇಂದ್ರವಿಷಯಕವಾದ ಈ ಸ್ತುತಿಯು । **ಭಾರತಂ ಜನಂ**—ಭರತಕುಲದ ಜನರೆಲ್ಲಾ । **ರಕ್ಷತಿ**—ರಕ್ಷಿಸುತ್ತದೆ.

CC-0. Jangamwadi Math Collection. Digitized by eGangotri

ಭಾವಾರ್ಥ

ವಿಶ್ವಾಮಿತ್ರನೆಂದು ಪ್ರಸಿದ್ಧನಾದ ನಾನು ಈ ದ್ಯಾವಾಪೃಥಿವಿಗಳೆರಡರ ನಡುವೆಯೂ ವ್ಯಾಪಿಸಿರತಕ್ಕ ಇಂದ್ರ ನನ್ನು ಸ್ತುತಿಸುತ್ತೇನೆ. ಇಂತಹ ಸ್ತುತಿಕರ್ತನಾದ ನನ್ನ ಇಂದ್ರವಿಷಯಕವಾದ ಈ ಸ್ತುತಿಯು ಭರತಕುಲದ ಜನರ ನ್ನೆಲ್ಲಾ ರಕ್ಷಿಸುತ್ತದೆ.

## English Translation

I have made Indra glorified by these two, heaven and earth, and this prayer of Vishwamitra protects the race of Bharata.

ವಿಶೇಷವಿಷಯಗಳು

ಭಾರತಂ ಜನಂ—ಭಾರತವೆಂಬ ಜನಾಂಗವು ಋಗ್ವೇದಕಾಲದಲ್ಲಿ ಬಹುಮುಖ್ಯವಾದ ಜನಾಂಗವು. ಈ ಜನಾಂಗದಲ್ಲಿಯೇ ವಿಶ್ವಾಮಿತ್ರನೂ ಜನಿಸಿರುವುದಾಗಿ ಅನೇಕ ಋಕ್ಕುಗಳಿಂದ ತಿಳಿಯಬರುತ್ತದೆ. ಋ ಸಂ. ೩-೩೩-೧೧ ಮತ್ತು ೧೨ ನೆಯ ಋಕ್ಕುಗಳಲ್ಲಿ ವಿಶ್ವಾಮಿತ್ರಋಷಿಯು ವಿಪಾಟ್ ಮತ್ತು ಶುತುದ್ರಿ ನದಿಗಳನ್ನು ಸ್ತೋತ್ರ ಮಾಡುವಾಗ—

ಯದಂಗ ತ್ವಾ ಭರತಾಃ ಸಂತರೇಯುರ್ಗವ್ಯನ್ಗ್ರಾಮ ಇಷಿತ ಇಂದ್ರಜೂತಃ ।

(ಋ. ಸಂ. ೩-೩೩-೧೧)

ಅತಾರಿಷುರ್ಭರತಾ ಗವ್ಯವಃ ಸಮಭಕ್ತ ವಿಪ್ರಃ ಸುಮತಿಂ ನದೀನಾಂ ।

(ಋ. ಸಂ. ೩-೩೩-೧೨)

ಎಂಬ ಋಕ್ಕುಗಳಲ್ಲಿ ತನ್ನವರಾದ ಭರತಜನಾಂಗದವರೂ ಆ ನದಿಗಳನ್ನು ದಾಟಲನುಕೂಲವಾಗುವಂತೆ ನದಿಗಳು ತಮ್ಮ ನೀರನ್ನು ಕಡಿಮೆಮಾಡಿಕೊಳ್ಳಬೇಕೆಂದು ಪ್ರಾರ್ಥಿಸಿದಾನೆ. ಭರತ ಜನಾಂಗಕ್ಕೆ ವಿಶ್ವಾಮಿತ್ರಋಷಿಯ ಸಂಬಂಧವಿರು ವಂತೆಯೇ ವಸಿಷ್ಠಋಷಿಯ ಹೆಸರು ಸಹಾ ಇವರ ಜತೆಯಲ್ಲಿ ಅಲ್ಲಲ್ಲಿ ಉಕ್ತವಾಗಿರುವುದು ಕಂಡುಬರುವುದು. ಈ ಭರತ ಜನಾಂಗಕ್ಕೆ ಭರತನೆಂಬುವನೇ ಮೂಲಪುರುಷನು. ಇವನು ಬಹಳ ಪ್ರಸಿದ್ಧಿಯಾದ ರಾಜನೆಂದು ಇತರ ವೇದಗಳಲ್ಲಿಯೂ ಹೇಳಿದೆ.

ಮಹತೇ ಕ್ಷತ್ರಾಯ ಮಹತ ಆಧಿಪತ್ಯಾಯ ಮಹತೇ ಜಾನರಾಜ್ಯಾಯೈಷವೋ ಭರತಾ ರಾಜಾ ।

(ತೈ. ಸಂ. ೧-೮-೧೦-೨)

ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿರುವುದು. ಐತರೇಯಬ್ರಾಹ್ಮಣದಲ್ಲಿರುವ ಶುನಶ್ಶೇಪೋಪಾಖ್ಯಾನದಲ್ಲಿ ಈ ಭರತನ ಹೆಸರು ಸೂಚಿತವಾಗಿದೆ. ಈ ಭರತನ ಮತ್ತು ಭರತಜನಾಂಗದ ವಿಷಯವನ್ನು ಮುಂದೆ ವಿಸ್ತಾರವಾಗಿ ವಿವರಿಸಲಾಗುವುದು.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವಿಶ್ವಾಮಿತ್ರಾಅರಾಸತ ಬ್ರಹ್ಮೇಂದ್ರಾಯ ವಜ್ರಿಣೇ ।
ಕರದಿನ್ನಃ ಸುರಾಧಸಃ ॥ ೧೩ ॥

ಪದಪಾಠಃ

ವಿಶ್ವಾಮಿತ್ರಾಃ । ಅರಾಸತ । ಬ್ರಹ್ಮ । ಇಂದ್ರಾಯ । ವಜ್ರಿಣೇ ।
ಕರತ್ । ಇತ್ । ನಃ । ಸುऽರಾಧಸಃ ॥ ೧೩ ॥

ಸಾಯಣಭಾಷ್ಯಂ

ವಿಶ್ವಾಮಿತ್ರಾ ವಜ್ರಿಣೇ ವಜ್ರಹಸ್ತಾಯೇಂದ್ರಾಯ ಬ್ರಹ್ಮ ಸ್ತೋತ್ರಮರಾಸತೇ । ಅಕುರ್ವನ್ । ಸ್ತುತಃ ಸ ಇಂದ್ರೋ ನೋऽಸ್ಮಾನ್ ಸುರಾಧಸಃ ಶೋಭನಧನೋಪೇತಾನ್ ಕರದಿತ್ । ಕರೋತ್ಯೇವ ॥ ಅರಾಸತೇ । ರಾಸೃ ಶಬ್ದ ಇತ್ಯಸ್ಯ ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ನಿಘಾತಃ । ಕರತ್ । ಕರೋತೇರ್ಲುಙಿ ಚ್ಲೇಃ ಕೃಮೃದೃರುಹಿಭ್ಯಶ್ಛಂದಸೀತ್ಯಙಾದೇಶಃ । ಸುರಾಧಸಃ । ಆದ್ಯುದಾತ್ತಂ ದ್ವ್ಯಜ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ವಿಶ್ವಾಮಿತ್ರಾಃ-ವಿಶ್ವಾಮಿತ್ರನ ಸಂಬಂಧಿಗಳು। ವಜ್ರಿಣೇ-ವಜ್ರಾಯುಧವನ್ನು ಹಿಡಿದಿರುವ। ಇಂದ್ರಾಯ-ಇಂದ್ರನನ್ನುದ್ದೇಶಿಸಿ । ಬ್ರಹ್ಮ—ಸ್ತುತಿಯನ್ನು । ಅರಾಸತ—ನಿರ್ಮಿಸಿದ್ದಾರೆ (ಇದರಿಂದ ಸ್ತುತನಾದ ಇಂದ್ರನು) । ನಃ—ನಮ್ಮನ್ನು । ಸುರಾಧಸಃ—ಶ್ರೇಷ್ಠವಾದ ಧನವುಳ್ಳವರನ್ನಾಗಿ । ಕರದಿತ್—ಖಂಡಿತವಾಗಿಯೂ ಮಾಡಲಿ.

ಭಾವಾರ್ಥ

ವಿಶ್ವಾಮಿತ್ರನ ಸಂಬಂಧಿಗಳು ವಜ್ರಾಯುಧವನ್ನು ಹಿಡಿದಿರುವ ಇಂದ್ರನನ್ನುದ್ದೇಶಿಸಿ ಸ್ತುತಿಯನ್ನು ನಿರ್ಮಿಸಿದ್ದಾರೆ. ಇದರಿಂದ ಸ್ತುತನಾದ ಇಂದ್ರನು ನಮ್ಮನ್ನು ಶ್ರೇಷ್ಠವಾದ ಧನವುಳ್ಳವರನ್ನಾಗಿ ಮಾಡಲಿ

English Translation

The Vishwamitras have addressed the prayer to Indra, the wielder of the thunderbolt ; may he therefore render us very opulent.

ವಿಶೇಷವಿಷಯಗಳು

ವಿಶ್ವಾಮಿತ್ರಾಃ— ಇಲ್ಲಿ ವಿಶ್ವಾಮಿತ್ರಾಃ ಎಂಬ ಬಹುವಚನಶಬ್ದ ಪ್ರಯೋಗವು ವಿಶ್ವಾಮಿತ್ರ ಮತ್ತು ಅವನ ಪುತ್ರರು, ಇತರ ಸಂಬಂಧಿಗಳು, ಕುಶಿಕವಂಶೋತ್ಪನ್ನರೂ ಮೊದಲಾದವರನ್ನು ಸೂಚಿಸುವುದಕ್ಕೆ ಉಪಯೋಗಿಸಲಾಗಿದೆ.

CC-0. Jangamwadi Math Collection. Digitized by eGangotri

**ಅರಾಸತ—ಸ್ತೋತ್ರಮಕುರ್ವನ್** । ರಾಸೃ ಶಬ್ದೇ ಎಂದರೆ ಶಬ್ದಮಾಡು ಎಂದರ್ಥವಿರುವ ರಾಸೃ ಧಾತುವಿನಿಂದ ನಿಷ್ಪನ್ನವಾದ ಅರಾಸತ ಎಂಬ ಶಬ್ದಕ್ಕೆ ಶಬ್ದಮಾಡಿದರು ಎಂದರೆ ಸ್ತೋತ್ರಪಠನವನ್ನು ಮಾಡಿದರು ಎಂದಭಿಪ್ರಾಯವು.



ಸಂಹಿತಾಪಾಠಃ

ಕಿಂ ತೇ ಕೃಣ್ವಂತಿ ಕೀಕಟೇಷು ಗಾವೋ ನಾಶಿರಂ ದುಹ್ರೇ ನ ತಪಂತಿ ಘರ್ಮಂ ।
ಆ ನೋ ಭರ ಪ್ರಮಗಂದಸ್ಯ ವೇದೋ ನೈಚಾಶಾಖಂ ಮಘವನ್ರಂಧಯಾ ನಃ ॥ ೧೪ ॥

ಪದಪಾಠಃ

ಕಿಂ । ತೇ । ಕೃಣ್ವಂತಿ । ಕೀಕಟೇಷು । ಗಾವಃ । ನ । ಆऽಶಿರಮ್ । ದುಹ್ರೇ । ನ । ತಪಂತಿ । ಘರ್ಮಂ ।
ಆ । ನಃ । ಭರ । ಪ್ರऽಮಗಂದಸ್ಯ । ವೇದಃ । ನೈಚಾऽಶಾಖಂ । ಮಘऽವನ್ । ರಂಧಯ । ನಃ ॥ ೧೪ ॥

ಸಾಯಣಭಾಷ್ಯಂ

ಹೇ ಇಂದ್ರ ಕೀಕಟೇಷ್ವನಾರ್ಯನಿವಾಸೇಷು ಜನಪದೇಷು । ಯದ್ವಾ । ಕ್ರಿಯಾಭಿರ್ಯಾಗದಾನ-ಹೋಮಲಕ್ಷಣಾಭಿಃ ಕಿಂ ಫಲಿಷ್ಯತೀತ್ಯಶ್ರದ್ದಧಾನಾಃ ಪ್ರತ್ಯುತ ಪಿಬತ ಖಾದತಾಯಮೇವ ಲೋಕೋ ನ ಪರ ಇತಿ ವದಂತೋ ನಾಸ್ತಿಕಾಃ ಕೀಕಟಾಃ । ತೇಷು ಗಾವಸ್ತೇ ತವ ಕಿಂ ಕೃಣ್ವಂತಿ । ಕಿಂ ಕುರ್ವಂತಿ । ನ ಕ್ವಚಿತ್ತ್ವೋಪಯೋಗಂ ಕುರ್ವಂತೀತ್ಯರ್ಥಃ । ಅನುಪಯೋಗಂ ದರ್ಶಯತಿ. ಆಶಿರಂ ಸೋಮಮಿಶ್ರಣ-ಯೋಗ್ಯಂ ಪಯೋ ನ ದುಹ್ರೇ । ನ ದುಹಂತಿ । ಕಿಂಚ ಘರ್ಮಂ ಪ್ರವರ್ಗ್ಯಾಖ್ಯಕರ್ಮೋಪಯುಕ್ತಂ ಮಹಾವೀರಪಾತ್ರಂ ಸ್ವಪಯಃಪ್ರದಾನದ್ವಾರೇಣ ನ ತಪಂತಿ । ನ ದೀಪಯಂತಿ । ಏತೇನ ಸಾಂನಾಯ್ಯಾ-ದ್ಯರ್ಥಮಪಿ ನೋಪಯುಜ್ಯಂತ ಇತ್ಯಪಿ ಸೂಚಿತಂ ಭವತಿ । ಏವಂ ಕ್ವಚಿದಪಿ ವೈದಿಕೇ ಕರ್ಮಣ್ಯನುಪ-ಯುಕ್ತಾಸ್ತಾ ಗಾ ನೋऽಸ್ಮಭ್ಯಮಾ ಭರ । ಆಹರ । ನ ಕೇವಲಂ ತಾ ಏವ ಕಿಂ ತರ್ಹಿ ಪ್ರಮಗಂದಸ್ಯ । ವೃದ್ಧ್ಯಾದಿಲಕ್ಷಣಪರಿಮಾಣಂ ಗತೋऽರ್ಥೋ ಮಾಮೇವ ಗಮಿಷ್ಯತೀತಿ ಬುದ್ಧ್ಯಾ ಪರೇಷಾಂ ದದಾ-ತೀತಿ ಮಗಂದೋ ವಾರ್ಧುಷಿಕಃ । ತಸ್ಯಾಪತ್ಯಂ ಪುತ್ರಾದಿಃ ಪ್ರಮಗಂದಃ ಪ್ರಸ್ಕಣ್ವಾದಿವದಪತ್ಯಾರ್ಥಃ ಪ್ರಶಬ್ದೇನ ದ್ಯೋತ್ಯತೇ । ತಸ್ಯಾತ್ಯಂತಕುಸೀದಿಕುಲಸ್ಯ ವೇದೋ ಧನಮಾಹರ । ಕಿಂಚ ಹೇ ಮಘವ-ನ್ಧನವನ್ನಿಂದ್ರ ನೈಚಾಶಾಖಂ । ನೀಚಾಸು ಶೂದ್ರಯೋನಿಷೂತ್ಪಾದಿತಾ ಶಾಖಾ ಪುತ್ರಪೌತ್ರಾದಿಪರಂಪರಾ ಯೇನ ಸ ನೀಚಾಶಾಖಃ । ಶೂದ್ರಾಪತ್ಯೈಃ ಕೇವಲೈಃ ಶೂದ್ರವೇದೀ ಪತತ್ಯಥ ಇತಿ ಚ ಪಾತಕಹೇತು-ತ್ವೇನ ಸ್ಮರಣಾತ್ । ಪತಿತಸ್ಯ ಸಂಬಂಧಿ ಧನಂ ನೈಚಾಶಾಖಂ । ತದ್ಧನಂ ನೋऽಸ್ಮಭ್ಯಂ ರಂಧಯ ।

CC-0. Jangamwadi Math Collection. Digitized by eGangotri

ಸಾಧಯ । ಏತೇಷಾಂ ತದ್ಧನಂ ತವ ನೋಪಯುಜ್ಯತೇ ಅಸ್ಮದಾಯತ್ತಂ ತು ತದ್ಧನಂ ಯಾಗಾದಿದ್ವಾರಾ ತವೋಪಯುಜ್ಯತೇ । ತಸ್ಮಾತ್ತದಸ್ಮಭ್ಯಂ ಪ್ರಯಚ್ಛೇತಿ ಭಾವಃ ॥ ಏತಮರ್ಥಂ ಯಾಸ್ಕೋಽಪ್ಯಾಹ । ಕಿಂ ತೇ ಕುರ್ವಂತಿ ಕೀಕಟೇಷು ಗಾವಃ । ಕೀಕಟೋ ನಾಮ ದೇಶೋಽನಾರ್ಯನಿವಾಸಃ । ಕೀಕಟಾಃ ಕಿಂಕೃತಾಃ ಕಿಂ ಕ್ರಿಯಾಭಿರಿತಿಪ್ರೇಪ್ಸಾ ವಾ । ನೈವ ಚಾಶಿರಂ ದುಹ್ರೇ ನ ತಪಂತಿ ಘರ್ಮಂ ಘರಣಂ । ಆ ಹರ ನಃ ಪ್ರಮಗಂದಸ್ಯ ಧನಾನಿ । ಮಗಂದಃ ಕುಸೀದೀ ಮಾಂಗದೋ ಮಾಮಾಗಮಿಷ್ಯತೀತಿ ಚ ದದಾತಿ । ತದಪತ್ಯಂ ಪ್ರಮಗಂದೋಽತ್ಯಂತಕುಸೀದಿಕುಲೀನಃ । ಪ್ರಮದಕೋ ವಾ ಯೋಽಯಮೇವಾಸ್ತಿ ಲೋಕೋ ನ ಪರ ಇತಿ ಪ್ರೇಪ್ಸುಃ । ಪಂಡಕೋ ವಾ ಪಂಡಕಃ ಪಂಡಗಃ ಪ್ರಾರ್ದಕೋ ವಾ ಪ್ರಾರ್ದಯತ್ಯಾಂಡೌ । ಆಂಡಾವಾಣೀ ಇವ ವ್ರೀಡಯತಿ । ತತ್ಸ್ವಂ ನೈಚಾಶಾಖಂ। ನೀಚಾಶಾಖೋ ನೀಚೈಃ ಶಾಖಃ । ಶಾಖಾಃ ಶಕ್ನೋತೇಃ । ಆಣಿರರಣಾತ್। ತನ್ನೋ ಮಘವನ್ರಂಧಯೇತಿ ರಧ್ಯತಿರ್ವಶಗಮನೇ । ನಿ. ೬-೩೨ । ಇತಿ ॥ ಆಶಿರಂ । ಆಙ್ಪೂರ್ವಾಚ್ಛ್ರೀಣಾತೇಃ ಕ್ವಿಪ್ಯಪಸ್ಪೃಧೇಥಾಮಿತ್ಯಾದಿನಾ ಶಿರಿತ್ಯಾದೇಶಃ। ದುಹ್ರೇ। ದುಹೇರ್ಲಿಟೀರಯೋ ರ ಇತಿ ರೇಆದೇಶಃ । ದ್ವಿರ್ವಚನಸ್ಯ ವಿಕಲ್ಪಿತತ್ವಾತ್ ದ್ವಿರ್ವಚನಾಭಾವಃ । ಚಾದಿಲೋಪೇ ವಿಭಾಷೇತಿ ನ ನಿಘಾತಃ । ನೈಚಾಶಾಖಂ । ತಸ್ಯೇದಮಿತ್ಯಣ್ । ಪ್ರತ್ಯಯಸ್ವರಃ। ರಂಧಯ । ರಧೇರ್ಣ್ಯಂತಸ್ಯ ರಧಿಜಭೋರಚೀತಿ ನುಮಾಗಮಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಕೀಕಟೇಷು—ನಾಸ್ತಿಕರಾದ ಕೀಕಟರ ಸಮುದಾಯದಲ್ಲಿರತಕ್ಕ । ಗಾವಃ—ಗೋವುಗಳು । ತೇ—ನಿನಗೆ । ಕಿಂ ಕೃಣ್ವಂತಿ—ಯಾವ ಪ್ರಯೋಜನವನ್ನುಂಟುಮಾಡುತ್ತವೆ । ಆಶಿರಂ—ಸೋಮಮಿಶ್ರಣಕ್ಕೆ ಯೋಗ್ಯವಾದ ಪಯಸ್ಸನ್ನು । ನ ದುಹ್ರೇ—ಅವು ಕರೆಯುವುದಿಲ್ಲ । ಘರ್ಮಂ—ಪ್ರವರ್ಗ್ಯಯಾಗೋಪಯುಕ್ತವಾದ ಮಹಾವೀರಪಾತ್ರವನ್ನು । ನ ತಪಂತಿ—ಪ್ರಕಾಶಿಸುವಂತೆ ಮಾಡುವುದಿಲ್ಲ (ಆದುದರಿಂದ) । ನಃ—ಯಜ್ಞಾಚರಣೆಯಲ್ಲಿ ನಿನ್ನನ್ನು ಸೇವಿಸುವ ನಮಗೆ । ಆ ಭರ—(ಆ ಗೋವುಗಳನ್ನು) ತಂದೊದಗಿಸು । ಪ್ರಮಗಂದಸ್ಯ—ದುಷ್ಕುಲೀನನಾದ ಪ್ರಮಗಂದ ಸಂತತಿಯ । ವೇದಃ—ಧನವನ್ನು (ನಮಗೆ ತಂದುಕೊಡು) । ಮಘವನ್—ಧನವಂತನಾದ ಇಂದ್ರನೇ । ನೈಚಾಶಾಖಂ—ನೀಚವಂಶೋತ್ಪನ್ನರಾದವರ ಧನವನ್ನೂ । ನಃ—ನಮಗೆ । ರಂಧಯ—ಸಾಧಿಸಿಕೊಡು.

ಭಾವಾರ್ಥ

ಮಘವಂತನಾದ ಇಂದ್ರನೇ, ನಾಸ್ತಿಕರಾದ ಕೀಕಟರ ಸಮುದಾಯದಲ್ಲಿರತಕ್ಕ ಗೋವುಗಳು ನಿನ್ನ ಯಜ್ಞಕಾರ್ಯಕ್ಕೆ ಉಪಯುಕ್ತವಾಗುವುದಿಲ್ಲ. ಅವುಗಳ ಪಯಸ್ಸನ್ನು ಸೋಮಮಿಶ್ರಣಕ್ಕೆ ಉಪಯೋಗಿಸುವುದಿಲ್ಲ. ಮತ್ತು ಅವುಗಳ ಕ್ಷೀರಗಳು ಪ್ರವರ್ಗ್ಯೋಪಯುಕ್ತವಾದ ಮಹಾವೀರಪಾತ್ರೆಯನ್ನು ಪ್ರಕಾಶಿಸುವಂತೆ ಮಾಡುವುದಿಲ್ಲ. ಆದುದರಿಂದ ಯಜ್ಞಾಚರಣೆಯಲ್ಲಿ ನಿನ್ನನ್ನು ಸೇವಿಸುವ ನಮಗೆ ಆ ಗೋವುಗಳನ್ನು ತಂದೊದಗಿಸು. ದುಷ್ಕುಲೀನನಾದ ಪ್ರಮಗಂದಸಂತತಿಯವರ ಧನವನ್ನೂ ಇತರ ನೀಚಶಾಖರ ಧನವನ್ನೂ ನಮಗೆ ಸಾಧಿಸಿಕೊಡು.

CC-0. Jangamwadi Math Collection. Digitized by eGangotri

## English Translation

What do the cattle for you among the Kikatas; they yield no milk to mix with the Soma, they need not the vessel (for the libation): bring them to us: (bring also) the wealth of the son of the usurer, and give us, Maghavan, (the possessions) of the low branches (of the community).

### ವಿಶೇಷವಿಷಯಗಳು

**ಕೀಕಟೇಷು ಗಾವಃ ತೇ ಕಿಂ ಕೃಣ್ವಂತಿ**—ಎಲೈ ಇಂದ್ರನೇ, ಅನಾರ್ಯರೂ, ನಾಸ್ತಿಕರೂ ಆದ ದುಷ್ಟ ಜನರಲ್ಲಿರುವ ಗೋವುಗಳು ನಿನಗೆ ಯಾವ ಉಪಯೋಗಕರವಾದ ಕಾರ್ಯವನ್ನೂ ಮಾಡುವುದಿಲ್ಲ ಎಂದರೆ ದುಷ್ಟಜನರೂ ಅನಾರ್ಯರೂ ಇಂದ್ರನನ್ನುದ್ದೇಶಿಸಿ ಯಜ್ಞಾದಿಗಳನ್ನು ಮಾಡುವುದಿಲ್ಲವಾದ್ದರಿಂದ ಅವರಲ್ಲಿರುವ ಗೋವುಗಳೂ, ಅವುಗಳ ಹಾಲೂ ಯಜ್ಞಯಾಗಾದಿಗಳಿಗೆ ಉಪಯೋಗವಾಗದೆ ವ್ಯರ್ಥವಾಗುವವು ಎಂದಭಿಪ್ರಾಯವು. ಆದ್ದರಿಂದ ಆ ಗೋವುಗಳು ಇಂದ್ರನಾದ ನಿನಗೆ ಹೇಗೆ ತಾನೇ ಉಪಯೋಗವಾದಾವು? ಉಪಯೋಗವಾಗುವುದೇ ಇಲ್ಲ ಎಂದಭಿಪ್ರಾಯವು.

**ಕೀಕಟೇಷು**—ಅನಾರ್ಯನಿವಾಸೇಷು ಜನಪದೇಷು । ಯದ್ವಾ । ಕ್ರಿಯಾಭಿರ್ಯಾಗದಾನಹೋಮಲಕ್ಷಣಾಭಿಃ ಕಿಂಫಲಿಷ್ಯತೀತ್ಯಶ್ರದ್ದಧಾನಾಃ ಪ್ರತ್ಯುತ ಪಿಬತ ಖಾದತಾಯಮೇವ ಲೋಕೋ ನ ಪರ ಇತಿ ವದಂತೋ ನಾಸ್ತಿಕಾಃ ಕೀಕಟಾಃ ತೇಷು। ಕೀಕಟರೆಂದರೆ ಆರ್ಯವಂಶಕ್ಕೆ ಸೇರದೆ ಇರುವ ಈ ದೇಶದ ಅನಾಗರಿಕರಾದ ಪೂರ್ವನಿವಾಸಿಗಳು ಇವರು ಆರ್ಯರಂತೆ ಯಜ್ಞಯಾಗಾದಿಗಳನ್ನು ಮಾಡದೆ, ಇಂದ್ರಾದಿ ದೇವತೆಗಳನ್ನು ಪೂಜಿಸದೆ ಆರ್ಯರಿಗೂ, ಅವರು ಮಾಡುವ ಯಜ್ಞಾದಿಗಳಿಗೂ ತೊಂದರೆಯನ್ನು ಮಾಡುವ ಅನಾಗರಿಕ ಜನರು. ಅಥವಾ ಆರ್ಯವಂಶದಲ್ಲಿ ಹುಟ್ಟಿದವರಾಗಿದ್ದರೂ ಯಜ್ಞ, ದಾನ, ಹೋಮ ಮೊದಲಾದ ಸತ್ಕರ್ಮಗಳನ್ನು ಮಾಡದೆ ಆ ಸತ್ಕರ್ಮಗಳಿಂದ ಪ್ರಯೋಜನವೇನು ಎಂದು ಹೇಳುತ್ತಾ ಅವುಗಳಲ್ಲಿ ನಂಬಿಕೆಯನ್ನು ಇಡದೆ, ಈ ಲೋಕಬಿಟ್ಟರೆ ಬೇರೆ ಲೋಕವಿಲ್ಲ. ಸ್ವರ್ಗನರಕಾದಿಗಳಿಲ್ಲ ಪಾಪಪುಣ್ಯಗಳಿಲ್ಲ. ಅವೆಲ್ಲಾ ಬರೀ ಕಲ್ಪನೆಗಳು ಆದ್ದರಿಂದ ಸುಖಪಡುವುದಕ್ಕಾಗಿ ಬೇಕಾದುದನ್ನು ತಿನ್ನಿರಿ, ಕುಡಿಯಿರಿ ಎಂದು ಹೇಳುತ್ತಾ ನಾಸ್ತಿಕರಾಗಿರುವ ದುರ್ಜನರು ಎಂದು ಅರ್ಥವಿವರಣೆ ಮಾಡಿದ್ದಾರೆ.

**ಆಶಿರಂ ನ ದುಹ್ರೇ ನ ತಪಂತಿ ಘರ್ಮಂ**—ಸೋಮಮಿಶ್ರಣಯೋಗ್ಯಂ ಪಯಃ ನ ದುಹಂತಿ । ಕಿಂಚ ಪ್ರವರ್ಗ್ಯಕರ್ಮೋಪಯುಕ್ತಂ ಮಹಾವೀರಪಾತ್ರಂ ಸ್ವಪಯಃಪ್ರದಾನದ್ವಾರೇಣ ನ ದೀಪಯಂತಿ । ಏತೇನ ಸಾಂನಾಯ್ಯಾರ್ಥಮಪಿ ನೋಪಯುಜ್ಯಂತ ಇತ್ಯಪಿ ಸೂಚಿತಂ ಭವತಿ । ಅನಾರ್ಯರಲ್ಲಿರುವ ಗೋವುಗಳು ಕರೆಯುವ ಹಾಲು ಯಾವ ಸತ್ಕರ್ಮಗಳಿಗೂ ಉಪಯೋಗವಾಗುವುದಿಲ್ಲ. ಸೋಮರಸಕ್ಕೆ ಮಿಶ್ರಮಾಡಲು ಬೇಕಾದ ಹಾಲನ್ನು ಕೊಡುವುದಿಲ್ಲ. ಎಂದರೆ ಗವಾಶಿರವೆಂಬ ಹಾಲನ್ನು ಮಿಶ್ರಮಾಡಿರುವ ಸೋಮರಸಕ್ಕೆ ಈ ಹಸುಗಳ ಹಾಲು ಉಪಯುಕ್ತವಾಗುವುದಿಲ್ಲ. ಇದಲ್ಲದೆ ಪ್ರವರ್ಗ್ಯವೆಂಬ ಯಾಗದಲ್ಲಿ ಮಹಾವೀರಪಾತ್ರೆಯಲ್ಲಿ ಇಡುವ ಹಾಲಿಗಾಗಿಯೂ ಸಾಂನಾಯ್ಯಕ್ಕಾಗಿಯೂ ಈ ಗೋವುಗಳ ಹಾಲು ಉಪಯೋಗಿಸುವಂತಿಲ್ಲ ಎಂದಭಿಪ್ರಾಯವು.

CC-0. Jangamwadi Math Collection. Digitized by eGangotri

ನಃ ಆ ಭರ—ಆದ್ದರಿಂದ ಆ ದುಷ್ಟಜನರಲ್ಲಿರುವ ಗೋವುಗಳನ್ನು ನಮಗೆ ತಂದೊದಗಿಸು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

ಪ್ರಮಗಂದಸ್ಯ ವೇದಃ—ದ್ವೈಗುಣ್ಯಾದಿಲಕ್ಷಣಪರಿಮಾಣಂ ಗತೋಽರ್ಥೋಽ ಮಾಮೇವ ಗಮಿಷ್ಯತೀತಿ ಬುದ್ಧ್ಯಾ ಪರೇಷಾಂ ದದಾತೀತಿ ಮಗಂದೋ ವಾರ್ಧುಷಿಕಃ। ತಸ್ಯಾಪತ್ಯಂ ಪುತ್ರಾದಿಃ ಪ್ರಮಗಂದಃ। ಪ್ರಸ್ಕಣ್ವಾದಿವದಪತ್ಯಾರ್ಥಃ ಪ್ರಶಬ್ದೇನ ದ್ಯೋತ್ಯತೇ। ತಸ್ಯಾತ್ಯಂತಕುಸೀದಕುಲಸ್ಯ ವೇದಃ ಧನಮಾಹರ। ಒಬ್ಬನಿಗೆ ಹಣವನ್ನು ಸಾಲವಾಗಿ ಕೊಟ್ಟರೆ ಅದು ಬಡ್ಡಿಸಹಿತವಾಗಿ ತಾನು ಕೊಟ್ಟ ಹಣಕ್ಕೆ ಎರಡರಷ್ಟು ಹಿಂದಕ್ಕೆ ಬರುತ್ತದೆ ಎಂಬ ದುರಾಲೋಚನೆಯಿಂದ ಇತರರಿಗೆ ಸಾಲಕೊಡುವವನಿಗೆ ಮಗಂದ ಎಂದು ಹೆಸರು. ಅವನ ಪುತ್ರನಿಗೆ ಪ್ರಮಗಂದ ಎಂದು ಹೆಸರು. ಕಣ್ವಋಷಿಯ ಪುತ್ರನಿಗೆ ಪ್ರಸ್ಕಣ್ವ ಎಂದು ಹೆಸರಿರುವುದು ಎಂದರೆ ಪ್ರ ಎಂಬ ಉಪಸರ್ಗವು ಪುತ್ರ (ಅಪತ್ಯ) ಎಂಬ ಅರ್ಥವನ್ನು ಸೂಚಿಸುವುದು. ಅದರಂತೆ ಮಗಂದ ಎಂಬ ಶಬ್ದಕ್ಕೆ ಪ್ರ ಎಂಬ ಉಪಸರ್ಗವು ಸೇರಿದರೆ ಪ್ರಮಗಂದ ಅಥವಾ ಮಗಂದನ ಪುತ್ರ ಎಂದರ್ಥವಾಗುವುದು. ಇಂತಹ ಪ್ರಮಗಂದನ ಅನ್ಯಾಯಾರ್ಜಿತವಾದ ಧನವನ್ನು ತಮಗೆ ತಂದುಕೊಡಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ.

ನೈಚಾಶಾಖಂ—ನೀಚಾಸು ಶೂದ್ರಯೋನಿಷು ಉತ್ಪಾದಿತಾ ಶಾಖಾ ಪುತ್ರಪೌತ್ರಾದಿಪರಂಪರಾ ಯೇನ ಸ ನೀಚಾಶಾಖಃ। ಪತಿತಸ್ಯ ಸಂಬಂಧಿ ಧನಂ ನೈಚಶಾಖಂ। ತದ್ಧನಂ ನಃ ಸಾಧಯ। ಏತೇಷಾಂ ತದ್ಧನಂ ತವ ನೋಽಪಯುಜ್ಯತೇ ಅಸ್ಮಾದಾಯತ್ತಂ ತು ತದ್ಧನಂ ಯಾಗಾದಿದ್ವಾರಾ ತವೋಽಪಯುಜ್ಯತೇ। ತಸ್ಮಾತ್ತದಸ್ಮಭ್ಯಂ ಪ್ರಯಚ್ಛೇತಿ ಭಾವಃ। ನೀಚರಾದ ಶೂದ್ರಜಾತಿಯಲ್ಲಿ ಬ್ರಾಹ್ಮಣನೇ ಮೊದಲಾದವರಿಂದ ಉತ್ಪಾದನೆಮಾಡಿದ ಪುತ್ರಪೌತ್ರಾದಿ ಸಂತತಿಗೆ ನೀಚಶಾಖೆಯೆಂದು ಹೆಸರು. ಇವರು ಉಪನಯನ, ವೇದಾಧ್ಯಯನ ಯಜ್ಞ, ದಾನ ಮೊದಲಾದ ಸತ್ಕರ್ಮಗಳಿಗೆ ಅನರ್ಹರಾಗಿ ಅವುಗಳನ್ನು ಆಚರಿಸದೆ ಇರುವುದರಿಂದ ಇವರನ್ನು ಪತಿತರೆಂದು ಹೇಳುವರು. ಇಂತಹ ನೀಚಶಾಖೆಯವರ ಎಂದರೆ ಪತಿತರಾದವರ ಧನವನ್ನೂ ನಮಗೆ ತಂದೊದಗಿಸು ಎಂದು ಇಂದ್ರನನ್ನು ಪ್ರಾರ್ಥಿಸಿದೆ. ಏಕೆಂದರೆ, ಹಿಂದೆ ಹೇಳಿದ ಅನಾರ್ಯರು, ಪ್ರಮಗಂದರು, ನೀಚಶಾಖೆಯವರಾದ ಪತಿತರು ಮೊದಲಾದ ಜನರು ಯಜ್ಞಯಾಗಾದಿಗಳನ್ನು ಮಾಡದೆ, ಇಂದ್ರಾದಿ ದೇವತೆಗಳನ್ನು ಪೂಜಿಸದೆ ಇರುವುದರಿಂದ ಅವರಲ್ಲಿರುವ ಗೋವುಗಳೂ, ಧನವೂ ಇಂದ್ರನಿಗೆ ಸಮರ್ಪಿತವಾಗದೆ ವ್ಯರ್ಥವಾಗುವುದು. ಆದರೆ ಆ ಧನಾದಿಗಳನ್ನು ಇಂದ್ರನು ನಮಗೆ ತಂದೊದಗಿಸಿದಲ್ಲಿ ನಾವು ಆ ಗೋವುಗಳ ಹಾಲನ್ನೂ, ಅವರ ಧನವನ್ನೂ ಯಜ್ಞಾದಿಗಳನ್ನು ಮಾಡುವುದಕ್ಕಾಗಿಯೂ, ಇಂದ್ರನನ್ನು ಆರಾಧಿಸುವುದಕ್ಕಾಗಿಯೂ ಉಪಯೋಗಿಸುವುದರಿಂದ ಆ ಧನಾದಿಗಳು ಇಂದ್ರನಿಗೆ ಉಪಯೋಗವಾದಂತೆ ಆಗುವವು. ಆದ್ದರಿಂದ ಅವುಗಳನ್ನು ನಮಗೆ ತಂದೊದಗಿಸು ಎಂಬ ಪ್ರಾರ್ಥನೆಯು ಉಕ್ತವಾಗಿದೆ.

ಯಾಸ್ಕರು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

ಕಿಂ ತೇ ಕೃಣ್ವಂತಿ ಕೀಕಟೇಷು ಗಾವೋ ನಾಶಿರಂ ದುಹ್ರೇ ನ ತಪಂತಿ ಘರ್ಮಂ ॥

ಆ ನೋ ಭರ ಪ್ರಮಗಂದಸ್ಯ ವೇದೋ ನೈಚಾಶಾಖಂ ಮಘವನ್ರಂಧಯಾ ನಃ ॥



CC-0. Jangamwadi Math Collection. Digitized by eGangotri

ಇದಕ್ಕೆ ನಿರ್ವಚನವು—

ಕಿಂ ತೇ ಕುರ್ವಂತಿ ಕೀಕಟೇಷು ಗಾವಃ । ಕೀಕಟಾ ನಾಮ ದೇಶೋಽನಾರ್ಯನಿವಾಸಃ । ಕೀಕಟಾಃ ಕಿಂಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ । ನೈವ ಚಾಶಿರಂ ದುಹ್ರೇ ನ ತಪಂತಿ ಘರ್ಮಂ ಹರ್ಮ್ಯಮಾ ಹರ ನಃ ಪ್ರಮಗಂದಸ್ಯ ಧನಾನಿ । ಮಗಂದಃ ಕುಸೀದೀ । ಮಾಂಗದೋ ಮಾಮಾಗಮಿಷ್ಯತೀತಿ ಚ ದದಾತಿ ತದಪತ್ಯಂ ಪ್ರಮಗಂದೋಽತ್ಯಂತಕುಸೀದಿಕುಲೀನಃ । ಪ್ರಮದಕೋ ವಾ ಯೋಽಯಮೇವಾಸ್ತಿ ಲೋಕೋ ನ ಪರ ಇತಿ ಪ್ರೇಪ್ಸುಃ । ಪಂಡಕೋ ವಾ । ಪಂಡಕಃ ಪಂಡಗಃ ಪ್ರಾರ್ದಕೋ ವಾ ಪ್ರಾರ್ದಯತ್ಯಾಂಡಾವಾಂಡಾವಾಣೀ ಇವ ವ್ರೀಡಯತಿ ತತ್ಸ್ತಂಭೇ । ನೈಚಾಶಾಖಂ ನೀಚಾಶಾಖೋ ನೀಚೈಃ ಶಾಖಃ । ಶಾಖಾಃ ಶಕ್ನೋತೇಃ । ಆಣಿರರಣಾತ್ । ತನ್ನೋ ಮಘವನ್ರಂಧಯೇತಿ ರಧ್ಯತಿರ್ವಶಗಮನೇ ॥

(ನಿ. ೬-೩೨)

ಎಂದರೆ—ಕೀಕಟಾ ಎಂಬ ಶಬ್ದಕ್ಕೆ ಅನಾರ್ಯರಾದ ಈ ದೇಶದ ಪೂರ್ವವಾಸಿಗಳು ವಾಸಮಾಡುವ ದೇಶವೆಂದು ಹೆಸರು. ಈ ಅನಾರ್ಯ ನಿವಾಸಿಗಳಿಗೆ ಕೀಕಟಾಃ ಎಂಬ ಹೆಸರು ಹೇಗೆ ಬಂದಿತು ಎಂದರೆ ಕಿಂ ಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ—ಯಜ್ಞಾದಿ ಕರ್ಮಗಳಿಂದ ಏನು ಪ್ರಯೋಜನ? ಎಂದು ಸತ್ಕರ್ಮಗಳನ್ನು ಅಲಕ್ಷ್ಯ ಮಾಡಿ ತಿರಸ್ಕಾರಭಾವದಿಂದ ಮಾತನಾಡುತ್ತಾ ಇರುವ ನಾಸ್ತಿಕರಿಗೆ ಕಿಂಕೃತಾಃ ಅಥವಾ ಕೀಕಟಾಃ ಎಂಬ ಹೆಸರು ಬಂದಿದೆ. ಇಂಥವರಲ್ಲಿರುವ ಗೋವುಗಳ ಹಾಲು ಸದ್ವಿನಿಯೋಗವಾಗುವುದಿಲ್ಲ ಏಕೆಂದರೆ, ಇವರು ಯಜ್ಞಾದಿಗಳನ್ನು ಮಾಡದೇ ಇರುವುದರಿಂದ ಇವರ ಗೋವುಗಳ ಹಾಲೂ ಯಜ್ಞಾದಿಗಳಿಗೆ ಉಪಯೋಗವಾಗುವುದಿಲ್ಲ. ಆಶಿರದ್ರವ್ಯ ರೂಪವಾಗಿ ಸೋಮರಸಕ್ಕೆ ಸೇರಿಸಬೇಕಾದ ಹಾಲಿಗಾಗಿಯೂ ಉಪಯೋಗವಿಲ್ಲ ಇದಲ್ಲದೆ ಹಾಲನ್ನು ಕಾಯಿಸಿ ಅದರಿಂದ ಉತ್ಪನ್ನವಾಗಬಹುದಾದ ಪಯೋವಿಕಾರಗಳಿಗೂ ಎಂದರೆ ಮೊಸರು, ತುಪ್ಪ ಮೊದಲಾದುವುಗಳೂ ಯಜ್ಞಾರ್ಹವಾಗುವುದಿಲ್ಲ. ಆದುದರಿಂದ ಈ ಅನಾಗರಿಕ ಜನರಲ್ಲಿರುವ ಗೋವುಗಳನ್ನು ನಮಗೆ ತಂದೊದಗಿಸು. ನಮಗೆ ಆ ಗೋವುಗಳು ದೊರೆತಲ್ಲಿ ನಾವು ಯಜ್ಞಾದಿಗಳನ್ನು ಮಾಡಿ ಆ ಮೂಲಕ ಗೋವುಗಳ ಹಾಲು, ಮೊಸರು, ಘೃತ ಮೊದಲಾದುವುಗಳನ್ನು ಇಂದ್ರಾದಿ ದೇವತೆಗಳಿಗೆ ಅರ್ಪಿಸುತ್ತೇವೆ. ಅದಕ್ಕಾಗಿ ಅವರ ಗೋವುಗಳನ್ನೂ, ಧನ ವನ್ನೂ ನಮಗೆ ಕೊಡು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಇದಲ್ಲದೆ ಮಗಂದಃ ಎಂದರೆ ಕುಸೀದೀ—ದ್ರವ್ಯವನ್ನು ಇತರರಿಗೆ ಸಾಲವಾಗಿ ಕೊಟ್ಟು ಕೆಲವುಕಾಲದ ಮೇಲೆ ಆ ಹಣವನ್ನೂ ಅದರ ಬಡ್ಡಿಯನ್ನೂ ತೆಗೆದು ಕೊಳ್ಳುವುದೇ ವೃತ್ತಿಯಾಗಿ ಮಾಡಿಕೊಂಡಿರುವ ವ್ಯಾಪಾರಿಯು. ಮಗಂದ ಶಬ್ದಕ್ಕೆ ಪ್ರ ಎಂಬ ಉಪಸರ್ಗ ಸೇರಿರು ವುದರಿಂದ ಈ ಪ್ರಮಗಂದ ಶಬ್ದಕ್ಕೆ 'ಮಗಂದ' ಅಥವಾ ಕುಸೀದಕುಲದವನೆಂದು ಅರ್ಥವು. ಅಥವಾ ಪ್ರ ಎಂಬ ಉಪಸರ್ಗಕ್ಕೆ ಪ್ರಕರ್ಷವಾಗಿ, ಎಂದರೆ ವಿಶೇಷವಾಗಿ ಅತ್ಯಂತ ಕೆಟ್ಟ ಕುಲದಲ್ಲಿ ಹುಟ್ಟಿದವನೆಂದು ಅರ್ಥವು ಇವನು ಬಡ್ಡಿಯನ್ನು ಒಂದಕ್ಕೆರಡಾಗಿ ತೆಗೆದುಕೊಂಡು ಅನ್ಯಾಯವಾಗಿ ಹಣಸಂಪಾದನೆಮಾಡುವುದರಿಂದ ಅವನ ಧನವನ್ನೂ ನಮಗೆ ತಂದೊದಗಿಸು. ಅಥವಾ ಪ್ರಮಗಂದಶಬ್ದಕ್ಕೆ ಪ್ರಮದಕ ಎಂದಾದರೂ ಅರ್ಥವಾಗಬಹುದು ಪ್ರಮದಕ ಎಂದರೆ ನಮಗೆ ಕಣ್ಣಿಗೆ ಕಾಣುತ್ತಿರುವ ಈ ಲೋಕಹೊರತು ಬೇರೆ ಸ್ವರ್ಗಾದಿಲೋಕಗಳಿಲ್ಲ. ಆದ್ದರಿಂದ ಪುಣ್ಯಪಾಪ ಗಳಿಗೆ ಏನೂ ಅರ್ಥವಿಲ್ಲ. ಈಗ ನಾವು ಸುಖಪಟ್ಟದ್ದೇ ಬಂತು. ಏತಕ್ಕಾಗಿ ಕಷ್ಟಪಡಬೇಕು? ಬೇಕಾದಹಾಗೆ ತಿಂದು ಉಂಡು ಸುಖವಾಗಿರುವುದೇ ಒಳ್ಳೆಯದು. ಕಷ್ಟಸಾಧ್ಯವಾದ ಯಜ್ಞಯಾಗಾದಿಗಳಿಂದ ಏನೂ ಪ್ರಯೋಜನ

CC-0. Jangamwadi Math Collection. Digitized by eGangotri

ವಿಲ್ಲ ಎಂದು ಹೇಳುವ ನಾಸ್ತಿಕನು. ಅಥವಾ ಪ್ರಮಗಂದಶಬ್ದಕ್ಕೆ ಪಂಡಕಃ ಅಥವಾ ಪಂಡಗಃ ಅಥವಾ ಪ್ರಾರ್ದಕ ನೆಂದೂ ಅರ್ಥವಾಗಬಹುದು. ಪಂಡಕ ಅಥವಾ ಪಂಡಗನೆಂದರೆ ನಪುಂಸಕನು, ಸ್ತ್ರೀಯರಂತೆ ಕೈಲಾಗದವನು. ಪ್ರಾರ್ದಕನೆಂದರೆ ವ್ಯವಹಾರಾದಿಗಳಲ್ಲಿ ಸ್ತ್ರೀಯರಂತೆ ವರ್ತಿಸುವವನು, ಹೆಣ್ಣಿಗನು, ನಿರ್ಲಜ್ಜನು. ಇಂತವರ ಧನ ವನ್ನೂ ನಮಗೆ ತಂದೊದಗಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ. ಮತ್ತು ಶೂದ್ರಾದಿನೀಚಜಾತಿಯವರಲ್ಲಿ ಉತ್ತಮ ಕುಲದವರಿಂದ ಉತ್ಪನ್ನರಾದ ಜನರಿಗೆ ನೀಚಶಾಖೆಯವರೆಂದು ಹೆಸರು. ಇವರು ಪತಿತರಾಗಿ ಯಜ್ಞಾದಿಕರ್ಮಗಳಿಂದ ಬಹಿಷ್ಕೃತರಾಗಿರುವುದರಿಂದ ಇವರ ಧನವು ಸತ್ಕರ್ಮಗಳಿಗೆ ಉಪಯೋಗವಾಗುವುದಿಲ್ಲ. ಆದುದರಿಂದ ನೈಚಾ-ಶಾಖಂ ಧನಂ ಎಂದರೆ ಇಂತಹ ನೀಚಕುಲದ ಜನರಲ್ಲಿರುವ ಧನವನ್ನು ನಮಗೆ ತಂದೊದಗಿಸಬೇಕೆಂದು ಪ್ರಾರ್ಥಿಸಿದೆ. ಇಲ್ಲಿ ರಧ್ಯತಿಧಾತುವಿಗೆ ವಶಮಾಡು ಎಂಬರ್ಥವಿರುವುದರಿಂದ ಈ ಋಕ್ಕಿನಲ್ಲಿರುವ ಮಘವನ್ ರಂಧಯ ಎಂಬ ಶಬ್ದಗಳಿಗೆ ಎಲೈ ಇಂದ್ರನೇ (ಮೇಲೆ ಹೇಳಿದ ಜನರ ಧನವನ್ನು) ನಮ್ಮ ವಶವಾಗುವಂತೆ ಮಾಡು ಎಂದಭಿಪ್ರಾಯವು.

ಸಂಹಿತಾಪಾಠಃ

ಸಸರ್ಪರೀರಮತಿಂ ಬಾಧಮಾನಾ ಬೃಹನ್ಮಿಮಾಯ ಜಮದಗ್ನಿದತ್ತಾ ।
ಆ ಸೂರ್ಯಸ್ಯ ದುಹಿತಾ ತತಾನ ಶ್ರವೋ ದೇವೇಷ್ವಮೃತಮಜುರ್ಯಂ ॥

ಪದಪಾಠಃ

ಸಸರ್ಪರೀಃ । ಅಮತಿಂ । ಬಾಧಮಾನಾ । ಬೃಹತ್ । ಮಿಮಾಯ । ಜಮದಗ್ನಿಽದತ್ತಾ ।
ಆ । ಸೂರ್ಯಸ್ಯ । ದುಹಿತಾ । ತತಾನ । ಶ್ರವಃ । ದೇವೇಷು । ಅಮೃತಂ । ಅಜುರ್ಯಂ ॥ ೧೫ ॥

ಸಾಯಣಭಾಷ್ಯಂ

ಸಸರ್ಪರೀದೃಚೇ ಪ್ರಾಹುರಿತಿಹಾಸಂ ಪುರಾವಿದಃ । ಸೌದಾಸನೃಪಯಜ್ಞೇ ವೈ ವಸಿಷ್ಠಾತ್ಮಜ-ಶಕ್ತಿನಾ । ವಿಶ್ವಾಮಿತ್ರಸ್ಯಾಭಿಭೂತಂ ಬಲಂ ವಾಕ್ ಚ ಸಮಂತತಃ । ವಾಸಿಷ್ಠೇನಾಭಿಭೂತಃ ಸ ಹ್ಯವಾ-ಸೀದಥ ಗಾಧಿಜಃ । ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ । ಸೂರ್ಯವೇಶ್ಮನ ಆಹೃತ್ಯ ದದುರ್ವೈ ಜಮದಗ್ನಯಃ । ಕುಶಿಕಾನಾಂ ಮತಿಃ ಸಾ ವಾಗಮತಿಂ ತಾಮಪಾನುದತ್ ॥

ಜಮದಗ್ನಿದತ್ತಾ ಜಮದಗ್ನಿಭಿಃ ಪ್ರಜ್ವಲಿತಾಗ್ನಿಭಿರ್ಋಷಿಭಿರಸ್ಮಭ್ಯಂ ದತ್ತಾಮತಿಮಜ್ಞಾನಂ ಬಾಧಮಾನಾ ಸಸರ್ಪರೀಃ ಸರ್ವತ್ರ ಶಬ್ದರೂಪತಯಾ ಸರ್ಪಣಶೀಲಾ ವಾಕ್ ಬೃಹತ್ಪ್ರಭೂತಂ ಯಥಾ ಭವತಿ ತಥಾ ಮಿಮಾಯ । ನಭಸಿ ಶಬ್ದಂ ಕರೋತಿ । ಸೈಷಾ ಸೂರ್ಯಸ್ಯ ದುಹಿತಾ ವಾಗ್ದೇವತಾ ದೇವೇ-ಷ್ವಿಂದ್ರಾದಿಷ್ವಜುರ್ಯಂ ಕ್ಷಯರಹಿತಮಮೃತಮಮೃತಲಕ್ಷಣಂ ಶ್ರವೋಽನ್ನಮಾ ತತಾನ । ಸಮಂತಾ-ತ್ಸ್ವಾಹಾಕಾರವಾಚಂ ತನೋತಿ ॥ ಜಮದಗ್ನಿದತ್ತಾ । ದಾಞ್ ದಾನ ಇತ್ಯಸ್ಯನಿಷ್ಠಾಯಾಂ ದೋ ದದ್ಘೋಃ-

CC-0. Jangamwadi Math Collection. Digitized by eGangotri

ಇದಕ್ಕೆ ನಿರ್ವಚನವು—

> ಕಿಂ ತೇ ಕುರ್ವಂತಿ ಕೀಕಟೇಷು ಗಾವಃ । ಕೀಕಟಾ ನಾಮ ದೇಶೋಽನಾರ್ಯನಿವಾಸಃ । ಕೀಕಟಾಃ ಕಿಂಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ । ನೈವ ಚಾಶಿರಂ ದುಹ್ರೇ ನ ತಪಂತಿ ಘರ್ಮಂ ಹರ್ಮ್ಯಮಾ ಹರ ನಃ ಪ್ರಮಗಂದಸ್ಯ ಧನಾನಿ । ಮಗಂದಃ ಕುಸೀದೀ । ಮಾಂಗದೋ ಮಾಮಾಗಮಿಷ್ಯತೀತಿ ಚ ದದಾತಿ ತದಪತ್ಯಂ ಪ್ರಮಗಂದೋಽತ್ಯಂತಕುಸೀದಿಕುಲೀನಃ । ಪ್ರಮದಕೋ ವಾ ಯೋಽಯಮೇವಾಸ್ತಿ ಲೋಕೋ ನ ಪರ ಇತಿ ಪ್ರೇಪ್ಸುಃ । ಪಂಡಕೋ ವಾ । ಪಂಡಕಃ ಪಂಡಗಃ ಪ್ರಾರ್ದಕೋ ವಾ ಪ್ರಾರ್ದಯತ್ಯಾಂಡಾವಾಂಡಾವಾಣೀ ಇವ ವ್ರೀಡಯತಿ ತಸ್ತಂಭೇ । ನೈಚಾಶಾಖಂ ನೀಚಾಶಾಖೋ ನೀಚೈಃ ಶಾಖಃ । ಶಾಖಾಃ ಶಕ್ನೋತೇಃ । ಆಣಿರರಣಾತ್ । ತನ್ನೋ ಮಘವನ್ರಂಧಯೇತಿ ರಧ್ಯತಿರ್ವಶಗಮನೇ ॥
>
> (ನಿ. ೬-೩೨)

ಎಂದರೆ— ಕೀಕಟಾ ಎಂಬ ಶಬ್ದಕ್ಕೆ ಅನಾರ್ಯರಾದ ಈ ದೇಶದ ಪೂರ್ವವಾಸಿಗಳು ವಾಸಮಾಡುವ ದೇಶವೆಂದು ಹೆಸರು. ಈ ಅನಾರ್ಯ ನಿವಾಸಿಗಳಿಗೆ ಕೀಕಟಾಃ ಎಂಬ ಹೆಸರು ಹೇಗೆ ಬಂದಿತು ಎಂದರೆ ಕಿಂ ಕೃತಾಃ ಕಿಂ ಕ್ರಿಯಾಭಿರಿತಿ ಪ್ರೇಪ್ಸಾ ವಾ— ಯಜ್ಞಾದಿ ಕರ್ಮಗಳಿಂದ ಏನು ಪ್ರಯೋಜನ? ಎಂದು ಸತ್ಕರ್ಮಗಳನ್ನು ಅಲಕ್ಷ್ಯ ಮಾಡಿ ತಿರಸ್ಕಾರಭಾವದಿಂದ ಮಾತನಾಡುತ್ತಾ ಇರುವ ನಾಸ್ತಿಕರಿಗೆ ಕಿಂಕೃತಾಃ ಅಥವಾ ಕೀಕಟಾಃ ಎಂಬ ಹೆಸರು ಬಂದಿದೆ. ಇಂಥವರಲ್ಲಿರುವ ಗೋವುಗಳ ಹಾಲು ಸದ್ವಿನಿಯೋಗವಾಗುವುದಿಲ್ಲ ಏಕೆಂದರೆ, ಇವರು ಯಜ್ಞಾದಿಗಳನ್ನು ಮಾಡದೇ ಇರುವುದರಿಂದ ಇವರ ಗೋವುಗಳ ಹಾಲೂ ಯಜ್ಞಾದಿಗಳಿಗೆ ಉಪಯೋಗವಾಗುವುದಿಲ್ಲ. ಆಶಿರದ್ರವ್ಯ ರೂಪವಾಗಿ ಸೋಮರಸಕ್ಕೆ ಸೇರಿಸಬೇಕಾದ ಹಾಲಿಗಾಗಿಯೂ ಉಪಯೋಗವಿಲ್ಲ ಇದಲ್ಲದೆ ಹಾಲನ್ನು ಕಾಯಿಸಿ ಅದರಿಂದ ಉತ್ಪನ್ನವಾಗಬಹುದಾದ ಪಯೋವಿಕಾರಗಳಿಗೂ ಎಂದರೆ ಮೊಸರು, ತುಪ್ಪ ಮೊದಲಾದುವುಗಳೂ ಯಜ್ಞಾರ್ಹವಾಗುವುದಿಲ್ಲ. ಆದುದರಿಂದ ಈ ಅನಾಗರಿಕ ಜನರಲ್ಲಿರುವ ಗೋವುಗಳನ್ನು ನಮಗೆ ತಂದೊದಗಿಸು. ನಮಗೆ ಆ ಗೋವುಗಳು ದೊರೆತಲ್ಲಿ ನಾವು ಯಜ್ಞಾದಿಗಳನ್ನು ಮಾಡಿ ಆ ಮೂಲಕ ಗೋವುಗಳ ಹಾಲು, ಮೊಸರು, ಘೃತ ಮೊದಲಾದುವುಗಳನ್ನು ಇಂದ್ರಾದಿ ದೇವತೆಗಳಿಗೆ ಅರ್ಪಿಸುತ್ತೇವೆ. ಅದಕ್ಕಾಗಿ ಅವರ ಗೋವುಗಳನ್ನೂ, ಧನ ವನ್ನೂ ನಮಗೆ ಕೊಡು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಇದಲ್ಲದೆ ಮಗಂದಃ ಎಂದರೆ ಕುಸೀದೀ— ದ್ರವ್ಯವನ್ನು ಇತರರಿಗೆ ಸಾಲವಾಗಿ ಕೊಟ್ಟು ಕೆಲವುಕಾಲದ ಮೇಲೆ ಆ ಹಣವನ್ನೂ ಅದರ ಬಡ್ಡಿಯನ್ನೂ ತೆಗೆದು ಕೊಳ್ಳುವುದೇ ವೃತ್ತಿಯಾಗಿ ಮಾಡಿಕೊಂಡಿರುವ ವ್ಯಾಪಾರಿಯು. ಮಗಂದ ಶಬ್ದಕ್ಕೆ ಪ್ರ ಎಂಬ ಉಪಸರ್ಗ ಸೇರಿರು ವುದರಿಂದ ಈ ಪ್ರಮಗಂದ ಶಬ್ದಕ್ಕೆ ಮಗಂದ ಅಥವಾ ಕುಸೀದಕುಲದವನೆಂದು ಅರ್ಥವು. ಅಥವಾ ಪ್ರ ಎಂಬ ಉಪಸರ್ಗಕ್ಕೆ ಪ್ರಕರ್ಷವಾಗಿ, ಎಂದರೆ ವಿಶೇಷವಾಗಿ ಅತ್ಯಂತ ಕೆಟ್ಟ ಕುಲದಲ್ಲಿ ಹುಟ್ಟಿದವನೆಂದು ಅರ್ಥವು ಇವನು ಬಡ್ಡಿಯನ್ನು ಒಂದಕ್ಕೆರಡಾಗಿ ತೆಗೆದುಕೊಂಡು ಅನ್ಯಾಯವಾಗಿ ಹಣಸಂಪಾದನೆಮಾಡುವುದರಿಂದ ಅವನ ಧನವನ್ನೂ ನಮಗೆ ತಂದೊದಗಿಸು. ಅಥವಾ ಪ್ರಮಗಂದಶಬ್ದಕ್ಕೆ ಪ್ರಮದಕ ಎಂದಾದರೂ ಅರ್ಥವಾಗಬಹುದು ಪ್ರಮದಕ ಎಂದರೆ ನಮಗೆ ಕಣ್ಣಿಗೆ ಕಾಣುತ್ತಿರುವ ಈ ಲೋಕಹೊರತು ಬೇರೆ ಸ್ವರ್ಗಾದಿಲೋಕಗಳಿಲ್ಲ. ಆದ್ದರಿಂದ ಪುಣ್ಯಪಾಪ ಗಳಿಗೆ ಏನೂ ಅರ್ಥವಿಲ್ಲ. ಈಗ ನಾವು ಸುಖಪಟ್ಟದ್ದೇ ಬಂತು. ಏತಕ್ಕಾಗಿ ಕಷ್ಟಪಡಬೇಕು? ಬೇಕಾದಹಾಗೆ ತಿಂದು ಉಂಡು ಸುಖವಾಗಿರುವುದೇ ಒಳ್ಳೆಯದು. ಕಷ್ಟಸಾಧ್ಯವಾದ ಯಜ್ಞಯಾಗಾದಿಗಳಿಂದ ಏನೂ ಪ್ರಯೋಜನ

CC-0. Jangamwadi Math Collection. Digitized by eGangotri

ವಿಲ್ಲ ಎಂದು ಹೇಳುವ ನಾಸ್ತಿಕನು. ಅಥವಾ ಪ್ರಮಗಂದಶಬ್ದಕ್ಕೆ ಪಂಡಕಃ ಅಥವಾ ಪಂಡಗಃ ಅಥವಾ ಪ್ರಾರ್ದಕ ನೆಂದೂ ಅರ್ಥವಾಗಬಹುದು. ಪಂಡಕ ಅಥವಾ ಪಂಡಗನೆಂದರೆ ನಪುಂಸಕನು, ಸ್ತ್ರೀಯರಂತೆ ಕೈಲಾಗದವನು. ಪ್ರಾರ್ದಕನೆಂದರೆ ವ್ಯವಹಾರಾದಿಗಳಲ್ಲಿ ಸ್ತ್ರೀಯರಂತೆ ವರ್ತಿಸುವವನು, ಹೆಣ್ಣಿಗನು, ನಿರ್ಲಜ್ಜನು. ಇಂತವರ ಧನ ವನ್ನೂ ನಮಗೆ ತಂದೊದಗಿಸಬೇಕೆಂದು ಇಂದ್ರನನ್ನು ಪ್ರಾರ್ಥಿಸಿದೆ. ಮತ್ತು ಶೂದ್ರಾದಿನೀಚಜಾತಿಯವರಲ್ಲಿ ಉತ್ತಮ ಕುಲದವರಿಂದ ಉತ್ಪನ್ನರಾದ ಜನರಿಗೆ ನೀಚಶಾಖೆಯವರೆಂದು ಹೆಸರು. ಇವರು ಪತಿತರಾಗಿ ಯಜ್ಞಾದಿಕರ್ಮಗಳಿಂದ ಬಹಿಷ್ಕೃತರಾಗಿರುವುದರಿಂದ ಇವರ ಧನವು ಸತ್ಕರ್ಮಗಳಿಗೆ ಉಪಯೋಗವಾಗುವುದಿಲ್ಲ. ಆದುದರಿಂದ ನೈಚಾ-ಶಾಖಂ ಧನಂ ಎಂದರೆ ಇಂತಹ ನೀಚಕುಲದ ಜನರಲ್ಲಿರುವ ಧನವನ್ನು ನಮಗೆ ತಂದೊದಗಿಸಬೇಕೆಂದು ಪ್ರಾರ್ಥಿಸಿದೆ. ಇಲ್ಲಿ ರಧ್ಯತಿಧಾತುವಿಗೆ ವಶಮಾಡು ಎಂಬರ್ಥವಿರುವುದರಿಂದ ಈ ಋಕ್ಕಿನಲ್ಲಿರುವ ಮಘವನ್ ರಂಧಯ ಎಂಬ ಶಬ್ದಗಳಿಗೆ ಎಲೈ ಇಂದ್ರನೇ (ಮೇಲೆ ಹೇಳಿದ ಜನರ ಧನವನ್ನು) ನಮ್ಮ ವಶವಾಗುವಂತೆ ಮಾಡು ಎಂದಭಿಪ್ರಾಯವು.



ಸಂಹಿತಾಪಾಠಃ

ಸಸರ್ಪರೀರಮತಿಂ ಬಾಧಮಾನಾ ಬೃಹನ್ಮಿಮಾಯ ಜಮದಗ್ನಿದತ್ತಾ ।
ಆ ಸೂರ್ಯಸ್ಯ ದುಹಿತಾ ತತಾನ ಶ್ರವೋ ದೇವೇಷ್ವಮೃತಮಜುರ್ಯಂ ॥

ಪದಪಾಠಃ

ಸಸರ್ಪರೀಃ । ಅಮತಿಂ । ಬಾಧಮಾನಾ । ಬೃಹತ್ । ಮಿಮಾಯ । ಜಮದಗ್ನಿಽದತ್ತಾ ।
ಆ । ಸೂರ್ಯಸ್ಯ । ದುಹಿತಾ । ತತಾನ । ಶ್ರವಃ । ದೇವೇಷು । ಅಮೃತಂ । ಅಜುರ್ಯಂ ॥ ೧೫ ॥

ಸಾಯಣಭಾಷ್ಯಂ

ಸಸರ್ಪರೀದೃಚೇ ಪ್ರಾಹುರಿತಿಹಾಸಂ ಪುರಾವಿದಃ । ಸೌದಾಸನೃಪಯಜ್ಞೇ ವೈ ವಸಿಷ್ಠಾತ್ಮಜ-ಶಕ್ತಿನಾ । ವಿಶ್ವಾಮಿತ್ರಸ್ಯಾಭಿಭೂತಂ ಬಲಂ ವಾಕ್ ಚ ಸಮಂತತಃ । ವಾಸಿಷ್ಠೇನಾಭಿಭೂತಃ ಸ ಹ್ಯವಾ-ಸೀದಥ ಗಾಧಿಜಃ । ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ । ಸೂರ್ಯವೇಶ್ಮನ ಆಹೃತ್ಯ ದದುರ್ವೈ ಜಮದಗ್ನಯಃ । ಕುಶಿಕಾನಾಂ ಮತಿಃ ಸಾ ವಾಗಮತಿಂ ತಾಮಪಾನುದತ್ ॥

ಜಮದಗ್ನಿದತ್ತಾ ಜಮದಗ್ನಿಭಿಃ ಪ್ರಜ್ವಲಿತಾಗ್ನಿಭಿರ್ಋಷಿಭಿರಸ್ಮಭ್ಯಂ ದತ್ತಾಮತಿಮಜ್ಞಾನಂ ಬಾಧಮಾನಾ ಸಸರ್ಪರೀಃ ಸರ್ವತ್ರ ಶಬ್ದರೂಪತಯಾ ಸರ್ಪಣಶೀಲಾ ವಾಕ್ ಬೃಹತ್ಪ್ರಭೂತಂ ಯಥಾ ಭವತಿ ತಥಾ ಮಿಮಾಯ । ನಭಸಿ ಶಬ್ದಂ ಕರೋತಿ । ಸೈಷಾ ಸೂರ್ಯಸ್ಯ ದುಹಿತಾ ವಾಗ್ದೇವತಾ ದೇವೇ-ಷ್ವಿಂದ್ರಾದಿಷ್ವಜುರ್ಯಂ ಕ್ಷಯರಹಿತಮಮೃತಮಮೃತಲಕ್ಷಣಂ ಶ್ರವೋಽನ್ನಮಾ ತತಾನ । ಸಮಂತಾ-ತ್ಸ್ವಾಹಾಕಾರವಾಚಂ ತನೋತಿ ॥ ಜಮದಗ್ನಿದತ್ತಾ । ದಾಙ್ ದಾನ ಇತ್ಯಸ್ಯನಿಷ್ಠಾಯಾಂ ದೋ ದದ್ಘೋ-

CC-0. Jangamwadi Math Collection. Digitized by eGangotri

**ರಿತಿ ಪದಾದೇಶಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ । ಅಜುರ್ಯಂ । ಜ್ಯಾ ವಯೋ-ಹಾನೌ । ಋಹಲೋರ್ಣ್ಯತ್ । ಬಹುಲಂ ಛಂದಸೀತ್ಯುತ್ವಂ । ನಞ್ಸುಭ್ಯಾಮಿತ್ಯಂತೋದಾತ್ತತ್ವಂ ॥**

ಪ್ರತಿಪದಾರ್ಥ

**ಜಮದಗ್ನಿದತ್ತಾ**—ಜಮದಗ್ನಿ ಋಷಿಗಳಿಂದ ದತ್ತಳಾದವಳೂ । **ಅಮತಿಂ**—ಅಜ್ಞಾನವನ್ನು । **ಬಾಧಮಾನಾ**—ನಾಶಮಾಡುವವಳೂ । **ಸಸರ್ಪರೀಃ**—ಶಬ್ದರೂಪದಿಂದ ಸರ್ವತ್ರ ವ್ಯಾಪಿಸುವವಳೂ । **ಬೃಹತ್**—ಪ್ರಭೂತವಾಗಿ । **ಮಿಮಾಯ**—(ಅಂತರಿಕ್ಷದಲ್ಲಿ) ಶಬ್ದಮಾಡುವವಳೂ । **ಸೂರ್ಯಸ್ಯ ದುಹಿತಾ**—ಸೂರ್ಯನ ಪುತ್ರಿಯೂ ಆದ ವಾಗ್ದೇವತೆಯು । **ದೇವೇಷು**—ಇಂದ್ರಾದಿ ದೇವತೆಗಳಲ್ಲಿ । **ಅಜುರ್ಯಂ**—ಕ್ಷಯರಹಿತವಾದುದೂ । **ಅಮೃತಂ**—ನಿತ್ಯವಾದುದೂ ಆದ । **ಶ್ರವಃ**—ಅನ್ನವನ್ನು । **ಆ ತತಾನ**—ವಿಸ್ತೃತವಾಗಿ ಹರಡಿದಳು.

ಭಾವಾರ್ಥ

ಜಮದಗ್ನಿಋಷಿಗಳಿಂದ ದತ್ತಳಾದವಳೂ, ಅಜ್ಞಾನವನ್ನು ನಾಶಮಾಡುವವಳೂ, ಶಬ್ದರೂಪದಿಂದ ಸರ್ವತ್ರ ವ್ಯಾಪಿಸುವವಳೂ, ಅಂತರಿಕ್ಷದಲ್ಲಿ ಪ್ರಭೂತವಾಗಿ ಶಬ್ದಮಾಡುವವಳೂ, ಸೂರ್ಯನ ಪುತ್ರಿಯೂ ಆದ ವಾಗ್ದೇವತೆಯು ಇಂದ್ರಾದಿ ದೇವತೆಗಳಲ್ಲಿ ಕ್ಷಯರಹಿತವಾದುದೂ ನಿತ್ಯವಾದುದೂ ಆದ ಅನ್ನವನ್ನು ವಿಸ್ತೃತವಾಗಿ ಹರಡಿದಳು.

English Translation

The daughter of Surya given by Jamadagni gliding everywhere and dissipating ignorance, has emitted a mighty (sound), and has diffused ambrosial imperishable food amongst the gods.

ವಿಶೇಷವಿಷಯಗಳು

**ಸಸರ್ಪರೀಃ**—ಎಂಬ ಈ ಋಕ್ಕು ಮತ್ತು ಮುಂದಿನ ಋಕ್ಕು ಇವುಗಳ ವಿಷಯದಲ್ಲಿ ಹಿಂದಿನವರು ಒಂದು ಇತಿಹಾಸವನ್ನು ಹೇಳುವರು—

**ಸಸರ್ಪರೀದ್ವ್ಯೃಚೇ ಪ್ರಾಹುರಿತಿಹಾಸಂ ಪುರಾವಿದಃ ।**
**ಸೌದಾಸನೃಪಯಜ್ಞೇ ವೈ ವಸಿಷ್ಠಾತ್ಮಜಶಕ್ತಿನಾ ॥**
**ವಿಶ್ವಾಮಿತ್ರಸ್ಯಾಭಿಭೂತಂ ಬಲಂ ವಾಕ್ಚ ಸಮಂತತಃ ।**
**ವಾಸಿಷ್ಠೇನಾಭಿಭೂತಃ ಸ ಹ್ಯವಾಸೀದಥ ಗಾಧಿಜಃ ।**
**ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ ।**
**ಸೂರ್ಯವೇಶ್ಮನ ಆಹೃತ್ಯ ದದುರ್ವೈ ಜಮದಗ್ನಯಃ ।**
**ಕುಶಿಕಾನಾಂ ಮತಿಃ ಸಾ ವಾಗಮತಿಂ ತಾಮಪಾನುದತ್ ॥**

ಹಿಂದಿನವರು ಈ ಋಕ್ಕುಗಳ ವಿಷಯದಲ್ಲಿ ಒಂದು ಇತಿಹಾಸವನ್ನು ಹೇಳುವರು. ಪೂರ್ವದಲ್ಲಿ ವಿಶ್ವಾಮಿತ್ರಋಷಿಯು ಸುದಾಸನೆಂಬ ರಾಜನ ಯಜ್ಞವನ್ನು ನೆರವೇರಿಸುತ್ತಿದ್ದಾಗ ವಸಿಷ್ಠಪುತ್ರನಾದ ಶಕ್ತಿ ಎಂಬುವನು ವಿಶ್ವಾಮಿತ್ರನ ಬಲ

CC-0. Jangamwadi Math Collection. Digitized by eGangotri

ವನ್ನೂ ಮಾತನಾಡುವ ಶಕ್ತಿಯನ್ನೂ ಸ್ತಂಭನಮಾಡಿದನು. ಇದರಿಂದ ಗಾಧಿಪುತ್ರನಾದ ವಿಶ್ವಾಮಿತ್ರನು ಸತ್ವಹೀನ ನಾಗಿಯೂ ಅಜ್ಞಾನಾವೃತನಾಗಿಯೂ ಆಗಿ ಮಂತ್ರೋಚ್ಚಾರಣಾದಿಗಳನ್ನು ಮಾಡಲಾರದೆ ಸುಮ್ಮನಿರಬೇಕಾಯಿತು. ಆಗ ಜಮದಗ್ನಿಗಳೆಂಬ ವೃದ್ಧಋಷಿಗಳು ಸೂರ್ಯಗೃಹದಿಂದ (ಸೂರ್ಯಮಂಡಲದಿಂದ) ಬ್ರಹ್ಮತೇಜೋಯುತವೂ ಸೂರ್ಯನ ಪುತ್ರಿಯೆನಿಸಿದುದೂ ಆದ ವಾಕ್ಕನ್ನು (ಮಾತನಾಡುವ ಶಕ್ತಿಯನ್ನು) ತಂದು ವಿಶ್ವಾಮಿತ್ರಋಷಿಗೆ ಕೊಟ್ಟರು. ಆದರಿಂದ ವಿಶ್ವಾಮಿತ್ರನೂ, ಅವನ ಸಂಬಂಧಿಗಳಾದ ಕುಶಿಕರೂ ತಮ್ಮನ್ನು ಆವರಿಸಿದ್ದ ಅಜ್ಞಾನದಿಂದ ನಿವೃತ್ತರಾಗಿ ಉತ್ತಮವಾದ ಬುದ್ಧಿಯನ್ನೂ ಜ್ಞಾನವನ್ನೂ ಮಾತನಾಡುವ ಅಥವಾ ಮಂತ್ರಪಠನಶಕ್ತಿಯನ್ನೂ ಮತ್ತೆ ಪಡೆದರು ಎಂಬ ವಿಷಯವು ಈ ಋಕ್ಕಿನಲ್ಲಿಯೂ ಮುಂದಿನ ಋಕ್ಕಿನಲ್ಲಿಯೂ ವರ್ಣಿತವಾಗಿದೆ.

**ಜಮದಗ್ನಿದತ್ತಾ**—ಜಮದಗ್ನಿಭಿಃ ಪ್ರಜ್ವಲಿತಾಗ್ನಿಭಿರ್ಋಷಿಭಿಃ । ಯಜ್ಞದಲ್ಲಿ ಅಗ್ನಿಯು ಆರಿಹೋಗದಂತೆ ಯಾವಾಗಲೂ ಚೆನ್ನಾಗಿ ಉರಿಯುತ್ತಿರುವಂತೆ ನೋಡಿಕೊಳ್ಳುತ್ತಿರುವ ಋಷಿಗಳು ಎಂದು ಜಮದಗ್ನಿಶಬ್ದಕ್ಕೆ ಭಾಷ್ಯಕಾರರ ವಿವರಣೆ ಇದೆ.

ಯಾಸ್ಕರು ಜಮದಗ್ನಿಶಬ್ದಕ್ಕೆ—**ಜಮದಗ್ನಯಃ ಪ್ರಜಮಿತಾಗ್ನಯೋ ವಾ ಪ್ರಜ್ವಲಿತಾಗ್ನಯೋ ವಾ ತೈರಭಿಹುತೋ ಭವತಿ** (ನಿ. ೭-೨೪) ಎಂದರೆ ಜಮದಗ್ನಿಶಬ್ದಕ್ಕೆ ಬಹಳವಾದ ಅಗ್ನಿಯುಳ್ಳವರೆಂದೂ ಅಥವಾ ಅಗ್ನಿಯನ್ನು ಹೊತ್ತಿಸಿ ಅವು ಚೆನ್ನಾಗಿ ಉರಿಯುವಂತೆ ಮಾಡುವವರೆಂದೂ ಅಥವಾ ಈ ಯಜ್ಞಕರ್ಮದಲ್ಲಿ ಚೆನ್ನಾಗಿ ಪ್ರಜ್ವಲಿಸುತ್ತಿರು ಎಂದು ಅಗ್ನಿಯನ್ನು ಪ್ರಾರ್ಥಿಸುವವರೆಂದೂ ಅರ್ಥವಾಗುವುದು ಎಂದು ನಿರ್ವಚನವನ್ನು ಹೇಳಿದ್ದಾರೆ.

**ಸೂರ್ಯಸ್ಯ ದುಹಿತಾ**—ವಾಗ್ದೇವತಾ । ಸೂರ್ಯನ ಪುತ್ರಿಯಾದ ವಾಗ್ದೇವತೆಯೆಂದು ಭಾಷ್ಯಕಾರರು ಅರ್ಥವಿವರಣೆಮಾಡಿರುವರು.

**ಸಸರ್ಪರೀಃ ಅಮತಿಂ ಬಾಧಮಾನಾ ಜಮದಗ್ನಿದತ್ತಾ ಸೂರ್ಯಸ್ಯ ದುಹಿತಾ ಬೃಹತ್ ಮಿಮಾಯ ದೇವೇಷು ಅಜುರ್ಯಂ ಅಮೃತಂ ಆ ತತಾನ**—ಜಮದಗ್ನಿಋಷಿಗಳು ತಂದ ಸರ್ವತ್ರವ್ಯಾಪ್ತಳಾದ ಸೂರ್ಯಪುತ್ರಿಯಾದ ವಾಗ್ದೇವತೆಯು ವಿಶ್ವಾಮಿತ್ರಾದಿಗಳ ಅಜ್ಞಾನವನ್ನು ಹೋಗಲಾಡಿಸಿ ಅಂತರಿಕ್ಷದಲ್ಲಿ ಶಬ್ದಮಾಡಿದಳು. ಎಂದರೆ ಸ್ವಾಹಾಕಾರ ರೂಪವಾದ ವಾಕ್ಕನ್ನುಚ್ಚರಿಸಿದಳು ಮತ್ತು ವಿಶ್ವಾಮಿತ್ರಾದಿಗಳಿಗೆ ಇಂದ್ರಾದಿ ದೇವತೆಗಳಲ್ಲಿದ್ದ ಕ್ಷಯರಹಿತವಾದ ಅಮೃತರೂಪವಾದ ಅನ್ನವನ್ನೂ ತಂದೊದಗಿಸಿದಳು ಎಂದು ಮುಖ್ಯಾಭಿಪ್ರಾಯವು.

———: o :———

ಸಂಹಿತಾಪಾಠಃ

**ಸಸರ್ಪರೀರಭರತ್ತೂಯಮೇಭ್ಯೋಽಧಿ ಶ್ರವಃ ಪಾಂಚಜನ್ಯಾಸು ಕೃಷ್ಟಿಷು।**

**ಸಾ ಪಕ್ಷ್ಯಾ೩ ನವ್ಯಮಾಯುರ್ದಧಾನಾ ಯಾಂ ಮೇ ಪಲಸ್ತಿಜಮದಗ್ನಯೋ ದದುಃ ॥ ೧೬ ॥**

CC-0. Jangamwadi Math Collection. Digitized by eGangotri

ಪದಪಾಠಃ

ಸಸರ್ಪರೀಃ । ಅಭರತ್ । ತೂಯಂ । ಏಭ್ಯಃ । ಅಧಿ । ಶ್ರವಃ । ಪಾಂಚಽಜನ್ಯಾಸು । ಕೃಷ್ಟಿಷು ।

ಸಾ । ಪಕ್ಷ್ಯಾ । ನವ್ಯಂ । ಆಯುಃ । ದಧಾನಾ । ಯಾಂ । ಮೇ । ಪಲಸ್ತಿಽಜಮದಗ್ನಯಃ । ದದುಃ ॥ ೧೬ ॥

ಸಾಯಣಭಾಷ್ಯಂ

ಸಸರ್ಪರೀಃ ಸರ್ವತ್ರ ಗದ್ಯಪದ್ಯಾತ್ಮಕತ್ವೇನ ಸರ್ಪಣಶೀಲಾ ವಾಗ್ದೇವತಾ ಪಾಂಚಜನ್ಯಾಸು ಕೃಷ್ಟಿಷು। ನಿಷಾದಪಂಚಮಾಶ್ಚತ್ವಾರೋ ವರ್ಣಾಃ ಪಂಚಜನಾಃ। ತತ್ಸಂಬಂಧಿನೀಷು ಪ್ರಜಾಸು ಯಚ್ಛ್ರವೋಽನ್ನಂ ವಿದ್ಯತೇ ತನ್ನೋಽಸ್ಮಭ್ಯಮಧಿ ಅಧಿಕಂ ಯಥಾ ಭವತಿ ತಥಾ ತೂಯಂ ಕ್ಷಿಪ್ರಮಭರತ್।ಭರತು। ಸಂಪಾದಯತು। ಪಲಸ್ತಿಜಮದಗ್ನಯಃ ಪಲಸ್ತಯಃ ಪಲಿತಾ ದೀರ್ಘಾಯುಷೋ ಜಮದಗ್ನಯೋ ಮುನಯೋ ಯಾಂ ವಾಚಂ ಸೂರ್ಯಾದಾಹೃತ್ಯ ಮೇ ಮಹ್ಯಂ ದದುರದಧುಃ ಪಕ್ಷ್ಯಾ ಪಕ್ಷಸ್ಯಪಕ್ಷಾದಿನಿರ್ವಾಹಕಸ್ಯ ಸೂರ್ಯಸ್ಯ ದುಹಿತಾ ಸಾ ವಾಕ್ ನವ್ಯಂ ನವತರಮಾಯುರನ್ನಂ ಜೀವನಂ ವಾ ದಧಾನಾ ಮಮ ಕುರ್ವಾಣಾ ಭವತು ॥ ಪಾಂಚಜನ್ಯಾಸು । ಬಹಿರ್ದೇವಪಂಚಜನೇಭ್ಯಶ್ಚೇತಿ ವಕ್ತವ್ಯಮಿತಿ ಞ್ಯಪ್ರತ್ಯಯಃ। ಞಿತ್ತ್ವಾದಾದ್ಯುದಾತ್ತಃ। ಪಕ್ಷ್ಯಾ । ಪಕ್ಷೇ ಭವಾ । ದಿಗಾದಿತ್ವಾದ್ಯತ್ । ತಿತ್ಸ್ವರಿತಃ । ನವ್ಯಂ । ನವಶಬ್ದಾದ್ವಸ್ವಾದಿತ್ವಾತ್ಸ್ವಾರ್ಥಿಕೋ ಯತ್ । ಪಲಸ್ತಿಜಮದಗ್ನಯಃ ಪಲಸ್ತಯೋ ಜಮದಗ್ನಯಃ । ಕರ್ಮಧಾರಯ ಸಮಾಸಃ। ಸಮಾಸಸ್ವರಃ ॥

ಪ್ರತಿಪದಾರ್ಥ

ಸಸರ್ಪರೀಃ—ಗದ್ಯಪದ್ಯಾತ್ಮಕವಾದ ರೂಪಗಳಿಂದ ಸರ್ವತ್ರ ಪ್ರಸರಿಸತಕ್ಕ ವಾಗ್ದೇವತೆಯು । ಪಾಂಚಜನ್ಯಾಸು—ಪಂಚ ವಿಧವಾದ । ಕೃಷ್ಟಿಷು—ಪ್ರಜೆಗಳಿಗೆ । ಶ್ರವಃ—ಅನ್ನವನ್ನು । ಅಧಿ—ಪ್ರಭೂತವಾಗಿಯೂ । ತೂಯಂ—ಶೀಘ್ರವಾಗಿಯೂ । ಅಭರತ್—ಸಂಪಾದಿಸಿ ಕೊಡಲಿ । ಪಲಸ್ತಿಜಮದಗ್ನಯಃ—ವೃದ್ಧರಾದ ಜಮದಗ್ನಿಗಳು । ಯಾಂ—ಯಾವ ವಾಗ್ದೇವತೆಯನ್ನು । ಮೇ—ನನಗೆ । ದದುಃ—ಅರ್ಪಿಸಿದರೋ । ಪಕ್ಷ್ಯಾ ಸಾ—ಆ ಸೂರ್ಯದುಹಿತೆಯಾದ ವಾಗ್ದೇವಿಯು । ನವ್ಯಂ—ನವತರವಾದ । ಆಯುಃ—ಅನ್ನವನ್ನು ಅಥವಾ ಆಯುಸ್ಸನ್ನು । ದಧಾನಾ—ಕೊಡುತ್ತಾ ಬರಲಿ ।

ಭಾವಾರ್ಥ

ಗದ್ಯಪದ್ಯಾತ್ಮಕವಾದ ರೂಪಗಳಿಂದ ಸರ್ವತ್ರ ಪ್ರಸರಿಸತಕ್ಕ ವಾಗ್ದೇವತೆಯು ಪಂಚವಿಧವಾದ ಪ್ರಜೆಗಳಲ್ಲಿ ಅನ್ನವನ್ನು ಪ್ರಭೂತವಾಗಿಯೂ ಶೀಘ್ರವಾಗಿಯೂ ಸಂಪಾದಿಸಿಕೊಡಲಿ. ವೃದ್ಧರಾದ ಜಮದಗ್ನಿಗಳು ಯಾವ ವಾಗ್ದೇವತೆಯನ್ನು ನನಗೆ ಅರ್ಪಿಸಿದರೋ, ಸೂರ್ಯದುಹಿತೆಯಾದ ಆ ವಾಗ್ದೇವತೆಯು ನವತರವಾದ ಆಯುಸ್ಸನ್ನು ಕೊಡುತ್ತಾ ಬರಲಿ.

CC-0. Jangamwadi Math Collection. Digitized by eGangotri

English Translation

May she, gilding everywhere, quickly bring us food (suited) to the five races of men: may she, the daughter of the sun whom the grey-haired Jamadagnis gave to me, (be) the bestower of new life.

ವಿಶೇಷವಿಷಯಗಳು

ಹಿಂದಿನ ಋಕ್ಕಿನಲ್ಲಿ ವಾಗ್ದೇವತೆಯು ಅನುಗ್ರಹಮಾಡಿಕೊಟ್ಟ ಅನ್ನಾದಿಗಳ ವಿಷಯದಲ್ಲಿ ವಿಶ್ವಾಮಿತ್ರನು ತನ್ನ ಕೃತಜ್ಞತೆಯನ್ನು ಸೂಚಿಸಿ ವಾಗ್ದೇವತೆಯನ್ನು ಈ ಋಕ್ಕಿನಲ್ಲಿ ಪ್ರಾರ್ಥಿಸಿದಾನೆ.

ಪಂಚಜನ್ಯಾಸು ಕೃಷ್ಟಿಷು-ಕೃಷ್ಟಯಃ ಎಂಬ ಶಬ್ದವು ಮನುಷ್ಯಾಃ ನರಾಃ ಮೊದಲಾದ ಇಪ್ಪತ್ತೈದು ಮನುಷ್ಯ ವಾಚಕನಾಮಗಳ ಮಧ್ಯದಲ್ಲಿ ಪಠಿತವಾಗಿದೆ (ನಿ. ೩-೭). **ಪಂಚ ಕೃಷ್ಟೀನಾಂ** ಎಂದರೆ **ಪಂಚ ಜನಾನಾಂ** ಎಂದರ್ಥವು. ಇದಕ್ಕೆ ಭಾಷ್ಯಕಾರರು **ನಿಷಾದಪಂಚಮಾನಾಂ** ಎಂದೂ, ಸ್ಕಂದಸ್ವಾಮಿಯು **ಕ್ಷಿತೀನಾಂ ಮನುಷ್ಯಜಾತೀನಾಂ ಗಂಧರ್ವಾಃ ಪಿತರೋ ದೇವಾ ಇತ್ಯೇತಾಸಾಂ** ಎಂದೂ ವೆಂಕಟಮಾಧವರು—**ಮನುಷ್ಯಾಣಾಂ ಪಂಚಾನಾಂ ಕ್ಷಿತೀನಾಂ ನಿವಸತಾಂ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತಿ ಪಂಚತ್ವಂ** ಎಂದೂ ಅರ್ಥವಿವರಣೆಮಾಡಿದಾರೆ. ಸಾಯಣರ ಅಭಿಪ್ರಾಯದಂತೆ ಕ್ಷಿತೀನಾಂ ಎಂದರೆ ಭೂಮಿಯಲ್ಲಿ ವಾಸಮಾಡಲು ಯೋಗ್ಯರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ ಎಂಬ ಐದು ಜಾತಿಯ ಜನರೆಂದು ಅರ್ಥವಾಗುವುದು. ನಿಷಾದರೆಂದರೆ ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲಿ ಸೇರದಿರುವ ಮತ್ತು ಮೃಗಗಳ ಬೇಟೆಯಿಂದಲೇ ಜೀವಿಸುವ ಜನರೆಂದರ್ಥವು. ಈ ದೇಶದ ಪೂರ್ವನಿವಾಸಿಗಳಾದ ಗೊಂಡರು, ಕೋಲರು, ಭಿಲ್ಲರು ಮೊದಲಾದವರು ಈ ಜಾತಿಗೆ ಸೇರಿದವರು. ಇವರು ಮಧ್ಯಪ್ರಾಂತ್ಯ ಮೊದಲಾದ ಕೆಲವು ಸ್ಥಳಗಳಲ್ಲಿ ಮಾತ್ರ ಈಗಲೂ ಬಹು ಅಲ್ಪಸಂಖ್ಯೆಯಲ್ಲಿ ವಾಸಿಸುತ್ತಿರುವರು. **ಪಂಚ ಜನಾಃ** ಮತ್ತು **ಪಂಚಕೃಷ್ಟೀಃ** ಎಂಬ ಶಬ್ದಗಳು ಋಗ್ವೇದದಲ್ಲಿ ಅನೇಕಕಡೆ ಇವೆ—

ಎಂದರೆ, ಪಂಚಜನರೆಂದರೆ, ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧ ಜನರೆಂದು ಕೆಲವರು ಹೇಳುವರು. ಬ್ರಾಹ್ಮಣಾದಿ ನಾಲ್ಕುವರ್ಣದವರೂ ನಿಷಾದ ಎಂಬ ಬೇಡರ ಜಾತಿಗೆ ಸೇರಿದ ಜನರೂ ಸೇರಿ ಐದು ವಿಧ ಜನರೆಂದು ಉಪಮನ್ಯು ಮುಂತಾದವರ ಮತವು. (ಇದನ್ನೇ ಸಾಯಣರು ಅನುಮೋದಿಸಿರುವರು). ನಿಷಾದರೆಂದರೆ ಪ್ರಾಣಿಗಳನ್ನು ಕೊಲ್ಲುವವರು ಅಥವಾ ಇವರಲ್ಲಿ ಪಾಪವು ತುಂಬಿರುವುದರಿಂದ ಇವರಿಗೆ ನಿಷಾದರೆಂದು ನೈರುಕ್ತಕಾರರು ಹೇಳುವರು. ಇದಲ್ಲದೆ ಆ ಕಾಲದಲ್ಲಿ ಐದು ಮುಖ್ಯವಾದ ಪಂಗಡಗಳು (tribes) ಇದ್ದಿರಬಹುದು. ಕವಿಯು ಈ ಅಭಿಪ್ರಾಯವನ್ನೇ ಇಟ್ಟುಕೊಂಡು **ಪಂಚ ಕ್ಷಿತೀನಾಂ** ಎಂದು ಹೇಳಿರಬಹುದು. ಹೇಗಾದರೂ ಈ ವಿಚಾರದಲ್ಲಿ ನಿರುಕ್ತಕಾರರಾದ ಯಾಸ್ಕರ ಕಾಲದಲ್ಲಿಯೂ ಸಹ ಅಭಿಪ್ರಾಯಭೇದವಿದ್ದಿತೆಂಬುವುದು ಸ್ಪಷ್ಟವಾಗಿದೆ.

೧ **ದೇವಾ ಮನುಷ್ಯಾಃ ಪಿತರಃ ಪಶವಃ ಪಕ್ಷಿಣಶ್ಚೇತಿ ಪಂಚ ಜನಾಃ** । ದೇವತೆಗಳು, ಮನುಷ್ಯರು, ಪಿತೃಗಳು, ಪಶುಗಳು ಮತ್ತು ಪಕ್ಷಿಗಳು ಎಂಬ ಐದು ವಿಧವೆಂದೂ, ಎರಡನೆಯದಾಗಿ,

CC-0. Jangamwadi Math Collection. Digitized by eGangotri

೨. ಚತ್ವಾರೋ ವರ್ಣಾಃ ನಿಷಾದಪಂಚಮಾಃ ಪಂಚ ಜನಾ ಇತ್ಯನ್ಯೇ—ನಿಷಾದರೊಡಗೂಡಿದ ನಾಲ್ಕುವರ್ಣದ ಜನರೆಂದು ಇನ್ನೊಂದು ವಿಧವಾಗಿಯೂ ವಿವರಿಸಿದಾರೆ. ಈ ಎರಡು ಅರ್ಥಗಳಿಗೂ ಶ್ರುತಿವಾಕ್ಯಗಳ ಆಧಾರಗಳನ್ನು ತೋರಿಸಬಹುದು. ಮೊದಲು ಕ್ಷಿತಿ ಶಬ್ದದ ನಿರ್ವಚನವನ್ನು ಪರಿಶೀಲಿಸಿ ಅನಂತರ ಪಂಚಕ್ಷಿತಿ ಯೆಂಬುದಕ್ಕೆ ಪ್ರಕೃತದಲ್ಲಿ ಯಾವ ಅರ್ಥವನ್ನು ಹೇಳಬಹುದೆಂದು ಅನಂತರ ವಿಮರ್ಶಿಸಬಹುದು.

ಕ್ಷಿತೀನಾಂ—ಕ್ಷಿಯಂತಿ ನಿವಸಂತಿ ಗಚ್ಛಂತಿ ವಾ ಕ್ಷಿತಯೋ ಮನುಷ್ಯಾಃ । ವಾಸಿಸುತ್ತಾರೆ ಅಥವಾ ಸಂಚರಿಸುತ್ತಾರೆ ಆದ್ದರಿಂದ ಮಾನವರಿಗೆ ಈ ವಿಶೇಷಣವಿದೆ ಎಂದು ಸಾಯಣರು ವಿವರಿಸಿದ್ದಾರೆ. ನಿರುಕ್ತಕಾರರು ಕ್ಷಿತಿ ಶಬ್ದವನ್ನು ನರಃ ಇತ್ಯಾದಿ ೨೫ ಮನುಷ್ಯನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೭)

ಅಗ್ನಿರ್ನೇತಾ ಭಗ ಇವ ಕ್ಷಿತೀನಾಂ ದೈವೀನಾಂ ದೇವ ಋತುಪಾ ಋತುವಾ ।
ಸ ವೃತ್ರಹಾ ಸನಯೋ ವಿಶ್ವವೇದಾಃ ಪರ್ಷದ್ವಿಶ್ವಾತಿ ದುರಿತಾ ಗೃಣಂತಂ ।

(ಋ ಸಂ ೩-೨೦-೪)

ಇತ್ಯಾದಿ ಋಕ್ಕುಗಳಲ್ಲಿ ಮಾನವರಿಗೂ, ದೇವಸಂಬಂಧಿಗಳಾದ ಪ್ರಜೆಗಳಿಗೂ ಇರುವ ವ್ಯತ್ಯಾಸವನ್ನು ತೋರಿಸುವಾಗ ಕ್ಷಿತಿಶಬ್ದದಿಂದ ಪೃಥ್ವಿಯ ಪ್ರಜೆಗಳಾದ ಮಾನವರೆಂದು ಸೂಚಿಸಿದೆ- ಆದರೆ ಪ್ರಕೃತವಾದ ಋಕ್ಕಿನಲ್ಲಿ ಪಾರ್ಥಿವರಾದ ಮಾನವರೇ ಎಂದು ನಿಷ್ಕೃಷ್ಟವಾಗಿ ಹೇಳುವಂತಿಲ್ಲ. ಏಕೆಂದರೆ ಇಂದ್ರನ ಐಶ್ವರ್ಯವು ಪೃಥಿವ್ಯಂತರಿಕ್ಷಗಳಲ್ಲೆಲ್ಲಾ ವ್ಯಾಪಿಸಿರುತ್ತದೆ.

ನ ಯಸ್ಯ ದೇವಾ ದೇವತಾ ನ ಮರ್ತಾ ಆಪಶ್ಚನ ಶವಸೋ ಅಂತಮಾಪುಃ ।
ಸ ಪ್ರರಿಕ್ವಾ ತ್ವಕ್ಷಸಾ ಕ್ಷ್ಮೋ ದಿವಶ್ಚ ಮರುತ್ವಾನ್ನೋ ಭವತ್ವಿಂದ್ರ ಊತೀ ।

(ಋ. ಸಂ. ೧-೧೦೦-೧೫)

ಇತ್ಯಾದಿ ಋಕ್ಕುಗಳಲ್ಲಿ ದಾನಾದಿಗುಣಗಳಿಂದ ಕೂಡಿ ದೇವತಾತ್ಮಕನಾದ ಇಂದ್ರನ ಶಕ್ತಿಯು ಲೋಕದ ಇತರ ಎಲ್ಲರ ಶಕ್ತಿಗಿಂತಲೂ ಮೀರಿದುದೆಂದೂ, ಅದರ ಅಂತವನ್ನು ದೇವತೆಗಳಾಗಲಿ, ಮಾನವರಾಗಲಿ ಪಡೆಯಲಾಗಲಿಲ್ಲವೆಂದೂ, ಮತ್ತು ಇಂದ್ರನು ಶತ್ರುನಾಶಕವಾದುದೂ ಪ್ರಭಾವಯುತವಾದುದೂ ಆದ ತನ್ನ ಶಕ್ತಿಯಿಂದ ಪೃಥಿವೀ ಮತ್ತು ಸ್ವರ್ಗ ಗಳೆರಡನ್ನೂ ಒಟ್ಟಿಗೆ ಪ್ರಕಾಶಿಸುವಂತೆ ಮಾಡುತ್ತಾನೆಂದೂ ವರ್ಣಿಸಿರುವುದರಿಂದಲೂ, ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇಂದ್ರನ ಐಶ್ವರ್ಯವು ಸರ್ವವ್ಯಾಪಿಯೆಂದು ವರ್ಣಿತವಾಗಿರುವುದರಿಂದಲೂ ಸಹ ಪಂಚಜನ್ಯಾಸು ಎನ್ನುವುದಕ್ಕೆ ಕೇವಲ ನಿಷಾದಪಂಚಮರಿಂದ ಕೂಡಿದ ವರ್ಗಚತುಷ್ಟಯವೆಂದು ಹೇಳಲಾಗುವುದಿಲ್ಲ. ಈವಿಷಯದಲ್ಲಿ ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೆ ಇತರರ ಅಭಿಪ್ರಾಯಗಳನ್ನು ಮಾತ್ರ ತಿಳಿಸಿರುವರು.

ಪಂಚಜನಾ "ಮಮ ಹೋತ್ರಂ ಜುಷಧ್ವಂ" ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀ-ತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ।

(ನಿ. ೩-೮)

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧವಾದ ಗುಂಪುಗಳೆಂದು ಕೆಲವರೂ, ಬ್ರಾಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ ಪಂಚಜನರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

CC-0. Jangamwadi Math Collection. Digitized by eGangotri

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

**ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।**
**ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ।**

(ಋ. ಸಂ. ೧೦-೫೩-೪)

ಪಂಚಜನರೂ ಸೇರಿ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾ ಕಾರರು ಉದಹರಿಸಿ ಪಂಚಜನರು ಎಂದು ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ **ಯದೂಚ ಮಾಂ ।**
ತತ್ಕರಿಷ್ಯೇ ಜುಷಂತಾಂ ತು ಹೋತ್ರಂ **ಪಂಚಜನಾ ಮಮ ॥**

(ಬೃ. ದೇ. ೭-೬೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ **ಪಂಚಜನ** ಶಬ್ದವನ್ನು ವಿವರಿಸಿದ್ದಾರೆ.

**ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।**
**ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥**

(ಬೃ. ದೇ. ೭-೬೭)

ಎಂದರೆ ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ, ಯಜಮಾನನ ಪುತ್ರಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದು ವಿಧವಾದ ಅಗ್ನಿಗಳೂ ಐದು ಬಗೆಯ ವರ್ಗಗಳೆಂದು ಸಾಂಪ್ರದಾಯಕವಾದ ವ್ಯವಹಾರವಾಗಿದೆ. ಈ ಮತವಲ್ಲದೇ,

**ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ**
**ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥**

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ **ಉರಗರಾಕ್ಷಸರು** ಒಂದು ಗುಂಪು ; ಎರಡನೆಯ ಅಭಿಪ್ರಾಯದಂತೆ **ಯಕ್ಷರಾಕ್ಷ-ಸರು** ಒಂದು ಗುಂಪು.

**ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।**
**ನಿಷಾದಪಂಚಮಾನ್ವರ್ಣಾನ್ ಮನ್ಯತೇ ಶಾಕಟಾಯನಃ ॥**

(ಬೃ. ದೇ. ೭-೬೯)

ಯಾಸ್ಕರಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರಮತಗಳನ್ನು ಹೇಳಿದೆಯೇ ಹೊರತು ಯಾಸ್ಕರು ತಮ್ಮ ಮತವನ್ನು ನಿಷ್ಕೃಷ್ಟವಾಗಿ ತಿಳಿಸಿಲ್ಲ. ಪ್ರಾಯಃ ಅದನ್ನೇ ಅವರು ಅಂಗೀಕರಿಸಿರಬಹುದು.

CC-0. Jangamwadi Math Collection. Digitized by eGangotri

ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।

(ಬೃ. ದೇ. ೭-೭೦)

ಹೋತ್ರಾದಿ ನಾಲ್ಕು ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಗುಂಪೆಂದು ಶಾಕಪೂಣಿಯವರ ಮತವಾಗಿದೆ.

ಚಕ್ಷುಃಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।
ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥
ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ॥

(ಬೃ. ದೇ. ೭-೭೧, ೭೨)

ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ ಪಂಚಜನರೆಂದು ಆಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯಬ್ರಾಹ್ಮಣದಲ್ಲಿ ವಿವರಿಸಿದೆ. (ಐ. ಬ್ರಾ. ೩-೩೧-೫) ಇಂತಹ ಪಂಚಜನರೂ ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯಭೇದಗಳು ತಿಳಿಸಲ್ಪಟ್ಟಿವೆ.

ಪಕ್ಷ್ಯಾ- ಪಕ್ಷೇ ಭವಾ । ಸಂವತ್ಸರದ ಮಾಸ, ಪಕ್ಷ ಮೊದಲಾದ ವಿಭಾಗಗಳನ್ನು ನಿರ್ವಹಿಸುವವನಾದ್ದರಿಂದ ಸೂರ್ಯನಿಗೆ ಪಕ್ಷೀ ಎಂದು ಹೆಸರು. ಇಲ್ಲಿ ಪಕ್ಷ್ಯಾ ಎಂಬ ತೃತೀಯಾ ವಿಭಕ್ತಿಗೆ ಷಷ್ಠೀವಿಭಕ್ತ್ಯರ್ಥವನ್ನು ಹೇಳಲಾಗಿದೆ.

ಪಲಸ್ತಿಜಮದಗ್ನಯಃ—ಪಲಸ್ತಯಃ ಪಲಿತದೀರ್ಘಾಯುಷೋ ಜಮದಗ್ನಯೋ ಮುನಯಃ । ದೀರ್ಘಾಯುಸ್ಸುಳ್ಳ ಎಂದರೆ ಬಹಳ ಕಾಲದಿಂದಲೂ ಜೀವಿಸಿರುವ ವೃದ್ಧರಾದ ಜಮದಗ್ನಿಋಷಿಗಳು ಎಂದು ಅರ್ಥವು. ಜಮದಗ್ನಿ ಶಬ್ದದ ನಿರ್ವಚನವನ್ನು ನಾವು ಹಿಂದಿನ ಋಕ್ಕಿನ ವಿಶೇಷ ವಿಷಯಗಳಲ್ಲಿ ವಿವರಿಸಿದೇವೆ.

ಜಮದಗ್ನಿ ಎಂಬ ಋಷಿಯು ಸಪ್ತರ್ಷಿಗಳಲ್ಲಿ ಒಬ್ಬನು. ಜಮದಗ್ನಿದೃಷ್ಟವಾದ ಮಂತ್ರಗಳು ಋಗ್ವೇದದಲ್ಲಿ– ಋ. ಸಂ. ೩-೬೨-೧೬ ರಿಂದ ೧೮ ; ೧೦-೧೩೭-೬ ಒಟ್ಟು ೪ ಋಕ್ಕುಗಳಿರುವುವು. ಜಮದಗ್ನಿಃ ಭಾರ್ಗವಃ ಎಂದರೆ ಭೃಗುಪುತ್ರನಾದ ಜಮದಗ್ನಿ ದೃಷ್ಟವಾದ ಮಂತ್ರಗಳು—ಋ. ಸಂ. ೮-೧೦೧ (೧೬ ಋಕ್ಕುಗಳು) ೯-೬೨ (೩೦ ಋಕ್ಕುಗಳು) ; ೯-೬೫ (೩೦ ಋಕ್ಕುಗಳು) ; ೯-೬೭ (೧೬-೧೮ ವರೆಗೆ ೩ ಋಕ್ಕುಗಳು) ಒಟ್ಟು ೭೯ ಋಕ್ಕುಗಳಿವೆ. ಇದಲ್ಲದೆ ಜಮದಗ್ನಿ ಮತ್ತು ವಿಶ್ವಾಮಿತ್ರ ಎಂಬ ಇಬ್ಬರು ಋಷಿಗಳಿಂದಲೂ ದೃಷ್ಟವಾದ ಸೂಕ್ತವೊಂದು ಋ. ಸಂ. ೧೦-೧೬೭ (೪ ಋಕ್ಕುಗಳು) ಹತ್ತನೆಯ ಮಂಡಲದಲ್ಲಿದೆ. ಮೇಲೆ ಹೇಳಿದ ಕೊನೆಯ ಸೂಕ್ತದಲ್ಲಿ (ಋ. ಸಂ. ೧೦-೧೬೭-೪) ವಿಶ್ವಾಮಿತ್ರ ಮತ್ತು ಜಮದಗ್ನಿಗಳ ಹೆಸರು ಒಟ್ಟಿಗೆ ಸೂಚಿತವಾಗಿದೆ. ಮತ್ತು ಋ. ಸಂ. ೭-೭೯-೩ ; ೯-೯೭-೫೧ ; ಅಥರ್ವವೇದ ೨-೩೨-೩ ; ೪-೨೯-೩ ; ೫-೨೮-೭ ; ೬-೧೩೭-೧ ; ೧೮-೩-೧೫, ೧೬ ; ತೈತ್ತಿರೀಯ ಸಂಹಿತಾ–೨–೨–೧೨–೪ ; ೩-೧-೭-೩ ; ೩-೫-೨ ; ೫-೨-೧೦-೫ ; ೪-೧೧-೩ ; ಮೈತ್ರಾಯಣೀಯ ಸಂಹಿತಾ– ೨-೭-೧೯ ; ೪-೨-೯ ; ಕಾಠಕ ಸಂಹಿತಾ–೧೬-೧೯ ; ೨೦-೯ ; ವಾಜಸನೇಯ ಸಂಹಿತಾ ೩-೬೨ ; ೧೩-೫೬ ; ಪಂಚವಿಂಶಬ್ರಾಹ್ಮಣ ೯–೪–೧೪ ; ೧೩-೫-೧೫ ; ೨೧-೧೦-೫ ರಿಂದ ೭ ; ೨೨-೭-೨ ; ಐತರೇಯಬ್ರಾಹ್ಮಣ ೭-೧೬ ; ಶತಪಥಬ್ರಾಹ್ಮಣ ೧೩–೨–೨–೧೪ ; ತೈತ್ತಿರೀಯ ಆರಣ್ಯಕ ೧-೯-೭ ; ಬೃಹದಾರಣ್ಯಕೋಪನಿಷತ್ ೨-೨-೪

CC-0. Jangamwadi Math Collection. Digitized by eGangotri

ಜೈಮಿನೀಯ ಉಪನಿಷದ್ಬ್ರಾಹ್ಮಣ ೩-೩-೧೧ ; ೪-೩-೧ ಇತ್ಯಾದಿ ಸ್ಥಳಗಳಲ್ಲಿ ಜಮದಗ್ನಿಯ ಹೆಸರು ಸೂಚಿತವಾಗಿದೆ. ಈ ಸ್ಥಳಗಳಲ್ಲೆಲ್ಲಾ ಜಮದಗ್ನಿಯು ವಿಶ್ವಾಮಿತ್ರನ ಸ್ನೇಹಿತನೆಂದೇ ಪರಿಗಣಿಸಲಾಗಿದೆ. ತೈತ್ತಿರೀಯಸಂಹಿತೆಯಲ್ಲಿ ಒಂದು ಕಡೆ ಮಾತ್ರ ವಸಿಷ್ಠನ ವಿರೋಧಿಯೆಂದು ಸೂಚಿತವಾಗಿದೆ.

ಈ ಜಮದಗ್ನಿಯ ವೈಶಿಷ್ಟ್ಯವೇನೆಂದರೆ— ಚತುರಾತ್ರವೆಂಬ ನಾಲ್ಕು ದಿನಗಳವರೆಗೆ ಮಾಡುವ ಯಾಗ ವಿಶೇಷದಲ್ಲಿ ಮುಖ್ಯ ಪುರೋಹಿತ ಪಾತ್ರವನ್ನು ವಹಿಸಿ ಪ್ರಸಿದ್ಧನಾಗಿರುವುದು. ಈ ವಿಷಯವು—ಜಮದಗ್ನಿಃ ಪುಷ್ಟಿಕಾಮಶ್ಚತೂರಾತ್ರೇಣಾಯಜತ ಎಂದು ಮೊದಲಾಗಿ ತೈತ್ತಿರೀಯಸಂಹಿತೆಯಲ್ಲಿಯೂ ಪಂಚವಂಶಬ್ರಾಹ್ಮಣ (೨೧-೧೦-೫ ರಿಂದ ೭) ದಲ್ಲಿಯೂ ಹೇಳಿದೆ. ಅಥರ್ವವೇದದಲ್ಲಿ (ಅ. ವೇ, ೨-೩೨-೩ ; ೬-೧೩೭-೧) ಜಮದಗ್ನಿಯು ಅತ್ರಿ, ಕಣ್ವ, ಅಸಿತ, ವೀತಹವ್ಯ ಎಂಬ ಋಷಿಗಳೊಡನೆ ವ್ಯವಹೃತನಾಗಿದ್ದಾನೆ. ಐತರೇಯಬ್ರಾಹ್ಮಣದ (ಐ. ಬ್ರಾ. ೭-೧೬) ಶುನಶ್ಶೇಪೋಪಾಖ್ಯಾನದಲ್ಲಿ ಹೇಳಿರುವಂತೆ ಶುನಶ್ಶೇಪನ ಯಜ್ಞದಲ್ಲಿ ಜಮದಗ್ನಿಯು ಅಧ್ವರ್ಯು ಎಂಬ ಋತ್ವಿಜನ ಪಾತ್ರವನ್ನು ವಹಿಸಿದ್ದಾನೆ.

---

ಸಂಹಿತಾಪಾಠಃ

ಸ್ಥಿರೌ ಗಾವೌ ಭವತಾಂ ವೀಳುರಕ್ಷೋ ಮೇಷಾ ವಿ ವರ್ಹಿ ಮಾ ಯುಗಂ ವಿ ಶಾರಿ ।
ಇಂದ್ರಃ ಪಾತಲ್ಯೇ ದದತಾಂ ಶರೀತೋರರಿಷ್ಟನೇಮೇ ಅಭಿ ನಃ ಸಚಸ್ವ ॥೧೭॥

ಪದಪಾಠಃ

ಸ್ಥಿರೌ । ಗಾವೌ । ಭವತಾಂ । ವೀಳುಃ । ಅಕ್ಷಃ । ಮಾ । ಈಷಾ । ವಿ । ವರ್ಹಿ । ಮಾ । ಯುಗಂ ವಿ ಶಾರಿ ।
ಇಂದ್ರಃ । ಪಾತಲ್ಯೇಇತಿ । ದದತಾಂ । ಶರೀತೋಃ । ಅರಿಷ್ಟನೇಮೇ । ಅಭಿ । ನಃ । ಸಚಸ್ವ ॥ ೧೭ ॥

ಸಾಯಣಭಾಷ್ಯಂ

ರಾಜ್ಞಃ ಸುದಾಸೋ ಯಜ್ಞೇಽವಭೃಥಂ ಕೃತ್ವಾ ಯಜ್ಞಶಾಲಾತೋ ನಿರ್ಗಂತುಮಿಚ್ಛನ್ ರಥೇಽಶ್ವಾದಿಕಂ ಯುಂಜಾನೋ ವಿಶ್ವಾಮಿತ್ರೋ ರಥಾಂಗಾನಿ ಸ್ತೌತಿ । ಗಾವೌ । ಗಚ್ಛತ ಇತಿ ಗಾವಾವಶ್ವೌ । ಸ್ಥಿರೌ ಭವತಾಂ । ಅಕ್ಷಶ್ಚ ವೀಳುರ್ದೃಢೋ ಭವತು । ಈಷಾ ದಂಡಶ್ಚ ಮಾ ವಿ ವರ್ಹಿ । ವ್ಯೃದ್ಧೋ ಮಾ ಭವತು । ಯುಗಂ ಚ ಮಾ ವಿ ಶಾರಿ । ವಿಶೀರ್ಣಂ ಮಾ ಭವತು । ಇಂದ್ರಃ ಪಾತಲ್ಯೇ ಪತನಶೀಲೇ ಕೀಲಕೇ ಶರೀತೋರ್ವಿಶರಣಾತ್ಪ್ರಾಕ್ ದದತಾಂ । ಧಾರಯತು । ಹೇ ಅರಿಷ್ಟನೇಮೇ ಅಹಿಂಸಿತ-ಪ್ರಧಿವಿಶಿಷ್ಟ ಹೇ ರಥ ನೋಽಸ್ಮಾನಭಿ ಅಭಿಮುಖ್ಯೇನ ಸಚಸ್ವ । ಸಂಗತೋ ಭವ ॥ ವಿ ವರ್ಹಿ । ವೃಹಿ ವೃದ್ಧೌ । ವಿಪೂರ್ವೋ ವೃಹಿರ್ವಿನಾಶೇ ವರ್ತತೇ । ಅಸ್ಮಾತ್ಕರ್ಮಕರ್ತರಿ ಲುಙಃ ಚಿಣ್ ಭಾವಕರ್ಮ-

CC-0. Jangamwadi Math Collection. Digitized by eGangotri

**ಕೋರಿತಿ ಚಿಣ್ । ಚಿಣೋ ಲುಗಿತಿ ತಪ್ರತ್ಯಯಸ್ಯ ಲುಕ್ । ನಿಘಾತಃ । ಯುಗಂ । ಯುಗಶಬ್ದ ಉಂಛಾದಿಷು ರಥಾದ್ಯುಪಕರಣೇಽರ್ಥೇ ಘಞಂತತ್ವೇನ ನಿಪಾತನಾದಗುಣತ್ವಂ । ತತ್ರ ಪಾಠಾದಂತೋದಾತ್ತತ್ವಂ । ಶಾರಿ । ಶೄ ಹಿಂಸಾಯಾಮಿತ್ಯಸ್ಯ ಲುಙಿ ರೂಪಂ । ಅರಿಷ್ಟನೇಮೇ । ಪಾದಾದಿತ್ವಾತ್ ಷಾಷ್ಠಿಕಮಾದ್ಯುದಾತ್ತತ್ವಂ ॥**

ಪ್ರತಿಪದಾರ್ಥ

**ಗಾವಃ**—ಅಶ್ವಗಳು । **ಸ್ಥಿರೌ**—ಸ್ಥಿರವಾಗಿ । **ಭವತಾಂ**—ಇರಲಿ । **ಅಕ್ಷಃ**—ಇರುಚಿಯು । **ವೀಳುಃ**—ದೃಢವಾಗಿರಲಿ । **ಈಷಾ**—ರಥದ ಮಧ್ಯಭಾಗದ ದಂಡವು । **ಮಾ ವಿ ವರ್ಹಿ**—ನಷ್ಟವಾಗದೇ ಇರಲಿ । **ಯುಗಂ ಚ**—ನೊಗವೂ ಸಹ । **ಮಾ ವಿ ಶಾರಿ**—ಸೀಳದಿರಲಿ । **ಇಂದ್ರಃ**—ಇಂದ್ರನು । **ಪಾತಲ್ಯೇ**—ರಥದ ಕೀಲುಗಳನ್ನು । **ಶರೀತೋಃ**—ಬಿರಿಯುವುದಕ್ಕೆ ಮೊದಲೇ । **ದದತಾಂ**—ಹಿಡಿದಿರಲಿ । **ಅರಿಷ್ಟನೇಮೇ**—ಅಹಿಂಸಿತವಾದ ನೇಮಿಯುಳ್ಳ ಎಲೈ ರಥವೇ । **ನಃ**—ನಮ್ಮನ್ನು । **ಅಭಿ**—ಸುತ್ತಲೂ । **ಸಚಸ್ವ**—ಸೇರಿಕೊಂಡಿರು ।

ಭಾವಾರ್ಥ

ನಮ್ಮ ರಥದ ಅಶ್ವಗಳು ಸ್ಥಿರವಾಗಿಲಿರ. ಅದರ ಇರುಚಿಯು ದೃಢವಾಗಿರಲಿ. ರಥದ ಮಧ್ಯಭಾಗದ ದಂಡವು ನಷ್ಟವಾಗದಿರಲಿ. ನೊಗವು ಸೀಳದಿರಲಿ. ರಥದ ಕೀಲುಗಳು ಬಿರಿಯುವುದಕ್ಕೆ ಮೊದಲೇ ಇಂದ್ರನು ಅವುಗಳನ್ನು ಹಿಡಿದಿರಲಿ. ಅಹಿಂಸಿತವಾದ ನೇಮಿಯುಳ್ಳ ಎಲೈ ರಥವೇ, ನಮ್ಮನ್ನು ಸೇರಿಕೊಂಡಿರು.

English Translation

May the horses be steady, the axle be strong, the pole be not defective: the yoke not be rotton ; may Indra preserve the two yoke-pins from decay , car with the uninjured fellies, be ready for us.

ವಿಶೇಷವಿಷಯಗಳು

ರಾಜನಾದ ಸುದಾಸನ ಯಜ್ಞಸಮಾಪ್ತಿಯ ಕಾಲದಲ್ಲಿ ವಿಶ್ವಾಮಿತ್ರನು ಅವಭೃತಸ್ನಾನವನ್ನು ಮಾಡಿ ಯಜ್ಞಶಾಲೆಯಿಂದ ಹೊರಡಲು ಸಿದ್ಧನಾಗಿ ರಥಕ್ಕೆ ಅಶ್ವಗಳನ್ನು ಹೂಡಿ ರಥಾಂಗಗಳನ್ನು ಎಂದರೆ ರಥದ ಚಕ್ರ, ನೇಮಿ, ನೊಗ ಮುಂತಾದ ಭಾಗಗಳನ್ನು ಸ್ತುತಿಸುವನು.

**ಗಾವೌ ಸ್ಥಿರೌ ಭವತಾಂ—ಗವಾವಶ್ವೌ** । ಇಲ್ಲಿ ಕುದುರೆಗಳನ್ನು ಗೋಶಬ್ದದಿಂದ ಸಂಬೋಧಿಸಿದೆ. ಆದುದರಿಂದ ಗಾವೌ ಎಂದರೆ ರಥಕ್ಕೆ ಹೂಡಿರುವ ಎರಡು ಕುದುರೆಗಳು. ಅವುಗಳು ಭಯರಹಿತವಾಗಿ ಸ್ಥಿರವಾಗಿರಲಿಎಂದು ಆಶಂಸನೆಯು ಉಕ್ತವಾಗಿದೆ.

**ವೀಳುಃ ಅಕ್ಷಃ**—ರಥದ ಅಚ್ಚು ಎಂದರೆ ಎರಡು ಚಕ್ರಗಳ ಮಧ್ಯದಲ್ಲಿರುವ ಅಚ್ಚುಮರವು. ಇದು ಪ್ರಯಾಣಕಾಲದಲ್ಲಿ ಭಾರದಿಂದ ಮುರಿದುಹೋಗದಂತೆ ದೃಢವಾಗಿರಲಿ.

**ಈಷಾ ಮಾ ವಿ ವರ್ಹಿ—ದಂಡಶ್ಚ ವ್ಯೃದ್ಧೋ ಮಾ ಭವತು** । ರಥದ ಮಧ್ಯಭಾಗದಲ್ಲಿರುವ ದಂಡವು ಎಂದರೆ ಮೂಕಿಯಿಂದ ಸಹಿತವಾದ ಉದ್ದನೆಯ ಮರವು ಕೆಡದಿರಲಿ.

CC-0. Jangamwadi Math Collection. Digitized by eGangotri

ಮಾ ಯುಗಂ ವಿ ಶಾರಿ—ವಿಶೀರ್ಣಂ ಮಾ ಭವತು । ನೊಗವು ಶೀಳಿಹೋಗದಿರಲಿ.

ಇಂದ್ರಃ ಪಾತಲ್ಯೇ ಶರೀತೋ ದದತಾಂ—ಪತನಶೀಲೇ ಕೀಲಕೇ ವಿಶರಣಾತ್ ಪ್ರಾಕ್ ಇಂದ್ರಃ ಧಾರಯತು । ಕೀಲುಗಳು ಮುರಿದು ಬಿದ್ದುಹೋಗುವ ಸಂದರ್ಭದಲ್ಲಿ ಅವು ಮುರಿದು ಬೀಳುವುದಕ್ಕೆ ಮೊದಲೇ ಇಂದ್ರನು ಅವುಗಳನ್ನು ಬೀಳದಂತೆ ಘಟ್ಟಿಯಾಗಿ ಹಿಡಿದಿರಲಿ.

ಅರಿಷ್ಟನೇಮೇ ನಃ ಅಭಿ ಸಚಸ್ವ—ಅಹಿಂಸಿತಪ್ರಧಿವಿಶಿಷ್ಟ ಹೇ ರಥ ಅಸ್ಮಾನಾಭಿಮುಖ್ಯೇನ ಸಂಗತೋ ಭವ । ಯಾರಿಗೂ ಹಿಂಸೆಯನ್ನುಂಟುಮಾಡದಿರುವ ಚಕ್ರಗಳುಳ್ಳ ಎಲೈ ರಥವೇ, ಹೊರಡುವುದಕ್ಕೆ ಸಿದ್ಧವಾಗಿ ನಮ್ಮ ಎದುರಿಗೆ ಬಂದು ನಿಲ್ಲು.

---

ಸಂಹಿತಾಪಾಠಃ

ಬಲಂ ಧೇಹಿ ತನೂಷು ನೋ ಬಲಮಿಂದ್ರಾನಳುತ್ಸು ನಃ ।
ಬಲಂ ತೋಕಾಯ ತನಯಾಯ ಜೀವಸೇ ತ್ವಂ ಹಿ ಬಲದಾ ಅಸಿ ॥ ೧೮ ॥

ಪದಪಾಠಃ

ಬಲಂ । ಧೇಹಿ । ತನೂಷು । ನಃ । ಬಲಂ । ಇಂದ್ರ । ಅನಳುತ್ಽಸು । ನಃ ।
ಬಲಂ । ತೋಕಾಯ । ತನಯಾಯ । ಜೀವಸೇ । ತ್ವಂ । ಹಿ । ಬಲಽದಾಃ । ಅಸಿ ॥ ೧೮ ॥

ಸಾಯಣಭಾಷ್ಯಂ

ಹೇ ಇಂದ್ರ ನೋಽಸ್ಮಾಕಂ ತನೂಷು ಶರೀರೇಷು ಬಲಂ ಧೇಹಿ । ನೋಽಸ್ಮತ್ಸಂಬಂಧಿರಥವಾಹೇಷ್ವನಳುತ್ಸು ಬಲಂ ಧೇಹಿ । ತೋಕಾಯ ಪುತ್ರಾಯ ತನಯಾಯ ಪೌತ್ರಾಯ ಚ ಜೀವಸೇ ಚಿರಂ ಜೀವನಾಯ ಬಲಮಾಯುರ್ವಿಧೇಹಿ । ಏತಾದೃಶಂ ದಾತೃತ್ವಂ ಕುತ ಇತ್ಯತ ಆಹ। ತ್ವಂ ಬಲದಾಃ। ಬಲಂ ದದಾತೀತಿ ಬಲದಾಃ । ಅಸಿ ಹಿ । ಸರ್ವೇಷು ಲೋಕೇಷು ಪ್ರಸಿದ್ಧೋಽಸಿ ಖಲು ॥ ಅನಳುತ್ಸು । ವಹ ಪ್ರಾಪಣೇ । ಅನಸಿ ವಹೇಃ ಕ್ವಿಬನಸೋ ಡಶ್ಚೇತಿ ಕ್ವಿಪ್ । ಅನಸಃ ಸಕಾರಸ್ಯ ಡತ್ವಂ । ವಹೇರ್ಯಜಾದಿತ್ವಾತ್ಸಂಪ್ರಸಾರಣಂ । ವಸುಸ್ರಂಸುಧ್ವಂಸ್ವನಡುಹಾಂ ದ ಇತಿ ಹಕಾರಸ್ಯ ದತ್ವಂ । ಕೃದುತ್ತರಸ್ವರಃ । ಅಸಿ । ಹಿಯೋಗಾದನಿಘಾತಃ । ಸಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

ಇಂದ್ರ—ಇಂದ್ರನೇ । ನಃ—ನಮ್ಮ । ತನೂಷು—ಶರೀರಗಳಲ್ಲಿ । ಬಲಂ—ಬಲವನ್ನು । ಧೇಹಿ—ಕೊಡು । ನಃ—ನಮ್ಮ । ಅನಳುತ್ಸು—ವಾಹನಗಳಿಗೆ (ಕುದುರೆಗಳಿಗೆ) ಬಲಂ—ಶಕ್ತಿಯನ್ನು ಕೊಡು। ತೋಕಾಯ—

CC-0. Jangamwadi Math Collection. Digitized by eGangotri

ಪುತ್ರನಿಗೂ | ತನಯಾಯ—ಪೌತ್ರನಿಗೂ | ಜೀವಸೇ—ದೀರ್ಘಕಾಲದ ಜೀವನಕ್ಕಾಗಿ | ಬಲಂ—ಶಕ್ತಿಯನ್ನು ಕೊಡು | ತ್ವಂ—ನೀನು | ಬಲದಾಃ ಅಸಿ ಹಿ—ಶಕ್ತಿದಾಯಕನಾಗಿರುವುದು ಪ್ರಸಿದ್ಧವಾಗಿದೆ.

ಭಾವಾರ್ಥ

ಎಲೈ ಇಂದ್ರನೇ, ನಮ್ಮ ಶರೀರಗಳಲ್ಲಿ ಶಕ್ತಿಯನ್ನು ತುಂಬು. ನಮ್ಮ ವಾಹನಗಳಿಗೆ ಶಕ್ತಿಯನ್ನು ಕೊಡು. ನಮ್ಮ ಪುತ್ರರೂ ಪೌತ್ರರೂ ದೀರ್ಘಾಯುಗಳಾಗಿರುವಂತೆ ಬಲವನ್ನುಂಟುಮಾಡು. ನೀನು ಎಲ್ಲರಿಗೂ ಶಕ್ತಿದಾಯಕನಾಗಿರುವುದು ಪ್ರಸಿದ್ಧವಾಗಿದೆ.

English Translation

Give strength, Indra, to our bodies; give strength to our vehicles; (give) strength to our sons and grandsons; that they may live (long); for you are the giver of strength,

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಇಂದ್ರನು ಬಲವುಳ್ಳವನಾದ್ದರಿಂದ ಪ್ರಯಾಣಕಾಲದಲ್ಲಿ ನಮಗೂ ನಮ್ಮೊಡನಿರುವ ಪುತ್ರಪೌತ್ರಾದಿಗಳಿಗೂ, ನಮ್ಮ ವಾಹನಗಳಾದ ಅಶ್ವಾದಿಗಳಿಗೂ ಬಲವನ್ನು (ಶಕ್ತಿಯನ್ನು) ಕೊಟ್ಟು ಅಪಘಾತಾದಿಗಳಿಂದ ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

———

ಸಂಹಿತಾಪಾಠಃ

ಅಭಿ ವ್ಯಯಸ್ವ ಖದಿರಸ್ಯ ಸಾರಮೋಜೋ ಧೇಹಿ ಸ್ಪಂದನೇ ಶಿಂಶಪಾಯಾಂ।
ಅಕ್ಷ ವೀಳೋ ವೀಳಿತ ವೀಳಯಸ್ವ ಮಾ ಯಾಮಾದಸ್ಮಾದವ ಜೀಹಿಪೋ ನಃ ॥

ಪದಪಾಠಃ

ಅಭಿ । ವ್ಯಯಸ್ವ । ಖದಿರಸ್ಯ । ಸಾರಂ । ಓಜಃ । ಧೇಹಿ । ಸ್ಪಂದನೇ । ಶಿಂಶಪಾಯಾಂ ।
ಅಕ್ಷ । ವೀಳೋ ಇತಿ । ವೀಳಿತ । ವೀಳಯಸ್ವ । ಮಾ । ಯಾಮಾತ್ । ಅಸ್ಮಾತ್ । ಅವ । ಜೀಹಿಪಃ । ನಃ ॥ ೧೯ ॥

ಸಾಯಣಭಾಷ್ಯಂ

ಹೇ ಇಂದ್ರ ಖದಿರಸ್ಯ ಸಾರಂ । ಸಾರೇಣ ಹಿ ಅಣಿಃ ಕ್ರಿಯತೇ । ತಂ ಖದಿರಸ್ಯ ಸಾರಭೂತಮಾಣಿಮಭಿ ವ್ಯಯಸ್ವ । ಅಭಿತಸ್ತ್ರತ್ತತ್ಸ್ಥಾನೇಷು ದಾರ್ಢ್ಯಾರ್ಥಂ ನಿಧೇಹಿ । ಸ್ಪಂದನೇ ರಥಸ್ಯ ಗಮನೇ ಸತಿ ಶಿಂಶಪಾಯಾಂ ಶಿಂಶಪಾಖ್ಯದಾರುನಿರ್ಮಿತೇ ರಥಸ್ಯ ಫಲಕ ಓಜೋ. ಧೇಹಿ । ದಾರ್ಢ್ಯಂ ಕುರು । ಹೇ

CC-0. Jangamwadi Math Collection. Digitized by eGangotri

ವೀಳೋ ದೃಢ ವೀಳಿತಾಸ್ಮಾಭಿರ್ದೃಢೀಕೃತ ಹೇ ಅಕ್ಷ ವೀಳಯಸ್ವ । ತ್ವಂ ದೃಢೋ ಭವ । ಯದ್ವಾಸ್ಮಾನ್ ವೃಢೀಕುರು । ಯಾಮಾದ್ಗಚ್ಛತೋಽಸ್ಮಾದ್ರಥಾನ್ಮೋಽಸ್ಮಾನ್ ಮಾವ ಜೀಹಿಪಃ । ಮಾ ಹೀಪತಃ ॥ ಖದಿರಸ್ಯ । ಅಜಿರಶಿಶಿರೇತ್ಯಾದಿನಾ ಕಿರಚ್‌ಪ್ರತ್ಯಯಾಂತತ್ವೇನ ನಿಪಾತನಾದಂತೋದಾತ್ತಃ । ವೀಳಿತ । ವೀಳಯತೇರ್ಣ್ಯಂತಸ್ಯ ನಿಷ್ಠಾಯಾಮಿಡಾಗಮಃ । ನಿಷ್ಠಾಯಾಂ ಸೇಟಿ। ಪಾ. ೬-೪-೫೨। ಇತಿ ಣೇರ್ಲುಕ್। ವೀಳಯಸ್ವ । ಆಮಂತ್ರಿತಸ್ಯಾವಿದ್ಯಮಾನತ್ವೇನ ಪಾದಾದಿತ್ವಾದನಿಘಾತಃ । ಯಾಮಾತ್ । ಯಾ ಪ್ರಾಪಣ ಇತ್ಯಸ್ಮಾದರ್ತಿಸ್ತುಸುಹುಸೃ ಇತ್ಯಾದಿನಾ ಮನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಜೀಹಿಪಃ । ಓಹಾಕ್ ತ್ಯಾಗೇ । ಣ್ಯಂತಸ್ಯ ಲುಙಿ ಚಙಿ ರೂಪಂ । ಅಕಾರಸ್ಯೇಕಾರಶ್ಛಾಂದಸಃ ॥

ಪ್ರತಿಪದಾರ್ಥ

ಇಂದ್ರ--ಎಲೈ ಇಂದ್ರನೇ । ಖದಿರಸ್ಯ—ಖದಿರವೃಕ್ಷದ । ಸಾರಂ—ಸಾರಭೂತವಾದ ಆಣಿಯನ್ನು । ಅಭಿ ವ್ಯಯಸ್ವ—ದೃಢವಾಗಿರುವಂತೆ ಸೇರಿಸು । ಸ್ಪಂದನೇ—ರಥದ ಗಮನಕಾಲದಲ್ಲಿ । ಶಿಂಶಪಾಯಾಂ—ಶಿಂಶಪಾವೃಕ್ಷದಿಂದ ಮಾಡಿದ ಹಲಗೆಗಳಿಗೆ । ಓಜಃ—ಶಕ್ತಿಯನ್ನು । ಧೇಹಿ—ಕೊಡು । ವೀಳೋ—ದೃಢವಾದ । ಅಕ್ಷ—ಎಲೈ ಅಕ್ಷವೇ । ವೀಳಿತಃ—ನಮ್ಮಿಂದ ದೃಢವಾಗಿ ಸ್ಥಾಪಿತವಾದುದರಿಂದ । ವೀಳಯಸ್ವ—ನೀನೂ ದೃಢವಾಗಿರು । ಯಾಮಾತ್—ನಾವು ರಥದಲ್ಲಿ ಹೋಗುತ್ತಿರುವಾಗ । ನಃ—ನಮ್ಮನ್ನು । ಮಾ ಅವ ಜೀಹಿಪಃ—ಕೆಳಕ್ಕೆ ಬೀಳಿಸಬೇಡ.

ಭಾವಾರ್ಥ

ಎಲೈ ಇಂದ್ರನೇ. ಖದಿರವೃಕ್ಷದ ಸಾರಭೂತವಾದ ಆಣಿಯನ್ನು ದೃಢವಾಗಿರುವಂತೆ ಸೇರಿಸು. ರಥದ ಗಮನ ಕಾಲದಲ್ಲಿ ಶಿಂಶಪಾವೃಕ್ಷದಿಂದ ಮಾಡಿದ ಹಲಗೆಗಳಿಗೆ ಶಕ್ತಿಯನ್ನು ಕೊಡು, ದೃಢವಾದ ಎಲೈ ಅಕ್ಷವೇ, ನಮ್ಮಿಂದ ದೃಢವಾಗಿ ಸ್ಥಾಪಿತವಾದುದರಿಂದ ನೀನೂ ದೃಢವಾಗಿರು. ನಾವು ರಥದಲ್ಲಿ ಹೋಗುತ್ತಿರುವಾಗ ನಮ್ಮನ್ನು ಕೆಳಕ್ಕೆ ಬೀಳಿಸಬೇಡ.

English Translation

Fix firmly the substance of the Khayar (axle), give solidity to the shishu (floor) of the car : strong axle, strongly fixed by us, be strong ; cast us not from out of our conveyance.

ವಿಶೇಷವಿಷಯಗಳು

**ಇಂದ್ರ ಖದಿರಸ್ಯ ಸಾರಂ ಅಭಿ ವ್ಯಯಸ್ವ—ಖದಿರಸ್ಯ ಸಾರಭೂತಮಾಣಿಂ ಅಭಿತಸ್ತ್ವತ್ತತ್ಸ್ಥಾನೇಷು ದಾರ್ಢ್ಯಾರ್ಥಂ ನಿಧೇಹಿ** । ರಥದ ಚಕ್ರಗಳ ಮಧ್ಯದಲ್ಲಿ ಚಕ್ರರಂಧ್ರಗಳಲ್ಲಿ ಜೋಡಿಸಿರುವ ಅಚ್ಚಿನ ತುದಿಗಳಿಗೆ ಆಣಿಗಳೆಂದು ಹೆಸರು. ಈ ಆಣಿಯಿಂದ ಚಕ್ರವು ಕಳಚಿ ಹೋದರೆ ರಥವು ಬಿದ್ದುಹೋಗುವುದು. ಆದುದರಿಂದ ಖದಿರ ವೃಕ್ಷದಿಂದ ಘಟ್ಟಿಯಾಗಿರುವಂತೆ ನಿರ್ಮಿಸಿದ ಅಚ್ಚುಮರದ ತುದಿಗಳಿಂದ ರಥಚಕ್ರಗಳು ಜಾರಿಹೋಗದಂತೆ ದೃಢವಾಗಿ ಸಿಲ್ಕಿಸು ಎಂದು ಪ್ರಾರ್ಥಿಸಿದೆ.

**ಸ್ಪಂದನೇ ಶಿಂಶಪಾಯಾಂ ಓಜಃ ಧೇಹಿ—ರಥಸ್ಯ ಗಮನೇ ಸತಿ ಶಿಂಶಪಾಖ್ಯದಾರುನಿರ್ಮಿತೇ ರಥಸ್ಯ ಫಲಕೇ ಓಜೋ ಧೇಹಿ । ದಾರ್ಢ್ಯಂ ಕುರು** । ರಥವು ವೇಗವಾಗಿ ಹೋಗುತ್ತಿರುವಾಗ ಆದರಲ್ಲಿರುವ ಶಿಂಶಪಾ ವೃಕ್ಷಗಳಿಂದ ನಿರ್ಮಿತವಾದ ಹಲಗೆಗಳು ಅಲುಗದೆ ಅಥವಾ ಮುರಿಯದೆ ಘಟ್ಟಿಯಾಗಿರುವಂತೆ ಮಾಡು.

CC-0. Jangamwadi Math Collection. Digitized by eGangotri

ಇದರಂತೆ ಅಕ್ಷ ಎಂದರೆ ಅಚ್ಚಿನಮರವೂ ಸಹ ದೃಢವಾಗಿದ್ದು ರಥಗಮನಕಾಲದಲ್ಲಿ ನಮ್ಮನ್ನು ಬೀಳಿಸಬೇಡ ವೆಂಬ ಪ್ರಾರ್ಥನೆಯು ವಿವೃತವಾಗಿದೆ.



ಸಂಹಿತಾಪಾಠಃ

ಅಯಮಸ್ಮಾನ್ವನಸ್ಪತಿರ್ಮಾ ಚ ಹಾ ಮಾ ಚ ರೀರಿಷತ್ ।

ಸ್ವಸ್ತ್ಯಾ ಗೃಹೇಭ್ಯ ಆವಸಾ ಆ ವಿಮೋಚನಾತ್ ॥ ೨೦ ॥

ಪದಪಾಠಃ

ಅಯಂ । ಅಸ್ಮಾನ್ । ವನಸ್ಪತಿಃ । ಮಾ । ಚ । ಹಾಃ । ಮಾ । ಚ । ರಿರಿಷತ್ ।

ಸ್ವಸ್ತಿ । ಆ । ಗೃಹೇಭ್ಯಃ । ಆ । ಅವಽಸೈ । ಆ । ವಿಽಮೋಚನಾತ್ ॥ ೨೦ ॥

ಸಾಯಣಭಾಷ್ಯಂ

ಯಜಮಾನ ಆತ್ಮನಃ ಶ್ರೇಯ ಆಶಾಸ್ತೇ । ವನಸ್ಪತಿರ್ವನಸ್ಪತಿನಿರ್ಮಿತೋಽಯಂ ರಥೋ ರಥಾರೂಢಾನಸ್ಮಾನ್ ಮಾ ಚ ಹಾಃ । ಮಾ ತ್ಯಾಕ್ಷೀತ್ । ಕಿಂಚ ಮಾ ರೀರಿಷತ್ । ಅಸ್ಮಾನ್ ಮಾ ವಿನಾಶಯತು । ಕಿಂಚಾ ಗೃಹೇಭ್ಯಃ । ಯಾವದ್ಗೃಹಾನ್ ಪ್ರಾಪ್ನುಯಾಮ ತಾವದಸ್ಮಭ್ಯಂ ಸ್ವಸ್ತಿ ಭವತು । ತಥಾವಸೈ । ಪಂಚಮ್ಯರ್ಥೇ ಚತುರ್ಥೀ । ಯಾವದ್ರಥವೇಗಾವಸಾನಂ ತಾವತ್ । ಆ ವಿಮೋಚನಾತ್ । ಯಾವದ್ರಥಯೋಜಿತಾಶ್ವವಿಮೋಚನಂ ತಾವತ್ ಸ್ವಸ್ತಿ ಭವತು ॥ ಹಾಃ । ಓಹಾಕ್ ತ್ಯಾಗೇ । ಲುಙಿ ಮಂತ್ರೇ ಘಸೇತ್ಯಾದಿನಾ ಸಿಚೋ ಲುಕ್ । ಪುರುಷವ್ಯತ್ಯಯಃ । ಚವಾಯೋಗೇ ಪ್ರಥಮೇತಿ ನ ನಿಘಾತಃ । ರೀರಿಷತ್ । ರಿಷ ಹಿಂಸಾಯಾಮಿತ್ಯಸ್ಯ ಣ್ಯಂತಸ್ಯ ಲುಙಿ ಚಙಿ ರೂಪಂ । ದ್ವಿತೀಯತ್ವಾನ್ನಿಘಾತಃ । ಗೃಹೇಭ್ಯಃ । ಗ್ರಹೇರ್ಗೇಹೇ ಕ ಇತಿ ಕಃ । ಪಂಚಮ್ಯಾಙ್ಪರಿಭಿರಿತಿ ಪಂಚಮೀ । ಅವಸೈ । ಷೋಽಂತಕರ್ಮಣಿ । ಕ್ವಿಪ್ । ಚತುರ್ಥ್ಯೇಕವಚನ ಆತೋ ಲೋಪಾಭಾವಶ್ಛಾಂದಸಃ । ವೃದ್ಧಿಃ । ಏಕಾದೇಶಸ್ವರಃ ॥

ಪ್ರತಿಪದಾರ್ಥ

ವನಸ್ಪತಿಃ—ವೃಕ್ಷದಿಂದ ನಿರ್ಮಿತವಾದ । ಅಯಂ—ಈ ರಥವು । ಅಸ್ಮಾನ್—ನಮ್ಮನ್ನು । ಮಾ ಚ ಹಾಃ—ತ್ಯಜಿಸದಿರಲಿ (ಅಲಕ್ಷ್ಯಮಾಡದಿರಲಿ) । ಮಾ ಚ ರೀರಿಷತ್—ಹಿಂಸಿಸದಿರಲಿ । ಆ ಗೃಹೇಭ್ಯಃ—ನಾವು ಗೃಹವನ್ನು ಸೇರುವವರೆಗೂ । ಸ್ವಸ್ತಿ—ಒಳ್ಳೆಯದಾಗಲಿ । ಆ ಅವಸೈ—ರಥದ ಸಂಚಾರವು ಮುಗಿಯುವ ವರೆಗೂ ನಮಗೆ ಒಳ್ಳೆಯದಾಗಲಿ । ಆ ವಿಮೋಚನಾತ್—ಅಶ್ವವನ್ನು ರಥದಿಂದ ಬಿಚ್ಚುವವರೆಗೂ ನಮಗೆ ಒಳ್ಳೆಯ ದಾಗಲಿ.

CC-0. Jangamwadi Math Collection. Digitized by eGangotri

ಭಾವಾರ್ಥ

ವನಸ್ಪತಿಯಿಂದ ನಿರ್ಮಿತವಾದ ಈ ರಥವು ನಮ್ಮನ್ನು ತ್ಯಜಿಸದಿರಲಿ. ನಮ್ಮನ್ನು ಹಿಂಸಿಸದಿರಲಿ. ನಾವು ಗೃಹವನ್ನು ಸೇರುವವರೆಗೂ ನಮಗೆ ಒಳ್ಳೆಯದಾಗಲಿ. ರಥದ ಸಂಚಾರವು ಮುಗಿಯುವ ವರೆಗೂ ನಮಗೆ ಒಳ್ಳೆಯದಾಗಲಿ. ಅಶ್ವವನ್ನು ರಥದಿಂದ ಬಿಚ್ಚುವವರೆಗೂ ನಮಗೆ ಒಳ್ಳೆಯದಾಗಲಿ.

English Translation

May this lord of the forest never desert us nor do us harm : may we travel prosperously home until the stopping (of the car), until the unharnessing (of the steeds).

ವಿಶೇಷವಿಷಯಗಳು

ಇಲ್ಲಿ ರಥವನ್ನು ವನಸ್ಪತಿಶಬ್ದದಿಂದ ಕರೆಯಲಾಗಿದೆ. ಏಕೆಂದರೆ ರಥವು ಮರದಿಂದ (ವನಸ್ಪತಿ = ವೃಕ್ಷ) ಮಾಡಲ್ಪಟ್ಟಿರುವುದು. ಇಂತಹ ರಥವು ನಾವು ನಮ್ಮ ಗೃಹವನ್ನು ಸೇರುವವರೆಗೆ ನಮ್ಮ ಪ್ರಯಾಣಕಾಲದಲ್ಲಿ ನಮಗೆ ಯಾವವಿಧವಾದ ತೊಂದರೆಯೂ ಆಗದಂತೆ ನಮಗೆ ಶುಭವನ್ನುಂಟುಮಾಡಲಿ ಎಂಬ ಪ್ರಾರ್ಥನೆಯು ಉಕ್ತವಾಗಿದೆ.

---

ಸಂಹಿತಾಪಾಠಃ

ಇಂದ್ರೋ॒ತಿಭಿ᳚ರ್ಬಹು॒ಲಾಭಿ᳚ರ್ನೋ ಅ॒ದ್ಯ ಯಾ᳚ಚ್ಛ್ರೇ॒ಷ್ಠಾಭಿ᳚ರ್ಮಘವಞ್ಛೂರ ಜಿನ್ವ ।
ಯೋ ನೋ॒ ದ್ವೇಷ್ಟ್ಯಧ॑ರಃ॒ ಸಸ್ಪ॑ದೀಷ್ಟ॒ ಯಮು॑ ದ್ವಿ॒ಷ್ಮಸ್ತಮು॑ ಪ್ರಾ॒ಣೋ ಜ॑ಹಾತು ॥ ೨೧ ॥

ಪದಪಾಠಃ

ಇಂದ್ರ॑ । ಊ॒ತಿಽಭಿಃ॑ । ಬ॒ಹು॒ಲಾಭಿಃ॑ । ನಃ॒ । ಅ॒ದ್ಯ । ಯಾ॒ತ್ಽಶ್ರೇ॒ಷ್ಠಾಭಿಃ॑ । ಮ॒ಘ॒ಽವ॒ನ್ । ಶೂ॒ರ॒ । ಜಿ॒ನ್ವ॒ ।
ಯಃ । ನಃ॒ । ದ್ವೇಷ್ಟಿ॑ । ಅಧ॑ರಃ । ಸಃ । ಪ॒ದೀ॒ಷ್ಟ॒ । ಯಂ । ಊಂ॒ ಇತಿ॑ । ದ್ವಿ॒ಷ್ಮಃ । ತಂ । ಊಂ॒ ಇತಿ॑ । ಪ್ರಾ॒ಣಃ । ಜ॒ಹಾ॒ತು॒ ॥ ೨೧ ॥



CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಇಂದ್ರೋತಿಭಿರಿತ್ಯಾದ್ಯಾಶ್ಚತಸ್ರೋ ವಸಿಷ್ಠದ್ವೇಷಿಣ್ಯಃ । ಪುರಾ ಖಲು ವಿಶ್ವಾಮಿತ್ರಶಿಷ್ಯಃ ಸುದಾ ನಾಮ ರಾಜರ್ಷಿರಾಸೀತ್ । ಸ ಚ ಕೇನಚಿತ್ಕಾರಣೇನ ವಸಿಷ್ಠದ್ವೇಷ್ಯೋಽಭೂತ್ । ವಿಶ್ವಾಮಿತಸ್ತು ಶಿಷ್ಯಸ್ಯ ರಕ್ಷಾರ್ಥಮಾಭಿರ್ಋಗ್ಭಿರ್ವಸಿಷ್ಠಮಶಪತ್ । ಇಮಾ ಅಭಿಶಾಪರೂಪಾಃ । ತಾ ಋಚೋ ವಸಿಷ್ಠಾ ನ ಶೃಣ್ವಂತಿ ॥

ಪರಸ್ಯ ಶಾಪಂ ಕರಿಷ್ಯನ್ ಆದಾವಾತ್ಮನೋ ರಕ್ಷಾಂ ಕುರುತೇ ಪ್ರಥಮೇನಾರ್ಧರ್ಚೇನ । ಹೇ ಶೂರ ಶೌರ್ಯವನ್ಪರಾಭಿಭವಶಕ್ತ ಹೇ ಮಘವನ್ಧನವನ್ನಿಂದ್ರ ಅದ್ಯಾಸ್ಮಿನ್ಕಾಲೇ ಯಾತ್ । ಯಾತಯತಿ-ರ್ವಧಕರ್ಮಾ । ಯಾತಯತೀತಿ ಯಾತ್ । ಸುಪಾಂ ಸುಲುಗಿತಿ ಶಪೋ ಲುಕ್ । ಯಾತಃ ಶತ್ರೂನ್ ಹಿಂಸತೋ ನೋಽಸ್ಮಾನೂತಿಭಿಸ್ತ್ವದೀಯಾಭೀ ರಕ್ಷಾಭಿರ್ಜಿನ್ವ । ಪ್ರೀಣಯ । ಕೀದೃಶೀಭಿಃ । ಬಹುಲಾಭಿ-ರ್ಬಹ್ವೀಭಿಃ ಶ್ರೇಷ್ಠಾಭಿಃ ಪ್ರಶಸ್ಯತರಾಭಿಃ । ಅಥ ಶಪತಿ । ನೋಽಸ್ಮಾನ್ಯಃ ಶತ್ರುರ್ದ್ವೇಷ್ಯೋ ದ್ವೇಷ್ಟ್ಯ-ಸ್ಮದ್ವಿಷಯಾಮಪ್ರೀತಿಂ ಕರೋತಿ ಸೋಽಧರೋ ನಿಕೃಷ್ಟಃ ಸನ್ ಪದೀಷ್ಟ । ಪತತು । ವಯಂ ಚ ಯಮು ದ್ವಿಷ್ಮಸ್ತಮು ತಂ ದ್ವೇಷ್ಯಂ ಪ್ರಾಣೋ ದೇಹಮಧ್ಯೇ ವರ್ತಮಾನಃ ಪಂಚವೃತ್ತಿರ್ವಾಯುರ್ಜಹಾತು । ಪರಿತ್ಯಜತು । ಉಶಬ್ದೌ ಪೂರಕೌ ॥

## ಪ್ರತಿಪದಾರ್ಥ

**ಶೂರ**—ಪರಾಕ್ರಮಶಾಲಿಯೂ । **ಮಘವನ್**—ಧನವಂತನೂ ಆದ । **ಇಂದ್ರ**—ಎಲೈ ಇಂದ್ರನೇ । **ಯಾತ್**—ಶತ್ರುಗಳನ್ನು ಎದುರಿಸುತ್ತಿರುವ ನಮ್ಮನ್ನು । **ಬಹುಲಾಭಿಃ**—ನಾನಾವಿಧವಾದವೂ । **ಶ್ರೇಷ್ಠಾಭಿಃ**—ಉತ್ತಮವಾದವೂ ಆದ । **ಊತಿಭಿಃ**—ರಕ್ಷಣೆಗಳಿಂದ । **ಜಿನ್ವ**—ತೃಪ್ತಿಗೊಳಿಸು । **ನಃ**—ನಮ್ಮನ್ನು । **ಯಃ**—ಯಾವ ಶತ್ರುವು । **ದ್ವೇಷ್ಟಿ**—ದ್ವೇಷಿಸುತ್ತಾನೆಯೋ । **ಸಃ**—ಅವನು । **ಅಧರಃ**—ನಿಕೃಷ್ಟನಾಗಿ । **ಪದೀಷ್ಟ**—ಕೆಳಕ್ಕೆ ಬೀಳಲಿ । **ಯಮು**—ಯಾವನನ್ನು । **ದ್ವಿಷ್ಮಃ**—ನಾವು ದ್ವೇಷಿಸುತ್ತೇವೆಯೋ । **ತಂ**—ಅವನನ್ನು । **ಪ್ರಾಣಃ**—ಪ್ರಾಣವು । **ಜಹಾತು**—ತ್ಯಜಿಸಲಿ.

## ಭಾವಾರ್ಥ

ಪರಾಕ್ರಮಶಾಲಿಯೂ, ಧನವಂತನೂ ಆದ ಎಲೈ ಇಂದ್ರನೇ, ಶತ್ರುಗಳನ್ನು ಎದುರಿಸುವ ನಮ್ಮನ್ನು ನಾನಾ ವಿಧವಾದವೂ, ಉತ್ತಮವಾದವೂ ಆದ ರಕ್ಷಣೆಗಳಿಂದ ತೃಪ್ತಿಗೊಳಿಸು ನಮ್ಮನ್ನು ದ್ವೇಷಿಸುವ ಶತ್ರುವು ನಿಕೃಷ್ಟ ನಾಗಿ ಕೆಳಕ್ಕೆ ಬೀಳಲಿ. ನಾವು ಯಾವನನ್ನು ದ್ವೇಷಿಸುತ್ತೇವೆಯೋ ಅವನು ಮೃತನಾಗಲಿ.

## English Translation

Indra, hero, possessor of wealth, protect us this day against our foes with many and excellent defences : may the vile wretch who hates us fall (before us) ; may the breath of life depart from him whom we hate.

CC-0. Jangamwadi Math Collection. Digitized by eGangotri

## ವಿಶೇಷವಿಷಯಗಳು

ಇಂದ್ರೋತಿಭಿಃ ಎಂಬ ಈ ಋಕ್ಕೂ ಇದರ ಮುಂದಿನ ಮೂರು ಋಕ್ಕುಗಳೂ ವಿಶ್ವಾಮಿತ್ರಋಷಿಗೆ ವಸಿಷ್ಠ ಋಷಿಯ ಮೇಲಿನ ದ್ವೇಷವನ್ನು ವ್ಯಕ್ತಪಡಿಸುವುದು. ಪೂರ್ವದಲ್ಲಿ ವಿಶ್ವಾಮಿತ್ರನ ಶಿಷ್ಯನಾದ ಸುದಾ ಎಂಬ ಹೆಸರಿನ ರಾಜರ್ಷಿ ಇದ್ದನು. ಅವನು ಕಾರಣಾಂತರದಿಂದ ವಸಿಷ್ಠನ ದ್ವೇಷವನ್ನು ಸಂಪಾದಿಸಿ ಅವನಿಗೆ ಶತ್ರುವಾಗಿದ್ದನು ತನ್ನ ಶಿಷ್ಯನ ರಕ್ಷಣಾರ್ಥವಾಗಿ ವಿಶ್ವಾಮಿತ್ರನು ಈ ನಾಲ್ಕು ಋಕ್ಕುಗಳಿಂದ ವಸಿಷ್ಠನನ್ನು ಶಾಪಕೊಟ್ಟು ಬೈದನು. ಆದುದರಿಂದ ಈ ಋಕ್ಕುಗಳು ಅಭಿಶಾಪರೂಪವಾಗಿರುವವು. ಈ ಋಕ್ಕುಗಳನ್ನು ವಸಿಷ್ಠಸಂತತಿಯವರು ಶ್ರವಣ ಮಾಡುವುದಿಲ್ಲ.

ಇನ್ನೊಬ್ಬನಿಗೆ ಶಾಪಕೊಡುವುದಕ್ಕೆ ಮೊದಲು ತನ್ನ ರಕ್ಷಣೆಯನ್ನು ಋಷಿಯು ಬಯಸಿ ಈ ಋಕ್ಕಿನ ಪೂರ್ವಾರ್ಧದಲ್ಲಿ ಇಂದ್ರನಿಂದ ತನ್ನ ರಕ್ಷಣೆಯನ್ನು ಅಪೇಕ್ಷಿಸಿ ಉತ್ತರಾರ್ಧದಲ್ಲಿ ಶತ್ರುನಿಗ್ರಹವನ್ನು ಕೋರುತ್ತಾನೆ. ಈ ಋಕ್ಕಿನ ಅರ್ಥವು ಸ್ಪಷ್ಟವಾಗಿರುವುದರಿಂದ ವಿವರಣೆಯು ಅವಶ್ಯಕವಿಲ್ಲ ಉತ್ತರಾರ್ಧದಲ್ಲಿ ನಮ್ಮ ಶತ್ರುಗಳ ಯಾರೆಂಬುವುದನ್ನು ವಿವರಿಸಿದೆ. ನಾವು ಯಾರನ್ನು ದ್ವೇಷಿಸುತ್ತೇವೆಯೋ, ಯಾರು ನಮ್ಮನ್ನು ದ್ವೇಷಿಸುವರೋ ಅಂತಹ ಉಭಯವಿಧ ಶತ್ರುಗಳಿಗೂ ಕೆಡಕಾಗಲಿ ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ. ಯಜುರ್ವೇದಾದಿಗಳಲ್ಲಿ ಈ ಉಭಯವಿಧಶತ್ರುಗಳನ್ನು—ಯೋಽಸ್ಮಾನ್ ದ್ವೇಷ್ಟಿ ಯಂ ಚ ವಯಂ ದ್ವಿಷ್ಮಃ ಎಂಬ ವಾಕ್ಯದಿಂದ ಅನೇಕಾವರ್ತಿ ವಿವರಿಸಿದೆ.

---

### ಸಂಹಿತಾಪಾಠಃ

ಪರಶುಂ ಚಿದ್ವಿ ತಪತಿ ಶಿಂಬಲಂ ಚಿದ್ವಿ ವೃಶ್ಚತಿ ।
ಉಖಾ ಚಿದಿಂದ್ರ ಯೇಷಂತೀ ಪ್ರಯಸ್ತಾ ಫೇನಮಸ್ಯತಿ ॥ ೨೨ ॥

### ಪದಪಾಠಃ

ಪರಶುಂ । ಚಿತ್ । ವಿ । ತಪತಿ । ಶಿಂಬಲಂ । ಚಿತ್ । ವಿ । ವೃಶ್ಚತಿ ।
ಉಖಾ । ಚಿತ್ । ಇಂದ್ರ । ಯೇಷಂತೀ । ಪ್ರಽಯಸ್ತಾ । ಫೇನಂ । ಅಸ್ಯತಿ ॥ ೨೨ ॥

### ಸಾಯಣಭಾಷ್ಯಂ

ಪರಶುಂ ಚಿತ್ । ಚಿಚ್ಛಬ್ದಃ ಉಪಮಾರ್ಥಃ । ಯಥಾ ಪರಶುಂ ಕುಠಾರಂ ಪ್ರಾಪ್ಯ ವೃಕ್ಷೋ ವಿ ತಪತಿ ವಿಶಿಷ್ಟತಾಪಯುಕ್ತೋ ಭವತಿ । ಏವಂ ಮದೀಯೋ ದ್ವೇಷ್ಟಾ ವಿತಪತು । ಶಿಂಬಲಂ ಚಿತ್ ಶಲ್ಮಲೀಕುಸುಮಂ ಯಥಾನಾಯಾಸೇನ ವಿ ವೃಶ್ಚತಿ ವಿಚ್ಛಿದ್ಯತೇ । ಏವಂ ಸ ದ್ವೇಷ್ಟಾ ವಿವೃಶ್ಚತಿ । ವಿಚ್ಛಿನ್ನಾವಯವೋ ಭವತು । ಪ್ರಯಸ್ತಾ ಪ್ರಹತಾ ಯೇಷಂತೀ ಸ್ರವಂತ್ಯುಖಾ ಚಿತ್ ಸ್ಥಾಲೀವ ಸ ದ್ವೇಷ್ಟಾ ಮದೀಯಮಂತ್ರಸಾಮರ್ಥ್ಯೇನ ಪ್ರಹತಃ ಸನ್ ಫೇನಮಸ್ಯತಿ । ಫೇನಂ ಮುಖಾದುದ್ಗಿರತು ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ಪರಶುಂ ಚಿತ್**—ಕೊಡಲಿಯ ಏಟನ್ನು ತಿಂದ ವೃಕ್ಷವು । **ವಿ ತಪತಿ**—ಗಾಯ ಗೊಳ್ಳುವಂತೆ (ನಮ್ಮ ಶತ್ರುವೂ ಸಹ ಗಾಯಗೊಂಡು ತಪಿಸಲಿ) । **ಶಿಂಬಲಂ ಚಿತ್**—ಶಾಲ್ಮಲೀ ಪುಷ್ಪವು । **ವಿ ವೃಶ್ಚತ್**—ತನ್ನ ಕೊಂಬೆಯಿಂದ ಸುಲಭವಾಗಿ ಕೆಳಕ್ಕೆ ಬೀಳುವಂತೆ (ನನ್ನ ಶತ್ರುವೂ ಅನಾಯಾಸವಾಗಿ ನೆಲಕ್ಕು ರುಳಲಿ) । **ಪ್ರಯಸ್ತಾ**—ಮುರುಕುಬಿಟ್ಟದ್ದೂ । **ಯೇಷಂತೀ**—ಸೋರುವುದೂ ಆದ । **ಉಖಾ ಚಿತ್**—ಮಡಕೆಯು ನೀರನ್ನು ಸೋರಿಸುತ್ತಿರುವಂತೆ । **ಫೇನಂ ಅಸ್ಯತಿ**—(ನನ್ನ ಶತ್ರುವೂ ಸಹ) ಬಾಯಿನಿಂದ ನೊರೆಯನ್ನು ಸುರಿಸಲಿ.

ಭಾವಾರ್ಥ

ಎಲೈ ಇಂದ್ರನೇ, ಕೊಡಲಿಯ ಏಟನ್ನು ತಿಂದ ವೃಕ್ಷವು ಗಾಯಗೊಳ್ಳುವಂತೆ ನಮ್ಮ ಶತ್ರುವೂ ಸಹ ಗಾಯ ಗೊಂಡು ತಪಿಸಲಿ. ಶಾಲ್ಮಲೀಪುಷ್ಪವು ತನ್ನ ವೃಂತದಿಂದ ಸುಲಭವಾಗಿ ಕೆಳಕ್ಕೆ ಬೀಳುವಂತೆ ನನ್ನ ಶತ್ರುವೂ ಅನಾಯಾಸವಾಗಿ ನೆಲಕ್ಕುರುಳಲಿ. ಮುರುಕುಬಿಟ್ಟದ್ದೂ, ಸ್ರವಿಸುವುದೂ ಆದ ಮಡಕೆಯು ನೀರನ್ನು ಹೊರಕ್ಕೆ ಬಿಡುವಂತೆ ನನ್ನ ಶತ್ರುವೂ ಸಹ ಬಾಯಿನಿಂದ ನೊರೆಯನ್ನು ಸುರಿಸಲಿ.

English Translation

As (the tree) suffers pain from the axe, as the Simal flower is (easily) cut off, as the injured cauldron leaking scatters foam, so may my enemy perish.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಶತ್ರುವು ಯಾವ ರೀತಿ ಕೆಡಕಿಗೆ ಗುರಿಯಾಗುವನೆಂಬುದನ್ನು ಮೂರು ದೃಷ್ಟಾಂತಗಳ ಮೂಲಕ ವಿವರಿಸಲಾಗಿದೆ.

**ಪರಶುಂ ಚಿತ್ ವಿ ತಪತಿ—ಯಥಾ ಪರಶುಂ ಪ್ರಾಪ್ಯ ವೃಕ್ಷೋ ವಿಶಿಷ್ಟತಾಪಯುಕ್ತೋ ಭವತಿ ಏವಂ ಮದೀಯದ್ವೇಷ್ಟಾ ವಿತಪತು** । ಕೊಡಲಿಯಿಂದ ವೃಕ್ಷವನ್ನು ಕಡಿಯುವಾಗ ಆ ವೃಕ್ಷಕ್ಕೆ ಯಾವ ರೀತಿ ಪೆಟ್ಟಿ ನಿಂದ ಸಹಿಸಲಶಕ್ಯವಾದ ತಾಪ (ದುಃಖ) ವುಂಟಾಗುವುದೋ ಅದರಂತೆ ನಮಗೆ ಶತ್ರುವಾದವನೂ ಸಹ ದುಃಖದಿಂದ ತಾಪಗೊಳ್ಳಲಿ. ಈ ಋಕ್ಕಿನಲ್ಲಿರುವ **ಚಿತ್** ಎಂಬ ಶಬ್ದವು ಇವ-ಎಂದರೆ ಉಪಮಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

**ಶಿಂಬಲಂ ಚಿತ್ ವಿ ವೃಶ್ಚತಿ—ಶಾಲ್ಮಲೀಕುಸುಮಂ ಯಥಾನಾಯಾಸೇನ ವಿಚ್ಛಿದ್ಯತೇ ಏವಂ ಸ ದ್ವೇಷ್ಟಾ ವಿಚ್ಛಿನ್ನಾವಯವೋ ಭವತು** । ಶಾಲ್ಮಲೀವೃಕ್ಷದ ಕುಸುಮವು ಗಾಳಿಬೀಸಿದಮಾತ್ರಕ್ಕೆ ಯಾವರೀತಿ ಅನಾಯಾಸವಾಗಿ ಉದುರಿಹೋಗುವುದೋ ಅದರಂತೆ ನಮ್ಮನ್ನುದ್ವೇಷಿಸುವವನ ಹಸ್ತಾದ್ಯವಯವಗಳು ಕತ್ತರಿಸಲ್ಪಟ್ಟು ತುಂಡುತುಂಡಾಗಿ ಹೋಗಲಿ.

**ಇಂದ್ರ ಪ್ರಯಸ್ತಾ ಯೇಷಂತೀ ಉಖಾ ಚಿತ್ ಫೇನಂ ಅಸ್ಯತಿ-ಪ್ರಹತಾ ಸ್ರುವಂತೀ ಸ್ಥಾಲೀವ ಸ ದ್ವೇಷ್ಟಾ ಮದೀಯಮಂತ್ರಸಾಮರ್ಥ್ಯೇನ ಪ್ರಹತಃ ಸನ್ ಫೇನಂ ಮುಖಾದುದ್ಗಿರತು**-ಎಲೈ ಇಂದ್ರನೇ, ಮಡಿಕೆಗೆ ಏಟುಬಿದ್ದರೆ ಅದು ಒಡೆದು ಹೋಗಿ ಅದರಲ್ಲಿರುವ ನೀರು ಯಾವರೀತಿ ಸೋರುವುದೋ ಅದರಂತೆ ನಮ್ಮ ಶತ್ರುವು ನಮ್ಮ ಮಂತ್ರಸಾಮರ್ಥ್ಯದಿಂದ ಹತನಾಗಿ ತನ್ನ ಬಾಯಿಯಿಂದ ನೊರೆಯನ್ನು ಸುರಿಸಲಿ, ಎಂದರೆ ಮೃತ ನಾಗಲಿ ಎಂದಭಿಪ್ರಾಯವು.

CC-0. Jangamwadi Math Collection. Digitized by eGangotri

ಶಿಂಬಲಂ ಚಿತ್ ವಿ ವೃಕ್ಣತಿ—ಶಲ್ಮಲೀಕುಸುಮಂ ಯಥಾನಾಯಾಸೇನ ವಿಚ್ಛಿದ್ಯತೇ ಏವಂ ಸ ದ್ವೇಷ್ಟಾ ವಿವೃಶ್ಚತಿ । ಶಲ್ಮಲೀವೃಕ್ಷದ ಹೂವು ಯಾವರೀತಿ ಸುಲಭವಾಗಿ ಉದುರಿಹೋಗುವುದೋ ಅದರಂತೆ ನಮ್ಮನ್ನು ದ್ವೇಷಮಾಡುವ ಶತ್ರುವೂ ನೆಲಕ್ಕುರಳಿ ಬೀಳಲಿ. ಅವನ ಅವಯವಗಳು ಕತ್ತರಿಸಿಹೋಗಲಿ.

ಇಂದ್ರ ಪ್ರಯಸ್ತಾ ಯೇಷಂತೀ ಉಖಾ ಚಿತ್ ಫೇನಂ ಅಸ್ಯತಿ—ಪ್ರಹತಾ ಸ್ರವಂತೀ ಸ್ಥಾಲೀವ ಸ ದ್ವೇಷ್ಟಾ ಮದೀಯಮಂತ್ರಸಾಮರ್ಥ್ಯೇನ ಪ್ರಹತಃ ಸನ್ ಫೇನಂ ಮುಖಾದುದ್ಗಿರತು । ಏಟುಬಿದ್ದು ಮುರಿದುಹೋದ ಒಡಕಾದ ಮಡಕೆಯು ಸೋರುವಂತೆ ನಮ್ಮ ಮಂತ್ರಸಾಮರ್ಥ್ಯದಿಂದ ಹತನಾದ ನಮ್ಮ ಶತ್ರುವು ತನ್ನ ಮುಖದಿಂದ (ಬಾಯಿಂದ) ನೊರೆಯನ್ನು ಸುರಿಸಲಿ.

---

ಸಂಹಿತಾಪಾಠಃ

ನ ಸಾಯಕಸ್ಯ ಚಿಕಿತೇ ಜನಾಸೋ ಲೋಧಂ ನಯಂತಿ ಪಶು ಮನ್ಯ-
ಮಾನಾಃ ।
ನಾವಾಜಿನಂ ವಾಜಿನಾ ಹಾಸಯಂತಿ ನ ಗರ್ದಭಂ ಪುರೋ ಅಶ್ವಾನ್ನ-
ಯಂತಿ ॥ ೨೪ ॥

ಪದಪಾಠಃ

ನ । ಸಾಯಕಸ್ಯ । ಚಿಕಿತೇ । ಜನಾಸಃ । ಲೋಧಂ । ನಯಂತಿ । ಪಶು । ಮನ್ಯಮಾನಾಃ ।

ನ । ಅವಾಜಿನಂ । ವಾಜಿನಾ । ಹಾಸಯಂತಿ । ನ । ಗರ್ದಭಂ । ಪುರಃ । ಅಶ್ವಾತ್ । ನಯಂತಿ ॥ ೨೩ ॥

ಸಾಯಣಭಾಷ್ಯಂ

ಪುರಾ ಖಲು ತಪಸಃ ಕ್ಷಯೋ ಮಾ ಪ್ರಾಪದಿತಿ ಶಾಪಾನ್ನಿವೃತ್ತಂ ಮೌನಿನಂ ವಿಶ್ವಾಮಿತ್ರಂ ವಸಿಷ್ಠಪುರುಷಾ ಬದ್ಧ್ವಾನೀತವಂತಃ । ತಾನ್ಪ್ರತಿ ವಿಶ್ವಾಮಿತ್ರೋ ಬ್ರೂತೇ । ಹೇ ಜನಾಸೋ ಜನಾಃ ಸಾಯಕಸ್ಯಾವಸಾನಕಾರಿಣೋ ವಿಶ್ವಾಮಿತ್ರಸ್ಯ ಮಂತ್ರಗಣಸಾಮರ್ಥ್ಯಂ ನ ಚಿಕಿತೇ । ಭವದ್ಭಿರ್ನ ಜ್ಞಾ-ಯತೇ । ಅತ ಏವ ಲೋಧಂ ಲುಬ್ಧಂ ತಪಸಃ ಕ್ಷಯೋ ಮಾ ಭೂದಿತಿ ಲೋಭೇನ ತೂಷ್ಣೀಂ ಸ್ಥಿತಮೃಷಿಂ ಪಶು ಮನ್ಯಮಾನಾಃ । ಪಶು ಇತಿ ನಿಪಾತಃ ಪಶುಶಬ್ದಸಮಾನಾರ್ಥಃ । ಪಶುವನ್ಮನ್ಯಮಾನಾ ಏತೇ ನಯಂತಿ । ಬದ್ಧ್ವಾ ಸ್ವಕೀಯಂ ದೇಶಂ ಪ್ರಾಪಯಂತಿ । ಏವಂ ಸ್ವಸಾಮರ್ಥ್ಯಂ ಪ್ರದರ್ಶ್ಯ ವಿಸದೃಶೋ ವಸಿಷ್ಠೋ ಮಯಾ ಸಹ ಸ್ಪರ್ಧಿತುಂ ನಾರ್ಹತೀತಿ ಧಿಕ್ಕರೋತಿ। ನಾವಾಜಿನಮಿತಿ। ಅವಾಜಿನಂ। ವಾಚಾಮಿ-ನೋ ವಾಜಿನಃ ಸರ್ವಜ್ಞಾಃ। ತದ್ವಿಲಕ್ಷಣಂ ಮೂರ್ಖಜನಂ ವಾಜಿನಾ ವಾಗೀಶಾ ನ ಹಾಸಯಂತಿ ಹಾಸ್ಯಾಸ್ಪದಂ ನ ಕುರ್ವಂತಿ । ತೇನ ಸಹ ನ ಸ್ಪರ್ಧಂತೆ ಇತ್ಯರ್ಥಃ । ತಥಾ ಗರ್ದಭಂ ರಾಸಭಮಶ್ವಾತ್ಪುರಃ ಪುರುಸ್ತಾನ್ನ ನಯಂತಿ । ಏವಮೇವ ವಿಸದೃಶೋ ವಸಿಷ್ಠೋ ನ ಮಯಾ ಸ್ಪರ್ಧಿತುಮೀಷ್ಟ ಇತ್ಯರ್ಥಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಜನಾಸಃ**—ಎಲೈ ಜನರೇ । **ಸಾಯಕಸ್ಯ**—ನಾಶಕಾರಕವಾದ (ವಿಶ್ವಾಮಿತ್ರನ) ಮಂತ್ರಸಾಮರ್ಥ್ಯವನ್ನು । **ನ ಚಿಕಿತೇ**—ನೀವು ಅರಿಯಲಾರಿರಿ । **ಲೋಧಂ**—ಮೌನವನ್ನಾಶ್ರಯಿಸಿದ್ದ ಋಷಿಯನ್ನು । **ಪಶು**—ಪಶುವಿಗೆ ಸಮಾನವಾಗಿ । **ಮನ್ಯಮಾನಾಃ**—ತಿಳಿದುಕೊಂಡ ಈ ನರರು । **ನಯಂತಿ**—(ಋಷಿಯನ್ನು) ತಮ್ಮ ಸ್ಥಾನಕ್ಕೆ ಕೊಂಡುಯ್ಯುತ್ತಿದ್ದಾರೆ । **ಅವಾಜಿನಂ**—ಅವಿವೇಕಿಯಾದ ಪುರುಷನನ್ನು । **ವಾಜಿನಾ**—ಪ್ರಾಜ್ಞರು । **ನ ಹಾಸಯಂತಿ**—ಅವಹೇಳನಮಾಡುವುದಿಲ್ಲ । **ಗರ್ದಭಂ**—ರಾಸಭವನ್ನು । **ಅಶ್ವಾತ್ ಪುರಃ**—ಶ್ರೇಷ್ಠವಾದ ಅಶ್ವದ ಮುಂಭಾಗದಲ್ಲಿ । **ನ ನಯಂತಿ**—ಕರೆತಂದಿಡುವುದೂ ಇಲ್ಲ.

### ಭಾವಾರ್ಥ

ಎಲೈ ಜನರೇ, ನಾಶಕಾರಕವಾದ ವಿಶ್ವಾಮಿತ್ರನ ಮಂತ್ರಸಾಮರ್ಥ್ಯವನ್ನು ನೀವು ಅರಿಯಲಾರಿರಿ. ತನ್ನ ತಪಸ್ಸು ವ್ಯರ್ಥವಾಗಬಾರದೆಂದು ಮೌನವನ್ನಾಶ್ರಯಿಸಿದ್ದ ಋಷಿಯನ್ನು ಪಶುವಿಗೆ ಸಮಾನವಾಗಿ ತಿಳಿದುಕೊಂಡ ಈ ನರರು ಋಷಿಯನ್ನು ತಮ್ಮ ಸ್ಥಾನಕ್ಕೆ ಕೊಂಡೊಯ್ಯುತ್ತಿದ್ದಾರೆ. ಅವಿವೇಕಿಯಾದ ಪುರುಷನನ್ನು ಪ್ರಾಜ್ಞರು ಅವಹೇಳನಮಾಡುವುದಿಲ್ಲ. ರಾಸಭವನ್ನು ಶ್ರೇಷ್ಠವಾದ ಅಶ್ವದ ಮುಂಭಾಗದಲ್ಲಿಡುವುದೂ ಇಲ್ಲ.

### English Translation

Men, (the might) of the destroyer is not known to you : regarding him as a mere animal, they lead him away desirous (silently to complete his devotions) : the wise condescend not to turn the foolish into ridicule, they do not lead the ass before the horse.

### ವಿಶೇಷವಿಷಯಗಳು

ಪೂರ್ವದಲ್ಲಿ ವಿಶ್ವಾಮಿತ್ರಋಷಿಯು ತನ್ನ ತಪಸ್ಸಾಮರ್ಥ್ಯವು ವ್ಯರ್ಥವಾಗಬಾರದೆಂದು ಮೌನವ್ರತವನ್ನಾಚರಿಸುತ್ತಾ ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಆದ್ದರಿಂದಲೇ ತನ್ನ ದ್ವೇಷಿಗಳ ವಿಷಯದಲ್ಲಿಯೂ ಶಾಪಾದಿಗಳನ್ನು ಕೊಡದೆ ಸುಮ್ಮನಿದ್ದನು ಇದನ್ನು ನೋಡಿ ವಸಿಷ್ಠನ ಕಡೆಯ ಜನಗಳು ಈ ವಿಶ್ವಾಮಿತ್ರನು ಏನೂ ತಿಳಿಯದ ಪಶುವಿನಂತಿದ್ದಾನೆಂದು ತಿಳಿದು ಅವನನ್ನು ಹಗ್ಗಗಳಿಂದ ಬಿಗಿದುಕಟ್ಟಿ ಹೊತ್ತುಕೊಂಡುಹೋಗುತ್ತಿದ್ದರು ಆ ಸಮಯದಲ್ಲಿ ವಿಶ್ವಾಮಿತ್ರನು ಆ ಜನರನ್ನು ಕುರಿತು ಈ ರೀತಿ ಹೇಳುತ್ತಾನೆ—

**ಜನಾಸಃ ಸಾಯಕಸ್ಯ ನ ಚಿಕಿತೇ ಲೋಧಂ ಪಶುಂ ಮನ್ಯಮಾನಃ ನಯಂತಿ—ಹೇ ಜನಾಃ ಅವಸಾನಕಾರಿಣೋ ವಿಶ್ವಾಮಿತ್ರಸ್ಯ ಮಂತ್ರಗಣಸಾಮರ್ಥ್ಯಂ ಭವದ್ಭಿರ್ನ ಜ್ಞಾಯತೇ । ಅತ ಏವ ತಪಸಃ ಕ್ಷಯೋಮಾ ಭೂದಿತಿ ತೂಷ್ಣೀಂ ಸ್ಥಿತಮೃಷಿಂ ಪಶುವತ್ ಮನ್ಯಮಾನಃ ಬಧ್ವಾ ಸ್ವಕೀಯಂ ದೇಶಂ ಪ್ರಾಪಯಂತಿ ।** ಈ ಜನರು ಕೊಲ್ಲಬೇಕೆಂದಿರುವ ಈ ವಿಶ್ವಾಮಿತ್ರಋಷಿಯ ಮಂತ್ರಸಾಮರ್ಥ್ಯವನ್ನು ತಿಳಿದಿಲ್ಲ. ಆದ್ದರಿಂದಲೇ ತಪಸ್ಸಿನ ಕ್ಷಯವಾಗುವುದೆಂಬ ಭಯದಿಂದ ಮಾತನಾಡದೆ ಮೌನದಿಂದ ಸುಮ್ಮನಿರುವ ಈ ಋಷಿಯನ್ನು ಪಶುವೆಂದು ತಿಳಿದು ಅವನನ್ನು ಹಗ್ಗದಿಂದ ಕಟ್ಟಿ ತನ್ನು ದೇಶಕ್ಕೆ ಕೊಂಡೊಯ್ಯುತ್ತಿದ್ದಾರೆ.

CC-0. Jangamwadi Math Collection. Digitized by eGangotri

ಅವಾಜಿನಂ— ವಾಚಾಂ ಇನಃ ಸ್ವಾಮೀ ಸರ್ವಜ್ಞಃ । ತದ್ವಿಲಕ್ಷಣಂ ಮೂರ್ಖಜನಂ ಅವಾಜಿನಂ । ವಾಕ್ಕುಗಳಿಗೆ ಸ್ವಾಮಿಯಾದವನಿಗೆ ವಾಜೀ ಎಂದು ಹೆಸರು. ಅವನು ಸರ್ವಜ್ಞನು. ಅದಕ್ಕೆ ವಿರುದ್ಧವಾಗಿರುವವನು ಅವಾಜೀ ಎನಿಸುವನು. ಆದುದರಿಂದ ಅವಾಜಿನಂ(ದ್ವಿತೀಯಾ ಏಕವಚನ) ಎಂದರೆ ಮೂರ್ಖನನ್ನು ಎಂದಭಿಪ್ರಾಯವು

ಅವಾಜಿನಂ ವಾಜಿನಾ ನ ಹಾಸಯಂತಿ । ಗರ್ದಭಂ ಅಶ್ವಾತ್ಪುರತಃ ನ ನಯಂತಿ—ವಾಕ್ಸಾಮರ್ಥ್ಯ ವುಳ್ಳ ಸಜ್ಜನರು ತಾವು ಸರ್ವಜ್ಞರಾದುದರಿಂದ ಏನೂ ತಿಳಿಯದ ಮೂರ್ಖ ಜನರನ್ನು ನೋಡಿ ನಕ್ಕು ಹಾಸ್ಯಮಾಡು ವುದಿಲ್ಲ. ಏಕೆಂದರೆ ಉತ್ತಮವಾದ ಅಶ್ವದ ಮುಂದೆ ಕತ್ತೆಯನ್ನು ತಂದು ನಿಲ್ಲಿಸುವರೇ ? ಇಲ್ಲ. ಎಂದರೆ ಈ ವಸಿಷ್ಠಾ ದಿಗಳು ವಾಕ್ಸಾಮರ್ಥ್ಯವೂ ಮಂತ್ರಸಾಮರ್ಥ್ಯವೂ ಇಲ್ಲದ ಮೂರ್ಖಜನರು. ಇಂತಹ ಜನರು ಮಂತ್ರಸಾಮರ್ಥ್ಯ ದಿಂದ ಸರ್ವಜ್ಞನಾದ ನನ್ನೊಡನೆ ಸ್ಪರ್ಧಿಸಲು ಇಷ್ಟಪಡುವುದಿಲ್ಲ. ಆದ್ದರಿಂದಲೇ ಬಲಪ್ರಯೋಗದಿಂದ ನನಗೆ ಕೇಡನ್ನುಂಟುಮಾಡುವ ಉದ್ದೇಶದಿಂದ ನನ್ನನ್ನು ಹಗ್ಗದಿಂದ ಕಟ್ಟಿ ತಮ್ಮ ದೇಶಕ್ಕೆ ಕೊಂಡೊಯ್ಯುತ್ತಿದ್ದಾರೆ.

---

ಸಂಹಿತಾಪಾಠಃ

ಇಮ ಇಂದ್ರ ಭರತಸ್ಯ ಪುತ್ರಾ ಅಪಪಿತ್ವಂ ಚಿಕಿತುರ್ನ ಪ್ರಪಿತ್ವಂ ।

ಹಿನ್ವಂತ್ಯಶ್ವಮರಣಂ ನ ನಿತ್ಯಂ ಜ್ಯಾವಾಜಂ ಪರಿ ಣಯಂತ್ಯಾಜೌ ॥ ೨೪ ॥

ಪದಪಾಠಃ

ಇಮೇ । ಇಂದ್ರ । ಭರತಸ್ಯ । ಪುತ್ರಾಃ । ಅಪsಪಿತ್ವಂ । ಚಿಕಿತುಃ । ನ । ಪ್ರsಪಿತ್ವಂ ।

ಹಿನ್ವಂತಿ । ಅಶ್ವಂ । ಅರಣಂ । ನ । ನಿತ್ಯಂ । ಜ್ಯಾsವಾಜಂ । ಪರಿ । ನಯಂತಿ । ಆಜೌ ॥ ೨೪ ॥

ಸಾಯಣಭಾಷ್ಯಂ

ಹೇ ಇಂದ್ರ ಭರತಸ್ಯ ಪುತ್ರಾ ಭರತವಂಶ್ಯಾ ಇಮೇ ವಿಶ್ವಾಮಿತ್ರಾ ಅಪಪಿತ್ವಮಪಗಮನಂ ವಸಿಷ್ಠೇಭ್ಯಶ್ಚಿಕಿತುಃ । ಜಾನಂತಿ । ಪ್ರಪಿತ್ವಂ ಪ್ರಗಮನಂ ನ ಜಾನಂತಿ । ಶಿಷ್ಟೈಃ ಸಹ ತೇಷಾಂ ಸಂಗತಿ- ರ್ನಾಸ್ತಿ । ಬ್ರಾಹ್ಮಣಾ ಏವ ತ ಇತ್ಯರ್ಥಃ । ಅಪಿ ಚಾಜೌ ಸಂಗ್ರಾಮೇ ನಿತ್ಯಂ ಸಹಜಮರಣಂ ನಾರಿಮಿವ ವಸಿಷ್ಠಾನ್ಪ್ರತ್ಯಶ್ವಂ ಹಿನ್ವಂತಿ । ಪ್ರೇರಯಂತಿ । ಕಿಂಚ ಜ್ಯಾವಾಜಂ ಬಲಂ ಧನುಃ ಪರಿ ಣಯಂತಿ । ವಸಿಷ್ಠಾನ್ಪ್ರತಿ ತಂ ಶರಸಂಧಾನೇನ ಚರಂತಿ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಭರತಸ್ಯ—ಭರತಚಕ್ರವರ್ತಿಯ । ಪುತ್ರಾಃ—ವಂಶೋತ್ಪನ್ನರಾದ । ಇಮೇ—ಈ ವಿಶ್ವಾಮಿತ್ರ ಮೊದಲಾದವರು। ಅಪಪಿತ್ವಂ-ವಸಿಷ್ಠಸಂತತಿಯವರಿಗಿಂತ ಬೇರೆಯವರೆಂದು। ಚಿಕಿತುಃ- ತಿಳಿಯುತ್ತಾರೆ । ಪ್ರಪಿತ್ವಂ—ಇಬ್ಬರಿಗೂ ಸಂಬಂಧವಿದೆಯೆಂದು । ನ—ತಿಳಿಯುವುದಿಲ್ಲ। ಆಜೌ—ಸಂಗ್ರಾಮದಲ್ಲಿ ।

CC-0. Jangamwadi Math Collection. Digitized by eGangotri

**ನಿತ್ಯಂ**—ಸಹಜವಾದ । **ಅರಣಂ ನ**—ಶತ್ರುಗಳಂತೆ । **ಅಶ್ವಂ**—ಕುದುರೆಗಳನ್ನು । **ಹಿನ್ವಂತಿ**—(ವಸಿಷ್ಠಸಂತತಿಯವರ) ಎದುರಾಗಿ ಓಡಿಸಿ (ಪ್ರತಿಭಟಿಸುತ್ತಾರೆ) । **ಜ್ಯಾವಾಜಂ**—ತಮ್ಮ ಶಕ್ತಿಯುತವಾದ ಧನುಸ್ಸನ್ನು । **ಪರಿಣಯಂತಿ**—ಶರಸಂಧಾನಮಾಡುತ್ತಾ ಹಿಡಿಯುತ್ತಾರೆ.

ಭಾವಾರ್ಥ

ಎಲೈ ಇಂದ್ರನೇ, ಭರತಚಕ್ರವರ್ತಿಯ ವಂಶೋತ್ಪನ್ನರಾದ ಈ ವಿಶ್ವಾಮಿತ್ರರು ವಸಿಷ್ಠಸಂತತಿಯವರಿಗಿಂತ ಬೇರೆಯವರೆಂದು ತಿಳಿಯುತ್ತಾರೆ. ಇಬ್ಬರಿಗೂ ಸಂಬಂಧವಿದೆಯೆಂದು ಇವರು ತಿಳಿಯುವುದಿಲ್ಲ. ಸಂಗ್ರಾಮದಲ್ಲಿ ತಮಗೆ ಸಹಜವಾದ ಶತ್ರುಗಳೆಂದು ತಿಳಿದು ತಮ್ಮ ಅಶ್ವಗಳನ್ನು ಅವರೆದುರಿಗೆ ಓಡಿಸಿ ಪ್ರತಿಭಟಿಸುತ್ತಾರೆ. ತಮ್ಮ ಶಕ್ತಿಯುತವಾದ ಧನುಸ್ಸನ್ನು ಶರಸಂಧಾನಮಾಡುತ್ತಾ ಅವರೆದುರಿಗೆತ್ತಿ ಹಿಡಿಯುತ್ತಾರೆ.

English Translation

These sons of Bharata, Indra, understand severance (from the Vasisthas), not association (with them) ; they urge their steeds (agaist them) as against a constant foe ; they bear a stout bow (for their destruction) in battle.

ವಿಶೇಷವಿಷಯಗಳು

**ಪ್ರಪಿತ್ವಂ**—ಪ್ರಪಿತ್ವೇ ಎಂಬ ಶಬ್ದವನ್ನು ಯಾಸ್ಕರು ದ್ವಿಶನಾಮಗಳಲ್ಲಿ ಪಠಿಸಿದ್ದಾರೆ (ನಿ. ೩-೨೦) ಮತ್ತು ಪ್ರಪಿತ್ವೇಽಭೀಕ ಇತ್ಯಾಸನ್ನಸ್ಯ । ಪ್ರಪಿತ್ವೇ ಪ್ರಾಪ್ತೇ । ಅಭೀಕೇಽಭಕ್ತೇ । ಆಪಿತ್ವೇ ನಃ ಪ್ರಪಿತ್ವೇ ತೂಯಮಾಗಹಿ ಕಣ್ವೇಷು ಸು ಸಚಾ ಪಿಬ (ಋ. ಸಂ. ೮-೪-೩) ಇತ್ಯಪಿ ನಿಗಮೌ ಭವತಃ ॥ ಎಂದು ನಿರ್ವಚನವನ್ನು ಹೇಳಿದ್ದಾರೆ. ಪ್ರಪಿತ್ವ ಎಂದರೆ ಸಮೀಪವರ್ತಿಯಾಗಿರುವುದು, ಸಮೀಪದಲ್ಲಿರುವುದು ಹತ್ತಿರದ ಸಂಬಂಧ ಎಂದರ್ಥವು ಎಂದು ಹೇಳಿ ಉದಾಹರಣೆಗಾಗಿ ಆಪಿತ್ವೇನಃ ಎಂಬ ಋಕ್ಕನ್ನು ಪಠಿಸಿದ್ದಾರೆ.

**ಇಂದ್ರ ಭರತಸ್ಯ ಇಮೇ ಪುತ್ರಾಃ ಅಪಪಿತ್ವಂ ಚಿಕಿತುಃ ನ ಪ್ರಪಿತ್ವಂ**—**ಭರತವಂಶ್ಯಾ ಇಮೇ ವಿಶ್ವಾಮಿತ್ರಾದಯಃ ವಸಿಷ್ಠೇಭ್ಯಃ ಅಪಗಮನಂ ಜಾನಂತಿ ಪ್ರಗಮನಂ ನ ಜಾನಂತಿ** । ಎಲೈ ಇಂದ್ರನೇ ಭರತಪುತ್ರರು ಎಂದರೆ ಭರತವಂಶೋತ್ಪನ್ನರಾದ ವಿಶ್ವಾಮಿತ್ರಾದಿಗಳು, ಈ ವಸಿಷ್ಠಾದಿಗಳನ್ನು ಅನ್ಯಜರೆಂದು ಎಂದರೆ ಪರಕೀಯರೆಂದು (ಅಥವಾ ವಿರೋಧಿಗಳು, ಶತ್ರುಗಳು) ಭಾವಿಸುತ್ತಾರೆ. ವಸಿಷ್ಠರೊಡನೆ ಸಹವರ್ತಿತ್ವವು ಎಂದರೆ ವ್ಯವಹಾರಾದಿಗಳು ಇಲ್ಲವೆಂದೂ ವಸಿಷ್ಠಾದಿಗಳಿಗೆ ಶಿಷ್ಟರಾದ ಸಜ್ಜನರೊಡನೆ ಸಂಪರ್ಕವೂ ಮಿತ್ರತ್ವವು ಇವುಗಳೂ ಇಲ್ಲವೆಂದು ಭಾವಿಸುತ್ತಾರೆ. ಏಕೆಂದರೆ ವಿಶ್ವಾಮಿತ್ರವಂಶಜರಿಗೂ ವಸಿಷ್ಠವಂಶಜರಿಗೂ ಪರಸ್ಪರ ವಿರೋಧವಿದೆ.

**ಆಜೌ ನಿತ್ಯಂ ಅರಣಂ ನ ಅಶ್ವಂ ಹಿನ್ವಂತಿ, ಜ್ಯಾವಾಜಂ ಪರಿನಯಂತಿ**—ಆದುದರಿಂದಲೇ ಯುದ್ಧದಲ್ಲಿ ಭರತವಂಶದವರು ಎಂದರೆ ವಿಶ್ವಾಮಿತ್ರಾದಿಗಳು ವಸಿಷ್ಠರನ್ನು ತಮ್ಮ ಸಹಜ ಶತ್ರುಗಳೆಂದು ತಿಳಿದು ಅವರನ್ನು ಎದುರಿಸುವುದಕ್ಕಾಗಿ ತಮ್ಮ ಕುದುರೆಗಳನ್ನು ಅವರಮೇಲೆ ಮುನ್ನುಗ್ಗಿಸುತ್ತಾರೆ. ಮತ್ತು ವಸಿಷ್ಠವಂಶಜರನ್ನು ಕೊಲ್ಲುವುದಕ್ಕಾಗಿ ತಮ್ಮ ಬಿಲ್ಲಿಗೆ ಹೆದೆಯನ್ನೇರಿಸಿ ಬಾಣಗಳನ್ನು ಹೂಡಿ ಶರಸಂಧಾನಮಾಡುತ್ತಾರೆ, ಎಂದು ಮುಖ್ಯಾಭಿಪ್ರಾಯವು.

CC-0. Jangamwadi Math Collection. Digitized by eGangotri

# ಐವತ್ತನಾಲ್ಕನೆಯ ಸೂಕ್ತವು.

ಸಾಯಣಭಾಷ್ಯಂ

ಪಂಚಮೇಽನುವಾಕೇ ನವ ಸೂಕ್ತಾನಿ । ತತ್ರೇಮಂ ಮಹ ಇತಿ ದ್ವಾವಿಂಶತ್ಯೃಚಂ ಪ್ರಥಮಂ ಸೂಕ್ತಂ ತ್ರೈಷ್ಟುಭಂ ವೈಶ್ವದೇವಂ ವಿಶ್ವಾಮಿತ್ರಪುತ್ರಸ್ಯ ವಾಕ್ಪುತ್ರಸ್ಯ ವಾ ಪ್ರಜಾಪತೇರಾರ್ಷಂ । ಅತ್ರೇಯಮನುಕ್ರಮಣಿಕಾ । ಇಮಂ ಮಹೇ ದ್ವ್ಯಧಿಕೋಕ್ತಗೋತ್ರಃ ಪ್ರಜಾಪತಿರ್ಹ ವೈಶ್ವದೇವಂ ಹೇತಿ । ಅಸ್ಮಿನ್ ಸೂಕ್ತ ಆದ್ಯಾಗ್ನೇಯೀ ತತಃ ಪರಂ ಸಪ್ತರ್ಚೋ ದ್ಯಾವಾಪೃಥಿವ್ಯಾಸ್ತತಃ ಪರಾ ದ್ಯುದೇವತಾಕಾ ದಶಮೀ ದ್ಯಾವಾಪೃಥಿವ್ಯೈಕಾದಶೀ ಸಾವಿತ್ರೀ ತತಃ ಪರಂ ಸುಕೃದಿತಿ ತ್ವಾಷ್ಟ್ರ್ಯೃಭ್ವೀ ಚ ವಿದ್ಯುದ್ರಥೇತಿ ಮಾರುತೀ ಸಾರಸ್ವತೀ ಚ ತತಃ ಪರಂ ತಿಸ್ರೋ ವಿಷ್ಣ್ವಿಂದ್ರಾಗ್ನಿದೇವತಾಕಾಃ ಸ್ವದಸ್ವೇತ್ಯಾಗ್ನೇಯೀತಿ। ಏವಂ ವೈಶ್ವದೇವಂ ಸೂಕ್ತಂ॥ ಸೂಕ್ತವಿನಿಯೋಗೋ ಲೈಂಗಿಕಃ। ಅಗ್ನಿಪ್ರಣಯನೇ ರಾಜನ್ಯಸ್ಯೇಮಂ ಮಹ ಇತಿ ಪ್ರತಿಪತ್ । ಪಂಚಮ್ಯಾಂ ಪೌರ್ಣಮಾಸ್ಯಾಮಿತ್ಯತ್ರ ಸೂತ್ರಿತಂ । ಇಮಂ ಮಹೇ ವಿದಥ್ಯಾಯ ಶೂಷಂ । ಆ. ೨-೧೭ । ಇತಿ ॥

ಮೂರನೆಯ ಮಂಡಲದ ಐದನೆಯ ಅನುವಾಕದಲ್ಲಿ ಒಂಭತ್ತು ಸೂಕ್ತಗಳಿರುವವು. ಅವುಗಳಲ್ಲಿ **ಇಮಂ ಮಹೇ** ಎಂಬುದು ಮೊದಲನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರಪುತ್ರನಾದ ವಾಕ್ ಎಂಬ ಋಷಿಯು ಅಥವಾ ಪ್ರಜಾಪತಿಯು ಋಷಿಯು ; ವಿಶ್ವೇದೇವತೆಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ **ಇಮಂ ಮಹೇ ದ್ವ್ಯಧಿಕೋಕ್ತಗೋತ್ರಃ ಪ್ರಜಾಪತಿರ್ಹ ವೈಶ್ವದೇವಂ ಹ** ಎಂದು ಹೇಳಿರುವುದು. ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ಅಗ್ನಿದೇವತಾಕವು ; ಅಲ್ಲಿಂದ ಮುಂದಿನ ಏಳುಋಕ್ಕುಗಳು (೨-೮ ಋಕ್ಕುಗಳು) ದ್ಯಾವಾಪೃಥಿವೀದೇವತಾಕವು. ಅಲ್ಲಿಂದ ಮುಂದಿನ ಋಕ್ಕು (೯ ನೇ ಋಕ್ಕು) ದ್ಯುದೇವತಾಕವು ; ಹತ್ತನೆಯ ಋಕ್ಕು ದ್ಯಾವಾಪೃಥಿವೀದೇವತಾಕವು ; ಹನ್ನೊಂದನೆಯ ಋಕ್ಕು ಸವಿತೃದೇವತಾಕವು ; ಅಲ್ಲಿಂದ ಮುಂದಿನ ಸುಕೃತ್ ಎಂಬ ಋಕ್ಕಿಗೆ (೧೨ ನೇ ಋಕ್ಕು) ತ್ವಷ್ಟೃ ಮತ್ತು ಋಭುಗಳು ದೇವತೆಯು ; ವಿದ್ಯುದ್ರಥಾಃ ಎಂಬ ೧೩ ನೆಯ ಋಕ್ಕಿಗೆ ಮರುತ್ತುಗಳು ಮತ್ತು ಸರಸ್ವತಿಯು ದೇವತೆಯು ; ಅಲ್ಲಿಂದ ಮುಂದಿನ ಋಕ್ಕುಗಳಿಗೆ ವಿಷ್ಣು ಇಂದ್ರ ಅಗ್ನಿ ಮೊದಲಾದವರು ದೇವತೆಗಳು. ಕೊನೆಯ ಸದಸ್ವ ಎಂಬ ಋಕ್ಕಿಗೆ ಅಗ್ನಿಯ ದೇವತೆಯು. ಸೂಕ್ತವಿನಿಯೋಗವು ಲೈಂಗಿಕವು. ಅಗ್ನಿಪ್ರಣಯನವೆಂಬ ಕರ್ಮದಲ್ಲಿ **ಇಮಂ ಮಹೇ** ಎಂಬ ಈ ಋಕ್ಕನ್ನು ಕ್ಷತ್ರಿಯರಾದ ರಾಜನ್ಯರು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪಂಚಮ್ಯಾಂ ಪೌರ್ಣಮಾಸ್ಯಾಂ** ಎಂಬ ಖಂಡದ **ಇಮಂ ಮಹೇ ವಿದಥ್ಯಾಯ ಶೂಷಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೧೭).

CC-0. Jangamwadi Math Collection. Digitized by eGangotri

॥ ಓಂ ॥

## ಸೂಕ್ತ—೫೪

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೫೪ ॥
ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೨೪, ೨೫, ೨೬, ೨೭ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ॥
ಋಷಿಃ—ಪ್ರಜಾಪತಿರ್ವೈಶ್ವಾಮಿತ್ರೋ ವಾಚ್ಯೋ ವಾ ॥
ದೇವತಾ—ವಿಶ್ವೇದೇವಾಃ ॥
ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

ಇಮಂ ಮಹೇ ವಿದಥ್ಯಾಯ ಶೂಷಂ ಶಶ್ವತ್ಕೃತ್ವ ಈಡ್ಯಾಯ ಪ್ರ ಜಭ್ರುಃ।
ಶೃಣೋತು ನೋ ದಮ್ಯೇಭಿರನೀಕೈಃ ಶೃಣೋತ್ವಗ್ನಿರ್ದಿವ್ಯೈರಜಸ್ರಃ ॥ ೧ ॥

ಪದಪಾಠಃ

ಇಮಂ । ಮಹೇ । ವಿದಥ್ಯಾಯ । ಶೂಷಂ । ಶಶ್ವತ್ । ಕೃತ್ವಃ । ಈಡ್ಯಾಯ । ಪ್ರ । ಜಭ್ರುಃ ।
ಶೃಣೋತು । ನಃ । ದಮ್ಯೇಭಿಃ । ಅನೀಕೈಃ । ಶೃಣೋತು । ಅಗ್ನಿಃ । ದಿವ್ಯೈಃ । ಅಜಸ್ರಃ ॥ ೧ ॥

ಸಾಯಣಭಾಷ್ಯಂ

ಮಹೇ ಮಹತೇ ವಿದಥ್ಯಾಯ ವಿದಥೇ ಯಜ್ಞೇ ಮಂಥನೇನ ನಿಷ್ಪಾದ್ಯಮಾನಾಯೇಡ್ಯಾಯ ಸರ್ವೈಃ ಸ್ತುತ್ಯಾಯಾಗ್ನಯೇ ಶೂಷಂ ಸುಖಕರಮಿಮಂ ಸ್ತೋಮಂ ಶಶ್ವತ್ಕೃತ್ವೋ ಭೂಯೋ ಭೂಯಃ ಪ್ರ ಜಭ್ರುಃ । ಪ್ರಭರಂತಿ । ಪ್ರಕರ್ಷೇಣ ಧಾರಯಂತಿ । ಉಚ್ಚಾರಯಂತೀತ್ಯರ್ಥಃ । ಸೋಽಗ್ನಿರ್ದಮ್ಯೇಭಿಃ ಪರೇಷಾಂ ದಮನಕುಶಲೈರ್ದಮೇ ಗೃಹೇ ವಿದ್ಯಮಾನೈರ್ವಾನೀಕೈಸ್ತೇಜೋಭಿರ್ಯುಕ್ತಃ ಸನ್ ನೋಽಸ್ಮದೀಯಮಿಮಂ ಸ್ತೋಮಂ ಶೃಣೋತು। ದಿವ್ಯೈರ್ದಿವಿ ಭವೈಸ್ತೇಜೋಭಿರಜಸ್ರೋ ನಿರಂತರಂ ಯುಕ್ತೋಽಗ್ನಿರಿಮಂ ಸ್ತೋಮಂ ಶೃಣೋತು। ಶಶ್ವತ್ಕೃತ್ವ ಈಡ್ಯಾಯ ಪ್ರ ಜಭ್ರುರಿತಿ ಸ್ವಾನಾಮೇವೈನಂ ತಚ್ಛ್ರೈಷ್ಠ್ಯಂ ಗಮಯತಿ । ಐ. ಬ್ರಾ. ೧–೨೮ । ಇತಿ ಬ್ರಾಹ್ಮಣಾನುಸಾರೇಣ ಮಹದಾದಿಗುಣವಿಶಿಷ್ಟಾಯ ಯಜಮಾನಾಯೇಮಮಗ್ನಿಂ ಪ್ರಜಭ್ರುಃ ಪ್ರಹರಂತ್ಯೃತ್ವಿಜ ಇತಿ ವಾ ವ್ಯಾಖ್ಯೇಯಂ। ಉತ್ತರಾರ್ಧರ್ಚಃ ಸಮಾನ ಏವ॥ ವಿದಥ್ಯಾಯ । ತತ್ರ ಭವ ಇತ್ಯರ್ಥೇ ಭವೇ ಛಂದಸೀತಿ ಯತ್ । ತಿತ್ಸ್ವರಿತಃ । ಈಡ್ಯಾಯ । ಈಡವಂದೇ-

CC-0. Jangamwadi Math Collection. Digitized by eGangotri

ತ್ಯಾದಿನಾ ಉದಾತ್ತತ್ವಂ । ದಮ್ಯೇಭಿಃ । ತತ್ರ ಸಾಧುರಿತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ದಿವ್ಯೈಃ । ದಿವಮರ್ಹತೀತ್ಯರ್ಥೇ ಛಂದಸಿ ಚೇತಿ ಯಪ್ರತ್ಯಯಃ । ಅಜಸ್ರಃ । ಜಸು ಮೋಕ್ಷಣೇ । ನಮಿ-ಕಂಪೀತ್ಯಾದಿನಾ ತಾಚ್ಛೀಲಿಕೋ ರಪ್ರತ್ಯಯಃ । ನಞಾ ಸಮಾಸೇ ತಸ್ಯ ಸ್ವರಃ ॥

ಪ್ರತಿಪದಾರ್ಥ

**ಮಹೇ**—ಮಹತ್ಸ್ವರೂಪವುಳ್ಳವನೂ । **ವಿದಥ್ಯಾಯ**—ಯಜ್ಞಾರ್ಥವಾಗಿ ಉತ್ಪನ್ನನಾದವನೂ । **ಈಡ್ಯಾಯ**—ಸ್ತುತಿಗೆ ಪಾತ್ರನೂ ಆದ ಅಗ್ನಿಯನ್ನು ಉದ್ದೇಶಿಸಿ । **ಶೂಷಂ**—ಸುಖಕರವಾದ । **ಇಮಂ**—ಈ ಸ್ತೋಮವನ್ನು । **ಶಶ್ವತ್ಕೃತ್ವಃ**—ಪುನಃಪುನಃ । **ಪ್ರ ಜಭ್ರುಃ**—ಅರ್ಪಿಸುತ್ತಾರೆ । **ಅಗ್ನಿಃ**—ಮಹಾತ್ಮನಾದ ಅಗ್ನಿಯು । **ದಮ್ಯೇಭಿಃ**—ಶತ್ರುಗಳನ್ನು ದಮನಮಾಡತಕ್ಕ । **ಅನೀಕೈಃ**—ತೇಜಸ್ಸುಗಳಿಂದ ಕೂಡಿ । **ನಃ**—ನಮ್ಮ ಈ ಸ್ತೋಮವನ್ನು । **ಶೃಣೋತು**—ಕೇಳಲಿ । **ದಿವ್ಯೈಃ**—ದಿವ್ಯತೇಜಸ್ಸುಗಳಿಂದ ಕೂಡಿ । **ಅಜಸ್ರಃ**—ಯಾವಾಗಲೂ । **ಶೃಣೋತು**—ಕೇಳಲಿ.

ಭಾವಾರ್ಥ

ಮಹತ್ಸ್ವರೂಪವುಳ್ಳವನೂ, ಯಜ್ಞಾರ್ಥವಾಗಿ ಉತ್ಪನ್ನನಾದವನೂ, ಸ್ತುತಿಗೆ ಪಾತ್ರನೂ ಆದ ಅಗ್ನಿಯನ್ನು ಉದ್ದೇಶಿಸಿ ಪ್ರಶಂಸಿಸುವುದೂ ಸುಖಕಾರಕವೂ ಆದ ಈ ಸ್ತೋಮವನ್ನು ಅರ್ಪಿಸುತ್ತಾರೆ ಮಹಾತ್ಮನಾದ ಅಗ್ನಿಯು ಶತ್ರುಗಳನ್ನು ದಮನಮಾಡತಕ್ಕ ತೇಜಸ್ಸುಗಳಿಂದ ಕೂಡಿ ನಮ್ಮ ಈ ಸ್ತೋಮವನ್ನು ಕೇಳಲಿ. ದಿವ್ಯತೇಜಸ್ಸುಗಳಿಂದ ಯುಕ್ತನಾದ ಅಗ್ನಿಯು ಯಾವಾಗಲೂ ಕೇಳಲಿ.

English Translation

They recite repeatedly this gratifying praise to the great product of sacrifice (Agni) : may he who (is endowed) with domestic radiance hear us : may the imperishable Agni, (endowed) with divine radiance, hear us.

ವಿಶೇಷವಿಷಯಗಳು

**ಮಹೇ ವಿದಥ್ಯಾಯ ಪ್ರ ಜಭ್ರುಃ-ಮಹತೇ ಯಜ್ಞೇ ಮಂಥನೇನ ನಿಷ್ಪಾದ್ಯಮಾನಾಯ ಸರ್ವೈಃ ಸ್ತುತ್ಯಾಯ ಅಗ್ನಯೇ । ಮಹದಾದಿಗುಣವಿಶಿಷ್ಟಾಯ ಯಜಮಾನಾಯ** । ಎಂದು ಎರಡು ವಿಧವಾದ ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಮೊದಲನೆಯ ಅರ್ಥವು ಅಗ್ನಿಯ ಮಹತ್ತ್ವವನ್ನು ಸೂಚಿಸುವುದಾಗಿರುತ್ತದೆ. ವಿದಥ ಶಬ್ದವು ಯಾಸ್ಕರಿಂದ (ನಿ ೩-೧೯) ಯಜ್ಞನಾಮಗಳಲ್ಲಿ ಪಠಿತವಾಗಿರುತ್ತದೆ. ಇದರಿಂದ ಅಗ್ನಿಯು ಯಜ್ಞಕರ್ಮದಲ್ಲಿ ತನ್ನ ವಾಸಸ್ಥಾನದಲ್ಲಿ ಅರಣಿಗಳಿಂದ ಮಥಿತನಾಗಿ ಉತ್ಪನ್ನನಾಗುವುದರಿಂದ ಸರ್ವರಿಂದಲೂ ಸ್ತುತ್ಯನಾಗಿರುವನು ಎಂದೂ, ಈ ಅಗ್ನಿಗಾಗಿ ಋತ್ವಿಜರು ಅನೇಕಸಾರಿ ಸ್ತೋತ್ರಗಳನ್ನು ಪಠಿಸುವರು ಎಂದೂ ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ "**ಶಶ್ವತ್ಕೃತ್ವ ಈಡ್ಯಾಯ ಪ್ರಜಭ್ರುರಿತಿ ಸ್ವಾನಾಮೇವೈನಂ ತಚ್ಛ್ರೈಷ್ಠ್ಯಂ ಗಮಯತಿ** ।" (ಐ. ಬ್ರಾ. ೧-೨೮) ಎಂಬ ಐತರೇಯ ಬ್ರಾಹ್ಮಣದ ವಾಕ್ಯಕ್ಕನುಗುಣವಾಗಿ ಪೂಜ್ಯತೆಯೇ ಮೊದಲಾದ ಗುಣಗಳಿಂದ ಕೂಡಿರುವ ಯಜಮಾನನಿಗಾಗಿ, ಋತ್ವಿಜರು ಅಗ್ನಿಯನ್ನು ಅನೇಕಸಾರಿ ಸ್ತುತಿಮಾಡಿರುವರು ಎಂದು ವಿವರಿಸಿದೆ. ಇದರ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ ೧೪, ಪುಟ ೫೪೩ ನ್ನು

CC-0. Jangamwadi Math Collection. Digitized by eGangotri

ನೋಡಿ. **ಈಡ್ಯಾಯ** ಎಂಬ ಪದದ ಅರ್ಥವನ್ನು ಅಗ್ನಿ ಮತ್ತು ಯಜಮಾನ ಇವರಿಬ್ಬರಿಗೂ ಸಂಬಂಧವಾಗುವ ರೀತಿಯಿಂದ ವಿವರಿಸಿದೆ.

**ಶೂಷಂ—ಸುಖಕರಂ ।** ಶೂಷ ಶಬ್ದವು (ನಿ. ೩-೧೩) ಸುಖನಾಮಗಳಲ್ಲಿ ಉಕ್ತವಾಗಿದೆ. ಆದರೆ ಇಲ್ಲಿ ಸುಖಕರ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ದಮ್ಯೇಭಿಃ—ಪರೇಷಾಂ ದಮನಕುಶಲೈಃ । ಗೃಹೇ ವಿದ್ಯಮಾನೈರ್ವಾ ।** ದಮ ಶಬ್ದವು (ನಿ. ೪-೪) ಗೃಹನಾಮದಲ್ಲಿ ಪಠಿತವಾಗಿದೆ. ಇಲ್ಲಿ ಈ ಪದವನ್ನು ತೇಜಸ್ಸು ಎಂದು ಅರ್ಥವನ್ನು ಬೋಧಿಸುವ ಅನೇಕ ಪದಕ್ಕೆ ವಿಶೇಷಣವಾಗಿ ಪ್ರಯೋಗಮಾಡಿರುವುದರಿಂದ ಅಗ್ನಿಯ ತೇಜಸ್ಸುಗಳು ಶತ್ರುಗಳನ್ನು ನಿಗ್ರಹಮಾಡುವುದರಲ್ಲಿ ಸಮರ್ಥಗಳಾಗಿರುವುವು ಅಥವಾ ಯಾಗಶಾಲೆಯ ವೇದಿಯಲ್ಲಿ ಪ್ರಕಾಶಿಸುತ್ತಿರುವುವು ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

ಸಂಹಿತಾಪಾಠಃ

ಮಹಿ ಮಹೇ ದಿವೇ ಅರ್ಚಾ ಪೃಥಿವ್ಯೈ ಕಾಮೋ ಮ ಇಚ್ಛಞ್ಚರತಿ ಪ್ರಜಾನನ್ ।

ಯಯೋರ್ಹ ಸ್ತೋಮೇ ವಿದಥೇಷು ದೇವಾಃ ಸಪರ್ಯವೋ ಮಾದಯಂತೇ ಸಚಾಯೋಃ ॥ ೨ ॥

ಪದಪಾಠಃ

ಮಹಿ । ಮಹೇ । ದಿವೇ । ಅರ್ಚ । ಪೃಥಿವ್ಯೈ । ಕಾಮಃ । ಮೇ । ಇಚ್ಛನ್ । ಚರತಿ । ಪ್ರಜಾನನ್ ।

ಯಯೋಃ । ಹ । ಸ್ತೋಮೇ । ವಿದಥೇಷು । ದೇವಾಃ । ಸಪರ್ಯವಃ । ಮಾದಯಂತೇ । ಸಚಾ । ಆಯೋಃ ॥ ೨ ॥

ಸಾಯಣಭಾಷ್ಯಂ

ಹೇ ಸ್ತೋತರ್ಮಹೇ ಮಹತ್ಯೈ ದಿವೇ ದ್ಯುಲೋಕದೇವತಾಯೈ ಮಹತ್ಯೈ ಪೃಥಿವ್ಯೈ ಚ ಮಹಿ ಮಹತ್ ತ್ವಂ ಪ್ರಜಾನನ್ ಸ್ತೋತ್ರಮರ್ಚ । ಕುರು । ಮೇ ಮಮ ಕಾಮೋ ಮನೋರಥಃ ಸರ್ವಾನ್ ಭೋಗಾನಿಚ್ಛನ್ ಚರತಿ । ಸರ್ವತ್ರ ವರ್ತತೇ । ಆಯೋರ್ಮನುಷ್ಯಸ್ಯ ವಿದಥೇಷು ಯಜ್ಞೇಷು ಯಯೋರ್ದ್ಯಾವಾಪೃಥಿವ್ಯೋಃ ಸ್ತೋಮೇ ಸ್ತೋತ್ರೇ ಸಪರ್ಯವಃ ಪೂಜಾಕಾಮಾ ದೇವಾಃ ಸ್ತೋತಾರೋ ವಾ ಸಚಾ ಮಾದಯಂತೇ ಹ ಸಹ ಮಾದ್ಯಂತಿ ಖಲು ॥ ಪೃಥಿವ್ಯೈ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಸಪರ್ಯವಃ । ಸಪರ್ಯಾಮಿಚ್ಛತೀತ್ಯರ್ಥೇ ಸುಪಃ ಕ್ಯಚ್ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

(ಎಲೈ ಸ್ತೋತೃವೇ) **ಮಹೇ**—ಮಹತ್ಸ್ವರೂಪವುಳ್ಳ | **ದಿವೇ**-ದ್ಯುಲೋಕಾಧಿದೇವತೆಗೂ | **ಪೃಥಿವ್ಯೈ**-ಪೃಥಿವ್ಯಧಿದೇವತೆಗೂ ಸಹ | **ಮಹಿ**—(ಅವರ) ಮಹಾತ್ಮ್ಯವನ್ನು | **ಪ್ರಜಾನನ್**—ಅರಿತವನಾಗಿ | **ಅರ್ಚ**—ಪೂಜೆಯನ್ನು ಅರ್ಪಿಸು | **ಮೇ**—ನನ್ನ | **ಕಾಮಃ**—ಮನೋರಥವು | **ಇಚ್ಛನ್**—ಸಕಲಭೋಗಗಳನ್ನೂ ಅಪೇಕ್ಷಿಸುತ್ತಾ | **ಚರತಿ**—ಸರ್ವತ್ರ ಸಂಚರಿಸುತ್ತದೆ | **ಆಯೋಃ**—ಮಾನವನ | **ವಿದಥೇಷು**—ಯಜ್ಞಗಳಲ್ಲಿ | **ಯಯೋಃ**—ಯಾವ ಆಸೇ ದ್ಯಾವಾಪೃಥಿವಿಗಳ | **ಸ್ತೋಮೇ**—ಸ್ತುತಿಕಾಲದಲ್ಲಿ | **ಸಪರ್ಯವಃ**—ಪೂಜಾಕಾಮಿಗಳಾದ | **ದೇವಾಃ**—ಸ್ತೋತೃಗಳು | (ಅಥವಾ ದೇವತೆಗಳು) **ಸಚಾ**—ಒಟ್ಟಿಗೆ ಸೇರಿಕೊಂಡು | **ಮಾದಯಂತೇ**—ಹರ್ಷಪಡುತ್ತಾರೆ.

### ಭಾವಾರ್ಥ

ಎಲೈ ಸ್ತೋತೃವೇ. ಮಹತ್ಸ್ವರೂಪವುಳ್ಳ ದ್ಯುಲೋಕಾಧಿದೇವತೆಗೂ, ಪೃಥಿವೀದೇವತೆಗೂ ಸಹ ಅವರ ಮಹಾತ್ಮ್ಯವನ್ನರಿತವನಾಗಿ ಪೂಜೆಯನ್ನು ಅರ್ಪಿಸು. ಈ ದ್ಯಾವಾಪೃಥಿವಿಗಳ ಸ್ತುತಿಕಾಲದಲ್ಲಿ ಪೂಜಾಕಾಮಿಗಳಾದ ಸ್ತೋತೃಗಳು ಒಟ್ಟಿಗೆ ಸೇರಿಕೊಂಡು ಹರ್ಷಪಡುತ್ತಾರೆ. ನನ್ನ ಮನೋರಥವೂ ಸಹ ಸಕಲ ಭೋಗಗಳನ್ನೂ ಆಪೇಕ್ಷಿಸುತ್ತಾ ಸರ್ವತ್ರ ಸಂಚರಿಸುತ್ತದೆ.

### English Translation

Knowing their greatness, offer worship to the vast heaven and to the earth : my desire, wishing (for felicity) proceeds (to them), in whose praise the gods, desirous of adoration, delight together with their worshippers at the sacrifice.

### ವಿಶೇಷವಿಷಯಗಳು

**ಸಪರ್ಯವಃ ದೇವಾಃ ಸಚಾ ಮಾದಯಂತೇ—ಪೂಜಾಕಾಮಾಃ ದೇವಾಃ ಸ್ತೋತಾರೋ ವಾ ಸಹ ಮಾದ್ಯಂತಿ ಖಲು** | ಈ ಋಕ್ಕಿನಲ್ಲಿ ದ್ಯಾವಾಪೃಥಿವಿಗಳ ಮಹತ್ತ್ವವು ವರ್ಣಿತವಾಗಿದೆ. ಆಯುಃ ಶಬ್ದವು (ನಿ. ೩-೪) ಮನುಷ್ಯನಾಮಗಳಲ್ಲಿ ಉಕ್ತವಾಗಿದೆ. **ಸಪರ್ಯವಃ** ಎಂಬ ಪದಕ್ಕೆ ಪೂಜೆಯನ್ನು ಆಚರಿಸುವವರೂ, ಮತ್ತು ಪೂಜೆಯನ್ನು ಸ್ವೀಕರಿಸುವವರೂ ಎಂದು ಎರಡು ವಿಧವಾದ ಅರ್ಥವನ್ನು ಸಾಯಣರು ಹೇಳಿದ್ದಾರೆ. ಯಜ್ಞಮಾಡುವ ಯಜಮಾನನ ಋತ್ವಿಜರು ಆಯಾಯ ಇಷ್ಟಗಳನ್ನು ಹೊಂದಲು ಇಚ್ಛೆಯಿಂದ ಇರುವ ಯಜಮಾನನಿಗಾಗಿ ಸ್ತೋತ್ರಗಳನ್ನು ಪಠಿಸುವುದರಲ್ಲಿ ಸಂತೋಷದಿಂದ ಇರುವರು. ಈ ಸ್ತೋತ್ರಗಳನ್ನು ಶ್ರವಣಮಾಡುವುದರಲ್ಲಿ ದೇವತೆಗಳೂ ಕೂಡ ಸಂತೋಷದಿಂದ ಇರುವರು. ಆದುದರಿಂದ ಪೂಜಾರ್ಹರಾಗಿರುವ ದ್ಯಾವಾಪೃಥಿವಿಗಳ ಮಹತ್ತ್ವವನ್ನು ಚೆನ್ನಾಗಿ ಅರಿತಿರುವ ಋತ್ವಿಜರು ಈ ದ್ಯಾವಾಪೃಥಿವಿಗಳನ್ನು ಸ್ತುತಿಮಾಡಲಿ ಎಂದು ಋಷಿಯು ಆದೇಶವು ಇಲ್ಲಿ ವರ್ಣಿತವಾಗಿರುತ್ತದೆ. ಇದರಿಂದ ಯಜಮಾನನ ಇಷ್ಟವನ್ನು ನೆರವೇರಿಸುವ ದ್ಯಾವಾಪೃಥಿವಿಗಳ ಮಹತ್ತ್ವವೂ ನಿರತಿಶಯವಾಗಿರುವುದೆಂದೂ ಉಕ್ತವಾಗಿದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯುವೋರ್ಋತಂ ರೋದಸೀ ಸತ್ಯಮಸ್ತು ಮಹೇ ಷು ಣಃ ಸುವಿತಾಯ
ಪ್ರ ಭೂತಂ ।
ಇದಂ ದಿವೇ ನಮೋ ಅಗ್ನೇ ಪೃಥಿವ್ಯೈ ಸಪರ್ಯಾಮಿ ಪ್ರಯಸಾ ಯಾಮಿ
ರತ್ನಂ ॥ ೩ ॥

ಪದಪಾಠಃ

ಯುವೋಃ । ಋತಂ । ರೋದಸೀ ಇತಿ । ಸತ್ಯಂ । ಅಸ್ತು । ಮಹೇ । ಸು । ನಃ । ಸುವಿತಾಯ । ಪ್ರ ।
ಭೂತಂ ।

ಇದಂ । ದಿವೇ । ನಮಃ । ಅಗ್ನೇ । ಪೃಥಿವ್ಯೈ । ಸಪರ್ಯಾಮಿ । ಪ್ರಯಸಾ । ಯಾಮಿ । ರತ್ನಂ ॥ ೩ ॥

ಸಾಯಣಭಾಷ್ಯಂ

ಹೇ ರೋದಸೀ ದ್ಯಾವಾಪೃಥಿವ್ಯೌ ಯುವೋರ್ಯುವಯೋರ್ಋತಮಾನೃಶಂಸ್ಯಂ ಸತ್ಯಂ ಯಥಾರ್ಥಮಸ್ತು । ಯುವಾಂ ನೋಽಸ್ಮಾಕಂ ಮಹೇ ಮಹತೇ ಸುವಿತಾಯಾಭ್ಯುದಯಾಯ ಯಜ್ಞಸಮಾಪ್ತ್ಯರ್ಥಂ ಸು ಸುಷ್ಠು ಪ್ರ ಭೂತಂ । ಪ್ರಭವತಂ । ಹೇ ಅಗ್ನೇ ದಿವೇ ಪೃಥಿವ್ಯೈ ಚೇದಂ ನಮೋಽಸ್ತು । ಪ್ರಯಸಾ ಹವಿರ್ಲಕ್ಷಣೇನಾನ್ನೇನ ಸಪರ್ಯಾಮಿ ಪರಿಚರಾಮಿ । ರತ್ನಮುತ್ತಮಂ ಧನಂ ಯಾಮಿ। ಯಾಚೇ । ಯಾತಿರ್ಯಾಞ್ಚಾಕರ್ಮಾ ಈಮಹ ಇತ್ಯಾದಿಷು ಪಠಿತತ್ವಾತ್ ॥ ಷು । ಸಂಹಿತಾಯಾಂ ಸುಞಃ ಇತಿ ಷತ್ವಂ । ಣಃ । ಸಂಹಿತಾಯಾಂ ನಶ್ಚ ಧಾತುಸ್ಥೋರುಷುಭ್ಯ ಇತಿ ಣತ್ವಂ । ಸುವಿತಾಯ । ಇಣ್ ಗತೌ। ಅಧಿಕರಣೇ ಕ್ತಃ। ಶೋಭನಂ ಗಮ್ಯತೇಽಸ್ಮಿನ್ನಿತಿ ಸುವಿತಂ । ಉವಙಾದೇಶಶ್ಛಾಂದಸಃ। ಭೂತಂ । ಭವತೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕಿ ರೂಪಂ । ಯದ್ವಾ । ಛಾಂದಸೇ ಲುಙಿ ಸಿಚೋ ಗಾತಿಸ್ಥೇತಿ ಲುಕ್ । ನಿಘಾತಃ । ದಿವೇ ಪೃಥಿವ್ಯೈ । ನಮಃಸ್ವಸ್ತೀತ್ಯಾದಿನಾ । ಪಾ। ೨-೩-೧೬ । ಚತುರ್ಥೀ । ಸಪರ್ಯಾಮಿ ಕಂಡ್ವಾದಿಃ ಪರಿಚರಣೇ ವರ್ತತೇ । ಪ್ರತ್ಯಯಸ್ವರಃ । ಯಾಮಿ । ಯಾತೇರ್ಲಟಿ ರೂಪಂ । ವಾಕ್ಯಭೇದಾದನಿಘಾತಃ ॥

ಪ್ರತಿಪದಾರ್ಥ

ರೋದಸೀ—ಎಲೈ ದ್ಯಾವಾಪೃಥಿವಿಗಳೇ । ಯುವೋಃ—ನಿಮ್ಮಿಬ್ಬರ । ಸತ್ಯಂ—ಸತ್ಯಾತ್ಮಕವಾದ ಸ್ವರೂಪವು । ಋತಂ—ಅಪ್ರತಿಹತವಾದುದಾಗಿ । ಅಸ್ತು—ಶಾಶ್ವತವಾಗಿರಲಿ । ನಃ—ನಮ್ಮ । ಮಹೇ—ಮಹತ್ತಾದ । ಸುವಿತಾಯ—ಯಜ್ಞಸಮಾಪ್ತಿಗಾಗಿ । ಸು ಪ್ರಭೂತಂ—ಅನುಗ್ರಹಾತ್ಮಕರಾಗಿರಿ । ಅಗ್ನೇ—ಎಲೈ ಅಗ್ನಿಯೇ ।

CC-0. Jangamwadi Math Collection. Digitized by eGangotri

**ದಿವೇ**—ದ್ಯುಲೋಕದೇವತೆಗೂ | **ಪೃಥಿವ್ಯೈ**—ಪೃಥಿವಿಗೂ | **ಇದಂ ನಮಃ**–ಈ ನಮಸ್ಕಾರವು ಅರ್ಪಿತವಾಗುತ್ತದೆ' **ಪ್ರಯಸಾ**—ಹವಿಸ್ಸಿನರೂಪದ ಅನ್ನದಿಂದ | **ಸಪರ್ಯಾಮಿ**—ಪೂಜಿಸುತ್ತೇನೆ | **ರತ್ನಂ**—ಉತ್ತಮವಾದ ಧನವನ್ನು | **ಯಾಮಿ**— ಯಾಚಿಸುತ್ತೇನೆ.

ಭಾವಾರ್ಥ

ಎಲೈ ದ್ಯಾವಾಪೃಥಿವಿಗಳೇ, ನಿಮ್ಮಿಬ್ಬರ ಸತ್ಯಾತ್ಮಕವಾದ ಸ್ವರೂಪವು ಅಪ್ರತಿಹತವಾದುದಾಗಿಯೂ, ಶಾಶ್ವತವಾದುದಾಗಿಯೂ ಇರಲಿ ನಮ್ಮ ಮಹತ್ತಾದ ಯಜ್ಞದ ಸಮಾಪ್ತಿಗಾಗಿ ನಮ್ಮಮೇಲೆ ಅನುಗ್ರಹಾತ್ಮಕರಾಗಿರಿ. ಎಲೈ ಅಗ್ನಿಯೇ, ದ್ಯುಲೋಕದೇವತೆಗೂ, ಪೃಥಿವಿಗೂ ಈ ನನ್ನ ನಮಸ್ಕಾರವು ಅರ್ಪಿತವಾಗುತ್ತದೆ. ನಾನು ಅವರನ್ನು ಹವಿಸ್ಸಿನರೂಪದ ಅನ್ನದಿಂದ ಪೂಜಿಸಿ ಉತ್ತಮವಾದ ಧನವನ್ನು ಯಾಚಿಸುತ್ತೇನೆ.

English Translation

Heaven and earth, may your truth be ever inviolable : be propitous to us for the due completion of the rite : this adoration (Agni) is offered to heaven and earth : I worship (them) with (sacrificial) food ; I solicit of them precious (wealth).

ವಿಶೇಷವಿಷಯಗಳು

**ಯುವೋಃ ಋತಂ ರೋದಸೀ ಸತ್ಯಮಸ್ತು**—ಹೇ ದ್ಯಾವಾಪೃಥಿವ್ಯೌ **ಯುವಯೋಃ ಆನೃಶಂಸ್ಯಂ ಯಥಾರ್ಥಮಸ್ತು** | ಋತ ಶಬ್ದವು ಯಾಸ್ಕರಿಂದ (ನಿ. ೪–೧೯) **ಸತ್ಯಂ ವಾ ಯಜ್ಞಂ ವಾ** ಎಂಬ ಅರ್ಥಗಳಲ್ಲಿ ಯೂ, ಇನ್ನೂ ಇತರವಾದ ಅರ್ಥಗಳಲ್ಲಿಯೂ ಪ್ರಯುಕ್ತವಾಗಿದೆ. ಇಲ್ಲಿ ಭಾಷ್ಯಕಾರರು ಋತಶಬ್ದಕ್ಕೆ ಉದಾರವಾದ ಮನಸ್ಸಿನಿಂದ ಇರುವುದು ಎಂದು ಅರ್ಥವನ್ನು ವಿವರಿಸಿ, ದ್ಯಾವಾಪೃಥಿವಿಗಳು ಯಜಮಾನನಿಗಾಗಿ ಉದಾರವಾದ ಮನಸ್ಸುಳ್ಳವರಾಗಿರಲಿ ಎಂದು ಪ್ರಾರ್ಥನಾರೂಪವಾದ ಅರ್ಥವನ್ನು ಹೇಳಿದ್ದಾರೆ. ಈ ದ್ಯಾವಾಪೃಥಿವಿಗಳ ಸ್ವಭಾವವು ಯಜಮಾನನ ವಿಷಯದಲ್ಲಿ ಅರ್ಥಕ್ಕನುಗುಣವಾಗಿ ಶ್ರೇಷ್ಠವಾಗಿಯೂ, ಸಹನೆಯುಳ್ಳದ್ದಾಗಿಯೂ ಇರಲಿ ಎಂದು ಯಜಮಾನನ ಪ್ರಾರ್ಥನೆಯು ಸೂಚಿತವಾಗಿದೆ.

ಎರಡನೆಯ ವಾಕ್ಯದಲ್ಲಿ **ಸುವಿತಾಯ** ಎಂಬ ಪದವು **ಶೋಭನಂ ಗಮ್ಯತೇ ಅಸ್ಮಿನ್ ಇತಿ ಸುವಿತಂ**— ಶ್ರೇಯಸ್ಸು ಇದರಿಂದ ಉಂಟಾಗುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಆದುದರಿಂದ **ಸುವಿತಾಯ ಅಭ್ಯುದಯಾಯ ಯಜ್ಞಸಮಾಪ್ತ್ಯರ್ಥಂ**—ಶ್ರೇಯಸ್ಸನ್ನು ಉಂಟುಮಾಡುವ ಯಜಮಾನನ ಯಜ್ಞಸಮಾಪ್ತಿಗಾಗಿ ಈ ದ್ಯಾವಾಪೃಥಿವಿಗಳು ಉದ್ದೇಶವುಳ್ಳವರಾಗಿ ಇರಲಿ ಎಂದೂ ಯಜಮಾನನ ಆಶಂಸನೆಯು ವರ್ಣಿತವಾಗಿದೆ.

**ಪ್ರಯಸ್** ಎಂಬ ಪದವು (ನಿ ೩–೯) ಅನ್ನನಾಮಗಳಲ್ಲಿ ಉಕ್ತವಾಗಿದೆ ಯಜಮಾನನು ದ್ಯಾವಾಪೃಥಿವಿ ಗಳನ್ನು ಹವಿಸ್ಸಿನರೂಪವಾದ ಅನ್ನದಿಂದ ತೃಪ್ತಿಗೊಳಿಸುವುದಾಗಿಯೂ, ಅಗ್ನಿಯನ್ನು ನಮಸ್ಕರಿಸಿ, ದ್ಯಾವಾಪೃಥಿವಿ ಗಳನ್ನು ಪೂಜಿಸಿ, ಉತ್ತಮವಾದ ಧನವನ್ನು ಹೊಂದುವುದಕ್ಕಾಗಿ ಪ್ರಾರ್ಥನೆಮಾಡುವನೆಂಬೂ ಯಜಮಾನನ ಆಶಂಸ ನೆಯು ಉಕ್ತವಾಗಿದೆ.

———— :O: ————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಉತೋ ಹಿ ವಾಂ ಪೂರ್ವ್ಯಾ ಆವಿವಿದ್ರ ಋತಾವರೀ ರೋದಸೀ ಸತ್ಯವಾಚಃ।
ನರಶ್ಚಿದ್ವಾಂ ಸಮಿಥೇ ಶೂರಸಾತೌ ವವಂದಿರೇ ಪೃಥಿವಿ ವೇವಿದಾನಾಃ ॥೪॥

ಪದಪಾಠಃ

ಉತೋ ಇತಿ । ಹಿ । ವಾಂ । ಪೂರ್ವ್ಯಾಃ । ಆऽವಿವಿದ್ರೇ । ಋತವರೀ ಇತ್ಯೃತऽವರೀ । ರೋದಸೀ ಇತಿ । ಸತ್ಯऽವಾಚಃ ।
ನರಃ । ಚಿತ್ । ವಾಂ । ಸಮ್ऽಇಥೇ । ಶೂರऽಸಾತೌ । ವವಂದಿರೇ । ಪೃಥಿವಿ । ವೇವಿದಾನಾಃ ॥ ೪ ॥

ಸಾಯಣಭಾಷ್ಯಂ

ಉತೋ ಅಪಿ ಚ ಹೇ ಋತಾವಾರೀ । ಋತಂ ಸತ್ಯಂ । ತದ್ವತ್ಯೌ ಹೇ ರೋದಸೀ ದ್ಯಾವಾಪೃಥಿವ್ಯೌ ಪೂರ್ವ್ಯಾಃ ಪೂರ್ವೇ ಭವಾಃ ಪುರಾತನಾಃ ಸತ್ಯವಾಚೋ ಮಹರ್ಷಯೋ ವಾಂ ಯುವಾಭ್ಯಾಮಾವಿವಿದ್ರೇ ಹಿ । ತಂ ತಮಪೇಕ್ಷಿತಮರ್ಥಂ ಲೇಭಿರೇ ಖಲು । ತಥಾ ಹೇ ಪೃಥಿವಿ ಶೂರಸಾತೌ ಶೂರಾಣಾಂ ಸಾತಿರ್ಲಾಭೋ ಯಸ್ಮಿನ್ ತಸ್ಮಿನ್ಸಮಿಥೇ ಸಂಗಮನನಿಮಿತ್ತೇ ಯುದ್ಧೇ ನರಶ್ಚಿದದ್ಯತನಾ ಮನುಷ್ಯಾಶ್ಚ ವಾಂ ಯುವಯೋರ್ಮಾಹಾತ್ಮ್ಯಂ ವೇವಿದಾನಾ ಜಾನಂತೋऽತೋ ದ್ಯಾವಾಪೃಥಿವ್ಯೌ ವವಂದಿರೇ । ಸ್ತುವಂತಿ ॥ ಆವಿವಿದ್ರೇ । ವಿದ್ಲೃ ಲಾಭೇ ಇತ್ಯಯಮುಭಯಪದೀ । ಲಿಟಿ ಇರಯೋ ರ ಇತಿ ರೇಆದೇಶಃ । ಸಹ ಸುಪೇತ್ಯತ್ರ ಸಹೇತಿ ಯೋಗವಿಭಾಗಾದಾಙಾ ಸಹ ಸಮಾಸಃ । ಸಮಿಥೇ । ಇಣ್ ಗತೌ । ಸಮಿಣಾಣ ಇತಿ ಥಕ್ಪ್ರತ್ಯಯಃ । ಪ್ರತ್ಯಯಸ್ವರಃ ॥

ಪ್ರತಿಪದಾರ್ಥ

**ಉತೋ**—ಮತ್ತು । **ಋತಾವರೀ**—ಸತ್ಯಾತ್ಮಕರಾದ । **ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಪೂರ್ವ್ಯಾಃ**—ಪುರಾತನರೂ । **ಸತ್ಯವಾಚಃ**—ಸತ್ಯವಾಕ್ಕುಳ್ಳವರೂ ಆದ ಮಹರ್ಷಿಗಳು । **ವಾಂ**—ನಿಮ್ಮ ಅನುಗ್ರಹದಿಂದ । **ಆ ವಿವಿದ್ರೇ ಹಿ**—ತಮ್ಮ ಅಪೇಕ್ಷಿತಾರ್ಥಗಳನ್ನು ಪಡೆದರು। **ಪೃಥಿವಿ**—ಎಲೈ ಪೃಥಿವಿಯೇ । **ಶೂರಸಾತೌ**—ಶೂರರು ಹೋರಾಡತಕ್ಕ । **ಸಮಿಥೇ**—ಯುದ್ಧದಲ್ಲಿ । **ನರಶ್ಚಿತ್**—ಯುದ್ಧಮಾಡತಕ್ಕ ನರರೆಲ್ಲರೂ । **ವಾಂ**—ನಿಮ್ಮ ಮಾಹಾತ್ಮ್ಯವನ್ನು । **ವೇವಿದಾನಾಃ**—ತಿಳಿದವರಾಗಿ । **ವವಂದಿರೇ**—(ನಿಮ್ಮನ್ನು) ಸ್ತುತಿಸುತ್ತಾರೆ.

ಭಾವಾರ್ಥ

ಸತ್ಯಾತ್ಮಕರಾದ ದ್ಯಾವಾಪೃಥಿವಿಗಳೇ, ಪುರಾತನರೂ, ಸತ್ಯವಾಕ್ಕುಳ್ಳವರೂ ಆದ ಮಹರ್ಷಿಗಳು ನಿಮ್ಮ ಅನುಗ್ರಹದಿಂದ ತಮ್ಮ ಅಪೇಕ್ಷಿತಾರ್ಥಗಳನ್ನು ಪಡೆದರಲ್ಲವೇ ? ಎಲೈ ಪೃಥಿವಿಯೇ, ಶೂರರು ಹೋರಾಡತಕ್ಕ ಯುದ್ಧದಲ್ಲಿ ಯೋಧರಾದ ನರರೆಲ್ಲರೂ ನಿಮ್ಮ ಮಾಹಾತ್ಮ್ಯವನ್ನು ತಿಳಿದವರಾಗಿ ನಿಮ್ಮನ್ನು ಸ್ತುತಿಸುತ್ತಾರೆ.

CC-0. Jangamwadi Math Collection. Digitized by eGangotri

English Translation

Heaven and earth, endowed with truth, they who are the ancient declarers of the truth, have obtained from you (what they desired); and so, earth, men cognizant (of the greatness of you both) have worshipped you for the sake of triumphing over (hostile) heroes in battle.

ವಿಶೇಷವಿಷಯಗಳು

ಸತ್ಯವಾಕ್ಕುಗಳುಳ್ಳ ಪೂರ್ವಿಕರಾದ ಮಹರ್ಷಿಗಳಿಗೂ ಅನುಗ್ರಹವನ್ನು ಉಂಟುಮಾಡುವ ಮತ್ತು ಯುದ್ಧಗಳಲ್ಲಿ ಹೋರಾಡುವ ವೀರರಿಗೂ ಶ್ರೇಯಸ್ಸನ್ನು ಉಂಟುಮಾಡುವ ದ್ಯಾವಾಪೃಥಿವಿಗಳ ನಿರತಿಶಯವಾದ ಮತ್ತು ಪ್ರಭೂತವಾದ ಮಹಾತ್ಮ್ಯೆಯು ವರ್ಣಿತವಾಗಿದೆ.

———————

ಸಂಹಿತಾಪಾಠಃ

ಕೋ ಅದ್ಧಾ ವೇದ ಕ ಇಹ ಪ್ರ ವೋಚದ್ದೇವಾಁ ಅಚ್ಛಾ ಪಥ್ಯಾ೩ ಕಾ ಸಮೇತಿ ।
ದದೃಶ್ರ ಏಷಾಮವಮಾ ಸದಾಂಸಿ ಪರೇಷು ಯಾ ಗುಹ್ಯೇಷು ವ್ರತೇಷು ॥

ಪದಪಾಠಃ

ಕಃ । ಅದ್ಧಾ । ವೇದ । ಕಃ । ಇಹ । ಪ್ರ । ವೋಚತ್ । ದೇವಾನ್ । ಅಚ್ಛ । ಪಥ್ಯಾ । ಕಾ । ಸಂ । ಏತಿ ।
ದದೃಶ್ರೇ । ಏಷಾಂ । ಅವಮಾ । ಸದಾಂಸಿ । ಪರೇಷು । ಯಾ । ಗುಹ್ಯೇಷು । ವ್ರತೇಷು ॥ ೫ ॥

ಸಾಯಣಭಾಷ್ಯಂ

ಕೋ ವಾದ್ಧಾ ಸತ್ಯಭೂತಂ ತಾದೃಶಮರ್ಥಂ ವೇದ । ವೇತ್ತಿ । ಕೋ ವೇಹಾಸ್ಮಿನ್ಲೋಕೇ ಜ್ಞಾತಮರ್ಥಂ ಪ್ರ ವೋಚತ್ । ಪ್ರ ಬ್ರವೀತಿ । ಕಿಂ ತತ್ತದುಚ್ಯತೇ । ದೇವಾನಚ್ಛಾಭಿಲಕ್ಷ್ಯ ಕಾ ಪಥ್ಯಾ ಪಥಿ ಸಾಧುಃ ಸಮೀಚೀನಃ ಕೋ ವಾ ಮಾರ್ಗಃ ಸಮೇತಿ । ಸಮ್ಯಕ್ ಪ್ರಾಪ್ನೋತೀತಿ । ಇಮಮರ್ಥಂ ನ ಕಶ್ಚಿಜ್ಜಾನಾತಿ । ನ ಕೋಽಪಿ ಬ್ರವೀತಿ । ಕಿಂ ತೇ ದೇವಾ ವಿದ್ಯಂತೇ । ವಾಢಮಿತ್ಯಾಹ । ಏಷಾಂ ದಿವಿ ಸ್ಥಿತಾನಾಂ ನಕ್ಷತ್ರರೂಪಾಣಾಂ ದೇವಾನಾಮವಮಾಧೋಮುಖಾನಿ ಸದಾಂಸಿ ಸ್ಥಾನಾನಿ ದದೃಶ್ರೇ । ದೃಶ್ಯಂತೇ । ತಥಾಪಿ ಪರೇಷೂತ್ತಮೇಷು ಗುಹ್ಯೇಷು ದುರ್ಜ್ಞಾನೇಷು ವ್ರತೇಷು ಕರ್ಮಸ್ವನುಷ್ಠಿತೇಷು ಯಾ ಯಾನಿ



CC-0. Jangamwadi Math Collection. Digitized by eGangotri

ದಿವಿ ದೇವಸ್ಥಾನಾನಿ ಲಭ್ಯಂತೇ ತತ್ರಾಗಂತುಂ ಕೋ ಮಾರ್ಗ ಇತಿ ವೇದಮಂತರೇಣ ನ ಕಶ್ಚಿಜ್ಜಾನಾತೀತ್ಯ-ಭಿಪ್ರಾಯಃ ॥ ಅದ್ಧಾ । ಸ್ವರಾದಿಷ್ವಂತೋದಾತ್ತತ್ವೇನ ಪಠಿತತ್ವಾದಂತೋದಾತ್ತಃ । ಪ್ರೋಚೇತ್ । ಬ್ರೂಞ್ ವ್ಯಕ್ತಾಯಾಂ ವಾಚಿ ಲುಙಃ ಬ್ರುವೋ ವಚಿರಿತಿ ವಚ್ಯಾದೇಶಃ । ಅಸ್ಯತಿವಕ್ತಿಖ್ಯಾತಿಭ್ಯ ಇತಿ ಚ್ಲೇರಙಾ-ದೇಶಃ । ವಚ ಉಮಿತ್ಯುಮಾಗಮಃ । ನಿಘಾತಃ ॥

ಪ್ರತಿಪದಾರ್ಥ

**ಅದ್ಧಾ**—ಸತ್ಯಾರ್ಥವನ್ನು ತಿಳಿಸುವ ಮಾರ್ಗವನ್ನು । **ಕಃ ವೇದ**—ಯಾವನು ತಾನೇ ಅರಿತಿದ್ದಾನೆ । **ಇಹ**—ಈ ವಿಷಯದಲ್ಲಿ । **ಕಃ**—ಯಾವನು ತಾನೇ । **ಪ್ರ ವೋಚತ್**—ನಿಶ್ಚಿತಾರ್ಥವನ್ನು ತಿಳಿಸಬಲ್ಲನು । **ಕಾ ಪಥ್ಯಾ**—ಯಾವ ಮಾರ್ಗವು । **ದೇವಾನ್ ಅಚ್ಛ**—ದೇವತೆಗಳಿಗೆ ಅಭಿಮುಖವಾಗಿ । **ಸಮೇತಿ**—ಕರೆದು ಕೊಂಡು ಹೋಗುವುದೆಂಬುದನ್ನೂ ಸಹ (ಯಾರೂ ಅರಿಯಲಾರರು) । **ವಿಷಾಃ**—ನಕ್ಷತ್ರರೂಪದಲ್ಲಿರುವ ದೇವತೆಗಳ । **ಅವಮಾ**—ಅಧೋಮುಖವಾದ । **ಸದಾಂಸಿ**—ಸ್ಥಾನಗಳು ಮಾತ್ರ । **ದದೃಶ್ರೇ**-ಕಾಣಿಸಿಕೊಳ್ಳುತ್ತವೆ । **ಪರೇಷು**-ಉತ್ತಮವಾದವೂ । **ಗುಹ್ಯೇಷು**—ಗೂಢವಾದವೂ ಆದ । **ವ್ರತೇಷು**—ಕರ್ಮಗಳಲ್ಲಿ ನಿರತರಾದ ದೇವತೆಗಳ । **ಯಾ**—ಯಾವ ಸ್ಥಾನಗಳಿವೆಯೋ (ಅವನ್ನು ಯಾರೂ ಅರಿಯಲಾರರು).

ಭಾವಾರ್ಥ

ಸತ್ಯಾರ್ಥವನ್ನು ತಿಳಿಸುವ ಮಾರ್ಗವನ್ನು ಯಾವನುತಾನೇ ಅರಿತಿದ್ದಾನೆ ? ಈ ವಿಷಯದಲ್ಲಿ ಯಾವನು ತಾನೇ ನಿಶ್ಚಿತಾರ್ಥವನ್ನು ತಿಳಿಸಬಲ್ಲನು ? ದೇವತೆಗಳ ಅಭಿಮುಖವಾಗಿ ಕರೆದುಕೊಂಡುಹೋಗುವ ಮಾರ್ಗವನ್ನು ಯಾರೂ ಅರಿಯಲಾರರು. ನಕ್ಷತ್ರರೂಪದಲ್ಲಿರುವ ದೇವತೆಗಳ ಅಧೋಮುಖವಾದ ಸ್ಥಾನಗಳು ಮಾತ್ರ ಕಾಣಿಸಿ ಕೊಳ್ಳುತ್ತವೆ ಉತ್ತಮವಾದವೂ, ಗೂಢವಾದವೂ ಆದ ಕರ್ಮಗಳಲ್ಲಿ ನಿರತರಾದ ದೇವತೆಗಳ ಗುಪ್ತವಾದ ಸ್ಥಾನ ಗಳನ್ನು ಯಾರೂ ತಿಳಿಯಲಾರರು.

English Translation

Who knows what is the truth, or who may here declare it ? what is the proper path that leads to the gods ? their inferior abiding places are beheld, as are those which (are situated) in superior mysterious rites.

ವಿಶೇಷವಿಷಯಗಳು

**ಕೋ ಅದ್ಧಾ ವೇದ ಕ ಇಹ ಪ್ರವೋಚತ್ ಕಾ ಪಥ್ಯಾ ಅಚ್ಛಾ ದೇವಾನ್ ಸಮಿತಿ** ಎಂಬ ವಾಕ್ಯಗ ಳಿಂದ ದೇವತೆಗಳ ಸ್ವರೂಪವೂ ಈ ದೇವತೆಗಳ ಅನುಗ್ರಹವನ್ನು ಹೊಂದಲು ನೇರವಾಗಿರುವ ಮಾರ್ಗವೂ ಯಾರಿಂದಲೂ ನಿಶ್ಚಿತವಾಗಿ ತಿಳಿಯಲು ಮತ್ತು ಇತರರಿಗೆ ತಿಳಿಸಲೂ ಕೂಡ ಅಶಕ್ಯವಾಗಿರುವುದು. ಇಂತಹ ದೇವತೆಗಳನ್ನು ಸೂಕ್ಷ್ಮ ರೂಪದಿಂದ ಇರುವಂತೆ ಒಳಗೊಂಡಿರುವ ದ್ಯಾವಾಪೃಥಿವಿಗಳ ಮಹತ್ತ್ವವು ಅನಿರ್ವಚನೀಯವಾಗಿರುವುದು ಎಂದೂ ನಕ್ಷತ್ರರೂಪದಿಂದ ಕಾಣುತ್ತಿರುವ ಈ ದೇವತೆಗಳನ್ನು ಹೊಂದಲು ಅನುರೂಪವಾದ ಈ ಮಾರ್ಗವನ್ನು ವೇದಗಳ ಅರ್ಥಜ್ಞಾನದಿಂದಲೂ, ವೇದಬೋಧಿತವಾದ ಕರ್ಮಗಳ ಅನುಷ್ಠಾನದಿಂದಲೂ ತಿಳಿಯಬಹುದಾಗಿರುವುದು ಎಂದೂ

CC-0. Jangamwadi Math Collection. Digitized by eGangotri

ವೇದಗಳ ಪ್ರಭೂತವಾದ ಮಾಹಾತ್ಮ್ಯವು ಉಕ್ತವಾಗಿದೆ. ಈ ಅಭಿಪ್ರಾಯವನ್ನು ಸಾಯಣರು ಯಾ ಪರೇಷು ಗುಹ್ಯೇಷು ವ್ರತೇಷು ದದೃಶ್ರೇ—ಉತ್ತಮೇಷು ದುರ್ಜ್ಞಾನೇಷು ಕರ್ಮಸು ಅನುಷ್ಠಿತೇಷು ಯಾನಿ ದಿವಿ ದೇವಸ್ಥಾನಾನಿ ಲಭ್ಯಂತೇ ತತ್ರಾ ಗಂತುಂ ಕೋ ಮಾರ್ಗ ಇತಿ ವೇದಮಂತರೇಣ ನ ಕಶ್ಚಿತ್ ಜಾನಾತಿ ಎಂಬ ವಾಕ್ಯದಿಂದ ವ್ಯಕ್ತಗೊಳಿಸಿರುತ್ತಾರೆ.

———————

ಸಂಹಿತಾಪಾಠಃ

ಕವಿರ್ನೃಚಕ್ಷಾ ಅಭಿ ಷೀಮಚಷ್ಟ ಋತಸ್ಯ ಯೋನಾ ವಿಘೃತೇ ಮದಂತೀ।
ನಾನಾ ಚಕ್ರಾತೇ ಸದನಂ ಯಥಾ ವೇಃ ಸಮಾನೇನ ಕ್ರತುನಾ ಸಂವಿದಾನೇ॥

ಪದಪಾಠಃ

ಕವಿಃ । ನೃಽಚಕ್ಷಾಃ । ಅಭಿ । ಸೀಂ । ಅಚಷ್ಟ । ಋತಸ್ಯ । ಯೋನಾ । ವಿಘೃತೇ ಇತಿ ವಿಽಘೃತೇ । ಮದಂತೀ ಇತಿ ।

ನಾನಾ । ಚಕ್ರಾತೇ ಇತಿ । ಸದನಂ । ಯಥಾ । ವೇಃ । ಸಮಾನೇನ । ಕ್ರತುನಾ । ಸಂವಿದಾನೇ ಇತಿ ಸಂಽವಿದಾನೇ ॥ ೬ ॥

ಸಾಯಣಭಾಷ್ಯಂ

ಕವಿಃ ಕ್ರಾಂತದರ್ಶೀ ನೃಚಕ್ಷಾ ನೃಣಾಂ ದ್ರಷ್ಟಾ ಸೂರ್ಯಃ ಸೀಮೇತೇ ದ್ಯಾವಾಪೃಥಿವ್ಯಾವಭ್ಯಚಷ್ಟ । ಸರ್ವತಃ ಪಶ್ಯತಿ । ಋತಸ್ಯ ಯೋನಾ ಜಲಸ್ಯ ಸ್ಥಾನೇಽಂತರಿಕ್ಷೇ ಮದಂತೀ ಹೃಷ್ಯಂತ್ಯೌ ವಿಘೃತೇ । ಘೃತಮಸ್ಯಾ ಓಷಧಯೋ ಜಲಮಮುಷ್ಯಾ ಇತಿ । ಏವಂವಿಧರಸೋಪೇತೇ ಸಮಾನೇನ । ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ । ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯ ಇತಿ ಪರಸ್ಪರಪ್ರೀಣನಾಖ್ಯೇನೈಕೇನ ಕ್ರತುನಾ ಕರ್ಮಣಾ ಸಂವಿದಾನೇ ಪರಸ್ಪರಮೈಕಮತ್ಯಂ ಪ್ರಾಪ್ತೇ ತೇ ದ್ಯಾವಾಪೃಥಿವ್ಯೌ ನಾನಾ ಪೃಥಗ್ಭೂತಂ ಸದನಂ ಸ್ಥಾನಂ ಚಕ್ರಾತೇ । ತಥಾ ಚ ಶ್ರುತಿಃ । ಇಮೌ ವೈ ಲೋಕೌ ಸಹಾಸ್ತಾಂ ತೌ ವ್ಯೈತಾಮಿತಿ । ತತ್ರ ದೃಷ್ಟಾಂತಃ । ಯಥಾ ವೇಃ ಕುಲಾಯಂ ನಾನಾ ಭವತಿ ತದ್ವತ್ ॥ ಅಚಷ್ಟ । ಚಕ್ಷಿಙ್ ವ್ಯಕ್ತಾಯಾಂ ವಾಚೀತ್ಯಸ್ಯ ಲಙಿ ಸ್ಕೋಃ ಸಂಯೋಗಾದ್ಯೋರಿತಿ ಕಕಾರಲೋಪಃ । ನಿಘಾತಃ । ಸಂವಿದಾನೇ । ವಿದ ಜ್ಞಾನ ಇತ್ಯಸ್ಯ ಸಮೋ ಗಮ್ಯೃಚ್ಛ್ಯಾದಿನಾತ್ಮನೇಪದೇ ಶಾನಚ್ । ಚಿತ್ತ್ವಾದಂತೋದಾತ್ತಃ ॥

ಪ್ರತಿಪದಾರ್ಥ

ಕವಿಃ—ಕ್ರಾಂತದರ್ಶಿಯಾದವನೂ । ನೃಚಕ್ಷಾಃ—ಸಕಲ ಪ್ರಜೆಗಳನ್ನೂ ವೀಕ್ಷಿಸುವವನೂ ಆದ ಆದಿತ್ಯನು। ಸೀಂ—ಈ ದ್ಯಾವಾಪೃಥಿವಿಗಳನ್ನು । ಅಭಿ ಅಚಷ್ಟ—ಸುತ್ತಲೂ ವೀಕ್ಷಿಸುತ್ತಾನೆ । ಋತಸ್ಯ—ಉದಕಕ್ಕೆ ।

CC-0. Jangamwadi Math Collection. Digitized by eGangotri

**ಯೋನಾ**—ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ । **ಮದಂತೀ**— ಹರ್ಷಿಸುವವರೂ । **ವಿಭೃತೇ**—ನಾನಾವಿಧವಾದ ರಸಾತ್ಮಕರೂ ಆದ ದ್ಯಾವಾಪೃಥಿವಿಗಳು । **ವೇಃ ಯಥಾ**—ಪಕ್ಷಿಗಳು ಪ್ರತ್ಯೇಕವಾದ ಗೂಡುಗಳನ್ನು ಕಟ್ಟಿಕೊಳ್ಳುವಂತೆ । **ನಾನಾ**—ಬೇರೆಬೇರೆಯಾದ । **ಸದನಂ**—ವಾಸಸ್ಥಾನವನ್ನು । **ಚಕ್ರಾತೇ**— ನಿರ್ಮಿಸಿದ್ದರೂ ಸಹ । **ಸಮಾನೇನ ಕ್ರತುನಾ**—ಪರಸ್ಪರೋಪಕಾರಕಗಳಾದ ಕರ್ಮಗಳಿಂದ । **ಸಂವಿಧಾನೇ**—ಐಕಮತ್ಯವನ್ನು ಸಂಪಾದಿಸಿದ್ದಾರೆ.

### ಭಾವಾರ್ಥ

ಕ್ರಾಂತದರ್ಶಿಯಾದವನೂ, ಸಕಲ ಪ್ರಜೆಗಳನ್ನೂ ವೀಕ್ಷಿಸುವವನೂ ಆದ ಆದಿತ್ಯನು ಈ ದ್ಯಾವಾಪೃಥಿವಿಗಳನ್ನು ಸುತ್ತಲೂ ವೀಕ್ಷಿಸುತ್ತಾನೆ. ಉದಕಕ್ಕೆ ಉತ್ಪತ್ತಿಸ್ಥಾನವಾದ ಅಂತರಿಕ್ಷದಲ್ಲಿ ಹರ್ಷಿಸುವವರೂ, ನಾನಾವಿಧವಾದ ರಸಾತ್ಮಕರೂ ಆದ ದ್ಯಾವಾಪೃಥಿವಿಗಳು ಪಕ್ಷಿಗಳು ಪ್ರತ್ಯೇಕವಾದ ಗೂಡುಗಳನ್ನು ಕಟ್ಟಿಕೊಳ್ಳುವಂತೆ ಬೇರೆಬೇರೆಯಾದ ವಾಸಸ್ಥಾನವನ್ನು ನಿರ್ಮಿಸಿದ್ದರೂ ಸಹ ಪರಸ್ಪರೋಪಕಾರಕಗಳಾದ ಕರ್ಮಗಳಿಂದ ಐಕಮತ್ಯವನ್ನು ಹೊಂದಿದ್ದಾರೆ.

### English Translation

The far-seeing beholder of mankind (the sun), surveys this heaven and earth, rejoicing when deficient in moisture in the womb of the waters (the firmament), both concurrnig in community (of function), although they occupy various dwellings, like the diversified nests of a bird.

### ವಿಶೇಷವಿಷಯಗಳು

ಋತಸ್ಯ ಯೋನಾ ಮದಂತೀ ವಿಭೃತೇ ಸಮಾನೇನ ಕ್ರತುನಾ ಸಂವಿದಾನೇ—ಜಲಸ್ಯ ಸ್ಥಾನೇ **ಅಂತರಿಕ್ಷೇ ಹೃಷ್ಯಂತ್ಯೌ ಪರಸ್ಪರಮೈಕಮತ್ಯಂ ಪ್ರಾಪ್ತೇ ತೇ ದ್ಯಾವಾಪೃಥಿವ್ಯೌ** । ಋತಶಬ್ದವು ಉದಕನಾಮಗಳಲ್ಲಿ (ನಿ. ೩-೨೪) ಉಕ್ತವಾಗಿವೆ. ಉದಕಗಳೆಲ್ಲವೂ ಒಟ್ಟುಗೂಡಿರುವ ಅಂತರಿಕ್ಷದಲ್ಲಿ ಈ ದ್ಯಾವಾಪೃಥಿವಿಗಳು ಸಂತೋಷದಿಂದ ಇರುವರು. ಇವರು ಅನ್ಯೋನ್ಯವಾಗಿ ಉಪಕಾರವನ್ನು ಆಚರಿಸುತ್ತಿರುವರು. ಅಂತರಿಕ್ಷವು ಭೂಮಿಗೆ ಉದಕವನ್ನು ಒದಗಿಸುವುದು. ಭೂಮಿಯು ಯಜ್ಞಾರ್ಹವಾದ ಘೃತವನ್ನು ಒದಗಿಸಿಕೊಡುವುದು. ಈ ಪರಸ್ಪರ ವಿನಿಮಯ ಕರ್ಮದಿಂದ ಇವರಿಬ್ಬರೂ ಪರಸ್ಪರ ಅಭಿವೃದ್ಧಿಪ್ರಾಪಕರಾಗಿರುವರು. ಈ ಅಭಿಪ್ರಾಯವನ್ನು **ಪರಸ್ಪರಪ್ರೀಣನಾಖ್ಯೇನ ಕರ್ಮಣಾ ಪರಸ್ಪರಮೈಕಮತ್ಯಂ ಪ್ರಾಪ್ತೇ** ಎಂದು ಸಾಯಣರು ವಿವರಿಸಿ **"ಸಮಾನಮೇತದುದಕಮುಚ್ಚೈತ್ಯವಚಾಹಭಿಃ । ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ"** (ಋ. ಸಂ. ೧-೧೬೪-೫೧) ಎಂಬ ವಾಕ್ಯವನ್ನು ಉದಹರಿಸಿರುವರು.

ದ್ಯಾವಾಪೃಥಿವಿಗಳು ಆಚರಿಸುತ್ತಿರುವ ಈ ಕಾರ್ಯಗಳಿಂದ ಇವರು **ನಾನಾ ಸದನಂ ಚಕ್ರಾತೇ—ಪೃಥಗ್ಭೂತಂ ಸ್ಥಾನಂ ಚಕ್ರಾತೇ** । ಬೇರೆಬೇರೆಯಾಗಿರುವ ಸ್ಥಾನಗಳನ್ನು ನಿರ್ಮಿಸಿರುವರು ಎಂದು ಅರ್ಥವನ್ನು ವಿವರಿಸಿರುವ ಸಾಯಣರು ಈ ಅಂಶದಲ್ಲಿ **'' ಇಮೌ ವೈ ಲೋಕೌ ಸಹಾ ಸ್ತಾಂ ತೌ ವ್ಯೈತಾಂ ''** (ಐ. ಬ್ರಾ. ೪-೨೭) ಎಂಬ ವಾಕ್ಯವನ್ನು ಉದಾಹರಿಸಿದ್ದಾರೆ.

CC-0. Jangamwadi Math Collection. Digitized by eGangotri

**ಯಥಾ ವೇಃ—ಕುಲಾಯಂ ನಾನಾ ಭವತಿ ತದ್ವತ್ ।** ಹಕ್ಕಿಯು ತನಗೆ ಅನುಕೂಲವಾಗಿರುವಹಾಗೆ ಗೂಡುಗಳನ್ನು ಅನೇಕವಿಧವಾಗಿ ನಿರ್ಮಿಸುವಹಾಗೆ ಈ ದ್ಯಾವಾಪೃಥಿವಿಗಳು ನಾನಾವಿಧವಾದ ಸ್ಥಾನಗಳನ್ನು ನಿರ್ಮಿಸಿರುವರು ಎಂದೂ ವಿವೃತವಾಗಿದೆ. ಮತ್ತು ಇವರಿಬ್ಬರೂ ಐಕಮತ್ಯದಿಂದ ಇರುವಿಕೆಯು ಲೋಕೋಪಕಾರಕ್ಕಾಗಿಯೇ. ಈ ವಿಷಯದಲ್ಲಿ ಆದಿತ್ಯನೂ ಸಹಾಯಕನಾಗಿರುವನೆಂಬುವುದೂ **ನೃಚಕ್ಷಾಃ ಸೀಂ ಅಭಿ ಅಚಷ್ಟ—ನೃಣಾಂ ದ್ರಷ್ಟಾ ಸೂರ್ಯಃ ಏತೌ ದ್ಯಾವಾಪೃಥಿವೀ ಸರ್ವತಃ ಪಶ್ಯತಿ** ಎಂಬ ವಾಕ್ಯದಿಂದ ಉಕ್ತವಾಗಿದೆ.

———: o :———

ಸಂಹಿತಾಪಾಠಃ

ಸಮಾನ್ಯಾ ವಿಯುತೇ ದೂರೇಅಂತೇ ಧ್ರುವೇ ಪದೇ ತಸ್ಥತುರ್ಜಾಗರೂಕೇ।

ಉತ ಸ್ವಸಾರಾ ಯುವತೀ ಭವಂತೀ ಆದು ಬ್ರುವಾತೇ ಮಿಥುನಾನಿ ನಾಮ॥

ಪದಪಾಠಃ

ಸಮಾನ್ಯಾ । ವಿಯುತೇ ಇತಿ ವಿऽಯುತೇ । ದೂರೇಅಂತೇ ಇತಿ ದೂರೇऽಅಂತೇ । ಧ್ರುವೇ । ಪದೇ ।

ತಸ್ಥತುಃ । ಜಾಗರೂಕೇ ಇತಿ ।

ಉತ । ಸ್ವಸಾರಾ । ಯುವತೀ ಇತಿ । ಭವಂತೀ ಇತಿ । ಆತ್ । ಊಂ ಇತಿ । ಬ್ರುವಾತೇ ಇತಿ । ಮಿಥುನಾನಿ । ನಾಮ ॥ ೭ ॥

ಸಾಯಣಭಾಷ್ಯಂ

ಸಮಾನ್ಯಾ ಸಮಾನೇ ಪರಸ್ಪರಪ್ರೇಣನಾಖ್ಯೇನ ಕರ್ಮಣೈಕಮತ್ಯಂ ಗತೇ ವಿಯುತೇ ವಿಯುಜ್ಯ ವರ್ತಮಾನೇ ದೂರೇಅಂತೇ । ದೂರೇऽಂತೋऽವಸಾನಂ ಯಯೋಸ್ತೇ ದೂರೇಅಂತೇ । ಅವಿನಾಶಿನ್ಯೌ ತೇ ದ್ಯಾವಾಪೃಥಿವ್ಯೌ ಜಾಗರೂಕೇ ಜಾಗರಣಶೀಲೇ ಸತ್ಯೌ ಧ್ರುವೇऽವಿನಾಶಿನಿ ಪದೇऽಂತರಿಕ್ಷೇ ತಸ್ಥತುಃ। ತಿಷ್ಠತಃ । ಉತಾಪಿ ಚ ಯುವತೀ ನಿತ್ಯತರುಣೇ ಸ್ವಸಾರಾ ಭಗಿನ್ಯಾವೇಕಸ್ಮಾದಾತ್ಮನೋ ಜಾತೇ ಇತಿ ಭವಂತೀ ತಸ್ಥತುರಿತ್ಯನ್ವಯಃ । ಆದನಂತರಂ ಮಿಥುನಾನಿ ದ್ವಂದ್ವಾನಿ ನಾಮ ಉರ್ವೀ ಪೃಥ್ವೀ ಬಹುಲೇ ದೂರೇಅಂತೇ ರೋದಸೀ ಪುರೋಹಿತೇ ಇತ್ಯಾದೀನಿ ನಾಮಾನಿ ಬ್ರುವಾತೇ । ತೇ ಪರಸ್ಪರಂ ಬ್ರೂತಃ । ಉರ್ವ್ಯಾದಿಭಿರ್ದ್ವಂದ್ವನಾಮಭಿರ್ದ್ಯಾವಾಪೃಥಿವ್ಯಾವುಚ್ಯೇತೇ ಇತ್ಯರ್ಥಃ ॥ ಸಮಾನ್ಯಾ। ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ದೂರೇಅಂತೇ । ಇಣ್ ಗತೌ । ದುರೀಣೋ ಲೋಪಶ್ಚ । ಉ. ೨-೨೦ । ಇತಿ ರಕ್ಪ್ರತ್ಯಯೋ ಧಾತೋರ್ಲೋಪಶ್ಚ । ರೋ ರೀತಿ ರೇಫಲೋಪಃ । ಢ್ರಲೋಪ ಇತಿ ದೀರ್ಘಃ । ಅಂತಶಬ್ದೋऽಮೇರಸಿಹಸೀತ್ಯಾದಿನಾ ತನ್ಪ್ರತ್ಯಯಾಂತಃ । ಸಪ್ತಮ್ಯುಪಮಾನೇತಿ ಬಹುವ್ರೀಹಿಃ । ಹಲದಂತಾ-

CC-0. Jangamwadi Math Collection. Digitized by eGangotri

**ದಿತಿ ಸಪ್ತಮ್ಯಾ ಅಲುಕ್ । ಪೂರ್ವಪದಸ್ವರಃ । ಜಾಗರೂಕೇ । ಜಾಗೃ ನಿದ್ರಾಕ್ಷಯೆ ಇತ್ಯಸ್ಮಾತ್ತಾಚ್ಛೀಲ್ಯಾರ್ಥೇ ಜಾಗರೂಕಃ । ಪಾ. ೩-೨-೧೬೫ । ಇತ್ಯೂಕಪ್ರತ್ಯಯಃ । ಪ್ರತ್ಯಯಸ್ವರಃ । ಸ್ವಸಾರಾ । ನ ಷಟ್ಸ್ವಸ್ರಾದಿಭ್ಯ ಇತಿ ಙೀಪಃ ಪ್ರತಿಷೇಧಃ ॥**

ಪ್ರತಿಪದಾರ್ಥ

**ಸಮಾನ್ಯಾ**—ಪರಸ್ಪರೋಪಕಾರಕವಾದ ಕಾರ್ಯಗಳಿಂದ ಐಕಮತ್ಯವನ್ನು ಹೊಂದಿದವರೂ। **ವಿಯುತೇ**—ಪ್ರತ್ಯೇಕವಾಗಿರುವವರೂ। **ದೂರೇಅಂತೇ**—ದೂರದಲ್ಲಿರುವವರೂ ಆದ ದ್ಯಾವಾಪೃಥಿವಿಗಳು। **ಜಾಗರೂಕೇ**—ತಮ್ಮ ಕಾರ್ಯಗಳಲ್ಲಿ ತತ್ಪರರಾಗಿ । **ಧ್ರುವೇ**—ಶಾಶ್ವತವಾದ । **ಪದೇ**—ಅಂತರಿಕ್ಷಸ್ಥಾನದಲ್ಲಿ । **ತಸ್ಥತುಃ**—ಸ್ಥಾಪಿತರಾಗಿದ್ದಾರೆ। **ಉತ**—ಮತ್ತು । **ಯುವತೀ**—ನಿತ್ಯತರುಣಿಯರೂ । **ಸ್ವಸಾರಾ**—ಭಗಿನೀಭೂತರೂ । **ಭವಂತೀ**—ಆಗಿದ್ದಾರೆ। **ಆದು**—ಅನಂತರ । **ಮಿಥುನಾನಿ ನಾಮ**—ದ್ವಂದ್ವಾತ್ಮಕವಾದ ಹೆಸರುಗಳನ್ನು । **ಬ್ರುವಾತೇ**—ನಿರ್ದೇಶಿಸಿ ಕರೆಯುತ್ತಾರೆ.

ಭಾವಾರ್ಥ

ಪರಸ್ಪರೋಪಕಾರಕವಾದ ಕಾರ್ಯಗಳಿಂದ ಐಕಮತ್ಯವನ್ನು ಹೊಂದಿದವರೂ, ದೂರದಲ್ಲಿರುವವರೂ ಆದ ದ್ಯಾವಾಪೃಥಿವಿಗಳು ತಮ್ಮ ಕಾರ್ಯಗಳಲ್ಲಿ ತತ್ಪರರಾಗಿ ಶಾಶ್ವತವಾದ ಅಂತರಿಕ್ಷಸ್ಥಾನದಲ್ಲಿ ಸ್ಥಾಪಿತರಾಗಿದ್ದಾರೆ. ಮತ್ತು ನಿತ್ಯತರುಣಿಯರೂ, ಭಗಿನೀಭೂತರೂ ಆಗಿ ಪರಸ್ಪರ ದ್ವಂದ್ವಾತ್ಮಕವಾದ ಹೆಸರುಗಳಿಂದ ನಿರ್ದೇಶಿಸಿ ಕರೆಯಲ್ಪಡುತ್ತಾರೆ.

English Translation

Common (in function), disjoined, of distant termination, they remain vigilant in a permanent station : being, as it were, sisters, and ever young : they therefore address each other by twin appellations.

ವಿಶೇಷವಿಷಯಗಳು

ದ್ಯಾವಾಪೃಥಿವಿಗಳು ಪರಸ್ಪರವಾಗಿ ಉಪಕಾರಕಗಳಾಗಿರುವುದರಿಂದ ಎಂದರೆ ಭೂಮಿಯಲ್ಲಿಉದಕವು ಸೇರಲು ಅಂತರಿಕ್ಷವೂ, ಅಂತರಿಕ್ಷದಲ್ಲಿ ಉದಕವು ಸೇರಲು ಭೂಮಿಯೂ ಐಕಮತ್ಯದಿಂದ ಕಾರ್ಯಗಳನ್ನು ಆಚರಿಸುವುವು. ಬೇರೆ ಬೇರೆಯಾಗಿ ಇರುವ ಸ್ವಭಾವವುಳ್ಳವರಾದರೂ, ಐಕಮತ್ಯದಿಂದ ಇರುವರು. ಇವರು ನಿತ್ಯತರುಣಿಯರಾಗಿ ನಿತ್ಯವಾದ ಸ್ಥಾನದಲ್ಲಿ ಇರುವುದೂ, ಸರ್ವದಾ ತಮ್ಮ ತಮ್ಮ ಕಾರ್ಯಗಳಲ್ಲಿ ಆಸಕ್ತರಾಗಿ ವ್ಯಗ್ರತೆಯಿಂದ ಇರುವುದೂ, ಆತ್ಮನಿಂದ ಉತ್ಪನ್ನವಾಗಿರುವುದೂ, ಇವುಗಳಿಂದ ಈ ದ್ಯಾವಾಪೃಥಿವಿಗಳನ್ನು ದ್ವಂದ್ವನಾಮಗಳಿಂದಲೇ ನಿರ್ದೇಶಮಾಡಿ ವ್ಯವಹರಿಸುವರು ಎಂದು ವರ್ಣಿತವಾಗಿದೆ.

**ಆದು ಮಿಥುನಾನಿ ನಾಮ ಬ್ರುವಾತೇ**—**ಅನಂತರಂ ಉರ್ವ್ಯಾದಿಭಿಃ ದ್ವಂದ್ವನಾಮಭಿರ್ದ್ಯಾವಾಪೃಥಿವ್ಯಾವುಚ್ಯೇತೇ ।** ನಿರುಕ್ತಕಾರರು ಈ ದ್ಯಾವಾಪೃಥಿವಿಗಳ ನಾಮವನ್ನು ಪಾಠಮಾಡುವಾಗ ದ್ವಂದ್ವರೂಪದಿಂದಲೇ ನಿರ್ದೇಶಮಾಡಿರುವರು. ಈ ರೀತಿಯಾಗಿ ಪಾಠಮಾಡಲು ಇವರ ಉತ್ಪತ್ತಿಯೂ, ಕಾರ್ಯಾಚರಣೆಯೂ, ಸ್ಥಿತಿಯೂ ಮುಖ್ಯಕಾರಣವಾಗಿರುತ್ತದೆ ಎಂದು ವಿವರಿಸಿದೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವಿಶ್ವೇದೇತೇ ಜನಿಮಾ ಸಂ ವಿವಿಕ್ತೋ ಮಹೋ ದೇವಾನ್ಬಿಭ್ರತೀ ನ ವ್ಯಥೇತೇ ।
ಏಜದ್ಧ್ರುವಂ ಪತ್ಯತೇ ವಿಶ್ವಮೇಕಂ ಚರತ್ಪತತ್ರಿ ವಿಷುಣಂ ವಿ ಜಾತಂ॥೮॥

ಪದಪಾಠಃ

ವಿಶ್ವಾ । ಇತ್ । ಏತೇ ಇತಿ । ಜನಿಮಾ । ಸಂ । ವಿವಿಕ್ತಃ । ಮಹಃ । ದೇವಾನ್ । ಬಿಭ್ರತೀ ಇತಿ । ನ । ವ್ಯಥೇತೇ ಇತಿ ।
ಏಜತ್ । ಧ್ರುವಂ । ಪತ್ಯತೇ । ವಿಶ್ವಂ । ಏಕಂ । ಚರತ್ । ಪತತ್ರಿ । ವಿಷುಣಂ । ವಿ । ಜಾತಂ ॥ ೮ ॥

ಸಾಯಣಭಾಷ್ಯಂ

ಏತೇ ದ್ಯಾವಾಪೃಥಿವ್ಯೌ ವಿಶ್ವೇಜ್ಜನಿಮ ಸರ್ವಾಣ್ಯಪಿ ಭೂತಜಾತಾನಿ ಸಂ ವಿವಿಕ್ತಃ । ಅವಕಾಶ-ಪ್ರದಾನೇನ ಸಂವಿಭಜ್ಯ ಕುರುತಃ । ಕಿಂಚ ಮಹೋ ಮಹತೋ ದೇವಾನಿಂದ್ರಸೂರ್ಯಾದೀನ್ ಸರಿತ್ಸ-ಮುದ್ರಪರ್ವತಾದೀಂಶ್ಚ ಬಿಭ್ರತೀ ಬಿಭ್ರಾಣೇ ಅಪಿ ನ ವ್ಯಥೇತೇ । ನ ಖಿದ್ಯೇತೇ । ಕಿಂಚ ಏಜಜ್ಜಂಗಮಾ-ತ್ಮಕಂ ಧ್ರುವಂ ಸ್ಥಾವರಾತ್ಮಕಂ ಚ ವಿಶ್ವಂ ಜಗದೇಕಂ ಸ್ಥಾನಂ ಪೃಥಿವೀಮೇವ ಪತ್ಯತೇ । ಅಭಿಗಚ್ಛತಿ । ತಥಾ ಚರಚ್ಚಂಚಲಂ ಪಶುಜಾತಂ ಪತತ್ರಿ ಪಕ್ಷಿಜಾತಂ ಚ ವಿಷುಣಂ ವಿಷ್ವಕ್ ನಾನಾರೂಪಮನಯೋ-ರ್ಮಧ್ಯೇ ವಿತಿಷ್ಠತೇ । ಯೋಗ್ಯಕ್ರಿಯಾಧ್ಯಾಹಾರಃ ॥ ವಿವಿಕ್ತಃ । ವಿಚಿರ್ ಪೃಥಗ್ಭಾವೇ । ಜುಹೋತ್ಯಾದಿಃ । ನಿಘಾತಃ । ಬಿಭ್ರತೀ । ಡುಭೃಞ್ ಧಾರಣಪೋಷಣಯೋರಿತ್ಯಸ್ಯ ಶತರಿ ನಾಭ್ಯಸ್ತಾಚ್ಛತುರಿತಿ ನುಮ-ಭಾವಃ । ಅಭ್ಯಸ್ತಸ್ವರಃ । ಏಜತ್ । ಏಜೃ ಕಂಪನೇ । ಶತರಿ ರೂಪಂ । ಪತ್ಯತೇ । ಪದ ಗತೌ । ದಿವಾದಿ-ರಾತ್ಮನೇಪದೀ । ದಕಾರಸ್ಯ ತಕಾರೋ ವ್ಯತ್ಯಯೇನ । ನಿಘಾತಃ ॥

ಪ್ರತಿಪದಾರ್ಥ

ಏತೇ—ಈ ದ್ಯಾವಾಪೃಥಿವಿಗಳು । ವಿಶ್ವೇತ್—ಸಮಸ್ತವಾದ । ಜನಿಮ—ಭೂತಜಾತಗಳನ್ನೂ । **ಸಂ ವಿವಿಕ್ತಃ** ಪ್ರತ್ಯೇಕಮಾಡಿ ಅವುಗಳ ಸ್ಥಾನದಲ್ಲಿರಿಸಿವೆ । **ಮಹಃ**—ಮಹತ್ಸ್ವರೂಪವುಳ್ಳ । **ದೇವಾನ್**—ಇಂದ್ರಾದಿ ದೇವತೆಗಳನ್ನು । ಬಿಭ್ರತೀ—ಧರಿಸಿದ್ದರೂ ಸಹ । ನ ವ್ಯಥೇತೇ—ಖೇದವನ್ನು ಪಡೆಯುವುದಿಲ್ಲ । ಏಜತ್—ಜಂಗಮಾತ್ಮಕವಾದುದೂ । **ಧ್ರುವಂ**— ಸ್ಥಾವರಾತ್ಮಕವಾದುದೂ ಆದ । ವಿಶ್ವಂ—ಸಮಸ್ತ ಜಗತ್ತೂ ಸಹ । **ಏಕಂ**—(ಪೃಥಿವೀರೂಪವಾದ) ಒಂದೇಸ್ಥಾನವನ್ನು । ಪತ್ಯತೇ—ಆಶ್ರಯಿಸುತ್ತವೆ । **ಚರತ್**—ಸಂಚರಿಸತಕ್ಕ ಪಶ್ವಾದಿಗಳೂ । ಪತತ್ರಿ—ಪಕ್ಷಿಗಳೂ । ವಿಷುಣಂ—ನಾನಾರೂಪವುಳ್ಳವುಗಳಾಗಿ । ವಿ—(ದ್ಯಾವಾಪೃಥಿವಿಗಳೆರಡರ ನಡುವೆ) ಸ್ಥಾಪಿತವಾಗಿವೆ.

CC-0. Jangamwadi Math Collection. Digitized by eGangotri

ಭಾವಾರ್ಥ

ದ್ಯಾವಾಪೃಥಿವಿಗಳು ಸಮಸ್ತವಾದ ಭೂತಜಾತಗಳನ್ನೂ ಸಹ ಪ್ರತ್ಯೇಕವಮಾಡಿ ಅವುಗಳ ಸ್ಥಾನಗಳಲ್ಲಿರಿಸಿವೆ. ಮಹತ್ಸ್ವರೂಪವುಳ್ಳ ಇಂದ್ರಾದಿದೇವತೆಗಳನ್ನು ಧರಿಸಿದ್ದರೂ ಸಹ ಖೇದವನ್ನು ಹೊಂದುವುದಿಲ್ಲ. ಜಂಗಮಾತ್ಮಕವಾದುದೂ, ಸ್ಥಾವರಾತ್ಮಕವಾದುದೂ ಆದ ಸಮಸ್ತ ಜಗತ್ತೂ ಸಹ ಪೃಥಿವೀರೂಪವಾದ ಒಂದೇ ಸ್ಥಾನವನ್ನು ಆಶ್ರಯಿಸುತ್ತವೆ. ಸಂಚರಿಸತಕ್ಕ ಪಶ್ವಾದಿಗಳೂ, ಪಕ್ಷಿಗಳೂ ನಾನಾರೂಪಾತ್ಮಕವಾಗಿದ್ದು ದ್ಯಾವಾಪೃಥಿವಿಗಳೆರಡರ ನಡುವೆ ಸ್ಥಾಪಿತವಾಗಿ ಸಂಚರಿಸುತ್ತವೆ.

English Translation

These two keep all born things discrete, and, although comprehending the great divinities, are not distressed : all moving and stationary beings rest upon one (basis), whether animals, or birds, or creatures of various kinds.

ವಿಶೇಷವಿಷಯಗಳು

ಏತೇ ವಿಶ್ವೇತ್ ಸಂವಿವಿಕ್ತಃ ಮಹಃ ದೇವಾನ್ ಬಿಭ್ರತೀ ನ ವ್ಯಥೇತೇ ಎಂಬ ವಾಕ್ಯಗಳಿಂದ ಈ ದ್ಯಾವಾಪೃಥಿವಿಗಳು ಸಮಸ್ತ ಪ್ರಾಣಿಗಳಿಗೂ ಬೇರೆ ಬೇರೆಯಾಗಿರಲು ಅವಕಾಶವನ್ನು ಕಲ್ಪಿಸಿಕೊಡುವವರಾಗಿರುವರು ಮತ್ತು ಪ್ರಭೂತವಾದ ಶಕ್ತಿಯುಳ್ಳವರಾದ ಇಂದ್ರನೇ ಮೊದಲಾದ ದೇವತೆಗಳನ್ನೂ, ನದಿ, ಸಮುದ್ರ, ಪರ್ವತ, ಇವುಗಳನ್ನೂ ಧರಿಸಿದ್ದರೂ ಇದರಿಂದ ಇವರಿಗೆ ಯಾವ ವ್ಯಥೆಯೂ ಉಂಟಾಗುವುದಿಲ್ಲ ಎಂದು ವಿವೃತವಾಗಿದೆ. ಪೃಥಿವಿಯು ಸ್ಥಿರ ಚರ ರೂಪಗಳಿಂದ ಇರುವ ಪ್ರಾಣಿಗಳನ್ನು ಧರಿಸಿರುವುದರಿಂದಲೂ, ಸಂಚರಿಸುತ್ತಿರುವ ಪಶುಗಳ ಭಾವದಿಂದ ಇರುವ ಪಕ್ಷಿಗಳಿಗೆ ಅವಕಾಶವನ್ನು ಅಂತರಿಕ್ಷವು ಕಲ್ಪಿಸಿರುವುದರಿಂದಲೂ ಈ ದ್ಯಾವಾಪೃಥಿವಿಗಳ ಮಹಿಮೆಯು ವರ್ಣಿತವಾಗಿದೆ.

———

ಸಂಹಿತಾಪಾಠಃ

ಸನಾ ಪುರಾಣಮಧ್ಯೇಮ್ಯಾರಾನ್ಮಹಃ ಪಿತುರ್ಜನಿತುರ್ಜಾಮಿ ತನ್ನಃ ।
ದೇವಾಸೋ ಯತ್ರ ಪನಿತಾರ ಏವೈರುರೌ ಪಥಿ ವ್ಯುತೇ ತಸ್ಥುರಂತಃ ॥ ೯ ॥

ಪದಪಾಠಃ

ಸನಾ । ಪುರಾಣಂ । ಅಧಿ । ಏಮಿ । ಆರಾತ್ । ಮಹಃ । ಪಿತುಃ । ಜನಿತುಃ । ಜಾಮಿ । ತತ್ । ನಃ ।
ದೇವಾಸಃ । ಯತ್ರ । ಪನಿತಾರಃ । ಏವೈಃ । ಉರೌ । ಪಥಿ । ವಿ೭ಉತೇ । ತಸ್ಥುಃ । ಅಂತರಿತಿ ॥ ೯ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಹೇ ದ್ಯಾವರ್ಮಹೋ ಮಹತ್ಯಾಃ ಪಿತುಃ ಸರ್ವಸ್ಯ ಪಾಲಯಿತ್ರ್ಯಾ ಜನಿತುರ್ಜನಯಿತ್ರ್ಯಾಸ್ತವ ಪನಾ ಸನಾತನಂ ಪುರಾಣಂ ಪೂರ್ವಕ್ರಮಾಗತಂ ನೋಽಸ್ಮಾಕಂ ತಜ್ಜಾಮಿ ಜಾಮಿತ್ವಂ । ಸರ್ವಮೇಕಸ್ಮಾಜ್ಜಾತಮಿತಿ ದ್ಯೌರ್ಭಗಿನೀ ಭವತಿ । ತಾದೃಶಂ ಭಗಿನೀತ್ವಂ ತದಾರಾದಧುನಾಧ್ಯೇಮಿ । ಸ್ಮರಾಮಿ । ದಿವಃ ಪಿತೃತ್ವೇ ಜನಯಿತೃತ್ವೇ ಚ ಮಂತ್ರವರ್ಣಃ । ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ। ಋಗ್ವೇ ೧-೧೬೪-೩೩। ಇತಿ । ಯತ್ರ ಯಸ್ಯಾಂ ದಿವ್ಯಂತರ್ಮಧ್ಯ ಉರೌ ವಿಸ್ತೀರ್ಣೇ ವ್ಯುತೇ ವಿವಿಕ್ತೇ ಪಥಿ ನಭಸಿ ಪನಿತಾರಸ್ತ್ವಾಂ ಸ್ತುವಂತೋ ದೇವಾಸೋ ದೇವಾ ಏವ್ಯೈರ್ಗಮನಸಾಧನೈಃ ಸ್ವೈಃ ಸ್ವೈರ್ವಾಹನೈಃ ಸಹಿತಾಃ ಸಂತಸ್ತಸ್ಥುಃ । ತತ್ರ ಸ್ಥಿತಾ ದೇವಾ ಮದೀಯಂ ಸ್ತೋತ್ರಂ ಶೃಣ್ವಂತ್ವಿತಿ ಭಾವಃ ॥ ಪುರಾಣಂ । ಪುರಾಶಬ್ದಾತ್ ಶೈಷಿಕಾರ್ಥೇ ಸಾಯಂಚಿರಮಿತಿ ಟ್ಯುಪ್ರತ್ಯಯಃ । ಪುರಾಣಪ್ರೋಕ್ತೇಷು ಬ್ರಾಹ್ಮಣಕಲ್ಪೇಷ್ವಿತಿ ನಿಪಾತನಾತ್ತುಡಭಾವಃ । ನಿಪಾತನಾದೇವಾಂತೋದಾತ್ತತ್ವಂ । ಏಮಿ । ಇಕ್ ಸ್ಮರಣೇ । ಅದಾದಿಃ । ಲಟಿ ರೂಪಂ । ನಿಘಾತಃ । ವ್ಯುತೇ । ವೇಞ್ ತಂತುಸಂತಾನೇ । ಕರ್ಮಣಿ ಕ್ತಃ । ಯಜಾದಿತ್ವಾತ್ಸಂಪ್ರಸಾರಣಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರಃ । ತಸ್ಥುಃ । ತಿಷ್ಠತೇರ್ಲಿಟಿ ರೂಪಂ । ಯತ್ರಯೋಗಾದನಿಘಾತಃ ॥

### ಪ್ರತಿಪದಾರ್ಥ

**ಮಹಃ**—ಮಹತ್ಸ್ವರೂಪವುಳ್ಳವಳೂ । **ಪಿತುಃ**—ಪಾಲಕಳೂ । **ಜನಿತುಃ**—ಉತ್ಪತ್ತಿಕಾರಕಳೂ ಆದ ದ್ಯುಲೋಕಾಧಿದೇವತೆಯು । **ಸನಾ**—ಸನಾತನವಾದುದೂ । **ಪುರಾಣಂ**—ಪೂರ್ವದಿಂದಲೂ ಅನುಸ್ಯೂತವಾಗಿ ಬಂದುದೂ ಆದ । **ನಃ**—ನಮ್ಮೊಡನಿರುವ । **ತತ್ ಜಾಮಿ**—ಆ ಬಂಧುತ್ವವನ್ನು । **ಆರಾತ್**—ಈಗ । **ಅಧ್ಯೇಮಿ**—ಸ್ಮರಿಸಿಕೊಳ್ಳುತ್ತೇನೆ । **ಅಸ್ಯ**—ಇದೇ ದ್ಯುಲೋಕದ । **ಅಂತಃ**—ಮಧ್ಯಭಾಗದ । **ಉತಾ**—ವಿಸ್ತೀರ್ಣವಾದುದೂ । **ವ್ಯುತೇ**—ವಿವಿಕ್ತವಾದುದೂ ಆದ। **ಪಥಿ**—ಮಾರ್ಗದಲ್ಲಿ । **ಪನಿತಾರಃ**—ನಿನ್ನನ್ನು ಸ್ತುತಿಸುವವನೂ । **ದೇವಾಸಃ**—ದೇವತಾತ್ಮರೂ ಆದ ಇಂದ್ರಾದಿಗಳು । **ಏವೈಃ**—ತಮ್ಮ ತಮ್ಮ ಕುದುರೆಗಳೊಡನೆ । **ತಸ್ಥುಃ**—ಸ್ಥಾಪಿತರಾಗಿದ್ದಾರೆ.

### ಭಾವಾರ್ಥ

ಮಹತ್ಸ್ವರೂಪವುಳ್ಳವಳೂ, ಪಾಲಕಳೂ, ಉತ್ಪತ್ತಿಕಾರಕಳೂ ಆವ ದ್ಯುಲೋಕಾಧಿದೇವತೆಯು ಸನಾತನವಾದುದೂ, ಪೂರ್ವದಿಂದಲೂ ಅನುಸ್ಯೂತವಾಗಿ ಬಂದುದೂ ಆದ ನಮ್ಮೊಡನಿರುವ ಆ ಬಂಧುತ್ವವನ್ನು ಈಗ ಸ್ಮರಿಸಿಕೊಳ್ಳುತ್ತೇನೆ. ಇದೇ ದ್ಯುಲೋಕದ ಮಧ್ಯಭಾಗದಲ್ಲಿ ವಿಸ್ತೀರ್ಣವಾದುದೂ ವಿವಿಕ್ತವಾದುದೂ ಆದ ಮಾರ್ಗದಲ್ಲಿ ನಿನ್ನನ್ನು ಸ್ತುತಿಸುವವರೂ ದೇವತಾತ್ಮರೂ ಆದ ಇಂದ್ರಾದಿಗಳು ತಮ್ಮ ತಮ್ಮ ಅಶ್ವಗಳೊಡನೆ ಸ್ಥಾಪಿತರಾಗಿದ್ದಾರೆ

### English Translation

I consider at present the eternal and ancient sisterhood to us of you, our great protectress and progenitrix, within whose vast and separated path your eulogists, the gods, travel in their chariots.

CC-0. Jangamwadi Math Collection. Digitized by eGangotri

ಭಾವಾರ್ಥ

ದ್ಯಾವಾಪೃಥಿವಿಗಳು ಸಮಸ್ತವಾದ ಭೂತಜಾತಗಳನ್ನೂ ಸಹ ಪ್ರತ್ಯೇಕವಮಾಡಿ ಅವುಗಳ ಸ್ಥಾನಗಳಲ್ಲಿರಿಸಿವೆ. ಮಹತ್ಸ್ವರೂಪವುಳ್ಳ ಇಂದ್ರಾದಿದೇವತೆಗಳನ್ನು ಧರಿಸಿದ್ದರೂ ಸಹ ಖೇದವನ್ನು ಹೊಂದುವುದಿಲ್ಲ. ಜಂಗಮಾತ್ಮಕವಾದುದೂ, ಸ್ಥಾವರಾತ್ಮಕವಾದುದೂ ಆದ ಸಮಸ್ತ ಜಗತ್ತೂ ಸಹ ಪೃಥಿವೀರೂಪವಾದ ಒಂದೇ ಸ್ಥಾನವನ್ನು ಆಶ್ರಯಿಸುತ್ತವೆ. ಸಂಚರಿಸತಕ್ಕ ಪಶ್ವಾದಿಗಳೂ, ಪಕ್ಷಿಗಳೂ ನಾನಾರೂಪಾತ್ಮಕವಾಗಿದ್ದು ದ್ಯಾವಾಪೃಥಿವಿಗಳೆರಡರ ನಡುವೆ ಸ್ಥಾಪಿತವಾಗಿ ಸಂಚರಿಸುತ್ತವೆ.

English Translation

These two keep all born things discrete, and, although comprehending the great divinities, are not distressed: all moving and stationary beings rest upon one (basis), whether animals, or birds, or creatures of various kinds.

ವಿಶೇಷವಿಷಯಗಳು

ಏತೇ ವಿಶ್ವೇತ್ ಸಂವಿವಿಕ್ತಃ ಮಹಃ ದೇವಾನ್ ಬಿಭ್ರತೀ ನ ವ್ಯಥೇತೇ ಎಂಬ ವಾಕ್ಯಗಳಿಂದ ಈ ದ್ಯಾವಾಪೃಥಿವಿಗಳು ಸಮಸ್ತ ಪ್ರಾಣಿಗಳಿಗೂ ಬೇರೆ ಬೇರೆಯಾಗಿರಲು ಅವಕಾಶವನ್ನು ಕಲ್ಪಿಸಿಕೊಡುವವರಾಗಿರುವರು ಮತ್ತು ಪ್ರಭೂತವಾದ ಶಕ್ತಿಯುಳ್ಳವರಾದ ಇಂದ್ರನೇ ಮೊದಲಾದ ದೇವತೆಗಳನ್ನೂ, ನದಿ, ಸಮುದ್ರ, ಪರ್ವತ, ಇವುಗಳನ್ನೂ ಧರಿಸಿದ್ದರೂ ಇದರಿಂದ ಇವರಿಗೆ ಯಾವ ವ್ಯಥೆಯೂ ಉಂಟಾಗುವುದಿಲ್ಲ ಎಂದು ವಿವೃತವಾಗಿದೆ. ಪೃಥಿವಿಯು ಸ್ಥಿರ ಚರ ರೂಪಗಳಿಂದ ಇರುವ ಪ್ರಾಣಿಗಳನ್ನು ಧರಿಸಿರುವುದರಿಂದಲೂ, ಸಂಚರಿಸುತ್ತಿರುವ ಪಶುಗಳ ಭಾವದಿಂದ ಇರುವ ಪಕ್ಷಿಗಳಿಗೆ ಅವಕಾಶವನ್ನು ಅಂತರಿಕ್ಷವು ಕಲ್ಪಿಸಿರುವುದರಿಂದಲೂ ಈ ದ್ಯಾವಾಪೃಥಿವಿಗಳ ಮಹಿಮೆಯು ವರ್ಣಿತವಾಗಿದೆ.

---

ಸಂಹಿತಾಪಾಠಃ

ಸನಾ ಪುರಾಣಮಧ್ಯೇಮ್ಯಾರಾನ್ಮಹಃ ಪಿತುರ್ಜನಿತುರ್ಜಾಮಿ ತನ್ನಃ ।
ದೇವಾಸೋ ಯತ್ರ ಪನಿತಾರ ಏವೈರುರೌ ಪಥಿ ವ್ಯುತೇ ತಸ್ಥುರಂತಃ ॥ ೯ ॥

ಪದಪಾಠಃ

ಸನಾ । ಪುರಾಣಂ । ಅಧಿ । ಏಮಿ । ಆರಾತ್ । ಮಹಃ । ಪಿತುಃ । ಜನಿತುಃ । ಜಾಮಿ । ತತ್ । ನಃ ।
ದೇವಾಸಃ । ಯತ್ರ । ಪನಿತಾರಃ । ಏವೈಃ । ಉರೌ । ಪಥಿ । ವಿಽಉತೇ । ತಸ್ಥುಃ । ಅಂತರಿತಿ ॥ ೯ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಹೇ ದ್ಯೌರ್ಮಹೋ ಮಹತ್ಯಾಃ ಪಿತುಃ ಸರ್ವಸ್ಯ ಪಾಲಯಿತ್ರ್ಯಾ ಜನಿತುರ್ಜನಯಿತ್ರ್ಯಾಸ್ತವ ಪನಾ ಸನಾತನಂ ಪುರಾಣಂ ಪೂರ್ವಕ್ರಮಾಗತಂ ನೋಽಸ್ಮಾಕಂ ತಜ್ಜಾಮಿ ಜಾಮಿತ್ವಂ । ಸರ್ವಮೇಕಸ್ಮಾಜ್ಜಾತಮಿತಿ ದ್ಯೌರ್ಭಗಿನೀ ಭವತಿ । ತಾದೃಶಂ ಭಗಿನೀತ್ವಂ ತದಾರಾದಧುನಾಧ್ಯೇಮಿ । ಸ್ಮರಾಮಿ । ದಿವಃ ಪಿತೃತ್ವೇ ಜನಯಿತೃತ್ವೇ ಚ ಮಂತ್ರವರ್ಣಃ । ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ । ಋಗ್ವೇ ೧-೧೬೪-೩೩। ಇತಿ । ಯತ್ರ ಯಸ್ಯಾಂ ದಿವ್ಯಂತರ್ಮಧ್ಯ ಉರೌ ವಿಸ್ತೀರ್ಣೇ ವ್ಯೃತೇ ವಿವಿಕ್ತೇ ಪಥಿ ನಭಸಿ ಪನಿತಾರಸ್ತ್ವಾಂ ಸ್ತುವಂತೋ ದೇವಾಸೋ ದೇವಾ ಏವೈರ್ಗಮನಸಾಧನೈಃ ಸ್ವೈಃ ಸ್ವೈರ್ವಾಹನೈಃ ಸಹಿತಾಃ ಸಂತಸ್ತಸ್ಥುಃ । ತತ್ರ ಸ್ಥಿತಾ ದೇವಾ ಮದೀಯಂ ಸ್ತೋತ್ರಂ ಶೃಣ್ವಂತ್ವಿತಿ ಭಾವಃ ॥ ಪುರಾಣಂ । ಪುರಾಶಬ್ದಾತ್ ಶೈಷಿಕಾರ್ಥೇ ಸಾಯಂಚಿರಮಿತಿ ಟ್ಯುಪ್ರತ್ಯಯಃ । ಪುರಾಣಪ್ರೋಕ್ತೇಷು ಬ್ರಾಹ್ಮಣಕಲ್ಪೇಷ್ವಿತಿ ನಿಪಾತನಾತ್ತುಡಭಾವಃ । ನಿಪಾತನಾದೇವಾಂತೋದಾತ್ತತ್ವಂ । ಏಮಿ । ಇಕ್ ಸ್ಮರಣೇ । ಅದಾದಿಃ । ಲಟಿ ರೂಪಂ । ನಿಘಾತಃ । ವ್ಯೃತೇ । ವೇಞ್ ತಂತುಸಂತಾನೇ । ಕರ್ಮಣಿ ಕ್ತಃ । ಯಜಾದಿತ್ವಾತ್ಸಂಪ್ರಸಾರಣಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರಃ । ತಸ್ಥುಃ । ತಿಷ್ಠತೇರ್ಲಿಟಿ ರೂಪಂ । ಯತ್ರಯೋಗಾದನಿಘಾತಃ ॥

### ಪ್ರತಿಪದಾರ್ಥ

ಮಹಃ—ಮಹತ್ಸ್ವರೂಪವುಳ್ಳವಳೂ । ಪಿತುಃ—ಪಾಲಕಳೂ । ಜನಿತುಃ—ಉತ್ಪತ್ತಿಕಾರಕಳೂ ಆದ ದ್ಯುಲೋಕಾಧಿದೇವತೆಯು । **ಸನಾ**—ಸನಾತನವಾದುದೂ । **ಪುರಾಣಂ**—ಪೂರ್ವದಿಂದಲೂ ಅನುಸ್ಯೂತವಾಗಿ ಬಂದುದೂ ಆದ । ನಃ—ನಮ್ಮೊಡನಿರುವ । ತತ್ ಜಾಮಿ—ಆ ಬಂಧುತ್ವವನ್ನು । ಆರಾತ್—ಈಗ । **ಅಧ್ಯೇಮಿ**—ಸ್ಮರಿಸಿಕೊಳ್ಳುತ್ತೇನೆ । **ಅಸ್ಯ**—ಇದೇ ದ್ಯುಲೋಕದ । ಅಂತಃ—ಮಧ್ಯಭಾಗದ । **ಉತಾ**—ವಿಸ್ತೀರ್ಣವಾದುದೂ । **ವ್ಯೃತೇ**—ವಿವಿಕ್ತವಾದುದೂ ಆದ। **ಪಥಿ**—ಮಾರ್ಗದಲ್ಲಿ । **ಪನಿತಾರಃ**—ನಿನ್ನನ್ನು ಸ್ತುತಿಸುವವನೂ । **ದೇವಾಸಃ**—ದೇವತಾತ್ಮರೂ ಆದ ಇಂದ್ರಾದಿಗಳು । ಏವೈಃ—ತಮ್ಮ ತಮ್ಮ ಕುದುರೆಗಳೊಡನೆ । **ತಸ್ಥುಃ**—ಸ್ಥಾಪಿತರಾಗಿದ್ದಾರೆ.

### ಭಾವಾರ್ಥ

ಮಹತ್ಸ್ವರೂಪವುಳ್ಳವಳೂ, ಪಾಲಕಳೂ, ಉತ್ಪತ್ತಿಕಾರಕಳೂ ಆದ ದ್ಯುಲೋಕಾಧಿದೇವತೆಯು ಸನಾತನವಾದುದೂ, ಪೂರ್ವದಿಂದಲೂ ಅನುಸ್ಯೂತವಾಗಿ ಬಂದುದೂ ಆದ ನಮ್ಮೊಡನಿರುವ ಆ ಬಂಧುತ್ವವನ್ನು ಈಗ ಸ್ಮರಿಸಿಕೊಳ್ಳುತ್ತೇನೆ. ಇದೇ ದ್ಯುಲೋಕದ ಮಧ್ಯಭಾಗದಲ್ಲಿ ವಿಸ್ತೀರ್ಣವಾದುದೂ ವಿವಿಕ್ತವಾದುದೂ ಆದ ಮಾರ್ಗದಲ್ಲಿ ನಿನ್ನನ್ನು ಸ್ತುತಿಸುವವರೂ ದೇವತಾತ್ಮರೂ ಆದ ಇಂದ್ರಾದಿಗಳು ತಮ್ಮ ತಮ್ಮ ಅಶ್ವಗಳೊಡನೆ ಸ್ಥಾಪಿತರಾಗಿದ್ದಾರೆ

### English Translation

I consider at present the eternal and ancient sisterhood to us of you, our great protectress and progenitrix, within whose vast and separated path your eulogists, the gods, travel in their chariots.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ದ್ಯುದೇವತೆಯು ಉತ್ಪನ್ನರಾಗಿರುವವರೆಲ್ಲರಿಗೂ, ಉತ್ಪತ್ತಿಕಾರಣಳಾಗಿರುವುದರಿಂದಲೂ, ಪಾಲಕಳಾಗಿರುವುದರಿಂದಲೂ, ಬಂಧುವಾಗಿರುವಳೆಂದೂ, ಈ ಬಂಧುತ್ವವು ಬಹಳ ಪುರಾತನಕಾಲದಿಂದಲೂ ಉಂಟಾಗಿರುವುದೆಂದೂ, ವರ್ಣಿತವಾಗಿದೆ. ಈ ವಿಷಯದಲ್ಲಿ "ದ್ಯೌರ್ಮೇ ಪಿತಾ ಜನಿತಾ ನಾಭಿರತ್ರ" (ಋ. ಸ. ೧-೧೬೪-೩೩) ಎಂಬ ಮಂತ್ರವನ್ನು ಉದಹರಿಸಿದೆ.

ಈ ದ್ಯುದೇವತೆಯು ದೇವತೆಗಳ ಸಂಚಾರಕ್ಕಾಗಿ ನಿರ್ಮಿಸಿರುವ ದ್ಯುಲೋಕದಲ್ಲಿ ದೇವತೆಗಳು ತಮ್ಮ ತಮ್ಮ ವಾಹನಗಳಿಂದ ಸಂಚರಿಸುವವರಾಗಿ, ವಿವಿಕ್ತರಾಗಿರುವ, ಮತ್ತು ವಿಸ್ತಾರವಾಗಿರುವ ಅಂತರಿಕ್ಷದಲ್ಲಿ ಈ ದ್ಯುದೇವತೆಯನ್ನು ಸ್ತುತಿಮಾಡುತ್ತಿರುವರು ಎಂದೂ, ಈ ದೇವತೆಗಳು ಯಜಮಾನನು ಆಚರಿಸುವ ಯಜ್ಞಗಳಲ್ಲಿ ಋತ್ವಿಜರು ಪಠಿಸುವ ಸ್ತೋತ್ರಗಳನ್ನು ಶ್ರವಣಮಾಡಲಿ ಎಂದೂ ವರ್ಣಿತವಾಗಿದೆ.



ಸಂಹಿತಾಪಾಠಃ

ಇಮಂ ಸ್ತೋಮಂ ರೋದಸೀ ಪ್ರ ಬ್ರವೀಮ್ಯೃದೂದರಾಃ ಶೃಣವನ್ನಗ್ನಿಜಿಹ್ವಾಃ ।
ಮಿತ್ರಃ ಸಮ್ರಾಜೋ ವರುಣೋ ಯುವಾನ ಆದಿತ್ಯಾಸಃ ಕವಯಃ ಪಪ್ರಥಾನಾಃ ॥ ೧೦ ॥

ಪದಪಾಠಃ

ಇಮಂ । ಸ್ತೋಮಂ । ರೋದಸೀ ಇತಿ । ಪ್ರ । ಬ್ರವೀಮಿ । ಋದೂದರಾಃ । ಶೃಣವನ್ । ಅಗ್ನಿಽಜಿಹ್ವಾಃ । ಮಿತ್ರಃ । ಸಮ್ಽರಾಜಃ । ವರುಣಃ । ಯುವಾನಃ । ಆದಿತ್ಯಾಸಃ । ಕವಯಃ । ಪಪ್ರಥಾನಾಃ ॥ ೧೦ ॥

ಸಾಯಣಭಾಷ್ಯಂ

ಹೇ ರೋದಸೀ ದ್ಯಾವಾಪೃಥಿವ್ಯಾವಿಮಂ ಯುಷ್ಮದೀಯಂ ಸ್ತೋಮಂ ಪ್ರ ಬ್ರವೀಮಿ । ಪ್ರಕರ್ಷೇಣ ವದಾಮಿ । ಋದೂದರಾಃ । ಋದು ಮೃದು ಉದರಂ ಯೇಷಾಂ ತೇ ಋದೂದರಾಃ । ಯದ್ವಾ । ಮೃದುರುದರೇ ಸೋಮೋ ಯೇಷಾಂ ತೇ ಋದೂದರಾಃ । ಅಗ್ನಿಜಿಹ್ವಾಃ । ಅಗ್ನಿರ್ಜಿಹ್ವಾಸ್ಥಾನೀಯೋ ಯೇಷಾಂ ತೇ ತಥೋಕ್ತಾಃ । ಸಮ್ರಾಜಃ ಸಮ್ಯಗ್ದೀಪ್ಯಮಾನಾ ಯುವಾನೋ ನಿತ್ಯತರುಣಾಃ । ಯದ್ವಾ । ಯಜಮಾನಾನಭಿಮತಫಲೈರ್ಮಿಶ್ರೀಕುರ್ವಂತಃ । ಕವಯಃ ಕ್ರಾಂತದರ್ಶಿನಃ ಪಪ್ರಥಾನಾಃ ಸ್ವಾನಿ ಸ್ವಾನಿ ಕರ್ಮಾಣಿ ಪ್ರಥಯಂತೋ ಮಿತ್ರಾದಯೋ ದೇವಾಃ ಶೃಣವನ್ । ತದಿದಂ ಸ್ತೋತ್ರಂ ಶೃಣ್ವಂತು ॥

CC-0. Jangamwadi Math Collection. Digitized by eGangotri

**ಶೃಣವನ್ । ಶ್ರು ಶ್ರವಣ ಇತ್ಯಸ್ಯ ಲೇಟ್ಯಡಾಗಮಃ । ಅಗ್ನಿಜಿಹ್ವಾಃ । ತ್ರಿಚಕ್ರಾದಿತ್ವಾದಂತೋದಾತ್ತತ್ವಂ। ಪಪ್ರಥಾನಾಃ । ಪ್ರಥ ಪ್ರಖ್ಯಾನ ಇತ್ಯಸ್ಯ ಕಾನಚಿ ರೂಪಂ । ಚಿತ್ತ್ವಾತ್ತದಂತೋದಾತ್ತಃ ॥**

### ಪ್ರತಿಪದಾರ್ಥ

**ರೋದಸೀ**—ಎಲೈ ದ್ಯಾವಾಪೃಥಿವಿಗಳೇ । **ಇಮಂ**—ಈ ನಿಮ್ಮನ್ನುದ್ದೇಶಿಸಿದ । **ಸ್ತೋಮಂ**—ಸ್ತೋತ್ರವನ್ನು । **ಪ್ರ ಬ್ರವೀಮಿ**—ಪಠಿಸುತ್ತೇನೆ । **ಋದೂದರಾಃ**—ಮೃದುವಾದ ಉದರವುಳ್ಳವರೂ । **ಅಗ್ನಿಜಿಹ್ವಾಃ**—ಅಗ್ನಿಯನ್ನೇ ಜಿಹ್ವೆಯನ್ನಾಗಿ ಉಳ್ಳವರೂ । **ಸಮ್ರಾಜಃ**—ಪ್ರಕಾಶಮಾನರೂ । **ಯುವಾನಃ**—ನಿತ್ಯತರುಣರೂ । **ಕವಯಃ**—ಕ್ರಾಂತದರ್ಶಿಗಳೂ । **ಪಪ್ರಥಾನಾಃ**—ತಮ್ಮ ತಮ್ಮ ಕರ್ತವ್ಯಗಳನ್ನು ನೆರವೇರಿಸುವವರೂ ಆದ । **ಮಿತ್ರಃ**—ಮಿತ್ರನೂ । **ವರುಣಃ**—ವರುಣನೂ । **ಆದಿತ್ಯಾಸಃ**—ಆದಿತ್ಯರೂ ಸಹ । **ಶೃಣವನ್**—ಆಲಿಸಿ ಕೇಳಲಿ.

### ಭಾವಾರ್ಥ

ಎಲೈ ದ್ಯಾವಾಪೃಥಿವಿಗಳೇ, ನಿಮ್ಮನ್ನುದ್ದೇಶಿಸಿ ಈ ಸ್ತೋತ್ರವನ್ನು ಪಠಿಸುತ್ತೇನೆ. ಮೃದುವಾದ ಉದರವುಳ್ಳವರೂ, ಅಗ್ನಿಯನ್ನೇ ಜಿಹ್ವೆಯನ್ನಾಗಿ ಉಳ್ಳವರೂ, ಪ್ರಕಾಶಮಾನರೂ, ನಿತ್ಯತರುಣರೂ, ಕ್ರಾಂತದರ್ಶಿಗಳೂ, ತಮ್ಮ ತಮ್ಮ ಕರ್ತವ್ಯಗಳನ್ನು ನೆರವೇರಿಸುವವರೂ ಆದ ಮಿತ್ರ, ವರುಣ, ಆದಿತ್ಯರು ಇದನ್ನು ಆಲಿಸಿ ಕೇಳಲಿ.

### English Translation

I repeat this hymn, heaven and earth, to you ; and may the soft-bellied, fire-tongued Mitra, royal Varuna, the youtful Adityas, all cognizant of the past, and proclaiming (their own acts), hear it.

### ವಿಶೇಷವಿಷಯಗಳು

**ಋದೂದರಾಃ**-- **ಋದು ಮೃದು ಉದರಂ ಯೇಷಾಂ ತೇ । ಯದ್ವಾ ಮೃದುರುದರೇ ಸೋಮೋ ಯೇಷಾಂ ತೇ।** ಋದೂದರ ಶಬ್ದವು ಯಾಸ್ಕರಿಂದ (ನಿ. ೬-೪) **ಋದೂದರಸ್ಸೋಮೋ ಮೃದುರುದರೇಷ್ವಿತಿ ವಾ** ಎಂದು ವ್ಯಾಖ್ಯಾತವಾಗಿದೆ. ದೇವತೆಗಳ ಉದರವು ಮೃದುವಾಗಿರುವುದು ಅಥವಾ ಮೃದುವಾದ ಸೋಮವನ್ನು ಉದರದಲ್ಲಿ ಧರಿಸುವರು ಎಂದು ದೇವತೆಗಳ ಸ್ವರೂಪವನ್ನು ವರ್ಣಿಸಿದೆ.

**ಯುವಾನಃ—ನಿತ್ಯತರುಣಾಃ । ಯದ್ವಾ ಯಜಮಾನಾನ್ ಅಭಿಮತಫಲೈಃ ಮಿಶ್ರೀಕುರ್ವಂತಃ ।** ದೇವತೆಗಳು ಯಾವಾಗಲೂ ಯೌವನದಲ್ಲಿಯೇ ಇರುವವರು ಅಥವಾ ತಮ್ಮನ್ನು ಹವಿಸ್ಸುಗಳ ಅರ್ಪಣೆಯಿಂದ ತೃಪ್ತಿಗೊಳಿಸುವ ಯಜಮಾನರಿಗೆ ಅವರವರ ಇಷ್ಟಗಳು ಉಂಟಾಗುವಂತೆ ಅನುಗ್ರಹವನ್ನು ಮಾಡುವವರು ಎಂದು ದೇವತೆಗಳ ಸ್ವಭಾವವು ವಿವೃತವಾಗಿದೆ. ಈ ಪ್ರಕಾರವಾದ ಮಹಿಮೆಯುಳ್ಳವರೂ, ತಮ್ಮ ತಮ್ಮ ಕರ್ತವ್ಯವನ್ನು ಪ್ರಚುರಗೊಳಿಸುವವರೂ, ಅಗ್ನಿಯ ಮೂಲಕವಾಗಿಯೇ ಹವಿಸ್ಸುಗಳನ್ನು ಸ್ವೀಕರಿಸುವವರೂ, ಯಾವಾಗಲೂ ಪ್ರಕಾಶಿಸುವವರೂ ಆಗಿರುವ ದೇವತೆಗಳು, ಯಜಮಾನರಾದ ನಾವುಗಳು ಪಠಿಸುವ ದ್ಯಾವಾಪೃಥಿವಿಗಳ ಸ್ತುತಿಗಳನ್ನು ಶ್ರವಣಮಾಡಲಿ ಎಂದು ವಿವರಿಸಿದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಹಿರಣ್ಯಪಾಣಿಃ ಸವಿತಾ ಸುಜಿಹ್ವಸ್ತ್ರಿರಾ ದಿವೋ ವಿದಥೇ ಪತ್ಯಮಾನಃ ।
ದೇವೇಷು ಚ ಸವಿತಃ ಶ್ಲೋಕಮಶ್ರೇರಾದಸ್ಮಭ್ಯಮಾ ಸುವ ಸರ್ವತಾತಿಂ ॥

ಪದಪಾಠಃ

ಹಿರಣ್ಯಽಪಾಣಿಃ । ಸವಿತಾ । ಸುಽಜಿಹ್ವಃ । ತ್ರಿಃ । ಆ । ದಿವಃ । ವಿದಥೇ । ಪತ್ಯಮಾನಃ ।
ದೇವೇಷು । ಚ । ಸವಿತರಿತಿ । ಶ್ಲೋಕಂ । ಅಶ್ರೇಃ । ಆತ್ । ಅಸ್ಮಭ್ಯಂ । ಆ । ಸುವ । ಸರ್ವಽತಾತಿಂ ॥೧೧॥

ಸಾಯಣಭಾಷ್ಯಂ

ಹಿರಣ್ಯಪಾಣಿಃ । ದಾನಾರ್ಥಂ ಹಿರಣ್ಯಂ ಪಾಣೌ ಹಸ್ತೇ ಯಸ್ಯ ಸ ತಥೋಕ್ತಃ । ಯದ್ವಾ । ದೇವಕರ್ತೃಕಯಾಗೇ ಸವಿತುರ್ಋತ್ವಿಗ್ಭೂತಸ್ಯ ಹಸ್ತೇ ಪ್ರಾಶಿತ್ರಂ ಭಕ್ಷಣಾರ್ಥಮಧ್ವರ್ಯವೋ ದದುಃ । ತತ್ಪ್ರಾಶಿತ್ರಂ ತಸ್ಯ ಹಸ್ತೌ ಚಿಚ್ಛೇದ । ತತೋಽಧ್ವರ್ಯವೋ ಹಿರಣ್ಮಯೌ ಹಸ್ತೌ ಕೃತ್ವಾ ಸಂದಧುಃ । ತತೋಽಯಂ ಹಿರಣ್ಯಪಾಣಿಃ । ತಥಾ ಚ ಕೌಷೀತಕಂ । ಸವಿತ್ರೇ ಪ್ರಾಶಿತ್ರಂ ಪ್ರತಿಜಹ್ರುಸ್ತತ್ತಸ್ಯ ಪಾಣೀ ಪ್ರಚಿಚ್ಛೇದ ತಸ್ಮೈ ಹಿರಣ್ಮಯೌ ಪ್ರತಿದಧುಸ್ತಸ್ಮಾದ್ಧಿರಣ್ಯಪಾಣಿರಿತಿ । ಸುಜಿಹ್ವಃ । ಶೋಭನವಾಕ್ ಸವಿತಾ ವಿದಥೇ ಯಜ್ಞೇ ತ್ರಿಸ್ತ್ರಿಷು ಸವನೇಷು ದಿವೋ ನಭಸಃ ಸಕಾಶಾದಾ ಪತ್ಯಮಾನ ಆಗಚ್ಛನ್ ಭವತೀತಿ ಶೇಷಃ । ಪರೋಽರ್ಧರ್ಚಃ ಪ್ರತ್ಯಕ್ಷಃ । ಹೇ ಸವಿತಸ್ತ್ವಂ ದೇವೇಷು ಸ್ತೋತೃಷು ವಿದ್ಯಮಾನಂ ಚ ಶ್ಲೋಕಂ । ಶ್ಲೋಕ್ಯತೇಽನೇನೇತಿ ಶ್ಲೋಕಃ ಸ್ತೋತ್ರಂ । ತದಶ್ರೇಃ । ಪ್ರಶೃಣು ಹಿ ಚ । ಆದನಂತರಂ ಸರ್ವತಾತಿಂ ಸರ್ವಮಪೇಕ್ಷಿತಂ ಫಲಮಸ್ಮಭ್ಯಮಾ ಸುವ । ಪ್ರೇರಯ ॥ ಹಿರಣ್ಯಪಾಣಿಃ । ಹಿರಣ್ಯಶಬ್ದಂ ಯಾಸ್ಕೋ ಬಹುಧಾ ನಿರ್ವಕ್ತಿ । ಹಿರಣ್ಯಂ ಕಸ್ಮಾದ್ಧ್ರಿಯತ ಆಯಮ್ಯಮಾನಮಿತಿ ವಾ ಹ್ರಿಯತೇ ಜನಾಜ್ಜನಮಿತ್ಯಾದಿನಾ । ನಿ. ೨-೧೦ । ಪಾಣಿಶಬ್ದಂ ಚ ನಿರ್ವಿವೇಚ । ಪಾಣಿಃ ಪಣಾಯತೇಃ ಪೂಜಾಕರ್ಮಣಃ । ನಿ. ೨-೨೬ । ಇತಿ ॥ ಹರ್ಯ ಕಾಂತಿಗತ್ಯೋಃ । ಹರ್ಯತೇಃ ಕನ್ಯನ್ ಹಿರ ಚೇತಿ ಕನ್ಯನ್ ಹಿರ ಇತ್ಯಯಮಾದೇಶೋ ಧಾತೋಃ । ನಿತ್ತ್ವಾದಾದ್ಯುದಾತ್ತಃ । ಬಹುವ್ರೀಹೌ ಪೂರ್ವಪದಸ್ವರಃ । ಪತ್ಯಮಾನಃ । ಪತ ಗತೌ । ದಿವಾದಿರಾತ್ಮನೇಪದೀ । ದಕಾರಸ್ಯ ತಕಾರಶ್ಛಾಂದಸಃ । ಅಶ್ರೇಃ । ಶ್ರಿಞ್ ಸೇವಾಯಾಮಿತ್ಯಸ್ಯ ಲಙಿ ಬಹುಲಂ ಛಂದಸೀತಿ ಶಪೋ ಲುಕ್ । ಚವಾಯೋಗೇ ಪ್ರಥಮೇತಿ ನ ನಿಘಾತಃ । ಸುವ । ಷೂ ಪ್ರೇರಣೇ । ತುದಾದಿಃ । ಸರ್ವತಾತಿಂ । ಸರ್ವದೇವಾತ್ತಾತಿಲ್ ಸ್ವಾರ್ಥಿಕಃ । ಲಿತ್ಸ್ವರಃ ॥

ಪ್ರತಿಪದಾರ್ಥ

ಹಿರಣ್ಯಪಾಣಿಃ— ಸುವರ್ಣಾತ್ಮಕವಾದ ಪಾಣಿಯುಳ್ಳವನೂ । ಸುಜಿಹ್ವಃ—ಶ್ರೇಷ್ಠವಾದ ವಾಕ್ಕುಳ್ಳವನೂ ಆದ । ಸವಿತಾ—ಸವಿತೃವು । ವಿದಥೇ—ಯಜ್ಞದಲ್ಲಿ । ತ್ರಿಃ—ಸವನತ್ರಯಕಾಲಗಳಲ್ಲಿಯೂ । ದಿವಃ—ಅಂತರಿಕ್ಷ

CC-0. Jangamwadi Math Collection. Digitized by eGangotri

ದಿಂದ । ಆ ಪತ್ಯಮಾನಃ—ಇಳಿದುಬರುತ್ತಾನೆ।ಸವಿತಃ—ಎಲೈ ಸವಿತೃವೇ।ದೇವೇಷು—ದೇವತೆಗಳಿಗಾಗಿ ನಿರ್ಮಿತವಾಗಿರುವ । ಶ್ಲೋಕಂ—ಸ್ತೋತ್ರವನ್ನು । ಆಶ್ರೇಃ—ಸ್ವೀಕರಿಸು । ಅತ್—ಅನಂತರ । ಸರ್ವತಾತಿಂ—ಸರ್ವರಿಂದಲೂ ಅಪೇಕ್ಷಿತವಾದ ಫಲವನ್ನು । ಅಸ್ಮಭ್ಯಂ—ನಮಗೆ । ಆ ಸುವ—ಒದಗಿಸಿಕೊಡು.

ಭಾವಾರ್ಥ

ಸುವರ್ಣಾತ್ಮಕವಾದ ಪಾಣಿಯುಳ್ಳವನೂ, ಶ್ರೇಷ್ಠವಾದ ವಾಕ್ಕುಳ್ಳವನೂ ಆದ ಸವಿತೃವು ಯಜ್ಞಕ್ಕೆ ಸವನತ್ರಯಕಾಲಗಳಲ್ಲಿಯೂ ಇಳಿದುಬರುತ್ತಾನೆ. ಎಲೈ ಸವಿತೃವೇ, ದೇವತೆಗಳಿಗಾಗಿ ನಿರ್ಮಿತವಾಗಿರುವ ಸ್ತೋತ್ರವನ್ನು ಸ್ವೀಕರಿಸು. ಅನಂತರ ಸರ್ವರಿಂದಲೂ ಅಪೇಕ್ಷಿತವಾದ ಫಲವನ್ನು ನಮಗೆ ಒದಗಿಸಿಕೊಡು.

English Translation

The golden-handed, soft-tongued Savitri is descending from heaven (to be present) thrice (daily) at the sacrifice: accept, Savitri, the praise (recited by) the worshippers, and thereupon grant to us all our desires.

ವಿಶೇಷವಿಷಯಗಳು

**ಹಿರಣ್ಯಪಾಣಿಃ ಸವಿತಾ—** ದಾನಾರ್ಥಂ ಹಿರಣ್ಯಂ ಪಾಣೌ ಯಸ್ಯ । ಸಾಯಣರು ಸವಿತೃದೇವನು ದಾನ ಮಾಡುವುದಕ್ಕಾಗಿ ಹಿರಣ್ಯವನ್ನು ಹಸ್ತದಲ್ಲಿ ಹಿಡಿದಿರುವನು ಎಂದು ಅರ್ಥವನ್ನು ವಿವರಿಸಿ, ಈ ವಾಕ್ಯಕ್ಕೆ ಇನ್ನೊಂದು ವಿಧವಾದ ಅರ್ಥವನ್ನೂ ವಿವರಿಸಿದ್ದಾರೆ. ಯದ್ವಾ ದೇವಕರ್ತೃಕಯಾಗೇ ಸವಿತುಃ ಋತ್ವಿಗ್ಭೂತಸ್ಯ ಹಸ್ತೇ ಪ್ರಾಶಿತ್ರಂ ಭಕ್ಷಣಾರ್ಥಮಧ್ವರ್ಯವೋ ದದುಃ । ತತ್ಪ್ರಾಶಿತ್ರಂ ತಸ್ಯ ಹಸ್ತೌ ಚಿಚ್ಛೇದ । ತತೋ ಅಧ್ವರ್ಯವೋ ಹಿರಣ್ಮಯೌ ಹಸ್ತೌ ಕೃತ್ವಾ ಸಂದಧುಃ । ತತೋऽಯಂ ಹಿರಣ್ಯಪಾಣಿಃ । ತಥಾ ಚ ಕೌಷೀತಕಂ "ಸವಿತ್ರೇ ಪ್ರಾಶಿತ್ರಂ ಪ್ರತಿಜಹ್ರುಃ ತತ್ತಸ್ಯ ಪಾಣೀ ಪ್ರಚಿಚ್ಛೇದ ತಸ್ಮೈ ।ಹಿರಣ್ಮಯೌ ಪ್ರತಿದಧುಃ ತಸ್ಮಾತ್ ಹಿರಣ್ಯಪಾಣಿಃ" ದೇವತೆಗಳು ಯಾಗವನ್ನು ಆಚರಿಸಿದಾಗ ಸವಿತೃದೇವನ ಹಸ್ತದಲ್ಲಿ ಹವಿಸ್ಸನ್ನು ಅರ್ಪಿಸಿದರು. ಅದು ಅವನ ಹಸ್ತವನ್ನು ಕತ್ತರಿಸಿತು. ಆಗ ಅಧ್ವರ್ಯುಗಳು ಹಿರಣ್ಯದಿಂದ ಒಂದು ಹಸ್ತವನ್ನು ನಿರ್ಮಿಸಿ ಸೇರಿಸಿದರು ಇದರಿಂದ ಹಿರಣ್ಯಪಾಣಿ ಎಂದು ಹೆಸರು ಪ್ರಸಿದ್ಧವಾಯಿತು ಎಂದು ಎರಡನೆಯ ಅರ್ಥವು ವಿವೃತವಾಗಿದೆ. ಈ ದೇವನು ಯಜ್ಞಮಾಡುವ ಯಜಮಾನನ ಯಾಗಶಾಲೆಗೆ ಆಗಮಿಸಲಿ ಎಂದು ಆಶಂಸಿತವಾಗಿದೆ. ಯಾಸ್ಕರು ಹಿರಣ್ಯ ಶಬ್ದದ ಅರ್ಥವನ್ನೂ ಪಾಣಿ ಶಬ್ದದ ಅರ್ಥವನ್ನೂ ನಿರ್ವಚನಮಾಡಿರುತ್ತಾರೆ. **ಹಿರಣ್ಯಂ ಕಸ್ಮಾತ್ ಧ್ರಿಯತ ಆಯಮ್ಯಮಾನಮಿತಿ ವಾ ಹ್ರಿಯತೇ ಜನಾಜ್ಜನಂ (ನಿ. ೨-೧೦). ಪಾಣಿಃ ಪಣಾಯತೇಃ ಪೂಜಾಕರ್ಮಣಃ (ನಿ. ೨-೨೬).**

**ಶ್ಲೋಕಂ ಆಶ್ರೇಃ—** **ಶ್ಲೋಕ್ಯತೇ ಅನೇನೇತಿ ಶ್ಲೋಕಃ ಸ್ತೋತ್ರಂ** । ಸವಿತೃದೇವನು ಯಾಗಶಾಲೆಗೆ ಆಗಮಿಸಿ, ಋತ್ವಿಜರು ಪಠಿಸುವ ಸ್ತುತಿಯನ್ನು ಶ್ರವಣಮಾಡಲಿ ಎಂದು ವರ್ಣಿಸಿದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸುಕೃತ್ಸುಪಾಣಿಃ ಸ್ವವಾಁ ಋತಾವಾ ದೇವಸ್ತ್ವಷ್ಟಾವಸೇ ತಾನಿ ನೋ ಧಾತ್।
ಪೂಷಣ್ವಂತ ಋಭವೋ ಮಾದಯಧ್ವಮೂರ್ಧ್ವಗ್ರಾವಾಣೋ ಅಧ್ವರ-
ಮತಷ್ಟ ॥ ೧೨ ॥

ಪದಪಾಠಃ

ಸುऽಕೃತ್ । ಸುऽಪಾಣಿಃ । ಸ್ವऽವಾನ್ । ಋತऽವಾ । ದೇವಃ । ತ್ವಷ್ಟಾ । ಅವಸೇ । ತಾನಿ । ನಃ । ಧಾತ್।
ಪೂಷಣ್ऽವಂತಃ । ಋಭವಃ । ಮಾದಯಧ್ವಂ । ಊರ್ಧ್ವऽಗ್ರಾವಾನಃ । ಅಧ್ವರಂ । ಅತಷ್ಟ ॥ ೧೨ ॥

ಸಾಯಣಭಾಷ್ಯಂ

ಸುಕೃತ್ಸುಷ್ಠು ಜಗತಃ ಕರ್ತಾ ಸುಪಾಣಿಃ ಕಲ್ಯಾಣಪಾಣಿಃ ಸ್ವವಾನ್ ಧನವಾನೃತಾವಾ ಸತ್ಯ-ಸಂಕಲ್ಪಸ್ತ್ವಷ್ಟಾ ದೇವಸ್ತಾನಿ ಯಾನ್ಯಸ್ಮಾಕಮಪೇಕ್ಷಿತಾನ್ಯವಸೇ ರಕ್ಷಣಾಯ ನೋऽಸ್ಮಭ್ಯಂ ಧಾತ್ । ದದಾತು । ಋಭವಃ । ಉರು ಭಾಂತೀತ್ಯೃಭವಃ । ಹೇ ಋಭವಃ ಪೂಷಣ್ವಂತಃ ಪೂಷ್ಣಾ ಸಹಿತಾ ಯೂಯಂ ಮಾದಯಧ್ವಂ । ಅಸ್ಮಾನ್ ಧನಪ್ರದಾನೇನ ಹೃಷ್ಟಾನ್ ಕುರುತ । ಊರ್ಧ್ವಗ್ರಾವಾಣಃ ಸೋಮಾಭಿಷವಾರ್ಥಮುದ್ಯತಗ್ರಾವಾಣಃ ಸಂತ ಋತ್ವಿಜ ಇಮಮಸ್ಮದೀಯಮಧ್ವರಮತಷ್ಟ।ಅಕುರ್ವನ್॥ ಅತಷ್ಟ । ತಕ್ಷೂ ತ್ವಕ್ಷೂ ತನೂಕರಣೇ । ಊದಿತ್ತ್ವಾದತ್ರೇಡಭಾವಃ । ಝಲೋ ಝಲೀತಿ ಸಿಲೋಪಃ । ಸ್ಕೋಃ ಸಂಯೋಗಾದ್ಯೋರಿತಿ ಕಕಾರಲೋಪಃ । ಬಹುವಚನಸ್ಯೈಕವಚನಂ ಛಾಂದಸಂ ॥

ಪ್ರತಿಪದಾರ್ಥ

ಸುಕೃತ್—ಶ್ರೇಷ್ಠವಾದ ಕರ್ಮಕರ್ತನೂ । ಸುಪಾಣಿಃ-ಉತ್ತಮವಾದ ಪಾಣಿಯುಳ್ಳವನೂ । ಸ್ವವಾನ್-ಧನವಂತನೂ । ಋತಾವಾ—ಸತ್ಯಸಂಕಲ್ಪನೂ । ತ್ವಷ್ಟಾ ದೇವಃ—ದೇವತಾತ್ಮನೂ ಆದ ತ್ವಷ್ಟೃವು । ತಾನಿ—ನಮ್ಮಿಂದ ಅಪೇಕ್ಷಿತವಾದ ಅರ್ಥಗಳನ್ನು । ಅವಸೇ—ನಮ್ಮ ರಕ್ಷಣೆಗಾಗಿ । ನಃ—ನಮಗೆ । ಧಾತ್—ಕೊಡಲಿ । ಋಭವಃ—ಎಲೈ ಋಭುಗಳೇ । ಪೂಷಣ್ವಂತಃ—ಪೂಷದೇವನೊಡಗೂಡಿದ ನೀವು । ಮಾದಯಧ್ವಂ—ನಮ್ಮನ್ನು ಹರ್ಷಪಡಿಸಿ । ಊರ್ಧ್ವಗ್ರಾವಾಣಃ—(ಸೋಮರಸವನ್ನು ಹಿಂಡಲು) ಕಲ್ಲುಗಳನ್ನು ಎತ್ತಿ ಹಿಡಿದಿರುವ ಋತ್ವಿಕ್ಕುಗಳು । ಅಧ್ವರಂ—(ನಮ್ಮ) ಯಜ್ಞವನ್ನು । ಅತಷ್ಟ—ನೆರವೇರಿಸಿದ್ದಾರೆ.

ಭಾವಾರ್ಥ

ಶ್ರೇಷ್ಠವಾದ ಕರ್ಮಕರ್ತನೂ, ಉತ್ತಮವಾದ ಪಾಣಿಯುಳ್ಳವನೂ, ಧನವಂತನೂ, ಸತ್ಯಸಂಕಲ್ಪನೂ, ದೇವತಾತ್ಮನೂ ಆದ ತ್ವಷ್ಟೃವು ನಮ್ಮಿಂದ ಅಪೇಕ್ಷಿತಗಳಾದ ಅರ್ಥಗಳನ್ನು ನಮ್ಮ ರಕ್ಷಣೆಗಾಗಿ ಕೊಡಲಿ. ಎಲೈ

CC-0. Jangamwadi Math Collection. Digitized by eGangotri

ಋಭುಗಳೇ, ಪೂಷದೇವನೊಡಗೂಡಿದ ನೀವು ನಮ್ಮನ್ನು ಹರ್ಷಪಡಿಸಿ. ಸೋಮರಸಗಳನ್ನು ಜಜ್ಜಿ ಹಿಂಡಲು ಕಲ್ಲುಗಳನ್ನು ಎತ್ತಿಹಿಡಿದಿರುವ ಋತ್ವಿಕ್ಕುಗಳು ನಮ್ಮ ಯಜ್ಞವನ್ನು ನೆರವೇರಿಸಿದ್ದಾರೆ.

### English Translation

May the divine Twashtri, the able artificer, the dextrous-handed, the possessor of wealth, the observer of truth, bestow upon us those things (which are necessary) for our preservation : Ribhus, associated with Pushan, make us joyful, as they (the priests), with uplifted stones, prepare the sacred libation.

### ವಿಶೇಷವಿಷಯಗಳು

ತ್ವಷ್ಟಾ ದೇವಃ—ತ್ವಷ್ಟೃ ಎಂಬ ದೇವನು ಜಗತ್ತನ್ನು ಅಂದವಾಗಿರುವಂತೆ ನಿರ್ಮಿಸಿರುವವನೂ, ಹಸ್ತಕೌಶಲವುಳ್ಳವನೂ, ಆಗಿರುವನು ಮತ್ತು ಈ ದೇವನು ಸತ್ಯಸಂಕಲ್ಪನಾಗಿಯೂ ಧನವಂತನಾಗಿಯೂ ಇರುವವನಾದುದರಿಂದ ಯಜಮಾನರಾದ ನಮ್ಮ ರಕ್ಷಣೆಗಾಗಿ ನಮ್ಮ ಇಷ್ಟಗಳನ್ನು ನೆರವೇರಿಸಲಿ ಎಂದು ಯಜಮಾನರ ಆಶಂಸನೆಯು ವಿವೃತವಾಗಿದೆ.

ಊರ್ಧ್ವಗ್ರಾವಾಣಃ—ಸೋಮಾಭಿಷವಾರ್ಥಮುದ್ಯತಗ್ರಾವಾಣಃ । ಋತ್ವಿಜರು ಸೋಮರಸವನ್ನು ಹಿಂಡುವುದಕ್ಕಾಗಿ ಕೈಗಳಲ್ಲಿ ಕಲ್ಲುಗಳನ್ನು ಎತ್ತಿ ಹಿಡಿದುಕೊಂಡಿರುತ್ತಾರೆ. ಯಜ್ಞಗಳನ್ನು ಪೂರ್ತಿಗೊಳಿಸಿರುತ್ತಾರಾಗಿ ಪೂಷನೆಂಬ ದೇವನು ಋಭುಗಳೊಡನೆ ಯಾಗಶಾಲೆಗೆ ಆಗಮಿಸಿ, ಹವಿಸ್ಸುಗಳ ಅರ್ಪಣೆಯಿಂದ ತೃಪ್ತನಾಗಲೆಂದೂ, ಯಜಮಾನರಿಗೆ ಧನವನ್ನು ಅನುಗ್ರಹಿಸಲೆಂದೂ ಆಶಂಸನೆಯು ವರ್ಣಿತವಾಗಿದೆ.

---

### ಸಂಹಿತಾಪಾಠಃ

ವಿದ್ಯುದ್ರಥಾ ಮರುತ ಋಷ್ಟಿಮಂತೋ ದಿವೋ ಮರ್ಯಾ ಋತಜಾತಾ ಅಯಾಸಃ ।
ಸರಸ್ವತೀ ಶೃಣವನ್ಯಜ್ಞಿಯಾಸೋ ಧಾತಾ ರಯಿಂ ಸಹವೀರಂ ತುರಾಸಃ ॥

### ಪದಪಾಠಃ

ವಿದ್ಯುತ್ऽರಥಾಃ । ಮರುತಃ । ಋಷ್ಟಿऽಮಂತಃ । ದಿವಃ । ಮರ್ಯಾಃ । ಋತऽಜಾತಾಃ । ಅಯಾಸಃ ।
ಸರಸ್ವತೀ । ಶೃಣವನ್ । ಯಜ್ಞಿಯಾಸಃ । ಧಾತ । ರಯಿಂ । ಸಹऽವೀರಂ । ತುರಾಸಃ ॥ ೧೩ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ವಿದ್ಯುದ್ರಥಾ ವಿದ್ಯೋತಮಾನರಥೋಪೇತಾ ಋಷ್ಟಿಮಂತೋ ದೀಪ್ತಿಮಂತಃ। ಋಷ್ಟಿರಾಯುಧವಿಶೇಷಃ । ತದ್ವಂತೋ ವಾ ದಿವೋ ದ್ಯೋತಮಾನಾ ಮರ್ಯಾಃ ಶತ್ರೂಣಾಂ ಮಾರಯಿತಾರ ಋತಜಾತಾ ಉದಕಾದ್ಯಜ್ಞಾದ್ವಾ ಪ್ರಾದುರ್ಭೂತಾಃ । ಯದ್ವಾ । ಋತಮುದಕಂ ಜಾತಂ ಯೇಭ್ಯಸ್ತೇ ಋತಜಾತಾಃ। ಅಯಾಸಃ ಸತತಗಮನಶೀಲಾ ಯಜ್ಞಿಯಾಸೋ ಯಜ್ಞಾರ್ಹಾ ಮರುತಃ ಸರಸ್ವತೀ । ಗದ್ಯಪದ್ಯರೂಪೇಣ ಪ್ರಸರಣಮಸ್ಯಾ ಅಸ್ತೀತಿ ಸರಸ್ವತೀ । ವಾಗ್ದೇವತಾ ಚ । ಏತೇ ಸರ್ವೇ ದೇವಾ ಮದೀಯಮಿಮಂ ಸ್ತೋಮಂ ಶೃಣವನ್ । ಶೃಣ್ವಂತು । ತುರಾಸೋಽಸ್ಮಾಕಂ ಫಲಪ್ರದಾನೇ ತ್ವರಣಯುಕ್ತಾ ಹೇ ಮರುತಃ ಸಹವೀರಂ ಪುತ್ರಸಹಿತಂ ರಯಿಂ ಧನಂ ಧಾತ। ಅಸ್ಮಭ್ಯಂ ಧತ್ತ ॥ ಧಾತ । ದಧಾತೇರ್ಲೋಟಿ ಬಹುಲಂ ಛಂದಸೀತಿ ಶಪೋಲುಕ್ । ತಪ್ತನಪ್ತನಥನಾಶ್ಚೇತಿ ತಬಾದೇಶಃ ಪಾದಾದಿತ್ವಾದನಿಘಾತಃ । ತಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ತುರಾಸಃ । ತುರ ತ್ವರಣೇ । ಇಗುಪಧಲಕ್ಷಣಃ ಕಃ । ಆಮಂತ್ರಿತತ್ವಾನ್ನಿಘಾತಃ ॥

ಪ್ರತಿಪದಾರ್ಥ

ವಿದ್ಯುದ್ರಥಾಃ—ವಿದ್ಯುದ್ರೂಪದ ರಥವುಳ್ಳವರೂ (ಅಥವಾ ಮಿಂಚಿನಂತೆ ಪ್ರಕಾಶಿಸುವ ರಥವುಳ್ಳವರೂ) । **ಋಷ್ಟಿಮಂತಃ**—ಕಾಂತಿಯುತವಾದ ಆಯುಧವುಳ್ಳವರೂ । **ದಿವಃ**—ಪ್ರಕಾಶಮಾನರೂ । **ಮರ್ಯಾಃ**—ಶತ್ರುನಾಶಕರೂ । **ಋತಜಾತಾಃ**—ಉದಕದಿಂದ ಉತ್ಪನ್ನರಾದವರೂ । **ಅಯಾಸಃ**—ಸತತವಾದ ಗಮನವುಳ್ಳವರೂ । **ಯಜ್ಞಿಯಾಸಃ**—ಯಜ್ಞಾರ್ಹರೂ ಆದ । **ಮರುತಃ**—ಮರುದ್ದೇವತೆಗಳೂ । **ಸರಸ್ವತೀ**—(ಮತ್ತು) ವಾಗ್ದೇವತೆಯೂ ಸಹ । **ಶೃಣವನ್**—(ನಮ್ಮ ಸ್ತೋತ್ರಗಳನ್ನು) ಕೇಳಲಿ । **ತುರಾಸಃ**—(ನಮಗೆ ಫಲವನ್ನು ಕೊಡಲು) ಆತುರವುಳ್ಳ ಎಲೈ ಮರುತ್ತುಗಳೇ । **ಸಹವೀರಂ**—ವೀರಪುತ್ರರೊಡಗೂಡಿದ । **ರಯಿಂ**—ಧನವನ್ನು । **ಧಾತಂ**—ನಮಗೆ ಕೊಡಿ

ಭಾವಾರ್ಥ

ಮಿಂಚಿನಂತೆ ಪ್ರಕಾಶಿಸುವ ರಥವುಳ್ಳವರೂ, ಕಾಂತಿಯುತವಾದ ಆಯುಧವುಳ್ಳವರೂ, ಪ್ರಕಾಶಮಾನರೂ, ಶತ್ರುನಾಶಕರೂ, ಉದಕದಿಂದ ಉತ್ಪನ್ನರಾದವರೂ, ಸತತವಾದ ಗುಣವುಳ್ಳವರೂ, ಯಜ್ಞಾರ್ಹರೂ ಆದ ಮರುದ್ದೇವತೆಗಳೂ ಮತ್ತು ವಾಗ್ದೇವತೆಯೂ ಸಹ ನಮ್ಮ ಸ್ತೋತ್ರಗಳನ್ನು ಕೇಳಲಿ. ನಮಗೆ ಫಲವನ್ನು ಕೊಡಲು ಆತುರವುಳ್ಳ ಮರುದ್ದೇವತೆಗಳೇ, ವೀರಪುತ್ರರೊಡಗೂಡಿದ ಧನವನ್ನು ನಮಗೆ ಕೊಡಿ.

English Translation

May the Maruts, whose cars are the lightning, who are armed with spears, resplendent, destroyers of foes, from whom the waters proceed, (who are) unresting and adorable, and may Saraswati hear (my prayer) ; and may you (Maruts), speedy in your liberality, bestow (upon us) riches and good offspring.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಮರುತಃ**—ಮರುದ್ದೇವತೆಗಳು ಕಾಂತಿಯಿಂದ ಕೂಡಿರುವ ರಥದಲ್ಲಿ ಸಂಚರಿಸುತ್ತಿರುವರು, **ಋಷ್ಟಿಮಂತಃ**—ಕಾಂತಿಯಿಂದ ಬೆಳಗುತ್ತಿರುವವರೂ, ಅಥವಾ ಋಷ್ಟಿ ಎಂಬ ಆಯುಧವನ್ನು ಹಿಡಿದು ಇರುವವರು, **ಋತಜಾತಾಃ**—ಉದಕದಿಂದ ಉತ್ಪನ್ನರಾದವರು, ಅಥವಾ ಯಜ್ಞದಿಂದ ಉತ್ಪನ್ನರಾದವರು, ಅಥವಾ ಉದಕದ ಉತ್ಪತ್ತಿಗೆ ಕಾರಣರಾದವರು, ಅಯೊಸಃ—ಯಾವಾಗಲೂ ಸಂಚರಿಸುವ ಸ್ವಭಾವವುಳ್ಳವರೂ ಆಗಿರುವರು ಈ ಮರುದ್ದೇವತೆಗಳು, ಗದ್ಯ ಪದ್ಯಾತ್ಮಕವಾದ ವಾಕ್ಪ್ರಸರಣರೂಪದಿಂದ ಇರುವ ವಾಗ್ದೇವತೆಯೊಡನೆ, ಯಜಮಾನರಾದ ನಮ್ಮ ಯಾಗಗಳಲ್ಲಿ ಋತ್ವಿಜರು ಪಠಿಸುವ ಸ್ತುತಿಗಳನ್ನು ಶ್ರವಣಮಾಡಲಿ ಎಂದೂ, ಈ ಮರುದ್ದೇವತೆಗಳು ಯಜಮಾನರ ಇಷ್ಟಗಳನ್ನು ಅನುಗ್ರಹಿಸುವುದರಲ್ಲಿ ತ್ವರೆಯುಳ್ಳವರಾಗಿ ಇರುವ ಕಾರಣ ಪುತ್ರರನ್ನೂ ಧನವನ್ನೂ ಯಜಮಾನನಿಗೆ ಅನುಗ್ರಹಿಸಲಿ ಎಂದೂ ಯಜಮಾನರ ಅಭಿಮತ ಪ್ರಾರ್ಥನೆಯು ವರ್ಣಿತವಾಗಿದೆ.

———:o:———

ಸಂಹಿತಾಪಾಠಃ

ವಿಷ್ಣುಂ ಸ್ತೋಮಾಸಃ ಪುರುದಸ್ಮಮರ್ಕಾ ಭಗಸ್ಯೇವ ಕಾರಿಣೋ ಯಾಮನಿ ಗ್ಮನ್ ।
ಉರುಕ್ರಮಃ ಕಕುಹೋ ಯಸ್ಯ ಪೂರ್ವೀರ್ನ ಮರ್ಧಂತಿ ಯುವತಯೋ ಜನಿತ್ರೀಃ ॥ ೧೪ ॥

ಪದಪಾಠಃ

ವಿಷ್ಣುಂ । ಸ್ತೋಮಾಸಃ । ಪುರುऽದಸ್ಮಂ । ಅರ್ಕಾಃ । ಭಗಸ್ಯऽಇವ । ಕಾರಿಣಃ । ಯಾಮನಿ । ಗ್ಮನ್ । ಉರುऽಕ್ರಮಃ । ಕಕುಹಃ । ಯಸ್ಯ । ಪೂರ್ವೀಃ । ನ । ಮರ್ಧಂತಿ । ಯುವತಯಃ । ಜನಿತ್ರೀಃ ॥ ೧೪ ॥

ಸಾಯಣಭಾಷ್ಯಂ

ಸ್ತೋಮಾಸಃ । ಸ್ತೂಯಂತ ಏಭಿರಿತಿ ಸ್ತೋಮಾಃ ಸ್ತೋತ್ರಾಣಿ । ಅರ್ಕಾ ಅರ್ಚನೀಯಾನಿ ಶಸ್ತ್ರಾಣಿ ಚ ಭಗಸ್ಯೇವ ಧನಸ್ಯ ಕಾರಿಣಃ ಕರ್ತ್ರ್ಯಾಣೀವ ಸ್ಥಿತಾನಿ ತಾನಿ ಯಾಮನಿ ಸಂತತಂ ಪ್ರತಾಯಮಾನೇಽಸ್ಮಿನ್ಯಜ್ಞೇ ಪುರುದಸ್ಮಂ ಬಹುಕರ್ಮಾಣಂ । ಯದ್ವಾ । ಬಹೂನ್ ದಸ್ಯೂನ್ ಉಪಕ್ಷಪಯತೀತಿ ಪುರುದಸ್ಮಃ । ತಂ ವಿಷ್ಣುಂ ದೇವಂ ಗ್ಮನ್ । ಗಚ್ಛಂತು । ಪೂರ್ವೀರ್ಬಹ್ವ್ಯೋ ಜನಿತ್ರೀಃ ಸರ್ವಸ್ಯ ಜನಯಿತ್ರ್ಯೋ ಯುವತಯಃ ಪರಸ್ಪರಮಸಂಕೀರ್ಣಾಃ ಕಕುಹಃ । ಕಂ ಸ್ಕಭ್ನಂತಿ ವಿಸ್ತಾರಯಂತೀತಿ ಕಕುಭೋ ದಿಶಃ । ಯದ್ವಾ । ಕಕುಬುಚ್ಛ್ರಯೋರ್ಥಃ । ಉಚ್ಛ್ರಿತಾ ಇವ ಹಿ ದಿಶೋ ವೃಕ್ಷಾಗ್ರೇಷೂಪಲಭ್ಯಮಾನಾಸ್ತಿಷ್ಠಂತಿ । ಏತಾ ದಿಶೋ ವಿಷ್ಣೋರಾಜ್ಞಾಂ ನ ಮರ್ಧಂತಿ । ನ ಹಿಂಸಂತಿ । ಸ ವಿಷ್ಣು-



CC-0. Jangamwadi Math Collection. Digitized by eGangotri

**ರುರುಕ್ರಮಃ । ಉರುರ್ಮಹಾನ್ ಕ್ರಮಃ ಪಾದವಿಕ್ಷೇಪೋ ಯಸ್ಯ ಸಃ । ತ್ರಿವಿಕ್ರಮಾವತಾರ ಏಕೇನೈವ ಪಾದೇನ ಸರ್ವಂ ಜಗದಾಕ್ರಮ್ಯಾತಿಷ್ಠತ ॥ ಗ್ಮನ್। ಗಮೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ ಕಕುಭಃ । ಪೃಷೋದರಾದಿತ್ವಾದ್ಧ್ರಸ್ವಸ್ವರಸಿದ್ಧಿಃ ॥**

ಪ್ರತಿಪದಾರ್ಥ

**ಸ್ತೋಮಾಸಃ**—ನಮ್ಮ ಸ್ತೋತ್ರಗಳೂ। **ಅರ್ಕಾಃ**—ಪೂಜಾಯೋಗ್ಯವಾದ ಶಸ್ತ್ರಮಂತ್ರಗಳೂ। **ಭಗಸ್ಯೇವ ಕಾರಿಣಃ**—ನಮ್ಮ ಐಶ್ವರ್ಯಕ್ಕೆ ಕಾರಣಗಳಾಗಿದ್ದು । **ಯಾಮನಿ**—ನಮ್ಮ ಯಜ್ಞದಲ್ಲಿ । **ಪುರುದಂಸಂ**—ಅನೇಕ ಕರ್ಮಗಳ ಕರ್ತನಾದ । **ವಿಷ್ಣುಂ**—ವಿಷ್ಣುವನ್ನು । **ಗ್ಮನ್**—ಸೇರಲಿ । **ಪೂರ್ವೀಃ**—ಬಹುಸಂಖ್ಯಾಕವಾದವೂ । **ಜನಿತ್ರೀಃ**—ಜಗತ್ತಿನ ಉತ್ಪತ್ತಿಗೆ ಕಾರಣವೂ । **ಯುವತಯಃ**—ಪ್ರತ್ಯೇಕವಾಗಿರತಕ್ಕವೂ ಆದ । **ಕಕುಹಃ**—ದಿಕ್ಕುಗಳು । **ಯಸ್ಯ**—ಯಾವ ವಿಷ್ಣುವಿನ (ಆಜ್ಞೆಯನ್ನು) । **ನ ಮರ್ಧಂತಿ**—ಮೀರುವುದಿಲ್ಲವೋ (ಆ ವಿಷ್ಣುವು) **ಉರುಕ್ರಮಃ**—ವಿಸ್ತೃತವಾದ ಪಾದವಿಕ್ಷೇಪವುಳ್ಳವನಾಗಿದ್ದಾನೆ.

ಭಾವಾರ್ಥ

ನಮ್ಮ ಸ್ತೋತ್ರಗಳೂ, ಪೂಜಾಯೋಗ್ಯವಾದ ಶಸ್ತ್ರಮಂತ್ರಗಳೂ ನಮ್ಮ ಐಶ್ವರ್ಯಕ್ಕೆ ಕಾರಣಗಳಾಗಿದ್ದು ನಮ್ಮ ಯಜ್ಞದಲ್ಲಿ ಅನೇಕ ಕರ್ಮಗಳ ಕರ್ತನಾದ ವಿಷ್ಣುವನ್ನು ಸೇರಲಿ. ಬಹುಸಂಖ್ಯಾಕವಾದವೂ, ಜಗತ್ತಿನ ಉತ್ಪತ್ತಿಗೆ ಕಾರಣವೂ, ಪ್ರತ್ಯೇಕವಾಗಿರತಕ್ಕವೂ ಆದ ದಿಕ್ಕುಗಳು ಯಾವ ವಿಷ್ಣುವಿನ ಆಜ್ಞೆಯನ್ನು ಮೀರುವುದಿಲ್ಲವೋ ಆ ವಿಷ್ಣುವು ವಿಸ್ತೃತವಾದ ಪಾದವಿಕ್ಷೇಪವುಳ್ಳವನಾಗಿದ್ದಾನೆ.

English Translation

May (our) praises and prayers, the causes of good fortune, attain at this sacrifice Vishnu, the object of many rites: he, the wide-stepping; whose commands the many-blending regions of space, the generators (of all beings), do not disobey.

ವಿಶೇಷವಿಷಯಗಳು

**ಅರ್ಕಾಃ—ಅರ್ಚನೀಯಾನಿ ಶಸ್ತ್ರಾಣಿ ಚ ।** ನಿರುಕ್ತಕಾರರು ಅರ್ಕ ಪದದ ಅರ್ಥವನ್ನು ಮಂತ್ರ, ದೇವತೆ, ವೃಕ್ಷ, ಅನ್ನ (ನಿ. ೫-೪) ಎಂದು ನಾಲ್ಕು ವಿಧವಾಗಿ ಹೇಳಿದ್ದಾರೆ. ಇಲ್ಲಿ ಸಾಯಣರು ದೇವತೆಯ ಮಾಹಾತ್ಮ್ಯವನ್ನು ಪ್ರಶಂಸೆಮಾಡುವ ಮಂತ್ರವೆಂಬ ಅರ್ಥದಲ್ಲಿ ಈ ಪದವು ಪ್ರಯುಕ್ತವಾಗಿದೆ ಎಂದು ಹೇಳಿದ್ದಾರೆ.

**ಪುರುದಸ್ಮಂ—ಬಹುಕರ್ಮಾಣಂ । ಯದ್ವಾ ಬಹೂನ್ ದಸ್ಯತಿ ಉಪಕ್ಷಪಯತಿ** ಈ ಪದಕ್ಕೆ ಬಹಳ ಕೆಲಸಗಳನ್ನು ಮಾಡುವವನು, ಅಥವಾ ಬಹಳ ಶತ್ರುಗವನ್ನು ನಾಶಗೊಳಿಸುವವನು ಎಂದು ಎರಡು ವಿಧವಾದ ಅರ್ಥವನ್ನು ವಿವರಿಸಿದೆ.

**ಸ್ತೋಮಾಸಃ ಅರ್ಕಾಃ ಪುರುದಸ್ಮಂ ಗ್ಮನ್—ಸ್ತೋತ್ರಾಣಿ ಶಸ್ತ್ರಾಣಿ ಚ ಬಹುಕರ್ಮಾಣಂ ತಂ ದೇವಂ ವಿಷ್ಣುಂ ಗಚ್ಛಂತು.** ಧನಪ್ರಾಪಕಗಳಾಗಿರುವ ಋತ್ವಿಜರು ಪಠಿಸುವ ಸ್ತೋತ್ರಗಳೂ, ಶಸ್ತ್ರಮಂತ್ರಗಳೂ ಕೂಡ

CC-0. Jangamwadi Math Collection. Digitized by eGangotri

ಅನೇಕ ಕರ್ಮಗಳನ್ನು ಆಚರಿಸುವವನಾಗಿಯೂ, ಅನೇಕ ಮಂದಿ ದುಷ್ಟರನ್ನು ನಾಶಮಾಡುವವನಾಗಿಯೂ ಇರುವ ವಿಷ್ಣುವಿನ ಪ್ರೀತಿ ಸಂಪಾದನೆಗಾಗಿ ಇರಲಿ ಎಂದು ವಿವರಿಸಿದೆ.

ಕಕುಭಃ— **ಕಂ ಸ್ಕಭ್ನಂತಿ ವಿಸ್ತಾರಯಂತಿ** । ಅಂತರಿಕ್ಷವನ್ನು ವಿಸ್ತಾರಗೊಳಿಸುವುವು ಎಂದರೆ ದಿಕ್ಕುಗಳು ಅಂತರಿಕ್ಷದ ವಿಸ್ತಾರವನ್ನು ಪ್ರಕಟಗೊಳಿಸುವುವು ಎಂದೂ, **ಯದ್ವಾ ಕಕುಬುಚ್ಛ್ರಯಾರ್ಥಃ । ಉಚ್ಛ್ರಿತಾ ಇವ ದಿಶಃ ವೃಕ್ಷಾಗ್ರೇಷೂಪಲಭ್ಯಮಾನಾಃ ತಿಷ್ಠಂತಿ** । ವೃಕ್ಷಗಳ ಮೇಲುಭಾಗದಲ್ಲಿ ಸಂಬಂಧಿಸಿರುವ ಹಾಗೆ ಉನ್ನತವಾಗಿಯೂ ಇರುವುದರಿಂದ ದಿಕ್ಕುಗಳು ಉನ್ನತ ಪ್ರದೇಶಗಳಾಗಿರುವುವು ಎಂದೂ ಕಕುಪ್ ಶಬ್ದದ ಅರ್ಥವು ವಿವೃತವಾಗಿದೆ.

**ಪೂರ್ವೀಃ ಜನಿತ್ರೀಃ ಕಕುಭಃ ಯುವತಯಃ ವಿಷ್ಣೋರಾಜ್ಞಾಂ ನ ಮೃರ್ಧಂತಿ**—ಅನೇಕ ಸಂಖ್ಯೆಯಿಂದ ಇರುವ, ಎಲ್ಲವನ್ನೂ ಉತ್ಪನ್ನಮಾಡುವ, ಪ್ರತ್ಯೇಕವಾಗಿರುವ ಈ ದಿಕ್ಕುಗಳೂ ಕೂಡ ಮಹತ್ತ್ವಪೂರಿತನಾದ ವಿಷ್ಣುವಿನ ಆಜ್ಞೆಯನ್ನು ಮೀರುವುದಿಲ್ಲವೆಂದು ವರ್ಣಿಸಿ, ಈ ವಿಷ್ಣುವು **ಉರುಕ್ರಮಃ— ಉರುಃ ಮಹಾನ್ ಪಾದವಿಕ್ಷೇಪಃ ಯಸ್ಯ ಸಃ** । ದೊಡ್ಡದಾದ ಪಾದವಿನ್ಯಾಸವುಳ್ಳವನು. ಇವನು ತನ್ನ ಒಂದು ಪಾದವಿನ್ಯಾಸದಿಂದಲೇ ಭೂಮಿ ಎಲ್ಲವನ್ನೂ ಆಕ್ರಮಿಸಿರುವನು ಎಂದೂ ವರ್ಣಿಸಿ ವಿಷ್ಣುವಿನ ಮಾಹಾತ್ಮ್ಯವು ನಿರತಿಶಯವಾಗಿರುವುದೆಂದೂ ವರ್ಣಿತವಾಗಿದೆ.



ಸಂಹಿತಾಪಾಠಃ

ಇಂದ್ರೋ ವಿಶ್ವೈರ್ವೀರ್ಯೈಃ ಪತ್ಯಮಾನ ಉಭೇ ಆ ಪಪ್ರೌ ರೋದಸೀ ಮಹಿತ್ವಾ ।
ಪುರಂದರೋ ವೃತ್ರಹಾ ಧೃಷ್ಣುಷೇಣಃ ಸಂಗೃಭ್ಯಾ ನ ಆ ಭರಾ ಭೂರಿ ಪಶ್ವಃ ॥

ಪದಪಾಠಃ

ಇಂದ್ರಃ । ವಿಶ್ವೈಃ । ವೀರ್ಯೈಃ । ಪತ್ಯಮಾನಃ । ಉಭೇ ಇತಿ । ಆ । ಪಪ್ರೌ । ರೋದಸೀ ಇತಿ । ಮಹಿಃತ್ವಾ ।
ಪುರಮ್ಃದರಃ । ವೃತ್ರಃಹಾ । ಧೃಷ್ಣುಃಸೇನಃ । ಸಮ್ಃಗೃಭ್ಯ । ನಃ । ಆ । ಭರ । ಭೂರಿ । ಪಶ್ವಃ ॥೧೫॥

ಸಾಯಣಭಾಷ್ಯಂ

ವಿಶ್ವೈಃ ಸರ್ವೈರ್ವೀರ್ಯೈಃ ಸಾಮರ್ಥ್ಯೈಃ ಪತ್ಯಮಾನಃ ಪ್ರಾಪ್ಯಮಾಣಃ ಸ ಇಂದ್ರ ಉಭೇ ರೋದಸೀ ದ್ಯಾವಾಪೃಥಿವ್ಯೌ ಮಹಿತ್ವಾ ಸ್ವಕೀಯೇನ ಮಹಿಮ್ನಾ ಪಪ್ರೌ । ಪೂರಯಾಮಾಸ । ಶೇಷಃ ಪ್ರತ್ಯಕ್ಷಕೃತಃ ।

CC-0. Jangamwadi Math Collection. Digitized by eGangotri

ಪುರಂದರಃ ಶತ್ರುಪುರಾಂ ದಾರಯಿತಾ ವೃತ್ರಹಾ ವೃತ್ರಸ್ಯ ಹಂತಾ ಧೃಷ್ಣುಷೇಣಃ ಪರಾಭಿಭವನಶೀಲಸೇನೋಪೇತಃ ಸ ತ್ವಂ ಪಶ್ವಃ ಪಶೂನ್ ಸಂಗೃಭ್ಯ ಸಂಗೃಹ್ಯ ನೋಽಸ್ಮಭ್ಯಂ ಭೂರಿ ಪ್ರಭೂತಂ ಯಥಾ ಭವತಿ ತಥಾ ಭರ । ದೇಹಿ । ಯದ್ವಾ । ಪಶ್ವಃ ಪಶೋರ್ಭೂರಿ ಬಹುತ್ವಂ ಬಹೂನ್ ಪಶೂಂಶ್ಚ ಯಚ್ಛೇತಿ ॥ ಪುರಂದರಃ । ದೄ ವಿದಾರಣ ಇತ್ಯಸ್ಯ ಪುರಶಬ್ದ ಉಪಪದೇ ಪೂಃಸರ್ವಯೋರ್ದಾರಿಸಹೋರಿತಿ ಖಚ್ಪ್ರತ್ಯಯಃ । ವಾಚಂಯಮಪುರಂದರೌ ಚೇತಿ ನಿಪಾತನಾತ್ಪೂರ್ವಪದಸ್ಯಾಮಾಗಮಃ । ಚಿತ್ತ್ವಾದಂತೋದಾತ್ತಃ। ಧೃಷ್ಣುಷೇಣಃ। ಪೂರ್ವಪದಾದಿತಿ ಸಂಹಿತಾಯಾಂ ಷತ್ವಂ । ಯದಾ ಷತ್ವಂ ತದಾ ರಷಾಭ್ಯಾಮಿತಿ ಣತ್ವಂ । ಸಂಗೃಭ್ಯ । ಗ್ರಹೇರ್ಲ್ಯಪಿ ಸ್ಥಾನಿವದ್ಭಾವಾತ್ಸಂಪ್ರಸಾರಣಂ । ಹೃಗ್ರಹೋರ್ಭಶ್ಛಂದಸೀತಿ ಭತ್ವಂ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಪಶ್ವಃ । ಪಶುಶಬ್ದಾತ್ ಶಸಃ ಜಸಾದಿಷು ಛಂದಸಿ ವಾವಚನಮಿತಿ ಸವರ್ಣದೀರ್ಘಾಭಾವಃ ॥

### ಪ್ರತಿಪದಾರ್ಥ

ವಿಶ್ವೈಃ—ಸಮಸ್ತವಾದ । ವೀರ್ಯೈಃ—ಸಾಮರ್ಥ್ಯಗಳಿಂದ । ಪತ್ಯಮಾನಃ—ಸೇರಿಕೊಂಡಿರುವ । ಇಂದ್ರಃ—ಇಂದ್ರನು । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಮಹಿತ್ವಾ—ತನ್ನ ಮಹಿಮೆಯಿಂದ । ಆ ಪಪ್ರೌ—ತುಂಬಿದ್ದಾನೆ (ಎಲೈ ಇಂದ್ರನೇ) । ಪುರಂದರಃ—ಶತ್ರುಪಟ್ಟಣಗಳನ್ನು ನಾಶಮಾಡುವವನೂ । ವೃತ್ರಹಾ—ವೃತ್ರಹಂತಕನೂ । ಧೃಷ್ಣುಷೇಣಃ—ಶತ್ರುಗಳನ್ನು ನಾಶಮಾಡುವ ಸೇನೆಯುಳ್ಳವನೂ ಆದ ನೀನು । ಪಶ್ವಃ—ಪಶುಗಳನ್ನು । ಸಂಗೃಹ್ಯ—ಶೇಖರಿಸಿ । ನಃ—ನಮಗೆ । ಭೂರಿ—ಪ್ರಭೂತವಾಗಿರುವಂತೆ । ಆ ಭರ—ಒದಗಿಸಿಕೊಡು.

### ಭಾವಾರ್ಥ

ಸಮಸ್ತ ಸಾಮರ್ಥ್ಯಗಳಿಂದಲೂ ಕೂಡಿಕೊಂಡಿರುವ ಇಂದ್ರನು ದ್ಯಾವಾಪೃಥಿವಿಗಳೆರಡನ್ನೂ ತನ್ನ ಮಹಿಮೆಯಿಂದ ತುಂಬಿದ್ದಾನೆ. ಎಲೈ ಇಂದ್ರನೇ, ಶತ್ರುಪಟ್ಟಣಗಳನ್ನು ನಾಶಮಾಡುವವನೂ, ವೃತ್ರಹಂತಕನೂ, ಶತ್ರುಗಳನ್ನು ನಾಶಮಾಡುವ ಸೇನೆಯುಳ್ಳವನೂ ಆದ ನೀನು ಪ್ರಭೂತವಾಗಿ ಪಶುಗಳನ್ನು ಸಂಗ್ರಹಿಸಿ ನಮಗೆ ಕೊಡು.

### English Translation

Indra, invested with all energies, has filled both heaven and earth with his greatness: you are the destroyer of cities, the slayer of Vritra, the leader of a conquering host, collect cattle and bestow them abundantly upon us.

### ವಿಶೇಷವಿಷಯಗಳು

ಇಂದ್ರಃ ವಿಶ್ವೈಃ ವೀರ್ಯೈಃ ಪತ್ಯಮಾನಃ—ಸರ್ವೈಃ ಸಾಮರ್ಥ್ಯೈಃ ಪ್ರಾಪ್ಯಮಾಣಃ ಇಂದ್ರಃ । ಇಂದ್ರ ಶಬ್ದಾರ್ಥವು ಯಾಸ್ಕರಿಂದ (ನಿ ೧೦-೮) ನಾನಾ ವಿಧದಿಂದ ವಿವೃತವಾಗಿದೆ. ಇಂದ್ರನು ಅನೇಕ ವಿಧವಾದ ಮತ್ತು ಸಮಗ್ರವಾದ ಶಕ್ತಿಯಿಂದ ಪೂರ್ಣನಾಗಿರುತ್ತಾ, ದ್ಯಾವಾಪೃಥಿವಿಗಳನ್ನು ತನ್ನ ಮಹಿಮೆಯಿಂದ ತುಂಬಿರುವನು ಎಂದು ವರ್ಣಿಸಿದೆ.

CC-0. Jangamwadi Math Collection. Digitized by eGangotri

ವೃತ್ರಹಾ ಧೃಷ್ಣುಸೇನಃ ನಃ ಪಶ್ವಃ ಭೂರಿ ಆ ಭರ—ಪರಾಭಿಭವನಶೀಲಸೇನೋಪೇತಃ ವೃತ್ರಸ್ಯ ಹಂತಾ ಅಸ್ಮಭ್ಯಂ ಪಶೂನ್ ಭೂರಿ ಯಥಾ ಭವತಿ ತಥಾ ಆಭರ । ಯದ್ವಾ ಪಶೋಃ ಭೂರಿ ಬಹೂನ್ ಪಶೂಂಶ್ಚ ಯಚ್ಛ । ವೃತ್ರ ಹಂತಕನಾಗಿರುವ ಮತ್ತು ಶತ್ರುಗಳನ್ನು ಸೋಲಿಸುವ ಸಾಮರ್ಥ್ಯವುಳ್ಳ ಸೇನೆಗಳಿಂದ ಕೂಡಿರುವ ಇಂದ್ರನು ಯಜಮಾನರಾದ ನಮಗೆ ಬಹಳವಾಗಿ ಗೋವುಗಳು ಮುಂತಾದ ಪಶುಗಳು ಸೇರುವಂತೆ ಅನುಗ್ರಹಿಸಲಿ ಅಥವಾ ಬಹಳ ಪಶುಗಳನ್ನೇ ಅನುಗ್ರಹಿಸಲಿ ಎಂದು ಪ್ರಾರ್ಥನೆಯು ವರ್ಣಿತವಾಗಿದೆ.

---

ಸಂಹಿತಾಪಾಠಃ

ನಾಸತ್ಯಾ ಮೇ ಪಿತರಾ ಬಂಧುಪೃಚ್ಛಾ ಸಜಾತ್ಯಮಶ್ವಿನೋಶ್ಚಾರು ನಾಮ ।
ಯುವಂ ಹಿ ಸ್ಥೋ ರಯಿದೌ ನೋ ರಯೀಣಾಂ ದಾತ್ರಂ ರಕ್ಷೇಥೇ ಅಕವೈರದಬ್ಧಾ ॥ ೧೬ ॥

ಪದಪಾಠಃ

ನಾಸತ್ಯಾ । ಮೇ । ಪಿತರಾ । ಬಂಧುಽಪೃಚ್ಛಾ । ಸಽಜಾತ್ಯಂ । ಅಶ್ವಿನೋಃ । ಚಾರು । ನಾಮ ।
ಯುವಂ । ಹಿ । ಸ್ಥಃ । ರಯಿಽದೌ । ನಃ । ರಯೀಣಾಂ । ದಾತ್ರಂ । ರಕ್ಷೇಥೇ ಇತಿ । ಅಕವೈಃ । ಅದಬ್ಧಾ ॥

ಸಾಯಣಭಾಷ್ಯಂ

ಹೇ ನಾಸತ್ಯಾವಶ್ವಿನೌ ಬಂಧುಪೃಚ್ಛಾ । ಹವಿಷ್ಪ್ರದಾತೃತ್ವೇನ ಬಂಧೂನಸ್ಮಾನಪೇಕ್ಷಿತಮರ್ಥಂ ಪೃಚ್ಛತ ಇತಿ ಬಂಧೂನಾಂ ಪ್ರಷ್ಟಾರೌ । ಯುವಾಂ ಮೇ ಪಿತರೌ ಪಾಲಯಿತಾರೌ ಭವತಂ । ಯುವಯೋರಶ್ವಿನೋಃ ಸಜಾತ್ಯಂ ಸಜಾತೇ ಭವಂ ಸಂಗತಂ ಚಾರು ನಾಮ ಕಮನೀಯಂ ಖಲು । ಹೇ ಅಶ್ವಿನೌ ಯುವಂ ಯುವಾಂ ನೋಽಸ್ಮಭ್ಯಂ ರಯೀಣಾಂ ಧನಾನಾಂ ಮಧ್ಯೇ ರಯಿದಾವುತ್ತಮಸ್ಯ ಧನಸ್ಯ ದಾತಾರೌ ಸ್ಥೋ ಹಿ । ಭವಥಃ ಖಲು। ಕಿಂಚ ಅದಬ್ಧಾ ಕೇನಾಪ್ಯತಿರಸ್ಕೃತೌ ಯುವಾಂ ದಾತ್ರಂ ಹವಿಷಾಂ ದಾತಾರಂ ಮಾಮಕವೈರಕುತ್ಸಿತೈಃ ಶೋಭನೈಃ ಕರ್ಮಭೀ ರಕ್ಷೇಥೇ । ಪಾಲಯತಂ ॥ ನಾಸತ್ಯಾ । ನಭ್ರಾಣ್ನಪಾದಿತ್ಯಾದಿನಾ ನಿಪಾತನಾನ್ನಞಃ ಪ್ರಕೃತಿಭಾವಃ । ಬಂಧುಪೃಚ್ಛಾ । ಪೃಚ್ಛೇಃ ಕ್ವಿಪ್ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ಸಜಾತ್ಯಂ । ಸಜಾತೇ ಭವಂ । ಭವೇ ಛಂದಸೀತಿ ಯತ್ । ತಿತ್ಸ್ವರಿತಃ । ಸ್ಥಃ । ಅಸ್ತೇರ್ಲಟಿ ರೂಪಂ । ಹಿಯೋಗಾದನಿಘಾತಃ ॥

ಪ್ರತಿಪದಾರ್ಥ

ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಬಂಧುಪೃಚ್ಛಾ—ನಿಮಗೆ ಬಂಧುರೂಪರಾದ ನಮ್ಮ ಅಪೇಕ್ಷಿತಾರ್ಥಗಳನ್ನು ಕೇಳಿ ತಿಳಿದುಕೊಳ್ಳುವ ನೀವು । ಮೇ—ನನಗೆ । ಪಿತರಾ—ಪಾಲಕರಾಗಿರಿ । ಅಶ್ವಿನೋಃ—

CC-0. Jangamwadi Math Collection. Digitized by eGangotri

ನಿಮ್ಮಿಬ್ಬರ । **ಸಜಾತ್ಯಂ**—ಒಂದಾಗಿರುವಿಕೆಯು । **ಚಾರು ನಾಮ**—ಆಕರ್ಷಕವಾಗಿರುತ್ತದೆ । **ಯುವಂ**—ನೀವಿಬ್ಬರೂ । **ನಃ**—ನಮಗೆ । **ರಯೀಣಾಂ**—ಧನಗಳ ಗುಂಪಿನಲ್ಲೆಲ್ಲಾ । **ರಯಿದೌ**—ಉತ್ತಮವಾದ ಧನದಾತರಾಗಿ । **ಸ್ಥಃ ಹಿ**—ಆಗಿದ್ದೀರಲ್ಲವೇ ? । **ಅದಬ್ಧಾ**—ಇತರರಿಂದ ಹಿಂಸಿತರಾಗದಿರುವ ನೀವು । **ದಾತ್ರಂ**—ಹವಿಸ್ಸನ್ನು ಅರ್ಪಿಸುವ ನನ್ನನ್ನು । **ಅಕವೈಃ**—ಶೋಭನಕರ್ಮಗಳಿಂದ । **ರಕ್ಷೇಥೇ**—ರಕ್ಷಿಸಿರಿ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಿಮಗೆ ಬಂಧುರೂಪರಾದ ನಮ್ಮ ಅಪೇಕ್ಷಿತಾರ್ಥಗಳನ್ನು ಕೇಳಿ ತಿಳಿದುಕೊಳ್ಳುವ ನೀವು ನನಗೆ ಪಾಲಕರಾಗಿರಿ. ನೀವಿಬ್ಬರೂ ಒಟ್ಟಿಗೆ ಸೇರಿಕೊಂಡಿರುವುದು ನೋಟಕ್ಕೆ ಆಕರ್ಷಕವಾಗಿರುತ್ತದೆ. ಧನಗಳಲ್ಲೆಲ್ಲಾ ಉತ್ತಮವಾದ ಧನವನ್ನು ನಮಗೆ ಕೊಡತಕ್ಕವರಾಗಿದ್ದೀರಿ. ಇತರರಿಂದ ಹಿಂಸಿತರಾಗದಿರುವ ನೀವು ಹವಿಸ್ಸನ್ನು ಅರ್ಪಿಸತಕ್ಕ ನನ್ನನ್ನು ಶೋಭನಕರ್ಮಗಳಿಂದ ರಕ್ಷಿಸಿರಿ.

English Translation

Nasatyas, my protectors, inquirers (after the wishes) of your kinsman, beautiful is your cognate appellation of Ashwins ; be to us the liberal donors of riches : you, are irresistible, protect the offer (of the oblation) with unblameable (defences).

ವಿಶೇಷವಿಷಯಗಳು

**ನಾಸತ್ಯಾ ಬಂಧುಪೃಚ್ಛಾ ಮೇ ಪಿತರಾ**—ಅಶ್ವಿನೌ ಹವಿಷ್ಪ್ರದಾತೃತ್ವೇನ ಬಂಧೂನಸ್ಮಾನ್ ಅಪೇಕ್ಷಿತಮರ್ಥಂ ಪೃಚ್ಛತಃ ಯುವಾಂ ಪಾಲಯಿತಾರೌ ಭವತಂ । ನಾಸತ್ಯಾ ಎಂಬ ಪದವು ಯಾಸ್ಕರಿಂದ (ನಿ. ೬-೧೩) ಎರಡು ಮೂರು ವಿಧವಾಗಿ ವಿವೃತವಾಗಿದೆ. ಅಶ್ವಿನೀದೇವತೆಗಳು ತಮಗೆ ಹವಿಸ್ಸಿನ ಅರ್ಪಣೆಯಿಂದ ಸಂತೋಷಪಡಿಸುವ ಯಜಮಾನರ ಅಭಿಲಾಷೆಗಳನ್ನು ಬಂಧುಗಳು ವಿಚಾರಿಸುವಹಾಗೆ ವಿಚಾರಮಾಡಿ ತಿಳಿದುಕೊಂಡು ಅದನ್ನು ನೆರವೇರಿಸಿಕೊಡುವ ಕಾರಣ ಯಜಮಾನರ ಪಾಲಕರಾಗಿ ಇರಬೇಕೆಂದು ಪ್ರಾರ್ಥನೆಯು ವಿವೃತವಾಗಿದೆ.

**ರಯಿದೌ ನೋ ರಯೀಣಾಂ**—ಧನಾನಾಂ ಮಧ್ಯೇ ಉತ್ತಮಸ್ಯ ಧನಸ್ಯ ದಾತಾರೌ—ನಾನಾ ವಿಧವಾದ ಧನಗಳಲ್ಲಿ ಯಜಮಾನನಿಗೆ ಉತ್ತಮವಾದ ಧನವನ್ನು ಅಶ್ವಿನೀದೇವತೆಗಳು ಅನುಗ್ರಹಿಸುವರು ಎಂಬ ಅರ್ಥವು ವರ್ಣಿತವಾಗಿದೆ.

**ಅದಬ್ಧಾ**—ಕೇನಾಪ್ಯಹಿಂಸಿತಾ. ಅಶ್ವಿನೀದೇವತೆಗಳು ಯಾರಿಂದಲೂ ಹಿಂಸಿಸಲ್ಪಡದಿರುವವರು ಎಂದೂ, ಯಜಮಾನರನ್ನು **ಅಕವೈಃ ರಕ್ಷೇಥೇ ಅಕುತ್ಸಿತೈಃ ಶೋಭನಕರ್ಮಭಿಃ ಪಾಲಯಿತಂ** ನಿಂದನೀಯವಾಗದಿರುವ ಉತ್ತಮವಾದ ಕರ್ಮಾಚರಣೆಗಳು ಸಂತತವಾಗಿ ಆಚರಿತವಾಗುವಹಾಗೆ ರಕ್ಷಿಸಬೇಕೆಂದೂ ಆಶಂಸಿತವಾಗಿದೆ.

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಮಹತ್ತದ್ವಃ ಕವಯಶ್ಚಾರು ನಾಮ ಯದ್ಧ ದೇವಾ ಭವಥ ವಿಶ್ವ ಇಂದ್ರೇ ।
ಸಖ ಋಭುಭಿಃ ಪುರುಹೂತ ಪ್ರಿಯೇಭಿರಿಮಾಂ ಧಿಯಂ ಸಾತಯೇ ತಕ್ಷತಾ ನಃ ॥ ೧೭ ॥

ಪದಪಾಠಃ

ಮಹತ್ । ತತ್ । ವಃ । ಕವಯಃ । ಚಾರು । ನಾಮ । ಯತ್ । ಹ । ದೇವಾಃ । ಭವಥ । ವಿಶ್ವೇ । ಇಂದ್ರೇ ।
ಸಖಾ । ಋಭುಽಭಿಃ । ಪುರುಽಹೂತ । ಪ್ರಿಯೇಭಿಃ । ಇಮಾಂ । ಧಿಯಂ । ಸಾತಯೇ । ತಕ್ಷತ । ನಃ ॥ ೧೭ ॥

ಸಾಯಣಭಾಷ್ಯಂ

ಹೇ ಕವಯೋ ಮೇಧಾವಿನೋ ಹೇ ದೇವಾ ವೋ ಯುಷ್ಮಾಕಂ ತತ್ತಾದೃಶಂ ಮಹತ್ಪ್ರಭೂತಂ ನಾಮ ಕರ್ಮ ನಮನಂ ವಾ ಚಾರು ಮನೋಹರಂ ಖಲು । ಯದ್ಯೇನ ಕರ್ಮಣಾ ವಿಶ್ವೇ ಸರ್ವೇ ಯೂಯಮಿಂದ್ರ ಇಂದ್ರೋಪಲಕ್ಷಿತೇ ಲೋಕೇ ದೇವಾ ಭವಥ ಹ ದೇವತ್ವಂ ಪ್ರಾಪ್ನುಥ ಖಲು । ಹೇ ಪುರುಹೂತ ಬಹುಭಿರಾಹೂತ ಹೇ ಇಂದ್ರ ತ್ವಂ ಪ್ರಿಯೇಭಿಃ ಪ್ರಿಯತಮೈರ್ಋಭುಭಿಃ । ಋತೇನ ಭವಂತ್ಯೃತೇನ ಭಾಂತೀತಿ ವಾ । ಋಭುಭಿರ್ದೇವೈಃ ಸಖಾಸಿ । ಇಂದ್ರಸಹಿತಾ ಋಭವೋ ಯೂಯಮಿಮಾಮಸ್ಮದೀಯಾಂ ಧಿಯಂ ಸ್ತುತಿಂ ನೋಽಸ್ಮಾಕಂ ಸಾತಯೇ ಧನಾದಿಲಾಭಾರ್ಥಂ ತಕ್ಷತ । ಸ್ವೀಕುರುತ ॥ ಯತ್ । ಸುಪಾಂ ಸುಲುಗಿತ್ಯಾದಿನಾ ಸುಪೋ ಲುಕ್ । ಭವಥ ॥ ಭವತೇರ್ಲಟಿ ರೂಪಂ । ಯದ್ವೃತ್ತಯೋಗಾದನಿಘಾತಃ । ಸಖ ಋಭುಭಿರಿತ್ಯಸ್ಯ ಸಂಹಿತಾಯಾಮೃತ್ಯಕ ಇತಿ ಪ್ರಕೃತಿಭಾವೋ ಹ್ರಸ್ವತ್ವಂ ಚ ॥

ಪ್ರತಿಪದಾರ್ಥ

**ಕವಯಃ**—ಮೇಧಾವಿಗಳಾದ ದೇವತೆಗಳೇ । **ವಃ**—ನಿಮಗೆ । **ತತ್**—ಪ್ರಸಿದ್ಧವಾದುದೂ । **ಮಹತ್**—ಪ್ರಭೂತವಾದುದೂ ಆದ । **ನಾಮ**—ಕರ್ಮವು । **ಚಾರು**—ಪ್ರಿಯವಾಗಿರುತ್ತದೆ । **ಯತ್**—ಯಾವ ಅದೇ ಕರ್ಮದಿಂದ । **ವಿಶ್ವೇ**—ನೀವು ಸಮಸ್ತರೂ ಸಹ । **ಇಂದ್ರೇ**—ಇಂದ್ರಲೋಕದಲ್ಲಿ । **ದೇವಾಃ ಭವಥ ಹ**—ದೇವತ್ವವನ್ನು ಪಡೆದಿರುವಿರಲ್ಲವೇ ? । **ಪುರುಹೂತ**—ಅನೇಕರಿಂದ ಆಹೂತನಾಗುವ ಇಂದ್ರನೇ । **ಪ್ರಿಯೇಭಿಃ**—ನಿನಗೆ ಪ್ರಿಯತಮರಾದ । **ಋಭುಭಿಃ**—ಋಭುಗಳೊಂದಿಗೆ । **ಸಖಾ**—ಸ್ನೇಹಿತನಾಗಿದ್ದೀಯೆ । **ಇಮಾಂ**—ನಮ್ಮಿಂದ ಅರ್ಪಿತವಾದ । **ಧಿಯಂ**—ಸ್ತುತಿಯನ್ನು । **ನಃ**—ನಮಗೆ । **ಸಾತಯೇ**—ಧನಲಾಭಾರ್ಥವಾಗಿ । **ತಕ್ಷತ**—ಸ್ವೀಕರಿಸು.

CC-0. Jangamwadi Math Collection. Digitized by eGangotri

ಭಾವಾರ್ಥ

ಮೇಧಾವಿಗಳಾದ ಎಲೈ ದೇವತೆಗಳೇ, ನಿನಗೆ ಪ್ರಸಿದ್ಧವಾದುದೂ ಪ್ರಭೂತವಾದದೂ ಆದ ಕರ್ಮವು ಪ್ರಿಯವಾಗಿರುತ್ತದೆ. ಯಾವ ಅದೇ ಕರ್ಮದಿಂದ ನೀವು ಸಮಸ್ತರೂ ಸಹ ಇಂದ್ರಲೋಕದಲ್ಲಿ ದೇವತ್ವವನ್ನು ಪಡೆದಿರುವಿರಲ್ಲವೇ ? ಅನೇಕರಿಂದ ಆಹೂತನಾಗುವ ಎಲೈ ಇಂದ್ರನೇ, ನಿನಗೆ ಪ್ರಿಯತಮರಾದ ಋಭುಗಳೊಂದಿಗೆ ನೀನು ಸಖಿವಾಗಿದ್ದೀಯೆ. ನಮ್ಮಿಂದ ಅರ್ಪಿತವಾದ ಸ್ತುತಿಯನ್ನು ನಮಗೆ ಧನಲಾಭಾರ್ಥವಾಗಿ ಸ್ವೀಕರಿಸು.

English Translation

Sages acquainted with the past, excellent is that beautiful appellation under which you have both become gods in (the sphere of) Indra: Indra, the invoked of many, a friend, (associated) with the beloved Ribhus, shape this prayer for our benefit.

ವಿಶೇಷವಿಷಯಗಳು

**ಕವಯಃ—ಮೇಧಾವಿನಃ** । ಕವಿ ಶಬ್ದವು ಮೇಧಾವಿನಾಮಗಳಲ್ಲಿ (ನಿ. ೩-೧೫) ಉಕ್ತವಾಗಿದೆ. ದೇವತೆಗಳು ಮೇಧಾವಿಗಳಾಗಿರುವರೆಂದು ಈ ಪದದಿಂದ ಸಂಬೋಧಿತರಾಗಿದ್ದಾರೆ. ಈ ದೇವತೆಗಳ **ಮಹತ್ ನಮನಂ ಚಾರು—ಪ್ರಭೂತಂ ನಮನಂ ಮನೋಹರಂ** ಅತಿಶಯವಾದ ಕಾರ್ಯಗಳ ಆಚರಣೆಯು ಲೋಕೋಪಕಾರಕವಾಗಿ ಸರ್ವರಿಗೂ ಚಿತ್ತಾಕರ್ಷಕವಾಗಿರುವುದೆಂದು ವರ್ಣಿಸಿದೆ.

**ಯತ್ತ್ಯಯತ್ ವಿಶ್ವೇ ಇಂದ್ರೇ ದೇವಾಃ ಭವಥ—ಯೇನ ಕರ್ಮಣಾ ಸರ್ವೇ ಯೂಯಂ ಇಂದ್ರೋಪಲಕ್ಷಿತೇ ಲೋಕೇ ದೇವತ್ವಂ ಪ್ರಾಪ್ನುಥ** । ಈ ದೇವತೆಗಳು ತಾವು ಆಚರಿಸುವ ಕರ್ಮಗಳಿಂದ ಇಂದ್ರನು ವಾಸಮಾಡುತ್ತಿರುವ ಲೋಕದಲ್ಲಿ ಪ್ರಕಾಶದಿಂದ ಬೆಳಗುತ್ತಿರುವ ದೇವತ್ವವನ್ನು ಪಡೆದು ವಾಸಮಾಡುತ್ತಿರುವರು ಎಂದು ಇವರ ಉತ್ತಮವಾದ ಕರ್ಮಾಚರಣೆಯು ಸ್ತುತಿಸಲ್ಪಟ್ಟಿದೆ.

ಇಂದ್ರನು **ಪುರುಹೂತ** ಶಬ್ದದಿಂದ ಸಂಬೋಧಿತನಾಗಿದ್ದರೂ, ಈ ಇಂದ್ರನು ಋಭುಗಳೆಂಬ ದೇವತೆಗಳಿಗೆ ಸ್ನೇಹಿತನಾಗಿರುವನೆಂದೂ, ಇಂದ್ರನೊಡನೆ ಋಭುಗಳು ಯಾಗಶಾಲೆಗೆ ಆಗಮಿಸಿ ಯಜಮಾನರ ಸ್ತುತಿಗಳನ್ನು ಶ್ರವಣಮಾಡುವುದರಮೂಲಕ ಯಜಮಾನನಿಗೆ, ಧನಾದಿಗಳನ್ನು ಅನುಗ್ರಹಿಸಬೇಕೆಂದೂ ಆಶಂಸಿತವಾಗಿದೆ.

---

ಸಂಹಿತಾಪಾಠಃ

ಅರ್ಯಮಾ ಣೋ ಅದಿತಿರ್ಯಜ್ಞಿಯಾಸೋಽದಬ್ಧಾನಿ ವರುಣಸ್ಯ ವ್ರತಾನಿ।
ಯುಯೋತ ನೋ ಅನಪತ್ಯಾನಿ ಗಂತೋಃ ಪ್ರಜಾವಾನ್ನಃ ಪಶುಮಾಁ
ಅಸ್ತು ಗಾತುಃ ॥ ೧೮ ॥

CC-0. Jangamwadi Math Collection. Digitized by eGangotri

### ಪದಪಾಠಃ

ಅರ್ಯಮಾ । ನಃ । ಅದಿತಿಃ । ಯಜ್ಞಿಯಾಸಃ । ಅದಬ್ಧಾನಿ । ವರುಣಸ್ಯ । ವ್ರತಾನಿ ।

ಯುಯೋತ । ನಃ । ಅನಪತ್ಯಾನಿ । ಗಂತೋಃ । ಪ್ರಜಾಽವಾನ್ । ನಃ । ಪಶುಽಮಾನ್ । ಅಸ್ತು । ಗಾತುಃ ॥

### ಸಾಯಣಭಾಷ್ಯಂ

ಅರ್ಯಮಾ । ಋಚ್ಛತಿ ಸರ್ವದಾ ಗಚ್ಛತೀತ್ಯರ್ಯಮಾ ಸೂರ್ಯಃ । ಅದಿತಿರ್ದೇವಮಾತಾ ಯಜ್ಞಿಯಾಸೋ ಯಜ್ಞಾರ್ಹಾ ದೇವಾ ಯಸ್ಯ ವರುಣಸ್ಯ ವ್ರತಾನಿ ಕರ್ಮಾಣ್ಯದಬ್ಧಾನ್ಯಹಿಂಸಿತಾನಿ ಭವಂತಿ ಸ ವರುಣಸ್ತೇ ಚಾರ್ಯಮಾದಯೋ ದೇವಾ ನೋಽಸ್ಮಾನ್ರಕ್ಷಂತ್ವಿತಿ ಶೇಷಃ । ತೇ ಯೂಯಂ ನೋಽಸ್ಮಾಕಮನಪತ್ಯಾನ್ಯಪತ್ಯಾನಾಂ ಪುತ್ರಾಣಾಮಹಿತಾನಿ ಕರ್ಮಾಣಿ । ಯದ್ವಾ । ಪತನಕಾರಣಂ ನ ಭವತೀತ್ಯಪತ್ಯಂ । ತದನ್ಯಾನ್ಯನಪತ್ಯಾನಿ ಪತನಕಾರಣಾನಿ ಕರ್ಮಾಣಿ ಗಂತೋಃ ಸನ್ಮಾರ್ಗಾದ್ಯುಯೋತ। ಪೃಥಕ್ಕುರುತ । ಯಥಾ ತಾನ್ಯಹಿತಾನಿ ಕರ್ಮಾಣಿ ನ ಸ್ಪೃಶಂತಿ ತಥಾ ಕುರುತೇತ್ಯರ್ಥಃ । ಅಥ ಗಾತುಃ । ಗಾಯಂತಿ ಸ್ತುವಂತೀಂದ್ರಾದೀನತ್ರೇತಿ ಗಾತುರ್ಗೃಹಂ । ನೋಽಸ್ಮದೀಯಂ ಗೃಹಂ ಪಶುಮಾನ್ಪಶ್ವಾದಿಯುಕ್ತಂ ಪ್ರಜಾವಾನಪತ್ಯೋಪೇತಮಸ್ತು ॥ ಅರ್ಯಮಾ । ಋ ಗತೌ । ಶ್ವನ್ನುಕ್ಷನ್ಪ್ಲೀಹನ್ಕ್ಲೇದನ್ನಿತ್ಯಾದಿನಾ ನಿಪಾತನಾದ್ರೂಪಸಿದ್ಧಿಃ । ಅದಿತಿಃ । ದೀಙ್ ಕ್ಷಯೆ ಇತ್ಯಸ್ಯ ಕರ್ತರಿ ಕ್ತಿಚ್ । ನಞಾ ಸಮಾಸಃ । ಅದಿತಿರದೀನೇತಿ ಯಾಸ್ಕಃ । ಛಾಂದಸಂ ಹ್ರಸ್ವತ್ವಂ । ನಞಃ ಸ್ವರಃ । ಯುಯೋತ । ಯೌತೇರಮಿಶ್ರೀಭಾವಕರ್ಮಣೋ ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ತಪ್ತನಬಿತಿ ತಪ್ರತ್ಯಯಸ್ಯ ತಬಾದೇಶಃ । ಗಂತೋಃ । ಗಮ್ಲೃ ಗತೌ । ಸಿತನಿಗಮಿಮಸಿಸಚ್ಯವಿಧಾಞ್ಕ್ರುಶಿಭ್ಯ ಇತಿ ತುನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಗಾತುಃ । ಗಾಪಾಹಿಭ್ಯಶ್ಚೇತಿ ತುಪ್ರತ್ಯಯಃ ॥

### ಪ್ರತಿಪದಾರ್ಥ

ಅರ್ಯಮಾ—ಅರ್ಯಮದೇವನೂ । ಅದಿತಿಃ—ದೇವಮಾತೆಯಾದ ಅದಿತಿಯೂ । **ಯಜ್ಞಿಯಾಸಃ**—ಯಜ್ಞಾರ್ಹರಾದ ದೇವತೆಗಳೂ । **ವರುಣಸ್ಯ**—ವರುಣನ । **ವ್ರತಾನಿ**—ಕರ್ಮಗಳೂ । **ಅದಬ್ಧಾನಿ**—ಅಹಿಂಸಿತಗಳಾಗಿದ್ದು । ನಃ—ನಮ್ಮನ್ನು ರಕ್ಷಿಸಲಿ । **ಅನಪತ್ಯಾನಿ**—ಸಂತಾನವಿರೋಧವಾದ ಕರ್ಮಗಳನ್ನು । **ಗಂತೋಃ**—ಸನ್ಮಾರ್ಗಕ್ಕಿಂತಲೂ । **ಯುಯೋತ**—ಬೇರೆಮಾಡಲಿ (ನಮ್ಮನ್ನು ಅಸನ್ಮಾರ್ಗದಲ್ಲಿ ಪ್ರವೇಶಿಸದಿರುವಂತೆ ಮಾಡಲಿ)। **ನಃ**—ನಮ್ಮ ಗೃಹವು । **ಪಶುಮಾನ್**—ಪಶ್ವಾದಿಗಳಿಂದ ಕೂಡಿದುದಾಗಿಯೂ । **ಪ್ರಜಾವಾನ್**—ಪ್ರಜಾಯುಕ್ತವಾದುದಾಗಿಯೂ । **ಅಸ್ತು**—ಆಗಿರಲಿ

### ಭಾವಾರ್ಥ

ಅರ್ಯಮದೇವನೂ, ದೇವಮಾತೆಯಾದ ಅದಿತಿಯೂ, ಯಜ್ಞಾರ್ಹರಾದ ದೇವತೆಗಳೂ, ವರುಣನ ಕರ್ಮಗಳೂ ಸಹ ಅಹಿಂಸಿತಗಳಾಗಿದ್ದು ನಮ್ಮನ್ನು ರಕ್ಷಿಸಲಿ. ನಮ್ಮ ಸಂತಾನವಿರೋಧವಾದ ಕರ್ಮಗಳನ್ನು ನಾಶಮಾಡಿ ನಮ್ಮನ್ನು ಯಾವಾಗಲೂ ಸನ್ಮಾರ್ಗದಲ್ಲಿರುವಂತೆ ಮಾಡಲಿ. ನಮ್ಮ ಗೃಹವು ಪಶ್ವಾದಿಗಳಿಂದ ಕೂಡಿದುದಾಗಿಯೂ, ಪ್ರಜಾಯುಕ್ತವಾದುದಾಗಿಯೂ ಆಗಿರಲಿ.

CC-0. Jangamwadi Math Collection. Digitized by eGangotri

## English Translation

May Aryaman, Aditi the adorable (gods), and the unimpeded functions of Varuna (protect) us : keep us from (following) the course unpropitious to offspring, and may our dwelling be abundant in progeny and cattle.

### ವಿಶೇಷವಿಷಯಗಳು

**ಅರ್ಯಮಾ—ಋಚ್ಛತಿ ಸರ್ವದಾ ಗಚ್ಛತೀತ್ಯರ್ಯಮಾ ಸೂರ್ಯಃ** । ಯಾವಾಗಲೂ ಸಂಚರಣಶೀಲನಾಗಿರುವುದರಿಂದ ಸೂರ್ಯನು ಅರ್ಯಮಾ ಎಂಬ ಪದದಿಂದ ವ್ಯಪದಿಷ್ಟನಾಗಿರುವನೆಂದು ಸಾಯಣರು ವಿವರಿಸಿದ್ದಾರೆ. **ಅರೀಣಾಂ ತಮಸಾಂ ನಿಯಂತಾ** (ನಿ. ೧೧-೨೪) ಎಂದು ದುರ್ಗಾಚಾರ್ಯರ ವಿವರಣೆಯು ಇರುತ್ತದೆ.

ಅದಿತಿ ಶಬ್ದಕ್ಕೆ ನಾನಾರ್ಥಗಳು ಯಾಸ್ಕರಿಂದ ವಿವೃತವಾಗಿವೆ. ಇಲ್ಲಿ ದೇವಮಾತೆ ಎಂಬ ಅರ್ಥದಲ್ಲಿ ಈ ಶಬ್ದವು ಪ್ರಯುಕ್ತವಾಗಿದೆ. ದೇವಮಾತೆಯಾದ ಅದಿತಿದೇವಿಯೂ, ಸೂರ್ಯನೂ, ವರುಣನೂ, ಯಜ್ಞಾರ್ಹರಾದ ದೇವತೆಗಳೂ, ಇವರ ಕರ್ಮಗಳು ಯಾರಿಗೂ ಹಿಂಸೆಯನ್ನು ಉಂಟುಮಾಡುವವುಗಳಾಗಿ ಇರುವುದಿಲ್ಲವಾದುದರಿಂದ ಯಜಮಾನರಾದ ನಮ್ಮನ್ನು ಈ ದೇವತೆಗಳು ರಕ್ಷಿಸಬೇಕೆಂದು ಪ್ರಾರ್ಥಿತವಾಗಿದೆ.

**ಅನಪತ್ಯಾನಿ** ಎಂಬ ಪದಕ್ಕೆ **ಅಪತ್ಯಾನಾಂ ಪುತ್ರಾಣಾಮಹಿತಾನಿ ಕರ್ಮಾಣಿ**-ಪುತ್ರರಿಗೆ ಹಿತಕರವಲ್ಲದಿರುವ ಕಾರ್ಯಗಳು ಎಂದೂ, **ಯದ್ವಾ ಪತನಕಾರಣಂ ನ ಭವತೀತಪತ್ಯಂ ತದನ್ಯಾನ್ಯನಪತ್ಯಾನಿ ಪತನಕಾರಣಾನಿ ಕರ್ಮಾಣಿ**-ಅಥವಾ ಪತನಕಾರಣವಲ್ಲದಿರುವ ಕರ್ಮಗಳು ಅಪತ್ಯಗಳಾಗಿರುವುವು. ಅವುಗಳಿಗಿಂತ ಬೇರೆಯಾದ ಕರ್ಮಗಳು ಅನಪತ್ಯಗಳಾಗಿರುವುದರಿಂದ ಪತನಕಾರಣಗಳೆಂದು ಪ್ರಸಿದ್ಧವಾಗಿರುತ್ತವೆ. ಈ ದೇವತೆಗಳು **ನಃ ಗಂತೋಃ ಯುಯೋತ**—ಯಜಮಾನರ ಪುತ್ರರಿಗೆ ಹಿತಕರವಲ್ಲದ ಕಾರ್ಯಗಳು ಆಗದಿರುವಂತೆ ಅನುಗ್ರಹಿಸಲಿ ಅಥವಾ ಯಜಮಾನರ ಪತನಕಾರಣವಾದ ಕರ್ಮಗಳನ್ನು ಸರಿಯಾದ ಮಾರ್ಗದಿಂದ ದೂರವಾಗಿರಿಸಲಿ ಎಂದೂ ಆಶಂಸಿತವಾಗಿದೆ.

**ಗಾತುಃ—ಗಾಯಂತ್ಯತ್ರೇಂದ್ರಾದೀನಿತಿ ಗಾತುರ್ಗೃಹಂ**। ಇಂದ್ರನೇ ಮೊದಲಾದವರನ್ನು ಸ್ತುತಿಮಾಡುವ ಯಾಗಶಾಲೆಯು ಗಾತುಃ ಎಂಬ ಪದದಿಂದ ವ್ಯಪದಿಷ್ಟವಾಗಿದೆ. ಯಜಮಾನನ ಗೃಹವು ಪಶುಗಳಿಂದಲೂ ಪ್ರಜೆಗಳಿಂದಲೂ ತುಂಬಿರುವುದಾಗಿ ಇರುವಂತೆ ಈ ದೇವತೆಗಳ ಅನುಗ್ರಹವು ಆಶಂಸಿತವಾಗಿದೆ.

---

### ಸಂಹಿತಾಪಾಠಃ

ದೇವಾನಾಂ ದೂತಃ ಪುರುಧ ಪ್ರಸೂತೋಽನಾಗಾನ್ನೋ ವೋಚತು ಸರ್ವತಾತಾ ।

CC-0. Jangamwadi Math Collection. Digitized by eGangotri

ಶೃಣೋತು ನಃ ಪೃಥಿವೀ ದ್ಯೌರುತಾಪಃ ಸೂರ್ಯೋ ನಕ್ಷತ್ರೈರುರ್ವಂತ-
ರಿಕ್ಷಂ ॥ ೧೯ ॥

ಪದಪಾಠಃ

ದೇವಾನಾಂ । ದೂತಃ । ಪುರುಧ । ಪ್ರಽಸೂತಃ । ಅನಾಗಾನ್ । ನಃ । ವೋಚತು । ಸರ್ವಽತಾತಾ ।
ಶೃಣೋತು । ನಃ । ಪೃಥಿವೀ । ದ್ಯೌಃ । ಉತ । ಆಪಃ । ಸೂರ್ಯಃ । ನಕ್ಷತ್ರೈಃ । ಉರು । ಅಂತರಿಕ್ಷಂ ॥

ಸಾಯಣಭಾಷ್ಯಂ

ಪುರುಧ ಪುರುಷು ಬಹುಷು ದೇಶೇಷು ಪ್ರಸೂತೋಽಗ್ನಿಹೋತ್ರಾರ್ಥಂ ವಿಹಿತಃ । ಯದ್ವಾ । ಪುರುಭಿರ್ಯಜಮಾನೈಃ ಪ್ರಸೂತೋ ಯಷ್ಟವ್ಯದೇವಾಹ್ವಾನಾರ್ಥಂ ಪ್ರೇರಿತೋ ದೇವಾನಾಂ ದೂತಃ । ತಥಾ ಚ ತೈತ್ತಿರೀಯಕಂ । ಅಗ್ನಿರ್ದೇವಾನಾಂ ದೂತ ಆಸೀದಿತಿ । ತಾದೃಶೋಽಗ್ನಿಃ ಕರ್ಮಕರ್ತೃಸಾಧನವೈಗುಣ್ಯೇನ ಸಾಪರಾಧಾನಪ್ಯಸ್ಮಾನನಾಗಾನನಾಗಸಃ । ಸರ್ವತಾತಾ ಸರ್ವತ್ರ ವೋಚತು । ಬ್ರವೀತು । ಕಿಂಚ ಪೃಥಿವೀ ದ್ಯೌಶ್ಚ ಉತಾಪಿ ಚಾಪಃ ಸೂರ್ಯಶ್ಚ ನಕ್ಷತ್ರೈರುರು ವಿಸ್ತೀರ್ಣಮಂತರಿಕ್ಷಂ ಚ । ಏತೇ ಸರ್ವೇ ದೇವಾ ನೋಽಸ್ಮದೀಯಾಂ ಸ್ತುತಿಂ ಶೃಣೋತು । ಶೃಣ್ವಂತು । ಪ್ರತ್ಯೇಕವಿವಕ್ಷಯೈಕವಚನಂ ॥ ಪ್ರಸೂತಃ । ಷೂ ಪ್ರೇರಣೇ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರಃ । ಅನಾಗಾನ್ । ಶಸಿ ಸಕಾರಲೋಪಶ್ಛಾಂದಸಃ । ಸವರ್ಣದೀರ್ಘೇ ಕೃತೇ ತಸ್ಮಾಚ್ಛಸೋ ನ ಇತಿ ನತ್ವಂ । ವೋಚತು । ವಚ ಪರಿಭಾಷಣೇ । ವ್ಯತ್ಯಯೋ ಬಹುಲಮಿತಿ ಶಪೋಽಙಾದೇಶಃ । ವಚ ಉಮ್ । ಗುಣಃ । ನಿಘಾತಃ । ನಕ್ಷತ್ರೈಃ । ನಕ್ಷ ಗತೌ । ಅಮಿನಕ್ಷಿಯಜಿಬಂಧಿಪತಿಭ್ಯೋಽತ್ರನ್ನಿತ್ಯತ್ರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಯದ್ವಾ । ನ ಕ್ಷರತಿ ನ ಕ್ಷೀಯತ ಇತಿ ವಾ ನಕ್ಷತ್ರಂ । ನಭ್ರಾಣ್ನಪಾದಿತಿ ನಞಃ ಪ್ರಕೃತಿಭಾವಃ । ನಞಃ ಸ್ವರಃ ॥

ಪ್ರತಿಪದಾರ್ಥ

**ಪುರುಧ**—ಅನೇಕ ಪ್ರದೇಶಗಳಲ್ಲಿ । **ಪ್ರಸೂತಃ**-(ಯಜ್ಞಾರ್ಥವಾಗಿ) ಉತ್ಪನ್ನನಾದವನೂ । **ದೇವಾನಾಂ**-ದೇವತೆಗಳಿಗೆ । **ದೂತಃ**—ದೂತನೂ ಆದ ಅಗ್ನಿಯು । **ನಃ**—ನಮ್ಮನ್ನು । **ಅನಾಗಾನ್**—ಪಾಪರಹಿತರೆಂದು । **ಸರ್ವತಾತಾ**—ಎಲ್ಲಾ ಕಡೆಗಳಲ್ಲಿಯೂ । **ವೋಚತು**—ಪ್ರಕಟಿಸಲಿ । **ಪೃಥಿವೀ**—ಪೃಥಿವಿಯೂ । **ದ್ಯೌಃ**—ದ್ಯುಲೋಕವೂ । **ಉತ**—ಮತ್ತು । **ಆಪಃ**—ಅಬ್ದೇವತೆಯೂ । **ಸೂರ್ಯಃ**—ಸೂರ್ಯನೂ । **ನಕ್ಷತ್ರೈಃ**—ನಕ್ಷತ್ರಗಳೊಂದಿಗೆ ಕೂಡಿಕೊಂಡು ಇರುವ । **ಉರು**—ವಿಸ್ತೃತವಾದ । **ಅಂತರಿಕ್ಷಂ**—ಅಂತರಿಕ್ಷವೂ । **ನಃ**—ನಮ್ಮ ಸ್ತುತಿಯನ್ನು । **ಶೃಣೋತು**—ಕೇಳಲಿ.

ಭಾವಾರ್ಥ

ಅನೇಕ ಪ್ರದೇಶಗಳಲ್ಲಿ ಯಜ್ಞಾರ್ಥವಾಗಿ ಉತ್ಪನ್ನನಾದವನೂ, ದೇವತೆಗಳಿಗೆ ದೂತನೂ ಆದ ಅಗ್ನಿಯು ನಮ್ಮನ್ನು ಪಾಪರಹಿತರೆಂದು ಎಲ್ಲಾ ಕಡೆಗಳಲ್ಲಿಯೂ ಪ್ರಕಟಿಸಲಿ. ಪೃಥಿವಿಯೂ, ದ್ಯುಲೋಕವೂ ಮತ್ತು ಅಬ್ದೇವ

CC-0. Jangamwadi Math Collection. Digitized by eGangotri

ತೆಯೂ, ಸೂರ್ಯನೂ ನಕ್ಷತ್ರಗಳೊಂದಿಗೆ ಕೂಡಿಕೊಂಡು ಇರುವ ವಿಸ್ತೃತವಾದ ಅಂತರಿಕ್ಷವೂ ನಮ್ಮ ಸ್ತುತಿಯನ್ನು ಕೇಳಲಿ.

## English Translation

May the messenger of the gods, engendered in many places, everywhere proclaim us void of offence : may earth and heaven, the waters, the sun, and the vast firmament, with the constellations, here us.

### ವಿಶೇಷವಿಷಯಗಳು

**ಪುರುಥ ಪ್ರಸೂತಃ—ಪುರುಷು ಬಹುಷು ದೇಶೇಷು ಅಗ್ನಿಹೋತ್ರಾರ್ಥಂ ವಿಹಿತಃ। ಯದ್ವಾ ಪುರುಭಿರ್ಯಜಮಾನೈಃ ಪ್ರಸೂತಃ ಯಜ್ಞವ್ಯದೇವಾಹ್ವಾನಾರ್ಥಂ ಪ್ರೇರಿತಃ।** ಅಗ್ನಿಯು ಅನೇಕ ಪ್ರದೇಶಗಳಲ್ಲಿ ಅಗ್ನಿಹೋತ್ರವನ್ನು ಆಚರಿಸುವುದರಲ್ಲಿ ಯಜಮಾನರಿಂದ ಇಡಲ್ಪಟ್ಟವನು ಅಥವಾ ಅನೇಕ ಯಜಮಾನರಿಂದ ಯಾಗಗಳಲ್ಲಿ ದೇವತೆಗಳನ್ನು ಕರೆದುತರುವುದಕ್ಕಾಗಿ ಪ್ರೇರಿತನಾಗಿರುವವನು ಎಂದು ಸ್ತುತನಾಗಿರುವನು. ಮತ್ತು **ಅಗ್ನಿರ್ದೇವಾನಾಂ ದೂತ ಆಸೀತ್** ಎಂಬ ತೈತ್ತಿರೀಯ ಸಂಹಿತಾವಾಕ್ಯದ ನಿರ್ದೇಶಕ್ಕನುಸಾರವಾಗಿ **ದೇವಾನಾಂ ದೂತಃ** ದೇವತೆಗಳನ್ನು ಕರೆದುತರುವ ದೂತನೆಂದೂ ವ್ಯವಹೃತನಾಗಿದ್ದಾನೆ

**ನಃ ಅನಾಗಾನ್ ಸರ್ವತಾತಾ ವೋಚತು—ಕರ್ಮಕರ್ತೃಸಾಧನವೈಗುಣ್ಯೇನ ಸಾಪರಾಧಾನಸ್ಮಾನ್ ಅನಾಗಸಃ ಸರ್ವತ್ರ ಬ್ರವೀತು।** ಯಜಮಾನರಾದ ನಾವು ಯಾಗಗಳನ್ನು ಆಚರಿಸುವಾಗ ಕರ್ಮ, ಮತ್ತು ಕೆಲಸ ಮಾಡುವವರು ಮತ್ತು ಕೆಲಸ ಮಾಡುವುದಕ್ಕೆ ಬೇಕಾಗಿರುವ ಪದಾರ್ಥಗಳು ಇವುಗಳಲ್ಲಿ ನ್ಯೂನತೆಯಿಂದ ಅಪರಾಧವುಳ್ಳವರಾಗಿರುವ ಕಾರಣ ನಮ್ಮ ನ್ಯೂನತೆಯಿಂದ ನಮ್ಮನ್ನು ಅಗ್ನಿಯು ಬಿಡುಗಡೆಮಾಡಲಿ ಎಂದು ಪ್ರಾರ್ಥಿತನಾಗಿದ್ದಾನೆ.

**ಪೃಥಿವೀ, ದ್ಯೌಃ, ಆಪಃ, ಸೂರ್ಯಃ, ಅಂತರಿಕ್ಷಂ ಚ ನಃ ಶೃಣೋತು.** ಭೂಮಿಯೂ, ದ್ಯುಲೋಕವೂ, ಅಬ್ದೇವತೆಯೂ, ಸೂರ್ಯನೂ, ನಕ್ಷತ್ರಗಳಿಂದ ತುಂಬಿರುವ ಅಂತರಿಕ್ಷವೂ ಕೂಡ ಯಜಮಾನರು ಪಠಿಸುವ ಸ್ತುತಿಗಳನ್ನು ಶ್ರವಣಮಾಡಲಿ ಎಂದು ಆಶಂಸನೆಯು ಉಕ್ತವಾಗಿದೆ.

---

### ಸಂಹಿತಾಪಾಠಃ

ಶೃಣ್ವಂತು ನೋ ವೃಷಣಃ ಪರ್ವತಾಸೋ ಧ್ರುವಕ್ಷೇಮಾಸ ಇಳಯಾ ಮದಂತಃ ।
ಆದಿತ್ಯೈರ್ನೋ ಅದಿತಿಃ ಶೃಣೋತು ಯಚ್ಛಂತು ನೋ ಮರುತಃ ಶರ್ಮ ಭದ್ರಂ ॥ ೨೦ ॥

CC-0. Jangamwadi Math Collection. Digitized by eGangotri

ಪದಪಾಠಃ

ಶೃಣ್ವಂತು । ನಃ । ವೃಷಣಃ । ಪರ್ವತಾಸಃ । ಧ್ರುವಕ್ಷೇಮಾಸಃ । ಇಳಯಾ । ಮದಂತಃ ।

ಆದಿತ್ಯೈಃ । ನಃ । ಅದಿತಿಃ । ಶೃಣೋತು । ಯಚ್ಛಂತು । ನಃ । ಮರುತಃ । ಶರ್ಮ । ಭದ್ರಂ ॥ ೨೦ ॥

ಸಾಯಣಭಾಷ್ಯಂ

ವೃಷಣೋಽಭಿಮತಫಲಸೇಚಕಾ ಮರುತಃ ಪರ್ವತಾಸಃ । ಪೃಣಂತಿ ಪೂರಯಂತ್ಯರ್ಥಿನಾಂ ಕಾಮಾನಿತಿ ಪರ್ವತಾ ಗಾವ್ರಾಭಿಮಾನಿನೋ ದೇವಾಃ ಧ್ರುವಕ್ಷೇಮಾಸೋ ನಿಶ್ಚಲಸ್ಥಾನಾ ಇಳಯಾ ಹವಿರ್ಲಕ್ಷಣೇನಾನ್ನೇನ ಮದಂತೋ ಮಾದ್ಯಂತಃ ಸಂತೋ ನೋಽಸ್ಮದೀಯಾಂ ಸ್ತುತಿಂ ಶೃಣ್ವಂತು । ಕಿಂಚ ಆದಿತ್ಯೈರಪತ್ಯಭೂತೈರಾದಿತ್ಯೈರುಪೇತಾದಿತಿರ್ನೋಽಸ್ಮದೀಯಾಂ ಸ್ತುತಿಂ ಶೃಣೋತು । ಮರುತಶ್ಚ ನೋಽಸ್ಮಭ್ಯಂ ಭದ್ರಂ ಕಲ್ಯಾಣಕರಂ ಶರ್ಮ ಸುಖಂ ಯಚ್ಛಂತು । ದದತು ॥ ಆದಿತ್ಯೈಃ । ಅದಿತೇರಪತ್ಯಾನೀತ್ಯರ್ಥೇ ದಿತ್ಯದಿತೀತಿ ಣ್ಯಃ । ಪ್ರತ್ಯಯಸ್ವರೇಣಾಂತೋದಾತ್ತಃ । ಸುಪಾ ಸಹೈಕಾದೇಶೇ ಕೃತ ಏಕಾದೇಶ ಉದಾತ್ತಃ ॥

ಪ್ರತಿಪದಾರ್ಥ

ವೃಷಣಃ— ಇಷ್ಟಾರ್ಥಪ್ರದರಾದ ಮರುತ್ತುಗಳೂ । ಪರ್ವತಾಸಃ— ಪರ್ವತಾಧಿದೇವತೆಗಳೂ ಸಹ । ಧ್ರುವಕ್ಷೇಮಾಸಃ— ನಿಶ್ಚಲವಾದ ಸ್ಥಾನವುಳ್ಳವರಾಗಿಯೂ । ಇಳಯಾ— ಹವಿಸ್ಸಿನ ರೂಪದ ಅನ್ನದಿಂದ । ಮದಂತ— ಹರ್ಷಪಡುವವರಾಗಿಯೂ ಇದ್ದು । ನಃ— ನಮ್ಮ ಸ್ತುತಿಯನ್ನು । ಶೃಣ್ವಂತು- ಕೇಳಲಿ । ಆದಿತ್ಯೈಃ— ಪುತ್ರರೂಪರಾದ ಆದಿತ್ಯರಿಂದೊಡಗೂಡಿ । ಅದಿತಿಃ— ಅದಿತಿಯು । ನಃ— ನಮ್ಮ ಸ್ತುತಿಯನ್ನು । ಶೃಣೋತು— ಕೇಳಲಿ । ಮರುತಃ— ಮರುತ್ತುಗಳು । ನಃ— ನಮಗೆ । ಭದ್ರಂ— ಕಲ್ಯಾಣಾತ್ಮಕವಾದ । ಶರ್ಮ— ಸುಖವನ್ನು । ಯಚ್ಛಂತು— ಕೊಡಲಿ.

ಭಾವಾರ್ಥ

ಇಷ್ಟಾರ್ಥಪ್ರದರಾದ ಮರುತ್ತುಗಳೂ, ಪರ್ವತಾಧಿದೇವತೆಗಳೂ, ಸಹ ನಿಶ್ಚಲವಾದ ಸ್ಥಾನವುಳ್ಳವರಾಗಿಯೂ ಹವಿಸ್ಸಿನ ರೂಪದ ಅನ್ನದಿಂದ ಹರ್ಷಪಡುವವರಾಗಿಯೂ ಇದ್ದು ನಮ್ಮ ಸ್ತುತಿಯನ್ನು ಕೇಳಲಿ. ಪುತ್ರರೂಪರಾದ ಆದಿತ್ಯರಿಂದೊಡಗೂಡಿದ ಅದಿತಿಯು ನಮ್ಮ ಸ್ತುತಿಯನ್ನು ಕೇಳಲಿ. ಮರುತ್ತುಗಳು ನಮಗೆ ಕಲ್ಯಾಣಾತ್ಮಕವಾದ ಸುಖವನ್ನು ಕೊಡಲಿ.

English Translation

May the (divine) showerers (of benefits), the deities of the mountains, and those abiding in fixed habitations, propitiated by the sacrificial food, hear us : may Aditi, with the Adityas, hear us : may the Maruts grant us auspicious felicity.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಪರ್ವತಾಸಃ**—ಪೃಣಂತಿ ಪೂರಯತಿ ಅರ್ಥಿನಾಂ ಕಾಮಾನ್ ಇತಿ ಪರ್ವತಾಃ ಗ್ರಾವಾಭಿಮಾನಿನೋ ದೇವಾಃ। ಆಶ್ರಿತರ ಕೋರಿಕೆಗಳನ್ನು ನೆರವೇರಿಸುವುದರಿಂದ ಶಿಲೆಗಳಿಗೆ ಅಭಿಮಾನಿಗಳಾದ ದೇವತೆಗಳು ಪರ್ವತ ಶಬ್ದದಿಂದ ನಿರ್ದಿಷ್ಟರಾಗಿದ್ದಾರೆ. ಈ ದೇವತೆಗಳೂ ಯಜಮಾನರ ಇಷ್ಟಗಳನ್ನು ಅನುಗ್ರಹಿಸುವ ಮರುದ್ದೇವತೆಗಳೂ, ತನ್ನ ಪುತ್ರರಾದ ಆದಿತ್ಯರಿಂದ ಸಹಿತಳಾದ ಅದಿತಿದೇವಿಯೂ ಕೂಡ ಯಜಮಾನರ ಹವಿಸ್ಸುಗಳ ಅರ್ಪಣೆಯಿಂದ ತೃಪ್ತರಾಗಿ ಯಜಮಾನರು ಪಠಿಸುವ ಸ್ತುತಿಗಳನ್ನು ಶ್ರವಣಮಾಡಲಿ ಎಂದು ಪ್ರಾರ್ಥನೆಯು ವರ್ಣಿತವಾಗಿದೆ.

---

ಸಂಹಿತಾಪಾಠಃ

ಸದಾ ಸುಗಃ ಪಿತುಮಾಁ ಅಸ್ತು ಪಂಥಾ ಮಧ್ವಾ ದೇವಾ ಓಷಧೀಃ ಸಂ ಪಿಪೃಕ್ತ ।
ಭಗೋ ಮೇ ಅಗ್ನೇ ಸಖ್ಯೇ ನ ಮೃಧ್ಯಾ ಉದ್ರಾಯೋ ಅಶ್ಯಾಂ ಸದನಂ ಪುರುಕ್ಷೋಃ ॥ ೨೧ ॥

ಪದಪಾಠಃ

ಸದಾ । ಸುಽಗಃ । ಪಿತುಽಮಾನ್ । ಅಸ್ತು । ಪಂಥಾಃ । ಮಧ್ವಾ । ದೇವಾಃ । ಓಷಧೀಃ । ಸಂ । ಪಿಪೃಕ್ತ ।
ಭಗಃ । ಮೇ । ಅಗ್ನೇ । ಸಖ್ಯೇ । ನ । ಮೃಧ್ಯಾಃ । ಉತ್ । ರಾಯಃ । ಅಶ್ಯಾಂ । ಸದನಂ । ಪುರುಽಕ್ಷೋಃ॥

ಸಾಯಣಭಾಷ್ಯಂ

ಪ್ರವತ್ಸ್ಯನ್ಯಜಮಾನಃ ಸದಾ ಸುಗ ಇತ್ಯೃಚಂ ಜಪನ್ ಗಚ್ಛೇತ್ । ಸೂತ್ರಿತಂ ಚ । ಸದಾ ಸುಗಃ ಪಿತುಮಾಁ ಅಸ್ತು ಪಂಥಾ ಇತಿ ಪಂಥಾನಮುಪರುಹ್ಯ । ಆ. ೨-೫ । ಇತಿ ॥

ಹೇ ಅಗ್ನೇ ಅಸ್ಮಾಕಂ ಪಂಥಾ ಮಾರ್ಗಃ ಸದಾ ಸರ್ವದಾ ಸುಗಃ ಸುಖೇನ ಗಂತುಂ ಶಕ್ಯಃ ಪಿತುಮಾನನ್ನವಾಂಶ್ಚಾಸ್ತು । ಹೇ ದೇವಾ ಮಧ್ವಾ ಮಾಧುರ್ಯೋಪೇತೇನೋದಕೇನೌಷಧೀಃ ಸಂ ಪಿಪೃಕ್ತ । ಸಂಪರ್ಚಯತ । ಸೇಚಯತೇತ್ಯರ್ಥಃ । ಹೇ ಅಗ್ನೇ ತ್ವಯಾ ಸಖ್ಯೇ ಸಂಜಾತೇ ಸತಿ ಮೇ ಮಮ ಭಗೋ ಧನಂ ನ ಮೃಧ್ಯಾಃ । ನ ವಿನಶ್ಯತು । ಕಿಂಚ ರಾಯೋ ಧನಸ್ಯ ಪುರುಕ್ಷೋರ್ಬಹ್ವನ್ನಸ್ಯ ಚ ಸದನಂ ಸ್ಥಾನಮುದಶ್ಯಾಂ । ಪ್ರಾಪ್ನುಯಾಂ ॥ ಸದಾ । ಸ್ವರಾದಿಷ್ವಾದ್ಯುದಾತ್ತತ್ವೇನ ಪಾಠಾದಾದ್ಯುದಾತ್ತಃ । ಪಿಪೃಕ್ತ । ಪೃಚೀ ಸಂಪರ್ಕೇ । ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಮೃಧ್ಯಾಃ । ಮೃಧಿರ್ಹಿಂಸಾರ್ಥಃ । ಲಿಙಃ ತಿಙಾಂ ತಿಙೋ ಭವಂತೀತಿ ತಿಪಃ ಸಿಪ್ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

(ಎಲೈ ಅಗ್ನಿಯೇ) **ಪಂಥಾಃ**—ನಮ್ಮ ಮಾರ್ಗವು। **ಸದಾ**—ಯಾವಾಗಲೂ। **ಸುಗಃ**—ಸುಖವಾಗಿ ಸಂಚಾರಮಾಡಲು ಯೋಗ್ಯವಾಗಿಯೂ। **ಪಿತುಮಾನ್**—ಅನ್ನದಿಂದ ಕೂಡಿದುದಾಗಿಯೂ। **ಅಸ್ತು**—ಆಗಿರಲಿ। **ದೇವಾಃ**—ಎಲೈ ದೇವತೆಗಳೇ। **ಮಧ್ವಾ**—ಮಾಧುರ್ಯದಿಂದ ಕೂಡಿದ ಉದಕದಿಂದ। **ಓಷಧೀಃ**—ಓಷಧಿಗಳನ್ನು। **ಸಂ ಪಿಪೃಕ್ತ**—ಸೇವಿಸು (ಮಧುರವಾದ ರಸದಿಂದ ಓಷಧಿಗಳನ್ನು ಪುಷ್ಟವಾಗಿ ಮಾಡು)। **ಅಗ್ನೇ**—ಎಲೈ ಅಗ್ನಿಯೇ। **ಸಖ್ಯೇ**—ನಿನ್ನ ಸೌಹಾರ್ದವಿರುವಾಗ। **ಮೇ**—ನನ್ನ। **ಭಗಃ**—ಧನವು। **ನ ವ್ಯೃಧ್ಯಾಃ**—ನಾಶವಾಗದಿರಲಿ। ರಾಯಃ—ಧನದ (ಮತ್ತು)। **ಪುರುಶ್ಚೋಃ**—ಪ್ರಭೂತವಾದ ಅನ್ನದ। **ಸದನಂ**-ಸ್ಥಾನವನ್ನು। **ಉತ್ ಅಶ್ಯಾಂ**-ನಾನು ಪಡೆಯುವಂತಾಗಲಿ.

### ಭಾವಾರ್ಥ

ಎಲೈ ಅಗ್ನಿಯೇ, ನಮ್ಮ ಮಾರ್ಗವು ಯಾವಾಗಲೂ ಸುಖವಾಗಿ ಸಂಚಾರಮಾಡಲು ಯೋಗ್ಯವಾದುದಾಗಿಯೂ ಅನ್ನದಿಂದ ಕೂಡಿದುದಾಗಿಯೂ ಆಗಿರಲಿ. ಎಲೈ ದೇವತೆಗಳೇ, ನೀವು ಓಷಧಿಗಳನ್ನು ಮಧುರಾತ್ಮಕವಾದ ರಸದಿಂದ ತುಂಬಿರಿ. ಎಲೈ ಅಗ್ನಿಯೇ, ನಿನ್ನ ಸೌಹಾರ್ದವಿರುವಾಗ ನನ್ನ ಧನವು ನಾಶವಾಗದಿರಲಿ. ಮತ್ತು ನನಗೆ ಪ್ರಭೂತ ವಾದ ಧನದ ಮತ್ತು ಅನ್ನದ ಸ್ಥಾನವು ಲಭಿಸಲಿ.

### English Translation

May our path ever be easy of going, and provided with food : sprinkle, gods, the plants with sweet water : (safe) in your friendship, Agni, may my fortune never be impaired, but may I occupy a dwelling (abounding) with riches and ample food.

### ವಿಶೇಷವಿಷಯಗಳು

ಯಜ್ಞಮಾಡುವ ಯಜಮಾನನು ಪ್ರಯಾಣಮಾಡುವಾಗ **ಸದಾ ಸುಗಃ** ಎಂಬ ಈ ಋಕ್ಕನ್ನು ಜಪಿಸುತ್ತಾ ಹೋಗಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಸದಾ ಸುಗಃ ಪಿತುಮಾँ ಅಸ್ತು ಪಂಥಾ ಇತಿ ಪಂಥಾನಮುವರುಹ್ಯ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೨-೫)

**ಪಿತುಮಾನ್**—**ಅನ್ನವಾನ್**। ಪಿತು ಶಬ್ದವು ಅನ್ನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ. ಯಜಮಾನರು ತಮ್ಮ ಮಾರ್ಗವು ಸುಖಕರವಾಗಿಯೂ, ಅನ್ನವುಳ್ಳದ್ದಾಗಿಯೂ ಇರಲೆಂದು ಅಗ್ನಿಯನ್ನು ಪ್ರಾರ್ಥಿಸುವರು. ಮತ್ತು ದೇವತೆಗಳು ಮೂಲಿಕೆಗಳನ್ನು ಮಧುರವಾದ ಉದಕಗಳಿಂದ ವೃದ್ಧಿಗೊಳಿಸಲಿ ಎಂದೂ, ಅಗ್ನಿಯು ಯಜಮಾನರಿಗೆ ಧನಗಳ ಮತ್ತು ಬಹಳ ಅನ್ನಗಳ ನ್ಯೂನತೆಯು ಉಂಟಾಗದಿರುವಂತೆ ಅಭಿವೃದ್ಧಿಯನ್ನು ಉಂಟುಮಾಡಲಿ ಎಂದೂ ಯಜಮಾನರ ಆಶಂಸನೆಯು ವರ್ಣಿತವಾಗಿದೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸ್ವದಸ್ವ ಹವ್ಯಾ ಸಮಿಷೋ ದಿದೀಹ್ಯಸ್ಮದ್ರ್ಯ೧ಕ್ಸಂ ಮಿಮೀಹಿ ಶ್ರವಾಂಸಿ ।
ವಿಶ್ವಾँ ಅಗ್ನೇ ಪೃತ್ಸು ತಾಞ್ಜೇಷಿ ಶತ್ರೂನಹಾ ವಿಶ್ವಾ ಸುಮನಾ ದೀದಿಹೀ ನಃ ॥ ೨೨ ॥

ಪದಪಾಠ

ಸ್ವದಸ್ವ । ಹವ್ಯಾ । ಸಂ । ಇಷಃ । ದಿದೀಹಿ । ಅಸ್ಮದ್ರ್ಯಕ್ । ಸಂ । ಮಿಮೀಹಿ । ಶ್ರವಾಂಸಿ ।
ವಿಶ್ವಾನ್ । ಅಗ್ನೇ । ಪೃತ್ಽಸು । ತಾನ್ । ಜೇಷಿ । ಶತ್ರೂನ್ । ಅಹಾ । ವಿಶ್ವಾ । ಸುಽಮನಾಃ । ದೀದಿಹಿ । ನಃ ॥ ೨೨ ॥

ಸಾಯಣಭಾಷ್ಯಂ

ಪಶೌ ಪುರೋಡಾಶಸ್ವಿಷ್ಟಕೃತಃ ಸ್ವದಸ್ವ ಹವ್ಯೇತಿ ಯಾಜ್ಯಾ । ಸೂತ್ರಿತಂ ಚ । ಸ್ವದಸ್ವ ಹವ್ಯಾ ಸಮಿಷೋ ದಿದೀಹೀತಿ ಪುರೋಡಾಶಸ್ವಿಷ್ಟಕೃತಃ । ಆ. ೩-೫ । ಇತಿ ॥

ಹೇ ಅಗ್ನೇ ಹವ್ಯಾ ಹವನಯೋಗ್ಯಾನಿ ಹವೀಂಷಿ ಸ್ವದಸ್ವ । ಸ್ವಾದಯ । ಅಸ್ಮಾಕಮಿಷೋಽನ್ನಾನಿ ಸಂ ದಿದೀಹಿ । ಸಮ್ಯಕ್ ಪ್ರಕಾಶಯ । ದೀಪಿತಾನಿ ತಾನಿ ಶ್ರವಾಂಸ್ಯನ್ನಾನ್ಯಸ್ಮದ್ರ್ಯಗಸ್ಮದಭಿಮುಖಾನಿ ಸಂ ಮಿಮೀಹಿ । ಸಂಮಾನಯ । ಕುರ್ವಿತ್ಯರ್ಥಃ । ತತಃ ಪೃತ್ಸು ಸಂಗ್ರಾಮೇಷು ತಾನ್ಬಾಧಕಾನ್ವಿಶ್ವಾನ್ಸರ್ವಾಞ್ಶತ್ರೂನ್ ಜೇಷಿ । ಜಯ । ಅಥ ಸುಮನಾಃ ಶೋಭನಮನಸ್ಕಃ ಸನ್ ನೋಽಸ್ಮಾಕಂ ವಿಶ್ವಾಹಾ ಸರ್ವಾಣ್ಯಹಾನಿ ದೀದಿಹಿ । ಅಗ್ನಿಹೋತ್ರಾದಿಕರ್ಮಯೋಗ್ಯಾನಿ ಪ್ರಕಾಶಯ ॥ ಸ್ವದಸ್ವ । ಸ್ವದ ಆಸ್ವಾದನೇ । ಲೋಟಿ ರೂಪಂ । ಥಾಸೋ ಲಸಾರ್ವಧಾತುಕಸ್ವರೇ ಧಾತುಸ್ವರಃ । ದಿದೀಹಿ । ದಿವು ಕ್ರೀಡಾದಾವಿತ್ಯಸ್ಯ ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಪರತ್ವಾತ್ ಹಲಿ ಚೇತಿ ದೀರ್ಘತ್ವೇ ಕೃತೇ ಪಶ್ಚಾದ್ವಲಿ ಲೋಪಃ । ನಿಘಾತಃ । ಅಸ್ಮದ್ರ್ಯಕ್ । ಅಸ್ಮಾನಂಚತೀತ್ಯಂಚತೇಃ ಕ್ವಿಪ್ । ವಿಷ್ವಗ್ದೇವಯೋಶ್ಚ ಟೇರಿತಿ ಯಣಃ ಸ್ವರಿತತ್ವಂ । ಮಿಮೀಹಿ । ಮಾಙ್ ಮಾನೇ ಶಬ್ದೇ ಚ । ಜುಹೋತ್ಯಾದಿಃ । ತಸ್ಯ ಲೋಟಿ ವ್ಯತ್ಯಯೇನ ಪರಸ್ಮೈಪದಂ । ನಿಘಾತಃ । ಸುಮನಾಃ । ಸೋರ್ಮನಸೀತ್ಯುತ್ತರಪದಾದ್ಯುದಾತ್ತತ್ವಂ । ದೀದಿಹಿ । ದಿವೇರ್ಯಙ್‌ಲುಕಿ ಲೋಟಿ ತುಜಾದಿತ್ವಾದಭ್ಯಾಸಸ್ಯ ದೀರ್ಘಃ । ವಲಿ ಲೋಪಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಹವ್ಯಾ—ಯಜ್ಞಾರ್ಹವಾದ ಹವಿಸ್ಸುಗಳನ್ನು । ಖಾದಸ್ವ—ಭಕ್ಷಿಸು । ಇಷಃ—ಅನ್ನವನ್ನು । ಸಂ ದಿದೀಹಿ—(ನಮಗೆ) ಪೂರ್ಣವಾಗಿ ಒದಗಿಸು । ಶ್ರವಾಂಸಿ—ಅನ್ನಗಳನ್ನು । ಅಸ್ಮದ್ರ್ಯಕ್—ನಮಗೆ ಅಭಿಮುಖವಾಗಿರುವಂತೆ । ಸಂ ಮಿಮೀಹಿ—ತಂದಿಡು । ಪೃತ್ಸು—ಸಂಗ್ರಾಮಗಳಲ್ಲಿ ।

CC-0. Jangamwadi Math Collection. Digitized by eGangotri

**ವಿಶ್ವಾನ್**—ಸಮಸ್ತವಾದ । **ತಾನ್ ಶತ್ರೂನ್**—ಆ ಶತ್ರುಗಳನ್ನು । **ಜೇಷಿ**—ಜಯಿಸು । **ಸುಮನಾಃ**—ಅನುಗ್ರಹಾತ್ಮಕವಾದ ಮನಸ್ಸುಳ್ಳವನಾಗಿ । **ನಃ**—ನಮಗೆ । **ವಿಶ್ವಾ ಅಹಾ**—ಸಮಸ್ತ ದಿನಗಳನ್ನೂ । **ದೀದಿಹಿ**—ಅಗ್ನಿಹೋತ್ರಕ್ಕೆ ಯೋಗ್ಯವಾಗುವಂತೆ ಪ್ರಕಾಶಪಡಿಸು.

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞಾರ್ಹವಾದ ಹವಿಸ್ಸುಗಳನ್ನು ಭಕ್ಷಿಸು. ನಮಗೆ ಪೂರ್ಣವಾದ ಅನ್ನವನ್ನು ಒದಗಿಸು. ಅನ್ನಗಳನ್ನು ನಮಗೆ ಅಭಿಮುಖವಾಗಿ ತಂದಿಡು. ಸಂಗ್ರಾಮಗಳಲ್ಲಿ ಸಮಸ್ತವಾದ ಶತ್ರುಗಳನ್ನೂ ಜಯಿಸು ಅನುಗ್ರಹಾತ್ಮಕವಾದ ಮನಸ್ಸುಳ್ಳವನಾಗಿ ನಮಗೆ ಸಮಸ್ತ ದಿನಗಳನ್ನೂ ಅಗ್ನಿಹೋತ್ರಕ್ಕೆ ಯೋಗ್ಯವಾಗಿರುವಂತೆ ಪ್ರಕಾಶಪಡಿಸು.

English Translation

Taste (Agni) the oblations; make manifest (for us) abundant food : measure out the viands before us : you overcome all those (who are) our enemies in conflict : favorably inclined towards us lighten up all our (ceremonics) day by day.

ವಿಶೇಷವಿಷಯಗಳು

ಪಶುಯಾಗದಲ್ಲಿ ಪುರೋಡಾಶಸ್ವಿಷ್ಟಕೃದ್ಧೋಮಮಾಡುವಾಗ **ಸದಸ್ವ ಹವ್ಯಾ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಸದಸ್ವ ಹವ್ಯಾ ಸಮಿಷೋ ದಿದೀಹೀತಿ ಪುರೋಡಾಶಸ್ವಿಷ್ಟಕೃತಃ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೫)

ಅಗ್ನಿಯು—ಯಜಮಾನರು ಅರ್ಪಿಸುವ ಹವಿಸ್ಸುಗಳನ್ನು ರುಚಿನೋಡಲಿ, ಯಜಮಾನರಿಗೆ ಅನ್ನವನ್ನು ಅನುಗ್ರಹಿಸಲಿ, ಕಾಂತಿಯುತವಾದ ಅನ್ನಗಳನ್ನು ಸುಲಭವಾಗಿ ದೊರಕಿಸಲಿ, ಯಜಮಾನರ ಶತ್ರುಗಳನ್ನು ಜಯಿಸಲಿ, ಯಜಮಾನರ ವಿಷಯದಲ್ಲಿ ಪ್ರಸನ್ನನಾಗಿರಲಿ, ಅಗ್ನಿಹೋತ್ರವೇ ಮೊದಲಾದ ಕರ್ಮಗಳು ನಿರ್ವಿಘ್ನವಾಗಿ ನೆರವೇರುವಂತೆ ಅನುಗ್ರಹಿಸಲಿ ಎಂಬ ಆಶಂಸನೆಗಳು ಪ್ರಾರ್ಥಿತವಾಗಿರುತ್ತವೆ.

---

## ಐವತ್ತೈದನೆಯ ಸೂಕ್ತವು

---

ಸಾಯಣಭಾಷ್ಯಂ

**ಉಷಸಃ ಪೂರ್ವಾ ಇತಿ ದ್ವಾವಿಂಶತ್ಯೃಚಂ ದ್ವಿತೀಯಂ ಸೂಕ್ತಂ ತ್ರೈಷ್ಟುಭಂ । ಉಷಸ ಇತ್ಯನುಕ್ರಮಣಿಕಾ । ಪ್ರಜಾಪತೇರಾರ್ಷಂ ವೈಶ್ವದೇವಂ ಪ್ರಜಾಪತಿರ್ಹ ವೈಶ್ವದೇವಂ ಹೇತಿ ಪೂರ್ವಸೂಕ್ತೇ ಹಶಬ್ದಪ್ರಯೋಗಾತ್ । ಸೂಕ್ತವಿನಿಯೋಗೋ ಲೈಂಗಿಕಃ । ಅತ್ರಾದ್ಯೋಷಸ್ಯಾ ತತಃ ಪರಂ ನವರ್ಚೋಽ-**



CC-0. Jangamwadi Math Collection. Digitized by eGangotri

**ಗ್ನ್ಯಾದಿದೇವತಾಸ್ತತಃ ಪರಾಹೋರಾತ್ರದೇವತಾಕಾ ತತಶ್ಚತಸ್ರೋ ರೋದಸ್ಯೋಃ ಪಂಚದಶೀ ದ್ಯುನಿ-ಶೋರ್ವಾ ಷೋಡಶೀ ದಿಗ್ದೇವತಾಕಾ ತತಃ ಷಡೃಚೋ ವರ್ಷತ ಇಂದ್ರಸ್ಯ ಕೇಚಿದಗ್ನೇಸ್ತ್ವಷ್ಟುಶ್ಚೇತಿ ಮನ್ಯಂತೇ ॥**

ಅನುವಾದವು— **ಉಷಸಃ ಪೂರ್ವಾ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಇಪ್ಪತ್ತೆರಡು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ **ಉಷಸಃ** ಎಂದು ಮೊದಲಾಗಿ ಹೇಳಿರುವುದು. ಈ ಸೂಕ್ತಕ್ಕೆ—ಹಿಂದಿನ ಸೂಕ್ತದಲ್ಲಿ ಹೇಳಿರುವಂತೆ ಪ್ರಜಾಪತಿಯು ಋಷಿಯು ; ವಿಶ್ವೇದೇವತೆಗಳು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಸೂಕ್ತವಿನಿಯೋಗವು ಲೈಂಗಿಕವು. ಈ ಸೂಕ್ತದಲ್ಲಿ ಮೊದಲನೆಯ ಋಕ್ಕು ಉಷೋದೇವತಾಕವು; ಅಲ್ಲಿಂದ ಮುಂದಿನ ಒಂಭತ್ತು ಋಕ್ಕುಗಳು (೨-೧೦ ಋಕ್ಕುಗಳು) ಅಗ್ನ್ಯಾದಿದೇವತಾಕವು ; ಅಲ್ಲಿಂದ ಮುಂದಿನ ಋಕ್ಕು ( ೧೧ ನೇ ಋಕ್ಕು) ಅಹೋರಾತ್ರಾದೇವತಾಕವು ; ಅಲ್ಲಿಂದ ಮುಂದಿನ ಮೂರು ಋಕ್ಕುಗಳು (೧೨-೧೪ ಋಕ್ಕುಗಳು) ರೋದಸೀ ದೇವತಾಕವು ; ಹದಿನೈದನೆಯ ಋಕ್ಕು ರೋದಸೀ ಅಥವಾ ದ್ಯುನಿಶೌ ದೇವತಾಕವು ; ಹದಿನಾರನೆಯ ಋಕ್ಕು ದಿಗ್ದೇವತಾಕವು ; ಅಲ್ಲಿಂದ ಮುಂದಿನ ಆರು ಋಕ್ಕುಗಳು ಇಂದ್ರ, ಪರ್ಜನ್ಯಾತ್ಮಾ, ತ್ವಷ್ಟಾ ಅಥವಾ ಅಗ್ನಿದೇವತಾಕವು ಎಂದು ಹೇಳಲ್ಪಡುವುದು.

---

॥ ಓಂ ॥

## ಸೂಕ್ತ—೫೫

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೫೫ ॥

ಅಷ್ಟಕ—೩ ॥ ಅಧ್ಯಾಯ—೩ ॥ ವರ್ಗ—೨೮, ೨೯, ೩೦, ೩೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೨ ॥

ಋಷಿಃ—ಪ್ರಜಾಪತಿರ್ವೈಶ್ವಾಮಿತ್ರೋ ವಾಚ್ಯೋ ವಾ ॥

ದೇವತಾ—ವಿಶ್ವೇ ದೇವಾಃ । ೧. ಉಷಾಃ । ೨-೧೦. ಅಗ್ನಿಃ । ೧೧. ಅಹೋರಾತ್ರೌ । ೧೨-೧೪. ರೋದಸೀ । ೧೫. ರೋದಸೀ ದ್ಯುನಿಶೌ ವಾ । ೧೬. ದಿಶಃ । ೧೭-೨೨. ಇಂದ್ರಃ ಪರ್ಜನ್ಯಾತ್ಮಾ ತ್ವಷ್ಟಾ ವಾಗ್ನಿಶ್ಚ ॥

ಛಂದಃ—ತ್ರಿಷ್ಟುಪ್ ॥

———: o :———

ಸಂಹಿತಾಪಾಠಃ

ಉಷಸಃ ಪೂರ್ವಾ ಅಧ ಯದ್ವ್ಯೂಷುರ್ಮಹದ್ವಿ ಜಜ್ಞೇ ಅಕ್ಷರಂ ಪದೇ ಗೋಃ ।

ವ್ರತಾ ದೇವಾನಾಮುಪ ನು ಪ್ರಭೂಷನ್ಮಹದ್ದೇವಾನಾಮಸುರತ್ವಮೇಕಂ ॥೧॥

CC-0. Jangamwadi Math Collection. Digitized by eGangotri

ಪದಪಾಠಃ

ಉಷಸಃ । ಪೂರ್ವಾಃ । ಅಧ । ಯತ್ । ವಿಽಊಷುಃ । ಮಹತ್ । ವಿ । ಜಜ್ಞೇ । ಅಕ್ಷರಂ । ಪದೇ । ಗೋಃ ।

ವ್ರತಾ । ದೇವಾನಾಂ । ಉಪ । ನು । ಪ್ರಽಭೂಷನ್ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥

ಸಾಯಣಭಾಷ್ಯಂ

ಪೂರ್ವಾ ಉದಯಕಾಲಾತ್ಪ್ರಾಚೀನಾ ಉಷಸೋ ಯದ್ಯದಾ ವ್ಯೂಷುರ್ವ್ಯುಚ್ಛಂತಿ ಅಥ ತದಾನೀಮಕ್ಷರಂ । ನ ಕ್ಷರತೀತ್ಯಕ್ಷರಂ । ಅವಿನಾಶ್ಯಾದಿತ್ಯಾಖ್ಯಂ ಮಹತ್ಪ್ರಭೂತಂ ಜ್ಯೋತಿರ್ಗೋರುದಕಸ್ಯ ಪದೇ ಸ್ಥಾನೇ ಸಮುದ್ರೇ ನಭಸಿ ವಾ ವಿ ಜಜ್ಞೇ । ಉತ್ಪದ್ಯತೇ । ಅಥೋದಿತೇ ಸೂರ್ಯೇ ಪ್ರಭೂಷನ್ನಗ್ನಿಹೋತ್ರಾದಿಕರ್ಮಸು ಪ್ರಭವಿತುಮಿಚ್ಛನ್ಯಜಮಾನೋ ವ್ರತಾ ಕರ್ಮಾಣಿ ದೇವಾನಾಂ ನು ಕ್ಷಿಪ್ರಮುಪ ಸಮೀಪಂ ತಿಷ್ಠತಿ । ಯೋಗ್ಯಕ್ರಿಯಾಧ್ಯಾಹಾರಃ । ತದಿದಂ ದೇವಾನಾಮೇಕಂ ಮುಖ್ಯಮಸುರತ್ವಂ । ಅಸ್ಯತಿ ಕ್ಷಿಪತಿ ಸರ್ವಾನಿತ್ಯಸುರಃ ಪ್ರಬಲಃ । ತಸ್ಯ ಭಾವೋಽಸುರತ್ವಂ ಪ್ರಾಬಲ್ಯಂ । ಮಹದೈಶ್ವರ್ಯಂ ॥ ವ್ಯೂಷುಃ । ಉಷ ಪ್ಲುಷ ದಾಹ ಇತ್ಯಸ್ಯ ವಿಪೂರ್ವಸ್ಯ ಲಿಟ್ಯುಸಿ ರೂಪಂ । ಸಹೇತಿ ಯೋಗವಿಭಾಗಾತ್ಸಮಾಸಃ । ಯದ್ವೃತ್ತಯೋಗಾದನಿಘಾತಃ । ಪ್ರಭೂಷನ್ । ಭವತೇಃ ಸನಿ ದ್ವಿರ್ವಚನಸ್ಯ ಛಂದಸಿ ವಿಕಲ್ಪಿತತ್ವಾದತ್ರ ದ್ವಿರ್ವಚನಾಭಾವಃ । ತದಂತಾಚ್ಛತರಿ ರೂಪಂ । ಪ್ರಾದಿಸಮಾಸಃ । ಶತುರ್ಲಸಾರ್ವಧಾತುಕಸ್ವರೇ ಧಾತುಸ್ವರಃ ॥

ಪ್ರತಿಪದಾರ್ಥ

**ಪೂರ್ವಾಃ**— ಉದಯಕಾಲಕ್ಕಿಂತಲೂ ಪೂರ್ವಭಾವಿಯಾದ । **ಉಷಸಃ**— ಉಷಸ್ಸುಗಳು । **ಯತ್**— ಯಾವಾಗ । **ವ್ಯೂಷುಃ**— ಪ್ರಕಾಶಿತವಾಗುವುವೋ । **ಅಧ**— ಆ ಒಡನೆಯೇ । **ಅಕ್ಷರಂ**— ನಾಶರಹಿತವಾದುದೂ । **ಮಹತ್**— ಪ್ರಭೂತವಾದುದೂ ಆದ ಜ್ಯೋತಿಯು । **ಗೋಃ**— ಉದಕದ । **ಪದೇ**— ಸ್ಥಾನವಾದ ಅಂತರಿಕ್ಷದಲ್ಲಿ । **ವಿ ಜಜ್ಞೇ**— ಗೋಚರವಾಗುತ್ತದೆ । **ಪ್ರಭೂಷನ್**— (ಉದಯಾನಂತರ) ಯಜ್ಞಮಾಡಲಿಚ್ಛೆಯುಳ್ಳ ಯಜಮಾನನು । **ವ್ರತಾ**— ತನ್ನ ಯಜ್ಞಾದಿ ಕರ್ಮಗಳನ್ನು । **ದೇವಾನಾಂ**— ದೇವತೆಗಳಿಗೆ । **ನು**— ಕ್ಷಿಪ್ರವಾಗಿ । **ಉಪ**— ಅರ್ಪಿಸುತ್ತಾನೆ । ದೇವಾನಾಂ— ದೇವತೆಗಳ । **ಅಸುರತ್ವಂ**— ಪ್ರಾಬಲ್ಯವು । **ಮಹತ್**— ಅಧಿಕವಾದುದೂ । **ಏಕಂ**— ಅಸಾಧಾರಣವಾದುದೂ ಆಗಿರುತ್ತದೆ.

ಭಾವಾರ್ಥ

ಉದಯಕಾಲಕ್ಕಿಂತಲೂ ಪೂರ್ವಭಾವಿಯಾದ ಉಷಸ್ಸುಗಳು ಯಾವಾಗ ಪ್ರಕಾಶಿತವಾಗುವುವೋ ಆ ಒಡನೆಯೇ ನಾಶರಹಿತವಾದ ಮಹಜ್ಜ್ಯೋತಿಯು ಉದಕಸ್ಥಾನವಾದ ಅಂತರಿಕ್ಷದಲ್ಲಿ ಗೋಚರವಾಗುತ್ತದೆ. ಉದಯಾನಂತರ ಯಜ್ಞಮಾಡಲಿಚ್ಛೆಯುಳ್ಳ ಯಜಮಾನನು ತನ್ನ ಯಜ್ಞಾದಿ ಕರ್ಮಗಳನ್ನು ದೇವತೆಗಳಿಗೆ ಅರ್ಪಿಸುತ್ತಾನೆ. ದೇವತೆಗಳ ಪ್ರಾಬಲ್ಯವು ಅಧಿಕವಾದುದೂ, ಅಸಾಧಾರಣವಾದುದೂ ಆಗಿರುತ್ತದೆ.

CC-0. Jangamwadi Math Collection. Digitized by eGangotri

## English Translation

When the preceding dawns appear, the great imperishable (light) is engendered in the (firmament, the) sphere of the waters, and then the worshipper is alert to perform the rites (due to) the gods, for great and unequalled is the might of the gods.

### ವಿಶೇಷವಿಷಯಗಳು

**ಅಕ್ಷರಂ—ನ ಕ್ಷರತೀತ್ಯಕ್ಷರಂ । ಅವಿನಾಶ್ಯಾದಿತ್ಯಾಖ್ಯಂ । ಮಹತ್ ಪ್ರಭೂತಂ ಜ್ಯೋತಿಃ ।** ಅಕ್ಷರಶಬ್ದವು ವಾಙ್ನಾಮಗಳಲ್ಲಿಯೂ (ನಿ. ೧-೧೩) ಉದಕನಾಮಗಳಲ್ಲಿಯೂ (ನಿ. ೧-೧೪) ಉಕ್ತವಾಗಿದೆ. ಸಾಯಣರು ಯಾವಾಗಲೂ ನಾಶವನ್ನು ಹೊಂದದೆ ಇರುವ ಆದಿತ್ಯನೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ, ಬಹಳವಾಗಿ ಪ್ರಕಾಶಿಸುತ್ತಿರುವ ತೇಜಸ್ಸು ಎಂದು ಈ ಪದದ ಅರ್ಥವನ್ನು ವಿವರಿಸಿದ್ದಾರೆ.

**ಗೋಃ ಪದೇ ವಿಜಜ್ಞೇ—ಉದಕಸ್ಯ ಸ್ಥಾನೇ ಸಮುದ್ರೇ ನಭಸಿ ವಾ ಉತ್ಪದ್ಯತೇ ।** ನಿರುಕ್ತಕಾರರು ಗೋಶಬ್ದದ ಅರ್ಥವನ್ನು ನಾನಾವಿಧವಾಗಿ ವಿವಸಿಸಿದ್ದಾರೆ. ಉಷಃ ಕಾಲವು ಕಳೆದನಂತರ ಉದಕಗಳು ಪ್ರಭೂತವಾಗಿರುವ ಸಮುದ್ರದಲ್ಲಿ ಅಥವಾ ಅಂತರಿಕ್ಷದಲ್ಲಿ ಆದಿತ್ಯನು ಉದಯಿಸುತ್ತಾನೆ, ಎಂದೂ ಗೋಶಬ್ದವು ಸಮುದ್ರ ಅಥವಾ ಅಂತರಿಕ್ಷ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದೆಂದೂ ಸಾಯಣರು ವರ್ಣಿಸಿದ್ದಾರೆ.

**ವ್ರತಾ— ಕರ್ಮಾಣಿ ।** ವ್ರತಶಬ್ದವು (ನಿ. ೨-೧೩) ಯಾಸ್ಕರಿಂದ ವ್ಯಾಖ್ಯಾತವಾಗಿದೆ. **ವೃಣೋತೀತಿ ವ್ರತಂ ವಾರಯತೀತಿ ವ್ರತಂ, ಆವೃಣೋತೀತಿ ಶರೀರಂ ಇತಿ ವ್ರತಂ ।** ಮೊದಲನೆಯದಾಗಿ—**ಶುಭಮಶುಭಂ ವಾ ಕೃತಂ ಸದಾ ವೃಣೋತಿ ಕರ್ತಾರಂ**—ಒಳ್ಳೆಯದಾಗಲಿ, ಕೆಟ್ಟದ್ದಾಗಲಿ ಫಲವು ಕೆಲಸಮಾಡಿದವನನ್ನು ಅನುಸರಿಸಿ ಬರುವುದು. ಆದ್ದರಿಂದ ವ್ರತಶಬ್ದಕ್ಕೆ ಕರ್ಮವೆಂದು ಅರ್ಥವು. ಎರಡನೆಯದಾಗಿ—ಅಗ್ನಿಹೋತ್ರವೇ ಮೊದಲಾದ ಕರ್ಮಗಳಾಚರಿಸುವವರನ್ನು ಭೋಗ್ಯವಸ್ತುಗಳ ಭೋಗದಿಂದ ತಪ್ಪಿಸುವುದರಿಂದ ವ್ರತಂ ಎಂದು ಅರ್ಥವು ವರ್ಣಿತವಾಗಿದೆ. ಮೂರನೆಯದಾಗಿ—ಶರೀರಸಂಬಂಧವಾದ ಸಪ್ತಧಾತುಗಳ ರೂಪದಿಂದ ಪರಿಣಾಮವನ್ನು ಹೊಂದುವ ಕಾರಣ ಅನ್ನವೂ ವ್ರತಪದದಿಂದ ಉಕ್ತವಾಗಿದೆ.

**ಪ್ರಭೂಷನ್ ವ್ರತಾ ದೇವಾನಾಂ ಉಪಃ ನು ನೇಷ್ಯತಿ—ಅಗ್ನಿಹೋತ್ರಾದಿ ಕರ್ಮಸು ಪ್ರಭವಿತು ಮಿಚ್ಛನ್ ಯಜಮಾನಃ ಕರ್ಮಾಣಿ ದೇವಾನಾಂ ಉಪ ಸಮೀಪಂ ನೇಷ್ಯತಿ**—ಸೂರ್ಯನು ಅರ್ಥಮುಟ್ಟಿಗೆ ಉದಯವನ್ನು ಹೊಂದಿದ ನಂತರ ಅಭಿವೃದ್ಧಿಯನ್ನು ಹೊಂದಲಿಚ್ಛೆಯುಳ್ಳ ಯಜಮಾನನು ತಾನು ಆಚರಿಸುವ ಕರ್ಮಗಳನ್ನು ದೇವತೆಗಳ ತೃಪ್ತಿಯನ್ನು ಸಂಪಾದಿಸುವುದಕ್ಕಾಗಿ ಅರ್ಪಿಸುವನು ಎಂದು ವಿವರಿಸಿದೆ.

**ದೇವಾನಾಂ ಅಸುರತ್ವಂ ಏಕಂ ಮಹತ್**—ಈ ವಾಕ್ಯದಲ್ಲಿ ಸಾಯಣರು ಅಸುರಶಬ್ದಾರ್ಥವನ್ನು **ಅಸ್ಯತಿ ಕ್ಷಿಪತಿ ಸರ್ವಾನಿತ್ಯಸುರಃ ಪ್ರಬಲಃ ತಸ್ಯ ಭಾವಃ ಅಸುರತ್ವಂ ಪ್ರಾಬಲ್ಯಂ ।** ಸರ್ವವನ್ನೂ ನಿಗ್ರಹಮಾಡುವ ಪ್ರಭೂತವಾದ ಸಾಮರ್ಥ್ಯವುಳ್ಳವನು ಅಸುರನು ಎಂದೂ, ಇಂತಹ ಶಕ್ತಿಯುಳ್ಳವನ ಸಾಮರ್ಥ್ಯವು ಅಸುರತ್ವವು ಎಂದೂ ವಿವರಿಸಿರುವರು. ಯಜ್ಞಾದಿಗಳ ಆಚರಣೆಗನುಗುಣವಾಗಿಯೂ, ಆದಿತ್ಯನ ಉದಯವು ಆವಿರ್ಭೂತವಾಗುವಂತೆಯೂ, ಉಷಃಕಾಲಗಳ ವರ್ತನೆಯು ಉಂಟಾಗುವ ನಿಮಿತ್ತ ದೇವತೆಗಳ ಐಶ್ವರ್ಯವು ಪ್ರಭೂತವಾದ ಮಹತ್ತ್ವದಿಂದ ಪೂರ್ಣವಾಗಿ, ಮುಖ್ಯವಾಗಿ ಪ್ರಶಸ್ಯವಾಗಿರುವುದೆಂದು ವರ್ಣಿತವಾಗಿದೆ.

CC-0. Jangamwadi Math Collection. Digitized by eGangotri

ಅಸುರಶಬ್ದವು ಮೇಘನಾಮಗಳಲ್ಲಿ (ನಿ. ೨-೨೨) ಉಕ್ತವಾಗಿದೆ. ಮತ್ತು **ಅಸುರಾಃ ಅಸುರತಾಃ ಸ್ಥಾನೇಷ್ವಸ್ತಾಃ ಸ್ಥಾನೇಭ್ಯ ಇತಿ ವಾ ಅಪಿ ವಾ ಅಸುರಿತಿ ಪ್ರಾಣನಾಮ ಅಸ್ತಃ ಶರೀರೇ ಭವತಿ ತೇನ ತದ್ವಂತಃ** (ನಿ. ೩-೮) ಎಂದರೆ, ಒಂದು ಪ್ರದೇಶದಲ್ಲಿ ಅಥವಾ ಸ್ಥಾನದಲ್ಲಿ ನೆಲೆಯಾಗಿರುವವರು ಅಥವಾ ಅವರವರ ಸ್ಥಾನಗಳಿಂದ ತಪ್ಪಿದವರು ಅಥವಾ ಚಂಚಲವಾದ ಪ್ರಾಣವುಳ್ಳವರು ಎಂದು ಅಸುರಶಬ್ದಾರ್ಥವು ಯಾಸ್ಕರಿಂದ ವಿವೃತವಾಗಿದೆ ಮತ್ತು "**ಸೋರ್ದೇವಾನಸೃಜತ ತತ್ ಸುರಾಣಾಂ ಸುರತ್ವಂ ಅಸೋರಸುರಾನಸೃಜತ ತದಸುರಾಣಾಮಸುರತ್ವಮಿತಿ ವಿಜ್ಞಾಯತೇ**" ಬ್ರಹ್ಮನು ಪರಮಾತ್ಮನ ಪ್ರಶಸ್ತ ಪ್ರದೇಶದಿಂದ ದೇವತೆಗಳನ್ನು ನಿರ್ಮಿಸಿರುವನು ಅಪ್ರಶಸ್ತವಾದ ಪ್ರದೇಶದಿಂದ ಅಸುರರನ್ನು ನಿರ್ಮಿಸಿದನು ಎಂದು ಬ್ರಾಹ್ಮಣವಾಕ್ಯವನ್ನು ಯಾಸ್ಕರು ಉದಹರಿಸಿರುತ್ತಾರೆ.

ಅಸುರಶಬ್ದಕ್ಕೆ ಇಲ್ಲಿ ಭಾಷ್ಯಕಾರರು ನಿರಸಿತಾರಂ ದೇವಂ—(ಶತ್ರುಗಳನ್ನು) ಪರಾಭವಗೊಳಿಸುವ ದೇವನನ್ನು ಎಂದರ್ಥವನ್ನು ಹೇಳಿರುವರು. ಸಾಧಾರಣವಾಗಿ ಅಸುರಶಬ್ದಕ್ಕೆ ರಾಕ್ಷಸರೆಂಬ ಅರ್ಥವು ರೂಢಿಯಲ್ಲಿದ್ದರೂ ಅನೇಕ ಕಡೆ ಈ ಶಬ್ದಕ್ಕೆ ದೇವತೆಗಳ ಪರವಾಗಿಯೇ ಅರ್ಥವಿರುವುದು. ಈ ಅಷ್ಟಕದಲ್ಲಿ ಈ ಅಸುರಶಬ್ದ ಪ್ರಯೋಗವು ಸುಮಾರು ಹತ್ತು ಋಕ್ಕುಗಳಲ್ಲಿರುವುದು ಅಲ್ಲೆಲ್ಲಾ ದೇವತೆಗಳ ಪರವಾಗಿಯೇ ಅರ್ಥವಿರುವುದು.

**ದಿವೋ ಅಸ್ತ್ಯೋಷ್ಯಸುರಸ್ಯ ವೀರೈರಿಷುಧ್ಯೇವ ಮರುತೋ ರೋದಸ್ಯೋಃ ।**

(ಋ. ಸಂ. ೧-೧೨೨-೧)

ಎಂಬ ಋಕ್ಕಿನಲ್ಲಿ—**ಅಸುರಸ್ಯ ನಿರಸಿತವ್ಯಾನಾಮಸುರಾಣಾಂ ನಿರಸಿತುಃ । ಕರ್ಮಣಿ ಷಷ್ಠೀ । ನಿರಸಿತಾರಂ ತಮೇವ ದೇವಂ** (ರುದ್ರಂ) ಅಸುರರನ್ನು ಪರಾಭವಗೊಳಿಸುವ ರುದ್ರನೆಂದರ್ಥವು.

ಶತಂ ರಾಜ್ಞೋ ನಾಧಮಾನಸ್ಯ ನಿಷ್ಕಾಞ್ಛತಮಶ್ವಾನ್ಪ್ರಯತಾನ್ತ್ಸದ್ಯ ಆದಂ ।
ಶತಂ ಕಕ್ಷೀವಾ ಅಸುರಸ್ಯ ಗೋನಾಂ ದಿವಿ ಶ್ರವೋಽಜರಮಾ ತತಾನ ॥

(ಋ. ಸಂ. ೧-೧೨೬-೨)

ಇಲ್ಲಿ—**ಅಸುರಸ್ಯ ಧನಾನಾಂ ನಿರಸಿತುರ್ದಾನಶೀಲಸ್ಯ ರಾಜ್ಞಃ ಸ್ವನಯಸ್ಯ ।** ಎಂದರೆ ಧನಾದಿಗಳನ್ನು ದಾನ ಮಾಡುವ ಸ್ವನಯನೆಂಬ ರಾಜನ ಎಂದು ಅಸುರಶಬ್ದವು ಸ್ವನಯರಾಜನ ಪರವಾಗಿರುವುದು

**ಇಂದ್ರಾಯ ಹಿ ದ್ಯೌರಸುರೋ ಅನಮ್ನತೇಂದ್ರಾಯ ಮಹೀ ಪೃಥಿವೀ ವರೀಮಭಿರ್ದ್ಯುಮ್ನಸಾತಾ ವರೀಮಭಿಃ ॥**

(ಋ. ಸಂ. ೧-೧೩೧-೧)

ಇಲ್ಲಿ—ಅಸುರಶಬ್ದವು **ಅಸುರಃ ನಿರಸನಶೀಲಃ ಶತ್ರೂಣಾಂ ಪುಣ್ಯಕೃತಾಮೇವ ತನ್ನಿವಾಸಾತ್ (ದ್ಯೌಃ ದ್ಯುಲೋಕಃ)** ಯಜ್ಞಾದಿಗಳನ್ನು ಮಾಡುವ ಪುಣ್ಯವಂತರಿಗೆ ಆವಾಸಸ್ಥಾನವಾಗಿದ್ದು ಅವರ ಶತ್ರುಗಳಿಗೆ ಎಡೆಗೊಡದಿರುವ ಸ್ವರ್ಗಲೋಕವೆಂದು ದ್ಯೌಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು.

**ಪ್ರ ಸಾ ಕ್ಷಿತಿರಸುರ ಯಾ ಮಹಿ ಪ್ರಿಯ ಋತಾವಾನಾವೃತಮಾ ಘೋಷತೋ ಬೃಹತ್ ।**

(ಋ. ಸಂ. ೧-೧೫೧-೪)

ಈ ಋಕ್ಕಿನಲ್ಲಿ ಅಸುರಶಬ್ದವು—**ಹೇ ಅಸುರಾ ಅಸುರೌ ಬಲವಂತೌ ಮಿತ್ರಾವರುಣೌ ।** ಮಿತ್ರಾವರುಣರಿಗೆ ವಿಶೇಷಣವಾಗಿ ಅವರ ಶಕ್ತಿಸಾಮರ್ಥ್ಯಗಳನ್ನು ಹೇಳುವುದು.

CC-0. Jangamwadi Math Collection. Digitized by eGangotri

**ತ್ವಂ ರಾಜೇಂದ್ರ ಯೇ ಚ ದೇವಾ ರಕ್ಷಾ ನೃನ್ಪಾಹ್ಯಸುರ ತ್ವಮಸ್ಮಾನ್ |**

(ಋ. ಸಂ. ೧-೧೭೪-೧)

ಈ ಋಕ್ಕಿನಲ್ಲಿ—**ಅಸುರ ಶತ್ರೂಣಾಂ ನಿರಸಿತಃ ಹೇ ಇಂದ್ರ** | ಶತ್ರುಗಳನ್ನು ಪರಾಭವಗೊಳಿಸುವ ಎಲೈ ಇಂದ್ರನೇ, ಎಂದು ಅಸುರಶಬ್ದವು ಇಂದ್ರನ ಪರವಾಗಿ ಪ್ರಯೋಗಿಸಲ್ಪಟ್ಟಿರುವುದು.

**ತ್ವಮಗ್ನೇ ರುದ್ರೋ ಅಸುರೋ ಮಹೋ ದಿವಸ್ತ್ವಂ ಶರ್ಧೋ ಮಾರುತಂ ಪೃಕ್ಷ ಈಶಿಷೇ |**

(ಋ. ಸಂ. ೨-೧-೬)

ಈ ಋಕ್ಕಿನಲ್ಲಿ ಅಸುರಶಬ್ದವು—**ಅಸುರಃ ಶತ್ರೂಣಾಂ ನಿರಸಿತಾ ರುದ್ರೋಽಸಿ** | ಶತ್ರುವನ್ನು ಜಯಿಸತಕ್ಕ ರುದ್ರನೆಂಬ ಅರ್ಥವನ್ನು ಹೇಳುವುದು.

**ತ್ವಂ ವಿಶ್ವೇಷಾಂ ವರುಣಾಸಿ ರಾಜಾ ಯೇ ಚ ದೇವಾ ಅಸುರ ಯೇ ಚ ಮರ್ತಾಃ |**

(ಋ. ಸಂ. ೨-೨೭-೧೦)

ಇಲ್ಲಿ ಅಸುರಶಬ್ದಕ್ಕೆ—**ಹೇ ಅಸುರ ಶತ್ರೂಣಾಂ ಕ್ಷೇಪಕ ವರುಣ** | ಶತ್ರುಗಳನ್ನು ಪರಾಭವಗೊಳಿಸು ಎಂದು ಅರ್ಥವಿದ್ದು ಅಸುರಶಬ್ದವು ವರುಣನ ಪರವಾಗಿರುವುದು

**ಮಾ ನೋ ವಧೈರ್ವರುಣ ಯೇ ತೆ ಇಷ್ಟಾವೇನಃ ಕೃಣ್ವಂತಮಸುರ ಭ್ರೀಣಂತಿ |**

(ಋ. ಸಂ. ೨-೨೮-೭)

ಈ ಋಕ್ಕಿನಲ್ಲಿಯೂ—**ಹೇ ಅಸುರ ಪಾಪಕೃತಾಂ ನಿರಸಿತಃ ವರುಣ** | ಪಾಪಮಾಡುವವರನ್ನು ನಿಗ್ರಹಿಸುವ ವರುಣನೆಂದು ವರುಣನ ಪರವಾಗಿಯೇ ಇರುವುದು.

**ಬೃಹಸ್ಪತೇ ತಪುಷಾಶ್ನೇವ ವಿಧ್ಯ ವೃಕದ್ವರಸೋ ಅಸುರಸ್ಯ ವೀರಾನ್ |**

(ಋ. ಸಂ. ೨-೩೦-೪)

ಈ ಋಕ್ಕಿನಲ್ಲಿ—**ಅಸುರಸ್ಯ** ಎಂಬ ಶಬ್ದವು ವೃಕದ್ವರಸಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದು ಸಂವೃತದ್ವಾರಸ್ಯ **ಅಸುರಸ್ಯ**-ಬಾಗಿಲನ್ನು ಮುಚ್ಚಿ ತಡೆದಿರುವ ಅಸುರನ ಎಂದು ಅಸುರಶಬ್ದದ ಸಾಮಾನ್ಯಾರ್ಥವೇ ವಿವೃತವಾಗಿರುವುದು.

**ಪಿತಾ ಯಜ್ಞಾನಾಮಸುರೋ ವಿಪಶ್ಚಿತಾಂ ವಿಮಾನಮಗ್ನಿರ್ವಯುನಂ ಚ ವಾಘತಾಂ |**

(ಋ ಸಂ. ೩-೩-೪)

ಈ ಋಕ್ಕಿನಲ್ಲಿ—**ಅಸುರೋ ಬಲಪ್ರದಃ** ಎಂದು ಅಸುರಶಬ್ದವು ಅಗ್ನಿ ಪರವಾಗಿ ಪ್ರಯುಕ್ತವಾಗಿರುವುದು.

ಇಲ್ಲಿ ಏಕ ಎಂಬ ಪದವು ಸಂಖ್ಯಾವಾಚಕವಾಗಿರದೆ ಮುಖ್ಯ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು. ಮತ್ತು **ಮಹತ್** ಎಂಬ ಪದವು ಐಶ್ವರ್ಯ ಎಂದರೆ ಸರ್ವವನ್ನೂ ತಮ್ಮ ಅಧೀನತೆಗೆ ಒಳಪಡಿಸಿಕೊಂಡಿರುವುದು ಎಂದೂ ಸಾಯಣರ ವಿವರಣೆಯು ಇರುತ್ತದೆ. ಇದರಿಂದ ದೇವತೆಗಳ ಪ್ರಾಬಲ್ಯವು ಅಸಾಧಾರಣವಾಗಿರುವುದು ಅಥವಾ ಇತರರು ಯಾರಿಂದಲೂ ಹೊಂದಲಶಕ್ಯವಾದ ಸರ್ವವನ್ನೂ ತಮ್ಮ ಅಧೀನತೆಯಲ್ಲಿ ಇರಿಸಿಕೊಂಡಿರುವ ಸಾಮರ್ಥ್ಯವು ದೇವತೆಗಳಿಗಿರುತ್ತದೆ ಎಂಬ ಅರ್ಥವು ಸೂಚಿತವಾಗಿರುವುದು. ಮತ್ತು ಈರೀತಿಯಾಗಿರುವ ಈ—

CC-0. Jangamwadi Math Collection. Digitized by eGangotri

ಶಿತೃತ್ವದ ಪ್ರಾಬಲ್ಯವೂ ಮುಖ್ಯವಾಗಿರುತ್ತದೆ ಎಂದು **ಏಕಂ ಅಸುರತ್ವಂ ಮಹತ್** ಎಂಬ ಪದಗಳ ಉದ್ದೇಶ್ಯ ವಿಧೇಯ ಭಾವದಿಂದ ಮೂರು ವಿಧವಾದ ಅರ್ಥವೂ ಸೂಚಿತವಾಗಿದೆ.

ಉಷೋದೇವತೆಯ ಪ್ರಭಾವವನ್ನು ವರ್ಣಿಸಿರುವ ಈ ಋಕ್ಕಿನಲ್ಲಿ ಯಜಮಾನರು ಆಚರಿಸುವ ಯಾಗಾದಿ ಕರ್ಮಗಳ ಅನುಷ್ಠಾನವೂ, ಸೂರ್ಯೋದಯವೂ ಮತ್ತು ಇತರ ವ್ಯವಹಾರವೂ ಉಷೋದೇವತೆಯ ನಿರತಿಶಯವಾದ ಐಶ್ವರ್ಯದಿಂದ ಆಗಿರುವ ಕಾರಣ ದೇವತೆಯ ಮಹಿಮೆಯು ಮುಖ್ಯವಾಗಿರುವುದೆಂದು ವರ್ಣಿಸಿದೆ.

ಈ ಸೂಕ್ತದ ಪ್ರತಿಯೊಂದು ಋಕ್ಕಿನಲ್ಲಿಯೂ ಈ ಋಕ್ಕಿನ ನಾಲ್ಕನೆಯ ಪಾದವಾದ—**ಮಹದ್ದೇವಾನಾ-ಮಸುರತ್ವಮೇಕಂ** ಎಂಬ ವಾಕ್ಯವು ಪಲ್ಲವಿಯಂತೆ ಪುನಃಪುನಃ ಪಠಿತವಾಗಿರುವುದು.

———————

ಸಂಹಿತಾಪಾಠಃ

## ಮೋಷೂಣೋ ಅತ್ರ ಜುಹುರಂತ ದೇವಾ ಮಾ ಪೂರ್ವೇ ಅಗ್ನೇ ಪಿತರಃ ಪದಜ್ಞಾಃ ।
## ಪುರಾಣ್ಯೋಃ ಸದ್ಮನೋಃ ಕೇತುರಂತರ್ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ಮೋ ಇತಿ । ಸು । ನಃ । ಅತ್ರ । ಜುಹುರಂತ । ದೇವಾಃ । ಮಾ । ಪೂರ್ವೇ । ಅಗ್ನೇ । ಪಿತರಃ । ಪದಽಜ್ಞಾಃ ।

ಪುರಾಣ್ಯೋಃ । ಸದ್ಮನೋಃ । ಕೇತುಃ । ಅಂತಃ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ಅತ್ರಾಸ್ಮಿನ್ಕಾಲೇ ದೇವಾ ನೋಽಸ್ಮಾನ್ ಸು ಸುಷ್ಠು ಮೋ ಜುಹುರಂತ । ಮಾ ಹಿಂಸ್ಯುಃ । ತಥಾ ಪದಜ್ಞಾಃ ಕರ್ಮಾಣ್ಯನುಷ್ಠಾಯ ದೇವಪದಮನುಭವಂತಃ ಪೂರ್ವೇ ಪುರಾತನಾಃ ಪಿತರೋ ಮಾ ಹಿಂಸಿಷುಃ । ಯಸ್ಮಾತ್ಕೇತುರ್ಯಜ್ಞಾನಾಂ ಪ್ರಜ್ಞಾಪಕಃ । ಸೂರ್ಯಃ ಪುರಾಣ್ಯೋಃ ಪುರಾತನಯೋಃ ಸದ್ಮನೋಃ । ಸೀದಂತ್ಯನಯೋರ್ದೇವಮನುಷ್ಯಾ ಇತಿ ಸದ್ಮನೀ ರೋದಸೀ । ತಯೋ-ರಂತರ್ಮಧ್ಯ ಉದೇತಿ । ತಸ್ಮಾದತ್ರ ಮಾ ಹಿಂಸಂತ್ವಿತ್ಯರ್ಥಃ । ಮಹದ್ದೇವಾನಾಮಿತ್ಯಾದಿ ಪೂರ್ವವತ್ ॥ ಜುಹುರಂತ । ಹೃ ಪ್ರಸಹ್ಯಕರಣೇ । ಲುಙಿ ಜುಹೋತ್ಯಾದಿತ್ವಾತ್ ಶ್ಲುಃ । ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತ್ಯುತ್ವಂ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದದಾದೇಶಾಭಾವೇಽಂತಾದೇಶಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಅತ್ರ**—ಈ ಯಜ್ಞಕಾಲದಲ್ಲಿ । **ದೇವಾಃ**—ದೇವತೆಗಳು । **ನಃ**—ನಮ್ಮನ್ನು । **ಸು ನೋ ಜುಹುರಂತೆ**—ಕೊಂಚವೂ ಹಿಂಸಿಸದಿರಲಿ। **ಪದಜ್ಞಾಃ**—ದೇವತ್ವವನ್ನು ಪಡೆದಿರುವವರೂ। **ಪೂರ್ವೇ**—ಪುರಾತನರೂ ಆದ । **ಪಿತರಃ**—ನಮ್ಮ ಪಿತೃಗಳೂ ಸಹ । **ಮಾ**—ನಮ್ಮನ್ನು ಹಿಂಸಿಸದಿರಲಿ । **ಕೇತುಃ**—ಯಜ್ಞಕಾರ್ಯವನ್ನು ಜ್ಞಾಪಿಸತಕ್ಕ ಸೂರ್ಯನೂ । **ಪುರಾಣ್ಯೋಃ**—ಪುರಾತನರಾದ । **ಸದ್ಮನೋಃ**—ದ್ಯಾವಾಪೃಥಿವಿಗಳ ।**ಅಂತಃ**—ಮಧ್ಯದಲ್ಲಿ ಪ್ರಕಾಶಿಸುತ್ತಾ (ನಮ್ಮನ್ನು ಹಿಂಸಿಸದಿರಲಿ) । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ

ಭಾವಾರ್ಥ

ಎಲೈ ಅಗ್ನಿಯೇ, ಈ ಯಜ್ಞಕಾಲದಲ್ಲಿ ದೇವತೆಗಳು ನಮ್ಮನ್ನು ಕೊಂಚವೂ ಹಿಂಸಿಸದಿರಲಿ. ದೇವತ್ವವನ್ನು ಪಡೆದಿರುವವರೂ, ಪುರಾತನರೂ ಆದ ನಮ್ಮ ಪಿತೃಗಳೂ ಸಹ ನಮ್ಮನ್ನು ಹಿಂಸಿಸದಿರಲಿ. ಯಜ್ಞಕಾರ್ಯವನ್ನು ಜ್ಞಾಪಿಸತಕ್ಕ ಸೂರ್ಯನೂ, ಪುರಾತನರಾದ ದ್ಯಾವಾಪೃಥಿವಿಗಳ ಮಧ್ಯದಲ್ಲಿ ಪ್ರಕಾಶಿಸುತ್ತಾ ನಮ್ಮನ್ನು ಹಿಂಸಿಸದಿರಲಿ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ ಅಸಾಧಾರಣವಾದುದೂ ಆಗಿದೆ

English Translation

Let not the gods, Agni, now do us harm, nor the ancient progenitors, who have come to know the degree (of divinity) ; nor the manifester of light between the two ancient dwellings (earth and heaven, the sun) ; for great and unequalled is the might of the gods.

ವಿಶೇಷವಿಷಯಗಳು

**ಕೇತುಃ ಪುರಾಣ್ಯೋಃ ಸದ್ಮನೋಃ ಅಂತಃ—ಯಜ್ಞಾನಾಂ ಪ್ರಜ್ಞಾಪಕಃ ಸೂರ್ಯಃ ಪುರಾತನಯೋಃ ಸೀದಂತ್ಯನಯೋಃ ದೇವಮನುಷ್ಯಾ ಇತಿ ಸದ್ಮನೀ ತಯೋಃ ಮಧ್ಯೇ ಉದೇತಿ** । ಸೂರ್ಯನು ಯಜ್ಞಾಚರಣೆ ಎಂಬ ಅವಶ್ಯಕರ್ತವ್ಯಕಾಲವನ್ನು ಸೂಚಿಸುವವನು ಎಂದು ಕೇತು ಪದಕ್ಕೆ ಅರ್ಥವನ್ನು ವಿವರಿಸಿ, ಈ ಸೂರ್ಯನು ದೇವತೆಗಳೂ ಮತ್ತು ಮನುಷ್ಯರೂ ಸುಖದಿಂದ ಇರುವುದಕ್ಕವಕಾಶವನ್ನು ಅನುಗ್ರಹಿಸಿರುವುದೂ ಪೂರ್ವಕಾಲದಿಂದಲೂ ಇರುವುದೂ ಆದ ದ್ಯಾವಾಪೃಥಿವಿಗಳ ಮಧ್ಯದಲ್ಲಿ ಉದಯವನ್ನು ಹೊಂದಿರುವನು. ಈ ಉದಯಕಾಲದಲ್ಲಿ—**ದೇವಾಃ ಪಿತರಃ ನಃ ಮಾ ಜುಹುರಂತೆ ಅಸ್ಮಾನ್ ಮಾ ಹಿಂಸ್ಯುಃ** ದೇವತೆಗಳೂ ಯಜ್ಞಾದಿಕರ್ಮಾನುಷ್ಠಾನದಿಂದ ದೇವಭಾವವನ್ನು ಹೊಂದಿರುವ ಪಿತೃಗಳೂ ಕೂಡ ಯಜಮಾನರಾದ ನಮ್ಮನ್ನು ಹಿಂಸೆಮಾಡದಿರಲಿ ಎಂದು ಅಗ್ನಿಯು ಪ್ರಾರ್ಥಿತನಾಗಿದ್ದಾನೆ. ಸದ್ಮನೀ ಎಂಬ ಪದವು ದ್ಯಾವಾಪೃಥಿವಿನಾಮಗಳಲ್ಲಿ (ನಿ. ೩-೨೨) ಉಕ್ತವಾಗಿದೆ.

**ಪಿತರಃ**—ಮೃತರಾದವರಲ್ಲಿ ಪುಣ್ಯಶಾಲಿಗಳು ಮೂರನೆಯ ಸ್ವರ್ಗದಲ್ಲಿ ವಾಸಿಸುತ್ತಾರೆ ; ಇವರಿಗೆ ಪಿತೃಗಳೆಂದು ಹೆಸರು. ಪುರಾತನವಾದ ಮಾರ್ಗಗಳನ್ನು ಅನುಸರಿಸಿದ, ಮೂಲಪುರುಷರೇ ಇವರು (೧೦-೧೫-೮, ೧೦); ಮೃತರಾದವರು, ಈ ಋಷಿಗಳು ಏರ್ಪಡಿಸುವ ದಾರಿಯನ್ನೇ ಅನುಸರಿಸಿ, ಅವರ ಸಮೀಪಕ್ಕೇ ಹೋಗುತ್ತಾರೆ

CC-0. Jangamwadi Math Collection. Digitized by eGangotri

(೧೦-೧೪-೨, ೭, ೧೫). ವಿಷ್ಣುವಿನ ಮೂರನೆಯ ಪಾದಕ್ಕೆ ಸಂಬಂಧಿಸಿದಾರೆ. (೧೦-೧೫-೩ ; ೧-೧೫೪-೫ನ್ನು ಹೋಲಿಸಿ). ಎರಡು ಸೂಕ್ತಗಳು ಪಿತೃದೇವತಾಕವಾದವು (೧೦-೧೫ ; ೧೦-೫೪).

ಪಿತೃಗಳಲ್ಲಿ, ನವಗ್ವರು, ವಿರೂಪರು, ಅಂಗಿರಸರು, ಅಥರ್ವರು, ಭೃಗುಗಳು ಮತ್ತು ವಸಿಷ್ಠರೆಂಬ (೧೦-೧೪-೪ರಿಂದ ೬ · ೧೦-೧೫-೮) ಗಣಗಳಿವೆ ; ಇವುಗಳಲ್ಲಿ ಕಡೆಯ ನಾಲ್ಕು ಹೆಸರುಗಳು, ಅಥರ್ವವೇದ ಮತ್ತು ಋಗ್ವೇದದ ಎರಡನೆಯ ಮತ್ತು ಏಳನೆಯ ಮಂಡಲಗಳ ಋಷಿಗಳ ಹೆಸರುಗಳೇ ಆಗಿವೆ. ಇವರಲ್ಲಿ ಅಂಗಿರಸರಿಗೂ ಯಮನಿಗೂ ವಿಶೇಷ ಸಂಬಂಧವಿದೆ (೧೦-೧೪-೩,೫) ಪಿತೃಗಳಲ್ಲಿ ಅವರಾಃ (ಕೆಳ ದರ್ಜೆಯವರು), ಪರಾಃ (ಉತ್ತಮ ದರ್ಜೆಯವರು) ಮತ್ತು ಮಧ್ಯಮಾಃ (ಮಧ್ಯ ದರ್ಜೆಯವರು) ಎಂತಲೂ ವಿಭಾಗಗಳಿವೆ ; ಇವರೆಲ್ಲರೂ ಅವರ ವಂಶಜರಿಂದ ಜ್ಞಾತರಲ್ಲದಿದ್ದರೂ, ಅಗ್ನಿಗೆ ಇವರೆಲ್ಲರ ಪರಿಚಯವೂ ಇದೆ (೧೦-೧೫-೧, ೨, ೧೩). ಉಷಸ್ಸುಗಳು, ನದಿಗಳು, ಪರ್ವತಗಳು, ಭೂಮ್ಯಾಕಾಶಗಳು, ಪೂಷಣ ಮತ್ತು ಋಭುಗಳು, ಇವರುಗಳ ಜೊತೆಯಲ್ಲಿ ಪಿತೃಗಳ ಅನುಗ್ರಹವೂ ಪ್ರಾರ್ಥಿತವಾಗಿದೆ (೬-೫೨-೪ ; ೬-೭೫-೧೦ ; ೭-೩೫-೧೨ ; ೧-೧೦೬-೩). ಅವರ ಕಟಾಕ್ಷವನ್ನು ಬೇಡುವ (೧೦-೧೪-೬) ಅವರ ವಂಶಜರಿಗೆ, ಸಂಪತ್ತು, ಸಂತಾನ ಮತ್ತು ದೀರ್ಘಾಯುಸ್ಸುಗಳನ್ನು ಕೊಡಬೇಕೆಂದು ಪ್ರಾರ್ಥನೆ (೧೦-೧೫-೭, ೧೧ ; ಅ. ವೇ. ೧೮-೩-೧೪ ; ೧೮-೪-೬೨). ತಮ್ಮ ವಂಶೀಕರಿಗೆ ಸಹಾಯಮಾಡ ಬೇಕೆಂದು ವಸಿಷ್ಠರನ್ನು ಪ್ರಾರ್ಥಿಸಿದೆ (೭-೩೩-೧ ; ೧೦-೧೫-೮ನ್ನು ಹೋಲಿಸಿ); ತುರುಃಷ್ವ, ಯದು ಮತ್ತುಉಗ್ರದೇವ ಎಂಬುವರು ಒಂಟಿಯಾಗಿಯೂ ಸ್ತುತರಾಗಿದಾರೆ (೧-೩೬.೧೮).

ಪಿತೃಗಳೂ ಅಸುರರು (ಅ. ವೇ. ೬-೪೧-೩) ; ದೇವತೆಗಳೆಂತಲೂ ಕರೆಯಲ್ಪಟ್ಟಿದಾರೆ (೧೦-೫೬-೪). ಅಂಗಿರಸರು ಮತ್ತು ಕೆಲವು ಗಣಗಳಲ್ಲಿ, ದೇವತ್ವದ ಜೊತೆಗೆ ಋತ್ವಿಜತ್ವವೂ ಸೇರಿದೆ. ಸೃಷ್ಟಿಕಾರ್ಯಗಳು ಕೆಲವು ಪಿತೃಗಳಿಗೂ ಉಕ್ತವಾಗಿವೆ ; ಆಕಾಶವನ್ನು ನಕ್ಷತ್ರರಂಜಿತವನ್ನಾಗಿ ಮಾಡಿದವರು ಅವರೇ ; ಹಗಲು ಹೊತ್ತಿನಲ್ಲಿ ಬೆಳಕೂ, ರಾತ್ರಿ ಕತ್ತಲೂ, ಅವರಿಂದಲೇ ಆಯಿತು (೧೦-೬೮-೧೧) ; ಅಡಗಿಕೊಂಡಿದ್ದ ಬೆಳಕನ್ನು ಕಂಡು ಹಿಡಿದು, ಉಷಸ್ಸನ್ನು ಉಂಟುಮಾಡಿದರು (೭-೭೬-೪ ; ೧೦-೧೦೭-೧ನ್ನು ಹೋಲಿಸಿ) ; ಮತ್ತು ಸೋಮನೊಡನೆ ಸೇರಿಕೊಂಡು, ಭೂಮ್ಯಾಕಾಶಗಳನ್ನು ವಿಸ್ತರಿಸಿದರು. (೮.೪೮-೧೩). ದೇವತೆಗಳಿಗೆ ಹೋಮದ್ರವ್ಯವನ್ನು ವಹಿಸುವ ಅಗ್ನಿಗೂ (ಹವ್ಯವಾಹ) ಮತ್ತು ಶವವನ್ನು ದಹಿಸುವ ಅಗ್ನಿಗೂ (ಕ್ರವ್ಯಾದ) ವ್ಯತ್ಯಾಸವಿರುವಂತೆ (೧೦-೧೬-೯), ದೇವಮಾರ್ಗ ಪಿತೃಮಾರ್ಗಗಳಿಗೂ ವ್ಯತ್ಯಾಸವಿದೆ (೧೦-೨-೭ ; ೧೦-೧೮-೧ ; ೧೦-೮೮-೧೫ನ್ನು ಹೋಲಿಸಿ). ಅದೇ ರೀತಿ, ಸ್ವರ್ಗಲೋಕಕ್ಕೂ ಪಿತೃಲೋಕಕ್ಕೂ ಭೇದವು ಉಕ್ತವಾಗಿದೆ ; ದೇವಲೋಕದ ದ್ವಾರವು ಈಶಾನ್ಯ ದಿಕ್ಕಿನಲ್ಲಿಯೂ (ಶ. ಬ್ರಾ. ೬-೬-೨-೯), ಪಿತೃಲೋಕ ದ್ವಾರವು ಆಗ್ನೇಯದಲ್ಲಿಯೂ (ಶ. ಬ್ರಾ. ೧೩-೮-೧-೫) ಇವೆಯೆಂದು ಉಕ್ತವಾಗಿದೆ. ಪಿತೃಗಳೂ ಮನುಷ್ಯರೂ ಬೇರೆ ಬೇರೆ ವರ್ಗದವರು ಮತ್ತು ಸೃಷ್ಟಿಯೂ ಬೇರೆ ಬೇರೆ (ತೈ. ಬ್ರಾ. ೨-೩-೮-೨). ಪಿತೃಗಳು ಭೂಮಿ, ಅಂತರಿಕ್ಷ ಮತ್ತು ಸ್ವರ್ಗವಾಸಿಗಳು (ಅ. ವೇ. ೧೮-೨-೪೯ ; ಋ. ವೇ. ೧೦-೧೫-೨ನ್ನು ಹೋಲಿಸಿ).

ಪುರಾತನ ಪಿತೃಗಳೇ ಒಂದು ಸಲ ಸೋಮಾಹುತಿಯನ್ನು ಅರ್ಪಿಸಿದರು (೧೦-೧೫-೮). ಅವರು ಯಮನೊಡನೆ ಸಂತೋಷದಿಂದ ಕಾಲಕಳೆಯುತ್ತಾರೆ (೧೦-೧೪-೧ ; ೧೦-೧೩೫-೧ ಮತ್ತು ಅ. ವೇ. ೧೮-೪-೧೦ ಗಳನ್ನು ಹೋಲಿಸಿ) ಮತ್ತು ದೇವತೆಗಳೊಡನೆ ಭೋಜನ ಮಾಡುತ್ತಾರೆ (೭-೭೬-೪). ದೇವತೆಗಳಿಗೆ ಸಮಾನರಾಗಿ ಜೀವಿಸುತ್ತಾ, ಒಂದೊಂದು ಸಲ ದೇವತೆಗಳಿಗೆ ಯೋಗ್ಯವಾದ ಪೂಜೆಗಳನ್ನು ಪಡೆಯುತ್ತಾರೆ. ಇಂದ್ರ ಮತ್ತು

CC-0. Jangamwadi Math Collection. Digitized by eGangotri

ದೇವತೆಗಳಿಗೆ ಯೋಗ್ಯವಾದ ಪೂಜೆಗಳನ್ನೂ ಪಡೆಯುತ್ತಾರೆ. ಇಂದ್ರ ಮತ್ತು ದೇವತೆಗಳ ರಥದಲ್ಲಿಯೇ ಅವರೂ ಬರುತ್ತಾರೆ (೧೦-೧೫-೧೦). ಅವರಿಗೂ ಸೋಮರಸದಲ್ಲಿ ಅಭಿಲಾಷೆ (೧೦-೧೫-೫, ೬) ; ದರ್ಭಾಸನದಲ್ಲಿ ದಕ್ಷಿಣಾಭಿಮುಖವಾಗಿ ಕುಳಿತು, ಸುತವಾದ ಪಾನೀಯವನ್ನು ಪಾನಮಾಡುತ್ತಾರೆ (೧೦-೧೫-೫, ೬). ತಮಗೋಸ್ಕರ ಸಿದ್ಧವಾದ ಸೋಮರಸವನ್ನು ಪಾನಮಾಡಲು ಆತುರರಾಗಿದ್ದಾರೆ ; ಯಮ, ಅವನ ತಂದೆ ವಿವಸ್ವತ ಮತ್ತು ಅಗ್ನಿಗಳೊಡನೆ ಬಂದು, ಅವರೊಡನೆಯೇ, ಹುತವಾದವುಗಳನ್ನು ಸ್ವೀಕರಿಸಬೇಕೆಂದು ಅವರಿಗೆ ಆಹ್ವಾನವಿದೆ (೧೦-೧೫-೮ರಿಂದ ೧೧ ; ೧೦-೧೪-೪, ೫). ಸಾವಿರಗಟ್ಟಲೆ ಬಂದು, ದರ್ಭಾಸನದಲ್ಲಿ ಕ್ರಮವಾಗಿ ಕುಳಿತುಕೊಳ್ಳುತ್ತಾರೆ (೧೦-೧೫-೧೦, ೧೧). ಪಿತೃಗಳು ಯಾಗಶಾಲೆಗೆ ಬಂದಾಗ, ಕೆಲವು ಪಿಶಾಚಿಗಳೂ, ಅವರ ಸ್ನೇಹಿತರ ರೂಪದಲ್ಲಿ, ಅವರೊಡನೆ ಬೆರೆಯುವುದುಂಟು. (ಅ. ವೇ. ೧೮-೨-೨೮)

ದೇವತೆಗಳಿಗೆ ಆಹಾರವು ಅರ್ಪಿತವಾಗುವಾಗ 'ಸ್ವಾಹಾ' ಎಂತಲೂ, ಪಿತೃಗಳಿಗೆ ಕೊಡುವಾಗ 'ಸ್ವಧಾ' ಎಂತಲೂ (೧೦-೧೪-೩) ಹೇಳುತ್ತಾರೆ ; ಎಲ್ಲಾ ಕರ್ಮಗಳಲ್ಲಿಯೂ ದೇವ-ಮತ್ತು ಪಿತೃಭಾಗಗಳಿಗೆ ಈ ವ್ಯತ್ಯಾಸವಿದ್ದೇ ಇರಬೇಕು (ಶ. ಬ್ರಾ. ೪-೪-೨-೨). ಅವರಿಗೂ ಪೂಜೆಯುಂಟು ; ಅನುಯಾಯಿಗಳ ಪ್ರಾರ್ಥನೆಯನ್ನು ಲಾಲಿಸಿ, ಅವರ ಪಕ್ಷವನ್ನು ವಹಿಸಬೇಕು, ಸ್ವಾಭಾವಿಕವಾಗಿ ನಡೆದುಹೋಗುವ ಪ್ರಮಾದಗಳನ್ನು ಮನ್ನಿಸಬೇಕು ಇತ್ಯಾದಿ ಪ್ರಾರ್ಥನೆ (೧೦-೧೫-೨, ೬ ; ೩-೫೫-೨ನ್ನು ಹೋಲಿಸಿ).

---

ಸಂಹಿತಾಪಾಠಃ

ವಿ ಮೇ ಪುರುತ್ರಾ ಪತಯಂತಿ ಕಾಮಾಃ ಶಮ್ಯಚ್ಛಾ ದೀದ್ಯೇ ಪೂರ್ವ್ಯಾಣಿ ।
ಸಮಿದ್ಧೇ ಅಗ್ನಾವೃತಮಿದ್ವದೇಮ ಮಹದ್ದೇವಾನಾಮಸುರತ್ವಮೇಕಂ ॥೩॥

ಪದಪಾಠಃ

ವಿ । ಮೇ । ಪುರುऽತ್ರಾ । ಪತಯಂತಿ । ಕಾಮಾಃ । ಶಮಿ । ಅಚ್ಛ । ದೀದ್ಯೇ । ಪೂರ್ವ್ಯಾಣಿ ।
ಸಮ್ऽಇದ್ಧೇ । ಅಗ್ನೌ । ಋತಂ । ಇತ್ । ವದೇಮ । ಮಹತ್ । ದೇವಾನಾಂ । ಅಸುರऽತ್ವಂ । ಏಕಂ ॥

ಸಾಯಣಭಾಷ್ಯಂ

ಹೇ ಅಗ್ನೇ ಮೇ ಮಮ ಪುರುತ್ರಾ ಬಹವಃ ಕಾಮಾ ಅಭಿಲಾಷಾ ವಿ ಪತಯಂತಿ । ವಿವಿಧಂ ಗಚ್ಛಂತಿ । ಶಮ್ಯಗ್ನಿಷ್ಟೋಮಾದಿಲಕ್ಷಣಂ ಕರ್ಮಾಚ್ಛಾಭಿಲಕ್ಷ್ಯಾಹಂ ಪೂರ್ವ್ಯಾಣಿ ಪುರಾತನಾನಿ ಸ್ತೋತ್ರಾಣಿ ತದರ್ಥಂ ದೀದ್ಯೇ । ದೀಪಯಾಮಿ । ಪಶ್ಚಾದ್ಯಜ್ಞಾರ್ಥಮಗ್ನೌ ಸಮಿದ್ಧೇ ದೀಪ್ಯಮಾನೇ ಸತ್ಯೇ ಋತಮಿತ್ ಸತ್ಯಮೇವ ವದೇಮ । ಅನೃತವಚನೇ ಹಿ ಯಜ್ಞೋ ವೈಗುಣ್ಯಂ ಸ್ಯಾದಿತಿ ॥ ಪುರುತ್ರಾ । ದೇವಮನುಷ್ಯಪುರುಷೇತ್ಯಾದಿನಾ ತ್ರಾಪ್ರತ್ಯಯಃ । ಪತಯಂತಿ । ಪತ್ಲೃ ಗತೌ । ಸ್ವಾರ್ಥಿಕೋ ಣಿಚ್ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಎಲೈ ಅಗ್ನಿಯೇ) **ಮೇ**—ನನ್ನ । **ಪುರುತ್ರಾ**—ಅನೇಕವಿಧವಾದ । **ಕಾಮಾಃ**—ಅಭಿಲಾಷೆಗಳು । **ವಿ ಪತಯಂತಿ**—ನಾನಾವಿಧವಾಗಿ ಪ್ರಸರಿಸುತ್ತವೆ । **ಶಮಿ**—ಅಗ್ನಿಷ್ಟೋಮಾದಿ ರೂಪವಾದ ಕರ್ಮವನ್ನು । **ಅಚ್ಛ**—ಉದ್ದೇಶಿಸಿ । **ಪೂರ್ವ್ಯಾಣಿ**—ಪುರಾತನಗಳಾದ ಸ್ತೋತ್ರಗಳನ್ನು । **ದೀದ್ಯೇ**—ಪ್ರಕಾಶಪಡಿಸಿ ಪಠಿಸುತ್ತೇನೆ । **ಅಗ್ನೌ**—ಅಗ್ನಿಯು । **ಸಮಿದ್ಧೇ**—(ಯಜ್ಞಾರ್ಥವಾಗಿ) ಪ್ರಜ್ವಲಿತವಾದಾಗ । **ಋತೇಮಿತ್**—ಸತ್ಯವಾಕ್ಯನ್ನೇ । **ವದೇಮ**—ಉಚ್ಚರಿಸುತ್ತೇವೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ

ಭಾವಾರ್ಥ

ಎಲೈ ಅಗ್ನಿಯೇ, ನನ್ನ ಅನೇಕವಿಧವಾದ ಅಭಿಲಾಷೆಗಳು ನಾನಾವಿಧವಾಗಿ ಪ್ರಸರಿಸುತ್ತವೆ. ಅಗ್ನಿಷ್ಟೋಮಾದಿರೂಪವಾದ ಕರ್ಮಾರ್ಥವಾಗಿ ಪುರಾತನಗಳಾದ ಸ್ತೋತ್ರಗಳನ್ನು ಪ್ರಕಾಶಪಡಿಸಿ ಪಠಿಸುತ್ತೇನೆ. ಯಜ್ಞಾರ್ಥವಾಗಿ ಅಗ್ನಿಯು ಪ್ರಜ್ವಲಿತನಾದಾಗ ಸತ್ಯವಾಕ್ಯನ್ನೇ ಉಚ್ಚರಿಸುತ್ತೇವೆ ದೇವತೆಗಳ ಪ್ರಾಬಲ್ಯವು ಮಹತ್ತಾದುದೂ ಅಸಾಧಾರಣವಾದುದೂ ಆಗಿದೆ.

English Translation

Variously do my manifold desires alight : present at the solemnity, I recite ancient (hymns) : when the fire is kindled we speak indeed the truth, for great and unequalled is the might of the gods.

ವಿಶೇಷವಿಷಯಗಳು

**ಶಮಿ ಅಚ್ಛ ಪೂರ್ವ್ಯಾಣಿ ದೀದ್ಯೇ—ಅಗ್ನಿಷ್ಟೋಮಾದಿಲಕ್ಷಣಂ ಕರ್ಮ ಅಭಿಲಕ್ಷ್ಯ ಅಹಂ ಪುರಾತನಾನಿ ಸ್ತೋತ್ರಾಣಿ ತದರ್ಥಂ ದೀಪಯಾಮಿ** । ಶಮಿ ಎಂಬ ಶಬ್ದವು (ನಿ. ೩-೨) ಕರ್ಮನಾಮಗಳಲ್ಲಿ ಉಕ್ತವಾಗಿದೆ. ಸಾಯಣರು ಅಗ್ನಿಷ್ಟೋಮವೇ ಮೊದಲಾದ ಯಜ್ಞಕರ್ಮಗಳೆಂದು ಅರ್ಥವನ್ನು ವರ್ಣಿಸಿದ್ದಾರೆ. ಯಜಮಾನನು ಅಗ್ನಿಯನ್ನು ಸಂಬೋಧಿಸಿ ತನ್ನ ಬಹಳವಾದ ಅಭಿಲಾಷೆಗಳು ನೆರವೇರುವುದಕ್ಕಾಗಿ ಸ್ತುತಿಗಳನ್ನು ಪಠಿಸುವನೆಂದೂ, **ಅನೃತವಚನೇ ಹಿ ಯಜ್ಞೇ ವೈಗುಣ್ಯಂ ಸ್ಯಾದಿತಿ ಋತಮಿತ್ ಸತ್ಯಮೇವ ವದೇಮ** ಯಜ್ಞವು ನಡೆಯುತ್ತಿರುವ ಕಾಲದಲ್ಲಿ ಅಸತ್ಯವನ್ನು ಹೇಳುವುದಾದರೆ ಯಜ್ಞವು ಸಮಗ್ರವಾದ ಫಲಜನಕವಾಗುವುದಿಲ್ಲವಾದುದರಿಂದ ಅಥವಾ ನ್ಯೂನತೆಯಿಂದ ಕೂಡಿದ್ದಾಗುವುದರಿಂದ ಸತ್ಯವಾದ ವಚನವನ್ನು ಹೇಳುವನೆಂದೂ ವಿವರಿಸಿ, ಯಜಮಾನನ ಸ್ತುತಿಗಳನ್ನು ಶ್ರವಣಮಾಡಿದ ಅಗ್ನಿಯು ಅವನ ಕೋರಿಕೆಗಳೆಲ್ಲವನ್ನೂ ನೆರವೇರಿಸುವಂತಹ ಮುಖ್ಯವಾದ ಮತ್ತು ಅಸಾಧಾರಣವಾದ ಮಹಿಮೆಯುಳ್ಳವನೆಂದೂ ವರ್ಣಿತವಾಗಿದೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸಮಾನೋ ರಾಜಾ ವಿಭೃತಃ ಪುರುತ್ರಾ ಶಯೇ ಶಯಾಸು ಪ್ರಯುತೋ ವನಾನು ।
ಅನ್ಯಾ ವತ್ಸಂ ಭರತಿ ಕ್ಷೇತಿ ಮಾತಾ ಮಹದ್ದೇವಾನಾಮಸುರತ್ವಮೇಕಂ॥೪॥

ಪದಪಾಠಃ

ಸಮಾನಃ । ರಾಜಾ । ವಿಽಭೃತಃ । ಪುರುಽತ್ರಾ । ಶಯೇ । ಶಯಾಸು । ಪ್ರಽಯುತಃ । ವನಾ । ಅನು ।
ಅನ್ಯಾ । ವತ್ಸಂ । ಭರತಿ । ಕ್ಷೇತಿ । ಮಾತಾ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೪ ॥

ಸಾಯಣಭಾಷ್ಯಂ

ಸಮಾನಃ ಸಾಧಾರಣಃ ಸರ್ವೇಷಾಂ । ಯದ್ವಾ । ಏಕ ಏವ ರಾಜಾ ದೀಪ್ಯಮಾನೋಽಗ್ನಿಃ ಪುರುತ್ರಾ ಬಹುಷು ದೇಶೇಷು ವಿಭೃತೋಽಗ್ನಿಹೋತ್ರಾರ್ಥಂ ವಿಹೃತೋ ಭವತಿ । ಯದ್ವಾ । ರಾಜಾಭಿಷುತಃ ಸೋಮಃ ಸರ್ವೇಷು ದೇಶೇಷು ಯಜ್ಞಾರ್ಥಂ ವಿಹೃತೋ ಭವತಿ । ಸ ಚಾಗ್ನಿಃ ಸೋಮೋ ವಾ ಶಯಾಸು ಶೇರತೇ ಹವಿರಾದಯಃ ಪದಾರ್ಥಾ ಅತ್ರೇತಿ ಶಯಾ ವೇದ್ಯಃ । ತಾಸು ಶಯೇ । ಶೇತೇ । ನಿವಸತಿ । ವನಾನು ಅನುವನಂ ವನೇಷ್ವರಣಿರೂಪೇಷು ಕಾಷ್ಠೇಷು ಪ್ರಯುತೋ ವಿಭಕ್ತೋಽಗ್ನಿರ್ವರ್ತತೇ । ಸೋಮಶ್ಚೇದ್ವನೇಷು ಚಮಸೇಷು ವಿಭಕ್ತೋ ವರ್ತತೇ । ತಸ್ಯ ದ್ವೇ ಮಾತರೌ ದ್ಯಾವಾಪೃಥಿವ್ಯೌ । ತಯೋರನ್ಯಾ ದ್ಯೌರಸ್ಯ ಭೂಮೇರ್ಜಾಯಮಾನತಯಾ ವತ್ಸಂ ವತ್ಸಭೂತಮಗ್ನಿಂ ಸೋಮಂ ವಾ ಭರತಿ । ವೃಷ್ಟ್ಯಾದಿರೂಪೇಣ ಭರತಿ । ಪೋಷಯತಿ । ಮಾತಾ ವಸುಧಾ ಕ್ಷೇತಿ । ಕೇವಲಂ ನಿವಾಸಯತಿ ॥ ವಿಭೃತಃ । ಹೃಞ್ ಹರಣೇ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಪುರುತ್ರಾ । ಅಧಿಕರಣೇ ತ್ರಾಪ್ರತ್ಯಯಃ । ಶಯೇ । ಶೀಙ್ ಸ್ವಪ್ನೇ । ಲೋಪಸ್ತ ಇತಿ ತಕಾರಲೋಪಃ । ಶೀಙಃ ಸಾರ್ವಧಾತುಕೇ ಗುಣಃ । ಶಯಾಸು । ಶೀಙ್ ಸ್ವಪ್ನೇ । ಏರಜಿತ್ಯಧಿಕರಣೇಽಚ್ । ಭರತಿ । ಭೃಞ್ ಭರಣೇ । ಭೂವಾದಿಃ । ಏಕಾನ್ಯಾಭ್ಯಾಂ ಸಮರ್ಥಾಭ್ಯಾಮಿತಿ ಪೂರ್ವಸ್ಯ ನ ನಿಘಾತಃ । ಕ್ಷೇತಿ । ಕ್ಷಿ ನಿವಾಸಗತ್ಯೋರಿತ್ಯಸ್ಯ ಲಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥

ಪ್ರತಿಪದಾರ್ಥ

ಸಮಾನಃ—ವಿಶ್ವಕ್ಕೆಲ್ಲಾ ಸಾಧಾರಣನಾದವನೂ (ಏಕಮಾತ್ರ ಪ್ರಭುವಾದವನೂ) । ರಾಜಾ—ಪ್ರಕಾಶಮಾನನೂ ಆದ ಅಗ್ನಿಯು । ಪುರುತ್ರಾ—ಅನೇಕ ಪ್ರದೇಶಗಳಲ್ಲಿ । ವಿಭೃತಃ—(ಯಜ್ಞಾರ್ಥವಾಗಿ) ಒಯ್ಯಲ್ಪಡುತ್ತಾನೆ । ಶಯಾಸು—ಯಜ್ಞವೇದಿಕೆಗಳಲ್ಲಿ । ಶಯೇ—ಸ್ಥಾಪಿತನಾಗುತ್ತಾನೆ । ವನಾನು—ಅರಣಿರೂಪವಾದ ಕಾಷ್ಠಗಳಲ್ಲಿ । ಪ್ರಯುತಃ—ವಿಭಕ್ತನಾಗಿದ್ದಾನೆ । ಅನ್ಯಾ—(ದ್ಯಾವಾಪೃಥಿವಿಗಳಲ್ಲಿ) ಒಂದಾದ ದ್ಯುಲೋಕವು । ವತ್ಸಂ—ಪುತ್ರಪ್ರಾಯನಾದ ಅಗ್ನಿಯನ್ನು । ಭರತಿ—ಪೋಷಿಸುತ್ತದೆ । ಮಾತಾ—ಮಾತೃರೂಪಿಯಾದ ಪೃಥ್ವಿಯು ।

CC-0. Jangamwadi Math Collection. Digitized by eGangotri

**ಕ್ಷೇತಿ**—ವಾಸಿಸಲು ಅವಕಾಶವನ್ನು ಕೊಡುತ್ತದೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

### ಭಾವಾರ್ಥ

ವಿಶ್ವಕ್ಕೆಲ್ಲಾ ಏಕಮಾತ್ರಪ್ರಭುವಾದವನೂ, ಪ್ರಕಾಶಮಾನನೂ ಆದ ಅಗ್ನಿಯು ಅನೇಕ ಪ್ರದೇಶಗಳಲ್ಲಿ ಯಜ್ಞಾರ್ಥವಾಗಿ ಒಯ್ಯಲ್ಪಡುತ್ತಾನೆ ಮತ್ತು ಯಜ್ಞವೇದಿಕೆಗಳಲ್ಲಿ ಸ್ಥಾಪಿತನಾಗುತ್ತಾನೆ. ಅರಣಿರೂಪವಾದ ಕಾಷ್ಠಗಳಲ್ಲಿ ವಿಭಕ್ತವಾಗಿ ಅಡಗಿದ್ದಾನೆ. ದ್ಯಾವಾಪೃಥಿವಿಗಳಲ್ಲಿ ಒಂದಾದ ದ್ಯುಲೋಕವು ಪುತ್ರಪ್ರಿಯನಾದ ಅಗ್ನಿಯನ್ನು ಪೋಷಿಸುತ್ತದೆ ಮಾತೃರೂಪಿಯಾದ ಪೃಥ್ವಿಯು ವಾಸಿಸಲು ಅವಕಾಶವನ್ನು ಕೊಡುತ್ತದೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿರುತ್ತದೆ.

### English Translation

The universal sovereign is conveyed to many directions : he sleeps in the places of repose : he is connected with the forests : one mother (heaven) nourishes the child ; the other (earth) gives him a dwelling : great and unequalled is the might of the gods.

### ವಿಶೇಷವಿಷಯಗಳು

**ಸಮಾನಃ ರಾಜಾ ಪುರುತ್ರಾ ವಿಭೃತಃ**–**ಸರ್ವೇಷಾಂ ಸಾಧಾರಣಃ ದೀಪ್ಯಮಾನೋ ಅಗ್ನಿಃ ಬಹುಷು ದೇಶೇಷು ಅಗ್ನಿಹೋತ್ರಾರ್ಥಂ ವಿಹೃತೋ ಭವತಿ** । ಎಲ್ಲರಿಂದಲೂ ನ್ಯೂನಾಧಿಕಭಾವವಿಲ್ಲದಿರುವಹಾಗೆ ಪರಿಗಣಿತನಾಗಿರುವವನೂ ಮತ್ತು ಪ್ರಭೂತವಾದ ಕಾಂತಿಯಿಂದ ಬೆಳಗುತ್ತಿರುವವನೂ ಆದ ಅಗ್ನಿಯು ಅನೇಕ ದೇಶಗಳಲ್ಲಿ ಯಜಮಾನರು ಆಚರಿಸುವ ಅಗ್ನಿಹೋತ್ರಾದಿಕರ್ಮಗಳು ನೆರವೇರುವುದಕ್ಕಾಗಿ ವಿಹರಿಸುತ್ತಾನೆ ಎಂದು ಒಂದು ವಿಧವಾದ ಅರ್ಥವು ಉಕ್ತವಾಗಿದೆ.

ಎರಡನೆಯ ಅರ್ಥದಲ್ಲಿ ರಾಜಶಬ್ದವು ಸೋಮ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಸೋಮನು (ಅಗ್ನಿಯೂ ಸಹ) ಒಬ್ಬನೇ ಆಗಿದ್ದರೂ ಏಕಕಾಲದಲ್ಲಿ ನಾನಾವಿಧವಾಗಿರುವ ಯಾಗಗಳಲ್ಲಿ ಹಿಂಡಲ್ಪಟ್ಟದ್ದಾಗಿ ಋತ್ವಿಜರೆಲ್ಲರಿಗೂ ಸಾಧಾರಣವಾಗಿರುವುದು. ಆದುದರಿಂದ ಎಲ್ಲಾ ದೇಶಗಳಲ್ಲಿಯೂ ಯಜ್ಞಕ್ಕಾಗಿ ಉಪಯುಕ್ತವಾಗಿದೆ ಎಂದು ವಿವೃತವಾಗಿದೆ.

**ಶಯಾಸು**—**ಶೇರತೇ ಹವಿರಾದಯಃ ಪದಾರ್ಥಾಃ ಅತ್ರ** । ಹವಿಸ್ಸಿನ ರೂಪದಿಂದ ಇರುವ ಪದಾರ್ಥಗಳೂ ಮತ್ತು ಇತರ ಪದಾರ್ಥಗಳೂ ಇರಿಸಲ್ಪಡುವ ಯಜ್ಞವೇದಿಕೆಗಳು ಎಂದು ವರ್ಣಿತವಾಗಿದೆ. ಅಗ್ನಿಯೂ ಮತ್ತು ಈ ಸೋಮನೂ ಕೂಡ ಯಜ್ಞವೇದಿಕೆಗಳಲ್ಲಿ ಋತ್ವಿಜರೇ ಮೊದಲಾದವರಿಂದ ಸ್ಥಾಪಿತರಾಗುತ್ತಾರೆ.

ಅಗ್ನಿಯು **ವನಾ ನು ಪ್ರಯುತಃ**—ಅರಣಿರೂಪದಿಂದ ಇರುವ ಮರದ ತುಂಡಿನಲ್ಲಿ ಪ್ರತ್ಯೇಕವಾಗಿರುತ್ತಾನೆ. ಹೀಗೆಯೇ ಸೋಮವೂ ಕೂಡ **ವನೇಷು ಚಮಸೇಷು ವಿಭಕ್ತಃ ವರ್ತತೇ**—ಯಜ್ಞದಲ್ಲಿ ಉಪಯುಕ್ತನಾಗುವ ಚಮಸ ಎಂಬ ಪಾತ್ರೆಯಲ್ಲಿ ಪ್ರತ್ಯೇಕವಾಗಿ ಇರುವಂತೆ ಇರಿಸಲ್ಪಡುತ್ತದೆ.

CC-0. Jangamwadi Math Collection. Digitized by eGangotri

**ಸಮಾನಃ ರಾಜಾ ಪುರುತ್ರಾ ವಿಧೃತಃ ಶಯೋಸು ಶೇರತೇ ।** ಎಂಬ ಈ ಎರಡು ವಾಕ್ಯಗಳಿಂದಲೂ ಅಗ್ನಿ ಮತ್ತು ಸೋಮ ಇವರಿಬ್ಬರಿಗೂ ಇರತಕ್ಕ ಸಮಾನವಾದ ಧರ್ಮವನ್ನು ಹೇಳಿರುವುದರಿಂದ ಸಾದೃಶವು ಗಮ್ಯವಾಗಿರುತ್ತದೆ. ಯಾಸ್ಕರು ವನ ಶಬ್ದವನ್ನು ರಶ್ಮಿನಾಮಗಳಲ್ಲಿ (ನಿ. ೨-೧೫) ಪಾಠಮಾಡಿದ್ದಾರೆ. ಸಾಯಣರು ಅರಣಿ, ಚಮಸ ಎಂಬ ಅರ್ಥವನ್ನು ವಿವರಿಸಿದ್ದಾರೆ. ಅಗ್ನಿಗೂ, ಸೋಮನಿಗೂ ದ್ಯಾವಾಪೃಥಿವಿಗಳು ಮಾತೃವಿನ ಕಾರ್ಯವನ್ನು ಆಚರಿಸುತ್ತಿರುವರು.

**ಅನ್ಯಾ ವತ್ಸಂ ಭರತಿ—ದ್ಯೌಃ ಅನ್ಯಾಃ ಭೂಮೇಃ ಜಾಯಮಾನತಯಾ ವತ್ಸಭೂತಮಗ್ನಿಂ ಸೋಮಂ ವಾ ಪೋಷಯತಿ ।** ದ್ಯುಲೋಕವು ಭೂಮಿಯಲ್ಲಿ ಉತ್ಪನ್ನವಾಗುವ ಸೋಮನನ್ನೂ, ಅರಣಿಗಳಿಂದ ಉತ್ಪನ್ನನಾಗುವ ಅಗ್ನಿಯನ್ನೂ ಮಗುವನ್ನು ಪೋಷಿಸುವ ಹಾಗೆ ಉದಕಗಳನ್ನು ವೃಷ್ಟಿಯ ರೂಪದಿಂದ ಒದಗಿಸಿ ಪೋಷಿಸುವುದು

**ಮಾತಾ ಕ್ಷೇತಿ—ವಸುಧಾ ನಿವಾಸಯತಿ ।** ಭೂಮಿಯು ಇವರಿಬ್ಬರಿಗೂ ಸುಖವಾಗಿರುವ ಹಾಗೆ ವಾಸಸ್ಥಾನವನ್ನು ಕಲ್ಪಿಸಿಕೊಡುವುದು. ಉತ್ಪನ್ನಮಾಡುವುದು, ವಾಸಸ್ಥಾನವನ್ನು ಕಲ್ಪಿಸಿಕೊಡುವುದು ಎಂಬಿವೆರಡೂ ಮಾತೃವಿನ ಕಾರ್ಯವಾಗಿರುವುದು. ಅಗ್ನಿ ಮತ್ತು ಸೋಮ ಇವೆರಡರ ವಿಷಯದಲ್ಲಿಯೂ ಈ ಕಾರ್ಯವು ಒಂದೇ ಸಮನಾಗಿರುವುದರಿಂದ ಭೂಮಿಯು ಇವರಿಬ್ಬರಿಗೂ ಮಾತೃವಾಗಿರುವುದು. ದ್ಯುಲೋಕವು ಸಹ ಪೋಷಣೆಯನ್ನು ಮಾಡಿ ವೃದ್ಧಿಗೊಳಿಸುವುದರಿಂದ ಮಾತೃವಾಗಿರುವುದು ಎಂದೂ ದೇವತೆಗಳ ಅಸಾಧಾರಣವಾದ ಪ್ರಾಬಲ್ಯವು ವರ್ಣಿತವಾಗಿದೆ.

---

ಸಂಹಿತಾಪಾಠಃ

ಆಕ್ಷಿತ್ಪೂರ್ವಾ ಸ್ವಪರಾ ಅನೂರುತ್ಸದ್ಯೋ ಜಾತಾಸು ತರುಣೀಷ್ವಂತಃ ।
ಅಂತರ್ವತೀಃ ಸುವತೇ ಅಪ್ರವೀತಾ ಮಹದ್ದೇವಾನಾಮಸುರತ್ವಮೇಕಂ ॥೫॥

ಪದಪಾಠಃ

ಆಽಕ್ಷಿತ್ । ಪೂರ್ವಾಸು । ಅಪರಾಃ । ಅನೂರುತ್ । ಸದ್ಯಃ । ಜಾತಾಸು । ತರುಣೀಷು । ಅಂತರಿತಿ ।
ಅಂತಃಽವತೀಃ । ಸುವತೇ । ಅಪ್ರಽವೀತಾಃ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೫ ॥

ಸಾಯಣಭಾಷ್ಯಂ

ಪೂರ್ವಾಸು ಜೀರ್ಣಾಸ್ವೋಷಧೀಷ್ವಾಕ್ಷಿದಾವರ್ತಮಾನಸ್ತಥಾಪರಾ ನವ್ಯಾ ಓಷಧೀರನೂರುಧ-ನುರುಂಧನ್ ಉತ್ಪತ್ತ್ಯನುಗುಣ್ಯೇನಾನುತಿಷ್ಠನ್ನಗ್ನಿಃ ಸೂರ್ಯೋ ವಾ ಸದ್ಯೋ ಜಾತಾಸು ತದಾನೀ-ಮುತ್ಪನ್ನಾಸು ತರುಣೀಷು ಪಲ್ಲವಿತಾಸ್ವೋಷಧೀಷ್ವಂತರ್ವರ್ತತೇ । ತಾ ಓಷಧಯೋಽಪ್ರವೀತಾಃ

CC-0. Jangamwadi Math Collection. Digitized by eGangotri

ಕೇನಾಪಿ ಪುರುಷೇಣಾನಿಷಿಕ್ತರೇತಸ್ಕಾ ಅನಭ್ಯಕ್ತಾ ವಾ ಅಂತರ್ವರ್ತೀರಗ್ನಿನಾ ಗರ್ಭವತ್ಯೋ ಭೂತ್ವಾ ಸುವತೇ । ಫಲಂ ಪುಷ್ಪಂ ಚೋತ್ಪಾದಯಂತಿ । ತದಿದಂ ದೇವಾನಾಮೈಶ್ವರ್ಯಂ ॥ ಆಕ್ಷಿತ್ । ಕ್ಷಿ ನಿವಾಸಗತ್ಯೋಃ । ಕ್ವಿಪ್ । ಅನೂರುಥ್ । ಅನೌ ರುಧ ಕಾಮೇ । ಅಸ್ಮಾತ್ ಕ್ವಿಪ್ । ಅನ್ಯೇಷಾಮಪಿ ದೃಶ್ಯತೆ ಇತಿ ದೀರ್ಘಃ । ಕೃತ್ಸ್ವರಃ । ತರುಣೀಷು । ನಞ್ಸ್ನಞೀಕಕ್ಖ್ಯುಂಸ್ತರುಣತಲುನಾನಾಮುಪಸಂಖ್ಯಾನಂ । ಪಾ. ೪-೧-೧೫-೩ । ಇತಿ ಙೀಪ್ । ಅಂತರ್ವತೀಃ । ಝಯ ಇತಿ ಮತುಪೋ ವತ್ವಂ । ಸುವತೇ । ಷೂಙ್ ಪ್ರಾಣಿಗರ್ಭವಿಮೋಚನ ಇತ್ಯಸ್ಯ ಲಟಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ಪೂರ್ವಾಸು**—ಪುರಾತನಗಳಾದ ಓಷಧಿಗಳಲ್ಲಿ । **ಆಕ್ಷಿತ್**—ವ್ಯಾಪಿಸಿದ್ದ ಅಗ್ನಿಯು । **ಅಪರಾಃ**—ನೂತನಗಳಾದ ಓಷಧಿಗಳಲ್ಲಿ । **ಅನೂರುಥ್**—ಪ್ರವೇಶಿಸುತ್ತಾನೆ (ಅನಂತರ)। **ಸದ್ಯೋ ಜಾತಾಸು**—ಆಗತಾನೆ ಉತ್ಪನ್ನಗಳಾದ। **ತರುಣೀಷು**-ಪಲ್ಲವರೂಪವಾದ ಓಷಧಿಗಳಲ್ಲಿ । **ಅಂತಃ**-ಪ್ರವೇಶಿಸುತ್ತಾನೆ । **ಅಪ್ರವೀತಾಃ**-ಪುರುಷಸಂಪರ್ಕವಿಲ್ಲದಿದ್ದರೂ ಸಹ । **ಅಂತರ್ವತೀಃ**—ಗರ್ಭವನ್ನು ಧರಿಸತಕ್ಕ ಆ ಓಷಧಿಗಳು । **ಸುವತೇ**—ಪುಷ್ಪಾದಿಗಳನ್ನು ಧರಿಸುತ್ತವೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿರುತ್ತದೆ.

ಭಾವಾರ್ಥ

ಪುರಾತನಗಳಾದ ಓಷಧಿಗಳಲ್ಲಿ ವ್ಯಾಪಿಸಿದ್ದ ಅಗ್ನಿಯು ನೂತನಗಳಾದ ಓಷಧಿಗಳಲ್ಲಿ ಅಂತರ್ಭೂತನಾಗುತ್ತಾನೆ. ಪುರುಷಸಂಪರ್ಕವಿಲ್ಲದಿದ್ದರೂ ಸಹ ಗರ್ಭವತಿಯರಾಗುವ ಆ ಓಷಧಿಗಳು ಪುಷ್ಪಗಳನ್ನೂ, ಫಲಗಳನ್ನೂ ಧರಿಸುತ್ತವೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿರುತ್ತದೆ.

English Translation

Existing in ancient plants, abiding afterwards in new, he enters into the young (herbs) as soon as they are produced : unimpregnated they become pregnant and bear fruit : great and unequalled is the might of the gods.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ **ಪೂರ್ವಾಸು. ಅಪರಾಃ, ಜಾತಾಸು, ತರುಣೀಷು, ಅಂತರ್ವತೀಃ** ಎಂಬುದಾಗಿ ಸ್ತ್ರೀಲಿಂಗವಾದ ಪದಗಳು ಪ್ರಯುಕ್ತವಾಗಿವೆ **ಅಕ್ಷಿತ್ ಅನೂರುಥ್** ಎಂಬ ಕ್ರಿಯಾಪದಗಳೂ ಪ್ರಯುಕ್ತವಾಗಿವೆ. ಪ್ರಪಂಚದ ಅಭಿವೃದ್ಧಿಯನ್ನು ಸಂತತವಾಗಿರುವಂತೆ ಕಾರ್ಯಗಳನ್ನು ಆಚರಿಸುತ್ತಿರುವ ಅಗ್ನಿಯ ಅಥವಾ ಸೂರ್ಯನ ಮಹಾತ್ಮ್ಯವನ್ನು ವರ್ಣಿಸುವುದರಲ್ಲಿ ಉಕ್ತವಾಗಿರುವ ಪದಗಳ ಸಮಭಿವ್ಯಾಹಾರದಿಂದ ಲೋಕದಲ್ಲಿ ಸಂಸಾರ ಯಾತ್ರೆಯನ್ನು ನಿರ್ವಹಿಸುವ ಗೃಹಸ್ಥನ ಅಥವಾ ಕಾಮುಕನ ವೃತ್ತಾಂತವು ಆರೋಪಿತವಾಗಿ ಕಾವ್ಯಶೈಲಿಯಿಂದ ಉಕ್ತವಾಗಿದೆ.

ಕಾಮುಕನಾದ ಪುರುಷನು ವೃದ್ಧಳಾದ ಸ್ತ್ರೀಯನ್ನು ತ್ಯಾಗಮಾಡುವಹಾಗೆ ಅಗ್ನಿಯು **ಪೂರ್ವಾಸು ಆಕ್ಷಿತ್ ಜೀರ್ಣಾಸು ಓಷಧೀಷು ಆವರ್ತಮಾನಃ** ಬಹಳ ಹಳೆಯದಾಗಿ ವಣಗುತ್ತಿರುವ ಓಷಧಿಗಳನ್ನು ತ್ಯಾಗ

CC-0. Jangamwadi Math Collection. Digitized by eGangotri

ಮಾಡುವನು **ಅಪರಾಃ ಅನುರುತ್**— ನವ್ಯಾಃ ಓಷಧೀಃ ಉತ್ಪತ್ತ್ಯಾನುಗುಣ್ಯೇನ ಅನು ತಿಷ್ಠನ್—ಹೊಸದಾಗಿ ಬೆಳೆಯುತ್ತಿರುವ ಕಾಂತಿಯುಳ್ಳ ಎಳೆಯ ಮೂಲಿಕೆಗಳನ್ನು ಅವುಗಳ ಬೆಳವಣಿಗೆಗೆ ಅನುರೂಪವಾಗಿರುವಂತೆ ಅನುಸರಿಸುವನು. ಇದರಿಂದಲೂ ಕಾಮುಕನ ವ್ಯವಹಾರವು ಗಮ್ಯವಾಗಿದೆ.

**ಜಾತಾಸು ತರುಣೀಷು ಅಂತಃ**—ಇದಾನೀಂ ಉತ್ಪನ್ನಾಸು ಪಲ್ಲವಿತಾಸು ಓಷಧೀಷು ಅಂತಃ **ವರ್ತತೇ** । ಆಗ ತಾನೇ ಉತ್ಪನ್ನವಾಗಿರುವ ಹೊಸದಾದ ಚಿಗುರುಗಳಿಂದ ಕೂಡಿರುವ ಮೂಲಿಕೆಗಳಲ್ಲಿ ಅವುಗಳು ವೃದ್ಧಿಯಾಗುವಂತೆ ಅವುಗಳ ಒಳಭಾಗದಲ್ಲಿ ಇರುತ್ತಾ, ಪೋಷಕನಾಗಿರುವನು ಎಂದು ಓಷಧಿಗಳ ಉತ್ಪತ್ತಿ, ಸ್ಥಿತಿ, ಲಯಗಳಿಗೆ ಅಗ್ನಿಯು ಕಾರಣನಾಗಿರುವನೆಂದು ಅಗ್ನಿಯ ಮಹತ್ತ್ವವು ಉಕ್ತವಾಗಿದೆ.

ಆದರೆ ಮೂಲಿಕೆಗಳು ಮಾತ್ರ ಲೋಕದಲ್ಲಿರುವ ಸ್ತ್ರೀಯರಂತೆ ಪುರುಷಸಂಬಂಧವಿಲ್ಲದಿದ್ದರೂ ಪುಷ್ಪಫಲಾದಿಗಳನ್ನು ಹೊಂದುವುವು ಎಂದು ಈ ಪ್ರಕಾರವಾದ ನಿರ್ಮಾಣವು ದೇವಕೃತವಾಗಿರುವುದರಿಂದ ದೇವತೆಗಳ ಪ್ರಾಬಲ್ಯವು ಅಸಾಧಾರಣವಾಗಿರುವುದೆಂದು ವರ್ಣಿಸಿದೆ.



ಸಂಹಿತಾಪಾಠಃ

ಶಯುಃ ಪರಸ್ತಾದಧ ನು ದ್ವಿಮಾತಾಬಂಧನಶ್ಚರತಿ ವತ್ಸ ಏಕಃ ।
ಮಿತ್ರಸ್ಯ ತಾ ವರುಣಸ್ಯ ವ್ರತಾನಿ ಮಹದ್ದೇವಾನಾಮಸುರತ್ವಮೇಕಂ ॥ ೬ ॥

ಪದಪಾಠಃ

ಶಯುಃ । ಪರಸ್ತಾತ್ । ಅಧ । ನು । ದ್ವಿಽಮಾತಾ । ಅಬಂಧನಃ । ಚರತಿ । ವತ್ಸಃ । ಏಕಃ ।
ಮಿತ್ರಸ್ಯ । ತಾ । ವರುಣಸ್ಯ । ವ್ರತಾನಿ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೬ ॥

ಸಾಯಣಭಾಷ್ಯಂ

**ದ್ವಿಮಾತಾ** । ಹೇ ದ್ಯಾವಾಪೃಥಿವ್ಯೌ ಮಾತರೌ ಯಸ್ಯ ಸ ದ್ವಿಮಾತಾ । ಯದ್ವಾ । ದ್ಯುಯೋ-ಲೋಕಯೋರ್ನಿರ್ಮಾತಾ ಸೂರ್ಯಃ ಪರಸ್ತಾತ್ಪಶ್ಚಿಮಾಯಾಂ ದಿಶ್ಯಸ್ತವೇಲಾಯಾಂ ಶಯುಃ ಶಯಾ-ನೋಽವ್ಯಾಪ್ರಿಯಮಾಣೋ ಭವತಿ । ಅಧ ನು ಅಥೋದಯವೇಲಾಯಾಮೇಕೋ ದ್ಯಾವಾಪೃಥಿವ್ಯೋಃ ಸಾಧಾರಣಸ್ತಯೋ ರಸಾದಾನಾದ್ವತ್ಸಃ ಪುತ್ರೋಽಬಂಧನೋಽಪ್ರತಿಬದ್ಧಗತಿರನಾಲಂಬನ ಏಕಃ ಸನ್ ಚರತಿ । ನಭಸಿ ಗಚ್ಛತಿ । ತಾ ತಾನೀಮಾನಿ ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋರ್ವ್ರತಾನಿ ಕರ್ಮಾಣಿ॥ ಶಯುಃ । ಶೀಙ್ ಸ್ವಪ್ನೇ । ಭೃಮೃಶೀತೃಚರೀತ್ಯಾದಿನಾ ಉಪ್ರತ್ಯಯಃ । ದ್ವಿಮಾತಾ । ನದ್ಯೃತಶ್ಚೇತಿ ಪ್ರಾಪ್ತಸ್ಯ ಕಪ ಋತಶ್ಛಂದಸೀತಿ ಪ್ರತಿಷೇಧಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ದ್ವಿಮಾತಾ**—ದ್ಯಾವಾಪೃಥಿವಿಗಳೆರಡನ್ನೂ ಮಾತೃವಾಗಿ ಪಡೆದಿರುವ ಆದಿತ್ಯನು । **ಪರಸ್ತಾತ್**—ಪಶ್ಚಿಮ ದಿಕ್ಕಿನಲ್ಲಿ । **ಶಯುಃ**—ಸ್ಥಾಪಿತನಾಗಿದ್ದಾನೆ । **ಅಧ ನು**—ಅನಂತರ (ಉದಯಕಾಲದಲ್ಲಿ) । **ಏಕಃ**—(ದ್ಯಾವಾ ಪೃಥಿವಿಗಳೆರಡಕ್ಕೂ) ಸಮಾನವಾದ । **ವತ್ಸಃ**—ಪುತ್ರನು (ಆದಿತ್ಯನು) । **ಅಬಂಧನಃ**—ತಡೆಯಿಲ್ಲದ ಗಮನವುಳ್ಳವ ನಾಗಿ । **ಚರತಿ**—ಅಂತರಿಕ್ಷದಲ್ಲಿ ಸಂಚರಿಸುತ್ತಾನೆ । **ತಾ**—(ಆದಿತ್ಯನ) ಈ ಗಮನಾಗಮನಗಳೆಲ್ಲಾ । **ಮಿತ್ರಸ್ಯ**—ಮಿತ್ರನ (ಮತ್ತು) । **ವರುಣಸ್ಯ**—ವರುಣನ । **ವ್ರತಾನಿ**—ಕರ್ಮಗಳು । **ದೇವಾನಾಂ**-ದೇವತೆಗಳ । **ಅಸುರತ್ವಂ**-ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

### ಭಾವಾರ್ಥ

ದ್ಯಾವಾಪೃಥಿವಿಗಳೆರಡನ್ನೂ ಮಾತೃವಾಗಿ ಪಡೆದಿರುವ ಆದಿತ್ಯನು ಪಶ್ಚಿಮದಿಕ್ಕಿನಲ್ಲಿ ಸ್ಥಾಪಿತನಾಗಿದ್ದಾನೆ. ಅನಂತರ ಉದಯಕಾಲದಲ್ಲಿ ದ್ಯಾವಾಪೃಥಿವಿಗಳೆರಡಕ್ಕೂ ಸಮಾನನಾದ ಪುತ್ರನು (ಆದಿತ್ಯನು) ತಡೆಯಿಲ್ಲದ ಗಮನ ವುಳ್ಳವನಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ ಆದಿತ್ಯನ ಈ ಗಮನಾಗಮನಗಳೆಲ್ಲವೂ ಮಿತ್ರಾವರುಣರ ಕರ್ಮಗಳು. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿದೆ

### English Translation

The child of two mothers sleeps in the west, but (in the morning) the single infant proceeds unobstructed (through the sky) : these are the function[5] of Mitra and Varuna : great and unequalled is the might of the gods.

### ವಿಶೇಷವಿಷಯಗಳು

**ದ್ವಿಮಾತಾ ಪರಸ್ತಾತ್ ಶಯುಃ**—**ದ್ವೇ ದ್ಯಾವಾಪೃಥಿವ್ಯೌ ಮಾತರೌ ಯಸ್ಯ ಸಃ । ಯದಾ ದ್ವಯೋರ್ಲೋಕಯೋಃ ನಿರ್ಮಾತಾ** । ಸೂರ್ಯನು ದ್ಯಾವಾಪೃಥಿವಿಗಳೆರಡನ್ನೂ ಮಾತೃವನ್ನಾಗಿ ಹೊಂದಿರು ವನು. ಈ ದ್ಯಾವಾಪೃಥಿವಿಗಳು ಪ್ರಪಂಚವೆಲ್ಲಕ್ಕೂ ಅವಕಾಶವನ್ನು ಅನುಗ್ರಹಿಸಿರುವುದರಿಂದ ಸೂರ್ಯನಿಗೂ ಮಾತೃಗಳಾಗಿರುವರೆಂದು ಉಕ್ತವಾಗಿದೆ. ಅಥವಾ ಸೂರ್ಯನು ಭೂಮಿ ಮತ್ತು ಅಂತರಿಕ್ಷ ಎಂಬ ಎರಡು ಲೋಕಗಳ ರಕ್ಷಣೆಯನ್ನು ಮಾಡುವವನಾದುದರಿಂದ ಎರಡು ಲೋಕಗಳಿಗೂ ನಿರ್ಮಾತೃವಾಗಿರುವನೆಂದೂ ಎರಡನೆಯ ಅರ್ಥ ವನ್ನು ವರ್ಣಿಸಿದೆ. ಈ ಸೂರ್ಯನು ಅಸ್ತನಾಗುವ ಕಾಲದಲ್ಲಿ ತನ್ನ ರಶ್ಮಿಗಳ ಪ್ರಸರಣವು ಇಲ್ಲದಿರುವವನಾಗುವನು ಎಂಬ ಅರ್ಥವು **ಶಯುಃ ಶಯಾನಃ** ಎಂಬ ಪದಗಳಿಂದ ಉಕ್ತವಾಗಿದೆ

**ಏಕಃ ಅಬಂಧನಃ ವತ್ಸಃ ಚರತಿ**—ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿರು ವರು. ಮೊದಲನೆಯದಾಗಿ **ದ್ಯಾವಾಪೃಥಿವ್ಯೋಃ ಸಾಧಾರಣಃ ತಯೋಃ ರಸಾದಾನಾತ್ ಪುತ್ರಃ ಅಪ್ರತಿಬದ್ಧ-ಗತಿಃ ನಭಸಿ ಚರತಿ** । ಸೂರ್ಯನು ಭೂಮ್ಯಂತರಿಕ್ಷಗಳಲ್ಲಿರುವ ಉದಕಗಳನ್ನು ಹೀರುವವನಾದುದರಿಂದ ದ್ಯಾವಾಪೃಥಿವಿ ಗಳೆಂಬ ಇಬ್ಬರ ವಿಷಯದಲ್ಲಿಯೂ ಸಮವಾದ ವರ್ತನೆಯಿಂದ ಇರುವನು ಎಂದೂ, ಈ ಸೂರ್ಯನು ಅಂತರಿಕ್ಷದಲ್ಲಿ



CC-0. Jangamwadi Math Collection. Digitized by eGangotri

ಯಾವ ತಡೆಯೂ ಇಲ್ಲದಿರುವವನಾಗಿ ಸಂಚರಿಸುತ್ತಿರುವನು ಎಂದೂ ಅರ್ಥವು ವಿವೃತವಾಗಿದೆ. ಎರಡನೆಯ ಅರ್ಥದಲ್ಲಿ ಈ ಸೂರ್ಯನು ಅನಾಲಂಬನಃ ಯಾವ ಆಶ್ರಯವೂ ಇಲ್ಲದವನಾಗಿ (ಕೆಳಗೆ ಬೀಳದಂತೆ) ಅಂತರಿಕ್ಷದಲ್ಲಿ ತಾನು ಒಬ್ಬನೇ ಸಂಚರಿಸುವನು ಎಂದು ವರ್ಣಿಸಿದೆ.

ದ್ಯಾವಾಪೃಥಿವಿಗಳು ಸೂರ್ಯನ ಮಾತೃತ್ವವನ್ನು ವರ್ಣಿಸಿರುವುದು, ಸೂರ್ಯನು ಅಸ್ತನಾಗುವಾಗ ತನ್ನ ರಶ್ಮಿಗಳ ಪ್ರಸರಣವಿಲ್ಲದೆ ಕಾಂತಿಹೀನನಾಗುವುದು, ದ್ಯಾವಾಪೃಥಿವಿಗಳ ರಸವನ್ನು (ಹಾಲನ್ನು ಪಾನಮಾಡುವಂತೆ) ಹೀರುವುದರಿಂದ ಪುತ್ರಭಾವವನ್ನು ಹೊಂದಿರುವುದು, ಅಂತರಿಕ್ಷದಲ್ಲಿ ತಡೆಯು ಇಲ್ಲದಂತೆಯೂ, ಯಾವ ಆಶ್ರಯವೂ ಇಲ್ಲದೆಯೂ ಸಂಚರಿಸುವುದು ಎಂಬ ಈ ಕಾರ್ಯಗಳೆಲ್ಲವೂ ಮಿತ್ರಾವರುಣರ ಕಾರ್ಯಗಳಾಗಿರುತ್ತವೆ ಎಂದೂ, ಈ ದೇವತೆಗಳ ಪ್ರಾಬಲ್ಯವು ಮಹತ್ತ್ವಪೂರಿತವಾಗಿ ಮುಖ್ಯವಾದುದಾಗಿರುವುದೆಂದೂ ವರ್ಣಿಸಿದೆ.

ಸಂಹಿತಾಪಾಠಃ

ದ್ವಿಮಾತಾ ಹೋತಾ ವಿದಥೇಷು ಸಮ್ರಾಳನ್ವಗ್ರಂ ಚರತಿ ಕ್ಷೇತಿ ಬುಧ್ನಃ ।

ಪ್ರ ರಣ್ಯಾನಿ ರಣ್ಯವಾಚೋ ಭರಂತೇ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ದ್ವಿಮಾತಾ । ಹೋತಾ । ವಿದಥೇಷು । ಸಮ್ಽರಾಟ್ । ಅನು । ಅಗ್ರಂ । ಚರತಿ । ಕ್ಷೇತಿ । ಬುಧ್ನಃ ।

ಪ್ರ । ರಣ್ಯಾನಿ । ರಣ್ಯಽವಾಚಃ । ಭರಂತೇ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೭ ॥

ಸಾಯಣಭಾಷ್ಯಂ

ದ್ವಿಮಾತಾ ದ್ವಯೋರ್ಲೋಕಯೋರ್ನಿರ್ಮಾತಾ ವಿದಥೇಷು ಯಜ್ಞೇಷು ಹೋತಾ ದೇವಾನಾಮಾಹ್ವಾತಾ ಸಮ್ರಾಟ್ ಯಜ್ಞೇಷು ಸಮ್ಯಗ್ರಾಜಮಾನೋಽಗ್ನಿರನ್ವಗ್ರಮುಗ್ರೇ ದಿವಿ ಚರತಿ । ಸೂರ್ಯಭೂತಸ್ತತ್ರ ವರ್ತತೇ । ಬುಧ್ನಃ ಸರ್ವಸ್ಯ ಕರ್ಮಣೋ ಮೂಲಭೂತಃ ಸನ್ ಕ್ಷೇತಿ । ಭೂಮೌ ವಸತಿ । ಯದ್ವಾ । ಅಗ್ರಂ ಮುಖ್ಯಂ ಭಾಗಂ ಚರತಿ । ಭಕ್ಷಯತಿ । ಕ್ಷೇತಿ । ಯಜ್ವನಾಂ ಗೃಹೇಷು ನಿವಸತಿ । ಯದ್ವಾ । ಬುಧ್ನಃ ಪ್ರತಿಷ್ಠಾಂತೇಭಾಗೀ ಸ್ವಿಷ್ಟಕೃದ್ರೂಪೇಣ । ಪ್ರತಿಷ್ಠಾ ವೈ ಸ್ವಿಷ್ಟಕೃದಿತಿ ಶ್ರುತೇಃ । ಕಿಂಚ ರಣ್ಯವಾಚೋ ರಮಣೀಯವಾಚಃ ಸ್ತೋತಾರೋ ರಣ್ಯಾನಿ ರಮಣೀಯಾನಿ ಸ್ತೋತ್ರಾಣಿ ಪ್ರ ಭರಂತೇ । ಪ್ರಣಯಂತಿ । ಕುರ್ವಂತಿ । ತದಿದಂ ದೇವಾನಾಮೈಶ್ವರ್ಯಂ । ಚರತಿ । ಚಾದಿಲೋಪ ಇತಿ ನ ನಿಘಾತಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ದ್ವಿಮಾತಾ**—ದ್ಯಾವಾಪೃಥಿವಿಗಳೆರಡನ್ನೂ ಮಾತೃವಾಗಿ ಪಡೆದಿರುವ ಆದಿತ್ಯನು । **ಪರಸ್ತಾತ್**—ಪಶ್ಚಿಮ ದಿಕ್ಕಿನಲ್ಲಿ । **ಶಯುಃ**—ಸ್ಥಾಪಿತನಾಗಿದ್ದಾನೆ । **ಅಥ ನು**—ಅನಂತರ (ಉದಯಕಾಲದಲ್ಲಿ) । **ಏಕಃ**—(ದ್ಯಾವಾಪೃಥಿವಿಗಳೆರಡಕ್ಕೂ) ಸಮಾನವಾದ । **ವತ್ಸಃ**—ಪುತ್ರನು (ಆದಿತ್ಯನು) । **ಅಬಂಧನಃ**—ತಡೆಯಿಲ್ಲದ ಗಮನವುಳ್ಳವನಾಗಿ । **ಚರತಿ**—ಅಂತರಿಕ್ಷದಲ್ಲಿ ಸಂಚರಿಸುತ್ತಾನೆ । **ತಾ**—(ಆದಿತ್ಯನ) ಈ ಗಮನಾಗಮನಗಳೆಲ್ಲಾ । **ಮಿತ್ರಸ್ಯ**—ಮಿತ್ರನ (ಮತ್ತು) । **ವರುಣಸ್ಯ**—ವರುಣನ । **ವ್ರತಾನಿ**—ಕರ್ಮಗಳು । **ದೇವಾನಾಂ**-ದೇವತೆಗಳ । **ಅಸುರತ್ವಂ**-ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

ಭಾವಾರ್ಥ

ದ್ಯಾವಾಪೃಥಿವಿಗಳೆರಡನ್ನೂ ಮಾತೃವಾಗಿ ಪಡೆದಿರುವ ಆದಿತ್ಯನು ಪಶ್ಚಿಮದಿಕ್ಕಿನಲ್ಲಿ ಸ್ಥಾಪಿತನಾಗಿದ್ದಾನೆ. ಅನಂತರ ಉದಯಕಾಲದಲ್ಲಿ ದ್ಯಾವಾಪೃಥಿವಿಗಳೆರಡಕ್ಕೂ ಸಮಾನನಾದ ಪುತ್ರನು (ಆದಿತ್ಯನು) ತಡೆಯಿಲ್ಲದ ಗಮನವುಳ್ಳವನಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಆದಿತ್ಯನ ಈ ಗಮನಾಗಮನಗಳೆಲ್ಲವೂ ಮಿತ್ರಾವರುಣರ ಕರ್ಮಗಳು. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿದೆ.

English Translation

The child of two mothers sleeps in the west, but (in the morning) the single infant proceeds unobstructed (through the sky) : these are the functions of Mitra and Varuna : great and unequalled is the might of the gods.

ವಿಶೇಷವಿಷಯಗಳು

**ದ್ವಿಮಾತಾ ಪರಸ್ತಾತ್ ಶಯುಃ**—**ದ್ವೇ ದ್ಯಾವಾಪೃಥಿವ್ಯೌ ಮಾತರೌ ಯಸ್ಯ ಸಃ । ಯದಾ ದ್ವಯೋರ್ಲೋಕಯೋಃ ನಿರ್ಮಾತಾ ।** ಸೂರ್ಯನು ದ್ಯಾವಾಪೃಥಿವಿಗಳೆರಡನ್ನೂ ಮಾತೃವನ್ನಾಗಿ ಹೊಂದಿರುವನು. ಈ ದ್ಯಾವಾಪೃಥಿವಿಗಳು ಪ್ರಪಂಚವೆಲ್ಲಕ್ಕೂ ಅವಕಾಶವನ್ನು ಅನುಗ್ರಹಿಸಿರುವುದರಿಂದ ಸೂರ್ಯನಿಗೂ ಮಾತೃಗಳಾಗಿರುವರೆಂದು ಉಕ್ತವಾಗಿದೆ. ಅಥವಾ ಸೂರ್ಯನು ಭೂಮಿ ಮತ್ತು ಅಂತರಿಕ್ಷ ಎಂಬ ಎರಡು ಲೋಕಗಳ ರಕ್ಷಣೆಯನ್ನು ಮಾಡುವವನಾದುದರಿಂದ ಎರಡು ಲೋಕಗಳಿಗೂ ನಿರ್ಮಾತೃವಾಗಿರುವನೆಂದೂ ಎರಡನೆಯ ಅರ್ಥವನ್ನು ವರ್ಣಿಸಿದೆ. ಈ ಸೂರ್ಯನು ಅಸ್ತನಾಗುವ ಕಾಲದಲ್ಲಿ ತನ್ನ ರಶ್ಮಿಗಳ ಪ್ರಸರಣವು ಇಲ್ಲದಿರುವವನಾಗುವನು ಎಂಬ ಅರ್ಥವು ಶಯುಃ ಶಯಾನಃ ಎಂಬ ಪದಗಳಿಂದ ಉಕ್ತವಾಗಿದೆ

**ಏಕಃ ಅಬಂಧನಃ ವತ್ಸಃ ಚರತಿ**—ಈ ವಾಕ್ಯಕ್ಕೆ ಸಾಯಣರು ಎರಡು ವಿಧವಾದ ಅರ್ಥವನ್ನು ವಿವರಿಸಿರುವರು. ಮೊದಲನೆಯದಾಗಿ **ದ್ಯಾವಾಪೃಥಿವ್ಯೋಃ ಸಾಧಾರಣಃ ತಯೋಃ ರಸಾದಾನಾತ್ ಪುತ್ರಃ ಅಪ್ರತಿಬದ್ಧ-ಗತಿಃ ನಭಸಿ ಚರತಿ ।** ಸೂರ್ಯನು ಭೂಮ್ಯಂತರಿಕ್ಷಗಳಲ್ಲಿರುವ ಉದಕಗಳನ್ನು ಹೀರುವವನಾದುದರಿಂದ ದ್ಯಾವಾಪೃಥಿವಿಗಳೆಂಬ ಇಬ್ಬರ ವಿಷಯದಲ್ಲಿಯೂ ಸಮವಾದ ವರ್ತನೆಯಿಂದ ಇರುವನು ಎಂದೂ, ಈ ಸೂರ್ಯನು ಅಂತರಿಕ್ಷದಲ್ಲಿ



CC-0. Jangamwadi Math Collection. Digitized by eGangotri

ಯಾವ ತಡೆಯೂ ಇಲ್ಲದಿರುವವನಾಗಿ ಸಂಚರಿಸುತ್ತಿರುವನು ಎಂದೂ ಅರ್ಥವು ವಿವೃತವಾಗಿದೆ. ಎರಡನೆಯ ಅರ್ಥದಲ್ಲಿ ಈ ಸೂರ್ಯನು ಅನಾಲಂಬನಃ ಯಾವ ಆಶ್ರಯವೂ ಇಲ್ಲದವನಾಗಿ (ಕೆಳಗೆ ಬೀಳದಂತೆ) ಅಂತರಿಕ್ಷದಲ್ಲಿ ತಾನು ಒಬ್ಬನೇ ಸಂಚರಿಸುವನು ಎಂದು ವರ್ಣಿಸಿದೆ.

ದ್ಯಾವಾಪೃಥಿವಿಗಳು ಸೂರ್ಯನ ಮಾತೃತ್ವವನ್ನು ವರ್ಣಿಸಿರುವುದು, ಸೂರ್ಯನು ಅಸ್ತನಾಗುವಾಗ ತನ್ನ ರಶ್ಮಿಗಳ ಪ್ರಸರಣವಿಲ್ಲದೆ ಕಾಂತಿಹೀನನಾಗುವುದು, ದ್ಯಾವಾಪೃಥಿವಿಗಳ ರಸವನ್ನು (ಹಾಲನ್ನು ಪಾನಮಾಡುವಂತೆ) ಹೀರುವುದರಿಂದ ಪುತ್ರಭಾವವನ್ನು ಹೊಂದಿರುವುದು, ಅಂತರಿಕ್ಷದಲ್ಲಿ ತಡೆಯು ಇಲ್ಲದಂತೆಯೂ, ಯಾವ ಆಶ್ರಯವೂ ಇಲ್ಲದೆಯೂ ಸಂಚರಿಸುವುದು ಎಂಬ ಈ ಕಾರ್ಯಗಳೆಲ್ಲವೂ ಮಿತ್ರಾವರುಣರ ಕಾರ್ಯಗಳಾಗಿರುತ್ತವೆ ಎಂದೂ, ಈ ದೇವತೆಗಳ ಪ್ರಾಬಲ್ಯವು ಮಹತ್ತ್ವಪೂರಿತವಾಗಿ ಮುಖ್ಯವಾದುದಾಗಿರುವುದೆಂದೂ ವರ್ಣಿಸಿದೆ.

ಸಂಹಿತಾಪಾಠಃ

ದ್ವಿಮಾತಾ ಹೋತಾ ವಿದಥೇಷು ಸಮ್ರಾಳನ್ವಗ್ರಂ ಚರತಿ ಕ್ಷೇತಿ ಬುಧ್ನಃ ।
ಪ್ರ ರಣ್ಯಾನಿ ರಣ್ಯವಾಚೋ ಭರಂತೇ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ದ್ವಿಽಮಾತಾ । ಹೋತಾ । ವಿದಥೇಷು । ಸಮ್ಽರಾಟ್ । ಅನು । ಅಗ್ರಂ । ಚರತಿ । ಕ್ಷೇತಿ । ಬುಧ್ನಃ ।
ಪ್ರ । ರಣ್ಯಾನಿ । ರಣ್ಯಽವಾಚಃ । ಭರಂತೇ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೭ ॥

ಸಾಯಣಭಾಷ್ಯಂ

ದ್ವಿಮಾತಾ ದ್ವಯೋರ್ಲೋಕಯೋರ್ನಿರ್ಮಾತಾ ವಿದಥೇಷು ಯಜ್ಞೇಷು ಹೋತಾ ದೇವಾನಾಮಾಹ್ವಾತಾ ಸಮ್ರಾಟ್ ಯಜ್ಞೇಷು ಸಮ್ಯಗ್ರಾಜಮಾನೋಽಗ್ನಿರನ್ವಗ್ರಮಗ್ರೇ ದಿವಿ ಚರತಿ । ಸೂರ್ಯಭೂತಸ್ತತ್ರ ವರ್ತತೇ । ಬುಧ್ನಃ ಸರ್ವಸ್ಯ ಕರ್ಮಣೋ ಮೂಲಭೂತಃ ಸನ್ ಕ್ಷೇತಿ । ಭೂಮೌ ವಸತಿ । ಯದ್ವಾ । ಅಗ್ರಂ ಮುಖ್ಯಂ ಭಾಗಂ ಚರತಿ । ಭಕ್ಷಯತಿ । ಕ್ಷೇತಿ । ಯಜ್ವನಾಂ ಗೃಹೇಷು ನಿವಸತಿ । ಯದ್ವಾ । ಬುಧ್ನಃ ಪ್ರತಿಷ್ಠಾಂತೇಭಾಗೀ ಸ್ವಿಷ್ಟಕೃದ್ರೂಪೇಣ । ಪ್ರತಿಷ್ಠಾ ವೈ ಸ್ವಿಷ್ಟಕೃದಿತಿ ಶ್ರುತೇಃ । ಕಿಂಚ ರಣ್ಯವಾಚೋ ರಮಣೀಯವಾಚಃ ಸ್ತೋತಾರೋ ರಣ್ಯಾನಿ ರಮಣೀಯಾನಿ ಸ್ತೋತ್ರಾಣಿ ಪ್ರ ಭರಂತೇ । ಪ್ರಣಯಂತಿ । ಕುರ್ವಂತಿ । ತದಿದಂ ದೇವಾನಾಮೈಶ್ವರ್ಯಂ । ಚರತಿ । ಚಾದಿಲೋಪ ಇತಿ ನ ನಿಘಾತಃ ॥

CC-0. Jangamwadi Math Collection. Digitized by eGangotri

ತಸ್ಯ ಶತರಿ ರೂಪಂ । ಅಂತಮಸ್ಯ । ಅಂತಶಬ್ದಾದತ ಇನಿತನಾಪಿತಿ ಠನ್ । ಅತಿಶಯೇನಾಂತಿಕ ಇತ್ಯರ್ಥೇ ತಮಪ್ । ತಮೇಃ ತಾದೇಶ್ಚೇತಿ ತಾದಿಲೋಪಃ । ನಿತ್ತ್ವಾದಾದ್ಯುದಾತ್ತಃ । ಪ್ರತೀಚೀನಂ । ಪ್ರತಿಪೂರ್ವಸ್ಯಾಂಚತೇಃ ಕ್ವಿನ್ । ತಸ್ಮಾದ್ವಿಭಾಷಾಂಚೇರದಿಕ್‌ಸ್ತ್ರಿಯಾಮಿತಿ ಖಃ । ಈನಾದೇಶಃ । ಪ್ರತ್ಯಯಸ್ವರಃ । ಆಯತ್ । ಯಾ ಪ್ರಾಪಣ ಇತ್ಯಸ್ಯಾಙ್‌ಪೂರ್ವಸ್ಯ ಶತರಿ ರೂಪಂ ಆಙ್‌ಪೂರ್ವಸ್ಯ ಅಯ ಪಯ ಗತಾವಿತ್ಯಸ್ಯ ಶತರಿ ರೂಪಂ ವೇತಿ ವ್ಯುತ್ಪತ್ತ್ಯನವಧಾರಣಾದನವಗ್ರಹಃ ॥

### ಪ್ರತಿಪದಾರ್ಥ

**ಅಂತಮಸ್ಯ**—ಸಮೀಪದಲ್ಲಿರುವ ದಾವಾಗ್ನಿಯ । **ಆಯತ್**—ಅಭಿಮುಖವಾಗಿ ಹೋಗತಕ್ಕ । **ವಿಶ್ವಂ**—ಸಕಲ ಭೂತಜಾತಗಳೂ ಸಹ । **ಯುಧ್ಯತಃ**—ಯುದ್ಧಮಾಡತಕ್ಕ । **ಶೂರಸ್ಯೇವ**—ಶೂರನನ್ನು ನೋಡಿ ಬೆನ್ನು ತಿರುಗಿಸಿಕೊಂಡು ಶತ್ರುಸೈನ್ಯಗಳು ಓಡುವಂತೆ । **ಪ್ರತೀಚೀನಂ**—ಪರಾಙ್ಮುಖಿಗಳಾಗಿ । **ದದೃಶೇ**—ಕಾಣಿಸಿಕೊಳ್ಳುತ್ತವೆ । **ಮತಿಃ**—ಸಕಲರಿಂದಲೂ ತಿಳಿಯಲ್ಪಡುವ ಅಗ್ನಿಯು । **ಗೋಃ**—ಉದಕದ । **ನಿಷ್ಷಿಧಂ**—ಕಾಂತಿಯುತವಾದ । **ಅಂತಃ**—ಅಂತರ್ಭಾಗದಲ್ಲಿ । **ಚರತಿ**—ಸಂಚರಿಸುತ್ತಾನೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

### ಭಾವಾರ್ಥ

ಸಮೀಪದಲ್ಲಿರುವ ದಾವಾಗ್ನಿಗೆ ಅಭಿಮುಖವಾಗಿ ಹೋಗತಕ್ಕ ಸಕಲ ಭೂತಜಾತಗಳೂ ಸಹ ಯುದ್ಧಮಾಡತಕ್ಕ ಶೂರನನ್ನು ನೋಡಿ ಶತ್ರುಸೈನ್ಯಗಳು ಬೆನ್ನುತಿರುಗಿಸಿಕೊಂಡು ಓಡುವಂತೆ ಪರಾಙ್ಮುಖಿಗಳಾಗಿ ಕಾಣಿಸಿಕೊಳ್ಳುತ್ತವೆ. ಸಕಲರಿಂದಲೂ ತಿಳಿಯಲ್ಪಡುವ ಅಗ್ನಿಯು ಉದಕದ ಕಾಂತಿಯುತವಾದ ಅಂತರ್ಭಾಗದಲ್ಲಿ ಸಂಚರಿಸುತ್ತಾನೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿದೆ.

### English Translation

All (creatures) approaching too near his confines are beheld with their faces turned away as (an enemy) flies from a combatant : obvious (to all), he penetrates the water for its destruction : great and unequalled is the might of the gods.

### ವಿಶೇಷವಿಷಯಗಳು

**ಅಂತಮಸ್ಯ**—ಸಮೀಪೇ ವರ್ತಮಾನಸ್ಯ । ಈ ಪದವು ವಿಶೇಷಣವಾಗಿ ಪ್ರಯುಕ್ತವಾಗಿದೆ. ಸಾಯಣರು ಉಪಮಾನವಾಕ್ಯದ ಅರ್ಥವನ್ನು ಅನುಸರಿಸಿ ವಿಶೇಷ್ಯಪದವು ದಾವಾಗ್ನಿಯಾಗಿರುವುದು ಎಂದು ವರ್ಣಿಸಿದ್ದಾರೆ. **ಶೂರಸ್ಯ ಯುಧ್ಯತಃ ಆಯತ್ ವಿಶ್ವಂ ಪ್ರತೀಚೀನಂ ದದೃಶೇ**—**ಯಥಾ ಯುದ್ಧಂ ಕುರ್ವಾಣಸ್ಯ ಶೂರಸ್ಯ ಸಮರ್ಥಸ್ಯ ರಾಜ್ಞಃ ಅಭಿಮುಖಮಾಗಚ್ಛತ್ ಭೂತಜಾತಂ ಪರಬಲಂ ಪರಾಙ್ಮುಖಂ ದೃಶ್ಯತೇ**—ಯುದ್ಧವನ್ನು ಮಾಡುತ್ತಿರುವ ರಾಜನನ್ನು ಎದುರಿಸುವುದಕ್ಕಾಗಿ ಬಂದ ಶತ್ರುಸೈನ್ಯವು ರಾಜನ ಸಾಮರ್ಥ್ಯದಿಂದ ಹಿಂತಿರುಗುವ ಹಾಗೆ **ಸಮೀಪೇ ವರ್ತಮಾನಸ್ಯ ದಾವಾಗ್ನೇಃ ವಿಶ್ವಂ ಪ್ರತೀಚೀನಂ ದದೃಶೇ**—ಚೆನ್ನಾಗಿ ಹತ್ತಿ

CC-0. Jangamwadi Math Collection. Digitized by eGangotri

ಕೊಂಡು ಉರಿಯುತ್ತಿರುವ ಕಾಡುಗಿಚ್ಚನ್ನು ಎದುರಿಸಲು ಬಂದವರೆಲ್ಲರೂ ಅದನ್ನು ಆರಿಸಲಾರದೆ ಹಿಂತಿರುಗಿ ಹೋಗುವರು ಎಂದು ದಾವಾಗ್ನಿಯ ಮಹತ್ತ್ವವು ಅಸಾಧಾರಣವಾಗಿರುವುದೆಂದು ವರ್ಣಿಸಿದೆ.

**ಮತಿಃ** ಎಂಬ ಪದವು **ಸರ್ವೈಃ ಜ್ಞಾಯಮಾನಃ**—ಅಗ್ನಿಯು ತನ್ನ ಸ್ವಭಾವಗುಣದಿಂದಲೇ ಎಲ್ಲರಿಂದಲೂ ತಿಳಿಯಲ್ಪಟ್ಟಿದ್ದಾನೆ ಎಂದು ವಿವೃತವಾಗಿದೆ. ಈ ಅಗ್ನಿಯು **ಗೋಃ ನಿಷ್ಷಿಧಂ ಅಂತಶ್ಚರತಿ**–**ಉದಕಸ್ಯ ಹಿಂಸಿಕಾಂ ದೀಪ್ತಿಂ ಅಂತರ್ಧಾರಯತಿ**-ಉದಕಗಳನ್ನು ಹೀರುವ ಪ್ರಭೂತವಾದ ಕಾಂತಿಯನ್ನು (ಸಾಮರ್ಥ್ಯವನ್ನು) ಉದಕಗಳ ಮಧ್ಯದಲ್ಲಿಯೂ ಧರಿಸಿದ್ದಾನೆ ಎಂದು ಔರ್ವಾಗ್ನಿಯು (ಔರ್ವಾಗ್ನಿ ಎಂದರೆ ಭೂಮಿಯಲ್ಲಿರುವ ಅಗ್ನಿ) ಸಂಕ್ಷೇಪವಾದ ರೀತಿಯಿಂದ ವರ್ಣಿತನಾಗಿದ್ದಾನೆ. ಇದರಿಂದ ದಾವಾಗ್ನಿಯೂ, ಔರ್ವಾಗ್ನಿಯೂ ಈ ಋಕ್ಕಿನಲ್ಲಿ ಸಂಕ್ಷೇಪವಾದ ರೀತಿಯಿಂದ ವರ್ಣಿತರಾಗಿದ್ದಾರೆ. ಈ ಪ್ರಕಾರದಿಂದ ಇರುವ ದೇವತೆಗಳ ಪ್ರಭೂತವಾದ ಪ್ರಾಬಲ್ಯವು ಅಸಾಧಾರಣವಾಗಿರುವುದು ಎಂದು ವರ್ಣಿತವಾಗಿದೆ.

---

ಸಂಹಿತಾಪಾಠಃ

ನಿ ವೇವೇತಿ ಪಲಿತೋ ದೂತ ಆಸ್ವಂತರ್ಮಹಾಂಶ್ಚರತಿ ರೋಚನೇನ ।
ವಪೂಂಷಿ ಬಿಭ್ರದಭಿ ನೋ ವಿ ಚಷ್ಟೇ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ನಿ । ವೇವೇತಿ । ಪಲಿತಃ । ದೂತಃ । ಆಸು । ಅಂತಃ । ಮಹಾನ್ । ಚರತಿ । ರೋಚನೇನ ।
ವಪೂಂಷಿ । ಬಿಭ್ರತ್ । ಅಭಿ । ನಃ । ವಿ । ಚಷ್ಟೇ । ಮಹತ್ । ದೇವಾನಾಂ । ಅಸುರ್ತ್ವಂ । ಏಕಂ ॥೯॥

ಸಾಯಣಭಾಷ್ಯಂ

**ಪಲಿತಃ ಪಾಲಯಿತಾ ಪೂರ್ಣೋ ವಾ ದೇವಾನಾಂ ದೂತೋಽಗ್ನಿರಾಸ್ವೋಷಧೀಷು ನಿ ವೇವೇತಿ। ನಿತರಾಂ ವ್ಯಾಪ್ಯ ವರ್ತತೇ । ಮಹಾನ್ ಸೋಽಗ್ನೀ ರೋಚನೇನ ಸೂರ್ಯೇಣ ಸಹಾಂತಾ ರೋದಸ್ಯೋರ್ಮಧ್ಯೇ ಚರತಿ । ವಪೂಂಷಿ ನಾನಾವಿಧಾನಿ ರೂಪಾಣಿ ಬಿಭ್ರತ್ ಸೋಽಗ್ನಿರ್ನೋಽಸ್ಮಾನ್ ಯಷ್ಟೄನಭಿ ವಿ ಚಷ್ಟೇ । ವಿಶೇಷೇಣಾನುಗ್ರಹದೃಷ್ಟ್ಯಾ ಪಶ್ಯತಿ ॥ ವೇವೇತಿ । ವೀ ಗತ್ಯಾದಿಷು । ಯಙ್ಲುಕಿ ಈಡಭಾವೇ ರೂಪಂ । ರೋಚನೇನ । ಸಹಾರ್ಥೇ ತೃತೀಯಾ । ಬಿಭ್ರತ್ । ಡುಭೃಞ್ ಧಾರಣಪೋಷಣಯೋರಿತ್ಯಸ್ಯ ಶತರಿ ರೂಪಂ । ಅಭ್ಯಸ್ತಸ್ವರಃ ॥**

ಪ್ರತಿಪದಾರ್ಥ

**ಪಲಿತಃ**—ಪೂರ್ಣಾತ್ಮನೂ । **ದೂತಃ**—ದೇವದೂತನೂ ಆದ ಅಗ್ನಿಯು । **ಆಸು**—ಈ ಓಷಧಿಗಳಲ್ಲಿ । **ನಿ ವೇವೇತಿ**—ವ್ಯಾಪಿಸಿದ್ದಾನೆ । **ಮಹಾನ್**—ಮಹಾತ್ಮನಾದ ಅಗ್ನಿಯು । **ರೋಚನೇನ**—ಪ್ರಕಾಶಮಾನನಾದ

CC-0. Jangamwadi Math Collection. Digitized by eGangotri

ಸೂರ್ಯಾತ್ಮನಾಗಿ । **ಅಂತಃ**—ದ್ಯಾವಾಪೃಥಿವಿಗಳ ನಡುವೆ । **ಚರತಿ**—ಸಂಚರಿಸುತ್ತಾನೆ । **ವಪೂಂಷಿ**—ನಾನಾವಿಧವಾದ ರೂಪಗಳನ್ನು । **ಬಿಭ್ರತ್**—ಧರಿಸಿರುವ ಅಗ್ನಿಯು । **ನಃ**—ಯಜ್ಞಕರ್ತರಾದ ನಮ್ಮನ್ನು । **ಅಭಿ ವಿ ಚಷ್ಟೇ**—ಅನುಗ್ರಹಾತ್ಮಕವಾದ ದೃಷ್ಟಿಯಿಂದ ನೋಡುತ್ತಾನೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

### ಭಾವಾರ್ಥ

ಪೂರ್ಣಾತ್ಮನೂ, ದೇವದೂತನೂ ಆದ ಅಗ್ನಿಯು ಈ ಓಷಧಿಗಳಲ್ಲಿ ವ್ಯಾಪಿಸಿದ್ದಾನೆ. ಮಹಾತ್ಮನಾದ ಅಗ್ನಿಯು ಪ್ರಕಾಶಮಾನನಾದ ಸೂರ್ಯಾತ್ಮನಾಗಿ ದ್ಯಾವಾಪೃಥಿವಿಗಳ ನಡುವೆ ಸಂಚರಿಸುತ್ತಾನೆ. ನಾನಾವಿಧವಾದ ರೂಪಗಳನ್ನು ಧರಿಸಿರುವ ಅಗ್ನಿಯು ಯಜ್ಞಕರ್ತರಾದ ನಮ್ಮನ್ನು ಅನುಗ್ರಹಾತ್ಮಕವಾದ ದೃಷ್ಟಿಯಿಂದ ನೋಡುತ್ತಾನೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿದೆ.

### English Translation

In those (plants) the aged messenger (of the gods) constantly abides : mighty, he passes with the radiant (sun) thorough the regions of space ; assuming various forms, he looks (complacently) upon us : great and unequalled is the might of the gods.

### ವಿಶೇಷವಿಷಯಗಳು

**ಪಲಿತಃ**— **ಪಾಲಯಿತಾ ಪೂರ್ಣೋ ವಾ** । ಅಗ್ನಿಯು ಸರ್ವರನ್ನೂ ಪಾಲನೆಮಾಡುವವನು ಅಥವಾ ಸಮಗ್ರವಾದ ಮಹಾತ್ಮ್ಯಗಳಿಂದ ಪೂರ್ಣನಾಗಿರುವನು ಎಂದು ವಿವರಿಸಿದೆ ಮತ್ತು ಅಗ್ನಿಯು ದೇವತೆಗಳನ್ನು ಹವಿಸ್ಸಿನ ಸ್ವೀಕಾರಕ್ಕಾಗಿ ಯಾಗಶಾಲೆಗೆ ಕರದುತರುವುದು ಮತ್ತು ಆಯಾಯ ದೇವತೆಗಳ ಹವಿಸ್ಸುಗಳನ್ನು ಅವರವರಿಗೆ ಒಯ್ಯುವುದು ಇವುಗಳಿಂದ **ದೇವಾನಾಂ ದೂತಃ** ದೇವತೆಗಳಿಗೆ ದೂತನಾಗಿರುವನು ಎಂದೂ ವರ್ಣಿಸಿದೆ.

**ಮಹಾನ್ ರೋಚನೇನ ಅಂತಃ ಚರತಿ** ಎಂಬ ವಾಕ್ಯದಿಂದ ಮಹತ್ತ್ವಪೂರಿತನಾದ ಅಗ್ನಿಯು ಸೂರ್ಯನ ಸಂಗಡ ದ್ಯಾವಾಪೃಥಿವಿಗಳ ಮಧ್ಯದಲ್ಲಿ ಸಂಚರಿಸುತ್ತಿರುವನು ಎಂದು ವರ್ಣಿಸಿದೆ. ಆದರೆ (ಋ. ಸಂ. ೩–೭೫–೭) ನೇ ಋಕ್ಕಿನಲ್ಲಿ ಸೂರ್ಯನ ತಾದಾತ್ಮ್ಯಪ್ರತ್ಯೇಕವಾಗಿ ಸಂಚಾರವೂ ವರ್ಣಿತವಾಗಿದೆ.

ಈ ಅಗ್ನಿಯು **ವಪೂಂಷಿ ಬಿಭ್ರತ್ ನಃ ಅಭಿ ವಿ ಚಷ್ಟೇ**—ನಾನಾ ರೂಪಗಳನ್ನು ಧರಿಸಿರುವವನಾಗಿ ಯಜಮಾನರಾದ ನಮ್ಮನ್ನು ಬಹಳವಾಗಿ ಅನುಗ್ರಹಮಾಡುವ ದೃಷ್ಟಿಯಿಂದ ನೋಡುತ್ತಿರುವನು ಎಂದೂ ವರ್ಣಿಸಿದೆ.

———:O:———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವಿಷ್ಣುರ್ಗೋಪಾಃ ಪರಮಂ ಪಾತಿ ಪಾಥಃ ಪ್ರಿಯಾ ಧಾಮಾನ್ಯಮೃತಾ ದಧಾನಃ ।

ಅಗ್ನಿಷ್ಟಾ ವಿಶ್ವಾ ಭುವನಾನಿ ವೇದ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ವಿಷ್ಣುಃ । ಗೋಪಾಃ । ಪರಮಂ । ಪಾತಿ । ಪಾಥಃ । ಪ್ರಿಯಾ । ಧಾಮಾನಿ । ಅಮೃತಾ । ದಧಾನಃ ।

ಅಗ್ನಿಃ । ತಾ । ವಿಶ್ವಾ । ಭುವನಾನಿ । ವೇದ । ಮಹತ್ । ದೇವಾನಾಂ । ಅಸುರ್ರತ್ವಂ । ಏಕಂ ॥ ೧೦ ॥

ಸಾಯಣಭಾಷ್ಯಂ

ವಿಷ್ಣುರ್ವ್ಯಾಪ್ತೋ ಗೋಪಾಃ ಸರ್ವಸ್ಯ ಗೋಪಾಯಿತಾ ಪ್ರಿಯಾ ಪ್ರಿಯತಮಾನ್ಯಮೃತಾ ಕ್ಷಯರಹಿತಾನಿ ಧಾಮಾನಿ ತೇಜಾಂಸಿ ದಧಾನಃ ಸೋಽಗ್ನಿಃ ಪರಮಂ ಪಾಥಃ ಸ್ಥಾನಂ ಪಾತಿ । ರಕ್ಷತಿ । ಯದ್ವಾ । ಧಾಮಾನಿ ಲೋಕಧಾರಕಾಣ್ಯಮೃತೋದಕಾನಿ ದಧಾನಃ ಸನ್ ಪರಮಂ ಪಾಥ ಉದಕಸ್ಯ ಸ್ಥಾನಮಂತರಿಕ್ಷಂ ಪಾತಿ । ಸೋಽಗ್ನಿಸ್ತಾ ತಾನಿ ವಿಶ್ವಾ ಸರ್ವಾಣಿ ಭುವನಾನಿ ಭೂತಜಾತಾನಿ ವೇದ । ಜಾನಾತಿ ॥ ಗೋಪಾಃ । ಗೋಪಾಯತೇಃ ಕ್ವಿಪ್ಯತೋಲೋಪಯಲೋಪೌ । ಅಗ್ನಿಷ್ಟೇತ್ಯತ್ರ ಸಂಹಿತಾಯಾಂ ಯುಷ್ಮತ್ತತ್ತತಕ್ಷುಃ ಷ್ವಂತಃ ಪಾದಮಿತಿ ಷತ್ವಂ ॥

ಪ್ರತಿಪದಾರ್ಥ

**ವಿಷ್ಣುಃ**—ಸರ್ವತ್ರ ವ್ಯಾಪಿಸರುವವನೂ । **ಗೋಪಾಃ**—ಸಕಲರನ್ನೂ ರಕ್ಷಿಸುವವನೂ । **ಪ್ರಿಯಾ**—ಪ್ರಿಯತಮವಾದುದೂ । **ಅಮೃತಾ**—ಕ್ಷಯರಹಿತವಾದುದೂ ಆದ । **ಧಾಮಾನಿ**—ತೇಜಸ್ಸುಗಳನ್ನು । **ದಧಾನಃ**—ಹೊಂದಿರುವವನೂ ಆದ ಅಗ್ನಿಯು । **ಪರಮಂ ಪಾಥಃ**—ಉತ್ತಮವಾದ ಮಾರ್ಗವನ್ನು । **ಪಾತಿ**—ರಕ್ಷಿಸುತ್ತಾನೆ । **ಅಗ್ನಿಃ**—ಅದೇ ಅಗ್ನಿಯು । **ತಾ ವಿಶ್ವಾ ಭುವನಾನಿ**—ಪ್ರಸಿದ್ಧವಾದ ಸಮಸ್ತ ಲೋಕಗಳನ್ನೂ । **ವೇದ**—ತಿಳಿಯುತ್ತಾನೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

ಭಾವಾರ್ಥ

ಸರ್ವತ್ರವ್ಯಾಪಿಸಿರುವವನೂ, ಸಕಲರನ್ನೂ ರಕ್ಷಿಸುವವನೂ, ಪ್ರಿಯತಮವಾದ ಮತ್ತು ಕ್ಷಯರಹಿತವಾದ ತೇಜಸ್ಸುಗಳನ್ನು ಹೊಂದಿರುವವನೂ ಆದ ಅಗ್ನಿಯು ಉತ್ತಮವಾದ ಮಾರ್ಗವನ್ನು ರಕ್ಷಿಸುತ್ತಾನೆ. ಅವನು ಸಮಸ್ತ ಲೋಕಗಳನ್ನೂ ಅರಿತಿದ್ದಾನೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿದೆ .

CC-0. Jangamwadi Math Collection. Digitized by eGangotri

### English Translation

Pervading and protecting (all), possesing grateful and immortal radiance, he preserves the supreme path (of the rains), for Agni knows all these worlds : great and unqueualled is the might of the gods.

### ವಿಶೇಷವಿಷಯಗಳು

ವಿಷ್ಣುಃ ಗೋಪಾಃ ಅಮೃತಾ ಧಾಮಾನಿ ದಧಾನಃ—ವ್ಯಾಪ್ತಃ ಸರ್ವಸ್ಯ ಗೋಪಾಯಿತಾ ಕ್ಷಯರಹಿತಾನಿ ತೇಜಾಂಸಿ ದಧಾನಃ । ಅಗ್ನಿಯು ಸರ್ವವನ್ನೂ ವ್ಯಾಪಿಸಿರುವವನು. ಸರ್ವರನ್ನೂ ರಕ್ಷಿಸುವವನು. ಯಾವಾಗಲೂ ಚ್ಯುತಿಯಿಲ್ಲದಿರುವ ತೇಜಸ್ಸುಗಳನ್ನು ಧರಿಸಿರುವವನು. ಎಂದು ಒಂದುವಿಧವಾದ ಅರ್ಥವನ್ನು ವರ್ಣಿಸಿದೆ. ಈ ಅರ್ಥದಲ್ಲಿ ಧಾಮಾನಿ ಎಂಬ ಪದಕ್ಕೆ ತೇಜಸ್ಸುಗಳು ಎಂದು ಅರ್ಥವನ್ನು ವಿವರಿಸಿದೆ. ಎರಡನೆಯ ಅರ್ಥದಲ್ಲಿ ಧಾಮಾನಿ ಎಂಬ ಪದಕ್ಕೆ ಲೋಕಧಾರಕಾಣಿ ಎಂದೂ, ಅಮೃತಾ ಎಂಬ ಪದಕ್ಕೆ ಉದಕಗಳೂ ಎಂದೂ ಅರ್ಥವನ್ನು ಹೇಳಿದೆ. ಇದರಿಂದ ಲೋಕಧಾರಕಾಣಿ ಉದಕಾನಿ ದಧಾನಃ ಅಗ್ನಿಃ ಉದಕಸ್ಯ ಸ್ಥಾನಮಂತರಿಕ್ಷಂ ಪಾತಿ—ಲೋಕಾಧಾರಕಗಳಾದ ಉದಕಗಳನ್ನು ಧರಿಸಿರುವ ಅಗ್ನಿಯು ಉದಕಗಳ ಸ್ಥಾನವಾದ ಅಂತರಿಕ್ಷವನ್ನು ರಕ್ಷಿಸುತ್ತಿರುವನು ಎಂದು ವಿವರಿಸಿದೆ. ಅಮೃತಶಬ್ದವು ಯಾಸ್ಕರಿಂದ ಉದಕನಾಮಗಳಲ್ಲಿ (ನಿ ೨-೨೪) ಉಕ್ತವಾಗಿದೆ.

ಸಃ ಅಗ್ನಿಃ ವಿಶ್ವಾ ಭುವನಾನಿ ವೇದ—ಸರ್ವಾಣಿ ಭೂತಜಾತಾನಿ ಜಾನಾತಿ । ಭುವನಶಬ್ದಕ್ಕೆ ಪ್ರಾಣಿಗಳು ಎಂದು ಅರ್ಥವನ್ನು ಹೇಳಿ, ಅಗ್ನಿಯು ನಾನಾವಿಧವಾಗಿರುವ ಪ್ರಾಣಿಗಳೆಲ್ಲವನ್ನೂ ತಿಳಿದಿರುವುದರಿಂದ ಸರ್ವಜ್ಞನಾಗಿರುವನು ಎಂದು ವರ್ಣಿಸಿದೆ. ಇದರಿಂದ ಜಾತವೇದಾಗ್ನಿಯು ಪ್ರಕಾರಾಂತರದಿಂದ ವರ್ಣಿತನಾಗಿರುವನು. ಹೀಗೆಯೇ ಹಿಂದಿನ ಋಕ್ಕುಗಳಲ್ಲಿ ವೈದ್ಯುತಾಗ್ನಿ, ವೈಶ್ವಾನರಾಗ್ನಿ, ದಾವಾಗ್ನಿ, ಔರ್ವಾಗ್ನಿ ಎಂದು ಅಗ್ನಿಯು ನಾನಾವಿಧದಿಂದ ಇರುವುದು ಸಂಕ್ಷೇಪವಾಗಿ ವರ್ಣಿತವಾಗಿದೆ.

———

ಸಂಹಿತಾಪಾಠಃ

ನಾನಾ ಚಕ್ರಾತೇ ಯಮ್ಯಾ೩ ವಪೂಂಷಿ ತಯೋರನ್ಯದ್ರೋಚತೇ ಕೃಷ್ಣಮನ್ಯತ್ ।

ಶ್ಯಾವೀ ಚ ಯದರುಷೀ ಚ ಸ್ವಸಾರೌ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ನಾನಾ । ಚಕ್ರಾತೇ ಇತಿ । ಯಮ್ಯಾ । ವಪೂಂಷಿ । ತಯೋಃ । ಅನ್ಯತ್ । ರೋಚತೇ । ಕೃಷ್ಣಂ । ಅನ್ಯತ್ ।

ಶ್ಯಾವೀ । ಚ । ಯತ್ । ಅರುಷೀ । ಚ । ಸ್ವಸಾರಾ । ಮಹತ್ । ದೇವಾನಾಂ । ಅಸುರತ್ವಂ । ಏಕಂ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

**ಯಮ್ಯಾ ಯಮರೂಪೇ ಮಿಥುನಭೂತೇ ಅಹಶ್ಚ ರಾತ್ರಿಶ್ಚೇತ್ಯೇತೇ ನಾನಾ ನಾನಾವಿಧಾನಿ ವಪೂಂಷಿ ಶುಕ್ಲಕೃಷ್ಣಾದೀನಿ ರೂಪಾಣಿ ಚಕ್ರಾತೇ। ಕುರುತಃ। ಶ್ಯಾವೀ ಕೃಷ್ಣವರ್ಣಾರುಷೀ ಶುಕ್ಲ-ತಯೋರೋಚಮಾನಾ ಯತ್ ಯೇ ಪರಸ್ಪರಂ ಸ್ವಸಾರೌ ಭವತಸ್ತಯೋರ್ಮಧ್ಯೇಽನ್ಯದರ್ಜುನಮಹೋ ರೋಚತೇ। ಕಿರಣಸಂಬಂಧಾದ್ದೀಪ್ಯತೇ। ಅನ್ಯದ್ರಾತ್ರಿಲಕ್ಷಣಂ ಕೃಷ್ಣಂ ತಮಸ್ಸಂಬಂಧಾತ್ ಕೃಷ್ಣವರ್ಣ-ಮಾಭಾತಿ॥ ಯಮ್ಯಾ। ಸುಪೋ ಡಾದೇಶಃ। ರೋಚತೇ। ಏಕಾನ್ಯಾಭ್ಯಾಂ ಸಮರ್ಥಾಭ್ಯಾಮಿತಿ ನ ನಿಘಾತಃ॥**

ಪ್ರತಿಪದಾರ್ಥ

**ಯಮ್ಯಾ**—ಮಿಥುನರೂಪದ ಅಹಸ್ಸೂ ಮತ್ತು ರಾತ್ರಿಯೂ। **ನಾನಾ**—ನಾನಾವಿಧವಾದ (ಶುಕ್ಲಕೃಷ್ಣಾತ್ಮಕವಾದ)। **ವಪೂಂಷಿ**—ರೂಪಗಳನ್ನು। **ಚಕ್ರಾತೇ**—ಧರಿಸಿದ್ದಾರೆ। **ಶ್ಯಾವೀ**—ಕೃಷ್ಣವರ್ಣವುಳ್ಳ ರಾತ್ರಿಯೂ। **ಅರುಷೀ**—ಪ್ರಭಾಯುತವಾದ ಅಹಸ್ಸೂ। **ಯತ್ ಸ್ವಸಾರೌ**—ಪರಸ್ಪರವಾಗಿ ಭಗನೀಭೂತರಾಗಿದ್ದಾರೆ। **ತಯೋಃ**—ಅವರಲ್ಲಿ। **ಅನ್ಯತ್**—ಅಹಸ್ಸು। **ರೋಚತೇ**—ಪ್ರಭೆಯಿಂದ ಪ್ರಕಾಶಿತವಾಗಿದೆ। **ಅನ್ಯತ್**—ರಾತ್ರಿಯು। **ಕೃಷ್ಣಂ**—ಕೃಷ್ಣವರ್ಣವನ್ನು ಧರಿಸಿದೆ। **ದೇವಾನಾಂ**—ದೇವತೆಗಳ। **ಅಸುರತ್ವಂ**—ಪ್ರಾಬಲ್ಯವು **ಮಹತ್**—ಮಹತ್ತಾದುದೂ। **ಏಕಂ**—ಅಸಾಧಾರಣವಾದುದೂ ಆಗಿದೆ.

ಭಾವಾರ್ಥ

ಮಿಥುನರೂಪದಲ್ಲಿರುವ ಅಹೋರಾತ್ರಿಗಳು ಶುಕ್ಲಕೃಷ್ಣಾತ್ಮಕವಾಗಿ ನಾನಾ ರೂಪಗಳನ್ನು ಧರಿಸಿದ್ದಾರೆ. ರಾತ್ರಿಯೂ, ಪ್ರಭಾವಯುತವಾದ ಅಹಸ್ಸೂ ಪರಸ್ಪರವಾಗಿ ಭಗಿನೀಭೂತರಾಗಿದ್ದಾರೆ. ಅವರಲ್ಲಿ ಅಹಸ್ಸು ಪ್ರಭೆಯಿಂದ ಪ್ರಕಾಶಿತವಾಗಿಯೂ, ರಾತ್ರಿಯು ಕೃಷ್ಣವರ್ಣವನ್ನು ಧರಿಸಿಯೂ ಇದೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ ಅಸಾಧಾರಣವಾದುದೂ ಆಗಿದೆ.

English Translation

The twin pair (day and night) adopt various forms : one of them shines brightly, the other is black : twin sisters are they, one black and the other white : great and unequalled is the might of the gods.

ವಿಶೇಷವಿಷಯಗಳು

**ಯಮ್ಯಾ**—**ಮಿಥುನಭೂತೇ**। ಈ ಪದವು ರಾತ್ರಿನಾಮಗಳಲ್ಲಿ (ನಿ. ೧-೭) ಉಕ್ತವಾಗಿದೆ. **ಶ್ಯಾವೀ**—**ಕೃಷ್ಣವರ್ಣಾ**। ಈ ಪದವೂ ರಾತ್ರಿನಾಮಗಳಲ್ಲಿ (ನಿ. ೧-೭) ಪಠಿತವಾಗಿದೆ. ಈ ಋಕ್ಕಿನಲ್ಲಿ ಅಹೋರಾತ್ರಿಗಳು ವರ್ಣಿತವಾಗಿವೆ. ಇವುಗಳಲ್ಲಿ ಅಹಸ್ಸೆಂಬುವುದು ಸೂರ್ಯನ ಕಿರಣಗಳ ವ್ಯಾಪ್ತಿಯಿಂದ **ಅರುಷೀ**—**ಶುಕ್ಲವರ್ಣಾ**। ಶುಭ್ರವಾಗಿರುತ್ತದೆ. ರಾತ್ರಿಯು ತಮಸ್ಸಿನ ಸಂಬಂಧದಿಂದ **ಕೃಷ್ಣಂ**-ಕಪ್ಪುಬಣ್ಣವುಳ್ಳದ್ದಾಗಿರುತ್ತದೆ. ಅಹೋರಾತ್ರಿಗಳು **ಪರಸ್ಪರಂ ಸ್ವಸಾರೌ ಭವತಃ**-ಅಹೋರಾತ್ರಿಗಳು ಒಬ್ಬರನ್ನು ಇನ್ನೊಬ್ಬರು ಹಿಂಬಾಲಿಸಿಕೊಂಡು ಇರುವುದರಿಂದ ಅಕ್ಕತಂಗಿಯರಾಗಿ ಇರುವುರೆಂದು ವರ್ಣಿಸಿದೆ. ಯಾಸ್ಕರೂ ಕೂಡ—

CC-0. Jangamwadi Math Collection. Digitized by eGangotri

ಅಹಶ್ಚ ಕೃಷ್ಣ ಮಹರರ್ಜುನಂ ಚ ವಿವರ್ತೇತೇ ರಜಸೀ ವೇದ್ಯಾಭಿಃ ।

(ಋ. ಸಂ. ೬-೯-೧)

ಎಂಬ ವಾಕ್ಯದಲ್ಲಿ ಅಹಶ್ಚ ಕೃಷ್ಣಂ ರಾತ್ರಿಃ ಶುಕ್ಲಂ ಚಾಹರರ್ಜುನಂ ಚ ವಿವರ್ತೇತೇ ರಜಸೀ ವೇದಿತವ್ಯಾಭಿಃ ಪ್ರವೃತ್ತಿಭಿಃ । ಅಹೋರಾತ್ರೆಗಳೆಂಬಿವೆರಡೂ ಶುಕ್ಲಕೃಷ್ಣವರ್ಣರೂಪಗಳಿಂದ ಬೆಳಗುತ್ತಿವೆ. ಇವುಗಳಲ್ಲಿ ಕಿರಣ ಸಂಬಂಧದಿಂದ ಶುಕ್ಲವರ್ಣದಿಂದ ಇರುತ್ತಾ ಪ್ರಾಣಿಗಳಿಗೆ ಬೆಳಕನ್ನು ಅನುಗ್ರಹಿಸುವುದು ಅಹಸ್ಸಾಗಿರುವುದು. ರಾತ್ರಿ ಎಂಬುವುದು ಕಪ್ಪುಬಣ್ಣದಿಂದ ಇರುತ್ತಾ ಪ್ರಾಣಿಗಳಿಗೆ ಅವರ ಪ್ರವೃತ್ತಿಯಲ್ಲಿ ವಿಶ್ರಾಂತಿಯನ್ನು ಉಂಟುಮಾಡುವುದು ಎಂದೂ, ರಾತ್ರಿಯು ಕಳೆಯುವುದು, ಹಗಲು ಬರುವುದು, ಹಗಲು ಕಳೆಯುವುದು, ರಾತ್ರಿಯು ಬರುವುದು ಎಂಬ ನಿಯತವಾದ ಗಮನಾಗಮನಗಳಿಂದ ಅಥವಾ ಪರಿಣಾಮದಿಂದ ಪ್ರಾಣಿಗಳಿಗೆ ಉಪಕಾರಕಗಳಾಗಿರುತ್ತವೆ ಎಂದು ವರ್ಣಿಸಿದ್ದಾರೆ. ಅಹೋರಾತ್ರರೂಪದಿಂದ ಶುಕ್ಲಕೃಷ್ಣಾತ್ಮಕವಾದ ರೂಪಗಳನ್ನು ಧರಿಸಿ ತಮ್ಮ ವಿವರ್ತನೆಗಳಿಂದ ನಾನಾರೂಪಗಳಿಂದ ಇರುವ ಅಹೋರಾತ್ರದೇವತೆಗಳ ಪ್ರಭೂತವಾದ ಪ್ರಾಬಲ್ಯವು ಅನಿರ್ವಚನೀಯವಾಗಿರುತ್ತದೆ.

---

ಸಂಹಿತಾಪಾಠಃ

ಮಾತಾ ಚ ಯತ್ರ ದುಹಿತಾ ಚ ಧೇನೂ ಸಬರ್ದುಘೇ ಧಾಪಯೇತೇ ಸಮೀಚೀ ।

ಋತಸ್ಯ ತೇ ಸದಸೀಳೇ ಅಂತರ್ಮಹದ್ದೇವಾನಾಮಸುರತ್ವಮೇಕಂ ॥ ೧೨ ॥

ಪದಪಾಠಃ

ಮಾತಾ । ಚ । ಯತ್ರ । ದುಹಿತಾ । ಚ । ಧೇನೂ ಇತಿ । ಸಬರ್ದುಘೇ ಇತಿ ಸಬಃಽದುಘೇ । ಧಾಪಯೇತೇ ಇತಿ । ಸಮೀಚೀ ಇತಿ ಸಮ್ಽಈಚೀ ।

ಋತಸ್ಯ । ತೇ ಇತಿ । ಸದಸಿ । ಈಳೇ । ಅಂತಃ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೧೨ ॥

ಸಾಯಣಭಾಷ್ಯಂ

ಮಾತಾ ಸರ್ವೇಷಾಂ ನಿರ್ಮಾತೃತ್ವಾನ್ಮಾತಾ ಪೃಥಿವೀ ಚ ದುಹಿತಾ ದೂರೇ ನಿಹಿತಾ ದ್ಯೌಶ್ಚ । ದುಹಿತಾ ದುರ್ಹಿತಾ ದೂರೇ ಹಿತಾ ದೋಗ್ಧೇರ್ವೇತಿ ಯಾಸ್ಕಃ । ಏತೇ ಸಬರ್ದುಘೇ ಸಬರಃ ಕ್ಷೀರಯಸ್ಯ ಕ್ಷೀರರೂಪಸ್ಯ ರಸಸ್ಯ ದೋಗ್ಧ್ರ್ಯೌ ಅತ ಏವ ಧೇನೂ ಜಗತಃ ಪ್ರೀಣಯಿತ್ರ್ಯೌ ದ್ಯಾವಾಪೃಥಿವ್ಯೌ ಯತ್ರಾಂತರಿಕ್ಷೇ ಸಮೀಚೀ ಪರಸ್ಪರಂ ಸಂಗತೇ ಸತ್ಯೌ ಧಾಪಯೇತೇ ಸ್ವಕೀಯಂ ರಸಮನ್ಯೋನ್ಯಂ ಪಾಯಯೇತೇ ಋತಸ್ಯೋದಕಸ್ಯ ಸದಸಿ ಸ್ಥಾನಭೂತೇ ತಸ್ಮಿನ್ನಂತರಿಕ್ಷೇಽಂತಃ ಸ್ಥಿತೇ ದ್ಯಾವಾಪೃಥಿವ್ಯಾ-

CC-0. Jangamwadi Math Collection. Digitized by eGangotri

ಮೀಳೇ । ಅಹಂ ಸ್ತೌಮಿ । ಯದ್ವಾ । ವೃಷ್ಟಿಲಕ್ಷಣಂ ರಸಂ ದ್ಯೌಃ ಪೃಥಿವೀಂ ಧಾಪಯೇತ ಆಹುತಿಲಕ್ಷಣಂ ರಸಂ ದ್ಯಾಂ ಪೃಥಿವೀತ್ಯೇವಮನ್ಯೋನ್ಯಂ ಮಾತಾ ಚ ದುಹಿತಾ ಚ ಭವತಃ । ಋತಸ್ಯ ಸದಸಿ ಸ್ಥಾನೇ ಯಜ್ಞಸದನೇ ಸ್ಥಿತೋಽಹಂ ತೇ ಉಭೇ ಸ್ತೌಮಿ ॥ ಸಬರ್ದುಘೇ । ಸಬಃಶಬ್ದಃ ಕ್ಷೀರವಾಚೀತಿ ಸಂಪ್ರದಾಯವಿದ ಆಹುಃ । ತಸ್ಮಿನ್ನುಪಪದೇ ದುಹ ಪ್ರಪೂರಣ ಇತ್ಯಸ್ಮಾದ್ಧಾತೋರ್ದುಹಃ । ಕಬ್ಘಶ್ಚೇತಿ ಕಪ್ಪ್ರತ್ಯಯೋ ಘಶ್ಚಾಂತಾದೇಶಃ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಧಾಪಯೇತೇ । ಧೇಟ್ ಪಾನ ಇತ್ಯಸ್ಯ ಣ್ಯಂತಸ್ಯ ಲಟಿ ನಿಗರಣಚಲನಾರ್ಥೇಭ್ಯಶ್ಚೇತಿ ಪರಸ್ಮೈಪದೇ ಪ್ರಾಪ್ತೇ ಪಾದಿಷು ಧೇಟ್ ಉಪಸಂಖ್ಯಾನಮಿತ್ಯಾತ್ಮನೇಪದಂ । ಯದ್ವೃತ್ತಯೋಗಾದನಿಘಾತಃ ॥

## ಪ್ರತಿಪದಾರ್ಥ

**ಮಾತಾ**—ಮಾತೃರೂಪಿಯಾದ ಪೃಥ್ವಿಯೂ । **ದುಹಿತಾ ಚ**—ದೂರಸ್ಥಿತವಾದ ಅಂತರಿಕ್ಷವೂ ಸಹ । **ಸಬರ್ದುಘೇ**—ತಮ್ಮ ಕ್ಷೀರರೂಪವಾದ ರಸವನ್ನು ಒಟ್ಟಿಗೆ ಹಿಂಡುತ್ತಾ । **ಧೇನೂ**—ಜಗತ್ತಿಗೆ ತೃಪ್ತಿಕಾರಕರಾಗಿರುವ ಧೇನುಗಳಂತೆ । **ಯತ್ರ**—ಯಾವ ಅಂತರಿಕ್ಷದಲ್ಲಿ । **ಸಮೀಚೀ**—ಒಟ್ಟಿಗೆ ಸೇರಿಕೊಂಡು । **ಧಾಪಯೇತೇ**—ತಮ್ಮ ತಮ್ಮ ರಸಗಳನ್ನು ಪರಸ್ಪರ ವಿನಿಮಯಮಾಡಿಕೊಂಡು ಪಾನಮಾಡಿಸುತ್ತಾರೆ । **ಋತಸ್ಯ**—ಉದಕದ । **ಸದಸಿ**—ಸ್ಥಾನಭೂತವಾದ ಅಂತರಿಕ್ಷದಲ್ಲಿ । **ಅಂತಃ**—ಅಂತಸ್ಥರಾದ ದ್ಯಾವಾಪೃಥಿವಿಗಳನ್ನು । **ಈಳೇ**—ಸ್ತುತಿಸುತ್ತೇನೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅಸಾಧಾರಣವಾದುದೂ ಆಗಿದೆ.

## ಭಾವಾರ್ಥ

ಮಾತೃರೂಪಿಯಾದ ಪೃಥ್ವಿಯೂ, ದೂರಸ್ಥಿತವಾದ ಅಂತರಿಕವೂ ಸಹ ತಮ್ಮ ಕ್ಷೀರರೂಪವಾದ ರಸವನ್ನು ಒಟ್ಟಿಗೆ ಹಿಂಡುತ್ತಾ ಜಗತ್ತಿಗೆ ತೃಪ್ತಿಕಾರಕವಾಗಿರುವ ಧೇನುಗಳಂತೆ ಅಂತರಿಕ್ಷದಲ್ಲಿ ಒಟ್ಟಿಗೆ ಸೇರಿಕೊಂಡು ತಮ್ಮತಮ್ಮ ರಸಗಳನ್ನು ಪರಸ್ಪರವಿನಿಮಯಮಾಡಿಕೊಂಡು ಪಾನಮಾಡಿಸುತ್ತಾರೆ. ಉದಕದ ಸ್ಥಾನಭೂತವಾದ ಅಂತರಿಕ್ಷದಲ್ಲಿ ಅಂತಸ್ಥರಾದ ದ್ಯಾವಾಪೃಥಿವಿಗಳನ್ನು ನಾನು ಸ್ತುತಿಸುತ್ತೇನೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ ಅಸಾಧಾರಣವಾದುದೂ ಆಗಿದೆ.

## English Translation

Where the mother and the daughter, two productive milch cows, unite, they nourish each other : I worship them both in (the firmament), the dwelling of the waters : great and unequalled is the might of the gods.

## ವಿಶೇಷವಿಷಯಗಳು

**ಮಾತಾ—ಸರ್ವೇಷಾಂ ನಿರ್ಮಾತೃತ್ವಾತ್ ಮಾತಾ ಪೃಥಿವೀ।** ಸ್ಥಾವರ ಜಂಗಮಾತ್ಮಕವಾದುದೆಲ್ಲವನ್ನೂ ಉತ್ಪನ್ನಮಾಡುವುದರಿಂದ ಪೃಥಿವಿಯನ್ನು ಮಾತೃವೆಂದೂ, **ದುಹಿತಾ—ದೂರೇ ನೀತಾ ದ್ಯೌಃ ಚ ।** ಅಂತರಿಕ್ಷವು ಭೂಮಿಗಿಂತ ಬಹಳ ದೂರದಲ್ಲಿರುವುದರಿಂದ **ದುಹಿತೃ** ಎಂದೂ ವ್ಯಪದಿಷ್ಟವಾಗಿದೆ.

CC-0. Jangamwadi Math Collection. Digitized by eGangotri

ವಾಗಿರುವುದಿಲ್ಲ. ಇಲ್ಲಿ **ಪೃಥಿವ್ಯಾಃ ವತ್ಸಮಗ್ನಿಂ ಉದಕಧಾರಾರೂಪಯಾ ಜಿಹ್ವಯಾ ಲಿಹತೀ ದ್ಯೌಃ ಮೇಘದ್ವಾರಾ ಧ್ವನಿಂ ಕರೋತಿ** । ಭೂಮಿಯ ಪುತ್ರನಂತೆ ಅಥವಾ ಪುತ್ರನಾಗಿರುವ ಅಗ್ನಿಯನ್ನು ಉದಕದಾರೆ ಗಳಿಂದ ತೃಪ್ತಿಗೊಳಿಸುವುದಾಗಿ (ಹಸುವು ತನ್ನ ಕರುವನ್ನು ಪ್ರೀತಿಯಿಂದ ನೆಕ್ಕುವಂತೆ) ದ್ಯುಲೋಕವು, ಧೇನುವು ತನ್ನ (ವತ್ಸವನ್ನು) ಕರುವನ್ನು ಹತ್ತಿರಕ್ಕೆ ಆಹ್ವಾನಮಾಡುವ ಧ್ವನಿಯನ್ನು ಮಾಡುವಂತೆ ಮೇಘಗಳ ಧ್ವನಿಯನ್ನು ಮಾಡುತ್ತದೆ ಇದರಿಂದ ಮೇಘಧ್ವನಿಯು ಧೇನುವಿನ ವತ್ಸಾಹ್ವಾನಧ್ವನಿರೂಪದಿಂದ ನಿರೂಪಿತವಾಗಿದೆ.

ದ್ಯುಲೋಕವು ಭುವಾ **ಊಧಃ ನಿದಧೇ—ತತ್ರತ್ಯಂ ಜಲಮಾದಾಯ ಸ್ವಕೀಯಂ ಮೇಘರೂಪಂ ಊಧಃ ಉದಕೇನ ನಿಹಿತಮಕರೋತ್** । ಭೂಮಿಯಲ್ಲಿ ಇರುವ ಉದಕಗಳನ್ನು ಶೇಖರಿಸಿ ಮೇಘರೂಪದಿಂದ ಇರುವ ತನ್ನ ಕೆಚ್ಚಲನ್ನು ರಸಭರಿತವಾಗಿರುವಂತೆ ಮಾಡಿಕೊಳ್ಳುತ್ತದೆ. ಅನಂತರದಲ್ಲಿ ಮಳೆಗಾಲವು ಒದಗಿದಾಗ ಇಳಾ ಋತಸ್ಯ ಪಯಸಾ ಅಪಿನ್ವತ-ಸತ್ಯಾತ್ಮಕವಾದ ಆದಿತ್ಯನ ದೆಸೆಯಿಂದ ಉದಕಗಳಿಂದ ನೆನೆಸಲ್ಪಡುವುದಾಗಿರುವುದು ಎಂದು ಅರ್ಥವನ್ನು ವಿವರಿಸಿ **ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ** (ಮನು. ೩-೧೭) ಆದಿತ್ಯನಿಂದ ವೃಷ್ಟಿಯೂ, ವೃಷ್ಟಿಯಿಂದ ಅನ್ನವೂ, ಅನ್ನದಿಂದ ಪ್ರಜೆಗಳೂ ಉತ್ಪನ್ನರಾಗುವರು ಎಂದು ಮನುಸ್ಮೃತಿಯ ವಚನವನ್ನು ಉದಾಹರಿಸಿದೆ. ಹೀಗೆ ದ್ಯಾವಾಪೃಥಿವಿಗಳು ಲೋಕಗಳ ಉತ್ಪತ್ತ್ಯಾದಿಗಳಲ್ಲಿ ನಿರತರಾಗಿರುವ ಕಾರಣ ದೇವತೆಗಳ ಪ್ರಾಬಲ್ಯವು ಅಸಾಧಾರಣವಾದುದೆಂದು ವಿವೃತವಾಗಿದೆ.

---

ಸಂಹಿತಾಪಾಠಃ

ಪದ್ಯಾ ವಸ್ತೇ ಪುರುರೂಪಾ ವಪೂಂಷ್ಯೂರ್ಧ್ವಾ ತಸ್ಥೌ ತ್ರ್ಯವಿಂ ರೇರಿಹಾಣಾ।
ಋತಸ್ಯ ಸದ್ಮ ವಿ ಚರಾಮಿ ವಿದ್ವಾನ್ಮಹದ್ದೇವಾನಾಮಸುರತ್ವಮೇಕಂ ॥೧೪॥

ಪದಪಾಠಃ

ಪದ್ಯಾ । ವಸ್ತೇ । ಪುರುऽರೂಪಾ । ವಪೂಂಷಿ । ಊರ್ಧ್ವಾ । ತಸ್ಥೌ । ತ್ರಿऽಅವಿಂ । ರೇರಿಹಾಣಾ ।
ಋತಸ್ಯ । ಸದ್ಮ । ವಿ । ಚರಾಮಿ । ವಿದ್ವಾನ್ । ಮಹತ್ । ದೇವಾನಾಂ । ಅಸುರऽತ್ವಂ । ಏಕಂ ॥ ೧೪ ॥

ಸಾಯಣಭಾಷ್ಯಂ

ಪದ್ಯಾ । ಜಗತ್ಸ್ರಷ್ಟುಃ ಪರಮೇಶ್ವರಸ್ಯ ಪದ್ಭ್ಯಾಂ ಜಾತತ್ವಾತ್ಪದ್ಯಾ ಭೂಮಿಃ । ತಥಾ ಚ ಮಂತ್ರವರ್ಣಃ । ಪದ್ಭ್ಯಾಂ ಭೂಮಿಃ । ಋಗ್ವೇ. ೧೦-೯೦-೧೪ । ಇತಿ । ಯದ್ವಾ । ಪಾದಸಂಚಾರೇ ಸಾಧುಃ ಪದ್ಯಾ ಭೂಮಿಃ ಪುರುರೂಪಾ ನಾನಾವಿಧಸ್ವರೂಪಾಣಿ ವಪೂಂಷಿ ಸ್ಥಾವರಜಂಗಮಾತ್ಮಕಾನಿ ರೂಪಾಣಿ ವಸ್ತೇ । ಆಚ್ಛಾದಯತಿ । ಸೈಷಾ ಭೂಮಿರೂರ್ಧ್ವೋತ್ತರವೇದ್ಯಾತ್ಮನೋನ್ನತಾ ಸತೀ ಸ್ವಸಾರಭೂತೇನ ಹವಿಷಾ ತ್ರ್ಯವಿಂ । ಸಾರ್ಧಸಂವತ್ಸರವಯಸ್ಕೋ ವತ್ಸಸ್ತ್ರ್ಯವಿರಿತ್ಯುಚ್ಯತೇ । ತತ್ಪ್ರಮಾಣಮಾದಿತ್ಯಂ ।

CC-0. Jangamwadi Math Collection. Digitized by eGangotri

ತ್ರೀನ್ ಲೋಕಾನವತಿ ಸ್ವತೇಜಸಾ ವ್ಯಾಪ್ನೋತೀತಿ ತ್ರ್ಯವಿರಿತಿ ವಾ । ರೇರಿಹಾಣಾ ಲಿಹತೀ ತಸ್ಥೌ । ಋತಸ್ಯ ಸತ್ಯಭೂತಸ್ಯಾದಿತ್ಯಸ್ಯ ಸದ್ಮ ಸ್ಥಾನಂ ವಿದ್ವಾನ್ ಜಾನಾನೋಽಹಂ ವಿ ಚರಾಮಿ । ಹವಿರ್ಭಿಸ್ತ-ಮಾದಿತ್ಯಂ ಪರಿಚರಾಮಿ ॥ ಪದ್ಯಾ । ಪಾದಶಬ್ದಾತ್ಪವೇ ಛಂದಸೀತಿ ಯತ್ । ಪದ್ಯತ್ಯತದರ್ಥೇ । ಪಾ. ೬.೩-೫೩ । ಇತಿ ಪಾದಸ್ಯ ಪದ್ಭಾವಃ । ಯದ್ವಾ । ತತ್ರ ಸಾಧುರಿತಿ ಯತ್ । ಯತೋಽನಾವ ಇತ್ಯಾದ್ಯು-ದಾತ್ತತ್ವಂ । ತ್ರ್ಯವಿಂ । ಅವ ರಕ್ಷಣಾದಿಷು । ಇನ್ನಿತೀನ್ಪ್ರತ್ಯಯಃ । ಕೃತ್ಸ್ವರಃ । ರೇರಿಹಾಣಾ । ಲಿಹ ಆಸ್ವಾದನ ಇತ್ಯಸ್ಯ ಯಙ್ಲುಕಿ ಶಾನಚಿ ರೂಪಂ । ಅಭ್ಯಸ್ತಸ್ವರಃ ॥

ಪ್ರತಿಪದಾರ್ಥ

**ಪದ್ಯಾ**—ಪೃಥ್ವಿಯು । **ಪುರುರೂಪಾ**—ನಾನಾ ರೂಪಗಳುಳ್ಳ । **ವಪೂಂಷಿ**—ಸ್ಥಾವರಜಂಗಮಾತ್ಮಕವಾದ ರೂಪಗಳನ್ನು । **ವಸ್ತೇ**—ಧರಿಸುತ್ತಾಳೆ । **ಊರ್ಧ್ವಾ**—ಉತ್ತರವೇದಿರೂಪವಾದ ಉನ್ನತಸ್ಥಾನದಿಂದ । **ತ್ರ್ಯವಿಂ**—ಒಂದೂವರೆ ವರ್ಷದ ಪುತ್ರನಂತಿರುವ ಆದಿತ್ಯನನ್ನು । **ರೇರಿಹಾಣಾ**—ಹವಿಸ್ಸಿನ ದ್ವಾರಾ ನೆಕ್ಕುತ್ತಾ । **ತಸ್ಥೌ**—ಸ್ಥಿತಳಾಗಿದ್ದಾಳೆ । **ಋತಸ್ಯ**—ಸತ್ಯರೂಪನಾದ ಆದಿತ್ಯನ । **ಸದ್ಮ**—ಸ್ಥಾನವನ್ನು । **ವಿದ್ವಾನ್**—ತಿಳಿದಿರುವ ನಾನು । **ವಿ ಚರಾಮಿ**—ಅವನನ್ನು ಪೂಜಿಸುತ್ತೇನೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅದ್ವಿತಿಯವಾದುದೂ ಆಗಿದೆ

ಭಾವಾರ್ಥ

ಪೃಥ್ವಿಯು ನಾನಾರೂಪಗಳುಳ್ಳ ಸ್ಥಾವರಜಂಗಮಾತ್ಮಕಗಳಾದ ರೂಪಗಳನ್ನು ಧರಿಸುತ್ತಾಳೆ. ಉತ್ತರವೇದಿ ರೂಪವಾದ ಉನ್ನತಸ್ಥಾನದಿಂದ ಒಂದೂವರೆವರ್ಷದ ಪುತ್ರನಂತಿರುವ ಆದಿತ್ಯನನ್ನು ಹವಿಸ್ಸಿನ ದ್ವಾರಾ ನೆಕ್ಕುತ್ತಾ ಸ್ಥಿತಳಾಗಿದ್ದಾಳೆ. ಸತ್ಯರೂಪನಾದ ಆದಿತ್ಯನ ಸ್ಥಾನವನ್ನು ತಿಳಿದಿರುವ ನಾನು ಅವನನ್ನು ಹವಿಸ್ಸುಗಳಿಂದ ಆರಾಧಿಸುತ್ತೇನೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅದ್ವಿತೀಯವಾದುದೂ ಆಗಿದೆ.

English Translation

The earth wears bodies of many forms : she abides on high cherishing her year and a half old (calf) : knowing the abode of the truth (the sun), I offer worship : great and unequalled is the might of the gods.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಭೂಮಿಯು ಜಗತ್ಸ್ರಷ್ಟುಃ ಪರಮೇಶ್ವರಸ್ಯ ಪದ್ಭ್ಯಾಂ ಜಾತತ್ವಾತ್ ಪ್ರಪಂಚವೆಲ್ಲವನ್ನೂ ನಿರ್ಮಿಸಿರುವ ಪರಮಾತ್ಮನ ಪಾದಗಳಿಂದ ಉತ್ಪನ್ನಳಾದ ಕಾರಣ ಪದ್ಯಾ ಎಂಬ ಪದದಿಂದ ವ್ಯವಹೃತಳಾಗಿರುತ್ತಾಳೆ. ಈ ವಿಷಯದಲ್ಲಿ "ಪದ್ಭ್ಯಾಂ ಭೂಮಿ" (ಋ. ಸಂ. ೧೦-೯೦-೧೪) ಎಂದು ಮಂತ್ರವೂ ಉದಾಹೃತವಾಗಿದೆ. ಅಥವಾ ಪಾದಸಂಚಾರೇ ಸಾಧುಃ ಪ್ರಾಣಿಗಳೆಲ್ಲರೂ ಅವರವರ ಪಾದಗಳಿಂದ ಸಂಚರಿಸಲರ್ಹವಾದ ರೀತಿಯನ್ನು ಉಂಟುಮಾಡಿರುವುದರಿಂದಲೂ ಪದ್ಯಾ ಎಂಬ ಪದವು ಭೂಮಿ ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

CC-0. Jangamwadi Math Collection. Digitized by eGangotri

ಈ ಭೂಮಿಯು ತನ್ನಿಂದ ಉತ್ಪನ್ನವಾದವುಗಳಿಗೆ ಪುರುರೂಪಾ ವಪೂಂಷಿ ವಸ್ತೇ ಸ್ಥಿರವಾದ ಅಥವಾ ಚರವಾಗಿರುವ ನಾನಾವಿಧವಾದ ರೂಪಗಳಿಂದ ಕೂಡಿರುವ ಶರೀರಗಳನ್ನು ಉಂಟುಮಾಡಿ ಅವುಗಳ ಸೈಜವಾದ ಸ್ವರೂಪ ವನ್ನು ಮುಚ್ಚಿರುತ್ತದೆ.

ತ್ರ್ಯವಿಂ—ಸಾರ್ಧಸಂವತ್ಸರವಯಸ್ಕಃ ವತ್ಸಃ ಒಂದೂವರೆವರ್ಷ ವಯಸ್ಸಿನಿಂದ ಇರುವ ಕರುವು ಎಂದು ಅರ್ಥವನ್ನು ಮಾಡಿದೆ. ಅಥವಾ ತ್ರೀನ್ ಲೋಕಾನ್ ಅವತಿ ಸ್ವತೇಜಸಾ ವ್ಯಾಪ್ನೋತಿ ಮೂರು ಲೋಕಗಳನ್ನೂ ತನ್ನ ತೇಜಸ್ಸುಗಳಿಂದ ವ್ಯಾಪಿಸಿಕೊಂಡು ರಕ್ಷಿಸುವವನು ಎಂದು ವಿವರಿಸಿದೆ.

ಊರ್ಧ್ವಾ—ಉತ್ತರವೇದ್ಯಾತ್ಮನಾ ಉನ್ನತಾ ! ಈ ಭೂಮಿಯು ಯಾಗಶಾಲೆಯಲ್ಲಿ ಉತ್ತರವೇದಿಯ ರೂಪದಲ್ಲಿ ಉನ್ನತವಾಗಿ ಇರುವುದು ಎಂದೂ, (ಹವಿಸ್ಸಿನ ಅರ್ಪಣೆಯಿಂದ) ಹವಿಸ್ಸುಗಳಿಂದ ಒಂದೂವರೆವರ್ಷದ ಕರುವಿನ ಪ್ರಮಾಣದಲ್ಲಿರುವ ತ್ರ್ಯವಿ ಶಬ್ದ ಪ್ರತಿಪಾದ್ಯನಾದ ಆದಿತ್ಯನನ್ನು ತೃಪ್ತಿಪಡಿಸುವುದಾಗಿರುವುದು ಎಂದೂ ವರ್ಣಿಸಿದೆ.

ಈ ಆದಿತ್ಯನ ಸತ್ಯಸ್ವರೂಪವನ್ನು ತಿಳಿದು ಇರುವ ಯಜಮಾನನು ಈ ಆದಿತ್ಯನು ಇರುವ ವಾಸಸ್ಥಾನವನ್ನು ತಿಳಿದು ಇರುವುದರಿಂದ ಹವಿಸ್ಸುಗಳನ್ನು ಆದಿತ್ಯನಿಗಾಗಿ ಅರ್ಪಿಸುವನೆಂದೂ, ದೇವತೆಗಳ ಪ್ರಾಬಲ್ಯವು ಅಸಾಧಾರಣ ವಾದುದೂ ಮತ್ತು ಮಹತ್ತ್ವಪೂರಿತವಾದುದೂ ಆಗಿರುವುದೆಂದೂ ವರ್ಣಿಸಿದೆ.

———————

ಸಂಹಿತಾಪಾಠಃ

ಪದೇ ಇವ ನಿಹಿತೇ ದಸ್ಮೇ ಅಂತಸ್ತಯೋರನ್ಯದ್ಗುಹ್ಯಮಾವಿರನ್ಯತ್ ।
ಸಧ್ರೀಚೀನಾ ಪಥ್ಯಾ೩ ಸಾ ವಿಷೂಚೀ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ಪದೇ ಇವೇತಿ ಪದೇಽಇವ । ನಿಹಿತೇ ಇತಿ ನಿಽಹಿತೇ । ದಸ್ಮೇ । ಅಂತರಿತಿ । ತಯೋಃ। ಅನ್ಯತ್। ಗುಹ್ಯಂ। ಆವಿಃ । ಅನ್ಯತ್ ।

ಸಧ್ರೀಚೀನಾ। ಪಥ್ಯಾ । ಸಾ । ವಿಷೂಚೀ । ಮಹತ್ । ದೇವನಾಂ । ಅಸುರಽತ್ವಂ । ಏಕಂ ॥ ೮೫ ॥

ಸಾಯಣಭಾಷ್ಯಂ

ಪದೇ ಇವ । ಪದ್ಯೇತೇ ಜ್ಞಾಯೇತೇ ತೇತ್ರ್ತದಸಾಧಾರಣಲಿಂಗೇನೇತಿ ಪದೇ । ಅಹಶ್ಚ ರಾತ್ರಿ. ಶ್ಚೇತ್ಯೇತೇ ದಸ್ಮೇ ಸರ್ವೈರ್ದರ್ಶನೀಯೇ ತೇ ಉಭೇ ಅಂತರ್ನಭಸಿ ಮಧ್ಯೇ ನಿಹಿತೇ ಸ್ಥಾಪಿತೇ ಇವ ವರ್ತೇತೇ । ತಯೋರಹೋರಾತ್ರಯೋರನ್ಯದ್ರಾತ್ರಿಲಕ್ಷಣಂ ಗುಹ್ಯಮಪ್ರಕಾಶಮಾನತಯಾ ಗೂಢಮಿ-



CC-0. Jangamwadi Math Collection. Digitized by eGangotri

ವಾಸ್ತೇ । ಅನ್ಯದಹರಾವಿಃ ಸೂರ್ಯಪ್ರಕಾಶೇನ ಪ್ರಕಟಂ ಭವತಿ । ಸಧ್ರೀಚೀನಾಹೋರಾತ್ರಯೋಃ ಪರಸ್ಪರಮೇಲನರೂಪಾ ಪಥ್ಯಾ ಮಾರ್ಗಃ । ಕಾಲ ಇತ್ಯರ್ಥಃ । ಸಾ ವಿಷೂಚೀ । ಪುಣ್ಯಕೃತೋऽಪುಣ್ಯ-ಕೃತಶ್ಚ ಪ್ರಾಪ್ನೋತೀತಿ ವಿಷೂಚೀ ಭವತಿ । ಸರ್ವೇ ಜನಾ ಅಹೋರಾತ್ರಯೋರ್ವರ್ತಂತೇ । ಯದ್ವಾ ! ಪದೇ ಇವ ದೇವಮನುಷ್ಯಾದೀನಾಂ ಸ್ಥಾನಭೂತೇ ದ್ಯಾವಾಪೃಥಿವ್ಯಾವಂತರಂತರಿಕ್ಷೇ ನಿಹಿತೇ ವರ್ತೇತೇ । ತಯೋರನ್ಯದ್ದ್ಯೌರ್ಗುಹ್ಯಮಸ್ಮಾಭಿರದೃಶ್ಯಮಾನತಯಾ ಗೂಢಂ ವರ್ತತೇ । ಅನ್ಯತ್ಪೃಥಿವ್ಯಾವಿಃ ಸರ್ವೈ-ರ್ದೃಶ್ಯಮಾನತ್ವೇನ ಪ್ರಕಟಾ ಭವತಿ । ಸಧ್ರೀಚೀನೇತಿ ಪೂರ್ವವತ್ ॥ ಸಧ್ರೀಚೀನಾ । ಸಹಪೂರ್ವಾ-ದಂಚತೇಃ ಕ್ವಿನ್ । ಸಹಸ್ಯ ಸಧ್ರಿರಿತಿ ಸಧ್ರ್ಯಾದೇಶಃ । ವಿಭಾಷಾಂಚೇರದಿಕ್ಸ್ತ್ರಿಯಾಮಿತಿ ಖಃ ॥

### ಪ್ರತಿಪದಾರ್ಥ

**ದಸ್ಮೇ**—ಸರ್ವರಿಂದಲೂ ದರ್ಶನೀಯರಾದ । **ಪದೇ ಇವ**—ಅಹೋರಾತ್ರಿಗಳೆರಡೂ । **ಅಂತಃ**—ಅಂತರಿಕ್ಷದ ಮಧ್ಯದಲ್ಲಿ । **ನಿಹಿತೇ**—ಸ್ಥಾಪಿತವಾಗಿವೆ । **ತಯೋಃ**—ಅವರಿಬ್ಬರಲ್ಲಿ । **ಅನ್ಯತ್**—ರಾತ್ರಿಯು । **ಗುಹ್ಯಂ**—ಗೂಢವಾಗಿಯೂ । **ಅನ್ಯತ್**—ಇನ್ನೊಂದಾದ ಅಹಸ್ಸು । **ಆವಿಃ**—ಪ್ರಕಾಶಿತವಾಗಿಯೂ ಇವೆ । **ಸಧ್ರೀಚೀನಾ**—ಇವೆರಡಕ್ಕೂ ಒಟ್ಟಿಗೆ ಸಂಯುಕ್ತವಾಗಿರತಕ್ಕ । **ಸಾ ಪಥ್ಯಾ**—ಕಾಲರೂಪವಾದ ಮಾರ್ಗವು । **ವಿಷೂಚೀ**—ವಿಶ್ವಕ್ಕೆಲ್ಲಾ ಸರ್ವಸಾಧಾರಣವಾಗಿದೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹದ್ರೂಪವುಳ್ಳದ್ದೂ । **ಏಕಂ**—ಅದ್ವಿತೀಯವುಳ್ಳದ್ದೂ ಆಗಿದೆ.

### ಭಾವಾರ್ಥ

ಸರ್ವರಿಂದಲೂ ದರ್ಶನೀಯರಾದ ಅಹೋರಾತ್ರಗಳೆರಡೂ ಅಂತರಿಕ್ಷದ ಮಧ್ಯಭಾಗದಲ್ಲಿ ಸ್ಥಾಪಿತವಾಗಿವೆ. ಅವರಿಬ್ಬರಲ್ಲಿ ರಾತ್ರಿಯು ಗೂಢವಾಗಿಯೂ, ಅಹಸ್ಸು ಪ್ರಕಾಶಿತವಾಗಿಯೂ ಇವೆ. ಇವೆರಡಕ್ಕೂ ಸೇರಿ ಸಂಯುಕ್ತವಾಗಿರತಕ್ಕ ಕಾಲರೂಪವಾದ ಮಾರ್ಗವು ವಿಶ್ವಕ್ಕೆಲ್ಲಾ ಸರ್ವಸಾಧಾರಣವಾಗಿದೆ. ದೇವತೆಗಳ ಪ್ರಾಬಲ್ಯವು ಮಹದ್ರೂಪವುಳ್ಳದ್ದೂ ಅದ್ವಿತೀಯವಾದದ್ದೂ ಆಗಿದೆ.

### English Translation

Like two (distinguishing) impressions, they (day and night) are placed visible in the midst (between heaven and earth), one hidden, one manifest: the path (of both) is common, and that is universal (for good and evil): great and unequalled is the might of the gods.

### ವಿಶೇಷವಿಷಯಗಳು

**ಪದೇ ಇವ ದಸ್ಮೇ ಅಂತಃ ನಿಹಿತೇ**—ಅಹಶ್ಚ ರಾತ್ರಿಶ್ಚೇತ್ಯೇತೇ ಸರ್ವೈಃ ದರ್ಶನೀಯೇ ತತ್ತದ-ಸಾಧಾರಣಲಿಂಗೇನ ಜ್ಞಾಯಮಾನೇ ನಭಸಿ ಮಧ್ಯೇ ಸ್ಥಾಪಿತೇ ಇವ ವರ್ತೇತೇ । ಹಗಲಿಗೂ, ರಾತ್ರಿಗೂ ಇರುವ ಧರ್ಮಗಳೂ, ಆಯಾಯ ಚಿಹ್ನೆಗಳೂ ಇತರ ವ್ಯಾವರ್ತಕವಾದ ರೀತಿಯಿಂದ ಎಲ್ಲರಿಂದಲೂ ತಿಳಿಯಲ್ಪಡು

CC-0. Jangamwadi Math Collection. Digitized by eGangotri

ತ್ತವೆ. ಈ ಅಹೋರಾತ್ರಿಗಳು ಮನೋಹರವಾದ ಆಕೃತಿಯಿಂದ ಕೂಡಿರುತ್ತವೆಯಾಗಿ ಇವುಗಳು ಅಂತರಿಕ್ಷದ ಒಳಭಾಗದಲ್ಲಿ ಇಡಲ್ಪಟ್ಟಿರುವಂತೆ ಕಾಣಿಸಿಕೊಳ್ಳುತ್ತವೆ. ಇವೆರಡಕ್ಕೂ ಅನುಕೂಲವಾಗಿರುವ ಮಾರ್ಗವು ಕಾಲವಾಗಿರುವುದೆಂದೂ, ಈ ಕಾಲವು ವಿಷೂಚೀ— ಪುಣ್ಯಕೃತೋ ಅಪುಣ್ಯಕೃತಶ್ಚ ಪ್ರಾಪ್ನೋತಿ ಪುಣ್ಯವಂತರು ಪಾಪಿಗಳು ಎಂಬ ಸರ್ವರನ್ನೂ ವ್ಯಾಪಿಸಿರುವುದೆಂದೂ, ಸರ್ವೇ ಜನಾ ಅಹೋರಾತ್ರಯೋರ್ವರ್ತಂತೇ ಪ್ರಾಣಿಗಳು ಎಲ್ಲರಿಗೂ ಜೀವಿಸಲು ಅವಕಾಶವನ್ನು ಕಲ್ಪಿಸಿಕೊಡುವುದೆಂದೂ ವರ್ಣಿಸಿದೆ.

ಎರಡನೆಯ ಅರ್ಥವು ದ್ಯಾವಾಪೃಥಿವಿಗಳ ಪರವಾಗಿದೆ. ಯದ್ವಾ ಪದೇ ಇವ ದೇವಮನುಷ್ಯಾದೀನಾಂ ಸ್ಥಾನಭೂತೇ ದ್ಯಾವಾಪೃಥಿವ್ಯಾ ಅಂತರಂತರಿಕ್ಷೇ ನಿಹಿತೇ ವರ್ತೇತೇ । ತಯೋರನ್ಯತ್ ಅನ್ಯಾ ದ್ಯೌಃ ಗುಹ್ಯಮಸ್ಮಾಭಿಃ ಅದೃಶ್ಯಮಾನತಯಾ ಗೂಢಾ ವರ್ತತೇ । ಅನ್ಯಾ ಪೃಥಿವೀ ಆವಿಃ ಸರ್ವೈಃ ದೃಶ್ಯಮಾನತ್ವೇನ ಪ್ರಕಟಾ ಭವತಿ । ಸಧ್ರೀಚೀನೇತ್ಯಾದಿ ಪೂರ್ವವತ್ । ದೇವತೆಗಳೂ, ಮನುಷ್ಯರೂ ವಾಸಮಾಡುವ ಸ್ಥಾನಗಳಂತೆ ಇರುವ ದ್ಯಾವಾಪೃಥಿವಿಗಳು ಅಂತರಿಕ್ಷದಲ್ಲಿ ಇರುತ್ತವೆ. ಇವುಗಳಲ್ಲಿ ಒಂದಾಗಿರುವ ದ್ಯುಲೋಕವು ನಮಗೆ ತಿಳಿಯದಿರುವ ರೀತಿಯಿಂದ ನಮಗೆ ಕಾಣಿಸದ ಹಾಗೆ ಗೂಢವಾಗಿರುತ್ತದೆ. ಇದು ಅಹೋರಾತ್ರಿಗಳಲ್ಲಿ ರಾತ್ರಿಯು ಇರುವಂತೆ ಗೂಢವಾಗಿದೆ. ಪೃಥಿವಿಯು, ಅಹಸ್ಸು ಸೂರ್ಯನ ಪ್ರಕಾಶದಿಂದ ಪ್ರಕಾಶವಾಗಿರುವ ಹಾಗೆ, ಸರ್ವರಿಂದಲೂ ತಿಳಿಯಲ್ಪಡುವ ರೂಪದಿಂದ ಪ್ರಕಟವಾಗಿರುತ್ತದೆ. ಇವೆರಡೂ ಪರಸ್ಪರವಾಗಿ ಹೊಂದಿಕೊಂಡಿರುವುದಕ್ಕನುಗುಣವಾದ ಕಾಲವು ಪುಣ್ಯವಂತರಿಗೂ, ಪಾಪಿಗಳಿಗೂ ಸಮಾನವಾಗಿರುವುದರಿಂದ ವಿಷಮವಾಗಿರುತ್ತದೆ. ಸರ್ವಪ್ರಾಣಿಗಳಿಗೂ ದ್ಯಾವಾಪೃಥಿವಿಗಳು ಜೀವಿಸಲು ಅವಕಾಶವನ್ನು ಕೊಡುವುದರಿಂದ ಸರ್ವರಿಗೂ ಉಪಕಾರಗಳಾಗಿರುತ್ತವೆಯಾಗಿ ದೇವತೆಗಳ ಪ್ರಾಬಲ್ಯವು ಅಸಾಧಾರಣವಾದುದೂ, ಮುಖ್ಯವಾದುದೂ ಆಗಿರುವುವೆಂದು ವರ್ಣಿಸಿದೆ.

———: o :———

ಸಂಹಿತಾಪಾಠಃ

ಆ ಧೇನವೋ ಧುನಯಂತಾಮಶಿಶ್ವೀಃ ಸಬರ್ದುಘಾಃ ಶಶಯಾ ಅಪ್ರದುಗ್ಧಾಃ ।
ನವ್ಯಾನವ್ಯಾ ಯುವತಯೋ ಭವಂತೀರ್ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ಆ । ಧೇನವಃ । ಧುನಯಂತಾಂ । ಅಶಿಶ್ವೀಃ । ಸಬಃಽದುಘಾಃ । ಶಶಯಾಃ । ಅಪ್ರಽದುಗ್ಧಾಃ ।
ನವ್ಯಾಃಽನವ್ಯಾಃ । ಯುವತಯಃ । ಭವಂತೀಃ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೧೬ ॥

ಸಾಯಣಭಾಷ್ಯಂ

ಧೇನವೋ ವೃಷ್ಟಿದ್ವಾರಾ ಸರ್ವಸ್ಯ ಜಗತಃ ಪ್ರೀಣಯಿತ್ರ್ಯೋಽಶಿಶ್ವೀಃ ಶಿಶುರಹಿತಾಃ । ಯದ್ವಾ । ಶಿಶವೋ ನ ಭವಂತೀತ್ಯಶಿಶ್ವೀಃ । ಶಶಯಾ ನಭಸಿ ಶಯಾನಾ ವರ್ತಮಾನಾಃ ಕೇನಾಪ್ಯಪ್ರದುಗ್ಧಾ ಅಕ್ಷೀಣ–

CC-0. Jangamwadi Math Collection. Digitized by eGangotri

ರಸಾಃ ಸಬರ್ದುಘಾ ಉದಕಲಕ್ಷಣಸ್ಯ ಕ್ಷೀರಸ್ಯ ದೋಗ್ಧ್ರ್ಯೋ ಯುವತಯಃ ಪರಸ್ಪರಮಿಶ್ರಣೋಪೇತಾ ನವ್ಯಾ ನವ್ಯಾ ಅತಿಶಯೇನ ನೂತನಾ ಭವಂತೀರ್ದಿಶೋ ಮೇಘಾ ವಾ ಆ ಧುನಯಂತಾಂ। ಆದುಹಂತು। ಮೇಘಪಕ್ಷೇSಶಿಶ್ವೀರ್ಭವಂತೀತ್ಯತ್ರ ಲಿಂಗವ್ಯತ್ಯಯಃ ॥ ಧುನಯಂತಾಂ। ಧೂಞ್ ಕಂಪನೇ। ಣಿಚಿ ಧೂಞ್ಪ್ರೀಣೋರ್ನುಗ್ವಕ್ತವ್ಯಃ। ಪಾ- ೭-೩-೩೭-೧। ಇತಿ ನುಕ್। ಹ್ರಸ್ವಶ್ಛಾಂದಸಃ। ಅಶಿಶ್ವೀಃ। ಸಖ್ಯಶಿಶ್ವೀತಿ ಭಾಷಾಯಾಮಿತಿ ವ್ಯತ್ಯಯೇನ ಛಂದಸಿ ಭವತಿ ॥

ಪ್ರತಿಪದಾರ್ಥ

ಧೇನವಃ—। ಜಗತ್ತಿಗೆ ಪ್ರೀತಿಕಾರವೂ ಅಶಿಶ್ವೀಃ—ಶಿಶುರಹಿತವಾದವೂ। ಶಶಯಾಃ—ಅಂತರಿಕ್ಷದಲ್ಲಿ ಸ್ಥಿರವಾಗಿರುವುವೂ। ಅಪ್ರದುಗ್ಧಾಃ—ರಸಭರಿತವಾದವೂ। ಸಬರ್ದುಘಾಃ—ಉದಕರೂಪವಾದ ಕ್ಷೀರವನ್ನು ಸುರಿಸುವುವೂ। ಯುವತಯಃ - ಪರಸ್ಪರ ಸಂಯುಕ್ತವಾಗಿರುವುವೂ। ನವ್ಯಾನವ್ಯಾಃ—ಸರ್ವದಾ ನೂತನತ್ವನನ್ನು ಹೊಂದುವುವೂ। ಭವಂತೀಃ—ಆದ ಮೇಘಗಳು (ಅಥವಾ ದಿಕ್ಕುಗಳು)। ಆ ಧುನಯಂತಾಂ—(ವೃಷ್ಟ್ಯರ್ಥವಾಗಿ) ಕಂಪಿತವಾಗಲಿ। ದೇವಾನಾಂ—ದೇವತೆಗಳ। ಅಸುರತ್ವಂ—ಪ್ರಾಬಲ್ಯವು। ಮಹತ್--ಮಹತ್ತಾದುದೂ ಏಕಂ—ಅದ್ವಿತೀಯವಾದುದೂ ಆಗಿದೆ.

ಭಾವಾರ್ಥ

ಜಗತ್ತಿಗೆ ಪ್ರೀತಿಕಾರಕವಾದವೂ, ಶಿಶುರಹಿತವಾದವೂ, ಅಂತರಿಕ್ಷದಲ್ಲಿ ಸ್ಥಿರವಾಗಿರುವುವೂ, ರಸಭರಿತವೂ, ಉದಕರೂಪವಾದ ಕ್ಷೀರವನ್ನು ಸುರಿಸುವುವೂ, ಪರಸ್ಪರವಾಗಿ ಸಂಯುಕ್ತವಾಗಿರುವುವೂ, ಸರ್ವದಾ ನೂತನತ್ವನನ್ನು ಹೊಂದುವುವೂ ಆದ ಮೇಘಗಳು ವೃಷ್ಟ್ಯರ್ಥವಾಗಿ ಕಂಪಿತವಾಗಲಿ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅದ್ವಿತೀಯವಾದುದೂ ಆಗಿದೆ.

English Translation

May the milch cows without their young, abiding (in the heaven), and though unmilked, yet yielding milk, and ever fresh and youthful, be shaken (so as to perform their functions) : great and unequalled is the might of the gods.

ವಿಶೇಷವಿಷಯಗಳು

ಅನುಕ್ರಮಣಿಕೆಯಲ್ಲಿ ಷೋಡಶೀ ದಿಗ್ದೇವತಾ ಈ ಸೂಕ್ತದ ಹದಿನಾರನೆಯ ಮಂತ್ರವು ದಿಗ್ದೇವತೆಯ ಪರವಾಗಿದೆ ಎಂದು ಹೇಳಿದೆ. ಸಾಯಣರು ಭಾಷ್ಯದಲ್ಲಿ ದಿಶಃ ಮೇಘಾ ವಾ ಆ ಧುನಯಂತಾಂ ಆ ದುಹಂತು ದಿಕ್ಕುಗಳು ಅಥವಾ ಮೇಘಗಳು ನಮ್ಮನ್ನು ಸಂತೋಷದಿಂದ ಇರಿಸಲಿ ಎಂದು ಅರ್ಥವನ್ನು ವಿವರಿಸಿದ್ದಾರೆ. ದಿಗ್ವಾಚಕವಾದ ಪದವಾಗಲಿ, ಮೇಘವಾಚಕವಾದ ಪದವಾಗಲಿ ಇಲ್ಲಿ ಪ್ರತ್ಯೇಕವಾಗಿ ಪ್ರಯುಕ್ತವಾಗಿಲ್ಲ. ಆದರೆ ವಿಶೇಷಣಗಳು ಮಾತ್ರ, ಮೇಘ ಅಥವಾ ದಿಕ್ಕುಗಳು ಎಂಬ ಎರಡು ವಿಧವಾದ ಅರ್ಥಗಳಿಗೂ ಸಾಧಾರಣವಾಗಿವೆ

ಮೇಘಗಳು ವೃಷ್ಟಿಯನ್ನು ಸುರಿಸುವುದರ ಮೂಲಕ ಜಗತ್ತನ್ನು ಸಂತೋಷಪಡಿಸುವುದು ಅಶಿಶ್ವೀಃ- ಪುತ್ರರಿಲ್ಲದಿರುವುದೂ ಅಥವಾ ಮಕ್ಕಳನ್ನು ಹೊಂದದೆ ಇರುವುದು, ಶಶಯಾಃ—ಅಂತರಿಕ್ಷದಲ್ಲಿಯೇ ಇರುವುದು,

CC-0. Jangamwadi Math Collection. Digitized by eGangotri

ಅಪ್ರದುಗ್ಧಾಃ-ಉದಕದಿಂದ ತುಂಬಿರುವುದು, ಸಬರ್ದುಘಾಃ ಉದಕರೂಪದಿಂದ ಇರುವ ಕ್ಷೀರವನ್ನು ಹಿಂಡುವುದು, ಯುವತಯಃ-ಪರಸ್ಪರವಾಗಿ ಸೇರಿ ಇರುವುದು, ನವ್ಯಾನವ್ಯಾಃ-ಹೊಸಹೊಸದಾಗಿರುವ ರೀತಿಯಿಂದ ಇರುವುದು ಎಂಬ ಧರ್ಮಗಳೆಲ್ಲವೂ ದಿಕ್ಕುಗಳಲ್ಲಿಯೂ ಇರುತ್ತವೆಯಾದುದರಿಂದ ಈ ಮೇಘಗಳಾಗಲಿ, ದಿಕ್ಕುಗಳಾಗಲಿ ಯಜಮಾನರಾದ ನಮ್ಮನ್ನು ಸಂತೋಷದಿಂದ ಇರಿಸಲಿ ಎಂದು ಯಜಮಾನರ ಪ್ರಾರ್ಥನೆಯು ಉಕ್ತವಾಗಿರುತ್ತದೆ.

---

ಸಂಹಿತಾಪಾಠಃ

ಯದನ್ಯಾಸು ವೃಷಭೋ ರೋರವೀತಿ ಸೋ ಅನ್ಯಸ್ಮಿನ್ಯೂಥೇ ನಿ ದಧಾತಿ ರೇತಃ।

ಸ ಹಿ ಕ್ಷಪಾವಾನ್ತ್ಸ ಭಗಃ ಸ ರಾಜಾ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ಯತ್ । ಅನ್ಯಾಸು । ವೃಷಭಃ । ರೋರವೀತಿ । ಸಃ । ಅನ್ಯಸ್ಮಿನ್ । ಯೂಥೇ । ನಿ । ದಧಾತಿ । ರೇತಃ ।

ಸಃ । ಹಿ । ಕ್ಷಪಾऽವಾನ್ । ಸಃ । ಭಗಃ । ಸಃ । ರಾಜಾ । ಮಹತ್ । ದೇವಾನಾಂ । ಅಸುರऽತ್ವಂ । ಏಕಂ॥
॥ ೧೭ ॥

ಸಾಯಣಭಾಷ್ಯಂ

ವೃಷಭೋऽಪಾಂ ವರ್ಷಕೋ ಯದ್ಯಃ ಪರ್ಜನ್ಯಾತ್ಮೇಂದ್ರೋऽನ್ಯಾಸು ದಿಕ್ಷು ರೋರವೀತಿ ಮೇಘದ್ವಾರಾ ಭೃಶಂ ಶಬ್ದಂ ಕರೋತಿ ಸ ಪರ್ಜನ್ಯ ಇಂದ್ರೋऽನ್ಯಸ್ಮಿನ್ಯೂಥೇ ದಿಶಾಂ ವೃಂದೇ ರೇತ ಉದಕಂ ನಿ ದಧಾತಿ । ತತ್ರ ವರ್ಷತಿ । ಲೋಕೇ ಹಿ ವೃಷಭಃ ಕಾಸುಚಿದ್ಗೋಷು ರೇತಃಸೇಕಾರ್ಥಂ ರವಂ ಕರೋತ್ಯನ್ಯಸ್ಮಿನ್ ಗೋಯೂಥೇ ರೇತಃ ಸಿಂಚತಿ । ತದ್ವತ್ । ಸ ಇಂದ್ರಃ ಕ್ಷಪಾವಾನ್ । ಕ್ಷಿಪತಿ ಶತ್ರೂ-ನುದಕಂ ವೇತಿ ಕ್ಷೇಪಣವಾನ್ । ಯದ್ವಾ । ಕ್ಷಪಾ ರಾತ್ರಿಃ । ತಥಾ ರಾತ್ರಿಪರ್ಯಾಯಯೋಗಾನಾಂ ಸ್ತೋ-ತ್ರಾಣಾಂ ಭಾಗಭೂತಾ ಯಾ ರಾತ್ರಿಃ ಸೋಚ್ಯತೇ । ತದ್ವಾನ್ । ಸ ಭಗಃ । ಸರ್ವೈರ್ಭಜನೀಯಃ । ಸ ರಾಜಾ ಹಿ । ತತ್ತತ್ಕರ್ಮಾನುರೂಪಫಲಪ್ರದಾನೇನ ಸರ್ವೇಷಾಂ ರಾಜಾ ಖಲು ॥ ರೋರವೀತಿ । ರು ಶಬ್ದ ಇತ್ಯಸ್ಯ ಯಙ್ಲುಗಂತಸ್ಯ ಲಟಿ ರೂಪಂ । ಏಕಾನ್ಯಾಭ್ಯಾಂ ಸಮರ್ಥಾಭ್ಯಾಮಿತಿ ಪ್ರಥಮಸ್ಯ ನ ನಿಘಾತಃ। ಯೂಥೇ । ಯು ಮಿಶ್ರಣೇ । ತಿಥಪೃಷ್ಠಗೂಥಯೂಥಪ್ರೋಥಾ ಇತಿ ಥಕ್ಪ್ರತ್ಯಯಾಂತತ್ವೇನ ನಿಪಾತ-ನಾದ್ದೀರ್ಘಃ । ರೇತಃ । ರೀಙ್ ಕ್ಷರಣ ಇತ್ಯಸ್ಮಾತ್ ಸ್ರುರೀಭ್ಯಾಂ ತುಟ್ ಚೇತ್ಯಸುನ್ಪ್ರತ್ಯಯಸ್ತದಾಗ-ಮಶ್ಚ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ವೃಷಭಃ—ಉದಕವನ್ನು ಸುರಿಸುವ । **ಯತ್**—ಯಾವ ಪರ್ಜನ್ಯಾತ್ಮನಾದ ಇಂದ್ರನು । **ಅನ್ಯಾಸು**—ಬೇರೆ ದಿಕ್ಕುಗಳಲ್ಲಿ । ರೋರವೀತಿ—ಮೇಘದ್ವಾರಾ ಶಬ್ದಮಾಡುತ್ತಾನೆಯೋ । ಸಃ—ಅದೇ ಪರ್ಜನ್ಯಾತ್ಮನಾದ

CC-0. Jangamwadi Math Collection. Digitized by eGangotri

ಇಂದ್ರನು । ಅನ್ಯಸ್ಮಿನ್ ಯೂಥೇ—ಇನ್ನು ಬೇರೆ ದಿಕ್ಕಿನಲ್ಲಿ । ರೇತಃ—ವೃಷ್ಟಿರೂಪವಾದ ಉದಕವನ್ನು । ನಿ ದಧಾತಿ—ಸುರಿಸುತ್ತಾನೆ । ಸಃ—ಅದೇ ಇಂದ್ರನು । ಕ್ಷಪಾವಾನ್—ರಾತ್ರಿಯುಕ್ತನೂ । ಸಃ-ಅವನೇ । ಭಗಃ-ಪೂಜ್ಯನೂ । ಸಃ—ಅವನೇ । ರಾಜಾ ಹಿ—ಪ್ರಭುವೂ ಆಗಿದ್ದಾನೆ । ದೇವಾನಾಂ—ದೇವತೆಗಳ । ಅಸುರತ್ವಂ—ಪ್ರಾಬಲ್ಯವು । ಮಹತ್—ಮಹತ್ತಾದುದೂ । ಏಕಂ—ಅದ್ವಿತೀಯವಾದುದೂ ಆಗಿದೆ.

ಭಾವಾರ್ಥ

ವೃಷ್ಟಿಕಾರಕನೂ, ಪರ್ಜನ್ಯಾತ್ಮನೂ ಆದ ಇಂದ್ರನು ಮೇಘದ ದ್ವಾರಾ ಒಂದು ದಿಕ್ಕಿನಲ್ಲಿ ಗುಡುಗಿನ ಶಬ್ದವನ್ನುಂಟುಮಾಡಿ ಇನ್ನೊಂದು ದಿಕ್ಕಿನಲ್ಲಿ ವೃಷ್ಟಿಯನ್ನು ಸುರಿಸುತ್ತಾನೆ. ಇಂದ್ರನು ನಿಶಾಯುಕ್ತನೂ, ಪೂಜ್ಯನೂ ಪ್ರಭುವೂ ಆಗಿದ್ದಾನೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅದ್ವಿತೀಯವಾದುದೂ ಆಗಿದೆ.

English Translation

When the showerer roars in other (regions) he sends down the rain upon a different herd, for he is the victor, the asuspicious, the sovereign : great and unequalled is the might of the gods,

ವಿಶೇಷವಿಷಯಗಳು

**ರೇತಃ** ಎಂಬ ಪದವು ಉದಕನಾಮಗಳಲ್ಲಿ (ನಿ. ೧-೧೨) ಉಕ್ತವಾಗಿದೆ. ಪರ್ಜನ್ಯರೂಪದಿಂದ ಇರುವ ಇಂದ್ರನು ವೃಷಭರೂಪದಿಂದ ಇರುವನೆಂದು ವರ್ಣಿಸಿದೆ. **ವೃಷಭಃ ಅಪಾಂ ವರ್ಷಕಂ ಅನ್ಯಾಸು ದಿಕ್ಷು ಮೇಘದ್ವಾರಾ ಭೃಶಂ ಶಬ್ದಂ ಕರೋತಿ ಅನ್ಯಸ್ಮಿನ್ ಯೂಥೇ ದಿಶಾಂ ವೃಂದೇ ಉದಕಂ ವರ್ಷತಿ । ಲೋಕೇ ಹಿ ವೃಷಭಃ ಕಾಸುಚಿತ್ ಗೋಷು ರೇತಸ್ಸೇಕಾರ್ಥಂ ರವಂ ಕರೋತಿ ಅನ್ಯಸ್ಮಿನ್ ಗೋಯೂಥೇ ರೇತಸ್ಸಿಂಚತಿ ತದ್ವತ್** । ಲೋಕದಲ್ಲಿ ಗೂಳಿಯು ಗೋವುಗಳ ಹಿಂಡಿನಲ್ಲಿ ಗುಟುರು ಹಾಕುತ್ತಿದ್ದರೂ ಬೇರೆ ಹಿಂಡಿನಲ್ಲಿರುವ ಗೋವಿನೊಡನೆ ಸಂಗಮಾಡುವುದು. ಇದರಂತೆಯೇ ಇಂದ್ರನು ಒಂದು ದಿಕ್ಕಿನಲ್ಲಿ ವೃಷ್ಟಿಯನ್ನು ಸುರಿಸಲುಮೇಘಗಳ ಮೂಲಕವಾಗಿ ಧ್ವನಿಮಾಡುತ್ತಾ, ಇನ್ನೊಂದು ದಿಕ್ಕಿನಲ್ಲಿ ವೃಷ್ಟಿಯ ರೂಪದಿಂದ ಉದಕಗಳನ್ನು ಸುರಿಸುವನು ಎಂದು ವೃಷಭದ ಹೋಲಿಕೆಯು ಇಂದ್ರನಿಗೆಉಪಪಾದಿತವಾಗಿದೆ.

**ಕ್ಷಪಾವಾನ್**—ಎಂಬ ಪದಕ್ಕೆ ಎರಡು ವಿಧವಾದ ಅರ್ಥವು ವಿವೃತವಾಗಿದೆ. ಕ್ಷಪಾ ಶಬ್ದಕ್ಕೆ ಕ್ಷೇಪಣ ಎಸೆಯುವುದು ಎಂದು ಅರ್ಥವನ್ನು ಹೇಳಿದೆ. ಇದರಿಂದ ಇಂದ್ರನು ಶತ್ರುಗಳನ್ನು ಓಡಿಸುವವನು ಅಥವಾ ಉದಕಗಳನ್ನು ಲೋಕಗಳಿಗಾಗಿ ಸುರಿಸುವವನು ಎಂದು ವಿವರಿಸಿದೆ.

ಕ್ಷಪಾ ಎಂಬ ಪದವು ರಾತ್ರಿನಾಮಗಳಲ್ಲಿ (ನಿ. ೧-೧೮) ಉಕ್ತವಾಗಿದೆ. ಸಾಯಣರು ಕ್ಷಪಾ ರಾತ್ರಿಃ । **ರಾತ್ರಿಪರ್ಯಾಯಯಾಗಾನಾಂ ಸ್ತೋತ್ರಾಣಾಂ ಭಾಗಭೂತಾ ಯಾ ರಾತ್ರಿಃ ಸೋಚ್ಯತೇ । ತದ್ವಾನ್** । ಕ್ಷಪಾ ಶಬ್ದದಿಂದರಾತ್ರಿಯು ಉಕ್ತವಾಗಿದೆ. ರಾತ್ರಿಕಾಲದಲ್ಲಿ ಅನುಷ್ಠಿತವಾಗುವ ಯಾಗಗಳಲ್ಲಿ ಸ್ತೋತ್ರಗಳನ್ನು ಪಠಿಸಲರ್ಹವಾದ ರಾತ್ರಿಗಳು ಇಂದ್ರನ ಸ್ತೋತ್ರಗಳನ್ನು ಒಳಗೊಂಡಿರುವುದರಿಂದ ಇಂದ್ರನು ಕ್ಷಪಾವಂತನೆಂದು ಎರಡನೆಯ ಅರ್ಥವನ್ನು ವಿವರಿಸಿದ್ದಾರೆ.

CC-0. Jangamwadi Math Collection. Digitized by eGangotri

ಸಃ ಭಗಃ ರಾಜಾ ಹಿ—ಸರ್ವೈಃ ಭಜನೀಯಃ । ತತ್ತತ್ಕರ್ಮಾನುರೂಪಫಲಪ್ರದನೇನ ಸರ್ವೇಷಾಂ ರಾಜಾ। ಇಂದ್ರನು ಸರ್ವರಿಂದಲೂ ಸೇವಿಸಲು ಅರ್ಹನಾದವನೂ ಅವರವರಿಗೆ ಆಯಾಯ ಕರ್ಮಗಳ ಅನುರೂಪವಾದ ಫಲವನ್ನು ಅನುಗ್ರಹಿಸುವವನೂ ಆದುದರಿಂದ ಪ್ರಭುವಾಗಿರುವನು ಎಂದೂ, ದೇವತೆಗಳ ಪ್ರಾಬಲ್ಯವು ಅಸಾಧಾರಣ ವಾದುದೂ ಮತ್ತು ಮುಖ್ಯವಾಗಿರುವುದೂ ಎಂದು ವರ್ಣಿತವಾಗಿದೆ.

---

ಸಂಹಿತಾಪಾಠಃ

ವೀರಸ್ಯ ನು ಸ್ವಶ್ವ್ಯಂ ಜನಾಸಃ ಪ್ರ ನು ವೋಚಾಮ ವಿದುರಸ್ಯ ದೇವಾಃ ।
ಷೋಳ್ಹಾ ಯುಕ್ತಾಃ ಪಂಚಪಂಚಾ ವಹಂತಿ ಮಹದ್ದೇವಾನಾಮಸುರತ್ವ
ಮೇಕಂ ॥ ೧೮ ॥

ಪದಪಾಠಃ

ವೀರಸ್ಯ । ನು । ಸುಽಅಶ್ವ್ಯಂ । ಜನಾಸಃ । ಪ್ರ । ನು । ವೋಚಾಮ । ವಿದುಃ । ಅಸ್ಯ । ದೇವಾಃ ।

ಷೋಳ್ಹಾ । ಯುಕ್ತಾಃ । ಪಂಚಽಪಂಚ । ಆ । ವಹಂತಿ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ॥

ಸಾಯಣಭಾಷ್ಯಂ

ಹೇ ಜನಾಸೋ ಜನಾ ವೀರಸ್ಯ ಶೂರಸ್ಯೇಂದ್ರಸ್ಯ ಸ್ವಶ್ವ್ಯಂ ಶೋಭನಾಶ್ವೋಪೇತತ್ವಂ ನು ಕ್ಷಿಪ್ರಂ ಪ್ರ ವೋಚಾಮ । ಪ್ರಕರ್ಷೇಣ ವದಾಮ । ತಥಾ ದೇವಾ ಅಸ್ಯಸ್ಯೇಂದ್ರಸ್ಯ ಸ್ವಶ್ವತಂ ವಿದುಃ । ಜಾನಂತಿ । ಕಿಂ ತತ್ಸ್ವಶ್ವತ್ವಂ । ತದುಚ್ಯತೇ । ಷೋಳ್ಹಾ ಮಾಸಾನಾಂ ದ್ವಂದ್ವಯೋಗಕಾಲೇ ಷೋಢಾ ದೃಶ್ಯಮಾನಾ ಋತವೋಽಶ್ವಾ ನಿರೂಪ್ಯಂತೇ । ತೇ ಚ ಷಟ್ಸಂಖ್ಯಾಕಾ ಋತವೋ ಹೇಮಂತಶಿಶಿರಯೋಃ ಸಮಾಸೇನ ಪಂಚ ಪಂಚ ಯುಕ್ತಾಃ ಸಂತಃ ಕಾಲಾತ್ಮಕಮಿಂದ್ರಮಾ ವಹಂತಿ । ತದಿದಮಿಂದ್ರಸ್ಯ ಸ್ವಶ್ವತ್ವಂ ಯದೃತುಭಿರೂಢತ್ವಂ ॥ ಷೋಳ್ಹಾ । ಷಷ್ಶಬ್ದಾತ್ಸಂಖ್ಯಾಯಾ ವಿಧಾರ್ಥೇ ಧೇತಿ ಧಾಪ್ರತ್ಯಯಃ ' ಷಷ ಉತ್ವಂ ದತೃದಶಧಾಸೂತ್ತರಪದಾದೇಃ ಷ್ಟುತ್ವಂ ಚ । ಪಾ ೬-೩-೧೦೯-೩। ಇತ್ಯುತ್ವಂ ಷ್ಟುತ್ವಂ ಚ।ಪ್ರತ್ಯಯಸ್ವರಃ॥

ಪ್ರತಿಪದಾರ್ಥ

ಜನಾಸಃ—ಎಲೈ ಪ್ರಜೆಗಳೇ । ವೀರಸ್ಯ—ಶೂರನಾದ ಇಂದ್ರನ । ಸ್ವಶ್ವ್ಯಂ—ಅಶ್ವಗಳೊಡಗೂಡಿರುವಿಕೆಯನ್ನು । ನು—ಈಗಲೇ । ಪ್ರ ವೋಚಾಮ—ಪ್ರಕಟಿಸುತ್ತಾ ಪ್ರಶಂಸಿಸುತ್ತೇವೆ । ದೇವಾಃ—ದೇವತೆಗಳೂ ಸಹ । ಅಸ್ಯ—ಈ ಇಂದ್ರನು ಅಶ್ವಯುಕ್ತನಾಗಿರುವುದನ್ನು । ನು—ಒಡನೆಯೇ । ವಿದುಃ—ತಿಳಿಯುತ್ತಾರೆ। ಷೋಳ್ಹಾ—ಷಡೃತುರೂಪದ ಅಶ್ವಗಳು । ಪಂಚಪಂಚಯುಕ್ತಾಃ—(ಹೇಮಂತ ಮತ್ತು ಶಿಶಿರಗಳು ಅಭಿನ್ನವಾಗಿ) ಐದು

CC-0. Jangamwadi Math Collection. Digitized by eGangotri

ರೂಪದಲ್ಲಿದ್ದು । ಆ ವಹಂತಿ—ಇಂದ್ರನನ್ನು ವಹಿಸುತ್ತವೆ । ದೇವಾನಾಂ—ದೇವತೆಗಳ । ಅಸುರತ್ವಂ—ಪ್ರಾಬಲ್ಯವು । ಮಹತ್—ಮಹತ್ತಾದುದೂ । ಏಕಂ—ಅದ್ವಿತೀಯವಾದುದೂ ಆಗಿದೆ.

ಭಾವಾರ್ಥ

ಎಲೈ ಪ್ರಜೆಗಳೇ, ಶೂರನಾದ ಇಂದ್ರನು ಅಶ್ವಯುಕ್ತನಾಗಿರುವುದನ್ನು ನಾವು ಪ್ರಶಂಸಿಸಿ ಪ್ರಕಟಿಸುತ್ತೇವೆ. ಇಂದ್ರನು ಅಶ್ವಯುಕ್ತನಾಗಿರುವುದನ್ನು ದೇವತೆಗಳೂ ಅರಿಯುತ್ತಾರೆ ಷಡೃತುರೂಪದ ಕಾಲಾತ್ಮಕವಾದ ಅಶ್ವಗಳು ಹೇಮಂತ ಮತ್ತು ಶಿಶಿರಋತುಗಳ ಐಕ್ಯತೆಯಿಂದ ಐದುರೂಪದಲ್ಲಿದ್ದು ಇಂದ್ರನನ್ನು ವಹಿಸುತ್ತವೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ ಅದ್ವಿತೀಯವಾದುದೂ ಆಗಿದೆ.

English Translation

We proclaim, people, the wealth of the hero, (Indra), in horses; the gods know his (affluence); six, or five and five, harnessed to his car, convey him; great and unequalled is the might of the gods,

ವಿಶೇಷವಿಷಯಗಳು

**ಷೋಳ್ಹಾ—ಮಾಸಾನಾಂ ದ್ವಂದ್ವಯೋಗಕಾಲೇ ಷೋಢಾ ದೃಶ್ಯಮಾನಾಃ ಋತವಃ ಅಶ್ವಾಃ ನಿರೂಪ್ಯಂತೇ । ತೇ ಚ ಷಟ್ ಸಂಖ್ಯಾಕಾಃ । ಋತವಃ ಹೇಮಂತಶಿಶಿರಯೋಃ ಸಮಾಸೇನ ಪಂಚಪಂಚ ಯುಕ್ತಾಃ ಸಂತಃ ಕಾಲಾತ್ಮಕಮಿಂದ್ರಂ ಆವಹಂತಿ । ತದಿದಂ ಇಂದ್ರಸ್ಯ ಸ್ವಶ್ವತ್ವಂ ಯದ್ವೃತಭಿರೂಢತ್ವಂ ।** ಇಂದ್ರನು ಉತ್ತಮವಾದ ಅಶ್ವಗಳಿಂದ ಯುಕ್ತನಾಗಿರುವನು ಎಂದೂ, ಅಸ್ಯ ಸ್ವಶ್ವತ್ವಂ ದೇವಾ ಅಪಿ ಜಾನಂತಿ ಈ ಇಂದ್ರನ ಉತ್ತಮವಾದ ಅಶ್ವಗಳಿಂದ ಯುಕ್ತನಾಗಿರುವಿಕೆಯನ್ನು ದೇವತೆಗಳೂ ತಿಳಿದು ಇರುವರು ಎಂದೂ ವರ್ಣಿತವಾಗಿರುತ್ತದೆ ಇಲ್ಲಿ ಉಕ್ತವಾಗಿರುವ ಶೋಭನಾಶ್ವಗಳಿಂದ ಯುಕ್ತವಾಗಿರುವಿಕೆಯು **ಷೋಳ್ಹಾ** ಎಂಬ ವಿವರಣೆಯಿಂದ ವಿಸ್ಪಷ್ಟವಾಗಿದೆ. ಇಂದ್ರನು ಕಾಲರೂಪದಿಂದ ಇರುವನೆಂದೂ, ಕಾಲಸ್ವರೂಪದಿಂದ ಇರುವ ಇಂದ್ರನಿಗೆ ಪನ್ನೆರಡು ಮಾಸಗಳು ಸೇರಿ ಆರು ಜೋಡಿ ಋತುಗಳಾಗಿವೆ. ಅವುಗಳಲ್ಲಿ ಹೇಮಂತ, ಶಿಶಿರ ಎಂಬ ಋತುಗಳು ಎರಡೂ ಒಂದಾಗಿ ಸೇರಿದರೆ ಐದು ಋತುಗಳು ಆಗುತ್ತವೆ. ಇದರಿಂದ ಐದು ಸಂಖ್ಯೆಯಿಂದ ಇರುವ ಈ ಋತುಗಳು ಐದು ಅಶ್ವಗಳಾಗಿ ನಿರೂಪಿತವಾಗಿವೆ. ಈ ಐದು ಅಶ್ವಗಳೂ ಕಾಲರೂಪದಿಂದ ಇರುವ ಇಂದ್ರನನ್ನು ವಹಿಸುತ್ತವೆ. ಇದನ್ನೇ ಋತುಗಳಿಂದ ಇಂದ್ರನ ಶೋಭನಾಶ್ವಯುಕ್ತತ್ವವು ಎಂದು ಉಪಾದಿತವಾಗಿದೆ. ಹನ್ನೆರಡು ಮಾಸಗಳಿಂದ ಆರು ಋತುಗಳು ಆದಾಗ್ಯೂ ಹೇಮಂತ, ಶಿಶಿರ ಎಂಬ ಎರಡು ಋತುಗಳು ಒಂದೇ ವಿಧವಾದ ಧರ್ಮದಿಂದ ಕೂಡಿರುವ ಕಾರಣ ಇವೆರಡೂ ಒಂದೇ ಆಗಿರುವುದೆಂದು ಪರಿಗಣಿತವಾಗಿದೆ. ಇದರಿಂದ ಐದು ಋತುಗಳು ಐದು ಅಶ್ವಗಳೆಂದೂ, ಇವುಗಳು ಸೂರ್ಯತಾದಾತ್ಮ್ಯದಿಂದ ಕಾಲಾತ್ಮಕನಾಗಿರುವ ಇಂದ್ರನನ್ನು ವಹಿಸುತ್ತವೆ ಎಂದೂ ಇಂದ್ರನ ಮಾಹಾತ್ಮ್ಯವು ಪ್ರಬಲವಾಗಿರುವುದೆಂದೂ ವರ್ಣಿತವಾಗಿದೆ.

**ವೀರೋ ವೀರಯತ್ಯಮಿತ್ರಾನ್ ವೇತೇರ್ವಾ ಸ್ಯಾದ್ಗತಿಕರ್ಮಣಃ ವೀರಯತೇರ್ವಾ** (ನಿ. ೧-೭) ಅನೇಕ ವಿಧವಾಗಿ ಶತ್ರುಗಳನ್ನು ನಾಶಮಾಡುವುದು, ಶತ್ರುಗಳಿಗೆ ಅಭಿಮುಖವಾಗಿ ಹೋಗಿ ಎದುರಿಸುವುದು, ಪರಾಕ್ರಮದಿಂದ ಯುಕ್ತನಾಗಿರುವುದು ಎಂದು ವೀರಶಬ್ದದ ವಿವರಣೆಯು ಯಾಸ್ಕರಿಂದ ಉಕ್ತವಾಗಿದೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ಪುಪೋಷ ಪ್ರಜಾಃ ಪುರುಧಾ ಜಜಾನ।

ಇಮಾ ಚ ವಿಶ್ವಾ ಭುವನಾನ್ಯಸ್ಯ ಮಹದ್ದೇವಾನಾಮಸುರತ್ವಮೇಕಂ ॥೧೯॥

ಪದಪಾಠಃ

ದೇವಃ । ತ್ವಷ್ಟಾ । ಸವಿತಾ । ವಿಶ್ವಽರೂಪಃ । ಪುಪೋಷ । ಪ್ರಽಜಾಃ । ಪುರುಧಾ । ಜಜಾನ ।

ಇಮಾ । ಚ । ವಿಶ್ವಾ । ಭುವನಾನಿ । ಅಸ್ಯ । ಮಹತ್ । ದೇವಾನಾಂ। ಅಸುರಽತ್ವಂ । ಏಕಂ ॥ ೧೯ ॥

ಸಾಯಣಭಾಷ್ಯಂ

ತ್ವಾಷ್ಟ್ರೇ ಪಶೌ ಹವಿಷೋಽನುವಾಕ್ಯಾ ದೇವಸ್ತ್ವಷ್ಟೇತ್ಯೇಷಾ । ಸೂತ್ರಿತಂ ಚ । ದೇವಸ್ತ್ವಷ್ಟಾ ಸವಿತಾ ವಿಶ್ವರೂಪೋ ದೇವ ತ್ವಷ್ಟರ್ಯದ್ಧ ಚಾರುತ್ವಮಾನಟ್ । ಆ. ೩-೮ । ಇತಿ ॥

ಸವಿತಾಂತರ್ಯಾಮಿತಯಾ ಸರ್ವಸ್ಯ ಪ್ರೇರಕೋ ವಿಶ್ವರೂಪೋ ನಾನಾವಿಧರೂಪಸ್ತ್ವಷ್ಟಾ ತ್ವಷ್ಟೃನಾಮಕೋ ದೇವಃ ಪ್ರಜಾಃ ಪುರುಧಾ ಬಹುಧಾ ಜಜಾನ । ಜನಯತಿ । ತಾಶ್ಚ ಪುಪೋಷ । ಪೋಷಯತಿ । ಇಮೇವಾನಿ ವಿಶ್ವಾ ವಿಶ್ವಾನಿ ಸರ್ವಾಣಿ ಭುವನಾನಿ ಭೂತಜಾತಾನಿ ಚಾಸ್ಯ ತ್ವಷ್ಟುಃ ಸಂಬಂಧೀನಿ ॥ ವಿಶ್ವರೂಪಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ ॥

ಪ್ರತಿಪದಾರ್ಥ

ಸವಿತಾ—ಸರ್ವರಿಗೂ ಪ್ರೇರಕನೂ । ವಿಶ್ವರೂಪಃ—ನಾನಾವಿಧವಾದ ರೂಪವುಳ್ಳವನೂ । ತ್ವಷ್ಟಾ ದೇವಃ—ದೇವತಾತ್ಮನೂ ಆದ ತ್ವಷ್ಟೃವು । ಪ್ರಜಾಃ—ಪ್ರಜೆಗಳನ್ನು । ಪುರುಧಾ—ಬಹುವಿಧವಾಗಿ । ಜಜಾನ—ಸೃಷ್ಟಿಸುತ್ತಾನೆ । ಪುಪೋಷ—(ಮತ್ತು) ಪೋಷಿಸುತ್ತಾನೆ । ಇಮಾ ವಿಶ್ವಾ ಭುವನಾನಿ—ಸಮಸ್ತವಾದ ಈ ಭೂತ ಜಾತಗಳೆಲ್ಲವೂ । ಅಸ್ಯ—ಈ ತ್ವಷ್ಟೃವಿಗೆ ಸಂಬಂಧಿಸಿವೆ । ದೇವಾನಾಂ—ದೇವತೆಗಳ। ಅಸುರತ್ವಂ—ಪ್ರಾಬಲ್ಯವು ಮಹತ್—ಮಹತ್ತಾದುದೂ । ಏಕಂ—ಅಸಾಧಾರಣವಾದುದೂ ಆಗಿದೆ.

ಭಾವಾರ್ಥ

ಸರ್ವರಿಗೂ ಪ್ರೇರಕನೂ, ನಾನಾವಿಧವಾದ ರೂಪವುಳ್ಳವನೂ, ದೇವತಾತ್ಮನೂ ಆದ ತ್ವಷ್ಟೃವು ಪ್ರಜೆಗಳನ್ನು ಬಹುವಿಧವಾಗಿ ಸೃಷ್ಟಿಸುತ್ತಾನೆ ಮತ್ತು ಪೋಷಿಸುತ್ತಾನೆ . ಸಮಸ್ತವಾದ ಈ ಭೂತಜಾತಗಳೆಲ್ಲವೂ ಸಹ ಆ ತ್ವಷ್ಟೃವಿಗೆ ಸಂಬಂಧಿಸಿವೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅಸಾಧಾರಣವಾದುದೂ ಆಗಿದೆ.

English Translation

The divine Twashtri the impeller (of all), the multiform, has begotten and nourished a numerous progeny, for all these worlds are of him : great and unequalled is the might of the gods.

CC-0. Jangamwadi Math Collection. Digitized by eGangotri

### ವಿಶೇಷವಿಷಯಗಳು

**ಸವಿತಾ—ಅಂತರ್ಯಾಮಿತಯಾ ಸರ್ವಸ್ಯ ಪ್ರೇರಕಃ** । ಸವಿತೃಪದಕ್ಕೆ ಅಂತರ್ಯಾಮಿಯಾಗಿರುವುದರಿಂದ ಸರ್ವವನ್ನೂ ಪ್ರೇರಿಸುವವನು ಎಂದು ಅರ್ಥವನ್ನು ಸಾಯಣರು ವಿವರಿಸಿದ್ದಾರೆ. ಯಾಸ್ಕರು ಸವಿತಾ—**ಸರ್ವಸ್ಯ ಪ್ರಸವಿತಾ**-ಸರ್ವವನ್ನೂ ಉತ್ಪನ್ನಮಾಡುವವನು ಎಂದು ವಿವರಿಸಿದ್ದಾರೆ

**ತ್ವಷ್ಟಾ ದೇವಃ ಪ್ರಜಾಃ ಪುರುಧಾ ಜಜಾನ ಪುಪೋಷ ವಿಶ್ವಾ ಭುವನಾನಿ ಚ ಅಸ್ಯ—ತ್ವಷ್ಟೃನಾಮಕಃ ದೇವಃ ಪ್ರಜಾಃ ಬಹುಧಾ ಜನಯತಿ ಪೋಷಯತಿ । ಇಮಾನಿ ಸರ್ವಾಣಿ ಭೂತಜಾತಾನಿ ಚ ತ್ವಷ್ಟುಃ ಸಂಬಂಧೀನಿ** । ತ್ವಷ್ಟೃ ಎಂದು ಹೆಸರುಳ್ಳ ದೇವನು ಪ್ರಜೆಗಳನ್ನು ನಾನಾವಿಧವಾಗಿರುವ ಹಾಗೆ ನಿರ್ಮಿಸಿರುವನು ಮತ್ತು ಅವುಗಳನ್ನು ಪೋಷಿಸುವನು. ಈ ಪ್ರಜೆಗಳೆಲ್ಲವೂ ತ್ವಷ್ಟೃದೇವನಿಗೆ ಸಂಬಂಧಿಸಿದವುಗಳಾಗಿರುತ್ತವೆ ಎಂದು ಸಾಯಣರು ತಿಳಿಸಿದ್ದಾರೆ.

ಯಾಸ್ಕರು ಈ ಋಕ್ಕಿಗೆ ನಿರ್ವಚನವನ್ನು ಈರೀತಿ ಹೇಳಿದಾರೆ—ದೇವಸ್ತ್ವಷ್ಟಾ ಸವಿತಾ **ಸರ್ವರೂಪಃ ಪೋಷತಿ** ಪ್ರಜಾಃ ರಸಾನುಪ್ರದಾನೇನ ಬಹುಧಾ **ಚೇಮಾ** ಜನಯತೀಮಾನಿ ಚ ಸರ್ವಾಣಿ ಭೂತಾನ್ಯುದಕಾನ್ಯಸ್ಯ ಮಹಚ್ಚಾಸ್ಮೈ **ದೇವಾನಾಮಸುರತ್ವಮೇಕಂ ಪ್ರಜ್ಞಾವತ್ತ್ವಂ** ವಾನವತ್ತ್ವಂ ವಾಪಿ ವಾ । **ಅಸುರಿತಿ ಪ್ರಜ್ಞಾನಾಮ ಅಸ್ಯತ್ಯನರ್ಥಾನ್ ಅಸ್ತಾಶ್ಚಾಸ್ಯಾಮರ್ಥಾಃ । ಅಸುರತ್ವಮಾದಿಲುಪ್ತಂ ।** (ನಿ. ೧೦-೩೪) ತ್ವಷ್ಟೃದೇವನು ಎಲ್ಲಾ ಪ್ರಾಣಿಗಳನ್ನು ಉತ್ಪನ್ನಮಾಡಿರುವನು. ಉದಕಗಳನ್ನು ಅನುಗ್ರಹಿಸುವುದರಿಂದ ಪೋಷಿಸುವನು, ವೃದ್ಧಿಗೊಳಿಸುವನು. ಈ ಭೂತಜಾತಗಳೂ ಉದಕಗಳೂ ಈ ದೇವನಿಗೆ ಸಂಬಂಧಿಸಿರುವುವು ಆದುದರಿಂದಲೇ ಈ ದೇವನು ಪ್ರಾಣಿಗಳನ್ನು ಉತ್ಪನ್ನಮಾಡಿ, ಪೋಷಣೆಮಾಡಿ, ವೃದ್ಧಿಗೊಳಿಸುವನು. ಇದರಿಂದ ಈ ದೇವನ ಅಸುರತ್ವವು ಅಸಾಧಾರಣವಾದುದು ಎಂದು ವಿವರಿಸಿದ್ದಾರೆ. ಮತ್ತು ಅಸುರಶಬ್ದಾರ್ಥವನ್ನು ವಿವರಿಸಿದ್ದಾರೆ. ಅಪಾಯಗಳಿಂದ ತಪ್ಪಿಸುವುದಾದುದರಿಂದ ಅಸು ಶಬ್ದದಿಂದ ಪ್ರಜ್ಞೆಯು ವಾಚ್ಯವಾಗಿರುವುದು. ಅಥವಾ ಪ್ರಜ್ಞೆಗೆ ವಿಷಯವಾಗದಿರುವುದು ಯಾವುದೂ ಇಲ್ಲ. ಆದುದರಿಂದ **ಅಸುರ** ಎಂದರೆ ಪ್ರಜ್ಞಾವಂತನೆಂದು ಅರ್ಥವನ್ನು ಹೇಳಿದ್ದಾರೆ. ಮತ್ತು **ಅಸುರತ್ವಂ ವಸುಮತೋ ಭಾವಃ ವಸುರತ್ವಂ** । ರಃ ಮತ್ವರ್ಥೇ ವಕಾರಲೋಪಶ್ಚ **ವಸುನಾ** ಉದಕೇನ ತದ್ವಾನ್ **ಅಸೌ ತ್ವಷ್ಟಾ** । ಅಸುರತ್ವಂ ಎಂಬ ಪದವನ್ನು ವಸುರತ್ವಂ ಎಂದು ಪ್ರಯುಕ್ತವಾಗಿದೆ ಎಂದು ವಿವರಿಸಿ, ಇಲ್ಲಿ ರ ಎಂಬುದು ಉಕ್ತವಾಗಿರುವುದು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿರುವುದು **ವ** ಎಂಬುವುದು ಲುಪ್ತವಾಗಿರುವುದು ಎಂದು ವ್ಯಾಖ್ಯಾನಮಾಡಿ **ಉದಕೇನ ತದ್ವಾನ್** ಉದಕಗಳಿಂದ ಕೂಡಿಸುವವನು ಎಂದು ಬೇರೆಯ ವಿಧವಾದ ಅರ್ಥವನ್ನು ವಿವರಿಸಿದ್ದಾರೆ. **ತಯಾ ಮಹತ್ಯಾ ಪ್ರಜ್ಞಯಾ ಉದಕೇನ ಸಾಧನೇನ ಸರ್ವಮಿದಂ ಜನಯತಿ ಪುಷ್ಣಾತಿ ವರ್ಧಯತಿ ಚ** । ಪ್ರಭೂತಪ್ರಜ್ಞೆಯುಳ್ಳವನಾದುದರಿಂದ ತ್ವಷ್ಟೃದೇವನು ಉದಕಗಳಿಂದ ಸರ್ವವನ್ನೂ ಉತ್ಪನ್ನಮಾಡಿ, ಪೋಷಿಸಿ ವೃದ್ಧಿಗೊಳಿಸುವನು ಎಂದು ದುರ್ಗಾಚಾರ್ಯರು ವ್ಯಾಖ್ಯಾನಮಾಡಿರುತ್ತಾರೆ. ಇವರು ವಿವರಿಸಿರುವ ಎರಡನೆಯ ವ್ಯಾಖ್ಯಾನದಲ್ಲಿ **ಅಸುರತ್ವಂ ಅನ್ನವತ್ತ್ವಂ** । **ಅಸುಃ ಪ್ರಾಣಃ ತೇನ ತದ್ವತ್ತ್ವಂ** —ಅಸುರತ್ವವು ಪ್ರಾಣದಿಂದ ಯುಕ್ತವಾಗಿರುವಿಕೆಯು ಎಂದೂ, **ಅನ್ನವತ್ತ್ವಂ ತೇಷಾಮನ್ನಹೇತುನೋದಕೇನ ತದ್ವತ್ತ್ವಂ**—ಪ್ರಾಣಿಗಳಿಗೆ ಅನ್ನವು ಉಂಟಾಗಲು ಕಾರಣವಾದ ಉದಕಗಳಿಂದ ಯುಕ್ತನಾಗಿರುವನು ಎಂದೂ ವಿವರಿಸಿದೆ

CC-0. Jangamwadi Math Collection. Digitized by eGangotri

ಸಾಯಣರ ವಿವರಣೆಯಲ್ಲಿ ವಿಶ್ವಾ ಭುವನಾನಿ— ಸರ್ವಾಣಿ ಭೂತಜಾತಾನಿ ನಾನಾವಿಧವಾದ ಪ್ರಾಣಿಗಳ ಸಮೂಹವು ಎಂದು ಅರ್ಥವನ್ನು ಹೇಳಿರುತ್ತದೆ. ನಿರುಕ್ತಕಾರರ ವ್ಯಾಖ್ಯಾನದಲ್ಲಿ ಸರ್ವಾಣಿ ಭೂತಾನಿ ಉದಕಾನಿ ಸರ್ವಪ್ರಾಣಿಗಳನ್ನೂ ಮತ್ತು ಉದಕಗಳನ್ನೂ ನಿರ್ಮಿಸಿ, ಪೋಷಿಸಿ, ವೃದ್ಧಿಗೊಳಿಸುವವನು ಎಂದು ವ್ಯತ್ಯಾಸವು ತಿಳಿಯ ಬಹುದಾಗಿದೆ. ಮತ್ತು ಅಸುರತ್ವ ಶಬ್ದಾರ್ಥದ ವಿವರಣೆಯಲ್ಲಿಯೂ ವ್ಯತ್ಯಾಸವು ಕಂಡುಬರುತ್ತದೆ.



ಸಂಹಿತಾಪಾಠಃ

ಮಹೀ ಸಮೈ̍ರಚ್ಚ̍ಮ್ವಾ ಸಮೀ̍ಚೀ ಉಭೇ ತೇ ಅ̍ಸ್ಯ ವಸು̍ನಾ ನ್ಯೃ̍ಷ್ಟೇ ।

ಶೃಣ್ವೇ ವೀ̍ರೋ ವಿಂ̍ದಮಾ̍ನೋ ವಸೂ̍ನಿ ಮಹದ್ದೇ̍ವಾನಾ̍ಮಸುರತ್ವ-

ಮೇ̍ಕಂ ॥ ೨೦ ॥

ಪದಪಾಠಃ

ಮಹೀ ಇತಿ̍ । ಸಂ । ಐರ̍ತ್ । ಚಮ್ವಾ̍ । ಸಮೀ̍ಚೀ ಇತಿ̍ ಸಂಽಈಚೀ । ಉಭೇ ಇತಿ̍ । ತೇ ಇತಿ̍ ।

ಅ̍ಸ್ಯ । ವಸು̍ನಾ । ನ್ಯೃ̍ಷ್ಟೇ ಇತಿ̍ ನಿಽಋಷ್ಟೇ ।

ಶೃಣ್ವೇ । ವೀರಃ । ವಿಂದಮಾ̍ನಃ । ವಸೂ̍ನಿ । ಮಹತ್ । ದೇವಾ̍ನಾಂ । ಅಸುರಽತ್ವಂ । ಏ̍ಕಂ ॥ ೨೦ ॥

ಸಾಯಣಭಾಷ್ಯಂ

ಮಹೀ ಮಹತ್ಯೌ ಸಮೀಚೀ ಪರಸ್ಪರಂ ಸಂಗತೇ ಚಮ್ವಾ ಚಮಂತ್ಯದಂತ್ಯನಯೋರ್ದೇವ-ಮನುಷ್ಯಾ ಇತಿ ಚಮ್ವೌ । ಯದ್ವಾ ಚಮ್ಯೇತೇ ಅದ್ಯೇತೇ ಭೂತಜಾತೈರಿತಿ ಚಮ್ವೌ ದ್ಯಾವಾಪೃಥಿವ್ಯೌ । ಸಮೈರತ್ । ಇಂದ್ರಃ ಪ್ರಜಾಪಶ್ವಾದಿಭಿಃ ಸಮ್ಯಗಂಯೋಜಯತ್ । ತೇ ಉಭೇ ದ್ಯಾವಾಪೃಥಿವ್ಯಾವಸ್ಯೇಂ-ದ್ರಸ್ಯ ವಸುನಾ ತೇಜಸಾ ಧನೇನ ವಾ ನ್ಯೃಷ್ಟೇ ನಿತರಾಂ ವ್ಯಾಪ್ತೇ ಭವತಃ। ವೀರಃ ಸಮರ್ಥಃ ಸ ಇಂದ್ರೋ ವಸೂನಿ ಶತ್ರೂನಭಿಭೂಯ ತದೀಯಾನಿ ಧನಾನಿ ವಿಂದಮಾನೋ ಲಭಮಾನಃ ಸನ್ ಶೃಣ್ವೇ । ಸರ್ವೈಃ ಶ್ರೂಯತೇ । ತವೇದಿದಮಭಿತಶ್ಚೇಕಿತೇ ವಸು। ಋಗ್ವೇ. ೧-೫೩-೩ । ಇತ್ಯಾದಿಷು ದೃಷ್ಟತ್ವಾತ್ ॥ ಐರತ್। ಈರ ಗತಾವಿತ್ಯಸ್ಯ ಲಙಿ ರೂಪಂ । ನ್ಯೃಷ್ಟೇ । ಋಷೀ ಗತೌ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಸ್ವರಃ । ಶೃಣ್ವೇ । ಶ್ರು ಶ್ರವಣ ಇತ್ಯಸ್ಯ ವ್ಯತ್ಯಯೇನ ಕರ್ಮಣಿ ಶ್ನುಃ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ವಿಂದಮಾನಃ । ವಿದ್ಲೃ ಲಾಭ ಇತ್ಯಸ್ಯ ಲಟಿ ಶಾನಚಿ ರೂಪಂ । ತಸ್ಯ ಲಸಾರ್ವಧಾತುಕಸ್ವರೇ ಧಾತುಸ್ವರಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಮಹೀ**—ಮಹತ್ಸ್ವರೂಪವುಳ್ಳವೂ । **ಸಮೀಚೀ**—ಒಟ್ಟಿಗೆ ಸೇರಿಕೊಂಡಿರುವುವೂ ಆದ । **ಚಮ್ವಾ**—ದ್ಯಾವಾಪೃಥಿವಿಗಳನ್ನು । **ಸಮ್ಮೈರತ್**—(ಇಂದ್ರನು) ಭೂತಜಾತಯುಕ್ತವನ್ನಾಗಿ ಮಾಡಿದನು । **ತೇ ಉಭೇ**—ದ್ಯಾವಾಪೃಥಿವಿಗಳೆರಡೂ ಸಹ । **ಅಸ್ಯ**—ಇಂದ್ರನ । **ವಸುನಾ**—ತೇಜಸ್ಸಿನಿಂದ । **ನ್ಯೃಷ್ಟೇ**—ವ್ಯಾಪ್ತವಾಗಿವೆ । **ವೀರಃ**—ಸಮರ್ಥನಾದ ಇಂದ್ರನು । **ವಸೂನಿ**—ಶತ್ರುಧನಗಳನ್ನು । **ವಿಂದಮಾನಃ**—ಕಸಿದುಕೊಳ್ಳುವವನೆಂದು । **ಶೃಣ್ವೇ**—ಪ್ರಸಿದ್ಧವಾಗಿ ಕೇಳಲ್ಪಟ್ಟಿದೆ । **ದೇವಾನಾಂ**—ದೇವತೆಗಳ । **ಅಸುರತ್ವಂ**—ಪ್ರಾಬಲ್ಯವು । **ಮಹತ್**—ಮಹತ್ತಾದುದೂ । **ಏಕಂ**—ಅದ್ವಿತೀಯವಾದುದೂ ಆಗಿದೆ.

### ಭಾವಾರ್ಥ

ಮಹತ್ಸ್ವರೂಪವುಳ್ಳವೂ, ಒಟ್ಟಿಗೆ ಸೇರಿಕೊಂಡಿರುವುವೂ ಆದ ದ್ಯಾವಾಪೃಥಿವಿಗಳನ್ನು ಇಂದ್ರನು ಭೂತಜಾತಗಳೊಡಗೂಡಿರುವಂತೆ ಮಾಡಿದನು. ದ್ಯಾವಾಪೃಥಿವಿಗಳೆರಡೂ ಇಂದ್ರನ ತೇಜಸ್ಸಿನಿಂದ ವ್ಯಾಪ್ತವಾಗಿವೆ. ಸಮರ್ಥನಾದ ಇಂದ್ರನು ಶತ್ರುಧನಗಳನ್ನು ಕಸಿದುಕೊಳ್ಳುವನೆಂಬುದು ಪ್ರಸಿದ್ಧವಾಗಿದೆ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅದ್ವಿತೀಯವಾದುದೂ ಆಗಿದೆ.

### English Translation

He has filled the two vast receptacles (heaven and earth) united (with creatures): they are both penetrated by his lustre: the hero spoiling the treasures (of the foe) is renowned: great and unequalled is the might of the gods.

### ವಿಶೇಷವಿಷಯಗಳು

**ಚಮ್ವಾ—ಚಮಂತಿ ಅದಂತಿ ಅನಯೋಃ ದೇವಮನುಷ್ಯಾಃ ಇತಿ ಚಮ್ವೌ । ಯದ್ವಾ ಚಮ್ಯೇತೇ ಅದ್ಯೇತೇ ಭೂತಜಾತೈರಿತಿ ಚಮ್ವೌ ದ್ಯಾವಾಪೃಥಿವ್ಯೌ । ಚಮ್ವೌ** ಎಂಬ ಪದವು ದ್ಯಾವಾಪೃಥಿವೀನಾಮಗಳಲ್ಲಿ (ನಿ. ೩-೨೨) ಉಕ್ತವಾಗಿದೆ. ದೇವತೆಗಳೂ ಮತ್ತು ಮನುಷ್ಯರೂ ಭಕ್ಷಿಸಲು ಅರ್ಹವಾದ ಆಹಾರೋತ್ಪತ್ತಿಗೆ ಕಾರಣವಾಗಿರುವುದರಿಂದಲೂ, ಪ್ರಾಣಿಗಳೆಲ್ಲರಿಂದಲೂ ಭಕ್ಷಿತವಾಗುವುದರಿಂದಲೂ ದ್ಯಾವಾಪೃಥಿವಿಗಳು **ಚಮ್ವೌ** ಎಂಬ ಪದದಿಂದ ವ್ಯಪದಿಷ್ಟರಾಗಿದ್ದಾರೆ.

**ವಸುನಾ—ತೇಜಸಾ ಧನೇನ ವಾ । ವಸು** ಎಂಬ ಪದವು ರಶ್ಮಿನಾಮಗಳಲ್ಲಿ (ನಿ. ೨-೧೫) ಧನನಾಮಗಳಲ್ಲಿ (ನಿ. ೩-೯) ಉಕ್ತವಾಗಿದೆ ಮತ್ತು **ಸುಗುರ ಸತ್ಸುಹಿರಣ್ಯಃ** (ಋ. ಸಂ. ೨-೧-೧೦) ಎಂಬಲ್ಲಿ **ವಸುನಾ ಅನ್ನೇನ** ಅನ್ನದಿಂದ ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ. ಮತ್ತು **ವಸವಃ ಆದಿತ್ಯರಶ್ಮಯಃ** (ನಿ. ೧೨-೪೨) ಸೂರ್ಯನ ಕಿರಣಗಳು ಎಂದೂ ವಿವೃತವಾಗಿದೆ. ಇಲ್ಲಿ ಇಂದ್ರನ ತೇಜಸ್ಸುಗಳಿಂದಲೂ, ಧನಗಳಿಂದಲೂ ದ್ಯಾವಾಪೃಥಿವಿಗಳು ವ್ಯಾಪ್ತರಾಗಿ ಇಂದ್ರನ ಐಶ್ವರ್ಯದಿಂದ ವ್ಯಾಪ್ತರಾಗಿದ್ದಾರೆ ಎಂದು ವರ್ಣಿಸಿದೆ.

CC-0. Jangamwadi Math Collection. Digitized by eGangotri

ವೀರಃ ವಸೂನಿ ವಿಂದಮಾನಃ ಕೃಣ್ವೇ—ಸಮರ್ಥಃ ಸಃ ಇಂದ್ರಃ ಶತ್ರೂನಭಿಭೂಯ ತದೀಯಾನಿ ಧನಾನಿ ಲಭಮಾನಸ್ಸನ್ ಸರ್ವೈಃ ಶ್ರೂಯತೇ-ಶೂರನಾದ ಇಂದ್ರನು ತನ್ನ ಶತ್ರುಗಳನ್ನು ನಿಗ್ರಹಿಸಿ ಅವರ ಧನವನ್ನು ಕಸಿದುಕೊಳ್ಳುವನೆಂದು ಅರ್ಥವನ್ನು ವಿವರಿಸಿ ಈ ವಿಷಯವು "ತವೇದಿದಮಭಿತಶ್ಚೇಕಿತೇ ವಸು" (ಋ. ಸಂ. ೧೫೩-೩) ಎಂಬ ಋಕ್ಕಿನಲ್ಲಿ ಉಕ್ತವಾಗಿದೆ ಎಂದು ವರ್ಣಿತವಾಗಿದೆ.

---

ಸಂಹಿತಾಪಾಠಃ

ಇಮಾಂ ಚ ನಃ ಪೃಥಿವೀಂ ವಿಶ್ವಧಾಯಾಉಪ ಕ್ಷೇತಿ ಹಿತಮಿತ್ರೋ ನ ರಾಜಾ ।
ಪುರಃಸದಃ ಶರ್ಮಸದೋ ನ ವೀರಾ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ಇಮಾಂ । ಚ । ನಃ । ಪೃಥಿವೀಂ । ವಿಶ್ವಽಧಾಯಾಃ । ಉಪ । ಕ್ಷೇತಿ । ಹಿತಽಮಿತ್ರಃ । ನ । ರಾಜಾ ।
ಪುರಃಽಸದಃ । ಶರ್ಮಽಸದಃ । ನ । ವೀರಾಃ । ಮಹತ್ । ದೇವಾನಾಂ । ಅಸುರಽತ್ವಂ । ಏಕಂ ॥ ೨೧ ॥

ಸಾಯಣಭಾಷ್ಯಂ

ವಿಶ್ವಧಾಯಾಃ ವಿಶ್ವಸ್ಯ ಧಾತಾ ಸರ್ವಾನ್ನೋ ವಾ ನೋಽಸ್ಮಾಕಂ ರಾಜೇಂದ್ರ ಇಮಾಂ ಪೃಥಿವೀಮಂತರಿಕ್ಷಂ ಚೋಪ ತಯೋಃ ಸಮೀಪೇ ಕ್ಷೇತಿ । ನಿವಸತಿ । ತತ್ರ ದೃಷ್ಟಾಂತಃ । ಹಿತಮಿತ್ರೋ ನ । ಯಥಾ ಕಸ್ಯಚಿತ್ ಹಿತೋಪದೇಷ್ಟಾ ಸುಹೃತ್ಸಮೀಪೇ ನಿವಸತಿ ತದ್ವತ್ । ವೀರಾಃ ಸಮರ್ಥಾ ಯುದ್ಧಸಹಾಯಾ ಮರುತಃ ಪುರಃಸದೋ ಯುದ್ಧಾರ್ಥಂ ಪುರತೋ ನಿಶ್ಚಯೇನ ಗಂತಾರ ಇಂದ್ರಸ್ಯ ಶರ್ಮಸದಃ । ನ ಚಾರ್ಥೇ । ಶರ್ಮಣಿ ಗೃಹೇ ಸೀದಂತಶ್ಚ ಭವಂತಿ । ಯತ್ರ ಯತ್ರಾಹಾ ತತ್ರ ತತ್ರ ಸಂನಿಧಿಂ ಕುರ್ವಾಣಾ ಇತ್ಯರ್ಥಃ ॥ ಕ್ಷೇತಿ । ಕ್ಷಿ ನಿವಾಸಗತ್ಯೋರಿತ್ಯಸ್ಯ ಲಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ನಿಘಾತಃ ॥

ಪ್ರತಿಪದಾರ್ಥ

ವಿಶ್ವಧಾಯಾಃ ಸಕಲ ಜಗತ್ತಿಗೂ ಧಾರಕನಾಗಿರುವವನೂ । ನಃ—ನಮಗೆ । ರಾಜಾ—ಪ್ರಭುವೂ ಆದ ಇಂದ್ರನು । ಹಿತಮಿತ್ರೋ ನ—ಹಿತಕಾರಿಯಾದ ಸ್ನೇಹಿತನಂತೆ । ಇಮಾಂ ಪೃಥಿವೀಂ ಉಪ—ಈ ಪೃಥಿವಿಗೆ ಸಮೀಪಸ್ಥವಾದ ಅಂತರಿಕ್ಷದಲ್ಲಿ । ಕ್ಷೇತಿ—ವಾಸಿಸುತ್ತಾನೆ । ವೀರಾಃ—ಸಮರ್ಥರಾದ ಮರುತ್ತಗಳು । ಪುರಃಸದಃ-(ಯುದ್ಧದಲ್ಲಿ) ಇವನ ಮುಂಭಾಗದಲ್ಲಿ ಹೋಗತಕ್ಕವರಾಗಿ । ಶರ್ಮಸದಃ—ಇವನ ಗೃಹದಲ್ಲೇ ವಾಸಮಾಡುತ್ತಾರೆ । ದೇವಾನಾಂ—ದೇವತೆಗಳ । ಅಸುರತ್ವಂ—ಪ್ರಾಬಲ್ಯವು । ಮಹತ್—ಮಹತ್ತಾದುದೂ । ಏಕಂ—ಅಸಾಧಾರಣವಾದುದೂ ಆಗಿದೆ.

CC-0. Jangamwadi Math Collection. Digitized by eGangotri

### ಭಾವಾರ್ಥ

ಸಕಲ ಜಗತ್ತಿಗೂ ಧಾರಕನಾಗಿರುವವನೂ, ನಮಗೆ ಪ್ರಭುವೂ ಆದ ಇಂದ್ರನು ನಮಗೆ ಹಿತಕಾರಿಯಾದ ಸ್ನೇಹಿತನಂತೆ ಈ ಪೃಥ್ವಿಗೆ ಸಮೀಪಸ್ಥವಾದ ಅಂತರಿಕ್ಷದಲ್ಲಿ ವಾಸಿಸುತ್ತಾನೆ ಸಮರ್ಥರಾದ ಮರುತ್ತುಗಳ ಯುದ್ಧದಲ್ಲಿ ಇವನ ಮುಂಭಾಗನಲ್ಲಿ ಹೋಗತಕ್ಕವರಾಗಿ ಇವನ ಗೃಹದಲ್ಲೇ ವಾಸಮಾಡುತ್ತಾರೆ ದೇವತೆಗಳ ಪ್ರಾಬಲ್ಯವು ಮಹತ್ತಾದುದೂ ಅಸಾಧಾರಣವಾದುದೂ ಆಗಿದೆ.

### English Translation

Our king, the nourisher of all, abides (in the firmament) nearest to this earth like a benevolent friend : the valiant (Maruts) precede him (when abroad), and dwell in his mansion : great and unequalled is the might of the gods.

### ವಿಶೇಷವಿಷಯಗಳು

**ವಿಶ್ವಧ್ಯಾಯಾಃ ನಃ ರಾಜಾ ಇಮಾಂ ಪೃಥಿವೀಂ ಚ ಉಪ ಕ್ಷೇತಿ**— ವಿಶ್ವಸ್ಯ ಧಾತಾ ಸರ್ವಾನ್ನೋ ವಾ **ಅಸ್ಮಾಕಂ ರಾಜಾ ಇಂದ್ರಃ ಇಮಾಂ ಪೃಥಿವೀಂ ಅಂತರಿಕ್ಷಂ ಚ ತಯೋಸ್ಸಮೀಪೇ ನಿವಸತಿ** । ಪ್ರಪಂಚವೆಲ್ಲವನ್ನೂ ಧರಿಸಿ, ಪೋಷಿಸುವ ಅಥವಾ ಸರ್ವವನ್ನೂ ಭೋಗಿಸುವ ಇಂದ್ರನು ಯಜಮಾನರಾದ ನಮಗೆ ರಾಜನಾಗಿ ಪಾಲಕನಾಗಿರುತ್ತಾ ಭೂಮಿ ಮತ್ತು ಅಂತರಿಕ್ಷಗಳ ಸಮೀಪದಲ್ಲಿಯೇ ವಾಸಮಾಡುತ್ತಿರುವನು ಎಂದು ಅರ್ಥವನ್ನು ವಿವರಿಸಿ, ಈ ವಿಷಯದಲ್ಲಿ **ಹಿತೇಮಿತ್ರೋ ನ** ಎಂದು ದೃಷ್ಟಾಂತವನ್ನು ಹೇಳಿದೆ. **ಯಥಾ ಕಸ್ಯಚಿತ್ ಹಿತೋಪದೇಷ್ಟಾ ಸುಹೃತ್‌ಸಮೀಪೇ ನಿವಸತಿ ತದ್ವತ್** । ಹಿತವನ್ನು ಉಪದೇಶಮಾಡುವ ಸ್ನೇಹಿತನಂತೆ ಯಾವಾಗಲೂ ಹತ್ತಿರದಲ್ಲಿಯೇ ವಾಸಮಾಡುತ್ತಿರುವಹಾಗೆ ಇಂದ್ರನೂ ಭೂಮಿ ಮತ್ತು ಅಂತರಿಕ್ಷಗಳ ಹತ್ತಿರದಲ್ಲಿಯೇ ಇರುತ್ತಾ ಹಿತಚಿಂತಕನಾಗಿರುವನೆಂದು ವರ್ಣಿಸಿದೆ.

ವೀರಾಃ— ಸಮರ್ಥಾಃ **ಯುದ್ಧಸಹಾಯಾಃ ಮರುತಃ** । ವೀರಶಬ್ದವು ಶೂರ ಎಂಬ ಅರ್ಥದಲ್ಲಿ ರೂಢವಾಗಿರುವುದಾದರೂ ಮರುದ್ದೇವತೆಗಳು ಶೂರರಾಗಿರುವರು ಮತ್ತು ಇಂದ್ರನಿಗೆ ಯುದ್ಧಕಾಲಗಳಲ್ಲಿ ಸಹಾಯಮಾಡುವರು ಎಂಬ ಅರ್ಥದಲ್ಲಿ ಪ್ರಯುಕ್ತವಾಗಿದೆ.

**ಪುರಃಸದಃ ಶರ್ಮಸದೋ ನ— ಯುದ್ಧಾರ್ಥಂ ಪುರತೋ ನಿಷ್ಠಯೇನ ಗಂತಾರಃ ಇಂದ್ರಸ್ಯ ಗೃಹೇ ಸೀದಂತಶ್ಚ ಭವಂತಿ । ಯತ್ರ ಯತ್ರಾಸೌ ತತ್ರ ತತ್ರ ಸನ್ನಿಧಿಂ ಕುರ್ವಾಣಾಃ । ನಶ್ಚಾರ್ಥೇ** । ಈ ಮರುದ್ದೇವತೆಗಳು ಇಂದ್ರನ ಮುಂದುಗಡೆಯೇ ಇರುವವರಾಗಿ ಯುದ್ಧಕಾಲಗಳಲ್ಲಿ ಸಹಾಯಮಾಡುವವರೂ ಮತ್ತು ಇಂದ್ರನು ಇರುವ ಪ್ರದೇಶಗಳೆಲ್ಲದರಲ್ಲಿಯೂ ವಾಸಮಾಡುವವರೂ ಆಗಿರುವರು ಎಂದು ಅರ್ಥವನ್ನು ವಿವರಿಸಿದೆ

**ನ** ಎಂಬ ನಿಪಾತವು ಉಪಮಾರ್ಥದಲ್ಲಿಯೂ, ನಿಷೇದಾರ್ಥದಲ್ಲಿಯೂ ಉಕ್ತವಾಗಿದೆ (ನಿ. ೧-೪) ಇಲ್ಲಿ ಈ ನಿಪಾತಕ್ಕೆ **ಚ** ಎಂಬ ನಿಪಾತದ ಸಮುಚ್ಚಯಾರ್ಥವನ್ನು ಹೇಳಿದೆ.

———————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ನಿಷ್ಷಿಧ್ವರೀಸ್ತ ಓಷಧೀರುತಾಪೋ ರಯಿಂ ತ ಇಂದ್ರ ಪೃಥಿವೀ ಬಿಭರ್ತಿ ।

ಸಖಾಯಸ್ತೇ ವಾಮಭಾಜಃ ಸ್ಯಾಮ ಮಹದ್ದೇವಾನಾಮಸುರತ್ವಮೇಕಂ ॥

ಪದಪಾಠಃ

ನಿಃऽಸಿಧ್ವರೀಃ । ತೇ । ಓಷಧೀಃ । ಉತ । ಆಪಃ । ರಯಿಂ । ತೇ । ಇಂದ್ರ । ಪೃಥಿವೀ । ಬಿಭರ್ತಿ ।

ಸಖಾಯಃ । ತೇ । ವಾಮऽಭಾಜಃ । ಸ್ಯಾಮ । ಮಹತ್ । ದೇವಾನಾಂ । ಅಸುರऽತ್ವಂ । ಏಕಂ ॥ ೨೨ ॥

ಸಾಯಣಭಾಷ್ಯಂ

ಹೇ ಪರ್ಜನ್ಯಾತ್ಮಕೇಂದ್ರ ಓಷಧೀರೋಷಧಯಸ್ತೇ ನಿಷ್ಷಿಧ್ವರೀರ್ನಿಷ್ಷಿಧ್ವರ್ಯೋ ನಿತರಾಂ ತ್ವತ್ಕರ್ತೃಕಸಿದ್ಧಿಮತ್ಯಃ । ಉತಾಪಿ ಚ ಆಪಸ್ತ್ವತ್ತೋ ನಿಃಸೃತಾಃ । ಪೃಥಿವೀ ತೇ ತವ ಭೋಗಯೋಗ್ಯಂ ರಯಿಂ ಧನಂ ಬಿಭರ್ತಿ । ಪುರೂ ವಸೂನಿ ಪೃಥಿವೀ ಬಿಭರ್ತಿ । ಋಗ್ವೇ. ೩-೫೧-೫ । ಇತಿ ಹಿ ನಿಗಮಃ । ತತಸ್ತೇ ತವ ಸಖಾಯೋ ಹವಿಷ್ಪ್ರದಾನೇನೋಪಕಾರಕಾಃ ಸ್ತೋತಾರೋ ವಯಂ ವಾಮಭಾಜಃ ಸ್ಯಾಮ । ಸರ್ವೇ ವನನೀಯಧನಭಾಗಿನೋ ಭವೇಮ । ತದೇತದ್ದೇವಾನಾಂ ಮಹದೈಶ್ವರ್ಯಂ ॥ ನಿಷ್ಷಿಧ್ವರೀಃ । ಷಿಧು ಸಂರಾದ್ಧೌ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ತದಸ್ಯಾಸ್ತೀತ್ಯರ್ಥೇ ಛಂದಸೀವನಿಪಾವಿತಿ ವನಿಪ್ । ವನೋ ರ ಚೇತಿ ಙೀಪ್ ರೇಫಶ್ಚ । ನಿಸಾ ಸಹ ಸಮಾಸಃ । ನಿಸಃ ಸಕಾರಂ ಛಾಂದಸತ್ವಾದನಾ-ಪೃತ್ಯೋಪಸರ್ಗಾತ್ಸುನೋತೀತ್ಯಾದಿನಾ ಷತ್ವಂ । ಙೀಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಬಿಭರ್ತಿ । ಡುಭೃಞ್ ಧಾರಣಪೋಷಣಯೋರಿತ್ಯಸ್ಯ ಲಟಿ ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ನಿಘಾತಃ । ವಾಮ-ಭಾಜಃ । ಭಜ ಸೇವಾಯಾಂ । ಭಜೋ ಣ್ವಿಃ । ಪಾ. ೩-೨-೬೨ । ಇತಿ ಣ್ವಿಃ । ಕೃದುತ್ತರಪದಸ್ವರಃ ॥

ಪ್ರತಿಪದಾರ್ಥ

ಇಂದ್ರ— ಪರ್ಜನ್ಯಾತ್ಮಕನಾದ ಇಂದ್ರನೇ । ಓಷಧೀಃ— ಸಕಲ ಓಷಧಿಗಳೂ ಸಹ । ತೇ— ನಿನ್ನಿಂದಲೇ ನಿಷ್ಷಿಧ್ವರೀಃ— ಪುಷ್ಟಿಯನ್ನೂ, ರಸಪೂರ್ಣತೆಯನ್ನೂ ಪಡೆಯುತ್ತವೆ । ಉತ— ಮತ್ತು । ಆಪಃ— ಉದಕಗಳೂ ನಿನ್ನಿಂದಲೇ ನಿಃಸೃತವಾಗುತ್ತವೆ । ಪೃಥಿವೀ— ಪೃಥಿವಿಯು । ತೇ— ನಿನಗೋಸ್ಕರ । ರಯಿಂ— ಧನವನ್ನು । ಬಿಭರ್ತಿ— ಧರಿಸಿದ್ದಾಳೆ । ತೇ— ನಿನಗೆ । ಸಖಾಯಃ— ಮಿತ್ರಭೂತರಾದ ನಾವು । ವಾಮಭಾಜಃ ಸ್ಯಾಮ— ಈ ಸಕಲ ಧನಗಳನ್ನೂ ಅನುಭವಿಸುವಂತೆ ಆಗಲಿ । ದೇವಾನಾಂ— ದೇವತೆಗಳ । ಅಸುರತ್ವಂ— ಪ್ರಾಬಲ್ಯವು । ಮಹತ್— ಮಹತ್ತಾದುದೂ । ಏಕಂ— ಅದ್ವಿತೀಯವಾದುದೂ ಆಗಿದೆ

ಭಾವಾರ್ಥ

ಪರ್ಜನ್ಯಾತ್ಮಕನಾದ ಇಂದ್ರನೇ, ಸಕಲ ಓಷಧಿಗಳೂ ಸಹ ನಿನ್ನಿಂದಲೇ ವೃಷ್ಟಿಯನ್ನೂ ರಸಪೂರ್ಣತೆಯನ್ನೂ ಪಡೆಯುತ್ತವೆ. ಉದಕಗಳೂ ನಿನ್ನಿಂದಲೇ ನಿಃಸೃತವಾಗುತ್ತವೆ. ಪೃಥಿವಿಯು ನಿನಗೋಸ್ಕರ ಧನವನ್ನು

CC-0. Jangamwadi Math Collection. Digitized by eGangotri

ಧರಿಸಿದ್ದಾಳೆ. ನಿನಗೆ ಮಿತ್ರಭೂತರಾದ ನಾವು ಈ ಸಕಲ ಧನಗಳನ್ನೂ ಅನುಭವಿಸುವಂತಾಗಲಿ. ದೇವತೆಗಳ ಪ್ರಾಬಲ್ಯವು ಮಹತ್ತಾದುದೂ, ಅದ್ವಿತೀಯವಾದುದೂ ಆಗಿದೆ.

## English Translation

The plants, Indra, come to perfection by you : from you the waters (flow) ; earth bears her treasures for you : may we, your friends, be sharers of these blessings : great and unequalled is the might of the gods.

### ವಿಶೇಷವಿಷಯಗಳು

ಇಂದ್ರಶಬ್ದದಿಂದ ಸಂಬೋಧಿಸಿ, ಇಂದ್ರನು ಲೋಕಗಳಿಗೆ ವೃಷ್ಟಿಪ್ರದನಾಗಿ ಸರ್ವವನ್ನೂ ಉತ್ಪನ್ನಮಾಡುವುದು, ಪೋಷಿಸುವುದು, ವೃದ್ಧಿಗೊಳಿಸುವುದು ಎಂಬ ಕಾರ್ಯಗಳನ್ನು ಆಚರಿಸುವುದರಿಂದ ಪರ್ಜನ್ಯಾತ್ಮಕನಾಗಿರುವನೆಂದು ವರ್ಣಿಸಿದೆ.

**ಸಖಾಯಃ ವಾಮಭಾಜಃ ಸ್ಯಾಮ—ಹವಿಷ್ಪ್ರದಾನೇನ ಉಪಕಾರಕಾಃ ಸ್ತೋತಾರಂ ವಯಂ ಸರ್ವೇ ವನನೀಯಧನಭಾಗಿನಃ ಭವೇಮ ।** ಯಜಮಾನರಾದವರು ಹವಿಸ್ಸುಗಳನ್ನು ಇಂದ್ರನಿಗಾಗಿ ಅರ್ಪಿಸುವುದರಿಂದಲೂ, ಸ್ತುತಿಮಾಡುವುದರಿಂದಲೂ ಇಂದ್ರನಿಗೆ ಹಿತವನ್ನು ಅಪೇಕ್ಷಿಸುವರು ಎಂದು ವರ್ಣಿಸಿ, ಈ ಯಜಮಾನರು ತಮಗೆ ಯಾಗಾದಿಗಳ ಆಚರಣೆಗಾಗಿ ಅವಶ್ಯಕವಾಗಿರುವ ಧನವನ್ನು ಇಂದ್ರನಿಂದ ಹೊಂದಲು ಆಶಿಸುವರೆಂದೂ ದೇವತೆಗಳ ಮಹತ್ತ್ವಪೂರ್ಣವಾದ ಪ್ರಾಬಲ್ಯವು ಮುಖ್ಯವಾದುದಾಗಿಯೂ, ಅಸಾಧಾರಣವಾಗಿಯೂ ಇರುವುದೆಂದೂ ವಿವರಿಸಿದೆ.

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ತೃತೀಯಾಷ್ಟಕೇ ತೃತೀಯೋಽಧ್ಯಾಯಃ ಸಮಾಪ್ತಃ

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ।
ಶುಭಂ ಭೂಯಾತ್

ಮಂಗಳಂ

॥ ಓಂ ತತ್ಸತ್ ।

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ತೃತೀಯಾಷ್ಟಕದಲ್ಲಿ
ಮೂರನೆಯ ಅಧ್ಯಾಯವು ಸಮಾಪ್ತವಾದುದು.

CC-0. Jangamwadi Math Collection. Digitized by eGangotri



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ತೃತೀಯಾಷ್ಟಕಮಧ್ಯಸ್ಥಃ ತೃತೀಯೋಽಧ್ಯಾಯ ಆದರಾತ್ ।
ವ್ಯಾಖ್ಯಾತಃ ಸಾಯಣಾರ್ಯೇಣ ಚತುರ್ಥೋ ವ್ಯಾಕರಿಷ್ಯತೇ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

### ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

### ॥ ಮೂರನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ॥

### (ತೃತೀಯ ಮಂಡಲದ ಸೂಕ್ತಗಳು—೫೬-೬೨ ಮತ್ತು ಚತುರ್ಥ ಮಂಡಲದ ಸೂಕ್ತಗಳು—೧-೪)

## ಪೀಠಿಕೆ.

ಈ ಅಧ್ಯಾಯದಲ್ಲಿ ಮೂರನೆಯ ಮಂಡಲದ ೫೬ ನೆಯ ಸೂಕ್ತದಿಂದ ಪ್ರಾರಂಭವಾಗಿ ೬೨ ನೆಯ ಸೂಕ್ತಕ್ಕೆ ಮೂರನೆಯ ಮಂಡಲವು ಮುಗಿಯುವುದು. ಈ ಸೂಕ್ತಕ್ಕೆ ವಿಶ್ವೇದೇವತೆಗಳು ದೇವತೆಯಾಗಿದ್ದರೂ ಆದಿತ್ಯನೂ, ಸಂವತ್ಸರವೂ ಅದರ ವಿಭಾಗಗಳೂ ಸ್ತುತಿಸಲ್ಪಟ್ಟಿವೆ. ಅನೇಕಕಡೆ ನಿರ್ದಿಷ್ಟಾರ್ಥವನ್ನು ಸೂಚಿಸುವ ಶಬ್ದಗಳು ಇಲ್ಲದ್ದರಿಂದಲೂ ನಾನಾವಿಧವಾದ ಅರ್ಥಗಳಿಗೆ ಅವಕಾಶವಿರುವುದರಿಂದಲೂ ಈ ಸೂಕ್ತದಲ್ಲಿ ಹೇಳಿರುವ ಅನೇಕ ವಿಷಯಗಳಿಗೆ ಋಷಿಯ ಆಶಯವು ಹೀಗೆಯೇ ಇರುವುದೆಂದು ಹೇಳಲು ಸಾಧ್ಯವಿಲ್ಲ. ಆದರೂ ಸಾಯಣಭಾಷ್ಯವನ್ನೇ ಅನುಸರಿಸಿ ಯಾಸ್ಕರ ನಿರ್ವಚನಾನುಸಾರವಾಗಿ ಅರ್ಥಾನುವಾದವನ್ನು ವಿವರಿಸಿರುವೆವು.



CC-0. Jangamwadi Math Collection. Digitized by eGangotri

# ಐವತ್ತಾರನೆಯ ಸೂಕ್ತವು.

ಸಾಯಣಭಾಷ್ಯಂ

ನ ತಾ ಮಿನಂತೀತ್ಯಷ್ಟರ್ಚಂ ತೃತೀಯಂ ಸೂಕ್ತಂ ವಿಶ್ವಾಮಿತ್ರಸ್ಯ ವಾಚಃ ಪುತ್ರಸ್ಯ ವಾ ಪ್ರಜಾಪತೇರಾರ್ಷಂ ತ್ರೈಷ್ಟುಭಂ ವೈಶ್ವದೇವಂ । ತಥಾ ಚಾನುಕ್ರಮಣಿಕಾ । ನ ತಾಷ್ಟಾವಿತಿ। ಸೂಕ್ತವಿನಿಯೋಗೋ ಲಿಂಗಾದವಗಂತವ್ಯಃ । ಅಸ್ಮಿನ್ಸೂಕ್ತೇ ಪ್ರಾಯೇಣಾದಿತ್ಯೈಃ ಸಹ ಸಂವತ್ಸರಃ ಸ್ತೂಯತೇ ॥

ಅನುವಾದವು—ನ ತಾ ಮಿನಂತಿ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಪ್ರಜಾಪತಿ ಅಥವಾ ವಿಶ್ವಾಮಿತ್ರಪುತ್ರನಾದ ವಾಚ್ಯನೆಂಬುವನು ಋಷಿಯು; ವಿಶ್ವೇದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ನ ತಾಷ್ಟೌ ಎಂದು ಹೇಳಿರುವುದು. ಸೂಕ್ತವಿನಿಯೋಗವನ್ನು ಋಕ್ಕುಗಳ ಅರ್ಥವನ್ನನುಸರಿಸಿ ತಿಳಿದುಕೊಳ್ಳಬೇಕು. ಈ ಸೂಕ್ತದಲ್ಲಿ ಪ್ರಾಯಶಃ ಆದಿತ್ಯನೊಡನೆ ಸಂವತ್ಸರವು ಸ್ತುತಿಸಲ್ಪಟ್ಟಿರುವುದು.

:o:

॥ ಓಂ ॥

## ಸೂಕ್ತ—೫೬

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೫೬ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥

ಋಷಿಃ—ಪ್ರಜಾಪತಿರ್ವೈಶ್ವಾಮಿತ್ರೋ ವಾಚ್ಯೋ ವಾ ॥

ದೇವತಾ—ವಿಶ್ವೇ ದೇವಾಃ ॥

ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ನ ತಾ ಮಿನಂತಿ ಮಾಯಿನೋ ನ ಧೀರಾ ವ್ರತಾ ದೇವಾನಾಂ ಪ್ರಥಮಾ ಧ್ರುವಾಣಿ ।

ನ ರೋದಸೀ ಅದ್ರುಹಾ ವೇದ್ಯಾಭಿರ್ನ ಪರ್ವತಾ ನಿನಮೇ ತಸ್ಥಿವಾಂಸಃ ॥

CC-0. Jangamwadi Math Collection. Digitized by eGangotri

ಪದಪಾಠಃ

ನ । ತಾ । ಮಿನಂತಿ । ಮಾಯಿನಃ । ನ । ಧೀರಾಃ । ವ್ರತಾ । ದೇವಾನಾಂ । ಪ್ರಥಮಾ । ಧ್ರುವಾಣಿ ।

ನ । ರೋದಸೀ ಇತಿ । ಅದ್ರುಹಾ । ವೇದ್ಯಾಭಿಃ । ನ । ಪರ್ವತಾಃ । ನಿಽನಮೇ । ತಸ್ಥಿಽವಾಂಸಃ ॥ ೧ ॥

ಸಾಯಣಭಾಷ್ಯಂ

ಮಾಯಿನಃ ಕಪಟಬುದ್ಧ್ಯುಪೇತಾ ಅಸುರಾ ದೇವಾನಾಮಿಂದ್ರಾದೀನಾಂ ಪ್ರಥಮಾ ಪ್ರಥಮಾನಿ ಸೃಷ್ಟ್ಯನಂತರಭಾವೀನಿ ಧ್ರುವಾಣಿ ಸ್ಥಿರಾಣಿ ಕೇನಾಪಿ ಚಾಲಯಿತುಮಶಕ್ಯಾನಿ ತಾ ತಾನಿ ಲೋಕೇ ಪ್ರಸಿದ್ಧಾನಿ ವ್ರತಾ ವ್ರತಾನಿ ಲೋಕಪಾಲನಾದಿಕರ್ಮಾಣಿ ನ ಮಿನಂತಿ । ನ ಹಿಂಸಂತಿ । ತಥಾ ಧೀರಾ ವಿದ್ವಾಂಸೋಽಪಿ ನ ಹಿಂಸಂತಿ । ತಥಾದ್ರುಹಾ ದೇವಮನುಷ್ಯಾದಿಷು ಪ್ರಜಾಸು ದ್ರೋಹವರ್ಜಿತೇ ರೋದಸೀ ದ್ಯಾವಾಪೃಥಿವ್ಯೌ ವೇದ್ಯಾಭಿಃ ಸ್ವಾಶ್ರಯತಯಾ ಸರ್ವೈರ್ವೇದನೀಯಾಭಿಃ ಪ್ರಜಾಭಿಃ ಸಹಿತಾನಿ ಕರ್ಮಾಣಿ ನ ಮಿನೀತಃ । ತದೇತದುಪಪಾದಯತಿ । ತಸ್ಥಿವಾಂಸಃ ಪೃಥಿವ್ಯಾಮೂರ್ಧ್ವತಯಾ ಸ್ಥಿತಾಃ ಪರ್ವತಾ ನ ನಿನಮೇ । ನಿನಮನೀಯಾ ನ ಭವಂತಿ । ಏತದುಕ್ತಂ ಭವತಿ । ಯದ್ದೇವಮನುಷ್ಯಾದೀನಾಂ ದ್ಯಾವಾಪೃಥಿವ್ಯಾಧಾರಕತಯಾವಸ್ಥಾಪನಂ ಯಚ್ಚ ಪರ್ವತಾದೀನಾಮುನ್ನತತಯಾವಸ್ಥಾಪನಂ ತದಿದಂ ದೇವಾನಾಂ ಕರ್ಮ । ತನ್ನ ಕೋಽಪ್ಯನ್ಯಥಯಿತುಮರ್ಹತೀತಿ ॥ ಮಿನಂತಿ । ಮೀಙ್ ಹಿಂಸಾಯಾಮಿತ್ಯಸ್ಯ ಲಟಿ ಮೀನಾತೇರ್ನಿಗಮ ಇತಿ ಹ್ರಸ್ವಃ । ನಿಘಾತಃ । ವೇದ್ಯಾಭಿಃ । ವೇದನಮರ್ಹಂತಿ । ಛಂದಸಿ ಚೇತಿ ಯತ್ಪ್ರತ್ಯಯಃ । ನಿನಮೇ । ಣಮು ಪ್ರಹ್ವತ್ವೇ ಇತ್ಯಸ್ಯ ಕೃತ್ಯಾರ್ಥೇ ಕೇನ್ಪ್ರತ್ಯಯಃ । ಕೃತ್ಸ್ವರಃ ॥

ಪ್ರತಿಪದಾರ್ಥ

**ಮಾಯಿನಃ**—ವಂಚಕರಾದ ಅಸುರರು । **ದೇವಾನಾಂ**—ಇಂದ್ರಾದಿದೇವತೆಗಳ । **ಪ್ರಥಮಾ**—ಅತಿ ಪ್ರಾಚೀನವೂ ಮುಖ್ಯವೂ ಆದವೂ । **ಧ್ರುವಾಣಿ**—ಸ್ಥಿರವಾದವೂ । **ತಾ**—ಪ್ರಸಿದ್ಧವೂ ಆದ । **ವ್ರತಾ**—ಲೋಕ ಪಾಲನಾದಿ ಕರ್ಮಗಳನ್ನು । **ನ ಮಿನಂತಿ**—ಹಿಂಸಿಸಿ ತಡೆಯಲಾರರು । **ಧೀರಾಃ**—ಪ್ರಾಜ್ಞರಾದ ವಿವೇಕಿಗಳೂ ಸಹ । **ನ (ಮಿನಂತಿ)**—ಹಿಂಸಿಸಲಾರರು । **ಅದ್ರುಹಾ**—ದ್ರೋಹರಹಿತರಾದ । **ರೋದಸೀ**—ದ್ಯಾವಾಪೃಥಿವಿಗಳೂ। **ವೇದ್ಯಾಭಿಃ**—ಎಲ್ಲರಿಗೂ ಗೋಚರವಾಗತಕ್ಕ ತಮ್ಮ ಪ್ರಜಾಸಮುದಾಯಗಳೊಡನೆ । **ನ (ಮಿನೀತಃ)**—ಹಿಂಸಿಸ ಲಾರವು । **ತಸ್ಥಿವಾಂಸಃ**—ಸ್ಥಿರವಾಗಿ ಸ್ಥಾಪಿತವಾಗಿರತಕ್ಕ। **ಪರ್ವತಾಃ**—ಪರ್ವತಗಳು । **ನ ನಿನಮೇ**—(ಇಂದ್ರಾದಿ ಗಳಿಂದ ಸ್ಥಾಪಿತವಾಗಿರುವುದರಿಂದ) ಅವುಗಳ ಔನ್ನತ್ಯವನ್ನು ಯಾರೂ ತಗ್ಗಿಸಲಾರರು.

ಭಾವಾರ್ಥ

ವಂಚಕರಾದ ಅಸುರರಾಗಲಿ, ಪ್ರಾಜ್ಞರಾದ ವಿವೇಕಿಗಳಾಗಲಿ, ಅತಿಪ್ರಾಚೀನವೂ, ಸ್ಥಿರವೂ, ಪ್ರಸಿದ್ಧವೂ ಆದ ಲೋಕಪಾಲಕನಾದಿ ಕರ್ಮಗಳನ್ನು ಹಿಂಸಿಸಿ ತಡೆಯಲಾರರು. ದ್ರೋಹರಹಿತರಾದ ದ್ಯಾವಾಪೃಥಿವಿಗಳೂ ಸಹ ತಡೆಯಲಾರವು ಪೃಥ್ವಿಯಮೇಲೆ ಉನ್ನತವಾಗಿ ಸ್ಥಾಪಿತವಾಗಿರುವ ಪರ್ವತಾದಿಗಳ ಔನ್ನತ್ಯವೂ ಸಹ ಇಂದ್ರಾದಿಗಳ ಕರ್ಮವೇ ಆಗಿರುವುದರಿಂದ ಅವುಗಳನ್ನು ಯಾರೂ ತಗ್ಗಿಸಲಾರರು.

CC-0. Jangamwadi Math Collection. Digitized by eGangotri

## English Translation

Neither the deceptive nor the resolute interrupt the primitive and permanent operations of the gods, nor do the innocuous heaven and earth (interrupt them), nor are the mountains standing (on the earth) to be bowed down.

### ವಿಶೇಷವಿಷಯಗಳು

ಇಂದ್ರಾದಿಗಳ ಲೋಕಪಾಲನಾದಿ ಕರ್ಮಗಳ ಪ್ರಭಾವವು ಈ ಮಂತ್ರದಲ್ಲಿ ಪ್ರಸಕ್ತವಾಗಿದೆ. ವಿಶ್ವವ್ಯವಹಾರವು ಋತುಧರ್ಮವನ್ನನುಸರಿಸಿ ನಡೆಯುತ್ತಿದೆ. ಈ ನಿಯಮಕ್ಕನ್ನನುಗುಣವಾಗಿಯೂ ಪೋಷಕವಾಗಿಯೂ ನಡೆಯತಕ್ಕ ಸಕಲಕಾರ್ಯಗಳೂ ವ್ರತವೆನ್ನಿಸಿಕೊಳ್ಳುವುವು. ಇಂದ್ರಾದಿಗಳ ಈ ವ್ರತದ ಭಂಗವು ಯಾರಿಂದಲೂ ನಡೆಯಲಾರದು. ಅಸುರರು ಎಂತಹ ವಂಚಕರಾದರೂ ಮತ್ತು ಪ್ರಬಲರಾದರೂ ಸಹ ಈ ವ್ರತಗಳಿಗೆ ಭಂಗತರಲಾಗುವುದಿಲ್ಲ ಪ್ರಾಜ್ಞರಾದ ಧೀರರು ಇದೇ ವ್ರತವನ್ನನುಸರಿಸುವುದರಿಂದ ಅದರಿಂದಲೂ ಭಂಗವುಂಟಾಗುವುದಿಲ್ಲ. ಆದುದರಿಂದ ಸೃಷ್ಟಿಪೂರ್ವದಲ್ಲಿ ಸಂಕಲ್ಪಿಸಿದ್ದಂತೆಯೇ ವಿಶ್ವವ್ಯವಹಾರಗಳು ಕ್ರಮವಾಗಿ ಸಾಗುತ್ತವೆ ಎಂದು ವಿಶ್ವನಿಯಮನದ ಸ್ಥೈರ್ಯವನ್ನು ಪ್ರಶಂಸಿದೆ.

ವಿಶ್ವನಿಯಮಕ್ಕೆ ಭಂಗತರಲು ಎರಡುವಿಧವಾದ ಶಕ್ತಿಯಿಂದ ಸಾಧ್ಯ. ದೈವೀಸಂಸ್ಕೃತಿಯನ್ನು ದ್ವೇಷಿಸಿ ಸ್ವಾರ್ಥವನ್ನು ಸಾಧಿಸಿಕೊಳ್ಳಲು ಕಾಪಟ್ಯದಿಂದ ವರ್ತಿಸುವ ಆಸುರೀಶಕ್ತಿಯಿಂದ ಇದು ಯತ್ನಿಸಲ್ಪಡಬಹುದು. ಅಥವಾ ದೈವೀಶಕ್ತಿಯಿಂದಲೇ ಪೂರಿತರಾಗಿ ಬ್ರಹ್ಮಸೃಷ್ಟಿಗನುಸಾರವಾಗಿ ಸ್ವತಂತ್ರವಾಗಿ ತಾವೇ ಸೃಷ್ಟಿಯನ್ನುಂಟು ಮಾಡಬಲ್ಲವರೂ ಪ್ರಾಜ್ಞರೂ ಆದ ಕವಿಗಳು ಇದಕ್ಕೆ ಭಂಗತರಲು ಸಾಧ್ಯವಾಗಬಹುದು. ಆದರೆ, ವಿಶ್ವವ್ಯವಹಾರದಲ್ಲಿ ಆಸುರೀಶಕ್ತಿಗಿಂತಲೂ ದೈವೀಶಕ್ತಿಗೆ ಅಧಿಕವಾದ ಸತ್ತ್ವವಿರುವುದೆಂದು ಹೇಳಲು ಸಾಕಷ್ಟು ಆಧಾರಗಳಿರುತ್ತದೆ. ಆದುದರಿಂದ ಇಂದ್ರಾದಿಗಳ ವ್ರತಕ್ಕೆ ಭಂಗತರಲು ಅಸುರರಿಂದ ಅಥವಾ ಆಸುರೀಶಕ್ತಿಯುಳ್ಳ ವ್ಯಕ್ತಿಗಳಿಂದ ಸಾಧ್ಯವಿಲ್ಲ, ಮತ್ತು ಧೀರರಾದ ಕವಿಗಳೂ ಪ್ರಾಜ್ಞರೂ ದೈವೀಸಂಸ್ಕೃತಿಯನ್ನೇ ವೃದ್ಧಿಪಡಿಸಲು ಸಂಕಲ್ಪಿಸಿರುವುದರಿಂದ ಅವರಿಂದಲೂ ಈ ನಿಯಮಕ್ಕೆ ಭಂಗತರಲು ಸಾಧ್ಯವಿಲ್ಲವೆಂಬ ವಿಷಯವು ಈ ಮಂತ್ರದಲ್ಲಿ ಸೂಚಿತವಾಗಿದೆ.

**ಮಾಯಿನಃ**— ಈ ಪದಕ್ಕೆ ಕಪಟವಾದ ಬುದ್ಧಿಯಿಂದ ಕೂಡಿದ ಅಸುರರೆಂದರ್ಥಮಾಡಿದೆ. ಅಸಾಧಾರಣವಾದ ಶಕ್ತಿವಿಶೇಷವನ್ನು ಸೂಚಿಸಲು **ಮಾಯಾ** ಶಬ್ದವು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಸ್ವತಂತ್ರವಾದ ಸೃಷ್ಟಿಶಕ್ತಿಯೆಂದೂ ಅರ್ಥವಾಗುವ ಸಂದರ್ಭವಿದೆ. ಈ ವಿಶೇಷಣವು ಇಂದ್ರಾದಿದೇವತೆಗಳ ಸೃಷ್ಟಿಶಕ್ತಿಯನ್ನು ಸೂಚಿಸುತ್ತದೆ. ಆದುದರಿಂದ ಪ್ರಕೃತದಲ್ಲಿ ಈ ಪದಪ್ರಯೋಗದ ತಾತ್ಪರ್ಯವೇನೆಂಬುದನ್ನು ತಿಳಿಯಲು ಋಕ್ಸಂಹಿತೆಯ ಇತರ ಕಡೆಗಳಲ್ಲಿ ಈ ಪದವನ್ನು ಯಾವ ಯಾವ ಸಂದರ್ಭಗಳಲ್ಲಿ ಪ್ರಯೋಗಿಸಿದೆಯೆಂಬುದನ್ನರಿಯಬೇಕು.

ಈ ಪದವು ನಾಲ್ಕು ಮುಖ್ಯವಾದ ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದಾಗಿ ಸ್ಥೂಲವಾಗಿ ಹೇಳಬಹುದು. ದಿವ್ಯವಾದ ಸೃಷ್ಟಿಶಕ್ತಿಯೆಂದೂ, ಕೇವಲ ಭೌತಿಕವಾದ ಶಕ್ತಿಯೆಂದೂ ಅಥವಾ ಕುತಂತ್ರವೆಂದೂ ಅಥವಾ ಇಂದ್ರಜಾಲವಿದ್ಯೆಯೆಂದೂ ನಾಲ್ಕು ವಿಧವಾಗಿ ಈ ಪದದ ಅರ್ಥವನ್ನು ಹೇಳಲು ಅವಕಾಶಗಳಿವೆ. ಸೃಷ್ಟ್ಯರ್ಥಕವಾದ **ಮಾಙ್ ಮಾನೇ** ಎಂಬ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳಬಹುದು.

CC-0. Jangamwadi Math Collection. Digitized by eGangotri

**ಮಾಯೇತಿ ಪ್ರಜ್ಞಾನಾಮ । ಮಾಯಾ, ವಯುನಂ ಇತಿ ತನ್ನಾಮಸು ಪಾಠಾತ್ ।** (ನಿ. ೩-೧೩) ಎಂದು ನಿರುಕ್ತಕಾರರು ಈ ಪದಕ್ಕೆ ಪ್ರಜ್ಞೆಯೆಂದರ್ಥಮಾಡಿದ್ದಾರೆ. **ಮಾಯಾಭಿರುತ್ಸಿಸೃಪ್ಸತ ...** ... ಮಾಯಾಮೂ ತು ಯಜ್ಞಿಯಾನಾಂ (೧೦-೮೮-೬) ಮತ್ತು ಶುಕ್ರಂ ತೇ ಅನ್ಯದ್ಯಜತಂ ತೇ (೬-೫೮-೧) ಎಂಬ ಋಕ್ಕುಗಳನ್ನುದಾಹರಿಸಿ ಅಲ್ಲಿ ಪ್ರಜ್ಞಾ ಎಂಬರ್ಥಮಾಡುವುದರ ಸಾಮಂಜಸ್ಯವನ್ನು ಹಿಂದೆ ತಿಳಿಸಿದೆ. (ಋಗ್ವೇದಸಂಹಿತಾ ಭಾಗ ೧೧, ಪು. 514).

**"ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥**

(ಋ. ಸಂ. ೬-೪೭-೧೮)

ಪ್ರಸಿದ್ಧವಾದ ಈ ಮಂತ್ರವು ಇಂದ್ರನ ಮಾಯಾ ಶಕ್ತಿಯನ್ನು ವರ್ಣಿಸುತ್ತದೆ. ಇದು ಬೃಹದಾರಣ್ಯಕದಲ್ಲಿಯೂ ಪಠಿತವಾಗಿದೆ. ಋಕ್ಸಂಹಿತೆಯಲ್ಲಿ ಈ ಮಂತ್ರಕ್ಕೆ ಸಾಯಣರು ಎರಡು ವಿಧವಾಗಿ ವ್ಯಾಖ್ಯಾನಮಾಡುತ್ತಾರೆ. ಮೊದಲನೆಯದಾಗಿ, **ಮಾಯಾಭಿಃ—ಜ್ಞಾನಮೇತತ್ । ಜ್ಞಾನೈಃ । ಆತ್ಮೀಯೈಃ ಸಂಕಲ್ಪೈಃ ।** ಆತ್ಮಸಂಕಲ್ಪ ರೂಪವಾದ ಜ್ಞಾನಗಳಿಂದ ಇಂದ್ರನು ನಾನಾರೂಪಗಳನ್ನು ಪಡೆದನು ಎಂದಿದೆ. ಎರಡನೆಯದಾಗಿ **"ಇದಿ ಪರಮೈಶ್ವರ್ಯೇ ಇತ್ಯಸ್ಯ ಧಾತೋರರ್ಥಾನುಗಮಾತ್ ಇಂದ್ರಃ ಪರಮಾತ್ಮಾ । ಸ ಚಾಕಾಶವತ್ ಸರ್ವಗತಃ ಸದಾನಂದರೂಪಃ"** ಸಕಲ ವಿಶ್ವಕ್ಕೂ ಈಶ್ವರನು ಎಂಬರ್ಥವನ್ನು ಕೊಡುವ ಇದ್ ಧಾತುವಿನಿಂದ ಇಂದ್ರಶಬ್ದವು ನಿಷ್ಪನ್ನವಾಗಿದೆ. ಆದುದರಿಂದ ಇಲ್ಲಿ ಇಂದ್ರನೆಂದರೆ ಪರಮಾತ್ಮನೆಂದರ್ಥ. ಸರ್ವವ್ಯಾಪಿಯಾದ ಪರಮಪುರುಷನು ತನ್ನ ಮಾಯಾಶಕ್ತಿಗಳಿಂದ ಆಕಾಶಾದಿ ಜಗದ್ರೂಪದಲ್ಲಿ ಪರಿವರ್ತಿತನಾಗುತ್ತಾನೆ ಎಂದು ವಿವರಿಸಿದ್ದಾರೆ. ಎರಡು ವಿಧವಾದ ಅನ್ವಯದಲ್ಲೂ ಸಹ ಮಾಯಾ ಶಬ್ದಕ್ಕೆ ಸೃಷ್ಟಿಶಕ್ತಿಯೆಂದೇ ಅರ್ಥಮಾಡಿದೆ. ಅಲ್ಲದೇ, ಬೃಹದಾರಣ್ಯಕ ದಲ್ಲಿ ಈ ಮಂತ್ರಕ್ಕೆ ಶಂಕರಾಚಾರ್ಯರೂ ಸಹ ಎರಡು ವಿಧವಾಗಿ ವಿವರಿಸಿದ್ದಾರೆ. ಒಂದನೆಯದಾಗಿ ಪ್ರಜ್ಞಾಭಿಃ । ಸೃಷ್ಟಿಸಾಧಕವಾದ ಪ್ರಜ್ಞೆಗಳಿಂದ ಎಂದೂ ಎರಡನೆಯದಾಗಿ, **ನಾಮರೂಪಭೂತಕೃತಮಿಥ್ಯಾಭಿಮಾನೈರ್ವಾ ।** ನಾಮ, ರೂಪ ಇತ್ಯಾದಿಕಲ್ಪನಾಶಕ್ತಿಗಳಿಂದಲೂ ಎಂದು ತಾತ್ಪರ್ಯವನ್ನು ಹೇಳಿದ್ದಾರೆ. ಇಲ್ಲಿಯೂ ಸಹ ಈ ಪದಕ್ಕೆ ಸೃಷ್ಟಿಶಕ್ತಿಯೆಂದೇ ತಾತ್ಪರ್ಯ. ಕಲ್ಪನಾಶಕ್ತಿಯೆಂದರೆ ಆಗಲೂ ಸಹ ಮಾನಸಿಕಸೃಷ್ಟಿಯೆಂದರ್ಥ. ಮಾನಸಿಕ ಸೃಷ್ಟಿಯಲ್ಲಿ ಭೌತಿಕವಾದ ಸತ್ಯತ್ವವಿಲ್ಲದಿರಬಹುದು. ಆದರೆ ಸೃಷ್ಟಿಶಕ್ತಿಯು ಅವಶ್ಯವಾಗಿದ್ದಿರಬೇಕು. ಈ ಎರಡು ವಿಧವಾದ ಶಕ್ತಿಗಳಿಗೂ ಸಹ **ಮಾಯಾ** ಎಂಬ ಪರ್ಯಾಯಪದವನ್ನು ಅನೇಕಕಡೆಗಳಲ್ಲಿ ಪ್ರಯೋಗಿಸಿದೆ ಇದರಂತೆಯೇ,

**ಮಾಯಾ ವಾಂ ಮಿತ್ರಾವರುಣಾ ದಿವಿ ಶ್ರಿತಾ ಸೂರ್ಯೋ ಜ್ಯೋತಿಶ್ಚರತಿ ಚಿತ್ರಮಾಯುಧಂ ।**
**ತಮಭ್ರೇಣ ವೃಷ್ಟ್ಯಾ ಗೂಹಥೋ ದಿವಿ ಪರ್ಜನ್ಯ ದ್ರಪ್ಸಾ ಮಧುಮಂತ ಈರತೇ ॥**

(ಋ ಸಂ. ೫-೬೩-೪)

ಇತ್ಯಾದಿ ಸ್ಥಳಗಳಲ್ಲೆಲ್ಲಾ ಮಿತ್ರಾವರುಣರ ಅಸಾಧಾರಣವಾದ ಪ್ರಜ್ಞೆಯೂ ಸೃಷ್ಟಿಶಕ್ತಿಯೂ ವರ್ಣಿತವಾಗಿದೆ. ಹೀಗೆಯೇ **"ಮಹೀ ಮಿತ್ರಸ್ಯ ವರುಣಸ್ಯ ಮಾಯಾ"** ಇತ್ಯಾದಿ ಹಿಂದೆ ಉದಾಹೃತವಾಗಿರುವ ಮಂತ್ರಗಳಲ್ಲಿ ಮಾಯಾ ಎಂಬುದಕ್ಕೆ ಅಜ್ಞಾನವೆಂಬ ತಾತ್ಪರ್ಯಕ್ಕೆ ಅವಕಾಶವೇ ಇರುವುದಿಲ್ಲ. **"ಪೂರ್ವಾಪರಂ ಚರತೋ ಮಾಯ-ಯೈತೌ"** (೧೦-೮೫-೧೮) ಎಂಬಲ್ಲಿ ಸೂರ್ಯಾಚಂದ್ರಮಸರು ತಮ್ಮ ವಿಶೇಷವಾದ ಪ್ರಜ್ಞಾಶಕ್ತಿಯಿಂದ ಅಂತರಿಕ್ಷದಲ್ಲಿ ಸಂಚರಿಸುತ್ತಾರೆಂದಿದೆ. ಇದರಲ್ಲಿ ಕಲ್ಪನೆಯಿಲ್ಲ. ಭೌತಿಕವಾದ ಸತ್ಯವೇ ಆಗಿದೆ ಆದುದರಿಂದ ಸೂತ್ರಭಾಷ್ಯಾದಿ

CC-0. Jangamwadi Math Collection. Digitized by eGangotri

ಗಳಲ್ಲಿ ಹೇಳುವಂತೆ ಅಜ್ಞಾನ ಅಥವಾ ಕಲ್ಪನೆ ಎಂಬರ್ಥಕ್ಕೆ ಅವಕಾಶವಿಲ್ಲ- ಐತರೇಯಬ್ರಾಹ್ಮಣದಲ್ಲಿ ಪ್ರವರ್ಗ್ಯ ಯಾಗದ ಪ್ರಕರಣದಲ್ಲಿ ಉದಾಹೃತವಾಗಿರುವ ಮಂತ್ರವನ್ನು ಪರಿಶೀಲಿಸಿದರೆ ಈ ಅರ್ಥವು ವಿಶದವಾಗುತ್ತದೆ.

**"ಪತಂಗಮಕ್ತಮಸುರಸ್ಯ ಮಾಯಯಾ ಹೃದಾ ಪಶ್ಯಂತಿ ಮನಸಾ ವಿಪಶ್ಚಿತಃ ।**
**ಸಮುದ್ರೇ ಅಂತಃ ಕವಯೋ ವಿ ಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ"**

(ಋ. ಸಂ. ೧೦-೧೭೭-೧)

ಎಂಬಲ್ಲಿ ಸಾಯಣರು ಅಸುರಶಬ್ದಕ್ಕೆ ಪರಬ್ರಹ್ಮನೆಂದೂ, **ಮಾಯಾ** ಶಬ್ದಕ್ಕೆ ಪರಬ್ರಹ್ಮನಿಗೆ ಸಂಬಂಧವಾದ ಪ್ರಜ್ಞೆ ಯೆಂದೂ ಅರ್ಥಮಾಡಿದ್ದಾರೆ. ಪತಂಗವೆಂದರೆ ಆದಿತ್ಯನೆಂದರ್ಥ. ಪರಬ್ರಹ್ಮನ ಪ್ರಜ್ಞೆಯಿಂದ ಅಕ್ತನಾದ (ವ್ಯಾಪ್ತ ನಾದ) ಆದಿತ್ಯನನ್ನು ವಿದ್ವಾಂಸರು ಹೃದಯದಿಂದ ನಿರುದ್ಧವಾದ ಮನಸ್ಸಿನಿಂದ ಎಂದರೆ ಧ್ಯಾನರೂಪದಲ್ಲಿ ಸಾಕ್ಷಾತ್ಕರಿಸಿ ಕೊಳ್ಳುವರು ಎಂದು ವಿವರಿಸಿದ್ದಾರೆ. ಆದುದರಿಂದ ಇಲ್ಲಿಯೂ ಅಜ್ಞಾನವೆಂದರ್ಥಮಾಡಲವಕಾಶವಿಲ್ಲ. ಋಕ್ಸಂಹಿತೆ ಯಲ್ಲಿ ಇಂದ್ರಾದಿಗಳ ಸಂಕಲ್ಪವೇ ಮಾಯಾ ಎಂಬ ಪರ್ಯಾಯಪದದಿಂದ ನಿರ್ದಿಷ್ಟವಾಗಿರುವಂತೆ ಗೀತೆಯಲ್ಲಿಯೂ ಸಹ ಅದನ್ನೇ ಅನುಸರಿಸಿದೆ ಎಂದು ತಿಳಿಸಲು ಶ್ರೀ ಭಾಷ್ಯದಲ್ಲಿ ಅಂತರಧಿಕರಣದಲ್ಲಿ "ಪ್ರಕೃತಿಂ ಸ್ವಾಮಧಿಷ್ಠಾಯ **ಸಂಭವಾಮ್ಯಾತ್ಮಮಾಯಯಾ"** (ಭ. ಗೀ. ೪-೬) ಎಂಬ ಗೀತಾವಾಕ್ಯವನ್ನುದಾಹರಿಸಿ ಅಲ್ಲಿನ ಮಾಯಾಶಬ್ದಕ್ಕೆ ಈಶ್ವರನ ಸಂಕಲ್ಪರೂಪವಾದ ಪ್ರಜ್ಞೆಯೆಂದರ್ಥಮಾಡಿದೆ. "ಮಾಯಾ ವಯುನಂ, ಜ್ಞಾನಂ" ಎಂಬ ನಿರುಕ್ತ ವಾಕ್ಯವನ್ನು ಇಲ್ಲಿ ಆಧಾರವಾಗಿ ಪಠಿಸಿದೆ. "ಮಾಯಾ ಮಾತ್ರಂ...." ಇತ್ಯಾದಿ ಬ್ರಹ್ಮಸೂತ್ರದಲ್ಲಿರುವ ಮಾಯಾ ಶಬ್ದದ ನಿಷ್ಕೃಷ್ಟವಾದ ತಾತ್ಪರ್ಯವೇನು ಎಂಬುದನ್ನೂ ಮತ್ತು ದಾರ್ಶನಿಕಪ್ರಕ್ರಿಯೆಯಲ್ಲಿ ಮಾಯಾವಾದದ ಮೂಲ ವಾವುದು ? ಅದರ ತತ್ತ್ವಾರ್ಥವೇನು ? ಈ ಭಾವವು ಬೆಳೆದು ಬಂದುದು ಹೇಗೆ ? ವಿಪ್ರತಿಪತ್ತಿವಾಕ್ಯಗಳ ತಾತ್ಪರ್ಯ ವೇನು ಎಂಬುದನ್ನು ಇಲ್ಲಿ ವಿವರಿಸಬೇಕಾದ ಆವಶ್ಯಕತೆ ಇಲ್ಲ.

ಸೃಷ್ಟಿಸಂಕಲ್ಪ, ಅಥವಾ ಶಕ್ತಿ ಎಂಬ ಶಕ್ತಿಯಲ್ಲದೆ, ವಂಚನೆ, ಮೋಸ, ಕಾಪಟ್ಯ ಇತ್ಯಾದ್ಯರ್ಥಗಳಲ್ಲೂ ಈ ಪದವನ್ನು ಪ್ರಯೋಗಿಸಿದೆ

**ತ್ವಂ ಮಾಯಾಭಿರನವದ್ಯ ಮಾಯಿನಂ ಶ್ರವಸ್ಯತಾ ಮನಸಾ ವೃತ್ರಮರ್ದಯಃ ।**
**ತ್ವಾಮಿನ್ನರೋ ವೃಣತೇ ಗವಿಷ್ಟಿಷು ತ್ವಾಂ ವಿಶ್ವಾಸು ಹವ್ಯಾಸ್ವಿಷ್ಟಿಷು ॥**

(ಋ. ಸಂ. ೧೦-೧೪೭-೨)

ಎಂಬಲ್ಲಿ ವಂಚಕನಾದ ಶತ್ರುವನ್ನು ಪ್ರಜ್ಞಾವಂತನಾದ ಇಂದ್ರನು ನಾಶಮಾಡಿದನು ಎಂದು ಮಾಯಾಶಬ್ದಕ್ಕೆ ಎರಡರ್ಥವನ್ನೂ ತಿಳಿಸಿದೆ. ಆದುದರಿಂದ ಇಂದ್ರಾದಿದೇವತೆಗಳ ಪರವಾಗಿ ಉಪಯೋಗಿಸಿದಾಗ ಈ ಪದಕ್ಕೆ ಸೃಷ್ಟಿ ಸಂಕಲ್ಪ ಅಥವಾ ಶಕ್ತಿಯುತವಾದ ಪ್ರಜ್ಞೆಯೆಂದೂ, ಅಸುರರ ಪರವಾಗಿ ಪ್ರಯೋಗಿಸಿದಾಗ ವಂಚನೆ ಅಥವಾ ಮೋಸ ವೆಂದೂ ಅರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಶಕ್ತ್ಯರ್ಥದಲ್ಲಿಯೇ ಈ ಪದದ ಪ್ರಯೋಗವಿದೆ. ವಂಚಕರಾದ ಅಸುರರು ದೇವತೆಗಳ ಪಾಲನಾದಿ ಕರ್ಮಕ್ಕೆ ವಿಘ್ನವನ್ನುಂಟುಮಾಡಬೇಕಾದರೆ ಅಸಾಧಾರಣವಾದ ಶಕ್ತಿಯಿರಬೇಕು. ಆದರೆ ಋತಪಾಲಕರಾದ ದೇವತೆಗಳ **ವ್ರತವು** ಯಾರಿಂದಲೂ ಭಂಗವಾಗತಕ್ಕದ್ದಲ್ಲ.

ವ್ರತಾ—ವ್ರತಶಬ್ದಕ್ಕೆ ಲೋಕಪಾಲನಾದಿ ಕರ್ಮವೆಂದರ್ಥಮಾಡಿದೆ. ಒಂದು ನಿರ್ದಿಷ್ಟವಾದ ನಿಯಮಕ್ಕೆ ಒಳಪಟ್ಟು ಮಾಡುವ ಕಾರ್ಯವೆಂದು ಈ ಶಬ್ದದ ಅರ್ಥವು. ಈ ದೃಷ್ಟಿಯಿಂದ ಸಾಧಾರಣವಾಗಿ ವ್ರತಶಬ್ದಕ್ಕೆ

CC-0. Jangamwadi Math Collection. Digitized by eGangotri

ಮಾನವರು ದೇವತಾಪ್ರೀತ್ಯರ್ಥವಾಗಿ ದೇವತೆಗಳನ್ನುದ್ದೇಶಿಸಿ ಮಾಡತಕ್ಕ ಯಾಗಾದಿ ಕರ್ಮಗಳಿಗೆ ವ್ರತವೆಂಬ ಹೆಸರು ಪ್ರಸಿದ್ಧವಾಗಿದೆ, ಆದರೆ ಇಲ್ಲಿ ಇಂದ್ರಾದಿಗಳ ಕಾರ್ಯಗಳನ್ನು ಉಪಯೋಗಿಸಲು ವ್ರತ ಶಬ್ದದ ಪ್ರಯೋಗವಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ದೇವತೆಗಳ ಕರ್ಮಗಳಿಗೂ ವ್ರತವೆಂದು ನಿರ್ದೇಶಿಸಿದೆ. ಎಂದರೆ, ಮಾನವನಿಗೆ ಯಜ್ಞಾಚರಣೆಯು ವೈದಿಕದೃಷ್ಟಿಯಿಂದ ಎಷ್ಟು ಅವಶ್ಯವೋ, ದೇವತೆಗಳಿಗೂ ಸಹ ಲೋಕಪಾಲನಾದಿ ಕರ್ಮವು ಅಷ್ಟೇ ಅವಶ್ಯವೆಂಬುದು ಇಂತಹ ಪ್ರಯೋಗಗಳಿಂದ ತಿಳಿಯುತ್ತದೆ

"ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ" (ಶ. ಬ್ರಾ. ೧-೧-೧-೨) ಇತ್ಯಾದಿವಾಕ್ಯಗಳಲ್ಲಿ ದೇವತೆಗಳಿಗೂ ಮಾನವರಿಗೂ ವ್ರತಕ್ಕೆ ಸಂಬಂಧಪಟ್ಟ ಸಾಧಾರಣಸಂಬಂಧವು ಸೂಚಿತವಾಗಿದೆ. ವ್ರತವೆಂದರೆ ಯಜ್ಞವೆಂದೇ ಅರ್ಥಮಾಡಬಹುದು. ಆದರೆ ಮಾನವನು ಮಾಡತಕ್ಕ ಕಾರ್ಯಗಳಲ್ಲಿ ಯಾವುದು ಯಜ್ಞ, ಯಾವುದಲ್ಲ ಎಂದು ಹೇಳುವುದು ಹೇಗೆ ಎಂದರೆ ಅದಕ್ಕೆ ಉತ್ತರವಾಗಿ ಋಕ್ಸಂಹಿತೆಯಲ್ಲಿ ಒಂದು ಮಂತ್ರವನ್ನು ಪರಿಶೀಲಿಸಬೇಕು.

ನಾನಾನಂ ವಾ ಉ ನೋ ಧಿಯೋ ವಿ ವ್ರತಾನಿ ಜನಾನಾಂ ।
ತಕ್ಷಾ ರಿಷ್ಟಂ ರುತಂ ಭಿಷಗ್ಬ್ರಹ್ಮಾ ಸುನ್ವಂತಮಿಚ್ಛತೀಂದ್ರಾಯೇಂದೋ ಪರಿ ಸ್ರವ ॥
(ಋ. ಸಂ. ೯-೧೧೨-೧)

ಈ ಮಂತ್ರದಲ್ಲಿ ಮಾನವನ ನಾನಾಮುಖವಾದ ಕಾರ್ಯಗಳು ವರ್ಣಿತವಾಗಿವೆ. **ಜನಾನಾಂ ವ್ರತಾನಿ ನಾನಾನಂ ।** ಮಾನವರ ವ್ರತಗಳು ಅನೇಕವಾಗಿವೆ. ಅವುಗಳಲ್ಲಿ, ಮರಗೆಲಸದವನು ಮರದ ಕೆಲಸವನ್ನು ಮಾಡುವುದನ್ನೂ, ವೈದ್ಯನು ರೋಗಕ್ಕೆ ಚಿಕಿತ್ಸೆಮಾಡುವುದನ್ನೂ, ಯಜಮಾನನು ಸೋಮರಸವನ್ನು ಹಿಂಡಿ ಯಜ್ಞಮಾಡುವುದನ್ನೂ ಇಚ್ಛಿಸುತ್ತಾರೆ. ಎಂದರೆ ಪ್ರತಿಯೊಬ್ಬನೂ ತನ್ನ ಶಕ್ತ್ಯನುಸಾರವಾದ ಮತ್ತು ಸ್ವರೂಪಕ್ಕೆ ತಕ್ಕ ಕಸಬನ್ನು ಶ್ರದ್ಧೆಯಿಂದಲೂ ಕರ್ತವ್ಯದೃಷ್ಟಿಯಿಂದಲೂ ಮಾಡಿದರೆ ಆಗ ಮಾನವನ ಸಮಸ್ತಕರ್ಮವೂಸಹ ವ್ರತರೂಪದಲ್ಲಿಯೇ ಇರುತ್ತದೆ. ಮಾನವನ ಜೀವನವೇ ವ್ರತರೂಪದಲ್ಲಿರುತ್ತದೆ. ಇದೇ ರೀತಿ ಲೋಕನಿರ್ವಹಣಕ್ಕಾಗಿ ದೇವತೆಗಳು ಮಾಡತಕ್ಕ ಸಕಲಕರ್ಮಗಳೂ ವ್ರತವೇ ಆಗುತ್ತವೆ. ದೇವತೆಗಳ ತೃಪ್ತಿಗಾಗಿ ಮಾನವನು ಯಾಗಾದಿ ಕರ್ಮಗಳನ್ನು ನಿರ್ವಹಿಸುವಂತೆಯೇ, ದೇವತೆಗಳೂ ಸಹ ಮಾನವನ ಅಸ್ತಿತ್ವಕ್ಕೂ ಪೋಷಣೆಗೂ ತಕ್ಕ ಸಹಾಯಸಂಪತ್ತನ್ನೊದಗಿಸಬೇಕು. ಈ ಕಾರ್ಯನಿರ್ವಹಣವನ್ನು ಇಲ್ಲಿ ವ್ರತವೆಂದು ವರ್ಣಿಸಿದೆ. **ಋತುಧರ್ಮವನ್ನನುಸರಿಸಿ** ಆಚರಿಸತಕ್ಕ ಸಕಲವ್ರತಗಳು ಎಷ್ಟು ಧ್ರುವವೋ ಅವರ ವ್ರತಗಳೂ ಅಷ್ಟೇ ಧ್ರುವಗಳಾಗಿದೆ.

ವ್ರತ ಶಬ್ದಕ್ಕೆ ಎರಡು ವಿಧವಾದ ನಿರ್ವಚನವನ್ನು ನಿರುಕ್ತದಲ್ಲಿ ತಿಳಿಸಿದೆ. **ನಿವೃತ್ತಿಕರ್ಮ ವಾರಯತೀತಿ ಸತಃ ।** ಅನುಚಿತವಾದ ಕರ್ಮಗಳನ್ನು ಮಾಡಲು ನಿಷೇಧಿಸುವುದಾದುದರಿಂದ—ವ್ರತವೆಂದು ಹೆಸರು. ಅಥವಾ ಮಾಡಬೇಕಾದ ಕರ್ತವ್ಯವನ್ನು ವರಿಸುವುದರಿಂದಲೂ ವ್ರತವೆಂದು ಹೆಸರು. (**ವೃಣೋತೀತಿ ಸತಃ** ನಿ ೨-೧೨). **ವೃಣೋತೀತಿ ವ್ರತಂ** ಎಂಬ ನಿರ್ವಚನದಲ್ಲಿ ಮಾನವನಾಗಲಿ ದೇವತೆಯಾಗಲಿ ಪ್ರತಿಯೊಂದು ವ್ಯಕ್ತಿಯೂ ಸಹ ನಿಯತವಾಗಿ ಆಚರಿಸಬೇಕಾದ ಕರ್ತವ್ಯವು ಸೂಚಿತವಾಗಿದೆ. ಮೂರನೆಯದಾಗಿ, "**ಯದಾವೃಣೋತಿ ಶರೀರಂ । ತಸ್ಮಾದನ್ನಮಪಿ ವ್ರತಮುಚ್ಯತೇ**" (ನಿ. ೨-೧೨). ದೇಹವನ್ನೆಲ್ಲಾ ವ್ಯಾಪಿಸಿ ದೇಹದಾರ್ಢ್ಯವನ್ನುಂಟುಮಾಡುವುದರಿಂದ ಅನ್ನವೂ ವ್ರತವೆಂದು ಕರೆಯಲ್ಪಡುತ್ತದೆ. ಪ್ರಕೃತವಾದ ಋಕ್ಕಿನಲ್ಲಿರುವ ವ್ರತಶಬ್ದಕ್ಕೆ ಅನ್ನವೆಂದರ್ಥ ಮಾಡಬಹುದು. ದೇವತೆಗಳು ಒದಗಿಸತಕ್ಕ ಅನ್ನಸಂಪತ್ತು ಧ್ರುವವಾಗಿರುವುದರಿಂದ ಅದನ್ನು ಯಾರೂ ಹಿಂಸಿಸಲಾರರು ಎಂದು ತಾತ್ಪರ್ಯ.

CC-0. Jangamwadi Math Collection. Digitized by eGangotri

**ಧೀರಾಃ—ಧೀರೋ ಧೀಮಾನ್**—ಈ ಪದವು ಮೇಧಾವಿನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯). ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಪ್ರಾಜ್ಞ, ವಿವೇಕಿ ಎಂಬರ್ಥದಲ್ಲಿ ಈ ಪದದ ಪ್ರಯೋಗವಿದೆ. ಧೀರನು ಪ್ರಾಜ್ಞನಾದುದರಿಂದಲೂ, ಭಯವನ್ನು ಜಯಿಸಿ ನಿರ್ಭಯವಾಗಿರುವುದು, ಆಪತ್ಕಾಲದಲ್ಲೂ ಪ್ರಶಾಂತಚಿತ್ತನಾಗಿರುವುದು ಇತ್ಯಾದಿಗುಣಗಳಿರುವುದರಿಂದ ಧೈರ್ಯವುಳ್ಳವನೆಂದೇ ತಾತ್ಪರ್ಯ. "ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ **ನ ಶೋಚತಿ** ॥ (ಕಠ. ೫-೪)." ಇತ್ಯಾದಿ ವಾಕ್ಯಗಳನ್ನುದಾಹರಿಸಿ ಹಿಂದೆ ಈ ಪದದ ವೈಶಿಷ್ಟ್ಯವನ್ನು ವಿವರಿಸಿದೆ.

ಪ್ರಾಜ್ಞನಾದ ವಿವೇಕಿಯು ದೇವವ್ರತವನ್ನೇ ಅನುಸರಿಸುವುದರಿಂದ ಈ ವಿಶ್ವನಿಯಮದ ಉಲ್ಲಂಘನೆಯಿರುವುದಿಲ್ಲ. ವಂಚಕರಾದ ಅಸುರರಿಗೆ ಅದು ಸಾಧ್ಯವಿಲ್ಲ. ಆದುದರಿಂದ ದೇವತೆಗಳ ವ್ರತಗಳು ಅಚಲವೂ ಶಾಶ್ವತವೂ ಆದವು. ಋಕ್ಸಂಹಿತೆಯಲ್ಲಿ ಧೃತವ್ರತನೆಂದು ವರ್ಣಿತನಾದ ವರುಣನ ವ್ರತವು ಇದೇ ರೀತಿ ಇತರಕಡೆಗಳಲ್ಲಿಯೂ ವರ್ಣಿತವಾಗಿದೆ. ಲೋಕಸ್ಥಿತಿಗೂ ರಕ್ಷಣಕ್ಕೂ ಕಾರಣವಾದ ಈ ವ್ರತಗಳ ಸ್ವರೂಪವೇನೆಂದರೆ,

**ಅಮೀ ಯ ಋಕ್ಷಾ ನಿಹಿತಾಸ ಉಚ್ಚಾ ನಕ್ತಂ ದದೃಶ್ರೇ ಕುಹ ಚಿದ್ದಿವೇಯುಃ ।**
**ಅದಬ್ಧಾನಿ ವರುಣಸ್ಯ ವ್ರತಾನಿ ವಿಚಾಕಶಚ್ಚಂದ್ರಮಾ ನಕ್ತಮೇತಿ ॥**

(ಋ ಸಂ. ೧-೨೪-೧೦)

ರಾತ್ರಿಯಲ್ಲಿ ನಕ್ಷತ್ರಗಳ ಪ್ರಕಾಶವೂ ಅಹಸ್ಸಿನಲ್ಲಿ ಸೂರ್ಯನ ಪ್ರಕಾಶವೂ ವರುಣನ ವ್ರತಗಳೇ ಆಗಿವೆ. ಈ ವ್ರತನಿಯಮವು ಅಪ್ರತಿಹತವಾದುದು. ವರುಣನ ಆಜ್ಞೆಯೇ ವಿಶ್ವಾಜ್ಞೆ. ಇದನ್ನು ಮೀರಲು ಯಾರಿಗೂ ಸಾಧ್ಯವಿಲ್ಲ. ಈ ವಿಧವಾದ ಅದಬ್ಧತ್ವವಿರುವುದರಿಂದಲೇ ಮಿತ್ರಾವರುಣರು ಧೃತ ವ್ರತರೆಂದು (ನಿ ೮-೨೫-೨) ವರ್ಣಿತರಾಗಿದ್ದಾರೆ ಇದರಂತೆಯೇ,

**ನಹಿ ತ್ವಾ ಶೂರ ದೇವಾ ನ ಮರ್ತಾಸೋ ದಿತ್ಸಂತಂ । ಭೀಮಂ ನ ಗಾಂ ವಾರಯಂತೇ ॥**

(ಋ. ಸಂ. ೮-೮೧-೩)

ದೇವತೆಗಳಾಗಲಿ, ಮಾನವರಾಗಲಿ ಇಂದ್ರನ ಮಹದೌದಾರ್ಯಕರ್ಮಗಳನ್ನು ತಡೆಯಲು ಸಾಧ್ಯವಿಲ್ಲ. ಇಂದ್ರನ ಕರ್ಮಗಳೆಲ್ಲವೂ ವ್ರತರೂಪವಾಗಿಯೇ ಇವೆ. ಆದುದರಿಂದ ಅವು ಧ್ರುವವಾದವೂ, ಲೋಕಪಾಲಕವಾಗಿಯೂ ಇವೆಯೆಂದು ತಾತ್ಪರ್ಯ.

---

ಸಂಹಿತಾಪಾಠಃ

**ಷಡ್ಭಾರಾಁ ಏಕೋ ಅಚರನ್ಬಿಭರ್ತ್ಯೃತಂ ವರ್ಷಿಷ್ಠಮುಪ ಗಾವ ಆಗುಃ ।**
**ತಿಸ್ರೋ ಮಹೀರುಪರಾಸ್ತಸ್ಥುರತ್ಯಾ ಗುಹಾ ದ್ವೇ ನಿಹಿತೇ ದರ್ಶ್ಯೇಕಾ ॥೨॥**

ಪದಪಾಠಃ

ಷಟ್ । ಭಾರಾನ್ । ಏಕಃ । ಅಚರನ್ । ಬಿಭರ್ತಿ । ಋತಮ್ । ವರ್ಷಿಷ್ಠಂ । ಉಪ । ಗಾವಃ । ಆ । ಅಗುಃ ।

CC-0. Jangamwadi Math Collection. Digitized by eGangotri

ತ್ರಿಸ್ರಃ । ಮಹೀಃ । ಉಪರಾಃ । ತಸ್ಥುಃ । ಅತ್ಯಾಃ । ಗುಹಾ । ದ್ವೇ ಇತಿ । ನಿಹಿತೇ ಇತಿ ನಿಽಹಿತೇ । ದರ್ಶಿ ।

ಏಕಾ ॥ ೨ ॥

ಸಾಯಣಭಾಷ್ಯಂ

ಅಚರನ್ ಸ್ಥಾಯಿಾ ಏಕಃ ಸಂವತ್ಸರಃ ಷಟ್ ಷಟ್‌ಸಂಖ್ಯಾಕಾನ್ ಭಾರಾನ್ । ಭ್ರಿಯತೇ ಪುಷ್ಪನಿಕಾಸಾದಿ ಯೇಷ್ವಿತಿ ಭಾರಾ ಋತವಃ । ತಾನ್ವಸಂತಾದೀನ್ ಬಿಭರ್ತಿ । ಅವಯವತ್ವೇನ ಧಾರಯತಿ । ತಥಾ ಋತಂ ಸತ್ಯಭೂತಂ ವರ್ಷಿಷ್ಠಂ ವೃದ್ಧತರಮಾದಿತ್ಯಾತ್ಮಕಂ ತಮೇವ ಸಂವತ್ಸರಂ ಗಾವೋ ರಶ್ಮಯ ಉಪಾಗುಃ । ಪ್ರಾಪ್ನುವಂತಿ । ಕಿಂಚ ತಸ್ಮಿನ್ನೇವ ಸಂವತ್ಸರೇಽತ್ಯಾ ಅತನಶೀಲಾ ಆಗಮಾಪಾಯಿಧರ್ಮೋಪೇತಾಸ್ತಿಸ್ರೋ ಮಹೀಸ್ತ್ರಯೋ ಲೋಕಾ ಉಪರಾ ಉಪರ್ಯುಪರಿ ವರ್ತಮಾನಾಸ್ತಸ್ಥುಃ । ತಿಷ್ಠಂತಿ । ಲೋಕತ್ರಯಮೇವ ದರ್ಶಯತಿ । ಗುಹಾ ಗುಹಾಯಾಂ ಸ್ವಾತ್ಮನಿ ದ್ವೇ ದ್ಯಾವಾಂತರಿಕ್ಷಂ ಚೇತ್ಯೇತೇ ನಿಹಿತೇ । ನ ದೃಶ್ಯೇತೇ । ಏಕಾ ಭೂಮಿರ್ದರ್ಶಿ । ಸರ್ವಭೂತಾಧಾರತಯಾ ದೃಶ್ಯತೇ ॥ ಭಾರಾನ್ । ಡುಭೃಞ್ ಧಾರಣಪೋಷಣಯೋರಿತ್ಯಸ್ಮಾದಧಿಕರಣೇ ಘಞ್ । ಕರ್ಷಾತ್ವತೋ ಘಞ ಇತ್ಯಂತೋದಾತ್ತತ್ವಂ । ನಿಹಿತೇ । ದಧಾತೇಃ ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ದರ್ಶಿ । ದೃಶಿರ್ ಪ್ರೇಕ್ಷಣೇ । ಕರ್ಮಣಿ ಲುಙ್ ಚಿಣಿ ಚಿಣೋ ಲುಗಿತಿ ಪ್ರತ್ಯಯಸ್ಯ ಲುಕ್ । ವಾಕ್ಯಭೇದಾದನಿಘಾತಃ ॥

ಪ್ರತಿಪದಾರ್ಥ

ಅಚರನ್—ಸಂಚಲನವಿಲ್ಲದೇ ಸ್ಥಾಯಿಯಾಗಿರತಕ್ಕ । ಏಕಃ—ಸಂವತ್ಸರರೂಪವಾದ ಏಕತತ್ತ್ವವು । ಷಟ್ ಭಾರಾನ್—ಆರು ಋತುರೂಪಗಳಾದ ಭಾರಗಳನ್ನು । ಬಿಭರ್ತಿ—ಧರಿಸುತ್ತದೆ । ಋತಂ—ಸತ್ಯಾತ್ಮಕವಾದುದೂ । ವರ್ಷಿಷ್ಠಂ—ಎಲ್ಲಕ್ಕಿಂತಲೂ ಜ್ಯೇಷ್ಠವಾದುದೂ ಆದ ಆದಿತ್ಯತತ್ತ್ವವನ್ನು । ಗಾವಃ—ರಶ್ಮಿಗಳು । ಉಪ ಆಗುಃ—ಹೊಂದಿಕೊಳ್ಳುತ್ತವೆ । ಅತ್ಯಾಃ—ಜಂಗಮಾತ್ಮಕಗಳಾದ । ತಿಸ್ರೋ ಮಹೀಃ—ಮೂರು ಲೋಕಗಳೂ ಕೂಡ । ಉಪರಾಃ—ಒಂದರ ಮೇಲೊಂದು । ತಸ್ಥುಃ—ಸ್ಥಾಪಿತವಾಗಿವೆ । ದ್ವೇ—(ಅವುಗಳ ಪೈಕಿ) ದ್ಯುಲೋಕ ಅಂತರಿಕ್ಷಗಳೆರಡೂ ಸಹ । ಗುಹಾ—ಗೋಚರರಹಿತವಾದ ಗೂಢಪ್ರದೇಶದಲ್ಲಿ । ನಿಹಿತೇ—ಇಡಲ್ಪಟ್ಟವೆ। ಏಕಾ—ಇನ್ನೊಂದಾದ ಪೃಥ್ವಿಯು । ದರ್ಶಿ—(ಎಲ್ಲರಿಗೂ) ಗೋಚರವಾಗುತ್ತದೆ.

ಭಾವಾರ್ಥ

ಸಂಚಲನವಿಲ್ಲದೇ ಸ್ಥಾಯಿಯಾಗಿರತಕ್ಕ ಸಂವತ್ಸರರೂಪವಾದ ತತ್ತ್ವವು ಆರು ಋತುರೂಪಗಳಾದ ಭಾರಗಳನ್ನು ಧರಿಸುತ್ತದೆ. ಸತ್ಯಾತ್ಮಕವಾದುದೂ ಎಲ್ಲಕ್ಕಿಂತಲೂ ಶ್ರೇಷ್ಠವಾದುದೂ ಆದ ಆದಿತ್ಯನನ್ನು ರಶ್ಮಿಗಳು ಸೇರಿಕೊಳ್ಳುತ್ತವೆ. ಜಂಗಮಾತ್ಮಕಗಳಾದ ಮೂರು ಲೋಕಗಳೂ ಒಂದರಮೇಲೊಂದು ಸ್ಥಾಪಿತವಾಗಿವೆ. ಅವುಗಳ ಪೈಕಿ ದ್ಯುಲೋಕ ಮತ್ತು ಅಂತರಿಕ್ಷಗಳೆರಡೂ ಸಹ ಗೋಚರರಹಿತವಾದ ಗೂಢಪ್ರದೇಶದಲ್ಲಿ ಇಡಲ್ಪಟ್ಟವೆ. ಇನ್ನೊಂದಾದ ಪೃಥ್ವಿಯು ಎಲ್ಲರಿಗೂ ಗೋಚರವಾಗುತ್ತದೆ.

CC-0. Jangamwadi Math Collection. Digitized by eGangotri

## English Translation

One stationary (year) sustains six burthens (in the seasons); the (solar) rays spread through that true and extensive (term); three revolving spheres are severally above, two of which are placed in secret, and one is visible.

### ವಿಶೇಷವಿಷಯಗಳು

ಸ್ವಯಂ ಅಚಲವಾದುದೂ, ವಿಶ್ವದ ಚಲನವಲನಗಳಿಗೆಲ್ಲಾ ಮೂಲಭೂತವಾದುದೂ ಆದ ಆದಿತ್ಯತತ್ತ್ವದ ಸ್ವರೂಪವು ಈ ಮಂತ್ರದಿಂದ ವರ್ಣಿತವಾಗಿದೆ. ಆದರೆ ಸಂವತ್ಸರಕ್ಕೂ ಆದಿತ್ಯನಿಗೂ ತಾದಾತ್ಮ್ಯವನ್ನು ತೋರಿಸಿ ಸಂವತ್ಸರಾವಯವಗಳಾದ ಋತುಗಳಿಗೂ, ಆದಿತ್ಯಾವಯವಗಳಾದ ರಶ್ಮಿಗಳಿಗೂ ಇರುವ ಸಮಾನಧರ್ಮವನ್ನೂ ಸೂಚಿಸಿದೆ. ಅಥವಾ **ಷಟ್ ಭಾರಾನ್ ಬಿಭರ್ತಿ** ಋತುರೂಪಗಳಾದ ಆರು ಭಾರಗಳನ್ನು ಧರಿಸುತ್ತದೆ ಎಂದಿರುವುದರಿಂದ ಋತುಗಳನ್ನೇ ಆದಿತ್ಯಾವಯವಗಳೆಂದೂ ಹೇಳಿದಂತಾಯಿತು. ಎಂದರೆ, ಆದಿತ್ಯನಿಗೂ ಸಂವತ್ಸರಕ್ಕೂ ಅಭೇದವನ್ನು ತೋರಿಸಿದೆಯೆನ್ನಬಹುದು. ಇವೆರಡಕ್ಕೂ ಅಭೇದವನ್ನು ತೋರಿಸಿ ಎರಡೂ ಸಹ ಪ್ರಜಾಪತಿತತ್ತ್ವವನ್ನೇ ಪ್ರತಿಪಾದಿಸುವುವು. ಆದಿತ್ಯನ ಸ್ವರೂಪವೇ ಸಂವತ್ಸರದ ಸ್ವರೂಪವು, ಸಂವತ್ಸರದ ಸ್ವರೂಪವೇ ಪ್ರಜಾಪತಿಯ ಸ್ವರೂಪವು, ಎಂದೂ ಹೇಳಬಹುದು. ಇದಕ್ಕೆ ಆಧಾರವಾಕ್ಯಗಳು ಅನೇಕವಿವೆ.

> **ತ್ರೀಣಿ ಚ ವೈ ಶತಾನಿ ಷಷ್ಟಿಶ್ಚ ಸಂವತ್ಸರಸ್ಯಾಹಾನಿ ತಾವಾನ್ತ್ಸಂವತ್ಸರಃ ಸಂವತ್ಸರಃ ಪ್ರಜಾಪತಿಃ**
> **.... .... .... .... ಯಂ ಪ್ರಜಾಯಮಾನಂ ವಿಶ್ವಂ ರೂಪಮಿದಮನುಪ್ರಜಾಯತೇ ॥**
>
> (ಐ. ಬ್ರಾ. ೨-೧೭)

ಮುನ್ನೂರ ಅರವತ್ತು ಅಹಸ್ಸುಗಳುಳ್ಳದ್ದೂ, ದ್ವಾದಶಮಾಸಗಳುಳ್ಳದ್ದೂ ಷಡೃತುಗಳುಳ್ಳದ್ದೂ ಆದ ಸಂವತ್ಸರವೇ ಪ್ರಜಾಪತಿಯು ಎಂದು ಐತರೇಯಬ್ರಾಹ್ಮಣದ ವಾಕ್ಯವಿದೆ.

> **ಕಾಲಾತ್ಸ್ರವಂತಿ ಭೂತಾನಿ ಕಾಲಾದ್ವೃದ್ಧಿಂ ಪ್ರಯಾಂತಿ ಚ ।**
> **ಕಾಲೇ ಚಾಸ್ತಂ ನಿಯಚ್ಛಂತಿ ಕಾಲೋ ಮೂರ್ತಿರಮೂರ್ತಿಮಾನ್ ॥**
>
> (ಮೈ. ಉ. ೬-೧೪)

ಆದಿತ್ಯರೂಪನಾದ ಬ್ರಹ್ಮನಿಗೆ ಎರಡು ರೂಪಗಳು. ಒಂದನೆಯದು ಕಾಲ; ಎರಡನೆಯದು ಅಕಾಲ. ಆದಿತ್ಯತತ್ತ್ವಕ್ಕೂ ಮೂಲವಾದ ವಸ್ತುವು ಕಾಲರಹಿತವೂ ಕಲಾರಹಿತವೂ ಆಗಿದೆ. ಆದಿತ್ಯನಿಂದ ನಿಷ್ಪನ್ನವಾದ ಸಕಲ ವಿಶ್ವವೂ ಕಲಾತ್ಮಕವಾದುದು. ಇದರಿಂದಲೇ ಪ್ರಜೋತ್ಪತ್ತಿ. ಆದುದರಿಂದಲೇ ಕಾಲಾತ್ಮಕವೂ, ಕಲಾತ್ಮಕವೂ ಆದ ಸಂವತ್ಸರವೇ ಪ್ರಜಾಪತಿಯು, ಇತ್ಯಾದಿಯಾಗಿ ಮೈತ್ರ್ಯುಪನಿಷತ್ತಿನ ವಿವರಣೆಯಿದೆ. ಈ ಭಾವವನ್ನೇ ಪ್ರಕೃತವಾದ ಋಕ್ಕಿನಲ್ಲಿ, " **ಅಚರನ್ ಏಕಃ ಷಡ್ಭಾರಾನ್ ಬಿಭರ್ತಿ** " ಮೂಲವಸ್ತುವು ತಾನು ಮಾತ್ರ ಚಲಿಸದೇ ತನ್ನಿಂದ ನಿಷ್ಪನ್ನವಾದ ಸಕಲವಿಶ್ವತತ್ತ್ವವನ್ನೂ ಚಲಿಸುವಂತೆ ಮಾಡಿ ಚಲನಾತ್ಮಕವಾದ ಆ ಸಕಲ ವಿಶ್ವವನ್ನೂ ತಾನೇ ಹಿಡಿದಿರುತ್ತದೆ.

> **ಚತುರ್ಭಿಃ ಸಾಕಂ ನವತಿಂ ಚ ನಾಮಭಿಶ್ಚಕ್ರಂ ನ ವೃತ್ತಂ ವ್ಯತೀಁರವೀವಿಪತ್ ।**
>
> (ಋ ಸಂ. ೧-೧೫೫-೬)

CC-0. Jangamwadi Math Collection. Digitized by eGangotri

ತಸ್ಯ ನಾಕ್ಷಸ್ತಪ್ಯತೇ ಭೂರಿಭಾರಃ ಸನಾದೇವ ನ ಶೀರ್ಯತೇ ಸನಾಭಿಃ ।

(ಋ. ಸಂ. ೧-೧೬೪-೧೩)

ಆದಿತ್ಯಾತ್ಮಕನಾದ ವಿಷ್ಣುವು ತಾನು ಮಾತ್ರ ಅಚಲನಾಗಿ ತನ್ನ ಪ್ರೇರಣೆಯಿಂದ ತೊಂಭತ್ತು ನಾಲ್ಕು ಸಂಖ್ಯೆಗಳುಳ್ಳವೂ ಬೇರೆ ಬೇರೆಯಾಗಿ ವಿಭಕ್ತವಾಗಿರುವುವೂ ಆದ ಸಂವತ್ಸರಾದಿ ಕಾಲದ ಅವಯವಗಳನ್ನು ಅರಗಳ ಸುತ್ತಲೂ ಸುತ್ತುವ ಚಕ್ರದಂತೆ ವಲಯಾಕಾರವಾಗಿ ಸುತ್ತುವಂತೆ ತಿರುಗಿಸುತ್ತಾನೆ. ಆದರೆ ತಾನು ಮಾತ್ರ ಚಲಿಸದೇ, ಕ್ಷಯವನ್ನೂ ಹೊಂದದೇ ಸ್ಥಿರನಾಗಿದ್ದುಕೊಂಡು ಅಹೋರಾತ್ರಗಳ ದ್ವಯವನ್ನು ಚಲಿಸುವಂತೆ ಮಾಡುತ್ತಾನೆ. ಎಂದು ಹಿಂದೆ (ಋಗ್ವೇದ ಸಂಹಿತಾ. ಭಾಗ ೧೧, ಪು. 633-4) ವಿವರಿಸಿರುವ ಅಂಶವನ್ನು ಇಲ್ಲಿಯೂ ಸೂಚಿಸಿದೆ. ಆದರೆ ಇಲ್ಲಿ ಇನ್ನೊಂದಂಶವನ್ನು ಪರಿಶೀಲಿಸಬೇಕು. ಏಕಃ ಬಿಭರ್ತಿ ಎಂಬುದಕ್ಕೆ ಸಂವತ್ಸರರೂಪವಾದ ಏಕತತ್ತ್ವವು ಆರು ಋತುಗಳನ್ನು ಧರಿಸಿರುತ್ತದೆಯೆಂದೂ, ಗಾವಃ ವರ್ಷಿಷ್ಠಂ ಉಪ ಆಗುಃ ಎಂಬುದಕ್ಕೆ ರಶ್ಮಿಗಳು ಆದಿತ್ಯನನ್ನು ಸೇರಿದವು ಎಂದೂ ಸಾಯಣರು ವಿವರಿಸಿದ್ದಾರೆ. ಹಾಗಾದರೆ ಈ ಮಂತ್ರದಲ್ಲಿ ತತ್ತ್ವದ್ವಯದ ಪ್ರತಿಪಾದನೆಯಿದೆಯೆಂದು ಹೇಳಕೂಡದು. ಇಲ್ಲಿ ಏಕಃ ಎಂದರೂ ಆದಿತ್ಯತತ್ತ್ವವೇ, ವರ್ಷಿಷ್ಠಂ ಎಂಬುದೂ ಆದಿತ್ಯನಿಗೆ ವಿಶೇಷಣವಾಗಿಯೇ ಇದೆ. ಹಾಗಾದರೆ ಏಕಃ ಎಂಬುದಕ್ಕೆ ಆದಿತ್ಯನೆಂದಾದರೆ, ಷಡ್ಯತೂನ್ ಬಿಭರ್ತಿ ಎಂಬುದು ಹೇಗೆ ಸಮಂಜಸನಾಗುತ್ತದೆ ಎಂಬ ಆಶಂಕೆಗೆ ಕಾರಣವಿಲ್ಲ. ಅನೇಕ ಶ್ರುತಿವಾಕ್ಯಗಳಲ್ಲಿ ಆದಿತ್ಯನಿಗೂ ಋತುಗಳಿಗೂ ಸಹ ಅಭೇದವನ್ನೇ ಹೇಳಿದೆ.

ಆದಿತ್ಯಸ್ತ್ವೇವ ಸರ್ವ ಋತವಃ । ಯದ್ಯೈವೋದೇತ್ಯಥ ವಸಂತೋ ಯದಾ ಸಂಗವೋಽಥ ಗ್ರೀಷ್ಮೋ ಯದಾ ಮಧ್ಯಂದಿನೋಽಥ ವರ್ಷಾ ಯದಪರಾಹ್ನೋಽಥ ಶರದ್ಯದೈವಾಸ್ತಮೇಽ-ತ್ಯಥ ಹೇಮಂತಸ್ತಸ್ಮಾದು .... .... ....

(ಶ. ಬ್ರಾ. ೨-೨-೩-೯)

ಆದಿತ್ಯನೇ ಎಲ್ಲಾ ಋತ್ವಾತ್ಮಕನು. ಅಥವಾ ಋತುಗಳಿಗೆ ಕಾರಣನು. ಅವನು ಉದಯಿಸಿದಾಗ ವಸಂತವು ಪಶುಗಳನ್ನು ಕರೆಯತಕ್ಕ ಕಾಲವು ಪ್ರಾಪ್ತವಾದರೆ ಗ್ರೀಷ್ಮವು. ಮಧ್ಯಾಹ್ನಕಾಲವೇ ವರ್ಷರ್ತುವು. ಅಪರಾಹ್ನವು ಪ್ರಾಪ್ತವಾದರೆ ಶರತ್ಕಾಲವು. ಅಸ್ತಮಯಕಾಲವು ಪ್ರಾಪ್ತವಾದಾಗ ಹೇಮಂತವು. ಇತ್ಯಾದಿಯಾಗಿ ಋತುಗಳಿಗೂ ಋತುಗಳಿಗೆ ಕಾರಣನಾದ ಆದಿತ್ಯನಿಗೂ ಕಾರ್ಯಕಾರಣ ಸಂಬಂಧವನ್ನೂ ಅಭೇದವನ್ನೂ ತೋರಿಸಿದೆ.

ಅತ್ರ ಹ ವಾ ಅಸಾವಗ್ರ ಆದಿತ್ಯ ಆಸ ತಮೃತವಃ ಪರಿಗೃಹ್ಯೈವಾತ ಊರ್ಧ್ವಾಃ ಸ್ವರ್ಗಂ ಲೋಕ-ಮುಪೋದಕ್ರಾಮನ್ತ್ಸ ಏಷ ಋತುಷು ಪ್ರತಿಷ್ಠಿತಸ್ತಪತಿ ।

(ಶ ಬ್ರಾ- ೪-೨-೫-೯)

ಪೂರ್ವದಲ್ಲಿ ಆದಿತ್ಯನು ಈ ಪೃಥ್ವಿಯನ್ನಾಕ್ರಮಿಸಿದ್ದನು. ಋತುಗಳು ಅವನನ್ನು ಪರಿಗ್ರಹಿಸಿದಾಗ ಅವುಗಳೊಂದಿಗೆ ಆದಿತ್ಯನು ಅಂತರಿಕ್ಷಕ್ಕೆ ಹಾರಿದನು. ಅನಂತರ ಋತುಗಳಲ್ಲಿ ದೃಢವಾಗಿ ಪ್ರತಿಷ್ಠಿತನಾಗಿ ಈಗ ಅಂತರಿಕ್ಷದಲ್ಲಿ ಪ್ರಕಾಶಿಸುತ್ತಿದ್ದಾನೆ. ಈ ಋತುಗಳೇ ಸಂವತ್ಸರದ ಅವಯವಗಳು ಮತ್ತು ಸಂವತ್ಸರದ ಸ್ವರೂಪವನ್ನು ಅರ್ಥಮಾಡಿಕೊಳ್ಳತಕ್ಕ ಮುಖ್ಯಸಾಧನಗಳು. ಈ ಸಾಧನಗಳ ಜ್ಞಾನವಿಲ್ಲದಿದ್ದರೆ ಸಂವತ್ಸರದ ಸ್ವರೂಪವು ತಿಳಿಯುವುದಿಲ್ಲ. ಗೃಹದ ಒಳಗೆ ಪ್ರವೇಶಿಸಲು ಅನುಕೂಲವಾದ ದ್ವಾರವನ್ನು ತಿಳಿಯದೇ ಮನುಷ್ಯನಿಗೆ ಗೃಹದ ಪರಿಚಯವು ಪ್ರಯೋಜನವಿಲ್ಲದಿರುವಂತೆ ಸಂವತ್ಸರದ ದ್ವಾರಗಳಾದ ಋತುಗಳ ಪರಿಚಯವಿಲ್ಲದೇ ಸಂವತ್ಸರದ ಜ್ಞಾನವು ಲಭಿಸಲಾರದು.

CC-0. Jangamwadi Math Collection. Digitized by eGangotri

ಈ ಸಂವತ್ಸರಕ್ಕೆ ವಸಂತವೂ ಹೇಮಂತವೂ ದ್ವಾರಗಳು. ಸಂವತ್ಸರವೇ ಅಂತರಿಕ್ಷವು. ಅದೇ ಸಮಸ್ತವಿಶ್ವವೂ ಆಗಿದೆ. ಆದುದರಿಂದ ಸಂವತ್ಸರದ ಜ್ಞಾನವನ್ನು ಪಡೆದವನಿಗೆ ಶಾಶ್ವತವಾದ ಸ್ಥಿತಿಯು ಲಭಿಸುತ್ತದೆ. [ಸರ್ವಂ ವೈ ಸಂವತ್ಸರಃ ಸರ್ವಂ ವಾ ಅಕ್ಷಯ್ಯಮೇತೇನ ಶ. ಬ್ರಾ. ೧-೬-೧-೧೯].

ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ ।

(ತೈ. ಉ ೨-೪)

ಯಾವ ಅದ್ವಿತೀಯನಾದ ಪರಮಪುರುಷನು ಪರಮವ್ಯೋಮದಲ್ಲಿ ಆದಿತ್ಯಾಂತರ್ಗತನಾಗಿ ಗುಹೆಯಲ್ಲಿಡಲ್ಪಟ್ಟಿರುವನೋ, ಆಕಾಶ, ಸಂವತ್ಸರ, ಅಯನಾದಿಕಾಲಗಳು, ಕಾಲಾನುಗುಣವಾದ ವೃಷ್ಟಿಸಂಪತ್ತು, ವೃಷ್ಟಿಜನಿತವಾದ ಅನ್ನಸಂಪತ್ತು ಮುಂತಾದ ಕಾರ್ಯಗಳನ್ನೆಲ್ಲಾ ಸೃಷ್ಟಿಮಾಡಿ ಅದನ್ನೇ ಒಳಹೊಕ್ಕಿರುವನೋ, ಯಾವನ ಸ್ವರೂಪವನ್ನೇ ಆಶ್ರಯಿಸಿ ಸಕಲ ಜಗತ್ತುಗಳೂ ಬಾಳುವುವೋ ಅವನನ್ನು ಯಶ್ಚಾಸಾವಾದಿತ್ಯೇ । ಸ ಏಕಃ ಎಂದು ವರ್ಣಿಸಿದೆಯೆಂದು ಶಂಕರಾಚಾರ್ಯರು ವಿವರಿಸಿದ್ದಾರೆ. (ಶ. ಭಾ.). ಇಲ್ಲಿ ಏಕಃ ಎಂಬ ಪರವಸ್ತುವಿಗೆ ಅಚರನ್ ಎಂಬ ವಿಶೇಷಣವು ಅತ್ಯುಪಯುಕ್ತವಾದುದು. ತಾನು ಅಚಲನಾದರೂ ಜಂಗಮಾತ್ಮಕವಾದುದೂ, ಋತುರೂಪಗಳಿಂದ ಭ್ರಮಣವನ್ನು ಹೊಂದುತ್ತಿರುವುದೂ ಆದ ವಿಶ್ವವ್ಯವಹಾರಗಳಿಗೆಲ್ಲಾ ಹೇತುವಾಗಿರುವುದು.

" ಅನೇಜದೇಕಂ ಮನಸೋ ಜವೀಯೋ " " ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ ತಸ್ಮಿನ್ನಪೋ ಮಾತರಿಶ್ವಾ ದಧಾತಿ " (ಈಶ. ೪).

ಎಲ್ಲವನ್ನೂ ವ್ಯಾಪಿಸಿರುವ ಈ ತತ್ತ್ವವು ಯಾವ ಚಲನವೂ ಇಲ್ಲದೇ ಮಾರ್ಪಾಡುಗಳನ್ನು ಅನುಭವಿಸುತ್ತಿರುವ ಸಕಲ ವಿಶ್ವಗಳಿಗೂ ಮೂಲವಾಗಿದೆ. ನಿತ್ಯವಾದ ಈ ಆತ್ಮತತ್ತ್ವವನ್ನು ಆಶ್ರಯಿಸಿಯೇ ಮಾತರಿಶ್ವನು ಎಲ್ಲಾ ಪ್ರಾಣಧಾರಿಗಳ ಕ್ರಿಯಾ ರೂಪನಾಗಿರುವನು. ಈತನಲ್ಲಿಯೇ ಎಲ್ಲವೂ ಹಾಸುಹೊಕ್ಕುಗಳಾಗಿ ಹೆಣೆದುಕೊಂಡಿರುವುವು.

ಸ ಪರ್ಯಗಾಚ್ಛುಕ್ರಮಕಾಯಮವ್ರಣಂ ಅಸ್ನಾವಿರಗ್ಂ ಶುದ್ಧಮಪಾಪವಿದ್ಧಂ ।
ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ ॥

(ಈಶ. ೮)

ಆತ್ಮಚಲನವಿಲ್ಲದೇ ಸ್ಥಿರವಾಗಿರತಕ್ಕ ಈ ಆದಿತ್ಯರೂಪದ ಆತ್ಮತತ್ತ್ವವೇ ಎಲ್ಲಾ ಕಡೆಗಳಲ್ಲಿಯೂ ಪ್ರಸರಿಸಿರುವನು. ಶರೀರರಹಿತನು, ಶುದ್ಧನು, ಆದರೂ ಸಹ ಸಂವತ್ಸರಾತ್ಮಕವಾದ ಪ್ರಜಾಪತಿತತ್ತ್ವವನ್ನು ಕಾಲಾತ್ಮಕವಾಗಿ ವಿಭಾಗ ಮಾಡಿದ್ದಾನೆ ಎಂದಿದೆ. ಆದರೆ ಅದ್ವಿತೀಯವಾದ ಈ ಆತ್ಮತತ್ತ್ವಕ್ಕೆ ಸಂವತ್ಸರವೆಂಬ ಹೆಸರು ಹೇಗೆ ಬಂದಿತು ಎಂದರೆ ಅದಕ್ಕೆ ಉತ್ತರವಾಗಿ ಪ್ರಶ್ನೋಪನಿಷತ್ತಿನ ವಾಕ್ಯವು ಈರೀತಿ ತಿಳಿಸಿದೆ.

ಸಂವತ್ಸರೋ ವೈ ಪ್ರಜಾಪತಿಃ ।.... .... .... .... ॥
ಪಂಚಪಾದಂ ಪಿತರಂ ದ್ವಾದಶಾಕೃತಿಂ ದಿವ ಆಹುಃ ಪರೇ ಅರ್ಧೇ ಪುರೀಷಿಣಂ ।
ಅಥೇಮೇ ಅನ್ಯ ಉ ಪರೇ ವಿಚಕ್ಷಣಂ ಸಪ್ತಚಕ್ರೇ ಷಡರ ಆಹುರರ್ಪಿತಂ ॥

(ಪ್ರಶ್ನ. ೯-೧೧)

CC-0. Jangamwadi Math Collection. Digitized by eGangotri

ಸಂವತ್ಸರಾತ್ಮಕನಾದ ಈ ಪ್ರಜಾಪತಿಯು ಐದು ಪಾದಗಳುಳ್ಳವನು. ಈ ಆದಿತ್ಯನಿಗೆ ಐದು ಋತುಗಳೂ ಪಾದಗಳಂತಿರುವುವು. ಆ ಋತುಗಳಿಂದ ಅಚಲನಾದ ಇವನು ಐದುಕಾಲುಗಳಿಂದಲೋ ಎಂಬಂತೆ ಸುತ್ತುತ್ತಿರುತ್ತಾನೆ. ಈತನು ಎಲ್ಲವನ್ನೂ ಸೃಷ್ಟಿಸಿದುದರಿಂದ ಇವನಿಗೆ ಪಿತೃವೆಂದು ಹೆಸರು. ಮಾಸಾತ್ಮಕವಾದ ಹನ್ನೆರಡು ಅವಯವಗಳುಳ್ಳವನು. ದ್ಯುಲೋಕಕ್ಕಿಂತ ಮೇಲಿರುವ ಅರ್ಧದಲ್ಲಿ ಎಂದರೆ ಮೂರನೆಯ ದ್ಯುಲೋಕದಲ್ಲಿ ಪುರೀಷಿಯಾಗಿರುವನು. ಈತನನ್ನೇ ಬೇರೆ ಕಾಲಜ್ಞರು ವಿಚಕ್ಷಣನಾಗಿ ಎಂದರೆ ಸರ್ವಜ್ಞನಾಗಿ ಏಳು ಚಕ್ರವಾಗಿ ಏಳು ಕುದುರೆಗಳ ರೂಪದಿಂದ ಚಕ್ರರೂಪನಾಗಿ ಎಡಬಿಡದೆ ನಡೆಯುತ್ತಿರುವ ಆರು ಹಾರೆಕೋಲುಗಳುಳ್ಳ ಎಂದರೆ ಆರು ಋತುಗಳಿಂದ ಕೂಡಿರುವ ಕಾಲಾತ್ಮಕನು ಎಂದು ಹೇಳಿದ್ದಾರೆ. ಐದುಪಾದಗಳುಳ್ಳವನು, ಹನ್ನೆರಡು ಆಕೃತಿಯುಳ್ಳವನು ಎಂದೇ ಆಗಲಿ, ಏಳು ಚಕ್ರವಾಗಿರುವವನು, ಆರು ಹಾರೆಕೋಲುಳ್ಳವನು ಎಂದೇ ಆಗಲಿ, ಹೇಗೇ ಆದರೂ ಚಂದ್ರ, ಆದಿತ್ಯ ಎಂಬ ರೂಪದಲ್ಲಿರುವ ಸಂವತ್ಸರನೆಂಬ ಕಾಲಾತ್ಮನು ಜಗದ್ವ್ಯವಹಾರಕ್ಕೆ ಕಾರಣನಾಗಿರುತ್ತಾನೆಂದು ತಾತ್ಪರ್ಯ. ಇದೇ ಆತ್ಮತತ್ತ್ವವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ "ಯೋ ವೈ ಸ ಸಂವತ್ಸರಃ ಪ್ರಜಾಪತಿಃ ಷೋಡಶಕಲಃ" ಇತ್ಯಾದಿಯಾಗಿ ವರ್ಣಿಸಿದೆ. (ಬೃ. ಉ. ೧-೫-೧೫).

**ಋತಂ ವರ್ಷಿಷ್ಠಂ ಗಾವಃ ಉಪ ಆಗುಃ**—ಎಲ್ಲಕ್ಕಿಂತಲೂ ಜ್ಯೇಷ್ಠವೂ ಪೂಜ್ಯವೂ ಆದ ಆದಿತ್ಯಾತ್ಮಕವಾದ ಸಂವತ್ಸರವನ್ನು ಅಥವಾ ಸಂವತ್ಸರಾತ್ಮಕವಾದ ಆದಿತ್ಯತತ್ತ್ವವನ್ನು ರಶ್ಮಿಗಳು ಸೇರಿಕೊಂಡವು ಎಂದು ತಾತ್ಪರ್ಯ. "ಆದಿತ್ಯೋ ಬ್ರಹ್ಮೇತ್ಯಾದೇಶಃ" (ಛಾ. ಉ ೩-೧೯-೧) ಎಂದು ಹೇಳಿರುವಂತೆ ಆದಿತ್ಯನೇ ಪರಬ್ರಹ್ಮನು. ಆದುದರಿಂದಲೇ ಋಕ್ಸಂಹಿತೆಯಲ್ಲಿ,

**ಅಭಿ ಯಂ ದೇವ್ಯದಿರ್ತಿಗೃಣಾತಿ ಸವಂ ದೇವಸ್ಯ ಸವಿತುರ್ಜುಷಾಣಾ ।**
**ಅಭಿ ಸಮ್ರಾಜೋ ವರುಣೋ ಗೃಣಂತ್ಯಭಿ ಮಿತ್ರಾಸೋ ಅರ್ಯಮಾ ಸಜೋಷಾಃ ॥**

(ಋ. ಸಂ. ೭-೩೮-೪)

ಸವಿತೃರೂಪನಾದ ಆದಿತ್ಯನನ್ನು ಅದಿತಿಯು ಸ್ತುತಿಸುತ್ತಾಳೆ. ವಿಶ್ವಕ್ಕೆಲ್ಲಾ ಸಾರ್ವಭೌಮರಾದ ವರುಣಾದಿ ದೇವತೆಗಳೆಲ್ಲಾ ಪೂಜಿಸುತ್ತಾರೆ. ಆದುದರಿಂದ ಆದಿತ್ಯನು ದೇವತೆಗಳಿಗೆಲ್ಲಾ ಶ್ರೇಷ್ಠನು ಮತ್ತು ಪೂಜ್ಯನು. ಆದುದರಿಂದಲೇ ವರ್ಷಿಷ್ಠಂ ಎಂಬ ವಿಶೇಷಣವಿದೆ. ಈ ಆದಿತ್ಯನೇ ಪರತತ್ತ್ವವಾದುದರಿಂದ ಋತಂ ಎಂಬ ವಿಶೇಷಣವಿದೆ.

ಆದಿತ್ಯನ ಉತ್ತಮವಾದ ಸ್ಥಾನದಿಂದ ಹೊರಡುವ ಆದಿತ್ಯರಶ್ಮಿಗಳು ಲೋಕಕ್ಕೆಲ್ಲಾ ಉದಕವನ್ನು ನಾನಾ ಕಡೆಗಳಲ್ಲಿಯೂ ಹರಡಿ ಪುನಃ ಅದೇ ದಿಕ್ಕುಗಳಿಂದ ಅವುಗಳನ್ನು ಗ್ರಹಣಮಾಡುತ್ತವೆ. ಆದಿತ್ಯನು ಈ ರಶ್ಮಿಗಳಿಂದ ದ್ಯಾವಾಪೃಥಿವ್ಯಾದಿ ಸಕಲವಿಶ್ವಗಳನ್ನೂ ವ್ಯಾಪಿಸಿದ್ದಾನೆ. ಈ ಸಕಲ ರಶ್ಮಿಗಳೂ ಸಹ ಅನಂತನಾಗಿ ಹರಡಿರುವ ವಿಶ್ವದ ಸಕಲ ಪ್ರದೇಶಗಳಿಗೂ ಆದಿತ್ಯನಿಗೂ ಸಂಬಂಧವನ್ನು ಬೆಳೆಸಿ ಐಕ್ಯವನ್ನು ಸಂಪಾದಿಸುತ್ತವೆ. ಈರೀತಿ ಆದಿತ್ಯನಿಂದ ಹೊರಟ ರಶ್ಮಿಗಳು ವಿಶ್ವವನ್ನು ವ್ಯಾಪಿಸಿ ಪುನಃ ಸರ್ವದಿಕ್ಕುಗಳಿಂದಲೂ ಬಂದು ಅವನನ್ನೇ ಸೇರಿ ವಿಶ್ವವೆಲ್ಲವೂ ಆದಿತ್ಯನೊಬ್ಬನಿಂದಲೇ ವ್ಯಾಪ್ತವಾಗಿದೆಯೆಂಬಂಶವನ್ನು ಛಾಂದೋಗ್ಯೋಪನಿಷತ್ತಿನ ವಾಕ್ಯಗಳು ಈರೀತಿ ವರ್ಣಿಸಿದೆ.

**ಅಸಾವಾದಿತ್ಯೋ ದೇವಮಧು ತಸ್ಯ ದ್ಯೌರೇವ ತಿರಶ್ಚೀನವಂಶೋಽಂತರಿಕ್ಷಮಪೂಪೋ ಮರೀಚಯಃ ಪುತ್ರಾಃ ।**

CC-0. Jangamwadi Math Collection. Digitized by eGangotri

ತಸ್ಯ ಯೇ ಪ್ರಾಂಚೋ ರಶ್ಮಯಸ್ತಾ ಏವಾಸ್ಯ ಪ್ರಾಚ್ಯೋ ಮಧುನಾಡ್ಯಃ | ಋಚ ಏವ ಮಧುಕೃತ ಋಗ್ವೇದ ಏವ ಪುಷ್ಪಂ .... .... .... .... ವೀರ್ಯಮನ್ನಾದಂ ರಸೋ ಜಾಯತ | ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ರೋಹಿತಂ ರೂಪಂ ||

(ಛಾ. ಉ. ೩-೧)

ಈ ಆದಿತ್ಯನೇ ದೇವಮಧುವು. ದ್ಯುಲೋಕವೇ ಇದಕ್ಕೆ ಆಸರೆಯಾದ ವಂಶವೃಕ್ಷವಾಗಿಯೂ ಅಂತರಿಕ್ಷವೇ ಗೂಡಾಗಿಯೂ ರಶ್ಮಿಗಳೇ ಪುತ್ರರೂಪಗಳಾಗಿಯೂ ಇವೆ. ಪೂರ್ವದಿಕ್ಕಿಗೆ ಪ್ರಸರಿಸುವ ರಶ್ಮಿಗಳು ಪೂರ್ವದಿಕ್ಕಿನ ಮಧುನಾಡಿಗಳು. ಋಕ್ಕುಗಳೇ ಭ್ರಮರಗಳು, ಋಗ್ವೇದವೇ ಪುಷ್ಪವು. ಯಜ್ಞದಲ್ಲಿ ಅರ್ಪಿತವಾದ ಆಜ್ಯಪಯೋರೂಪಗಳಾದ ಆಹುತಿಗಳೇ ಅಮೃತಬಿಂದುಗಳು. ಋಙ್ಮಂತ್ರಗಳು ಪಕ್ವವಾದನಂತರ ಯಶಸ್ಸೂ ತೇಜಸ್ಸೂ ಇಂದ್ರಿಯವೂ ವೀರ್ಯವೂ ಶಕ್ತಿಯೂ ರಸವೂ ಯಾಗಾದಿಕರ್ಮಗಳಿಂದ ಉತ್ಪನ್ನವಾದವು. ಅನಂತರ ಈ ಫಲರೂಪವಾದ ರಸಾದಿಗಳೆಲ್ಲವೂ ಆದಿತ್ಯನ ಅಭಿಮುಖವಾಗಿ ಪ್ರಸರಿಸಿ ಅವನನ್ನೇ ಸೇರಿದವು. ಇವೇ ಉದಯಿಸುತ್ತಿರುವ ಆದಿತ್ಯನ ರಕ್ತಬಿಂಬದ ರಮ್ಯವಾದ ರೂಪಕ್ಕೆ ಹೇತುಗಳು.

ಅಥ ಯೇಽಸ್ಯ ದಕ್ಷಿಣಾ ರಶ್ಮಯಸ್ತಾ ಏವಾಸ್ಯ ದಕ್ಷಿಣಾ ಮಧುನಾಡ್ಯೋ ಯಜೂಗ್ಷ್ಯೇವ ಮಧುಕೃತೋ ಯಜುರ್ವೇದ ಏವ ಪುಷ್ಪಂ ತಾ ಅಮೃತಾ ಆಪಃ | ತಾನಿ ವಾ ಏತಾನಿ ಯಜೂಗ್ಷ್ಯೇತಂ........ಅನ್ನಾದ್ಯಂ ರಸೋಽಜಾಯತ |ತದ್ವ್ಯಕ್ಷರತ್ತದಾದಿತ್ಯಮಭಿತೋಽಶ್ರಯತ್ತದ್ವಾ ಏತದ್ಯದೇತದಾದಿತ್ಯಸ್ಯ ಶುಕ್ಲಂ ರೂಪಂ ||

(ಛಾ. ಉ. ೩-೨)

ದಕ್ಷಿಣದಿಕ್ಕಿಗೆ ಪ್ರಸರಿಸುವ ರಶ್ಮಿಗಳು. ಯಜುರ್ಮಂತ್ರಗಳೇ ಭ್ರಮರಗಳು. ಯಜುರ್ವೇದವೇ ಪುಷ್ಪವು. ಯಜ್ಞಾಹುತಿಗಳಾದ ಆಜ್ಯಪಯಸ್ಸುಗಳೇ ಅಮೃತಬಿಂದುಗಳು. ಇದರಿಂದ ರಸಾದಿಗಳು ಉತ್ಪನ್ನವಾಗಿ ಪುನಃ ಆದಿತ್ಯನ ಅಭಿಮುಖವಾಗಿ ಪ್ರಸರಿಸಿ ಆದಿತ್ಯನನ್ನೇ ಸೇರುತ್ತವೆ ಇವೇ ಆದಿತ್ಯನ ಶುಕ್ಲರೂಪದ ಹೇತುಗಳು.

ಅಥ ಯೇಽಸ್ಯ ಪ್ರತ್ಯಂಚೋ ರಶ್ಮಯಃ..ಸಾಮಾನ್ಯೇವ ಮಧುಕೃತಸ್ಸಾಮವೇದ ಏವ ಪುಷ್ಪಂ....ಏತದಾದಿತ್ಯಸ್ಯ ಕೃಷ್ಣಂ ರೂಪಂ || ಅಥ ಯೇಽಸ್ಯೋದಂಚೋ ರಶ್ಮಯಃ.... ಅಥರ್ವಾಂಗಿರಸ ಏವ ಮಧುಕೃತ ಇತಿಹಾಸಪುರಾಣಂ ಪುಷ್ಪಂ |....ಏತದಾದಿತ್ಯಸ್ಯ ಪರಂ ಕೃಷ್ಣಂ ರೂಪಂ |

(ಛಾ. ಉ. ೩-೩-೪)

ಸಾಮವೇದರೂಪವಾದ ಪುಷ್ಪದಲ್ಲಿ ಸಾಮರೂಪವಾದ ಭ್ರಮರಗಳು ಆಹುತಿರೂಪವಾದ ಅಮೃತಬಿಂದುಗಳನ್ನು ಸೃಷ್ಟಿಸಿ ಸೂರ್ಯನನ್ನು ಸೇರಿಸಿದವು ಅವೇ ಆದಿತ್ಯನ ಕೃಷ್ಣರೂಪಕ್ಕೆ ಹೇತುವು. ಅನಂತರ ಇತಿಹಾಸಪುರಾಣರೂಪವಾದ ಪುಷ್ಪದಿಂದ ಅಥರ್ವರೂಪವಾದ ಭ್ರಮರವು ರಸಾದಿರೂಪವಾದ ಅಮೃತಬಿಂದುವನ್ನು ಸೃಷ್ಟಿಸಿದವು. ಇವು ಆದಿತ್ಯನನ್ನು ಸೇರಿದವು ಇದೇ ಆದಿತ್ಯನ ಗಾಢವಾದ ಕೃಷ್ಣರೂಪದ ಹೇತುಗಳು.

ಈ ಐದುವಿಧವಾದುದೂ ಅಮೃತಮಯವಾದುದೂ ಆದ ಆದಿತ್ಯನ ರಸಾತ್ಮವಾದ ರೂಪಗಳಲ್ಲಿ ವಸುಗಳೂ, ರುದ್ರರೂ, ಆದಿತ್ಯರೂ, ಮರುತ್ತುಗಳೂ ಸಾಧ್ಯರೂ ವಾಸಿಸುತ್ತಾರೆ. ಅವರೇ ಆದಿತ್ಯರಶ್ಮಿಯಲ್ಲಿ ರೋಹಿತಾದಿ

CC-0. Jangamwadi Math Collection. Digitized by eGangotri

ವರ್ಣಗಳನ್ನೂ ಪ್ರವೇಶಿಸುತ್ತಾರೆ. ಈ ರಶ್ಮಿರೂಪವಾದ ಅಮೃತಗಳ ಸಾರವನ್ನು ತಿಳಿದವನು ಎಂದರೆ ಆದಿತ್ಯನ ಸ್ವರೂಪವನ್ನು ತಿಳಿದವನು ವಸುರುದ್ರಾದಿಗಳಲ್ಲಿ ಸ್ಥಾನವನ್ನು ಪಡೆಯುತ್ತಾನೆ.

**ಸ್ತ್ರಿಯಃ ಸತೀಸ್ತಾಁ ಉ ಮೇ ಪುಂಸ ಆಹುಃ ಪಶ್ಯದಕ್ಷಣ್ವಾನ್ನ ವಿ ಚೇತದಂಧಃ ।**
**ಕವಿರ್ಯಃ ಪುತ್ರಃ ಸ ಈಮಾ ಚಿಕೇತ ಯಸ್ತಾ ವಿಜಾನಾತ್ಸ ಪಿತುಷ್ಪಿತಾಸತ್ ॥**

(ಋ. ಸಂ. ೧-೧೬೪ ೧೬)

ಎಂಬ ಋಕ್ಕನ್ನು ವಿವರಿಸುವಾಗ ಈ ಆದಿತ್ಯರಶ್ಮಿಗಳ ಸ್ವರೂಪವನ್ನು ವಿವರವಾಗಿ ತಿಳಿಸಿದೆ. (ಋಗ್ವೇದ ಸಂಹಿತೆ. ಭಾಗ.೧೨-388). ಈ ಆದಿತ್ಯರಶ್ಮಿಗಳಲ್ಲಿ ಸ್ತ್ರೀಪ್ರಕೃತಿಯೂ ಪುರುಷಪ್ರಕೃತಿಯೂ ಮಿಶ್ರವಾಗಿದೆ. ಉದಕರೂಪವಾದ ಗರ್ಭವನ್ನು ಧರಿಸಿದಾಗ ಸ್ತ್ರೀರೂಪವೂ, ಅದೇ ವೃಷ್ಟಿಸೇಚನೆಯನ್ನು ಮಾಡುವಾಗ ಪುಂರೂಪವೂ ಪ್ರಕಟಿತವಾಗುತ್ತದೆ. ಇದು ಸ್ತ್ರೀರೂಪವನ್ನು ಪ್ರಕಟಿಸುವಾಗ ಅತ್ಯಂತ ಆಕರ್ಷಕವಾಗಿಯೂ ಪುಂರೂಪವನ್ನು ಪ್ರಕಟಿಸುವಾಗ ಅತ್ಯಂತ ಶಕ್ತಿಯುತವಾಗಿಯೂ ಇರುತ್ತದೆ. ಈ ಆದಿತ್ಯರಶ್ಮಿಗಳು ವಿಶ್ವದ ನಾನಾದಿಕ್ಕುಗಳಿಗೂ ಅವಾಂತರ ದಿಕ್ಕುಗಳಿಗೂ ಪ್ರಸರಿಸಿ ಎಲ್ಲವನ್ನೂ ಬೆಳಗಿಸಿ ವಿಶ್ವದ ಎಲ್ಲಾವಸ್ತುಗಳನ್ನೂ ತಮ್ಮಲ್ಲೇ ಅಡಕಮಾಡಿಕೊಂಡು ಸೂರ್ಯನನ್ನು ಸೇರಿ ಅವನ ಗರ್ಭದಲ್ಲಿಡುತ್ತವೆ. ಆದುದರಿಂದಲೇ ಆದಿತ್ಯನು ಸಕಲರೂಪಗಳುಳ್ಳವನೂ ಆಗಿರುತ್ತಾನೆ. [**ಯತ್ಸರ್ವಂ ಪ್ರಕಾಶಯತಿ ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ. ಪ್ರಶ್ನ. ೧-೬**].

ಇದೇ ಅಭಿಪ್ರಾಯವನ್ನು ಹಿಂದೆ ಋ. ಸಂ. ೧-೧೬೪-೧೭ನೇ ಮಂತ್ರದಲ್ಲಿ **ವತ್ಸಂ ಬಿಭ್ರತೀ ಗೌರುದಸ್ಥಾತ್** ಎಂಬ ವಾಕ್ಯದಿಂದ ವರ್ಣಿಸಿದೆ. ರಶ್ಮಿರೂಪಳಾದ ಗೋವು ಆದಿತ್ಯನಿಂದ ಹೊರಟು ಯಜಮಾನನಿಗೆ ಬೇಕಾದ ಸಂಪತ್ತುಗಳನ್ನೊದಗಿಸಿ ಪುನಃ ಯಜಮಾನನನ್ನು ಎತ್ತಿಕೊಂಡು ಹಾರುತ್ತಾ ಅದೃಶ್ಯಳಾಗಿ ಆದಿತ್ಯನಲ್ಲಿ ಸೇರಿ ಅಂತರ್ಗತಳಾದಳು ಎಂದು ತಾತ್ಪರ್ಯವೆಂದು ಉಪನಿಷದಾದಿಗಳ ವಾಕ್ಯಗಳನ್ನು ಉದಾಹರಿಸಿ ಹಿಂದೆ ವಿವರಿಸಿದೆ. [ಋಗ್ವೇದಸಂಹಿತೆ. ೧೨- ಪು. 401],

ಈ ಆದಿತ್ಯನಿಗೂ ಸಂವತ್ಸರಕ್ಕೂ ತಾದಾತ್ಮ್ಯವನ್ನು ತೋರಿಸಿ ಆದಿತ್ಯತತ್ತ್ವವೇ ಸಕಲ ಬ್ರಹ್ಮಾಂಡವನ್ನೂ ಒಳಗೊಂಡಿರುವ ಬ್ರಹ್ಮತತ್ತ್ವವೆಂದು ತೈತ್ತಿರೀಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

**"ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ ತತ್ರ ತಾ ಋಚಸ್ತದೃಚಾ ಮಂಡಲಗ್ಂಸ ಋಚಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿರ್ದೀಪ್ಯತೇ ತಾನಿ ಸಾಮಾನಿ ಸ ಸಾಮ್ನಾಂ ಲೋಕೋಽಥ ಯ ಏಷ ಏತಸ್ಮಿನ್ಮಂಡಲೇಽರ್ಚಿಷಿ ಪುರುಷಸ್ತಾನಿ ಯಜೂಗ್ಂಷಿ ಸ ಯಜುಷಾ ಮಂಡಲಗ್ ಸ ಯಜುಷಾಂ ಲೋಕಸ್ಸೈಷಾ ತ್ರಯ್ಯೇವ ವಿದ್ಯಾ ತಪತಿ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ"**

(ತೈ. ಉ. ೪--೧೪)

ಪ್ರತ್ಯಕ್ಷಾತೀತವಾದ ಈ ಆದಿತ್ಯತತ್ತ್ವವು ಸೂರ್ಯರೂಪದಿಂದ ಜಗದನುಗ್ರಹಕ್ಕಾಗಿ ಪ್ರಕಾಶಿಸುತ್ತಿದೆ. ಸೂರ್ಯರೂಪದ ತೇಜಃಪುಂಜವು ಋಕ್ಕುಗಳ ಪ್ರಭಾವವು ಮತ್ತು ಅವುಗಳ ಪ್ರಕಾಶಸ್ಥಾನವು. ಪ್ರಕಾಶಮಾನವಾದ ಸೂರ್ಯಜ್ವಾಲೆಗಳೇ ಸಾಮಗಳ ಪ್ರಭಾವವು ಮತ್ತು ಅವುಗಳ ಪ್ರಕಾಶಸ್ಥಾನವು. ಈ ಪ್ರಭಾಮಂಡಲದ ಮಧ್ಯವರ್ತಿಯಾದ ಪುರುಷನು

CC-0. Jangamwadi Math Collection. Digitized by eGangotri

ಯಜುಸ್ಸಂಘಾತಾತ್ಮನಾಗಿ ಅವುಗಳ ಪ್ರಕಾಶಕ್ಕೆ ಸ್ಥಾನನಾಗಿದ್ದಾನೆ. ಆದುದರಿಂದ ಈ ಪುರುಷತತ್ತ್ವವನ್ನು ಪೂರ್ಣವಾಗಿ ಸಾಕ್ಷಾತ್ಕರಿಸಬೇಕಾದರೆ ತ್ರಯೀವಿದ್ಯೆಯ ಸಾಧನದಿಂದಲೇ ಸಾಧ್ಯ. ಆದುದರಿಂದ ಸೂರ್ಯಮಂಡಲ, ಮಂಡಲದಿಂದ ಪ್ರಾದುರ್ಭೂತವಾದ ಪ್ರಭೆ ಮತ್ತು ಈ ಅರ್ಚಿಯಲ್ಲಿ ಅಂತರ್ಗತನಾದ ಪುರುಷ ಈ ಮೂರೂ ವೇದತ್ರಯದ ಆತ್ಮಸ್ವರೂಪವು. ಪರತತ್ತ್ವವು ತ್ರಯೀರೂಪದಲ್ಲಿಯೇ ಪ್ರಕಾಶಿಸುತ್ತದೆ ಎಂಬುದು ತಾತ್ಪರ್ಯ. ಅಲ್ಲದೇ,

> ಆದಿತ್ಯೋ ವೈ ತೇಜ ಓಜೋ ಬಲಂ ಯಶಶ್ಚಕ್ಷುಃ ಶ್ರೋತ್ರಮಾತ್ಮಾ ಮನೋ ಮನ್ಯುರ್ಮನು-ರ್ಮೃತ್ಯುಸ್ಸತ್ಯೋ ಮಿತ್ರೋ ವಾಯುರಾಕಾಶಃ ಪ್ರಾಣೋ ಲೋಕಪಾಲಃ ಕಃ ಕಿಂ ಕಂ ತತ್ಸತ್ಯ-ಮನ್ನಮಮೃತೋ ಜೀವೋ ವಿಶ್ವಃ ಕತಮಃ ಸ್ವಯಂಭು ಬ್ರಹ್ಮೈತದಮೃತ ಏಷ ಪುರುಷ ಏಷ ಭೂತಾನಾಮಧಿಪತಿರ್ಬ್ರಹ್ಮಣಸ್ಸಾಯುಜ್ಯಗ್‌ಂಸಲೋಕತಾಮಾಪ್ನೋತ್ಯೇತಾಸಾಮೇವ ದೇವತಾನಾಗ್‌ಂ ಸಾಯುಜ್ಯಗ್‌ಂಸಾರ್ಷ್ಟಿತಾಗ್‌ಂಸಮಾನಲೋಕತಾಮಾಪ್ನೋತಿ ಯ ಏವಂ ವೇದೇತ್ಯುಪನಿಷತ್ ॥
>
> (ತೈ. ಉ. ೪-೧೫)

ಈ ಆದಿತ್ಯತತ್ತ್ವವು ನಾನಾವಿಭೂತಿಗಳಿಂದ ಪೂರ್ಣವಾಗಿದೆ. ಯಾರುಯಾರು ಯಾವಯಾವ ಅಂಶವನ್ನು ಸಾಕ್ಷಾತ್ಕರಿಸಿ ಉಪಾಸನೆಮಾಡುವರೋ ಆಯಾ ಉಪಾಸನೆಗಳಿಗನುಗುಣವಾದ ಫಲವು ಲಭಿಸುತ್ತದೆ. "ಏವಮಾದಿ-ಭೂತೋ ತತ್ತದ್ಭಾವೇನಾನುಗೃಹ್ಣಾತಿ ತತ್ತದರ್ಥಿನಾ ಸ ಏವಂ ಜ್ಞಾತ್ವೋಪಾಸಿತವ್ಯಃ" ಎಂದು ಭಾಷ್ಯಕಾರರು ವಿವರಿಸಿದ್ದಾರೆ.

> ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।
> ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥
>
> (ಭ. ಗೀ. ೭-೨೧).

ಯಾವ ಯಾವ ಭಕ್ತನು ನನ್ನ ವಿಭೂತಿವಿಶೇಷಗಳಲ್ಲಿ ಯಾವಯಾವ ಅಂಶವನ್ನು ಉಪಾಸನೆಮಾಡಿ ಪೂಜಿಸುವನೋ ಅವನವನ ಶ್ರದ್ಧಾ ಭಕ್ತಿಗಳಿಗನುಗುಣವಾದ ಫಲವನ್ನು ನಾನು ಕೊಡುವವನಾಗಿದ್ದೇನೆ ಎಂಬ ಭಗವದ್ಗೀತಾವಾಕ್ಯದ ಆಶ್ವಾಸನವು ಇಲ್ಲಿಯೂ ಉಕ್ತವಾಗಿದೆಯೆಂದು ಭಾಷ್ಯಕಾರರ ಅಭಿಪ್ರಾಯವಾಗಿದೆ. ಈ ಆದಿತ್ಯನೇ ವಿಶ್ವವನ್ನು ಬೆಳಗಿಸತಕ್ಕ ಪ್ರಭೆಯು. ಇದೇ ವಿಶ್ವಕ್ಕೆ ಶಕ್ತಿದಾಯಕವಾದ ವೀರ್ಯವು, ಚೈತನ್ಯದಾಯಿಯಾದ ಅಂತಸ್ಸತ್ವವು ಚಕ್ಷುಸ್ಸು. ಯಶಸ್ಸು, ಶ್ರೋತ್ರವು ; ಸಂಕಲ್ಪರೂಪನಾದ ಆತ್ಮನು, ಲೋಕಕ್ಷಯಕ್ಕೆ ಕಾರಣನಾದ ಮೃತ್ಯುವೂ ಇದೇ ; ಲೋಕವೃದ್ಧಿಗೆ ಕಾರಣವಾದ ಪ್ರಾಣರೂವಾದ ಆಕಾಶತತ್ವವೂ ಇದೇ. ಲೋಕವ್ಯವಹಾರಕ್ಕೆ ಪ್ರೇರಕವಾದ ವಾಯುತತ್ತ್ವವೂ ಇದೇ. ಇದೇ ಸುಖರೂಪವು. ಇಂದ್ರಾದಿಲೋಕಪಾಲರೂ ಇದರಲ್ಲೇ ಅಂತರ್ಗತರು. ಸರ್ವವ್ಯಾಪಿಯಾದ ಸತ್ಯವು ತದಂತರ್ಗತವು. ಅಥವಾ ಇದೇ ಪುರುಷನು ಸತ್ಯರೂಪದಲ್ಲಿ ಸರ್ವವ್ಯಾಪಕನಾಗಿದ್ದಾನೆ. ಸ್ವಯಂಭು, ಪ್ರಜಾಪತಿ ಎಂದು ವಿಶ್ವಸೃಷ್ಟಿಗೆ ಮೂಲವಾದ ತತ್ತ್ವವೂ ಯಾವ ಯಾವ ನಾಮಧೇಯಗಳಿಂದ ಪ್ರಸಿದ್ಧವಾಗಿದೆಯೋ ಆ ಪ್ರಕಾರಗಳೆಲ್ಲಾ ಈ ಪರಮಪುರುಷನ ವಿಭೂತಿಗಳೇ. ಇಂತಹ ಪರತತ್ತ್ವವನ್ನರಿತು ಉಪಾಸನೆ ಮಾಡತಕ್ಕ ಜ್ಞಾನಿಯು ಈ ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾನೆ.

> ಘೃಣಿಃ ಸೂರ್ಯ ಆದಿತ್ಯೋ ನ ಪ್ರಭಾ ವಾತ್ಯಕ್ಷರಂ । ಮಧು ಕ್ಷರಂತಿ ತದ್ರಸಂ । ಸತ್ಯಂ ವೈ ತದ್ರಸಮಾಪೋ ಜ್ಯೋತೀರಸೋಽಮೃತಂ ಬ್ರಹ್ಮ ಭೂರ್ಭುವಃ ಸುವರೋಂ ॥
>
> (ತೈ. ಉ. ೪-೩೭)

CC-0. Jangamwadi Math Collection. Digitized by eGangotri

ಎಂಬಲ್ಲಿ ಪ್ರಭಾಪುಂಜವಾದ ಸವಿತೃವಿನ ವರ್ಣನೆಯಿದೆ. ಈ ಸವಿತೃವನ್ನು ಘೃಣಿಯೆಂದು ವರ್ಣಿಸಿದೆ. ಘೃಣಿಯೆಂದರೆ ಪ್ರಕಾಶಸ್ವರೂಪವೆಂದರ್ಥ. ಈ ಆದಿತ್ಯತತ್ತ್ವವು ಪ್ರಣವರೂಪದಿಂದ ಉಪಾಸ್ಯವಾದದ್ದು. ಈ ತತ್ತ್ವವು ತೇಜೋ ರೂಪವಾದದ್ದು, ಅಪ್ಪೂರಿತವಾದದ್ದು, ಅನ್ನಾತ್ಮಕವಾದದ್ದು, ಮತ್ತು ಭೂಃ, ಭುವಃ ಮತ್ತು ಸುವಃ ಎಂಬ ಲೋಕತ್ರಯವನ್ನು ವ್ಯಾಪಿಸಿರತಕ್ಕದ್ದು. ಪ್ರಣವಾತ್ಮಕವಾದ ಈ ಪರಂಜ್ಯೋತಿಯು ಬ್ರಹ್ಮರೂಪದಿಂದ ಉಪಾಸ್ಯ ವಾದುದು ಎಂದು ಆದಿತ್ಯಾಂತರ್ಗತವಾದ ಪರಮಪುರುಷನ ಮಹಿಮೆಯು ವರ್ಣನವಿದೆ.

ಅತ್ಯಾಃ—ಜಂಗಮಾತ್ಮಕಗಳಾದ, ಸಂಚಾರಸ್ವಭಾವವುಳ್ಳ ಎಂದರ್ಥ. **ತಿಸ್ರಃ ಮಹೀಃ** ಎಂಬುದಕ್ಕೆ ವಿಶೇಷಣವಾಗಿದೆ. ಮೇಲೆ ಸ್ಥಾವರಸೂ ಜಗತ್ತಿಗೆ ಮೂಲನೂ ಆದ ಆದಿತ್ಯನ ಸ್ವರೂಪವನ್ನು ವರ್ಣಿಸಿ ಈಗ **ಅತ್ಯಾಃ** ಎಂಬ ವಿಶೇಷಣದಿಂದ ಜಂಗಮಾತ್ಮಕಗಳಾದ ಲೋಕಗಳನ್ನು ವರ್ಣಿಸಿದೆ. ಯಾವಾಗಲೂ ಸಂಚರಿಸುವ ಸ್ವಭಾವವು ಇರುವ ವಸ್ತುಗಳನ್ನು ವರ್ಣಿಸುವಾಗ ಈ ವಿಶೇಷಣವು ಅನೇಕಕಡೆಗಳಲ್ಲಿ ಪ್ರಯುಕ್ತವಾಗಿದೆ ತನಗೆ ಇಷ್ಟಬಂದಕಡೆಗೆ ಸಂಚರಿಸುವ ಸ್ವಭಾವವುಳ್ಳ ಅಗ್ನಿಗೂ, ಆದಿತ್ಯನಿಗೂ, ಅಶ್ವಕ್ಕೂ ಸಂಬಂಧಿಸಿದಂತೆ ಅವಕ್ಕೆ ಅನೇಕ ಕಡೆಗಳಲ್ಲಿ ವಿಶೇಷಣ ರೂಪದಲ್ಲಿದೆ. (ಋ ಸಂ. ೧-೫೬-೧; ೧-೧೯೦-೪) ಈ ಪದದ ವಿಶೇಷಾರ್ಥವನ್ನು ಹಿಂದೆ ತಿಳಿಸಿದೆ.

**ತಿಸ್ರಃ ಮಹೀಃ ಉಪರಾಃ ತಸ್ಥುಃ**—ಮೂರು ಲೋಕಗಳೂ ಒಂದರ ಮೇಲೊಂದು ಸ್ಥಾಪಿತವಾಗಿವೆ ಯೆಂದು ಹೇಳುವಾಗ **ಮಹೀ** ಶಬ್ದಕ್ಕೆ ಲೋಕವೆಂದರ್ಥಮಾಡಿದೆ. **ಪೃಥ್ವೀ, ಅಂತರಿಕ್ಷ** ಈ ಪದಗಳು ಸಹ ಕೇವಲ ವೈಯಕ್ತಿಕಲೋಕವೆಂದಲ್ಲದೇ, ಕೆಲವು ಸಲ ಮೂರುಲೋಕಗಳೂ ಸೇರಿರುವ ಸಮುದಾಯಾರ್ಥಕವಾದ ಅರ್ಥವನ್ನು ಕೊಡುತ್ತವೆ. ಆದುದರಿಂದ ಇಲ್ಲಿ ಪೃಥಿವ್ಯಾದಿಲೋಕಗಳ ಸ್ಥಿತಿಗತಿಗಳ ವಿಷಯದಲ್ಲಿ ವೈದಿಕವಾಕ್ಯಗಳ ಆಧಾರದ ಮೇಲೆ ಕೆಲವು ವಿವರಗಳನ್ನು ಹೇಳಿದರೂ ಸಹ ಉದಾಹೃತವಾಗುವ ವಾಕ್ಯಗಳಿಗೆ ಇದಮಿತ್ಥಂ ಎಂದು ನಿಷ್ಕೃಷ್ಟವಾಗಿ ಅರ್ಥವನ್ನು ಹೇಳಲು ಸುಲಭವಲ್ಲ. ಆದರೂ ಸಹ ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವಂತೆ ಪೃಥಿವ್ಯಾದಿಮೂರು ಲೋಕಗಳ ಸ್ಥಿತಿಗತಿಗಳ ಕ್ರಮವು ಯಾವರೀತಿಯಾದುದು ಎಂದು ಪರಿಶೀಲಿಸಬಹುದು.

ಋಕ್ಸಂಹಿತೆಯಲ್ಲಿ ಪೃಥ್ವಿಯ ವರ್ಣನವು ಅದರ ವಿಸ್ತೃತಿಯನ್ನೂ ವ್ಯಾಪಕತ್ವವನ್ನೂ ತೋರಿಸುತ್ತದೆ. **ಪೃಥ್ವೀ, ಉರ್ವೀ, ಮಹೀ, ಉತ್ತಾನಾ, ಅಪರಾ** ಇತ್ಯಾದಿ ವಿಶೇಷಣಗಳು ಪೃಥಿವಿಯ ಮಹತ್ತ್ವವನ್ನು ಸೂಚಿಸು ವುದಾಗಿವೆ. ಇಂತಹ ವಿಸ್ತೃತಿಯುಳ್ಳದ್ದಾದರೂ **ಭೂಮಿಃ, ಕ್ಷ್ಮಾ, ಗ್ಮಾ, ಇಳಾ** ಇತ್ಯಾದಿ ಪರ್ಯಾಯಪದಗಳು ಪೃಥಿವೀ ವ್ಯತಿರಿಕ್ತವಾದ ಅಂತರಿಕ್ಷಾದಿಗಳಿಗಿಂತಲೂ ಬೇರೆಯಾದುದು ಎಂದೂ ತೋರಿಸುವುದಾಗಿವೆ.

**ಭೂಮ್ಯಾಶ್ಚತೆಸ್ರಃ ಪ್ರದಿಶಸ್ತಾಭ್ಯ ಏನಾ ನಿ ವರ್ತಯ ।**

(ಋ. ಸಂ. ೧೦-೧೯-೮)

ಇತ್ಯಾದಿ ದಿಕ್ಕುಗಳ ವರ್ಣನವು ಭೂಮಿಯ ಅವಧಿಯನ್ನೂ ಸೂಚಿಸುತ್ತವೆ. ಆದರೆ ಈ ಅವಧಿಯು ಪೃಥ್ವಿಯ ಪ್ರತ್ಯೇಕತೆಯನ್ನು ಸಮರ್ಥಿಸುವುದಿಲ್ಲ. ಪೃಥಿವಿಯು ಅವಶ್ಯವಾಗಿಯೂ, ಅನುಸ್ಯೂತವಾಗಿಯೂ ದ್ಯುಲೋಕದೊಡನೆ ಅವಿಚ್ಛಿನ್ನವಾಗಿ ಸಂಬಂಧಿಸಿದೆ ಎಂಬುದನ್ನು **ರೋದಸೀ, ದ್ಯಾವಾಪೃಥಿವೀ, ಕ್ಷೋಣೀ** ಇತ್ಯಾದಿ ಪರ್ಯಾಯ ಪದಗಳು ತಿಳಿಸುತ್ತವೆ. **ಉರ್ವೀ ಮಹೀ; ವರಾ** ಮುಂತಾದ ವಿಶೇಷಣಗಳು ದ್ಯಾವಾಪೃಥಿವಿಗಳ ಸರ್ವವ್ಯಾಪಕತ್ವ ವನ್ನು ವರ್ಣಿಸುತ್ತವೆ.



CC-0. Jangamwadi Math Collection. Digitized by eGangotri

**ಉಭೇ ಅಸ್ಮೈ ಪೀಪಯತಃ ಸಮೀಚೀ ದಿವೋ ವೃಷ್ಟಿಂ ಸುಭಗೋ ನಾಮ ಪುಷ್ಯನ್ ।**
**ಉಭಾ ಕ್ಷಯಾವಾಜಯನ್ನಾತಿ ಪೃತ್ಸೂಭಾವರ್ಧೌ ಭವತಃ ಸಾಧೂ ಅಸ್ಮೈ ॥**

(ಋ. ಸಂ. ೨-೨೭-೧೫)

ಇತ್ಯಾದಿ ಸ್ಥಳಗಳಲ್ಲಿ ದ್ಯಾವಾಪೃಥಿವಿಗಳನ್ನು ವಿಶ್ವದ ಎರಡು ಗೋಳಗಳಿಗೆ ಹೋಲಿಸಿದೆ. **ಉಭೌ ಅರ್ಧೌ ಭವತಃ** ಎನ್ನುವುದಕ್ಕೆ ಚರಾತ್ಮಕಭಾಗವೆಂದೋ, ಮರ್ತ್ಯಾಮರ್ತ್ಯಾತ್ಮಕವಾದ ಭಾಗವೆಂದೋ ಅಥವಾ ಭೌತಿಕವಾದ ಎರಡು ಗೋಳಗಳೆಂದೋ ಅರ್ಥಮಾಡಬಹುದು. **ಸಮೀಚೀ, ಧಿಷಣೇ, ಚಮ್ವಾ** (೩-೫೫-೨೦) ಇತ್ಯಾದಿ ವಿಶೇಷಣಗಳು ಇವುಗಳ ಆಕಾರವನ್ನು ವಿವರಿಸುವುವಾಗಿವೆ. **ಯೋ ಅಕ್ಷೇಣೈವ ಚಕ್ರಿಯಾ ಶಚೀಭಿಃ** (೧೦-೮೯-೪) ಈ ದ್ಯಾವಾ ಪೃಥಿವಿಗಳು ಮಹತ್ಸ್ವರೂಪವುಳ್ಳ ಇಂದ್ರನಿಂದ ಸೃಷ್ಟಿಸಲ್ಪಟ್ಟ ಅಕ್ಷದ ಎರಡು ಕಡೆಗಳಲ್ಲಿಯೂ ಇರುವ ಎರಡು ಚಕ್ರ ಗಳಂತಿವೆ. ಇವೆರಡೂ ಸಹ ಇಂದ್ರನ ಮಹತ್ತ್ವದ ಸ್ಫೂರ್ತಿವಿಶೇಷಗಳು.

**ಉರ್ವೀ, ಮಹೀ** ಇತ್ಯಾದಿವಿಶೇಷಣಗಳಿಂದ ಪೃಥ್ವಿಯು ವರ್ಣಿತವಾಗಿದ್ದರೆ, **ರೋಚನ, ರೋಚನಂ ದಿವಃ** ಎಂಬ ವಿಶೇಷಣಪದಗಳು ದ್ಯುಲೋಕದ ಪ್ರಭೆಯನ್ನು ವರ್ಣಿಸುವುವಾಗಿವೆ. ಈ ದ್ಯಾವಾಪೃಥಿವಿಗಳ ನಡುವೆ ಇರುವುದೇ ಅಂತರಿಕ್ಷ. ಅಥವಾ ರಜೋಲೋಕ. ಈ ರೀತಿ **ತಿಸ್ರಃ ಮಹೀಃ** ಎಂದು ಪ್ರಕೃತವಾದ ಮಂತ್ರ ದಲ್ಲಿ ವರ್ಣಿತವಾಗಿರುವ ಈ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಮೂರು ಲೋಕಗಳು,

**ಯದುತ್ತಮೇ ಮರುತೋ ಮಧ್ಯಮೇ ವಾ ಯದ್ವಾವಮೇ ಸುಭಗಾಸೋ ದಿವಿ ಷ್ಠ ।**
**ಅತೋ ನೋ ರುದ್ರಾ ಉತ ವಾ ನ್ವಸ್ಯಾಗ್ನೇ ವಿತ್ತಾದ್ಧವಿಷೋ ಯದ್ಯಜಾಮ ॥**

(ಋ. ಸಂ. ೫-೬೦-೬)

ಇತ್ಯಾದಿ ಋಕ್ಕುಗಳಲ್ಲಿ ಉತ್ತಮ, ಮಧ್ಯಮ ಮತ್ತು ಅವಮ ಎಂಬ ಪದಗಳಿಂದ ವರ್ಣಿತವಾಗಿರುವುವೇ ಈ ಲೋಕಗಳು. ಈ ಮೂರು ಲೋಕಗಳೂ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದ್ದರೂ ಸಹ **ಗುಹಾ ದ್ವೇ ನಿಹಿತೇ ದರ್ಶ್ಯೇಕಾ ।** ಎರಡು ಲೋಕಗಳೂ ಅದೃಶ್ಯವಾಗಿದ್ದು ಪೃಥಿವೀಮಾತ್ರ ಚಾಕ್ಷುಷದರ್ಶನಕ್ಕೆ ನಿಲುಕುತ್ತದೆ ಎಂಬ ವಿಷಯವು ಹೊಸದಾದುದು. ಏತಕ್ಕೆಂದರೆ,

**ತೃತೀಯಮಸ್ಯ ನಕಿರಾ ದಧರ್ಷತಿ ವಯಶ್ಚನ ಪತಯಂತಃ ಪತತ್ರಿಣಃ ।**

(ಋ. ಸಂ. ೧-೧೫೫-೫)

ವಿಷ್ಣುವಿನ ಎರಡು ಪಾದಗಳನ್ನಿಡುವ ಭೂಲೋಕ ಮತ್ತು ಅಂತರಿಕ್ಷಗಳನ್ನು ಮಾತ್ರ ಮಾನವನು ತಿಳಿದುಕೊಳ್ಳಬಲ್ಲನು. ಈ ವಿಷ್ಣುವಿನ ಮೂರನೆಯ ಪಾದವನ್ನಿಡುವ ದ್ಯುಲೋಕವನ್ನು ಯಾರೂ ತಿಳಿಯಲಾರರು.

**ಉಭೇ ತೇ ವಿದ್ಮ ರಜಸೀ ಪೃಥಿವ್ಯಾ ವಿಷ್ಣೋ ದೇವ ತ್ವಂ ಪರಮಸ್ಯ ವಿತ್ಸೇ ।**

(೭-೯೯-೧)

ಎಲೈ ಪ್ರಭಾಯುತನಾದ ವಿಷ್ಣುವೇ, ನಿನ್ನ ಪೂರ್ಣವಾದ ಮಾಹಾತ್ಮ್ಯವನ್ನು ಯಾರೂ ಅರಿಯಲಾರರು. ನಿನ್ನಿಂದ ವ್ಯಾಪ್ತವಾದ ಪೃಥಿವ್ಯಂತರಿಕ್ಷಗಳನ್ನು ಮಾತ್ರ ನಾವು ತಿಳಿಯಬಲ್ಲೆವು. ನಿನ್ನ ಅತ್ಯುತ್ಕೃಷ್ಟವಾದ ಮೂರನೆಯ ಲೋಕವನ್ನು ನೀನು ಮಾತ್ರ ತಿಳಿಯಬಲ್ಲೆ. ಇನ್ನಾರಿಗೂ ಅದರ ಸ್ವರೂಪವನ್ನರಿಯಲು ಸಾಮರ್ಥ್ಯವಿಲ್ಲ, ಇತ್ಯಾದಿ ಯಾಗಿ ಲೋಕತ್ರಯದ ವರ್ಣನೆಯಿರುವೆಡೆಯಲ್ಲೆಲ್ಲಾ ಮಾನುಷ ಪ್ರತ್ಯಕ್ಷಕ್ಕೆ ಎರಡು ಪ್ರಪಂಚಗಳೂ ನಿಲುಕುವು

CC-0. Jangamwadi Math Collection. Digitized by eGangotri

ವೆಂದೂ ಮೂರನೆಯದು ಮಾತ್ರ ಮಾನವನ ದೃಷ್ಟಿಗೆ ಅತೀತವಾದುದೆಂದೂ ತಿಳಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಈ ರೀತಿಯಾದ ವ್ಯತ್ಯಾಸವಿದೆ. ದ್ಯುಲೋಕ ಮತ್ತು ಅಂತರಿಕ್ಷಗಳೆರಡೂ ಸಹ ಗೋಚರಾತೀತ ವೆಂದು ಹೇಳಿದೆ.

ಆದರೆ ತೈ. ಸಂ. ೬-೧-೧-೧ರಲ್ಲಿ ಅಂತರ್ಹಿತೋ ಹಿ ದೇವಲೋಕೋ ಮನುಷ್ಯಲೋಕಾತ್-ಎಂದರೆ ದೇವಲೋಕವು ನಮ್ಮ ಕಣ್ಣಿಗೆ ಕಾಣಿಸದಿದ್ದರೂ ಅದು ಮನುಷ್ಯಲೋಕದೊಡನೆ ಅಂತರ್ಹಿತವಾಗಿರುವುದು. ಎಂದರೆ ದೇವಲೋಕ ಮನುಷ್ಯಲೋಕಗಳು ಒಂದರೊಳಗೊಂದು ಓತಪ್ರೋತವಾಗಿವೆ. ಮನುಷ್ಯಲೋಕವು ಸ್ಥೂಲವಾಗಿರುವುದ ರಿಂದ ಅದು ನಮ್ಮ ದೃಷ್ಟಿಗೆ ಗೋಚರವಾಗುತ್ತದೆ. ದೇವಲೋಕವು ಸೂಕ್ಷ್ಮರೂಪದಲ್ಲಿರುವುದರಿಂದ ನಮ್ಮ ಬಾಹ್ಯ ಚಕ್ಷುಸ್ಸಿಗೆ ಅದು ಗೋಚರವಾಗುವುದಿಲ್ಲ ಎಂಬ ವಿವರಣೆ ಇದೆ.



ಸಂಹಿತಾಪಾಠಃ

ತ್ರಿಪಾಜಸ್ಯೋ ವೃಷಭೋ ವಿಶ್ವರೂಪ ಉತ ತ್ರ್ಯುಧಾ ಪುರುಧ ಪ್ರಜಾವಾನ್ ।
ತ್ರ್ಯನೀಕಃ ಪತ್ಯತೇ ಮಾಹಿನಾವಾನ್ತ್ಸ ರೇತೋಧಾ ವೃಷಭಃ ಶಶ್ವತೀನಾಂ ॥

ಪದಪಾಠಃ

ತ್ರಿಽಪಾಜಸ್ಯಃ । ವೃಷಭಃ । ವಿಶ್ವಽರೂಪಃ । ಉತ । ತ್ರಿಽಉಧಾ । ಪುರುಧ । ಪ್ರಜಾಽವಾನ್ ।
ತ್ರಿಽಅನೀಕಃ । ಪತ್ಯತೇ । ಮಾಹಿನಽವಾನ್ । ಸಃ । ರೇತಃಽಧಾಃ । ವೃಷಭಃ । ಶಶ್ವತೀನಾಂ ॥ ೩ ॥

ಸಾಯಣಭಾಷ್ಯಂ

ತ್ರಿಪಾಜಸ್ಯಃ ಗ್ರೀಷ್ಮವರ್ಷಾಹೇಮಂತಾಖ್ಯೈಸ್ತ್ರಿಭಿರ್ಋತುಭಿಃ ಪಾಜಸ್ಯಮುರೋ ಯಸ್ಯ ಸ ತ್ರಿಪಾಜಸ್ಯಃ । ತ್ರ್ಯುರಸ್ಕ ಇತ್ಯರ್ಥಃ । ಉರೋವಚನಶ್ಚ ಪಾಜಸ್ಯಶಬ್ದಃ । ಇಂದ್ರಸ್ಯ ಕ್ರೋಡೋಽದಿತ್ಯೈ ಪಾಜಸ್ಯಂ । ವಾಜ. ೨೫-೮ । ಇತ್ಯಶ್ವಮೇಧಮಂತ್ರ ಉರಃಪರತಯಾಮ್ನಾನಾತ್ ಪಾಜಸಿ ಬಲೇ ಸಾಧು-ರಿತಿ ವ್ಯುತ್ಪತ್ತೇಶ್ಚ ಸರ್ವೇಷಾಮಂಗಾನಾಂ ಮಧ್ಯ ಉರಸೋ ಬಲವತ್ತ್ವಾತ್ । ವೃಷಭಃ ಸ್ವಾವಯವಭೂತೇ ವರ್ಷರ್ತಾವಪಾಂ ವರ್ಷಕೋ ವಿಶ್ವರೂಪಸ್ತತ್ತದೃತ್ವಸಾಧಾರಣಕಾರ್ಯೈಃ ಪುಷ್ಪವಿಕಾಸಾದಿಭಿರ್ಲಿಂಗೈ-ರ್ನಾನಾರೂಪ ಉತಾಪಿ ಚ ತ್ರ್ಯುಧಾ । ವಸಂತಶರದ್ಧೇಮಂತಾಖ್ಯೈಸ್ತ್ರಿಭಿರ್ಋತುಭಿರೂಧೋ ಯಸ್ಯ ಸ ತ್ರ್ಯುಧಾ । ಪ್ರಜಾವಾನ್ । ಪ್ರಕರ್ಷೇಣ ಜಾಯಂತ ಇತಿ ವ್ರೀಹ್ಯಾದಯಃ ಪ್ರಜಾಃ । ಪುರುಧ ನಾನಾ-ಪ್ರಕಾರೇಣ ವಿದ್ಯಮಾನವ್ರೀಹಿಯವಾದಿರೂಪಪ್ರಜಾವಾನ್ । ಕಿಂಚ ತ್ರ್ಯನೀಕಸ್ತ್ರಿಭಿರುಷ್ಣವರ್ಷಶೀತಾ-

CC-0. Jangamwadi Math Collection. Digitized by eGangotri

ಖ್ಯೈರನೀಕೈರ್ಗುಣೈರುಪೇತೋ ಮಾಹಿನಾವಾನ್ಮಹತ್ತ್ವವಾನ್ ಸಂವತ್ಸರಾಭಿಮಾನೀ ದೇವಃ ಪತ್ಯತೇ । ಆಗಚ್ಛತಿ । ವೃಷಭಃ ಸೇಚನಸಮರ್ಥಃ ಸ ಸಂವತ್ಸರಃ ಶಶ್ವತೀನಾಂ ಬಹ್ವೀನಾಮೋಷಧೀನಾಂ ಪುಷ್ಪ-ಫಲಾದಿಸಂಪತ್ತಯೇ ರೇತೋಧಾ ರೇತಸ ಉದಕಸ್ಯ ಧರ್ತಾ ಭವತಿ ॥ ತ್ರ್ಯುಧಾ । ಬಹುವ್ರೀಹೇರೂಧ-ಸೋಽನಙ್ಸ್ತ್ರಿಯಾಮಿತ್ಯನಙ್ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ಸ್ತ್ರ್ಯಪಿ ಭವತಿ । ಊಕಾರಸ್ಯ ಹ್ರಸ್ವ-ಶ್ಛಾಂದಸಃ । ಉತ್ತರಪದಾಂತೋದಾತ್ತಪ್ರಕರಣೇ ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಮಿತ್ಯುತ್ತರ ಪದಾಂತೋದಾತ್ತತ್ವಂ ॥

ಪ್ರತಿಪದಾರ್ಥ

**ತ್ರಿಪಾಜಸ್ಯಃ**—ಗ್ರೀಷ್ಮ, ವರ್ಷ, ಹೇಮಂತ ಎಂಬ ಹೆಸರಿನಿಂದ ಕರೆಯಲ್ಪಡುವ ಮೂರು ವಕ್ಷಸ್ಥಳಗಳ್ಳುಳ್ಳದ್ದೂ । **ವೃಷಭಃ**—ವೃಷ್ಟಿಯನ್ನು ಸುರಿಸತಕ್ಕದ್ದೂ । **ವಿಶ್ವರೂಪಃ**—ಋತುಭೇದಗಳಿಗನುಗುಣವಾಗಿ ನಾನಾ ರೂಪಗಳನ್ನು ಧರಿಸತಕ್ಕದ್ದೂ । **ಉತ**—ಮತ್ತು । **ತ್ರ್ಯುಧಾ**—ವಸಂತ, ಶರತ್ ಮತ್ತು ಹೇಮಂತರೂಪಗಳಿಂದ ಮೂರು ಊಧಃ (ಕೆಚ್ಚಲು) ಪ್ರದೇಶಗಳುಳ್ಳದ್ದೂ । **ಪುರುಧ ಪ್ರಜಾವಾನ್**—ವ್ರೀಹ್ಯಾದಿರೂಪದ ನಾನಾವಿಧವಾದ ಪ್ರಜೆಗಳುಳ್ಳದ್ದೂ । **ತ್ರ್ಯನೀಕಃ**—ಉಷ್ಣ, ವರ್ಷ ಮತ್ತು ಶೀತರೂಪಗಳಾದ ಮೂರು ಗುಣಗಳಿಂದ ಕೂಡಿದುದೂ । **ಮಾಹಿನಾವಾನ್**—ಮಹತ್ತ್ವರೂಪವುಳ್ಳದ್ದೂ ಆದ ಸಂವತ್ಸರಾಭಿಮಾನದೇವತೆಯು । **ಪತ್ಯತೇ**—ಆಗಮಿಸುತ್ತದೆ । **ವೃಷಭಃ**—ಕಾಮವರ್ಷಕವಾದ । **ಸಃ**—ಅದೇ ಸಂವತ್ಸರಾಭಿಮಾನದೇವತೆಯು । **ಶಶ್ವತೀನಾಂ**—ಅನೇಕ ಓಷಧ್ಯಾದಿಗಳಿಗೆ । **ರೇತೋಧಾಃ**—ಉದಕವನ್ನು ಪೂರಣಮಾಡುವುದಾಗಿದೆ.

ಭಾವಾರ್ಥ

ಗ್ರೀಷ್ಮಾದಿ ಮೂರು ವಕ್ಷಃಪ್ರದೇಶಗಳುಳ್ಳದ್ದೂ, ವೃಷ್ಟಿಪ್ರದವಾದದ್ದೂ, ಋತುಭೇದಗಳಿಗನುಗುಣವಾಗಿ ನಾನಾರೂಪಗಳುಳ್ಳದ್ದೂ, ವಸಂತಾದಿರೂಪದ ಮೂರು ಕೆಚ್ಚಲು ಪ್ರದೇಶವುಳ್ಳದ್ದೂ, ವ್ರೀಹ್ಯಾದಿರೂಪದ ನಾನಾ ಪ್ರಜೆಗಳುಳ್ಳದ್ದೂ, ಉಷ್ಣಾದಿಗುಣತ್ರಯದಿಂದ ಕೂಡಿದುದೂ, ಮಹತ್ತ್ವರೂಪವುಳ್ಳದ್ದೂ ಆದ ಸಂವತ್ಸರಾಭಿಮಾನ ದೇವತೆಯು ಆಗಮಿಸುತ್ತದೆ. ಕಾಮವರ್ಷಕವಾದ ಅದೇ ಸಂವತ್ಸರಾಭಿಮಾನದೇವತೆಯು ಅನೇಕ ಓಷಧ್ಯಾದಿಗಳಿಗೆ ಉದಕವನ್ನು ಪೂರ್ಣಮಾಡುವುದಾಗಿದೆ.

English Translation

The three-breasted, the showerer (of rain), the omniform, the three-uddered, the parent of multiform progeny, the possessor of magnitude, followed by three hosts (the year), advances, the vigorous impregnator of the perpetual plants-

ವಿಶೇಷವಿಷಯಗಳು

“ **ಷಡ್ಭಾರಾನ್ ಏಕೋ ಅಚರನ್ ಬಿಭರ್ತಿ** ” ಎಂದು ಹಿಂದಿನ ಮಂತ್ರದಲ್ಲಿ ಸಂವತ್ಸರತತ್ತ್ವವು ವರ್ಣಿತ ವಾಗಿದೆ. ಷಡ್ಭಾರವೆಂದರೆ ಷಡೃತುಗಳೆಂದರ್ಥ. ಇಂತಹ ಷಡ್ಭಾರವನ್ನು ವಹಿಸಿರುವುದೂ, ಲೋಕತ್ರಯವನ್ನು ತನ್ನ ನಿಯಮನದಲ್ಲಿಟ್ಟು ವಿಶ್ವವ್ಯವಹಾರವನ್ನು ನಡೆಸುವುದೂ ಆದ ಸಂವತ್ಸರವೇ ಆದಿತ್ಯನ ವಿಭೂತಿಯೆಂದೂ ಹೇಳ

CC-0. Jangamwadi Math Collection. Digitized by eGangotri

ಬಹುದು. ಇದೇ ಆದಿತ್ಯನ ವಿಭೂತಿಯಾದ ಸಂವತ್ಸರದ ಅವಯವಗಳ ಸ್ವರೂಪವನ್ನೂ, ಅವುಗಳ ಪ್ರಭಾವವನ್ನೂ ಪ್ರಕೃತವಾದ ಋಕ್ಕಿನಲ್ಲಿ ವಿವರಿಸಿದೆ.

ಈ ಋತುರೂಪವಾದ ಸಂವತ್ಸರದ ಅವಯವಗಳನ್ನು ಉರಃ ಪ್ರದೇಶಕ್ಕೂ ಊಧಃ ಪ್ರದೇಶಕ್ಕೂ ಹೋಲಿಸಿದೆ. ಉರಃ ಪ್ರದೇಶವು ಶಕ್ತಿಯನ್ನೂ ಊಧಃ ಪ್ರದೇಶವು ಪ್ರಭೂತವಾದ ಅನ್ನದಾತೃತ್ವವನ್ನೂ ಸೂಚಿಸುತ್ತವೆ. ಆದುದರಿಂದ ಸಂವತ್ಸರದ ಅವಯವಗಳಲ್ಲಿ ಮೂರು ಶಕ್ತಿಯನ್ನೂ, ಇನ್ನು ಮೂರು ಸಂಪತ್ಪ್ರದಾತೃತ್ವವನ್ನೂ ಪ್ರತಿಪಾದಿಸುತ್ತವೆ.

**ತ್ರಿಪಾಜಸ್ಯಃ**—**ಪಾಜಸ್ಯ** ಶಬ್ದಕ್ಕೆ **ಉರಃ** ಪ್ರದೇಶವೆಂದರ್ಥಮಾಡಿದೆ. ಮೂರು ವಿಧವಾದ ಉರಃ ಪ್ರದೇಶವೆಂದು ತಾತ್ಪರ್ಯ. ನಿರುಕ್ತಕಾರರು **ಪಾಜಸ್** ಶಬ್ದವನ್ನು ಬಲ ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೨-೯). ಆದುದರಿಂದ ನಿರುಕ್ತವನ್ನನುಸರಿಸಿ **ಪಾಜಸ್** ಶಬ್ದಕ್ಕೆ ಶಕ್ತಿಯೆಂದರ್ಥಮಾಡಿದರೆ ಸರಿಹೋಗಲಾರದೆಂದರಿತು ಸಾಯಣರು ತಾವು **ಉರಸ್** ಎಂದು ಅರ್ಥಮಾಡಿರುವುದನ್ನು ಸಮರ್ಥಿಸಿ "**ಇಂದ್ರಸ್ಯ ಕ್ರೋಡೋಽದಿತ್ಯೈ ಪಾಜಸ್ಯಂ**" ಎಂಬ ವಾಜಸನೇಯಸಂಹಿತಾ ವಾಕ್ಯವನ್ನುದಾಹರಿಸಿ ಅಲ್ಲಿ **ಪಾಜಸ್ಯ** ಶಬ್ದವು **ಉರಸ್** ಶಬ್ದ ಪರ್ಯಾಯವಾಗಿರುವಂತೆ ಪ್ರಕೃತದಲ್ಲಿ ಅರ್ಥವನ್ನು ಹೇಳಬೇಕೆಂದು ತಿಳಿಸಿದ್ದಾರೆ. "**ಅರೇಜೇತಾಂ ರೋದಸೀ ಪಾಜಸಾ ಗಿರಾ**" (ಋ. ಸಂ. ೧-೧೫೧-೧) ಇತ್ಯಾದಿ ಸ್ಥಳಗಳಲ್ಲಿ **ಶಕ್ತಿ**ಯುತವಾದ ಎಂದರ್ಥವನ್ನು ಹಿಂದೆ ಹೇಳಿದೆ. ಋಕ್ಸಂಹಿತೆಯಲ್ಲಿ ಈ ಪದವು ಮೂರು ಅರ್ಥಗಳಲ್ಲಿ ಪ್ರಯುಕ್ತವಾಗಿದೆ. ಆ ಸನ್ನಿವೇಶವನ್ನು ಗಮನಿಸಿ ಆನಂತರ ಪ್ರಕೃತದಲ್ಲಿ ಇದರ ತಾತ್ಪರ್ಯವೇನೆಂಬುದನ್ನು ಪರಿಶೀಲಿಸಬೇಕು.

**ವಿದ್ಯುದ್ರಥಃ ಸಹಸಸ್ಪುತ್ರೋ ಅಗ್ನಿಃ ಶೋಚಿಷ್ಕೇಶಃ ಪೃಥಿವ್ಯಾಂ ಪಾಜೋ ಅಶ್ರೇತ್ ।**
(ಋ ಸಂ. ೩-೧೪-೧)

ವಿದ್ಯುದ್ರೂಪದ ಯಾನವುಳ್ಳವನೂ ಶಕ್ತಿಯುತನೂ ಆದ ಅಗ್ನಿಯು ಅಂತರಿಕ್ಷದಲ್ಲಿ ತೇಜಸ್ಸನ್ನು ಪಡೆದು ಪ್ರಕಾಶಿಸಿದನು ಎಂದು ಒಂದರ್ಥ. ಭೂಮಿಯಲ್ಲಿ ಶಕ್ತಿಯನ್ನು ಪಡೆದನು ಎಂದು ಇನ್ನೊಂದರ್ಥ. ಇಲ್ಲಿರುವ ವರ್ಣನೆಯ ಪ್ರಕಾರ ಅಂತರಿಕ್ಷದಲ್ಲಿ ಅಥವಾ ಪೃಥ್ವಿಯಮೇಲೆ ವ್ಯಾಪಿಸಿ ತೇಜೋಯುತನಾದನು ಎಂದು ತಾತ್ಪರ್ಯವನ್ನು ಹೇಳಬಹುದು. "**ಅರುಷಸ್ತೂಪೋ ರುಶದಸ್ಯ ಪಾಜಃ**" (ಋ. ಸಂ. ೩-೨೯-೩) ಎಂಬಲ್ಲಿ ಅಂಧಕಾರವನ್ನು ನಾಶಮಾಡಿ ಸ್ವಪ್ರಭೆಯನ್ನು ಅಗ್ನಿಯು ಹರಡಿದ್ದನೆಂದಿರುವುದರಿಂದ **ಪಾಜಸ್** ಶಬ್ದಕ್ಕೆ ತೇಜಸ್ಸೆಂದೇ ಅರ್ಥವನ್ನು ಹೇಳಬೇಕು ಹೀಗೆಯೇ "**ಊರ್ಧ್ವಂ ಮಧುಧಾ ದಿವಿ ಪಾಜಃ** (೩-೬೧-೫); **ಕೃಣುಷ್ವ ಪಾಜಃ ಪ್ರಸಿತಿಂ ನ**" (೪-೪-೧) ಇತ್ಯಾದಿ ಸಂದರ್ಭಗಳಲ್ಲಿ ತೇಜಃಸಂಘವೆಂದೇ ಅರ್ಥವಾಗುತ್ತದೆ. ಆದರೆ.

**ಪಾಜಸ್ವಂತೋ ನ ವೀರಾಃ ಪನಸ್ಯವೋ ರಿಶಾದಸೋ ನ ಮರ್ಯಾ ಅಭಿದ್ಯವಃ ।**
(ಋ. ಸಂ. ೧೦-೭೭-೩)

ಇತ್ಯಾದಿ ಸ್ಥಳಗಳಲ್ಲಿ ವೀರರ ವಿಷಯವನ್ನೇ ಹೇಳಿರುವುದರಿಂದ ಇಲ್ಲೆಲ್ಲಾ ಶಕ್ತಿಯೆಂದೇ ಖಚಿತವಾಗಿ ಅರ್ಥವನ್ನು ಹೇಳಬೇಕು. **ತ್ರಿಪಾಜಸ್ಯಃ** ಎಂಬ ಸವಿಶೇಷಪದವು ಋಕ್ಸಂಹಿತೆಯಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಪ್ರಯುಕ್ತವಾಗಿರುತ್ತದೆ. ಇಲ್ಲಿ ಪಾಜಸ್ಯಶಬ್ದಕ್ಕೆ **ಉರಃ** ಎಂದರ್ಥಮಾಡಿದೆ. ಅಥವಾ ಪಾರ್ಶ್ವಭಾಗವೆಂದಾದರೂ ಆಗಬಹುದು. ಜಠರವೇ ಅಥವಾ ಕುಕ್ಷಿಯೇ ಎಂಬ ಸಂಶಯಕ್ಕೂ ಅವಕಾಶವಿದೆ. ಇದು **ಸಂವತ್ಸರ** ದೇವತೆಗೆ ವಿಶೇಷಣ

CC-0. Jangamwadi Math Collection. Digitized by eGangotri

ಪದವಾಗಿದೆ. ಆದುದರಿಂದ, ಮೂರು ವಿಧವಾದ ಶಕ್ತಿಯುಳ್ಳದ್ದು ಎಂದು ಹೇಳುವುದು ಸರಿಯೇ, ಅಥವಾ ಮೂರು ವಿಧವಾದ ಜಠರವುಳ್ಳನ್ದು ಎಂಬುದು ಸರಿಯೇ ಅಥವಾ ಮೂರು ಬಗೆಯ ಪಾರ್ಶ್ವವುಳ್ಳದ್ದು ಎಂಬುದು ಸರಿಯೇ ಎಂಬುದನ್ನು ನಿಷ್ಕರ್ಷಿಸಲು **ತ್ರಿಪಾಜಸ್ಯಃ ತ್ರ್ಯೃಧಾ, ತ್ರ್ಯನೀಕಃ** ಇತ್ಯಾದಿ ವಿಶೇಷಣಗಳು ಸಂವತ್ಸರದ ವಿಭಾಗಗಳ ಸ್ವರೂಪವನ್ನು ಯಾವ ರೀತಿ ವರ್ಣಿಸುವುವು ಎಂಬುದನ್ನು ತಿಳಿಯಬೇಕು.

ತ್ರಿಪಾಜಸ್ಯಃ, **ತ್ರ್ಯೃಧಾ** ಎಂಬ ವಿಶೇಷಣಗಳು ಸಂವತ್ಸರದ ಆರು ವಿಭಾಗಗಳನ್ನು ತಿಳಿಸುತ್ತವೆ **ತ್ರ್ಯನೀಕಃ** ಎಂಬುದು ಸಂವತ್ಸರದ ಮೂರು ಗುಣಗಳನ್ನು ತಿಳಿಸುತ್ತವೆ. ಈಗ ರೂಢಿಯಲ್ಲಿರುವ ವಿಭಾಗಗಳಿಗನುಗುಣವಾಗಿ ಈ ಮೂರು ಗುಣಗಳೂ ಕ್ರಮವಾಗಿವೆ. ಆದರೆ ಋಕ್ಸಂಹಿತೆಯಲ್ಲಿಯೂ ಸಹ ಋತುಗಳ ವಿಭಾಗವು ಈಗ ರೂಢಿಯಲ್ಲಿರುವಂತೆ ಇರುವುದೇ ಅಥವಾ ಅಲ್ಲಿರುವ ವಿಭಾಗಗಳು ಈಗಿನ ಗಣನೆಗಿಂತ ವ್ಯತ್ಯಸ್ತವಾದುದೇ ಎಂಬುದನ್ನು ಪರಿಶೀಲಿಸಬೇಕು.

**ತ್ರಿಪಾಜಸ್ಯಃ** ಎಂಬ ವಿಶೇಷಣಕ್ಕೆ ಸಾಯಣರು **ಗ್ರೀಷ್ಮ, ವರ್ಷ, ಹೇಮಂತ** ಎಂಬ ಹೆಸರುಳ್ಳ ವಿಭಾಗಗಳು ಸಂವತ್ಸರದ ಉರಃಪ್ರದೇಶವು ಎಂದು ವಿವರಿಸಿದ್ದಾರೆ. **ಪಾಜಸ್ಯ**ಶಬ್ದಕ್ಕೆ **ಉರಃ** ಎಂಬರ್ಥವು ಸರಿಯೇ, ಬಲವೆಂಬರ್ಥವು ಸರಿಯೇ ಎಂಬ ವಿಚಿಕಿತ್ಸೆ ಬಂದರೆ, ಸಕಲವಾದ ಅವಯವಗಳಿಗಿಂತಲೂ **ಉರಸ್ಸೇ** ಅತ್ಯಂತ ಬಲಯುತವಾದುದರಿಂದ ಈ ವಿಧವಾದ ಅರ್ಥವನ್ನು ಹೇಳುವುದರಲ್ಲಿ ಅನೌಚಿತ್ಯವಿಲ್ಲ ಎಂದೂ ಸಹ ತಿಳಿಸಿರುವರು. ಮತ್ತು **ತ್ರ್ಯೃಧಾ** ಎಂಬ ಪದಕ್ಕೆ **ವಸಂತ, ಶರತ್, ಹೇಮಂತ** ಎಂಬ ಮೂರು ವಿಭಾಗಗಳೂ ಸಹ ಸಂವತ್ಸರಕ್ಕೆ ಊಧಃ ಪ್ರದೇಶದಂತಿರುವುವು ಎಂದು ವಿವರಿಸಿದ್ದಾರೆ. ಪ್ರಕೃತದಲ್ಲಿ ಸಂವತ್ಸರದ ಈ ವಿಭಾಗಗಳು ಎಲ್ಲಾ ಕಡೆಗಳಲ್ಲಿಯೂ ಒಂದೇ ರೀತಿ ಹೇಳಲ್ಪಟ್ಟಿದೆಯೇ, ಅಥವಾ ಋತುಗಳ ಸಂಖ್ಯೆಯಲ್ಲಿ ಒಂದು ಕಡೆಯಲ್ಲಿ ಹೇಳಿರುವುದಕ್ಕಿಂತ ಇನ್ನೊಂದು ಕಡೆ ವ್ಯತ್ಯಾಸ್ತವಾದ ಅಂಶವಿದೆಯೇ ಎಂಬುದನ್ನು ನೋಡಬೇಕು.

**ಗ್ರೀಷ್ಮ. ವರ್ಷ, ಹೇಮಂತ**—ಎಂಬುದು ಒಂದು ವಿಭಾಗ ;
**ವಸಂತ, ಶರತ್, ಹೇಮಂತ**—ಎಂಬುದು ಇನ್ನೊಂದು ವಿಭಾಗ,

ಇಲ್ಲಿ **ಹೇಮಂತವು** ಎರಡಕ್ಕೂ ಸಮಾನವಾದುದು. ಶಿಶಿರಋತುವೆಂದು ಬೇರೆ ವಿಭಾಗವಿಲ್ಲ. ಹೇಮಂತದಲ್ಲೇ ಐಕ್ಯವೆಂದು ಭಾವಿಸಬೇಕು. ಆದುದರಿಂದ ಋತುಗಳ ಸಂಖ್ಯೆಯು ಐದೇ ಅಥವಾ ಆರೇ ಎಂದರೆ, ಇದಮಿತ್ಥಂ ಎನ್ನುವಂತಿಲ್ಲ. ಈ ವಿಭಾಗದಲ್ಲಿ ಅನೇಕ ವ್ಯತ್ಯಾಸಗಳಿವೆ. ಋತುಗಳ ಸಂಖ್ಯೆಯು ಮೂರೇ ಎಂದು ಕೆಲವೆಡೆಗಳಲ್ಲಿಯೂ, ಐದೆಂದು ಇನ್ನು ಕೆಲವೆಡೆಗಳಲ್ಲಿಯೂ ಆರೆಂದು ಕೆಲವು ವಾಕ್ಯಗಳಲ್ಲಿಯೂ ಏಳು ಎಂದು ಒಂದೆರಡು ಸನ್ನಿವೇಶಗಳಲ್ಲೂ ಹೇಳಲ್ಪಟ್ಟಿವೆ. ಆದರೆ ಈ ಪರಿಗಣನವು ಒಂದಕ್ಕೊಂದು ವಿರುದ್ಧವಾಗಿ ಇವೆ ಎಂಬುವಂತಿಲ್ಲ.

**“ ಯೇ ಜಾತಾ ಋತುಭಿರ್ಧ್ರುವೇಭಿಃ ”** (೧-೮೪-೧೮). ಇತ್ಯಾದಿ ಸ್ಥಳಗಳಲ್ಲಿ ಸಂಖ್ಯಾಪರಿಗಣನೆಯಿಲ್ಲದೇ ಕೇವಲ **ಋತು** ನಿರ್ದೇಶಮಾತ್ರವಿದ್ದರೂ **ಧ್ರುವೇಭಿಃ** ಎಂಬ ವಿಶೇಷಣವು ಋತುವಿನ ಸ್ವರೂಪವನ್ನು ತಿಳಿಸುತ್ತದೆ. ಆದರೆ ಇನ್ನು ಕೆಲವೆಡಗಳಲ್ಲಿ ಋತುಗಳ ನಾಮಪ್ರಭೇದವಿಲ್ಲ. ಸಂಖ್ಯಾಮಾತ್ರದಿಂದ ಋತುವಿನ ಸಂಖ್ಯೆಯನ್ನರಿಯಬೇಕು. ಉದಾಹರಣೆಗೆ—

**ತ್ರಿನಾಭಿ ಚಕ್ರಮಜರಮನರ್ವಂ ಯತ್ರೇಮಾ ವಿಶ್ವಾ ಭುವನಾಧಿ ತಸ್ಥುಃ ।**
(ಋ ಸಂ. ೧-೧೬೪-೨)

CC-0. Jangamwadi Math Collection. Digitized by eGangotri

ಎಂಬಲ್ಲಿ ತ್ರಿನಾಭಿಯೆಂಬ ಪದದಿಂದ ಸಂವತ್ಸರದ ಅವಯವಗಳು ಸೂಚಿತವಾಗಿವೆ. ಈ ವಾಕ್ಯವನ್ನು ನಿರುಕ್ತಕಾರರು ವಿವರಿಸುತ್ತಾ,

ಸಂವತ್ಸರಪ್ರಧಾನ ಉತ್ತರೋಽರ್ಧರ್ಚಸ್ತ್ರಿನಾಭಿಚಕ್ರಂ ತ್ರ್ಯೃತುಃ ಸಂವತ್ಸರೋ ಗ್ರೀಷ್ಮೋ ವರ್ಷಾ ಹೇಮಂತ ಇತಿ ||

(ನಿ. ೪-೨೭)

ಈ ಸಂವತ್ಸರವು ನಾಭಿತ್ರಯಾತ್ಮಕವಾದುದು. ಗ್ರೀಷ್ಮರ್ತು, ವರ್ಷರ್ತು, ಮತ್ತು ಹೇಮಂತಋತು ಇವುಗಳೇ ನಾಭಿಗಳು. ಋತುತ್ರಯಾತ್ಮಕವಾದ ಈ ಸಂವತ್ಸರವನ್ನು ತ್ರಿನಾಭಿಚಕ್ರಂ ಎಂದು ವರ್ಣಿಸಿದೆ ಈ ಅವಯವ ಗಳಿಂದ ಕೂಡಿದುದೂ, ಚಕ್ರದಂತೆ ಪುನಃಪುನಃ ಪರಿಭ್ರಮಣವನ್ನು ಹೊಂದತಕ್ಕದ್ದೂ ಅಜರವೂ ಅನರ್ವವೂ ಆದ ಸಂವತ್ಸರ ಚಕ್ರವನ್ನು ಆದಿತ್ಯನು ಅವೃತ್ತಿರೂಪದಿಂದ ತಿರುಗಿಸುತ್ತಾನೆ ಎಂದರ್ಥ. ಈ ಅರ್ಥವನ್ನೇ ಸಮರ್ಥಿಸುತ್ತಾ ಶತಪಥಬ್ರಾಹ್ಮಣದಲ್ಲಿ,

ತಿಸ್ರೋ ರಾತ್ರೀರ್ವ್ರತಂ ಚರತಿ | ತ್ರಯೋ ವಾ ಋತವಃ ಸಂವತ್ಸರಸ್ಯ .... .... ||

(ಶ. ಬ್ರಾ. ೧೪-೧-೧-೨೮)

ಈ ನಿಯಮವು ಮೂರು ರಾತ್ರಿಗಳಿರತಕ್ಕದ್ದು. ಸಂವತ್ಸರಕ್ಕೆ ಮೂರು ಋತುಗಳಿರುವುದರಿಂದ ಈ ಸಂಖ್ಯೆಯನ್ನೇ ನಿಯಮವು ಅನುಸರಿಸಬೇಕು ಈ ಸಂವತ್ಸರವೇ ಆದಿತ್ಯನು ಎಂದಿದೆ. ಇಂತಹ ಕಡೆಗಳಲ್ಲಿ ಕೇವಲ ಮೂರು ಎಂದು ಸಂಖ್ಯಾಮಾತ್ರದ ನಿರ್ದೇಶವಿದ್ದರೂ ಸಹ ಋಕ್ಸಂಹಿತೆಯಲ್ಲಿ ಇವುಗಳ ಹೆಸರೇ ನಿರ್ದಿಷ್ಟವಾಗಿ ಉಕ್ತವಾಗಿವೆ.

ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತ |
ವಸಂತೋ ಅಸ್ಯಾಸೀದಾಜ್ಯಂ ಗ್ರೀಷ್ಮ ಇಧ್ಮಃ ಶರದ್ಧವಿಃ ||

(ಋ. ಸಂ ೧೦-೯೦-೬)

ಪುರುಷರೂಪವಾದ ಈ ಯಜ್ಞವು ಸಂವತ್ಸರತತ್ತ್ವವನ್ನು ಪ್ರತಿಬಿಂಬಿಸುತ್ತದೆ. ಇದಕ್ಕೆ ವಸಂತವೇ ಆಜ್ಯವು, ಗ್ರೀಷ್ಮವೇ ಇಧ್ಮವು, ಶರತ್ತೇ ಹವಿಸ್ಸು ಎಂದು ಮೂರು ಋತುಗಳ ಹೆಸರನ್ನೂ ತಿಳಿಸಿದೆ. ಆದರೆ, **"ಪಂಚಪಾದಂ ಪಿತರಂ ದ್ವಾದಶಾಕೃತಿಂ"** ಎಂಬ ವಾಕ್ಯದಲ್ಲಿ (೧-೧೬೪-೧೨) ಪಂಚಪಾದ ವೆಂದರೆ **ಪಂಚಸಂಖ್ಯಾಕ-ಋತ್ವಾತ್ಮಕವಾದೋಪೇತಂ | ಏತತ್ ಹೇಮಂತಶಿಶಿರಯೋಃ ಏಕತ್ರಾಭಿಪ್ರಾಯಂ |** ಐದು ಋತು ಗಳೆಂದರ್ಥ. ಶಿಶಿರವೆಂಬುದು ಬೇರೆಯಿಲ್ಲ. ಹೇಮಂತ ಮತ್ತು ಶಿಶಿರ ಎರಡೂ ಸೇರಿ ಒಂದು. ಆದುದರಿಂದ ಐದು ಎಂಬುದು ಕ್ರಮವಾಗಿದೆಯೆಂದು ತಿಳಿಸಿದೆ. ಇದಕ್ಕೆ ವ್ಯತ್ಯಸ್ತವಾಗಿ, **" ಸಾಕಂಜಾನಾಂ ಸಪ್ತಥ-ಮಾಹುರೇಕಜಂ"** (೧-೧೬೪-೧೫) ಇತ್ಯಾದಿ ವಾಕ್ಯಗಳಲ್ಲಿ ಸಪ್ತರ್ತುಗಳೆಂದು ಸೂಚಿತವಾಗಿದೆ. ಇಲ್ಲಿ ಶಿಶಿರ ಋತುವಿಗೆ ಪ್ರತ್ಯೇಕವಾದ ಸ್ಥಾನ. ಅದೂ ಅಲ್ಲದೇ, **ಚೈತ್ರಾದೀನಾಂ ದ್ವಾದಶಾನಾಂ ಮಾಸಾನಾಂ ದ್ವಯ-ಮೇಲನೇನ ವಸಂತಾದ್ಯಾಃ ಷಡೃತವೋ ಭವಂತಿ | ಅಧಿಕಮಾಸೇನ ಏಕಃ ಉತ್ಪದ್ಯತೇ ಸಪ್ತಮರ್ತುಃ |** ಚೈತ್ರ, ವೈಶಾಖ ಎರಡೂ ಸೇರಿ ಒಂದು ಋತು. ಹೀಗೆ ಮಾಸದ್ವಯಕ್ಕೆ ಒಂದು ಋತುವಾದರೆ ಅಧಿಕಮಾಸಕ್ಕೆ ಇನ್ನೊಂದು ಋತು. ಆದುದರಿಂದ ಹನ್ನೆರಡು ತಿಂಗಳಿಗೆ ಆರು ಮತ್ತು ಹದಿಮೂರನೆಯತಿಂಗಳಿಗೆ ಏಳನೆಯ ಋತು ಈ ರೀತಿಯೂ ಇರುತ್ತದೆ. **ಹೇಮಂತ** ಮತ್ತು ಶಿಶಿರ ಈ ಎರಡನ್ನೂ ಸೇರಿಸಿ **ಹೇಮಂತ-ಶಿಶಿರ** ಎಂಬ ಒಂದೇ ನಾಮದಿಂದ ಕರೆಯುವುದು ತೈತ್ತಿರೀಯಸಂಹಿತಾದಿಗಳಲ್ಲಿ ರೂಢಿಯಾಗಿದೆ.

CC-0. Jangamwadi Math Collection. Digitized by eGangotri

**ವಸಂತಮೃತೂನಾಂ ಪ್ರೀಣಾಮಿ ಸ ಮಾ ಪ್ರೀತಃ ಪ್ರೀಣಾತು**
**ಗ್ರೀಷ್ಮಮೃತೂನಾಂ ಪ್ರೀಣಾಮಿ ಸ ಮಾ ಪ್ರೀತಃ ಪ್ರೀಣಾತು ।**
**ವರ್ಷಾಋತೂನಾಂ ಪ್ರೀಣಾಮಿ ತಾ ಮಾ ಪ್ರೀತಾಃ ಪ್ರೀಣಂತು ।**
**ಶರದಮೃತೂನಾಂ ಪ್ರೀಣಾಮಿ ಸಾ ಮಾ ಪ್ರೀತಾ ಪ್ರೀಣಾತು ।**
**ಹೇಮಂತಶಿಶಿರಾವೃತೂನಾಂ ಪ್ರೀಣಾಮಿ ತೌ ಮಾ ಪ್ರೀತೌ ಪ್ರೀಣೀತಾಂ ॥**

(ತೈ. ಸಂ. ೧-೬-೨)

ವಸಂತಋತುವನ್ನು ನಾನು ತೃಪ್ತಿಪಡಿಸುತ್ತೇನೆ. ಅದು ತೃಪ್ತವಾಗಿ ನನ್ನನ್ನು ಸಂತೋಷಗೊಳಿಸಲಿ. ಗ್ರಿಷ್ಮ ಋತುವನ್ನು ತೃಪ್ತಿಪಡಿಸುತ್ತೇನೆ. ಅದು ತೃಪ್ತವಾಗಿ ನನ್ನನ್ನು ತೃಪ್ತಿಗೊಳಿಸಲಿ. ವರ್ಷಾಋತುವನ್ನು ಪೋಷಿಸುತ್ತೇನೆ. ಅದು ಪುಷ್ಟವಾಗಿ ನನ್ನನ್ನು ಸಂತೋಷಗೊಳಿಸಲಿ. ಶರದೃತುವನ್ನು ತುಷ್ಟಿಗೊಳಿಸುತ್ತೇನೆ. ಅದು ತುಷ್ಟವಾಗಿ ನನ್ನನ್ನು ತೃಪ್ತಿಗೊಳಿಸಲಿ. ಹೇಮಂತ-ಶಿಶಿರಋತುಗಳನ್ನು ತೃಪ್ತಿಗೊಳಿಸುತ್ತೇನೆ. ಅದು ತುಷ್ಟವಾಗಿ ನನ್ನನ್ನು ತೃಪ್ತಿಗೊಳಿಸಲಿ ಎಂದು ಋತುಗಳ ಸಂಖ್ಯಾನಿರ್ದೇಶವಿದೆ. ಅವುಗಳು ಐದು ಎಂದು ನಿರ್ದಿಷ್ಟವಾಗಿ ತಿಳಿಸಿದೆ. ಇದನ್ನೇ ಸಮರ್ಥಿಸುತ್ತಾ, "**ಪಂಚೋಪದಧಾತಿ । ಪಂಚ ವಾ ಋತವಃ**" ಎಂದು ಐದರ ನಿರ್ದಿಷ್ಟವಾದ ಗಣನೆಯಿದೆ. ಇದರಂತೆಯೇ "**ಗ್ರೀಷ್ಮೋ ಹೇಮಂತ ಉತ ನೋ ವಸಂತಶ್ಶರದ್ವರ್ಷಾಸ್ಸುವಿತಂ ನೋ ಅಸ್ತು**" ಇತ್ಯಾದಿಯಾಗಿ ಶಿಶಿರರಹಿತವಾದ ಐದು ಋತುಗಳು ಅನೇಕಕಡೆಗಳಲ್ಲಿ ಹೇಳಲ್ಪಟ್ಟಿವೆ. ಈ ಸಂಖ್ಯೆಯು "**ಪಂಚಾರೇ ಚಕ್ರೇ**" ಎಂಬ ಋಕ್ಸಂಹಿತಾವಾಕ್ಯದ ಸಂಖ್ಯೆಗನುಗುಣವಾಗಿದೆ.

ತೈತ್ತಿರೀಯಬ್ರಾಹ್ಮಣದಲ್ಲಿ ಆದಿತ್ಯನ ಸ್ವರೂಪವರ್ಣನವನ್ನು ಮಾಡುವಾಗ ಋತುಗಳನ್ನು ಆದಿತ್ಯನ ಅವಯವಗಳೆಂದು ಈ ರೀತಿ ತಿಳಿಸಿದೆ.

"**ಸಂವಥ್ಸರೋಽಸಿ ಪರಿವಥ್ಸರೋಽಸಿ । ಇದಾವತ್ಸರೋಽಸಿ ದುವತ್ಸರೋಽಸಿ । ಇದ್ವತ್ಸರೋಽಸಿ ವತ್ಸರೋಽಸಿ ತಸ್ಯ ತೇ ವಸಂತಶ್ಶಿರಃ । ಗ್ರೀಷ್ಮೋ ದಕ್ಷಿಣಃ ಪಕ್ಷಃ । ವರ್ಷಾಃ ಪುಚ್ಛಂ । ಶರದುತ್ತರಃ ಪಕ್ಷಃ । ಹೇಮಂತೋ ಮಧ್ಯಂ ।**

(ತೈ. ಬ್ರಾ. ೩-೧೦-೪-೧)

ಈ ಆದಿತ್ಯನಿಗೆ ಗ್ರೀಷ್ಮಋತುವು ದಕ್ಷಿಣಪಕ್ಷವು. ವರ್ಷರ್ತುವು ಪುಚ್ಛವು. ಶರದೃತುವು ಉತ್ತರಪಕ್ಷವು. ಹೇಮಂತವು ಮಧ್ಯಮು. ವಸಂತವು ಎಲ್ಲಕ್ಕಿಂತಲೂ ಪ್ರಧಾನವಾದ ಶಿರಸ್ಸು ಎಂದು ಭೌತಿಕವೂ ಆಧ್ಯಾತ್ಮಿಕವೂ ಆದ ವರ್ಣನೆಯಿದೆ. ಇಲ್ಲೂ ಸಹ ಶಿಶಿರವು ಹೇಮಂತದೊಂದಿಗೆ ಅಂತರ್ಗತವಾಗಿದೆ.

ಆದರೆ ಶತಪಥಬ್ರಾಹ್ಮಣದಲ್ಲಿ ಇನ್ನೊಂದು ರೀತಿಯ ವ್ಯತ್ಯಾಸವಿದೆ. ಇಲ್ಲಿ ಯಜ್ಞಾತ್ಮನ ಸ್ವರೂಪವರ್ಣನವು ಋತುರೂಪವಾದ ಅವಯವಗಳಿಂದ ಕೂಡಿದುದಾಗಿದೆ. ಇತರ ಕಡೆಗಳಲ್ಲಿ ಹೇಮಂತ ಮತ್ತು ಶಿಶಿರ ಋತುಗಳನ್ನು ಸೇರಿಸಿರುವ ಬದಲು ಇಲ್ಲಿ "**ವರ್ಷಾಶರದಾವೃತೂ**" ಎಂದು ವರ್ಷಋತು ಮತ್ತು ಶರದೃತುಗಳನ್ನು ಒಟ್ಟಿಗೆ ಸೇರಿಸಿದೆ. ಹೇಮಂತ ಮತ್ತು ಶಿಶಿರಗಳನ್ನು ವಿಭಾಗಮಾಡಿ ಆರು ಋತುಗಳ ಹೆಸರನ್ನೂ ಒಟ್ಟಿಗೆ ಹೇಳಿರುವುದೂ ಉಂಟು. **ಷಡ್ಭಿಃ ಪಚತಿ । ಷಡ್ವಾ ಋತವಃ । ಋತುಭಿರೇವೈನಾಂ ಪಚತಿ** (ತೈ. ಸಂ. ೫-೧-೭-೨) ಇತ್ಯಾದಿಯಾಗಿ ಆರು ಎಂಬುದು ಸ್ಪಷ್ಟವಾಗಿ ಉಕ್ತವಾಗಿದೆ.

CC-0. Jangamwadi Math Collection. Digitized by eGangotri

ಹೀಗೆ ಆರು ವಿಭಾಗ ಮಾಡಿರುವಾಗ ಮೊದಲು ಮೂರು ಋತುಗಳು ಸಂವತ್ಸರದ ಒಂದು ಶಕ್ತಿಯನ್ನೂ, ಇನ್ನು ಮೂರು ಋತುಗಳು ಇನ್ನೊಂದು ಶಕ್ತಿಯನ್ನೂ ತೋರಿಸುವುವು ಎಂದು ಪ್ರಕೃತವಾದ ಋಕ್ಕಿನ ವರ್ಣನವಿದೆ. ಅವುಗಳಲ್ಲಿ,

**ಗ್ರೀಷ್ಮ, ವರ್ಷ ಮತ್ತು ಹೇಮಂತ—ಇವು ತ್ರಿಪಾಜಸ್ಯವೆಂದೂ,**
**ವಸಂತ, ಶರತ್, ಮತ್ತು ಹೇಮಂತ—ಇವು ತ್ರ್ಯೃಥವೆಂದೂ ವರ್ಣಿತವಾಗಿವೆ-**

ಈ ಋತುಗಳಲ್ಲಿ ತೇಜಸ್ಸು, ಶಕ್ತಿ ಈ ಎರಡುಗುಣಗಳೂ ಮೊದಲು ಮೂರಕ್ಕೆ ಸಂಬಂಧಿಸಿದುದೆಂದೂ, ಸಂಪತ್ಪ್ರದಾಯಕತ್ವವು ಎರಡನೆಯ ಗುಂಪಿನ ಮೂರಕ್ಕೆ ಸಂಬಂಧಿಸಿದವೆಂದೂ ಹೇಳಿದಂತಾಯಿತು. ಆದರೆ ಋತುಗಳ ಶಕ್ತಿಯು ಒಂದೊಂದು ಕಡೆ ಒಂದೊಂದು ವಿಧವಾಗಿ ಪರಿಗಣಿತವಾಗಿದೆ. ಉದಾಹರಣೆಗೆ—ಸಕಲಜಯಕ್ಕೂ ಮೂಲವಾದ ಪ್ರಯಾಜ ಯಾಗವೇ ಋತುತತ್ತ್ವದ ಸಾರವೆಂದು ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿದೆ. ಪ್ರಯಾಜಯಾಗದಲ್ಲಿ **ಸಮಿಥ್, ತನೂನಪಾತ್, ಇಡ, ಬರ್ಹಿ, ಸ್ವಾಹಾ** ಈ ಐದೂ ಪ್ರಧಾನತತ್ತ್ವಗಳು. ಈ ಐದೂ ಐದು ಋತುಗಳಿಗೂ ಕ್ರಮವಾಗಿ ತಮ್ಮ ಪ್ರಭಾವವನ್ನು ಬೀರುತ್ತವೆ. ಮತ್ತು ಆಯಾ ಪ್ರಭಾವಕ್ಕನುಗುಣವಾಗಿ ಐದು ಋತುಗಳೂ ಯಜಮಾನನಿಗೆ ಫಲಪ್ರದಾಯಕವಾಗುತ್ತವೆ ಅದನ್ನೇ ಪ್ರಕೃತವಾದ ಋಕ್ಕಿನಲ್ಲಿ ರೇತೋಧಾಃ ಎಂದು ವರ್ಣಿಸಿದೆ.

**ಋತವೋ ಹ ವೈ ಪ್ರಯಾಜಾಃ । ತಸ್ಮಾತ್ಪಂಚ ಭವಂತಿ ಪಂಚ ಹ್ಯೃತವಃ । ದೇವಾಶ್ಚ ವಾ ಅಸುರಾಶ್ಚ । ಉಭಯೇ ಪ್ರಾಜಾಪತ್ಯಾಃ ಪಸ್ಪೃಧಿರ ಏತಸ್ಮಿನ್ ಯಜ್ಞೇ ಪ್ರಜಾಪತೌ ಪಿತರಿ ಸಂವತ್ಸರೇಽಸ್ಮಾಕಮಯಂ ಭವಿಷ್ಯತ್ಯಸ್ಮಾಕಮಯಂ ಭವಿಷ್ಯತೀತಿ ।**

(ಶ. ಬ್ರಾ. ೧-೫-೩-೧, ೨)

ಸಂವತ್ಸರವೇ ಪ್ರಜಾಪತಿತತ್ತ್ವವು. ಪ್ರಜಾಪತಿಯಿಂದ ಸೃಷ್ಟರಾದ ದೇವತೆಗಳೂ ಅಸುರರೂ ಸಹ ತಮ್ಮ ಪಿತೃವೂ, ಸಂವತ್ಸರರೂಪಿಯೂ ಆದ ಪ್ರಜಾಪತಿಯ ವಿಷಯವಲ್ಲಿ ವಿಚಿಕಿತ್ಸೆಯನ್ನು ಹೊಂದಿ ಕಲಹಮಾಡಿದರು. ತಮಗೆ ಸೇರಿದುದೆಂದು ದೇವತೆಗಳೂ, ತಮಗೆ ಸೇರಿದುದೆಂದು ಅಸುರರೂ ಹಟಮಾಡಿದರು.

**ತತೋ ದೇವಾಃ । ಅರ್ಚಂತಃ ಶ್ರಾಮ್ಯಂತಶ್ಚೇರುಸ್ತ ಏತಾನ್ ಪ್ರಯಾಜಾನ್ ದದೃಶುಸ್ತೈರಯ-ಜಂತ ತೈರ್‍ಋತೂನ್ ಸಂವತ್ಸರಂ ಪ್ರಾಜಯನ್ನೃತುಭ್ಯಃ ಸಂವತ್ಸರಾತ್ಸಪತ್ನಾನ್ .... .... .... ತಸ್ಮಾತ್ಸಂವತ್ಸರಾತ್ಸಪತ್ನಾನಂತರೇತಿ ॥**

(ಶ. ಬ್ರಾ. ೧-೫-೩-೩)

ಅನಂತರ ದೇವತೆಗಳು ಪೂಜಿಸುತ್ತಲೂ, ತಪಸ್ಸನ್ನಾಚರಿಸುತ್ತಲೂ ಸಂವತ್ಸರಾಭಿಮಾನದೇವತೆಯನ್ನಾರಾಧಿಸಿದರು. ಆಗ ಪ್ರಯಾಜವನ್ನು ಸಾಕ್ಷಾತ್ಕರಿಸಿ ಅದರ ಸಹಾಯದಿಂದ ಆರಾಧಿಸಿದರು. ಅನಂತರ ಅವರು ಋತುಗಳನ್ನು ಸಂವತ್ಸರವನ್ನೂ ಒಲಿಸಿಕೊಂಡರು.

**ಸ ಆಶ್ರಾವ್ಯಾಹ । ಸಮಿಧೋ ಯಜೇತಿ ತದ್ವಸಂತಗ್ಂ ಸಮಿಂಧೇ । ಸ ವಸಂತಃ ಸಮಿದ್ಧೋಽ-ನ್ಯಾನೃತೂನ್ ಸಮಿಂಧ ಋತವಃ ಸಮಿದ್ಧಾಃ ಪ್ರಜಾಶ್ಚ ಪ್ರಜನಯಂತ್ಯೋಷಧೀಶ್ಚ ಪಚಂತಿ ।**

(ಶ. ಬ್ರಾ. ೧-೫-೩-೮)

CC-0. Jangamwadi Math Collection. Digitized by eGangotri

ಆಗ ಅಧ್ವರ್ಯುವು "ಸಮಿತ್ತುಗಳನ್ನುದ್ದೇಶಿಸಿ ಯಾಜ್ಯಮಂತ್ರವನ್ನು ಪಠಿಸು" ಎಂದು ಹೋತೃವಿಗೆ ಹೇಳುತ್ತಾನೆ. ಅನಂತರ ವಸಂತವು ಪ್ರಜ್ವಲಿತವಾಗುತ್ತದೆ. ಪ್ರಜ್ವಲಿತವಾದ ವಸಂತವು ಇತರ ಋತುಗಳಿಗೂ ಜನಕವಾಗುತ್ತದೆ. ಸಮಿದ್ಧವಾದ ಇತರ ಸಕಲ ಋತುಗಳೂ ಪ್ರಜೋತ್ಪತ್ತಿಗೆ ಕಾರಣವಾಗಿ ಓಷಧಿಗಳು ಫಲಪ್ರದಾಯಕವಾಗುವಂತೆ ಮಾಡುತ್ತವೆ.

**ಸ ವೈ ಸಮಿಧೋ ಯಜತಿ । ವಸಂತೋ ವೈ ಸಮಿದ್ವಸಂತಮೇವ ತದ್ದೇವಾ ಅವೃಂಜತ ವಸಂತಾ-ತ್ಸಪತ್ನಾನಂತರಾಯನ್ .... .... .... ವಸಂತಾತ್ಸಪತ್ನಾನಂತರೇತಿ ।**

(ಶ. ಬ್ರಾ. ೧-೫-೩-೯)

ಅನಂತರ ಸಮಿತ್ತುಗಳನ್ನುದ್ದೇಶಿಸಿ ಯಾಜ್ಯಮಂತ್ರವನ್ನು ಪಠಿಸುತ್ತಾನೆ ಈ ಸಮಿತ್ತಿಗೆ ಅಭಿಮಾನದೇವತೆಯೇ ವಸಂತವು. ದೇವತೆಗಳು ಈ ಸಂದರ್ಭದಲ್ಲಿ ವಸಂತವನ್ನು ಒಲಿಸಿಕೊಂಡು ವಸಂತದ ಶತ್ರುಗಳನ್ನು ನಾಶಮಾಡಿದರು. ಆದುದರಿಂದ ವಸಂತವು ಜಯಸಾಧಕವು.

**ಅಥ ತನೂನಪಾತಂ ಯಜತಿ । ಗ್ರೀಷ್ಮೋ ವೈ ತನೂನಪಾತ್ ಗ್ರೀಷ್ಮೋ ಹ್ಯಾಸಾಂ ಪ್ರಜಾನಾಂ ತನೂಸ್ತಪತಿ ಗ್ರೀಷ್ಮಮೇವ ತದ್ದೇವಾ ಅವೃಂಜತ ಗ್ರೀಷ್ಮಾತ್ಸಪತ್ನಾನಂತರಾಯನ್ ॥**

(ಶ. ಬ್ರಾ. ೧-೫-೩-೧೦)

ಅನಂತರ ತನೂನಪಾದ್ದೇವತೆಯನ್ನುದ್ದೇಶಿಸಿ ಯಾಜ್ಯಮಂತ್ರವನ್ನು ಪಠಿಸುತ್ತಾನೆ. ಶತ್ರುಗಳನ್ನು ದಹಿಸುವ ಗ್ರೀಷ್ಮವನ್ನು ದೇವತೆಗಳು ಈ ಮಂತ್ರದಿಂದಲೂ ಪೂಜೆಯಿಂದಲೂ ಒಲಿಸಿಕೊಂಡರು ಮತ್ತು ಶತ್ರುಗಳಿಗೆ ಗ್ರೀಷ್ಮದ ಫಲವು ದೊರಕದಂತೆ ಮಾಡಿದರು

**ಅಥೇಡೋ ಯಜತಿ । ವರ್ಷಾ ವಾ ಇಡ ಇತಿ ಹಿ ವರ್ಷಾ ಇಡೋ ಯದಿದಂ ಕ್ಷುದ್ರಗ್ಂ-ಸರೀಸೃಪಂ ಗ್ರೀಷ್ಮಹೇಮಂತಾಭ್ಯಾಂ ನಿತ್ಯಕ್ತಂ ಭವತಿ ತದ್ವರ್ಷಾ ಈಡಿತಮಿವಾನ್ನಮಿಚ್ಛ-ಮಾನಂ ಚರತಿ....॥**

(ಶ. ಬ್ರಾ. ೧-೫-೩-೧೧)

ನಂತರ ಇಡವನ್ನುದ್ದೇಶಿಸಿ ಯಾಜ್ಯಮಂತ್ರವನ್ನು ಪಠಿಸುವ ಕಾಲದಲ್ಲಿ ದೇವತೆಗಳು ವರ್ಷಾಕಾಲವನ್ನು ಒಲಿಸಿಕೊಂಡರು ಗ್ರೀಷ್ಮಕಾಲದಲ್ಲೂ ಹೇಮಂತಋತುವಿನಲ್ಲೂ ತೊಂದರೆಗೀಡಾದ ಪ್ರಾಣಿಗಳು ಈ ಋತುವಿನಲ್ಲಿ ಪುನಃ ಚೈತನ್ಯವನ್ನು ಪಡೆಯುತ್ತವೆ. ಮತ್ತು ವೃಷ್ಟಿಯನ್ನು ಸೂಚಿಸುತ್ತವೆ.

ಹೀಗೆಯೇ ಬರ್ಹಿಯನ್ನುದ್ದೇಶಿಸಿ ಮಂತ್ರವನ್ನು ಪಠಿಸಿದಾಗ ಶರದಭಿಮಾನಿದೇವತೆಯನ್ನು ಒಲಿಸಿಕೊಂಡರು. ಗ್ರೀಷ್ಮ ಮತ್ತು ಹೇಮಂತದಲ್ಲಿ ಹತವಾದ ಸಕಲ ಓಷಧಿಗಳೂ ಈ ಋತುವಿನಲ್ಲಿ ಚೈತನ್ಯವನ್ನು ಪಡೆಯುವುವು. ಸ್ವಾಹಾದೇವತೆಯನ್ನುದ್ದೇಶಿಸಿ ಪಠಿಸಿದಾಗ ವರ್ಷಾಂತವಾದ ಹೇಮಂತಋತುವನ್ನು ಸಾಕ್ಷಾತ್ಕರಿಸಿಕೊಂಡರು. ವರ್ಷದ ಚರಮಪ್ರಯೋಜನವು ಅಸುರರಿಗೆ ಸಿಲುಕದಂತೆ ಮಾಡಿದರು. ದೇವತೆಗಳ ಇಷ್ಟಾರ್ಥವನ್ನು ಸಾಧಿಸಿದ ಈ ಋತುಗಳು ಮಾನವನಿಗೂ ಇಷ್ಟಾರ್ಥಪ್ರದವಾಗಿರುತ್ತವೆ. ಇದೇ ಅಂಶವನ್ನು ತೈತ್ತಿರೀಯಸಂಹಿತೆಯಲ್ಲಿ, "ಸಮಿಧೋ ಯಜತಿ ವಸಂತಮೇವ ಋತೂನಾಮವರುಂಧೇ" ಇತ್ಯಾದಿ ವಾಕ್ಯಗಳಿಂದ ಪಠಿಸಿದೆ.

**ಸಮಿಧೋ ಯಜತಿ ವಸಂತಮೇವರ್ತೂನಾಮವರುಂಧೇ ತನೂನಪಾತಂ ಯಜತಿ ಗ್ರೀಷ್ಮಮೇವಾ-ವರುಂಧ ಇಡೋ ಯಜತಿ ವರ್ಷಾ ಏವಾವರುಂಧೇ ಬರ್ಹಿರ್ಯಜತಿ ಶರದಮೇವಾವರುಂಧೇ**

CC-0. Jangamwadi Math Collection. Digitized by eGangotri

ಸ್ವಾಹಾಕಾರಂ ಯಜತಿ ಹೇಮಂತಮೇವಾವರುಂಧೇ ತಸ್ಮಾತ್ಸ್ವಾಹಾಕೃತಾ ಹೇಮನ್ ಪಶವೋऽವ ಸೀದಂತಿ ಸಮಿಧೋ ಯಜತ್ಯುಷಸ ಏವ ದೇವತಾನಾಮುವರುಂಧೇ ತನೂನಪಾತಂ ಯಜತಿ ಯಜ್ಞಮೇವಾವರುಂಧೇ ಇಡೋ ಯಜತಿ ಪಶೂನೇವಾವರುಂಧೇ ಬರ್ಹಿರ್ಯಜತಿ ಪ್ರಜಾಮೇವಾವರುಂಧ ಸಮಾನಯತ ಉಪಭೃತಸ್ತೇಜೋ ವಾ ಆಜ್ಯಂ ಪ್ರಜಾ ಬರ್ಹಿಃ ಪ್ರಜಾಸ್ವೇವ ತೇಜೋ ದಧಾತಿ ಸ್ವಾಹಾಕಾರಂ ಯಜತಿ ವಾಚಮೇವಾವರುಂಧೇ ॥

(ತೈ. ಸಂ. ೨-೬-೧-೧,೨)

ಇದಲ್ಲದೇ ಋತುಗಳು ವರ್ಣಾಶ್ರಮಧರ್ಮಗಳನ್ನೂ ಸೂಚಿಸುವ ಸ್ವರೂಪಶಕ್ತಿಗಳನ್ನು ಹೊಂದಿವೆ.

"ಬ್ರಹ್ಮೈವ ವಸಂತಃ । ಕ್ಷತ್ರಂ ಗ್ರೀಷ್ಮೋ ವಿಡೇವ ವರ್ಷಾಸ್ತಸ್ಮಾದ್ಬ್ರಾಹ್ಮಣೋ ವಸಂತ ಆದಧೀತ ಬ್ರಹ್ಮ ಹಿ ವಸಂತಸ್ತಸ್ಮಾತ್ ಕ್ಷತ್ರಿಯೋ ಗ್ರೀಷ್ಮ ಆದಧೀತ ಕ್ಷತ್ರಗ್ಂ ಹಿ ಗ್ರೀಷ್ಮಸ್ತಸ್ಮಾದ್ವೈಶ್ಯೋ ವರ್ಷಾಸ್ವಾದಧೀತ ವಿಡ್ಢಿ ವರ್ಷಾಃ"

(ಶ. ಬ್ರಾ- ೨-೧-೩-೫)

ವಸಂತವೇ ಬ್ರಹ್ಮಸ್ವರೂಪವುಳ್ಳದ್ದು. ಆದುದರಿಂದ ಬ್ರಾಹ್ಮಣನು ವಸಂತದಲ್ಲಿ ಅಗ್ನಿಪ್ರತಿಷ್ಠಾಪನವನ್ನು ಮಾಡಬೇಕು. ಗ್ರೀಷ್ಮವು ಕ್ಷಾತ್ರಸ್ವರೂಪವುಳ್ಳದ್ದು. ಆದುದರಿಂದ ಕ್ಷತ್ರಿಯನು ಗ್ರೀಷ್ಮಋತುವಿನಲ್ಲಿಯೂ, ವರ್ಷರ್ತುವು ವೈಶ್ಯಸ್ವರೂಪವುಳ್ಳದ್ದರಿಂದ ವೈಶ್ಯನು ವರ್ಷರ್ತುವಿನಲ್ಲಿಯೂ ನೆರವೇರಿಸತಕ್ಕದ್ದು

ವಸಂತಾ ಬ್ರಾಹ್ಮಣೋऽಗ್ನಿಮಾದಧೀತ । ವಸಂತೋ ವೈಬ್ರಾಹ್ಮಣಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಬ್ರಹ್ಮವರ್ಚಸೀ ಭವತಿ । ಮುಖಂ ವಾ ಏತದೃತೂನಾಂ । ಯದ್ವಸಂತಃ । ಯೋ ವಸಂತಾಗ್ನಿಮಾಧತ್ತೇ । ಮುಖ್ಯ ಏವ ಭವತಿ । ಗ್ರೀಷ್ಮೋ ವೈ ರಾಜನ್ಯಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಇಂದ್ರಿಯಾವೀ ಭವತಿ । ಶರದಿ ವೈಶ್ಯ ಆದಧೀತ । ಶರದ್ವೈ ವೈಶ್ಯಸ್ಯರ್ತುಃ । ಸ್ವ ಏವೈನಮೃತಾವಾಧಾಯ । ಪಶುಮಾನ್ ಭವತಿ ।

(ತೈ ಬ್ರಾ. ೧-೧-೨-೬,೭)

ಬ್ರಾಹ್ಮಣನಾದವನು ವಸಂತಋತುವಿನಲ್ಲಿ ಯಜ್ಞವನ್ನು ಮಾಡಬೇಕು. ಏಕೆಂದರೆ ವಸಂತವೇ ಬ್ರಾಹ್ಮಣನಿಗೆ ಸ್ವಂತ ಋತುವು. ತನ್ನ ಸ್ವಂತ ಋತುವಿನಲ್ಲಿ ಯಜ್ಞಮಾಡಿದರೆ ಬ್ರಹ್ಮವರ್ಚಸ್ಸುಳ್ಳವನಾಗುವನು. ಈ ವಸಂತ ಋತುವೇ ಋತುಗಳಲ್ಲೆಲ್ಲಾ ಮೊದಲನೆಯದು (ಅಥವಾ ಮುಖ್ಯವಾದದ್ದು) ಆದುದರಿಂದ ಋತುಗಳಲ್ಲೆಲ್ಲಾ ಮುಖ್ಯವಾದ ಋತುವಿನಲ್ಲಿ ಯಜ್ಞಮಾಡುವವನು ಮನುಷ್ಯರಲ್ಲಿ ಗಣ್ಯನಾಗಿ ಗೌರವಿಸಲ್ಪಡುವನು. ಗ್ರೀಷ್ಮಋತುವಿನಲ್ಲಿ ಕ್ಷತ್ರಿಯನು ಯಜ್ಞಮಾಡಬೇಕು. ಏಕೆಂದರೆ ಗ್ರೀಷ್ಮವು ಕ್ಷತ್ರಿಯನ ಸ್ವಂತ ಋತುವು. ತನ್ನ ಸ್ವಂತಋತುವಿನಲ್ಲಿ ಯಜ್ಞಮಾಡುವ ಕ್ಷತ್ರಿಯನು ಪರಾಕ್ರಮಶಾಲಿಯಾಗುವನು. ಶರದೃತುವಿನಲ್ಲಿ ವೈಶ್ಯನು ಯಜ್ಞಮಾಡಬೇಕು. ಏಕೆಂದರೆ ಶರದೃತುವು ವೈಶ್ಯನ ಸ್ವಂತಋತುವು. ತನ್ನ ಸ್ವಂತಋತುವಿನಲ್ಲಿ ಯಜ್ಞಮಾಡುವ ವೈಶ್ಯನು ಪಶುಮೊದಲಾದ ಸಂಪತ್ತುಳ್ಳವನಾಗುವನು ಎಂದು ಬ್ರಹ್ಮಕ್ಷತ್ರಿಯವೈಶ್ಯರುಗಳಿಗೆ ನಿರ್ದೇಶಿಸಿರುವ ಋತುನಿಯಮವು ಇಲ್ಲಿ ಉಕ್ತವಾಗಿದೆ. ಈ ಸ್ವಭಾವವರ್ಣನವು ಪ್ರಕೃತವಾದ ಋಕ್ಕಿನಲ್ಲಿ ತ್ರ್ಯನೀಕಃ ಮೂರು ಗುಣವುಳ್ಳದ್ದು ಎಂಬ ವರ್ಣನೆಗೆ ಅನುರೂಪವಾಗಿರುತ್ತದೆ.

CC-0. Jangamwadi Math Collection. Digitized by eGangotri

ಇದಲ್ಲದೇ, ತ್ರ್ಯೃಥಾ, ತ್ರಿಷಾಜಸ್ಯಃ, ತ್ರ್ಯನೀಕಃ ಇತ್ಯಾದಿ ವಿಶೇಷಣಗಳಿಂದ ಮೂರು ಮೂರು ಸ್ವಭಾವಗಳನ್ನು ವರ್ಣಿಸಿರುವುದು ಸಂವತ್ಸರದ ಅವಯವಗಳಾದ ಋತುಗಳ ತ್ರಿಲೋಕದ ಪ್ರಾತಿನಿಧ್ಯವನ್ನೂ ತೋರಿಸುವುದೆಂದು ಹೇಳಬಹುದು.

> ಸಂವತ್ಸರ ಏಷೋಽಗ್ನಿರಿಮ ಉ ಲೋಕಾಃ ಸಂವತ್ಸರಃ ತಸ್ಯ ಯದೂರ್ಧ್ವಂ ಪೃಥಿವ್ಯಾ ಅರ್ವಾಚೀನಮಂತರಿಕ್ಷಾತ್ತದಸ್ಯೈಷಾ ದ್ವಿತೀಯಾ ಚಿತಿಸ್ತದ್ವಸ್ಯ ಗ್ರೀಷ್ಮ ಋತುಃ ||
>
> (ಶ. ಬ್ರಾ. ೮-೨-೧-೧೭)

ಈ ಸಂವತ್ಸರವು ಲೋಕತ್ರಯವನ್ನೂ ಪ್ರತಿಬಿಂಬಿಸುತ್ತದೆ. ಇದರ ಅವಯವಗಳಾದ ಋತುಗಳು ಆಯಾ ವೈಯಕ್ತಿಕ ಲೋಕಗಳ ಪ್ರತಿನಿಧಿಯಾಗಿರುತ್ತದೆ. ಪೃಥಿವಿಯ ಮೇಲೂ ಅಂತರಿಕ್ಷಕ್ಕಿಂತ ಕೆಳಭಾಗದಲ್ಲೂ ಇರುವ ಲೋಕವು ಗ್ರೀಷ್ಮ ಋತುರೂಪವುಳ್ಳದ್ದು. (ಇದರಲ್ಲಿ ವಸಂತವೂ ಅಂತರ್ಗತವಾಗಿದೆ. ಪ್ರಥಮದ ಋತುದ್ವಯವು ಪ್ರಥಮ ಲೋಕವನ್ನು ಪ್ರತಿಬಿಂಬಿಸುವುದೆಂದು ತಾತ್ಪರ್ಯ).

> ಸಂವತ್ಸರ ಏಷೋಽಗ್ನಿಂರಿಮ ಉ ಲೋಕಾಃ ಸಂವತ್ಸರಸ್ತಸ್ಯಾಂತರಿಕ್ಷಮೇವ ಮಧ್ಯಮಾ ಚಿತಿರಂತರಿಕ್ಷಮಸ್ಯ ವರ್ಷಾ ಶರದಾವೃತೂ ತದ್ಯದೇತಾ ಅತ್ರೋಽಪದಧಾತಿ |
>
> (ಶ ಬ್ರಾ. ೮-೩-೨-೭)

ಸಂವತ್ಸರದಲ್ಲೇ ಈ ಮೂರು ಲೋಕಗಳ ತತ್ತ್ವವೂ ಅಡಗಿದೆ. ದ್ವಿತೀಯಾಗ್ನಿಚಿತಿಯು ಈ ಲೋಕಗಳಲ್ಲಿ ಮಧ್ಯಮವಾದ ಅಂತರಿಕ್ಷವನ್ನು ಪ್ರತಿಬಿಂಬಿಸುತ್ತದೆ. ಸಂವತ್ಸರದ ಮಧ್ಯಮಾವಯವವಾದ ವರ್ಷರ್ತು ಮತ್ತು ಶರದೃತು ಇವೆರಡೂ ಈ ಅಂತರಿಕ್ಷದ ಪ್ರತಿನಿಧಿಗಳಾಗಿವೆ. ಎಂದರೆ ಆ ಸ್ವರೂಪವನ್ನು ಹೊಂದಿರುವುವು ಎಂದರ್ಥ.

> ಯದೂರ್ಧ್ವಮಂತರಿಕ್ಷಾತ್ ಅರ್ವಾಚೀನಂ ದಿವಃ ತದಸ್ಯೈಷಾ ಚತುರ್ಥೀ ಚಿತಿಸ್ತದ್ವಸ್ಯ ಹೇಮಂತ ಋತುಃ ||
>
> (ಶ. ಬ್ರಾ. ೮-೪-೨-೧೫)

ಅಂತರಿಕ್ಷಕ್ಕಿಂತಲೂ ಊರ್ಧ್ವಭಾಗವುಳ್ಳದ್ದೂ ದ್ಯುಲೋಕದ ಪಾರ್ಶ್ವವೂ ಆದ ಲೋಕದ ಪ್ರತಿನಿಧಿಯು ಹೇಮಂತ ಋತುವು. ಈ ರೀತಿಯಾಗಿ ಸಂವತ್ಸರದ ಅವಯವಗಳು ಲೋಕತ್ರಯದ ಅವಯವಗಳನ್ನು ಪ್ರತಿಬಿಂಬಿಸುತ್ತವೆ. ಒಂದೇ ಆದ ಅಗ್ನಿತತ್ತ್ವವು ವಾಯ್ವಾದಿತ್ಯರೂಪದಿಂದಲೂ ಸಹ ಮೂರುಲೋಕಗಳನ್ನೂ ವ್ಯಾಪಿಸಿರುವುದರಿಂದ ಈ ಅಗ್ನಿಯೇ ವಿಶ್ವವ್ಯಾಪಿಯಾದ ಈಶ್ವರನು.

> ಪ್ರಜಾಪತಿರೇಷೋಽಗ್ನಿಃ ಸಂವತ್ಸರ ಉ ಪ್ರಜಾಪತಿಸ್ತಸ್ಯ ಯದೂರ್ಧ್ವಂ .... .... |
>
> (ಶ. ಬ್ರಾ. ೮-೪-೨-೧೬)

ಈ ಅಗ್ನಿಯೇ ವಿಶ್ವವ್ಯಾಪಕನಾದವನೂ ವಿಶ್ವಸೃಷ್ಟಿಗೆ ಕಾರಣನೂ ಆದ ಪ್ರಜಾಪತಿಯು. ಈ ಪ್ರಜಾಪತಿಯೇ ಮೂರು ಲೋಕಗಳು. ಈ ಲೋಕಗಳೇ ವಿಶ್ವವ್ಯಾಪಿಯಾದ ಸಂವತ್ಸರವು. ಈ ಸಂವತ್ಸರದ ಅವಯವಗಳಾದ ಋತುಗಳೇ ಪ್ರಜಾಪತಿಯ ಅವಯವಗಳನ್ನೂ ಪ್ರತಿಬಿಂಬಿಸುತ್ತವೆ. ಇತ್ಯಾದಿಯಾಗಿ ತ್ರಿಗುಣಾತ್ಮಕವಾದ (ತ್ರ್ಯನೀಕ) ಸಂವತ್ಸರ ತತ್ತ್ವದ ಮಾಹಾತ್ಮ್ಯವನ್ನು ತಿಳಿಸುತ್ತವೆ.

CC-0. Jangamwadi Math Collection. Digitized by eGangotri

ಋಷಭೋ ವಾ ಏಷ ಋತೂನಾಂ ಯತ್ಸಂವತ್ಸರಃ .... .... ಋಷಭ ಏಷ ಯಜ್ಞಾನಾಂ ।

(ಶ. ಬ್ರಾ. ೧೩-೧-೨-೨)

ಅತ್ಯುತ್ತಮವಾದ ಫಲವನ್ನು ಕೊಡತಕ್ಕ ಅಶ್ವಮೇಧವು ಯಜ್ಞಗಳಲ್ಲೆಲ್ಲಾ ಯಾವ ರೀತಿ ಶ್ರೇಷ್ಠವೋ ಅದೇ ರೀತಿ ಋತುಗಳಿಗೆ ಋಷಭಪ್ರಾಯವಾದ ಸಂವತ್ಸರವು ಎಂಬ ವರ್ಣನವು ಪ್ರಕೃತವಾದ ಋಕ್ಕಿನಲ್ಲಿ ವೃಷಭಃ ಎಂಬ ವಿಶೇಷಣದ ತಾತ್ಪರ್ಯವನ್ನು ತಿಳಿಸುತ್ತದೆ.

ರೇತೋಧಾಃ-ಈ ವಿಶೇಷಣವು ಆದಿತ್ಯಪರ್ಯಾಯವಾಗಿಯೂ ಸಂವತ್ಸರಪರ್ಯಾಯವಾಗಿಯೂ ಇರಬಹುದು. ಆದಿತ್ಯರಶ್ಮಿಗಳು ರೇತಶ್ಶಬ್ದದಿಂದ ವರ್ಣಿತವಾಗಿರುವುದನ್ನು ಹಿಂದೆ ತಿಳಿಸಿದೆ. ರೇತಃ ಎಂಬುದಕ್ಕೆ ಜಗದುತ್ಪಾದಕವಾದ ವೀರ್ಯವೆಂದಾಗಲಿ ಅಥವಾ ಭೂತಗಳ ಉತ್ಪತ್ತಿಗೂ ರಕ್ಷಣೆಗೂ ಹೇತುವಾದ ಉದಕವೆಂದಾಗಲಿ ಅರ್ಥವಾಗುತ್ತದೆ. ಮತ್ತು ಆಪೋ ವೈ ಸರ್ವೇ ದೇವಾ ಸರ್ವಾಣಿ ಭೂತಾನಿ (ಶ. ಬ್ರಾ. ೧೦-೫ ೪-೧೪) ಎಂಬ ವಾಕ್ಯವನ್ನು ವಿವರಿಸುವಾಗ ಸಾಯಣರು ಅರ್ಚಿಷೋ ಹ್ಯಾಪಸ್ಸೂರ್ಯಕಿರಣಾನಾಮೇವ ವೃಷ್ಟಿಕರ್ತೃಕತ್ವಾತ್ ಕಾರ್ಯಕಾರಣಯೋರಭೇದೇನ ಅರ್ಚಿರ್ವಾ ಆಪ ಇತ್ಯುಕ್ತಂ । ಸೂರ್ಯರಶ್ಮಿಗಳು ಉದಕಪ್ರವಾಹಗಳಿಗೆ ಹೇತುಗಳಾದುದರಿಂದ ರಶ್ಮಿಗಳನ್ನೇ ಪ್ರವಾಹಗಳೆಂದು ರೂಪಕಮಾಡಿ ತಿಳಿಸಿದೆಯೆಂದು ಹೇಳಿರುವುದರಿಂದ ಇಲ್ಲಿಯೂ ರೇತಶ್ಶಬ್ದಕ್ಕೆ ಆ ರೀತಿ ಅರ್ಥವನ್ನು ಹೇಳಬಹುದು. ಅಲ್ಲದೇ ಷಳಿದ್ಯಮಾ ಋಷಯೋ ದೇವಜಾ ಇತಿ (ಋ. ಸಂ. ೧-೧೬೪-೧೫) ಎಂಬ ವಾಕ್ಯವನ್ನು ವಿವರಿಸುವಾಗ ಷಡ್ರಶ್ಮಯಃ ಷಣ್ಣಾಂ ಋತೂನಾಂ ಪ್ರವರ್ತಕಾಃ । ಆದಿತ್ಯನ ಆರು ರಶ್ಮಿಗಳೂ ಆರು ಋತುಗಳಿಗೂ ಹೇತುಗಳಾಗಿವೆಯೆಂದು ಹೇಳಿರುವಾಗ ಆದಿತ್ಯರಶ್ಮಿಗಳು ಯಾವ ರೀತಿ ರೇತೋಧಾಃ ಎಂದು ವರ್ಣಿತವಾಗಿಯೋ ಆದೇ ರೀತಿ ಪ್ರಕೃತವಾದ ಋಕ್ಕಿನಲ್ಲಿಯೂ ಸಂವತ್ಸರಾವಯವಗಳು ರೇತೋಧಾಃ ಎಂದು ವರ್ಣಿತವಾಗಿವೆ.



ಸಂಹಿತಾಪಾಠಃ

ಅಭೀಕ ಆಸಾಂ ಪದವೀರಬೋಧ್ಯಾದಿತ್ಯಾನಾಮುಹ್ವೇ ಚಾರು ನಾಮ ।
ಆಪಶ್ಚಿದಸ್ಮಾ ಅರಮಂತ ದೇವೀಃ ಪೃಥಗ್ವ್ರಜಂತೀಃ ಪರಿ ಷೀಮವೃಂಜನ್ ॥ ೪ ॥

ಪದಪಾಠಃ

ಅಭೀಕೇ । ಆಸಾಂ । ಪದ್ಽವೀಃ । ಅಬೋಧಿ । ಆದಿತ್ಯಾನಾಂ । ಅಹ್ವೇ । ಚಾರು । ನಾಮ ।

ಆಪಃ । ಚಿತ್ । ಅಸ್ಮೈ । ಅರಮಂತ । ದೇವೀಃ । ಪೃಥಕ್ । ವ್ರಜಂತೀಃ । ಪರಿ । ಸೀಂ । ಅವೃಂಜನ್ ॥

ಸಾಯಣಭಾಷ್ಯಂ

ಸಂವತ್ಸರ ಆಸಾಮೋಷಧೀನಾಮಭೀಕೇ ಸಮೀಪೇ ಪದವೀಃ । ಪದಾನಿ ತತ್ತದ್ವನವಿಶಿಷ್ಟಪುಷ್ಪಫಲಾದೀನಿ ವೇತಿ ಪ್ರಜನಯತೀತಿ ಪದವೀಃ ಸನ್ ಅಬೋಧಿ । ಬುಧ್ಯತೇ । ಸಾವಧಾನೋ ವರ್ತತೇ ।

CC-0. Jangamwadi Math Collection. Digitized by eGangotri

ಕೆಥಾದಿತ್ಯಾನಾಂ। ಆದಿತ್ಯಾ ಮಾಸಾಃ ಸಂಖ್ಯಾಸಾಮ್ಯಾತ್। ಯದ್ವಾ। ಆದಿತ್ಯಸಂಕ್ರಮಣನಿಮಿತ್ತತ್ವಾ-ದಾದಿತ್ಯಾ ಮಾಸಾಃ। ಮೇಷಾದಿಸ್ಥೇ ಸವಿತರಿ ಯೋ ಯೋ ಮಾಸಃ ಪ್ರಪೂರ್ಯತೇ ಚಾಂದ್ರಶ್ಚೈತ್ರಾದ್ಯಃ ಸ ಜ್ಞೇಯ ಇತಿ ಸ್ಮೃತೇಃ। ತೇಷಾಂ ಚೈತ್ರಾದೀನಾಂ ಮಾಸಾನಾಂ ಚಾರು ನಾಮ ಮಧುಶ್ಚ ಮಾಧವಶ್ಚೇ-ತ್ಯಾದಿ ನಾಮಧೇಯಮಹ್ವೇ। ಆಹ್ವಯಾಮಿ। ಉಚ್ಚಾರಯಾಮೀತ್ಯರ್ಥಃ। ಕಿಂಚ ದೇವೀರ್ದ್ಯೋತನ-ಶೀಲಾಃ ಪೃಥಗಿತಸ್ತತೋ ವ್ರಜಂತೀರ್ಗಚ್ಛಂತ್ಯ ಆಪಶ್ಚಿತ್ ಅಪೋಽಪ್ಯಸ್ಮೈ ಸಂವತ್ಸರಾಯಾರಮಂತ। ಸಂವತ್ಸರಸಂಬಂಧಿಮಾಸಚತುಷ್ಟಯೇ ವೃಷ್ಟಿದ್ವಾರಾ ರಮಂತೇ। ತಾ ಆಪಃ ಸೀಮೇನಂ ಸಂವತ್ಸರಂ ಪರ್ಯವೃಂಜನ್। ಅಷ್ಟಸು ಮಾಸೇಷು ಪರಿವರ್ಜಯಂತಿ॥ ಪದವೀಃ। ವೀ ಗತ್ಯಾದಿಷು। ಕ್ವಿಪ್। ಅಬೋಧಿ। ಬುಧ ಅವಗಮನ ಇತ್ಯಸ್ಯ ಲುಙಿ ದೀಪಜನಬುಧಪೂರಿತಾಯಿಪ್ಯಾಯಿಭ್ಯೋಽನ್ಯತರಸ್ಯಾ-ಮಿತಿ ಕರ್ತರಿ ಚಿಣೋ ಲುಕ್। ನಿಘಾತಃ। ಆದಿತ್ಯಾನಾಂ। ಆದಿತ್ಯಸಂಬಂಧಿನ ಇತ್ಯರ್ಥೇ ದಿತ್ಯದಿತ್ಯಾ-ದಿತ್ಯಪತ್ಯುತ್ತರಪದಾಣ್ಣ್ಯ ಇತಿ ಣ್ಯಃ। ಅತೋಲೋಪಯಲೋಪೌ। ಪ್ರತ್ಯಯಸ್ವರಃ। ಅಹ್ವೇ। ಹ್ವಯ-ತೇರ್ಲುಙಿ ಸಿಚಿ ಆತ್ಮನೇಪದೇಷ್ವನ್ಯತರಸ್ಯಾಮಿತ್ಯಙಾದೇಶಃ। ಗುಣಃ। ನಿಘಾತಃ। ಅವೃಂಜನ್। ವೃಜೀ ವರ್ಜನ ಇತ್ಯಸ್ಯ ಲಙಿ ಶ್ನಮಿ ರೂಪಂ। ನಿಘಾತಃ॥

ಪ್ರತಿಪದಾರ್ಥ

(ಸಂವತ್ಸರಃ—ಸಂವತ್ಸರವು)। ಆಸಾಂ— ಈ ಓಷಧಿಗಳ। ಅಭೀಕೇ-ಸಮೀಪದಲ್ಲಿರತಕ್ಕ। ಪದವೀಃ-ಮಾರ್ಗಗಳನ್ನು (ಆಯಾ ಓಷಧಿಗಳ ಫಲಪುಷ್ಪಾದಿಗಳನ್ನು)। ಅಬೋಧಿ—ತಿಳಿಯುತ್ತದೆ। ಆದಿತ್ಯಾನಾಂ—ಚೈತ್ರಾದಿ ದ್ವಾದಶಮಾಸಗಳ। ಚಾರು—ಮನೋಹರವಾದ। ನಾಮ—ಹೆಸರುಗಳನ್ನು। ಅಹ್ವೇ—ಉಚ್ಚರಿಸಿ ಪಠಿಸುತ್ತೇನೆ। ದೇವೀಃ—ಪ್ರಕಾಶಮಾನಗಳಾದವೂ। ಪೃಥಕ್—ಪ್ರತ್ಯೇಕವಾದ ರೂಪಗಳಿಂದ। ವ್ರಜಂತೀಃ—ಪ್ರವಹಿಸತಕ್ಕವೂ ಆದ। ಆಪಶ್ಚಿತ್—ಉದಕಗಳು। ಅಸ್ಮೈ—ಈ ಸಂವತ್ಸರದ ವೃಷ್ಟಿಕಾಲದಲ್ಲಿ। ಅರಮಂತ—ವಿರಮಿಸುತ್ತವೆ। ಸೀಂ—ಇದೇ ಸಂವತ್ಸರವನ್ನು। ಪರಿ ಅವೃಂಜನ್—(ಉಳಿದ ಕಾಲಗಳಲ್ಲಿ) ತ್ಯಜಿಸುತ್ತವೆ.

ಭಾವಾರ್ಥ

ಸಂವತ್ಸರವು ಆಯಾ ಓಷಧಿಗಳಿಗೆ ಕಾಲಾನುಗುಣವಾಗಿರತಕ್ಕ ಪುಷ್ಪಫಲಾದಿಗಳ ಸ್ವರೂಪವನ್ನು ತಿಳಿಯುತ್ತದೆ. ಚೈತ್ರಾದಿ ದ್ವಾದಶಮಾಸಗಳ ಮನೋಹರವಾದ ಹೆಸರುಗಳನ್ನು ನಾನು ಉಚ್ಚರಿಸಿ ಪಠಿಸುತ್ತೇನೆ. ಪ್ರಕಾಶಮಾನಗಳಾದವೂ ಪ್ರತ್ಯೇಕವಾದ ರೂಪಗಳಿಂದ ಪ್ರವಹಿಸತಕ್ಕವೂ ಆದ ಉದಕಗಳು ಈ ಸಂವತ್ಸರದ ವೃಷ್ಟಿಕಾಲದಲ್ಲಿ ವಿರಮಿಸುತ್ತವೆ ಇದೇ ಸಂವತ್ಸರವನ್ನು ಉಳಿದ ಕಾಲಗಳಲ್ಲಿ ತ್ಯಜಿಸುತ್ತವೆ.

English Translation

(The year) is awake, the path in the vicinity of those (plants): I call upon the beautiful name of the Adityas; the divine waters wandering severally (now) give it delight, and (now) depart from it.

CC-0. Jangamwadi Math Collection. Digitized by eGangotri

## ವಿಶೇಷವಿಷಯಗಳು

ಸಂಪತ್ಪ್ರದವಾದ ಸಂವತ್ಸರದ ಸ್ವರೂಪವು ಈ ಋಕ್ಕಿನಲ್ಲಿಯೂ ವರ್ಣಿತವಾಗಿದೆ. ಅನ್ನಸಂಪತ್ತಿಗೆ ಕಾರಣಗಳಾದ ಸಂವತ್ಸರದ ಅವಯವಗಳನ್ನೂ ಋತ್ವಾದಿ ವಿಭಾಗಗಳನ್ನೂ ಸ್ತುತಿಸಿದೆ.

**ಅಭೀಕೇ**— ಅಭೀಕ ಶಬ್ದವು ಸಂಗ್ರಾಮನಾಮಗಳಲ್ಲೂ,ಅಂತಿಕನಾಮಗಳಲ್ಲೂ ಪಠಿತವಾಗಿದೆ. (ನಿ. ೨-೧೭; ೩-೨೯). **ಪ್ರಪಿತ್ವೇ** ಮತ್ತು **ಅಭೀಕೇ** ಎಂಬೆರಡೂ ಪರ್ಯಾಯ ಪದಗಳು. ಗತ್ಯರ್ಥಕವಾದ **ಅಂಚ್** ಧಾತುವಿನೊಡನೆ ಅಭಿ ಎಂಬ ಉಪಸರ್ಗವು ಸೇರಿ ಅಭೀಕ ಪದವು ನಿಷ್ಪನ್ನವಾಗಿದೆ.

**ಜ್ಯೋತಿರ್ಯದಹ್ನೇ ಅಕೃಣೋದು ಲೋಕಂ ಪ್ರಾವನ್ಮನುಂ ದಸ್ಯವೇ ಕರಭೀಕಂ ।**

(ಋ. ಸಂ. ೯-೯೨-೫)

ಎಂಬ ಋಕ್ಕಿನಲ್ಲಿ ಈ ಪದದ ಪ್ರಯೋಗವು ಸನ್ನಿವೇಶವನ್ನು ವಿವರಿಸಿ ತಿಳಿಸುತ್ತದೆ. ಸೋಮರಾಜನ ತೇಜಸ್ಸು ಇಲ್ಲಿ ವರ್ಣಿತವಾಗಿದೆ. ಈ ತೇಜಸ್ಸು ಶಿಷ್ಟರಕ್ಷಕವಾಗಿಯೂ ದುಷ್ಟಶಿಕ್ಷಕವಾಗಿಯೂ ಇದೆ. ಮನುವನ್ನು ರಕ್ಷಿಸಿತು. ಮತ್ತು ದಸ್ಯುವನ್ನು ಪ್ರತಿಭಟಿಸಿತು ಎಂದಿದೆ. ಇಲ್ಲಿ ಪ್ರತಿಭಟಿಸಿತು ಎಂದು ತಿಳಿಸಲು **ಅಭೀಕಂ ಕಃ** ಶತ್ರುವಿಗೆ ಅಭಿಗಮನಶೀಲವಾಗಿ ಆಯಿತು ಎಂದರೆ ಶತ್ರುವನ್ನು ಪ್ರತಿಭಟಿಸಿ ಶಿಕ್ಷಿಸಲು ಯತ್ನಿಸಿತು ಎಂದು ತಾತ್ಪರ್ಯ. ಇದರಂತೆಯೇ

**ಯೋ ವಭ್ರೇಭಿರ್ಹವ್ಯೋ ಯಶ್ಚ ಭೂರಿಭಿರ್ಯೋ ಅಭೀಕೇ ವರಿವೋವಿನ್ನೃಷಾಹ್ಯೇ ।**

(ಋ. ಸಂ. ೧೦-೩೮-೪)

ಇತ್ಯಾದಿ ಸ್ಥಳಗಳಲ್ಲೂ ಸಹ ಸಂಗ್ರಾಮನೆಂದೇ ಅರ್ಥವಾಗುತ್ತದೆ. ಇಂದ್ರನು ಯಜ್ಞಕಾಲಗಳಲ್ಲಿ ಹೇಗೋ ಹಾಗೆಯೇ ಸಂಗ್ರಾಮಕಾಲಗಳಲ್ಲೂ ಆಹೂತನಾಗುತ್ತಾನೆಂದರ್ಥ. ಕೆಲವೆಡೆಗಳಲ್ಲಿ ವಿವಿಕ್ತವಾದ ಸ್ಥಾನವೆಂದೂ ಅರ್ಥವಾಗುತ್ತದೆ. ಉದಾಹರಣೆಗೆ—

**ಜ್ಯೋತಿರ್ವೃಣೀತ ತಮಸೋ ವಿಜಾನನ್ನಾರೇ ಸ್ಯಾಮ ದುರಿತಾದಭೀಕೇ ।**

(ಋ. ಸಂ. ೩-೩೯-೭)

ಎಂಬಲ್ಲಿ ದುರಿತಾದಭೀಕೇ ಎಂದರೇ ಪಾಪವರ್ಜಿತವಾದ ವಿವಿಕ್ತವಾದ ಪ್ರದೇಶದಲ್ಲಿ ಎಂದು ತಾತ್ಪರ್ಯ. ಪ್ರಕೃತವಾದ ಋಕ್ಕಿನಲ್ಲಿ ಅಭೀಕೇ **ಪದವೀಃ** ಎಂಬುದಕ್ಕೆ ಸುತ್ತುವರೆದಿರುವ ಮತ್ತು ಸಮೀಪಸ್ಥವಾಗಿರುವ ವಸ್ತುವೆಂದರ್ಥ.

**ಆದಿತ್ಯಾನಾಂ** ಎಂಬ ಪದವು ಸಂವತ್ಸರದ ಅವಯವಗಳಿಗೆ ಪರ್ಯಾಯಪದವಾಗಿದೆಯೆಂದು ಭಾಷ್ಯವು ತಿಳಿಸುತ್ತದೆ. ಮಾಸಕ್ಕೆ ಪರ್ಯಾಯವಾಗಿ ಆದಿತ್ಯಪದದ ಪ್ರಯೋಗವು ಹೇಗೆ ಎಂಬುದನ್ನು ಸಾಯಣರು ಈ ರೀತಿ ವಿವರಿಸಿದ್ದಾರೆ. ಮೊದಲನೆಯದಾಗಿ, **ಸಂಖ್ಯಾ ಸಾಮ್ಯಾತ್ ಆದಿತ್ಯಾಃ ಮಾಸಾಃ ।** ಮಾಸಗಳ ಸಂಖ್ಯೆಯು ಹನ್ನೆರಡು ; ಆದಿತ್ಯರ ಸಂಖ್ಯೆಯು ಹನ್ನೆರಡು ಆದುದರಿಂದ ಆದಿತ್ಯಪದಕ್ಕೆ ದ್ವಾದಶಮಾಸವೆಂದು ತಾತ್ಪರ್ಯ. ಅಥವಾ ಎರಡನೆಯದಾಗಿ ಆದಿತ್ಯನ ಸಂಕ್ರಮಣ ಸಂಬಂಧವಿರುವುದರಿಂದ ಪ್ರತಿಯೊಂದು ಮಾಸವೂ ಆದಿತ್ಯನೆಂಬ ವ್ಯವಹಾರದಿಂದ ಕರೆಯಲ್ಪಡುತ್ತದೆ. ಇಂತಹ ಸಂಕ್ರಮಣಗಳು ಮೇಷಾದಿಯಾಗಿ ಹನ್ನೆರಡು. ಆದುದರಿಂದ ಆದಿತ್ಯನೆಂದರೆ ಮಾಸವೆಂದು ಇಲ್ಲಿ ತಾತ್ಪರ್ಯ ಎಂದು ವಿವರಿಸಿದೆ.

CC-0. Jangamwadi Math Collection. Digitized by eGangotri

**ಚಾರು** ನಾಮ—ಮಾಸಗಳ ಸಂಖ್ಯೆಯು ಆದಿತ್ಯನ ಸಂಖ್ಯೆಯನ್ನನುಸರಿಸಿರುವುದರಿಂದ ಆದಿತ್ಯಾನಾಂ ಎಂದು ತಾದಾತ್ಮ್ಯಬೋಧಕವಾದ ಪದವನ್ನೇ ಉಪಯೋಗಿಸಿದೆ. ಈ ಮಾಸಗಳ ಹೆಸರು ಅತ್ಯಂತ ಆಕರ್ಷಕವಾಗಿಯೂ ತೃಪ್ತಿದಾಯಕವಾಗಿಯೂ ಇವೆ ಎಂದು ತಿಳಿಸಲು ಚಾರು ನಾಮ ಎಂದು ವರ್ಣಿತವಾಗಿವೆ. **ಮಧು, ಮಾಧವ, ಶುಕ್ರ, ಶುಚಿ, ನಭ, ನಭಸ್ಯ, ಇಷ, ಊರ್ಜ,** ಸಹ, **ಸಹಸ್ಯ, ತಪ, ತಪಸ್ಯ** ಎಂಬಿವು ಹನ್ನೆರಡೂ ಸಹ ಮಾಸಗಳ ಹೆಸರು. ಇವನ್ನೇ ಚೈತ್ರಾದಿ ದ್ವಾದಶಮಾಸಗಳೆಂದು ಕರೆಯುತ್ತಾರೆ. ಈ ಹೆಸರುಗಳಿಗೆ **ಚಾರು ನಾಮ** ಎಂಬ ವಿಶೇಷಣವು ಹೇಗೆ ಹೊಂದುತ್ತದೆ ಎಂದು ತಿಳಿಯಲು ಇವುಗಳ ಸ್ವರೂಪವರ್ಣನವನ್ನು ತಿಳಿಯಬೇಕು.

> **ಉಪಯಾಮ ಗೃಹೀತೋಽಸಿ ಮಧವೇ ತ್ವೇತ್ಯೇವಾಧ್ವರ್ಯುರ್ಗೃಹ್ಣಾತ್ಯುಪಯಾಮಗೃಹೀತೋಽಸಿ ಮಾಧವಾಯ ತ್ವೇತಿ ಪ್ರತಿಪ್ರಸ್ಥಾತೈತಾವೇವ ವಾಸಂತಿಕೌ ಸ ಯದ್ವಸಂತ ಓಷಧಯೋ ಜಾಯಂತೇ ವನಸ್ಪತಯಃ ಪಚ್ಯಂತೇ ತೇನೋ ಹೈತೌ ಮಧುಶ್ಚ ಮಾಧವಶ್ಚ ।**
>
> (ಶ. ಬ್ರಾ. ೪-೩-೧-೧೪)

ಋತುಗ್ರಹಗಳಲ್ಲಿ ಒಂದನ್ನು ಅಧ್ವರ್ಯುವೂ ಇನ್ನೊಂದನ್ನು ಪ್ರತಿಪ್ರಸ್ಥಾತೃವೂ ಹಿಡಿದು, ಅಧ್ವರ್ಯುವು "ಇದನ್ನು ಮಧುವನ್ನುದ್ದೇಶಿಸಿ ಅರ್ಪಿಸುತ್ತೇನೆ" ಎಂದೂ, ಪ್ರತಿಪ್ರಸ್ಥಾತೃವು "ಇದನ್ನು ಮಾಧವನನ್ನುದ್ದೇಶಿಸಿ ಅರ್ಪಿಸುತ್ತೇನೆ" ಎಂದೂ, ಸಹ (ವಾಜಸನೇಯ ಸಂಹಿತಾ. ೭-೩೦) ಪಠಿಸುತ್ತಾರೆ. ಮಧು ಮತ್ತು ಮಾಧವ ಎರಡೂ ಸಹ ವಸಂತಋತುವಿನ ಮಾಸಗಳು. ಈ ಋತುವಿನಲ್ಲಿ ಓಷಧ್ಯಾದಿಗಳು ಫಲಪುಷ್ಪಭರಿತವಾಗುತ್ತವೆ. ವೃಕ್ಷಗಳು ಪಕ್ವವಾದ ಫಲವುಳ್ಳವಾಗುತ್ತವೆ ಈ ರೀತಿ ವೃಕ್ಷಾದಿಗಳು ಮಾಧುರ್ಯೋಪೇತವಾಗಿರುವುದರಿಂದ ಈ ಋತುವಿನ ಅವಯವಗಳಾದ ಎರಡು ಮಾಸಗಳಿಗೂ **ಮಧು** ಮತ್ತು **ಮಾಧವ** ಎಂಬ ಎರಡು ಹೆಸರುಗಳು ಪ್ರಸಿದ್ಧವಾಗಿವೆ.

> **ಉಪಯಾಮ ಗೃಹೀತೋಽಸಿ । ಶುಕ್ರಾಯ ತ್ವೇತ್ಯೇವಾಧ್ವರ್ಯುರ್ಗೃಹ್ಣಾತ್ಯುಪಯಾಮಗೃಹೀತೋಽಸಿ ಶುಚಯೇ ತ್ವೇತಿ ಪ್ರತಿಪ್ರಸ್ಥಾತೈತಾವೇವ ಗ್ರೈಷ್ಮೌ ಸ ಯದೇತಯೋರ್ಬಲಿಷ್ಠಂ ತಪತಿ ತೇನೋ ಹೈತೌ ಶುಕ್ರಶ್ಚ ಶುಚಿಶ್ಚ ॥**
>
> (ಶ ಬ್ರಾ. ೪-೩-೧-೧೫)

ಅಧ್ವರ್ಯುವು ಮೂರನೆಯಗ್ರಹವನ್ನೂ ಪ್ರತಿಪ್ರಸ್ಥಾತೃವು ನಾಲ್ಕನೆಯದನ್ನೂ ಹಿಡಿದು ಇದನ್ನು ಶುಕ್ರನನ್ನುದ್ದೇಶಿಸಿ ಅರ್ಪಿಸುತ್ತೇನೆ ಎಂದು ಅಧ್ವರ್ಯುವೂ, ಇದನ್ನು ಶುಚಿಯನ್ನುದ್ದೇಶಿಸಿ ಅರ್ಪಿಸುತ್ತೇನೆಂದು ಪ್ರತಿಪ್ರಸ್ಥಾತೃವೂ ಪಠಿಸುತ್ತಾರೆ. ಶುಕ್ರ, ಶುಚಿ ಇವೆರಡೂ ಸಹ ಗ್ರೀಷ್ಮರ್ತುವಿನ ಅವಯವಗಳು. ಆ ಕಾಲದಲ್ಲಿ ತೀವ್ರವಾದ ತಾಪವಿರುವುದರಿಂದ ಇವಕ್ಕೆ ಈ ಹೆಸರು. ಶುಕ್ರವೆಂದರೆ ಶುಭ್ರವಾದುದೆಂದೂ ಶುಚಿಯೆಂದರೆ ಪ್ರಭಾಯುತವಾದುದೆಂದೂ ಅರ್ಥ.

> **ಉಪಯಾಮಗೃಹೀತೋಽಸಿ ನಭಸೇ ತ್ವೇತ್ಯೇವಾಧ್ವರ್ಯುರ್ಗೃಹ್ಣಾತ್ಯುಪಯಾಮಗೃಹೀತೋಽಸಿ ನಭಸ್ಯಾಯ ತ್ವೇತಿ ಪ್ರತಿಪ್ರಸ್ಥಾತೈತಾವೇವ ವಾರ್ಷಿಕಾವಮುತೋ ವೈ ದಿವೋ ವರ್ಷತಿ ತೇನೋ ಹೈತೌ ನಭಶ್ಚ ನಭಸ್ಯಶ್ಚ ॥**
>
> (ಶ. ಬ್ರಾ. ೪-೩-೧-೧೬)

CC-0. Jangamwadi Math Collection. Digitized by eGangotri

ನಂತರ ನಭವನ್ನೂ ನಭಸ್ಯವನ್ನೂ ಉದ್ದೇಶಿಸಿ ಅರ್ಪಿಸುತ್ತಾರೆ. ಇವೆರಡೂ ಸಹ ವರ್ಷರ್ತುವಿಗೆ ಸಂಬಂಧಿಸಿದ ಮಾಸಗಳು. ಅಂತರಿಕ್ಷದಿಂದ ವರ್ಷಧಾರೆಯಾಗುವುದರಿಂದ ಅವೆರಡಕ್ಕೂ ನಭ ಮತ್ತು ನಭಸ್ಯ ಎಂಬ ಹೆಸರುಗಳು ಪ್ರಸಿದ್ಧವಾಗಿವೆ.

> ಇಷೇ ತ್ವೇತ್ಯೇವಾಧ್ವರ್ಯುರ್ಗೃಹ್ಣಾತಿ .... .... ಊರ್ಜೇತ್ವೇತಿ ಪ್ರತಿಪ್ರಸ್ಥಾತೈತಾವೇವ ಶರದೌ ಸ ಯಚ್ಛರದ್ಯೂರ್ಗ್ರಸ ಓಷಧಯಃ ಪಚ್ಯಂತೇ ತೇನೋ ಹೈತಾವಿಷಶ್ಚೋರ್ಜಶ್ಚ ॥
>
> (ಶ. ಬ್ರಾ. ೪-೩-೧-೧೭)

ಪುನಃ ಇಷವನ್ನೂ ಊರ್ಜವನ್ನೂ ಉದ್ದೇಶಿಸಿ ಅರ್ಪಿಸುತ್ತಾರೆ. ಇಷವೆಂದರೆ ರಸವೆಂದೂ ಊರ್ಜವೆಂದರೆ ಅನ್ನವೆಂದೂ ಅರ್ಥ. ಇವೆರಡೂ ಶರದೃತುವಿನ ಅವಯವಗಳು. ಈ ಶರದೃತುವಿನಲ್ಲಿ ಓಷಧ್ಯಾದಿಗಳು ರಸಭರಿತವಾಗುತ್ತವೆ ಮತ್ತು ಅನ್ನಪೌಷ್ಕಲ್ಯವಿರುತ್ತದೆಯಾದುದರಿಂದ ಇಷ ಮತ್ತು ಊರ್ಜ ಎಂಬ ಹೆಸರುಗಳು ಪ್ರಸಿದ್ಧವಾಗಿವೆ.

> ಉಪಯಾಮಗೃಹೀತೋಽಸಿ ಸಹಸೇ ತ್ವೇತ್ಯೇವಾಧ್ವರ್ಯುರ್ಗೃಹ್ಣಾತಿ ಉಪಯಾಮಗೃಹೀತೋಽಸಿ ಸಹಸ್ಯಾಯ ತ್ವೇತಿ ಪ್ರತಿಪ್ರಸ್ಥಾತೈತಾವೇವ ಹೈಮಂತಿಕೌ ಸ ಯದ್ಧೇಮಂತ ಇಮಾಃ ಪ್ರಜಾಃ ಸಹಸೇವ ಸ್ವಂ ವಶಮುಪನಯತೇ ತೇನೋ ಹೈತೌ ಸಹಶ್ಚ ಸಹಸ್ಯಶ್ಚ ॥
>
> (ಶ. ಬ್ರಾ. ೪-೩-೧-೧೮)

ಸಹಸ್ಸನ್ನೂ ಸಹಸ್ಯವನ್ನೂ ಉದ್ದೇಶಿಸಿ ಅರ್ಪಿಸುತ್ತಾರೆ. ಇವೆರಡೂ ಹೇಮಂತಋತುವಿನ ಅವಯವಗಳು. ಹೇಮಂತವು ಶಕ್ತಿಮೂಲಕವಾಗಿ ಸಕಲಭೂತಗಳನ್ನೂ ತನ್ನ ವಶಕ್ಕೆ ಎಳೆದುಕೊಳ್ಳುತ್ತದೆ. ಸಹಸ್ ಎಂದರೆ ಶಕ್ತಿ ಅಥವಾ ಪ್ರಭಾ ಎಂದರ್ಥ. ಆದುದರಿಂದ ಇದರ ಅವಯವಗಳಿಗೆ ಸಹಃ, ಸಹಸ್ಯಃ ಎಂದು ಹೆಸರು.

> ತಪಸೇ ತ್ವೇತ್ಯೇವಾಧ್ವರ್ಯುರ್ಗೃಹ್ಣಾತಿ ಉಪಯಾಮ ಗೃಹೀತೋಽಸಿ ತಪಸ್ಯಾಯ ತ್ವೇತಿ ಪ್ರತಿ-ಪ್ರಸ್ಥಾತೈತಾವೇವ ಶೈಶಿರೌ ಸ ಯದೇತಯೋರ್ಬಲಿಷ್ಠಂ ಶ್ಯಾಯತಿ ತೇನೋ ಹೈತಾ ತಪಶ್ಚ ತಪಸ್ಯಶ್ಚ ॥
>
> (ಶ. ಬ್ರಾ- ೪-೩-೧-೧೯)

ತಪಃ, ತಪಸ್ಯಃ ಎಂಬೆರಡು ಮಾಸಗಳೂ ಸಹ ಶಿಶಿರಋತುವಿನ ಅವಯವಗಳು. ಈ ಕಾಲದಲ್ಲಿ ದೇಹವು ಚಳಿಯಿಂದ ಸೆಡೆತುಕೊಂಡು ಕುಂದಿ ಹೋಗುವುದರಿಂದ ಈ ಋತುವಿನ ಮಾಸಗಳಿಗೆ ಈ ಹೆಸರು ಪ್ರಸಿದ್ಧವಾಗಿವೆಯೆಂದು ದ್ವಾದಶ ಮಾಸಗಳ ಸ್ವರೂಪವನ್ನೂ ವರ್ಣಿಸಿದೆ. ಇದೇ ರೀತಿಯಲ್ಲಿ ತೈತ್ತಿರೀಯ ಸಂಹಿತೆಯಲ್ಲಿಯೂ ಸಹ "ಮಧುಶ್ಚ ಮಾಧವಶ್ಚ" ಇತ್ಯಾದಿಯಾಗಿ ವಿವರಿಸಲ್ಪಟ್ಟಿದೆ. (ತೈ. ಸಂ. ೪-೪-೧೧-೧).

ಈ ರೀತಿ ಐದು ಋತುಗಳು ಮತ್ತು ಹನ್ನೆರಡು ತಿಂಗಳು ಇವನ್ನೊಳಗೊಂಡ ಸಂವತ್ಸರವನ್ನು "ಪಂಚಪಾದಂ ಪಿತರಂ ದ್ವಾದಶಾಕೃತಿಂ" ಎಂದು ವರ್ಣಿಸಿದೆ. (ಋ. ಸಂ. ೧-೧೬೪-೧೨). ಇದೇ ಅಂಶವನ್ನು ಶತಪಥದಲ್ಲಿ ವರ್ಣಿಸುತ್ತಾ,

> ತಸ್ಯ ಸಪ್ತದಶ ಸಾಮಿಧೇನ್ಯಃ । ಸಪ್ತದಶೋ ವೈ ಸಂವತ್ಸರೋ ದ್ವಾದಶಮಾಸಾಃ ಪಂಚರ್ತವಃ ಸಂವತ್ಸರಃ ಪ್ರಜಾಪತಿಃ ॥
>
> (ಶ. ಬ್ರಾ. ೬-೨-೨-೮)



CC-0. Jangamwadi Math Collection. Digitized by eGangotri

ಪ್ರಜಾಪತಿಯು ಹನ್ನೆರಡುತಿಂಗಳಿಂದಲೂ ಐದು ಋತುಗಳಿಂದಲೂ ಕೂಡಿ ಹದಿನೇಳು ಅವಯವಗಳುಳ್ಳ ಸಂವತ್ಸರಾ-ತ್ಮನಾಗಿದ್ದಾನೆ. ಎಂದು ಯಜ್ಞಾಂಗವಾದ ಹದಿನೇಳು ಸಾಮಿಧೇನೀಮಂತ್ರಗಳಿಗೂ ಪ್ರಜಾಪತಿಗೂ ಇರುವ ಸಂಬಂಧವನ್ನು ತೋರಿಸಿದೆ.

**ಆಸಾಂ ಆದಿತ್ಯಾನಾಂ ಪದವೀಃ ಅಬೋಧಿ**—ಎಂದರೆ ಈ ದ್ವಾದಶಮಾಸಗಳುಳ್ಳ ಮತ್ತು ಋತ್ವಾತ್ಮಕವಾದ ಸಂವತ್ಸರವು ಆಯಾ ಮಾಸಗಳ ಸ್ವರೂಪವನ್ನೂ ಪ್ರಭಾವವನ್ನೂ ಅರಿತಿದೆಯೆಂದು ಹೇಳಿರುವುದರಿಂದ ಆಯಾ ಮಾಸಗಳ ಪದವಿಯೆಂದರೇನು ? 'ಅವುಗಳ ಸ್ವರೂಪಗಳೇನು ಎಂದು ತಿಳಿಯಬೇಕು. ಮಧು, ಮಾಧವ, ಶುಕ್ರ, ಶುಚಿ ಇತ್ಯಾದಿ ಮಾಸಗಳ ಹೆಸರನ್ನು ತಿಳಿಸುವಾಗ ಅವುಗಳ ಸ್ವರೂಪವನ್ನೂ ಜೊತೆಯಲ್ಲಿಯೇ ವರ್ಣಿಸಿರುವುದನ್ನೂ ಮೇಲೆ ತಿಳಿಸಿದೆ. ಮಾಸಗಳ ಪದವಿಗಳಾವುದು ಎಂಬುದನ್ನು ಪರಿಶೀಲಿಸಬೇಕು.

**ದ್ವಾದಶಾರಂ ನಹಿ ತಜ್ಜರಾಯ ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ ।**
**ಆ ಪುತ್ರಾ ಅಗ್ನೇ ಮಿಥುನಾಸೋ ಅತ್ರ ಸಪ್ತ ಶತಾನಿ ವಿಂಶತಿಶ್ಚ ತಸ್ಥುಃ ॥**
(ಋ. ಸಂ. ೧-೧೬೪-೧೧)

**ದ್ವಾದಶ ಪ್ರಧಯಶ್ಚಕ್ರಮೇಕಂ ತ್ರೀಣಿ ನಭ್ಯಾನಿ ಕ ಉ ತಚ್ಚಿಕೇತ ।**
**ತಸ್ಮಿನ್ತ್ಸಾಕಂ ತ್ರಿಶತಾ ನ ಶಂಕವೋಽರ್ಪಿತಾಃ ಷಷ್ಟಿರ್ನ ಚಲಾಚಲಾಸಃ ।**
(ಋ. ಸಂ. ೧-೧೬೪-೪೮)

ಇತ್ಯಾದಿ ಋಕ್ಕುಗಳಲ್ಲಿಯೂ ಪ್ರಕೃತವಾದ ಸೂಕ್ತದಲ್ಲಿಯೂ ಮೇಲಿನ ಎರಡು ಮಂತ್ರಗಳಲ್ಲೂ ವಿವರಿಸಿರುವ ವರ್ಣನೆಯು ವಿಶದವಾಗಿದೆ. ಆದಿತ್ಯನ ಅವಯವ ಅಥವಾ ಆದಿತ್ಯಸ್ವರೂಪಿಯಾದ ಸಂವತ್ಸರದ ಅವಯವ. ಸಂವತ್ಸರರೂಪವಾದ ಚಕ್ರಕ್ಕೆ ಪರಿಧಿಗಳು ಹನ್ನೆರಡು. ಮಧ್ಯಭಾಗದ ಅಚ್ಚುಗಳು ಮೂರು. ಈ ಚಕ್ರದಲ್ಲಿ ಪರಿಭ್ರಮಣವನ್ನುಮಾಡತಕ್ಕ ಮುನ್ನೂರ ಅರವತ್ತು ಅವಯವಗಳು ಶಂಕುಗಳಂತೆ ಒಟ್ಟಿಗೆ ಅರ್ಪಿತವಾಗಿವೆ ಎಂದು ಒಂದು ಗಣನೆ. ಇಲ್ಲಿ ಮುನ್ನೂರ ಅರವತ್ತು ಅವಯವಗಳು ದಿನಗಳ ಸಂಖ್ಯೆಯನ್ನು ಸೂಚಿಸತಕ್ಕವು. ಇನ್ನೊಂದು ಗಣನೆಯ ಪ್ರಕಾರ ಏಳನೂರ ಇಪ್ಪತ್ತು. ಅವು ಅಹೋರಾತ್ರಗಳೆರಡನ್ನೂ ಸೂಚಿಸತಕ್ಕವು. ಇವೆಲ್ಲವೂ ಆದಿತ್ಯನಿಗೆ ಅಥವಾ ಆದಿತ್ಯರೂಪಿಯಾದ ಸಂವತ್ಸರಕ್ಕೆ ಪುತ್ರರೂಪಿಗಳಾಗಿರುವುವು. ಇದೇ ಗಣನೆಯನ್ನು ಐತರೇಯಬ್ರಾಹ್ಮಣದಲ್ಲೂ ಸಹ ಚತುರ್ವಿಂಶಸ್ತೋಮದ ವರ್ಣನೆಯ ಕಾಲದಲ್ಲಿ ಉಕ್ತವಾಗಿದೆ. ಸಾಮಶಾಖೆಗೆ ಸಂಬಂಧಿಸಿದ ಶ್ರೌತಸೂತ್ರದಲ್ಲಿ ಮಾತ್ರ ಕೆಲವು ವ್ಯತ್ಯಸ್ತವಾದ ಗಣನೆಗಳೂ ಕಂಡುಬರುತ್ತವೆ.

| | | | | |
|---|---|---|---|---|
| (೧) ವರ್ಷಕ್ಕೆ | 324 ದಿನಗಳು | 27 ದಿನಗಳುಳ್ಳ | 12 ತಿಂಗಳು. |
| (೨) ,, | 351 ,, | 27 ,, | 12 ತಿಂಗಳು ಮತ್ತು ಪುನಃ 27 ದಿನಗಳು |
| (೩) ,, | 354 ,, | 30 ದಿನಗಳುಳ್ಳ 6 ತಿಂಗಳು ಮತ್ತು 29 ದಿನಗಳುಳ್ಳ 6 ತಿಂಗಳು | |

ಹೀಗೆ ಗಣನೆಗಳಲ್ಲಿರತಕ್ಕ ವ್ಯತ್ಯಾಸಕ್ಕೆ ಕಾರಣವನ್ನೂ, ಸೌರಮಾನ ಮತ್ತು ಚಾಂದ್ರಮಾನ ಇವುಗಳ ವ್ಯತ್ಯಾಸವನ್ನೂ, ಅಯನಗಳ ವಿಚಾರವನ್ನೂ ಸಹ ಮುಂದೆ ಸಂದರ್ಭ ಬಂದಾಗ ವಿಶದವಾಗಿ ತಿಳಿಸಲಾಗುತ್ತವೆ.

ಇಂತಹ ಅವಯವಗಳುಳ್ಳದ್ದರಿಂದ ಆಯಾ ಋತ್ವನುಸಾರವಾಗಿ ಸೃಷ್ಟವಾಗಿ ಪೋಷಿತವಾಗುವ ಫಲಪುಷ್ಪಾದಿಗಳುಳ್ಳ ಪ್ರಕೃತಿಯ ಪದವಿಯನ್ನು ಸಂವತ್ಸರವು ತಿಳಿದಿರುತ್ತದೆ ಎಂದು ತಾತ್ಪರ್ಯ

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ತ್ರೀ ಷಧಸ್ಥಾ ಸಿಂಧವಸ್ತ್ರಿಃ ಕವೀನಾಮುತ ತ್ರಿಮಾತಾ ವಿದಥೇಷು ಸಮ್ರಾಟ್ ।

ಋತಾವರೀರ್ಯೋಷಣಾಸ್ತಿಸ್ರೋ ಅಪ್ಯಾಸ್ತ್ರಿರಾ ದಿವೋ ವಿದಥೇ ಪತ್ಯ-ಮಾನಾಃ ॥ ೫ ॥

ಪದಪಾಠಃ

ತ್ರಿ । ಸಧಽಸ್ಥಾ । ಸಿಂಧವಃ । ತ್ರಿಃ । ಕವೀನಾಂ । ಉತ । ತ್ರಿಽಮಾತಾ । ವಿದಥೇಷು । ಸಮ್ಽರಾಟ್ ।

ಋತಽವರೀಃ । ಯೋಷಣಾಃ । ತಿಸ್ರಃ । ಅಪ್ಯಾಃ । ತ್ರಿಃ । ಆ । ದಿವಃ । ವಿದಥೇ । ಪತ್ಯಮಾನಾಃ ॥ ೫ ॥

ಸಾಯಣಭಾಷ್ಯಂ

ಪ್ರಜಾಪತಿಃ ಸ್ವವಿಜ್ಞಾನಂ ಸಿಂಧೂನಾಂ ನಿವೇದಯತಿ । ಹೇ ಸಿಂಧವ ಆಪಃ ಸರ್ವಸಾಕ್ಷಿಣ್ಯೋ ಯೂಯಂ । ತ್ರೀ ಷಧಸ್ಥಾ ತ್ರಯೋ ಲೋಕಾಃ । ತೇ ಚ ಪ್ರತ್ಯೇಕಂ ತ್ರಿರ್ಭವಂತಿ । ತಥಾ ತ್ರಯೋ ವಾ ಇಮೇ ತ್ರಿವೃತೋ ಲೋಕಾ ಇತಿ ಶ್ರುತಿಃ । ನ ದ್ಯಾವ ಇಂದ್ರಮೋಜಸಾ ನಾಂತರಿಕ್ಷಾಣಿ ವಜ್ರಿಣಂ ನ ವಿವ್ಯಚಂತ ಭೂಮಯಃ । ಋಗ್ವೇ. ೮-೬-೧೫ । ಇತಿ ಪ್ರತ್ಯೇಕಂ ಬಹುವಚನಶ್ರವಣಾತ್ । ಬಹುವಚನಂ ಚ ಕಪಿಂಜಲನ್ಯಾಯೇನ ತ್ರಿತ್ವೇ ಪರ್ಯವಸಿತಂ । ತೇ ಚ ಲೋಕಾಃ ಕವೀನಾಂ ದೇವಾನಾಂ ನಿವಾಸ-ಸ್ಥಾನಾನಿ ಭವಂತಿ । ಉತಾಪಿ ಚ ತ್ರಿಮಾತಾ ತ್ರಯಾಣಾಮುಕ್ತಾನಾಂ ಲೋಕಾನಾಂ ನಿರ್ಮಾತಾ ಸಂವತ್ಸರಃ ಸೂರ್ಯೋ ವಾ ವಿದಥೇಷು ಯಜ್ಞೇಷು ಸಮ್ರಾಟ್ ಯಜನೀಯತಯಾ ಸಮ್ಯಗ್ದೀಪ್ಯಮಾನೋ ವರ್ತತೇ। ತಥಾ ಋತಾವರೀರುದಕವತ್ಯೋಽಪ್ಯಾ ನಭಸ್ಯಾ ಅಪ್ತವ್ಯಾ ವಾ ತಿಸ್ರೋ ಯೋಷಣಾಸ್ತ್ರಿಸಂಖ್ಯಾಕಾ ಇಲಾ-ಸರಸ್ವತೀಭಾರತೀತ್ಯೇವಂರೂಪಾಃ ಪರಸ್ಪರಮಿಶ್ರಣೋಪೇತಾ ದೇವತಾ ವಿದಥೇ ಯಜ್ಞೇ ದಿವೋ ದಿವಸಸ್ಯ ತ್ರಿಷ್ವಪಿ ಸವನೇಷ್ವಾ ಪತ್ಯಮಾನಾ ಆಗಚ್ಛಂತ್ಯೋ ಭವಂತಿ ॥ ಸಧಸ್ಥಾ । ಪೂರ್ವಪದಾದಿತಿ ಸಂಹಿತಾಯಾಂ ಷತ್ವಂ । ಯೋಷಣಾಃ । ಯುಷ ಇತಿ ಸೌತ್ರೋ ಧಾತುಃ । ಲ್ಯುಟಿ ರೂಪಂ । ಲಿತ್ಸ್ವರಃ । ತಿಸ್ರಃ । ತಿಸೃಭ್ಯೋ ಜಸ ಇತ್ಯಾದ್ಯುದಾತ್ತತ್ವಂ । ಅಪ್ಯಾಃ । ಅಪ್ ಇತ್ಯಂತರಿಕ್ಷನಾಮ । ತತ್ರ ಭವಾಃ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಸಿಂಧವಃ—ಪ್ರವಾಹರೂಪಗಳಾದ ಉದಕಗಳೇ । ಕವೀನಾಂ—ದೇವತೆಗಳಿಗೆ । ತ್ರೀ ಷಧಸ್ಥಾ—ವಾಸ ಸ್ಥಾನಗಳಾದ ಮೂರು ಲೋಕಗಳೂ । ತ್ರಿಃ—ಮೂರು ರೂಪವುಳ್ಳದ್ದಾಗಿವೆ । ಉತ—ಮತ್ತು । ತ್ರಿಮಾತಾ—ಈ ಮೂರು ಲೋಕಗಳ ಪ್ರಮಾಣವನ್ನೂ ತಿಳಿಯುವ ಸಂವತ್ಸರವು (ಅಥವಾ ಆದಿತ್ಯನು) । ವಿದಥೇಷು—ಯಜ್ಞಗಳಲ್ಲಿ । ಸಮ್ರಾಟ್—ಸಾರ್ವಭೌಮಪದವಿಯನ್ನಲಂಕರಿಸಿದ್ದಾನೆ । ಋತಾವರೀಃ—ಉದಕದಿಂದ ತುಂಬಿದವೂ ।

CC-0. Jangamwadi Math Collection. Digitized by eGangotri

ಅಪ್ಯಾಃ—ವೃಷ್ಟಿರೂಪವುಳ್ಳವೂ ಆದ । ತಿಸ್ರಃ ಯೋಷಣಾಃ—ಮೂರು ಸ್ತ್ರೀಯರೂ ಸಹ । ವಿದಥೇ— ಯಾಜ್ಞಿಕವಾದ । ದಿವಃ ತ್ರಿಃ—ದಿವಸದ ಮೂರುಸವನಕಾಲಗಳಲ್ಲೂ । ಆ ಪತ್ಯಮಾನಾಃ ಇಳಿದು ಬರುತ್ತಾರೆ

### ಭಾವಾರ್ಥ

ಪ್ರವಾಹರೂಪಗಳಾದ ಉದಕಗಳೇ, ದೇವತೆಗಳಿಗೆ ವಾಸಸ್ಥಾನಗಳಾದ ಮೂರು ಲೋಕಗಳೂ ಮೂರು ರೂಪಗಳುಳ್ಳದ್ದಾಗಿವೆ. ಮತ್ತು ಈ ಮೂರು ಲೋಕಗಳ ಪ್ರಮಾಣವನ್ನು ತಿಳಿಯುವ ಸಂವತ್ಸರವು ಅಥವಾ ಆದಿತ್ಯನು ಯಜ್ಞಗಳಲ್ಲಿ ಸಾರ್ವಭೌಮಪದವಿಯನ್ನಲಂಕರಿಸಿದ್ದಾನೆ. ಉದಕದಿಂದ ತುಂಬಿದವೂ ವೃಷ್ಟಿರೂಪವುಳ್ಳವೂ ಆದ ಮೂರು ಸ್ತ್ರೀಯರೂ ಸಹ ಪ್ರತಿದಿನವೂ ಯಾಜ್ಞಿಕವಾದ ಸವನತ್ರಯಕಾಲಗಳಲ್ಲೂ ಇಳಿದು ಬರುತ್ತಾರೆ.

### English Translation

Rivers, the dwelling-places of the intelligent gods are thrice three; the measurer of the three (worlds) is the sovereign at sacrifices : three female (divinities) of the waters charged with the rains descend from heaven at the thrice (repeated) solemnity.

### ವಿಶೇಷವಿಷಯಗಳು

ಈ ಮಂತ್ರದಲ್ಲಿ ಬಹಳ ಗಭೀರವಾದ ಅರ್ಥವಡಗಿದೆ. ಸ್ಥೂಲವಾಗಿ ನೋಡಿದರೆ ಇಲ್ಲಿ ಮೂರು ಬೇರೆಬೇರೆ ಭಾವಗಳು ಪ್ರತ್ಯೇಕವಾದ ಮೂರು ಅಂಶಗಳನ್ನು ಪ್ರಕಾಶಪಡಿಸುವಂತೆ ತೋರುತ್ತದೆ. ಮೊದಲನೆಯದಾಗಿ, ದೇವತೆಗಳ ವಿಶ್ವವ್ಯಾಪಕವಾದ ಪ್ರಭುತ್ವ, ಎರಡನೆಯದಾಗಿ ಸಂವತ್ಸರದ ಮಾಹಾತ್ಮ್ಯ, ಮೂರನೆಯದಾಗಿ ಸವನತ್ರಯಕಾಲಗಳಲ್ಲೂ ಸ್ತ್ರೀಯರ ಆಗಮನ. ಆದರೆ ಸೂಕ್ಷ್ಮವಾಗಿ ಈ ಭಾವಗಳು ಒಂದಕ್ಕೊಂದು ಸಂಬದ್ಧವಾಗಿ ಕೊನೆಯಲ್ಲಿ ಒಂದೇ ತತ್ತ್ವದ ವಿವರಣೆಯಲ್ಲಿ ಪರ್ಯವಸಾನವನ್ನು ಹೊಂದುವುದು ಎಂದು ತಿಳಿಯುತ್ತದೆ.

ದೇವತೆಗಳಿಗೆ ಮೂರು ಲೋಕಗಳೂ ವಾಸಸ್ಥಾನಗಳು ಮತ್ತು ಈ ಮೂರು ಲೋಕಗಳೂ ತ್ರಿವೃತವಾಗಿ ಎಂದರೆ ಮೂರು ರೂಪಗಳುಳ್ಳದ್ದಾಗಿವೆ ಎಂದರೇನು ಎಂಬುದನ್ನು ತಿಳಿಯುವ ಮೊದಲು ದೇವಶಬ್ದಕ್ಕೆ ಪರ್ಯಾಯವಾಗಿ ಕವಿಶಬ್ದದ ಪ್ರಯೋಗದಲ್ಲಿರುವ ವೈಶಿಷ್ಟ್ಯವೇನು ಎಂಬುದನ್ನು ಗಮನಿಸಬೇಕು.

**ಕವೀನಾಂ— ಕವೀನಾಂ** ಎಂಬ ಪದಕ್ಕೆ ದೇವಾನಾಂ ಎಂದರ್ಥಮಾಡಿದರೆ, ಈ ಎರಡು ಪದಗಳಿಂದಲೂ ಒಂದೇ ವಸ್ತುತತ್ತ್ವವು ದ್ಯೋತವಾಗಬೇಕಾಗುತ್ತದೆ. ಎರಡು ಪದಗಳೂ ಒಂದೇ ಸ್ವರೂಪವನ್ನೂ ಸ್ವಭಾವವನ್ನೂ ಸೂಚಿಸುವ ಸಂದರ್ಭವಾಗಿರಬೇಕು. ಆದುದರಿಂದ **ದೇವಾನಾಂ** ಎಂಬ ಪದದಿಂದ ಸೂಚಿತವಾಗುವ ಅಂಶವೇನೆಂದು ಪರಿಶೀಲಿಸಬೇಕು. ಇಂದ್ರ ಅಗ್ನಿ ಇತ್ಯಾದಿ ದೇವನಾಮಗಳ ನಿರ್ವಚನವನ್ನು ತಿಳಿಸುವಾಗ ದೇವತೆಗಳ ಸ್ವರೂಪವೂ ಉಕ್ತವಾಗಿದೆ.

**ಸ ಯೋಽಯಂ ಮಧ್ಯೇ ಪ್ರಾಣಃ । ಏಷ ಏವೇಂದ್ರಸ್ತಾನೇಷ ಪ್ರಾಣಾನ್ಮಧ್ಯತ ಇಂದ್ರಿಯೇಣೈಂದ್ಧ ಯದೈನ್ಧ ತಸ್ಮಾದಿಂಧ ಇಂಧೋ ಹ ವೈ ತಮಿಂದ್ರ ಇತ್ಯಾಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾಸ್ತಽಇದ್ಧಾಃ ಸತ್ತೆ ನಾನಾ ಪುರುಷಾನಸೃಜಂತ ।**

(ಶ. ಬ್ರಾ. ೬-೧-೧-೨)

CC-0. Jangamwadi Math Collection. Digitized by eGangotri

ಶರೀರಾಂತರ್ಗತವಾದ ಪ್ರಾಣವಾಯುಗಳ ನಡುವೆ ಮುಖ್ಯಪ್ರಾಣವು ಇಂದ್ರನೆಂದು ಪ್ರಸಿದ್ಧವಾಗಿದೆ. ಈ ಮುಖ್ಯ ಪ್ರಾಣವು ತನ್ನ ಸ್ವಶಕ್ತಿಯಿಂದ ಇತರ ಪ್ರಾಣವಾಯುಗಳನ್ನು ಉದ್ದೀಪಿಸುತ್ತದೆ. ಹೀಗೆ ಉದ್ದೀಪಿಸುವಂತೆ ಮಾಡುವುದ ರಿಂದ ಈ ಇಂಧಾನತ್ವದಿಂದಲೇ ಇಂದ್ರನೆಂಬ ಹೆಸರು ಪ್ರಸಿದ್ಧವಾಯಿತು. ಆದರೆ ಇದನ್ನು ಇಂಧಾನಃ ಎಂದೇ ಕರೆಯ ಬಹುದಲ್ಲ, ಇಂದ್ರನೆಂದು ಏತಕ್ಕೆ ಕರೆದರು ಎಂದರೆ ದೇವತೆಗಳು ಯಾವಾಗಲೂ ಅಲೌಕಿಕವಾದ ವಸ್ತುವಿನಲ್ಲಿ ಪ್ರಿಯ ವುಳ್ಳವರು. ಇಂಧಾನಃ ಎಂದರೆ ಲೌಕಿಕವಾದ ಕಾರ್ಯದ ವರ್ಣನೆಯಾಯಿತು. ಈ ಲೌಕಿಕ ವರ್ಣನೆಯನ್ನು ಮೀರಿ ಪರೋಕ್ಷದ ಸೀಮೆಗೆ ದಾಟುವುದು ದೇವತೆಗಳ ಲಕ್ಷಣ. ಆದುದರಿಂದ ದೇವತೆಗಳು " ಪರೋಕ್ಷ ಪ್ರಿಯರೆಂದು ಪ್ರಸಿದ್ಧ ರಾದರು ".

ಅಥ ಯೋ ಗರ್ಭೋಽಂತರಾಸೀತ್ । ಸೋಽಗ್ರಿರಸೃಜ್ಯತ ಸ ಯದಸ್ಯ ಸರ್ವಸ್ಯಾಗ್ರಮಸೃಜ್ಯತ ತಸ್ಮಾದಗ್ರಿರಗ್ರಿರ್ಹ ವೈ ತಮಗ್ನಿರಿತ್ಯಾಚಕ್ಷತೇ ಪರೋಕ್ಷಂ ಪರೋಕ್ಷಕಾಮಾ ಹಿ ದೇವಾಃ ।

(ಶ. ಬ್ರಾ. ೬-೧-೧-೧೧)

ಬ್ರಹ್ಮಾಂತರ್ಗತವಾದ ಗರ್ಭದಿಂದ ಉತ್ಪನ್ನವಾದ ಉತ್ತಮವಾದ ತತ್ತ್ವವು ಅಗ್ರಿಯೆಂದು ಪ್ರಸಿದ್ಧವಾಯಿತು. ವಿಶ್ವದಲ್ಲಿ ಸಕಲಭೂತಗಳಿಗೂ ಪೂರ್ವಭಾವಿಯಾಗಿ ಉತ್ಪನ್ನವಾದುದರಿಂದ ಇದು ಅಗ್ರಿಯೆಂದು ಕರೆಯಲ್ಪಟ್ಟಿತು. ರಹಸ್ಯಾರ್ಥ ದಲ್ಲಿ ಪ್ರಿಯರಾದ ದೇವತೆಗಳು ಇದನ್ನೇ ಅಗ್ನಿಯೆಂದು ಕರೆದರು ; ಎಂಬ ಈ ವಿವರಣೆಗಳಿಂದ ದೇವತೆಗಳ ಸ್ವರೂಪವು ವರ್ಣಿತವಾಗಿದೆ, ಗೂಢಾರ್ಥವನ್ನು ಪ್ರತಿಪಾದಿಸುವುದೂ ಅಥವಾ ಪ್ರಕಾಶಪಡಿಸುವುದೂ ಅಥವಾ ಅದರ ಗಭೀರತೆ ಯನ್ನು ಅಧಿಕಪಡಿಸುವುದೂ ದೇವತೆಗಳ ಸ್ವಭಾವವಾಗಿದೆ. ಈ ಅಂಶವು ದೇವತೆಗಳಿಗೂ ಕವಿಗಳಿಗೂ ಸಾಧಾರಣ ಧರ್ಮವಾಗಿದೆ. ಮಾನವನ ಸಾಧಾರಣವಾದ ದೃಷ್ಟಿಗೆ ಅತೀತವಾದ ರಹಸ್ಯಾರ್ಥವು ದೇವತೆಗಳಿಗೆ ಮಾತ್ರ ಸಾಧ್ಯ. ಆ ದೇವತ್ವವು ಮಾನವನಲ್ಲಿದ್ದರೆ ಆಗ ಅವನು ಕವಿಯೆಂದು ಕರೆಯಲ್ಪಡುತ್ತಾನೆ. ಅವನು ಸಾಧಾರಣ ಪುರುಷನಿಗಿಂತ ಅತ್ಯುತ್ತಮವಾದುದೂ ದಿವ್ಯವಾದುದೂ ಆದ ದೃಷ್ಟಿಯುಳ್ಳವನು. ಅವನು ಮಾನವತ್ವವನ್ನು ಪಡೆದಿದ್ದರೂ ಸಹ ದೇವನೆಂದೇ ಪರಿಗಣಿತನಾಗುತ್ತಾನೆ.

ವಿಜ್ಞಾನಮಾತ್ಮಾನಂದಾತ್ಮನೋ ಹ್ಯೇವ ಸರ್ವೇ ದೇವಾಃ ಸಾ ಹ್ಯೆಷೈವ ದೇವಾನಾಮುದ್ಧಾವಿದ್ಯಾ ಸ ಹ ಸ ನ ಮನುಷ್ಯೋ ಯ ಏವಂವಿದ್ದೇವಾನಾಗ್ಂ ಹ್ಯೇವ ಸ ಏಕಃ ॥

(ಶ. ಬ್ರಾ. ೧೦-೩-೫-೧೩)

ವಿಜ್ಞಾನವೆಂದರೆ ವಿಶೇಷಜ್ಞಾನ. ಇದು ಆನಂದಮಯವಾಗಿದೆ. ಸತ್ಯಜ್ಞಾನವೇ ಈ ಆನಂದಕ್ಕೆ ಕಾರಣ. ಇಂತಹ ಸತ್ಯಜ್ಞಾನವು ದೇವತೆಗಳಿಗೆ ಸಾಧ್ಯವೇ ಹೊರತು ಮಾನವನಿಗಿಲ್ಲ. ಒಂದು ವೇಳೆ ಮಾನವನಲ್ಲೂ ಯಾರಾ ದರೂ ಈ ಜ್ಞಾನವನ್ನು ಪಡೆಯಲು ಶಕ್ತನಾಗಿದ್ದರೆ ಅವನನ್ನೂ ದೇವತೆಯೆಂದೇ ಪರಿಗಣಿಸಲ್ಪಡುವುದು ಎಂದು ದೇವತ್ವದ ಸ್ವರೂಪವನ್ನು ತಿಳಿಸಿದೆ. ಆದುದರಿಂದಲೇ ಕವಿಶಬ್ದಕ್ಕೆ ಕ್ರಾಂತದರ್ಶಿಯೆಂದರ್ಥಮಾಡಿದ್ದಾರೆ. ನಿರುಕ್ತ ಕಾರರು ಈ ಪದವನ್ನು ಕವಿಃ, ಮನೀಷೀ ಇತ್ಯಾದಿ ಮೇಧಾವಿ ನಾಮಗಳಲ್ಲಿ ಪಠಿಸಿದ್ದಾರೆ. (ನಿ. ೩-೧೫).

ಮೇಧಾವೀ ಕವಿಃ ಕ್ರಾಂತದರ್ಶನೋ ಭವತಿ ಕವತೇರ್ವಾ ।

(ನಿ. ೧೨-೧೩)

CC-0. Jangamwadi Math Collection. Digitized by eGangotri

ಕ್ರಮ್ ಧಾತುವಿನಿಂದ ಈ ಪದವು ನಿಷ್ಪನ್ನವಾಗಿ ಕ್ರಾಂತದರ್ಶನವುಳ್ಳವನೆಂದಾಗಲಿ ಅಥವಾ ಕಮ್ ಧಾತುವಿನಿಂದ ನಿಷ್ಪನ್ನವಾಗಿ ಸ್ತುತಿಮಾಡತಕ್ಕ ಸ್ತೋತೃವೆಂದಾಗಲಿ ಅರ್ಥವಾಗುತ್ತದೆಂದು ನಿರುಕ್ತಕಾರರ ನಿರ್ವಚನವಿದೆ. ಸತ್ಯಾರ್ಥ ಗ್ರಾಹಕವಾದ ಬುದ್ಧಿಯೂ ಭಾವವೂ ಸಹ ಈ ಎರಡು ನಿರ್ವಚನಗಳಿಂದಲೂ ತಿಳಿಯುತ್ತದೆ. ಯಾವ ರೀತಿ ದೇವತೆಗಳು ಪರಮಾರ್ಥಜ್ಞಾನವನ್ನು ಪಡೆಯುವ ಶಕ್ತಿಯುಳ್ಳವರು ಎಂದು ಮೇಲಿನ ಉದಾಹರಣೆಯಲ್ಲಿ ವಿವರಿಸಿದೆಯೋ, ಅದೇ ರೀತಿ ಕವಿಯೂ ಸಹ ಭೂತಭವಿಷ್ಯದ್ವರ್ತಮಾನಕಾಲಗಳ ವ್ಯವಹಾರಗಳನ್ನೆಲ್ಲಾ ತಿಳಿಯತಕ್ಕ ಅಲೌಕಿಕವೂ ಅಸಾಧಾರಣವೂ ಆದ ಶಕ್ತಿಯುಳ್ಳವನು. ಅನೇಕಸಂದರ್ಭಗಳಲ್ಲಿ ಸಾಯಣರು ಕವಿಶಬ್ದಕ್ಕೆ ದೇವ ಎಂಬುದು ಪರ್ಯಾಯಪದವೆಂದೇ ತಿಳಿಸಿದ್ದಾರೆ. ಮಾನವನಾದರೂ ಸಹ ಕವಿಯು ದಿವ್ಯಚಕ್ಷುಸ್ಸುಳ್ಳವನಾದುದರಿಂದ ಅವನಲ್ಲಿಯೂ ದೇವತ್ವವಿದೆ. ಮತ್ತು ಅವನು ಮಾನವಾತೀತವಾದ ಶಕ್ತಿಯುಳ್ಳವನು ಎಂದು ತಾತ್ಪರ್ಯ. ಭೌತಿಕವಾಗಿ ಅವನಿಗೆ ಎರಡು ಚಕ್ಷುಸ್ಸುಗಳು ಇದ್ದರೂ ಸಹ, ಅವನ ಅಂತಶ್ಚಕ್ಷುಸ್ಸು ಸಹಸ್ರಕಣ್ಣುಗಳಿಗೆ ಸಮಾನವಾದವು.

ಸಹಸ್ರಣೀಥಾಃ ಕವಯೋ ಯೇ ಗೋಪಾಯಂತಿ ಸೂರ್ಯಂ ।

ಋಷೀನ್ ತಪಸ್ವತೋ ಯಮ ತಪೋಜಾँ ಅಪಿ ಗಚ್ಛತಾತ್ ॥

(ಋ. ಸಂ. ೧೦-೧೫೪-೫)

ಕವಿಗಳು ಸಹಸ್ರನಯನವುಳ್ಳವರು, ಕ್ರಾಂತದರ್ಶಿಗಳು. ಅವರು ಆದಿತ್ಯನನ್ನೂ ರಕ್ಷಿಸುವ ಶಕ್ತಿಯುಳ್ಳವರಾಗಿದ್ದಾರೆ. [ಸಹಸ್ರನಯನವೆಂದರೆ, ಸಹಸ್ರಚಕ್ಷುಸ್ಸುಳ್ಳವರೆಂದಾಗಲಿ ಅಥವಾ ಸಹಸ್ರಾರು ಅನುಯಾಯಿಗಳಿಗೆ ಮಾರ್ಗದರ್ಶಕರೆಂದಾಗಲಿ ಅರ್ಥವಾಗಹುದು. ಮಾರ್ಗದರ್ಶಕರೆಂದು ಹೇಳುವುದಾದರೆ ತಾವು ತತ್ತ್ವಾರ್ಥವನ್ನು ತಿಳಿದು ಇತರರಿಗೆ ಬೋಧಿಸುವ ಶಕ್ತಿಯುಳ್ಳವರೆಂದರ್ಥ] ಇಂತಹ ಶಕ್ತಿಯುತರಾದುದರಿಂದಲೇ,

" ಸಮುದ್ರೇ ಅಂತಃ ಕವಯೋ ವಿ ಚಕ್ಷತೇ ಮರೀಚೀನಾಂ ಪದಮಿಚ್ಛಂತಿ ವೇಧಸಃ ॥ "

(ಋ. ಸಂ. ೧೦-೧೭೭-೧)

ಕ್ರಾಂತದರ್ಶಿಗಳಾದ ಈ ಕವಿಗಳು ಆದಿತ್ಯಮಂಡಲಾಂತರ್ವರ್ತಿಯಾದ ಪರತತ್ತ್ವವನ್ನು ತಿಳಿಯುತ್ತಾರೆ. ಮತ್ತು ತತ್ತಾದಾತ್ಮ್ಯವನ್ನೂ ಪಡೆಯಲಪೇಕ್ಷಿಸುತ್ತಾರೆ. ಅಲ್ಲದೇ,

ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಮೃತಸ್ಯ ಪದೇ ಕವಯೋ ನಿ ಪಾಂತಿ ॥

(ಋ. ಸಂ. ೧೦-೧೭೭-೨)

ಋತಸ್ಯ ಪದಂ ಕವಯೋ ನಿ ಪಾಂತಿ ಗುಹಾ ನಾಮಾನಿ ದಧಿರೇ ಪರಾಣಿ ॥

(ಋ. ಸಂ. ೧೦-೫-೨)

ಕ್ರಾಂತದರ್ಶಿಗಳಾದವರೂ ದೇವತ್ವವುಳ್ಳವರೂ ಆದ ಕವಿಗಳು ಋತದ ಪಥವನ್ನು ಪ್ರವೇಶಿಸಿ ಅತ್ಯಂತ ಗೂಢವಾದುದೂ ಅತ್ಯುತ್ಕೃಷ್ಟಮವಾದುದೂ ಆದ ರಹಸ್ಯವನ್ನರಿಯುತ್ತಾರೆ, ಎಂದು ಕವಿಗಳ ಶಕ್ತಿಯು ವರ್ಣಿತವಾಗಿದೆ. (ಇದೇ ವಿಷಯವನ್ನು ಋಗ್ವೇದ ಸಂಹಿತೆಯಲ್ಲಿ ಭಾಗ ೧೩. ಪುಟ. 377-379ರಲ್ಲಿ ವಿಶದವಾಗಿ ತಿಳಿಸಿದೆ).

ಪ್ರಕೃತವಾದ ಮಂತ್ರದಲ್ಲೂ ಸಹ ಈ ಅಸಾಧಾರಣವಾದ ಶಕ್ತಿಯನ್ನು ಪ್ರಕಾಶಪಡಿಸುವುದರಿಂದಲೇ, ದೇವತೆಗಳನ್ನು ನಿರ್ದೇಶಿಸಲು ಕವೀನಾಂ ಎಂಬ ಪರ್ಯಾಯಪದದ ಪ್ರಯೋಗವಿದೆ. ಇಂತಹ ದೇವತೆಗಳು ವಿಶ್ವವ್ಯಾಪಕರಾಗಿದ್ದಾರೆ. ಆದುದರಿಂದ, ಇವರು ತ್ರಿಷಧಸ್ಥರು.

CC-0. Jangamwadi Math Collection. Digitized by eGangotri

**ತ್ರಿಷಧಸ್ಥಾ**—ತ್ರಯೋ ಲೋಕಾಃ ದೇವಾನಾಂ ನಿವಾಸಸ್ಥಾನಾನಿ ಭವಂತಿ । ದೇವತೆಗಳಿಗೆ ಮೂರು ಲೋಕಗಳೂ ನಿವಾಸಸ್ಥಾನಗಳಾಗಿರುತ್ತವೆ. ಇವು ಸಹ ಪ್ರತ್ಯೇಕವಾಗಿ ಮೂರು ಬಗೆಯುಳ್ಳವಾಗಿರುತ್ತವೆ.

> **ತಿಸ್ರ ಏವ ದೇವತಾ ಇತಿ ನೈರುಕ್ತಾಃ । ಅಗ್ನಿಃ ಪೃಥಿವೀಸ್ಥಾನಃ । ವಾಯುರ್ವಾ ಇಂದ್ರೋ ವಾ ಅಂತರಿಕ್ಷಸ್ಥಾನಃ । ಸೂರ್ಯೋ ದ್ಯುಸ್ಥಾನಃ ॥ ತಾಸಾಂ ಮಹಾಭಾಗ್ಯಾತ್ ಏಕೈಕಸ್ಯಾ ಅಪಿ ಬಹೂನಿ ನಾಮಧೇಯಾನಿ ಭವಂತಿ ॥**
>
> (ನಿ. ೭-೫)

ಅಗ್ನಿ, ವಾಯು ಅಥವಾ ಇಂದ್ರ ಮತ್ತು ಆದಿತ್ಯ ಈ ಮೂರು ದೇವತೆಗಳಿಗೂ ಮೂರು ಲೋಕವು ಅಧಿಷ್ಠಾನವು. ಅಗ್ನಿಗೆ ಪೃಥಿವಿಯೂ, ವಾಯು ಅಥವಾ ಇಂದ್ರನಿಗೆ ಅಂತರಿಕ್ಷವೂ ಆದಿತ್ಯನಿಗೆ ದ್ಯುಲೋಕವೂ ವಾಸಸ್ಥಾನವು. ಇವರುಗಳ ಮಹಾತ್ಮ್ಯದಿಂದ ಇವರಿಗೆ ಅನಂತವಾದ ಇತರ ನಾಮಧೇಯಗಳೂ ಇರುತ್ತವೆ ಎಂದು ನಿರುಕ್ತಕಾರರು ಹೇಳಿ ಈ ಮೂರು ಲೋಕಗಳನ್ನೂ ಆಕ್ರಮಿಸಿರುವ ದೇವತೆಗಳ ಸ್ವರೂಪನ್ನು ವಿವರಿಸಿದ್ದಾರೆ. ಅನಂತ ಪ್ರಭೇದಗಳನ್ನು ಹೊಂದಿರುವ ಈ ಮೂರು ದೇವತೆಗಳಿಗೂ ಮೂರು ಲೋಕಗಳು ಅಧಿಷ್ಠಾನವಾಗಿರುವುದನ್ನು ಋಕ್ಸಂಹಿತೆಯಲ್ಲಿಯೂ ಈ ರೀತಿ ತಿಳಿಸಿದೆ.

> **ಸೂರ್ಯೋ ನೋ ದಿವಸ್ಪಾತು ವಾತೋ ಅಂತರಿಕ್ಷಾತ್ । ಅಗ್ನಿರ್ನಃ ಪಾರ್ಥಿವೇಭ್ಯಃ ॥**
>
> (ಋ. ಸಂ. ೧೦-೧೫೮-೧)

ದ್ಯುಲೋಕವರ್ತಿಯಾದ ಸೂರ್ಯನೂ, ಅಂತರಿಕ್ಷಸ್ಥವಾದ ವಾಯುವೂ, ಪೃಥಿವೀಸ್ಥವಾದ ಅಗ್ನಿಯೂ ಸಹ ನಮ್ಮನ್ನು ಸಂರಕ್ಷಿಸಲಿ ಎಂದು ಪ್ರಾರ್ಥಿಸಿರುವಾಗ **ತ್ರಿಷಧಸ್ಥಾ** ಎಂಬುದರಿಂದ ಸೂಚಿತವಾಗಿರುವ ಮೂರು ಲೋಕಗಳೂ ವರ್ಣಿತವಾಗಿವೆ.

**ಸಧಸ್ಥ**ಶಬ್ದಕ್ಕೆ ಸಹಸ್ಥಾನವೆಂದರ್ಥ. ಕೆಲವೆಡೆಗಳಲ್ಲಿ ಈ ಪದವು ಅಂತರಿಕ್ಷಪರ್ಯಾಯವಾಗಿಯೂ ಇರುವುದುಂಟು. ಋತ್ವಿಕ್ಕುಗಳೆಲ್ಲರೂ ಕೂಡಿಕೊಂಡು ಯಜ್ಞಮಾಡುವ ವೇದಿಕಾರೂಪವಾದ ಸ್ಥಾನಕ್ಕೂ ಸಧಸ್ಥವೆಂದು ಹೇಳುವ ರೂಢಿಯಿದೆ. ಅಲ್ಲದೇ, **ಸಧಸ್ಥಂ ಸಹ ಸ್ಥಾನಂ ಪುಣ್ಯಕೃತಾಂ ಸಹನಿವಾಸಯೋಗ್ಯಂ ಭೂರಾದಿ-ಲೋಕಸಪ್ತಕಂ** । ಸುಕೃತಿಗಳು ವಾಸಮಾಡಬಹುದಾದ ಏಳುಲೋಕಗಳೆಂದೂ, ಅಥವಾ **ಸಹಸ್ಥಾನಂ ಸತ್ಯಲೋಕಂ** ಸಕಲಲೋಕಗಳಿಗೂ ಮೇಲ್ಭಾಗದಲ್ಲಿರುವುದೂ ಎಲ್ಲಕ್ಕಿಂತಲೂ ಶ್ರೇಷ್ಠವಾಗಿರುವುದೂ ಆದ ಸತ್ಯಲೋಕವೆಂದೂ ಸಾಯಣರು ಋ. ಸಂ ೧-೧೫೪-೧ ನೇ ಋಕ್ಕಿನ ಭಾಷ್ಯದಲ್ಲಿ ವಿವರಿಸಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ತ್ರಿಷಧಸ್ಥಾ ಎಂದಿರುವುದನ್ನು ಪರಿಶೀಲಿಸಿದರೆ ನಿಷ್ಕೃಷ್ಟವಾದ ಅರ್ಥವನ್ನು ಹೇಳುವುದು ಸುಲಭವಲ್ಲ. ಅಗ್ನಿ, ವಾಯು ಮತ್ತು ಸೂರ್ಯ ಈ ಮೂರು ದೇವತೆಗಳಿಗೂ, ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂಬ ಈ ಕ್ರಮವು ಬಹುಶಃ ಅನೇಕ ಕಡೆಗಳಲ್ಲಿಯೂ ಉಕ್ತವಾಗಿದೆ. ಆದರೆ ಶತಪಥಾದಿಗಳಲ್ಲಿ ಈ ಪ್ರಕರಣದಲ್ಲಿ ಒಂದು ವೈಶಿಷ್ಟ್ಯವನ್ನೂ ತೋರಿಸಿದೆ

> **ಬ್ರಹ್ಮ ವಾ ಇದಮಗ್ರ ಆಸೀತ್ । ತದ್ದೇವಾನಸೃಜತ । ತದ್ದೇವಾನ್ತ್ಸೃಷ್ಟ್ವೈಷು ಲೋಕೇಷು ವ್ಯಾರೋಹಯದಸ್ಮಿನ್ನೇವ ಲೋಕೇಽಗ್ನಿಂ ವಾಯುಮಂತರಿಕ್ಷೇ ದಿವ್ಯೇವ ಸೂರ್ಯಂ । ಅಥ ಯೇಽತ ಊರ್ಧ್ವಾ ಲೋಕಾಃ । ತದ್ಯಾ ಅತ ಊರ್ಧ್ವಾ ದೇವತಾಸ್ತೇಷು ತಾ ದೇವತಾ**

CC-0. Jangamwadi Math Collection. Digitized by eGangotri

**ವ್ಯಾರೋಹಯತ್ಸ ಯಥಾ ಹ್ಯೈವೇಮ ಆವಿರ್ಲೋಕಾ ಇಮಾಶ್ಚ ದೇವತಾ ಏವಮು ಹ್ಯೈವ ತ ಆವಿರ್ಲೋಕಾಸ್ತಾಶ್ಚ ದೇವತಾ ಯೇಷು ತಾ ದೇವತಾ ವ್ಯಾರೋಹಯತ್ ॥**

(ಶ. ಬ್ರಾ ೧೧-೨-೩-೧)

ವಿಶ್ವಸೃಷ್ಟಿಗಿಂತಲೂ ಪೂರ್ವಭಾವಿಯಾಗಿದ್ದ ಬ್ರಹ್ಮನು ಅಗ್ನ್ಯಾದಿದೇವತಾತ್ರಯವನ್ನೂ ಸೃಷ್ಟಿಸಿ ಅವರನ್ನು ಪೃಥಿವ್ಯಾದಿ ಲೋಕತ್ರಯದಲ್ಲಿ ಸ್ಥಾಪಿಸಿದನು. ಆದರೆ ಈ ದೇವತೆಗಳಿಗಿಂತಲೂ ಉತ್ಕೃಷ್ಟರಾದ ದೇವತೆಗಳನ್ನು ಈ ಪೃಥಿವ್ಯಾದಿ ಲೋಕಗಳಿಗಿಂತಲೂ ಉತ್ಕೃಷ್ಟವಾದ ಮೂರು ಲೋಕಗಳಲ್ಲೂ ಸ್ಥಾಪಿಸಿದನು ಎಂದಿದೆ. ಇದೇ ವಿಷಯವನ್ನು ಮುಂದುವರಿಸುತ್ತಾ ಸಕಲಲೋಕಗಳಿಗೂ ಐಕ್ಯವನ್ನು ತೋರಿಸುವ ವಿವರಣೆಯಿರುತ್ತದೆ-

ಸಾಯಣರು ತ್ರಿಲೋಕಗಳೂ ತ್ರಿವೃತವಾಗಿರುವುವು ಎಂದರೇನು, ಇದರ ಅಭಿಪ್ರಾಯವೇನು ಎಂಬುದನ್ನು ವಿವರಿಸುತ್ತಾ—

**ನ ದ್ಯಾವ ಇಂದ್ರಮೋಜಸಾ ನಾಂತರಿಕ್ಷಾಣಿ ವಜ್ರಿಣಂ । ನ ವಿವ್ಯಚಂತ ಭೂಮಯಃ ॥**

(ಋ. ಸಂ. ೮-೬-೧೫)

ಎಂಬ ಋಕ್ಕಿನಲ್ಲಿ ದ್ಯುಲೋಕಗಳು, ಅಂತರಿಕ್ಷಗಳು, ಪೃಥಿವಿಗಳು ಎಂದು ಬಹುವಚನವಿರುವುದರಿಂದ ಅದರಂತೆ ಇಲ್ಲಿಯೂ ಅರ್ಥಮಾಡಬೇಕೆಂದು ತಿಳಿಸಿದ್ದಾರೆ. ಆದರೆ, ತ್ರಿಪ್ರಕಾರವು ಹೇಗೆ ಎಂಬುದನ್ನು ಹೇಳಿಲ್ಲ. ಮುಂದೆ ಅದೇ ೮-೬-೧೫ ನೇ ಋಕ್ಕಿನ ಭಾಷ್ಯದಲ್ಲಿ,

**ತ್ರಯೋ ವಾ ಇಮೇ ತ್ರಿವೃತೋ ಲೋಕಾಃ**

(ಐ. ಆ. ೧-೧-೨)

ಎಂಬ ವಾಕ್ಯದಲ್ಲಿ ಹೇಳಿರುವಂತೆ ತ್ರಿವೃತವಾಗಿರುವುವು ಎಂದು ಉದಾಹರಿಸಿರುವ ಆರಣ್ಯಕದ ವಾಕ್ಯವನ್ನು ಆಧಾರವಾಗಿಟ್ಟುಕೊಂಡಿದ್ದಾರೆ. ಇಲ್ಲಿಯೂ ಮೂರು ವಿಭಾಗಗಳ ಸ್ವರೂಪವೇನೆಂಬು ಹೇಳಿಲ್ಲ. ಅಲ್ಲದೇ,

**ತಿಸ್ರೋ ಭೂಮೀರ್ಧಾರಯನ್ ತ್ರೀಁರುತ ದ್ಯೂನ್ ತ್ರೀಣಿ ವ್ರತಾ ವಿದಥೇ ಅಂತರೇಷಾಂ ।**

(ಋ ಸಂ. ೨-೨೭-೮)

ಎಂಬ ಮಂತ್ರದಲ್ಲಿರುವಂತೆ ಪ್ರಕೃತದಲ್ಲಿಯೂ ಅರ್ಥಮಾಡಬೇಕೆಂದು ತಿಳಿಸಿದ್ದಾರೆ ಆದರೆ ಉದಾಹೃತವಾಗಿರುವ ೨-೨೭-೮ರಲ್ಲಿ ಭೂಮಿಯೇ ತ್ರಿವೃತವಾಗಿರುವುದು ಎಂದರ್ಥವಲ್ಲ. ಇದೇ ಋಕ್ಕಿನಲ್ಲಿಯೇ ಸಾಯಣರು **ಅತ್ರ ಭೂಮಿಶಬ್ದಃ ಲೋಕತ್ರಯೇ ವರ್ತತೇ ।** ಇಲ್ಲಿ ಭೂಮಿಯೆಂದರೆ ಮೂರು ಲೋಕವೆಂದರ್ಥವೆಂದು ತಿಳಿಸಿದ್ದಾರೆ. ಆದುದರಿಂದ ಭೂಮಿಯೇ ಮೂರು ಪ್ರಕಾರವಾಗಿದೆಯೆಂದರ್ಥವಲ್ಲವೆಂದೂ ತಿಳಿಯುತ್ತದೆ. **"ಯೋ ದ್ವಿತೀಯಸ್ಯಾಂ ತೃತೀಯಸ್ಯಾಂ ಪೃಥಿವ್ಯಾಂ"** ಎಂಬ ವಾಕ್ಯದಲ್ಲಿರುವಂತೆ ಇಲ್ಲಿಯೂ ಅರ್ಥಮಾಡಬೇಕೆಂದಿದ್ದಾರೆ ಆದುದರಿಂದ ಪೃಥಿವ್ಯಾದಿಗಳು ವೈಯಕ್ತಿಕವಾಗಿ ಒಂದೊಂದೂ ಮೂರುವಿಧವಾಗಿರುವುವೇ ಅಥವಾ ಒಂದು ಹೆಸರನ್ನು ಹೇಳಿದರೆ ಉಳಿದ ಮೂರು ಹೆಸರನ್ನೂ ಹೇಳಿದಂತಾಗುವುದೇ ಎಂಬುದನ್ನು ಮುಂದೆ ಪರಿಶೀಲಿಸಲಾಗುತ್ತದೆ

**ತ್ರಿಮಾತಾ—ತ್ರಯಾಣಾಂ ಅಮೀಷಾಂ ಲೋಕಾನಾಂ ನಿರ್ಮಾತಾ ಸಂವತ್ಸರಃ ಸೂರ್ಯೋ ವಾ ।** ಈ ಪೃಥಿವ್ಯಾದಿ ಮೂರುಲೋಕಗಳಿಗೂ ನಿರ್ಮಾತೃವಾದ ಸಂವತ್ಸರ ಅಥವಾ ಸೂರ್ಯನು ; **ವಿದಥೇಷು ಸಮ್ರಾಟ್** ಎಂಬ ವರ್ಣನವಿರುವುದರಿಂದ ತ್ರಿಮಾತಾ ಎಂದರೆ ಸಂವತ್ಸರವೇ ಅಥವಾ ಸೂರ್ಯನೇ, ಅಥವಾ ಸಂವತ್ಸರ ಮತ್ತು ಸೂರ್ಯ ಎರಡಕ್ಕೂ ವಿದಥದಲ್ಲಿ ಸಮ್ರಾಟ್ತ್ವವು ಸಹಜವೇ ಎಂಬುದನ್ನು ಪರಿಶೀಲಿಸಬೇಕು. ಸೂರ್ಯನಿಗೆ ಹೇಗೆ

CC-0. Jangamwadi Math Collection. Digitized by eGangotri

ತ್ರಿಮಾತೃತ್ವವೂ ವಿದಥದಲ್ಲಿ ಸಮ್ರಾಟ್ತ್ವವೂ ಸಾಧ್ಯವೋ ಹಾಗೆ ಸಂವತ್ಸರಕ್ಕೆ ಎರಡು ಅಧಿಕಾರವೂ ಇದ್ದರೆ ಮಾತ್ರ ಇಲ್ಲಿ ತ್ರಿಮಾತಾ ಎಂದರೆ ಅವೆರಡರಲ್ಲಿ ಒಂದು ಎಂದು ತಾತ್ಪರ್ಯ.

ಸಂವತ್ಸರಕ್ಕೂ ಸಹ ಆದಿತ್ಯನ ಮೂಲಕವೇ ತ್ರಿಮಾತೃತ್ವವು ಪ್ರಾಪ್ತವಾಗಿದೆ. ಆದಿತ್ಯ ಮತ್ತು ಸಂವತ್ಸರಗಳ ಸಂಬಂಧವೇ ಮೂರು ಲೋಕಗಳಲ್ಲೂ ಸಕಲ ದೇವಮಾನವಾದಿಗಳ ಉತ್ಪತ್ತಿಗೂ ಮೂಲವಾಗಿದೆ. ಅಗ್ನಿ, ಆದಿತ್ಯ ಸಂವತ್ಸರ ಈ ಮೂರು ತತ್ತ್ವಗಳೂ ಯಜ್ಞದ ಪ್ರಭುಗಳು. ಈ ಮೂರರ ಸಂಯೋಗದಿಂದಲೇ ಯಜ್ಞೋತ್ಪತ್ತಿ, ಯಜ್ಞವೇ ಸೃಷ್ಟಿಯ ಮೂಲ, ಯಜ್ಞವೇ ಈ ಸಂಯೋಗಕ್ಕೆ ಮೂಲ. ಹೀಗೆ ಕಾರ್ಯಕಾರಣಗಳ ಅಭೇದವೂ ಸಹ ಸೃಷ್ಟಿಯ ಅನಾದಿತ್ವವನ್ನೂ, ಯಜ್ಞಕ್ಕೂ ಸೃಷ್ಟಿಗೂ ಇರುವ ಸಂಬಂಧವನ್ನು ವಿವರಿಸುತ್ತದೆ.

ಅಪ್ಸು ಹೀಮೇ ಲೋಕಾಃ ಪ್ರತಿಷ್ಠಿತಾಃ ಆದಿತ್ಯೆ ಆಸಜ್ಞನಮಾದಿತ್ಯೇ ಹೀಮೇ ಲೋಕಾ ದಿಗ್ಭಿರಾ-
ಸಕ್ತಾಃ.... ಸಂವತ್ಸರ ಏಷೋಽಗ್ನಿರ್ಋತವಃ ಶಿಕ್ಯಮೃತುಭಿರ್ಹಿ ಸಂವತ್ಸರಃ ಶಕ್ನೋತಿ....
(ಶ. ಬ್ರಾ. ೬-೭-೧-೧೭, ೧೮)

ಇತ್ಯಾದಿ ವಾಕ್ಯಗಳಲ್ಲಿ ವಿವೃತವಾಗಿರುವ ಸೃಷ್ಟಿತತ್ತ್ವವನ್ನೂ ಅದಕ್ಕೂ ಯಜ್ಞತತ್ತ್ವಕ್ಕೂ ಇರುವ ಸಂಬಂಧವನ್ನೂ ಸಹ ಮುಂದೆ ಪುರುಷ ಸೂಕ್ತದ ವಿವರಣೆಯಲ್ಲಿ ತಿಳಿಸಲಾಗುತ್ತದೆ.

ವಿಧಥೇಷು—ವಿದಥಶಬ್ದವನ್ನು ಜ್ಞಾನ, ಯಜ್ಞ, ಯಜ್ಞಸಭೆ, ನಿಯಮಪಾಲನೆ ಇತ್ಯಾದ್ಯರ್ಥಗಳಲ್ಲಿ ಪ್ರಯೋಗಿಸಿರುವುದನ್ನೂ ಇವರಿಂದ ಸೂಚಿತವಾಗುವ ಯಾಜ್ಞಿಕಪ್ರಭಾವವನ್ನೂ ಹಿಂದೆ ವಿವರಿಸಿ ತಿಳಿಸಿದೆ.

ತಿಸ್ರಃ ಯೋಷಣಾಃ ಆ ಪತ್ಯಮಾನಾಃ । ಯಜ್ಞಕಾಲದಲ್ಲಿ ಮೂವರು ಸ್ತ್ರೀಯರೂ ಇಳಿದು ಬರುತ್ತಾರೆ. ಇವರು ಯಾರೆಂದರೆ—ಇಳಾ, ಭಾರತೀ ಮತ್ತು ಸರಸ್ವತೀ ಎಂದು ಭಾಷ್ಯಕಾರರು ತಿಳಿಸಿದ್ದಾರೆ. ಈ ಮೂರು ದೇವತೆಗಳ ಸ್ವರೂಪವನ್ನೂ ಹಿಂದೆ ಆಪ್ರೀಸೂಕ್ತಗಳನ್ನು ವಿವರಿಸುವ ಸಂದರ್ಭದಲ್ಲಿ ತಿಳಿಸಲಾಗಿದೆ. (ಋಗ್ವೇದ ಸಂಹಿತಾ ಭಾಗ ೧೧. ಪುಟ. 263-266). ಆದರೂ ಸಹ ಪ್ರಕೃತದಲ್ಲಿ ಆದಿತ್ಯಪ್ರಮುಖವಾದ ವರ್ಣನೆಯಕಾಲ ದಲ್ಲಿ ಯಾಜ್ಞಿಕಸಂಬಂಧವನ್ನು ಹೊಂದಿರುವ ಈ ಮೂರು ದೇವತೆಗಳಿಗೂ ಆದಿತ್ಯನಿಗೂ ಯಾವ ಸಂಬಂಧವಿದೆ ಎಂಬುದನ್ನು ಪರಿಶೀಲಿಸಬೇಕು.

"ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ ತ್ವಷ್ಟಾ ಚೈವೈತದಾಶ್ರಯೇಃ"
(ಬೃ. ದೇ. ೧-೧೦೮)

ಮೂರು ದೇವತೆಗಳೂ ಸಹ ಈ ಅಗ್ನಿಯನ್ನಾಶ್ರಯಿಸಿ ಅಗ್ನಿಯ ಅಂತರ್ಗತರಾಗಿದ್ದಾರೆ ಎಂದು ಬೃಹದ್ದೇವತೆಯ ವಾಕ್ಯವಿದೆ ಅಲ್ಲದೇ ಮುಂದುವರಿಸಿದ ವಾಕ್ಯದಲ್ಲಿ ಇನ್ನೂ ವಿಶದವಾಗಿ ತಿಳಿಸಿದೆ.

ತಿಸ್ರಸ್ತು ದೇವ್ಯೋ ಯಾಃ ಪ್ರೋಕ್ತಾಸ್ತ್ರಿಸ್ಥಾನೈವೇಹ ಸಾ ತು ವಾಕ್ ।
ತ್ರಿವಿಧೇನೋಚ್ಯತೇ ನಾಮ್ನಾ ಜ್ಯೋತಿಃಷು ತ್ರಿಷು ವರ್ತಿನೀ ॥
ಅಗ್ನಿನೇವಾನುಗೇಳಾ ತು ಮಧ್ಯಂ ಪ್ರಾಪ್ತಾ ಸರಸ್ವತೀ ।
ಅಮೂ ಸ್ಥಿತಾಧಿಲೋಕಂ ತು ಭಾರತೀ ಭವತಿ ಹ್ಯಸೌ ॥
ಸೈಷಾ ತು ತ್ರಿವಿಧಾ ವಾಗ್ಸ್ಯೈ ದಿವಿ ಚ ವ್ಯೋಮ್ನಿ ಚೇಹ ಚ ।
ವ್ಯಸ್ತಾ ಚೈವ ಸಮುಸ್ತಾ ಚ ಭಜತ್ಯಗ್ನೀನಿಮಾನಪಿ ॥
(ಬೃ. ದೇ. ೩-೧೨ ರಿಂದ ೧೪)

CC-0. Jangamwadi Math Collection. Digitized by eGangotri

ಅಯಂ ಪ್ರಯೋಗಸ್ತ್ರ್ವೇತೇಷಾಂ ಜ್ಯೋತಿಷಾಂ ತ್ರಿಷು ವರ್ತತಃ ।

(ಬೃ ದೇ. ೧.೯೦)

ತ್ರಿಸೋ ದೇವ್ಯಃ ಎಂದರೆ ಮೂರು ಲೋಕಗಳಲ್ಲಿಯೂ ಇರತಕ್ಕ ವಾಗಧಿದೇವತೆಗಳು. ಅವರಲ್ಲಿ ಇಳೆಯೂ ಪಾರ್ಥಿವಾಗ್ನಿಯನ್ನನುಸರಿಸಿದಳು. ಸರಸ್ವತಿಯು ಮಧ್ಯಲೋಕವನ್ನಾಕ್ರಮಿಸಿದಳು. ಭಾರತಿಯು ದ್ಯುಲೋಕಸ್ಥಳಾದಳು. ಆದರೂ ಸಹ ಮೂರು ದೇವತೆಗಳೂ ಸಹ ಪಾರ್ಥಿವಾಗ್ನಿಯನ್ನೇ ಸೇವಿಸುತ್ತಾರೆ. ಇಳಾಶಬ್ದಕ್ಕೆ ಕೆಲವೆಡೆಗಳಲ್ಲಿ ಹವಿಸ್ಸಿನ ರೂಪದ ಅನ್ನವೆಂದರ್ಥಮಾಡಿದೆ. "ಇಳಾಯಾಸ್ಪುತ್ರೋ ವಯುನೇऽಜನಿಷ್ಟ" ಎಂಬಲ್ಲಿ ಇಳೆಗೂ ಅಗ್ನಿಗೂ ಇರುವ ಸಂಬಂಧವನ್ನು ತಿಳಿಸಿದೆ. ಘೃತಪದೀ ಘೃತಹಸ್ತಾ ಇತ್ಯಾದಿ ವಿಶೇಷಣಗಳೂ ಸಹ ಅಗ್ನಿ ಸಂಬಂಧವನ್ನು ಸೂಚಿಸುವ ಪದಗಳು.

ಆ ನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ ।
ತಿಸ್ರೋ ದೇವೀರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದಂತು ॥

(ಋ. ಸಂ. ೧೦-೧೧೦-೮)

ಎಂಬ ಋಕ್ಕನ್ನುದಾಹರಿಸಿ ನಿರುಕ್ತಕಾರರು ಮೇಲಿನ ತಾತ್ಪರ್ಯವನ್ನು ವಿಶದವಾಗಿ ತಿಳಿಸಿದ್ದಾರೆ. **ಭರತಃ ಆದಿತ್ಯಃ ತಸ್ಯ ಭಾಃ ಭಾರತೀ** (ನಿ. ೮-೧೩) ಭರತನೆಂದರೆ ಸೂರ್ಯನು. ಅವನ ಪ್ರಕಾಶಕ್ಕೆ ಭಾರತಿಯೆಂದು ಹೆಸರು ; **ಸರ ಇತ್ಯುದಕನಾಮ । ತದ್ವತೀ ಸ್ತನಿತಾದಿರೂಪಾ ಮಾಧ್ಯಮಿಕಾ ಚ ವಾಕ್** । ಉದಕವನ್ನುಳ್ಳವಳೂ, ಗುಡುಗು ಮುಂತಾದ ಶಬ್ದವುಳ್ಳವಳೂ ಆದ ಅಂತರಿಕ್ಷಸ್ಥವಾದ ವಾಗ್ದೇವತೆಯ ರೂಪಾಂತರವೇ **ಸರಸ್ವತೀ**ನಾಮಾಂಕಿತವು. ಹೀಗೆ **ಭಾರತಿಯು** ದ್ಯುಲೋಕಸ್ಥನಾದ ಆದಿತ್ಯನ ಪ್ರಭೆಯು. **ಸರಸ್ವತಿಯು** ಅಂತರಿಕ್ಷಸ್ಥವಾದ ವಾಯುವಿನ ವಿಭೂತಿಯು; **ಇಳೆಯು** ಪಾರ್ಥಿವಾಗ್ನಿಯ ಪ್ರಭೆಯು. ಹೀಗೆ ಈ ಮೂರು ದೇವತೆಗಳೂ ಮೂರು ಲೋಕದ ಪ್ರತಿನಿಧಿಗಳಾಗಿ ಯಜ್ಞಕ್ಕೆ ಪ್ರಾಧಾನ್ಯವನ್ನು ಕೊಟ್ಟು ಯಜ್ಞದಲ್ಲಿ ಭಾಗವಹಿಸುತ್ತಾರೆ. ಅದೂ ಅಲ್ಲದೇ,

ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ಪಶ್ಯಾತ್ಸೂರ್ಯಮುಚ್ಚರಂತಂ ॥

(ಋ. ಸಂ. ೪-೨೫-೪)

ಎಂಬ ಋಕ್ಕಿನಲ್ಲಿ ಭಾರತಃ ಎಂಬ ಪದವು ಅಗ್ನಿಗೆ ವಿಶೇಷಣವಾದುದರಿಂದ ತತ್ಸಂಬಂಧಿಯಾದ ಪ್ರಭೆಗೆ ಭಾರತೀ ಎಂದು ಹೆಸರಿರಬಹುದೆಂದೂ ಇನ್ನು ಕೆಲವರ ಮತ

ಹೋತಾಯಕ್ಷತ್ತಿಸ್ರೋ ದೇವೀರಪಸಾಮಪಸ್ತಮಾ ಅಚ್ಛಿದ್ರಮದ್ಯೇದಮಪಸ್ತನ್ವತಾಂ ।
ದೇವೇಭ್ಯೋ ದೇವೀರ್ದೇವಮಪೋ ವಿಯಂತ್ವಾಜ್ಯಸ್ಯ ಹೋತರ್ಯಜ ॥

(ತೈ. ಬ್ರಾ. ೩-೬-೨-೨)

ಎಂದಿರುವ ತೈತ್ತಿರೀಯಬ್ರಾಹ್ಮಣದ ವಾಕ್ಯವನ್ನು ವಿವರಿಸುವಾಗ ಇಡಾ,ಸರಸ್ವತೀ, ಭಾರತೀತ್ಯೇವಂರೂಪಾಸ್ತಿಸ್ರೋऽಷ್ಟಮಪ್ರಯಾಜದೇವ್ಯಸ್ತದ್ರೂಪಮಗ್ನಿಂ ದೈವ್ಯೋ ಹೋತಾ ಯಜತು । ಇಡಾ, ಸರಸ್ವತೀ ಭಾರತೀ ಎಂಬ ಮೂವರು ಎಂಟನೆಯ ಪ್ರಯಾಜಮಂತ್ರದ ದೇವತೆಗಳು, ಅಗ್ನಿಯನ್ನು ಪ್ರತಿಬಿಂಬಿಸುವ ದೇವತೆಗಳು, ಎಂದು ಹೇಳಿದೆ.

CC-0. Jangamwadi Math Collection. Digitized by eGangotri

ಈ ಮೂರು ಸ್ವರೂಪಗಳನ್ನೂ ಹೊಂದಿ ಯಜ್ಞಕ್ಕೆಲ್ಲಾ ಪ್ರಭುವಾದ ಅಗ್ನಿಯೇ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತನಾಗಿರುವ ಆದಿತ್ಯನು.

ಏತದ್ಭೂತೇಷು ಲೋಕೇಷು ಅಗ್ನಿಭೂತಂ ಸ್ಥಿತಂ ತ್ರಿಧಾ ।
ಋಷಯೋ ಗೀರ್ಭಿರರ್ಚಂತಿ ವ್ಯಂಜಿತಂ ನಾಮಭಿಸ್ತ್ರಿಭಿಃ ॥

(ಬೃ. ದೇ. ೧-೬೪)

ಸಕಲ ಭೂತಗಳಲ್ಲಿಯೂ ಸಕಲ ಲೋಕಗಳಲ್ಲಿಯೂ ವ್ಯಾಪಿಸಿಯೂ ಅಗ್ನಿರೂಪಸ್ಥಿತನಾಗಿಯೂ ಇರತಕ್ಕ ಈ ಅಗ್ನಿಯೇ ಮೂರು ಲೋಕಗಳಲ್ಲಿಯೂ ರೂಪಾಂತರದಿಂದ ಪ್ರಸಿದ್ಧನಾಗಿ ಅಗ್ನಿ, ವಾಯು, ಆದಿತ್ಯ ಎಂಬ ಹೆಸರಿನಿಂದ ಸ್ತುತನಾಗಿದ್ದಾನೆ. ಇಂತಹ ಅಗ್ನಿಯ ವಿಭೂತಿವಿಶೇಷಗಳಾದ ಇಡಾ, ಸರಸ್ವತೀ ಮತ್ತು ಭಾರತೀ ಎಂಬ ಶಕ್ತಿತ್ರಯವೂ ಸಹ ಸವನತ್ರಯಕಾಲಗಳಲ್ಲೂ ಆಗಮಿಸಿ ಯಜ್ಞವನ್ನು ಸಾಂಗವಾಗಿ ನೆರವೇರುವಂತೆ ಮಾಡಲಿ ಎಂದು ಪ್ರಾರ್ಥಿಸಿದೆ.

ಸಂಹಿತಾಪಾಠಃ

ತ್ರಿರಾ ದಿವಃ ಸವಿತರ್ವಾರ್ಯಾಣಿ ದಿವೇದಿವ ಆ ಸುವ ತ್ರಿರ್ನೋ ಅಹ್ನಃ ।
ತ್ರಿಧಾತು ರಾಯ ಆ ಸುವಾ ವಸೂನಿ ಭಗ ತ್ರಾತರ್ಧಿಷಣೇ ಸಾತಯೇ ಧಾಃ ॥ ೬ ॥

ಪದಪಾಠಃ

ತ್ರಿಃ । ಆ । ದಿವಃ । ಸವಿತಃ । ವಾರ್ಯಾಣಿ । ದಿವೇಽದಿವೇ । ಆ । ಸುವ । ತ್ರಿಃ । ನಃ । ಅಹ್ನಃ ।
ತ್ರಿಽಧಾತು । ರಾಯಃ । ಆ । ಸುವ । ವಸೂನಿ । ಭಗ । ತ್ರಾತಃ । ಧಿಷಣೇ । ಸಾತಯೇ । ಧಾಃ ॥ ೬ ॥

ಸಾಯಣಭಾಷ್ಯಂ

ಸವಿತಃ ಸರ್ವಸ್ಯ ಪ್ರೇರಕ ಹೇ ಆದಿತ್ಯ ದಿವೋ ದ್ಯುಲೋಕಾದಾಗತ್ಯ ತ್ವಂ ವಾರ್ಯಾಣಿ ಸರ್ವೈಃ ಸಂಭಜನೀಯಾನಿ ಧನಾನಿ ದಿವೇ ದಿವೇ ಪ್ರತಿದಿನಂ ತ್ರಿರಾ ಸುವ । ತ್ರಿವಾರಮಸ್ಮಭ್ಯಂ ಪ್ರೇರಯ । ಪ್ರಯಚ್ಛೇತ್ಯರ್ಥಃ । ತದೇವೋಚ್ಯತೇ । ಭಗ ಸರ್ವೈರ್ಭಜನೀಯ ತ್ರಾತರಸ್ಮಾಕಂ ರಕ್ಷಕ ಹೇ ಆದಿತ್ಯ ತ್ರಿಧಾತು ತ್ರಿಧಾತೂನಿ ಪಶುಕನಕರತ್ನಭೇದೇನ ತ್ರಿಪ್ರಕಾರಾಣಿ ವಸೂನಿ ಧನಾನಿ ರಾಯಃ । ರಾಂತಿ ಕ್ಷೀರಾದೀನೀತಿ ರಾಯೋ ಗೋಧನಾನಿ । ತಾನಿ ಚ ನೋಽಸ್ಮಭ್ಯಮಹ್ನಃ ಸಂಬಂಧಿಷು ತ್ರಿಸ್ತ್ರಿಷು ಸವನೇಷ್ವಾ ಸುವ । ಪ್ರಯಚ್ಛ । ಧಿಷಣೇ ಮಾಧ್ಯಮಿಕೇ ಹೇ ವಾಕ್ ಸಾತಯೇ ಧನಲಾಭಾಯ ಧಾಃ । ಅಸ್ಮಾನ್ ಕುರು ॥ ತ್ರಿಃ । ದ್ವಿತ್ರಿಚತುರ್ಭ್ಯಃ ಸುಚ್ । ಪಾ ೫-೪-೧೮ । ಇತಿ ಸುಚ್ । ಚಿತ್ಸ್ವರಃ । ಸುವ । ಷೂ ಪ್ರೇರಣೇ । ತುದಾದಿಃ । ಲೋಟಿ ರೂಪಂ । ತ್ರಿಧಾತು । ಡುಧಾಞ್ ಧಾರಣಪೋಷಣಯೋರಿತ್ಯಸ್ಮಾತ್ಸಿತನಿಗಮಿಮಸೀತ್ಯಾದಿನಾ ತುನ್ಪ್ರತ್ಯಯಃ । ಧಿಷಣೇ । ಆಮಂತ್ರಿತತ್ವಾನ್ನಿಘಾತಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಸವಿತಃ**—ಜಗತ್ಪ್ರೇರಕನಾದ ಎಲೈ ಆದಿತ್ಯನೇ । **ದಿವಃ**—ದ್ಯುಲೋಕದಿಂದ ಬಂದು । **ವಾರ್ಯಾಣಿ**—ಸರ್ವರಿಂದಲೂ ಅಪೇಕ್ಷಿತವಾಗುವ ಧನಗಳನ್ನು । **ದಿವೇದಿವೇ**—ಪ್ರತಿದಿನವೂ । **ತ್ರಿಃ**—ಮೂರು ಕಾಲಗಳಲ್ಲೂ । **ಆ ಸುವ**—ಒದಗಿಸಿಕೊಡು । **ಭಗ**—ಸರ್ವರಿಗೂ ಪೂಜ್ಯನೂ । **ತ್ರಾತಃ**—ರಕ್ಷಕನೂ ಆದ ಭಗರೂಪನಾದ ಎಲೈ ಆದಿತ್ಯನೇ । **ತ್ರಿಧಾತು**—ಪಶು, ಕನಕ ಮತ್ತು ರತ್ನರೂಪಗಳಾದ । **ವಸೂನಿ**—ಧನಗಳನ್ನೂ । **ರಾಯಃ**—ಗೋರೂಪವಾದ ಸಂಪತ್ತನ್ನೂ । **ನಃ**—ನಮಗೆ । **ಅಹ್ನಃ**—ಪ್ರತಿದಿನದ । **ತ್ರಿಃ**—ಸವನತ್ರಯಕಾಲದಲ್ಲೂ । **ಆ ಸುವ**—ಒದಗಿಸಿಕೊಡು । **ಧಿಷಣೇ**—ಎಲೈ ಮಾಧ್ಯಮಿಕಾ ವಾಕ್ಕೇ । **ಸಾತಯೇ**—ನಮ್ಮ ಧನಲಾಭಾರ್ಥವಾಗಿ । **ಧಾಃ**—ಅನುಗ್ರಹಿಸು.

ಭಾವಾರ್ಥ

ಜಗತ್ಪ್ರೇರಕನಾದ ಎಲೈ ಆದಿತ್ಯನೇ, ದ್ಯುಲೋಕದಿಂದ ಬಂದು ಸರ್ವರಿಂದಲೂ ಅಪೇಕ್ಷಿತವಾಗುವ ಧನಗಳನ್ನು ಪ್ರತಿದಿನವೂ ಮೂರು ಕಾಲಗಳಲ್ಲಿಯೂ ಒದಗಿಸಿಕೊಡು. ಸರ್ವರಿಗೂ ಪೂಜ್ಯನೂ, ರಕ್ಷಕನೂ ಆದ ಭಗರೂಪನಾದ ಎಲೈ ಆದಿತ್ಯನೇ, ಪಶು, ಕನಕ ಮತ್ತು ರತ್ನರೂಪಗಳಾದ ಧನಗಳನ್ನೂ ಗೋರೂಪವಾದ ಸಂಪತ್ತನ್ನೂ ನಮಗೆ ಪ್ರತಿದಿನದ ಸವನತ್ರಯದಕಾಲ್ಲದಲ್ಲೂ ಒದಗಿಸು. ಎಲೈ ಮಾಧ್ಯಮಿಕಾ ವಾಗ್ದೇವಿಯೇ, ನಮಗೆ ಧನಲಾಭವಾಗುವಂತೆ ಅನುಗ್ರಹಿಸು.

English Translation

Savitri, desended fron heaven, bestow upon us blessings thrice every day: Bhaga, saviour, grant us thrice a day riches of three elements: Dhishana enable us to acquire (wealth).

ವಿಶೇಷವಿಷಯಗಳು

ಈ ಮಂತ್ರದಲ್ಲಿ ಅಪೇಕ್ಷಿತವಾದ ಧನಸಂಪತ್ತಿಗಾಗಿ, ಸವಿತೃ, ಭಗ ಮತ್ತು ಧಿಷಣೆ ಈ ಮೂರು ದೇವತೆಗಳನ್ನೂ ಉದ್ದೇಶಿಸಿ ಪ್ರಾರ್ಥಿಸಿದೆ. ಈ ಮೂವರೂ ಮೂರುವಿಧವಾದ ಸಂಪತ್ತಿಗೆ ಆಧಿಪತ್ಯವನ್ನು ವಹಿಸಿ ಅನುಗ್ರಹಿಸತಕ್ಕವರು ಎಂದು ತಾತ್ಪರ್ಯ. ಆದಿತ್ಯನಿಂದ ತ್ರಿಧಾತುವನ್ನಪೇಕ್ಷಿಸಿದೆ.

ತ್ರಿಧಾತುಶಬ್ದಕ್ಕೆ ಪಶು, ಕನಕ ಮತ್ತು ರತ್ನರೂಪಗಳಾದ ಐಶ್ವರ್ಯವೆಂದರ್ಥಮಾಡಿದೆ. ಈ ಪದವು ಬೇರೆಬೇರೆ ಅರ್ಥಗಳಲ್ಲಿ ಅನೇಕಕಡೆ ಉಪಯೋಗಿಸಲ್ಪಟ್ಟಿದೆ. ಪೃಥಿವ್ಯಪ್ತೇಜೋರೂಪವಾದ ತತ್ತ್ವಗಳೆಂದಾಗಲಿ, ಸತ್ತ್ವರಜಸ್ತಮೋರೂಪವಾದ ಗುಣಗಳೆಂದಾಗಲಿ ಅರ್ಥಗಳಲ್ಲಿ ಎಲ್ಲೆಲ್ಲಿ ಪ್ರಯೋಗಿಸಪಟ್ಟಿದೆಯೆಂಬುದನ್ನು ಋಗ್ವೇದ ಸಂಹಿತೆಯ ೧೧ಭಾಗ 583-586 ಪೇಜುಗಳಲ್ಲಿ ವಿಶದವಾಗಿ ತಿಳಿಸಿದೆ.

ಧಿಷಣೇ—ಸ್ವಧೇ, ಪುರಂಧೀ ಇತ್ಯಾದಿ ದ್ಯಾವಾಪೃಥಿವಿಗಳ ನಾಮಗಳಲ್ಲಿ ಈ ಪದವು ಪಠಿತವಾಗಿದೆ. (ನಿ. ೩-೩೧). ಧಿಷಣಾ ವಾಕ್ ಧಿಷೇರ್ದಧಾತ್ಯರ್ಥೇ ಧೀಸಾದಿನೀತಿ ವಾ । (ನಿ. ೮-೩) ಹಿಡಿದಿರುತ್ತದೆ ಎಂದಭಿಪ್ರಾಯವನ್ನು ಕೊಡುವ ಧಿಷ್ ಧಾತುವಿನಿಂದ ನಿಷ್ಪನ್ನವಾಗಬಹುದೆಂದು ತಿಳಿಸಿದೆ. ಅಥವಾ ಧೀಸಾನಿನೀತಿ ವಾ ಬುದ್ಧಿಯನ್ನು ವಿಸ್ತರಿಸುತ್ತದೆ, ಎಂದರೆ ಅರ್ಥವನ್ನು ವಿಶದವಾಗಿ ತಿಳಿಸುತ್ತದೆ ಎಂದಾದರೂ ತಾತ್ಪರ್ಯವಾಗಬಹು

CC-0. Jangamwadi Math Collection. Digitized by eGangotri

ದೆಂದು, ನಿರುಕ್ತಕಾರರ ಮತ, ಕೆಲವೆಡೆಗಳಲ್ಲಿ ಸಾಯಣರು ಮಂತ್ರರೂಪವಾದ ವಾಕ್ಕೆಂದೂ ಇನ್ನು ಕೆಲವೆಡೆಗಳಲ್ಲಿ ಮಾಧ್ಯಮಿಕಾ ವಾಕ್ಕೆಂದೂ ಅರ್ಥಮಾಡಿದ್ದಾರೆ. **"ಮಾ ಚ್ಛೇದ್ಮ ರಶ್ಮೀಂ .... .... ಧಿಷಣಾಯಾ ಉಪಸ್ಥೇ"** (ಋ. ಸಂ. ೧-೧೦೯-೩) ಇತ್ಯಾದಿ ಕೆಲವೆಡೆಗಳಲ್ಲಿ ಸೋಮರಸವನ್ನು ತುಂಬುವ ಚೀಲವೆಂದು ಅರ್ಥವಾಗುವುದನ್ನು ಹಿಂದೆ ತಿಳಿಸಿದೆ.

ಈ ಪದವು ಮೂರು ವಚನಗಳಲ್ಲಿಯೂ ಪ್ರಯೋಗಿಸಲ್ಪಟ್ಟು ಕೆಲವು ಸಂದರ್ಭಗಳಲ್ಲಿ ಇದರ ಅರ್ಥವನ್ನು ವಚನದ ಮೇಲೂ ಸಂದರ್ಭಾನುಸಾರವಾಗಿಯೂ ನಿಷ್ಕರ್ಷಿಸಬೇಕಾಗುತ್ತದೆ.

ಏಕವಚನದ ಪ್ರಯೋಗವಿರುವಾಗ ವಾಕ್, ವಾಗ್ರೂಪವ **ಸ್ತುತಿ** ಅಥವಾ ಸೋಮರಸವನ್ನು ತುಂಬುವ **ಚೀಲ** ಎಂದರ್ಥ **ವೈಶ್ವಾನರಾಯ ಧಿಷಣಾಂ।** (ಋ. ಸಂ ೩-೨-೧) ಇತ್ಯಾದಿ ಸ್ಥಳಗಳಲ್ಲಿ ಸ್ತುತಿಯೆಂದು ಸುಲಭವಾಗಿ ಹೇಳಬಹುದು.

**ಧಿಷಣೇ** ಎಂಬ ದ್ವಿವಚನಪ್ರಯೋಗವಿರುವಾಗ ಸಾಧಾರಣವಾಗಿ ದ್ಯಾವಾಪೃಥಿವಿಗಳೆಂದರ್ಥ. ದೃಢವಾಗಿ ಹಿಡಿದಿರು ಎಂಬರ್ಥವುಳ್ಳ ಧಿಷ್ ಧಾತುವಿನಿಂದ ನಿಷ್ಪನ್ನವಾಗಿ ಸಕಲಲೋಕಗಳನ್ನೂ ಹಿಡಿದಿರುವ ದ್ಯಾವಾಪೃಥಿವಿಗೆ ಪರ್ಯಾಯಪದವಾಗಿರುತ್ತದೆ **ಪ್ರಜಾಪತಿರ್ವೈ ಪ್ರಜಾಃ ಸೃಷ್ಟ್ವಾ ತಾ ದ್ಯಾವಾಪೃಥಿವೀಭ್ಯಾಂ ಪರ್ಯಗೃಹ್ಣಾತ್** (ಶ. ಬ್ರಾ. ೩-೮-೪-೧೭). ಪ್ರಜಾಪತಿಯಿಂದ ಸೃಷ್ಟವಾದ ಸಕಲಲೋಕಗಳನ್ನೂ ದ್ಯಾವಾಪೃಥಿವಿಗಳು ತಮ್ಮ ನಿಯಮನದಲ್ಲಿಟ್ಟುಕೊಂಡು ಧರಿಸುತ್ತವೆಯಾದುದರಿಂದ **ಧಿಷಣೇ** ಎಂದು ಪ್ರಸಿದ್ಧವಾಗಿವೆಯೆಂದು ಹೇಳಬಹುದು.

ಆದರೆ ಕೆಲವೆಡೆಗಳಲ್ಲಿ ಬಹುವಚನದ ಪ್ರಯೋಗವಿರುವಾಗ ಈ ಪದಕ್ಕೆ ಅರ್ಥವನ್ನು ಹೇಳುವುದು ಸುಲಭವಲ್ಲ.

**ಇರಾವತೀರ್ವರುಣ ಧೇನವೋ ವಾಂ ಮಧುಮದ್ವಾಂ ಸಿಂಧವೋ ಮಿತ್ರ ದುಹ್ರೇ।**
**ತ್ರಯಸ್ತಸ್ಥುರ್ವೃಷಭಾಸಸ್ತಿಸೃಣಾಂ ಧಿಷಣಾನಾಂ ರೇತೋಧಾ ವಿ ದ್ಯುಮಂತಃ॥**
(ಋ. ಸಂ. ೫-೬೯-೨)

ಎಂಬಲ್ಲಿ ದ್ಯಾವಾಪೃಥಿವಿಗಳನ್ನೂ ತದಂತರ್ಗತವಾದ ಅಂತರಿಕ್ಷವನ್ನೂ ಸೇರಿಸಿಕೊಂಡು ಹೇಳಿರುವುದರಿಂದ **ಪೃಥಿವ್ಯಂತರಿಕ್ಷದ್ಯುಲೋಕಾನಾಂ** ಎಂದು ಸಾಯಣರು ಅರ್ಥಮಾಡಿದ್ದಾರೆ. ಆದರೆ ಇಲ್ಲಿ ಈ ಅರ್ಥವು ಆ ಪದಕ್ಕೆ ಸಾಕ್ಷಾತ್ತಾಗಿ ಸೂಚಿತವಾಗುವುದಿಲ್ಲ. ಮೊದಲು **ಧಿಷಣಾನಾಂ** ಎಂದರೆ **ಸ್ಥಾನಾನಾಂ** ಎಂದರ್ಥಮಾಡಿ ಅನಂತರ ಆ ಸ್ಥಾನಗಳಾವುವು ಎಂದರೆ ಮೂರುಲೋಕಗಳು ಎಂದು ವಿವರಿಸಿದ್ದಾರೆ. ಈ ಅರ್ಥವನ್ನು ಹಿಂದೆ ಧಿಷ್ಣ್ಯ ಎಂಬ ಪದವನ್ನು ವಿವರಿಸುವಾಗ ತಿಳಿಸಲಾಗಿದೆ. ಇದಲ್ಲದೇ, ಇನ್ನು ಕೆಲವೆಡೆಗಳಲ್ಲಿ ಬಹುವಚನಪ್ರಯೋಗವಿರುವಾಗ ಸಾಯಣರೂ ಸಹ ಕಿಂಚಿತ್ ಕ್ಲೇಶವನ್ನು ತೋರಿಸಿದ್ದಾರೆ. ಉದಾಹರಣೆಗೆ—

**ಧಿಷಣಾಸ್ತ್ವಾ ದೇವೀಃ। ವಿಶ್ವದೇವ್ಯಾವತೀಃ ಪೃಥಿವ್ಯಾಃ ಸಧಸ್ಥೇಽಂಗಿರಸ್ವದಭೀಂಧತಾಮುಖ ಇತಿ ಧಿಷಣಾ ಹ್ಯೆತಾಮಗ್ರೇ .... .... ಸಾ ವಾಗೇವ ವಾಗ್ವೈ ಧಿಷಣಾ ವಾಚಾ ಹೀದಗ್ಂ ಸರ್ವಮಿದ್ಧಂ ವಾಚೈವೈನಾಮೇತದಭೀಂಧೇಽಥೈತಾನಿ ತ್ರೀಣಿ ಯಜೂಗ್ಂಷಿ॥**
(ಶ. ಬ್ರಾ. ೬-೫-೪-೫)

**ಸರ್ವಮಿದ್ಧಂ ವಾಚೈವೈ ನಾಮೇತಭೀಂಧೇಽಥೈತಾನಿ ತ್ರೀಣಿ ಯಜೂಗ್ಂಷಿ॥**
(ಶ. ಬ್ರಾ. ೬-೫-೪-೫)

CC-0. Jangamwadi Math Collection. Digitized by eGangotri

ಈ ಧಿಷಣೆಯರು ಸರ್ವದೇವಪ್ರಿಯರು. ಇವರನ್ನು ಪೃಥಿವಿಯ ಸಧಸ್ಥದಲ್ಲಿ ಪ್ರಜ್ವಲಿತರಾಗುವಂತೆ ಮಾಡಿ ಪ್ರಾಚೀನರೂ ದಿವ್ಯರೂಪವುಳ್ಳವರೂ, ಸರ್ವದೇವಪ್ರಿಯರೂ ಆದ ಈ ಧಿಷಣೆಯರೇ ವಾಗ್ದೇವಿಯ ವಿಭೂತಿಗಳು. ವಾಕ್ಸಹಾಯದಿಂದಲೇ ಸರ್ವವೂ ಪ್ರಜ್ವಲಿತವೂ ಪ್ರಕಾಶಿತವೂ ಆಗುತ್ತದೆ ಇತ್ಯಾದಿ ವರ್ಣನವಿರುವಾಗ ಗೂಢವಾದ ತಾತ್ತ್ವಿಕಾರ್ಥವಿರುತ್ತದೆ.

ಧಿಷಣೇ ಎಂಬ ಪ್ರಯೋಗವು ದ್ವಿವಚನದಲ್ಲಿರುವಂತೆಯೇ, ಸಂಬೋಧನೆಯಲ್ಲಿಯೂ ಇರುತ್ತದೆ. ಪ್ರಕೃತವಾದ ಮಂತ್ರದಲ್ಲಿ ಹೇ ಮಾಧ್ಯಮಿಕೇ ವಾಕ್ । ಎಲೈ ಮಾಧ್ಯಮಿಕಾ ವಾಕ್ಕೇ ಎಂದು ವಾಗ್ದೇವಿಯನ್ನು ಸಂಬೋಧಿಸಿದೆ.

**ಸಾತಯೇ**—ಪಡೆಯುವುದು ಎಂಬರ್ಥವನ್ನು ಕೊಡುವ ಸನ್ ಧಾತುವಿನಿಂದ ನಿಷ್ಪನ್ನವಾಗಿದೆ. ವಾಜಸಾತಿಃ ವಾಜಸಾತಯೇ ಇತ್ಯಾದಿ ಪದಗಳು ಪ್ರಸಿದ್ಧವಾಗಿವೆ. ಪ್ರಕೃತದಲ್ಲಿ ಧನವನ್ನು ಪಡೆಯಲು ಅನುಕೂಲವಾಗುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸಿದೆ.

———:೦:———

ಸಂಹಿತಾಪಾಠಃ

ತ್ರಿರಾ ದಿವಃ ಸವಿತಾ ಸೋಷವೀತಿ ರಾಜಾನಾ ಮಿತ್ರಾವರುಣಾ ಸುಪಾಣೀ ।
ಆಪಶ್ಚಿದಸ್ಯ ರೋದಸೀ ಚಿದುರ್ವೀ ರತ್ನಂ ಭಿಕ್ಷಂತ ಸವಿತುಃ ಸವಾಯ॥ ೭ ॥

ಪದಪಾಠಃ

ತ್ರಿಃ। ಆ। ದಿವಃ । ಸವಿತಾ । ಸೋಷವೀತಿ । ರಾಜಾನಾ । ಮಿತ್ರಾವರುಣಾ । ಸುಪಾಣೀ ಇತಿ ಸುऽಪಾಣೀ ।
ಆಪಃ । ಚಿತ್ । ಅಸ್ಯ । ರೋದಸೀ ಇತಿ । ಚಿತ್ । ಉರ್ವೀ ಇತಿ । ರತ್ನಂ । ಭಿಕ್ಷಂತ । ಸವಿತುಃ । ಸವಾಯ॥

ಸಾಯಣಭಾಷ್ಯಂ

ಸವಿತಾ ದೇವೋ ದಿವೋ ದಿವಸಸ್ಯ ತ್ರಿಸ್ತ್ರಿಷು ಕಾಲೇಷ್ವಾ ಸೋಷವೀತಿ । ಅಸ್ಮಭ್ಯಂ ಧನಾನ್ಯಾಸುವತು । ಪ್ರೇರಯತು । ಕಿಂಚ ರಾಜಾನಾ ರಾಜಾನೌ ಸುಪಾಣೀ ಕಲ್ಯಾಣಪಾಣೀ ಮಿತ್ರಾವರುಣಾವಾಪಃ। ಆಪ್ನೋತಿ ಸರ್ವಂ ಜಗದಿತ್ಯಾಪ ಅಂತರಿಕ್ಷಂ । ನಿತ್ಯಬಹುವಚನಾಂತತ್ವಾದ್ಬಹುವಚನಂ । ಚಿದಪಿ ಚ ಉರ್ವೀ ವಿಸ್ತೀರ್ಣೇ ರೋದಸೀ ದ್ಯಾವಾಪೃಥಿವ್ಯಾವೇತಾ ದೇವತಾಃ ಸವಿತುಃ ಪ್ರೇರಕಸ್ಯಾಸ್ಯ ದೇವಸ್ಯ ಸವಾಯ ಸವೇನ ಪ್ರೇರಣೇನ ರತ್ನಮುಪೇಕ್ಷಿತಮರ್ಥಂ ಭಿಕ್ಷಂತ । ಯಾಚಂತೇ ॥ ಸೋಷವೀತಿ । ಷೂ ಪ್ರೇರಣ ಇತ್ಯಸ್ಯ ಯಙ್ಲುಕಿ ಲಟಿ ರೂಪಂ । ಮಿತ್ರಾವರುಣಾ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಭಿಕ್ಷಂತ । ಭಿಕ್ಷ ಯಾಚ್ಞಾಯಾಮಿತ್ಯಸ್ಯ ಲಙಿ ರೂಪಂ । ಸವಾಯ । ಜವಸವೌ ಚ । ಪಾ. ೩-೩-೫೬-೪ । ಇತ್ಯಜಂತತ್ವೇನ ನಿಪಾತನಾದಂತೋದಾತ್ತತ್ವಂ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಸವಿತಾ**—ಸವಿತೃದೇವನು । **ದಿವಃ**—ದಿವಸದ । **ತ್ರಿಃ**—ಮೂರು ಕಾಲಗಳಲ್ಲೂ । **ಆ ಸೋಷವೀತಿ**—ನಮಗೆ ಧನವನ್ನು ಒದಗಿಸಲಿ । **ರಾಜಾನಾ**—ಜಗತ್ಪ್ರಭುಗಳೂ । **ಸುಪಾಣೀ**—ಶ್ರೇಷ್ಠವಾದ ಪಾಣಿಯುಳ್ಳವರೂ ಆದ । **ಮಿತ್ರಾವರುಣಾ**—ಮಿತ್ರಾವರುಣರೂ । **ಆಪಃ ಚಿತ್**—ಅಂತರಿಕ್ಷವೂ । **ಉರ್ವೀ**—ವಿಸ್ತೃತವಾದ । **ರೋದಸೀ**—ದ್ಯಾವಾಪೃಥಿವಿಗಳೂ । **ಸವಿತುಃ**—ಪ್ರೇರಕನಾದ । **ಅಸ್ಯ**—ಈ ದೇವನ । **ಸವಾಯ**—ಪ್ರೇರಣದಿಂದ । **ರತ್ನಂ**—ಧನವನ್ನು । **ಭಿಕ್ಷಂತೆ**—ಯಾಚಿಸುತ್ತವೆ ।

ಭಾವಾರ್ಥ

ಸವಿತೃದೇವನು ದಿವಸದ ಮೂರು ಕಾಲಗಳಲ್ಲೂ ನಮಗೆ ಧನವನ್ನು ಒದಗಿಸಲಿ. ಜಗತ್ಪ್ರಭುಗಳೂ, ಶ್ರೇಷ್ಠವಾದ ಪಾಣಿಯುಳ್ಳವರೂ ಆದ ಮಿತ್ರಾವರುಣರೂ, ಅಂತರಿಕ್ಷವೂ, ವಿಸ್ತೃತವಾದ ದ್ಯಾವಾಪೃಥಿವಿಗಳೂ ಸಹ ಪ್ರೇರಕನಾದ ಈ ಆದಿತ್ಯನಿಂದಲೇ ತಮ್ಮ ಅಪೇಕ್ಷಿತವಾದ ಧನಗಳನ್ನು ಯಾಚಿಸುತ್ತವೆ.

English Translation

May Savitri bestow upon us wealth at the (three periods) of the day, for the well-handed Mitra and Varuna, the waters, the vast heaven and earth, solicit precious things from the liberality of Savitri.

ವಿಶೇಷವಿಷಯಗಳು

**ಋತವಾನಾ, ಋತಾವೃಧಃ, ರಾಜಾನಾ** ಇತ್ಯಾದಿ ವಿಶೇಷಣಗಳಿಂದ ಪ್ರಸಿದ್ಧರಾದ ದ್ಯಾವಾಪೃಥಿವಿಗಳೂ, ಮಿತ್ರಾವರುಣರೂ, ಇತರ ದೇವತೆಗಳೂ ಸಹ ಸವಿತೃವಿನ ಅನುಗ್ರಹವನ್ನು ಅಪೇಕ್ಷಿಸಿ ತತ್ಪ್ರೇರಣೆಯಿಂದಲೇ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವರು ಎಂದು ಪ್ರಕೃತದಲ್ಲಿ ಸವಿತೃವಿನ ಸ್ತುತಿಯಿದೆ. "**ಉತೇಶಿಷೇ ಪ್ರಸವಸ್ಯ ತ್ವಮೇಕ ಇತ್**" ಸಕಲ ವಿಶ್ವಕ್ಕೂ ನೀನೇ ಮೂಲನು, ಪ್ರಭುವು ಇತ್ಯಾದಿಯಾಗಿ ಸವಿತೃವಿನ ಸ್ಥಾನವನ್ನು ವರ್ಣಿಸಿ ಸವಿತೃವಿನ ಮಾಹಾತ್ಮ್ಯವನ್ನು ತಿಳಿಸಿದೆ. ದೇವತೆಗಳ ಸಾಮ್ರಾಜ್ಯದಲ್ಲಿ ಸವಿತೃವಿನ ಸ್ಥಾನವೇನು ಎಂಬುದನ್ನು ಋ. ಸಂ. ೩-೬೨ ನೇ ಸೂಕ್ತದ ಪೀಠಿಕೆಯಲ್ಲಿ ತಿಳಿಸಲಾಗುವುದು.

ಮಿತ್ರಾವರುಣರಿಗೆ ರಾಜಾನಾ, **ಸುಪಾಣೀ** ಎಂಬ ಎರಡು ವಿಶೇಷಣಗಳಿವೆ. ಈ ವಿಶೇಷಣಪದಗಳು ಮಿತ್ರಾವರುಣರ ಸ್ವರೂಪವನ್ನು ತಿಳಿಸುವುವು. "**ಯಯೋರ್ಧಾಮ ಧರ್ಮಣಾ ರೋಚತೇ ಬೃಹದ್ಯಯೋರುಭೇ ರೋದಸೀ ನಾಧಸೀ ವೃತೌ**" (ಋ. ಸಂ. ೧೦-೬೫-೫ ಇತ್ಯಾದಿ ಮಂತ್ರಗಳಿಂದ ವರ್ಣಿತರಾದ ವಿಶ್ವವ್ಯಾಪಕರೂ, ಸ್ವಯಂಪ್ರಕಾಶಕರೂ, ಸ್ವಪ್ರಭೆಯಿಂದ ವಿಶ್ವವನ್ನೆಲ್ಲಾ ಬೆಳಗುವಂತೆ ಮಾಡುವವರೂ ಆದ ಮಿತ್ರಾವರುಣರ ಸ್ವರೂಪಸಂಬಂದವನ್ನು ತಿಳಿಸಲಾಗಿದೆ.

**ಆಪಃ**—**ಆಪ್ನೋತಿ ಸರ್ವಂ ಜಗತ್ ಇತ್ಯಾಪಃ ಅಂತರಿಕ್ಷಂ** । ಸಕಲ ಜಗತ್ತನ್ನೂ ವ್ಯಾಪಿಸಿರುವುದರಿಂದ ಅಂತರಿಕ್ಷಕ್ಕೆ ಆಪಃ ಎಂಬ ನಾಮವಿದೆ. ನಿರುಕ್ತಕಾರರೂ ಈ ಪದವನ್ನು ಅಂತರಿಕ್ಷನಾಮಗಳಲ್ಲಿ ಸೇರಿಸಿದ್ದಾರೆ.

CC-0. Jangamwadi Math Collection. Digitized by eGangotri

ಕೆಲವೆಡೆಗಳಲ್ಲಿ ಆಪಃ ಎಂಬುದಕ್ಕೆ ಅಂತರಿಕ್ಷಸ್ಥವಾದ ಉದಕವೆಂದು ಅರ್ಥವಾದರೂ ಸಹ ಅಧಿಷ್ಠಾನವಾದ ಅಂತರಿಕ್ಷವೇ ತಾತ್ಪರ್ಯವೆಂದು ತಿಳಿಯುತ್ತದೆ. ಕೆಲವೆಡೆಗಳಲ್ಲಿ ಆಪಃ ಎಂದರೇನು ಎಂಬ ಪ್ರಶ್ನೆಯು ಶ್ರುತಿವಾಕ್ಯದಲ್ಲಿಯೇ ಕಂಡುಬರುತ್ತದೆ.

"....ಪ್ರಜಾಂ ಥರ್ವಣೀಣ ದಾಧಾರೈವಮೋತೇ ಮನಃ ಪಿತರಂ ಪರಿಚರಂತ್ಯಾಪಶ್ಚ ವರುಣಶ್ಚಾಂ ಯಾವದನ್ವಾಪೋ ಯಾವದನು ವರುಣಸ್ತಾವಾನಸ್ಯಲೋಕೋ ಭವತಿ ನಾಸ್ಯ ತಾವಲ್ಲೋಕೋ ಜೀರ್ಯತೇ ಯಾವದೇತೇಷಾಂ ನ ಜೀರ್ಯತೇಽಪಾಂ ಚ ವರುಣಸ್ಯ ಚ ಯ ಏವಮೇತಾಃ ಮನಸೋ ವಿಭೂತಿಂ ವೇದ ।

(ಐ. ಆ. ೨-೧-೭)

ಪರಮಪುರುಷನೆಂದು ವರ್ಣಿತನಾದ ಪ್ರಜಾಪತಿಯು ತನ್ನ ಮನಸ್ಸಂಕಲ್ಪದಿಂದಲೇ ವರುಣನನ್ನೂ ಅಪ್ಪನ್ನೂ (ಉದಕವನ್ನು) ಸೃಷ್ಟಿಸಿದನು ಅಪ್ಪು ಸತ್ಕರ್ಮಗಳಿಗೆ ಸಾಹಾಯ್ಯಕವಾಗಿಯೂ, ವರುಣನು ಪ್ರಜಾನಿಯಮವನ್ನು ಪಾಲಿಸುತ್ತಲೂ, ಪ್ರಜಾಪತಿಯು ಈ ಸಂಕಲ್ಪವನ್ನು ಸಾರ್ಥಕಗೊಳಿಸುತ್ತಲೂ ಸೇವಿಸುತ್ತಿವೆ ಎಂದು ವರ್ಣಿಸಿರುವಾಗ ಆಪಃ ಎಂಬ ತತ್ತ್ವವೇನು ಎಂಬ ವಿಚಿಕಿತ್ಸೆಗೆ ಅವಕಾಶವಿದೆ. ಆದುದರಿಂದ,

ಆಪಾ ೩ ಇತ್ಯಾಪ ಇತಿ ತದಿದಮಾಪ ಏವೇದಂ ವೈ ಮೂಲಮದಸ್ತೂಲಮಯಂ ಪಿತೈತೇ ಪುತ್ರಾ ಯತ್ರ ಹ ಕ್ವ ಚ ಪುತ್ರಸ್ಯ ತತ್ಪಿತುಃ ।

(ಐ. ಆ. ೨-೧-೮)

ಆಪಃ ಎಂದರೇನು ? ನಿಜವಾಗಿಯೂ ಈ ತತ್ತ್ವದ ಸ್ವರೂಪವೇನು ಎಂದರೆ, ಇದರ ಮಹಿಮೆಯು ಈ ರೀತಿಯಿದೆ ವಿಶ್ವದಲ್ಲಿ ಸಕಲವೂ ಈ ಅಪ್ಪಿನಿಂದಲೇ ವ್ಯಾಪ್ತವಾಗಿದೆ. ವಿಶ್ವಸೃಷ್ಟಿಗೆ ಇದೇ ಮೂಲಕಾರಣವು. ಉಳಿದುದೆಲ್ಲಾ ಕಾರ್ಯವು. ಈ ಅಪ್ತತ್ತ್ವಕ್ಕೆ ಅಧಿಷ್ಠಾನನಾದ ಪುರುಷನೇ ಪಿತೃವು. ಈ ರೀತಿ ವರ್ಣನೆಯಿರುವುದರಿಂದ ಆಪಃ ಎನ್ನುವುದು ಕೇವಲ ಅಂತರಿಕ್ಷವೇ ಆಗದೇ, ಅಂತರಿಕ್ಷಕ್ಕಿಂತಲೂ ವಿಸ್ತೃತವಾದ ವ್ಯಾಪ್ತಿವುಳ್ಳದ್ದೆಂದು ತಿಳಿಯುತ್ತದೆ. ಶತಪಥಬ್ರಾಹ್ಮಣದಲ್ಲಿ ಹೇಳಿರುವ ನಿರ್ವಚನವೂ ಸಹ ಈ ಅಭಿಪ್ರಾಯವನ್ನು ಸಮರ್ಥಿಸುತ್ತದೆ-

ಸೇದಗ್ಂ ಸರ್ವಮಾಪ್ನೋತ್ಯದಿದಂ ಕಿಂ ಚ ಯದಾಪ್ನೋತ್ತಸ್ಮಾದಾಪಃ ॥

(ಶ. ಬ್ರಾ. ೬-೧-೧-೯)

ಯಾವುದು ಎಲ್ಲವನ್ನೂ ವ್ಯಾಪಿಸುವ ಸಾಮರ್ಥ್ಯವುಳ್ಳದ್ದೋ ಅದಕ್ಕೆ ಆಪಃ ಎಂಬ ಹೆಸರು ಪ್ರಸಿದ್ಧವಾಗಿದೆ ಎಂದು ವ್ಯುತ್ಪತ್ತಿಯಿದೆ. ಆದರೆ ವ್ಯಾಪಿಸುವುದು ಯಾವುದನ್ನು ? ಜಂಗಮಾಜಂಗಮವಾದ ಸಕಲವಿಶ್ವವನ್ನೇ ಅಥವಾ ಕೇವಲ ಒಂದು ನಿಯತವಾದ ಅಂತರಿಕ್ಷಾದಿಲೋಕವನ್ನೇ ಎಂದರೆ ಸಕಲವಿಶ್ವವ್ಯಾಪಿಯೆಂದು ಕೆಲವು ಕಡೆಗಳಲ್ಲಿ ಹೇಳಿದೆ. ಅಪ್ಪೇ ಪರಬ್ರಹ್ಮತತ್ತ್ವವೆಂದೂ ತಿಳಿಸಿದೆ.

ಸ ಯೋಽಪೋ ಬ್ರಹ್ಮೇತ್ಯುಪಾಸ್ತ ಆಪ್ನೋತಿ ಸರ್ವಾನ್ಕಾಮಾನ್ ॥

(ಛಾ. ಉ. ೭-೧೦-೨)

ಅಪ್ಪನ್ನೇ ಬ್ರಹ್ಮವೆಂದು ಉಪಾಸನೆಮಾಡುವವನು ಸಕಲ ಪುರುಷಾರ್ಥಗಳನ್ನೂ ಪಡೆಯುವನು ಎಂದಿದೆ. ಆದರೆ ಇಲ್ಲಿ ಅಪ್ಪೇ ಪೂರ್ಣವಾದ ಬ್ರಹ್ಮವೆಂದಲ್ಲ. ಆಪ್, ತೇಜಸ್ ಇವೆಲ್ಲವೂ ಬ್ರಹ್ಮದ ಅಂಶಗಳು. ಆದರೂ ಸಹ

CC-0. Jangamwadi Math Collection. Digitized by eGangotri

ತಾದಾತ್ಮ್ಯವನ್ನು ಹೇಳಿದೆ ಅಬ್‌ಲೋಕವೂ ಸೃಷ್ಟವಾದ ಲೋಕವೇ ಹೊರತು ವಿಶ್ವಸೃಷ್ಟಿಗಿಂತಲೂ ಪೂರ್ವ ಭಾವಿಯಲ್ಲ ಎಂದೂ ತಿಳಿಸಿದೆ.

ಆತ್ಮಾ ವಾ ಇದಮೇಕ ಏವಾಗ್ರ ಆಸೀನ್ನಾನ್ಯತ್ಕಿಂಚನ ಮಿಷತ್ । ಸ ಈಕ್ಷತ । ಲೋಕಾನ್ನು ಸೃಜಾ ಇತಿ । ಇಮಾಂಲ್ಲೋಕಾನಸೃಜತ । ಅಂಭೋಮರೀಚೀರ್ಮರಮಾಪಃ ।

(ಐ. ಆ. ೨-೪-೧)

ವಿಶ್ವಸೃಷ್ಟಿಗಿಂತಲೂ ಪೂರ್ವಭಾವಿಯಾಗಿ ಕೇವಲ ಈ ಆತ್ಮತತ್ತ್ವವು ಮಾತ್ರವಿದ್ದಿತು. ಇನ್ನಾವುದೂ ಇರಲಿಲ್ಲ. ಅನಂತರ ಅದು ಸೃಷ್ಟಿಕಾರ್ಯವನ್ನಿಚ್ಛಿಸಿ ಅಂಭಃ, ಮರೀಚಿಃ, ಮರ, ಮತ್ತು ಆಪಃ ಈ ನಾಲ್ಕು ಲೋಕಗಳನ್ನೂ ಸೃಷ್ಟಿಸಿತು ಎಂದಿದೆ. ಇದರಲ್ಲಿ ಅಂಭಃ ಎಂಬುದು ದ್ಯುಲೋಕವು. [ಅಂಭಃ ಎಂದರೆ ಉದಕವೆಂದು ರೂಢಿಯಲ್ಲಿದೆ. ಆದರೆ ಉದಾಹೃತವಾಗಿರುವ ಈ ವಾಕ್ಯದಲ್ಲಿ ಅಂತರಿಕ್ಷಕ್ಕಿಂತಲೂ ಊರ್ಧ್ವಭಾಗದಲ್ಲಿರುವ ದ್ಯುಲೋಕವೆಂದರ್ಥ]. ಮರೀಚಿಯು ತೇಜೋವ್ಯಾಪ್ತವಾದ ಅಂತರಿಕ್ಷವು. ಮರಣಧರ್ಮವುಳ್ಳ ಮರವು ಈ ಪೃಥ್ವಿಯು. ಇದಕ್ಕಿಂತಲೂ ಅಧೋಭಾಗದಲ್ಲಿರುವುದು ಅಬ್‌ಲೋಕವು. ಸಾಧಾರಣವಾಗಿ ದ್ಯಾವಾ, ಪೃಥಿವೀ, ಅಂತರಿಕ್ಷ ಎಂಬ ಮೂರುಭಾಗ ಮಾತ್ರ ಪ್ರಸಿದ್ಧವಾಗಿದೆ. ಆದರೆ ಇಲ್ಲಿ ನಾಲ್ಕನೆಯದನ್ನೂ ಸೇರಿಸಿದೆ

ಇಂತಹ ಸಂದರ್ಭಗಳನ್ನು ಪರಿಶೀಲಿಸಿದರೆ ಪ್ರಕೃತವಾದ ಋಕ್ಕಿನ ಭಾಷ್ಯದಲ್ಲಿ ವಿವರಿಸಿರುವಂತೆ ಅಂತ ರಿಕ್ಷಕ್ಕೂ, ಉದಾಹೃತವಾಗಿರುವ ವಾಕ್ಯದಲ್ಲಿ ವಿವರಿಸಿರುವ ಆಪಃ ಎಂಬ ಲೋಕಕ್ಕೂ ವ್ಯತ್ಯಾಸವು ತೋರುತ್ತದೆ. ಆದರೂ ಸಹ ವ್ಯಾಪಕವಾದುದರಿಂದ ಆಪಃ ಎಂಬ ವ್ಯುತ್ಪತ್ತಿಯು ಎರಡು ಕಡೆಗಳಲ್ಲಿಯೂ ಹೊಂದಿಕೊಳ್ಳುತ್ತದೆ. ಅಂತರಿಕ್ಷವೆಂದಾಗಲಿ, ಅಥವಾ ಪೃಥಿವಿಗಿಂತಲೂ ಅಧೋಭಾಗದ ಲೋಕವಾಗಲಿ, ಸಕಲವೂ ಸವಿತೃವಿನ ಕೃಪಾ ಪೋಷಿತವಾದವು ಎಂಬುದೇ ತಾತ್ಪರ್ಯ.

**ಉರ್ವೀ ರೋದಸೀ**—ಅತ್ಯಂತ ವಿಸ್ತೃತವಾದ ದ್ಯಾವಾಪೃಥಿವಿಗಳೆಂದರ್ಥ. ಸ್ಥೂಲವಾದ ದೃಷ್ಟಿಯಿಂದ ನೋಡಿದರೆ, ರೋದಸೀಪದಕ್ಕೆ **ಉರ್ವೀ** ಎಂಬ ವಿಶೇಷಣವು ಕೊಂಚ ಅನುಚಿತವಾಗಿರುವಂತೆ ತೋರುತ್ತದೆ. ಉರ್ವೀ ಶಬ್ದಕ್ಕೆ ಅತ್ಯಂತ ವಿಸ್ತೃತವಾದ ಎಂದರ್ಥ. **ರೋದಸೀ- ದ್ಯಾವಾಪೃಥಿವ್ಯೌ ವಿರೋಧನಾತ್** । ಒಂದು ಪರಿಮಿತವಾದ ಎಲ್ಲೆ (ಸೀಮಾ) ಯಿಂದ ಬಂಧಿತವೂ ನಿಯಮಿತವೂ ಆಗಿರುವುದರಿಂದ ದ್ಯಾವಾಪೃಥಿವಿಗಳಿಗೆ **ರೋದಸೀ** ಎಂಬ ಪರ್ಯಾಯಪದವಿದೆ. ಆದುದರಿಂದ ನಿಯಮಿತವೂ ಬಂಧಿತವೂ ಆದ ಲೋಕಕ್ಕೆ ವಿಸ್ತೃತವಾದ ವ್ಯಾಪ್ತಿಯನ್ನು ತೋರಿಸುವ **ಉರ್ವೀ** ಎಂಬ ವಿಶೇಷಣವು ಸಮಂಜಸವಾಗಿರಲಾರದು ಎಂಬ ಆಶಂಕೆಯು ಸಹಜ ವಾಗಿದೆ. ನಿರುಕ್ತಕಾರರು "**ಉರ್ವೀ**" ಶಬ್ದವನ್ನು ಪೃಥ್ವೀ ನಾಮಗಳಲ್ಲಿಯೂ ಮತ್ತು "ದ್ಯಾವಾಪೃಥಿವೀ" ನಾಮ ಗಳಲ್ಲಿಯೂ ಪಠಿಸಿದ್ದಾರೆ. (ನಿ. ೧-೧ ; ೧-೩೦). ಆದುದರಿಂದ ಇಲ್ಲಿ ಅಸಾಮಂಜಸ್ಯವೇನೂ ಇಲ್ಲವೆನ್ನಲಾಗು ವುದಿಲ್ಲ. **ರೋದಸೀ** ಎಂಬ ಪದವು ಪ್ರಕೃತದಲ್ಲಿ ದ್ಯಾವಾಪೃಥಿವಿಗಳಿಗೆ ಪರ್ಯಾಯಪದವಾಗಿರುವುದರಿಂದ **ಉರ್ವೀ** ಎಂಬುದಕ್ಕೆ ವಿಸ್ತೃತವಾದ ಎಂದೇ ತಾತ್ಪರ್ಯವನ್ನು ಹೇಳಬೇಕಾಗುತ್ತದೆ. ಮಹತ್ತ್ವವನ್ನೂ ವಿಸ್ತೃತಿಯನ್ನೂ ಸೂಚಿಸಲು ಇದು ಬಹಳ ಅರ್ಥವತ್ತಾದ ಪದವಾಗಿದೆ.

**ಅಯಂ ಮೇ ಪೀತ ಉದಿಯರ್ತಿ ವಾಚಮಯಂ ಮನೀಷಾಮುಶತೀಮಜೀಗಃ ।**
**ಅಯಂ ಷಳುರ್ವೀರಮಿಮೀತ ಧೀರೋ ನ ಯಾಭ್ಯೋ ಭುವನಂ ಕಚ್ಚನಾರೇ ॥**

(ಋ. ಸಂ. ೬-೪೭-೩)



CC-0. Jangamwadi Math Collection. Digitized by eGangotri

ಈ ಸೋಮರಾಜನು ಷಡುರ್ವಿಗಳನ್ನೂ ನಿರ್ಮಿಸಿದನು ಈ ಉರ್ವಿಗಳನ್ನು ಮೀರಿದ ದೇಶವು ಭುವನದಲ್ಲಿ ಯಾವುದೂ ಇಲ್ಲ. ಈ ಆರೂ ವಿಶ್ವವ್ಯಾಪಿಗಳಾಗಿವೆ ಎಂದಿರುವಾಗ ಈ ಆರು ಉರ್ವಿಗಳಾವುವು ಎಂದರೆ ಪೃಥಿವೀ, ದ್ಯುಲೋಕ. ಅಹಸ್ಸು, ರಾತ್ರಿ, ಅಪ್ಪು, ಓಷಧಿ. ಅದು ಹೇಗದಂರೆ,

"ಷಣ್ಮೋರ್ವೀರಗ್ಂಹಸಸ್ಪಾಂತ್ವಗ್ನಿಶ್ಚ ಪೃಥಿವೀ ಚಾಪಶ್ಚ ವಾಜಶ್ಚಾ ರಾತ್ರಿಶ್ಚೇತ್ಯೇತಾ ಮಾ ದೇವತಾಃ"

(ಶ. ಬ್ರಾ. ೧-೫-೧-೨೨)

ಎಂಬ ಶತಪಥದ ಮಂತ್ರದಲ್ಲಿ ಈ ಉರ್ವಿಗಳಾವುವು ಎಂಬುದರ ಪರಿಗಣನವಿದೆ. ಈ ಆಧಾರದಮೇಲೆ, ಈ ಬ್ರಾಹ್ಮಣವಾಕ್ಯವನ್ನೇ ಉದಾಹರಿಸಿ ಸಾಯಣರು ಮೇಲೆ ಹೇಳಿರುವಂತೆ ವಿವರಿಸಿದ್ದಾರೆ. ಇದನ್ನೇ ಋಕ್ಸಂಹಿತೆಯಲ್ಲಿಯೂ ಮುಂದುವರಿಸಿ ವಿವರಿಸಿದೆ. ಪ್ರತಿಯೊಂದು ಉರ್ವಿಯೂ ವಿಶೇಷಣದೊಂದಿಗೆ ವರ್ಣಿತವಾಗಿದೆ.

ಅಯಂ ಸ ಯೋ ವರಿಮಾಣಂ ಪೃಥಿವ್ಯಾ ವರ್ಷ್ಮಾಣಂ ದಿವೋ ಅಕೃಣೋದಯಂ ಸಃ ।
ಅಯಂ ಪೀಯೂಷಂ ತಿಸೃಷು ಪ್ರವತ್ಸು ಸೋಮೋ ದಾಧಾರೋರ್ವಂ೧ ತರಿಕ್ಷಂ ॥
ಅಯಂ ವಿದಚ್ಚಿತ್ರದೃಶೀಕಮರ್ಣಃ ಶುಕ್ರಸದ್ಮನಾಮುಷಸಾಮನೀಕೇ ।
ಅಯಂ ಮಹಾನ್ಮಹತಾ ಸ್ಕಂಭನೇನೋದ್ದ್ಯಾಮಸ್ತಭ್ನಾದ್ವೃಷಭೋ ಮರುತ್ವಾನ್ ॥

(ಋ. ಸಂ. ೬-೪೭-೪,೫)

ಈ ಸೋಮನು ಪೃಥಿವಿಯ ವಿಸ್ತೃತಿಯನ್ನು ಇನ್ನೂ ಅಧಿಕವಾಗುವಂತೆ ಮಾಡಿದನು. ದ್ಯುಲೋಕದ ಔನ್ನತ್ಯವನ್ನು ವೃದ್ಧಿಪಡಿಸಿದನು. ಮೂರು ವಿಧವಾದ ಓಷಧಿಗಳನ್ನೂ ವಿಶ್ವವ್ಯಾಪಕವಾಗಿ ಹರಡುವಂತೆ ಮಾಡಿದನು. ಅತಿ ವಿಸ್ತೃತವಾದ ಅಂತರಿಕ್ಷವನ್ನು ವೃದ್ಧಿಪಡಿಸಿದನು. 'ವಿಶ್ವಾಕರ್ಷಕವಾದ ಸೂರ್ಯಜ್ಯೋತಿಯನ್ನು ಅನಂತವಾಗಿ ಬೆಳಗಿಸಿದನು. ಹೀಗೆಯೇ ಮಧ್ಯಲೋಕವನ್ನು ವಿಸ್ತೃತವಾಗುವಂತೆ ಮಾಡಿದನು, ಇತ್ಯಾದಿಯಾಗಿ ಉರ್ವೀ ಪದದಿಂದ ಸೂಚಿತವಾಗಿರುವ ಸಕಲಲೋಕಗಳ ವಿಸ್ತೃತಿಯೂ ವಿವರಿಸಲ್ಪಟ್ಟದೆ. ಇದಲ್ಲದೇ,

ಆ ಯಃ ಪಪ್ರೌ ಜಾಯಮಾನ ಉರ್ವೀ ದೂರೇದೃಶಾ ಭಾಸಾ ಕೃಷ್ಣಾಧ್ವಾ ।

(ಋ. ಸಂ ೬-೧೦-೪)

ಕೃಷ್ಣವರ್ತ್ಮನಾದ ಅಗ್ನಿಯು ಉತ್ಪನ್ನನಾದೊಡನೆಯೇ ಅತಿವಿಸ್ತೃತವಾದ ಉರ್ವಿಗಳನ್ನು ಎಂದರೆ ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸಿದನು ಎಂದಿರುವಾಗ ಇಲ್ಲಿ ಉರ್ವೀಪದವು ದ್ಯಾವಾಪೃಥಿಗಳಿಗೆ ಮಾತ್ರ ಪರ್ಯಾಯಪದವಾಗಿದೆ. ಅಥವಾ ಕೇವಲ ಪೃಥ್ವಿಗೇ ಪರ್ಯಾಯಪದವಾಗಿರುವುದೂ ಉಂಟು. ಉದಾಹರಣೆಗೆ—

ಉರ್ವ್ಯಾಃ ಪದೋ ನಿ ದಧಾತಿ ಸಾನೌ ರಿಂಹತ್ಯೂಧೋ ಅರುಷಾಸೋ ಅಸ್ಯ ॥

(ಋ. ಸಂ. ೧-೧೪೬-೨)

ಅಗ್ನಿಯು ಅತ್ಯಂತ ವಿಸ್ತೃತವಾದುದೂ ಶಿಖರದಂತೆ ಎತ್ತರವಾದುದೂ ಆದ ಪೃಥಿವಿಯ ವೇದಿಯಮೇಲೆ ತನ್ನ ಪಾದವನ್ನಿಡುತ್ತಾನೆ ಎಂದಿರುವಾಗ ಉರ್ವೀಪದವು ಕೇವಲ ಪೃಥ್ವಿಯನ್ನು ಮಾತ್ರ ಸೂಚಿಸುವುದಾಗಿದೆ.

ಹೀಗೆ ಉರ್ವೀಪದವು ಅನಂತವಾದ ವಿಸ್ತೃತಿಯನ್ನು ಸೂಚಿಸುವಾಗ ನಿಯತವಾದ ಎಲ್ಲೆಕಟ್ಟುಳ್ಳ ರೋದಸಿಗೆ ಈ ವಿಶೇಷಣವು ಉಚಿತವೇ ಎಂದರೆ ಇಲ್ಲಿ ಈ ವಿಶೇಷಣವು ಅತಿ ಸಾಧುವೆಂದು ಹೇಳಬಹುದು.

CC-0. Jangamwadi Math Collection. Digitized by eGangotri

ಹೇಗೆಂದರೆ, "ವಿರೋಧನಾದ್ರೋದಸೀ" ಎಂಬ ನಿರ್ವಚನವು ಕೇವಲ ಒಂದು ಸನ್ನಿವೇಶದಲ್ಲಿ ಹೇಳಬಹುದೇ ಹೊರತು ರೋದಸೀ ಎಂಬ ಪದದಿಂದ ನಿರ್ದಿಷ್ಟವಾಗತಕ್ಕ ವ್ಯಾಪಕತ್ವವು ಪ್ರಸಿದ್ಧವಾಗಿಯೇ ಇದೆ. ಈ ತಾತ್ಪರ್ಯ ವಿರುವುದರಿಂದ ಅಶ್ವಿನೀದೇವತೆಗಳ ಸ್ವರೂಪವನ್ನು ತಿಸುವಾಗಲೂ ಸಹ ಈ ವ್ಯಾಪಕತ್ವವಿರುವುದರಿಂದಲೂ ಅಶ್ವಿನೀ ದೇವತೆಗಳಿಗೂ ದ್ಯಾವಾಪೃಥಿವಿಗಳಿಗೂ ತಾದಾತ್ಮ್ಯವನ್ನು ಹೇಳಿದೆ.

ಅಥ ಯದಶ್ವಿನಾವಿತೀಮೇ ಹ ವೈ ದ್ಯಾವಾಪೃಥಿವೀ ಪ್ರತ್ಯಕ್ಷಮಶ್ವಿನಾವಿಮೇ ಹೀದಗ್ಂಸರ್ವ-
ಮಾಶ್ನುವಾತಾಂ-ಪುಷ್ಕರಸ್ರಜಾವಿತ್ಯಗ್ನಿರೇವಾಸ್ಯೈ ಪುಷ್ಕರಮಾದಿತ್ಯೋಽಮುಷ್ಯೈ

(ಶ. ಬ್ರಾ. ೪-೧-೫-೧೬)

ಅಶ್ವಿನೀದೇವತೆಗಳು ಈ ದ್ಯಾವಾಪೃಥಿವೀರೂಪವಲ್ಲಿಯೇ ಪ್ರತ್ಯಕ್ಷರಾಗಿದ್ದಾರೆ. ಸಕಲಪ್ರದೇಶವನ್ನು ವ್ಯಾಪಿಸುವ ಸ್ವರೂಪ ವಿರುವುದರಿಂದಲೇ ಅವರಿಗೆ ಈ ನಾಮಧೇಯವಿದೆ. ಅವರಿಗೆ **ಪುಷ್ಕರಸ್ರಜರು** ಎಂಬ ಹೆಸರು. ಅಗ್ನ್ಯಾದಿತ್ಯರೇ ಈ ಪುಷ್ಕರಗಳು. ಅಗ್ನಿಯು ಪೃಥಿವಿಯ ಪುಷ್ಕರವು, ಆದಿತ್ಯನು ದ್ಯುಲೋಕದ ಪುಷ್ಕರ.

"ಔರ್ಣವಾಭೋ ದ್ವ್ಯುಜೇತ್ವಸ್ಮಿನ್ ಅಶ್ವಿನೌ ಮನ್ಯತೇ ಸ್ತುತೌ ।
.... .... .... .... .... .... .... .... .... .... .... .... .... .... ...."
ಅಹೋರಾತ್ರೌ ಚ ತಾವೇವ ಸ್ಯಾತಾಂ ತಾವೇವ ರೋದಸೀ ॥

(ಬೃ. ದೇ. ೭-೧೨೬)

**ರೋದಸೀ** ಎಂದು ಪ್ರಸಿದ್ಧವಾಗಿರುವ ಈ ದ್ಯಾವಾಪೃಥಿವಿಗಳೇ ಅಶ್ವಿನೀದೇವತೆಗಳೆಂದೂ ಪ್ರಸಿದ್ಧವಾಗಿದ್ದಾರೆ ಎಂಬ ಒಂದು ಮತವನ್ನೂ ಸಹ ಬೃಹದ್ದೇವತಾದಿಗಳಲ್ಲಿ ಉದಾಹರಿಸಿದ್ದಾರೆ. ಈ ವ್ಯಾಪಕತ್ವಧರ್ಮವಿರುವುದರಿಂದಲೇ ಈ ಹೆಸರು ಆದುದರಿಂದ **ಉರ್ವೀ** ಎಂಬ ವಿಶೇಷಣವು ಉಚಿತವಾಗಿದೆ.

ರೋದಸೀ ಎಂಬ ಪದವು ದ್ವಿವಚನದಲ್ಲಿ ಪ್ರಯುಕ್ತವಾಗಿರುವಂತೆಯೇ ಕೆಲವು ಕಡೆಗಳಲ್ಲಿ ಏಕವಚನ ದಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ಆ ಸನ್ನಿವೇಶಗಳಲ್ಲಿ ಇದರ ಅರ್ಥವನ್ನು ಇದಮಿತ್ಥಂ ಎಂದು ಹೇಳುವುದು ಸುಲಭವಲ್ಲ. ಕೆಲವು ಸಂದರ್ಭಗಳಲ್ಲಿ ಒಂದೇ ಮಂತ್ರದಲ್ಲಿ ಈ ಪದದ ಪ್ರಯೋಗವು ಪೂರ್ವಾರ್ಧ ಮತ್ತು ಉತ್ತರಾರ್ಧ ಎರಡು ಕಡೆಗಳಲ್ಲಿಯೂ ಇರುತ್ತದೆ- ಆಗ ಒಂದೊಂದು ಪ್ರಯೋಗಕ್ಕೂ ಬೇರೆ ಬೇರೆ ಅರ್ಥವನ್ನು ಹೇಳಬೇಕಾಗುತ್ತದೆ. ಉದಾಹರಣೆಗೆ-

ತೆ ಇದುಗ್ರಾಃ ಶವಸಾ ಧೃಷ್ಣುಷೇಣಾ ಉಭೇ ಯುಜಂತ ರೋದಸೀ ಸುಮೇಕೇ ।
ಅಧ ಸ್ಮೈಷು ರೋದಸೀ ಸ್ವಶೋಚಿರಾಮವತ್ಸು ತಸ್ಥೌ ನ ರೋಕಃ ॥

(ಋ. ಸಂ. ೬-೬೬-೬)

ಎಂಬ ಈ ಮಂತ್ರವು ಮರುತ್ತುಗಳನ್ನು ಸ್ತುತಿಸುವುದು. ಈ ಮರುತ್ತುಗಳು ದ್ಯಾವಾಪೃಥಿಗಳೆರಡನ್ನೂ ಯೋಜಿಸು ತ್ತಾರೆ ಎಂದು ಮೊದಲನೆಯ ವಾಕ್ಯದ ಅರ್ಥ. ಮತ್ತು ರೋದಸಿಯು ಈ ಮರುತ್ತುಗಳಲ್ಲಿ ತನ್ನ ಪ್ರಭೆಯನ್ನು ಐಕ್ಯಮಾಡುತ್ತಾಳೆಂದು ಎರಡನೆಯ ವಾಕ್ಯದ ಅರ್ಥ. ಆದರೆ ಈ ರೋದಸಿಯು ಯಾರೆಂದರೆ **ಮಾಧ್ಯಮಿಕಾ** ವಾಕ್ ಎಂದು ಸಾಯಣರು ಅರ್ಥವನ್ನು ಹೇಳಿದ್ದಾರೆ. ಈ ರೋದಸಿಯು ರುದ್ರಪತ್ನಿಯೆಂಬುದು ಒಂದು ಮತ.

CC-0. Jangamwadi Math Collection. Digitized by eGangotri

ಮರುತ್ಪತ್ನಿಯೆಂಬುದು ಇನ್ನೊಂದು ಮತ. ರುದ್ರಪತ್ನಿಯೆಂದರೆ ಮರುತ್ತುಗಳ ಮಾತೆಯೆಂದರ್ಥ. ರುದ್ರನೇ ವಾಯುವು. ಈ ವಾಯುಪತ್ನಿಯೇ ಮಾಧ್ಯಮಿಕಾ ವಾಕ್ ಆಗಿದ್ದಾಳೆ. ಆ ವಾಕ್ಕೇ ವಿದ್ಯುದ್ರೂಪದ ಪ್ರಭೆಯು ಸ್ತನಿತದೊಡನೆ ಸೇರಿದ ಈ ಕಾಂತಿಗೆ ರೋದಸಿಯೆಂದು ಹೆಸರು. ಇದೇ ಮತವನ್ನನುಮೋದಿಸುತ್ತಾ,

"ರೋದಸೀ ದೇವಪತ್ನೀನಾಂ ಅಥರ್ವಾಂಗಿರಸೇ ಯಥಾ"

(ಬೃ ದೇ. ೨-೧೪೩)

ಅಥರ್ವಾಂಗಿರಸಮತದಂತೆ ರೋದಸಿಯು ದೇವಪತ್ನಿಯರಲ್ಲಿ ಒಬ್ಬಳು ಎಂದು ಏಕವಚನದ ಪ್ರಯೋಗವಿರುವ ಉದಾಹರಣೆಯಿದೆ. ಮತ್ತು ಇಂತಹ ಸ್ಥಳಗಳಲ್ಲಿಯೂ ಸಹ ವ್ಯಾಪಕತ್ವಧರ್ಮನೇ ಇರುವುದರಿಂದ ಉರ್ವೀ ಎಂಬ ವಿಶೇಷಣವು ಸಹಜವಾಗಿದೆ. ಪ್ರಕೃತವಾದ ಮಂತ್ರದಲ್ಲಿ ಅತ್ಯಂತ ವಿಸ್ತೃತರಾಗಿ ವಿಶ್ವವ್ಯಾಪಕರಾಗಿರುವ ದ್ಯಾವಾಪೃಥಿಗಳೆಂದರ್ಥ.

**ಸವಿತುಃ—ಸವಾಯ**—ಈ ಎರಡು ಪದಗಳೂ ಸಹ ಸವಿತೃವಿನ ಸ್ವರೂಪವನ್ನು ವರ್ಣಿಸುವ ಪದಗಳಾಗಿವೆ. ಜಗತ್ಪ್ರೇರಕನಾದುದರಿಂದಲೇ ಸವಿತೃಶಬ್ದದಿಂದ ಪ್ರಸಿದ್ಧನಾದ ದೇವತೆಯ ಪ್ರೇರಣಕಾರ್ಯವು ಈ ಪದಗಳಿಂದ ವರ್ಣಿತ ವಾಗಿದೆ. ಸವಿತೃವಿನ ಈ ಧರ್ಮವನ್ನು ಮುಂದೆ ವಿವರಿಸಲಾಗುತ್ತದೆ ಮಿತ್ರಾವರುಣರೂ, ದ್ಯಾವಾಪೃಥಿವಿಗಳೂ ಜಗತ್ಪ್ರಸೂತರಾದರೂ, ಜಗನ್ನಿಯಮಪಾಲಕರಾದರೂ, ಸಂಪತ್ಪ್ರದರಾಗಿದ್ದರೂ ಮತ್ತು ಅತ್ಯಂತಶ್ರೇಷ್ಠವಾದ ಮಾಹಾತ್ಮ್ಯವನ್ನು ಪಡೆದಿದ್ದರೂ ಸಹ ಈ ಸವಿತೃವಿನ ಪ್ರೇರಣದಿಂದಲೇ ಅವರೆಲ್ಲರ ವ್ಯವಹಾರವೂ ನೆರವೇರಿಸಲ್ಪಡುವು ದೆಂಬುದು ಎಂದು ತಿಳಿಸಲು ಈ ವರ್ಣನವಿದೆ.

———— :o: ————

ಸಂಹಿತಾಪಾಠಃ

ತ್ರಿರುತ್ತಮಾ ದೂಣಶಾ ರೋಚನಾನಿ ತ್ರಯೋ ರಾಜಂತ್ಯಸುರಸ್ಯ ವೀರಾಃ ।
ಋತಾವಾನ ಇಷಿರಾ ದೂಳಭಾಸಸ್ತ್ರಿರಾ ದಿವೋ ವಿದಥೇ ಸಂತು ದೇವಾಃ ॥೮॥

ಪದಪಾಠಃ

ತ್ರಿಃ । ಉತ್ಽತಮಾ । ದುಃಽನಶಾ । ರೋಚನಾನಿ । ತ್ರಯಃ । ರಾಜಂತಿ । ಅಸುರಸ್ಯ । ವೀರಾಃ ।
ಋತಽವಾನಃ । ಇಷಿರಾಃ । ದುಃಽದಭಾಸಃ । ತ್ರಿಃ । ಆ । ದಿವಃ । ವಿದಥೇ । ಸಂತು । ದೇವಾಃ ॥ ೮ ॥

ಸಾಯಣಭಾಷ್ಯಂ

ದೂಣಶಾ ದುರ್ನಶಾ ಕೇನಾಪಿ ವಿನಾಶಯಿತುಮಶಕ್ಯಾನಿ ರೋಚನಾನಿ ದೀಪ್ಯಮಾನಾನಿ ತ್ರಿಸ್ತ್ರೀ- ಣ್ಯುತ್ತಮಾನಿ ಸ್ಥಾನಾನಿ ಸಂತಿ । ಏತೇಷು ತ್ರಿಷು ಸ್ಥಾನೇಷ್ವಸುರಸ್ಯ । ಅಸ್ಯತಿ ಕ್ಷಿಪತಿ ಸರ್ವಮಿತ್ಯಸುರಃ ಕಾಲಾತ್ಮಾ ಸಂವತ್ಸರಃ । ತಸ್ಯ ವೀರಾಃ ಪುತ್ರಾಸ್ತ್ರಯೋಽಗ್ನಿವಾಯುಸೂರ್ಯರೂಪಾ ರಾಜಂತಿ । ಶೋಭಂತೇ । ತಾನೇವ ವಿಶಿನಷ್ಟಿ । ಋತಾವಾನಃ । ಋತಂ ಸತ್ಯಭೂತಮಗ್ನಿಹೋತ್ರಾದಿಕಂ ಕರ್ಮ

CC-0. Jangamwadi Math Collection. Digitized by eGangotri

ತದ್ವಂತಃ । ಇಷಿರಾ ಯಜ್ಞಾರ್ಥಂ ಶೀಘ್ರಗತಿಮಂತೋ ದೂಳಭಾಸೋ ದುರ್ದಭಾಸಃ ಕೇನಾಪಿ ಸ್ವತೇಜಸಾ ತಿರಸ್ಕರ್ತುಮಶಕ್ಯಾ ಏತೇ ಸರ್ವೇ ದೇವಾ ವಿದಥೇऽಸ್ಮದೀಯೇ ಯಜ್ಞೇ ದಿವೋऽಹ್ನಃ ಸಂಬಂಧಿಷು ತ್ರಿಸ್ತ್ರಿಷು ಸವನೇಷ್ವಾ ಸಂತು । ಸಮಂತಾದ್ಯಜನೀಯತಯಾ ಭವಂತು ॥ ಉತ್ತಮಾ । ಉತ್ತಮಶಶ್ವತ್ತಮೌ ಸರ್ವತ್ರೇತ್ಯುಂಛಾದಿಷು ಪಾಠಾದಂತೋದಾತ್ತತ್ವಂ । ದೂಣಶಾ । ನಶೇಃ ಕೃಚ್ಛ್ರಾರ್ಥೇ ಖಲ್ । ದುರೋ ದಾಶನಾಶದಭಧ್ಯೇಷೂತ್ವಂ ವಕ್ತವ್ಯಮಿತಿ ರೇಫಸ್ಯೋತ್ವಂ । ಉತ್ತರಪದಾದೇಃ ಷ್ಟುತ್ವಂ । ಲಿತ್ಸ್ವರಃ । ದೂಳಭಾಸಃ । ಪೂರ್ವವದುತ್ವಷ್ಟುತ್ವೇ ॥

ಪ್ರತಿಪದಾರ್ಥ

**ದೂಣಶಾ**—ನಾಶಾತೀತವಾದವೂ । **ರೋಚನಾನಿ**—ಪ್ರಕಾಶಮಾನವಾದವೂ ಆದ । **ಉತ್ತಮಾ ತ್ರಿಃ**—ಮೂರು ಉತ್ತಮಸ್ಥಾನಗಳಿವೆ (ಈ ಸ್ಥಾನಗಳಲ್ಲಿ) । **ಅಸುರಸ್ಯ**—ಕಾಲಾತ್ಮಕವಾದ ಸಂವತ್ಸರದ । **ವೀರಾಃ ತ್ರಯಃ**—ಅಗ್ನಿ, ವಾಯು ಮತ್ತು ಸೂರ್ಯರೂಪರಾದ ಮೂರು ಪುತ್ರರೂ । **ರಾಜಂತಿ**—ಪ್ರಕಾಶಿಸುತ್ತಾರೆ । **ಋತಾವಾನಃ**—ಸತ್ಯಾತ್ಮಕವಾದ ಕರ್ಮವುಳ್ಳವರೂ । **ಇಷಿರಾಃ**—ಯಜ್ಞಾರ್ಥವಾಗಿ ಶೀಘ್ರಗಾಮಿಗಳೂ । **ದೂಳಭಾಸಃ**—ತಡೆಯಲಸಾಧ್ಯವಾದ ತೇಜಸ್ಸುಳ್ಳವರೂ ಆದ । **ದೇವಾಃ**—ದೇವತೆಗಳು । **ವಿದಥೇ**—ಯಜ್ಞಗಳಲ್ಲಿ । **ದಿವಃ**—ಪ್ರತ್ಯಹಸ್ಸಿನ। **ತ್ರಿಃ**—ಸವನತ್ರಯದ ಕಾಲದಲ್ಲೂ । **ಆ ಸಂತು**—ಪೂಜಾರ್ಹರಾಗಿ ಬಂದು ಕುಳ್ಳಿರಲಿ.

ಭಾವಾರ್ಥ

ನಾಶಾತೀತವಾದವೂ, ಪ್ರಕಾಶಮಾನವಾದವೂ ಆದ ಮೂರು ಉತ್ತಮಸ್ಥಾನಗಳಿವೆ. ಈ ಸ್ಥಾನಗಳಲ್ಲಿ ಕಾಲಾತ್ಮಕವಾದ ಸಂವತ್ಸರದ ಪುತ್ರರೂಪರಾದ ಅಗ್ನಿ, ವಾಯು ಮತ್ತು ಸೂರ್ಯರು ಪ್ರಕಾಶಿಸುತ್ತಾರೆ. ಸತ್ಯಾತ್ಮಕವಾದ ಕರ್ಮವುಳ್ಳವರೂ, ಯಜ್ಞಾರ್ಥವಾಗಿ ಶೀಘ್ರಗಾಮಿಗಳೂ, ತಡೆಯಲಸಾಧ್ಯವಾದ ತೇಜಸ್ಸುಳ್ಳವರೂ, ಆದ ದೇವತೆಗಳು ಯಜ್ಞಗಳಲ್ಲಿ ಪ್ರತ್ಯಹಸ್ಸಿನ ಸವನತ್ರಯಕಾಲಗಳಲ್ಲೂ ಸಹ ಪೂಜಾರ್ಹರಾಗಿ ಬಂದು ಕುಳ್ಳಿರಲಿ.

English Translation

Three are the excellent uninjurable bright regions, three scions of the powerful (year) are shining; practisers of truth, quick-moving of surpassing radiance: may the deities be present thrice daily at the sacrifice.

ವಿಶೇಷವಿಷಯಗಳು

ಪೃಥಿವ್ಯಾದಿಲೋಕತ್ರಯವೂ, ಲೋಕತ್ರಯದ ಅಧಿದೇವತೆಗಳಾದ ಅಗ್ನ್ಯಾದಿದೇವತೆಗಳ ಮಾಹಾತ್ಮ್ಯವೂ ಪ್ರಕೃತವಾದ ಮಂತ್ರದಲ್ಲಿ ಸ್ತುತವಾಗಿದೆ. ತ್ರಿಃ ಎಂಬುದರಿಂದ ಸೂಚಿತವಾಗುವ ಮೂರು ಲೋಕಗಳ ಸ್ವರೂಪವನ್ನು ತಿಳಿಸಲು **ದೂಣಶಾ, ರೋಚನಾನಿ, ಉತ್ತಮಾ** ಎಂಬ ಮೂರು ವಿಶೇಷಣಗಳಿವೆ. ಭಾಷ್ಯದಲ್ಲಿ ಉತ್ತಮಸ್ಥಾನಗಳಾವುವೆಂಬುದನ್ನು ನಿರ್ದೇಶಿಸಿ ತಿಳಿಸಿಲ್ಲ. ಆದರೆ ವೀರಾಃ ತ್ರಯಃ ಎಂಬುದಕ್ಕೆ ಅಗ್ನಿ, ವಾಯು ಮತ್ತು ದ್ಯು ಲೋಕಗಳೆಂದರ್ಥಮಾಡಿಕೊಳ್ಳಬೇಕು. ಸಾಧಾರಣವಾಗಿ ಈ ಲೋಕಗಳು ತಮ್ಮ ವೈಯಕ್ತಿಕವಾದ ವೈಶಿಷ್ಟ್ಯವನ್ನು

CC-0. Jangamwadi Math Collection. Digitized by eGangotri

ತೋರಿಸತಕ್ಕ ವಿಶೇಷಣಗಳಿಂದಲೇ ಅನೇಕಸಲ ನಿರ್ದಿಷ್ಟವಾಗುತ್ತವೆ. ಉದಾಹರಣೆಗೆ— **ಉರ್ವೀ, ಪೃಥಿವೀ, ಅಪರಾ** ಇತ್ಯಾದಿಗಳು ಪೃಥಿವಿಯ ವಿಸ್ತೃತಿಯನ್ನೂ, **ಭೂಮಿಃ** ಎಂಬುದು ಪೃಥಿವಿಯು ಭೂತಗಳಿಗೆ ಉತ್ಪತ್ತಿಸ್ಥಾನವೆಂಬುದನ್ನೂ, **ಮಹೀ, ಉತ್ತಾನಾ** ಇತ್ಯಾದಿಗಳು ಅದರ ಔನ್ನತ್ಯವನ್ನೂ ತಿಳಿಸುತ್ತವೆ. ಅನೇಕಕಡೆಗಳಲ್ಲಿ ಕೇವಲ **ಇದಂ** ಎಂಬ ಪರ್ಯಾಯಪದದಿಂದಲೇ ಪೃಥಿವಿಯೆಂಬುದು ಸೂಚಿತವಾಗುತ್ತದೆ. ಅಂತಹ ಸಂದರ್ಭಗಳಲ್ಲಿ ಊರ್ಧ್ವಭಾಗದ ಲೋಕಗಳಿಗಿಂತ ಪ್ರತ್ಯೇಕವಾದುದೆಂದರ್ಥ. **ದಿವಿ, ರೋಚನ, ವ್ಯೋಮ** ಇತ್ಯಾದಿ ವಿಶೇಷಣಗಳು ಅಂತರಿಕ್ಷದ ಪ್ರಕಾಶವನ್ನು ವರ್ಣಿಸುವುವಾಗಿವೆ. **ಸಾನು, ವಿಷ್ಟಪ, ಪೃಷ್ಠ** ಇವು ಅದರ ಔನ್ನತ್ಯವನ್ನು ಸೂಚಿಸುತ್ತವೆ. ಕೆಲವೆಡೆಗಳಲ್ಲಿ **ಅಂತರಿಕ್ಷ, ದ್ಯುಲೋಕ** ಇವುಗಳಿಗಿರುವ ವ್ಯತ್ಯಾಸವೇನೆಂಬುದನ್ನು ಹೇಳಲೂ ಶ್ರಮವಾಗುತ್ತದೆ. ಉದಾಹರಣೆಗೆ ಅಂತರಿಕ್ಷ ಮತ್ತು ದ್ಯೌಃ ಇವೆರಡಕ್ಕೂ ವ್ಯತ್ಯಾಸವಿದ್ದ ಪಕ್ಷದಲ್ಲಿ, **ರೋದಸೀ** ಎಂಬ ಪದಕ್ಕೆ ಪೃಥಿವ್ಯಂತರಿಕ್ಷಗಳೇ ಅಥವಾ ದ್ಯಾವಾಪೃಥಿವಿಗಳೇ ಎಂದು ಹೇಳಲೂ ಶ್ರಮವಾಗುತ್ತದೆ.

ರಜಸ್ ಎಂಬ ವಿಶೇಷಣ ಅಥವಾ ಪರ್ಯಾಯಪದವು ಅನೇಕವೇಳೆ ಅಂತರಿಕ್ಷವನ್ನು ಸೂಚಿಸುವುದಾಗಿದೆ. ಆದರೆ, ಪ್ರಕೃತವಾದ ಋಕ್ಕಿನಲ್ಲಿ **ಉತ್ತಮಾ** ಎಂಬ ವಿಶೇಷಣವಿರುವಂತೆ, ರಜಸ್ ಎಂಬುದು ಸಹ ಲೋಕತ್ರಯವನ್ನೂ ಸೂಚಿಸುವ ಪದವಾಗಿರುತ್ತದೆ. ಇಂತಹ ಸಂದರ್ಭಗಳಲ್ಲಿ **ತೃತೀಯೆ, ಉತ್ತಮ, ಪರಮ** ಎಂಬ ವಿಶೇಷಣಗಳು ಮೂರರಲ್ಲಿ ಯಾವ ಲೋಕವೆಂಬುದನ್ನು ತಿಳಿಸುತ್ತವೆ. ಆದರೆ, ಅಲ್ಲಿಯೂ ಸಂದರ್ಭಾನುಸಾರವೇ ಹೇಳಬೇಕು. ಉದಾಹರಣೆಗೆ—

**ಸಹಸ್ರಧಾರೇವ ತಾ ಅಸಶ್ಚತಸ್ತೃತೀಯೇ ಸಂತು ರಜಸಿ ಪ್ರಜಾವತೀಃ ।**

(ಋ. ಸಂ. ೯-೭೪-೬)

ಎಂಬಲ್ಲಿ ತೃತೀಯೇ ರಜಸಿ ಎಂದರೆ ಸ್ವರ್ಗವೆಂದರ್ಥಮಾಡಿದೆ. ದ್ಯುಲೋಕವೆನ್ನಬಹುದು.

**ಸಮುದ್ರೇ ತ್ವಾ ನೃಮಣಾ ಅಪ್ಸ್ವಂ೧ ತರ್ನೃಚಕ್ಷಾ ಈಧೇ ದಿವೋ ಅಗ್ನ ಊಧನ್ ।**
**ತೃತೀಯೇ ತ್ವಾ ರಜಸಿ ತಸ್ಥಿವಾಂಸಮಪಾಮುಪಸ್ಥೇ ಮಹಿಷಾ ಅವರ್ಧನ್ ॥**

(ಋ. ಸಂ. ೧೦-೪೫-೩)

ಎಂಬಲ್ಲಿ ದಿವಃ ಎಂದು ದ್ಯುಲೋಕಸೂಚಿಯಾದ ಪದವಿದೆ. ಈ ಸಂದರ್ಭದಲ್ಲಿ ತೃತೀಯೇ ರಜಸಿ ಎಂದರೆ ಅಂತರಿಕ್ಷವೆಂದರ್ಥಮಾಡಿದೆ. ತೃತೀಯಶಬ್ದಕ್ಕೆ ಮೂರನೆಯ ಲೋಕವೆಂದರ್ಥಮಾಡದೆ ಬೇರೆ ವಿಧವಾಗಿ ವಿವರಿಸಲ್ಪಟ್ಟಿದೆ. **ಉಶೇದಮುತ್ತಮಂ ರಜಃ** (೯-೨೨-೫) ಎಂಬಲ್ಲಿ ಉತ್ತಮರಜಸ್ಸೆಂದರೆ ದ್ಯುಲೋಕವೆಂದೇ ಅರ್ಥವಾಗುತ್ತದೆ.

**ತಿಸ್ರೋ ದ್ಯಾವೋ ನಿಹಿತಾ ಅಂತರಸ್ಮಿಂಸ್ತಿಸ್ರೋ ಭೂಮೀರುಪರಾಃ ಷಡ್ವಿಧಾನಾಃ ।**
**ಗೃತ್ಸೋ ರಾಜಾ ವರುಣಶ್ಚಕ್ರ ಏತಂ ದಿವಿ ಪ್ರೇಂಖಂ ಹಿರಣ್ಯಯಂ ಶುಭೇ ಕಂ ॥**

(ಋ. ಸಂ- ೭-೮೭-೫)

ಎಂಬಲ್ಲಿ ಹಿಂದೆ ಪ್ರಕೃತವಾದ ಸೂಕ್ತದ **ತ್ರಿಪಾಜಸ್ಯಃ** ಎಂಬ ಮಂತ್ರದಲ್ಲಿ (೩-೫೬-೩) ಉಕ್ತವಾಗಿರುವಂತೆ **ತಿಸ್ರಃ ದ್ಯಾವಃ, ತಿಸ್ರಃ ಭೂಮೀಃ,** ಎಂದು ದ್ಯುಲೋಕ ಮತ್ತು ಭೂಮಿಯು ಮೂರು ವಿಧವೆಂದು ತೋರಿಸಿ, ಅಂತರಿಕ್ಷವನ್ನು ಏಕವಚನದಲ್ಲಿ ಹೇಳಿದೆ. ಮತ್ತು **ದಿವಿ** ಎಂಬುದನ್ನು ಅಂತರಿಕ್ಷಪರ್ಯಾಯವಾಗಿ ಉಪಯೋಗಿಸಿರುವುದೂ ಒಂದು ವಿಶೇಷ.

CC-0. Jangamwadi Math Collection. Digitized by eGangotri

ತ್ರಿರಶ್ವಿನಾ ಸಿಂಧುಭಿಃ ಸಪ್ತಮಾತೃಭಿಸ್ತ್ರಯ ಆಹಾವಾಸ್ತ್ರೇಧಾ ಹವಿಷ್ಕೃತಂ ।
ತಿಸ್ರಃ ಪೃಥಿವೀರುಪರಿ ಪ್ರವಾ ದಿವೋ ನಾಕಂ ರಕ್ಷೇಥೇ ದ್ಯುಭಿರಕ್ತುಭಿರ್ಹಿತಂ ॥
(ಋ. ಸಂ. ೧-೩೪-೮)

ಎಂಬಲ್ಲಿ ನಾಕಶಬ್ದವು ನಾಲ್ಕನೆಯ ಲೋಕವನ್ನು ಸೂಚಿಸುತ್ತದೆ. **ಪೃಥಿವ್ಯಾದಿಲೋಕೇಭ್ಯಃ ಊರ್ಧ್ವಂ ಆದಿತ್ಯ-ಲೋಕಂ** ಪೃಥಿವ್ಯಾದಿ ಮೂರು ಲೋಕಗಳಿಗಿಂತಲೂ ಊರ್ಧ್ವಭಾಗದಲ್ಲಿರತಕ್ಕ ಆದಿತ್ಯಲೋಕವೆಂದು ತಿಳಿಸಿದೆ. ಹೀಗೆ ನಾಲ್ಕನೆಯ ಲೋಕವು ಅನೇಕಕಡಗಳಲ್ಲಿ ವರ್ಣಿತವಾಗಿರುವುದು ಸನ್ನಿವೇಶಗಳಿಂದ ತಿಳಿಸಲ್ಪಟ್ಟಿದೆ. ಉದಾಹರಣೆಗೆ

ಚಮೂಷಚ್ಛ್ಯೇನಃ ಶಕುನೋ ವಿಭೃತ್ವಾ ಗೋವಿಂದುರ್ದ್ರಪ್ಸ ಆಯುಧಾನಿ ಬಿಭ್ರತ್ ।
ಅಪಾಮೂರ್ಮಿಂ ಸಚಮಾನಃ ಸಮುದ್ರಂ ತುರೀಯಂ ಧಾಮ ಮಹಿಷೋ ವಿವಕ್ತಿ ॥
(ಋ. ಸಂ. ೯-೯೬-೧೯)

ಸೋಮರಾಜನು ಅಂತರಿಕ್ಷವನ್ನೆಲ್ಲಾ ಸಂಚರಿಸಿ ಅನಂತರ **ತುರೀಯಧಾಮಕ್ಕೆ** (ನಾಲ್ಕನೆಯ) ಪ್ರವೇಶಿಸಿ ಅಲ್ಲೆಲ್ಲಾ ಸಂಚರಿಸಿದನು ಎಂದು ನಾಲ್ಕನೆಯ ಲೋಕವು ಪ್ರಸಿದ್ಧವಾಗಿರುವ ಲೋಕತ್ರಯಕ್ಕಿಂತಲೂ ಮೀರಿದುದೆಂದೂ ಇದು ಆದಿತ್ಯಲೋಕವೆಂದೂ ತಿಳಿಸಲ್ಪಟ್ಟಿದೆ. ಈ ತುರೀಯಲೋಕದ ಮಹತ್ತ್ವವನ್ನು ಮುಂದೆ **ಗಾಯತ್ರೀ** ಮಂತ್ರದ ವಿವರಣೆಯನ್ನು ಹೇಳುವಾಗ ತಿಳಿಸಲಾಗುತ್ತದೆ. ಆದರೆ ಇಲ್ಲಿ ವೈಶಿಷ್ಟ್ಯವನ್ನು ಮಾತ್ರ ಗಮನಿಸಬಹುದು. ಸಾಯಣರು ಇಲ್ಲಿ **ತುರೀಯಂ ಚತುರ್ಥಂ ಧಾಮ ಚಾಂದ್ರಮಸಂ ಸ್ಥಾನಂ ಸೇವತೇ । ಸೂರ್ಯಲೋಕಸ್ಯೋ-ಪರಿ ಚಂದ್ರಮಸಃ ಲೋಕಃ ವಿದ್ಯತೇ ।** ಈ ನಾಲ್ಕನೇ ಲೋಕಕ್ಕೆ ಚಂದ್ರಲೋಕವೆಂದು ಪ್ರಸಿದ್ಧಿಯೆಂದೂ ಇದು ಸೂರ್ಯಲೋಕವನ್ನೂ ಮೀರಿದುದೆಂದೂ ತಿಳಿಸಿದ್ದಾರೆ. ಆದರೆ ಈ **ತುರೀಯಲೋಕವು** ಆದಿತ್ಯಲೋಕವೆಂದು ಉಪನಿಷದಾದಿಗಳಲ್ಲಿ ವರ್ಣಿತವಾಗಿರುವುದನ್ನು ಮುಂದೆ ಪರಿಶೀಲಿಸಬಹುದು. **ತಿಸ್ರಃ ಪೃಥಿವೀಃ ತ್ರೀಣಿ ರೋಚನಾ** ಎಂದಿರುವಾಗಲೂ ಸಹ ಸಂದರ್ಭಾನುಸಾರವಾಗಿಯೇ ಅರ್ಥವನ್ನು ಹೇಳಬೇಕಾಗುವುದು.

ತ್ರಿರುತ್ತರಾಣಿ ಪಪ್ರತುರ್ವರುಣಸ್ಯ ಧ್ರುವಂ ಸದಃ ಸ ಸಪ್ತಾನಾಮಿರಜ್ಯತಿ ನಭಂತಾಮನ್ಯಕೇ ಸಮೇ । (ಋ ಸಂ ೮-೪೧-೯)

ವರುಣನ ರಶ್ಮಿಗಳು ಪೃಥ್ವೀತ್ರಯವನ್ನು ಮಾತ್ರ ವ್ಯಾಪಿಸುವುದಲ್ಲದೆ ಅವುಗಳನ್ನು ಮೀರಿ ಮೂರು ಉತ್ತಮಲೋಕ ಗಳನ್ನೂ ವ್ಯಾಪಿಸಿತು ಎಂದು (**ಉತ್ತರಾಣಿ ತ್ರಿಃ**) ಪೃಥಿವ್ಯಾದಿ ಲೋಕಗಳಿಗಿಂತಲೂ ಅತಿರಿಕ್ತವಾದ ಲೋಕತ್ರಯವು ಇಲ್ಲಿ ಉಕ್ತವಾಗಿದೆ. **ತಿಸ್ರಃ ಪರಾವತೋ ದಿವಃ** (೮-೫ ೮) ಇತ್ಯಾದಿ ವರ್ಣನೆಗಳೂ ಸಹ ಇದೇ ಅಂಶವನ್ನು ಸೂಚಿಸುತ್ತವೆ. ವಿಪ್ರತಿಪತ್ತಿಗೆ ಅವಕಾಶವನ್ನು ಕೊಟ್ಟಿರುವ ಮಂತ್ರಗಳಲ್ಲಿ ಒಂದನ್ನು ಉದಾಹರಣೆಗೆ ತೆಗೆದುಕೊಂಡು ಪರಿಶೀಲಿಸಬಹುದು.

ತಿಸ್ರೋ ದ್ಯಾವಃ ಸವಿತುರ್ದ್ವಾ ಉಪಸ್ಥಾ ಏಕಾ ಯಮಸ್ಯ ಭುವನೇ ವಿರಾಷಾಟ್ ।
ಆಣಿಂ ನ ರಥ್ಯಮಮೃತಾಧಿ ತಸ್ಥುರಿಹ ಬ್ರವೀತು ಯ ಉ ತಚ್ಚಿಕೇತತ್ ॥
(ಋ ಸಂ. ೧-೩೫-೬)

ಮೂರು ವಿಧವಾದ ದ್ಯುಲೋಕಗಳಲ್ಲಿ ಎರಡು ಸವಿತೃವಿಗೂ ಒಂದು ಯಮನಿಗೂ ಸೇರಿರುತ್ತದೆ. ರಥದ ಭಾಗಗಳೆಲ್ಲವೂ ಆಣಿಯನ್ನೇ ಆಶ್ರಯಿಸಿ ಅದರ ಆಧಾರದ ಮೇಲೆ ಸೇರಿಕೊಂಡಿರುವಂತೆ ಮರಣರಹಿತವಾದ ಸಕಲ ಲೋಕಗಳೂ ಈ

CC-0. Jangamwadi Math Collection. Digitized by eGangotri

ಸವಿತೃಲೋಕವನ್ನೇ ಆಶ್ರಯಿಸಿವೆ. ಮಾಧವಕೃತವಾದ ಋಗ್ವೇದವ್ಯಾಖ್ಯೆಯಲ್ಲಿಯೂ ಸಾಯಣಭಾಷ್ಯದಲ್ಲಿಯೂ ಸಹ ಈ ಮೂರು ಲೋಕಗಳು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕಗಳೆಂದೂ ಇವುಗಳಲ್ಲಿ ಪೃಥಿವಿಯೂ, ದ್ಯುಲೋ-ಕವೂ ಸವಿತೃವಿಗೆ ಸೇರಿದುದೆಂದೂ, ಅಂತರಿಕ್ಷವು ಯಮನ ಲೋಕವೆಂದೂ ತಿಳಿಸಿದೆ. ಆದರೆ ವೆಂಕಟಮಾಧವರು ಈ ಮೂರೂ ಸಹ ದ್ಯುಲೋಕಪ್ರಕಾರಗಳೆಂದೂ ಅಗ್ನಿ ಮತ್ತು ಸವಿತೃವು ಇವುಗಳಿಗೆ ಅಗ್ನಿದೇವತೆಗಳೆಂದೂ ತಿಳಿಸಿದ್ದಾರೆ. ಈ ಎರಡು ಅಭಿಪ್ರಾಯಗಳಲ್ಲಿ ಯಾವುದನ್ನು ಬೇಕಾದರೂ ಪರಿಗ್ರಹಿಸಬಹುದೆಂದು ಸ್ಕಂದಸ್ವಾಮಿಗಳು ಅಭಿಪ್ರಾಯಪಡುತ್ತಾರೆ.

**ತದ್ವಿಷ್ಣೋಃ ಪರಮಂ ಪದಂ, ತುರೀಯಂ ಧಾಮ** ಇತ್ಯಾದಿಗಳ ನಿಜವಾದ ಅರ್ಥವೇನು ಎಂಬುದರಲ್ಲಿಯೂ ಸಹ ಆಶಂಕೆಯಿದೆ. ವಿಷ್ಣುವು ದ್ಯುಸ್ಥಾನದೇವತೆಯೆಂದು ಯಾಸ್ಕರು ಪರಿಗಣಿಸಿದ್ದಾರೆ. ಆದರೆ ಋಕ್ಸಂಹಿತೆಯ ವಿವರಣೆಯನ್ನು ಪರಿಶೀಲಿಸಿದರೆ ಈ ದ್ಯುಸ್ಥಾನವು ಲೋಕತ್ರಯವನ್ನೂ ಮೀರಿದೆಯೆಂದು ತಿಳಿಯುವುದು. **ತಿಸ್ರೋ ದ್ಯಾವಃ** ಎಂಬುದರಲ್ಲಿ ಒಂದು ಸೋಮ, ಋಭು, ಇವರ ಸ್ಥಾನ. ಎರಡನೆಯದು ಸೂರ್ಯಲೋಕ. ಮೂರನೆಯದು ಆದಿತ್ಯಲೋಕ. ಅದೇ ವಿಷ್ಣುವಿನ ಪರಮಪದ.

ಪ್ರಕೃತದಲ್ಲಿ **ತ್ರಿಃ ಉತ್ತಮಾ ರೋಚನಾ**–ಮೂರು ಉತ್ತಮಸ್ಥಾನಗಳು ಎನ್ನುವಾಗಲೂ ಸಹ ಸಂಶಯಕ್ಕೆ ಅವಕಾಶವಿದೆ. ಆದರೆ **ವೀರಾಃ ತ್ರಯಃ** ಎಂಬುದಕ್ಕೆ ಅಗ್ನಿ ವಾಯು ಆದಿತ್ಯ ಎಂಬರ್ಥಮಾಡಿರುವುದರಿಂದ ಇದರ ಆಧಾರದ ಮೇಲೆ ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕ ಎಂದು ಹೇಳಬೇಕಾಗಿದೆ.

**ದೂಣಶಾ** ಎಂಬುದಕ್ಕೆ ನಾಶರಹಿತವಾದುದು ಎಂದರ್ಥಮಾಡಬಹುದು. ಅಥವಾ ಸುಲಭವಾಗಿ ಪಡೆಯಲ ಸಾಧ್ಯವಾಗತಕ್ಕದ್ದಲ್ಲ ಎಂದೂ ಅರ್ಥಮಾಡಬಹುದು.

**ಅಸುರಸ್ಯ**— **ಅಸ್ಯತಿ ಕ್ಷಿಪತಿ ಸರ್ವಮಿತ್ಯಸುರಃ। ಕಾಲಾತ್ಮಾ ಸಂವತ್ಸರಃ।** ಸರ್ವವನ್ನೂ ತನ್ನ ವಶದಲ್ಲಿಟ್ಟುಕೊಳ್ಳತಕ್ಕ ಕಾಲಾತ್ಮವಾದ ಸಂವತ್ಸರವೆಂದು ಸಂವತ್ಸರದ ಒಂದು ಅಂಶವನ್ನು ಮಾತ್ರ ಇಲ್ಲಿ ತಿಳಿಸಿದೆ. ಸಂವತ್ಸರವು ಯಾವ ರೀತಿ ಸೃಷ್ಟಿಗೂ, ವೃದ್ಧಿಗೂ ಕಾರಣವೋ ಅದೇ ರೀತಿ ಕ್ಷಯಕ್ಕೂ ಕಾರಣವಾಗುತ್ತದೆ. ಹಿಂದೆಲ್ಲಾ ವಿವರಿಸಿದಂತೆ ಇಲ್ಲಿಯೂ ಸಹ ಸಂವತ್ಸರಾಧಿದೇವತೆಯಾದ ಪ್ರಜಾಪತಿಯೂ ನಿರ್ದಿಷ್ಟವಾಗಿರಬಹುದು.

> ಪ್ರಜಾಪತಿರ್ಲೋಕಾನಭ್ಯತಪತ್ತೇಷಾಂ ತಪ್ಯಮಾನಾನಾಂ ರಸಾನ್ಪ್ರಾವೃಹದಗ್ನಿಂ ಪೃಥಿವ್ಯಾ ವಾಯುಮಂತರಿಕ್ಷಾದಾದಿತ್ಯಂ ದಿವಃ ॥
>
> (ಛಾ. ಉ. ೪–೧೭–೧)

ಪ್ರಜಾಪತಿಯು ಲೋಕತ್ರಯದ ತತ್ತ್ವವನ್ನೂ ಧ್ಯಾನಿಸಿ ಅವುಗಳ ರಸವನ್ನು ತೆಗೆದು ಪ್ರಸಾರಮಾಡಿದನು. ಪೃಥ್ವಿಯಿಂದ ಅಗ್ನಿಯನ್ನೂ, ಅಂತರಿಕ್ಷದಿಂದ ವಾಯುವನ್ನೂ, ದ್ಯುಲೋಕದಿಂದ ಆದಿತ್ಯನನ್ನೂ ಪ್ರಕಾಶಿಸುವಂತೆ ಮಾಡಿದನು ಎಂದು ಪ್ರಕೃತವಾದ ಋಕ್ಕಿನಲ್ಲಿ **ರೋಚನಾ ತ್ರಿಃ** ಎಂದು ಹೇಳಿರುವ ಈ ಮೂರು ಲೋಕಗಳಿಂದಲೂ ಸಹ ಮೂರು ಉತ್ತಮವಾದ ದೇವತೆಗಳನ್ನು ಪ್ರಕಾಶಿಸುವಂತೆ ಮಾಡಿದನು ಎಂದು ವರ್ಣಿತವಾಗಿರುವುದರಿಂದ ಇಲ್ಲಿಯೂ ಸಹ **ಅಸುರಸ್ಯ** ಎಂಬುದಕ್ಕೆ ಸಂವತ್ಸರಾತ್ಮಕವಾದ ಪ್ರಜಾಪತಿಯೆಂದೂ ಹೇಳಬಹುದು.

ಅಸುರಶಬ್ದವು ಶಕ್ತಿವಿಶೇಷವನ್ನು ಸೂಚಿಸುವುದಾಗಿದೆ. ಈ ಶಕ್ತಿಯು ಪೋಷಕವೂ ಆಗಿರಬಹುದು. ಅಥವಾ ನಾಶಕವೂ ಆಗಿರಬಹುದು. ಈ ಶಬ್ದದ ವಿಶೇಷಾರ್ಥಗಳನ್ನು ಹಿಂದೆ ತಿಳಿಸಿದ್ದರೂ ಸಹ ಪ್ರಕೃತದಲ್ಲಿ ಇದರ

CC-0. Jangamwadi Math Collection. Digitized by eGangotri

ತಾತ್ಪರ್ಯವನ್ನು ನಿಷ್ಕರ್ಷಿಸಿ ಈ ಪದವು ಯಾವ ತತ್ತ್ವದ ಯಾವ ಶಕ್ತಿಸ್ವರೂಪಗಳನ್ನು ತೋರಿಸುತ್ತದೆಂದು ತಿಳಿಯಲು ಸೂಕ್ಷ್ಮವಾಗಿ ಇದರ ನಿರ್ವಚನವನ್ನು ತಿಳಿಯಬೇಕಾಗಿದೆ.

**ಅಸುರಾ ಅಸುರತಾಃ ಸ್ಥಾನೇಷ್ವಸ್ತಾಃ ಸ್ಥಾನೇಭ್ಯ ಇತಿ ವಾ । ಅಪಿ ವಾ ಅಸುರಿತಿ ಪ್ರಾಣನಾಮ ಅಸ್ತಃ ಶರೀರೇ ಭವತಿ ತೇನ ತದ್ವಂತಃ ॥**

(ನಿ. ೩-೮)

ಯಾವಾಗಲೂ ದುಷ್ಟಕಾರ್ಯಗಳಲ್ಲಿ ತೃಪ್ತಿಯನ್ನು ಹೊಂದುವವರಾದುದರಿಂದ ರಾಕ್ಷಸರಿಗೆ ಅಸುರರು ಎಂಬ ಹೆಸರು ಪ್ರಸಿದ್ಧವಾಗಿದೆ. ಅಥವಾ ದೇವತೆಗಳಿಂದ ನಿರಸ್ತರಾಗಿ ತಳ್ಳಲ್ಪಟ್ಟುದರಿಂದ ಅಸುರರು ಎಂದಾಗಬಹುದು. ಅಥವಾ ಅಸುಶಬ್ದವು ಪ್ರಾಣದ ಪರ್ಯಾಯನಾಮವಾಗಿರಬಹುದು. ಅಥವಾ **ಸು** ವಿನಿಂದ ಎಂದರೆ ಸದ್ಧರ್ಮದಿಂದ ಸೃಷ್ಟರಾದುದರಿಂದ ದೇವತೆಗಳು **ಸುರರು,** ಅಸದ್ಧರ್ಮದಿಂದ (ಅ-ಸು) ಸೃಷ್ಟರಾದುದರಿಂದ ರಾಕ್ಷಸರು ಎಂಬ ವಿಭಾಗ ವಿರುವುದು. ಸದ್ಯಃ ಈ ವಿವರಣೆಯು ಅಪ್ರಕೃತ. ಪ್ರಕೃತದಲ್ಲಿ ಅಸುರಶಬ್ದದ ಪ್ರಯೋಗವು ಯಾವ ಧರ್ಮವನ್ನು ತಿಳಿಸುತ್ತದೆಂಬುದನ್ನು ಹಿಂದಿನ ಸೂಕ್ತದ ಮಂತ್ರಗಳು ತಿಳಿಸುತ್ತವೆ. " **ಮಹದ್ದೇವಾನಾಮಸುರತ್ವಮೇಕಂ** " ಎಂದು ಹಿಂದಿನ ಸೂಕ್ತದ ಪ್ರತಿಯೊಂದು ಮಂತ್ರದ ಕೊನೆಯ ಪಾದವಾಗಿರುತ್ತದೆ. ಈ ಸ್ಥಳಗಳಲ್ಲೂ ಸಹ ಪ್ರಕೃತ ವಾದ ಋಕ್ಕಿನಲ್ಲಿ ಹೇಳಿರುವ ನಿರ್ವಚನದಂತೆ **ಅಸ್ಯತಿ ಕ್ಷಿಪತಿ ಸರ್ವಾನಿತ್ಯಸುರಃ ಪ್ರಬಲಃ । ತಸ್ಯ ಭಾವಃ ಅಸುರತ್ವಂ ಪ್ರಾಬಲ್ಯಂ । ಮಹದೈಶ್ವರ್ಯಂ ।** ಶತ್ರುಗಳನ್ನು ನಿಗ್ರಹಿಸುವ ಶಕ್ತಿಯಿರತಕ್ಕ ಪ್ರಭುತ್ವವು ಎಂದರ್ಥ ಮಾಡಿದೆ. ಆದುದರಿಂದ ವೈಯಕ್ತಿಕವಾದ ದೇವತೆಗಳ ಅಸುರತ್ವಕ್ಕೆ ಅಷ್ಟು ಸಾಮರ್ಥ್ಯವಿರುವಾಗ ದೇವತೆಗಳಿಗೆಲ್ಲಾ ಪ್ರಭುವಾಗಿರತಕ್ಕ ಪ್ರಜಾಪತಿಯ ಅಸುರತ್ವವು ವಿಶ್ವನಿಯಾಮಕವಾದುದೆಂದು ಹೇಳಬೇಕಾಗಿಲ್ಲ. ಈ ವಿಶ್ವನಿಯಾಮಕತ್ವವಿರುವುದರಿಂದ ಪ್ರಜಾಪತಿಯು ಅಥವಾ ಕಾಲರೂಪನಾದ ಈಶ್ವರನು ಅಸುರಶಬ್ದವಾಚ್ಯನಿನಾಗಿದ್ದಾನೆ. ಈ ವಿಶ್ವನಿಯಮನದಲ್ಲಿ ತನ್ನ ಶಕ್ತಿಯನ್ನು ಪ್ರಕಟಿಸುತ್ತಾ ಕೇವಲ ಸಾಧನಮಾಡುವ ಕಾರ್ಯವಲ್ಲದೆ ಸಕಲವಿಶ್ವಕ್ಕೂ ಸಹ ಚೈತನ್ಯದಾತನಾಗಿರುವ ಶಕ್ತಿಯೂ ಪ್ರಕಟಿತವಾಗುತ್ತದೆ. ಈ ಶಕ್ತಿಯನ್ನು ವಿವರಿಸುತ್ತಾ,

**ವಿ ಸುಪರ್ಣೋ ಅಂತರಿಕ್ಷಾಣ್ಯಖ್ಯದ್ಗಭೀರವೇಪಾಃ ಅಸುರಃ ಸುನೀಥಃ ।**

(ಋ. ಸಂ. ೧-೩೫-೭)

ಇತ್ಯಾದಿ ಋಕ್ಕುಗಳಲ್ಲಿ ವಿಶ್ವಚೈತನ್ಯದಾಯಿಯಾದ ದೇವನ ವರ್ಣನೆಯಿದೆ. " **ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ** " (ತೈ. ಆ. ೧-೧೪-೧) ಸಕಲ ಭೂತಗಳಿಗೂ ಪ್ರಾಣದಾತನು ಆದಿತ್ಯನು ಎಂದು ಬ್ರಾಹ್ಮಣಾದಿಗಳಲ್ಲಿ ಪ್ರಶಂಸಿಸಿರುವುದರಿಂದ ಅದೇ ಶಕ್ತಿಯುಳ್ಳ ಆದಿತ್ಯನಿಗೆ ಇಲ್ಲಿ ಅಸುರ ಶಬ್ದವು ವಿಶೇಷಣವಾಗಿದೆಯೆಂದ ಉದಾಹೃತವಾಗಿರುವ ಮಂತ್ರದಿಂದ ತಿಳಿಯುತ್ತದೆ. ಅಲ್ಲದೇ, " **ಜನಾನಾಂ ಯೋ ಅಸುರೋ ವಿಧರ್ತಾ ।** (೭-೫೬-೨೪) ಇತ್ಯಾದಿ ಸ್ಥಳಗಳಲ್ಲಿ ಪ್ರಜ್ಞಾವಂತನೆಂದೂ ಅರ್ಥಮಾಡಿದೆ. ಹೀಗೆ ನಾನಾ ಶಕ್ತಿಗಳಿಂದ ಕೂಡಿದ ಧರ್ಮವು ಅಸುರಶಬ್ದದಿಂದ ವರ್ಣಿತವಾಗಿದೆ. ಸೃಷ್ಟಿಶಕ್ತಿ, ನಾಶಕಶಕ್ತಿ, ವಿಶ್ವನಿಯಮನಶಕ್ತಿ ಇತ್ಯಾದಿ ಸಕಲಶಕ್ತಿಗಳೂ ಕೇಂದ್ರೀಕೃತವಾಗಿರುವುದು ಕಾಲಾತ್ಮಕವಾದ ಪ್ರಜಾಪತಿಯಲ್ಲಿ. ಆದುದರಿಂದ ಪ್ರಕೃತದಲ್ಲಿ ದೇವಮಾನವಾದಿ ಸಕಲ ವಿಶ್ವಕ್ಕೂ ಪಿತೃವಾದ ಪ್ರಜಾಪತಿಯು ಅಸುರಶಬ್ದವಾಚ್ಯನಾಗಿರಬಹುದು. ಪ್ರಜಾಪತಿ, ಕಾಲ, ಸಂವತ್ಸರ ಇವು ಅನೇಕ ಸಂದರ್ಭಗಳಲ್ಲಿ ಪರ್ಯಾಯಪದವಾಗಿರುವುದರಿಂದ ಇವುಗಳಲ್ಲಿ ಯಾವುದನ್ನು ಪ್ರಯೋಗಿಸಿದರೂ ತತ್ತ್ವದಲ್ಲಿ ವ್ಯತ್ಯಾಸವಾಗುವುದಿಲ್ಲ.

CC-0. Jangamwadi Math Collection. Digitized by eGangotri

**ಏಷ ವೈ ಮೃತ್ಯುರ್ಯತ್ಸಂವತ್ಸರಃ । ಏಷ ಹಿ ಮರ್ತ್ಯಾನಾಮಹೋರಾತ್ರಾಭ್ಯಾಮಾಯುಃ ಕ್ಷಿಣೋ-ತ್ಯಥ ಮ್ರಿಯಂತೇ ತಸ್ಮಾದೇಷ ಏವ ಮೃತ್ಯುಃ ಸ ಯೋ ಹೈತಂ ಮೃತ್ಯುಗ್ಂ ಸಂವತ್ಸರಂ ವೇದ .... .... ತಸ್ಮಾದೇಷ ಏವಾಂತಕಃ ಸ ಯೋ ಹೈತಮಂತಕಂ ಮೃತ್ಯುಗ್ಂ ಸಂವತ್ಸರಂ ವೇದ ನ ಹಾಸ್ಯೈಷ.... .... । ತೇ ದೇವಾಃ ಏತಸ್ಮಾದಂತಕಾನ್ಮೃತ್ಯೋಃ ಸಂವತ್ಸರಾತ್ಪ್ರ-ಜಾಪತೇರ್ಬಿಭಿಯಾಂ ಚಕ್ರುಃ ॥**

(ಶ. ಬ್ರಾ ೧೦-೪-೩-೧-೩)

ಯಾವ ಮಹಾತತ್ತ್ವವು ಅಸುರತ್ವವನ್ನು ಹೊಂದಿ ಆ ಶಕ್ತಿಯಿಂದ ವಿಶ್ವವನ್ನು ನಿಯಮನದಲ್ಲಿಡುವುದೆಂದೂ ಮತ್ತು **ಅಸ್ಯತಿ ಕ್ಷಿಪತಿ ಸರ್ವಂ— ಕಾಲಾತ್ಮಾ ಸಂವತ್ಸರಃ** ಎಂದೂ ಸಾಯಣರು ವಿವರಿಸಿರುವರೋ ಆ ಮಹಾ ಸಂವತ್ಸರ ತತ್ತ್ವವೇ ಪ್ರಜಾಪತಿಯು. ಅದು ಯಾವ ರೀತಿ ವಿಶ್ವಸೃಷ್ಟಿಗೆ ಮೂಲವೋ ಅದೇರೀತಿ ವಿಶ್ವನಾಶಕ್ಕೂ ಮೂಲ ವಾಗಿದೆ. ಈ ಸಂವತ್ಸರವೇ ಮೃತ್ಯುವು. ಮಾನವಾದಿಭೂತಗಳಿಗೆ ಅಹೋರಾತ್ರರೂಪದಲ್ಲಿ ಆಯುಸ್ಸನ್ನು ಜೀರ್ಣಿಸುವಂತೆ (ಕಳೆದುಹೋಗುವಂತೆ) ಮಾಡುತ್ತದೆ. ಎಲ್ಲರಿಗೂ ಮರಣವನ್ನುಂಟುಮಾಡುತ್ತದೆ. ಆದುದರಿಂದ ಕಾಲಾತ್ಮಕವಾದ ಈ ಸಂವತ್ಸರವೇ ಸಕಲಕ್ಕೂ ಅಂತಕವು. ದೇವತೆಗಳೂ ಸಹ ಸಂವತ್ಸರರೂಪಿಯಾದ ಈ ಪ್ರಜಾ ಪತಿಯ ಅಂತಕ ಸ್ವರೂಪವನ್ನರಿತು ಬೆದರಿದರು ಎಂದು ವರ್ಣಿತವಾಗಿದೆ.

ಆದುದರಿಂದ, **ಪ್ರಜಾಪತಿರ್ವಾ ಇದಮಗ್ರ ಆಸೀತ್ । ಸ ಇಮಾಂಸ್ತ್ರೀನ್ ಲೋಕಾನಭಿತತಾಪ । ತೇಭ್ಯಸ್ತಪ್ತೇಭ್ಯಸ್ತ್ರೀಣಿ ಜ್ಯೋತೀಗ್ಂಷ್ಯಜಾಯಂತಾಗ್ನಿರ್ಯೋಽಯಂ ಪವತೇ ಸೂರ್ಯಃ ॥** ವಿಶ್ವಸೃಷ್ಟಿಗಿಂತಲೂ ಪೂರ್ವಭೂತನಾದ ಪ್ರಜಾಪತಿಯಿಂದ ಪೃಥಿವ್ಯಾದಿ ಮೂರು ಲೋಕಗಳೂ ಸೃಷ್ಟವಾಗಿ ಅವುಗಳಿಂದ ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಮೂರು ಜ್ಯೋತಿರೂಪಗಳೂ ಸೃಷ್ಟವಾದವು ಎಂದು ಯಾವ ಪ್ರಜಾಪತಿಯು ವರ್ಣಿತ ನಾಗಿದ್ದಾನೋ (ಶ. ಬ್ರಾ. ೧೧-೫ ೮-೨) ಯಾವನು ಸೃಷ್ಟಿಕಾರಕವಾದ ಸಂವತ್ಸರವೆಂದೂ, ನಾಶಕಾರಕವಾದುದೂ ಸಂವತ್ಸರರೂಪವಾದುದೂ ಆದ ಕಾಲವೆಂದೂ, ಅಂತಕನೆಂದೂ ವರ್ಣಿತನಾಗಿದ್ದಾನೋ ಆ ಪ್ರಜಾಪತಿಯ ಮೂರು ಜ್ಯೋತೀರೂಪವಾದ ಅಗ್ನಿವಾಯ್ವಾದಿತ್ಯಾದಿಪುತ್ರತ್ರಯವೇ ಪ್ರಕೃತವಾದ ಋಕ್ಕಿನಲ್ಲಿ **ತ್ರಯಃ ವೀರಾಃ** ಎಂದು ವರ್ಣಿತರಾಗಿದ್ದಾರೆ.

**ಋತಾವಾನಃ**— ಲೋಕತ್ರಯದ ಸತ್ಯವನ್ನು ಪಾಲಿಸತಕ್ಕವರು. ಅಗ್ನಿಯು ಪೃಥ್ವಿಯ ಯಜ್ಞಯಾಗಾದಿ ನಿಯಮಗಳನ್ನು ಪಾಲಿಸಿ ಸತ್ಯವನ್ನು ಸ್ಥಿತಿಯಲ್ಲಿಡತಕ್ಕವನು. ಇದರಂತೆಯೇ ವಾಯುವು ವಿಶ್ವಪ್ರಾಣರೂಪದಲ್ಲಿ ಅಂತರಿಕ್ಷದ ವೃಷ್ಟಿಪ್ರದಾನಾದಿ ಸತ್ಯವನ್ನು ಪಾಲಿಸುವನು. ಆದಿತ್ಯನು ಈ ಎರಡು ಲೋಕಗಳಿಗೂ ಪ್ರಭುವಾಗಿದ್ದು ಸಕಲಲೋಕಗಳ ಸತ್ಯವನ್ನು ಪಾಲಿಸತಕ್ಕನನು. ಆದುದರಿಂದ ಒಟ್ಟಿಗೆ **ಋತಾವಾನಃ** ಎಂಬ ವಿಶೇಷಣವಿದೆ.

**ದೂಳಭಾಸಃ— ದುಃದಭಾಸಃ** ಯಾರಿಂದಲೂ ತಡೆಯಲು ಶಕ್ತಿಯಿಲ್ಲದ ಪ್ರಭೆಯೆಂದರ್ಥ. ಅನ್ಯಾದೃಶ ವಾದುದೂ, ಅಲೌಕಿಕವಾದುದೂ, ಅಪ್ರತಿಹತವೂ, ವಿಶ್ವವ್ಯಾಪಿಯೂ ಆದ ಆದಿತ್ಯಪ್ರಭೆಗಳ ಸ್ವರೂಪವು ಈ ವಿಶೇಷಣದಿಂದ ವರ್ಣಿತವಾಗಿದೆ.



CC-0. Jangamwadi Math Collection. Digitized by eGangotri

## ಐವತ್ತೇಳನೆಯ ಸೂಕ್ತವು.



ಸಾಯಣಭಾಷ್ಯಂ

ಪ್ರ ಮೇ ವಿವಿಕ್ವಾನಿತಿ ಷಡೃಚಂ ಚತುರ್ಥಂ ಸೂಕ್ತಂ । ವಿಶ್ವಾಮಿತ್ರ ಋಷಿಃ । ತ್ರಿಷ್ಟುಪ್ ಛಂದಃ । ವಿಶ್ವೇ ದೇವಾ ದೇವತಾ । ಅತ್ರಾನುಕ್ರಮಣಿಕಾ । ಪ್ರ ಮೇ ಷಳಿತಿ । ಸೂಕ್ತವಿನಿಯೋಗೋ ಲೈಂಗಿಕಃ ॥

ಅನುವಾದವು—ಪ್ರ ಮೇ ವಿವಿಕ್ವಾನ್ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ವಿಶ್ವೇದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರ ಮೇ ಷಟ್ ಎಂದು ಹೇಳಿರುವುದು. ಸೂಕ್ತದ ವಿನಿಯೋಗವು ಲೈಂಗಿಕವು.

———————

॥ ಓಂ ॥

### ಸೂಕ್ತ—೫೭

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೫೭ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥

ಋಷಿಃ—ವಿಶ್ವಾಮಿತ್ರಃ ॥

ದೇವತಾ—ವಿಶ್ವೇ ದೇವಾಃ ॥

ಛಂದಃ—ತ್ರಿಷ್ಟುಪ್ ॥

———

ಸಂಹಿತಾಪಾಠಃ

ಪ್ರ ಮೇ ವಿವಿಕ್ವಾಁ ಅವಿದನ್ಮನೀಷಾಂ ಧೇನುಂ ಚರಂತೀಂ ಪ್ರಯುತಾಮ-ಗೋಪಾಂ ।

ಸದ್ಯಶ್ಚಿದ್ಯಾ ದುದುಹೇ ಭೂರಿ ಧಾಸೇರಿಂದ್ರಸ್ತದಗ್ನಿಃ ಪನಿತಾರೋ ಅಸ್ಯಾಃ ॥೧॥

CC-0. Jangamwadi Math Collection. Digitized by eGangotri

ಪದಪಾಠಃ

ಪ್ರ । ಮೇ । ವಿವಿಕ್ವಾನ್ । ಅವಿದತ್ । ಮನೀಷಾಂ । ಧೇನುಂ । ಚರಂತೀಂ । ಪ್ರಯುತಾಂ ।
ಅಗೋಪಾಂ ।

ಸದ್ಯಃ । ಚಿತ್ । ಆ । ದುದುಹೇ । ಭೂರಿ । ಧಾಸೇಃ । ಇಂದ್ರಃ । ತತ್ । ಅಗ್ನಿಃ । ಪನಿತಾರಃ । ಅಸ್ಯಾಃ ॥

ಸಾಯಣಭಾಷ್ಯಂ

ವಿವಿಕ್ವಾನ್ವಿವೇಕವಾನಿಂದ್ರೋಽಗ್ನಿರ್ವಾ ಮೇ ಮಮ ಮನೀಷಾಂ ದೇವತಾವಿಷಯಾಂ ಸ್ತುತಿಂ ಪ್ರಾವಿದತ್ । ಪ್ರಕರ್ಷೇಣ ಜಾನಾತು । ತತ್ರ ದೃಷ್ಟಾಂತಃ । ಚರಂತೀಂ ಯವಸ ಇತಸ್ತತೋ ಗಚ್ಛಂತೀಂ ಪ್ರಯುತಾಂ ಪೃಥಗ್ಭೂತಾಮೇಕಾಕಿನೀಮಗೋಪಾಂ ಗೋಪ್ತ್ರಾರಹಿತಾಂ ಯಥಾಕಾಮಂ ಚರಂತೀಂ ಧೇನುಂ ನವಸೂತಿಕಾಂ ಗಾಮಿವ ದೇವತಾನಾಂ ಪ್ರೀಣಯಿತ್ರೀಂ ಸ್ತುತಿಮವಿದದಿತ್ಯನ್ವಯಃ । ಯಾ ಸ್ತುತಿರೂಪಾ ಧೇನುಃ ಸದ್ಯಶ್ಚಿತ್ತದಾನೀಮೇವ ಧಾಸೇಃ । ಧಾರಯತಿ ಪ್ರಾಣಾನ್ ಧೀಯತೇ ದೀಯತೇಽರ್ಥಿಭ್ಯ ಇತಿ ವಾ ಧಾಸಿರನ್ನಂ । ಕರ್ಮಣಿ ಷಷ್ಠೀ । ಭೂರಿ ಬಹ್ವನ್ನಮಪೇಕ್ಷಿತಂ ಫಲಂ ದುದುಹೇ ದುಗ್ಧೇ ಇಂದ್ರೋಽಗ್ನಿರನ್ಯೇ ಚ ದೇವಾ ಅಸ್ಯಾಃ ಸ್ತುತಿರೂಪಾಯಾ ಧೇನೋಸ್ತತ್ತಸ್ಯಾನ್ನಭೂತಸ್ಯ ಪಯಸಃ ಪನಿತಾರಃ ಸ್ತೋತಾರೋ ಭವಂತಿ । ಯದ್ವಾ । ಇಂದ್ರಾಗ್ನೀ ಸ್ತೋತಾರೋ ವಯಂ ಚಾಸ್ಯಾ ಧೇನೋಸ್ತತ್ಪಯಃ ಪ್ರಾಪ್ನುಮಃ ॥ ವಿವಿಕ್ವಾನ್ । ವಿಚಿರ್ ಪೃಥಗ್ಭಾವ ಇತ್ಯಸ್ಯ ಕ್ವಸೌ ರೂಪಂ । ಅವಿದತ್ । ವಿದ ಜ್ಞಾನ ಇತ್ಯಸ್ಯ ಲಙಿ ಬಹುಲಂ ಛಂದಸೀತಿ ಶಃ । ದುದುಹೇ । ದುಹ ಪ್ರಪೂರಣ ಇತ್ಯಸ್ಯ ಲಿಟಿ ರೂಪಂ । ಯದ್ವೃತ್ತಯೋಗಾದನಿಘಾತಃ । ಪ್ರತ್ಯಯಸ್ವರಃ । ಪನಿತಾರಃ । ಪನ ಸ್ತುತಾವಿತ್ಯಸ್ಯ ತೃಚಿ ರೂಪಂ ॥

ಪ್ರತಿಪದಾರ್ಥ

ಯಾ—ಯಾವ ಸ್ತುತಿರೂಪವಾದ ಧೇನುವು । ಸದ್ಯಶ್ಚಿತ್—ಒಡನೆಯೇ । ಧಾಸೇಃ—ಅನ್ನವನ್ನು । ಭೂರಿ—ಅತ್ಯಧಿಕವಾಗಿ । ದುದುಹೇ—ಕರೆಯುತ್ತದೆಯೋ ಅಂತಹ । ಮೇ—ನನ್ನ । ಮನೀಷಾಂ—ಸ್ತುತಿರೂಪವಾದ ಧೇನುವನ್ನು । ವಿವಿಕ್ವಾನ್—ವಿವೇಕಿಯಾದ ಇಂದ್ರನು । ಚರಂತೀಂ—ತೃಣವನ್ನು ತಿನ್ನುತ್ತಾ ಓಡುವುದೂ । ಪ್ರಯುತಾಂ—ಏಕಾಕಿಯಾದುದೂ । ಅಗೋಪಾಂ—ಗೋಪಾಲಕನಿಲ್ಲದೇ ಸ್ವೇಚ್ಛೆಯಿಂದ ಸಂಚರಿಸುವುದೂ ಆದ । ಧೇನುಂ—ಧೇನುವನ್ನು ತಿಳಿಯುವಂತೆ । ಪ್ರ ಅವಿದತ್—ತಿಳಿದುಕೊಳ್ಳಲಿ । ಇಂದ್ರಃ—ಇಂದ್ರನೂ । ಅಗ್ನಿಃ—ಅಗ್ನಿಯೂ (ಮತ್ತು ಇತರ ದೇವತೆಗಳೂ ಸಹ) । ಅಸ್ಯಾಃ—ಸ್ತುತಿರೂಪವಾದ ಈ ಧೇನುವಿನ । ಪನಿತಾರಃ—ಸ್ತುತಿಕರ್ತರಾಗಿರುತ್ತಾರೆ.

ಭಾವಾರ್ಥ

ತೃಣಾರ್ಥವಾಗಿ ಓಡಾಡುವುದೂ, ಗೋಪಾಲಕನಿಲ್ಲದೇ ಏಕಾಕಿಯಾಗಿ ಸ್ವೇಚ್ಛೆಯಾಗಿ ಸಂಚರಿಸುವುದೂ ಆದ ಧೇನುವನ್ನು ತಿಳಿಯುವಂತೆ ಅತ್ಯಧಿಕವಾಗಿ ಅನ್ನವನ್ನು ಕರೆಯುತಕ್ಕ ನನ್ನ ಸ್ತುತಿರೂಪವಾದ ಧೇನುವನ್ನು ವಿವೇಕಿಯಾದ ಇಂದ್ರನು ತಿಳಿಯಲಿ ಇಂದ್ರನೂ, ಅಗ್ನಿಯೂ ಮತ್ತು ಇತರ ದೇವತೆಗಳೂ ಸಹ ಈ ಸ್ತುತಿರೂಪವಾದ ಧೇನುವಿನ ಸ್ತುತಿಕರ್ತರಾಗಿದ್ದಾರೆ.

CC-0. Jangamwadi Math Collection. Digitized by eGangotri

English Translation

May the discriminating Indra apprehend my glorification (of the gods), which is (free) as a milch cow, grazing alone, without a cowherd, one who is readily milked, yielding abundant nourishment, and of whom Agni and Indra (and we), are the commenders.

ವಿಶೇಷವಿಷಯಗಳು

ಈ ಮಂತ್ರದಲ್ಲಿ ಸ್ತುತಿಯನ್ನು ಧೇನುವಿಗೆ ಹೋಲಿಸಿ ಅವೆರಡಕ್ಕೂ ಇರತಕ್ಕ ಸಾಧಾರಣಧರ್ಮವನ್ನು ತಿಳಿಸಿದೆ ಪ್ರಭೂತವಾಗಿ ಕ್ಷೀರವನ್ನು ಕರೆದು ಯಜಮಾನನಿಗೆ ತೃಪ್ತಿದಾಯಕವಾದ ಧೇನುವಿನ ರಕ್ಷಣೆಯು ಎಷ್ಟು ಅವಶ್ಯವೋ ಅದೇ ಸಂರಕ್ಷಣೆಯು ಸ್ತುತಿ ವಿಷಯದಲ್ಲೂ ಆವಶ್ಯಕ ಎಂದು ಸ್ತುತಿಯ ಪ್ರಶಂಸೆಯಿದೆ. ಇಲ್ಲಿ ಸ್ತುತಿಯನ್ನು ಪ್ರಶಂಸಿಸಲು ಉಪಯೋಗಿಸಿರುವ ವಿಶೇಷಣಗಳನ್ನು ಪರಿಶೀಲಿಸಿ ಅನಂತರ ಸ್ತುತಿಯ ಶಕ್ತಿಮತ್ತು ಸಾರ್ಥಕ್ಯಗಳೇನೆಂಬುದನ್ನು ವಿಮರ್ಶಿಸಬೇಕು.

ಪ್ರಕೃತದಲ್ಲಿ ಇಂದ್ರಾದಿಗಳು ಸ್ತುತಿರೂಪವಾದ ಧೇನುವನ್ನರಿಯಲಿ ಎಂದು ಪ್ರಾರ್ಥಿಸಿದೆ. ಸ್ತುತಿಪರ್ಯಾಯವಾಗಿ ಮನೀಷಾ ಎಂಬ ಪದದ ಪ್ರಯೋಗವಿದೆ. ಈ ಮನೀಷೆಯು ಅನ್ನದಾಯಕವಾದುದು ಎಂದು ವರ್ಣಿತವಾಗಿದೆ. ಧಾಸಿ ಶಬ್ದಕ್ಕೆ ಅನ್ನವೆಂದರ್ಥ. ಈ ಪದಪ್ರಯೋಗದಲ್ಲಿ ಸ್ವಲ್ಪ ವೈಶಿಷ್ಟ್ಯವಿದೆ.

**ಧಾಸೇಃ**—ಈ ಪದವು ಧಾಸಿಃ ಇರಾ ಇತ್ಯಾದ್ಯನ್ನನಾಮಗಳಲ್ಲಿ ಪಠಿತವಾಗಿದೆ. (ನಿ ೨-೭) ಪಾನಾರ್ಥಕವಾದ ಧೇಟ್ ಧಾತುವಿನಿಂದ ನಿಷ್ಪನ್ನವಾಗಿ ಹವಿಸ್ಸಿನರೂಪದ ಅನ್ನವೆಂಬರ್ಥವನ್ನು ಕೊಡುತ್ತದೆ. ಅಥವಾ ಪ್ರಾಣಧಾರಕವೆಂದಾದರೂ ಅರ್ಥವಾಗಬಹುದು. ಸ್ಥಿರವಾಗಿ ನಿಲ್ಲಿಸತಕ್ಕದ್ದು ಎಂದು ತಾತ್ಪರ್ಯ. ವಿಶದವಾಗಿ ಇದರ ತಾತ್ಪರ್ಯವನ್ನರಿಯಬೇಕಾದರೆ ಕೆಲವು ಉದಾಹರಣೆಗಳನ್ನು ಪರಿಶೀಲಿಸಬೇಕು

**ಕವಿಂ ಕೇತುಂ ಧಾಸಿಂ ಭಾನುಮದ್ರೇರ್ಹಿನ್ವಂತಿ ಶಂ ರಾಜ್ಯಂ ರೋದಸ್ಯೋಃ ।**

(ಋ. ಸಂ. ೭-೬-೨)

ಎಂಬಲ್ಲಿ ವೈಶ್ವಾನರಾಗ್ನಿಗೆ ಈ ಪದವು ವಿಶೇಷಣವಾಗಿದೆ. ಸ್ತುತಿಕರ್ತನನ್ನು ಎತ್ತಿಹಿಡಿದು ರಕ್ಷಿಸುವವನು ಎಂಬರ್ಥವಲ್ಲಿ ಧಾಸಿಂ ಎಂಬ ವಿಶೇಷಣವಿದೆ. ಧಾಸಿಂ-ಧರ್ತಾರಂ ಎಂದು ಸಾಯಣರು ತಾತ್ಪರ್ಯವನ್ನು ಹೇಳಿದ್ದಾರೆ.

**ಪ್ರಾಕ್ತುಭ್ಯ ಇಂದ್ರಃ ಪ್ರ ವೃಧೋ ಅಹಭ್ಯಃ ಪ್ರಾಂತರಿಕ್ಷಾತ್ಪ್ರ ಸಮುದ್ರಸ್ಯ ಧಾಸೇಃ ।**
**ಪ್ರ ವಾತಸ್ಯ ಪ್ರಥಸಃ ಪ್ರ ಜ್ಮೋ ಅಂತಾತ್ಪ್ರ ಸಿಂಧುಭ್ಯೋ ರಿರಿಚೇ ಪ್ರ ಕ್ಷಿತಿಭ್ಯಃ ॥**

(ಋ. ಸಂ ೧೦-೮೯-೧೧)

ಎಂಬಲ್ಲಿ ಇಂದ್ರನ ಪ್ರವೃದ್ಧಿಯನ್ನು ವರ್ಣಿಸಲು ಈ ವಿಶೇಷಣವಿದೆ. ದ್ಯಾವಾಪೃಥಿವಿಗಳಿಗಿಂತಲೂ ಇಂದ್ರನು ಪ್ರವೃದ್ಧನು ಎಂದು ವರ್ಣಿತವಾಗಿದೆ. ಮತ್ತು ಸಮುದ್ರಕ್ಕೆ ಧಾರಕವಾದ ಸ್ಥಾನಕ್ಕಿಂತಲೂ ಪ್ರವೃದ್ಧನು ಎಂದು ಹೇಳಿರುವುದರಿಂದ ಇಂದ್ರನ ಮಹತ್ತ್ವವು ತಿಳಿಯುತ್ತದೆ. ಧಾಸಿಶಬ್ದಕ್ಕೆ ಧಾರಕವೆಂದರ್ಥ. ಸಮುದ್ರಕ್ಕೆ ಧಾರಕವಾದ ಸ್ಥಾನವು ಅತ್ಯಂತ ಸ್ಥಿರವಾದುದು. ಅದಕ್ಕಿಂತಲೂ ಇಂದ್ರನು ಪ್ರವೃದ್ಧನು ಎಂದು ತಾತ್ಪರ್ಯ ಈರೀತಿ ಧಾರಕವೆಂಬರ್ಥದಲ್ಲಿ ಈ ಪದದ ಪ್ರಯೋಗವಿರುತ್ತದೆ.

CC-0. Jangamwadi Math Collection. Digitized by eGangotri

**ಮಹೀಂ ಮಿತ್ರಸ್ಯ ವರುಣಸ್ಯ ಧಾಸಿಂ ಪೃಥುಜ್ರಯಸೇ ರೀರಧಾ ಸುವೃಕ್ತಿಂ ।**

(ಋ. ಸಂ. ೧೦-೩೦-೧)

ಇತ್ಯಾದಿಸ್ಥಾನಗಳಲ್ಲಿ **ಧಾಸಿ** ಶಬ್ದಕ್ಕೆ ಅನ್ನವೆಂದರ್ಥವಾದರೂ ಸಹ ಅನ್ನವು ಪ್ರಾಣಧಾರಕ ಅಥವಾ ಶಕ್ತಿಧಾರಕ ವಾದುದು. ಆದುದರಿಂದ ಅನ್ನಕ್ಕೆ **ಧಾಸಿ**ಯೆಂಬ ಪರ್ಯಾಯಪದವಿದೆ. ಹೀಗೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಇಂದ್ರಾದಿಗಳನ್ನುದ್ದೇಶಿಸಿದ ಸ್ತುತಿಯು ಯಜಮಾನನಿಗೆ ಪ್ರಾಣಧಾರಕವಾಗಿರುತ್ತದೆ ಅಥವಾ ಅನ್ನದಾಯಕ ವಾಗಿರುತ್ತದೆ ಎಂದು ತಾತ್ಪರ್ಯ

**ಮನಿಷಾಂ**—ಈ ಪದವು ಸಾಧಾರಣವಾಗಿ ಸ್ತುತಿಪರ್ಯಾಯವಾಗಿ ಪ್ರಯೋಗಿಸಲ್ಪಟ್ಟಿದೆ. ನಿರುಕ್ತದಲ್ಲಿ ಈ ಪದವನ್ನು ಮೇಧಾವಿ ನಾಮಗಳಲ್ಲಿ ಪಠಿಸಿದೆ. **(ಮನೀಷೀ) ಮನೀಷಾ** ಎಂಬುದಕ್ಕೆ **ಮನಸ ಈಷಾ** ಎಂಬ ವಿವರಣೆಯು ಸಾಧುವಾಗಿರುವುದೆಂದು ಸಾಯಣಭಾಷ್ಯದ ಕೆಲವೆಡೆಗಳಲ್ಲಿ ತಿಳಿಸಿದೆ ಪ್ರತಿಭೆಯ ವೈಶಿಷ್ಟ್ಯವೆಂದಾಗಲಿ ಕಲ್ಪನಾ ಸಾಮರ್ಥ್ಯವೆಂದಾಗಲಿ ಅರ್ಥವಾಗಬಹುದು. ಈ ಸಾಮರ್ಥ್ಯವು ಭಕ್ತಿಯುತವಾದುದೂ, ಭಾವನಾಪೋಷಿತ ವಾದುದೂ ಆಗಿ ಕಾವ್ಯರೂಪವಾದ ಸ್ತುತಿಯಲ್ಲಿ ಪಕ್ವವಾಗಿ ಪರಿಣಮಿಸುತ್ತದೆ. ಆದುದರಿಂದಲೇ ಈ ಪದಕ್ಕೆ ಸ್ತುತಿ ಪರ್ಯಾಯವಾದ ಪ್ರಯೋಗವಿದೆ. ಇದರ ಪೂರ್ಣವಾದ ತಾತ್ಪರ್ಯವು ಕೆಳಗೆ ಉದಾಹರಿಸಿರುವ ಮಂತ್ರದಲ್ಲಿ ಪ್ರಯೋಗಿ ಸಿರುವ ಪದದಲ್ಲಿ ಅಡಕವಾಗಿದೆ.

**ಮನೀಷಿಣಃ ಪ್ರ ಭರಧ್ವಂ ಮನೀಷಾಂ ಯಥಾಯಥಾ ಮತಯಃ ಸಂತಿ ನೃಣಾಂ ।**
**ಇಂದ್ರಂ ಸತ್ಯೈರೇರಯಾಮಾ ಕೃತೇಭಿಃ ಸ ಹಿ ವೀರೋ ಗಿರ್ವಣಸ್ಯುರ್ವಿದಾನಃ ॥**

(ಋ. ಸಂ. ೧೦-೧೧೧-೧)

ಎಂಬಲ್ಲಿ **ಮನೀಷಿಗಳು** ಇಂದ್ರನನ್ನುದ್ದೇಶಿಸಿ **ಮನೀಷೆಯನ್ನು** ನಿರ್ಮಿಸಲಿ ಎಂದಿದೆ ಅದರಲ್ಲೂ ಒಂದು ಸಮನ್ವಯ ವಿದೆ. ಮಾನವರಾದ ಯಜಮಾನರಿಗೆ ಯಾವಯಾವ ರೀತಿ ಬುದ್ಧಿಶಕ್ತಿಯಿದೆಯೋ, ಯಾವಯಾವ ಬಗೆ ಕಲ್ಪನಾ ಸಾಮರ್ಥ್ಯವಿದೆಯೋ ಅದಕ್ಕನುಗುಣವಾಗಿ ಸ್ತುತಿಯನ್ನು ನಿರ್ಮಿಸಲಿ ಎಂದಿದೆ. ಮೊದಲನೆಯ **ಮನೀಷಿಣಃ** ಎಂಬ ಪದಕ್ಕೆ ಇಂತಹ ಸಾಮರ್ಥ್ಯವುಳ್ಳ ಕವಿಗಳೆಂದೂ, ಎರಡನೆಯ **ಮನೀಷಾಂ** ಎಂಬ ಶಬ್ದಕ್ಕೆ ಇಂತಹ ಭಾವಪ್ರೇರಿತ ರಾದ ಕವಿಗಳ ಕೃತಿಯೆಂದೂ ಅರ್ಥ ದೇವತೆಗಳನ್ನುದ್ದೇಶಿಸಿ ನಿರ್ಮಿಸಿದ ಕಾರ್ಯವು ಸ್ತುತಿಯೆಂದೇ ಪ್ರಸಿದ್ಧವಾಗಿದೆ. ಹೇಗೆಂದರೆ,

**ಪತಂಗೋ ವಾಚಂ ಮನಸಾ ಬಿಭರ್ತಿ ತಾಂ ಗಂಧರ್ವೋಽವದದ್ಗರ್ಭೇ ಅಂತಃ ।**
**ತಾಂ ದ್ಯೋತಮಾನಾಂ ಸ್ವರ್ಯಂ ಮನೀಷಾಮೃತಸ್ಯ ಪದೇ ಕವಯೋ ನಿಪಾಂತಿ ॥**

(ಋ. ಸಂ. ೧೦-೧೭೭-೨)

ಎಂಬಲ್ಲಿ **ಮನಿಷಾಂ** ಎಂಬ ಪದಕ್ಕೆ ಅತಿಗಹನವಾದ ಅರ್ಥವಿದೆ ಇಲ್ಲಿ ಕೇವಲ ಮಾನಸಿಕಪ್ರತಿಭೆ ಮಾತ್ರವಲ್ಲ. ಆದಿತ್ಯಾಂತರ್ಗತವಾದುದೂ, ತ್ರಯೀರೂಪವಾದುದೂ, ಶಬ್ದಬ್ರಹ್ಮಾತ್ಮಕವಾದುದೂ ಆದ ವಾಕ್ತತ್ತ್ವವು ಇಲ್ಲಿ ನಿರ್ದಿಷ್ಟ ವಾಗಿದೆ. **ಮನೀಷಾಂ** ಎಂಬುದಕ್ಕೆ **ಮನಸಃ ಈಶಿತ್ರೀಂ** ಎಂದು ವಿವರಿಸಿದೆ. ಎಂದರೆ, ಸ್ವತಂತ್ರವಾದ ಮನಃ- ಪ್ರವೃತ್ತಿಯುಳ್ಳದ್ದೂ, ಪರಾಧೀನರಹಿತವಾದದ್ದೂ ಇತ್ಯಾದಿಯಾಗಿ ಅರ್ಥವನ್ನು ಹೇಳಬಹುದು "**ಮನೀಷಿಣೋ ಮನಸಾ ಪೃಚ್ಛತ**" (೧೦-೮೫-೪) **ಮನೀಷಿಗಳು** ಅಂತರ್ದೃಷ್ಟಿಯಿಂದ ಪರಿಶೀಲಿಸಲಿ ಇತ್ಯಾದಿಯಾದ ಸಂದರ್ಭ

CC-0. Jangamwadi Math Collection. Digitized by eGangotri

ಗಳಲ್ಲೂ ಸಹ **ಮನೀಷಿ** ಶಬ್ದಕ್ಕೆ ಕೇವಲ ಬುದ್ಧಿಗ್ರಾಹ್ಯವಾದ ತತ್ತ್ವವೆಂದಾಗದೆ ಅಂತರ್ದೃಷ್ಟಿಯಿಂದ ಪರಮಾರ್ಥ ತತ್ತ್ವವನ್ನು ಸಾಕ್ಷಾತ್ಕರಿಸಬಲ್ಲ ಮನಶ್ಶಕ್ತಿಯೆಂದು ತಾತ್ಪರ್ಯ. ಈ ಸಾಮರ್ಥ್ಯವು ಸಮಾಧಿರೂಪವಾದ ಭಾವನೆಯಿಂದ ಪ್ರೇರಿತವಾಗಿರುತ್ತದೆ. ಸಮಾಧಿರಹಿತವಾದ ಕೇವಲ ಬುದ್ಧಿಶಕ್ತಿಗೆ ಈ ತತ್ತ್ವವನ್ನು ಗ್ರಹಿಸಲು ಸಾಧ್ಯವಾಗಲಾರದು.

**ಕಾಮಸ್ತದಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ ಯದಾಸೀತ್ ।**
**ಸತೋ ಬಂಧುಮಸತಿ ನಿರವಿಂದನ್ ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥**

(ಋ. ಸಂ. ೧೦-೧೨೯-೪)

ಇತ್ಯಾದಿ ಮಂತ್ರಗಳಲ್ಲೂ ಸಹ ಈಶ್ವರನ ಸೃಷ್ಟ್ಯಾದಿ ವಿಶ್ವನಿಯಮಗಳನ್ನು ಗ್ರಹಿಸಬಲ್ಲ ಆತ್ಮಶಕ್ತಿಯು **ಮನೀಷಾ** ಎಂಬ ಪದದಿಂದ ನಿರ್ದಿಷ್ಟವಾಗಿದೆ. **ಹೃದಿ ನಿರುದ್ಧಯಾ ಬುದ್ಧ್ಯಾ ;** ಹೃದಯದಲ್ಲಿ ಸಮಾಧಿರೂಪದಿಂದ ಕೇಂದ್ರೀಕೃತವಾದ ಬುದ್ಧಿಗೆ ಮಾತ್ರ ಈ ವಿಶ್ವತತ್ತ್ವವು ನಿಲುಕಬಲ್ಲುದು ಎಂದು ತಾತ್ಪರ್ಯ. ಇದೇ ರೀತಿಯಲ್ಲಿ ಈ ಪದಕ್ಕೆ ಸ್ತುತಿಯೆಂಬ ಅರ್ಥವನ್ನು ಹೇಳುವ ಸನ್ನಿವೇಶಗಳಲ್ಲೂ ಸಹ ಈಶ್ವರತತ್ತ್ವವನ್ನು ಅರಿಯಲು ಸಾಮರ್ಥ್ಯವುಳ್ಳ ಸ್ತುತಿ ಯೆಂದರ್ಥಮಾಡಬೇಕು. ಈ ಸ್ತುತಿಯು ಸಕಲಸಂಪತ್ಪ್ರದವಾಗಿರುವುದರಿಂದ **ಧಾಸೇಃ ದುದುಹೇ-**ಅನ್ನಸಂಪತ್ತನ್ನು ಕರೆಯುವ ಸಾಮರ್ಥ್ಯವುಳ್ಳ ಸ್ತುತಿಯೆಂದು ಇದರ ಸ್ವರೂಪವು ವರ್ಣಿತವಾಗಿದೆ. ಇಷ್ಟು ಅತ್ಯುತ್ತಮವಾದುದೂ, ಪರಮಾರ್ಥತತ್ತ್ವವನ್ನರಿಯಲು ಶಕ್ತಿಯುಳ್ಳದ್ದೂ ಆದ ನಮ್ಮ ಸ್ತುತಿಯನ್ನು ಇಂದ್ರಾದಿಗಳು ಅರಿಯಲಿ ಎಂದು ಪ್ರಾರ್ಥಿಸಿದೆ.

**ಕಸ್ತೇ ಮದ ಇಂದ್ರ ರಂತ್ಯೋ ಭೂದ್ದುರೋ ಗಿರೋ ಅಭ್ಯು೧ಗ್ರೋ ವಿ ಧಾವ ।**
**ಕದ್ವಾಹೋ ಅರ್ವಾಗುಪ ಮಾ ಮನೀಷಾ ಆ ತ್ವಾ ಶಕ್ಯಾಮುಪಮಂ ರಾಧೋ ಅನ್ನೈಃ ॥**

(ಋ. ಸಂ. ೧೦-೨೯-೩)

ಎಂಬ ಋಕ್ಕಿನಲ್ಲಿಯೂ ಸಹ ಸಾಯಣರು ಇದೇ ಅಭಿಪ್ರಾಯವು ಸೂಚಿತವಾಗುವುದೆಂದು ತಿಳಿಸಿದ್ದಾರೆ. **ಮನೀಷಾ ಸರ್ವಾರ್ಥದರ್ಶಿನೀ ಪ್ರಜ್ಞಾ, ಸರ್ವಗುಣಗ್ರಾಹಿಣೀ ಸ್ತುತಿರ್ವಾ:** ಸಕಲಾರ್ಥದ ರಹಸ್ಯವನ್ನೂ ತೋರಿಸಿಕೊಡುವ ಅಲೌಕಿಕವಾದ ಪ್ರಜ್ಞೆ ಅಥವಾ ಸಕಲ ಗುಣಗಳನ್ನೂ ಗ್ರಹಿಸುವ ಸ್ತುತಿಯೆಂದು ವಿವರಿಸಿದ್ದಾರೆ.

ಈ ಮನೀಷೆಯನ್ನು ಗೋಪ್ತೃರಹಿತವಾದ ಧೇನುವಿಗೆ ಹೋಲಿಸಿದೆ. **ಅಗೋಪಾಂ** ಎಂಬ ವಿಶೇಷಣದಿಂದ ಎರಡು ವಿಧವಾದ ಅರ್ಥವು ಸಾಧ್ಯವಾಗುತ್ತದೆ. ಮೊದಲನೆಯದಾಗಿ ನಿಯಮರಹಿತವಾದದ್ದು ಎಂದರೆ ಸ್ವತಂತ್ರ ವಾದುದು ಎಂದರ್ಥ. ಇಲ್ಲಿ ಸ್ವಾತಂತ್ರ್ಯವೆಂದರೆ ನಿರಂಕುಶವಾದುದು ಎಂದರ್ಥವಲ್ಲ. **" ನಿಯತಿಕೃತನಿಯಮ-ರಹಿತಾಂ ಹ್ಲಾದೈಕಮಯೀಮನನ್ಯಪರತಂತ್ರಾಂ "** ಎಂದು ಕಾವ್ಯಪ್ರಕಾಶದಲ್ಲಿ ಕವಿಯ ಸ್ವಾತಂತ್ರ್ಯವನ್ನು ವರ್ಣಿಸಿರುವಂತೆ ಈ ಸ್ತುತಿನಿರ್ಮಾಪಕವಾದ ಕವಿಪ್ರತಿಭೆಯು ಬಾಹ್ಯನಿಯಮಗಳಿಗೆ ಬದ್ಧವಾಗದೇ, ಸ್ವತಂತ್ರವಾದ ಭಾವನಾಪೂರಿತವಾದುದೂ, ಸಮಾಧಿರೂಪವುಳ್ಳದ್ದೂ ಆದ ಸ್ತುತಿಯೆಂದು ಒಂದರ್ಥವಾಗಬಹುದು. ಅಥವಾ **ಅಗೋಪಾಂ** ಎಂಬ ವಿಶೇಷಣವಿರುವುದರಿಂದ ರಕ್ಷಣೆಯ ಆವಶ್ಯಕತೆಯನ್ನು ತೋರಿಸಬಹುದು. ಯಾವರೀತಿ ಗೋಪ್ತೃರಹಿತವಾದ ಗೋವು ರಕ್ಷಣೆಯನ್ನಪೇಕ್ಷಿಸುವುದೋ ಅದರಂತೆಯೇ ಪ್ರಕೃತವಾದ ಸ್ತುತಿಗಳೂ ಸಹ ಈಶ್ವರಾನು ಗ್ರಹವನ್ನಪೇಕ್ಷಿಸುವುದೆಂದು ತಾತ್ಪರ್ಯ. ಗೋಪ್ತೃರಹಿತವಾದ ಧೇನುವು ಎಷ್ಟು ಪ್ರಭೂತವಾಗಿ ಕ್ಷೀರವನ್ನು ಕೊಡುವ

CC-0. Jangamwadi Math Collection. Digitized by eGangotri

ಸಾಮರ್ಥ್ಯವಿದ್ದರೂ ಆ ಸಾಮರ್ಥ್ಯವು ವ್ಯರ್ಥವಾಗುವಂತೆ ಈಶ್ವರಾನುಗ್ರಹವನ್ನು ಸಂಪಾದಿಸದ ಪುರುಷನ ಯಾವ ಶಕ್ತಿಯೂ ಅಪ್ರಯೋಜಕವಾದುದು. ಆದುದರಿಂದ ಇಂದ್ರಾಗ್ನಿಗಳು ಈ ಸ್ತುತಿಯ ವೈಶಿಷ್ಟ್ಯವನ್ನರಿತು ಅನುಗ್ರಹಿಸಲಿ ಎಂದು ಇನ್ನೊಂದು ವಿಧವಾದ ತಾತ್ಪರ್ಯವನ್ನೂ ಹೇಳಬಹುದು.

**ಪ್ರಯುತಾಂ**—ಅಗೋಪಾಂ ಎಂಬ ವಿಶೇಷಣಪದಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಲು ಸಾಧ್ಯವಿರುವಂತೆ ಪ್ರಯುತಾಂ ಎಂಬ ವಿಶೇಷಣದಿಂದಲೂ ಇದು ಸಾಧ್ಯ. ಹೇಗೆಂದರೆ, **ಯು** ಧಾತುವು ಮಿಶ್ರ **ಅಮಿಶ್ರ** ಎಂಬ ಎರಡು ಅರ್ಥದಲ್ಲೂ ಪ್ರಯೋಗಿಸಲ್ಪಡುವುದು. ಪ್ರಯುತವೆಂದರೆ ಒಟ್ಟಿಗೆ ಸೇರಿಕೊಂಡಿರುವುದು ಎಂದೂ ಆಗಬಹುದು ಅಥವಾ ಯಾವುದರೊಂದಿಗೂ ಸೇರದೆ ಕೇವಲ ಏಕಾಕಿಯಾಗಿರತಕ್ಕದ್ದು ಎಂದೂ ಅರ್ಥವಾಗಬಹುದು.

**ಗಾವೋ ಯವಂ ಪ್ರಯುತಾ ಅರ್ಯೋ ಅಕ್ಷನ್ ತಾ ಅಪಶ್ಯಂ ಸಹಗೋಪಾಶ್ಚರಂತೀಃ ।**
**ಹವಾ ಇದರ್ಯೋ ಅಭಿತಃ ಸಮಾಯನ್ಕಿಯದಾಸು ಸ್ವಪತಿಶ್ಛಂದಯಾತೇ ॥**

(ಋ. ಸಂ. ೧೦-೨೭-೮)

ಎಂಬಲ್ಲಿ ಗೋವುಗಳು ಒಟ್ಟಿಗೆ ಸೇರಿಕೊಂಡಿರುವ ಸನ್ನಿವೇಶವು ವರ್ಣಿತವಾಗಿದೆ. ಪ್ರಯುತಾಃ ಎಂಬ ಪದಕ್ಕೆ **ಪ್ರಕರ್ಷೇಣ ಮಿಶ್ರಿತಾಃ ಪರಸ್ಪರೇಣ ಸಹ ಭೂತಾಃ** । ಒಂದಕ್ಕೊಂದು ಕಲೆತು ಎಲ್ಲವೂ ಒಟ್ಟಿಗೆ ಗುಂಪುಕೂಡಿಕೊಂಡಿವೆ ಎಂದು ತಾತ್ಪರ್ಯವೆಂದು ತಿಳಿಸಿದೆ. ಆದರೆ ಪ್ರಕೃತವಾದ ಋಕ್ಕಿನಲ್ಲಿ **ಅಗೋಪಾಂ** ಎಂಬ ವಿಶೇಷಣದೊಂದಿಗೆ ಇದೂ ಸೇರಿರುವುದರಿಂದ ಇತರ ಧೇನುವಿನೊಂದಿಗೆ ಮಿಶ್ರವಾಗದೇ ಏಕಾಕಿಯಾಗಿಯೂ, ರಕ್ಷಕರಹಿತವಾಗಿಯೂ ಮತ್ತು ದೇವರಕ್ಷಣೆಯನ್ನು ಅಪೇಕ್ಷಿಸುವುದಾಗಿಯೂ ಇರುತ್ತದೆ ಎಂದು ತಾತ್ಪರ್ಯ.

**ಪನಿತಾರಃ**—ಸ್ತುತ್ಯರ್ಥಕವಾದ **ಪನ್** ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. **ಪನಸ್ಯತಿ ಪನಾಯತೇ** ಎಂಬ ಪದಗಳನ್ನು ನಿರುಕ್ತಕಾರರು ಅರ್ಚತಿಕರ್ಮನಾಮಗಳಲ್ಲಿ ಸೇರಿಸಿ ಪಠಿಸಿದ್ದಾರೆ. ಆರಾಧಿಸು, ಶ್ಲಾಘಿಸು, ಭಕ್ತಿಯನ್ನು ಸೂಚಿಸು ಇತ್ಯಾದ್ಯರ್ಥಗಳಲ್ಲಿ ಈ ಪದವನ್ನು ಪ್ರಯೋಗಿಸಿದೆ. ಉದಾಹರಣೆಗೆ—

**ರಥೇ ತಿಷ್ಠನ್ನಯತಿ ವಾಜಿನಃ ಪುರೋ ಯತ್ರಯತ್ರ ಕಾಮಯತೇ ಸುಷಾರಥಿಃ ।**
**ಅಭೀಶೂನಾಂ ಮಹಿಮಾನಂ ಪನಾಯತ ಮನಃ ಪಶ್ಚಾದನು ಯಚ್ಛಂತಿ ರಶ್ಮಯಃ ॥**

(ಋ. ಸಂ. ೬-೭೫-೬)

ಎಂಬ ಋಕ್ಕನ್ನುದಾಹರಿಸಿ ಸನ್ನಿವೇಶವನ್ನು ವಿವರಿಸಿದ್ದಾರೆ ರಥಕ್ಕೆ ಕಟ್ಟಿರುವ (ಹಗ್ಗಗಳು) ಅಶ್ವಗಳನ್ನು ಹಿಡಿದಿರುವ ರಶ್ಮಿಗಳು, ಅತ್ಯುತ್ತಮವಾದುವೆಂದು ಅವನ್ನು ಸ್ತುತಿಸಿ ಅನಂತರ "ಎಲೈ ಜನರೇ, ಇಂತಹ ರಶ್ಮಿಗಳನ್ನು ಪೂಜಿಸಿ" ಎಂದು ತಿಳಿಸಿದೆ. **"ಹೇ ಜನಾಃ ಅಭೀಶೂನಾಂ ಮಹಿಮಾನಂ ಪೂಜಯತ"** ಎಲೈ ನರರೇ (ರಶ್ಮಿ ಅಥವಾ ಹಗ್ಗ) ಈ ಅಭೀಶುಗಳನ್ನು ಆರಾಧಿಸು ಎಂದು ತಾತ್ಪರ್ಯವೆಂದು ನಿರುಕ್ತಕಾರರು ತಿಳಿಸಿದ್ದಾರೆ. (ನಿ. ೯-೧೬)

**ಯದೇವ ಪನಾಯ್ಯಂ ಕರ್ಮ ತದೇತದಭಿವದತಿ ।**

(ಐ. ಬ್ರಾ. ೬-೧೫)

ಯಾವ ಸೋಮಪಾನಕರ್ಮವು ಪೂಜ್ಯವಾದುದೋ ಅದನ್ನೇ ಮಂತ್ರವು ಪಠಿಸುತ್ತದೆ ಎಂದು ಐತರೇಯಬ್ರಾಹ್ಮಣದ ವಾಕ್ಯಕ್ಕೆ ಅರ್ಥಮಾಡಿದೆ.

CC-0. Jangamwadi Math Collection. Digitized by eGangotri

ಪ್ರ ವೋ ಧಿಯೋ ಮಂದ್ರಯುವೋ ವಿಪನ್ಯುವಃ ಪನಸ್ಯುವಃ ಸಂವಸನೇಷ್ವಕ್ರಮುಃ ।
(ಋ. ಸಂ. ೯-೮೬-೧೭)

ಎಂಬಲ್ಲಿ ಈ ಪದದ ಪ್ರಯೋಗವು ಇದರ ನಿಷ್ಕೃಷ್ಟವಾದ ಅರ್ಥವನ್ನು ತೋರಿಸುತ್ತದೆ. ವಿಪನ್ಯುವಃ ಪನಸ್ಯುವಃ ಎಂಬ ಎರಡು ಪದಗಳೂ ಒಟ್ಟಿಗೆ ಪ್ರಯುಕ್ತವಾಗಿವೆ. ಎರಡು ಪದಗಳೂ ಸಹ ಪನ್ ಧಾತುವಿನಿಂದಲೇ ನಿಷ್ಪನ್ನ ವಾಗಿವೆ. ಪನಸ್ಯುವಃ ಎಂಬುದಕ್ಕೆ ಸ್ತುತಿಯನ್ನಿಚ್ಛಿಸುವವರು ಎಂದೂ, ವಿಪನ್ಯುವಃ ಎಂಬುದಕ್ಕೆ ಸ್ತುತಿಕರ್ತರೆಂದೂ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಪನಿತಾರಃ ಎಂಬ ಪದಕ್ಕೆ ಸ್ತುತಿಕರ್ತರೆಂದು ಅರ್ಥವಿದ್ದರೂ ಸಹ ಇಲ್ಲಿರುವ ವೈಶಿಷ್ಟ್ಯವನ್ನು ಗಮನಿಸಬೇಕು. ಇಲ್ಲಿ ಮಾನವನು ದೇವತೆಗಳನ್ನು ಸ್ತುತಿಸಿ ಪೂಜಿಸಿದ ಸನ್ನಿವೇಶವಲ್ಲ. ಇಂದ್ರಾದಿಗಳು ಮಾನವನ ಸ್ತುತಿಯನ್ನು ಶ್ಲಾಘಿಸುವ ಸನ್ನಿವೇಶ. ಆದುದರಿಂದ ಇಲ್ಲಿ ಪನಿತಾರಃ ಎಂದರೆ ಶ್ಲಾಘಿಸು ವವರು, ಪ್ರಶಂಸಿಸುವವರು ಎಂದು ತಾತ್ಪರ್ಯ.

———

ಸಂಹಿತಾಪಾಠಃ

ಇಂದ್ರಃ ಸು ಪೂಷಾ ವೃಷಣಾ ಸುಹಸ್ತಾ ದಿವೋ ನ ಪ್ರೀತಾಃ ಶಶಯಂ
ದುದುಹ್ರೇ ।
ವಿಶ್ವೇ ಯದಸ್ಯಾಂ ರಣಯಂತ ದೇವಾಃ ಪ್ರ ವೋಽತ್ರ ವಸವಃ ಸುಮ್ನ-
ಮಶ್ಯಾಂ ॥ ೨ ॥

ಪದಪಾಠಃ

ಇಂದ್ರಃ । ಸು । ಪೂಷಾ । ವೃಷಣಾ । ಸುಽಹಸ್ತಾ । ದಿವಃ । ನ । ಪ್ರೀತಾಃ । ಶಶಯಂ । ದುದುಹ್ರೇ ।
ವಿಶ್ವೇ । ಯತ್ । ಅಸ್ಯಾಂ । ರಣಯಂತ । ದೇವಾಃ । ಪ್ರ । ವಃ । ಅತ್ರ । ವಸವಃ । ಸುಮ್ನಂ ಅಶ್ಯಾಂ॥೨॥

ಸಾಯಣಭಾಷ್ಯಂ

ವಸವಃ ಸರ್ವಸ್ಯ ವಾಸಯಿತಾರೋ ಹೇ ದೇವಾ ಇಂದ್ರಃ ಪೂಷಾ ಚ ವೃಷಣಾಭಿಮತಫಲಸ್ಯ ಸೇಕ್ತಾರೌ ಸುಹಸ್ತಾ ಕಲ್ಯಾಣಪಾಣೀ ನಾಸತ್ಯಾ ಮಿತ್ರಾವರುಣೌ ವಾ । ರಾಜಾನಾ ಮಿತ್ರಾವರುಣಾ ಸುಪಾಣೀ ಇತ್ಯಾದಿಷು ದೃಷ್ಟತ್ವಾತ್ । ಏತೇ ಸರ್ವೇ ದೇವಾಃ । ನೇತಿ ಸಂಪ್ರತ್ಯರ್ಥೇ । ಇದಾನೀಂ ಪ್ರೀತಾಃ ಸಂತಃ ಶಶಯಂ ನಭಸಿ ಶಯಾನಂ ಮೇಘಂ ದಿವೋ ನಭಸಃ ಸಕಾಶಾತ್ಸು ದುದುಹ್ರೇ । ವೃಷ್ಟಿ-ದ್ವಾರಾಪೇಕ್ಷಿತಂ ಫಲಂ ಸುಷ್ಠು ದುಹಂತಿ । ಯದ್ಯಸ್ಮಾದ್ವಿಶ್ವೇ ಸರ್ವೇ ದೇವಾ ಅಸ್ಯಾಂ ವೇದ್ಯಾಂ ರಣಯಂತ ರಮಯಂತೇ ವೋ ಯುಷ್ಮಾಕಂ ಸಂಬಂಧಿನ್ಯತ್ರಲೋಕೇ ಸುಮ್ನಂ ಸುಖಕರಮಪೇಕ್ಷಿತಂ ಫಲಂ ಪ್ರಾಶ್ಯಾಂ । ಪ್ರಾಪ್ನುಯಾಂ ॥ ಸುಹಸ್ತಾ । ಹಸೇರಸಿಹಸೀತ್ಯಾದಿನಾ ತನ್ಪ್ರತ್ಯಯಃ । ನಿತ್ತ್ವಾದಾ-



CC-0. Jangamwadi Math Collection. Digitized by eGangotri

ದ್ಯುದಾತ್ತಃ । ಬಹುವ್ರೀಹಾವಾದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ದುದುಹ್ರೇ । ದುಹ ಪ್ರಪೂರಣ ಇತ್ಯಸ್ಯ ಲಿಟೀರಯೋ ರೇ । ರಣಯಂತ । ರಮು ಕ್ರೀಡಾಯಾಂ । ಣ್ಯಂತಸ್ಯ ಲಙಿ ರೂಪಂ । ವರ್ಣವ್ಯಾಪತ್ತಿಃ । ಅಶ್ಯಾಂ । ಅಶೂ ವ್ಯಾಪ್ತಾವಿತ್ಯಸ್ಯ ಲಿಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವ್ಯತ್ಯಯೇನ ಪರಸ್ಮೈಪದಂ ॥

ಪ್ರತಿಪದಾರ್ಥ

**ವಸವಃ**—ವಸತಿದಾಯಕರಾದ ಎಲೈ ವಸುಗಳೇ । **ಇಂದ್ರಃ**—ಇಂದ್ರನೂ । **ಪೂಷಾ**—ಪೂಷದೇವನೂ । **ವೃಷಣಾ**—ಇಷ್ಟಾರ್ಥಪ್ರದರಾದವರೂ । **ಸುಹಸ್ತಾ**—ಶ್ರೇಷ್ಠವಾದ ಪಾಣಿಯುಳ್ಳವರೂ ಆದ ಮಿತ್ರಾವರುಣರೂ (ಅಥವಾ ಅಶ್ವಿನೀದೇವತೆಗಳೂ ಸಹ) । **ನ**—ಈಗಲೇ । **ಪ್ರೀತಾಃ**—ತೃಪ್ತರಾಗಿ । **ಶಶಯಂ**—ಅಂತರಿಕ್ಷಸ್ಥವಾದ ಮೇಘವನ್ನು । **ದಿವಃ**—ಅಂತರಿಕ್ಷದಿಂದ । **ಸು ದುದುಹ್ರೇ**—ವೃಷ್ಟ್ಯರ್ಥವಾಗಿ ಕರೆದಿದ್ದಾರೆ । **ಯತ್**—ಅದೇ ಕಾರಣದಿಂದ । **ವಿಶ್ವೇ ದೇವಾಃ**—ಸಮಸ್ತದೇವತೆಗಳೂ ಸಹ । **ಅಸ್ಯಾಂ**—ಈ ಯಜ್ಞವೇದಿಕೆಯಲ್ಲಿ । **ರಣಯಂತ**—ರಮಿಸುತ್ತಿದ್ದಾರೆ । **ವಃ**—ನಿಮ್ಮ ಸಂಬಂಧಿಯಾದ । **ಅತ್ರ**—ಈ ಪ್ರದೇಶದಲ್ಲಿ । **ಸುಮ್ನಂ**—ಸುಖಕಾರಕವಾದ ಫಲವನ್ನು । **ಪ್ರ ಅಶ್ಯಾಂ**—ನಾನು ಪೂರ್ಣವಾಗಿ ಹೊಂದುವಂತಾಗಲಿ ।

ಭಾವಾರ್ಥ

ವಸತಿದಾಯಕರಾದ ಇಂದ್ರನೂ, ಪೂಷದೇವನೂ, ಇಷ್ಟಾರ್ಥಪ್ರದರಾದವರೂ, ಶ್ರೇಷ್ಠವಾದ ಪಾಣಿಯುಳ್ಳವರೂ ಆದ ಮಿತ್ರಾವರುಣರೂ ಈಗಲೇ ತೃಪ್ತರಾಗಿ ಅಂತರಿಕ್ಷಸ್ಥವಾದ ಮೇಘವನ್ನು ಅಂತರಿಕ್ಷದಿಂದ ವೃಷ್ಟ್ಯರ್ಥವಾಗಿ ಕರೆದಿದ್ದಾರೆ. ಅದೇ ಕಾರಣದಿಂದ ಸಮಸ್ತದೇವತೆಗಳೂ ಸಹ ಈ ಯಜ್ಞವೇದಿಕೆಯಲ್ಲಿ ರಮಿಸುತ್ತಿದ್ದಾರೆ. ನಿಮ್ಮ ಸಂಬಂಧಿಯಾದ ಈ ಯಜ್ಞಪ್ರದೇಶದಲ್ಲಿ ನಾನು ಸುಖಕಾರಕವಾದ ಫಲವನ್ನು ಹೊಂದುವಂತಾಗಲಿ.

English Translation

Indra and Pushan, the showerers (of benefits), and the happy-handed Ashwins, well affected towards us, have milked the (cloud) reposing in heaven ; wherefore, Vasus, universal deities, sporting on this (altar), may I here obtain the happiness derived from you.

ವಿಶೇಷವಿಷಯಗಳು

ಯಜ್ಞಸಾಧಕರೂ ಯಜ್ಞಪೋಷಕವಾದ ವೃಷ್ಟಿಕಾರಕರೂ ಆದ ದೇವತೆಗಳನ್ನುದ್ದೇಶಿಸಿ ಈ ಮಂತ್ರವು ಪಠಿತವಾಗಿದೆ. **ವಸುಗಳು, ಇಂದ್ರ, ಪೂಷನ್** ಇತ್ಯಾದಿ ದೇವತೆಗಳ ಸ್ತುತಿಯು ಪ್ರಾರಂಭದಲ್ಲಿದೆ.

**ವಸವಃ—ಸರ್ವಸ್ಯ ವಾಸಯಿತಾರಃ ಹೇ ದೇವಾಃ** ಎಂದು ವಸುನಾಮಕರಾದ ದೇವತೆಗಳನ್ನು ಸಂಬೋಧಿಸಿದೆ. ಸಾಧಾರಣವಾಗಿ ಈ ಪದವು ಇತರ ದೇವತೆಗಳಿಗೂ ವಿಶೇಷಣವಾಗಿರುವುದುಂಟು. ಮಾನವನ ವಸತಿಗೆ ಯಾರು ಅನುಗ್ರಹವನ್ನು ಮಾಡುತ್ತಾರೋ ಆ ದೇವತೆಗಳೆಲ್ಲಾ ವಸುಶಬ್ದವಾಚ್ಯರಾಗಬಹುದು. ಆದರೆ ಪ್ರಕೃತವಾದ ಋಕ್ಕಿನಲ್ಲಿ ವಸುನಾಮಾತ್ಮಕವಾದ ಪ್ರತ್ಯೇಕವಾದ ದೇವತಾಸಮೂಹವು ನಿರ್ದಿಷ್ಟವಾಗಿದೆಯೆಂದು

CC-0. Jangamwadi Math Collection. Digitized by eGangotri

ಸಾಯಣರ ವಿವರಣೆಯಿಂದ ತಿಳಿಯುತ್ತದೆ. ಈ ವಸುಗಳಾರು ? ಇವರ ಸ್ವರೂಪವೇನು ? ಇವರಿಗೆ ಈ ಹೆಸರು ಬರಲು ಕಾರಣವೇನು ? ಎಂಬ ಈ ಪ್ರಶ್ನೆಗಳಿಗೆ ಯಾಜ್ಞವಲ್ಕ್ಯರ ಉತ್ತರವನ್ನು ನೋಡಬೇಕು.

ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ । ಕತಿ ದೇವಾ ಯಾಜ್ಞವಲ್ಕ್ಯೇತಿ । ............ತ್ರಯ-ಸ್ತ್ರಿಂಶತ್ತ್ವೇವ ದೇವಾ ಇತಿ । ಕತಮೇ ತೇ ತ್ರಯಸ್ತ್ರಿಂಶದಿತಿ । ಅಷ್ಟೌ ವಸವಃ, ಏಕಾದಶ-ರುದ್ರಾಃ, ದ್ವಾದಶಾದಿತ್ಯಾಃ, ತೇ ಏಕತ್ರಿಂಶತ್ । ಇಂದ್ರಶ್ಚೈವ ಪ್ರಜಾಪತಿಶ್ಚ.

(ಬೃ. ಉ. ೩-೯-೧-೨)

ಶಕಲನ ಪುತ್ರನಾದ ವಿದಗ್ಧನು ಯಾಜ್ಞವಲ್ಕ್ಯನನ್ನು ಕುರಿತು ದೇವತೆಗಳೆಷ್ಟು ಮಂದಿ ? ಎಂದು ಪ್ರಶ್ನಿಸಿದನು. "ಮೂವತ್ತು ಮೂರೆಂದು" ಯಾಜ್ಞವಲ್ಕ್ಯನು ಹೇಳಲು "ಅವರಾರು ?" ಎಂದು ಪುನಃ ಪ್ರಶ್ನಿಸಿದನು. ಅದಕ್ಕೆ ಉತ್ತರವಾಗಿ ಯಾಜ್ಞವಲ್ಕ್ಯನು ದೇವತೆಗಳ ಸಂಖ್ಯೆಯನ್ನು ವಿವರಿಸುತ್ತಾ "ಎಂಟು ವಸುಗಳು, ಹನ್ನೊಂದು ರುದ್ರರು, ಹನ್ನೆರಡು ಆದಿತ್ಯರು ಇವರೆಲ್ಲಾ ಸೇರಿ ಮುವ್ವತ್ತೊಂದು ದೇವತೆಗಳಾದರು. ಇವರೊಂದಿಗೆ ಇಂದ್ರನೂ ಮತ್ತು ಪ್ರಜಾಪತಿಯೂ ಸೇರಿದರೆ ಒಟ್ಟಿಗೆ ಮೂವ್ವತ್ತುಮೂರಾದರು" ಎಂದುತ್ತರಕೊಟ್ಟನು. ಈ ವಸುಗಳಾರೆಂದರೆ,

ಅಗ್ನಿಶ್ಚ ಪೃಥಿವೀ ಚ ವಾಯುಶ್ಚಾಂತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚ ಚಂದ್ರಮಾಶ್ಚ ನಕ್ಷತ್ರಾಣಿ ಚೈತೇ ವಸವಃ । ಏತೇಷು ಹೀದಂ ಸರ್ವಂ ಹಿತಮಿತಿ ತಸ್ಮಾದ್ವಸವ ಇತಿ ॥

(ಬೃ ಉ. ೩-೯-೩)

ಅಗ್ನಿಃ, ಪೃಥಿವೀ, ವಾಯುಃ, ಅಂತರಿಕ್ಷಂ, ಆದಿತ್ಯಃ, ದ್ಯೌಃ, ಚಂದ್ರಮಾಃ, ನಕ್ಷತ್ರಾಣಿ. ಇವಿಷ್ಟು ಸಹ ವಸುಗಳು. ಸಕಲಭೂತಗಳೂ ಇವರಲ್ಲೇ ನಿಹಿತವಾಗಿರುವುದರಿಂದ ಇವರಿಗೆ ವಸುಗಳೆಂದು ಹೆಸರು ಪ್ರಸಿದ್ಧವಾಗಿದೆ. ಪ್ರಾಣಿನಾಂ ಕರ್ಮಫಲಾಶ್ರಯತ್ವೇನ ಕಾರ್ಯಕಾರಣಸಂಘಾತರೂಪೇಣ ತನ್ನಿವಾಸತ್ವೇನ ಚ ವಿಪರಿಣಮಂತಃ ಜಗದಿದಂ ಸರ್ವಂ ವಾಸಯಂತಿ ಚ—ಪ್ರಾಣಿಗಳ ಕರ್ಮಫಲಾನುಸಾರವಾಗಿ ಅವುಗಳ ದೇಹಗಳನ್ನೂ ಅವಯವ ಗಳನ್ನೂ ಪರಿಣಾಮಗೊಳಿಸುತ್ತಾ ತಾವೂ ಸಹ ಅವುಗಳನ್ನು ಪ್ರವೇಶಿಸಿ ಅವೆಲ್ಲವೂ ವಾಸಿಸಲು ಅನುಕೂಲಗಳನ್ನು ಕಲ್ಪಿಸಿ ತಾವೂ ಸಹ ಅಲ್ಲೆಲ್ಲಾ ವಸಿಸುತ್ತಾರಾದ್ದರಿಂದ ವಸುಗಳೆಂದು ಹೆಸರು ಎಂದು ಶಂಕರಭಾಷ್ಯದ ವಿವರಣೆಯಿದೆ.

ಸ ಮನಸಾ ವಾಚಂ ಮಿಥುನಗ್‌ಂ ಸಮಭವತ್ । ಸೋಽಷ್ಟೌ ದ್ರಪ್ಸಾನ್ಗರ್ಭ್ಯಭವತ್ತೇಽಷ್ಟೌ ವಸವೋಽಸೃಜ್ಯಂತ ತಾನಸ್ಯಾಮುಪಾದಧಾತ್ ।

(ಶ. ಬ್ರಾ. ೬-೧-೨-೬)

ಪ್ರಜಾಪತಿಯೂ ಮಾನಸಿಕವಾದ ಧ್ಯಾನದಿಂದ ವಾಕ್ಕಿನೊಡನೆ ಸಂಯುಕ್ತನಾದನು ಆಗ ಎಂಟು ದ್ರಪ್ಸಗಳು ನಿಃಸೃತವಾದವು. ಅವುಗಳೇ ಅಷ್ಟವಸುಗಳಾಗಿ ಪರಿಣಮಿತವಾದವು. ಅವುಗಳನ್ನು (ಅವರನ್ನು) ಪೃಥ್ವಿಯಲ್ಲಿ ಸ್ಥಾಪಿಸಿದನು. ಆದುದರಿಂದಲೇ ಅವರು ಪೃಥ್ವೀಸ್ಥರಾದ ದೇವತೆಗಳು. ರುದ್ರರು ಅಂತರಿಕ್ಷದಲ್ಲಿಯೂ, ಆದಿತ್ಯರು ದ್ಯುಲೋಕದಲ್ಲಿಯೂ ಸಹ ಸ್ಥಾಪಿತರಾದರು. ವಸುಗಳು ಪೃಥ್ವಿಗೆ ಅಭಿಮಾನಿದೇವತೆಗಳೆಂದು ವರ್ಣಿತರಾಗಿರುವಾಗ "ಹಗ್‌ಂಸಶ್ಶುಚಿಷದ್ವಸುರಂತರಿಕ್ಷಸತ್" ವಸುಗಳ ಅಂತರಿಕ್ಷಸ್ಥರು ಎಂದು ಅನೇಕಕಡೆ ವರ್ಣಿತವಾಗಿರುವುದರ ಅರ್ಥವೇನು ? ಎಂಬುದನ್ನು ಮುಂದೆ ಪರಿಶೀಲಿಸಲಾಗುತ್ತದೆ.

CC-0. Jangamwadi Math Collection. Digitized by eGangotri

" ಅಗ್ನಿಶ್ಚ ಪೃಥಿವೀ ಚ " ಎಂಬ ಮಂತ್ರದಲ್ಲಿ ಅಗ್ನಿಯು ವಸುಗಳಲ್ಲಿ ಒಬ್ಬನು ಎಂದು ಹೇಳಿದಂತಾಯಿತು. ಇನ್ನು ಕೆಲವೆಡೆಗಳಲ್ಲಿ ವಸುಗಳಿಗೆ ಅಗ್ನಿಯೊಂದಿಗೆ ಪ್ರಾತಃಸವನದಲ್ಲಿ ಆಹುತಿಯು ಎಂದಿದೆ. ಆದರೆ ಅಗ್ನಿಗೂ ವಸುಗಳಿಗೂ ತಾದಾತ್ಮ್ಯವೇ ಅಥವಾ ಭಿನ್ನದೇವತೆಗಳೇ, ಹಾಗೆಯೇ ಇಂದ್ರನಿಗೂ, ವಸುಗಳಿಗೂ ತಾದಾತ್ಮ್ಯವೇ ಅವರು ಭಿನ್ನದೇವತೆಗಳೇ ಇತ್ಯಾದಿ ಪ್ರಶ್ನೆಗಳಿಗೆ ಅವಕಾಶವಿರುತ್ತದೆ. ಬೇರೆಬೇರೆ ದೇವತೆಗಳೊಡನೆ ವರ್ಣಿತರಾಗಿದ್ದರೂ ಸಹ ವಸುಗಳ ಪ್ರಕಾಶಾತ್ಮಕವಾದ ಸ್ವರೂಪವು ಎಲ್ಲಾ ಕಡೆಗಳಲ್ಲಿಯೂ ಒಂದೇ ವಿಧವಾಗಿ ವರ್ಣಿತವಾಗಿದೆಯೆಂಬುದು ವ್ಯಕ್ತವಾಗುತ್ತದೆ. ವಸುರುದ್ರಾದಿತ್ಯರು ಪೃಥಿವೀ, ಅಂತರಿಕ್ಷ ಮತ್ತು ದ್ಯುಲೋಕದ ದೇವತೆಗಳು ಎಂಬುದರಲ್ಲಿ ಅನೇಕ ಗೂಢಾರ್ಥಗಳಿವೆ. ಸದ್ಯಃ ಆ ವಿವರಣೆಯನ್ನು ಮುಂದುವರಿಸಿ ಪ್ರಕೃತದಲ್ಲಿ ವಸುಗಳ ಸ್ವರೂಪವೇನೆಂಬುದನ್ನು ಸ್ಥೂಲವಾಗಿ ನೋಡಬಹುದು.

" ಇಂದ್ರಂ ನೋ ಅಗ್ನೇ ವಸುಭಿಃ ಸಜೋಷಾಃ " (ಋ. ಸಂ. ೭-೧೦-೪) ಇತ್ಯಾದಿ ಪ್ರಾರ್ಥನೆಗಳು ವಸುಗಳಿಗೂ ಅಗ್ನಿಗೂ ಇರುವ ಸಂಬಂಧವನ್ನು ತಿಳಿಸುತ್ತವೆ. ಇದನ್ನೇ ಛಾಂದೋಗ್ಯೋಪನಿಷತ್ತಿನಲ್ಲಿ ವರ್ಣಿಸುತ್ತಾ,

> ತದ್ಯತ್ಪ್ರಥಮಮಮೃತಂ ತದ್ವಸವ ಉಪಜೀವಂತ್ಯಗ್ನಿನಾ ಮುಖೇನ ನ ವೈ ದೇವಾ ಅಶ್ನಂತಿ ನ ಪಿಬಂತ್ಯೇತದೇವಾಮೃತಂ ದೃಷ್ಟ್ವಾ ತೃಪ್ಯಂತಿ । ತ ಏತದೇವ ರೂಪಮಭಿಸಂವಿಶಂತ್ಯೇತಸ್ಮಾದ್ರೂಪಾದುದ್ಯಂತಿ । ಸ ಯ ಏತದೇವಮಮೃತಂ ವೇದ ವಸೂನಾಮೇವೈಕೋ ಭೂತ್ವಾಗ್ನಿನೈವ ಮುಖೇನೈತದೇವಾಮೃತಂ ದೃಷ್ಟ್ವಾ ತೃಪ್ಯತಿ ಸ ಏತದೇವ ರೂಪಮಭಿ ಸಂವಿಶತ್ಯೇತಸ್ಮಾದ್ರೂಪಾದುದೇತಿ । ಸ ಯಾವದಾದಿತ್ಯಃ ಪುರಸ್ತಾದುದೇತಾ ಪಶ್ಚಾದಸ್ತಮೇತಾ ವಸೂನಾಮೇವ ತಾವದಾಧಿಪತ್ಯಂ ಸ್ವಾರಾಜ್ಯಂ ಪರ್ಯೇತಾ ॥
>
> (ಛಾ. ಉ. ೩-೬)

ಅಗ್ನಿಮುಖರಾದ ವಸುಗಳು ಋಗ್ವೇದರೂಪವಾದ ಪ್ರಥಮಾಮೃತವನ್ನು ಪಾನಮಾಡುತ್ತಾರೆ. ಅಂದರೆ, ದೇವತೆಗಳು ತಿನ್ನುವುದೂ ಇಲ್ಲ, ಕುಡಿಯುವುದೂ ಇಲ್ಲ. ಅಮೃತವನ್ನು ಕೇವಲ ಚಕ್ಷುಸ್ಸಿನಿಂದ ನೋಡುವುದರಿಂದಲೇ ತೃಪ್ತರಾಗುತ್ತಾರೆಂದರ್ಥ. ಇದೇ ಅಮೃತದಿಂದ ತೃಪ್ತರಾದ ವಸುಗಳು ಆದಿತ್ಯನ ರಕ್ತರೂಪವನ್ನು ಪ್ರವೇಶಿಸಿ ಅಲ್ಲಿಂದ ನಿಃಸೃತರಾಗುತ್ತಾರೆ. ಅಮೃತವೇ ವಸುರೂಪದಲ್ಲಿ ಪರಿಣಮಿತವಾಗಿ ಆದಿತ್ಯನನ್ನು ಪ್ರವೇಶಿಸುವುದೆಂದರ್ಥ. ಈ ತತ್ತ್ವವನ್ನರಿತವನೂ ಸಹ ಇದೇ ಆದಿತ್ಯನ ರೂಪಾಂತರ್ಗತನಾಗಿ ಅಲ್ಲಿಂದ ಪ್ರಭಾರೂಪದಲ್ಲಿ ನಿಃಸೃತನಾಗುತ್ತಾನೆ. ಎಲ್ಲಿಯವರೆಗೆ ಆದಿತ್ಯನು ಪೂರ್ವದಿಕ್ಕಿನಲ್ಲಿ ಉದಯಿಸಿ ಪಶ್ಚಿಮದಿಕ್ಕಿನಲ್ಲಿ ಅಸ್ತನಾಗುತ್ತಾನೆಯೋ ಅಲ್ಲಿಯವರೆಗೂ ಸಹ ಈ ತತ್ತ್ವಜ್ಞನು ವಸುಗಳ ಐಶ್ವರ್ಯವಾದ ಪ್ರಭುತ್ವವನ್ನೂ, ಸಾಮ್ರಾಜ್ಯತ್ವವನ್ನೂ, ಸ್ವಾರಾಜ್ಯವನ್ನೂ ಅನುಭವಿಸುತ್ತಾನೆಂದು ವಸುಗಳ ಮಾಹಾತ್ಮ್ಯವರ್ಣನವಿದೆ. ಆದಿತ್ಯನಿಂದ ಪುನಃ ನಿಃಸೃತರಾಗುತ್ತಾರೆಂಬುದರಿಂದ ಪೃಥ್ವಿಗೆ ಅಭಿಮುಖವಾಗಿ ಪ್ರಸರಿಸುವ ಆದಿತ್ಯರಶ್ಮಿಗೂ, ವಸುಗಳಿಗೂ ತಾದಾತ್ಮ್ಯವನ್ನು ಹೇಳಿದಂತಾಯಿತು. ಋತುಗಳ ಪ್ರಭಾವಕ್ಕೆ ಕಾರಣವಾದ ಈ ಆದಿತ್ಯರಶ್ಮಿಗಳು ಆಯಾ ಋತ್ವನುಗುಣವಾದ ಅನ್ನಾದಿಗಳಿಗೆ ಕಾರಣವಾದುದರಿಂದ ಈ ಆದಿತ್ಯರಶ್ಮಿರೂಪದಲ್ಲಿರುವ ವಸುಗಳೇ ಈ ಅನ್ನಕ್ಕೆ ಕಾರಣರಾದಂತಾಯಿತು. ಆದುದರಿಂದಲೇ ಅನ್ನಕ್ಕಾಗಿ ಅವರನ್ನು ಸ್ತುತಿಸಿದೆ.

CC-0. Jangamwadi Math Collection. Digitized by eGangotri

ತಾಂ ವೋ ದೇವಾಃ ಸುಮತಿಮೂರ್ಜಯಂತೀಮಿಷಮಶ್ಯಾಮ ವಸವಃ ಶಸಾ ಗೋಃ ।
ಸಾ ನಃ ಸುದಾನುರ್ಮೃಳಯಂತೀ ದೇವೀ ಪ್ರತಿ ದ್ರವಂತೀ ಸುವಿತಾಯ ಗಮ್ಯಾಃ ॥

(ಋ. ಸಂ. ೫-೪೧-೧೮)

ಎಲೈ ದೇವತಾತ್ಮಕರಾದ ವಸುಗಳೇ, ಶುದ್ಧವಾದ ಮನಸ್ಸಿನಿಂದ ಧ್ಯಾನಮಾಡಲು ಸಾಧನಭೂತವಾದುದೂ, ಶಕ್ತಿ-ವರ್ಧಕವಾದುದೂ ಆದ ಅನ್ನವನ್ನು ಸೂರ್ಯರಶ್ಮಿಗಳ ಸಹಾಯದಿಂದ ಪಡೆಯಲು ನಮಗೆ ಅನುಗ್ರಹಿಸಿರಿ. ಆ ಅನ್ನವು ನಮಗೆ ಎಲ್ಲಾ ವಿಧವಾದ ಸುಖವನ್ನು ಉಂಟುಮಾಡುವುದಾಗಲಿ ಎಂಬ ಪ್ರಾರ್ಥನೆಯಲ್ಲಿ ಮೇಲಿನ ಅಭಿಪ್ರಾಯವು ಸೂಚಿಸಲ್ಪಟ್ಟದೆ. ಅಲ್ಲದೇ, ಅಂತರಿಕ್ಷಸ್ಥನಾದ ಆದಿತ್ಯನ ಗತಿಯನ್ನು ವರ್ಣಿಸುವಾಗ ವಸುಗಳ ಸ್ವರೂಪವೂ ಸಹ ಆದಿತ್ಯನ ಪರಿಭ್ರಮಣಕ್ಕೆ ಸಹಾಯಮಾಡುತ್ತದೆಂಬ ಅಂಶವು ತಿಳಿಸಲ್ಪಟ್ಟದೆ. ಉದಾಹರಣೆಗೆ—

ಯಮೇನ ದತ್ತಂ ತ್ರಿತ ಏನಮಾಯುನಗಿಂದ್ರ ಏಣಂ ಪ್ರಥಮೋ ಅಧ್ಯತಿಷ್ಠತ್ ।
ಗಂಧರ್ವೋ ಅಸ್ಯ ರಶನಾಮಗೃಭ್ಣಾತ್ಸೂರಾದಶ್ವಂ ವಸವೋ ನಿರತಷ್ಟ ॥

(ಋ. ಸಂ. ೧-೧೬೩-೨)

ಯಮನಿಂದ ದತ್ತವಾದ ಈ ಅಶ್ವವನ್ನು ಪೃಥಿವ್ಯಾದಿ ಮೂರು ಸ್ಥಾನಗಳಲ್ಲಿ ಸಂಚರಿಸತಕ್ಕ ವಾಯುವು ರಥಕ್ಕೆ ಸೇರಿಸಿದನು. ಈ ಅಶ್ವವನ್ನು ಶ್ರೇಷ್ಠವಾದ ಇಂದ್ರನು ಹತ್ತಿ ಕುಳಿತನು. ಸೋಮರಾಜನು ಈ ಅಶ್ವದ ಲಗಾಮನ್ನು ಹಿಡಿದನು. ವಸುಗಳು (ಸೂರ್ಯರಶ್ಮಿಗಳು) ಈ ಅಶ್ವವನ್ನು ಆದಿತ್ಯನಿಂದ ಸಂಪಾದಿಸಿದರು ಎಂದಿದೆ. ಇಲ್ಲಿ ಸಾಯಣರು **ವಸವಃ** ಎಂಬುದಕ್ಕೆ ಮೊದಲನೆಯದಾಗಿ ಸೂರ್ಯರಶ್ಮಿಗಳೆಂದೂ, ಎರಡನೆಯದಾಗಿ **ವಸುಶಬ್ದೇನೋಕ್ತಾ ಏವ ಯಮಾದಯಃ** ವಸುಶಬ್ದದಿಂದ ಯಮಾದಿಗಳೆಂದೂ ಎರಡು ವಿಧವಾದ ಅರ್ಥವನ್ನು ತೋರಿಸಿದ್ದಾರೆ. ಈ ವಸುಗಳು ಮೇಲೆ ಹೇಳಿದಂತೆ ಕೇವಲ ಪೃಥಿವೀಸ್ಥಾನವನ್ನು ಮಾತ್ರ ಆಕ್ರಮಿಸುವವರಲ್ಲದೇ, ತ್ರಿಲೋಕದ ಸ್ಥಾನವನ್ನು ಆಕ್ರಮಿಸುವವರು ಎಂದು ತಿಳಿಯುತ್ತದೆ ನಿರುಕ್ತಕಾರರ ನಿರ್ವಚನವೂ ಇದನ್ನು ಸಮರ್ಥಿಸುತ್ತದೆ.

ವಸವಃ—ವಸವೋ ಯದ್ವಿವಸತೇ ಸರ್ವಮಗ್ನಿರ್ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾತ್ಪೃಥಿವೀ-ಸ್ಥಾನಾಃ । ಇಂದ್ರೋ ವಸುಭಿರ್ವಾಸವ ಇತಿ ಸಮಾಖ್ಯಾ ತಸ್ಮಾನ್ಮಧ್ಯಸ್ಥಾನಾಃ । ವಸವ ಆದಿತ್ಯರಶ್ಮಯೋ ವಿವಾಸನಾತ್ತಸ್ಮಾದ್ದ್ಯುಸ್ಥಾನಾಃ ॥

(ನಿ. ೧೨-೪೧)

ಅಗ್ನಿಯು ಸರ್ವವನ್ನೂ ಹೊದ್ದಿಕೆಯರೂಪದಲ್ಲಿ ಆವರಿಸಿ ವ್ಯಾಪಿಸುತ್ತಾನೆ. ಆದುದರಿಂದ ಇವನಿಗೆ ವಾಸವನೆಂದು ಹೆಸರು. ಇದರಿಂದ ಪೃಥ್ವೀಸ್ಥಾನವು ಸೂಚಿತವಾಗುತ್ತದೆ. ಇದೇ ವ್ಯಾಪಕತ್ವಧರ್ಮವನ್ನು ಹೊಂದಿರುವುದರಿಂದ ಇಂದ್ರನಿಗೂ ವಾಸವನೆಂದು ಹೆಸರು. ಆದುದರಿಂದ ಮಧ್ಯಸ್ಥಾನವಾದ ಅಂತರಿಕ್ಷದೇವತೆಯೆಂದಾಗುತ್ತದೆ. ಪ್ರಭಾ-ಯುತವಾದ ಆದಿತ್ಯರಶ್ಮಿಗಳೂ ಸರ್ವವ್ಯಾಪಕವಾದುದರಿಂದ ಅವುಗಳಿಗೂ ವಸುಗಳೆಂದು ಹೆಸರು. ಆದುದರಿಂದ ದ್ಯುಸ್ಥಾನದ ದೇವತೆಯೆಂದೂ ಆಗಬಹುದು ಎಂದು ವಿವರಿಸಿ "ವಿಶ್ವಸ್ಮೈ ಧತ್ತ ವಸವೋ ವಸೂನಿ" (ತೈ. ಸಂ. ೧-೪-೪೪-೨) ಎಂಬ ತೈತ್ತಿರೀಯಸಂಹಿತೆಯ ವಾಕ್ಯವನ್ನುದಾಹರಿಸಿ **ವಸು** ಶಬ್ದಕ್ಕಿರತಕ್ಕ ವಿಸ್ತೃತವಾದ ಅರ್ಥವನ್ನು ತಿಳಿಸಿದ್ದಾರೆ. ಮೇಲೆ ಉದಾಹೃತವಾದ ೧-೧೬೩-೨ನೇ ಋಕ್ಕಿನಲ್ಲಿ ವಸುಗಳು ದ್ಯುಲೋಕಸ್ಥನಾದ ಆದಿತ್ಯನಿಗೆ

CC-0. Jangamwadi Math Collection. Digitized by eGangotri

ಸಹಾಯ ಮಾಡುವಂತೆಯೇ ಅಂತರಿಕ್ಷಸ್ಥವಾದ ಮರುತ್ತುಗಳಿಗೂ, ಪಾರ್ಥಿವನಾದ ಅಗ್ನಿಗೂ ಸಹಾಯವನ್ನು ಮಾಡುವುದೂ ಸಹ ಋಕ್ಸಂಹಿತಯಲ್ಲಿಯೇ ವರ್ಣಿತವಾಗಿರುವುದರಿಂದ ಇವರು ಮೂರು ಲೋಕಗಳನ್ನೂ ವ್ಯಾಪಿಸಿರುವರೆಂದು ತಿಳಿಯುತ್ತದೆ.

ಜ್ಮಯಾ ಅತ್ರ ವಸವೋ ರಂತ ದೇವಾ ಉರಾವಂತರಿಕ್ಷೇ ಮರ್ಜಯಂತ ಶುಭ್ರಾಃ ।
ಅರ್ವಾಕ್ಪಥ ಉರುಜ್ರಯಃ ಕೃಣುಧ್ವಂ ಶ್ರೋತಾ ದೂತಸ್ಯ ಜಗ್ಮುಷೋ ನೋ ಅಸ್ಯ ॥

(ಋ. ಸಂ. ೭-೩೯-೩)

ವಸುಸಂಜ್ಞಕರಾದ ದೇವತೆಗಳು ಈ ಯಜ್ಞದಲ್ಲಿ ಪಾರ್ಥಿವಾಗ್ನಿಯ ಜೊತೆಯಲ್ಲಿ ರಮಿಸಲಿ ಮತ್ತು ವಿಸ್ತೃತವಾದ ಅಂತರಿಕ್ಷದಲ್ಲಿರತಕ್ಕ ಮರುತ್ತುಗಳನ್ನೂ ಸೇವಿಸಲಿ. ಪ್ರಭೂತಗಮನರಾದ ಎಲೈ ಮರುತ್ತುಗಳೇ, ಮತ್ತು ತತ್ಸಖರಾದ ವಸುಗಳೇ, ನೀವು ಸೇರಿಕೊಂಡು ನಮಗೆ ಅಭಿಮುಖರಾಗಿ ಬಂದು ನಮ್ಮನ್ನನುಸರಿಸಿ ಇತ್ಯಾದಿಯಾಗಿ ಸ್ತುತರಾಗಿದ್ದಾರೆ. ಆದುದರಿಂದ ಅವರು ಕೇವಲ ಪಾರ್ಥಿವವಾದ ದೇವತೆಗಳೆಂದು ಹೇಳುವುದಕ್ಕಾಗುವುದಿಲ್ಲ. ದ್ಯುಲೋಕಸ್ಥನಾದ ಆದಿತ್ಯನ ತೇಜೋರೂಪಿಗಳಾಗಿ, ಅಂತರಿಕ್ಷಸ್ಥವಾದ ಮರುತ್ತುಗಳೊಡನೆ ತಮ್ಮ ಪ್ರಭಾವವನ್ನು ಬೆಳೆಸಿ, ಅನಂತರ ಪಾರ್ಥವಾಗ್ನಿಯ ಸ್ವರೂಪವನ್ನು ಅಧಿಕವಾಗಿ ಪ್ರಕಾಶಿಸುವಂತೆ ಮಾಡುತ್ತಾರೆ.

ತ್ವೇ ಅಸುರ್ಯಂ೧ ವಸವೋ ನ್ಯೃಣ್ವನ್ಕ್ರತುಂ ಹಿ ತೇ ಮಿತ್ರಮಹೋ ಜುಷಂತ ।
ತ್ವಂ ದಸ್ಯೂಁರೋಕಸೋ ಅಗ್ನ ಆಜ ಉರು ಜ್ಯೋತಿರ್ಜನಯನ್ನಾರ್ಯಾಯ ॥

(ಋ. ಸಂ. ೭-೫-೬)

ಮಿತ್ರರಿಗೆಲ್ಲಾ ಪೂಜ್ಯನಾದ ಎಲೈ ಅಗ್ನಿಯೇ, ವಸುಸಂಜ್ಞರಾದ ದೇವತೆಗಳು ನಿನ್ನಲ್ಲಿ ಪ್ರಭೆಯನ್ನು ವೃದ್ಧಿಮಾಡಿ ನಿನ್ನ ಶಕ್ತಿಯನ್ನು ಅಧಿಕವಾಗುವಂತೆ ಮಾಡಿದ್ದಾರೆ. ನಿನಗೆ ಪ್ರೀತಿಪಾತ್ರವಾದ ಕರ್ಮವನ್ನೂ ಸೇವಿಸಿದ್ದಾರೆ. ಅವರ ಸಹಾಯದಿಂದ ವೃದ್ಧಿಯನ್ನು ಹೊಂದಿದ ತೇಜಸ್ಸಿನೊಡನೆ ನೀನು ಯಜ್ಞಕರ್ತರ ಉಪಕಾರಕನಾಗಿ ಶತ್ರುಗಳನ್ನು ನಾಶಮಾಡು.

ಕ್ರತುಂ ಹ್ಯಸ್ಯ ವಸವೋ ಜುಷಂತಾಥಾ ದೇವಾ ದಧಿರೇ ಹವ್ಯವಾಹಂ ।

(ಋ. ಸಂ. ೭-೧೧-೪)

ಯಜ್ಞಕ್ಕೆಲ್ಲಾ ಪ್ರಭುವಾದ ಅಗ್ನಿಯನ್ನು ಯಾವ ವಸುಗಳು ಸೇವಿಸುತ್ತಾರೊ, ದೇವತೆಗಳು ಅಂತಹ ಸಹಾಯವುಳ್ಳ ಅಗ್ನಿಯನ್ನು ಹವ್ಯವಾಹನೆಂದು ಪರಿಗ್ರಹಿಸಿ ಗೌರವಿಸಿದರು ಎಂದು ಅಗ್ನಿಯೊಡನಿರುವ ಸಾಹಚರ್ಯವು ವರ್ಣಿತವಾಗಿದೆ. ಮತ್ತು ಇವರ ಪ್ರಭಾವವು ಅಗ್ನಿಯ ಶಕ್ತಿಗೂ ಕಾರಣವಾಗಿದೆಯೆಂದೂ ತಿಳಿಸಿದೆ.

ಮೇಲೆ ಉದಾಹೃತವಾಗಿರುವ ಉಪನಿಷದ್ವಾಕ್ಯದಲ್ಲಿ ಅಷ್ಟವಸುಗಳೆಂದು ಹೇಳಿ ಇವರ ಸಂಖ್ಯಾನಿರ್ದೇಶವಿದೆ. ಶಬ್ದಕಲ್ಪದ್ರುಮದಲ್ಲಿ ಇದೇ ವಸುಗಳ ನಾಮವು ಧರ, ಧ್ರುವ, ಸೋಮ, ವಿಷ್ಣು, ಅನಿಲ, ಅನಲ, ಮತ್ತು ಪ್ರಭಾಸ ಎಂದು ನಿರ್ದಿಷ್ಟವಾಗಿದೆ. ಇದನ್ನೇ ವಿಷ್ಣುಪುರಾಣದಲ್ಲಿ ನಿರ್ದೇಶಿಸುತ್ತಾ ಆಪ, ಧ್ರುವ, ಸೋಮ ಧವ, ಅನಿಲ, ಅನಲ ಅಥವಾ ಪಾವಕ, ಪ್ರತ್ಯೂಷ (ಉಷಸ್) ಮತ್ತು ಪ್ರಭಾಸ ಎಂದು ಎಂಟು ಹೆಸರು ಹೇಳಲ್ಪಟ್ಟಿದೆ. ಇವೆಲ್ಲವೂ ಸಹ ವಿಶ್ವವ್ಯಾಪಿಯಾದ ಪ್ರಭೆಯ ವಿವಿಧರೂಪಗಳೆಂದೂ ಹೇಳಲ್ಪಟ್ಟಿದೆ

CC-0. Jangamwadi Math Collection. Digitized by eGangotri

ಭೌತಿಕವಾದ ಲೋಕಗಳಲ್ಲಿ ಸರ್ವವ್ಯಾಪಕವಾದುದರಿಂದ ಆದಿತ್ಯಾದಿಪ್ರಭಾವಿಶೇಷವು ವಸುನಾಮಾಂಕಿತವಾಗಿರುವಂತೆ ಆಧ್ಯಾತ್ಮಿಕವಾದ ತತ್ತ್ವಪ್ರತಿಪಾದನೆಯನ್ನು ಮಾಡುವಾಗಲೂ ಸಹ ಸರ್ವದೇಹವ್ಯಾಪಿಯಾದ ಪ್ರಾಣತತ್ತ್ವವೇ ವಸುನಾಮಾಂಕಿತವಾಗಿದೆ.

> **ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿ ವರ್ಷಾಣಿ ತತ್ಪ್ರಾತಃಸವನಂ । ಚತುರ್ವಿಂಶತ್ಯಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ವಾವ ವಸವಃ ಏತೇ ಹೀದಗ್ಂ ಸರ್ವಂ ವಾಸಯಂತಿ ॥**

(ಛಾ. ಉ. ೩-೧೬-೧)

ಪುರುಷನೇ ಯಜ್ಞರೂಪನು. ಅವನ ಮೊದಲನೆಯ ಇಪ್ಪತ್ತುನಾಲ್ಕು ವರ್ಷಗಳೂ ಪ್ರಾತಃಸವನವು. ಗಾಯತ್ರೀ ಛಂದಸ್ಸಿನ ಮಂತ್ರದಿಂದ ಪ್ರಾತಃಸವನದ ಆಹುತಿಯು ಅರ್ಪಿತವಾಗುತ್ತದೆ. ಪುರುಷನು ವಾಸಿಸಲು ಅನುಕೂಲವಾಗುವಂತೆ ಅವನ ದೇಹಾಂತರ್ಗತವಾಗಿ ಸರ್ವಾವಯವಗಳಲ್ಲಿಯೂ ವ್ಯಾಪಿಸಿರುವುದರಿಂದ ಪ್ರಾಣಕ್ಕೆ **ವಸು** ಎಂಬ ಹೆಸರು ಪ್ರಸಿದ್ಧವಾಗಿದೆ. ಆದುದರಿಂದ ಪುರುಷನ ದೇಹಾಂತರ್ಗತವಾಗಿಯೂ, ದೇಹಾತಿರಿಕ್ತವಾದುದೂ, ಅನಂತವಾದುದೂ ಆದ ಭೌತಿಕವಿಶ್ವದ ಪೃಥಿವ್ಯಾದಿ ಮೂರು ಲೋಕಗಳಲ್ಲೂ ವ್ಯಾಪಿಸಿರುವ ತತ್ತ್ವವಿಶೇಷಗಳೇ **ವಸು** ನಾಮಾಂಕಿತವು.

**ಸುಹಸ್ತಾ—** ಕಲ್ಯಾಣಪಾಣೀ ನಾಸತ್ಯಾ ಮಿತ್ರಾವರುಣಾ ವಾ । ಕಲ್ಯಾಣಕಾರಕವಾದ ಪಾಣಿಯುಳ್ಳ ಅಶ್ವಿನೀದೇವತೆಗಳೆಂದಾಗಲಿ ಅಥವಾ ಮಿತ್ರಾವರುಣರೆಂದಾಗಲಿ ಅರ್ಥವಾಗುತ್ತದೆಂದು ಸಾಯಣರು ಎರಡು ವಿಧವಾದ ಅರ್ಥವನ್ನು ಹೇಳಿದ್ದಾರೆ. ಆಕರ್ಷಕವಾದ ಪಾಣಿಯನ್ನು ಪಡೆದಿರುವುದು ಅಶ್ವಿನೀದೇವತೆಗಳಿಗೆ ಹೇಗೋ ಹಾಗೆಯೇ ಮಿತ್ರಾವರುಣರಿಗೂ ಅಲಂಕಾರ ಪ್ರಾಯವಾಗಿದೆ.

> **ಅಥ ಬಾಹೂ ಉದ್ಗೃಹ್ಣಾತಿ । ಹಿರಣ್ಯರೂಪಾ ಉಷಸೋ ವಿರೋಕ ಉಭಾವಿಂದ್ರಾ ಉದಿಥಃ ಸೂರ್ಯಶ್ಚ । ಆರೋಹತಂ ವರುಣ ಮಿತ್ರ ಗರ್ತಂ ತತಶ್ಚಕ್ಷಾಥಾಮದಿತಿಂ ದಿತಿಂ ಚೇತಿ ಬಾಹೂ ವೈ ಮಿತ್ರಾವರುಣೌ ॥**

(ಶ ಬ್ರಾ. ೫-೪-೧-೧೫)

ಅಭಿಷೇಕಕಾಲದಲ್ಲಿ ರಾಜನು ಎರಡು ಬಾಹುಗಳನ್ನೂ ಎತ್ತಿ ಹಿಡಿಯುತ್ತಾನೆ. ಮತ್ತು "ಹಿರಣ್ಯ ರೂಪಾ" ಎಂಬ ಮಂತ್ರವನ್ನು ಪಠಿಸಿ ಮಿತ್ರಾವರುಣರನ್ನುದ್ದೇಶಿಸಿ ಪ್ರಾರ್ಥಿಸುತ್ತಾನೆ. ಹಿರಣ್ಯದಂತೆ ಆಕರ್ಷಕವಾದ ರೂಪವುಳ್ಳ ಮಿತ್ರಾವರುಣರೇ, ಆದಿತ್ಯನು ತನ್ನ ರಥವನ್ನು ಹತ್ತುವಂತೆ ನೀವೂ ಸಹ ಆರೋಹಣಮಾಡಿ. ಮತ್ತು ದಿತಿಯನ್ನೂ ಅದಿತಿಯನ್ನೂ ವೀಕ್ಷಿಸಿ ಎಂದು ಪ್ರಾರ್ಥಿಸುವ ಕಾಲದಲ್ಲಿ ಆ ಬಾಹುಗಳೇ ಮಿತ್ರಾವರುಣರೂಪದಲ್ಲಿವೆಯೆಂದು ವರ್ಣಿತವಾಗಿದೆ. ಹೀಗೆಯೇ ಅನೇಕ ಸಂದರ್ಭಗಳಲ್ಲಿ ಶ್ರೇಷ್ಠವಾದ ಪಾಣಿಗಳು ಮಿತ್ರಾವರುಣರನ್ನು ಪ್ರತಿಬಿಂಬಿಸುತ್ತವೆಯೆಂದೂ ತಿಳಿಯಬಹುದು. ಅಲ್ಲದೇ, "**ಅಶ್ವಿನೋರ್ಬಾಹುಭ್ಯಾಂ ಪೂಷ್ಣೋ ಹಸ್ತಾಭ್ಯಾಂ**" ಇತ್ಯಾದಿ ಮಂತ್ರಗಳು ಅಶ್ವಿನೀದೇವತೆಗಳ ಬಾಹುಗಳ ವೈಶಿಷ್ಟ್ಯವನ್ನು ಪ್ರಶಂಸಿಸುತ್ತವೆ. ಹೀಗೆ ಈ ವಿಶೇಷಣವು ಎರಡು ಕಡೆಯೂ ಅನ್ವಿತವಾಗಲು ಸಾಧ್ಯವಿರುವುದರಿಂದ ಇಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

CC-0. Jangamwadi Math Collection. Digitized by eGangotri

**ಶಶಯಂ**—ಶೀ ಧಾತುವಿನಿಂದ ನಿಷ್ಪನ್ನವಾಗಿ ಸುಪ್ತಾವಸ್ಥೆಯಲ್ಲಿರತಕ್ಕ ವಸ್ತುವಿನ ವರ್ಣನೆಗಾಗಿ ಈ ಪದವು ಪ್ರಯೋಗಿಸಲ್ಪಟ್ಟಿದೆ. ಸುಪ್ತವಾಗಿದ್ದ ಮೇಘವನ್ನು ವೃಷ್ಟ್ಯರ್ಥವಾಗಿ ಕರೆದರು ಎಂದರ್ಥ.

**ರಣಯಂತೆ—ರಮಯಂತಿ, ಶಬ್ದಯಂತ್ಯೇವ** । ಹರ್ಷಿಸು ಮತ್ತು ಶಬ್ದಮಾಡು ಎಂಬರ್ಥಗಳಲ್ಲಿ ಈ ಪದವನ್ನುಪಯೋಗಿಸಿದೆ. ರಮಣೀಯವಾದ.ದು ಎಂಬುದರ ಮೂಲಾರ್ಥದ ಮೇಲೆ ರಣಶಬ್ದವು ಯುದ್ಧ ಪರ್ಯಾಯವಾಗಿಯೂ ಇದೆ. ಯುದ್ಧಮಾಡುತ್ತಿರುವಾಗ ಜಯವು ಸಿದ್ಧ ಎಂಬ ಹರ್ಷಸೂಚಿತವಾದ ಶಬ್ದವನ್ನು ವರ್ಣಿಸುವಾಗಲೂ, ಮತ್ತು, ಯಜ್ಞಕಾಲದಲ್ಲಿ ರಥಂತರಾದಿ ಸಾಮಗಳನ್ನು ಪಠಿಸುವಾಗಲೂ ಸಹ ರರಾಣತಾ, ರಣಂತೆ ಇತ್ಯಾದಿಶಬ್ದಗಳ ಪ್ರಯೋಗವಿರುತ್ತದೆ.

**ಸುಮ್ನಂ—ಸುಮ್ನ** ಶಬ್ದವು ಸುಖನಾಮಗಳಲ್ಲಿ ಪಠಿತವಾಗಿದೆ. (ನಿ. ೩-೬) ಋಕ್ಸಂಹಿತೆಯ ಕೆಲವೆಡೆಗಳಲ್ಲಿ ಅನುಗ್ರಹವೆಂಬರ್ಥದಲ್ಲೂ ಪ್ರಯುಕ್ತವಾಗಿದೆ. ಆದರೆ ಸುಖಾರ್ಥದಲ್ಲಿರುವ ಪ್ರಯೋಗವೇ ಅಧಿಕವಾಗಿರುತ್ತದೆ.

ಸಂಹಿತಾಪಾಠಃ

ಯಾ ಜಾಮಯೋ ವೃಷ್ಣ ಇಚ್ಛಂತಿ ಶಕ್ತಿಂ ನಮಸ್ಯಂತೀರ್ಜಾನತೇ ಗರ್ಭ-
ಮಸ್ಮಿನ್ ।
ಅಚ್ಛಾ ಪುತ್ರಂ ಧೇನವೋ ವಾವಶಾನಾ ಮಹಶ್ಚರಂತಿ ಬಿಭ್ರತಂ ವಪೂಂಷಿ॥

ಪದಪಾಠಃ

ಯಾಃ । ಜಾಮಯಃ । ವೃಷ್ಣೇ । ಇಚ್ಛಂತಿ । ಶಕ್ತಿಂ । ನಮಸ್ಯಂತೀಃ । ಜಾನತೇ । ಗರ್ಭಂ । ಅಸ್ಮಿನ್ ।
ಅಚ್ಛ । ಪುತ್ರಂ । ಧೇನವಃ । ವಾವಶಾನಾಃ । ಮಹಃ । ಚರಂತಿ । ಬಿಭ್ರತಂ । ವಪೂಂಷಿ ॥ ೩ ॥

ಸಾಯಣಭಾಷ್ಯಂ

ಯಾ ಜಾಮಯಃ । ಜಮಂತಿ ವರ್ಷಾಕಾಲೇ ಪ್ರಾದುರ್ಭವಂತೀತಿ ಜಾಮಯ ಓಷಧಯಃ । ವೃಷ್ಣೇಽಪಾಂ ವರ್ಷಕಾಯೇಂದ್ರಾಯ ಶಕ್ತಿಂ ಸೇಚನಸಾಮರ್ಥ್ಯಮಿಚ್ಛಂತಿ । ನಮಸ್ಯಂತೀಃ ಪ್ರಹ್ವೀಭೂತಾಸ್ತಾ ಓಷಧಯೋಽಸ್ಮಿನ್ನಿಂದ್ರೇ ಗರ್ಭಂ ವೃಷ್ಟಿದ್ವಾರಾ ಪುಷ್ಪಫಲಾದಿಲಕ್ಷಣಗರ್ಭಾದಾನಾದಿಸಾಮರ್ಥ್ಯಂ ಜಾನತೇ । ಜಾನಂತಿ । ವಾವಶಾನಾಃ ಫಲಂ ಕಾಮಯಮಾನಾ ಧೇನವಃ ಸರ್ವಸ್ಯ ಪ್ರೀಣಯಿತ್ರ್ಯ ಓಷಧಯೋ ಮಹೋ ಮಹಾಂತಿ ನಾನಾಪ್ರಕಾರಾಣಿ ವಪೂಂಷಿ ರೂಪಾಣಿ ಬಿಭ್ರತಂ ವ್ರೀಹಿಯವನೀವಾರಾದಿಫಲಲಕ್ಷಣಂ ಪುತ್ರಂ ತನಯಮಚ್ಛಾಭಿಮುಖ್ಯೇನ ಚರಂತಿ । ಪ್ರಾಪ್ನುವಂತಿ । ಲೋಕೇ

CC-0. Jangamwadi Math Collection. Digitized by eGangotri

ಹಿ ಹಂಭಾರವಂ ಕುರ್ವಾಣಾ ಧೇನವೋ ವತ್ಸಮಭಿಲಕ್ಷ್ಯ ಗಚ್ಛಂತಿ । ತದ್ವತ್ । ಯದ್ವಾ । ಜಾಮಯಃ । ಜಮಂತಿ ಸರ್ವತ್ರ ಪ್ರಸರಂತೀತಿ ಜಾಮಯಃ ಸೂರ್ಯದೀಪ್ತಯಃ । ವೃಷ್ಣೇಽಪಾಂ ವರ್ಷಕಾಯ । ಸ್ವರಶ್ಮಿಭಿರ್ಭೌಮಾನ್ರಸಾನಾದಾಯ ಪುನರ್ವರ್ಷತೀತಿ ವರ್ಷಕಃ ಸೂರ್ಯಃ । ಆದಿತ್ಯಾಜ್ಜಾಯತೇ ವೃಷ್ಟಿರಿತಿ ಸ್ಮೃತೇಶ್ಚ । ತಸ್ಮೈ ವರ್ಷಣಶಕ್ತಿಮಿಚ್ಛಂತಿ । ತಾ ದೀಪ್ತಯೋಽಸ್ಮಿನ್ನಾದಿತ್ಯೇ ಗರ್ಭಮಬ್ರೂಪಗರ್ಭಾಧಾನಸಾಮರ್ಥ್ಯಂ ಜಾನಂತಿ ॥ ಜಾಮಯಃ । ಜಮತೇರ್ಗತಿಕರ್ಮಣೋ ಜನಿಘಸಿಭ್ಯಾಮಿಣ್ಣಿತಿ ವಿಧೀಯಮಾನೋ ಬಹುಲವಚನಾದಸ್ಮಾದಪಿ ಭವತಿ । ನಮಸ್ಯಂತೀಃ । ನಮಃಶಬ್ದಾನ್ನಮೋವರಿವಶ್ಚಿತ್ರಙಃ ಕ್ಯಜಿತಿ ಕ್ಯಚ್ । ತದಂತಾಚ್ಛತರಿ ರೂಪಂ । ಪ್ರತ್ಯಯಸ್ವರಃ । ಜಾನತೇ । ಜ್ಞಾ ಅವಬೋಧನ ಇತ್ಯಸ್ಯ ಲಟಿ ರೂಪಂ । ಅಚ್ಛ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ ॥

### ಪ್ರತಿಪದಾರ್ಥ

ಯಾ ಜಾಮಯಃ—ಓಷಧಿಗಳೆಲ್ಲವೂ ಸಹ । ವೃಷ್ಣೇ—ವೃಷ್ಟಿಕಾರಕನಾದ ಇಂದ್ರನಿಗೆ । ಶಕ್ತಿಂ—ಸೇಚನಸಾಮರ್ಥ್ಯವನ್ನು । ಇಚ್ಛಂತಿ—ಆಶಂಸಿಸುತ್ತವೆ । ನಮಸ್ಯಂತೀಃ—ನಮ್ರತೆಯನ್ನು ಹೊಂದಿದ ಓಷಧಿಗಳು। ಅಸ್ಮಿನ್—ಈ ಇಂದ್ರನಲ್ಲಿರುವ । ಗರ್ಭಂ—ಪುಷ್ಪಾದಿರೂಪವಾದ ಗರ್ಭವನ್ನುಂಟುಮಾಡುವ ಸಾಮರ್ಥ್ಯವನ್ನು । ಜಾನತೇ—ತಿಳಿದಿವೆ । ವಾವಶಾನಾಃ—ಫಲಗಳನ್ನಪೇಕ್ಷಿಸುವುವೂ । ಧೇನವಃ—ಜಗತ್ಪ್ರೀತಿಕಾರಕವೂ ಆದ ಓಷಧಿಗಳು । ಮುಹಃ—ಅನೇಕಪ್ರಕಾರಗಳಾದ । ವಪೂಂಷಿ—ಧಾನ್ಯಾದಿ ರೂಪಗಳನ್ನು । ಬಿಭ್ರತಂ—ಹೊಂದಿರುವ । ಪುತ್ರಂ—ಪುತ್ರಾತ್ಮಕವಾದ ಫಲಗಳನ್ನು । ಚರಂತಿ—ಪಡೆಯುತ್ತವೆ.

### ಭಾವಾರ್ಥ

ಓಷಧಿಗಳೆಲ್ಲವೂ ಸಹ ವೃಷ್ಟಿಕಾರಕನಾದ ಇಂದ್ರನಿಗೆ ಸೇಚನಸಾಮರ್ಥ್ಯವನ್ನಪೇಕ್ಷಿಸುತ್ತವೆ. ನಮ್ರತೆಯನ್ನು ಪಡೆದಿರುವ ಈ ಓಷಧಿಗಳು ಇಂದ್ರನಲ್ಲಿ ಪುಷ್ಪಾದಿರೂಪವಾದ ಗರ್ಭಾಧಾನವನ್ನುಂಟುಮಾಡುವ ಸಾಮರ್ಥ್ಯವಿದೆಯೆಂದು ತಿಳಿದಿವೆ ಫಲಗಳನ್ನಪೇಕ್ಷಿಸುವುವೂ, ಜಗತ್ಪ್ರೀತಿಕಾರಕವೂ ಆದ ಓಷಧಿಗಳು ಅನೇಕಪ್ರಕಾರಗಳಾದ ಧಾನ್ಯಾದಿ ರೂಪಗಳನ್ನು ಹೊಂದಿರುವ ಪುತ್ರಾತ್ಮಕವಾದ ಫಲಗಳನ್ನು ಪಡೆಯುತ್ತವೆ.

### English Translation

The plants that desire for the showerer (Indra) the power (of sending rain) appreciate, when manifest, the embryo (blossom) deposited in him: the cows desirous of reward come to the presence of the calf, invested with many forms

### ವಿಶೇಷವಿಷಯಗಳು

ಈ ಋಕ್ಕಿಗೆ ಸಾಯಣರು ಎರಡು ವಿಧವಾದ ಅರ್ಥವು ಸಾಧ್ಯವೆಂದು ತೋರಿಸಿದ್ದಾರೆ. **ಜಾಮಯಃ** ಎಂಬುದಕ್ಕೆ ಮೊದಲನೆಯದಾಗಿ ಓಷಧಿವನಸ್ಪತಿಗಳೆಂದರ್ಥಮಾಡಿದ್ದಾರೆ. ಈ ಅರ್ಥವು ಸಾಧುವಾದರೆ **ವೃಷ್ಣೇ** ಎಂಬುದು ಇಂದ್ರಪರ್ಯಾಯವಾದ ಪದ. **ಧೇನವಃ** ಎಂಬುದೂ ಓಷಧಿಗಳಿಗೆ ವಿಶೇಷಣವಾಗಿರಬೇಕು. ಅಥವಾ **ಜಾಮಯಃ**

CC-0. Jangamwadi Math Collection. Digitized by eGangotri

ಎಂಬುದಕ್ಕೆ ಸೂರ್ಯರಶ್ಮಿಗಳಿಂದರ್ಥಮಾಡಿದರೆ ವೃಷ್ಣೇ ಎಂಬುದು ಆದಿತ್ಯಪರ್ಯಾಯಪದವಾಗಬೇಕು. ಧೇನವಃ ಎಂಬುದೂ ಸಹ ಆದಿತ್ಯರಶ್ಮಿಗಳಿಗೆ ವಿಶೇಷಣವಾಗಿರಬೇಕು. ಈ ಎರಡು ವಿಧವಾದ ತಾತ್ಪರ್ಯವನ್ನು ಹೇಳುವುದರಲ್ಲಿಯೂ ಔಚಿತ್ಯವಿದ್ದರೂ ಸಹ ಎರಡನೆಯ ಎಂದರೆ ಆದಿತ್ಯಪರವಾದ ಅರ್ಥವನ್ನು ಹೇಳುವುದರಲ್ಲಿ ಅಧಿಕವಾ ಅವಕಾಶವಿದೆ. ಮೊದಲನೆಯಿದಾಗಿ ;

**ಜಾಮಯಃ**—ಜಮಂತಿ ವರ್ಷಾಕಾಲೇ ಪ್ರಾದುರ್ಭವಂತೀತಿ ಜಾಮಯಃ ಓಷಧಯಃ । ಮಳೆಗಾಲದಲ್ಲಿ ಪ್ರಾದುರ್ಭವಿಸುವುದರಿಂದ ಓಷಧಿಗಳಿಗೆ ಜಾಮಿಗಳೆಂದು ಹೆಸರು. ಗತ್ಯರ್ಥಿಕವಾದ ಜಮ್ ಶಬ್ದದಿಂದ ಈ ಪದವು ನಿಷ್ಪನ್ನವಾಗಿದೆ. ನಿರುಕ್ತಕಾರರು ಇದಕ್ಕೆ ಎರಡು ವಿಧವಾದ ನಿರ್ವಚನವನ್ನು ತಿಳಿಸಿದ್ದಾರೆ. **ಜಾಮಿರನ್ಯೇಽಸ್ಯಾಂ ಜನಯಂತಿ ಜಾಮಪತ್ಯಂ । ಜಮತೇರ್ವಾ ಸ್ಯಾದ್ಗತಿಕರ್ಮಣೋ ನಿರ್ಗಮನಪ್ರಾಯಾ ಭವತಿ ।** (ನಿ ೩-೯) ಇತರನು ಇವಳಲ್ಲಿ ಮಕ್ಕಳನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ ಎಂಬಭಿಪ್ರಾಯವನ್ನು ಹೇಳುವುದೂ ಹುಟ್ಟು ಎಂಬರ್ಥವನ್ನು ಕೊಡುವ ಜನ್ ಧಾತುವಿನಿಂದ ನಿಷ್ಪನ್ನವಾದುದೂ ಆಗಿ ಜಾಮಿ ಎಂದರೆ ಭರ್ತೃವಿನ ಮನೆಗೆ ಹೋಗುವವಳು ಎಂದು ಒಂದು ವಿಧವಾದ ವ್ಯುತ್ಪತ್ತಿ. ಅಥವಾ ಚಲಿಸು ಎಂಬರ್ಥವನ್ನು ಕೊಡುವ ಜಮ್ ಧಾತುವಿನಿಂದ ನಿಷ್ಪನ್ನವಾಗಿ ಇದೇ ಅರ್ಥವನ್ನು ಕೊಡುತ್ತದೆಯೆಂಬುದು ಇನ್ನೊಂದುವಿಧವಾದ ವ್ಯುತ್ಪತ್ತಿ. ವರ್ಷಾಕಾಲಗಳಲ್ಲಿ ಮೊಳಕೆಗಳು ಚಲಿಸುವುವು ಎಂದರೆ ಪ್ರಾದುರ್ಭವಿಸುವುವು. ಆದುದರಿಂದ ಓಷಧಿಗಳಿಗೆ ಜಾಮಯಃ ಎಂಬುದು ಪರ್ಯಾಯಪದವಾಗಿದೆಯೆಂದು ಒಂದು ವಿಧವಾದ ವ್ಯುತ್ಪತ್ತಿಯ ಸಹಾಯದಿಂದ ತಾತ್ಪರ್ಯವನ್ನು ಹೇಳಬಹುದು. ಇನ್ನೊಂದು ವಿಧವಾದ ವ್ಯುತ್ಪತ್ತಿಯಿಂದ ಈ ಪದಕ್ಕೆ ಬಂಧುಗಳು ಎಂದರ್ಥವಾಗುತ್ತದೆ. ಇದೇ ಅರ್ಥದಲ್ಲಿ ಅನೇಕ ಸನ್ನಿವೇಶಗಳಲ್ಲಿ ಇದರ ಪ್ರಯೋಗವಿದೆ. ಆವರೆ ಬಂಧುಗಳೆಂದರೆ ಸಹೋದರಿಯಾಗಬಹುದು, ಪತ್ನಿಯಾಗಬಹುದು, ಮಾತೃವಾಗಬಹುದು, ಸುಹೃತ್ ಆಗಬಹುದು ಅಥವಾ ವ್ಯಕ್ತಿಯಕಡೆಗೆ ಸೇರಿದ ಯಾವ ಪುರುಷನಾದರೂ ಆಗಬಹುದು. ಹೇಗೆಂದರೆ,

**ಅಂಬಯೋ ಯಂತ್ಯಧ್ವಭಿರ್ಜಾಮಯೋ ಅಧ್ವರೀಯತಾಂ । ಪೃಂಚತೀರ್ಮಧುನಾ ಪಯಃ ॥**

(ಋ. ಸಂ. ೧-೨೩-೧೬)

ಮಾತೃಪ್ರಾಯರಾದ ಉದಕಗಳು ಮಾತೃಗಳಂತೆ ಹಿತಕಾರಿಣಿಗಳಾಗಿ ಪ್ರವಹಿಸುತ್ತವೆ

**ಆ ಘಾ ತಾ ಗಚ್ಛಾನುತ್ತರಾ ಯುಗಾನಿ ಯತ್ರ ಜಾಮಯಃ ಕೃಣವನ್ನಜಾಮಿ ॥**

(ಋ. ಸಂ. ೧೦-೧೦-೧೦)

ಜಾಮಿಯಾದವಳು ಅಜಾಮಿಯನ್ನು ವರಿಸುತ್ತಾಳೆ ಎಂದರೆ ಭಗಿನಿಯು ಸಹೋದರನಲ್ಲದವನನ್ನು ವರಿಸುತ್ತಾಳೆ.

**ತೇ ಮಾಯಿನೋ ಮಮಿರೇ ಸುಪ್ರಚೇತಸೋ ಜಾಮೀ ಸಯೋನೀ ಮಿಥುನಾ ಸಮೋಕಸಾ ॥**

(ಋ. ಸಂ. ೧-೧೫೯-೪)

ಜಾಮಿಯರಾದ ದ್ಯಾವಾಪೃಥಿವಿಗಳು ರಶ್ಮಿಯನ್ನು ನಿಯಮನದಲ್ಲಿಟ್ಟರು ಎಂದರೆ, ಇಲ್ಲಿ ದ್ಯಾವಾಪೃಥಿವಿಗಳು ಸಹೋದರಿಯರು ಎಂಬರ್ಥ. ಇದೇ ಅರ್ಥದಲ್ಲಿ **ಜಾಮಯಃ**—ಸ್ವಸಾರಃ ಅಂಗುಳಯಃ । ಯಜ್ಞಸಾಧನವೂ ಪರಸ್ಪರ ಉಪಕಾರಕಗಳೂ ಆದ ಕೈಬೆರಳುಗಳ ಪರಸ್ಪರ ಸಂಬಂಧವನ್ನು ಸೂಚಿಸಲು " ಹಿನ್ವಂತಿ ಸ್ವಸಾರೋ ಜಾಮಯಃ

CC-0. Jangamwadi Math Collection. Digitized by eGangotri

**ಪತಿಂ** ” (೯-೬೫-೧) ಎಂಬಲ್ಲಿ ಸೋಮನಿಗೆ ಪತ್ನಿಯರು ಎಂಬರ್ಥದಲ್ಲಿ **ಜಾಮಯಃ** ಎಂಬ ಪ್ರಯೋಗವಿದೆ. **“ಜಹಿ ಶೂರ ಶತ್ರೂನ್ ಜಾಮಿಮಜಾಮಿಂ ಮಘವನ್ ಅಮಿತ್ರಾನ್”** (೬-೪೪-೧೭) ಬಂಧುವಾಗಲಿ, ಅಬಂಧುವಾಗಲಿ ಶತ್ರುವನ್ನು ನಾಶಮಾಡು ಎಂದು ತಾತ್ಪರ್ಯವುಳ್ಳ ಈ ಮಂತ್ರದಲ್ಲಿ ನಿರ್ದಿಷ್ಟವಾದ ಬಂಧುತ್ವವನ್ನು ತೋರಿಸದೆ ವಿಸ್ತೃತವಾದ ಅರ್ಥದಲ್ಲಿ ಪ್ರಯೋಗಿಸಿದೆ. ಹೀಗೆ ಈ ಪದಕ್ಕೆ ಸಂದರ್ಭಾನುಸಾರವಾದ ಅರ್ಥವನ್ನು ಹೇಳಬೇಕಾಗಿರುವುದರಿಂದ ಪ್ರಕೃತದಲ್ಲಿ ಇಂದ್ರನಿಗೂ, ಓಷಧಿಗಳಿಗೂ ಯಾವ ಸಂಬಂಧವು ನಿರ್ದಿಷ್ಟವಾಗಿದೆ? ಇಂದ್ರನಿಗೂ ಓಷಧಿಗಳಿಗೂ ಪತಿಪತ್ನಿಸಂಬಂಧವೇ? ಅಥವಾ ಪಿತೃಪುತ್ರಿಯರ ಸಂಬಂಧವೇ? ಅಥವಾ ಉಪಕಾರ ಕೋಪಕಾರ್ಯಸಂಬಂಧವೇ ಎಂಬ ಪ್ರಶ್ನೆಯು ಸಹಜವಾದುದು. ಈ ಎಲ್ಲಾ ಸಂಬಂಧವನ್ನೂ ಈ ಸಂದರ್ಭ ದಲ್ಲಿ ತೋರಿಸಬಹುದು. ಹೇಗೆಂದರೆ, ಓಷಧಿಗಳ ಸೃಷ್ಟಿಯೂ, ವೃದ್ಧಿಯೂ ವೃಷ್ಟಿಯದ್ವಾರಾ ಎಂಬುದು ಪ್ರಸಿದ್ಧ ವಷ್ಟೆ? ಈ ವೃಷ್ಟಿಯು ಇಂದ್ರನ ಅನುಗ್ರಹದಿಂದಲೇ ಸಾಧ್ಯ. ಆದುದರಿಂದ ಉಪಕಾರಕ ಸಂಬಂಧವು ಇಂದ್ರನದು. ಓಷಧಿಗಳ ಸಾರವೇ ವೃಷ್ಟ್ಯುದಕವು; ವೃಷ್ಟ್ಯುದಕದ ಸಾರವೇ ಓಷಧಿಯು.

ಆಪೋ ಹ ವಾ ಓಷಧೀನಾಗ್ಂ ಸಾರಃ .... .... ಓಷಧಯ ಉ ಅಪಾಗ್ಂರಸಃ ।

(ಶ. ಬ್ರಾ. ೩-೬-೧-೭)

ಉದಕದ ಅಂತಸ್ತತ್ತ್ವವೂ ಓಷಧಿಗಳ ರಸವೂ ಒಂದೇ ಆದುದರಿಂದ ವೃಷ್ಟ್ಯುದಕದ ಸ್ಥಿತಿಗೆ ಕಾರಣನಾದ ಇಂದ್ರನು ಓಷಧಿಗಳ ರಸದ ಪೋಷಣೆಗೂ ಕಾರಣನು. ಮತ್ತು ಇವೆರಡಕ್ಕೂ ಸಮಾನ ಶತ್ರುವಾದ ವೃತ್ರನನ್ನು ಕೊಂದುದ ರಿಂದ ಎರಡರ ವೃದ್ಧಿಗೂ ಸಹಾಯಕನಾದನು.

ಅಥ ದರ್ಭಸ್ತಂಭ ಮುಪದಧಾತಿ । ಏತದ್ವೈ ದೇವಾ ಓಷಧೀರುಪಾದಧತ ತಥೈವೈತದ್ಯಜಮಾನ ಓಷಧೀರುಪಧತ್ತೇ । ಜಾಯತ ಏಷ .... .... ಆಪಶ್ಚ ಹ್ಯೇತಾ ಓಷಧಯಶ್ಚ ಯಾ ವೈ ವೃತ್ರಾ- ದ್ಬೀಭತ್ಸಮಾನಾ ಆಪಃ .... .... ತೇನೌಷಧಯ ಉಭಯೇನೈವೈನಮೇತದನ್ನೇನ ಪ್ರೀಣಾತಿ ॥

(ಶ. ಬ್ರಾ. ೭-೨-೩ ರಿಂದ ೧-೩)

ಯಜ್ಞದಲ್ಲಿ ಯಜಮಾನನು ದರ್ಭೆಯನ್ನು ಪ್ರತಿಷ್ಠಾಪಿಸುವುದು ದೇವತೆಗಳು ಓಷಧ್ಯಾದಿಗಳನ್ನು ಪ್ರತಿಷ್ಠಾಪಿಸುವುದರ ಪ್ರತಿಬಿಂಬವು. ಈ ದರ್ಭವೇ ಯಜಮಾನನಿಂದ ಅಪೇಕ್ಷಿತವಾದ ಅನ್ನದ ಪ್ರತಿನಿಧಿಯು. ಅನ್ನದ ರಸಕ್ಕೆ ಕಾರಣವಾದ ಉದಕ ಮತ್ತು ಓಷಧಿಗಳು ಇವೆರಡರ ತತ್ತ್ವವೂ ಈ ದರ್ಭೆಯಲ್ಲಿ ಅಡಕವಾಗಿದೆ. ವೃತ್ರನಿಂದ ಭೀತವಾದ ಉದಕವು ಒಣಗಿದ ಭೂಮಿಯಲ್ಲಿ ಈ ದರ್ಭದ ರೂಪದಲ್ಲೂ, ಪೊದೆಗಳ ರೂಪದಲ್ಲೂ ಪ್ರಕಟಿತವಾಯಿತು ಆದುದರಿಂದ ಇದರಲ್ಲಿ ಉದಕತತ್ತ್ವವೂ ಓಷಧಿಗಳ ತತ್ತ್ವವೂ ಅಂತರ್ಗತವಾಗಿದೆ. ಇವೆರಡಕ್ಕೂ ಶತ್ರುರೂಪನಾದ ವೃತ್ರನನ್ನು ಸಂಹರಿಸಿ ದುದರಿಂದ ಇಂದ್ರನು ಉಪಕಾರಕನಾದನು. ಆದುದರಿಂದ ಅವನಿಗೆ ಓಷಧಿಗಳು ಜಾಮಿಗಳಾದವು ಎಂದರೆ ಬಂಧು ಗಳಾದವು ಎಂದು ಒಂದು ವಿಧವಾದ ತಾತ್ಪರ್ಯವನ್ನು ಹೇಳಬಹುದು.

**ಯುಷ್ಮಾ ಇಂದ್ರೋऽವೃಣೀತ ವೃತ್ರತೂರ್ಯ ಇತಿ** (ಶ. ಬ್ರಾ. ೧-೧-೩-೮) ಇಂದ್ರನು ವೃತ್ರನೊಡನೆ ಯುದ್ಧಮಾಡುವಾಗ ಉದಕಗಳ ಸಹಾಯದಿಂದ ಜಯವನ್ನು ಪಡೆದನು ಇತ್ಯಾದಿ ವರ್ಣನಗಳೆಲ್ಲವೂ ಸಹ ಇಂದ್ರನಿಗೂ ಅಪ್ಪಿಗೂ ಮತ್ತು ತತ್ಸಾರಭೂತವಾದ ಓಷಧಿಗಳಿಗೂ ಇರುವ ಜಾಮಿತ್ವವನ್ನು ತಿಳಿಸುತ್ತವೆ.

CC-0. Jangamwadi Math Collection. Digitized by eGangotri

ವೃಷ್ಟಿಸೇಚಕಶಕ್ತಿಯೂ, ಓಷಧ್ಯಾದಿಗಳ ಉತ್ಪನ್ನಶಕ್ತಿಯೂ ಇಂದ್ರನಲ್ಲಿ ಅಡಕವಾಗಿರುವುದರಿಂದ **ವೃಷ್ಣೇ** ಎಂಬ ವಿಶೇಷಣವು ಇಂದ್ರನಿಗೆ ಉಚಿತವಾಗಿದೆ. " **ಯಶ್ಛಂದಸಾಮೃಷಭೋ ವಿಶ್ವರೂಪಃ .... .... ಸಮೇಂದ್ರೋ ಮೇಧಯಾ ಸ್ಪೃಣೋತು** " (ತೈ. ಉ. ೧-೪) ಈ ಇಂದ್ರನೇ ತನ್ನ ಪ್ರಭುತ್ವಶಕ್ತಿಯಿಂದ ವಿಶ್ವರೂಪಾತ್ಮನಾಗಿದ್ದಾನೆ. ಇವನೇ ಋಷಭನು (ವೃಷಭನು) ಇತ್ಯಾದಿಯಾಗಿ ವರ್ಣಿತವಾಗಿದೆ. ವಿಶ್ವವೆಲ್ಲವೂ ಇಂತಹ ಪರಮಾತ್ಮಸ್ವರೂಪವನ್ನು ಪಡೆದ ಇಂದ್ರನಿಂದಲೇ ಸಾಧ್ಯವಾಗುವುದರಿಂದ ಓಷಧಿಗಳಿಗೂ ಅವುಗಳ ಪುಷ್ಪಫಲಾದಿಗಳಿಗೂ ಇವನೇ ಗರ್ಭಪ್ರಾಯನು. ಹೀಗೆ ಇಂದ್ರಪರವಾದ ಅರ್ಥವೂ ಸಹಜವಾಗಿದೆ

**ಜಾಮಯಃ** ಎಂಬುದಕ್ಕೆ ಆದಿತ್ಯರಶ್ಮಿಗಳ ಪರವಾಗಿಯೂ **ವೃಷ್ಣೇ** ಎಂಬುದು ಆದಿತ್ಯನಿಗೆ ವಿಶೇಷಣವೆಂದೂ ಅರ್ಥಮಾಡಿದರೆ ಆಗ ಯಾವ ರೀತಿ ಸಾಮಂಜಸ್ಯವಿದೆಯೆಂಬುದನ್ನು ಪರಿಶೀಲಿಸಬೇಕು. " **ಯದ್ವಾ ಜಾಮಯಃ । ಜಮಂತಿ ಸರ್ವತ್ರ ಪ್ರಸರಂತೀತಿ ಜಾಮಯಃ ಸೂರ್ಯದೀಪ್ತಯಃ । ವೃಷ್ಣೇಽಪಾಂ ವರ್ಷಕಾಯ । ಸ್ವರಶ್ಮಿಭಿರ್ಭೌಮಾನ್ ರಸಾನಾದಾಯ ಪುನರ್ವರ್ಷತೀತಿ ವರ್ಷಕಃ ಸೂರ್ಯಃ** " ಗತ್ಯರ್ಥಕವಾದ ಜಮ್ ಧಾತುವಿನಿಂದ ನಿಷ್ಪನ್ನವಾದ **ಜಾಮಿ** ಶಬ್ದಕ್ಕೆ ಸರ್ವತ್ರ ಪ್ರಸರಿಸವುದೆಂದರ್ಥ. ಸಕಲ ಪ್ರದೇಶಗಳಿಗೂ ಪ್ರಸರಿಸುವ ಆದಿತ್ಯರಶ್ಮಿಗಳು ಇಲ್ಲಿ ಜಾಮಿಃಶಬ್ದವಾಚ್ಯವು. ತನ್ನ ರಶ್ಮಿಗಳಿಂದ ಉದಕವನ್ನು ಹೀರಿ ಪುನಃ ಪೃಥ್ವಿಯಮೇಲೆ ವೃಷ್ಟ್ಯುದಕವನ್ನು ಸುರಿಸುವುದರಿಂದ ಆದಿತ್ಯನು **ವೃಷ್ಣೇ** ಎಂಬ ವಿಶೇಷಣದಿಂದ ನಿರ್ದಿಷ್ಟನಾಗಿದ್ದಾನೆ. ಅದೂ ಅಲ್ಲದೆ ಜಾಮಿ ಶಬ್ದಕ್ಕೆ ಬಂಧುವೆಂದರ್ಥಮಾಡಿದರೂ ಸಹ ಆದಿತ್ಯನಿಗೂ ಆದಿತ್ಯರಶ್ಮಿಗೂ ಬಂಧುತ್ವವಾವುದೆಂಬ ಪ್ರಶ್ನೆಗೆ ಅವಕಾಶವಿಲ್ಲ ಅವಯವಾವಯವಿಸಂಬಂಧವೇ ಇಲ್ಲಿ ಜಾಮಿಶಬ್ದ ಸೂಚಕವಾಗಿದೆ.

ಗತ್ಯರ್ಥಕವಾದ **ಜಮ್** ಧಾತುವಿನಿಂದ ನಿಷ್ಪನ್ನವಾದ ಜಾಮಿಶಬ್ದಕ್ಕೆ ಸೂರ್ಯರಶ್ಮಿಗಳು ಎಂದರ್ಥಮಾಡುವುದಾದರೆ ಅವುಗಳ ವಿಶ್ವಪ್ರಸರಣದ ಸ್ವಭಾವವನ್ನು ತಿಳಿಸಿದಂತಾಗುತ್ತದೆ ಹಿಂದೆ ೧-೧೫೭-೨ನೇ ಋಕ್ಕನ್ನು ವಿವರಿಸುವಾಗ "**ವರ್ಷಿಷ್ಠಮುಪ ಗಾವ ಆಗುಃ**" ಎಂಬ ವಾಕ್ಯದ ತಾತ್ಪರ್ಯವನ್ನು ಹೇಳುವ ಕಾಲದಲ್ಲಿ ಆದಿತ್ಯರಶ್ಮಿಗಳ ವಿಶ್ವಪ್ರಸರಣದ ಸ್ವರೂಪವನ್ನು ಶ್ರುತಿಯಲ್ಲಿ ವರ್ಣಿತವಾಗಿರುವಂತೆ ಉದಾಹರಣೆಗಳೊಂದಿಗೆ ತಿಳಿಸಿದೆ. ಪ್ರಕೃತದಲ್ಲಿ ಇದೇ ಆದಿತ್ಯರಶ್ಮಿಗಳಿಗೆ **ಧೇನವಃ** ಎಂಬ ವಿಶೇಷಣವಿರುತ್ತದೆ. ಇದು ಯಾವ ಸ್ವರೂಪವನ್ನು ತಿಳಿಸುತ್ತದೆಂದು ಪರಿಶೀಲಿಸಬೇಕು. **ಧೇನು** ಶಬ್ದವು ತೃಪ್ತಿದಾಯಕತ್ವವನ್ನೂ ಉಪಕಾರಕತ್ವವನ್ನೂ ತಿಳಿಸುತ್ತದೆ.

**ಧೇನುರ್ಧಯತೇರ್ವಾ, ಧಿನೋತೇರ್ವಾ, ಧಯತೇಽಸೌ ವತ್ಸೇನೇತಿ । ತರ್ಪಯತ್ಯಸೌ ಪಯಸಾ।** (ನಿ. ೧೧-೪೨) ಕ್ಷೀರವನ್ನು ಕೊಟ್ಟು ತೃಪ್ತಿಪಡಿಸುತ್ತದೆ ಎಂಬ ಮುಖ್ಯವಾದ ಅರ್ಥವೇ ಧೇನುವಿನ ಮುಖ್ಯಲಕ್ಷಣವನ್ನು ತಿಳಿಸುತ್ತದೆ. ಕೇವಲ ಪಶುವೇ ಅಲ್ಲದೇ, ಪಶುವು ತನ್ನ ಕ್ಷೀರದಿಂದ ತನ್ನ ವತ್ಸಕ್ಕೆ ಯಾವ ರೀತಿ ಸಂತೃಪ್ತಿಯನುಂಟುಮಾಡುವುದೋ ಅದೇ ರೀತಿ ತೃಪ್ತಿಕಾರಕವಾದ ಅನೇಕ ಸಂದರ್ಭಗಳಲ್ಲಿ **ಧೇನು** ರೂಪಕವಾದ ವರ್ಣನೆಯು ಋಕ್ಸಂಹಿತೆಯಲ್ಲಿರುತ್ತದೆ. ಉದಾಹರಣೆಗೆ **ಉಪಹ್ವಯೇ ಸುದಘಾಂ ಧೇನು** ಇತ್ಯಾದಿ ಮಂತ್ರಗಳಲ್ಲಿ ವೃಷ್ಟಿಯಿಂದ ಜಗತ್ತಿಗೆ ಸಂತೃಪ್ತಿಯನ್ನು ಕೊಡತಕ್ಕ ಮೇಘರೂಪವಾದ ಧೇನುವಿನ ವರ್ಣನೆಯಿದೆ (೧-೧೬೪-೨೬) ಮೇಘರೂಪವಾದ ಈ ಧೇನುವನ್ನು ಕರೆಯುತಕ್ಕವನು ಆದಿತ್ಯನು. ಆದುದರಿಂದಲೇ ಅವನು **ವೃಷನು.** ಆದಿತ್ಯರಶ್ಮಿಗಳಾಗಲಿ, ಕಾಂತಿಯುತವಾದ ಉಷಸ್ಸಾಗಲಿ ವರ್ಣಿತವಾಗಿರುವ ವೇಳೆಗಳಲ್ಲೆಲ್ಲಾ **ಧೇನು**ಪರ್ಯಾಯವಾದ ವಿಶೇಷಣವಿದ್ದೇ ಇರುತ್ತದೆ. ಉಷಸ್ಸೂ, ಆದಿತ್ಯರಶ್ಮಿಗಳೂ ಲೋಕಕ್ಕೆ ಆನಂದದಾಯಕವಾಗಿರುತ್ತವೆ, ಎಂಬುದು ಲೋಕಾನುಭವದ

CC-0. Jangamwadi Math Collection. Digitized by eGangotri

ವಿಷಯವಾದರೂ ಸಹ ಋಕ್ಸಂಹಿತೆಯ ಕರ್ತೃಗಳಾದ ಋಷಿಗಳ ದೃಷ್ಟಿಯಲ್ಲಿ ಈ ಧೇನುವೆಂಬ ತತ್ತ್ವವು ಒಂದು ಪೂಜ್ಯ ವಾದ ಸ್ಥಾನವನ್ನಾಕ್ರಮಿಸಿರುತ್ತದೆ. ಆದುದರಿಂದ ಈ ವಿಧವಾದ ವರ್ಣನವು ಅತಿ ಬಹಳವಾಗಿರುತ್ತದೆ. ಅವುಗಳಲ್ಲಿ ಕೆಲವು ಉದಾಹರಣೆಗಳನ್ನು ಮಾತ್ರ ಪರಿಶೀಲಿಸಿದರೆ ಆಗ ಈ ರೂಪಕದಲ್ಲಿರುವ ಔಚಿತ್ಯವು ತಿಳಿಯುತ್ತದೆ.

ಅಬೋಧ್ಯಗ್ನಿಃ ಸಮಿಧಾ ಜನಾನಾಂ ಪ್ರತಿ ಧೇನುಮಿವಾಯತೀಮುಷಾಸಂ ।
ಯಹ್ವಾ ಇವ ಪ್ರ ವಯಾಮುಜ್ಜಿಹಾನಾಃ ಪ್ರ ಭಾನವಃ ಸಿಸ್ರತೇ ನಾಕಮಚ್ಛ ॥

(ಋ. ಸಂ. ೫-೧-೧)

ವಿಶ್ವಕ್ಕೆಲ್ಲಾ ಆಹ್ಲಾದಕಾರಿಣಿಯಾದ ಉಷಸ್ಸು ಅಂತರಿಕ್ಷದಲ್ಲಿ ಆವಿರ್ಭೂತಳಾಗಿ ಪ್ರಭೂತವಾದ ಕ್ಷೀರವಾಯಿಯಾದ ಧೇನುವಿನಂತೆ ಬರುತ್ತಿದ್ದಾಳೆ. ವತ್ಸರೂಪಿಗಳಾದ ಅಗ್ನಿಜ್ವಾಲೆಗಳು ಪಕ್ಷಿಗಳು ಮೇಲಕ್ಕೆ ಹಾರಿ ಕೊಂಬೆಯನ್ನು ಆಶ್ರಯಿಸುವಂತೆ ಅಗ್ನಿಯಿಂದ ಊರ್ಧ್ವಮುಖವಾಗಿ ಪ್ರಸರಿಸಿ ಉಷಸ್ಸಿನ ಅಭಿಮುಖವಾಗಿ ಓಡುತ್ತವೆ ಎಂಬುದ ರಲ್ಲಿರುವ ವರ್ಣನೆಯು ಅದ್ಭುತವಾದುದು.

ಏತಾ ಧಿಯಂ ಕೃಣವಾಮಾ ಸಖಾಯೋಽಪ ಯಾ ಮಾತಾ೩ ಋಣುತ ವ್ರಜಂ ಗೋಃ ।

(ಋ. ಸಂ. ೫-೪೫-೬)

ಇತ್ಯಾದಿ ಸ್ಥಳಗಳಲ್ಲಿ ಆದಿತ್ಯರಶ್ಮಿಗಳಿಗೆ ಉಷಸ್ಸು ಮಾತೃಪ್ರಾಯವೆಂದು ತಿಳಿಸಿದೆ.

ಆ ಧೇನವೋ ಧುನಯಂತಾಮಶಿಶ್ವೀಃ ಸಬರ್ದುಘಾಃ ಶಶಯಾ ಅಪ್ರದುಗ್ಧಾಃ ।
ನವ್ಯಾನವ್ಯಾ ಯುವತಯೋ ಭವಂತೀರ್ಮಹದ್ದೇವಾನಾಮಸುರತ್ವಮೇಕಂ ॥

(ಋ ಸಂ. ೩-೫೫-೧೬)

ಜಗತ್ತಿಗೆ ಪ್ರೀತಿದಾಯಕರಾದ ಮತ್ತು ಮೇಘರೂಪಗಳಾದ ಧೇನುಗಳು ವತ್ಸರಹಿತರಾಗಿದ್ದರೂ ಸಹ ಪೃಥ್ವಿಗೆ ಅಭಿ ಮುಖರಾಗಿ ಬಂದು ವೃಷ್ಟಿರೂಪವಾದ ಅಮೃತವನ್ನು ಸುರಿಯುತ್ತಾರೆ. ಇತ್ಯಾದಿಯಾಗಿ ಮೇಘವನ್ನು ವರ್ಣಿಸು ವಾಗಾಗಲಿ, ಆದಿತ್ಯರಶ್ಮಿಗಳನ್ನು ವರ್ಣಿಸುವಾಗಾಗಲಿ ಅವುಗಳು ತೃಪ್ತಿಸಾಧನವಾದ ವೃಷ್ಟಿಕಾರಕಗಳಾದುದರಿಂದ ಧೇನುರೂಪಕವಿರುತ್ತದೆ. ಈ ರೂಪಕಗಳಿರುವೆಡೆಗಳಲ್ಲಿ ತಾತ್ಪರ್ಯವಿಶೇಷವೂ ಗಮನಾರ್ಹವಾದುದು, ಎಲ್ಲಾ ಕಡೆಗಳಲ್ಲೂ ಒಂದೇ ವಿಧವಾದ ಭಾವವು ಪುನರುಕ್ತವಾಗಿಲ್ಲ. ಪದೇ ಪದೇ ಭಾವವೈವಿಧ್ಯದ ಪ್ರಕಾಶವು ಸನ್ನಿವೇಶದ ವರ್ಣನೆಯನ್ನು ಅಲಂಕೃತವನ್ನಾಗಿ ಮಾಡುತ್ತದೆ.

ತ್ರಿರಸ್ಮೈ ಸಪ್ತ ಧೇನವೋ ದುದುಹ್ರೇ ಸತ್ಯಾಮಾಶಿರಂ ಪೂರ್ವ್ಯೇ ವ್ಯೋಮನಿ ।
ಚತ್ವಾರ್ಯನ್ಯಾ ಭುವನಾನಿ ನಿರ್ಣಿಜೇ ಚಾರೂಣಿ ಚಕ್ರೇ ಯದೃತೈರವರ್ಧತ ॥

(ಋ. ಸಂ. ೯-೭೦-೧)

ಇತ್ಯಾದಿಸ್ಥಳಗಳಲ್ಲಿ ದೇನುರೂಪಕವು ಬಹಳ ಗಭೀರವಾದ ಅರ್ಥವನ್ನು ಕೊಡುತ್ತದೆ. ಇಂತಹ ಸನ್ನಿವೇಶಗಳು ಅತ್ಯಧಿಕವಾಗಿರುವುದರಿಂದ ಆಯಾಸಂದರ್ಭಗಳಲ್ಲಿ ಇಂತಹ ರೂಪಕಗಳ ಸ್ವಾರಸ್ಯವನ್ನು ವಿವರಿಸಲಾಗುತ್ತದೆ. ಪ್ರಕೃತವಲ್ಲಿ ಧೇನವಃ ಎಂಬುದು ಜಾಮಯಃ ಎಂಬುದಕ್ಕೆ ಪರ್ಯಾಯಪದವಾಗಿ ಆದಿತ್ಯರಶ್ಮಿತತ್ತ್ವದ ದ್ಯೋತಕ ವಾಗಿರುತ್ತದೆ ಲೋಕಕ್ಕೆ ಆಹ್ಲಾದಕಾರಕವೆಂದು ತಾತ್ಪರ್ಯ.

CC-0. Jangamwadi Math Collection. Digitized by eGangotri

**ಜಾನತೇ ಗರ್ಭಮಸ್ಮಿನ್**— ಇಂದ್ರನ ಪರವಾದ ಅರ್ಥಮಾಡಿದರೆ ಗರ್ಭವು ಓಷಧಿಗಳ ಪುಷ್ಪಫಲಗಳನ್ನು ಒಳಗೊಂಡಿರುವುದು ಎಂದು ತಾತ್ಪರ್ಯ. ಆದಿತ್ಯನ ಪರವಾಗಿ ಅರ್ಥಮಾಡಿದರೆ ಆಗ ಇನ್ನೂ ವಿಸ್ತೃತವಾದ ತಾತ್ಪರ್ಯವನ್ನು ಹೇಳಬೇಕಾಗುತ್ತದೆ. ಆದಿತ್ಯನಲ್ಲಿ ಇಂದ್ರ, ಅಗ್ನಿ ಮುಂತಾದ ಎಲ್ಲಾ ದೇವತೆಗಳೂ ಐಕ್ಯವಾಗಿರುವುದರಿಂದ ಅಥವಾ ಅವರೆಲ್ಲರೂ ಆದಿತ್ಯನ ವಿಭೂತಿವಿಶೇಷಗಳೇ ಆಗಿರುವುದರಿಂದ ಈ ದೇವತೆಗಳಲ್ಲಿ ವೈಯಕ್ತಿಕವಾಗಿ ಯಾವ ಯಾವ ಗರ್ಭಶಕ್ತಿಗಳಡಗಿವೆಯೋ ಅವೆಲ್ಲವೂ ಆದಿತ್ಯಾಂತರ್ಗತವಾಗಿರುವುವೆಂದು ಹೇಳಬೇಕು.

ವೈದ್ಯುತಾಗ್ನಿಯ ವರ್ಣನೆಯಿರುವಾಗಲೂ, ಆದಿತ್ಯನ ವರ್ಣನೆಯಿರುವಾಗಲೂ ಗರ್ಭಪದವಾಚ್ಯತ್ವವು ಸಾಧಾರಣವಾಗಿದ್ದೇ ಇರುತ್ತದೆ. ಅಥವಾ ಅಗ್ನಿ, ಸೂರ್ಯ, ವಿಷ್ಣು, ಆದಿತ್ಯ, ಗರ್ಭ ಇವು ತಾದಾತ್ಮ್ಯದ್ಯೋತಕವಾದ ಪದಗಳೆಂದರೆ ತಪ್ಪಾಗಲಾರದು. ಅಪಾಂ ಗರ್ಭ ಎಂಬುದು ಅಗ್ನಿಗೆ ಯಾವರೀತಿ ಪರ್ಯಾಯಪದವಾಗಿರುವುದೋ ಅದೇ ರೀತಿ ಆದಿತ್ಯನಿಗೂ ಪರ್ಯಾಯಪದವಾಗಿರುತ್ತದೆ ಜಗತ್ತೇ ಇವರ ಗರ್ಭದಲ್ಲಿ ಅಡಕವಾಗಿರುತ್ತೆಂದೂ ಹೇಳಬಹುದು. ವಿಷ್ಣು, ಅಗ್ನಿ, ಆದಿತ್ಯ ಇವರನ್ನು ಸ್ತುತಿಸುವಾಗ ಇವರು ಯಾವ ರೀತಿ ಗರ್ಭಪರ್ಯಾಯವಾಚ್ಯರು ಎಂಬುದಕ್ಕೆ ಕೆಲವು ಉದಾಹರಣೆಗಳನ್ನು ಮಾತ್ರ ಪರಿಶೀಲಿಸಬಹುದು. ಒಂದೊಂದು ಕಡೆ ಅಗ್ನಿಯೇ ಸಕಲ ವಸ್ತುಗಳ ಗರ್ಭದಲ್ಲಿ ಅಡಗಿರುವವನೆಂದೂ ಇನ್ನು ಕೆಲವೆಡೆ ಅಗ್ನಿಯ ಗರ್ಭದಲ್ಲೇ ಸಮಸ್ತಲೋಕವೂ ಅಡಗಿರುವುದೆಂದೂ ವರ್ಣಿತವಾಗಿದೆ. ಅಗ್ನಿಪರವಾಗಿ,

ಬಭ್ರೋ ನಾಂ ಗರ್ಭೋ ಅಪಸಾಮುಪಸ್ಥಾನ್ಮಹಾನ್ಕವಿರ್ನಿಶ್ಚರತಿ ಸ್ವಧಾವಾನ್ ।

(ಋ. ಸಂ. ೧-೯೫-೪)

ಗರ್ಭೋ ಯೋ ಅಪಾಂ ಗರ್ಭೋ ವನಾನಾಂ ಗರ್ಭಶ್ಚ ಸ್ಥಾತಾಂ ಗರ್ಭಶ್ಚರಥಾಂ ।

(ಋ. ಸಂ. ೧-೭೦-೩)

ಅಗ್ನಿಯು ಸಕಲ ವಸ್ತುಗಳಲ್ಲಿಯೂ ಗರ್ಭರೂಪದಲ್ಲಡಗಿರುವನೆಂದೂ ಇವನ ಸ್ವರೂಪವನ್ನು ತಿಳಿಯಲು ಸಾಮಾನ್ಯವಾದ ಪ್ರಯತ್ನಕ್ಕೆ ಸಾಧ್ಯವಿಲ್ಲವೆಂದೂ ತಿಳಿಸಿದೆ. ಅಲ್ಲದೇ, ಈ ಅಗ್ನಿಯು ಮೇಘದ ಉದಕಗಳಲ್ಲಿ ಮಿಂಚಿನ ರೂಪದಿಂದ ಪುತ್ರನಂತಿದ್ದು ಅನಂತರ ಯಜ್ಞದ ಹವಿಸ್ಸನ್ನು ಸ್ವೀಕರಿಸಿ ತನ್ನ ಜನನಿಗಳಾದ ವೃಷ್ಟ್ಯುದಕಗಳನ್ನು ಉತ್ಪನ್ನವಾಗುವಂತೆ ಮಾಡುತ್ತಾನೆ. ಮತ್ತು ಮಿಂಚಿನ ರೂಪದಲ್ಲಿ ಮೇಘೋದಕಗಳ ಮಧ್ಯೆ ಅಂತರ್ಹಿತನಾಗಿ ಸಮುದ್ರಮಧ್ಯದಿಂದ ಔರ್ವಸಾಗ್ನಿರೂಪದಲ್ಲಿ ಹೊರಹೊರಡುತ್ತಾನೆ. ಇದೇ ಅಗ್ನಿಯು ಅಪ್ಪುಗಳ ಗರ್ಭವು; ಓಷಧಿಗಳ ಗರ್ಭವು ಅಥವಾ ಅಪ್ಪುಗಳೂ, ಓಷಧಿಗಳೂ ಇವನ ಗರ್ಭವು ಇತ್ಯಾದಿಯಾಗಿ ವರ್ಣನವಿದೆ. ವಿಷ್ಣುವಿನ ಪರವಾಗಿ-

ತಮು ಸ್ತೋತಾರಃ ಪೂರ್ವ್ಯಂ ಯಥಾ ವಿದ ಋತಸ್ಯ ಗರ್ಭಂ ಜನುಷಾ ಪಿಪರ್ತನ ।

(ಋ. ಸಂ. ೧-೧೫೬-೩)

ವಿಷ್ಣುವು ಅನಾದಿಸಂಸಿದ್ಧನು. ಯಜ್ಞಕ್ಕೆ ಗರ್ಭಭೂತನು. ಯಜ್ಞಾತ್ಮನಾಗಿ ಉತ್ಪನ್ನನಾದವನು. ಅಥವಾ ಉದಕಕ್ಕೆ ಗರ್ಭಭೂತನು. ಉದಕವೇ ಸೃಷ್ಟಿಗೆ ಆದಿಯಾಗಿದ್ದುದರಿಂದಲೂ, ಹಿರಣ್ಯಗರ್ಭ ರೂಪಿಯಾದ ವಿಷ್ಣುವು ಇದಕ್ಕೆ ಆಧಾರವಾಗಿದ್ದುದರಿಂದಲೂ ಈ ವಿಶೇಷಣವಿದೆ. ಆದಿತ್ಯನ ಪರವಾಗಿ,

ಉತ್ತಾನಯೋಶ್ಚಮ್ವೋ೩ರ್ಯೋನಿರಂತರತ್ರಾ ಪಿತಾ ದುಹಿತುರ್ಗರ್ಭಮಾಧಾತ್ ।

(ಋ. ಸಂ. ೧-೧೬೪-೩೩)

CC-0. Jangamwadi Math Collection. Digitized by eGangotri

ಊರ್ಧ್ವಮುಖವಾಗಿ ವಿಸ್ತೃತವಾದವೂ, ಚಮೂಪಾತ್ರೆಯಂತೆ ಭೋಗಸಾಧನಗಳಾದವೂ ಆದ ಈ ದ್ಯಾವಾಪೃಥಿವಿಗಳ ಮಧ್ಯಭಾಗದಲ್ಲಿ ಸಕಲ ಭೂತಗಳಿಗೂ ನಿವಾಸಸ್ಥಾನವಾದ ಅಂತರಿಕ್ಷದಲ್ಲಿ ಆದಿತ್ಯನು ತನ್ನ ದುಹಿತೃವಾದ ಪೃಥ್ವಿಯ ಗರ್ಭರೂಪವಾದ ಉದಕವನ್ನು ತನ್ನಗರ್ಭದಲ್ಲಿ ಧರಿಸಿದ್ದಾನೆ.

**ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಪಾಂ ಗರ್ಭಂ ದರ್ಶತಮೋಷಧೀನಾಂ |**

(ಋ. ಸಂ. ೧-೧೬೪-೫೨)

ಆದಿತ್ಯನು ದ್ಯುಲೋಕಸ್ಥನು. ಶ್ರೇಷ್ಠವಾದ ಪತನಸಾಧನವುಳ್ಳವನು. ಗಮನಶೀಲನು. ಉದಕಗಳಿಗೆ ಗರ್ಭಭೂತನು. ಓಷಧಿಗಳಿಗೆ ಗರ್ಭಭೂತನು ಇತ್ಯಾದಿಯಾಗಿ ಈ ದೇವತೆಗಳು ಗರ್ಭಪದವಾಚ್ಯರಾಗಿದ್ದಾರೆ. ಅಲ್ಲದೇ, ಅಗ್ನಿ, ವಿಷ್ಣು, ಆದಿತ್ಯ ಎಂಬ ಹೆಸರುಗಳು ಒಂದೇ ತತ್ತ್ವದ ಬೇರೆ ಬೇರೆ ಸ್ವರೂಪಗಳನ್ನು ತಿಳಿಸುವ ಪದಗಳಲ್ಲದೇ ಭಿನ್ನದೇವತೆಗಳನ್ನು ತಿಳಿಸುವುದಿಲ್ಲ ಎಂಬ ವಿಷಯವನ್ನು ಅನೇಕ ಸಂದರ್ಭಗಳಲ್ಲಿ ವಿವರಿಸಿದೆ.

"ಅಪಾಂ ಗರ್ಭಃ" "ಅಸುರ ಗರ್ಭಃ" (ಋ. ಸಂ. ೩-೨೯-೧೧) ಇತ್ಯಾದಿಯಾಗಿ ಯಾವ ಅಗ್ನಿಯ ವರ್ಣನೆಯಿದೆಯೋ ಅದೇವರ್ಣನೆಯು ಆದಿತ್ಯನ ಪರವಾಗಿಯೂ ಇರುತ್ತದೆ. ಆದಿತ್ಯನನ್ನು ಯಾವ ರೀತಿ ದ್ಯಾವಾಪೃಥಿವಿಗಳಿಗೂ ಗರ್ಭರೂಪನೆಂದು ಕರೆದಿದೆಯೋ ಅದೇರೀತಿ ಅಗ್ನಿಯನ್ನು "**ರೋದಸ್ಯೋಃ ಗರ್ಭಂ**" ಎಂದು ಕರೆದಿದೆ ( ಋ ಸಂ. ೧೦-೧-೨ ) ಅದೇ ಅಗ್ನಿಯನ್ನೇ ಮೇಲೆ ಉದಾಹೃತವಾಗಿರುವ ೧-೧೬೪-೫೨ನೇ ಋಕ್ಕಿನಲ್ಲಿ **ದಿವ್ಯಂ ಸುಪರ್ಣಂ** ಎಂದು ನಿರ್ದೇಶಿಸಿ ಆದಿತ್ಯಾತ್ಮಕವಾದ ಸ್ವರೂಪವನ್ನು ತೋರಿಸುವ ವರ್ಣನೆಯಿದೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ **ಗರ್ಭಂ** ಎಂಬ ಪದಕ್ಕೆ ಆದಿತ್ಯಪರವಾದ ಅರ್ಥವನ್ನು ಹೇಳಿದರೆ ಆಗ **ಹಿರಣ್ಯಗರ್ಭನ** ರೂಪದಲ್ಲಿದ್ದ ವಿಶ್ವವನ್ನೆಲ್ಲಾ ತನ್ನ ಗರ್ಭದಲ್ಲೇ ಧರಿಸಿದ್ದ ಆದಿತ್ಯನನ್ನು ಜಾಮಿಗಳಾದ ರಶ್ಮಿಗಳು ಅರಿತವು ಎಂದರೆ ಅವನ ವಿಶ್ವವ್ಯಾಪಕತ್ವವನ್ನು ತಿಳಿದವು ಎಂದು ತಾತ್ಪರ್ಯ. ಈತನ ವಿಶ್ವವ್ಯಾಪಕತ್ವವನ್ನು ತಿಳಿಸಲು ತಾನೇ ವಿಶ್ವಗರ್ಭದಲ್ಲಿ ಅಡಗಿರುವವನು ಎಂದೂ ಹೇಳಬಹುದು. ಅಥವಾ ತನ್ನ ಗರ್ಭದಲ್ಲೇ ವಿಶ್ವವನ್ನೆಲ್ಲಾ ಅಡಗಿಸಿಕೊಂಡಿದ್ದಾನೆ ಎಂದೂ ಹೇಳಬಹುದು. **ಅಬ್ರೂಪಗರ್ಭಾಧಾನಸಾಮರ್ಥ್ಯಂ ವಹಂತಿ** ಎಂಬುದಾಗಿ ಸಾಯಣರು ಆದಿತ್ಯಪರವಾದ ತಾತ್ಪರವನ್ನು ಹೇಳಿದ್ದಾರೆ.

**ಮುಹುಃ ವಪೂಂಷಿ ಬಿಭ್ರತಂ**—ನಾನಾರೂಪವಾದ ಶರೀರರೂಪಗಳನ್ನು ಧರಿಸಿರುವ ಗರ್ಭರೂಪನನ್ನು ತಿಳಿಯುತ್ತಾರೆ, ಎಂದಿರುವಾಗ **ಜಾಮಯಃ** ಎಂಬುದಕ್ಕೆ ಓಷಧಿಗಳ ಪರವಾದ ಅರ್ಥವನ್ನು ಹೇಳಿದರೆ ಆಗ ವ್ರೀಹಿ, ಯವ, ನೀವಾರ ಇತ್ಯಾದ್ಯನೇಕವಿಧವಾದ ರೂಪಗಳೆಂದರ್ಥ. ಆದಿತ್ಯರಶ್ಮಿಯ ಪರವಾಗಿ ಅರ್ಥವನ್ನು ಹೇಳಿದರೆ ಆಗ—**ಕಾಳೀ ಕರಾಳೀ ಚ ಮನೋಜವಾ ಚ ಸುಲೋಹಿತಾ ಯಾ ಚ ಸುಧೂಮ್ರವರ್ಣಾ | ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ ಲೇಲಾಯಮಾನಾ ಇತಿ ಸಪ್ತಜಿಹ್ವಾಃ** (ಮು. ಉ. ೧-೨-೪) ಇತ್ಯಾದಿ ವಾಕ್ಯಗಳಲ್ಲಿ ಯಾವ ಪರಬ್ರಹ್ಮರೂಪಿಯಾದ ಅಗ್ನಿಜ್ವಾಲೆಗಳು ವರ್ಣಿತವಾಗಿವೆಯೋ ಅದೇ ರೀತಿ ಆದಿತ್ಯರಶ್ಮಿಗಳ ನಾನಾಸ್ವರೂಪ ಗಳೆಂದರಿಯಬೇಕು.

**ಅಮೀ ಯೇ ಸಪ್ತ ರಶ್ಮಯಸ್ತತ್ರಾ ಮೇ ನಾಭಿರಾತತಾ |**

(ಋ. ಸಂ. ೧-೧೦೫-೯)

ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿರುವ ಆದಿತ್ಯರಶ್ಮಿಗಳ ನಾನಾರೂಪತ್ವವನ್ನು ಹಿಂದೆ ವಿವರಿಸಿದೆ.

———:0:———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಚ್ಛಾ ವಿವಕ್ಮಿ ರೋದಸೀ ಸುಮೇಕೇ ಗ್ರಾವ್ಣೋ ಯುಜಾನೋ ಅಧ್ವರೇ
ಮನೀಷಾ ।
ಇಮಾ ಉ ತೇ ಮನವೇ ಭೂರಿವಾರಾ ಊರ್ಧ್ವಾ ಭವಂತಿ ದರ್ಶತಾ
ಯಜತ್ರಾಃ ॥ ೪ ॥

ಪದಪಾಠಃ

ಅಚ್ಛ । ವಿವಕ್ಮಿ । ರೋದಸೀ ಇತಿ । ಸುಮೇಕೇ ಇತಿ ಸುऽಮೇಕೇ । ಗ್ರಾವ್ಣಃ । ಯುಜಾನಃ । ಅಧ್ವರೇ ।
ಮನೀಷಾ ।
ಇಮಾಃ । ಊಂ ಇತಿ । ತೇ । ಮನವೇ । ಭೂರಿऽವಾರಾಃ । ಊರ್ಧ್ವಾಃ । ಭವಂತಿ । ದರ್ಶತಾಃ ।
ಯಜತ್ರಾಃ ॥ ೪ ॥

ಸಾಯಣಭಾಷ್ಯಂ

ಅಧ್ವರೇ ಯಜ್ಞೇ ಗ್ರಾವ್ಣಃ ಸೋಮಾಭಿಷವಾರ್ಥಮುಪಲಾನ್ ಯುಜಾನಃ ಪ್ರಯುಂಜಾನೋಽಹಂ ಸುಮೇಕೇ ಸುರೂಪೇ ರೋದಸೀ ದ್ಯಾವಾಪೃಥಿವ್ಯೌ ಮನೀಷಾ ಮನಸ ಈಷಯಾ ಸ್ತುತಿಲಕ್ಷಣಯಾ ವಾಚಾಚ್ಛ ವಿವಕ್ಮಿ । ಆಭಿಮುಖ್ಯೇನ ಸ್ತೌಮಿ । ಹೇ ಅಗ್ನೇ ತೇ ತವ ಭೂರಿವಾರಾ ಯಜಮಾನೈರ್ಬಹುವಾರಂ ವರಣೀಯಾ ದರ್ಶತಾಃ ಕಮನೀಯತಯಾ ದರ್ಶನೀಯಾ ಯಜತ್ರಾಃ ಪೂಜ್ಯಾ ಇಮಾ ದೀಪ್ತಯೋ ಮನವೇ ಮನುಷ್ಯವ್ಯವಹಾರಾರ್ಥಮೂರ್ಧ್ವಾ ಊರ್ಧ್ವಮುಖಾ ಭವಂತಿ ॥ ವಿವಕ್ಮಿ । ವಚ ಪರಿಭಾಷಣೇ । ಲಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ಅರ್ತಿಪಿಪರ್ತ್ಯೋಶ್ಚ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಚಕಾರಸ್ಯ ಕುತ್ವಂ ವ್ಯತ್ಯಯೇನ । ಯುಜಾನಃ । ಯುಜಿಬುಧಿದೃಶಃ ಕಿಚ್ಚೇತ್ಯಾನಚ್ । ಕಿತ್ತ್ವಾದಗುಣಃ । ಚಿತ್ತ್ವಾದಂತೋದಾತ್ತಃ । ಮನೀಷಾ । ಸುಪೋ ಡಾದೇಶಃ ॥

ಪ್ರತಿಪದಾರ್ಥ

ಅಧ್ವರೇ—ಯಜ್ಞದಲ್ಲಿ । ಗ್ರಾವ್ಣಃ—ಸೋಮವನ್ನು ಹಿಂಡುವ ಕಲ್ಲುಗಳನ್ನು । ಯುಜಾನಃ—ಅಭಿಷವಕ್ಕಾಗಿ ಹಿಡಿದಿರುವ ನಾನು । ಸುಮೇಕೇ—ಶ್ರೇಷ್ಠವಾದ ರೂಪವುಳ್ಳ । ರೋದಸೀ—ದ್ಯಾವಾಪೃಥಿವಿಗಳನ್ನು । ಮನೀಷಾ—ಸ್ತುತಿರೂಪವಾದ ವಾಕ್ಕಿನಿಂದ । ಅಚ್ಛ ವಿವಕ್ಮಿ—ಅವರ ಅಭಿಮುಖವಾಗಿ ನಿಂತು ಪಠಿಸುತ್ತೇನೆ (ಎಲೈ ಅಗ್ನಿಯೇ) । ಭೂರಿವಾರಾಃ—ಯಜಮಾನರಿಂದ ಬಹುವಾಗಿ ಅಪೇಕ್ಷಿತವಾದವೂ । ದರ್ಶತಾಃ—ಆಕರ್ಷಕವಾದ ರೂಪವುಳ್ಳವೂ । ಯಜತ್ರಾಃ—ಪೂಜ್ಯವಾದವೂ ಆದ । ತೇ ಇಮಾಃ—ನಿನ್ನ ಈ ಪ್ರಭೆಗಳು । ಮನವೇ—ಮಾನವರ ವ್ಯವಹಾರಾರ್ಥವಾಗಿ । ಊರ್ಧ್ವಾಃ—ಊರ್ಧ್ವಾಭಿಮುಖಿಗಳಾಗಿ । ಭವಂತಿ—ಪ್ರಸರಿಸುತ್ತವೆ

CC-0. Jangamwadi Math Collection. Digitized by eGangotri

ಭಾವಾರ್ಥ

ಯಜ್ಞದಲ್ಲಿ ಸೋಮರಸವನ್ನು ಜಜ್ಜಿ ಹಿಂಡುವುದಕ್ಕಾಗಿ ಕಲ್ಲುಗಳನ್ನು ಹಿಡಿದು ಸಿದ್ಧನಾಗಿರುವ ನಾನು ಶ್ರೇಷ್ಠ ವಾದ ರಸವುಳ್ಳ ದ್ಯಾವಾಪೃಥಿವಿಗಳನ್ನು ಸ್ತುತಿರೂಪವಾದ ವಾಕ್ಕಿನಿಂದ ಅವರ ಅಭಿಮುಖವಾಗಿ ನಿಂತು ಪಠಿಸುತ್ತೇನೆ. ಎಲೈ ಅಗ್ನಿಯೇ, ಯಜಮಾನರಿಂದ ಅಪೇಕ್ಷಿತವಾದವೂ, ಆಕರ್ಷಕವಾದ ರೂಪವುಳ್ಳವೂ, ಪೂಜ್ಯವಾದವೂ ಆದ ನಿನ್ನ ಈ ಪ್ರಭೆಗಳು ಮಾನವರ ವ್ಯವಹಾರಾರ್ಥವಾಗಿ ಊರ್ಧ್ವಾಭಿಮುಖವಾಗಿ ಪ್ರಸರಿಸುತ್ತವೆ.

English Translation

I glorify with praise the beautiful heaven and earth, taking in hand the stones (to express the libation) at the sacrifice, as these your graceful, adorable, and many-blessing rays (Agni) mount up for the good of man.

ವಿಶೇಷವಿಷಯಗಳು

**ಅಧ್ವರೇ— ಧ್ವರತಿಃ ಹಿಂಸಾಕರ್ಮಾ** (ನಿ. ೧-೮) ಹಿಂಸೆಯನ್ನುಂಟುಮಾಡು ಎಂಬರ್ಥವನ್ನು ಕೊಡುವ **ಧ್ವೃ** ಧಾತುವಿನಿಂದ ನಿಷ್ಪನ್ನವಾಗಿದೆ. **ಅಧ್ವರೇ** ಎಂದರೆ ಹಿಂಸಾರಹಿತವಾದ ಯಜ್ಞದಲ್ಲಿ ಎಂದರ್ಥ.

**ಗ್ರಾವ್ಣಃ— ಸೋಮಾಭಿಷವಾರ್ಥಮುಪಲಾನ್ ।** ಸೋಮರಸವನ್ನು ಜಜ್ಜಿ ಹಿಂಡುವುದಕ್ಕಾಗಿ ಹಿಡಿದಿರುವ ಕಲ್ಲುಗಳನ್ನು ಎಂದರ್ಥ. **ಗ್ರಾವ, ಅದ್ರಿ** ಎಂಬ ಎರಡು ಪದಗಳಿಗೂ ರೂಢಿಯಲ್ಲಿ **ಕಲ್ಲು** ಎಂಬ ಸಾಮಾನ್ಯವಾದ ಅರ್ಥವಿದ್ದರೂ, ಸೋಮರಸವನ್ನು ಹಿಂಡಲು ಸಾಧಕವಾದ **ಗ್ರಾವಕ್ಕೂ, ಅದ್ರಿಗೂ** ಸ್ವರೂಪದಲ್ಲೇ ವ್ಯತ್ಯಾಸವಿದ್ದಿರ ಬೇಕೆಂದು ಅವುಗಳ ವರ್ಣನೆಗಳಿಂದಲೂ, ವಿಶೇಷಣಗಳಿಂದಲೂ ಹೇಳಬಹುದು. ಸಾಧಾರಣವಾಗಿ **ಗ್ರಾವ** ಎಂಬ ಪದವು ಪ್ರಯೋಗಿಸಿರುವಾಗ ಅದಕ್ಕೆ **ಪಾಷಾಣವೆಂ**ಬರ್ಥವನ್ನು ಹೇಳಿ ಅದ್ರಿ ಪದವಿರುವಾಗ ಅದಕ್ಕೆ **ಗ್ರಾವ** ಎಂಬರ್ಥ ವನ್ನು ಭಾಷ್ಯದಲ್ಲಿ ಹೇಳಿರುತ್ತದೆ. ಆದರೆ ಅವುಗಳ ವ್ಯತ್ಯಾಸವನ್ನು ತೋರಿಸಲು ಈ ಅರ್ಥವ್ಯತ್ಯಾಸವೇ ಆಧಾರವಲ್ಲ. ಅವುಗಳ ಸ್ವರೂಪವನ್ನು ಹೇಳುವ ವಿಶೇಷಣಗಳಿಂದಲೂ, ಉಪಮಾನಗಳಿಂದಲೂ ಅವುಗಳು ಸೋಮರಸವನ್ನು ಹಿಂಡು ವಾಗ ಮಾಡುವ ಶಬ್ದಸೂಚಕವಾದ ಪದಗಳಿಂದಲೂ ಈ ಎರಡು ಸಾಧನಗಳೂ ಬೇರೆಬೇರೆಯೆಂದೂ ತಿಳಿಯುತ್ತದೆ ಬಬೃಹಾಣ (೫-೪೧-೧೨); **ಪರ್ವತ** (೧೦-೯೪-೧); **ಅಶ್ರಮಣ, ಅತೃಥಿತ, ಅಮೃತ್ಯ, ಅನಾತುರ, ಅಜರ, ಅಮವಿಷ್ಣು** (೧೦-೯೪-೧೧) **ಕ್ಷೇಮಕಾಮ** (೧೦-೯೪-೧೨) ಇವೆಲ್ಲವೂ ಅದ್ರಿಯ ವೈಶಿಷ್ಟ್ಯವನ್ನು ತೋರಿ ಸುವ ವಿಶೇಷಣಗಳು **ಪೃಥು, ಪೃಥುಬುಧ್ನ** ಇತ್ಯಾದಿ ವಿಶೇಷಣಗಳು ಗ್ರಾವದ ವೈಶಿಷ್ಟ್ಯವನ್ನು ಮಾತ್ರ ತೋರಿಸ ತಕ್ಕವು. ಗ್ರಾವವನ್ನು ಸಾಧಾರಣವಾಗಿ ವೃಷಭಕ್ಕೂ, ಅದ್ರಿಯನ್ನು ಅಶ್ವಕ್ಕೂ ಹೋಲಿಸಿದೆ.

ಗ್ರಾವಸ್ತೋತ್ರದ ಕೆಲವು ಭಾಗಗಳು ಈ ಗ್ರಾವದ ಮಹತ್ತ್ವವನ್ನು ತಿಳಿಸುತ್ತವೆ. **ಆಶ್ವಲಾಯನಶ್ರೌತ** ಸೂತ್ರದ ಪ್ರಕಾರ ಈ ಸ್ತುತಿಯು ಋ. ಸಂ. ೧, ೨೪, ೩ ; ೫, ೮೧, ೧ ; ೮, ೪೧, ೧ ; ೮, ೧, ೧ ಎಂಬ ಮಂತ್ರಗಳ ಪೂರ್ವಪೀಠಿಕೆಯಿಂದ ಕೂಡಿ ಗ್ರಾವವನ್ನು ಸಾಕ್ಷಾತ್ತಾಗಿ ಸ್ತುತಿಸುವ ೧೦-೯೪ನೇ ಸೂಕ್ತವನ್ನು ಒಳಗೊಂಡಿದೆ. ಕೊನೆ ಯಲ್ಲಿ ೧೮-೧೭೫ನೇ ಸೂಕ್ತ ಪಠಿಸಲ್ಪಡುತ್ತದೆ.



CC-0. Jangamwadi Math Collection. Digitized by eGangotri

ಇವುಗಳಲ್ಲಿ ೧, ೨೪, ೩ ; ೫, ೮೧, ೧ ಮತ್ತು ೧೦, ೧೭೫ ಈ ಮಂತ್ರಗಳು ಸವಿತೃದೇವತೆಯನ್ನುದ್ದೇಶಿಸಿದುದು. ಸರ್ವಕ್ಕೂ ಪ್ರೇರಕನಾದುದರಿಂದ ರಸವನ್ನು ಹಿಂಡಲು ಪ್ರೇರಿಸುವಂತೆ ಅವನನ್ನು ಪ್ರಾರ್ಥಿಸಿದೆ. ಉದಾಹರಣೆಗೆ—

**ಪ್ರ ವೋ ಗ್ರಾವಾಣಃ ಸವಿತಾ ದೇವಃ ಸುವತು ಧರ್ಮಣಾ । ಧೂರ್ಷು ಯುಜ್ಯಧ್ವಂ ಸುನುತ ॥**

(ಋ. ಸಂ. ೧೦-೧೭೫-೧)

ಎಲೈ ಗ್ರಾವಗಳೇ, ಸರ್ವಪ್ರೇರಕನಾದ ಸವಿತೃದೇವನು ನಿಮ್ಮನ್ನು ಸೋಮಾಭಿಷವಾರ್ಥವಾಗಿ ಪ್ರೇರಿಸಲಿ. ಅಭಿಷವ ಸ್ಥಾನಗಳಲ್ಲಿ ನೀವು ಶ್ರದ್ಧೆಯಿಂದಲೂ ಕಾರ್ಯತತ್ಪರರಾಗಿಯೂ ಸೇರಿ ಹಿಂಡಿರಿ. ಹೀಗೆಯೇ "**ಗ್ರಾವಾಣಃ ಅಪ ದುಚ್ಛುನಾಮಪ ಸೇಧತ ದುರ್ಮತಿಂ**" ಇತ್ಯಾದಿ ಮಂತ್ರಗಳಿಂದ ಗ್ರಾವಗಳನ್ನು ಸ್ತುತಿಸಿದೆ. ಇವಲ್ಲದೇ ಅಭಿಷವ ಕಾಲದಲ್ಲಿ ಗ್ರಾವಗಳು ಪ್ರಕಟಿಸುವ ಹಿತಕಾರಿಯಾದ ಮತ್ತು ಪೂತಾತ್ಮಕವಾದ ಶಬ್ದವನ್ನು ವರ್ಣಿಸುತ್ತಲೂ ಗ್ರಾವವನ್ನು ಸ್ತುತಿಸುತ್ತಲೂ ಪಠಿತವಾಗುವ ಮಂತ್ರಗಳಲ್ಲಿ ಕೆಲವನ್ನು ಮಾತ್ರ ಪರಿಶೀಲಿಸಬಹುದು.

**ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯೋ ವಾಚಂ ವದತಾ ವದದ್ಭ್ಯಃ ।**
**ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ॥**

(ಋ. ಸಂ. ೧೦-೯೪-೧)

ಈ ಗ್ರಾವಗಳು ಶಬ್ದರೂಪವಾದ ಸ್ತುತಿಯನ್ನು ಮಾಡಲಿ. ನಾವೂ ಸಹ ಈ ಸ್ತುತಿಗೆ ಸರಿಯಾದ ಉಪಸ್ತುತಿಯನ್ನು ಪಠಿಸೋಣ. ಘನವಾದವೂ, ಶೀಘ್ರಚಾರಿಗಳೂ ಆದ ಎಲೈ ಗ್ರಾವಗಳೇ, ನೀವು ಇಂದ್ರನನ್ನುದ್ದೇಶಿಸಿ ನಿಮ್ಮ ಶಬ್ದಾತ್ಮಕವಾದ ಸ್ತುತಿಯನ್ನು ಪಠಿಸಿದೊಡನೆಯೇ ನಿಮ್ಮಿಂದ ಸೋಮರಸವು ಖಂಡಿತ ಹಿಂಡಲ್ಪಡುತ್ತದೆ,

**ಏತೇ ವದಂತಿ ಶತವತ್ಸಹಸ್ರವದಭಿ ಕ್ರಂದಂತಿ ಹರಿತೇಭಿರಾಸಭಿಃ ।**
**ವಿಷ್ಟ್ವೀ ಗ್ರಾವಾಣಃ ಸುಕೃತಃ ಸುಕೃತ್ಯಯಾ ಹೋತುಶ್ಚಿತ್ಪೂರ್ವೇ ಹವಿರದ್ಯಮಾಶತ ॥**

(ಋ. ಸಂ. ೧೦-೯೪-೨)

ಈ ಗ್ರಾವಗಳು ಸಹಸ್ರಾರು ಜನರು ಸೇರಿಕೊಂಡು ಶಬ್ದಮಾಡಿದರೆ ಯಾವ ಗಭೀರವಾದ ಶಬ್ದವುಂಟಾಗುವುದೋ ಅದರಂತೆ ತಮ್ಮ ಹರಿತವರ್ಣದ ಮುಖದಿಂದ ಗಭೀರವಾದ ಶಬ್ದವನ್ನು ಮಾಡುತ್ತವೆ. ಯಜ್ಞವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ದೇವಹೋತೃವಾದ ಅಗ್ನಿಗಿಂತಲೂ ಪೂರ್ವಭಾವಿಯಾಗಿಯೇ ತಾವು ಹವಿಸ್ಸನ್ನು ಸ್ವೀಕರಿಸುತ್ತವೆ.

**ಸುಪರ್ಣಾ ವಾಚಮಕ್ರತೋಪ ದ್ಯವ್ಯಾಖರೇ ಕೃಷ್ಣಾ ಇಷಿರಾ ಅನರ್ತಿಷುಃ ।**
**ನ್ಯ೧ ಙ್ನಿಯಂತ್ಯುಪರಸ್ಯ ನಿಷ್ಕೃತಂ ಪುರೂ ರೇತೋ ದಧಿರೇ ಸೂರ್ಯಶ್ವಿತಃ ॥**

(೧೦-೯೪-೫)

ಮೃದುವಾಗಿ ಚಲಿಸುವ ಈ ಗ್ರಾವಗಳು ಅಂತರಿಕ್ಷದಲ್ಲಿ ಶಬ್ದಮಾಡುತ್ತವೆ. ಅಂಗಣದಲ್ಲಿ ಕೃಷ್ಣಮೃಗವು ನೃತ್ಯಮಾಡಿದಂತೆ ನಲಿಯುತ್ತವೆ. ಸೂರ್ಯನಂತೆ ಪ್ರಕಾಶಮಾನವಾದ ರಸವನ್ನು ಹಿಂಡುತ್ತವೆ.

CC-0. Jangamwadi Math Collection. Digitized by eGangotri

**ಧ್ರುವಾ ಏವ ವಃ ಪಿತರೋ ಯುಗೇಯುಗೇ ಕ್ಷೇಮಕಾಮಾಸಃ ಸದಸೋ ನ ಯುಂಜತೇ ।**
**ಅಜುರ್ಯಾಸೋ ಹರಿಷಾಚೋ ಹರಿದ್ರವ ಆ ದ್ಯಾಂ ರವೇಣ ಪೃಥಿವೀಮಶುಶ್ರವುಃ ॥**

(ಋ. ಸಂ. ೧೦-೯೪-೧೨)

ಎಲೈ ಗ್ರಾವಗಳೇ, ನಿಮ್ಮ ಪಿತೃಗಳಾದ ಪರ್ವತಗಳು ತಮಗೆ ಶಾಂತಿಯನ್ನು ಬಯಸುವವರಾಗಿ ಸದಸ್ಸಿನಲ್ಲಿ ಭಾಗವನ್ನು ವಹಿಸದೆ ವಿವಕ್ತರಾಗಿರುತ್ತಿದ್ದರು. ಅಜರರಾಗಿಯೂ, ಸೋಮವನ್ನು ಪಡೆದು ತೃಪ್ತರಾಗಿಯೂ ತಮ್ಮ ಮೃದುವಾದ ಧ್ವನಿಗಳನ್ನು ದ್ಯಾವಾಪೃಥಿವಿಗಳಲ್ಲೆಲ್ಲಾ ಪ್ರಸರಿಸಿ ಪ್ರತಿಧ್ವನಿತರಾಗುವಂತೆ ಮಾಡುತ್ತಿದ್ದರು.

**ತದಿದ್ವದಂತ್ಯದ್ರಯೋ ವಿಮೋಚನೇ ಯಾಮನ್ನಂಜಸ್ಪಾ ಇವ ಘೇದುಪಬ್ದಿಭಿಃ ।**
**ವಪಂತೋ ಬೀಜಮಿವ ಧಾನ್ಯಾಕೃತಃ ಪೃಂಚಂತಿ ಸೋಮಂ ನ ಮಿನಂತಿ ಬಪ್ಸತಃ ॥**

(ಋ. ಸಂ. ೧೦-೯೪-೧೩)

ಈ ಗ್ರಾವಗಳು ಅಭಿಷವಕಾಲದಲ್ಲಿ, ಮಾರ್ಗದಲ್ಲಿ ಶೀಘ್ರವಾಗಿ ಸಂಚರಿಸುವ ರಥಗಳಂತೆಯೂ, ಬೀಜವನ್ನು ಬಿತ್ತುವ ಕೃಷೀವಲರು ಹರ್ಷಧ್ವನಿಯನ್ನುಂಟುಮಾಡುವಂತೆಯೂ ಸಹ ಗಭೀರವಾಗಿಯೂ ಆಕರ್ಷಕವಾಗಿಯೂ ಶಬ್ದ ಮಾಡುತ್ತಾ ಸೋಮರಸವನ್ನು ಹಿಂಡುತ್ತವೆ. ಮತ್ತು ಕೊಂಚವೂ ಹಿಂಸಾತ್ಮಕವಾಗಿರುವುದಿಲ್ಲ. ಇತ್ಯಾದಿಯಾಗಿ ಗ್ರಾವದ ಸ್ತುತಿಯಿರುತ್ತದೆ. ಈ ಸ್ತುತಿಯು ಗ್ರಾವವನ್ನು ವರ್ಣಿಸುವುದಾಗಿಯೂ ಇರುತ್ತದೆ. ಮತ್ತು **ಸುತೇ ಅಧ್ವರೇ** ಎಂಬ ಕೊನೆಯ ಮಂತ್ರವನ್ನು ಪಠಿಸುವುದಕ್ಕೆ ಪೂರ್ವಭಾವಿಯಾಗಿ, **ಆ ವ ಋಂಜಸ ಊರ್ಜಾಂ** ಎಂಬ ಮಂತ್ರದಿಂದ ಪ್ರಾರಂಭವಾಗುವ ೧೦-೭೬ನೆಯ ಸೂಕ್ತವನ್ನೂ ಮತ್ತು ಹಿಂದೆ ಉದಾಹರಿಸಿರುವ **ಪ್ರ ವೋ ಗ್ರಾವಾಣಃ** ಎಂಬ ಮಂತ್ರದಿಂದ ಪ್ರಾರಂಭವಾಗುವ ೧೦-೧೭೫ನೇ ಸೂಕ್ತವನ್ನೂ **ಗ್ರಾವಸ್ತುತ್** ಎಂಬ ಋತ್ವಿಕ್ಕು ಪಠಿಸುತ್ತಾನೆ. ಮತ್ತು ಪ್ರಾರಂಭದಲ್ಲಾಗಲಿ ಅಥವಾ ಮಧ್ಯದಲ್ಲಾಗಲಿ, ಸಂದರ್ಭೋಚಿತವಾಗಿ ಅಭಿಷವವು ಮುಗಿಯುವವರೆಗೆ **ಪಾವಮಾನೀ** ಮಂತ್ರಗಳನ್ನು ಪಠಿಸುತ್ತಾನೆ. ಈ ಸಂದರ್ಭಗಳಲ್ಲೆಲ್ಲಾ **ಗ್ರಾವದ** ಸ್ತುತಿಯೂ ವರ್ಣನೆಯೂ ಇರುತ್ತದೆ. ಪ್ರಕೃತವಾದ ಮಂತ್ರದಲ್ಲಿ ದ್ಯಾವಾಪೃಥಿವಿಗಳನ್ನುದ್ದೇಶಿಸಿದ್ದರೂ ಸಹ ಅವರ ಪ್ರಾರ್ಥನಾ ಕಾಲದಲ್ಲಿ ಸೋಮವನ್ನು ಹಿಂಡಲು ಸಿದ್ಧವಾಗಿ ಹಿಡಿದಿರುವ ಗ್ರಾವವೂ ಸ್ತುತವಾಗಿದೆ

**ಸುಮೇಕೇ**—ಈ ಪದವು ದ್ಯಾವಾಪೃಥಿವಿಗಳಿಗೆ ವಿಶೇಷಣವಾಗಿದೆ. ಸುಸ್ವರೂಪವುಳ್ಳವರೆಂದು ಸಾಯಣರು ಅರ್ಥಮಾಡಿದ್ದಾರೆ. ಅನೇಕ ಸಂದರ್ಭಗಳಲ್ಲಿ ಸುಸ್ಥಿತಿಯುಳ್ಳವರೆಂದೂ ಅಚಲವಾದ ಸ್ವರೂಪವುಳ್ಳವರೆಂದೂ ತಾತ್ಪರ್ಯವಾಗುತ್ತದೆ. ಕೆಲವೆಡೆಗಳಲ್ಲಿ ಶ್ರೇಷ್ಠವಾದ ಕರ್ಮವುಳ್ಳವರು, ಅಥವಾ ಉಪಚಾರಮಾಡುವುದರಲ್ಲಿ ಕುಶಲರು ಎಂದೂ ಅರ್ಥವಾಗುವುದು. ದ್ಯಾವಾಪೃಥಿವಿಗಳಿಗೆ ಈ ಪದವು ವಿಶೇಷಣವಾಗಿರುವಾಗ **ಸ್ವಕೀಯಾಭಿಃ ಪ್ರಕಾಶಯುಕ್ತೇ ।** ತಮ್ಮ ಪ್ರಭೆಗಳಿಂದ ಸ್ವಪ್ರಕಾಶಿತರು ಎಂದಾಗುತ್ತದೆಂದು ಸಾಯಣರು ಋ. ಸಂ. ೩-೧೫-೫ ಇತ್ಯಾದಿ ಮಂತ್ರಗಳಲ್ಲಿ ವಿವರಿಸಿದ್ದಾರೆ.

**ಮನೀಷಾ**—ಸ್ತುತಿರೂಪವಾದ ವಾಕ್ಕಿನಿಂದ ಎಂದರ್ಥ. ಇದರ ವಿಶೇಷಾರ್ಥಗಳನ್ನು ಇದೇ ಸೂಕ್ತದ ಮೊದಲನೆಯ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ರೋದಸೀ**—ಈ ಪದದ ವಿಶೇಷಾರ್ಥಗಳನ್ನು ಋ. ಸಂ. ೧-೫೬-೭ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

CC-0. Jangamwadi Math Collection. Digitized by eGangotri

**ಭೂರಿವಾರಾಃ, ದರ್ಶತಾಃ, ಯಜತ್ರಾಃ** ಎಂಬ ಪದಗಳು ಅಗ್ನಿಪ್ರಭೆಗೆ ವಿಶೇಷಣಗಳಾಗಿ ಆ ಪ್ರಭೆಗಳ ದಿವ್ಯಸ್ವರೂಪವನ್ನು ವರ್ಣಿಸುವುವಾಗಿವೆ. ಅಗ್ನಿಪ್ರಭೆಯ ಮಹತ್ವವನ್ನು ಮುಂದಿನ ಮಂತ್ರದ ವಿಶೇಷವಿಷಯಗಳಲ್ಲಿ ತಿಳಿಸಲಾಗುವುದು.

———— :o: ————

ಸಂಹಿತಾಪಾಠಃ

ಯಾ ತೇ ಜಿಹ್ವಾ ಮಧುಮತೀ ಸುಮೇಧಾ ಅಗ್ನೇ ದೇವೇಷೂಚ್ಯತ ಉರೂಚೀ ।
ತಯೇಹ ವಿಶ್ವಾಁ ಅವಸೇ ಯಜತ್ರಾನಾ ಸಾದಯ ಪಾಯಯಾ ಚಾ ಮಧೂನಿ ॥ ೫ ॥

ಪದಪಾಠಃ

ಯಾ । ತೇ । ಜಿಹ್ವಾ । ಮಧುಽಮತೀ । ಸುಽಮೇಧಾಃ । ಅಗ್ನೇ । ದೇವೇಷು । ಉಚ್ಯತೇ । ಉರೂಚೀ ।
ತಯಾ । ಇಹ । ವಿಶ್ವಾನ್ । ಅವಸೇ । ಯಜತ್ರಾನ್ । ಆ । ಸಾದಯ । ಪಾಯಯ । ಚ । ಮಧೂನಿ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತವ ಮಧುಮತ್ಯುದಕವತೀ ಸುಮೇಧಾಃ । ಶೋಭನಾ ಮೇಧಾ ಪ್ರಜ್ಞಾ ಯಸ್ಯಾಃ ಸಾ । ಸರ್ವಸ್ಯ ಜ್ಞಾಪಯಿತ್ರೀ ಯಾ ಜಿಹ್ವಾ ಜ್ವಾಲೋರೂಚೀ ಬಹುವ್ಯಾಪ್ತಿಃ ಸತೀ ದೇವೇಷು ಮಧ್ಯ ಆಹ್ವಾನಾರ್ಥಮುಚ್ಯತೇ ಪ್ರೇರ್ಯತೇ ತಯಾ ಜಿಹ್ವಯಾ ಯಜತ್ರಾನ್ಯಜನೀಯಾನ್ವಿಶ್ವಾನ್ದೇವಾನಿಹ ಕರ್ಮಣ್ಯಸ್ಮಾಕಮವಸೇ ರಕ್ಷಣಾಯಾ ಸಾದಯ । ಉಪವೇಶಯ । ಕಿಂಚ ತಾನ್ವಿಶ್ವಾನ್ದೇವಾನ್ಮಧೂನಿ ಮದಕರಾನ್ ಸೋಮಾನ್ಪಾಯಯ ॥ ಸುಮೇಧಾಃ । ನಿತ್ಯಮಸಿಚ್ಪ್ರಜಾಮೇಧಯೋರಿತ್ಯಸಿಚ್ । ಉಚ್ಯತೇ । ವಚ ಪರಿಭಾಷಣೇ । ಕರ್ಮಣಿ ಯಕಿ ರೂಪಂ । ಯದ್ವೃತ್ತಯೋಗಾದನಿಘಾತಃ । ಉರೂಚೀ। ಅಂಚತೇಃ ಕ್ವಿನ್ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅನುದಾತ್ತಸ್ಯ ಚ ಯತ್ರೋದಾತ್ತಲೋಪ ಇತಿ ಙೀಪ ಉದಾತ್ತತ್ವಂ । ಪಾಯಯ । ಪಾ ಪಾನ ಇತ್ಯಸ್ಯ ಣೌ ಪರತಃ ಶಾಚ್ಛಾಸಾಹ್ವಾವ್ಯಾವೇಪಾಂ ಯುಗಿತಿ ಯುಕ್ । ತಿಙ ಉತ್ತರತ್ವಾದನಿಘಾತಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ತೇ**—ನಿನ್ನ । **ಮಧುಮತೀ**— ಉದಕಯುಕ್ತವಾದುದೂ (ಮಧುರವಾದುದೂ) । **ಸುಮೇಧಾಃ**— ಎಲ್ಲರಿಗೂ (ಕರ್ತವ್ಯದ) ಜ್ಞಾನವನ್ನು ಕೊಡತಕ್ಕದ್ದೂ ಆದ । **ಯಾ ಜಿಹ್ವಾ**—

CC-0. Jangamwadi Math Collection. Digitized by eGangotri

ಯಾವ ಜಿಹ್ವೆಯಿದೆಯೋ ಅದು । **ಉರೂಚೀ**—ವಿಸ್ತೃತವಾಗಿ ವ್ಯಾಪಿಸುವ ಶಕ್ತಿಯುಳ್ಳದ್ದಾಗಿ । **ದೇವೇಷು**—ದೇವತೆಗಳ ನಡುವೆ । **ಉಚ್ಯತೇ**—ಪ್ರಸಿದ್ಧವಾಗಿದೆ । **ತಯಾ**—ಆ ಜಿಹ್ವೆಯ ಸಹಾಯದಿಂದ । **ಯಜತ್ರಾನ್**—ಯಜ್ಞಾರ್ಹರಾದ । **ವಿಶ್ವಾನ್**—ಸಮಸ್ತದೇವತೆಗಳನ್ನೂ । **ಇಹ**—ಈ ಕರ್ಮದಲ್ಲಿ । **ಅವಸೇ**—ನಮ್ಮ ರಕ್ಷಣೆಗಾಗಿ । **ಆ ಸಾದಯ**—ಕುಳ್ಳಿರಿಸು । **ಮಧೂನಿ**—ಮಧುರವಾದ ಸೋಮರಸವನ್ನು । **ಪಾಯಯ**—(ಅವರಿಗೆ) ಪಾನಮಾಡಿಸು ।

ಭಾವಾರ್ಥ

ಎಲೈ ಅಗ್ನಿಯೇ, ಉದಕಯುಕ್ತವಾದುದೂ ಎಲ್ಲರಿಗೂ ಕರ್ತವ್ಯಜ್ಞಾನವನ್ನು ತಿಳಿಸುವುದೂ ಆದ ನಿನ್ನ ನಾಲಿಗೆಯು ವಿಸ್ತೃತವಾಗಿ ವ್ಯಾಪಿಸುವ ಶಕ್ತಿಯುಳ್ಳದ್ದೆಂದು ದೇವತೆಗಳ ನಡುವೆ ಪ್ರಸಿದ್ಧವಾಗಿದೆ. ಆ ಜಿಹ್ವೆಯ ಸಹಾಯದಿಂದ ಯಜ್ಞಾರ್ಹರಾದ ಸಮಸ್ತದೇವತೆಗಳನ್ನೂ ಈ ಕರ್ಮದಲ್ಲಿ ನಮ್ಮ ರಕ್ಷಣೆಗಾಗಿ ಕುಳ್ಳಿರಿಸು ಮತ್ತು ಅವರಿಗೆ ಮಧುರವಾದ ಸೋಮರಸವನ್ನು ಪಾನಮಾಡಿಸು.

English Translation

With your wide-spreading tongue, Agni, sweet and intelligent, which is renowned amongst the gods, bring hither all the adorable deities for our protection, and give them to drink of the sweet (libation).

ವಿಶೇಷವಿಷಯಗಳು

ಈ ಮಂತ್ರದಲ್ಲಿ ಅಗ್ನಿಜ್ವಾಲೆಯ ಸ್ತುತಿಯಿದೆ. **ಮಧುಮತೀ, ಸುಮೇಧಾಃ** ಎಂಬುವು ಜಿಹ್ವಾ ಎಂಬುದಕ್ಕೆ ವಿಶೇಷಣಪದಗಳು. **ಉರುಚೀ** ಎಂಬುದೂ ಜ್ವಾಲೆಯ ಮಹತ್ತ್ವರೂಪವನ್ನು ತಿಳಿಸುತ್ತದೆ.

**ಮಧುಮತೀ**—ಮಧುಯುಕ್ತವಾದ ಜ್ವಾಲೆ. ಮಧುವೆಂದರೇನು ? ಪ್ರಕೃತದಲ್ಲಿ ಉದಕವೆಂದರ್ಥ ಮಾಡಿದೆ. **ಮಧು** ಶಬ್ದವನ್ನು **ಉದಕ**ನಾಮಗಳಲ್ಲಿ ಪಠಿಸಿದೆ. (ನಿ. ೧-೧೨) **ಮಧುಮತೀ** ಎಂದರೆ ಉದಕಯುಕ್ತವಾದುದೆಂದರ್ಥ. **ಅಪಾಂ ನಪಾತ್, ಅಪಾಂಗರ್ಭಃ** ಇತ್ಯಾದಿ ವಿಶೇಷಣಗಳಿಂದ ಉದಕೋತ್ಪನ್ನನಾದ ಅಗ್ನಿಯ ವರ್ಣನವು ಪ್ರಸಿದ್ಧವಾಗಿದೆ. ಯಜ್ಞಕಾಲಗಳಲ್ಲಿ ಉದಕಪೂರ್ಣವಾದ ಅಗ್ನಿಜ್ವಾಲೆಯ ಪ್ರಶಂಸೆಯು ಬ್ರಾಹ್ಮಣಾದಿಗಳಲ್ಲಿ ವಿಶೇಷವಾದ ಅರ್ಥವುಳ್ಳದ್ದಾಗಿದೆ. ಕೆಲವು ಉದಾಹರಣೆಗಳಿಂದ ಈ ವರ್ಣನದ ವೈಶಿಷ್ಟ್ಯವು ತಿಳಿಯುತ್ತದೆ.

**ಸಮಿಧಂ ಪ್ರಾಸ್ಯಾಭಿಜುಹೋತ್ಯಗ್ನೇರನೀಕಮುಪ ಆ ವಿವೇಶಾಪಾಂ ನಪಾತ್ಪ್ರತಿರಕ್ಷನ್ನಸುರ್ಯಂ ।**
(ವಾ. ಸ. ೮-೨೪)

ಎಲೈ ಅಪಾಂನಪಾದ್ರೂಪನಾದ ಅಗ್ನಿಯೇ, ಅಪ್ಪೇ (ನೀರೇ) ನಿನ್ನ ಮುಖವು. ನಿನ್ನ ಮುಖಾತ್ಮಕವಾದ ಅಪ್ಪನ್ನು ರಾಕ್ಷಸರ ಹಾವಳಿಯನ್ನು ತಪ್ಪಿಸಿಕೊಳ್ಳಲು ನಾನು ಪ್ರವೇಶಿಸಿದ್ದೇನೆ. ಅನುಗ್ರಹಾತ್ಮಕನಾಗು ಎಂದು ಅಗ್ನಿಮುಖಕ್ಕೂ, ಅಪ್ಪಿಗೂ ತಾದಾತ್ಮ್ಯವನ್ನು ಹೇಳಿದೆ. ಕೆಲವೆಡೆಗಳಲ್ಲಿ ಅಗ್ನಿಗೂ, ಅಪ್ಪಿಗೂ ಇರುವ ಸಂಬಂಧವನ್ನು ತೋರಿಸುವಾಗ ಕೇವಲ ಭೌತಿಕಸಂಬಂಧವನ್ನು ಮಾತ್ರ ತೋರಿಸಿದೆ. ಇನ್ನೂ ಗೂಢವಾದ ಸಂಬಂಧವನ್ನೂ ಸೂಚಿಸಿದೆ. ಅಗ್ನಿಚಿತೆಯ ನಿರ್ಮಾಣಕಾಲದಲ್ಲಿ ಋತ್ವಿಕ್ಕುಗಳು ಧ್ಯಾನಾಸಕ್ತರಾಗಿ ಅಪ್ತತ್ತ್ವವನ್ನು ಗ್ರಹಿಸಿ ಅದನ್ನು ಈ ರೀತಿ ವರ್ಣಿಸುತ್ತಾರೆ.

CC-0. Jangamwadi Math Collection. Digitized by eGangotri

ತೇ ಚೇತಯಮಾನಾಃ । ಏತದಪಶ್ಯನ್ನಪ ಏವ್ವೈನದಭ್ಯವಹರಾಮಾಪೋ ವಾ ಅಸ್ಯ ಸರ್ವಸ್ಯ ಪ್ರತಿಷ್ಠಾ ತದ್ಯತ್ರಾಸ್ಯ ಸರ್ವಸ್ಯ ಪ್ರತಿಷ್ಠಾ ತದೇನತ್ಪ್ರತಿಷ್ಠಾಪ್ಯ ಯದತ್ರಾಗ್ನೇಯಂ ತದದ್ಭ್ಯೋಽಧಿ ಜನಯಿಷ್ಯಾಮ ಇತಿ ತದಪೋಽಭ್ಯವಾಹರನ್ ।

(ಶ. ಬ್ರಾ. ೬-೮-೨-೨)

ಅಪ್ಪೇ (ಉದಕವೇ) ವಿಶ್ವಕ್ಕೆಲ್ಲಾ ಆಧಾರವು. ಆದುದರಿಂದ ನಾವು ಈ ಚಿತಿಯನ್ನು ಅಪ್ಪಿನ ಸಾನ್ನಿಧ್ಯಕ್ಕೆ ಒಯ್ಯೋಣ. ಅನಂತರ ವಿಶ್ವಾಧಾರವಾದ ಅಪ್ಪಿನಲ್ಲಿ ಇದನ್ನು ಸ್ಥಾಪಿಸಿ ಅಲ್ಲಿಂದ ಆಗ್ನ್ಯಂಶವನ್ನು ಮಾತ್ರ ಪರಿಗ್ರಹಿಸೋಣ ಎಂದು ಋತ್ವಿಕ್ಕುಗಳು ಅಗ್ನಿಚಿತಿಯನ್ನು ಅಗ್ನಿಮುಖವಾದ ಅಪ್ಪಿನ ಸಾನ್ನಿಧ್ಯಕ್ಕೆ ಒಯ್ಯುತ್ತಾರೆ. ಅನಂತರ,

ಅಪ್ಸ್ವಗ್ನೇ ಸಧಿಷ್ಟವ ಸೌಷಧೀರನು ರುಧ್ಯಸೇ । ಗರ್ಭೇ ಸಂಜಾಯಸೇ ಪುನಃ ।

(ಋ ಸಂ .೮-೪೩-೯)

ಎಂಬ ಮಂತ್ರವನ್ನು ಪಠಿಸಿ ಅಪ್ಪಿನಿಂದ ಪೂರ್ಣನಾದವನೂ, ಆ ಅಪ್ತತ್ತ್ವಗಳನ್ನು ಓಷಧ್ಯಾದಿಗಳಲ್ಲಿ ಹರಡಿದವನೂ ಆದ ಅಗ್ನಿಯನ್ನು ಸ್ತುತಿಸಿ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿರುವ ಅಂಶವನ್ನು ಬೇರೆ ವಿಧವಾಗಿ ಪ್ರಶಂಸಿಸುತ್ತಾರೆ. ಅನಂತರ ಅಗ್ನಿಜ್ವಾಲೆಯು ಆದಿತ್ಯಾಭಿಮುಖವಾಗಿ ಪ್ರಸರಿಸುವುದನ್ನೂ ಅಪ್ಪಿನಿಂದ ಪೂರ್ಣವಾದ ಈ ಅಗ್ನಿಜ್ವಾಲೆಯು ಅಂತರಿಕ್ಷಸ್ಥವಾದುದೂ, ಆದಿತ್ಯರಶ್ಮಿರೂಪವಾದುದೂ ಆದ ಅಪ್ಪಿನೊಡನೆ ಸಂಯೋಜಿತವಾಗುವುದನ್ನು ಈ ರೀತಿ ವರ್ಣಿಸಿದೆ.

ಅಗ್ನೇ ದಿವೋ ಅರ್ಣಮಚ್ಛಾ ಜಿಗಾಸೀತಿ । ಆಪೋ ವಾ ಅಸ್ಯ ದಿವೋಽರ್ಣಸ್ತಾ ಏಷ ಧೂಮೇ-ನಾಚ್ಛೈತ್ಯಚ್ಛಾ ದೇವಾಗ್ಂ ಊಚಿಷೇ ಧಿಷ್ಣ್ಯಾ ಯ ಇತಿ ಪ್ರಾಣಾ ವೈ ದೇವಾ ಧಿಷ್ಣ್ಯಾಸ್ತೇ ಹಿ ಸರ್ವಾ ಧಿಯ ಇಷ್ಣಂತಿ ಯಾ ರೋಚನೇ ಪರಸ್ತಾತ್ಸೂರ್ಯಸ್ಯ ಯಾಶ್ಚಾವಸ್ತಾದುಪತಿಷ್ಠಂತ ಆಪ ಇತಿ ರೋಚನೋ ಹ ನಾಮೈಷ ಲೋಕೋ ಯತ್ರೈಷ ಏತತ್ತಪತಿ ತದ್ಯಾಶ್ಚೈತಂ ಪರೇಣಾಪೋ ಯಾಶ್ಚಾವರೇಣ ತಾ ಏತದಾಹ ॥

(ಶ. ಬ್ರಾ. ೭-೧-೧-೨೪)

ಅಂತರಿಕ್ಷವೆಲ್ಲವೂ ಉದಕದ ಪ್ರವಾಹಮಯವಾಗಿದೆ. ಎಲೈ ಅಗ್ನಿಯೇ, ನಿನ್ನ ಆಕರ್ಷಕವಾದ ಜ್ವಾಲೆಗಳು ಆ ಉದಕದ ಪ್ರವಾಹದೊಂದಿಗೆ ಹೋಗಿ ಸೇರಿಕೊಳ್ಳುತ್ತವೆ. ಎಲೈ ಅಗ್ನಿಯೇ, ನೀನು ಜ್ವಾಲಾರೂಪದಿಂದ ಅಂತರಿಕ್ಷದ ಪ್ರವಾಹವನ್ನು ಸೇರಿದೊಡನೆಯೇ ಪ್ರಾಣತತ್ತ್ವದ ಪ್ರತಿನಿಧಿಗಳಾದ ದೇವತೆಗಳನ್ನು ನಮ್ಮನ್ನು ಅನುಗ್ರಹಿಸುವಂತೆ ಪ್ರೇರಿಸು. ದ್ಯುಲೋಕದ ಪ್ರಭಾಮಂಡಲದಿಂದಲೂ ಅತೀತವಾಗಿ ವ್ಯಾಪ್ತವಾಗಿರುವುದೂ, ಪೃಥಿವ್ಯಾದಿ ಸ್ಥಾನಗಳಲ್ಲಿ ವ್ಯಾಪಿಸಿರುವುದೂ ಮತ್ತು ಸರ್ವವ್ಯಾಪಿಯಾದುದೂ ಆದ ಅಪ್ತತ್ತ್ವವು ನಿನ್ನೊಂದಿಗೆ ಐಕ್ಯವಾಗಲಿ ಎಂದು ಪ್ರಾರ್ಥಿಸಿದೆ. ಆದುದರಿಂದಲೇ **ಮಧುಮತೀ** ಎಂಬ ವಿಶೇಷಣದಿಂದ ವರ್ಣಿತವಾಗಿದೆ. ಇದೇ ಜಿಹ್ವೆಗೆ **ಸುಮೇಧಾಃ** ಎಂಬ ವಿಶೇಷಣವು ಯಾವ ಸ್ವರೂಪವನ್ನು ತಿಳಿಸುತ್ತದೆ ಎಂಬ ವಿಷಯವನ್ನು ತಿಳಿಯಬೇಕು.

ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ॥

(ಈ. ಶ. ೧೮)

CC-0. Jangamwadi Math Collection. Digitized by eGangotri

ಎಂಬ ಈ ಮಂತ್ರದಲ್ಲಿ ಸುಮೇಧಾಃ ಎಂಬ ವಿಶೇಷಣದಿಂದ ವರ್ಣಿತವಾಗಿರುವ ಅಗ್ನಿಯ ಸ್ವರೂಪವು ಸ್ತುತವಾಗಿದೆ. ಅಗ್ನಿಯು ಸರ್ವಜ್ಞನಾದುದರಿಂದಲೂ ಯಜ್ಞತತ್ತ್ವವನ್ನು ಪೂರ್ಣವಾಗಿ ತಿಳಿದು ಜಾತವೇದನೆಂದು ಪ್ರಸಿದ್ಧನಾಗಿರುವುದರಿಂದಲೂ ಸನ್ಮಾರ್ಗಪ್ರವರ್ತಕನಾಗಿರಬೇಕೆಂದು ಅಗ್ನಿಯನ್ನು ಪ್ರಾರ್ಥಿಸಿದೆ.

ಉರೂಚೀ—ಅಗ್ನಿ, ವಾಯು, ಆದಿತ್ಯ ಈ ಮೂರು ರೂಪಗಳಲ್ಲಿಯೂ ಮೂರು ಲೋಕಗಳಲ್ಲಿಯೂ ವ್ಯಾಪಿಸಿರುವುದರಿಂದ ಉರೂಚೀ ಎಂಬ ವಿಶೇಷಣವು ವ್ಯಾಪಕತ್ವಧರ್ಮವನ್ನು ತಿಳಿಸುತ್ತದೆ.



ಸಂಹಿತಾಪಾಠಃ

ಯಾ ತೇ ಅಗ್ನೇ ಪರ್ವತಸ್ಯೇವ ಧಾರಾಸಶ್ಚಂತೀ ಪೀಪಯದ್ದೇವ ಚಿತ್ರಾ ।
ತಾಮಸ್ಮಭ್ಯಂ ಪ್ರಮತಿಂ ಜಾತವೇದೋ ವಸೋ ರಾಸ್ವ ಸುಮತಿಂ ವಿಶ್ವಜನ್ಯಾಂ ॥ ೬ ॥

ಪದಪಾಠಃ

ಯಾ । ತೇ । ಅಗ್ನೇ । ಪರ್ವತಸ್ಯಽಇವ । ಧಾರಾ । ಅಸಶ್ಚಂತೀ । ಪೀಪಯತ್ । ದೇವ । ಚಿತ್ರಾ ।
ತಾಂ । ಅಸ್ಮಭ್ಯಂ । ಪ್ರಽಮತಿಂ । ಜಾತಽವೇದಃ । ವಸೋ ಇತಿ । ರಾಸ್ವ । ಸುಽಮತಿಂ । ವಿಶ್ವಽಜನ್ಯಾಂ ॥

ಸಾಯಣಭಾಷ್ಯಂ

ದೇವ ದೀಪ್ಯಮಾನ ಹೇ ಅಗ್ನೇ ಚಿತ್ರಾ ನಾನಾರೂಪಾಸಶ್ಚಂತ್ಯಸ್ಮದನ್ಯತ್ರ ಸಂಗತಿಮಕುರ್ವಾಣಾ ಯಾ ತೇ ತವ ಪ್ರಮತಿಃ ಪ್ರಕೃಷ್ಟಾ ಬುದ್ಧಿಃ ಪೀಪಯತ್ ಅಪೇಕ್ಷಿತಫಲದಾನೇನಾಸ್ಮಾನ್ವರ್ಧಯತಿ । ತತ್ರ ದೃಷ್ಟಾಂತಃ । ಪರ್ವತಸ್ಯೇವ ಧಾರಾ । ಯಥಾ ಪರ್ವತಸ್ಯ ಮೇಘಸ್ಯೋದಕಧಾರೌಷಧಿವನಸ್ಪತ್ಯಾದಿಷು ಸಂಗತಿಂ ಕುರ್ವಾಣಾ ತಾನ್ವರ್ಧಯತಿ ತದ್ವತ್ । ವಸೋ ಸರ್ವಸ್ಯ ವಾಸಯಿತರ್ಜಾತವೇದೋ ಜಾತಪ್ರಜ್ಞ ಹೇ ಅಗ್ನೇ ತಾಂ ಪ್ರಮತಿಂ ಪರಹಿತಕರಣಸಮರ್ಥಾಂ ಬುದ್ಧಿಮಸ್ಮಭ್ಯಂ ರಾಸ್ವ । ದತ್ಸ್ವ । ತಥಾ ವಿಶ್ವಜನ್ಯಾಂ ಸರ್ವಜನಹಿತಾಂ ಸುಮತಿಂ ಶೋಭನಾಂ ಬುದ್ಧಿಂ ದತ್ಸ್ವ ॥ ಅಸಶ್ಚಂತೀ । ಸಶ್ಚತಿರ್ಗತಿಕರ್ಮಾ । ಶತುರ್ಯುಗಿತಶ್ಚೇತಿ ಙೀಪ್ । ನಞಾ ಸಮಾಸೇ ನಞ್ಸ್ವರಃ । ಪೀಪಯತ್ । ಪಾ ಪಾನೇ । ಣ್ಯಂತಸ್ಯ ಲುಙಿ ಚಙಿ ರೂಪಂ । ಚಙ್ಯನ್ಯತರಸ್ಯಾಮಿತಿ ಚಙಿ ಪರತಃ ಪೂರ್ವಸ್ಯೋದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ । ಪ್ರಮತಿಂ । ತಾದೌ ಚ ನಿತಿ ಕೃತ್ಯತಾವಿತಿ ಗತೇಃ ಪ್ರಕೃತಿಸ್ವರತ್ವಂ । ರಾಸ್ವ । ರಾ ದಾನೇ । ವ್ಯತ್ಯಯೇನಾತ್ಮನೇಪದಂ । ಲೋಟಿ ರೂಪಂ । ಆಮಂತ್ರಿತಸ್ಯಾವಿದ್ಯಮಾನತ್ವಾನ್ನಿಘಾತಾಭಾವಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ದೇವ ಅಗ್ನೇ**—ಪ್ರಕಾಶಮಾನನಾದ ಎಲೈ ಅಗ್ನಿಯೇ। **ಚಿತ್ರಾ**—ನಾನಾರೂಪವುಳ್ಳದ್ದೂ । **ಅಸಶ್ಚಂತೀ**—(ನಮ್ಮನ್ನು ಬಿಟ್ಟು) ಬೇರೆಲ್ಲೂ ಚಲಿಸದಿರುವುದೂ ಆದ । **ಯಾ ತೇ**—ನಿನ್ನ ಅನುಗ್ರಹಾತ್ಮಕವಾದ ಬುದ್ಧಿಯು । **ಪರ್ವತಸ್ಯ**—ಮೇಘದ । **ಧಾರಾ ಇವ**—ವೃಷ್ಟಿರೂಪವಾದ ಧಾರೆಯು ಓಷಧ್ಯಾದಿಗಳನ್ನು ವೃದ್ಧಿಪಡಿಸುವಂತೆ । **ಪೀಪಯತ್**—ನಮ್ಮನ್ನು ಪೋಷಿಸಿ ವೃದ್ಧಿಪಡಿಸುತ್ತದೆ । **ವಸೋ**—ಎಲ್ಲರಿಗೂ ವಸತಿಕಾರಕನೂ । **ಜಾತವೇದಃ**—ಜಾತಪ್ರಜ್ಞನೂ ಆದ ಎಲೈ ಅಗ್ನಿಯೇ। **ತಾಂ ಪ್ರಮತಿಂ** ಅದೇ ಅನುಗ್ರಹಾತ್ಮಕವಾದ ಬುದ್ಧಿಯನ್ನು। **ಅಸ್ಮಭ್ಯಂ**—ನಮ್ಮಲ್ಲಿ । **ರಾಸ್ವ**—ಇಡು । **ವಿಶ್ವಜನ್ಯಾಂ**—ಸರ್ವರಿಗೂ ಹಿತಕಾರಿಯಾದ। **ಸುಮತಿಂ**—ಶ್ರೇಷ್ಠವಾದ ಬುದ್ಧಿಯನ್ನು ಅನುಗ್ರಹಿಸು ।

### ಭಾವಾರ್ಥ

ಪ್ರಕಾಶಮಾನನೂ, ವಸತಿಕಾರಕನೂ, ಜಾತಪ್ರಜ್ಞನೂ ಆದ ಎಲೈ ಅಗ್ನಿಯೇ, ನಾನಾರೂಪವುಳ್ಳದ್ದೂ ನಮ್ಮನ್ನು ಬಿಟ್ಟು ಬೇರೆಲ್ಲೂ ಚಲಿಸದಿರುವುದೂ ಆದ ನಿನ್ನ ಅನುಗ್ರಹರೂಪವಾದ ಬುದ್ಧಿಯು, ಮೇಘದ ವೃಷ್ಟಿರೂಪವಾದ ಧಾರೆಯು ಓಷಧ್ಯಾದಿಗಳನ್ನು ವೃದ್ಧಿಪಡಿಸುವಂತೆ ನಮ್ಮನ್ನು ಪೋಷಿಸಿ ವೃದ್ಧಿಪಡಿಸುತ್ತದೆ. ಸರ್ವರಿಗೂ ಹಿತವನ್ನುಂಟು ಮಾಡುವ ಆ ಬುದ್ಧಿಯನ್ನು ನಮ್ಮಪರವಾಗಿಡು.

### English Translation

Divine Agni, giver of dwellings, knower of all that exists, extend to us that benevolence which, unshared by others, cherishes us like the showers of the rain-cloud ; that kindness which is beneficent for all mankind.

### ವಿಶೇಷವಿಷಯಗಳು

**ಜಾತವೇದಾಃ—ಜಾತಾನಿ ವೇದ, ಜಾತಾನಿ ವೈನಂ ವಿದುಃ**—ಇತ್ಯಾದಿ ನಿರುಕ್ತನಿರ್ವಚನವನ್ನುದಾಹರಿಸಿ ಜಾತವೇದಸ್ಸೆಂಬ ನಾಮಧೇಯವು ಅಗ್ನಿಗೆ ಹೇಗೆ ಒಪ್ಪುತ್ತದೆಂಬ ವಿಷಯವನ್ನು ಹಿಂದೆ ವಿವರಿಸಿ ತಿಳಿಸಿದೆ. (ಋಗ್ವೇದ ಸಂಹಿತೆ. ಭಾಗ 8, ಪುಟ 161-1).

**ವಸೋ**—ಎಲ್ಲರಿಗೂ ವಸತಿಕಾರಕನಾದುದರಿಂದ ವಸುಶಬ್ದವಾಚ್ಯನೆಂದು ಸಾಯಣರು ತಾತ್ಪರ್ಯಮಾಡಿದ್ದಾರೆ. ಸರ್ವವ್ಯಾಪಿಯಾದುದರಿಂದಲೂ ವಸುಶಬ್ದವಾಚ್ಯನಾಗಬಹುದು ಎಂಬ ವಿಷಯವನ್ನು ಇದೇ ಸೂಕ್ತದ ೨ ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ ಅಗ್ನಿಯು ವಸುಗಳೊಂದಿಗೆ ಸೇರಿರುವನು ಎಂದಿರುವಾಗ ಭಿನ್ನದೇವತೆಗಳೆಂದು ಸೂಚಿತವಾಗಿದೆ. ಆದರೆ ಅನೇಕಕಡೆಗಳಲ್ಲಿ ವಿಶ್ವವ್ಯಾಪಿಯಾದ ಅಗ್ನಿಗೂ ಆದಿತ್ಯನಿಗೂ ವಸುಗಳಿಗೂ ತಾದಾತ್ಮ್ಯವನ್ನೇ ಹೇಳಿರುವುದರಿಂದ ಅಗ್ನಿಗೆ **ವಸು** ಪದದ ವಿಶೇಷಣವಿರುವುದು ಉಚಿತವಾಗಿದೆ.

**ಸುಮತಿಂ**— ಪ್ರಮತಿಂ ಎಂದು ಬುದ್ಧಿಯಲ್ಲಿ ಎರಡು ವಿಧವಾದ ವೈಶಿಷ್ಟ್ಯವನ್ನು ತಿಳಿಸಿದೆ. **ಪ್ರಮತಿ** ಶಬ್ದಕ್ಕೆ ಪ್ರಕೃಷ್ಟವಾದ ಬುದ್ಧಿಯೆಂದೂ **ಸುಮತಿ**ಶಬ್ದಕ್ಕೆ ಶೋಭನಾತ್ಮಕವಾದ ಬುದ್ಧಿಯೆಂದೂ ಅರ್ಥವಾಗಿದೆ.

CC-0. Jangamwadi Math Collection. Digitized by eGangotri

**ಪ್ರಮತಿ**ಶಬ್ದವು ತತ್ತ್ವಾರ್ಥಗ್ರಹಣಕ್ಕೆ ಉಪಯುಕ್ತವಾದ ಜ್ಞಾನಶಕ್ತಿಯನ್ನೂ, **ಸುಮತಿ**ಶಬ್ದವು ಶ್ರೇಷ್ಠವಾದ ಕರ್ತವ್ಯಾಚರಣೆಗೆ ಬೇಕಾದ ನೈತಿಕವಾದ ಕ್ರಿಯಾಶಕ್ತಿಯನ್ನೂ ಸೂಚಿಸುವುದೆಂದು ಹೇಳಬಹುದು.

**ಪರ್ವತಸ್ಯ ಧಾರಾ ಇವ**—ಎಂಬ ಉಪಮೆಯಲ್ಲಿ ಪರ್ವತಶಬ್ದಕ್ಕೆ ಮೇಘವೆಂದರ್ಥಮಾಡಿದೆ. **ಪರ್ವತ** ಶಬ್ದಕ್ಕೆ ಮೇಘವೆಂಬರ್ಥವು ಹೇಗೆ ಒಪ್ಪುತ್ತದೆ ಎಂಬ ವಿಷಯವು ಪರ್ಯಾಲೋಚಿಸಲ್ಪಡತಕ್ಕದ್ದಾಗಿದೆ. ಋಕ್ಸಂಹಿತೆಯಲ್ಲಿ **ಪರ್ವತ** ಪದವು ಇಂದ್ರಪರವಾದುದೂ ಮರುತ್ತುಗಳ ಪರವಾದುದೂ ಆದ ಸೂಕ್ತಗಳಲ್ಲಿ ಅಧಿಕವಾಗಿ ಪ್ರಯೋಗಿಸಲ್ಪಟ್ಟಿದೆ. ರೂಢಿಯಲ್ಲಿರತಕ್ಕ ಅರ್ಥವು **ಪರ್ವತ**ವೆಂದು ಪ್ರಸಿದ್ಧವಾಗಿದೆ. ಆದರೆ **ಮೇಘ**ವೆಂದರ್ಥ ಮಾಡಲು ಆಧಾರವೇನು ಎಂಬುದೇ ಪ್ರಶ್ನೆ. ಯಾಸ್ಕರನಿರ್ವಚನವು—

**"ಪರ್ವವಾನ್ ಪರ್ವತಃ ; ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ"**

(ನಿ· ೧-೨೦)

ಪರ್ವವಿರತಕ್ಕದ್ದು ಪರ್ವತ. ತುಂಬು ಎಂಬಂರ್ಥವನ್ನು ಕೊಡತಕ್ಕ ಪೃ ಧಾತುವಿನಿಂದಾಗಲಿ ಅಥವಾ ತೃಪ್ತಿಗೊಳಿಸು ಎಂಬರ್ಥವನ್ನು ಕೊಡುವ ಪ್ರೀ ಧಾತುವಿನಿಂದಾಗಲಿ ಪರ್ವಶಬ್ದವು ನಿಷ್ಪನ್ನವಾಗಿದೆ. ಅಂತಹ ಪರ್ವವುಳ್ಳದ್ದು ಪರ್ವತವೆಂದು ನಿರುಕ್ತಕಾರರ ನಿರ್ವಚನವಿದೆ. ಈ ನಿರ್ವಚನದ ಪ್ರಕಾರವಾಗಿ ಶೂನ್ಯವಾದ ಆಕಾಶವನ್ನು ಮೇಘಗಳು ತುಂಬುವುದರಿಂದಲಾಗಲಿ, ಅಥವಾ ವೃಷ್ಟಿದ್ವಾರಾ ಪ್ರಪಂಚಕ್ಕೆ ತೃಪ್ತಿಯನ್ನುಂಟುಮಾಡುವುದರಿಂದಾಗಲಿ ಮೇಘಕ್ಕೆ ಪರ್ವತವೆಂದು ಹೆಸರು ಇರುವುದರಲ್ಲಿ ಆಕ್ಷೇಪವಿಲ್ಲ. ಇದೇ ಪದವು ಗಿರಿ ಎಂಬುದಕ್ಕೆ ವಿಶೇಷಣವಾಗಿ ಅನೇಕಕಡೆಗಳಲ್ಲಿ ಪ್ರಯುಕ್ತವಾಗಿವೆ.

**ಅಶ್ಮಾನಂ ಚಿತ್ಸ್ವರ್ಯಂ೧ ಪರ್ವತಂ ಗಿರಿಂ ಪ್ರ ಚ್ಯಾವಯಂತಿ ಯಾಮಭಿಃ |**

(ಋ. ಸಂ. ೫-೫೬-೪)

**ತ್ಯಂ ಚಿತ್ಪರ್ವತಂ ಗಿರಿಂ ಶತವಂತಂ ಸಹಸ್ರಿಣಂ | ವಿ ಸ್ತೋತೃಭ್ಯೋ ರುರೋಜಿಥ ||**

(ಋ. ಸಂ. ೮-೬೪-೫)

ಎಂಬೆಡೆಗಳಲ್ಲಿ ಪರ್ವತಶಬ್ದವು ಗಿರಿಗೆ ವಿಶೇಷಣವಾಗಿದೆ. ಇವುಗಳಲ್ಲಿ ಮೊದಲನೆಯದರಲ್ಲಿ **ಜಗತ್ಪೂರಕ ಉದಕವಾನ್ ಮೇಘಃ |** ಜಗತ್ತನ್ನು ನೀರಿನಿಂದ ತುಂಬಲು ಸಮರ್ಥವಾದ ಮೇಘವೆಂದೂ, ಎರಡನೆಯದರಲ್ಲಿ **ಪರ್ವವಾನ್ ಗಿರಿಃ** ಪರ್ವಗಳುಳ್ಳ ಮೇಘವೆಂದೂ ಅರ್ಥಮಾಡಿದ್ದಾರೆ.

ನಿಘಂಟುವಿನಲ್ಲಿ, **ಪರ್ವತ, ಅದ್ರಿ, ಗಿರಿ** ಇವುಗಳೆಲ್ಲವೂ ಸಹ ಮೇಘನಾಮಗಳಲ್ಲಿಯೇ ಪಠಿತವಾಗಿವೆ. (ನಿ ೧-೧೦) ಸಾಯಣರು ಋ. ಸಂ. ೫-೫೬-೪ರಲ್ಲು **ಗಿರಿ** ಶಬ್ದವು ಗೄ ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿ **ನಿಗಿರತ್ಯುದಕಮಿತಿ ಗಿರಿಃ**-ಉದಕವನ್ನು ಸುರಿಸುವುದರಿಂದ ಮೇಘಕ್ಕೆ ಗಿರಿಯೆಂಬ ಹೆಸರೆಂದೂ, ಮತ್ತು **ಅದ್** ಧಾತುವಿನಿಂದ ಅದ್ರಿಶಬ್ದವು ನಿಷ್ಪನ್ನವಾಗಿದೆಯೆಂದೂ ತಿಳಿಸಿದ್ದಾರೆ. (೨-೧೬೫-೪). ಇವುಗಳೆಲ್ಲವನ್ನೂ ಇಂದ್ರನು ತನ್ನ ವಜ್ರದಿಂದ ಸೀಳಿ ನೀರನ್ನು ಸುರಿಸುವನೆಂದು ವರ್ಣಿತವಾಗಿರುವುದರಿಂದ ಇವುಗಳಿಗೆಲ್ಲಕ್ಕೂ ಮೇಘವೆಂಬುದೇ ಋಕ್ಸಂಹಿತೆಯಲ್ಲಿ ಪ್ರಸಿದ್ಧವಾದ ಅರ್ಥವಿರಬೇಕು. ಆದರೆ ಎಲ್ಲಾ ಪದಗಳಿಗೂ ಮೂಲಾರ್ಥವು ರೂಢವಾದ ಪರ್ವತ ವೆಂಬುದೂ ಸಹ ಅನೇಕ ಆಧಾರಗಳಿಂದ ತಿಳಿಯುತ್ತದೆ.

CC-0. Jangamwadi Math Collection. Digitized by eGangotri

**ವಿ ವೃತ್ರಂ ಪರ್ವಶೋ ಯಯುರ್ವಿ ಪರ್ವತಾँ ಅರಾಜಿನಃ । ಚಕ್ರಾಣಾ ವೃಷ್ಣಿ ಪೌಂಸ್ಯಂ ॥**

(ಋ. ಸಂ. ೮-೭-೨೩)

ಪ್ರಕಾಶವಿಲ್ಲದೇ ಅಂಧಕಾರಮಯವಾಗಿದ್ದ ಈ ಪರ್ವತಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ಹೊಡೆದು ಸೀಳಿ ಹಾಕಿದನು, ಎಂಬಲ್ಲಿ ಅಂಧಕಾರಸಮೂಹವು ಪರ್ವತಶಬ್ದವಾಚ್ಯವಾಗಿದ್ದಿರಬೇಕೆಂದು ತಿಳಿಯುತ್ತದೆ. ಈ ಅಂಧಕಾರಸಮೂಹವೇ ಮೇಘವು.

ಆದರೆ, ಪರ್ವತಶಬ್ದವು ಪ್ರಯೋಗಿಸಿರುವಾಗಲೆಲ್ಲಾ ಕೇವಲ ಮೇಘವೆಂದೇ ಅರ್ಥಮಾಡುವುದೂ ಸಹ ಉಚಿತವಾಗಲಾರದು. ಹೇಗೆಂದರೆ, ಇಂದ್ರನ ಜಯದ ನಂತರ ನಾಲ್ಕು ವಿಧವಾದ ಸಿದ್ಧಿಗಳಿರುತ್ತವೆ. ೧) ಗೋವುಗಳ ಮುಕ್ತಿ- ೨) ಉದಕಗಳ ಬಂಧರಹಿತವಾದ ಪ್ರವಾಹ. ೩) ಉಷಸ್ಸಿನ ಆವಿರ್ಭಾವ ಮತ್ತು ೪) ಸೂರ್ಯೋದಯ ಈ ನಾಲ್ಕು ಅಂಶಗಳೂ ಇಂದ್ರಜಯದ ನಂತರ ಸಂಭವಿಸತಕ್ಕ ವ್ಯಾಪಕಗಳು. ಆದುದರಿಂದ ಪರ್ವತಶಬ್ದಕ್ಕೆ ಕೇವಲ ಮೇಘವೆಂದರ್ಥಮಾಡುವುದು ಕೇಲವು ಸಂದರ್ಭಗಳಲ್ಲಿ ಮಾತ್ರ ಸಾಧ್ಯವಾಗುತ್ತದೆ.

**ಸ ಮಾತರಾ ಸೂರ್ಯೇಣಾ ಕವೀನಾಮವಾಸಯದ್ರುಜದದ್ರಿಂ ಗೃಣಾನಃ ॥**

(ಋ. ಸಂ. ೬-೩೨-೨)

ಇತ್ಯಾದಿ ಸ್ಥಳಗಳಲ್ಲಿ ಅದ್ರಿಯನ್ನು ಸೀಳಿ ಸೂರ್ಯಪ್ರಕಾಶವನ್ನುಂಟುಮಾಡಿ ದ್ಯಾವಾಪೃಥಿವಿಗಳಿಗೆ ಸೂರ್ಯಪ್ರಕಾಶವನ್ನು ಹರಡಿದನು ಎಂದಿದೆ. ಇಲ್ಲಿ ಅದ್ರಿ, ಶಬ್ದಕ್ಕೆ ಪರ್ವತವೆಂದರ್ಥಮಾಡಿದ್ದಾರೆ- ಇಲ್ಲಿ ರೂಢವಾಗಿ ಕರೆಯಲ್ಪಡತಕ್ಕ ಪರ್ವತವಲ್ಲ. ಆದುದರಿಂದ ಪರ್ವತಪ್ರಾಯವಾಗಿರುವ ಅಂಧಕಾರದ ರಾಶಿಯೆಂದರ್ಥಮಾಡಬೇಕು. ಇದರಂತಯೇ,

**ಮಹಾಂತಮಿಂದ್ರ ಪರ್ವತಂ ವಿ ಯದ್ವಃ ಸೃಜೋ ವಿ ಧಾರಾ ಅವ ಧಾನವಂ ಹನ್ ॥**

(ಋ ಸಂ. ೫-೩೨-೧)

ಉದಕವನ್ನು ತಡೆದು ನಿಲ್ಲಿಸಿರುವ ಪರ್ವತವೆಂದರೆ ಅಂಧಕಾರಮಯವಾದ ಮೇಘವೆಂದರ್ಥಮಾಡಬೇಕು. ಗಭೀರವಾದ ಅಂತರಿಕ್ಷಸ್ಥವಾದ ಮೇಘವೆಂದರೆ ಇಲ್ಲಿ ತಾತ್ಪರ್ಯವು ಹೊಂದಿಕೊಳ್ಳುತ್ತದೆ ಹೇಗೆಂದರೆ,

**ಶಿಶುಂ ನದೀನಾಗ್ಂ ಹರಿಮದ್ರಿಬುಧ್ನಮಿತಿ ಗಿರಿರ್ವಾ ಅದ್ರಿರ್ಗಿರಿಬುಧ್ನಾ ಉ ವಾ ಆಪಃ ॥**

(ಶ. ಬ್ರಾ. ೭-೫-೨-೧೮)

ಎಂಬಲ್ಲಿ ಯಾವ ವಾರುಣಾಶ್ವವನ್ನು ಹಿಂದೆ ಸೂರ್ಯರಶ್ಮಿಗಳೆಂದು ಕರೆದಿದೆಯೋ (**ವಾರುಣೋ ವಾ ಅಶ್ವಃ**) ಅಂತಹ ವಾರುಣಾಶ್ವಕ್ಕೆ ಗರ್ಭಭೂತವಾದ ಉದಕವು ಅದ್ರಿಮೂಲವನ್ನಾಶ್ರಯಿಸಿದೆ ಎಂಬ ಬ್ರಾಹ್ಮಣವಾಕ್ಯದಲ್ಲಿ ಹೇಳಿರುವ ಅಭಿಪ್ರಾಯವನ್ನು ಸಮರ್ಥಿಸುತ್ತದೆ. ಪರ್ವತದಂತೆ ಘನೀಭೂತವಾದುದೂ, ವ್ಯಾಪಕವಾದುದೂ ಆದ ಈ ಅಂಧಕಾರವು ಉದಕವನ್ನೂ, ಸೂರ್ಯರಶ್ಮಿಗಳನ್ನೂ ತಡೆದು ನಿಲ್ಲಿಸುತ್ತದೆ. (ಋ. ಸಂ. ೪-೧೬-೬ ; ೮) ಇದೇ ಅಂಧಕಾರಮಯ ಎಂಬರ್ಥದಲ್ಲೇ ಇನ್ನೂ ಅನೇಕಕಡೆಗಳಲ್ಲಿ ಇದರ ಪ್ರಯೋಗವನ್ನು ನೋಡಬಹುದು. ಉದಾಹರಣೆಗೆ,

**ತ್ವಮಪಾಮಪಿಧಾನಾವೃಣೋರಪಾಧಾರಯಃ ಪರ್ವತೇ ದಾನುಮದ್ವಸು ।**

(ಋ. ಸಂ. ೧-೫೧-೪)

CC-0. Jangamwadi Math Collection. Digitized by eGangotri

ಇಂದ್ರನು (ಆದಿತ್ಯರೂಪನಾದ ಇಂದ್ರನು) ತನ್ನ ಪ್ರಕಾಶವಮಾನವಾದ ಕಿರಣಗಳಿಂದ ಪರ್ವತಗಳನ್ನೆಲ್ಲಾ ಚಲಿಸುವಂತೆ ಮಾಡಿ ಅಂತರ್ಹಿತನಾಗಿದ್ದ ಸೂರ್ಯನನ್ನು ಪ್ರಕಾಶಿಸುವಂತೆ ಮಾಡಿದನು ಎಂಬಂತೆ ವರ್ಣನೆಯಿರುವ ಅನೇಕ ಸ್ಥಳಗಳಲ್ಲಿ ಮೇಲೆ ಹೇಳಿದಂತೆಯೇ ಅರ್ಥಮಾಡಬೇಕಾಗುತ್ತದೆ. "ಶಿಶುಂ ನದೀನಾಂ ಹರಿಮದ್ರಿಬುಧ್ನಂ" (ವಾ. ಸಂ ೧೩-೪೨) ಇತ್ಯಾದಿ ವಾಕ್ಯಗಳೂ ಸಹ ಇದೇ ಅರ್ಥವನ್ನು ಸಮರ್ಥಿಸುತ್ತವೆ.

ಅಂಧಕಾರರಾಶಿಯನ್ನೂ ಅದರ ಘನತೆಯನ್ನೂ ಸೂಚಿಸಲು ಪರ್ವತಶಬ್ದದ ಪ್ರಯೋಗವಿರುವಂತೆಯೇ ಅಂಧಕಾರಕ್ಕೆ ವಿರುದ್ಧವಾದ ಪ್ರಕಾಶಪುಂಜವನ್ನು ಸೂಚಿಸುವಾಗಲೂ ಸಹ ಈ ಪದದ ಪ್ರಯೋಗವಿರುತ್ತದೆ. ಉದಾಹರಣೆಗೆ

ಪ್ರಾಕ್ತಾದಪಾಕ್ತಾದಧರಾದುದಕ್ತಾದಭಿ ಜಹಿ ರಕ್ಷಸಃ ಪರ್ವತೇನ ।

(ಋ. ಸಂ. ೭-೧೦೪-೧೯)

ಇತ್ಯಾದಿ ಸ್ಥಳಗಳಲ್ಲಿ ಪರ್ವವಾನ್ ಪರ್ವತಃ ಎಂಬ ನಿರ್ವಚನವನ್ನು ಹೇಳಿದ್ದಾರೆ. ಇಲ್ಲಿ ವಜ್ರಾಯುಧವೆಂದರ್ಥ. ಎಂದರೆ ಪ್ರಕಾಶಪುಂಜವೆಂದು ತಾತ್ಪರ್ಯ, ಪರ್ವತಶಬ್ದವು ನಿರುಕ್ತಕಾರರ ಎರಡನೆಯ ನಿರ್ವಚನದಂತೆ ಪ್ರೀ ಧಾತುವಿನಿಂದ ನಿಷ್ಪನ್ನವಾಗಿದ್ದರೆ ಆಗ ಪ್ರೀತಿಕಾರಕರಾದ ಸುಹೃತ್ತುಗಳೂ ಎಂಬರ್ಥದಲ್ಲೂ ಪ್ರಯೋಗಿಸಿದ್ದಿರಬಹುದು. ಉದಾಹರಣೆಗೆ

ಅಸ್ಮೇ ರುದ್ರಾ ಮೇಹನಾ ಪರ್ವತಾಸೋ ವೃತ್ರಹತ್ಯೇ ಭರಹೂತೌ ಸಜೋಷಾಃ ॥

(ಋ. ಸಂ. ೮-೬೩-೧೨)

ಎಂಬಲ್ಲಿ ಮರುತ್ತುಗಳು ಇಂದ್ರನಸಖರು. ಇಂದ್ರನಿಗೆ ಯುದ್ಧದಲ್ಲಿ ಸಹಾಯಮಾಡಿ ವೃತ್ರಹನನಕ್ಕೆ ಸಹಾಯಮಾಡಿದುದರಿಂದ ಇವನಿಗೆ ಪ್ರೀತಿಕಾರಕರಾದರು. ಆದುದರಿಂದ ಇವರು ಪರ್ವತಶಬ್ದವಾಚ್ಯರು. ಪರ್ವತಸಪರ್ವಶಾಃ ಪೂರಣವಂತಃ ಪ್ರೀಣನವಂತೋ ವಾ ಮರುತಃ । ಎಂದು ಸಾಯಣರು ಈ ಪದದ ತಾತ್ಪರ್ಯವನ್ನು ವಿವರಿಸಿದ್ದಾರೆ. ಪರ್ವತಶಬ್ದಕ್ಕೆ ಪ್ರಕಾಶಾತ್ಮಕವಾದ ದೇವತಾವಿಶೇಷವೆಂದೂ ಅರ್ಥವಾಗುವ ಸನ್ನಿವೇಶಗಳಿವೆ. ಉದಾಹರಣೆಗೆ

ಪ್ರೋತಯೇ ವರುಣಂ ಮಿತ್ರಮಿಂದ್ರಂ ಮರುತಃ ಕೃಷ್ವಾವಸೇ ನೋ ಅದ್ಯ ।
ಪ್ರ ಪೂಷಣಂ ವಿಷ್ಣುಮಗ್ನಿಂ ಪುರಂಧಿಂ ಸವಿತಾರಮೋಷಧೀಃ ಪರ್ವತಾಂಶ್ಚ ॥

(ಋ. ಸಂ. ೬-೨೧-೯)

ಶಂ ನಃ ಪರ್ವತಾ ಧ್ರುವಯೋ ಭವಂತು ಶಂ ನಃ ಸಿಂಧವಃ ಶಮು ಸನ್ತ್ವಾಪಃ ॥

(ಋ. ಸಂ. ೭-೩೫-೮)

ಇತ್ಯಾದಿ ಸ್ಥಳಗಳಲ್ಲೆಲ್ಲಾ ಇಂದ್ರ, ಮಿತ್ರ ಇತ್ಯಾದಿ ದೇವತೆಗಳೊಡನೆ ಪರ್ವತಗಳೂ ಸಹ ಅನುಗ್ರಹಕ್ಕಾಗಿ ಪ್ರಾರ್ಥಿತರಾಗಿದ್ದಾರೆ. ಪರ್ವತಗಳು ನಮಗೆ ಸುಖಕಾರಿಗಳಾಗಲಿ ಎಂದು ಪ್ರಾರ್ಥಿಸಿದೆ. ಇಂತಹ ಸಂದರ್ಭಗಳಲ್ಲಿ ಪರ್ವತಾನ್ ಅದ್ರೀನ್ ಇತ್ಯೇತಾನ್ ದೇವಾನ್ । ಪರ್ವತ ಎಂದು ಕರೆಯಲ್ಪಡತಕ್ಕ ದೇವತೆಗಳನ್ನು ನಮ್ಮ ರಕ್ಷಣಾರ್ಥವಾಗಿ ಇಂದ್ರಾದಿ ದೇವತೆಗಳೊಡನೆ ಸೇರಿಸಿ ಪ್ರಾರ್ಥಿಸಿದೆಯೆಂದು ಸಾಯಣರು ವಿವರಿಸಿದ್ದಾರೆ. ಆದರೆ, ನ ಪರ್ವತಾ ನ ನದ್ಯಃ (ಋ. ಸಂ. ೫-೫೫-೭) ಇತ್ಯಾದಿ ಸ್ಥಳಗಳಲ್ಲಿ ಪಾರ್ಥಿವವಾದ ಪರ್ವತವೆಂದೇ ಅರ್ಥಮಾಡಿದ್ದಾರೆ. ಧ್ರುವಾ ಹ ಪರ್ವತಾ ಇಮೇ (ತೈ. ಬ್ರಾ. ೨-೪-೨೮) ಪರ್ವತ ಇವಾವಿಚಾಚಲಿಃ (ಋ. ಸಂ. ೧೦-೧೭೩-೨) ಮುಂತಾದ ಸನ್ನಿವೇಶಗಳಲ್ಲೂ ಸಹ ಪರ್ವತಗಳು ಸ್ಥಿರವಾಗಿ ಪ್ರತಿಷ್ಠಾಪಿತವಾಗಿರುವುದೆಂದು ಪಾರ್ಥಿವಪರ್ವತದ ಉಪಮಾನವಿರುತ್ತದೆ.

CC-0. Jangamwadi Math Collection. Digitized by eGangotri

ಪ್ರಕೃತವಾದ ಋಕ್ಕಿನಲ್ಲಿ **ಧಾರಾ ಇವ** ಇತ್ಯಾದ್ಯುಪಮಾನಗಳು ಮೇಘವೆಂಬ ಅರ್ಥವನ್ನೇ ಸಮರ್ಥಿಸುತ್ತವೆ.

**ವಿಶ್ವಜನ್ಯಾಂ—ಸರ್ವಜನಹಿತಾಂ ।** ಸಕಲರಿಗೂ ಹಿತವನ್ನುಂಟುಮಾಡತಕ್ಕ **ಸುಮತಿಂ** ಶ್ರೇಷ್ಠವಾದ ಬುದ್ಧಿಯನ್ನು ಎಂದು **ಸುಮತಿ**ಶಬ್ದಕ್ಕೆ ವಿಶೇಷಣವಾಗಿದೆ. ಜನ್ಯಶಬ್ದವು ಮೂರು ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. **ಜನ್** ಧಾತುವಿನಿಂದ ನಿಷ್ಪನ್ನವಾಗಿ ಜನ್ಮಕ್ಕೆ ಯೋಗ್ಯವಾದುದು ಎಂಬುದು ಒಂದರ್ಥ. ಇದು ರೂಢವಾಗಿರತಕ್ಕ ಅರ್ಥ. **ಪಾತ್ವೈತಿರ್ಜನ್ಯಾದಂಹಸೋ ನೋ ಮಿತ್ರಃ** (೪-೫೫-೫) ಇತ್ಯಾದಿ ಸ್ಥಳಗಳಲ್ಲಿ ಜನಸಂಬಂಧವಾದುದು ಜನ್ಯಶಬ್ದವಾಚ್ಯವಾಗಿರುತ್ತದೆ. ಜನಸಂಬಂಧವಾದ ಪಾಪದಿಂದ ನಮ್ಮನ್ನು ಮುಕ್ತರನ್ನಾಗಿ ಮಾಡು ಎಂದು ಪ್ರಾರ್ಥಿಸಿದೆ. ಇದಲ್ಲದೇ ಜನಹಿತವಾದುದು ಜನ್ಯಶಬ್ದವಾಚ್ಯವಾಗಿದೆ. **ಜನಂಜನಂ ಜನ್ಯೋ ನಾತಿಮನ್ಯತೇ** (೧೦-೯೧-೨) ಮುಂತಾದ ಸಂದರ್ಭಗಳಲ್ಲಿ ಜನ್ಯವೆಂದರೆ ಜನಹಿತವೆಂದರ್ಥ. ಅದೇ ಅರ್ಥವನ್ನು ವಿಶ್ವಜನ್ಯಾಂ ಎಂಬುದಕ್ಕೂ ಹೇಳಬೇಕು:

**ಸ ಆ ಯಜಸ್ವ ನೃವತೀರನು ಕ್ಷಾಃ ಸ್ಪಾರ್ಹಾ ಇಷಃ ಕ್ಷುಮತೀರ್ವಿಶ್ವಜನ್ಯಾಃ ॥**

(ಋ ಸಂ. ೧೦-೨-೬)

ಸಕಲಜನರ ಹಿತಕ್ಕೂ ಸಾಧನಭೂತವಾದ ಅನ್ನವನ್ನು ದೇವತೆಗಳಿಗರ್ಪಿಸು ಎಂಬರ್ಥವಿದೆ. ಆದರಂತೆಯೇ ಪ್ರಕೃತವಾದ ಋಕ್ಕಿನಲ್ಲಿಯೂ ವಿಶ್ವಜನ್ಯಶಬ್ದಕ್ಕೆ ಸಕಲಜನಕ್ಕೂ ಹಿತವನ್ನುಂಟುಮಾಡತಕ್ಕದ್ದು ಎಂದು ತಾತ್ಪರ್ಯವನ್ನು ಹೇಳಬೇಕು.

**ವಿಶ್ವಜನ್ಯಾಂ ಸುಮತಿಂ ।** ಸರ್ವರಿಗೂ ಹಿತವನ್ನುಂಟುಮಾಡುವ ಸದ್ಬುದ್ಧಿಯನ್ನು ದಯಪಾಲಿಸು ಎಂಬ ಪ್ರಾರ್ಥನೆಯಲ್ಲಿ ಲೋಕಕಲ್ಯಾಣದ ದೃಷ್ಟಿಯು ಸೂಚಿತವಾಗುತ್ತದೆ. ಕೇವಲ ತನ್ನ ಸ್ವಾರ್ಥದ ಹಿತದಲ್ಲಿ ದೃಷ್ಟಿಯಿಡದೇ ಸಕಲ ಲೋಕವೂ ಕ್ಷೇಮವನ್ನು ಪಡೆಯಲಿ ಎಂದು ಸೂಚಿತವಾಗಿದೆ.

## ಐವತ್ತೆಂಟನೆಯ ಸೂಕ್ತವು.

### ಸಾಯಣಭಾಷ್ಯಂ

**ಧೇನುಃ ಪ್ರತ್ನಸ್ಯೇತಿ ನವರ್ಚಂ ಪಂಚಮಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಮಾಶ್ವಿನಂ । ತಥಾ ಚಾನುಕ್ರಾಂತಂ । ಧೇನುರ್ನವಾಶ್ವಿನಮಿತಿ ॥ ಪ್ರಾತರನುವಾಕ ಆಶ್ವಿನಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚಾಸ್ಯ ಸೂಕ್ತಸ್ಯ ವಿನಿಯೋಗಃ । ಸೂತ್ರಿತಂ ಚ । ಧೇನುಃ ಪ್ರತ್ನಸ್ಯ ಕ ಉ ಶ್ರವದಿತಿ ಸೂಕ್ತೇ । ಆ. ೪-೧೫ । ಇತಿ ॥ ವ್ಯೂಳ್ಹೇ ದಶರಾತ್ರೇ ದ್ವಿತೀಯೇ ಛಂದೋಮೇ ಪ್ರಉಗಶಸ್ತ್ರೇಽಯಮಾಶ್ವಿನಸ್ತೃಚಃ । ದ್ವಿತೀಯಸ್ಯಾಗ್ನಿಂ ವ ಇತಿ ಖಂಡೇ ಸೂತ್ರಿತಂ । ಧೇನುಃ ಪ್ರತ್ನಸ್ಯ ಕಾಮ್ಯಂ ದುಹಾನಾ ಬ್ರಹ್ಮಾಣ ಇಂದ್ರೋಪ ಯಾಹಿ ವಿದ್ವಾನ್ । ಆ. ೮-೧೦ । ಇತಿ ॥**

CC-0. Jangamwadi Math Collection. Digitized by eGangotri

ಅನುವಾದವು—**ಧೇನುಃ ಪ್ರತ್ನಸ್ಯ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಐದನೆಯ ಸೂಕ್ತವು- ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಅಶ್ವಿನೀ ದೇವತೆಗಳು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಧೇನುರ್ನವಾಶ್ವಿನಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—**ಧೇನುಃ ಪ್ರತ್ನಸ್ಯ ಕ ಉ ಶ್ರವದಿತಿ ಸೂಕ್ತೇ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೧೫); ಮತ್ತು ವ್ಯೂಢನೆಂಬ ದಶರಾತ್ರಯಾಗದಲ್ಲಿ ದ್ವಿತೀಯ ಛಂದೋಮದಲ್ಲಿ ಪ್ರಉಗಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳು ಅಶ್ವಿನೀದೇವತಾಕವಾದ ನಾಲ್ಕನೆಯ ತೃಚಕ್ಕಾಗಿ (ತೃಚವೆಂದರೆ ಮೂರು ಋಕ್ಕುಗಳು) ವಿನಿಯೋಗಿಸಲ್ಪಡುವುದೆಂದು ಆಶ್ವಲಾಯನಶ್ರೌತಸೂತ್ರದ—**ದ್ವಿತೀಯಸ್ಯಾಗ್ನಿಂ ವ** ಎಂಬ ಖಂಡದಲ್ಲಿ—**ಧೇನುಃ ಪ್ರತ್ನಸ್ಯ ಕಾವ್ಯಂ ದುಹಾನಾ ಬ್ರಹ್ಮಾಣ ಇಂದ್ರೋಪ ಯಾಹಿ ವಿದ್ವಾನ್** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೧೦).

---

॥ ಓಂ ॥

## ಸೂಕ್ತ—೫೮

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೫೮ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೩, ೪ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯ ॥

ಋಷಿಃ—ವಿಶ್ವಾಮಿತ್ರಃ ॥

ದೇವತಾ—ಅಶ್ವಿನೌ ॥

ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

**ಧೇನುಃ ಪ್ರತ್ನಸ್ಯ ಕಾವ್ಯಂ ದುಹಾನಾಂತಃ ಪುತ್ರಶ್ಚರತಿ ದಕ್ಷಿಣಾಯಾಃ ।**

**ಆ ದ್ಯೋತನಿಂ ವಹತಿ ಶುಭ್ರಯಾಮೋಷಸಃ ಸ್ತೋಮೋ ಅಶ್ವಿನಾವಜೀಗಃ ॥**

ಪದಪಾಠಃ

ಧೇನುಃ । ಪ್ರತ್ನಸ್ಯ । ಕಾವ್ಯಂ । ದುಹಾನಾ । ಅಂತರಿತಿ । ಪುತ್ರಃ । ಚರತಿ । ದಕ್ಷಿಣಾಯಾಃ ।

ಆ । ದ್ಯೋತನಿಂ । ವಹತಿ । ಶುಭ್ರऽಯಾಮಾ । ಉಷಸಃ । ಸ್ತೋಮಃ । ಅಶ್ವಿನಾ । ಅಜೀಗರಿತಿ ॥ ೧ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಧೇನುಃ ಪ್ರೀಣಯಿತ್ರ್ಯುಷಾಃ ಪ್ರತ್ನಸ್ಯ ಪುರಾತನಸ್ಯಾಗ್ನೇಃ ಕಾಮ್ಯಂ ಕಮನೀಯಂ ಪಯೋ ದುಹಾನಾ । ದೋಗ್ಧ್ರೀ ಭವತಿ । ದಕ್ಷಿಣಾಯಾ ಉಷಸಃ ಪುತ್ರಃ ಸೂರ್ಯಸ್ತಸ್ಯಾ ಅಂತೆಶ್ಚರತಿ । ಉಷಸೋಽನಂತರಂ ಶುಭ್ರಯಾಮಾ । ಸೂರ್ಯಕಿರಣಸಂಪರ್ಕಾಚ್ಛುಭ್ರತೆಯಾ ಗಮನಂ ಯಸ್ಯಾಸೌ ಶುಭ್ರಯಾಮಾ ದಿವಸಃ । ದ್ಯೋತನಿಂ ಸರ್ವಸ್ಯ ಪ್ರಕಾಶಕಂ ಸೂರ್ಯಮಾ ವಹತಿ । ಬಿಭರ್ತಿ । ಅತ ಉಷಸಃ ಪುರಾಶ್ವಿನೌ ಸ್ತೋತುಂ ಸ್ತೋಮಃ ಸ್ತೋತ್ರಕಾರೀ ಹೋತ್ರಾದಿರಜೀಗಃ । ಜಾಗರ್ತಿ । ಉತ್ತಿಷ್ಠತಿ ॥ ಶುಭ್ರಯಾಮಾ । ಯಾ ಪ್ರಾಪಣೇ । ಅತೋ ಮನಿನ್ । ಬಹುವ್ರೀಹೌ ಪೂರ್ವಪದಸ್ವರಃ । ಅಜೀಗಃ । ಜಾಗೃ ನಿದ್ರಾಕ್ಷಯೇ । ಲಙಃ ತಿಪ್ಯದಾದಿತ್ವಾಚ್ಛಪೋ ಲುಕ್ । ಆಕಾರಸ್ಯೇಕಾರಶ್ಛಾಂದಸಃ । ಗುಣೇ ಕೃತೇ ಹಲ್ಙ್ಯಾದಿನಾ ತಿಪೋ ಲೋಪಃ ॥

## ಪ್ರತಿಪದಾರ್ಥ

ಧೇನುಃ—ಜಗತ್ಪ್ರೀತಿಕಾರಕಳಾದ ಉಷೋದೇವತೆಯು । ಪ್ರತ್ನಸ್ಯ—ಪುರಾತನನಾದ ಅಗ್ನಿಗಾಗಿ । ಕಾಮ್ಯಂ—ಅಪೇಕ್ಷಿತವಾದ ಪಯಸ್ಸನ್ನು । ದುಹಾನಾ—ಕರೆಯುತ್ತಾಳೆ । ದಕ್ಷಿಣಾಯಾಃ—ಉಷಸ್ಸಿನ । ಪುತ್ರಃ—ಪುತ್ರನಾದ ಸೂರ್ಯನು । ಅಂತಃ—ಅಂತರಿಕ್ಷದಲ್ಲಿ । ಚರತಿ—ಸಂಚರಿಸುತ್ತಾನೆ । ಶುಭ್ರಯಾಮಾ—ಸೂರ್ಯಕಿರಣದಿಂದ ಪ್ರಕಾಶಿತವಾದ ಅಹಸ್ಸು । ದ್ಯೋತನಿಂ—ಸರ್ವಪ್ರಕಾಶಕನಾದ ಸೂರ್ಯನನ್ನು । ಆ ವಹತಿ—ಧರಿಸುತ್ತದೆ । ಉಷಸಃ—ಉಷಸ್ಸಿನ ಆವಿರ್ಭಾವಕ್ಕಿಂತಲೂ ಪೂರ್ವ। ಅಶ್ವಿನೌ—ಅಶ್ವಿನೀದೇವತೆಗಳನ್ನು ಸ್ತುತಿಸಲು। ಸ್ತೋಮಃ—ಸ್ತುತಿಕಾರಕನು । ಅಜೀಗಃ—ಎಚ್ಚರಗೊಳ್ಳುತ್ತಾನೆ ।

## ಭಾವಾರ್ಥ

ಜಗತ್ಪ್ರೀತಿಕಾರಕಳಾದ ಉಷೋದೇವತೆಯು ಪುರಾತನನಾದ ಅಗ್ನಿಗಾಗಿ ಅಪೇಕ್ಷಿತವಾದ ಪಯಸ್ಸನ್ನು ಕರೆಯುತ್ತಾಳೆ. ಉಷಸ್ಸಿನ ಪುತ್ರನಾದ ಸೂರ್ಯನು ಅಂತರಿಕ್ಷದಲ್ಲಿ ಸಂಚರಿಸುತ್ತಾನೆ. ಸೂರ್ಯಕಿರಣದಿಂದ ಪ್ರಕಾಶಿತವಾದ ಅಹಸ್ಸು ಸರ್ವಪ್ರಕಾಶಕನಾದ ಸೂರ್ಯನನ್ನು ಧರಿಸುತ್ತದೆ. ಉಷಸ್ಸಿನ ಆವಿರ್ಭಾವಕ್ಕಿಂತಲೂ ಪೂರ್ವ ಅಶ್ವಿನೀದೇವತೆಗಳನ್ನು ಸ್ತುತಿಸಲು ಸ್ತುತಿಕಾರಕನು ಎಚ್ಚರಗೊಳ್ಳುತ್ತಾನೆ.

## English Translation

The milch-cow (the dawn) yields the desired milk to the ancient (Agni); the son of the south passes within (the firmament); the bright-houred (day) brings the illuminative (sun): the praiser awakes to (glorify) the Ashwins preceding the dawn.

## ವಿಶೇಷವಿಷಯಗಳು

ಉಷಸ್ಸಿಗೂ ಯಜ್ಞಾಗ್ನಿಗೂ ಇರುವ ಸಂಬಂಧವನ್ನೂ, ಉಷಸ್ಸಿನ ಆವಿರ್ಭಾವವಾದೊಡನೆಯೇ ಸೂರ್ಯಪ್ರಭೆಯಿಂದ ಲೋಕವು ಪ್ರಕಾಶಿತವಾಗುವುದನ್ನೂ ವರ್ಣಿಸಿ ಅಶ್ವಿನೀದೇವತೆಗಳೊಡನೆ ಉಷಸ್ಸಿಗಿರುವ ಸಾಹಚರ್ಯವನ್ನೂ ಸಹ ಈ ಮಂತ್ರದಲ್ಲಿ ತಿಳಿಸಿದೆ. ಉಷಸ್ಸು ಜಗತ್ಪ್ರೀತಿಕಾರಕಳಾದುದರಿಂದ ಧೇನುಶಬ್ದವಾಚ್ಯಳಾಗಿದ್ದಾಳೆ

CC-0. Jangamwadi Math Collection. Digitized by eGangotri

ಧೇನುಶಬ್ದದಿಂದ ಸೂಚಿತವಾಗುವ ವಿಶೇಷಾರ್ಥವನ್ನು ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ಅಗ್ನಿಗೂ ಉಷಸ್ಸಿಗೂ ಇರುವ ಸಂಬಂಧವನ್ನು ತಿಳಿಸಲು ಈ ಪದದ ಪ್ರಯೋಗವಿದೆ. ಅಥವಾ ಅಗ್ನಿಗೆ ಯಾವ ರೀತಿ ವೃದ್ಧಿ ಕಾರಕಳೋ ಅದರಂತೆಯೇ ಅಗ್ನಿಯದ್ವಾರಾ ಜಗದ್ವೃದ್ಧಿಕಾರಕಳು ಎಂದೂ ಹೇಳಬಹುದು. ವತ್ಸಕ್ಕೆ ಧೇನುವಿನ ದರ್ಶನದಿಂದಾಗುವ ಸೌಖ್ಯಕ್ಕಿಂತಲೂ ಜಗತ್ತಿಗೆ ಉಷಸ್ಸಿನ ದರ್ಶನದಿಂದ ಇನ್ನೂ ಅಧಿಕವಾದ ಆನಂದವು ಲಭಿಸುತ್ತದೆ ಎಂಬುದರಲ್ಲಿ ಸಂದೇಹವಿಲ್ಲ. ತಮಸ್ಸಿನ ನಾಶವಾಗುತ್ತದೆ. ಕೇವಲ ಭೌತಿಕವಾದ ತಮಸ್ಸೇ ಅಲ್ಲ. ಅಜ್ಞಾನರೂಪ ವಾದ ತಮಸ್ಸೂ ನಾಶವಾಗುತ್ತದೆ. ಚಾಕ್ಷುಷದರ್ಶನದಿಂದ ಆಗುವ ಸಂತೋಷದೊಡನೆ ಆತ್ಮಾನಂದವೂ ಸಹ ಲಭಿಸುತ್ತದೆ. ಅನೇಕ ರೀತಿಯಲ್ಲಿ ತೃಪ್ತಿಕಾರಕಳಾದುದರಿಂದ **ಧೇನು**ಶಬ್ದದಿಂದ ವಾಚ್ಯಳಾಗಿರುವುದು ಉಚಿತ ವಾಗಿಯೇ ಇರುತ್ತದೆ. **ದಕ್ಷಿಣಾಯಾಃ** ಎಂಬ ಪದದಿಂದಲೂ ವರ್ಣಿತಳಾಗಿದ್ದಾಳೆ. ಮತ್ತು ಆದಿತ್ಯನು ಇವಳ ಪುತ್ರನೆಂದು ಇಲ್ಲಿ ತಿಳಿಸಿದೆ. ಇದರಂತೆಯೇ ಅಗ್ನಿಯನ್ನು ಸಹ ಇವಳ ಪುತ್ರನೆಂದೇ ಕರೆಯಬಹುದು. ಮತ್ತು ಉಷಸ್ಸಿಗೂ ಆದಿತ್ಯಾಗ್ನಿಗಳಿಗೂ ಮಾತೃಪುತ್ರಸಂಬಂಧವು ಹೇಗೆ ಎಂಬುದೂ ಸಹ ಅನೇಕ ಕಡೆಗಳಲ್ಲಿ ವಿವೃತವಾಗಿದೆ.

> **ಋತವಸ್ತೇಽಥ ಯಃ ಸ ಭೂತಾನಾಂ ಪತಿಃ ಸಂವತ್ಸರಃ ಸೋಽಥ ಯಾ ಸೋಷಾಃ ಪತ್ನ್ಯೌಷಸೀ ಸಾ ತಾನೀಮಾನಿ ಭೂತಾನಿ ಚ ಭೂತಾನಾಂ ಚ ಪತಿಃ ಸಂವತ್ಸರ ಉಷಸಿ ರೇತೋಽಸಿಂಚನ್ತ್ಸ ಸಂವತ್ಸರೇ ಕುಮಾರೋಽಜಾಯತ ||**
>
> (ಶ. ಬ್ರಾ ೬-೧-೩-೮)

ಪ್ರಜಾಪತಿಸೃಷ್ಟವಾದ ಭೂತಗಳೇ ಋತುಗಳು. ಭೂತಪತಿಯೇ ಸಂವತ್ಸರವು. ಉಷಸ್ಸೇ ತತ್ಪತ್ನಿಯು ಪ್ರಥಮ ದಲ್ಲಿ ಈ ಭೂತಪತಿಯಾದ ಸಂವತ್ಸರವೂ ಋತುಗಳೂ ಉಷಸ್ಸಿನಲ್ಲಿ ರೇತಃಸೇಕವನ್ನು ಮಾಡಿದರು. ಆಗ ಪುತ್ರೋತ್ಪತ್ತಿ ಯಾಯಿತು. ಈ ಕುಮಾರನೇ ಅಗ್ನಿನಾಮಾಂಕಿತನು. ಇವನಿಗೆ ಇವರ ಸ್ವರೂಪಾನುಗುಣವಾಗಿ ನಾಮಪ್ರಭೇದಗಳೂ ಪ್ರಸಿದ್ಧವಾದವು. ಉಷಸ್ಸಿಗೂ ಅಗ್ನಿಗೂ ಇರುವ ಮಾತೃಪುತ್ರಸಂಬಂಧವು ಪ್ರಕೃತವಾದ ಋಕ್ಕಿನಲ್ಲಿಯೂ ಸೂಚಿತ ವಾಗಿದೆ. **ನಕ್ತೋಷಾಸಾ ವರ್ಣಮಾಮೇಮ್ಯಾನೇ ಧಾಪಯೇತೇ ಶಿಶುಮೇಕಂ ಸಮೀಚೀ** (ಋ. ಸಂ. ೧-೯೬-೫) ಇತ್ಯಾದಿ ವಾಕ್ಯಗಳಲ್ಲಿ ನಕ್ತಯುಕ್ತವಾದ ಉಷಸ್ಸು ಇಬ್ಬರಿಗೂ ಸಮಾನರಾದ ಪುತ್ರನನ್ನು ಇಬ್ಬರೂ ಒಟ್ಟಿಗೆ ಪೋಷಿಸುತ್ತಾರೆ ಎಂಬಲ್ಲಿ ಈ ಪುತ್ರನು ಅಗ್ನಿಯಾಗಲಿ ಅಥವಾ ಸೂರ್ಯನಾಗಲಿ ಆಗಬಹುದು. ಈ ಪುತ್ರರ ಮೂಲಕವೇ ಲೋಕರಕ್ಷಣಾಸಾಮರ್ಥ್ಯವನ್ನೂ ಲೋಕಕ್ಕೆ ಸಂಪತ್ಪ್ರದಾಯಕಸಾಮರ್ಥ್ಯವನ್ನೂ ಹೊಂದಿದ್ದಾಳೆ. ಆದುದರಿಂದ **ದಕ್ಷಿಣಾ** ಎಂಬ ವಿಶೇಷಣದಿಂದ ವರ್ಣಿತಳಾಗಿದ್ದಾಳೆ.

> **ಉದು ಶ್ರಿಯ ಉಷಸೋ ರೋಚಮಾನಾ ಅಸ್ಥುರಪಾಂ ನೋರ್ಮಯೋ ರುಶಂತಃ**
> **ಕೃಣೋತಿ ವಿಶ್ವಾ ಸುಪಥಾ ಸುಗಾನ್ಯಭೂದು ವಸ್ವೀ ದಕ್ಷಿಣಾ ಮಘೋನೀ ||**
>
> (ಋ. ಸಂ. ೬. ೬೪-೧)

ಪ್ರಭಾಯುತವಾದ ಉಷಸ್ಸಿನ ರಶ್ಮಿಗಳು ಉದಕಪ್ರವಾಹದಂತೆ ವಿಶ್ವವನ್ನು ವ್ಯಾಪಿಸಿದೊಡನೆಯೇ ಜಗತ್ತಿಗೆ ನವಚೈತನ್ಯ ವುಂಟಾಗುತ್ತದೆ. ಸಂಪತ್ಪ್ರದಾಯಕವಾಗುತ್ತದೆ. ಆದುದರಿಂದಲೇ **ಮಘೋನೀ, ದಕ್ಷಿಣಾ** ಎಂಬ ವಿಶೇಷಣ ದಿಂದ ವರ್ಣಿತಳಾಗಿದ್ದಾಳೆ. ಪ್ರಕೃತವಾದ ಋಕ್ಕಿನಲ್ಲಿ ಆ ಅಂಶಗಳೆಲ್ಲವೂ ಸೂಚಿತವಾಗಿವೆ.

CC-0. Jangamwadi Math Collection. Digitized by eGangotri

ಸೋಮಃ— ಈ ಪದಕ್ಕೆ ಸುತ್ತಿಯೆಂದರ್ಥ. ಕೆಲವು ಸಂದರ್ಭಗಳಲ್ಲಿ ಸ್ತುತಿಕರ್ತೃವಿನ ಪರವಾಗಿಯೂ ಪ್ರಯುಕ್ತವಾಗಿದೆ.

———:o:———

ಸಂಹಿತಾಪಾಠಃ

ಸುಯುಗ್ವಹಂತಿ ಪ್ರತಿ ವಾಮೃತೇನೋರ್ಧ್ವಾ ಭವಂತಿ ಪಿತರೇವ ಮೇಧಾಃ।

ಜರೇಥಾಮಸ್ಮದ್ವಿ ಪಣೇರ್ಮನೀಷಾಂ ಯುವೋರವಶ್ಚಕೃಮಾ ಯಾತಮ-ರ್ವಾಕ್ ॥ ೨ ॥

ಪದಪಾಠಃ

ಸುಽಯುಕ್ । ವಹಂತಿ । ಪ್ರತಿ । ವಾಂ । ಋತೇನ । ಊರ್ಧ್ವಾಃ । ಭವಂತಿ । ಪಿತರಾಽಇವ । ಮೇಧಾಃ । ಜರೇಥಾಂ । ಅಸ್ಮತ್ । ವಿ । ಪಣೇಃ । ಮನೀಷಾಂ । ಯುವೋಃ । ಅವಃ । ಚಕೃಮ । ಆ । ಯಾತಂ । ಅರ್ವಾಕ್ ॥ ೨ ॥

ಸಾಯಣಭಾಷ್ಯಂ

ಹೇ ಅಶ್ವಿನಾ ಸುಯುಕ್ ಸುಷ್ಠು ರಥೇ ಯೋಜಿತಾ ಅಶ್ವಾ ಋತೇನ ಸತ್ಯಭೂತೇನ ರಥೇನ ವಾಂ ಯುವಾಂ ಪ್ರತಿ ವಹಂತಿ । ಯಜ್ಞಂ ಪ್ರತ್ಯಾಗಮನಾಯ ಧಾರಯಂತಿ । ಮೇಧಾ ಯಜ್ಞಾ ಶ್ಚೋರ್ಧ್ವಾ ಯುಷ್ಮದಭಿಮುಖಮೂರ್ಧ್ವಾ ಭವಂತಿ । ತತ್ರ ದೃಷ್ಟಾಂತಃ । ಪಿತರೇವ । ಯಥಾ ಪುತ್ರಾಃ ಪಿತರೌ ಮಾತಾ-ಪಿತರಾವಭಿಲಕ್ಷ್ಯ ಗಚ್ಛಂತಿ ತದ್ವತ್ । ಅಸ್ಮದಸ್ಮತ್ತಃ ಸಕಾಶಾತ್ಪಣೇರ್ಮನೀಷಾಮಾಸುರೀಂ ಬುದ್ಧಿಂ ವಿ ಜರೇಥಾಂ । ವಿಶೇಷೇಣ ನಾಶಯತಂ । ವಯಂ ತು ಯುವೋರ್ಯುವಯೋರವೋ ಹವಿರ್ಲಕ್ಷಣಮನ್ನಂ ಚಕೃಮ । ಕುರ್ಮಃ । ಯುವಾಮರ್ವಾಗಸ್ಮದಾಭಿಮುಖ್ಯೇನಾ ಯಾತಂ ॥ ಸುಯುಕ್ । ಯುಜೇಃ ಕ್ವಿಪ್ । ಸುಪಾಂ ಸುಲುಗಿತಿ ಸುಪೋ ಲುಕ್ । ಪಿತರೇವ । ಪಿತಾ ಮಾತ್ರೇತಿ ಪಿತುಃ ಶೇಷಃ । ಸುಪೋ ಡಾದೇಶಃ । ಜರೇಥಾಂ । ಜೄಷ ವಯೋಹಾನೌ । ಋಂತಸ್ಯ ಜನೀಜೄಷ್ಕ್ನಸುರಂಜೋಽಮಂತಾಶ್ಚೇತಿ ಮಿತ್ತ್ವಾದ್ವೃದ್ಧ್ಯಭಾವಃ । ಛಂದಸ್ಯುಭಯಥೇತ್ಯಾಥಾಮ ಆರ್ಧಧಾತುಕತ್ವಾಣ್ಣಿಲೋಪಃ। ಶಪಃ ಪಿತ್ತ್ವಾ-ದನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

(ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ) । ಸುಯುಕ್—ಉತ್ತಮವಾದ ರಥಕ್ಕೆ ಯೋಜಿತಗಳಾದ ಅಶ್ವಗಳು । ಋತೇನ—ಸತ್ಯಾತ್ಮಕವಾದ ರಥದಲ್ಲಿ । ವಾಂ—ನಿಮ್ಮಿಬ್ಬರನ್ನು । ಪ್ರತಿ ವಹಂತಿ—ಯಜ್ಞಾಗಮನಕ್ಕಾಗಿ ಕರೆದುಕೊಂಡು ಬರುತ್ತವೆ । ಮೇಧಾಃ—ಯಜ್ಞಗಳು । ಊರ್ಧ್ವಾಃ—ನಿಮಗೆ ಅಭಿಮುಖವಾಗಿ । ಪಿತರೇವ—

CC-0. Jangamwadi Math Collection. Digitized by eGangotri

ತಂದೆಯ ಬಳಿಗೆ ಅಭಿಮುಖವಾಗಿ ಮಕ್ಕಳು ಹೋಗುವಂತೆ । **ಭವಂತಿ**—ನಿಮ್ಮನ್ನು ನಿರೀಕ್ಷಿಸುತ್ತವೆ । **ಅಸ್ಮತ್**—ನಮ್ಮಿಂದ। **ಪಣೇಃ ಮನೀಷಾಂ**-ದುಷ್ಟಸಂಬಂಧವಾದ ಬುದ್ಧಿಯನ್ನು। **ವಿ ಜರೇಥಾಂ**-ಪೂರ್ಣವಾಗಿ ನಾಶಮಾಡಿರಿ । **ಯುವೋಃ**—ನಿಮ್ಮಿಬ್ಬರನ್ನುದ್ದೇಶಿಸಿ । **ಅವಃ**—ಹವಿಸ್ಸಿನ ರೂಪದ ಅನ್ನವನ್ನು । **ಚಕೃಮ**—ಸಿದ್ಧಪಡಿಸಿದ್ದೇವೆ । **ಅರ್ವಾಕ್**—ನಮಗೆ ಅಭಿಮುಖರಾಗಿ । **ಆ ಯಾತಂ**—ದಯಮಾಡಿರಿ-

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಉತ್ತಮವಾದ ರಥಕ್ಕೆ ಯೋಜಿತಗಳಾದ ಅಶ್ವಗಳು ಸತ್ಯಾತ್ಮಕವಾದ ರಥದಲ್ಲಿ ನಿಮ್ಮಿಬ್ಬರನ್ನೂ ಯಜ್ಞಾಗಮನಕ್ಕಾಗಿ ಕರೆದುಕೊಂಡು ಬರುತ್ತವೆ. ಪಿತೃವಿನ ಅಭಿಮುಖವಾಗಿ ಮಕ್ಕಳಿರುವಂತೆ ಯಜ್ಞಗಳು ನಿಮಗಭಿಮುಖವಾಗಿವೆ. ನಮ್ಮಿಂದ ದುಷ್ಟಸಂಬಂಧವಾದ ಬುದ್ಧಿಯನ್ನು ನಾಶಮಾಡಿರಿ. ನಿಮ್ಮಿಬ್ಬರನ್ನುದ್ದೇಶಿಸಿ ಹವಿಸ್ಸಿನ ರೂಪದ ಅನ್ನವನ್ನು ಸಿದ್ಧಪಡಿಸಿದ್ದೇವೆ. ನಮಗೆ ಅಭಿಮುಖರಾಗಿ ದಯಮಾಡಿರಿ.

English Translation

The well-yoked (horses) bear you both in your truth (preserving car): the offerings proceed towards you as (children to their parents) : discard from us the disposition of the niggard : we have made ready for you our offering : come to our presence.

ವಿಶೇಷವಿಷಯಗಳು

ಹಿಂದಿನ ಮಂತ್ರದಲ್ಲಿ ಉಷಸ್ಸಿಗೂ ಅಶ್ವಿನೀದೇವತೆಗಳಿಗೂ ಇರುವ ಸಂಬಂಧವನ್ನು ತಿಳಿಸಿ ಪ್ರಕೃತದಲ್ಲಿ ಯಜ್ಞಾಭಿಮುಖವಾಗಿ ಅಶ್ವಿನೀದೇವತೆಗಳು ಬರಬೇಕೆಂದು ಪ್ರಾರ್ಥಿಸಿದೆ. ಅವರು ಯಜ್ಞಕ್ಕೆ ಬರಬೇಕಾದ ಕ್ರಮವನ್ನು ತಿಳಿಸುತ್ತಾ **ಸುಯುಕ್ ಋತೇನ ತಾಂ ಪ್ರತಿವಹಂತಿ** ಎಂದು ಆಗಮನದ ಮಾರ್ಗವನ್ನು ಸೂಚಿಸಿದೆ.

ಇಲ್ಲಿ **ಋತ**ಶಬ್ದಕ್ಕೆ ರಥವೆಂದರ್ಥಮಾಡಿದೆ. ಆದರೆ ಅದು ಸಾಕ್ಷಾತ್ತಾದ ಅರ್ಥವಲ್ಲ. **ಋತ**ಶಬ್ದಕ್ಕೆ ಸತ್ಯವೆಂದರ್ಥಮಾಡಿ ಅನಂತರ ಸತ್ಯಾತ್ಮಕವಾದ ಎಂದು ವಿವರಿಸಿದೆ ರಥದಲ್ಲಿ ಅಥವಾ ರಥಮಾರ್ಗವಲ್ಲಿ ಅನ್ವಯ

**ನೃವದ್ದಸ್ರಾ ಮನೋಯುಜಾ ರಥೇನ ಪೃಥುಪಾಜಸಾ । ಸಚೇಥೇ ಅಶ್ವಿನೋಷಸಂ ॥**

(ಋ ಸಂ. ೮-೫-೨)

ಇತ್ಯಾದಿ ಮಂತ್ರಗಳಲ್ಲಿ ವರ್ಣಿತವಾಗಿರುವಂತೆ ಉಷಸ್ಸಿನ ಆವಿರ್ಭಾವವಾದೊಡನೆಯೇ ಅವುಗಳನ್ನು ಹಿಂಬಾಲಿಸಿ ಶ್ರೇಷ್ಠವಾದ ರಥದಲ್ಲಿ ಯಜ್ಞಕ್ಕೆ ಬರುವ ಕ್ರಮವು ವರ್ಣಿತವಾಗಿದೆ **ಋತ**ಶಬ್ದಕ್ಕೆ **ಸತ್ಯ, ಯಜ್ಞ, ಉದಕ, ಸತ್ಯಾತ್ಮಕವಾದ ವ್ಯವಹಾರ,** ಇತ್ಯಾದ್ಯರ್ಥಗಳಲ್ಲಿ ಪ್ರಯೋಗವಿರುತ್ತದೆ- ಪ್ರಕೃತದಲ್ಲಿ ಸತ್ಯಾತ್ಮಕವಾದ ಮಾರ್ಗವೆಂದರ್ಥಮಾಡಿದರೆ ಸನ್ನಿವೇಶಕ್ಕೆ ಸರಿಯಾಗಬಹುದು.

**ಋತ**ಶಬ್ದಕ್ಕೆ ಸದ್ಯಃ ಸತ್ಯವೆಂದರ್ಥಮಾಡಿದರೂ ಸಹ ಅದು ಶಾಶ್ವತವಾದ ಸ್ಥಿತಿಯುಳ್ಳದ್ದು ಎಂದರ್ಥವಾಗುತ್ತದೆ. ಸೂರ್ಯಾದಿಗ್ರಹಗಳೆಲ್ಲವೂ ನಿಯತವಾಗಿ ಸಂಚರಿಸತಕ್ಕ, ಶಾಶ್ವತವಾದುದೂ ಪ್ರಭಾಯುತವಾದುದೂ ಆದ



CC-0. Jangamwadi Math Collection. Digitized by eGangotri

ಮಾರ್ಗಕ್ಕೆ **ಋತ**ವೆಂದು ಕರೆಯುವುದು ಋಕ್ಸಂಹಿತೆಯಲ್ಲಿ ರೂಢವಾಗಿದೆ. **ವರ್ವರ್ತಿ ಚಕ್ರಂ ಪರಿ ದ್ಯಾಮೃತಸ್ಯ** (ಋ. ಸಂ. ೧-೧೬೪-೧೧) ಎಂಬ ವಾಕ್ಯಗಳಿಂದ ವರ್ಣಿತವಾಗಿರುವ ಋತದಪಥವಾವುದೆಂಬುದನ್ನು ಹಿಂದೆಲ್ಲಾ ವಿವರಿಸಿ ತಿಳಿಸಿದೆ. ಇದೇ ಋತದ ಪಥವನ್ನು—

**ಅಗ್ನಿರ್ಗಾಂಧರ್ವೀಂ ಪಥ್ಯಾಮೃತಸ್ಯಾಗ್ನೇರ್ಗವ್ಯೂತಿರ್ಘೃತ ಆ ನಿಷತ್ತಾ ।**
(ಋ. ಸಂ. ೧೦-೮೦-೬)

ಇತ್ಯಾದಿ ಸ್ಥಳಗಳಲ್ಲಿ ಅತ್ಯುನ್ನತವಾದುದೂ, ವಿಸ್ತೃತವಾದುದೂ ಆದ ಗಂಧರ್ವಮಾರ್ಗವೆಂದೂ ವರ್ಣಿಸಿದೆ. ಹೀಗೆಯೇ ಆದಿತ್ಯಾದಿಗಳ ಪಥವನ್ನು **ಋತಸ್ಯ ಯೋನಾ, ಋತಸ್ಯ ಪದೇ** ಇತ್ಯಾದಿ ವಿಶೇಷಣಗಳಿಂದಲೂ ವರ್ಣಿಸಿರುವುದನ್ನು ವಿವರಿಸಿದೆ. ಪ್ರಕೃತದಲ್ಲಿ **ಋತೇನ** ಎಂಬುದಕ್ಕೆ ಶಾಶ್ವತವಾದುದೂ ಪ್ರಭಾಯುತವಾದುದೂ ಆದ ಈ ಗಂಧರ್ವ ಮಾರ್ಗದಿಂದ ಅಶ್ವಿನೀದೇವತೆಗಳನ್ನು ಅವರ ಉತ್ತಮವಾದ ಅಶ್ವಗಳು ಕರೆತರುತ್ತಿವೆಯೆಂದು ತಾತ್ಪರ್ಯ.

**ಮೇಧಾಃ—ಮೇಧ** ಶಬ್ದಕ್ಕೆ ಯಜ್ಞವೆಂದರ್ಥ. ಕೆಲವೆಡೆಗಳಲ್ಲಿ ಯಜ್ಞಾರ್ಹವಾದ ಹವಿಸ್ಸು ಎಂದೂ ಅರ್ಥವಾಗುತ್ತದೆ. **ಮೇಧಂ ಜುಷಂತ ವಹ್ನಯಃ** (೧-೩-೯) ಎಂಬಲ್ಲಿ ಸಾಯಣರು **ಮೇಧ್ಯತೇ ದೇವೈಃ ಸಹ, ಸಂಗಮ್ಯತೇ ಇತಿ ಮೇಧಂ ಹವಿಃ** ದೇವತೆಗಳೊಡನೆ ಸೇರಿ ಐಕ್ಯವಾಗುತ್ತವೆಯಾದುದರಿಂದ ಹವಿಸ್ಸಿಗೆ ಮೇಧಶಬ್ದ ವಾಚ್ಯವಿದೆಯೆಂದು ವಿವರಿಸಿದ್ದಾರೆ. ಅಥವಾ ಮೇಧಶ್ಶಬ್ದಕ್ಕೆ ಪ್ರಜ್ಞೆಯೆಂದರ್ಥಮಾಡಿದರೆ ಪ್ರಾಜ್ಞನ ಕರ್ಮವೂ ಮೇಧವಾಗಿರುತ್ತದೆ. ದೇವಪೂಜಾದಿಗಳೇ ಪ್ರಾಜ್ಞನ ಕರ್ಮವಾದುದರಿಂದ ಯಜ್ಞಕ್ಕೆ ಮೇಧವೆಂಬ ಹೆಸರಿರುತ್ತದೆಂದು ಕೆಲವರ ಮತ. ಆದರೆ ಈ ತಾತ್ಪರ್ಯಕ್ಕೂ ಸಹ ಆಧಾರವಿಲ್ಲದೇ ಇಲ್ಲ.

**ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ ।**
(ಛಾ. ಉ. ೧-೧-೧೦)

ಯಾವ ಕರ್ಮವು ಜ್ಞಾನಪೂರ್ವಕವಾಗಿಯೂ, ಶ್ರದ್ಧೆಯಿಂದಲೂ ಕೂಡಿ ಆಚರಿಸಲ್ಪಡುವುದೋ ಅದೇ ವೀರ್ಯವತ್ತಾದ ಕರ್ಮವಾಗುವುದು ಎಂದು ಛಾಂದೋಗ್ಯಾದಿಗಳಲ್ಲೂ ಸಹ ಕರ್ಮಾಚರಣೆಯ ಕಾಲದಲ್ಲಿ ಜ್ಞಾನದ ಆವಶ್ಯಕತೆಯು ಹೇಳಲ್ಪಟ್ಟಿರುವುದರಿಂದ ಮೇಧಶಬ್ದವಾಚ್ಯವಾಗಿರಬಹುದು. ಆದರೆ ಈ ತಾತ್ಪರ್ಯವನ್ನು ಹೇಳುವಾಗ **ಮೇಧ್ಯತೇ ದೇವೈಃ ಸಹ** ಎಂಬ ನಿರ್ವಚನವು ಯಜ್ಞಕ್ಕೆ ಅನ್ವಯಿಸಲೇಬೇಕು.

**ಇತಃ ಪ್ರದಾನಾದ್ಧಿ ದೇವಾ ಉಪಜೀವಂತಿ ।**
(ಶ. ಬ್ರಾ. ೧-೨-೪-೨೫)

ಇಲ್ಲಿಂದ ಅರ್ಪಿತವಾಗುವ ಯಜ್ಞಾರ್ಪಣವು ದೇವತೆಗಳಿಗೆ ಸೇರಿ ಅವರು ತೃಪ್ತರಾಗುವುದರಿಂದಲೇ ಅವರು ಜೀವಿಸುತ್ತಾರೆ ಎಂದು ದೇವತೆಗಳ ಅಸ್ತಿತ್ವಕ್ಕೂ ಯಜ್ಞಕ್ಕೂ ಕಾರ್ಯಕಾರಣಭಾವವನ್ನೇ ತಿಳಿಸಿದೆ. ಆದುದರಿಂದ ಈ ನಿರ್ವಚನವೂ ಹೊಂದಿಕೊಳ್ಳುತ್ತದೆ. ಅಥವಾ **ತನ್ಮೇಧ್ಯಮಭೂತ್** (ಶ. ಬ್ರಾ. ೧೦-೬-೫-೭) ಅದು ಶುದ್ಧವಾಯಿತು. ಶುದ್ಧವಾದುದರಿಂದ **ಮೇಧಶ್ಶಬ್ದವಾಚ್ಯವು** ಎಂದೂ ಸಹ ನಿರ್ವಚನವನ್ನು ಹೇಳಬಹುದು.

**ಪಿತರೇವ ಊರ್ಧ್ವಾಸ್ವ ಭವಂತಿ**—ಪಿತೃವಿಗೆ ಅಭಿಮುಖವಾಗಿ ಮಕ್ಕಳು ಹೋಗುವಂತೆ ಯಜ್ಞವು ಅಶ್ವಿನೀ ದೇವತೆಗಳ ಅಭಿಮುಖವಾಗಿ ಹೋಗಿ ಎದುರುಗೊಳ್ಳುತ್ತದೆ ಎಂಬ ವರ್ಣನೆಯಲ್ಲಿ ಒಂದು ವಿಶೇಷವಿದೆ. ಉಳಿದ

CC-0. Jangamwadi Math Collection. Digitized by eGangotri

ದೇವತೆಗಳೆಲ್ಲರೂ ಯಜ್ಞದಲ್ಲಿ ಭಾಗವಹಿಸುವಾಗ ಅಶ್ವಿನೀದೇವತೆಗಳಿಗೆ ಮಾತ್ರ ಇದರಲ್ಲಿ ಒಂದು ಭಾಗವೂ ಇಲ್ಲ ಎಂಬುದು ಸರ್ವವಿದಿತವಾಗಿದೆ **ಅನ್ಯತ್ರೈವಾಶ್ವಿಭ್ಯಾಂ** (ಶ. ಬ್ರಾ. ೧೪-೧-೧-೧) ಅಶ್ವಿನೀದೇವತೆಗಳನ್ನುಳಿದು ಇಂದ್ರಾದಿ ಇತರ ದೇವತೆಗಳು ಭಾಗವಹಿಸಿದರು ಎಂಬ ಶ್ರುತಿವಾಕ್ಯವು ಈ ವಿಷಯವನ್ನು ನಿಷ್ಕೃಷ್ಟವಾಗಿ ತಿಳಿಸುತ್ತದೆ. ಆದರೂ ಸಹ ಪಿತೃಪುತ್ರಸಂಬಂಧವು ಹೇಗೆ ಎಂದರೆ ಅಶ್ವಿನೀ ದೇವತೆಗಳಿಗೂ, ಯಜ್ಞಕ್ಕೂ ಇರತಕ್ಕ ನಿಕಟವಾದ ಸಂಬಂಧವನ್ನು ತಿಳಿಸುವ ಸನ್ನಿವೇಶವನ್ನು ವಿವರಿಸುವ ಇತಿಹಾಸವೊಂದಿದೆ.

**ತಾವೇದದ್ಯಜ್ಞಸ್ಯ ಶಿರಃ ಪ್ರತ್ಯಧತ್ತಾಂ ತದದಸ್ತದ್ದಿವಾಕೀರ್ತ್ಯಾನಾಂ ಬ್ರಾಹ್ಮಣೇ ವ್ಯಾಖ್ಯಾಯತೇ ಯಥಾ ತದ್ಯಜ್ಞಸ್ಯ ಶಿರಃ ಪ್ರತಿದಧತುಃ ತಸ್ಮಾತ್ .... ....** ॥

(ಶ. ಬ್ರಾ. ४-೧-೫-೧೫)

ಈ ಇತಿಹಾಸದಲ್ಲಿ ಅಶ್ವಿನೀದೇವತೆಗಳು ಶಿರೋಹೀನವಾದ ಯಜ್ಞವನ್ನು ಸರಿಪಡಿಸಿ ಯಜ್ಞಕಾರ್ಯವು ಪೂರ್ಣವಾಗಿ ನೆರವೇರುವಂತೆ ಮಾಡಿದರು ಎಂದೂ ಈ ಇತಿಹಾಸವು **ದಿವಾಕೀರ್ತ್ಯಾಖ್ಯವಾದ** ಬ್ರಾಹ್ಮಣದಲ್ಲಿ (ಶ. ಬ್ರಾ. ೧೪-೧-೧-೯) ಉಕ್ತವಾಗಿದೆಯೆಂದೂ ತಿಳಿಸಿದೆ ಇದೇ ಅಂಶವು ಐತರೇಯಬ್ರಾಹ್ಮಣದಲ್ಲೂ ಪಠಿತವಾಗಿದೆ. (ಐ. ಬ್ರಾ. ೪-೯) ಈ ರೀತಿ ಯಜ್ಞಕ್ಕೆ ಪ್ರಧಾನಾಂಗವೇ ಇಲ್ಲದಿದ್ದಾಗ ಅದನ್ನು ಸರಿಪಡಿಸಿ ಯಜ್ಞವನ್ನು ತಮಗೆ ಋಣಿಯಾಗಿರುವಂತೆ ಮಾಡಿದುದರಿಂದ ಆ ಕೃತಜ್ಞತೆಯನ್ನು ತೋರಿಸಲೋ ಎಂಬಂತೆ ಯಜ್ಞವು ಅಶ್ವಿನೀದೇವತೆಗಳನ್ನು ಎದುರುಗೊಳ್ಳುತ್ತದೆ ಎಂದು ಪ್ರಕೃತವಾದ ಮಂತ್ರದಲ್ಲಿ ವರ್ಣಿಸಿದೆ.

**ಪಣಿಂ ಮನೀಷಾಂ**—ಪಣಿಶಬ್ದಕ್ಕೆ ಯಜ್ಞದಲ್ಲಿ ಶ್ರದ್ಧೆಯಿಲ್ಲದೇ ಇರತಕ್ಕ ನಾಸ್ತಿಕರೆಂದು ಇಲ್ಲಿ ತಾತ್ಪರ್ಯ. ಮನೀಷಾ ಎಂದರೆ ಬುದ್ಧಿ. ಅಂತಹ ನಾಸ್ತಿಕ ಬುದ್ಧಿಯು ನಮಗಿರದೇ ಅಥವಾ ಇದ್ದರೂ ಅದನ್ನು ನಾಶಮಾಡಿ ಯಜ್ಞಾಚರಣೆಯಲ್ಲಿ ಆಸ್ತಿಕ್ಯಬುದ್ಧಿಯುಂಟಾಗುವಂತೆ ಮಾಡಿರಿ ಎಂದು ಪ್ರಾರ್ಥಿಸಿದೆ.

---

ಸಂಹಿತಾಪಾಠಃ

ಸುಯುಗ್ಭಿರಶ್ವೈಃ ಸುವೃತಾ ರಥೇನ ದಸ್ರಾವಿಮಂ ಶೃಣುತಂ ಶ್ಲೋಕಮದ್ರೇಃ ।
ಕಿಮಂಗ ವಾಂ ಪ್ರತ್ಯವರ್ತಿಂ ಗಮಿಷ್ಠಾಹುರ್ವಿಪ್ರಾಸೋ ಅಶ್ವಿನಾ ಪುರಾಜಾಃ ॥ ೩ ॥

ಪದಪಾಠಃ

ಸುಯುಕ್ಽಭಿಃ । ಅಶ್ವೈಃ । ಸುಽವೃತಾ । ರಥೇನ । ದಸ್ರಾ । ಇಮಂ । ಶೃಣುತಂ । ಶ್ಲೋಕಂ । ಅದ್ರೇಃ ।
ಕಿಂ । ಅಂಗ । ವಾಂ । ಪ್ರತಿ । ಅವರ್ತಿಂ । ಗಮಿಷ್ಠಾ । ಆಹುಃ । ವಿಪ್ರಾಸಃ । ಅಶ್ವಿನಾ । ಪುರಾಽಜಾಃ ॥೩॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

**ಹೇ ಅಶ್ವಿನಾ ಸುಯುಗ್ಭಿಃ ಸುಷ್ಠು ಯೋಜಿತೈರಶ್ವೈಃ ಸುವೃತಾ** । ಪುನಃಪುನರಾವರ್ತತೆ ಇತಿ ವೃಚ್ಚಕ್ರಂ । ಶೋಭನಚಕ್ರೋಪೇತೇನ ರಥೇನಾಗತ್ಯ ದಸ್ರೌ ಶತ್ರೂಣಾಮುಪಕ್ಷಪಯಿತಾರೌ ಯುವಾ-ಮದ್ರೇಃ । ಅದ್ರಿಯತೇ ಸರ್ವೈರಿತ್ಯದ್ರಿಃ ಸ್ತೋತಾ । ತಸ್ಯೇಮಂ ಶ್ಲೋಕಂ ಸ್ತೋತ್ರಂ ಶೃಣುತಂ । ಅಂಗ ಹೇ ಅಶ್ವಿನೌ ವಿಪ್ರಾಸೋ ಮೇಧಾವಿನಃ ಪುರಾಜಾಃ ಪುರಾತನಾ ಋಷಯೋ ವಾಂ ಯುವಾಮವರ್ತಿ ಮಸ್ಮಾಕಂ ವೃತ್ತಿಹಾನಿಂ ಪ್ರತಿ ಗಮಿಷ್ಠಾ ಅತಿಶಯೇನ ಗಂತಾರಾವಿತಿ ಕಿಮಾಹುಃ ಕಿಂ ಕಥಯಂತೀತಿ । ನ ಕಥಯಂತೀತ್ಯರ್ಥಃ । ಪ್ರಥಮಾಷ್ಟಕೇಽಷ್ಟಮೋಽಧ್ಯಾಯೇ ಸುವೃತಾ ರಥೇನೇತ್ಯಾದಿ ಗತಂ ॥ ಗಮಿಷ್ಠಾ । ಗಂತೃಶಬ್ದಾದಿಷ್ಠನಿ ರೂಪಂ ॥

### ಪ್ರತಿಪದಾರ್ಥ

(ಎಲೈ ಅಶ್ವಿನಿದೇವತೆಗಳೇ) **ಸುಯುಗ್ಭಿಃ**—ಶ್ರೇಷ್ಠರೀತಿಯಿಂದ ರಥಕ್ಕೆ ಯೋಜಿತವಾದ । **ಅಶ್ವೈಃ**—ಅಶ್ವ ಗಳೊಂದಿಗೆ ಕೂಡಿದ । **ಸುವೃತಾ**—ಉತ್ತಮವಾದ ಚಕ್ರಗಳುಳ್ಳ । **ರಥೇನ**—ರಥದಲ್ಲಿ ಬಂದು । **ದಸ್ರೌ**—ಶತ್ರು ನಾಶಕರಾದ ನೀವು । **ಅದ್ರೇಃ**—ಸ್ತುತಿಕರ್ತನ । **ಇಮಂ ಶ್ಲೋಕಂ**—ಈ ಸ್ತುತಿಯನ್ನು । **ಶೃಣುತಂ**—ಕೇಳಿರಿ । **ಅಂಗ**—ಎಲೈ ಅಶ್ವಿನಿಗಳೇ । **ವಿಪ್ರಾಸಃ**—ಮೇಧಾವಿಗಳೂ । **ಪುರಾಜಾಃ**—ಪುರಾತನರೂ ಆದ ಋಷಿಗಳು । **ವಾಂ**—ನಿಮ್ಮನ್ನು । **ಅವರ್ತಿಂ ಪ್ರತಿ**—ದುಃಖತಪ್ತರ ಅಭಿಮುಖವಾಗಿ । **ಗಮಿಷ್ಠಾ**—ಹೋಗತಕ್ಕವರೆಂದು । **ಕಿಂ ಆಹುಃ**—ಹೇಳಲ್ಲವೇ ।

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಶ್ರೇಷ್ಠರೀತಿಯಿಂದ ರಥಕ್ಕೆ ಯೋಜಿತವಾದ ಅಶ್ವಗಳೊಂದಿಗೆ ಕೂಡಿದ ಉತ್ತಮವಾದ ಚಕ್ರಗಳುಳ್ಳ ರಥದಲ್ಲಿ ಬಂದು ಶತ್ರುನಾಶಕರಾದ ನೀವು ಸ್ತುತಿಕರ್ತನ ಈ ಸ್ತುತಿಯನ್ನು ಕೇಳಿರಿ. ಎಲೈ ಅಶ್ವಿನೀದೇವ ಗಳೇ, ಮೇಧಾವಿಗಳೂ, ಪುರಾತನರೂ ಆದ ಋಷಿಗಳು ನಿಮ್ಮನ್ನು ದುಃಖತಪ್ತರ ಅಭಿಮುಖವಾಗಿ ಹೋಗುವವರೆಂದು ಹೇಳಲ್ಲವೆ ?

### English Translation

Dasras, with well-yoked horses and well-constructed car, hear this praise of the worshipper, for have not the ancient sages declared you, Ashwins, to be most ready to come to the aid of the destitute ?

### ವಿಶೇಷವಿಷಯಗಳು

**ದಸ್ರೌ—ದಸು-ಉಪಕ್ಷಯೇಃ-ಶತ್ರೂಣಾಂ ಉಪಕ್ಷಪಯಿತಾರೌ । ಯದ್ವಾ । ದೇವವೈದ್ಯತ್ವೇನ ರೋಗಾಣಾಂ ಉಪಕ್ಷಪಯಿತಾರೌ** । ಶತ್ರುನಾಶಕರು ಅಥವಾ ದೇವವೈದ್ಯರಾದುದರಿಂದ ರೋಗನಾಶಕರು ಎಂದರ್ಥ. ದಸ್ರಾ ಎನ್ನುವುದಕ್ಕೆ **ದರ್ಶನೀಯೌ** ಸುಂದರವಾದ ರೂಪವುಳ್ಳವರು ಎಂದೂ ಆಗುತ್ತದೆ. ಪ್ರಕೃತ ವಾದ ಋಕ್ಕಿನಲ್ಲಿ ಶತ್ರುನಾಶಕರೆಂದು ಭಾಷ್ಯಕಾರರು ಅರ್ಥಮಾಡುತ್ತಾರೆ. ಸರಣ್ಯುಪುತ್ರರಾದ ಅಶ್ವಿನೀದೇವತೆಗಳಲ್ಲಿ ಒಬ್ಬನಿಗೆ **ದಸ್ರ** ಇನ್ನೊಬ್ಬನಿಗೆ **ನಾಸತ್ಯ** ಎಂಬ ಹೆಸರಿದ್ದರೂ ಸಹ **ದಸ್ರಾ** ಎಂದು ಇಬ್ಬರನ್ನೂ ಒಟ್ಟಿಗೆ ಸೇರಿಸಿ ಹೇಳುವುದು ಪ್ರಸಿದ್ಧವಾಗಿದೆ.

CC-0. Jangamwadi Math Collection. Digitized by eGangotri

ಅದ್ರೇಃ— ಅದ್ರಿ ಶಬ್ದವು ಸೋಮಾಭಿಷವದ ಕಲ್ಲು, ಅಥವಾ ಪರ್ವತ ಇತ್ಯಾದ್ಯರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿರುವುದನ್ನೂ ಇದರ ವಿಶೇಷಾರ್ಥಗಳನ್ನೂ ಹಿಂದೆ ತಿಳಿಸಿದೆ. ಆದರೆ, ಪ್ರಕೃತದಲ್ಲಿ ಸ್ತೋತೃವೆಂದರ್ಥಮಾಡಿದೆ. ಆದ್ರಿಯತೇ ಸರ್ವೈರಿತ್ಯದ್ರಿಃ ಸಕಲರಿಂದಲೂ ಆದರಿಸಲ್ಪಡುತ್ತಾನಾದ್ದರಿಂದ ಅದ್ರಿಯೆಂಬ ವಿಶೇಷಣದಿಂದ ಸ್ತೋತೃವು ನಿರ್ದಿಷ್ಟನಾಗಿದ್ದಾನೆಂಬುದು ಸಾಯಣರ ವಿವರಣೆಯಿಂದ ತಿಳಿಯುತ್ತದೆ.

ಸುವೃತಾ— ಪುನಃಪುನರಾವರ್ತತೆ ಇತಿ ವೃತ್ ಚಕ್ರಂ । ಪುನಃ ಪುನಃ ಭ್ರಮಣವನ್ನು ಹೊಂದುತ್ತದಾದುದರಿಂದ ಚಕ್ರಕ್ಕೆ ವೃತ್ ಎಂಬ ಶಬ್ದದ ಪ್ರಯೋಗವಿದೆ. ಶ್ರೇಷ್ಠವಾದ ಚಕ್ರವೆಂದು ತಿಳಿಸಲು ಸುವೃತಾ ಎಂಬ ಸವಿಶಿಷ್ಟವಾದ ಪದವಿದೆ. ಅಶ್ವಿನೀದೇವತೆಗಳ ರಥಕ್ಕೆ ತ್ರಿವಂಧುರಃ, ತ್ರಿಚಕ್ರಃ ಎಂಬ ವಿಶೇಷಣಗಳಿರುವುದನ್ನು ಅವುಗಳ ವೈಶಿಷ್ಟ್ಯವನ್ನೂ ಹಿಂದೆ ತಿಳಿಸಿದೆ.

ಶ್ಲೋಕಂ— ಸ್ತುತಿಂ । ಸ್ತುತಿಯನ್ನು, ಎಂದು ಪ್ರಕೃತ ಅರ್ಥಮಾಡಿದೆ. ಸಂಹಿತೆಯಲ್ಲಿ ಈ ಪದದ ಅರ್ಥವನ್ನು ಸಂದರ್ಭಾನುಸಾರವಾಗಿ ಹೇಳಬೇಕಾಗುತ್ತದೆ. ಬ್ರಾಹ್ಮಣದ ವಾಕ್ಯಗಳಲ್ಲಿ ಈ ಪದವು ಪ್ರಯೋಗಿಸಲ್ಪಟ್ಟಿರುವ ಸ್ಥಳದಲ್ಲಿ ಪ್ರಕೃತದಲ್ಲಿ ರೂಢವಾಗಿರುವಂತೆಯೇ ಛಂದೋಬದ್ಧವಾದ ಕೃತಿಯೆಂದು ಅರ್ಥವನ್ನು ಹೇಳಿದೆ. ಆದರೆ ಋಕ್ಸಂಹಿತೆಯಲ್ಲಿ ಅಂತಹ ಛಂದೋಬದ್ಧವಾದ ಕೃತಿಯೆಂದೇ ಅರ್ಥಮಾಡಬೇಕೆಂಬ ನಿಯಮವಿಲ್ಲ. ಹೇಗೆಂದರೆ,

ಯದದ್ರಯಃ ಪರ್ವತಾಃ ಸಾಕಮಾಶವಃ ಶ್ಲೋಕಂ ಘೋಷಂ ಭರಥೇಂದ್ರಾಯ ಸೋಮಿನಃ ॥
(ಋ. ಸಂ. ೧೦-೯೪-೧)

ಎಂಬ ಋಕ್ಕಿನಲ್ಲಿ ಅದ್ರಿಗಳು ಸೋಮಾಭಿಷವದ ಕಾಲದಲ್ಲಿ ಉಂಟುಮಾಡತಕ್ಕ ಶಬ್ದದ ಸ್ವರೂಪವನ್ನು ವರ್ಣಿಸಿದೆ. ಇಲ್ಲಿ ಘೋಷಪದಕ್ಕೆ ಶ್ಲೋಕವೆಂಬ ವಿಶೇಷಣವಿದೆ. ಶ್ಲೋಕಂ ಶ್ರೋತವ್ಯಂ ಘೋಷಂ । ಶ್ರಾವ್ಯವಾದ ಎಂದರೆ ಕೇಳುವುದಕ್ಕೆ ಹಿತಕಾರಕವಾದ ಶಬ್ದವೆಂದರ್ಥಮಾಡಿದೆ. ಅದೇ ರೀತಿಯಲ್ಲಿ,

ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿ ಶ್ಲೋಕ ಏತು ಪಥ್ಯೇವ ಸೂರೇಃ ।
(ಋ. ಸಂ. ೧೦-೧೩-೧)

ಎಂಬಲ್ಲಿ ಹವಿರ್ಧಾನಶಕಟಗಳವರ್ಣನೆಯಿದೆ. ಅವುಗಳ ಶ್ಲೋಕವು ಎಂದರೆ ಶಬ್ದವು ದೇವತೆಗಳನ್ನು ಎಲ್ಲಾಕಡೆಯಿಂದಲೂ ಹೋಗಿ ಸೇರಿ ಅವರಿಗೆ ತೃಪ್ತಿಯನ್ನುಂಟುಮಾಡಲಿ ಎಂದು ಪ್ರಾರ್ಥಿಸಿದೆ. ಹೀಗೆ ಕೆಲವೆಡೆಗಳಲ್ಲಿ ಶಬ್ದವೆಂಬರ್ಥದಲ್ಲಿ ಪ್ರಯೋಗವಿದ್ದರೂ ಸಹ ಅನೇಕಸಂದರ್ಭಗಳಲ್ಲಿ ಸ್ತುತಿಯೆಂಬರ್ಥವೇ ಪ್ರಸಿದ್ಧವಾಗಿದೆ. ಈ ಆಧಾರದ ಮೇಲೆಯೇ, ಶತಪಥಾದಿಗಳಲ್ಲಿಯೂ ಸಹ ಈ ಪದಕ್ಕೆ ಆಂಗ್ಲವ್ಯಾಖ್ಯಾಕಾರರು ಶಬ್ದವೆಂದೇ ಅರ್ಥಮಾಡಿದ್ದಾರೆ. ಉದಾಹರಣೆಗೆ—

ಶ್ಲೋಕಾಯ ಸ್ವಾಹೇತಿ ವೀರ್ಯಂ ವೈ ಶ್ಲೋಕೋ ವೀರ್ಯೇಣೈವೈನಂ.... ।
(ಶ. ಬ್ರಾ. ೫-೩-೫-೯)

" To the noise, hail. " noise means vigour ; with vigour he thus sprinkles him ಎಂದು ಪರಿವರ್ತಿಸಿದ್ದಾರೆ. ಶ್ಲೋಕನೆಂದರೆ ಈ ವಿವರಣೆಯ ಪ್ರಕಾರ ವೀರ್ಯವತ್ತಾದ ಶಬ್ದವೆಂದರ್ಥ. ಆದರೆ ಬ್ರಾಹ್ಮಣಾದಿ ವಾಕ್ಯಗಳಿಗೆ ತಾತ್ಪರ್ಯವನ್ನು ವಿವರಿಸುವಾಗ ಸಾಯಣಾದಿಗಳು ಛಂದಃಬದ್ಧವಾದ ಕೃತಿಗಳೆಂದೇ ತಿಳಿಸಿ

CC-0. Jangamwadi Math Collection. Digitized by eGangotri

ದ್ದಾರೆ. ಉದಾಹರಣೆಗೆ ಐತರೇಯಬ್ರಾಹ್ಮಣದಲ್ಲಿ ತದಪ್ಯೇಷಶ್ಲೋಕೋಽಭಿಗೀತಃ-ಈ ವಿಷಯದಲ್ಲಿ ಈ ಶ್ಲೋಕವು ಪಠಿತವಾಗಿದೆ. ಎಂದಿರುವಾಗ ಸಾಯಣರು ಶ್ಲೋಕಪದಕ್ಕೆ **ಶ್ಲೋಕಃ ಪಾದಬದ್ಧಃ ಮಂತ್ರಃ** ಪಾದಬದ್ಧವಾದ ಮಂತ್ರವೆಂದರ್ಥಮಾಡಿದ್ದಾರೆ. ಈ ಶ್ಲೋಕವು ಮರುತಃ ಪರಿವೇಷ್ಟಾರಃ ಮರುತಸ್ಯಾವಸನ್ ಗೃಹೇ ಇತ್ಯಾದಿ ರೂಪದಲ್ಲಿ ಪಾದಬದ್ಧವಾಗಿಯೇ ಇದೆ. ಆದರೆ ಐತರೇಯಬ್ರಾಹ್ಮಣದಲ್ಲಿ ಪಾದಬದ್ಧವಾದ ಕ್ರಮವಿದ್ದರೂ ಸಹ ಶತಪಥದಲ್ಲಿ ಇದೇ ವಾಕ್ಯವು ಈ ನಿಯಮಕ್ಕೊಳಪಟ್ಟಿಲ್ಲ. (ಶ. ಬ್ರಾ. ೧೩-೫-೪-೬) ಈ ನಿಯಮವನ್ನು ಉಪನಿಷದಾದಿಗಳಲ್ಲಿ ಕಾಣಬಹುದು.

> **ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ**
>
> (ಬೃ. ಉ. ೨-೪-೧೦)

ಎಂಬಲ್ಲಿ ವೇದಚತುಷ್ಟಯ, ಉಪನಿಷತ್, ಇತಿಹಾಸ, ಪುರಾಣ ಇವುಗಳಿಗಿಂತಲೂ ಶ್ಲೋಕವು ಭಿನ್ನವಾದುದೆಂದು ಹೇಳಿದೆ. **ಶ್ಲೋಕಾ ಬ್ರಾಹ್ಮಣಪ್ರಭವಾ ಮಂತ್ರಾಃ ತದೇತೇ ಶ್ಲೋಕಾಃ**—ಬ್ರಾಹ್ಮಣಗಳಲ್ಲಿ ಉದಾಹೃತವಾಗಿರುವ ಮಂತ್ರಗಳಿಗೆ ಶ್ಲೋಕವೆಂದರ್ಥವೆಂದು ಶಂಕರಾಚಾರ್ಯರು ತಮ್ಮ ಭಾಷ್ಯದಲ್ಲಿ ವಿವರಿಸಿದ್ದಾರೆ. ಇದಕ್ಕೆ ಉದಾಹರಣೆಗಳನ್ನೂ ಅನೇಕಕಡೆಗಳಲ್ಲಿ ನೋಡಬಹುದು.

> **ಸ್ವಪ್ನೇನ ಶಾರೀರಮಭಿಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತಿ ।**
> **ಶುಕ್ರಮಾದಾಯ ಪುನರೈತಿ ಸ್ಥಾನಂ ಹಿರಣ್ಮಯಃ ಪುರುಷ ಏಕಹಂಸಃ ॥**

ಇತ್ಯಾದಿಗಳು ಛಾಂದೋಗ್ಯಾದ್ಯುಪನಿಷತ್ತುಗಳಲ್ಲಿ ಇರುವ ಶ್ಲೋಕದ ಮಾದರಿಗಳು. ಅಲ್ಲದೇ, ತೈತ್ತಿರೀಯೋಪನಿಷತ್ತಿನಲ್ಲಿ ಈ ಪದವನ್ನು ಎರಡು ಅರ್ಥಗಳಲ್ಲುಪಯೋಗಿಸಿದೆ.

> **"ಇದಂ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ"**
>
> (ತೈ. ಉ. ೨-೧)

ಎಂಬಲ್ಲಿ ಶ್ಲೋಕಶಬ್ದಕ್ಕೆ ಮಂತ್ರವೆಂದರ್ಥ. ಹಿಂದೆ ಯಾವುದೋ ಒಂದು ತತ್ತ್ವದ ಮಾಹಾತ್ಮ್ಯವನ್ನು ಹೇಳಿ ಅದನ್ನು ಸಮರ್ಥಿಸಲು ಮಂತ್ರಾಂತರವನ್ನು ಉದಾಹರಿಸಿದೆ. ಅಂತಹ ಸಂದರ್ಭದಲ್ಲಿ **ತದಪ್ಯೇಷ ಶ್ಲೋಕೋ ಭವತಿ** ಎಂದು ಉಪನಿಷದಾದಿಗಳಲ್ಲಿ ಹೇಳುವುದು ವಾಡಿಕೆಯಾಗಿದೆ. ಇದಲ್ಲದೇ,

> **ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋಽ೨ ಹಮನ್ನಾದೋಽ೨ ಹಮನ್ನಾದಃ ।**
> **ಅಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ ॥**
>
> (ತೈ. ಉ. ೩-೧೦)

ನಾನೇ ಅನ್ನವು ; ನಾನೇ ಅನ್ನವನ್ನು ತಿನ್ನುವವನು ; ನಾನೇ ಅನ್ನದ ಮತ್ತು ಅನ್ನತಿನ್ನುವವನ ಸಂಘಾತರೂಪವು ಎಂದು ಉಕ್ತವಾಗಿರುವಾಗ ಶ್ಲೋಕಶಬ್ದಕ್ಕೆ ಸಂಘಾತವೆಂದರ್ಥಮಾಡಿದೆ. **ಶ್ಲೋಕೋ ನಾಮ ಅನ್ನಾನ್ನಾದಯೋಃ ಸಂಘಾತಃ ।** ಶ್ಲೋಕವೆಂದರೆ ಅನ್ನದ ಮತ್ತು ಅನ್ನಭೋಕ್ತೃವಿನ ಸಂಘಾತರೂಪವೆಂದರ್ಥವೆಂದು ಶಂಕರಾಚಾರ್ಯ ವಿವರಿಸಿದ್ದಾರೆ. ಪ್ರಕೃತದಲ್ಲಿ ರೂಢವಾಗಿರುವ ಅರ್ಥವೂ ಸಹ ಇದೇ ಧಾತುವಿನಿಂದ ನಿಷ್ಪನ್ನವಾಗಿದೆ. ಶ್ಲೋಕ

CC-0. Jangamwadi Math Collection. Digitized by eGangotri

ಸಂಘಾತೇ ಸಂಘಾತಾರ್ಥಕವಾದ ಶ್ಲೋಕ್ ಧಾತುವಿನಿಂದ ಈ ಪದವು ನಿಷ್ಪನ್ನವಾಗಿದೆ. ಸುರಸವಾದ ಪದಗಳನ್ನು ಛಂದೋಬದ್ಧವಾಗಿ ಗ್ರಥನಮಾಡುವುದು ಎಂದರೆ ನಿಯಮಕ್ಕನುಸಾರವಾಗಿ ಲಾಕ್ಷಣಿಕರೀತ್ಯಾ ಪದಗಳನ್ನು ಒಟ್ಟಿಗೆ ಸೇರಿಸುವುದು ಎಂದರ್ಥ. ಉದಾಹೃತವಾಗಿರುವ ಉಪನಿಷದ್ವಾಕ್ಯದಲ್ಲಿರುವ ಪದಕ್ಕೂ ಸಹ ಶಂಕರಾಚಾರ್ಯರು ಈ ಅರ್ಥವನ್ನೇ ಹೇಳಿದ್ದಾರೆ. ಅನ್ನ ಮತ್ತು ಅನ್ನವನ್ನು ತಿನ್ನುವವನು ಇವುಗಳ ಸಮುದಾಯವೂ ನಾನೇ ಎಂದು ಆತ್ಮನು ತನ್ನ ಬ್ರಹ್ಮಾತ್ಮಕವಾದ ಸ್ವರೂಪವನ್ನು ವರ್ಣಿಸುವ ಸನ್ನಿವೇಶವಿದು.

ಈ ರೀತಿ ಪ್ರಯೋಗಗಳಿರುವಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಶ್ಲೋಕಶಬ್ದಕ್ಕೆ ಸ್ತುತಿಯೆಂದರ್ಥಮಾಡಿದೆ. ದೇವತೆಗಳನ್ನು ಸ್ತುತಿಸುವ ಮಂತ್ರಗಳ ಸಂಘಾತವೆಂದಾದರೂ ಆಗಬಹುದು ಅಥವಾ ಸಾಯಣರು ಐತರೇಯ ಬ್ರಾಹ್ಮಣದ ವಾಕ್ಯವನ್ನು ವಿವರಿಸುವಾಗ ಹೇಳಿರುವಂತೆ ಪಾದಬದ್ಧವೂ, ಮಂತ್ರಾತ್ಮಕವೂ, ಪದಗಳ ಸಂಘಾತರೂಪವೂ ಆದ ಸ್ತುತಿಯೆಂದಾದರೂ ಅರ್ಥವಾಗಬಹುದು.

ಅಂಗ ಎಂಬುದಾಗಿ ಅಶ್ವಿನೀದೇವತೆಗಳನ್ನು ಸಂಬೋಧಿಸಿದೆ. ಆಕರ್ಷಕವಾದ ಅಂಗವುಳ್ಳವರೆಂದರ್ಥದಲ್ಲಿರಬಹುದು. ಯುವಾನಾ, ವಲ್ಗೂ, ಮಧುವರ್ಣಾ, ಶುಭಸ್ಪತೀ ಇತ್ಯಾದಿ ವಿಶೇಷಣಗಳು ಅಶ್ವಿನೀದೇವತೆಗಳ ಆಕರ್ಷಕವಾದ ಅವಯವಗಳನ್ನು ವರ್ಣಿಸಿರುತ್ತವೆ.

ಪುರಾಜಾಃ ವಾಂ ಆಹುಃ—ನೀವು ದುಃಖತಪ್ತರ ಅಭಿಮುಖವಾಗಿ ಹೋಗತಕ್ಕವರೆಂದು ಪುರಾತನರಾದ ಋಷಿಗಳು ಹೇಳಿರುವರು ಎಂಬ ವಾಕ್ಯವು ಹಿಂದೆ ಅನೇಕ ಋಷಿಗಳು ಅಶ್ವಿನೀದೇವತೆಗಳ ಔದಾರ್ಯವನ್ನೂ ಶಕ್ತಿಯನ್ನೂ ಪ್ರಶಂಸಿಸಿರುವ ಸನ್ನಿವೇಶಗಳನ್ನು ತಿಳಿಸುತ್ತದೆ. ಯಾಭೀ ರೇಭಂ ನಿವೃತಂ ಸಿತಂ ಇತ್ಯಾದಿವಾಕ್ಯಗಳಿಂದ ಅಶ್ವಿನೀ ದೇವತೆಗಳು ರೇಭ, ವಂದನ ಇತ್ಯಾದಿ ದುಃಖತಪ್ತರನ್ನು ರಕ್ಷಿಸಿದ ಅಂಶವನ್ನು ವರ್ಣಿಸಿ ಕುತ್ಸ ಆಂಗಿರಸಾದಿಗಳು ಸ್ತುತಿಸಿರುವುದು ಪ್ರಸಿದ್ಧವಾಗಿದೆ. ಅದೇ ಅಂಶವನ್ನು ಇಲ್ಲಿ ತಿಳಿಸಿದೆ.

---

ಸಂಹಿತಾಪಾಠಃ

ಆ ಮನ್ಯೇಥಾಮಾ ಗತಂ ಕಚ್ಚಿದೇವೈರ್ವಿಶ್ವೇ ಜನಾಸೋ ಅಶ್ವಿನಾ ಹವಂತೇ।
ಇಮಾ ಹಿ ವಾಂ ಗೋಋಜೀಕಾ ಮಧೂನಿ ಪ್ರ ಮಿತ್ರಾಸೋ ನ ದದು-
ರುಸ್ರೋ ಅಗ್ರೇ ॥ ೪ ॥

ಪದಪಾಠಃ

ಆ । ಮನ್ಯೇಥಾಂ । ಆ । ಗತಂ । ಕತ್ । ಚಿತ್ । ಏವೈಃ । ವಿಶ್ವೇ । ಜನಾಸಃ । ಅಶ್ವಿನಾ । ಹವಂತೇ ।
ಇಮಾ । ಹಿ । ವಾಂ । ಗೋಽಋಜೀಕಾ । ಮಧೂನಿ । ಪ್ರ । ಮಿತ್ರಾಸಃ । ನ । ದದುಃ । ಉಸ್ರಃ । ಅಗ್ರೇ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

**ಕ್ವಚಿದಿತಿ ಪ್ರಶ್ನೇ । ಹೇ ಅಶ್ವಿನೌ ಆ ಮನ್ಯೇಥಾಂ । ಇಮಾಂ ಮದೀಯಾಂ ಸ್ತುತಿಂ ಜಾನೀತಂ । ಕಿಂಚ ಏನ್ಯೈರ್ಗಮನಸಾಧನೈರಶ್ವೈರಾ ಗತಂ । ಯಜ್ಞಂ ಪ್ರತ್ಯಾಗಚ್ಛತಂ । ವಿಶ್ವೇ ಸರ್ವೇ ಜನಾಸಃ ಸ್ತೋತಾರೋಽಶ್ವಿನಾಶ್ವಿನೌ ವಾಂ ಯುವಾಂ ಹವಂತೇ । ಸ್ತುತಿಲಕ್ಷಣಾಭಿರ್ವಾಗ್ಭಿರಾಹ್ವಯಂತಿ । ಕಿಂಚ ಗೋಋಜೀಕಾ ಗವಾಂ ಪಯಸಾ ಮಿಶ್ರಣೋಪೇತಾನಿ ಮಧೂನಿ ಮದಕರಾಣಿ ಸೋಮರಸರೂಪಾಣೀಮಾನಿ ಹವೀಂಷಿ ಯುವಾಭ್ಯಾಂ ಪ್ರ ದದುಃ । ಅಧ್ವರ್ಯ್ವಾದಯಃ ಪ್ರಯಚ್ಛಂತಿ । ತತ್ರ ದೃಷ್ಟಾಂತಃ । ಮಿತ್ರಾಸೋ ನ । ಯಥಾ ಮಿತ್ರಾಣಿ ಮಿತ್ರೇಭ್ಯೋಽಪೇಕ್ಷಿತಂ ದದತಿ ತದ್ವತ್ । ಉಸ್ರಃ । ವಸತಿ ನಭಸೀತ್ಯುಸ್ರಃ ಸೂರ್ಯಃ । ಅಗ್ರ ಉಷಸೋಽಗ್ರ ಉದೇತಿ । ತಸ್ಮಾದಾಗಚ್ಛತಮಿತಿ ಭಾವಃ ॥ ದದುಃ । ದಾಣ್ ದಾನ ಇತ್ಯಸ್ಯ ಲಿಟ್ಯುಸಿ ರೂಪಂ । ಹಿಯೋಗಾದನಿಘಾತಃ । ಉಸ್ರಃ । ವಸ ನಿವಾಸೇ । ಸ್ಫಾಯಿತಂಚೀತ್ಯಾದಿನಾ ರಕ್ । ಕಿತ್ತ್ವಾತ್ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಾಭಾವಶ್ಛಾಂದಸಃ ॥**

### ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಕಚ್ಚಿತ್ ಆ ಮನ್ಯೇಥಾಃ**—ನಮ್ಮ ಸ್ತುತಿಯು ಉತ್ತಮವಾದುದೆಂದು ನೀವು ತಿಳಿದಿದ್ದರೆ । **ಏನ್ಯೈಃ**—ಗಮನಸಾಧನಗಳಾದ ಅಶ್ವಗಳೊಂದಿಗೆ । **ಆ ಗತಂ**—ನಮ್ಮ ಯಜ್ಞಕ್ಕೆ ಬನ್ನಿರಿ । **ವಿಶ್ವೇ ಜನಾಸಃ**—ಸಮಸ್ತವಾದ ಸ್ತೋತೃಗಳೂ ಸಹ । **ಅಶ್ವಿನಾ**—ಎಲೈ ಅಶ್ವಿನೀದೇವತೆಗಳೇ । **ವಾಂ**—ನಿಮ್ಮನ್ನು । **ಹವಂತೇ**—ಪ್ರಾರ್ಥಿಸಿ ಕರೆಯುತ್ತಾರೆ । **ಗೋಋಜೀಕಾ**—ಹಾಲುಗಳೊಂದಿಗೆ ಮಿಶ್ರವಾದವೂ । **ಮಧೂನಿ**—ಮಧುರವಾದ ಸೋಮರಸರೂಪವುಳ್ಳವೂ ಆದ । **ಇಮಾ**—ಈ ಹವಿಸ್ಸುಗಳನ್ನು । **ಮಿತ್ರಾಸೋ ನ**—ಮಿತ್ರರಿಗೆ ಪ್ರೀತಿಯಿಂದ ಕೊಡುವಂತೆ । **ಪ್ರ ದದುಃ**—ನಿಮಗೆ ಅರ್ಪಿಸುತ್ತಾರೆ । **ಉಸ್ರಃ**—ಸೂರ್ಯನು । **ಅಗ್ರೇ**—ಮುಂಭಾಗದಲ್ಲಿ ಉದಯಿಸಿದ್ದಾನೆ.

### ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ನಮ್ಮ ಸ್ತುತಿಯು ಉತ್ತಮವಾದುದೆಂದು ನೀವು ತಿಳಿದಿದ್ದರೆ, ಗಮನಸಾಧನಗಳಾದ ಅಶ್ವಗಳೊಂದಿಗೆ ನಮ್ಮ ಯಜ್ಞಕ್ಕೆ ಬನ್ನಿರಿ. ಸಮಸ್ತವಾದ ಸ್ತೋತೃಗಳೂ ಸಹ ನಿಮ್ಮನ್ನು ಪ್ರಾರ್ಥಿಸಿ ಕರೆಯುತ್ತಾರೆ. ಹಾಲುಗಳೊಂದಿಗೆ ಮಿಶ್ರವಾದುವೂ, ಮಧುರವಾದ ಸೋಮರಸರೂಪವುಳ್ಳವೂ ಆದ ಈ ಹವಿಸ್ಸುಗಳನ್ನು ಮಿತ್ರರಿಗೆ ಪ್ರೀತಿಯಿಂದ ಕೊಡುವಂತೆ ನಿಮಗೆ ಅರ್ಪಿಸುತ್ತಾರೆ ಸೂರ್ಯನು ಮುಂಭಾಗದಲ್ಲಿ ಉದಯಿಸಿದ್ದಾನೆ. ಆದುದರಿಂದ ಈ ಯಜ್ಞಕ್ಕೆ ದಯಮಾಡಿರಿ.

### English Translation

If you regard (my prayer), come with your quick steeds : all men, *Ashwins*, invoke you : to you they offer the sweet (Soma) juice mixed with milk, as friends (give gifts to friends) : the sun is in advance, (therefore come to the rite).

CC-0. Jangamwadi Math Collection. Digitized by eGangotri

## ವಿಶೇಷವಿಷಯಗಳು

ಏನ್ಯೈಃ—ಗಮನಸಾಧನ್ಯೈಃ । ಸಂಚರಿಸಲು ಸಾಹಾಯ್ಯಕವಾದ ಅಶ್ವಗಳೊಡನೆ ಎಂದರ್ಥ. ಸಾಧಾರಣವಾಗಿ ಈ ವಿಶೇಷಣವು ಇಂದ್ರನಿಗೆ ಸಹಚಾರಿಗಳಾದ ಮರುತ್ತುಗಳನ್ನು ನಿರ್ದೇಶಿಸುವ ಪದವಾಗಿದೆ. ಏವಾಸಃ, ಏವಯೊಮರುತ್ ಇತ್ಯಾದಿ ಪದಗಳು ಮರುತ್ತುಗಳನ್ನು ವರ್ಣಿಸುತ್ತವೆ. ಆದರೆ ಗಮನಸಾಧನವಾದ ಅಶ್ವಗಳಿಗೂ ವಿಶೇಷಣವಾಗಿ ಕೆಲವೆಡೆಗಳಲ್ಲಿ ಮಾತ್ರ ಪ್ರಯೋಗಿಸಲ್ಪಟ್ಟಿದೆ. ಅಲ್ಲದೇ,

**ಸನಾದ್ದಿವಂ ಪರಿ ಭೂಮಾ ವಿರೂಪೇ ಪುನರ್ಭುವಾ ಯುವತೀ ಸ್ವೇಭಿರೇವೈಃ ।**

(ಋ. ಸಂ. ೧-೬೨-೮)

ರಾತ್ರ್ಯುಷಸ್ಸುಗಳು ತಮ್ಮ ಆಕರ್ಷಕವಾದುದೂ, ಪರಿಭ್ರಮಣರೂಪವಾದುದೂ ಆದ ಆಗಮನ ಮತ್ತು ನಿರ್ಗಮನಗಳಿಂದ ಪರ್ಯಾಯರೂಪದಲ್ಲಿ ಸಂಚರಿಸುತ್ತಾರೆ ಎಂಬ ವರ್ಣನೆಯಲ್ಲಿ ಕೇವಲ ಗಮನವೆಂದೇ ಅರ್ಥ. ಈ ಪದವು ಮರುತ್ತುಗಳಿಗೆ ವಿಶೇಷಣವಾಗಿರುವ ಸಂದರ್ಭದಲ್ಲಿ ಇದರ ಅರ್ಥವೈಶಿಷ್ಟ್ಯವನ್ನು ಹಿಂದೆ ತಿಳಿಸಿದೆ.

ಉಸ್ರಃ—ವಸತಿ ನಭಸೀತ್ಯುಸ್ರಃ ಸೂರ್ಯಃ । ಅಂತರಿಕ್ಷದಲ್ಲಿ ವಾಸಿಸುತ್ತಾನಾದುದರಿಂದ ಸೂರ್ಯನಿಗೆ ಉಸ್ರನೆಂಬ ಹೆಸರೆಂದು ವಿವರಿಸಿದೆ. ಸಾಧಾರಣವಾಗಿ ಉಸ್ರಃ, ಉಸ್ರಾ, ಉಸ್ರಿಯಾ, ಉಸ್ರಿಕ ಈ ಪದಗಳಿಗೆ ನಿರ್ದಿಷ್ಟವಾದ ಅರ್ಥವನ್ನು ಹೇಳುವುದು ಕಷ್ಟ. ಆಯಾ ಸಂದರ್ಭಾನುಸಾರವಾಗಿ ಹೇಳಬೇಕಾಗುತ್ತದೆ.

**ದ್ಯುತನ್ನೋ ವನ್ವನ್ ಕ್ರತ್ವಾ ನಾರ್ವೋಸ್ರಃ ಪಿತೇವ ಜಾರಯಾಯಿ ಯಜ್ಞೈಃ ।**

(ಋ. ಸಂ. ೬-೧೨-೪)

ಎಂಬಲ್ಲಿ ವೃಷಭಪರ್ಯಾಯವಾಗಿ ಉಸ್ರಶಬ್ದದ ಪ್ರಯೋಗವಿದೆ. ಉಸ್ರವೆಂದರೆ ಸೂರ್ಯಕಿರಣವೆಂದೂ ಅರ್ಥವಾಗುತ್ತದೆ. ಉಸ್ರಾ ಉಸ್ರಿಯಾ ಎಂಬ ಪದಗಳು ಕ್ಷೀರಪರ್ಯಾಯವಾಗಿಯೂ ಇರುತ್ತವೆ.

---

### ಸಂಹಿತಾಪಾಠಃ

ತಿರಃ ಪುರೂ ಚಿದಶ್ವಿನಾ ರಜಾಂಸ್ಯಾಂಗೂಷೋ ವಾಂ ಮಘವಾನಾ ಜನೇಷು ।

ಏಹ ಯಾತಂ ಪಥಿಭಿರ್ದೇವಯಾನೈರ್ದಸ್ರಾವಿಮೇ ವಾಂ ನಿಧಯೋ ಮಧೂನಾಂ ॥ ೫ ॥

### ಪದಪಾಠಃ

ತಿರಃ । ಪುರು । ಚಿತ್ । ಅಶ್ವಿನಾ । ರಜಾಂಸಿ । ಆಂಗೂಷಃ । ವಾಂ । ಮಘ್ಽವಾನಾ । ಜನೇಷು ।

CC-0. Jangamwadi Math Collection. Digitized by eGangotri

ಆ । ಇಹ । ಯಾತಂ । ಪಥಿಽಭಿಃ । ದೇವಽಯಾನೈಃ । ದಸ್ರಾ । ಇಮೇ । ವಾಂ । ನಿಽಧಯಃ ।

ಮಧೂನಾಂ ॥ ೫ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಪುರೂ ಚಿದ್ಬಹೂನ್ಯಪಿ ರಜಾಂಸಿ ಸ್ಥಾನಾನಿ ತಿರಃ ಸ್ವತೇಜಸಾ ತಿರಸ್ಕುರ್ವಂತೌ ವಾಂ ಯುವಾಮಿಹ ಕರ್ಮಣಿ ದೇವಯಾನೈಃ ಪಥಿಭಿರ್ಮಾರ್ಗೈರಾ ಯಾತಂ । ಮಘವಾನಾ ಧನವಂತೌ ಹೇ ಅಶ್ವಿನೌ ಜನೇಷು ಸ್ತೋತೃಷು ವಾಂ ಯುವಯೋರಾಂಗೂಷ ಆ ಸಮಂತಾದ್ಘೋಷಣೀಯಂ ಸ್ತೋತ್ರಂ ವರ್ತತೇ । ದಸ್ರೌ ಶತ್ರೂಣಾಮುಪಕ್ಷಪಯಿತಾರೌ ಹೇ ಅಶ್ವಿನೌ ವಾಂ ಯುವಯೋರ್ಮಧೂನಾಂ ಮದಕರಾಣಾಂ ಸೋಮಾನಾಮಿಮೇ ನಿಧಯಃ । ನಿಧೀಯತೇಽತ್ರ ಸೋಮ ಇತಿ ನಿಧಯಃ ಪಾತ್ರವಿಶೇಷಾಃ । ಸಂತಿ । ತಸ್ಮಾದಾಗಚ್ಛತಮಿತಿ ಭಾವಃ ॥ ಆಂಗೂಷಃ । ಆಙ್ಪೂರ್ವಾದ್ಘುಷೇಃ ಕರ್ಮಣಿ ಘಞ್ । ಆಘುಷ್ಯತ ಇತ್ಯಾಘೋಷಃ । ಘೋ ಇತ್ಯಸ್ಯ ಪೃಷೋದರಾದಿತ್ವಾದ್ಗೂ ಇತ್ಯಾದೇಶಃ । ಆಕೋಽನುನಾಸಿಕಶ್ಛಂದಸೀತ್ಯನಚ್ಯಪ್ಯನುನಾಸಿಕಶ್ಛಾಂದಸಃ । ಯದ್ವಾ । ಅಗಿರ್ಗತ್ಯರ್ಥಃ । ಅಸ್ಮಾದಂಗೂಷ ಇತಿ ಸೂತ್ರೇಣೋಷಚ್‌ಪ್ರತ್ಯಯಾಂತೋ ನಿಪಾತಿತಃ । ಅಂಗತಿ ಗಚ್ಛತಿ ದೇವಾನಿತ್ಯಂಗೂಷಃ ಸ್ತೋತ್ರಂ । ಅಂಗೂಷ ಏವಾಂಗೂಷಃ । ಪ್ರಜ್ಞಾದಿತ್ವಾತ್ಸ್ವಾರ್ಥಿಕೋಽಣ್ । ಪ್ರತ್ಯಯಸ್ವರಃ । ಏಹ ಯಾತಮಿತ್ಯರ್ಧರ್ಚೋ ಗತಃ॥

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) ಪುರೂ ಚಿತ್—ಅನೇಕವಾದ । ರಜಾಂಸಿ—ಲೋಕಗಳನ್ನು । ತಿರಃ—ನಿಮ್ಮ ತೇಜಸ್ಸಿನಿಂದ ವ್ಯಾಪಿಸುವ ನೀವು । ಇಹ—ಈ ಕರ್ಮದಲ್ಲಿರಲು । ದೇವಯಾನೈಃ—ದೇವತೆಗಳು ಸಂಚರಿಸತಕ್ಕ । ಪಥಿಭಿಃ—ಮಾರ್ಗಗಳಿಂದ । ಆ ಯಾತಂ—ಬನ್ನಿರಿ । ಮಘವಾನಾ—ಧನವಂತರಾದ ಎಲೈ ಅಶ್ವಿನೀ ದೇವತೆಗಳೇ । ಜನೇಷು—ಸ್ತೋತೃಗಳಲ್ಲಿ।ವಾಂ—ನಿಮ್ಮ ಪರವಾದ । ಆಂಗೂಷಃ—ಸ್ತೋತ್ರವು (ಅಧಿಕವಾಗಿದೆ)। ದಸ್ರೌ—ಶತ್ರುನಾಶಕರಾದ ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮನ್ನುದ್ದೇಶಿಸಿದವೂ । ಮಧೂನಾಂ—ಸೋಮವನ್ನು ತುಂಬಿದವೂ ಆದ । ಇಮೇ ನಿಧಯಃ—ಈ ಪಾತ್ರೆಗಳು ಸಿದ್ಧವಾಗಿವೆ.

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಅನೇಕವಾದ ಲೋಕಗಳನ್ನೂ ಸಹ ನಿಮ್ಮ ತೇಜಸ್ಸಿನಿಂದ ವ್ಯಾಪಿಸಿರತಕ್ಕ ನೀವು ಈ ಕರ್ಮದಲ್ಲಿ ಭಾಗವನ್ನು ವಹಿಸಲು ದೇವತೆಗಳು ಸಂಚರಿಸತಕ್ಕ ಮಾರ್ಗಗಳಿಂದ ಬನ್ನಿರಿ. ಧನವಂತರಾದ ಅಶ್ವಿನೀದೇವತೆಗಳೇ, ಸ್ತೋತೃಗಳಲ್ಲಿ ನಿಮ್ಮ ಪರವಾದ ಸ್ತೋತ್ರವು ಅಧಿಕವಾಗಿದೆ. ಶತ್ರುನಾಶಕರಾದ ಎಲೈ ಅಶ್ವಿನೀ ದೇವತೆಗಳೇ, ನಿಮ್ಮನ್ನುದ್ದೇಶಿಸಿದವೂ, ಸೋಮವನ್ನು ತುಂಬಿದವೂ ಆದ ಈ ಪಾತ್ರೆಗಳು ಸಿದ್ಧವಾಗಿವೆ.

English Translation

Eclipsing (by your splendour) many regions, Ashwins, (come hither); loud praise awaits you opulent (Ashwins) amongst men : come to this rite by the paths traversed by the gods : here, Dasras, are ample stores of the exhilarating juices.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಅಶ್ವಿನೀದೇವತೆಗಳ ವಿಶ್ವವ್ಯಾಪಕವಾದ ತೇಜಸ್ಸಿನ ಪ್ರಭಾವವೂ ಮತ್ತು ಅವರು ಸಂಚರಿಸತಕ್ಕ ಮಾರ್ಗದ ಸ್ವರೂಪವೂ ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದೆ. ಆ ಮಾರ್ಗದ ಸ್ವರೂಪವನ್ನು **ದೇವಯಾನೈಃ ಪಥಿಭಿಃ** ಎಂದು ವರ್ಣಿಸಿದೆ.

**ದೇವಯಾನೈಃ ಪಥಿಭಿಃ**—ದೇವಯಾನ ಮತ್ತು ಪಿತೃಯಾನ ಎಂಬ ಎರಡು ಮಾರ್ಗಗಳ ಸ್ವರೂಪ ಗಳನ್ನು ಹಿಂದೆ ಸೂಕ್ಷ್ಮವಾಗಿ ತಿಳಿಸಿದೆ. (ಋಗ್ವೇದಸಂಹಿತಾ ಭಾಗ. ೧೨. ಪುಟ 563-564). ಆದರೆ ಅಲ್ಲಿ ಜೀವಾತ್ಮನ ಕರ್ಮಾನುರೋಧವಾದ ಎರಡು ಗತಿಗಳನ್ನೂ ಆ ಸಂದರ್ಭಕ್ಕೆ ತಕ್ಕಂತೆ ಮಾತ್ರ ಸೂಕ್ಷ್ಮವಾಗಿ ಸೂಚಿಸಿರುವುದರಿಂದಲೂ ಸಹ ಅಲ್ಲಿ ವಿವರಿಸದಿರುವ ಕೆಲವು ಅಂಶಗಳನ್ನು ಇಲ್ಲಿ ತಿಳಿಸಲಾಗುತ್ತದೆ. ದೇವತೆಗಳು ದ್ಯುಲೋಕದಿಂದ ಪೃಥ್ವಿಗೂ ಮತ್ತು ಪೃಥ್ವಿಯಿಂದ ದ್ಯುಲೋಕಕ್ಕೂ ಸಹ ಸಂಚರಿಸುವ ಮಾರ್ಗಕ್ಕೆ ದೇವಯಾನವೆಂದು ಹೆಸರು. ವೈದಿಕಸಂಹಿತಾ ಕಾಲದಿಂದಲೂ ಬ್ರಾಹ್ಮಣಾದಿಶ್ರುತಿಸ್ಮೃತಿಗಳಲ್ಲೂ ಲೌಕಿಕವಾಙ್ಮಯವನ್ನು ಪ್ರಕಾಶಪಡಿಸಿರುವ ಪ್ರಾಚೀನರೂ, ಅರ್ವಾಚೀನರೂ ಆದ ಕವಿಗಳ ಕೃತಿಗಳಲ್ಲೂ ಈ ಪದಕ್ಕೆ ಒಂದು ಪಾರಿಭಾಷಿಕವಾದ ಅರ್ಥವಿದೆ. ಆದರೆ ಪ್ರಾರಂಭದಲ್ಲಿ ಇದರ ವಸ್ತುಸ್ವರೂಪವು ಅಷ್ಟು ನಿರ್ದಿಷ್ಟವಾಗಿ ವರ್ಣಿತವಾಗಿರದೇ ಕೇವಲ ಪಾರಿಭಾಷಿಕವಾದ ಪದದಿಂದ ಮಾತ್ರ ಸ್ಥೂಲವಾದ ಚಿತ್ರವು ಸೂಚಿತವಾಗುತ್ತಿದ್ದಿತು. ಕೆಲವು ಸ್ಮೃತ್ಯಾದಿಗ್ರಂಥಗಳಲ್ಲಿ ಈ ಪದವು ದೇವತೆಗಳಿಗೆ ಸಂಚಾರ ಸಾಧನವಾದ ರಥಕ್ಕೆ ಪರ್ಯಾಯಪದವಾಗಿದ್ದರೂ ಸಹ ಈ ಅರ್ಥವು ಬಹಳ ಗೌಣವಾದುದು ಮತ್ತು ರೂಢವಾದ ತಾತ್ಪರ್ಯವನ್ನು ತೋರಿಸುವುದಿಲ್ಲ. ದೇವಯಾನವೂ, ಪಿತೃಯಾನವೂ ಸಹ ಆಧ್ಯಾತ್ಮಿಕದೃಷ್ಟಿಯಿಂದ ಪರಾಪರಮಾರ್ಗ ಗಳೆಂಬುದು ಉಪನಿಷದಾದಿಗಳಲ್ಲಿ ನಿಷ್ಕೃಷ್ಟವಾಗಿ ತಿಳಿಯಬಹುದಾದ ವಿಷಯವಾಗಿದೆ. ದೇವಯಾನದಿಂದ ಸಂಚರಿಸಿ ಉತ್ತಮವಾದ ಆದಿತ್ಯಲೋಕಕ್ಕೆ ಹೋಗತಕ್ಕ ಆತ್ಮನಿಗೆ ದೇವತೆಗಳ ಸಹಾಯವು ಪೂರ್ಣವಾಗಿ ಸಿಗುವುದೆಂಬ ನಂಬಿಕೆಯೂ ಇದರಿಂದ ಸೂಚಿತವಾಗುತ್ತದೆ. **ಪರಂ ಮೃತ್ಯೋ ಅನು ಪರೇ ಹಿ ಪಂಥಾಂ** (ಋ.ಸಂ. ೧೦-೧೮-೧) ಇತ್ಯಾದಿ ವರ್ಣನೆಗಳಿಂದ ಇದು ಮೃತ್ಯುರಹಿತವಾದ ಮಾರ್ಗವೆಂದು ಹೇಳಲ್ಪಟ್ಟಿದೆ.

ಋಕ್ಸಂಹಿತೆಯಲ್ಲಿ ಈ ಮಾರ್ಗವನ್ನು ದೇವತೆಗಳಿಗೂ, ಮಾನವರಿಗೂ ಸಂಬಂಧವನ್ನು ಕಲ್ಪಿಸುವ ಅಗ್ನಿ ಸಂಬಂಧವಾದುದೆಂದು ವರ್ಣಿತವಾಗಿದೆ. ಯಜ್ಞಹವಿಸ್ಸನ್ನು ದೇವತೆಗಳಿಗೆ ಕೊಂಡೊಯ್ದು ಅರ್ಪಿಸುವುದೂ ಮತ್ತು ದೇವತೆಗಳನ್ನೇ ಯಜ್ಞಪ್ರದೇಶಕ್ಕೆ ಕರೆದುಕೊಂಡು ಬಂದು ಅವರನ್ನು ಸತ್ಕರಿಸುವುದೂ ಸಿದ್ಧವಾದ ವಿಷಯ. ಆದರೆ ಈ ಕಾರ್ಯಗಳಿಗೆ ಒಂದು ನಿರ್ದಿಷ್ಟವಾದ ಮಾರ್ಗವಿದೆ. ಅದು ಅಗ್ನಿಗೆ ಮಾತ್ರ ವಿದಿತವಾಗಿದೆ.

**ಅಸ್ಮೇ ವತ್ಸಂ ಪರಿ ಷಂತಂ ನ ವಿಂದನ್ನಿಚ್ಛಂತೋ ವಿಶ್ವೇ ಅಮೃತಾ ಅಮೂರಾಃ ।**
**ಶ್ರಮಯುವಃ ಪದವ್ಯೋ ಧಿಯಂಧಾಸ್ತಸ್ಥುಃ ಪದೇ ಪರಮೇ ಚಾರ್ವಗ್ನೇಃ ।**

(ಋ. ಸಂ. ೧-೭೨-೨)

ಎಲೈ ಅಗ್ನಿಯೇ, ದೇವತೆಗಳು ಸಂಚರಿಸತಕ್ಕ ಮಾರ್ಗವನ್ನು ನೀನು ತಿಳಿದವನಾಗಿ ಅವರಿಗೆ ದೂತನಾದ ನೀನು ಅವರ ಹವಿಸ್ಸನ್ನು ಕೊಂಡೊಯ್ಯಲು ನಿನ್ನ ಸಹಾಯವನ್ನಪೇಕ್ಷಿಸಿ ಅತ್ಯುತ್ತಮವಾದ ಪರಮಪದದಲ್ಲಿ ನೀನಿರುವುದನ್ನೂ ನಿನ್ನ ಲೋಕದ ಮಾರ್ಗವನ್ನೂ ಸಹ ಅರಿತ ದೇವಾದಿಗಳು ನಿನ್ನನ್ನು ಮಾತ್ರ ಕಾಣದೇ ನಿನ್ನ ಲೋಕದಲ್ಲಿ ನಿಂತರು ಎಂದಿದೆ.

CC-0. Jangamwadi Math Collection. Digitized by eGangotri

ಪ್ರಾರಂಭದಲ್ಲಿ ಹವಿಸ್ಸನ್ನು ಕೊಂಡೊಯ್ಯುವ ಅಗ್ನಿಯು ಸಂಚರಿಸತಕ್ಕ ಮಾರ್ಗವೇ ಕೊನೆಯಲ್ಲಿ ಯಜ್ಞಕರ್ತನಾದ ಯಜಮಾನನೂ ಸಂಚರಿಸತಕ್ಕ ಮಾರ್ಗವೆಂದು ಪ್ರಸಿದ್ಧವಾಯಿತು.

**ಸ ಏಷ ದೇವಯಾನೋ ವಾ ಪಿತೃಯಾಣೋ ವಾ ಪಂಥಾಃ । ತಮುಭಯತೋಽಗ್ನಿಶಿಖೇ ಸಮೋಷಂತ್ಯೌ ತಿಷ್ಠತಃ ಪ್ರತಿ ತಮೋಷತೋ ಯಃ ಪ್ರತ್ಯುಷ್ಯೋಽತ್ಯೃತಗ್‌ಂ ಸೃಜೇತೇ ಯೋಽತಿಸೃಜ್ಯಃ ಶಾಂತಿರಾಪಸ್ತದೇತಮುನ್ಯತೆಪ್ವಂಥಾನಗ್‌ಂ ಶಮಯತಿ ॥**

(ಶ. ಬ್ರಾ. ೧-೯-೩-೨)

ದೇವಲೋಕಕ್ಕಾಗಲಿ ಅಥವಾ ಪಿತೃಲೋಕಕ್ಕಾಗಲಿ ಕೊಂಡೊಯ್ಯುವ ಮಾರ್ಗವು ಒಂದೇ. ಈ ಸಮಾನವಾದ ಮಾರ್ಗದ ಎರಡೆಡೆಗಳಲ್ಲಿಯೂ ಎರಡು ಜ್ವಾಲೆಗಳು ಸ್ಥಿರವಾಗಿ ಉರಿಯುತ್ತಿವೆ. ಸುಕೃತಿಯಾದವನನ್ನು ಆ ಜ್ವಾಲೆಗಳು ಹಿಂಸಿಸದೇ ಅವನ ಸಂಚಾರಕ್ಕೆ ಅವಕಾಶವನ್ನು ಕಲ್ಪಿಸುತ್ತವೆ. ದುಷ್ಕೃತಿಯನ್ನು ದಹಿಸುತ್ತವೆ. ಆದುದರಿಂದಲೇ **ಯತ್ರಾಸತೇ ಸುಕೃತೋ ಯತ್ರ ತೇ ಯಯುಸ್ತತ್ರ ತ್ವಾ ದೇವಃಸ ವಿತಾ ದಧಾತು** (ಋ. ಸಂ. ೧೦-೧೭-೪) ಸವಿತೃವು ಸತ್ಪಥದಲ್ಲಿ ಸುಕೃತಿಗಳನ್ನು ಕರೆದುಕೊಂಡು ಹೋಗುವ ದೇವನಾದುದರಿಂದ ಯಜ್ಞಕರ್ತರಾದ ಸುಕೃತಿಗಳನ್ನು ಅದೇ ಶುದ್ಧವಾದುದೂ, ರಜೋರಹಿತವಾದುದೂ, ಮೃತ್ಯುರಹಿತವಾದುದೂ ಆದ ಮಾರ್ಗದಲ್ಲಿ ಕರೆದುಕೊಂಡು ಹೋಗಬೇಕೆಂದು ಪ್ರಾರ್ಥಿತನಾಗಿದ್ದಾನೆ.

ಈರೀತಿ ಒಂದೇ ಮಾರ್ಗವು ದೇವಲೋಕ ಮತ್ತು ಪಿತೃಲೋಕ ಎರಡಕ್ಕೂ ಕರೆದುಕೊಂಡುಹೋಗುವುದೆಂದೂ ಅದರಲ್ಲಿ ಸುಗಮವಾದ ಪಥವು ಅವನವನ ಕರ್ಮಾನುಗುಣವಾಗಿರುತ್ತದೆಂಬುದು ಒಂದು ವಿಧವಾದ ವರ್ಣನೆ ಇದಲ್ಲದೇ, ಸುಕೃತಿಗಳ ಮಾರ್ಗವೇ ಒಂದು, ಅದಿಲ್ಲದವರ ಮಾರ್ಗವೇ ಇನ್ನೊಂದು ಎಂದು ಎರಡು ಮಾರ್ಗಗಳೂ ಬೇರೆಬೇರೆಯಾಗಿ ವರ್ಣಿತವಾಗಿರುವುದು ಇನ್ನೊಂದು ವಿಧ. ಆದರೆ ಇಲ್ಲಿ ಗಮನಿಸಬೇಕಾದ ಮುಖ್ಯವಾದ ಒಂದಂಶವಿದೆ **ಸುಕೃತೋ ಯತ್ರ** ತೇ ಎಂದು ಋಕ್ಸಂಹಿತಾವಾಕ್ಯದಲ್ಲಿ ಸತ್ಕರ್ಮವನ್ನು ಪ್ರಶಂಸಿಸಿದೆ. ಆ ಸತ್ಕರ್ಮವು ಯಾವುದು? ಕೇವಲ ಯಜ್ಞಾಚರಣೆಯೇ ಅಥವಾ ಬೇರೆ ಯಾವುದಾದರೂ ಇದೆಯೇ? ಎಂದರೆ, ಜ್ಞಾನರಹಿತನಾಗಿ ಕೇವಲ ಯಜ್ಞಕರ್ತನಾಗಿದ್ದರೆ, ಅವನಿಗೆ ದೇವಯಾನದ ಪ್ರವೇಶವಿಲ್ಲ. ಜ್ಞಾನಿಯಾದವನಿಗೆ ಪ್ರವೇಶವುಂಟು. ಆದರೆ ಅವನು ಯಜ್ಞಕರ್ತನೇ ಆಗಿರಬೇಕು ಎಂಬ ವಿಧಿಯು ಸ್ಪಷ್ಟವಾಗಿ ಉಕ್ತವಾಗಿಲ್ಲ. ಆದುದರಿಂದ ದೇವಯಾನಕ್ಕೆ ಪ್ರವೇಶಿಸುವ ಅಧಿಕಾರವು ಯಾರಿಗೆ? ಎಂದರೆ ಸದ್ಯಃ ನಮಗೆ ಆ ಅಧಿಕಾರದ ಪ್ರಶ್ನೆಯೂ ಅದರ ಉತ್ತರವೂ ಅಪ್ರಕೃತ. ಅಂತಹ ಅಧಿಕಾರಿ ಯಾರು? ಅವನ ಕ್ರಿಯಾಸ್ವರೂಪವು ಎಂತಹುದಾಗಿರಬೇಕು ಎಂಬುದನ್ನು ಮುಂದೆ ಸಂದರ್ಭೋಚಿತವಾಗಿ ತಿಳಿಸಲಾಗುತ್ತದೆ. ಪ್ರಕೃತದಲ್ಲಿ ಆ ಮಾರ್ಗದ ವರ್ಣನೆಯು ಮಾತ್ರ ಸಂದರ್ಭಕ್ಕೆ ತಕ್ಕ ವಿಷಯವಾಗಿರುತ್ತದೆ. ಆದುದರಿಂದ ದೇವತೆಗಳು ಸಂಚರಿಸುವ ಅಥವಾ ಸುಕೃತಿಯು ಅನುಸರಿಸುವ ಮಾರ್ಗದ ಸ್ವರೂಪವೇನು? ಅದಿಲ್ಲದವನು ಸಂಚರಿಸುವ ಮಾರ್ಗದ ಸ್ವರೂಪವೇನು? ಎಂಬುದನ್ನು ತಿಳಿಯಬೇಕು. ಮತ್ತು ಪ್ರಕೃತವಾದ ಋಕ್ಕಿನಲ್ಲಿ ಅಶ್ವಿನೀದೇವತೆಗಳು ಸಂಚರಿಸಬೇಕಾದ ದೇವಯಾನವು ಋಕ್ಸಂಹಿತಾದಿಗಳಲ್ಲಿ ವರ್ಣಿತವಾಗಿರುವಂತೆಯೇ ಉಪನಿಷದಾದಿಗಳಲ್ಲಿಯೂ ವರ್ಣಿತವಾಗಿದೆಯೇ ಎಂಬುದನ್ನೂ ತಿಳಿಯಬೇಕು.

ಹಿಂದೆ **ಋತದ** ಮಾರ್ಗವನ್ನು ವಿವರಿಸುವಾಗ ಆದಿತ್ಯಮಾರ್ಗ, ಗಂಧರ್ವಮಾರ್ಗ, ದೇವಮಾರ್ಗ ಎಂದು ಋಕ್ಸಂಹಿತೆಯಲ್ಲಿ ಪ್ರಸಿದ್ಧವಾದ ಮಾರ್ಗಗಳ ಸ್ವರೂಪವನ್ನು ಉದಾಹರಣೆಗಳೊಂದಿಗೆ ತಿಳಿಸಿದೆ. ಅದು ಶಾಶ್ವತ

CC-0. Jangamwadi Math Collection. Digitized by eGangotri

ವಾದುದೂ, ಸ್ಥಿರವಾದುದೂ ಆದ ಮಾರ್ಗವೆಂದೂ ವರ್ಣಿತವಾಗಿದೆ. ಉಪನಿಷದಾದಿಗಳಲ್ಲಿ ವರ್ಣಿತವಾಗಿರುವ ಮಾರ್ಗದ ವಿವರವು ಅದಕ್ಕಿಂತಲೂ ಅನೇಕ ವಿಧಗಳಲ್ಲಿ ವ್ಯತ್ಯಸ್ತವಾದುದೆಂದು ಕೆಲವಂಶಗಳಿಂದ ತಿಳಿದರೂ, ಎರಡು ಸನ್ನಿವೇಶಗಳಲ್ಲೂ ವರ್ಣಿತವಾಗಿರುವ ವಸ್ತುತತ್ತ್ವವು ಒಂದೇ ಎಂದು ಹೇಳಬಹುದು. ಈ ದೇವಮಾರ್ಗವನ್ನು ಛಾಂದೋಗ್ಯೋಪನಿಷತ್ತಿನಲ್ಲಿ ಈ ರೀತಿ ವರ್ಣಿಸಿದೆ.—

ಯೇ ಚೇಮೇಽರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತ್ಯರ್ಚಿಷಾಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ಷಡುದಙ್ಙೇತಿ ಮಾಸಾಂಸ್ತಾನ್ । ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರುಷೋಽಮಾನವಃ ಸ ಏನಾನ್ಬ್ರಹ್ಮ ಗಮಯತ್ಯೇಷ ದೇವಯಾನಃ ಪಂಥಾ ಇತಿ ॥

(ಛಾ. ಉ. ೫-೧೦-೧, ೨)

ಅಗ್ನಿವಿದ್ಯೆಯನ್ನರಿತು ಶ್ರದ್ಧೆಯೊಡಗೂಡಿದ ತಪಸ್ಸನ್ನಾಚರಿಸುವವರು ಜ್ವಾಲೆಯೊಳಕ್ಕೆ ಪ್ರವೇಶಿಸುತ್ತಾರೆ. (ಇದು ಚಿತೆಯ ಜ್ವಾಲೆಯಲ್ಲಿ ಅಗ್ನಿರೂಪನಾದ ಆದಿತ್ಯರಶ್ಮಿ) ಅರ್ಚೀರೂಪವಾದ ಈ ಜ್ವಾಲೆಯಿಂದ ಅಹಸ್ಸಿಗೂ, ಅಹಸ್ಸಿನಿಂದ ಶುಕ್ಲಪಕ್ಷಕ್ಕೂ, ಶುಕ್ಲಪಕ್ಷದಿಂದ ಸೂರ್ಯನ ಉತ್ತರಪಥದ ಮಾರ್ಗವಾದ ಉತ್ತರಾಯಣಕ್ಕೂ ಅಲ್ಲಿಂದ ಸಂವತ್ಸರಕ್ಕೂ, ಸಂವತ್ಸರದಿಂದ ಆದಿತ್ಯಲೋಕಕ್ಕೂ ಅಲ್ಲಿಂದ ತದತಿರಿಕ್ತವಾದ ಚಂದ್ರಲೋಕಕ್ಕೂ ಅಲ್ಲಿಂದ ವಿದ್ಯುಲ್ಲೋಕಕ್ಕೂ ಪ್ರವೇಶಿಸುತ್ತಾರೆ. ಇದೇ ದೇವಯಾನವು.

ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ ಧೂಮಾದ್ರಾತ್ರಿಂ ರಾತ್ರೇರಪರಪಕ್ಷಮಪರಪಕ್ಷಾದ್ಯಾನ್ಷಡ್ದಕ್ಷಿಣೈತಿಮಾಸಾಂಸ್ತಾನ್ನೈತೇ ಸಂವತ್ಸ-ರಮಭಿಪ್ರಾಪ್ನುವಂತಿ ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾಕಾಶಂ .... .... ತಂ ದೇವಾ ಭಕ್ಷಯಂತಿ ।

(ಛಾ. ಉ. ೫-೧೦-೩, ೪)

ಯಾರು ಗ್ರಾಮಗಳಲ್ಲಿದ್ದು ಕಾಮ್ಯವಾದ ಯಜ್ಞಕರ್ಮದಲ್ಲಿ ಶ್ರದ್ಧೆಯನ್ನಿಟ್ಟು ಕರ್ಮವನ್ನಾಚರಿಸುವರೋ ಅವರು ಧೂಮದಲ್ಲಿ ಪ್ರವೇಶಿಸಿ, ಧೂಮದಿಂದ ಅಂಧಕಾರಮಯವಾದ ರಾತ್ರಿಗೂ, ರಾತ್ರಿಯಿಂದ ಕೃಷ್ಣಪಕ್ಷಕ್ಕೂ, ಕೃಷ್ಣಪಕ್ಷದಿಂದ ದಕ್ಷಿಣಾಯನಕ್ಕೂ, ದಕ್ಷಿಣಾಯನದಿಂದ ಸಂವತ್ಸರಕ್ಕೂ ಅಲ್ಲಿಂದ ಪಿತೃಲೋಕಕ್ಕೂ ಅಲ್ಲಿಂದ ಆಕಾಶಕ್ಕೂ ತದ್ದ್ವಾರಾ ಸೋಮಲೋಕಕ್ಕೂ ಪ್ರವೇಶಿಸುತ್ತಾರೆ. ಸೋಮವು ದೇವತೆಗಳಿಗೆ ಅನ್ನವಾದುದರಿಂದ ಅವರು ಅದನ್ನು ಭಕ್ಷಿಸುತ್ತಾರೆ

ಇದೇ ವರ್ಣನವು ಕೊಂಚ ವ್ಯತ್ಯಸ್ತವಾಗಿ ಬೃಹದಾರಣ್ಯಕೋಪನಿಷತ್ತಿನಲ್ಲೂ ಸಹ ಇದೇ ರೀತಿ ತಿಳಿಸಲ್ಪಟ್ಟಿದೆ. (೬-೨-೧೫) ಪಿತೃಯಾನದ ವಿವರಣೆಯಲ್ಲಿ ಆಕಾಶವು ಸೇರಿಲ್ಲ. ಅಲ್ಲದೇ,

ಅಣುಃ ಪಂಥಾ ವಿತತಃ ಪುರಾಣೋ ಮಾಂ ಸ್ಪೃಷ್ಟೋಽನುವಿತ್ತೋ ಮಯೈವ ।
ತೇನ ಧೀರಾ ಅಪಿಯಂತಿ ಬ್ರಹ್ಮವಿದಃ ಸ್ವರ್ಗಂ ಲೋಕಮಿತ ಊರ್ಧ್ವಂ ವಿಮುಕ್ತಾಃ ॥

(ಬೃ. ಉ ೪-೪-೮)

CC-0. Jangamwadi Math Collection. Digitized by eGangotri

ಈ ಸೂಕ್ಷ್ಮವಾದ ಪಥವು ಶಾಶ್ವತವೂ, ಪುರಾತನವೂ ಆದುದು. ಈ ಪಥದ ದ್ವಾರಾ ವೇದವಿತ್ತುಗಳು ಮುಕ್ತರಾಗಿ ಸ್ವರ್ಗಲೋಕವನ್ನು ಪ್ರವೇಶಿಸುವರು. ಮತ್ತು,

ತಸ್ಮಿಞ್ಚ್ಛುಕ್ಲಮುತ ನೀಲಮಾಹುಃ ಪಿಂಗಲಂ ಹರಿತಂ ಲೋಹಿತಂ ಚ ।
ಏಷ ಪಂಥಾ ಬ್ರಹ್ಮಣಾ ಹಾನುವಿತ್ತಸ್ತೇನೈತಿ ಬ್ರಹ್ಮವಿತ್ಪುಣ್ಯಕೃತ್ತೈಜಸಶ್ಚ ॥

(ಬೃ. ಉ. ೪-೪-೯)

ಈ ಮಾರ್ಗದಲ್ಲಿ ಪ್ರಸಿದ್ಧವಾದ ವರ್ಣಗಳ ಮಿಶ್ರಣವಿದ್ದು ಇದು ಅತ್ಯಾಕರ್ಷಕವಾಗಿದೆ. ಶುಕ್ಲವೂ, ನೀಲವೂ, ಪಿಂಗಲವೂ, ಪಚ್ಚೆಯೂ, ಲೋಹಿತವೂ ಇವೆಲ್ಲವೂ ಸೇರಿ ರಮ್ಯವಾದ ಮಾರ್ಗವಾಗಿರುತ್ತದೆ. ಬ್ರಹ್ಮವಿತ್ತೂ ಪುಣ್ಯ ಕರ್ಮವುಳ್ಳವನೂ ಸಹ ಈ ಪ್ರಭಾಯುತವಾದ ಮಾರ್ಗದಿಂದಲೇ ಸಂಚರಿಸುತ್ತಾನೆಂದು ಇದರ ಸ್ವರೂಪವರ್ಣನೆ ಇದೆ.

ಈ ಸಂದರ್ಭದಲ್ಲಿ ಇನ್ನೊಂದಂಶವನ್ನು ಗಮನಿಸಬೇಕು. ಹಿಂದೆ ಇದೇ ಅಧ್ಯಾಯದ ೫೬ನೇ ಸೂಕ್ತದ ಎರಡನೆಯ ಋಕ್ಕಿನಲ್ಲಿ ತಿಸ್ರೋ ಮಹೀರುಪರಾಸ್ತಸ್ಥುಃ ಎಂಬ ಅಂಶವನ್ನು ವಿವರಿಸುವಾಗ ಲೋಕಗಳಲ್ಲೆಲ್ಲಾ ಅತ್ಯಂತ ಔನ್ನತ್ಯವನ್ನು ಪಡೆದುದೂ, ಉತ್ತಮವಾದುದೂ ಆದ ಆದಿತ್ಯಲೋಕಕ್ಕಿಂತಲೂ ಬೇರೊಂದು ಲೋಕವಿಲ್ಲ ವೆಂಬುದು ಸಂಹಿತಾವಾಕ್ಯಗಳಿಂದಲೇ ತಿಳಿಸಿದೆಯೆಂಬುದನ್ನು ವಿವರಿಸಿದೆ. ಆದರೆ ಪ್ರಕೃತದಲ್ಲಿ ಉದಾಹರಿಸಿರುವ ಛಾಂದೋಗ್ಯದಲ್ಲಿ ಆದಿತ್ಯಲೋಕ, ತದತಿರಿಕ್ತವಾದ ಚಂದ್ರಲೋಕ, ಅದಕ್ಕಿಂತಲೂ ಅತಿರಿಕ್ತವಾದ ವಿದ್ಯುಲ್ಲೋಕ ಈ ವಿಧವಾದ ವರ್ಣನೆಯಿದೆ. ಕೌಶೀತಕ್ಯುಪನಿಷತ್ತಿನಲ್ಲಿ ಇನ್ನೂ ಒಂದು ವೈಶಿಷ್ಟ್ಯವಿದೆ.

ಸ ಏವಂ ದೇವಯಾನಂ ಪಂಥಾನಮಾಪದ್ಯಾಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ಆದಿತ್ಯಲೋಕಂ ಸ ವರುಣಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿಲೋಕಂ ಸ ಬ್ರಹ್ಮ ಲೋಕಂ ॥

(ಕೌಶೀತಕ್ಯುಪನಿಷತ್. ೧-೩)

ಸುಕೃತಿಯು ಈ ರೀತಿ ದೇವಯಾನವನ್ನು ಪ್ರವೇಶಿಸಿ ಅಲ್ಲಿಂದ ಕ್ರಮವಾಗಿ ವಾಯುಲೋಕವನ್ನೂ ಅಲ್ಲಿಂದ ಆದಿತ್ಯ ಲೋಕ, ವರುಣಲೋಕ, ಇಂದ್ರಲೋಕ, ಪ್ರಜಾಪತಿಲೋಕ ಕೊನೆಯಲ್ಲಿ ಬ್ರಹ್ಮಲೋಕ ಈರೀತಿ ಪರತತ್ತ್ವವಾದ ಬ್ರಹ್ಮದ ಲೋಕಕ್ಕೆ ಬರುತ್ತಾನೆಂದು ವರ್ಣಿಸಿದೆ. ಈ ವಿಧವಾದ ವಿಭಜನೆಗೆ ಶಾಸ್ತ್ರೀಯವಾದ ಆಧಾರವಾವುದೂ ಹೇಳಲಾಗುವುದಿಲ್ಲ. ಋಕ್ಸಂಹಿತೆಯಲ್ಲಿರುವ ಲೋಕಗಳ ವರ್ಣನೆಗೂ ಇದಕ್ಕೂ ಅನೇಕ ವ್ಯತ್ಯಸ್ತವಾದ ಅಂಶಗಳಿವೆ.

ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ।

(ಮು. ಉ. ೧-೧೧)

ಎಂಬ ಸೂರ್ಯದ್ವಾರದ ವಿವರಣೆಯು ಋಕ್ಸಂಹಿತೆಯ ವರ್ಣನೆಗೆ ಅನುರೂಪವಾಗಿರುತ್ತದೆ. ಅಗ್ನಿರ್ಗಾಂಧರ್ವೀಂ ಪಥ್ಯಾಂ (೧೦-೮೦-೬) ಎಂಬ ಋಕ್ಕಿನಲ್ಲಿ ಯಾವ ಗಂಧರ್ವಪಥವೆಂಬ ಮಾರ್ಗವು ಉಕ್ತವಾಗಿರುವುದೋ ಪ್ರಕೃತದಲ್ಲಿ ಅದನ್ನೇ ಅಶ್ವಿನೀದೇವತೆಗಳು ಸಂಚರಿಸುವ ದೇವಯಾನಪಥವೆಂದು ತಿಳಿಯಬೇಕು. ಪ್ರಕೃತವಾದ ಋಕ್ಕಿನಲ್ಲಿ ನಿರ್ದಿಷ್ಟವಾಗಿರುವ ಲೋಕಗಳಲ್ಲಿ ಈ ದೇವಯಾನದ ಪಥವು ಕೇವಲ ಒಂದು ಭಾಗ ಮಾತ್ರವಾಯಿತು. ಅದಲ್ಲದೇ

CC-0. Jangamwadi Math Collection. Digitized by eGangotri

ಅದಕ್ಕಿಂತಲೂ ಇನ್ನೂ ವಿಸ್ತೃತಿಯನ್ನು ಪಡೆದಿರುವ ಪುರೂ ಚಿತ್ ರಜಾಂಸಿ ಎಂದು ಇತರಲೋಕಗಳನ್ನೂ ನಿರ್ದೇಶಿಸಿದೆ. ಋಕ್ಸಂಹಿತೆಯ ವಿವರಣೆಯ ಪ್ರಕಾರ ಆ ಲೋಕಗಳ ಸ್ವರೂಪವೇನಿರಬಹುದೆಂದು ಹಿಂದೆ ತಿಳಿಸಿದೆ.

ರಜಾಂಸಿ— ಈ ಪದಕ್ಕೆ ರಂಜನಾತ್ಮಕವಾದ ಸ್ವರ್ಗ, ಜ್ಯೋತಿ, ಉದಕ, ಅಂತರಿಕ್ಷ ಇತ್ಯಾದ್ಯನೇಕಾರ್ಥಗಳಲ್ಲಿ ಪ್ರಯೋಗಗಳನ್ನು ಹಿಂದೆ ತಿಳಿಸಿದೆ. (ಋಗ್ವೇದಸಂಹಿತಾ ಭಾಗ. ೨. ಪುಟ. 57-59).

ಅಂಗೂಷಃ— ಅಂಗೂಷಸ್ತೋಮ ಆಘೋಷಃ (ನಿ. ೫-೧೧) ಗಟ್ಟಿಯಾಗಿ ಪಠಿಸಬೇಕಾದ ಸ್ತೋತ್ರಕ್ಕೆ ಅಂಗೂಷವೆಂದು ಹೆಸರು.



ಸಂಹಿತಾಪಾಠಃ

## ಪುರಾಣಮೋಕಃ ಸಖ್ಯಂ ಶಿವಂ ವಾಂ ಯುವೋರ್ನರಾ ದ್ರವಿಣಂ ಜಹ್ನಾವ್ಯಾಂ ।
## ಪುನಃ ಕೃಣ್ವಾನಾಃ ಸಖ್ಯಾ ಶಿವಾನಿ ಮಧ್ವಾ ಮದೇಮ ಸಹ ನೂ ಸಮಾನಾಃ॥

ಪದಪಾಠಃ

ಪುರಾಣಂ । ಓಕಃ । ಸಖ್ಯಂ । ಶಿವಂ । ವಾಂ । ಯುವೋಃ । ನರಾ । ದ್ರವಿಣಂ । ಜಹ್ನಾವ್ಯಾಂ ।
ಪುನರಿತಿ । ಕೃಣ್ವಾನಾಃ । ಸಖ್ಯಾ । ಶಿವಾನಿ । ಮಧ್ವಾ । ಮದೇಮ । ಸಹ । ನು । ಸಮಾನಾಃ ॥ ೬ ॥

ಸಾಯಣಭಾಷ್ಯಂ

ಅಪ್ತೋರ್ಯಾಮೇಽತಿರಿಕ್ತೋಕ್ಥ್ಯೇಽಚ್ಛಾವಾಕಶಸ್ತ್ರೇ ಪುರಾಣಮೋಕ ಇತಿ ಚತಸ್ರೋ ವಿಕಲ್ಪೇನ ಯಾಜ್ಯಾಃ । ಸೂತ್ರಿತಂ ಚ । ಯದಿ ನಾಧೀಯಾತ್ಪುರಾಣಮೋಕಃ ಸಖ್ಯಂ ಶಿವಂ ವಾಮಿತಿ ಚತಸ್ರೋ ಯಾಜ್ಯಾಃ । ಆ. ೯-೧೧ । ಇತಿ ॥

ಹೇ ಅಶ್ವಿನೌ ವಾಂ ಯುವಯೋಃ ಪುರಾಣಂ ಪುರಾತನಂ ಸಖ್ಯಮೋಕಃ ಸೇವ್ಯಂ ಶಿವಂ ಕಲ್ಯಾಣಕರಂ ಭವತಿ । ಕಿಂಚ ಹೇ ನರಾ ನರಾವಸ್ಮದೀಯ ಕರ್ಮಣೋ ನೇತಾರೌ ಯುವೋರ್ಯುವಯೋರ್ದ್ರವಿಣಂ ಧನಂ ಜಹ್ನಾವ್ಯಾಂ ಜಹ್ನುಕುಲಜಾಯಾಂ ಭವತಿ। ಶಿವಾನಿ ಸುಖಕರಾಣಿ ಯುವಯೋಃ ಸಖ್ಯಾನಿ ಪುನಃ ಕೃಣ್ವಾನಾಃ ಕುರ್ವಂತಃ ಸಮಾನಾ ಹವಿಷ್ಪ್ರದಾನೇನೋಪಕಾರಕತ್ವಾನ್ಮಿತ್ರಭೂತಾ ಏಕೀಭೂತಾಃ ಸಂತೋ ವಯಂ ಮಧ್ವಾ ಮದಕರೇಣ ಸೋಮೇನ ಯುವಾಂ ಸಹ ಯುಗಪತ್ ನು ಕ್ಷಿಪ್ರಂ ಮದೇಮ । ಹರ್ಷಯೇಮ ॥ ಸಖ್ಯಂ । ಸಖ್ಯುರ್ಭಾವ ಇತ್ಯರ್ಥೇ ಸಖ್ಯುರ್ಯ ಇತಿ ಯತ್ಪ್ರತ್ಯಯಃ । ಜಹ್ನಾವ್ಯಾಂ ।

CC-0. Jangamwadi Math Collection. Digitized by eGangotri

**ಜಹ್ನೋಃ ಸಂಬಂಧಿನೀತ್ಯರ್ಥೇ ತಸ್ಯೇದಮಿತ್ಯಣ್** | ಓಗುರ್ಣಃ | ಹ್ರಸ್ವದೀರ್ಘಯೋರ್ವ್ಯತ್ಯಯಃ | **ಮದೇಮ** | **ಮದೀ ಹರ್ಷ ಇತ್ಯಸ್ಯಾಶೀರ್ಲಿಙಾ ಲಿಙ್ಯಾಶಿಷ್ಯಙ್‌ಪ್ರತ್ಯಯಃ** | ನಿಘಾತಃ ||

ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ವಾಂ**—ನಿಮ್ಮ | **ಪುರಾಣಂ**—ಪುರಾತನವಾದ | **ಸಖ್ಯಂ**—ಸ್ನೇಹವು | **ಓಕಃ**—ಸೇವಿಸಲು ಯೋಗ್ಯವಾದುದೂ | **ಶಿವಂ**—ಕಲ್ಯಾಣಕಾರಕವಾದುದೂ ಆಗಿದೆ | **ನರಾ**—ಕರ್ಮಕ್ಕೆ ನೇತೃಗಳಾದ | **ಯುವೋಃ**—ನಿಮ್ಮ | **ದ್ರವಿಣಂ**—ಧನವು | **ಜಹ್ನಾವ್ಯಾಂ**—ಜಹ್ನುಕುಲದಲ್ಲಿ ತುಂಬಿದೆ | **ಶಿವಾನಿ**—ಸುಖಕಾರಕವಾದ | **ಸಖ್ಯಾ**—ನಿಮ್ಮ ಸಖ್ಯವನ್ನು | **ಪುನಃ**—ತಿರುಗಿಯೂ | **ಕೃಣ್ವಾನಾಃ**—ಮಾಡುವವರಾಗಿಯೂ| **ಸಮಾನಾಃ**—ನಿಮ್ಮೊಂದಿಗೆ (ಸಖ್ಯದಿಂದ) ಏಕೀಭೂತರಾಗಿಯೂ ಇರುವ ನಾವು ! **ಮಧ್ವಾ**—ಮಧುರವಾದ ಸೋಮರಸದಿಂದ | **ಸಹ**—ಒಟ್ಟಿಗೆ | **ನು**—ಶೀಘ್ರವಾಗಿ | **ಮದೇಮ**—ಸಂತೋಷಗೊಳಿಸುತ್ತೇವೆ |

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಪುರಾತನವಾದ ನಿಮ್ಮ ಸ್ನೇಹವು ಸೇವಿಸಲು ಯೋಗ್ಯವಾದುದೂ ಕಲ್ಯಾಣಕಾರಕವೂ ಆಗಿದೆ. ಕರ್ಮಕ್ಕೆ ನೇತೃಗಳಾದ ನಿಮ್ಮ ಧನವು ಜಹ್ನುಕುಲದಲ್ಲಿ ತುಂಬಿದೆ. ಸುಖಕಾರಕವಾದ ನಿಮ್ಮ ಸಖ್ಯವನ್ನು ಪುನಃ ಮಾಡುವವರಾಗಿಯೂ, ನಿಮ್ಮೊಂದಿಗೆ ಏಕೀಭೂತರಾಗಿಯೂ ಆದ ನಾವು ಮಧುರವಾದ ಸೋಮರಸದಿಂದ ನಿಮ್ಮಿಬ್ಬರನ್ನೂ ಒಟ್ಟಿಗೆ ಶೀಘ್ರವಾಗಿ ಸಂತೋಷಗೊಳಿಸುತ್ತೇವೆ.

English Translation

Your ancient friendship is desirable and auspicious; your wealth, leaders (of rites), is in the family of Jahnu: renewing that auspicious friendship, may we, your associates, delight you with the sweet (Soma juice).

ವಿಶೇಷವಿಷಯಗಳು

**ಪುರಾಣಮೋಕಃ** ಎಂದು ಮೊದಲಾಗುವ ಈ ಸೂಕ್ತದ ನಾಲ್ಕು ಋಕ್ಕುಗಳನ್ನು (ಈ ಸೂಕ್ತದ ೬, ೭, ೮, ೯ನೆಯ ಋಕ್ಕುಗಳನ್ನು **ಅಪ್ತೋರ್ಯಾಮ**ವೆಂಬ ಯಾಗದ ಅತಿರಿಕ್ತೋಕ್ಥ್ಯಮಂತ್ರಪಠನಕಾಲದಲ್ಲಿ **ಅಚ್ಛಾವಾಕ**ನೆಂಬ ಋತ್ವಿಜನು ಶಸ್ತ್ರಮಂತ್ರಗಳನ್ನು ಪಠಿಸುವಾಗ ವಿಕಲ್ಪದಿಂದ ಯಾಜ್ಯಾಮಂತ್ರಗಳನ್ನಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ **ಯದಿ ನಾಧೀಯಾತ್ಪುರಾಣಮೋಕಃ ಸಖ್ಯಂ ಶಿವಂ ವಾಮಿತಿ ಚತಸ್ರೋ ಯಾಜ್ಯಾಃ** ಎಂಬ ಸೂತ್ರದಿಂದ (ಆ. ೯-೧೧) ವಿವೃತವಾಗಿರುವುದು.

**ಓಕಃ—ಸೇವ್ಯಂ** | ಸೇವಿಸಲು ಯೋಗ್ಯವಾದುದು. ಇದು ಅಶ್ವಿನೀದೇವತೆಗಳ ಸಖ್ಯವನ್ನು ವರ್ಣಿಸುವ ಪದವಾಗಿದೆ. ಸಾಧಾರಣವಾಗಿ **ಓಕಃ** ಶಬ್ದಕ್ಕೆ ಸುಖಕರವಾದ ವಾಸಸ್ಥಾನವೆಂದರ್ಥ. **ಓಕ ಇತಿ ನಿವಾಸನಾಮೋಚ್ಯತೇ** | (ನಿ. ೩-೩) ಎಂದು ನಿರುಕ್ತಕಾರರ ವಾಕ್ಯವಿದೆ. ಆದರೆ ಈ ವಾಸಸ್ಥಾನದಲ್ಲಿರುವ ಅತ್ಯತಿಶಯವಾದ ಪ್ರೀತಿಯನ್ನೂ ಈ ಪದವು ಸೂಚಿಸುತ್ತದೆ ಎಂದು ನಿರುಕ್ತಕಾರರು ಉದಾಹರಣೆಯೊಡನೆ ವಿವರಿಸಿದ್ದಾರೆ. (ನಿ. ೩-೩)

CC-0. Jangamwadi Math Collection. Digitized by eGangotri

**ಅಥ ಸ ಓಕಃ ಪುನರೇವ ತದೇತಿ ಯತ ಆಗತೋ ಭವತಿ** । ಸ್ವೀಕೃತಪುತ್ರನಿಗೆ ಸ್ವಗೃಹದಲ್ಲಿಯೇ ಅಭಿಮಾನವಿರುವುದರಿಂದ ಪುನಃ ಅಲ್ಲಿಗೇ ಬರುವವನಾದುದರಿಂದ ಓಕಃ ಎಂಬುದು ಸ್ವಗೃಹಕ್ಕೆ ಪರ್ಯಾಯಪದವಾಗಿರುತ್ತದೆ.

**ಅಧಾ ಚಿದೋಕಃ ಪುನರಿತ್ಸ ಏತ್ಯಾ ನೋ ವಾಜ್ಯಭೀಷಾಳೇತು ನವ್ಯಃ** ।

(ಋ. ಸಂ. ೭-೪-೮)

ಎಂಬ ಋಕ್ಸಂಹಿತಾವಾಕ್ಯವನ್ನು ನಿರುಕ್ತಕಾರರು ಉದಾಹರಿಸಿ ಮೇಲಿನ ಅರ್ಥವು ಈ ವಾಕ್ಯದಲ್ಲಿ ವಿವೃತವಾಗಿದೆಯೆಂದು ತೋರಿಸಿದ್ದಾರೆ. ಸ್ವಗೃಹದಲ್ಲಿ ಯಾವ ಸೌಖ್ಯವಿರುತ್ತದೆಯೋ ಆ ಸೌಖ್ಯವು ಅಶ್ವಿನೀದೇವತೆಗಳೊಡನಿರುವ ಸಖ್ಯದಲ್ಲಿಯೂ ದೊರೆಯುತ್ತದೆಂಬ ಅಭಿಪ್ರಾಯವು. ಇದೇ **ಸಖ್ಯವು** ಕಲ್ಯಾಣಕಾರಕವಾಗಿಯೂ ಇದೆಯೆಂದು ತೋರಿಸಲು **ಶಿವ** ಎಂಬ ವಿಶೇಷಣವಿರುತ್ತದೆ.

**ಜಹ್ನಾವ್ಯಾಂ—ಜಹ್ನುಕುಲಜಾಯಾಂ** । ಜಹ್ನುಕುಲದಲ್ಲಿ ಅಶ್ವಿನೀದೇವತೆಗಳ ಧನವೆಲ್ಲವೂ ಜಹ್ನುಕುಲದಲ್ಲಿ ತುಂಬಿದೆಯೆಂದು ತಾತ್ಪರ್ಯ. ವಂಶಸೂಚಕವಾದ ಈ ಪದವು ಋಕ್ಸಂಹಿತೆಯಲ್ಲಿ ಎರಡು ಕಡೆಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಹಿಂದೆ,

**ಆ ಜಹ್ನಾವೀಂ ಸಮನಸೋಪ ವಾಜೈಸ್ತ್ರಿರಹ್ನೋ ಭಾಗಂ ದಧತೀಮಯಾತಂ** ।

(ಋ. ಸಂ. ೧-೧೧೬-೧೯)

ಎಂಬಲ್ಲಿಯೂ ಸಹ ಅಶ್ವಿನೀದೇವತೆಗಳನ್ನುದ್ದೇಶಿಸಿದ ಪ್ರಾರ್ಥನೆಯೇ ಆಗಿರುತ್ತದೆ. **ಜಹ್ನು**ಕುಲೋತ್ಪನ್ನರಾದ ಪ್ರಜೆಗಳನ್ನು ಅಶ್ವಿನೀದೇವತೆಗಳು ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ **ಜಹ್ನು**ಕುಲೋತ್ಪನ್ನನಾದ ವಿಶ್ವಾಮಿತ್ರನು ಅಶ್ವಿನೀದೇವತೆಗಳನ್ನು ಸ್ತುತಿಸಿದ್ದಾನೆ. ಇದೇ ವಿಶ್ವಾಮಿತ್ರನ ಪ್ರಭಾವವು ಅನೇಕ ಕಡೆಗಳಲ್ಲಿ ವರ್ಣಿತವಾಗಿದೆ. ಜಹ್ನುವಂಶೋತ್ಪನ್ನನಾದ ವಿಶ್ವಾಮಿತ್ರನು ತನ್ನ ಶಕ್ತಿಯಿಂದಲೂ ಮತ್ತು **ಜಾತೂರಾತ್ರ**ವೆಂಬ ಸತ್ರವನ್ನು ನೆರವೇರಿಸಿ ತನ್ನ ಪ್ರಭಾವವನ್ನು ವೃದ್ಧಿಪಡಿಸಿಕೊಂಡುದರಿಂದಲೂ ಸಹ ವೃಚೀವಂತರೊಂದಿಗೆ ಯುದ್ಧಮಾಡುತ್ತಿದ್ದ **ಜಾಹ್ನವ**ರಿಗೆ ಸಹಾಯಮಾಡಿ ರಾಜ್ಯವನ್ನು ಗೆದ್ದುಕೊಟ್ಟನೆಂದು ಪಂಚವಿಂಶಬ್ರಾಹ್ಮಣದಲ್ಲಿ ಪ್ರಶಂಸಿಸಿದೆ. (ಪ. ಬ್ರಾ. ೨೧-೧೨).

**ಅಧೀಯತ ದೇವರಾತೋ ರಿಕ್ಥಯೋರುಭಯೋರ್ಋಷಿಃ** ।
**ಜಹ್ನೂನಾಂ ಚಾಧಿಪತ್ಯೇ ದೈವೇ ವೇದೇ ಚ ಗಾಥಿನಾಂ** ॥

(ಐ. ಬ್ರಾ. ೩೩-೧೮)

ದೇವರಾತನೆಂದು ಪ್ರಸಿದ್ಧನಾದ ಶುನಶ್ಶೇಫನು ಜಹ್ನುಗಳ ಮತ್ತು ಗಾಥಿಗಳ ರಾಜ್ಯಕ್ಕೆ ಪ್ರಭುವಾದನು ಎಂದು ಐತರೇಯಬ್ರಾಹ್ಮಣದಲ್ಲಿ ಈ ವಂಶದ ಹೆಸರನ್ನು ಹೇಳಿದೆ. ಇಲ್ಲಿ ಈ ಹೆಸರುಗಳು ಭಿನ್ನವಾದ ವಂಶಗಳನ್ನು ಸೂಚಿಸುವ ಪದಗಳಾಗಿರಲಾರದೆಂದು ವಿದ್ವಾಂಸರ ಮತವಾಗಿದೆ. **ಗಾಥಿವಂಶ**ವೂ ಸಹ **ಜಾಹ್ನವೀಸಂತತಿ**ಗೆ ಸೇರಿದುದು ಮತ್ತು ತದಂತರ್ಗತವು ಎಂಬ ಅಭಿಪ್ರಾಯವನ್ನು ಕೆಲವು ಪಂಡಿತರು ತಿಳಿಸಿದ್ದಾರೆ ಇದು ಸಾಧುವಾದ ಅಭಿಪ್ರಾಯವೆಂದು ಹೇಳಬಹುದು. ಪ್ರಕೃತದಲ್ಲಿ ಜಹ್ನುವಂಶೋತ್ಪನ್ನನಾದ ವಿಶ್ವಾಮಿತ್ರನು ತನ್ನ ವಂಶದ ಪ್ರಭಾವವನ್ನು ಪ್ರಶಂಸಿಸುವುದು ಸಹಜವಾಗಿದೆ.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಶ್ವಿನಾ ವಾಯುನಾ ಯುವಂ ಸುದಕ್ಷಾ ನಿಯುದ್ಭಿಶ್ಚ ಸಜೋಷಸಾ ಯುವಾನಾ ।
ನಾಸತ್ಯಾ ತಿರೋಅಹ್ನ್ಯಂ ಜುಷಾಣಾ ಸೋಮಂ ಪಿಬತಮಸ್ರಿಧಾ ಸುದಾನೂ ॥ ೭ ॥

ಪದಪಾಠಃ

ಅಶ್ವಿನಾ । ವಾಯುನಾ । ಯುವಂ । ಸುऽದಕ್ಷಾ । ನಿಯುತ್ऽಭಿಃ । ಚ । ಸऽಜೋಷಸಾ । ಯುವಾನಾ ।
ನಾಸತ್ಯಾ । ತಿರಃऽಅಹ್ನ್ಯಂ । ಜುಷಾಣಾ । ಸೋಮಂ । ಪಿಬತಂ । ಅಸ್ರಿಧಾ । ಸುದಾನೂ ಇತಿ ಸುऽದಾನೂ ॥ ೭ ॥

ಸಾಯಣಭಾಷ್ಯಂ

**ಸುದಕ್ಷಾ** ಶೋಭನಸಾಮರ್ಥ್ಯೋಪೇತೌ **ಯುವಾನಾ** ನಿತ್ಯತರುಣೌ **ನಾಸತ್ಯಾ** । ನ ವಿದ್ಯತೇಽಸತ್ಯಂ ಯಯೋಸ್ತೌ । **ಸುದಾನೂ** ಶೋಭನಫಲಸ್ಯ ದಾತಾರೌ ಹೇ ಅಶ್ವಿನೌ ವಾಯುನಾ ನಿಯುದ್ಭಿರಶ್ವೈಶ್ಚ **ಸಜೋಷಸಾ** ಸಂಗತೌ **ಜುಷಾಣಾ** ಸೋಮವಿಷಯಪ್ರೀತಿಯುಕ್ತಾವಸ್ರಿಧಾನುಪಕ್ಷೀಣೌ **ಯುವಂ** ಯುವಾಂ ತಿರೋಅಹ್ನ್ಯಮಹ್ನಿ ತಿರೋಹಿತೇ ಹೂಯಮಾನಮಿಮಂ **ಸೋಮಂ ಪಿಬತಂ** ॥ ನಿಯುದ್ಭಿಃ । ಯೌತೇಃ ಕ್ವಿಪ್ । ತಿರೋಅಹ್ನ್ಯಂ । ಅಹ್ನಿ ಭವಮಹ್ನ್ಯಂ । ಭವೇ ಛಂದಸೀತಿ ಯತ್ । ತಿರೋ ಭೂತಮಹ್ನ್ಯಂ ಯಸ್ಮಿನ್ಕಾಲೇ ಸ ತಿರೋಅಹ್ನ್ಯಃ । ಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

**ಸುದಕ್ಷಾ**—ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದವರೂ । **ಯುವಾನಾ**—ನಿತ್ಯತರುಣರೂ । **ನಾಸತ್ಯಾ**—ಸತ್ಯಸ್ವರೂಪವುಳ್ಳವರೂ । **ಸುದಾನೂ**—ಶ್ರೇಷ್ಠವಾದ ದಾತೃಗಳೂ ಆದ ಎಲೈ ಅಶ್ವಿನೀದೇವತಗಳೇ। **ವಾಯುನಾ**—ವಾಯುವಿನೊಂದಿಗೂ । **ನಿಯುದ್ಭಿಃ ಚ**—ಅವರಅಶ್ವಗಳೊಂದಿಗೂ ಸಹ । **ಸಜೋಷಸಾ**—ಸೇರಿದವರಾಗಿಯೂ । **ಅಸ್ರಿಧಾ**—ನಾಶರಹಿತರಾಗಿಯೂ ಆದ । **ಯುವಂ**—ನೀವಿಬ್ಬರೂ । **ತಿರೋಅಹ್ನ್ಯಂ**—ದಿನಾಂತದಲ್ಲಿ ಹಿಂಡಿದ । **ಸೋಮಂ**—ಈ ಸೋಮರಸವನ್ನು । **ಪಿಬತಂ**—ಪಾನಮಾಡಿರಿ.

ಭಾವಾರ್ಥ

ಶ್ರೇಷ್ಠವಾದ ಸಾಮರ್ಥ್ಯದಿಂದ ಕೂಡಿದವರೂ, ನಿತ್ಯತರುಣರೂ, ಸತ್ಯಸ್ವರೂಪವುಳ್ಳವರೂ, ಶ್ರೇಷ್ಠವಾದ ದಾತೃಗಳೂ ಆದ ಎಲೈ ಅಶ್ವಿನೀದೇವತೆಗಳೇ, ವಾಯುವಿನೊಂದಿಗೂ, ಅಶ್ವಗಳೊಂದಿಗೂ ಸೇರಿದವರಾಗಿಯೂ, ನಾಶರಹಿತರಾಗಿಯೂ ಇರುವ ನೀವಿಬ್ಬರೂ ಸಹ ದಿನಾಂತದಲ್ಲಿ ಹಿಂಡಿದ ಈ ಸೋಮರಸವನ್ನು ಪಾನಮಾಡಿರಿ.

CC-0. Jangamwadi Math Collection. Digitized by eGangotri

## English Translation

Ashwins, endowed with power, ever young, in whom is no untruth, unwearied, munificent, accepters (of libations), drink with Vayu and your steeds, rejoicing together, of the Soma libation offered at the close of day.

### ವಿಶೇಷವಿಷಯಗಳು

**ನಾಸತ್ಯಾ**—ಈ ಪದಕ್ಕೆ ನಿರುಕ್ತಕಾರರು ನಿರ್ವಚನವನ್ನು ತಿಳಿಸಿ ಹಿಂದೆ ಅರ್ಥವನ್ನು ವಿವರಿಸಿದೆ. ಅಸತ್ಯ ರಹಿತರು ಎಂಬರ್ಥವನ್ನು ಹೇಳುವ ಔರ್ಣವಾಭರ ಮತವನ್ನೂ ತಿಳಿಸಿದೆ. ಆದರೆ ಇನ್ನೊಂದು ವಿಧವಾದ ನಿರ್ವಚನವೂ ಸಾಧ್ಯವೆಂದು ಇನ್ನು ಕೆಲವರ ಮತ. ಆ ಮತದ ಪ್ರಕಾರ **ನಾಕ-ಸತ್ಯಾ** ಸ್ವರ್ಗದಲ್ಲಿರುವವರು ಎಂದು ತಾತ್ಪರ್ಯ. ಪ್ರಕಾಶವೆಂಬರ್ಥವುಳ್ಳ **ಭಾಸ್ಕರ**ಶಬ್ದವು **ಬಾಕುರ** ಎಂದಾಗುವಂತೆಯೂ (ಋ. ಸಂ. ೯-೧-೮); ಮತ್ತು **ಕರ್ಮಕಾರ** ಎಂಬ ಶಬ್ದವು **ಕರ್ಮಾರ** (೧೦-೭೨-೨) ಎಂದಾಗುವಂತೆಯೂ ಸಹ **ನಾಕ-ಸತ್ಯಾ** ಎಂಬುದು **ನಾಸತ್ಯಾ** ಎಂದಾಗಬಹುದು. ಅಲ್ಲದೇ, **ದಿವೋ ನಪಾತಾಶ್ವಿನಾ ಹುವೇ ವಾಂ** (ಋ. ಸಂ. ೧೦-೬೧-೪) ಇತ್ಯಾದಿ ಋಕ್ಕುಗಳಲ್ಲಿ ಅಶ್ವಿನೀದೇವತೆಗಳನ್ನು ದ್ಯುಲೋಕದ ಪುತ್ರರೆಂದು ವರ್ಣಿಸಿರುವುದಕ್ಕೂ ಸಹ ಈ ನಿರ್ವಚನವು ಅನುರೂಪವಾಗಿರುತ್ತದೆಂದು ಈ ಮತವು ತಿಳಿಸುತ್ತವೆ.

**ಅಸ್ರಿಧಃ**—ತಪ್ಪುಮಾಡು ಅಥವಾ ನಾಶವಾಗು ಎಂಬೆರಡು ಅರ್ಥಗಳಲ್ಲೂ ಸಹ **ಸ್ರಿಧ್** ಧಾತುವಿನ ಪ್ರಯೋಗವಿದೆ. ಆದುದರಿಂದ ಅಸ್ರಿಧಾ ಎಂಬುದಕ್ಕೆ ಯಾವಾಗಲೂ ಸನ್ಮಾರ್ಗಗಾಮಿಗಳೆಂದರ್ಥವಾಗಬಹುದು. ಅಥವಾ ನಾಶರಹಿತರೆಂದರ್ಥವಾಗಬಹುದು. **ಉದೂಹಥುರರ್ಣಸೋ ಅಸ್ರಿಧಾನ್ಯೈಃ** ಇತ್ಯಾದ್ಯನೇಕ ಕಡೆಗಳಲ್ಲಿ ಹೇಳುವಂತೆ ಪ್ರಕೃತ ಋಕ್ಕಿನಲ್ಲಿಯೂ ಸಹ ನಾಶರಹಿತರೆಂದೇ ಅರ್ಥವನ್ನು ಹೇಳುವುದು ಉಚಿತವಾಗಿರುತ್ತದೆ.

———————

### ಸಂಹಿತಾಪಾಠಃ

ಅಶ್ವಿನಾ ಪರಿ ವಾಮಿಷಃ ಪುರೂಚೀರೀಯುರ್ಗೀರ್ಭಿರ್ಯತಮಾನಾ ಅಮೃಧ್ರಾಃ ।
ರಥೋ ಹ ವಾಮೃತಜಾ ಅದ್ರಿಜೂತಃ ಪರಿ ದ್ಯಾವಾಪೃಥಿವೀ ಯಾತಿ ಸದ್ಯಃ ॥

### ಪದಪಾಠಃ

ಅಶ್ವಿನಾ । ಪರಿ । ವಾಂ । ಇಷಃ । ಪುರೂಚೀಃ । ಈಯುಃ । ಗೀಃಽಭಿಃ । ಯತಮಾನಾಃ । ಅಮೃಧ್ರಾಃ ।
ರಥಃ । ಹ । ವಾಂ । ಋತಽಜಾಃ । ಅದ್ರಿಽಜೂತಃ । ಪರಿ । ದ್ಯಾವಾಪೃಥಿವೀ ಇತಿ । ಯಾತಿ । ಸದ್ಯಃ ॥೮॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಹೇ ಅಶ್ವಿನೌ ಪುರೂಚೀಃ ಪುರ್ವಂಚಂತಿ ಗಚ್ಛಂತೀತಿ ಪುರೂಚೀರ್ಬಹೂನೀಷೋ ಹವಿರ್ಲಕ್ಷಣಾನ್ಯನ್ನಾನಿ ವಾಂ ಯುವಾಂ ಪರೀಯುಃ । ಪರಿತೋ ಗಚ್ಛಂತಿ । ತಥಾವ್ಯೃಧ್ರಾಃ ಕೇನಾಪ್ಯತಿರಸ್ಕೃತಾ ಯತಮಾನಾಃ ಕರ್ಮಣಿ ಪ್ರವರ್ತಮಾನಾಃ ಸ್ತೋತಾರೋ ಗೀರ್ಭಿಃ ಸ್ತುತಿಲಕ್ಷಣಾಭಿರ್ವಾಗ್ಭಿರ್ಯುವಾಂ ಪರಿಚರಂತಿ । ಋತಜಾ ಋತಸ್ಯೋದಕಸ್ಯ ಜನಯಿತಾ । ಋತೇ ಯಜ್ಞೇ ಪ್ರಾದುರ್ಭವತೀತಿ ವಾ । ಅದ್ರಿಜೂತಃ ಸ್ತೋತೃಭಿರಾಕೃಷ್ಟೋ ವಾಂ ಯುವಯೋ ರಥೋ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಸದ್ಯಸ್ತದಾನೀಮೇವ ಪರಿ ಯಾತಿ ಹ । ಸರ್ವತಃ ಪ್ರಾಪ್ನೋತಿ ಖಲು । ಅಶ್ವಿನೋ ರಥಸ್ಯ ವೇಗವತ್ತ್ವೇ ಮಂತ್ರವರ್ಣಃ । ಯೋ ವಾಮಶ್ವಿನಾ ಮನಸಾ ಜವೀಯಾನ್ರಥಃ ಸ್ವಶ್ವೋ ವಿಶ ಆಜಿಗಾತಿ । ಋಗ್ವೇ. ೧-೧೧೭-೨ । ಇತಿ । ಅತಃ ಕಾರಣಾದಸ್ಮದೀಯಂ ಯಜ್ಞಂ ಪ್ರತ್ಯಾಗಚ್ಛತಮಿತಿ ಭಾವಃ ॥ ಈಯುಃ । ಇಣ್ ಗತಾವಿತ್ಯಸ್ಯ ಲಿಟಿ ದೀರ್ಘ ಇಣಃ ಕಿತೀತ್ಯಭ್ಯಾಸಸ್ಯ ದೀರ್ಘಃ । ಪಾದಾದಿತ್ವಾದನಿಘಾತಃ । ಯತಮಾನಾಃ । ಯತೀ ಪ್ರಯತ್ನ ಇತ್ಯಸ್ಯ ಶಾನಚಿ ರೂಪಂ । ಶಪಃ ಪಿತ್ತ್ವಾದನುದಾತ್ತತ್ವೇ ಶಾನಚೋ ಲಸಾರ್ವಧಾತುಕಸ್ವರೇಣಾನುದಾತ್ತತ್ವೇ ಧಾತುಸ್ವರಃ । ಋತಜಾಃ । ಜನೇರ್ವಿಟ್ । ವಿಡ್ವನೋರಿತ್ಯಾತ್ವಂ । ಅದ್ರಿಜೂತಃ । ಜೂ ಇತಿ ಸೌತ್ರೋ ಧಾತುಃ । ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಸ್ವರಃ ॥

## ಪ್ರತಿಪದಾರ್ಥ

(ಎಲೈ ಅಶ್ವಿನೀದೇವತೆಗಳೇ) **ಪುರೂಚೀಃ**—ಅತ್ಯಧಿಕವಾದ । **ಇಷಃ**—ಹವಿಸ್ಸಿನ ರೂಪದ ಅನ್ನಗಳು । **ವಾಂ ಪರಿ**—ನಿಮ್ಮ ಅಭಿಮುಖವಾಗಿ । **ಈಯುಃ**—ಸಮೀಪಿಸುತ್ತವೆ । **ಅವ್ಯೃಧ್ರಾಃ**—ನಿಂದಾರಹಿತರೂ । **ಯತಮಾನಾಃ**—ಕರ್ಮದಲ್ಲಿ ಪ್ರವೃತ್ತರಾಗಿರುವವರೂ ಆದ ಸ್ತೋತೃಗಳು । **ಗೀರ್ಭಿಃ**—ತಮ್ಮ ಸ್ತುತಿಗಳಿಂದ (ಸೇವಿಸುತ್ತಾರೆ) । **ಋತಜಾಃ**—ವೃಷ್ಟಿರೂಪದ ಉದಕವನ್ನು ಸುರಿಸುವುದೂ । **ಅದ್ರಿಜೂತಃ**—ಸ್ತೋತೃಗಳಿಂದ ಆಕರ್ಷಿತವಾಗುವುದೂ ಆದ । **ವಾಂ**—ನಿಮ್ಮ । **ರಥಃ**—ರಥವು । **ಸದ್ಯಃ**—ಒಡನೆಯೇ । **ದ್ಯಾವಾಪೃಥಿವೀ**—ದ್ಯಾವಾಪೃಥಿವಿಗಳನ್ನು । **ಪರಿ ಯಾತಿ ಹ**—ವ್ಯಾಪಿಸುವುದಲ್ಲವೇ.

## ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಅತ್ಯಧಿಕವಾದ ಹವಿಸ್ಸಿನ ರೂಪದ ಅನ್ನಗಳು ನಿಮ್ಮ ಅಭಿಮುಖವಾಗಿ ಅರ್ಪಿತವಾಗಿವೆ. ನಿಂದಾರಹಿತರೂ, ಕರ್ಮದಲ್ಲಿ ಪ್ರವೃತ್ತರಾಗಿರುವವರೂ ಆದ ಸ್ತೋತೃಗಳು ತಮ್ಮ ಸ್ತುತಿಗಳಿಂದ ನಿಮ್ಮನ್ನು ಸೇವಿಸುತ್ತಾರೆ. ವೃಷ್ಟಿರೂಪದ ಉದಕವನ್ನು ಸುರಿಸುವುದೂ, ಸ್ತೋತೃಗಳಿಂದ ಆಕರ್ಷಿತವಾಗುವುದೂ ಆದ ನಿಮ್ಮ ರಥವು ಒಡನೆಯೇ ದ್ಯಾವಾಪೃಥಿವಿಗಳನ್ನು ವ್ಯಾಪಿಸುತ್ತದೆ.

## English Translation

Ashwins, abundant (sacrificial) viands are presented to you, and blameless worshippers (salute you) with praises: your water-shedding car, attracted by the sacrificers, quickly compasses earth and heaven.

CC-0. Jangamwadi Math Collection. Digitized by eGangotri

## ವಿಶೇಷವಿಷಯಗಳು

**ಪುರೂಚೀಃ**—ಗತ್ಯರ್ಥಕವಾದ **ಅಂಚ್** ಧಾತುವಿನೊಡನೆ **ಪುರು** ಶಬ್ದವು ಸೇರಿ ಈ ಪದವು ನಿಷ್ಪನ್ನ ವಾಗಿದೆ. ಅತ್ಯಧಿಕವಾದ ಪರಿಮಾಣವನ್ನಾಗಲಿ ಅಥವಾ ಸಂಖ್ಯಾಬಾಹುಳ್ಯವನ್ನಾಗಲಿ ತಿಳಿಸಲು ಈ ಪದವು ಪ್ರಯೋಗಿಸಲ್ಪಟ್ಟಿದೆ. ಪ್ರಕೃತದಲ್ಲಿ ಇಷಃ ಎಂಬುದಕ್ಕೆ ವಿಶೇಷಣವಾಗಿದೆ

**ಅಮೃಧ್ರಾಃ**—**ಮೃಧ್ರ**ಶಬ್ದಕ್ಕೆ ತಿರಸ್ಕಾರವೆಂದರ್ಥ- ಅಮೃಧ್ರವೆಂದರೆ ಅದಿಲ್ಲದಿರುವುದು. **ಸ್ತೋತೃ**ಗಳಿಗೆ ವಿಶೇಷಣವಾಗಿದೆ. ಯಾರಿಂದಲೂ ತಿರಸ್ಕೃತರಾಗದವರು ಎಂದು ತಾತ್ಪರ್ಯ.

**ಋತಜಾಃ**—**ಋತ**ಶಬ್ದಕ್ಕೆ ಇಲ್ಲಿ ಉದಕವೆಂದರ್ಥಮಾಡಿದರೆ ಉದಕವನ್ನು ಉತ್ಪನ್ನಮಾಡತಕ್ಕವು ಎಂದರ್ಥ. ಈ ಪದವು ಅಶ್ವಿನೀದೇವತೆಗಳ ರಥಕ್ಕೆ ವಿಶೇಷಣವಾಗಿದೆ. ಅಶ್ವಿನೀದೇವತೆಗಳ ರಥವು ಉದಕದ ಸೃಷ್ಟಿಗೆ ಕಾರಣವಾಗಿರುತ್ತದೆಂಬ ವಿಷಯವು ಪ್ರಾಯಃ ಎಲ್ಲಿಯೂ ಇರಲಾರದು ಆದರೆ ಸಾಯಣರು ಅರ್ಥಮಾಡಿರುವುದೂ ನಿರಾಧಾರವಾಗಿಲ್ಲ. **ವಾಂ ರಥಃ ಸದ್ಯಃ ದ್ಯಾವಾ ಪೃಥಿವೀ ಪರಿ ಯಾತಿ** । ನಿಮ್ಮ ರಥವು ಒಡನೆಯೇ ದ್ಯಾವಾ ಪೃಥಿವಿಗಳನ್ನು ವ್ಯಾಪಿಸುತ್ತದೆ ಎಂಬ ವರ್ಣನವಿರುವುದರಿಂದಲೂ ಅಶ್ವಿನೀದೇವತೆಗಳೇ ದ್ಯಾವಾಪೃಥಿವಿಗಳೆಂಬೂ ಒಂದು ಮತವಿರುವುದರಿಂದಲೂ ಆ ಆಧಾರದಮೇಲೆ ಅವರ ರಥವು ವೃಷ್ಟಿಸಾಧನವೆಂದು ಹೇಳಬಹುದು. ದ್ಯಾವಾ ಪೃಥಿವಿಗಳ ಸಂಯೋಗವೇ ವೃಷ್ಟಿಗೆ ಕಾರಣವೆಂದು ಹಿಂದೆ ಕಥಾರೂಪದಲ್ಲಿ ತಿಳಿಸಿದೆ. ಅಥವಾ ವೃಷ್ಟಿಪತನವಾದರೆ ಇವರ ಸಂಯೋಗವಾಗಿದೆಯೆಂಬೂ ಊಹಿಸಬಹುದು. **ಕೌ ವ್ಯೈತಾಂ ನಾವರ್ಷಂ** (ಐ. ಬ್ರಾ. ೪-೨೭) ಅವರ ವಿಯೋಗವಿದ್ದರೆ ವೃಷ್ಟಿಪತನವೇ ಇಲ್ಲ ಎಂಬ ವಾಕ್ಯವನ್ನುದಾಹರಿಸಿ ಹಿಂದೆ ತಿಳಿಸಿದೆ- ಆದುದರಿಂದ ದ್ಯಾವಾಪೃಥಿವೀ ರೂಪವೇ ಆದ ಅಶ್ವಿದೇವತೆಗಳ ರಥವು ವೃಷ್ಟಿಪತನಕ್ಕೂ ಕಾರಣವಾಯಿತು ಎಂದು ಹೇಳಬಹುದು. **ಋತಸ್ಯ ಉದಕಸ್ಯ ಜನಯಿತಾ** ಎಂದು ಸಾಯಣರು ವಿವರಿಸಿದ್ದಾರೆ. ಅಥವಾ **ಋತೇ ಯಜ್ಞೇ ಪ್ರಾದುರ್ಭವತೀತಿ ವಾ** । ಯಜ್ಞದಲ್ಲಿ ಉತ್ಪನ್ನವಾಮುದೂ ಎಂದು ಇನ್ನೊಂದು ವಿಧವಾಗಿ ವಿವರಿಸಿದ್ದಾರೆ. ಈ ವಿವರಣೆಗೆ ಆಧಾರವಾವುದೋ ಹೇಳಲಾಗುವುದಿಲ್ಲ.

**ಅದ್ರಿಜೂತಃ**—**ಸ್ತೋತೃಭಿರಾಕೃಷ್ಟಃ** । ಸ್ತೋತೃಗಳಿಂದ ಆಕರ್ಷಿತವಾದದ್ದು ಎಂದರ್ಥ. ಈ ಪದಕ್ಕೆ Monier Williams ಎಂಬ ಪಂಡಿತನು ತನ್ನ Sanskrit-English Dictonary ಯಲ್ಲಿ Excited by the friction of Stones । ಕಲ್ಲುಗಳ ಘರ್ಷಣದಿಂದ ಪ್ರೇರಿತವಾದುದು ಎಂದರೆ ಹಿಂಡಲ್ಪಟ್ಟಿದು ಎಂಬರ್ಥ ವನ್ನು ಹೇಳಿ ಪ್ರಕೃತವಾದ ಋಕ್ಕನ್ನೇ ಉದಾಹರಿಸಿದ್ದಾನೆ ಈ ಅರ್ಥವೂ ಅಸಾಧುವಾಗಲಾರದು. **ಋತಜಾಃ ಅದ್ರಿಜೂತಃ** ಎಂಬೆರಡು ಪದಗಳನ್ನೂ ಸೋಮರಸಕ್ಕೆ ಪರ್ಯಾಯಪದಗಳನ್ನಾಗಿ ಅರ್ಥಮಾಡಿದರೆ ಆಗ ಸೋಮರಸವು ಯಜ್ಞಕ್ಕಾಗಿ ಉತ್ಪನ್ನವಾದುದೂ, ಕಲ್ಲುಗಳಿಂದ ಜಜ್ಜಿಹಿಂಡಲ್ಪಟ್ಟುದು ಎಂದೂ ಅರ್ಥವಾಗುತ್ತದೆ. ಈ ರೀತಿ ತಾತ್ಪರ್ಯ ವನ್ನು ಹೇಳುವುದು ಮೇಲೆ ಸಾಯಣರ ವಿವರಣೆಗಿಂತ ಹೆಚ್ಚು ಸಂದರ್ಭೋಚಿತವೇ ಆಗಿದೆ. ಸಾಯಣರ ವಿವರಣೆಯಂತೆ ತಾತ್ಪರ್ಯವನ್ನು ಪ್ರಕೃತವಾದ ಋಕ್ಕಿಗೆ ಹೊಂದಿಸಿಕೊಳ್ಳುವುದು ಕೊಂಚ ಪ್ರಯಾಸವಾದ ಕೆಲಸವೇ ಆಗುತ್ತದೆ.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಶ್ವಿನಾ ಮಧುಷುತ್ತಮೋ ಯುವಾಕುಃ ಸೋಮಸ್ತಂ ಪಾತಮಾ ಗತಂ ದುರೋಣೇ ।
ರಥೋ ಹ ವಾಂ ಭೂರಿ ವರ್ಪಃ ಕರಿಕ್ರತ್ಸುತಾವತೋ ನಿಷ್ಕೃತಮಾಗಮಿಷ್ಠಃ ॥ ೯ ॥

ಪದಪಾಠಃ

ಅಶ್ವಿನಾ । ಮಧುಸುತ್ಽತಮಃ । ಯುವಾಕುಃ । ಸೋಮಃ । ತಂ । ಪಾತಂ । ಆ । ಗತಂ । ದುರೋಣೇ ।
ರಥಃ । ಹ । ವಾಂ । ಭೂರಿ । ವರ್ಪಃ । ಕರಿಕ್ರತ್ । ಸುತಽವತಃ । ನಿಃಽಕೃತಂ । ಆಽಗಮಿಷ್ಠಃ ॥ ೯ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಯಃ ಸೋಮೋ ಮಧುಷುತ್ತಮೋ ಮಧುರಸಮತ್ಯಂತಂ ಪ್ರೇರಯ್ಯನ್ಯುವಾಕುಯುವಾಂ ಕಾಮಯಮಾನೋ ವರ್ತತೇ । ಯದ್ವಾ । ಯುವಾಕುರ್ವಸತೀವರೀಪ್ರಭೃತಿಭಿರ್ಮಿಶ್ರಿತ ಇತ್ಯರ್ಥಃ । ತಮಿಮಂ ಸೋಮಂ ಪಾತಂ । ಪಿಬತಂ । ದುರೋಣೇಽಸ್ಮಾಕಂ ಗೃಹ ಆ ಗತಂ । ಆಗಚ್ಛತಂ। ಭೂರಿ ಪ್ರಭೂತಂ ವರ್ಪೋ ವಾರಕಂ ತೇಜಃ ರೂಪಂ ವಾ ಸರ್ವೈರ್ವರಣೀಯಂ ಧನಂ ವಾ ಕರಿಕ್ರತ್ಪುನಃ ಪುನಃ ಕುರ್ವನ್ವಾಂ ಯುವಯೋ ರಥಃ ಸುತವತಃ ಸೋಮಮಭಿಷುತವತೋ ಯಜಮಾನಸ್ಯ ನಿಷ್ಕೃತಂ । ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ । ನಿ. ೧೨-೭ । ಇತಿ ಯಾಸ್ಕಃ । ಸಂಸ್ಕಾರಿ ! ಯದ್ವಾ । ಸಂಸ್ಕೃತಂ ಗೃಹಮಾಗಮಿಷ್ಠೋಽತಿಶಯೇನಾಗಚ್ಛನ್ ಭವತಿ ॥ ಯುವಾಕುಃ । ಯಾತೇಃ ಔಣಾದಿಕಃ ಕುಪ್ರತ್ಯಯಃ । ಬಾಹುಲಕಾದಸ್ಮಾದಪಿ ಭವತಿ । ಪ್ರತ್ಯಯಸ್ವರೇಣ ಮಧ್ಯೋದಾತ್ತಃ । ಕರಿಕ್ರತ್ । ಕರೋತೇರ್ಯಙ್ಲುಕಿ ಶತರಿ ದಾಧರ್ತಿ ದರ್ಧರ್ತಿ ದರ್ಧರ್ಷೀತ್ಯಾದಿನಾ ಚುತ್ವಾಭಾವೇ ಯಣಾದೇಶೇ ಕೃತೇಽಂಗಸ್ಯಾನೃಕಾರಾಂತತ್ವಾದಭ್ಯಾಸಸ್ಯ ರಿಗಾಗಮೋ ನ ಪ್ರಾಪ್ನೋತೀತಿ ಸೋಽಪಿ ನಿಪಾತ್ಯತೇ ॥ ಅಭ್ಯಸ್ತಸ್ವರಃ । ನಿಷ್ಕೃತಂ । ಕರೋತೇರಾದಿಕರ್ಮಣಿ ಕ್ತಃ । ಸಂಸ್ಕರ್ತುಂ ಪ್ರವೃತ್ತ ಇತ್ಯರ್ಥಃ । ಥಾಥಾದಿಸ್ವರಃ ॥

ಪ್ರತಿಪದಾರ್ಥ

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಸೋಮಃ—ಈ ಸೋಮವು । ಮಧುಷುತ್ತಮಃ—ಮಧುರ ರಸಭರಿತವಾಗಿಯೂ । ಯುವಾಕುಃ—ನಿಮ್ಮನ್ನು ಅಪೇಕ್ಷಿಸುವುದಾಗಿಯೂ ಇದೆ । ತಂ—ಈ ಸೋಮವನ್ನು । ಪಾತಂ— ಪಾನಮಾಡಿರಿ । ದುರೋಣೇ—ನಮ್ಮ ಗೃಹಕ್ಕೆ । ಆ ಗತಂ—ಬನ್ನಿರಿ । ಭೂರಿ—ಪ್ರಭೂತವಾದುದೂ । ವರ್ಪಃ—ತೇಜಸ್ಸನ್ನು । ಕರಿಕ್ರತ್—ಪುನಃ ಪುನಃ ಪ್ರಸರಿಸುವಂತೆ ಮಾಡುವುದೂ ಆದ । ವಾಂ—ನಿಮ್ಮ । ರಥಃ—ರಥವು । ಸುತವತಃ—ಸೋಮರಸವನ್ನು ಹಿಂಡಿರುವ ಯಜಮಾನನ । ನಿಷ್ಕೃತಂ—ಯಜ್ಞಗೃಹಕ್ಕೆ । ಆಗಮಿಷ್ಠಃ—ಬರಲಿ ।

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಶ್ವಿನೀದೇವತೆಗಳೇ, ಈ ಸೋಮವು ಮಧುರರಸಭರಿತವಾಗಿಯೂ, ನಿಮ್ಮನ್ನು ಅಪೇಕ್ಷಿಸುವುದಾಗಿಯೂ ಇದೆ. ಈ ಸೋಮವನ್ನು ಪಾನಮಾಡಿರಿ. ನಮ್ಮ ಗೃಹಕ್ಕೆ ಬನ್ನಿ. ಪ್ರಭೂತವಾದುದೂ ತೇಜಸ್ಸನ್ನು ಪುನಃ ಪುನಃ ಪ್ರಸರಿಸುವಂತೆ ಮಾಡುವುದೂ ಆದ ನಿಮ್ಮ ರಥವು ಸೋಮರಸವನ್ನು ಹಿಂಡಿರುವ ಯಜಮಾನನ ಯಜ್ಞಗೃಹಕ್ಕೆ ಬರಲಿ.

English Translation

Ashwins, this most sweet Soma is mixed; drink it: come to (our) dwelling: your car, repeatedly bestowing wealth, is coming to the appointed place of the offerer of the libation.

ವಿಶೇಷವಿಷಯಗಳು

**ದುರೋಣೇ**— ಈ ಪದವು ಗೃಹನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧೩). ವಸತಿಗೃಹವೆಂದರ್ಥ. ಆದರೆ ಸಾಧಾರಣವಾಗಿ ಯಜ್ಞಗೃಹವೆಂಬರ್ಥದಲ್ಲಿಯೇ ಋಕ್ಸಂಹಿತೆಯಲ್ಲಿ ಪ್ರಯುಕ್ತವಾಗಿದೆ.

**ವರ್ಪಃ**— ಈ ಪದವು ರೂಪನಾಮಗಳಲ್ಲಿ ಪಠಿತವಾಗಿದೆ. (ನಿ. ೩-೭) ಈ ಪದದಲ್ಲಿ ಸೌಂದರ್ಯವೂ ಪ್ರಕಾಶವೂ ಮಿಶ್ರಿತವಾಗಿ ಸೂಚಿತವಾಗುತ್ತದೆ. ಪ್ರಭಾಯುತವಾದುದೂ ಆಕರ್ಷಕವಾದುದೂ ಆದ ಸ್ವರೂಪವನ್ನು ವರ್ಣಿಸುವಾಗ ಈ ಪದದ ಪ್ರಯೋಗವಿರುತ್ತದೆ.

ಪ್ರಕೃತವಾದ ಋಕ್ಕಿನಲ್ಲಿ ಈ ಪದಕ್ಕೆ ಎರಡು ಮೂರು ವಿಧವಾಗಿ ಅರ್ಥವಿವರಣೆಯನ್ನು ಮಾಡಿದೆ. **ವರ್ಪಃ ವಾರಕಂ ತೇಜಃ, ರೂಪಂ ವಾ, ಸರ್ವೈಃ ವರಣೀಯಂ ಧನಂ ವಾ ।** ತೇಜಸ್ಸೆಂದಾಗಲಿ, ರೂಪವೆಂದಾಗಲಿ ಅಥವಾ ಎಲ್ಲರಿಂದಲೂ ಅಪೇಕ್ಷಿತವಾದ ಧನವೆಂದಾಗಲಿ ಅರ್ಥವಾಗಬಹುದೆಂದು ತಿಳಿಸಿದೆ.

**ಭೂರಿ ವರ್ಪಃ ಕರಿಕ್ರತ್** ಎಂಬ ವಾಕ್ಯವು **ವರ್ಪ** ಶಬ್ದಕ್ಕೆ ಎರಡು ವಿಧವಾದ ಅರ್ಥವೂ ಸಾಧ್ಯವೆಂದು ತೋರಿಸುತ್ತದೆ. **ಕರಿಕ್ರತ್** ಎಂದರೆ ಪುನಃ ಪುನಃ ಪ್ರಸರಿಸುವಂತೆ ಮಾಡುವುದು. **ಭೂರಿ** ಎಂದರೆ ಅತ್ಯಧಿಕವಾದುದು. ಅಶ್ವಿನೀದೇವತೆಗಳ ರಥವು ತೇಜಸ್ಸನ್ನು ಪುನಃ ಪುನಃ ಪ್ರಸರಿಸುವಂತೆ ಮಾಡುವುದು ಎಂದರ್ಥವನ್ನು ಹೇಳಿದರೆ, **ವರ್ಪ** ಶಬ್ದಕ್ಕೆ ತೇಜಸ್ಸೆಂದು ಅರ್ಥಮಾಡಿದರೆ ಆಗ ಅಶ್ವಿನೀದೇವತೆಗಳ ರಥವೇ ತೇಜೋಮಯವಾಗಿರುವುದರಿಂದ ಆ ರಥವು ಯಜ್ಞಗೃಹಕ್ಕೆ ಬಂದಾಗೆಲ್ಲಾ ಅದರ ತೇಜಸ್ಸು ಪ್ರಸಾರಿತವಾಗುತ್ತದೆಂದು ಒಂದು ವಿಧವಾದ ತಾತ್ಪರ್ಯ. ಎರಡನೆಯದಾಗಿ, ಅವರ ರಥವು ಎಷ್ಟು ಸಲ ಬಂದರೂ ಅಷ್ಟು ಸಲ ಯಜಮಾನನ ಐಶ್ವರ್ಯವು ವೃದ್ಧಿಯಾಗುವುದರಿಂದ **ಭೂರಿ ವರ್ಪಃ ಕರಿಕ್ರತ್** ಎಂಬುದು ಧನಪರವಾದ ಅರ್ಥವನ್ನು ಹೇಳುವಾಗಲೂ ಹೊಂದಿಕೊಳ್ಳುತ್ತದೆ. ಆದರೆ **ವರ್ಪ** ಶಬ್ದಕ್ಕೆ ರೂಢವಾಗಿರತಕ್ಕ ತೇಜೋಮಯವಾದ ರೂಪವೆಂದೇ ಹೇಳುವುದು ಪ್ರಕೃತಸಂದರ್ಭದಲ್ಲಿ ಉಚಿತವಾಗಿರುತ್ತದೆ.

[ಕರಿಕ್ರತಃ ಎಂಬುದು ೧೦-೧೩೬-೫ನೇ ಮಂತ್ರದ ದ್ರಷ್ಟೃವಾದ ಋಷಿಯ ಹೆಸರೂ ಆಗಿರುತ್ತದೆ.]

**ನಿಷ್ಪೃತಂ**— ಇ ಪದಕ್ಕೆ ಗೃಹವೆಂಬರ್ಥದಲ್ಲಿ ವಿನಿಯೋಗವಿದೆ. ಆದರೆ ಈ ತಾತ್ಪರ್ಯವು ಹೇಗೆ ಲಬ್ಧವಾಗುತ್ತದೆ ಎಂಬುದಕ್ಕೆ ನಿರುಕ್ತಕಾರರು ಇದರ ನಿರ್ವಚನವನ್ನು ಹೇಳಿ ಉದಾಹರಣೆಯೊಂದಿಗೆ ವಿವರಿಸಿದ್ದಾರೆ.

CC-0. Jangamwadi Math Collection. Digitized by eGangotri

"ನಿರಿತ್ಯೇಷ ಸಮಿತ್ಯೇತಸ್ಯ ಸ್ಥಾನೇ"

(ನಿ. ೧೨-೨)

ಸಮ್ ಎಂಬರ್ಥದಲ್ಲಿ ನಿಃ ಎಂಬ ಉಪಸರ್ಗವು ಪ್ರಯುಕ್ತವಾಗಿದೆ. ಸಂಸ್ಕೃತಂ ಎಂದರೆ ಪರಿಷ್ಕೃತವಾದ ಸ್ಥಾನವೆಂದರ್ಥ. ಆದರೆ ಇಲ್ಲಿ ಪರಿಷ್ಕೃತವೆಂದರೆ ವಸತಿಸ್ಥಾನವು ಸಂಕೇತಕ್ಕಾಗಿಯೂ ರಹಸ್ಯವಾಗಿಯೂ ಇರಲು ಮಾಡುವ ಏರ್ಪಾಡಾಗಬಹುದು. ನಿರುಕ್ತಕಾರರು.

ಯದಾದೀಧ್ಯೇ ನ ದವಿಷಾಣ್ಯೇಭಿಃ ಪರಾಯದ್ಭ್ಯೋಽವ ಹೀಯೇ ಸಖಿಭ್ಯಃ ।

ನ್ಯುಪ್ತಾಶ್ಚ ಬಭ್ರವೋ ವಾಚಮಕ್ರತ್ರೈ ಏಮೀದೇಷಾಂ ನಿಷ್ಕೃತಂ ಜಾರಿಣೀವ ॥

(ಋ. ಸಂ. ೧೦-೩೪-೫)

ಎಂಬ ಋಕ್ಕನ್ನು ದಾಹರಿಸಿ ಅಲ್ಲಿ ನಿಷ್ಕೃತೆ ಶಬ್ದಕ್ಕೆ ಸಂಕೇತಸ್ಥಾನವೆಂಬರ್ಥವೆಂದು ತೋರಿಸಿದ್ದಾರೆ. ಜಾರಿಣಿಯು ನಿಷ್ಕೃತಕ್ಕೆ ಹೋಗಿ ಸೇರುವುದೆಂದರೆ ರಹಸ್ಯಸ್ಥಾನಕ್ಕೆ ಹೋಗಿ ಸೇರುವುದು ಎಂದರ್ಥ.

ಆದರೆ ಎಲ್ಲಾ ಕಡೆಗಳಲ್ಲಿಯೂ ಈ ವಿಧವಾದ ತಾತ್ಪರ್ಯವಿರುವುದಿಲ್ಲ. ಪರಿಷ್ಕೃತವಾದ ಗೃಹವೆಂದರೆ ಯಜ್ಞ ಯಾಗಾದಿಗಳಿಗಾಗಿ ಮಾಡಿದ ಪರಿಷ್ಕಾರಗಳೂ ಆಗಬಹುದು. ಪ್ರಕೃತದಲ್ಲಿ ಯಜಮಾನನ ಯಜ್ಞಗೃಹವೆಂದರ್ಥ.

——— : o : ———

## ಐವತ್ತೊಂಭತ್ತನೆಯ ಸೂಕ್ತವು.



ಸಾಯಣಭಾಷ್ಯಂ

ಮಿತ್ರೋ ಜನಾನಿತಿ ನವರ್ಚಂ ಷಷ್ಠಂ ಸೂಕ್ತಂ ವೈಶ್ವಾಮಿತ್ರಂ ತ್ರೈಷ್ಟುಭಂ ಮೈತ್ರಂ । ಮಿತ್ರೋ ಮೈತ್ರಂ ಚತುರ್ಗಾಯತ್ರ್ಯಂತಮಿತ್ಯನುಕ್ರಮಣಿಕಾ । ಆದಿತಃ ಪಂಚ ತ್ರಿಷ್ಟುಭಃ ಶಿಷ್ಟಾಶ್ಚತಸ್ರೋ ಗಾಯತ್ರ್ಯಃ । ಮಿತ್ರೋ ದೇವತಾ ॥ ಅಗ್ನಿಹೋತ್ರಾರ್ಥೇ ಪಯಸಿ ವರ್ಷಬಿಂದುಪತನೇ ಮಿತ್ರೋ ಜನಾ-ನಿತ್ಯನಯಾ ಸಮಿಧಮಾದಧ್ಯಾತ್ । ಸೂತ್ರಿತಂ ಚ । ಮಿತ್ರೋ ಜನಾನ್ಯಾತಯತಿ ಬ್ರುವಾಣ ಇತಿ ಸಮಿದಾ-ಧಾನಂ । ಆ. ೩-೧೧ । ಇತಿ ॥

ಅನುವಾದವು—ಮಿತ್ರೋ ಜನಾನ್ ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಒಂಭತ್ತು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಮಿತ್ರನು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಮಿತ್ರೋ ಮೈತ್ರಂ ಚತುರ್ಗಾಯತ್ರ್ಯಂತಂ ಎಂದು ಹೇಳಿರು ವುದು. ಈ ಸೂಕ್ತದಲ್ಲಿ ಮೊದಲನೇ ಐದು ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಉಳಿದ ನಾಲ್ಕು ಋಕ್ಕುಗಳು ಗಾಯತ್ರೀಛಂದಸ್ಕವು; ಮಿತ್ರನು ದೇವತೆಯು; ಅಗ್ನಿಹೋತ್ರಕ್ಕಾಗಿ ಹಾಲನ್ನು ಕರೆಯುವಾಗ ಆ ಹಾಲಿನಲ್ಲಿ ಮಳೆಯ ಹನಿಗಳು ಬಿದ್ದರೆ ಮಿತ್ರೋ ಜನಾನ್ ಎಂಬ ಋಕ್ಕಿನಿಂದ ಅಗ್ನಿಯಲ್ಲಿ ಸಮಿದ್ಧೋಮವನ್ನು ಮಾಡ ಬೇಕೆಂದು ಆಶ್ವಲಾಯನಶ್ರೌತಸೂತ್ರದ—ಮಿತ್ರೋ ಜನಾನ್ಯಾತಯತಿ ಬ್ರುವಾಣ ಇತಿ ಸಮಿದಾಧಾನಂ ಎಂಬ ಸೂತ್ರದಿಂದ (ಆ. ೩-೧೧) ವಿವೃತವಾಗಿರುವುದು.

CC-0. Jangamwadi Math Collection. Digitized by eGangotri

॥ ಓಂ ॥

## ಸೂಕ್ತ—೫೯

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೫೯ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೫, ೬ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೯॥

ಋಷಿಃ—ವಿಶ್ವಾಮಿತ್ರಃ ॥

ದೇವತಾ—ಅಶ್ವಿನೌ॥

ಛಂದಃ—೧-೫. ತ್ರಿಷ್ಟುಪ್ । ೬-೯ ಗಾಯತ್ರೀ ॥

---

ಸಂಹಿತಾಪಾಠಃ

ಮಿತ್ರೋ ಜನಾನ್ಯಾತಯತಿ ಬ್ರುವಾಣೋ ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।

ಮಿತ್ರಃ ಕೃಷ್ಟೀರನಿಮಿಷಾಭಿ ಚಷ್ಟೇ ಮಿತ್ರಾಯ ಹವ್ಯಂ ಘೃತವಜ್ಜುಹೋತ॥

ಪದಪಾಠಃ

ಮಿತ್ರಃ । ಜನಾನ್ । ಯಾತಯತಿ । ಬ್ರುವಾಣಃ । ಮಿತ್ರಃ । ದಾಧಾರ । ಪೃಥಿವೀಂ । ಉತ । ದ್ಯಾಂ ।

ಮಿತ್ರಃ । ಕೃಷ್ಟೀಃ । ಅನಿಽಮಿಷಾ । ಅಭಿ । ಚಷ್ಟೇ । ಮಿತ್ರಾಯ । ಹವ್ಯಂ । ಘೃತಽವತ್ । ಜುಹೋತ ॥೧॥

ಸಾಯಣಭಾಷ್ಯಂ

ಬ್ರುವಾಣಃ ಸ್ತೂಯಮಾನಃ ಶಬ್ದಂ ಕುರ್ವಾಣೋ ವಾ ಮಿತ್ರಃ । ಪ್ರಕರ್ಷೇಣ ಸರ್ವೈರ್ಮೀಯತೇ ಜ್ಞಾಯತೇ ತಥಾ ಸರ್ವಾನ್ವೃಷ್ಟಿಪ್ರದಾನೇನ ತ್ರಾಯತ ಇತಿ ವಾ ಮಿತ್ರಃ ಸೂರ್ಯಃ । ಜನಾನ್ ಕರ್ಷಕಾದಿಜನಾನ್ಯಾತಯತಿ । ಕೃಷ್ಯಾದಿಕರ್ಮಸು ಪ್ರಯತ್ನಂ ಕಾರಯತಿ । ತಥಾ ಮಿತ್ರ ಏವ ಪೃಥಿವೀಮುತಾಪಿ ಚ ದ್ಯಾಮೇತಾವುಭೌ ಲೋಕೌ ವೃಷ್ಟಿದ್ವಾರಾನ್ನಂ ಯಾಗಾಂಶ್ಚ ಜನಯನ್ ದಾಧಾರ । ಧಾರಯತಿ । ತಥಾ ಸತಿ ಮಿತ್ರೋಽನಿಮಿಷಾನಿಮಿಷೇಣಾನುಗ್ರಹದೃಷ್ಟ್ಯಾ ಕೃಷ್ಟೀಃ ಕರ್ಮವತೋ ಮನುಷ್ಯಾನಭಿ ಚಷ್ಟೇ । ಸರ್ವತಃ ಪಶ್ಯತಿ । ಏತತ್ಸರ್ವಂ ಜ್ಞಾತ್ವಾ ಹೇ ಋತ್ವಿಜೋ ಘೃತವದುಪಸ್ತರಣಾಭಿಘಾರಣಯುಕ್ತಂ ಹವ್ಯಂ ಹವನಯೋಗ್ಯಂ ಪುರೋಡಾಶಾದಿಕಂ ತಸ್ಮೈ ಮಿತ್ರಾಯ ದೇವಾಯ ಜುಹೋತ ।

CC-0. Jangamwadi Math Collection. Digitized by eGangotri

ಜುಹುತ । ಪ್ರಯಚ್ಛತೇತ್ಯರ್ಥಃ । ಉಕ್ತಾರ್ಥಂ ಯಾಸ್ಕೋ ಬ್ರವೀತಿ । ಮಿತ್ರೋ ಜನಾನ್ಯಾತಯತಿ ಬ್ರುವಾಣಃ ಶಬ್ದಂ ಕುರ್ವನ್ । ಮಿತ್ರ ಏವ ಧಾರಯತಿ ಪ್ರಥಿವೀಂ ಚ ದಿವಂ ಚ । ಮಿತ್ರಃ ಕೃಷ್ಟೀರನಿಮಿಷನ್ನಭಿಪಶ್ಯತೀತಿ । ಕೃಷ್ಟಯ ಇತಿ ಮನುಷ್ಯನಾಮ ಕರ್ಮವಂತೋ ಭವಂತಿ ವಿಕೃಷ್ಟದೇಹಾ ವಾ । ಮಿತ್ರಾಯ ಹವ್ಯಂ ಘೃತವಜ್ಜುಹೋತೇತಿ ವ್ಯಾಖ್ಯಾತಂ । ಜುಹೋತಿರ್ದಾನಕರ್ಮಾ । ನಿ. ೧೦-೨೨ । ಇತಿ ॥ ಯಾತಯತಿ । ಯತೀ ಪ್ರಯತ್ನೇ ಇತ್ಯಸ್ಯ ಣ್ಯಂತಸ್ಯ ಲಟಿ ರೂಪಂ । ದಾಧಾರ । ತುಜಾದೀನಾಮಿತ್ಯಭ್ಯಾಸಸ್ಯ ದೀರ್ಘಃ । ಜುಹೋತ । ಜುಹೋತೇರ್ಲೋಟಿ ಪ್ರತ್ಯಯಸ್ಯ ತಬಾದೇಶಃ । ಗುಣಃ । ನಿಘಾತಃ ॥

### ಪ್ರತಿಪದಾರ್ಥ

ಬ್ರುವಾಣಃ—ಸ್ತುತನಾಗತಕ್ಕ । ಮಿತ್ರಃ—ಮಿತ್ರರೂಪನಾದ ಸೂರ್ಯನು । ಜನಾನ್—ಪ್ರಜೆಗಳನ್ನು । ಯಾತಯತಿ—ಅವರವರ ಕರ್ಮಗಳಿಗೆ ಪ್ರೇರಿಸುತ್ತಾನೆ । ಮಿತ್ರಃ—ಅದೇ ಮಿತ್ರನು । ಪೃಥಿವೀಂ—ಪೃಥಿವಿಯನ್ನು । ಉತ—ಮತ್ತು । ದ್ಯಾಂ—ದ್ಯುಲೋಕವನ್ನೂ । ದಾಧಾರ—ಧರಿಸಿದ್ದಾನೆ । ಮಿತ್ರಃ—ಅದೇ ಮಿತ್ರನು । ಅನಿಮಿಷಾ—ಅನುಗ್ರಾಹಕವಾದ ದೃಷ್ಟಿಯಿಂದ । ಕೃಷ್ಟೀಃ—ಸಕಲ ಪ್ರಜೆಗಳನ್ನೂ । ಅಭಿ ಚಷ್ಟೇ—ಸುತ್ತಲೂ ನೋಡುತ್ತಾನೆ ( ಎಲೈ ಋತ್ವಿಕ್ಕುಗಳೇ ) । ಘೃತವತ್—ಘೃತದಿಂದ ಯುಕ್ತವಾದ । ಹವ್ಯಂ—ಹವಿಸ್ಸನ್ನು । ಮಿತ್ರಾಯ—ಆ ಮಿತ್ರನನ್ನುದ್ದೇಶಿಸಿ । ಜುಹೋತ—ಆಹುತಿರೂಪದಲ್ಲರ್ಪಿಸಿರಿ.

### ಭಾವಾರ್ಥ

ಸ್ತೋತೃಗಳಿಂದ ಸ್ತುತನಾಗತಕ್ಕ ಮಿತ್ರನು ಪ್ರಜೆಗಳನ್ನು ಅವರವರ ಕರ್ಮಗಳಿಗೆ ಪ್ರೇರಿಸುತ್ತಾನೆ. ಅದೇ ಮಿತ್ರನು ಪೃಥಿವಿಯನ್ನೂ ಮತ್ತು ದ್ಯುಲೋಕವನ್ನೂ ಧರಿಸಿದ್ದಾನೆ. ಅದೇ ಮಿತ್ರನು ಅನುಗ್ರಾಹಕವಾದ ದೃಷ್ಟಿಯಿಂದ ಸಕಲ ಪ್ರಜೆಗಳನ್ನೂ ಸುತ್ತಲೂ ನೋಡುತ್ತಾನೆ. ಎಲೈ ಋತ್ವಿಕ್ಕುಗಳೇ, ಘೃತದಿಂದ ಯುಕ್ತವಾದ ಹವಿಸ್ಸನ್ನು ಆ ಮಿತ್ರನನ್ನುದ್ದೇಶಿಸಿ ಆಹುತಿರೂಪದಲ್ಲರ್ಪಿಸಿರಿ.

### English Translation

Mitra, when praised, animates men to exertion : Indra sustains both the earth and heaven : Mitra looks upon men with unclosing eyes : offer to Mitra the oblations of clarified butter.

### ವಿಶೇಷವಿಷಯಗಳು

ಈ ಮಂತ್ರಕ್ಕೆ ನಿರುಕ್ತಕಾರರೂ ತಾತ್ಪರ್ಯವನ್ನು ವಿವರಿಸಿದ್ದಾರೆ.

> ಮಿತ್ರಃ ಜನಾನ್ ಆಯಾತಯತಿ ಪ್ರಬ್ರುವಾಣಃ । ಶಬ್ದಂ ಕುರ್ವನ್ । ಮಿತ್ರ ಏವ ಧಾರಯತಿ ಪೃಥಿವೀಂ ಚ ದಿವಂ ಚ । ಮಿತ್ರಃ ಕೃಷ್ಟೀಃ ಅನಿಮಿಷನ್ ಅಭಿವಿಪಶ್ಯತಿ ಇತಿ । ಕೃಷ್ಟಯಃ ಇತಿ ಮನುಷ್ಯನಾಮ । ಕರ್ಮವಂತಃ ಭವಂತಿ । ವಿಕೃಷ್ಟದೇಹಾ ವಾ .... .... ॥
>
> (ನಿ. ೧೦-೨೨)

CC-0. Jangamwadi Math Collection. Digitized by eGangotri

ಮಿತ್ರನು ಉತ್ತೇಜಕವಾದ ಶಬ್ದವನ್ನು ಮಾಡುತ್ತಾ. ಪ್ರಜೆಗಳನ್ನು ಸತ್ಪಥದಲ್ಲಿ ಒಯ್ಯುತ್ತಾನೆ. ದ್ಯಾವಾಪೃಥಿವಿಗಳೆರಡನ್ನೂ ಮಿತ್ರನೊಬ್ಬನೇ ಧರಿಸಿ ರಕ್ಷಿಸುತ್ತಾನೆ. ಎಲ್ಲೆಯನ್ನು ಮುಟ್ಟದೇ ಪ್ರಜೆಗಳನ್ನೆಲ್ಲಾ ಪೂರ್ಣವಾಗಿ ವೀಕ್ಷಿಸುತ್ತಾನೆ. ಇಲ್ಲಿ ಕೃಷ್ಟಿಶಬ್ದವು ಮಾನವರಿಗೆ ಪರ್ಯಾಯಪದವು. ದೇಹವು ಯಾವಾಗಲೂ ಕ್ರಿಯಾನ್ವಿತವಾಗಿರುವುದರಿಂದಲೂ ಮತ್ತು ದೀರ್ಘವಾಗಿರುವುದರಿಂದಲೂ ಈ ವಿಶೇಷಣವಾಕ್ಯವಾದ ಪದವು.

ಮಿತ್ರಶಬ್ದವು ಸೂರ್ಯನಿಗೆ ಪರ್ಯಾಯಪದವಾಗಿರುವುದೆಂದು ಸಾಯಣರ ಮತ. ಮಿ ಮತ್ತು ತ್ರಾ ಎಂಬ ಎರಡು ಧಾತುಗಳೂ ಸೇರಿ ಮಿತ್ರಶಬ್ದವು ನಿಷ್ಪನ್ನವಾಗಿದೆಯೆಂದು ಈ ಪದದ ಅವಯವಾರ್ಥವನ್ನು ಬಿಡಿಸಿ ತೋರಿಸಿದ್ದಾರೆ. ಪ್ರಕರ್ಷೇಣ ಸರ್ವೈರ್ಮೀಯತೇ ಜ್ಞಾಯತೇ ತಥಾ ಸರ್ವಾನ್ ವೃಷ್ಟಿಪ್ರದಾನೇನ ತ್ರಾಯತೆ ಇತಿ ವಾ ಮಿತ್ರಃ ಸೂರ್ಯಃ । ಎಲ್ಲರಿಂದಲೂ ಪೂರ್ಣವಾಗಿ ತಿಳಿಯಲ್ಪಡುತ್ತಾನೆ ಮತ್ತು ಎಲ್ಲರನ್ನೂ ರಕ್ಷಿಸುತ್ತಾನೆ. ಈ ಎರಡು ಗುಣಗಳೂ ಇರುವುದರಿಂದ ಸೂರ್ಯನು ಮಿತ್ರಶಬ್ದವಾಚ್ಯನಾಗಿದ್ದಾನೆ.

ಈ ಮಂತ್ರದಲ್ಲಿ ನಿರ್ದಿಷ್ಟವಾಗಿರುವ ಮೂರು ಕ್ರಿಯೆಗಳೂ ಸಹ ಜಗಚ್ಚಕ್ಷುವಾದ ಸೂರ್ಯನಿಗೆ ಸೇರಿದುದರಿಂದ ಸೂರ್ಯಪರವಾದ ಅರ್ಥವು ಸಾಧುವಾಗಿರುತ್ತದೆ. ಮಾನವರನ್ನು ಅವರವರ ಕರ್ಮಗಳಿಗೆ ಪ್ರೇರಿಸುವುದು, ದ್ಯಾವಾಪೃಥಿವಿಗಳನ್ನೆಲ್ಲಾ ಧರಿಸಿರುವುದು ಮತ್ತು ಸಮಸ್ತವನ್ನೂ ತನ್ನ ಪ್ರಭಾರೂಪದಿಂದ ಪೂರ್ಣವಾಗಿ ನೋಡುವುದು. ಇದೇ ಈ ಮೂರು ಕಾರ್ಯಗಳು.

ಅವತ ಇತ್ಯೇಷ ಹೀದಗ್ಂ ಸರ್ವಮವತಿ ।

(ಶ. ಬ್ರಾ. ೮-೭-೩-೧೩)

" ಈ ಸೂರ್ಯನೇ ಸಕಲ ಲೋಕವನ್ನೂ ಚೇತನಾತ್ಮಕವಾಗಿ ಮಾಡುತ್ತಾನೆ " ಇತ್ಯಾದಿಯಾಗಿ ವರ್ಣಿತವಾಗಿರುವ ಸೂರ್ಯಶಕ್ತಿಯು ಇಲ್ಲಿ ಯಾತಯತಿ ಎಂಬ ಪದದಿಂದ ಸೂಚಿತವಾಗಿದೆ. ಅಲ್ಲದೇ, ಸವಿತಾ **ಸರ್ವಸ್ಯ ಪ್ರಸವಿತಾ** ಇತ್ಯಾದಿ ಸ್ತುತಿಗಳೂ ಪ್ರಸಿದ್ಧವಾಗಿವೆ ಮತ್ತು,

> ಅದಿತ್ಯಾಸ್ತ್ವಾ ಪೃಷ್ಠೇ ಸಾದಯಾಮೀತಿ । ಇಯಂ ವಾ ಅದಿತಿರಸ್ಯಾಮೇವೈನಮೇತತ್ಪ್ರತಿಷ್ಠಾಯಾಂ ಪ್ರತಿಷ್ಠಾಪಯತ್ಯಂತರಿಕ್ಷಸ್ಯ ಧರ್ತ್ರೀಂ ವಿಷ್ಟಂಭನೀಂ ದಿಶಾಮಧಿಪತ್ನೀಂ ಭುವನಾನಾಮಿತ್ಯಂತರಿಕ್ಷಸ್ಯ ಹ್ಯೇಷ ಧರ್ತಾ ವಿಷ್ಟಂಭನೋ ದಿಶಾಮಧಿಪತಿರ್ಭುವನಾನಾಮೂರ್ಮಿರ್ದ್ರಪ್ಸೋಽಪಾಮಸೀತಿರಸಃ .... .... ॥
>
> (ಶ. ಬ್ರಾ. ೮-೨-೧-೧೦)

ಇತ್ಯಾದಿ ವಾಕ್ಯಗಳಲ್ಲಿ ಮೇಲೆ ಹೇಳಿರುವ ಸೂರ್ಯನ ಸಕಲ ಗುಣಗಳೂ ಒಟ್ಟಿಗೆ ಹೇಳಲ್ಪಟ್ಟಿವೆ ಸರ್ವಾಧಾರಕವಾದ ಅದಿತಿಯ ಪುತ್ರನೇ ವಿಶ್ವಜ್ಯೋತೀರೂಪನಾದ ಈ ಆದಿತ್ಯನು. ಈ ಆದಿತ್ಯನು ಅಂತರಿಕ್ಷಾದಿ ಸಕಲ ಲೋಕಗಳನ್ನೂ ಧರಿಸಿರುವವನು, ವಿಶ್ವಪ್ರಭುವಾದ ಪ್ರಜಾಪತಿಯು, ಜಗಚ್ಚಕ್ಷುವು ಇತ್ಯಾದಿಯಾಗಿ ಸಕಲ ಗುಣಗಳೂ ವರ್ಣಿತವಾಗಿವೆ.

**ಕೃಷ್ಟೀಃ—ಕೃಷ್ಟಿಶಬ್ದಕ್ಕೆ ಕರ್ಮವತಃ ಮನುಷ್ಯಾನ್** । ಕ್ರಿಯಾಯುಕ್ತರಾದ ಮನುಷ್ಯರನ್ನು ಎಂದರ್ಥ ಮಾಡಿದೆ. ದ್ಯಾವಾಪೃಥಿವಿಗಳೆರಡನ್ನೂ ಸೂರ್ಯರೂಪವಾದ ಮಿತ್ರನು ಧರಿಸಿದ್ದಾನೆ ಎಂದು ವರ್ಣಿತವಾಗಿರುವುದರಿಂದ ಕೃಷ್ಟಿಶಬ್ದಕ್ಕೆ ದೇವಮಾನವಾಗಿ ಸಕಲ ಪ್ರಜೆಗಳನ್ನು ಎಂದು ಹೇಳಿದರೂ ತಪ್ಪಾಗಲಾರದು.

CC-0. Jangamwadi Math Collection. Digitized by eGangotri

**ಯಸ್ಯೇಕ್ಷ್ವಾಕುರುಪ ವ್ರತೇ ರೇವಾನ್ಮರಾಯ್ಯೇಧತೇ ದಿವೀವ ಪಂಚ ಕೃಷ್ಟಯಃ ।**

(ಋ ಸಂ. ೧೦-೬೦-೪)

ಇತ್ಯಾದಿ ಸ್ಥಳಗಳಲ್ಲಿ ಪಾರ್ಥಿವವಾದ ಪಂಚಕೃಷ್ಟಿಗಳಿಗೂ ಮತ್ತು ದ್ಯುಲೋಕದ ಪಂಚಕೃಷ್ಟಿಗಳಿಗೂ ಸಾಮ್ಯವನ್ನು ಹೇಳಿದೆ. ಅಲ್ಲದೇ, ಪಂಚಕೃಷ್ಟಿಗಳು ಯಾರೆಂದು ತಿಳಿಸುವಾಗ **ಮನುಷ್ಯಾಃ ಪಿತರೋ ದೇವಾಃ ಗಂಧರ್ವೋ-ರಗರಾಕ್ಷಸಾಃ** (ಬೃ. ದೇ. ನಿ. ೬೮) ದೇವಮನುಷ್ಯಾದಿ ಐದು ಪಂಗಡಗಳೂ ಸೇರಿ ಪಂಚಕೃಷ್ಟಿಗಳಾಗಿರುವರು ಎಂದು ಹೇಳಿರುವುದರಿಂದಲೂ ಸಹ ಇಲ್ಲಿ ಮೇಲಿನ ಅರ್ಥವನ್ನು ಹೇಳುವುದರಲ್ಲಿ ದೋಷವಿರಲಾರದು.

**ಅಭಿಚಷ್ಟೇ**—**ಚಕ್ಷ್** ಧಾತುವಿಗೆ **ಅಭಿ** ಎಂಬ ಉಪಸರ್ಗದೊಡನೆ ಸೇರಿದಾಗ ಸುತ್ತಲೂ ನೋಡು ಎಂಬರ್ಥವೂ ಮತ್ತು ಸುತ್ತಲೂ ಸರ್ವರಿಗೂ ಕಾಣಿಸಿಕೊಳ್ಳುವಂತೆ ಪ್ರಕಾಶಿಸು ಎಂಬರ್ಥವೂ ಆಗುತ್ತದೆ. ನಿರುಕ್ತಕಾರರು ಚಕ್ಷಸೇ ಎನ್ನುವ ಪದಕ್ಕೆ **ದರ್ಶನಾಯ** (ನಿ. ೯-೨೬) ನೋಡುವುದಕ್ಕಾಗಿ ಎಂದೂ ಅಭಿಚಷ್ಟೇ ಎನ್ನುವ ಪದಕ್ಕೆ ಅಭಿಪಶ್ಯತಿ (ನಿ. ೧೦-೨೨) **ಸರ್ವತಃ ಪಶ್ಯತಿ ।** ಸುತ್ತಲೂ ಚೆನ್ನಾಗಿ ನೋಡುತ್ತಾನೆ ಎಂದೂ ತಾತ್ಪರ್ಯವನ್ನು ಹೇಳಿದ್ದಾರೆ. **ಮಹೇ ರಣಾಯ ಚಕ್ಷಸೇ** (೧೦-೯-೧) ಇತ್ಯಾದ್ಯುದಾಹರಣೆಗಳಲ್ಲಿ ಮೇಲಿನ ಅರ್ಥವಿದೆ. ಮತ್ತು,

**ಮಹತ್ತೇ ವಿಷ್ಣೋ ಅಭಿಚಕ್ಷ್ಯಂ ಕೃತಂ ಪಶ್ಯೇಮ ತುರ್ವಶಂ ಯದುಂ ।**

(ಋ. ಸಂ. ೮-೪-೭)

ಎಂಬಲ್ಲಿ ಅಭಿಚಕ್ಷ್ಯಶಬ್ದಕ್ಕೆ ಪ್ರಕಾಶ್ಯ ಎಂದರೆ ಇತರರು ಪೂರ್ಣವಾಗಿ ನೋಡಲು ಸಹಾಯವಾಗುವಂತೆ ಪ್ರಕಾಶ ಪಡಿಸಿ ಕಾಣಿಸಿಕೊಳ್ಳುವುದು ಎಂದರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ದ್ಯಾವಾಪೃಥಿವಿಗಳನ್ನೆಲ್ಲಾ ಧರಿಸಿರುವ ಆದಿತ್ಯನು ಎರಡು ವಿಧವಾದ ಶಕ್ತಿಗಳನ್ನೂ ಹೊಂದಿದ್ದಾನೆಂದು ಹೇಳಬಹುದು. ಜಗತ್ತನ್ನೆಲ್ಲಾ ಬೆಳಗಿಸುವ ಶಕ್ತಿಯೂ ಜಗಚ್ಚಕ್ಷುವಾಗಿರುವ ಶಕ್ತಿಯೂ ಇವನೊಬ್ಬನಲ್ಲೇ ಇರುತ್ತದೆ.

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

(ಋ. ಸಂ. ೧-೧೧೫-೧)

ಇತ್ಯಾದಿ ಮಂತ್ರಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿ ಹೇಳಿರುವ ಸಮಸ್ತ ಗುಣಗಳೂ ಒಟ್ಟಿಗೆ ವರ್ಣಿತವಾಗಿವೆ. ಇದೇ ಮಂತ್ರವು ತೈತ್ತಿರೀಯಸಂಹಿತೆಯಲ್ಲಿ ಕೊಂಚ ವ್ಯತ್ಯಸ್ತವಾಗಿ ಪಠಿತವಾಗಿದೆ. ಅಲ್ಲಿಯ ಕ್ರಮವೇನೆಂದರೆ—

**ಮಿತ್ರೋ ಜನಾನ್ಯಾತಯತಿ ಪ್ರಜಾನನ್ಮಿತ್ರೋ ದಾಧಾರ ಪೃಥಿವೀಮುತ ದ್ಯಾಂ ।**
**ಮಿತ್ರಃ ಕೃಷ್ಟೀರನಿಮಿಷಾಭಿಚಷ್ಟೇ ಸತ್ಯಾಯ ಹವ್ಯಂ ಘೃತವದ್ವಿಧೇಮ ॥**

(ತೈ. ಸಂ. ೩-೪-೧೧-೫)

ಪ್ರಕೃತವಾದ ಋಕ್ಕಿನಲ್ಲಿ ಬ್ರುವಾಣಃ ಎಂಬುದಕ್ಕೆ ಬದಲಾಗಿ ತೈತ್ತಿರೀಯಸಂಹಿತೆಯಲ್ಲಿ **ಪ್ರಜಾನನ್** ಎಂದೂ, ಉತ್ತರಾರ್ಧದಲ್ಲಿ ಮಿತ್ರಾಯ ಎನ್ನುವುದಕ್ಕೆ ಬದಲಾಗಿ **ಸತ್ಯಾಯ** ಎಂದೂ ಉಕ್ತವಾಗಿದೆ. ಉದಾಹೃತವಾಗಿರುವ ಮಂತ್ರದಲ್ಲಿ ಪೂರ್ವಾರ್ಧದಲ್ಲಿ **ಪ್ರಜಾನನ್** ಎಂದಿರುವುದರಿಂದ **ಅಭಿಚಷ್ಟೇ** ಎಂಬ ಪದಕ್ಕೆ **ಪ್ರಕಾಶಯತಿ**

CC-0. Jangamwadi Math Collection. Digitized by eGangotri

ಎಲ್ಲವನ್ನೂ ಪ್ರಕಾಶಿಸುವಂತೆ ಮಾಡುತ್ತಾನೆ ಎಂಬರ್ಥವು ಹೊಂದಿಕೊಳ್ಳುತ್ತದೆ. **ಮತ್ತು ಸತ್ಯಾಯ ಹವ್ಯಂ** ಎಂದು ಮಿತ್ರಶಬ್ದಕ್ಕೆ ಸತ್ಯಶಬ್ದವು ಪರ್ಯಾಯಪದವಾಗಿರುವುದೂ ಸಹಜವಾಗಿದೆ. **ದೇವಸುವಾಂ ಹವಿಷ್ಷು ಮಿತ್ರಸ್ಯ ಸತ್ಯಸ್ಯ .... ....** ದೇವಸೂ ಎಂಬ ಯಾಗದಲ್ಲಿ ಸತ್ಯಾತ್ಮಕನಾದ ಮಿತ್ರನನ್ನುದ್ದೇಶಿಸಿ ಅರ್ಪಿಸಲ್ಪಡತಕ್ಕದ್ದು ಎಂದು ವಿಧಿಯು ಈ ಅಭೇದವನ್ನು ತೋರಿಸುತ್ತದೆ. ಈ ವಿಷಯವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

——....——

ಸಂಹಿತಾಪಾಠಃ

ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ಯಸ್ತ ಆದಿತ್ಯ ಶಿಕ್ಷತಿ ವ್ರತೇನ ।
ನ ಹನ್ಯತೇ ನ ಜೀಯತೇ ತ್ವೋತೋ ನೈನಮಂಹೋ ಅಶ್ನೋತ್ಯಂತಿತೋ ನ ದೂರಾತ್ ॥ ೧ ॥

ಪದಪಾಠಃ

ಪ್ರ । ಸಃ । ಮಿತ್ರ । ಮರ್ತಃ । ಅಸ್ತು । ಪ್ರಯಸ್ವಾನ್ । ಯಃ । ತೇ । ಆದಿತ್ಯ । ಶಿಕ್ಷತಿ । ವ್ರತೇನ ।
ನ । ಹನ್ಯತೇ । ನ । ಜೀಯತೇ । ತ್ವಾऽಊತಃ । ನ । ಏನಂ । ಅಂಹಃ । ಅಶ್ನೋತಿ । ಅಂತಿತಃ । ನ । ದೂರಾತ್ ॥ ೧ ॥

ಸಾಯಣಭಾಷ್ಯಂ

ದೇವಸುವಾಂ ಹವಿಃಷು ಮಿತ್ರಸ್ಯ ಸತ್ಯಸ್ಯ ಪ್ರ ಸ ಮಿತ್ರೇತಿ ಯಾಜ್ಯಾ । ಏಷೈವ ಪ್ರಾತರ್ಹೋಮಸ್ಯ ಕಾಲಾತ್ಯಯನಿಮಿತ್ತೇ ಮೈತ್ರೇ ಚರೌ ಯಾಜ್ಯಾ । ಸೂತ್ರಿತಂ ಚ । ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾಂಸ್ತ್ವಾಂ ನಷ್ಟವಾನ್ಮಹಿಮಾಯ ಪೃಚ್ಛತೇ । ಆ. ೪-೧೧ । ಇತಿ ॥ ತತ ಇಷ್ಟಿರ್ಮಿತ್ರಃ ಸೂರ್ಯೋऽಭಿ ಯೋ ಮಹಿನಾ ದಿವಂ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನಿತಿ ಸಂಸ್ಥಿತಾಯಾಂ । ಆ. ೩-೧೨ । ಇತಿ ಚ ॥

ಹೇ ಆದಿತ್ಯ ವ್ರತೇನ ಯಜ್ಞೇನ ಯುಕ್ತೋ ಯೋ ಮನುಷ್ಯಸ್ತೇ ತುಭ್ಯಂ ಶಿಕ್ಷತಿ ಹವಿರ್ಲಕ್ಷಣಮನ್ನಂ ದದಾತಿ ಹೇ ಮಿತ್ರ ಸ ಮರ್ತೋ ಮನುಷ್ಯಃ ಪ್ರಯಸ್ವಾನನ್ನವಾನ್ ಪ್ರಾಸ್ತು । ಪ್ರಭವತು । ತ್ವೋತಸ್ತ್ವಯಾ ರಕ್ಷಿತಃ ಸ ಮನುಷ್ಯಃ ಕೇನಾಪಿ ನ ಹನ್ಯತೇ ನ ಬಾಧ್ಯತೇ । ನ ಜೀಯತೇ । ನಾಭಿಭೂಯತೇ ಚ । ಏನಂ ತುಭ್ಯಂ ಹವಿರ್ದತ್ತವಂತಂ ಪುರುಷಮಂಹಃ ಪಾಪಮಂತಿತಃ ಸಮೀಪಾನ್ನಾಶ್ನೋತಿ । ನ ಪ್ರಾಪ್ನೋತಿ । ದೂರಾದಪಿ ನ ಪ್ರಾಪ್ನೋತಿ ॥ ಶಿಕ್ಷತಿರ್ದಾನಕರ್ಮಾ । ವ್ಯತ್ಯಯೇನ ಪರಸ್ಮೈಪದಂ ಯದ್ವೃತ್ತಯೋಗಾದನಿಘಾತಃ । ಜೀಯತೇ । ಜಯತೇಃ ಕರ್ಮಣಿ ಯಕ್ಯಕೃತ್ಸಾರ್ವಧಾತುಕಯೋರಿತಿ ದೀರ್ಘಃ । ತ್ವೋತಃ । ತೃತೀಯಾ ಕರ್ಮಣೀತಿ ಪೂರ್ವಪದಸ್ವರಃ । ಅಶ್ನೋತಿ । ಅಶೂ ವ್ಯಾಪ್ತೌ । ಸ್ವಾದಿಃ । ವ್ಯತ್ಯಯೇನ ಪರಸ್ಮೈಪದಂ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಆದಿತ್ಯ**—ಎಲೈ ಆದಿತ್ಯನೇ । **ವ್ರತೇನ**—ಯಜ್ಞಯುಕ್ತನಾದ । **ಯಃ**—ಯಾವ ಮಾನವನು । **ತೇ**—ನಿನ್ನನ್ನುದ್ದೇಶಿಸಿ । **ಶಿಕ್ಷತಿ**—ಹವಿಸ್ಸಿನ ರೂಪದ ಅನ್ನವನ್ನು ಅರ್ಪಿಸುತ್ತಾನೆಯೋ । **ಮಿತ್ರ**—ಎಲೈ ಮಿತ್ರನೇ । **ಸ ಮರ್ತಃ**—ಆ ಮಾನವನು । **ಪ್ರಯಸ್ವಾನ್**—ಅನ್ನವಂತನಾಗಿ । **ಪ್ರ ಅಸ್ತು**—ಆಗಲಿ । **ತ್ವೋತಃ**—ನಿನ್ನಿಂದ ರಕ್ಷಿತನಾದ ಪುರುಷನು । **ನ ಹನ್ಯತೇ**—ಯಾರಿಂದಲೂ ಹಿಂಸಿತನಾಗುವುದಿಲ್ಲ । **ನ ಜೀಯತೇ**—ಯಾರಿಂದಲೂ ಜಯಿಸಲ್ಪಡುವುದಿಲ್ಲ । **ಏನಂ**—ಇಂತಹ ಯಜಮಾನನ್ನು । **ಅಂಹಃ**—ಪಾಪವು । **ಅಂತಿತಃ**—ಸಮೀಪಕ್ಕೂ । **ನ ಅಶ್ನೋತಿ**—ಸೇರುವುದಿಲ್ಲ । **ದೂರಾತ್ ನ**—ದೂರದಲ್ಲಿಯೂ ಇರುವುದಿಲ್ಲ.

ಭಾವಾರ್ಥ

ಎಲೈ ಆದಿತ್ಯನೇ, ಯಜ್ಞಯುಕ್ತನಾದ ಯಾವ ಮಾನವನು ನಿನ್ನನ್ನುದ್ದೇಶಿಸಿ ಹವಿಸ್ಸಿನ ರೂಪದ ಅನ್ನವನ್ನು ಅರ್ಪಿಸುತ್ತಾನೆಯೋ, ಎಲೈ ಮಿತ್ರನೇ, ಆ ಮಾನವನು ಅನ್ನವಂತನಾಗಿ ಆಗಲಿ. ನಿನ್ನಿಂದ ರಕ್ಷಿತನಾದ ಪುರುಷನು ಯಾರಿಂದಲೂ ಹಿಂಸಿತನಾಗುವುದಿಲ್ಲ ಮತ್ತು ಯಾರಿಂದಲೂ ಜಯಿಸಲ್ಪಡುವುದಿಲ್ಲ. ಇಂತಹ ಯಜಮಾನನ ಹತ್ತಿರಕ್ಕೆ ಪಾಪಗಳು ಸೇರುವುದಿಲ್ಲ. ದೂರದಲ್ಲೂ ಇರುವುದಿಲ್ಲ.

English Translation

May that mortal enjoy abundance, Mitra, who presents you, Aditya, (with offerings) at the sacred rite; protected by you he is not harmed; he is not overcome by any one; sin reaches him not, either from afar or nigh.

ವಿಶೇಷವಿಷಯಗಳು

ದೇವಸುವವೆಂಬ ಹವಿಸ್ಸುಗಳನ್ನು ಹೋಮಮಾಡುವಾಗಲೂ ಪ್ರಾತಃಕಾಲದಲ್ಲಿ ಈ ಹೋಮಮಾಡುವಾಗ ಕಾಲಾತೀತವಾದರೆ ಮಿತ್ರನನ್ನುದ್ದೇಶಿಸಿ ಚರುಹೋಮಮಾಡುವಾಗಲೂ ಪ್ರ ಸ ಮಿತ್ರ ಎಂಬ ಈ ಋಕ್ಕನ್ನು ಯಾಜ್ಯಾ ಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾಂಸ್ತ್ವಂ ನಸ್ತ್ವವಾನ್ಮಹಿಮಾಯ ಪೃಚ್ಛತೇ** ಎಂಬ ಸೂತ್ರದಿಂದಲೂ (ಆ. ೪-೧೧) ಮತ್ತು **ತತೆ ಇಷ್ಟಿರ್ಮಿತ್ರಃ ಸೂರ್ಯೋಽಭಿ ಯೋ ಮಹಿನಾ ದಿವಂ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನಿತಿ ಸಂಸ್ಥಿತಾಯಾಂ** ಎಂಬ ಸೂತ್ರದಿಂದಲೂ (ಆ. ೩-೧೨) ವಿವೃತವಾಗಿರುವುದು.

ಮಿತ್ರಾತ್ಮಕನಾದ ಆದಿತ್ಯನನ್ನು ಪೂಜಿಸುವವನು ಪೂರ್ಣವಾಗಿ ಪಾಪರಹಿತನಾಗಿರುವನು, ಜಯಶೀಲನಾಗುವನು ಎಂಬುದೇ ಮಂತ್ರದ ಮುಖ್ಯ ತಾತ್ಪರ್ಯ. ದೇವಸೂಗಳನ್ನು ಉದ್ದೇಶಿಸಿ ಹವಿಸ್ಸನ್ನು ಅರ್ಪಿಸುವ ಕಾಲದಲ್ಲಿ ಸತ್ಯಾತ್ಮಕವಾದ ಮಿತ್ರನನ್ನುದ್ದೇಶಿಸುವಾಗ ಈ ಮಂತ್ರವನ್ನು ಪಠಿಸಿ ಅರ್ಪಿಸಬೇಕು ಎಂಬ ವಿಧಿಯಿರುತ್ತದೆ. ಪ್ರಥಮತಃ **ದೇವಸೂ** ಯಾಗವೆಂದರೇನು ಎಂಬುದನ್ನು ತಿಳಿದು ಅನಂತರ ಮಂತ್ರದ ವಿವರಣೆಯನ್ನು ತಿಳಿಯಬಹುದು.

CC-0. Jangamwadi Math Collection. Digitized by eGangotri

ದೇವಸುವಃ ಎಂಬುದು ವಿಶ್ವಕ್ಕೆಲ್ಲಾ ಚೈತನ್ಯದಾಯಿಗಳಾದ ದೇವತೆಗಳ ಸಮೂಹವು ಈ ಹೆಸರಿನಿಂದ ಕರೆಯಲ್ಪಟ್ಟಿದೆ. ಈ ದೇವತೆಗಳ ಸಂಖ್ಯೆಯು ಎಂಟು. ರಾಜಸೂಯಾಂಗವಾದ ಅಭಿಷೇಚನೀಯಕ್ರಿಯೆಯ ಕಾಲದಲ್ಲಿ ಈ ಎಂಟು ದೇವತೆಗಳನ್ನುದ್ದೇಶಿಸಿ ವಿಧ್ಯುಕ್ತವಾದ ಹವಿಸ್ಸನ್ನರ್ಪಿಸಬೇಕು. ಅದರ ಕ್ರಮವು ಈ ರೀತಿಯಿದೆ.

1) ಸವಿತ್ರೇ ಸತ್ಯಪ್ರಸವಾಯ । ದ್ವಾದಶಕಪಾಲಂ ವಾಷ್ಟಾಕಪಾಲಂ ವಾ ಪುರೋಡಾಶಂ ನಿರ್ವಪತಿ ಪ್ಲಾಶುಕಾನಾಂ ವ್ರೀಹೀಣಾಂ ಸವಿತಾ ವೈ ದೇವಾನಾಂ ಪ್ರಸವಿತಾ ಸವಿತೃಪ್ರಸೂತಃ ಸೂಯಾ ಇತ್ಯಥ ಯತ್ಪ್ಲಾಶುಕಾನಾಂ ವ್ರೀಹೀಣಾಂ ಕ್ಷಿಪ್ರೇ ಮಾ ಪ್ರಸುವಾನಿತಿ ॥

(ಶ. ಬ್ರಾ. ೫-೩-೩-೨)

ಪ್ಲಾಶುಕಾಖ್ಯವಾದ ಧಾನ್ಯವು ಚೇತನದಾಯಿಯಾನುದು. ಶೀಘ್ರವಾಗಿ ವೃಷ್ಟಿಯನ್ನು ಕೊಡತಕ್ಕದ್ದು. ಇದರಿಂದ ಅಷ್ಟಾಕಪಾಲಾತ್ಮಕವಾದ ಅಥವಾ ದ್ವಾದಶಕಪಾಲಾತ್ಮಕವಾದ ಹವಿಸ್ಸನ್ನು ಸಿದ್ಧಪಡಿಸಿ ದೇವತೆಗಳಿಗೆ ಪ್ರಸವಿತೃವೂ, ಸತ್ಯಪ್ರಸವನೂ ಆದ ಸವಿತೃವನ್ನುದ್ದೇಶಿಸಿ ಅರ್ಪಿಸತಕ್ಕದ್ದು. ಹೀಗೆ ಅರ್ಪಿಸುವುದರಿಂದ ಅಭಿಷೇಕಕ್ಕೆ ಸಿದ್ಧನಾಗಿರುವ ರಾಜನು ತನ್ನ ಕರ್ತವ್ಯದಲ್ಲಿ ಚೈತನ್ಯನವನ್ನು ಸಂಪಾದಿಸುವ ವಿಶ್ವಾಸವನ್ನು ಹೊಂದುತ್ತಾನೆ.

2) ಅಥಾಗ್ನಯೇ ಗೃಹಪತಯೇ । ಅಷ್ಟಾಕಪಾಲಂ ಪುರೋಡಾಶಂ ನಿರ್ವಪತ್ಯಾಶೂನಾಂ ಶ್ರೀರ್ವೈ ಗಾರ್ಹಪತ್ಯಂ ಯಾವತೋ-ಯಾವತ ಈಷ್ಟೇ ತದೇನಮಗ್ನಿರೇವ ಗೃಹಪತಿರ್ಗಾರ್ಹಪತ್ಯಮಭಿ-ಪರಿಣಯತ್ಯಥ ಯದಾಶೂನಾಂ ಕ್ಷಿಪ್ರೇ ಮಾ ಪರಿಣಯಾನಿತಿ ॥

ಅಶ್ವಾಖ್ಯವಾದ ಧಾನ್ಯವು ಶೀಘ್ರವಾಗಿ ಫಲಿಸತಕ್ಕದ್ದು. ಈ ಧಾನ್ಯದಿಂದ ಅಷ್ಟಾಕಪಾಲಾತ್ಮಕವಾದ ಪುರೋಡಾಶವನ್ನು ಸಿದ್ಧಪಡಿಸಿ ಗೃಹಪತಿಯಾದ ಅಗ್ನಿಯನ್ನುದ್ದೇಶಿಸಿ ಅರ್ಪಿಸತಕ್ಕದ್ದು. ಗೃಹಪತಿಯು ಸ್ಥಾನವು ಸಂಪದ್ಯುಕ್ತವಾದುದು. ಇಂತಹ ಅಗ್ನಿಯ ಅನುಗ್ರಹದಿಂದ ಗಾರ್ಹಪತ್ಯವನ್ನು ಪಡೆದ ರಾಜನು ಸಂಪದ್ಯುಕ್ತನಾಗುತ್ತಾನೆ. ಮತ್ತು ಆಶು ಧಾನ್ಯದಿಂದ ಕಲ್ಪಿತವಾದ ಪುರೋಡಾಶವನ್ನು ಅರ್ಪಿಸುವುದರಿಂದ ಅದರಂತೆಯೇ ತಾನೂ ಶೀಘ್ರವಾದ ಅಭಿವೃದ್ಧಿಯನ್ನು ಪಡೆಯುತ್ತಾನೆ.

3) ಅಥ ಸೋಮಾಯ ವನಸ್ಪತಯೇ । ಶ್ಯಾಮಾಕಂ ಚರುಂ ನಿರ್ವಪತಿ ತದೇನಗ್ಂ ಸೋಮ ಏವ ವನಸ್ಪತಿರೋಷಧಿಭ್ಯಃ ಸುವತ್ಯಥ ಯಚ್ಛ್ಯಾಮಾಕೋ ಭವತ್ಯೇತೇ ವೈ ಸೋಮಸ್ಯೌಷಧೀನಾಂ ಪ್ರತ್ಯಕ್ಷತಮಾಂ ಯಚ್ಛ್ಯಾಮಾಕಾಸ್ತಸ್ಮಾಚ್ಛ್ಯಾಮಾಕೋ ಭವತಿ ॥

ಸೋಮರಾಜನು ಓಷಧಿಗಳಿಗೆ ಪತಿಯು. ಓಷಧಿಗಳಲ್ಲೆಲ್ಲಾ ಈ ಶ್ಯಾಮಾಕವೇ ಸೋಮನಿಗೆ ಅತ್ಯಂತ ಪ್ರಿಯಕಾರಕವಾದುದು. ಶಾಂತಿಗೂ, ಪುಷ್ಟಿಗೂ ಕಾರಣನಾದ ಸೋಮನನ್ನುದ್ದೇಶಿಸಿ ಶ್ಯಾಮಾಕದಿಂದ ಪುರೋಡಾಶವನ್ನು ಕಲ್ಪಿಸಿ ಅರ್ಪಿಸಿದರೆ ಅಭಿಷಿಕ್ತನಾಗುವ ರಾಜನಿಗೆ ಶಾಂತಿಯೂ, ಪುಷ್ಟಿಯೂ ದೊರೆಯುತ್ತದೆ.

4) ಅಥ ಬೃಹಸ್ಪತಯೇ ವಾಚೇ । ನೈವಾರಂ ಚರುಂ ನಿರ್ವಪತಿ ತದೇನಂ ಬೃಹಸ್ಪತಿರೇವ ವಾಚೇ ಸುವತ್ಯಥ ಯನ್ನೈವಾರೋ ಭವತಿ ಬ್ರಹ್ಮ ವೈ ಬೃಹಸ್ಪತಿರೇತೇ ವೈ ಬ್ರಹ್ಮಣಾ ಪಚ್ಯಂತೇ ಯನ್ನೀವಾರಾಸ್ತಸ್ಮಾನ್ನೈವಾರೋ ಭವತಿ ॥

CC-0. Jangamwadi Math Collection. Digitized by eGangotri

ಬೃಹಸ್ಪತಿಯು ಬ್ರಹ್ಮಪ್ರಿಯವಾದ ವಾಕ್ಕಿಗೆ ಅಧಿಪತಿಯು. ನೀವಾರಧಾನ್ಯವು ಬ್ರಹ್ಮಪೋಷಿತವಾದುದು. ಆದುದರಿಂದ ಈ ನೀವಾರಧಾನ್ಯದಿಂದ ಪುರೋಡಾಶವನ್ನು ಕಲ್ಪಿಸಿ ಬೃಹಸ್ಪತಿಗೆ ಅರ್ಪಿಸುವುದರಿಂದ ರಾಜನು ವಾಗಧಿಪತಿಯಾದ ಬೃಹಸ್ಪತಿಯ ಅನುಗ್ರಹವನ್ನು ಪಡೆದು ತನ್ನ ವಾಕ್ಛಕ್ತಿಯನ್ನು ವೃದ್ಧಿಪಡಿಸಿಕೊಳ್ಳುತ್ತಾನೆ.

5) **ಅಥೇಂದ್ರಾಯ ಜ್ಯೇಷ್ಠಾಯ । ಹಾಯನಾನಾಂ ಚರುಂ ನಿರ್ವಪತಿ ತದೇನಮಿಂದ್ರ ಏವ ಜ್ಯೈಷ್ಠ್ಯಮಭಿಪರಿಣಯತ್ಯಥ ಯದ್ಧಾಯನಾನಾಂ ಭವತ್ಯೇತಿಷ್ಠಾ ವಾ ಏತಾ ಓಷಧಯೋ ಯದ್ಧಾಯನಾ ಅತಿಷ್ಠೋ ವಾ ಇಂದ್ರಸ್ತಸ್ಮಾದ್ಧಾಯನಾನಾಂ ಭವತಿ ॥**

ದೇವತೆಗಳಲ್ಲೆಲ್ಲಾ ಇಂದ್ರನೇ ಜ್ಯೇಷ್ಠನು ಮತ್ತು ಪ್ರಭುವು. ಓಷಧಿಗಳಲ್ಲೆಲ್ಲಾ ಹಾಯನವೇ ಜ್ಯೇಷ್ಠವು. ಆದುದರಿಂದ ಹಾಯನಧಾನ್ಯದಿಂದ ಚರುವನ್ನು ಕಲ್ಪಿಸಿ ಇಂದ್ರನಿಗೆ ಅರ್ಪಿಸತಕ್ಕದ್ದು. ಈ ಇಂದ್ರನ ಅನುಗ್ರಹದಿಂದ ರಾಜನು ಪ್ರಮುಖವಾದ ಸ್ಥಾನವನ್ನಾಕ್ರಮಿಸಿ ಎಲ್ಲರಿಗೂ ಪ್ರಭುವಾಗಲು ಅರ್ಹನಾಗುತ್ತಾನೆ.

6) **ಅಥ ರುದ್ರಾಯ ಪಶುಪತಯೇ । ರೌದ್ರಂ ಗಾವೀಧುಕಂ ಚರುಂ ನಿರ್ವಪತಿ ತದೇನಗ್ಂ ರುದ್ರ ಏವ ಪಶುಪತಿಃ ಪಶುಭ್ಯಃ ಸುವತ್ಯಥ ಯದ್ಗಾವೀಧುಕೋ ಭವತಿ ವಾಸ್ತವ್ಯೋ ವಾ ಏಷ ದೇವೋ ವಾಸ್ತವ್ಯಾ ಗಾವೀಧುಕಾಸ್ತಸ್ಮಾದ್ಗಾವೀಧುಕೋ ಭವತಿ ॥**

ರುದ್ರನು ಪಶುಗಳಿಗೆ ಪತಿಯು. ಗಾವೀಧುಕಧಾನ್ಯವು ರುದ್ರಸಂಬಂಧವಾದುದು. ಯಜ್ಞದಲ್ಲಿ ರುದ್ರನಿಗೆ ವಾಸ್ತವ್ಯ ಭಾಗವು ಸೇರತಕ್ಕದ್ದು. ಗವೇಧುಕವೂ ಈ ವಾಸ್ತವ್ಯದ ಗುಂಪಿಗೇ ಸೇರಿರತಕ್ಕದ್ದು. ಆದುದರಿಂದ ಗವೇಧುಕಧಾನ್ಯದ ಚರುವನ್ನು ಪಶುಪತಿಯಾದ ರುದ್ರನಿಗೆ ಅರ್ಪಿಸುವುದರಿಂದ ರಾಜನು ಪಶುಸಂಪತ್ತನ್ನು ಪಡೆಯುವುದರಲ್ಲಿ ಸಂಶಯವಿಲ್ಲ.

7) **ಅಥ ಮಿತ್ರಾಯ ಸತ್ಯಾಯ । ನಾಂಬಾನಾಂ ಚರುಂ ನಿರ್ವಪತಿ ತದೇನಂ ಮಿತ್ರ ಏವ ಸತ್ಯೋ ಬ್ರಹ್ಮಣೇ ಸುವತ್ಯಥ ಯನ್ನಾಂಬಾನಾಂ ಭವತಿ ವಾರುಣ್ಯಾ ವಾ ಏತಾ ಓಷಧಯೋ ಯಾಃ ಕೃಷ್ಟೇ ಜಾಯಂತೇಽಥೈತೇ ಮೈತ್ರಾ ಯನ್ನಾಂಬಾಸ್ತಸ್ಮಾನ್ನಾಂಬಾನಾಂ ಭವತಿ ॥**

ನಾಂಬಬೀಜವು ವರುಣಸಂಬಂಧವಾದುದಾದರೂ ಸಹ ನಾಂಬಸಸಿಯು ಮಿತ್ರಸಂಬಂಧಿಯಾದುದು. ಆದುದರಿಂದ ನಾಂಬಬೀಜದಿಂದ ಚರುವನ್ನು ಕಲ್ಪಿಸಿ ಸತ್ಯಾತ್ಮಕನೂ, ಸತ್ಯಪ್ರಸವನೂ ಆದ ಮಿತ್ರನಿಗೆ ಅರ್ಪಿಸಿದರೆ ರಾಜನು ಮಿತ್ರನ ಅನುಗ್ರಹವನ್ನು ಸಂಪಾದಿಸಿ ಬ್ರಹ್ಮತೇಜಸ್ಸನ್ನು ಪಡೆಯುತ್ತಾನೆ.

8) **ಅಥ ವರುಣಾಯ ಧರ್ಮಪತಯೇ । ವಾರುಣಂ ಯವಮಯಂ ಚರುಂ ನಿರ್ವಪತಿ ತದೇನಂ ವರುಣ ಏವ ಧರ್ಮಪತಿರ್ಧರ್ಮಸ್ಯ ಪತಿಂ ಕರೋತಿ ಪರಮತಾ ವೈ ಸಾ ಯೋ ಧರ್ಮಸ್ಯ ಪತಿರಸದ್ಯೋ ಹಿ ಪರಮತಾಂ ಗಚ್ಛತಿ ತಗ್ಂಹಿ ಧರ್ಮ ಉಪಯಂತಿ ತಸ್ಮಾದ್ವರುಣಾಯ ಧರ್ಮಪತಯೇ ।**

(ಶ. ಬ್ರಾ. ೫-೩-೩-೯)

ಧರ್ಮಪತಿಯೂ ಧರ್ಮಾಧ್ಯಕ್ಷನೂ ಆಗಿರುವುದೇ ರಾಜನ ಅತ್ಯುತ್ತಮವಾದ ಪದವಿಯು. ಅವನಿಗೆ ಈ ಪದವಿಯು ಲಭಿಸಬೇಕಾದರೆ ವಿಶ್ವಧರ್ಮಕ್ಕೆಲ್ಲಾ ಪಾಲಕನಾದ ವರುಣನ ಅನುಗ್ರಹವು ಅತ್ಯವಶ್ಯವಾಗಿರುತ್ತದೆ. ಆದುದರಿಂದ ಅವನಿಗೆ ಪ್ರಿಯವಾದ ಯವಧಾನ್ಯದಿಂದ ಚರುವನ್ನು ಕಲ್ಪಿಸಿ ಅವನಿಗೆ ಅರ್ಪಿಸಬೇಕು. ವರುಣನ ಅನುಗ್ರಹದಿಂದ ರಾಜನು ಅತಿ ಶ್ಲಾಘ್ಯವಾದ ಧರ್ಮಾಧ್ಯಕ್ಷಪದವಿಯನ್ನು ಪಡೆಯುತ್ತಾನೆ.

CC-0. Jangamwadi Math Collection. Digitized by eGangotri

ಈ ರೀತಿ ಎಂಟುದೇವತೆಗಳೂ ಸಹ **ದೇವಸೂ** ಎಂಬ ರಾಜಸೂಯಾಂಗವಾದ ಕರ್ಮದಲ್ಲಿ ತಮ್ಮ ಸ್ಥಾನಕ್ಕನುಗುಣವಾಗಿ ಪೂಜಿಸಲ್ಪಡುತ್ತಾರೆ. ಅವರಲ್ಲಿ ಸತ್ಯಾತ್ಮಕನಾದ ಮಿತ್ರನೂ ಒಬ್ಬನು. ಅವನ ತೃಪ್ತ್ಯರ್ಥವಾಗಿ ಪ್ರಕೃತವಾದ ಮಂತ್ರವು ಪಠಿತವಾಗುತ್ತದೆ. ಇದೇ **ದೇವಸೂ**ಯಾಗವು ತೈತ್ತಿರೀಯಸಂಹಿತೆಯಲ್ಲಿಯೂ ಸಹ ಸ್ವಲ್ಪವ್ಯತ್ಯಸ್ತವಾಗಿ ಉಕ್ತವಾಗಿದೆ. ಕೇವಲ ಕೆಲವು ಸಣ್ಣ ಅಂಶಗಳಲ್ಲಿ ವ್ಯತ್ಯಾಸವು ತೋರಿಬರುವುದೇ ವಿನಹ ಮುಖ್ಯಾಂಶಗಳ ವಿವರಣೆಯಲ್ಲಿ ಏನೂ ವ್ಯತ್ಯಾಸವಿಲ್ಲ.

**ಅಗ್ನಯೇ ಗೃಹಪತಯೇ ಪುರೋಡಾಶಮಷ್ಟಾಕಪಾಲಂ ನಿರ್ವಪತಿ ಕೃಷ್ಣಾನಾಂ ವ್ರೀಹೀಣಾಗ್ಂ ಸೋಮಾಯ ವನಸ್ಪತಯೇ ಶ್ಯಾಮಾಕಂ ಚರುಗ್ಂ ಸವಿತ್ರೇ ಸತ್ಯಪ್ರಸವಾಯ ಪುರೋಡಾಶಂ ದ್ವಾದಶಕಪಾಲಮಾಶೂನಾಂ ವ್ರೀಹೀಣಾಗ್ಂ ರುದ್ರಾಯ ಪಶುಪತಯೇ ಗಾವೀಧುಕಂ ಚರುಂ ಬೃಹಸ್ಪತಯೇ ವಾಚಸ್ಪತಯೇ ನೈವಾರಂ ಚರುಮಿಂದ್ರಾಯ ಜ್ಯೇಷ್ಠಾಯ ಪುರೋಡಾಶಮೇಕಾದಶಕಪಾಲಂ ಮಹಾವ್ರೀಹೀಣಾಂ ಮಿತ್ರಾಯ ಸತ್ಯಾಯಾಮ್ಬಾನಾಂ ಚರುಂ ವರುಣಾಯ ಧರ್ಮಪತಯೇ ಯವಮಯಂ ಚರುಗ್ಂ ಸವಿತಾ ತ್ವಾ ಪ್ರಸವಾನಾಗ್ಂ ಸುವತಾಂ ||**

(ತೈ. ಸಂ. ೧-೮-೧೦)

ಈ ಮಂತ್ರಗಳಲ್ಲಿ ದೇವಸುವರಿಗೆ ಅರ್ಪಿಸಬೇಕಾದ ಹವಿಸ್ಸುಗಳ ಕ್ರಮವಿವರಣೆಯಿದೆ. ದೇವತೆಗಳ ಸಂಖ್ಯೆಯೂ ನಾಮಗಳೂ ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವಂತೆಯೇ ಇದೆ. ಆದರೆ ಹವಿಸ್ಸಿಗೆ ಉಪಯೋಗಿಸುವ ಧಾನ್ಯಗಳಲ್ಲಿ ಸ್ವಲ್ಪ ವ್ಯತ್ಯಸ್ತವಾದ ವಿವರಣೆಯಿದೆ. ಸತ್ಯಪ್ರಸವನಾದ ಸವಿತೃಗೆ ಶತಪಥದಲ್ಲಿ ಪ್ಲಾಶುಕಾಖ್ಯವಾದ ಧಾನ್ಯವನ್ನೂ, ಗೃಹಪತಿಯಾದ ಅಗ್ನಿಗೇ ಆಶುಧಾನ್ಯವನ್ನೂ ಜ್ಯೇಷ್ಠನಾದ ಇಂದ್ರನಿಗೆ ಹಾಯನಧಾನ್ಯವನ್ನೂ ವಿಧಿಸಿದೆ. ತೈತ್ತಿರೀಯಸಂಹಿತೆಯಲ್ಲಿ ಸವಿತೃವಿಗೆ ಆಶುಧಾನ್ಯವನ್ನೂ ಅಗ್ನಿಗೆ ಕೃಷ್ಣವ್ರೀಹಿಯನ್ನೂ ಇಂದ್ರನಿಗೆ ಮಹಾವ್ರೀಹಿಯನ್ನೂ ನಿರ್ದೇಶಿಸಿದೆ. ದೇವತೆಗಳ ಸಂಖ್ಯೆಯು ಒಂದೇ ಆದರೂ ಈ ಎಂಟು ದೇವತೆಗಳನ್ನೂ ಶತಪಥದಲ್ಲಿ ಒಂದು ಕ್ರಮದಲ್ಲಿ ವಿವರಿಸಿದೆ. ಶತಪಥದಲ್ಲಿ **ಬೃಹಸ್ಪತಯೇ ವಾಚೇ** ಎಂದಿರುವುದಕ್ಕೆ ಬದಲಾಗಿ ತೈತ್ತಿರೀಯಸಂಹಿತೆಯಲ್ಲಿ **ಬೃಹಸ್ಪತಯೇ ವಾಚಸ್ಪತಯೇ** ಎಂದಿದೆ.

ಹೀಗೆ **ದೇವಸೂ**ಯಾಗದಲ್ಲಿ ಸತ್ಯಾತ್ಮನೆಂದು ವರ್ಣಿತನಾದ ಮಿತ್ರನು ಈ ಮಂತ್ರದಲ್ಲಿ ಸ್ತುತನಾಗಿದ್ದಾನೆ. ಈ ದೇವನನ್ನು ಪೂಜಿಸಿ ಉಪಾಸನೆಯನ್ನು ಮಾಡತಕ್ಕ ಪುರುಷನು ಜಯಶೀಲನೂ, ಅನ್ನಯುಕ್ತನೂ ಪಾಪಮುಕ್ತನೂ ಆಗುತ್ತಾನೆ ಎಂದು ಪ್ರಶಂಸಿಸಿದೆ. ಹಿಂದಿನ ಮಂತ್ರದಲ್ಲಿ ಯಾವ ಆದಿತತ್ಯತ್ತ್ವವನ್ನು ಮಿತ್ರನೆಂದು ಸ್ತುತಿಸಿದೆಯೋ, ಪ್ರಕೃತದಲ್ಲಿಯೂ ಸಹ ಅದೇ ಆದಿತ್ಯನು ಸ್ತುತನಾಗಿದ್ದಾನೆ ಇದೇ ಮಂತ್ರವು ತೈತ್ತಿರೀಯ ಬ್ರಾಹ್ಮಣದಲ್ಲಿಯೂ ಪಠಿತವಾಗಿದೆ. (ತೈ. ಬ್ರಾ. ೧-೭-೪-೧). ಅಲ್ಲಿ ಸಾಯಣರೂ ಭಟ್ಟಭಾಸ್ಕರರೂ ಪ್ರಕೃತವಾದ ಋಕ್ಕಿಗಿರುವ ವಿವರಣೆಯನ್ನು ಹೇಳಿದಾರೆ.

**ಯಃ ತೇ ಶಿಕ್ಷತಿ ಸಃ ಪ್ರಯಸ್ವಾನ್ ಅಸ್ತು**—ಯಾರು ನಿನಗೆ ಹವಿರಾದಿಗಳನ್ನು ಅರ್ಪಿಸುತ್ತಾನೋ, ಅವನು ಅನ್ನವಂತನಾಗಲಿ ಎಂದು ಪ್ರಾರ್ಥಿಸಿದೆಯೆಂದು ಋಕ್ಸಂಹಿತಾಭಾಷ್ಯದಲ್ಲಿ ಸಾಯಣರು ವಿವರಿಸಿದ್ದಾರೆ. **ಶಿಕ್ಷತಿ** ಎಂಬ ಪದಕ್ಕೆ **ದದಾತಿ** ಕೊಡುತ್ತಾನೆ ಎಂಬರ್ಥವೆಂದು ತಿಳಿಸಿದ್ದಾರೆ. ಭಟ್ಟಭಾಸ್ಕರರು ತೈತ್ತಿರೀಯಸಂಹಿತೆ



CC-0. Jangamwadi Math Collection. Digitized by eGangotri

ಯಲ್ಲಿ ಶಿಕ್ಷತಿ ಎಂಬ ಪದಕ್ಕೆ ಎರಡು ವಿಧವಾದ ಅನ್ವಯವನ್ನು ತೋರಿಸಿ ಎರಡು ವಿಧವಾದ ತಾತ್ಪರ್ಯವನ್ನು ಹೇಳಿದ್ದಾರೆ. ಮೊದಲನೆಯದಾಗಿ ; **ಹೇ ಆದಿತ್ಯ ಅದಿತೇಃ ಪುತ್ರ ಯಸ್ತ್ವತ ಪ್ರೀತೇನ ಕರ್ಮಣಾ ಯೋಗಾದಿನಾ ಶಿಕ್ಷತಿ ಶಕ್ತೋ ಭವಿತುಮಿಚ್ಛತಿ.... ಸಃ ನ ಹನ್ಯತೇ....॥** ಎಲೈ ಅದಿತಿಪುತ್ರನಾದ ಆದಿತ್ಯನೇ ಯಾವನು ನಿನ್ನಪ್ರೀತಿ ಪಾತ್ರವಾದ ಕರ್ಮದಿಂದ ನಿನ್ನನ್ನು ತೃಪ್ತಿಪಡಿಸಿ ನಿನ್ನ ಅನುಗ್ರಹವನ್ನು ಸಂಪಾದಿಸುವ ಶಕ್ತಿಯನ್ನು ಪಡೆಯುವನೋ ಅವನು ಅನ್ನಯುಕ್ತನಾಗುತ್ತಾನೆಂದು ಒಂದು ವಿಧವಾಗಿಯೂ, ಎರಡನೆಯದಾಗಿ, **ಶಿಕ್ಷ-ವಿದ್ಯೋ ಪಾದಾನೇ । ವ್ರತೇನೇತಿ ವ್ಯತ್ಯಯೇನ ದ್ವಿತೀಯಂ ಬಹುವಚನಸ್ಯ ಸ್ಥಾನೇ ತೃತೀಯೈಕವಚನಂ ।** ವಿದ್ಯಾಗ್ರಹಣಮಾಡು ಎಂಬರ್ಥದಲ್ಲಿ ಶಿಕ್ಷ್ ಧಾತುವು ಪ್ರಯುಕ್ತವಾಗಿದೆ. **ವ್ರತಾನಿ** ವ್ರತಗಳನ್ನು ಎಂದು ದ್ವಿತೀಯೇಗೆ ಬದಲಾಗಿ **ವ್ರತೇನ** ಎಂಬ ತೃತೀಯಾಪ್ರಯೋಗವಿದೆ. ಯಾರು ವ್ರತಗಳನ್ನು ಪದೇಪದೇ ಅಭ್ಯಸಿಸಿ ಆದಿತ್ಯನ ಆರಾಧನೆಯನ್ನು ಮಾಡುವರೋ ಅವರು ಅನ್ನವಂತರಾಗುತ್ತಾರೆ ಎಂಬುದೇ ತಾತ್ಪರ್ಯವೆಂದು ಇನ್ನೊಂದು ವಿಧವಾಗಿ ಅರ್ಥವನ್ನು ತಿಳಿಸಿದ್ದಾರೆ. ಆದರೆ, **ಶಿಕ್ಷ್** ಧಾತುವನ್ನು ದಾನಾರ್ಥದಲ್ಲಿ ಪ್ರಯೋಗಿಸಿರುವ ಸನ್ನಿವೇಶವು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿವೆ. ಉದಾಹರಣೆಗೆ—

**ದ್ಯುಮಾँ ಅಸಿ ಕ್ರತುಮಾँ ಇಂದ್ರ ಧೀರಃ ಶಿಕ್ಷಾ ಶಚೀವಸ್ತವ ನಃ ಶಚೀಭಿಃ ।**

(ಋ. ಸಂ. ೧-೬೨-೧೨)

ಎಂಬಲ್ಲಿ ಕರ್ಮವಂತನಾದ ಎಲೈ ಇಂದ್ರನೇ, ನಮಗೆ ಧನವನ್ನು ಕೊಡು ಎಂದು **ಶಿಕ್ಷ** ಎಂಬುದಕ್ಕೆ ದಾನಾರ್ಥವನ್ನು ಹೇಳಿದೆ. ಆದುದರಿಂದ ಪ್ರಕೃತವಾದ ಮಂತ್ರದಲ್ಲಿ **ಶಿಕ್ಷತಿ** ಎಂಬುದಕ್ಕೆ ಹವಿಸ್ಸನ್ನು ಅರ್ಪಿಸುತ್ತಾನೆ ಎಂಬರ್ಥವು ಅಸಾಧುವಲ್ಲ.

**ಅಂಹಃ— ಅಂಹತಿಶ್ಚಾಂಹಶ್ಚಾಂಹುಶ್ಚ ಹಂತೇಃ ।** (ನಿ. ೪-೨೫) ಹಿಂಸಿಸು ಎಂಬರ್ಥವನ್ನು ಕೊಡುವ **ಹನ್** ಧಾತುವಿನಿಂದ **ಅಂಹಸ್** ಎಂಬ ಶಬ್ದವು ನಿಷ್ಪನ್ನವಾಗಿದ್ದರೂ ಈ ಶಬ್ದಕ್ಕೆ ಸಾಧಾರಣವಾಗಿ ಹಿಂಸೆಗೆ ಮೂಲವಾದ ಪಾಪ ಎನ್ನುವ ಅರ್ಥವೇ ಅಧಿಕವಾಗಿ ಬಳಕೆಯಲ್ಲಿರುವುದು. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಪಾಪ ಎಂದೇ ಅರ್ಥವು.

**ತ್ವೋತಃ— ತ್ವಯಾ ಊತಃ ।** ನಿನ್ನಿಂದ ರಕ್ಷಿತನಾದವನು ಎಂದು ಆದಿತ್ಯನನ್ನು ನಿರ್ದೇಶಿಸಿದೆ. ಆದಿತ್ಯನಿಂದ ರಕ್ಷಿತನಾದವನಿಗೆ ಅನ್ನಸಂಪತ್ತು, ದಾರಿದ್ರ್ಯಾದಿರೂಪವಾದ ಶತ್ರುಗಳಿಂದ ರಕ್ಷಣೆ, ಪಾಪದಿಂದ ಮುಕ್ತಿ ಇವೆಲ್ಲವೂ ಸಿದ್ಧವೆಂದು ತಾತ್ಪರ್ಯ.

---

ಸಂಹಿತಾಪಾಠಃ

ಅನಮೀವಾಸ ಇಳಯಾ ಮದಂತೋ ಮಿತಜ್ಞವೋ ವರಿಮನ್ನಾ ಪೃಥಿವ್ಯಾಃ।

ಆದಿತ್ಯಸ್ಯ ವ್ರತಮುಪಕ್ಷಿಯಂತೋ ವಯಂ ಮಿತ್ರಸ್ಯ ಸುಮತೌ ಸ್ಯಾಮ ॥

CC-0. Jangamwadi Math Collection. Digitized by eGangotri

### ಪದಪಾಠಃ

ಅನಮೀವಾಸಃ । ಇಳಯಾ । ಮದಂತಃ । ಮಿತಽಜ್ಞವಃ । ವರಿಮನ್ । ಆ । ಪೃಥಿವ್ಯಾಃ ।

ಆದಿತ್ಯಸ್ಯ । ವ್ರತಂ । ಉಪಽಕ್ಷಿಯಂತಃ । ವಯಂ । ಮಿತ್ರಸ್ಯ । ಸುಽಮತೌ । ಸ್ಯಾಮ ॥ ೩ ॥

### ಸಾಯಣಭಾಷ್ಯಂ

ದೇವಸುವಾಂ ಹವಿಃಷು ಮಿತ್ರಸ್ಯ ಸತ್ಯಸ್ಯಾನುವಾಕ್ಯಾ । ಅನಮೀವಾಸ ಇಳಯಾ ಮದಂತಃ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನಿತಿ ಸೂತ್ರಿತಂ । ಆ. ೪-೧೧ ॥

ಹೇ ಮಿತ್ರ ಅನಮೀವಾಸೋ ರೋಗವರ್ಜಿತಾ ಇಳಯಾನ್ನೇನ ಮದಂತೋ ಮಾದ್ಯಂತಃ ಪೃಥಿವ್ಯಾ ವರಿಮನ್ವಿಸ್ತೀರ್ಣೇ ಪ್ರದೇಶೇ ಮಿತಜ್ಞವೋ ಮಿತಜಾನುಕಾ ಆ ಯಥಾಕಾಮಂ ಸರ್ವತ್ರ ಗಚ್ಛಂತ ಆದಿತ್ಯಸ್ಯ ಸಂಬಂಧಿ ವ್ರತಂ ಕರ್ಮೋಪಕ್ಷಿಯಂತಸ್ತಸ್ಯ ಕರ್ಮಣಃ ಸಮೀಪೇ ನಿವಸಂತಃ । ತದೀಯಂ ಕರ್ಮ ಕುರ್ವಾಣಾ ಇತ್ಯರ್ಥಃ । ತಾದೃಶಾ ವಯಂ ಮಿತ್ರಸ್ಯಾದಿತ್ಯಸ್ಯ ಸುಮತೌ ಶೋಭನಾಯಾಮನುಗ್ರಹಬುದ್ಧ್ಯಾಂ ಸ್ಯಾಮ । ವರ್ತೇಮಹಿ ॥ ಮದಂತಃ । ಮದೀ ಹರ್ಷ ಇತ್ಯಸ್ಯ ಶತರಿ ವ್ಯತ್ಯಯೇನ ಶಪ್ । ಮಿತಜ್ಞವಃ ! ಜಾನುಶಬ್ದಸ್ಯ ಜ್ಞುಶ್ಛಾಂದಸಃ । ವರಿಮನ್ । ಉರುಶಬ್ದಾತ್ಪೃಥ್ವಾದಿತ್ವಾದಿಮನಿಚ್ । ಪ್ರಿಯಸ್ಥಿರೇತ್ಯಾದಿನಾ ವರಾದೇಶಃ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ । ವ್ಯತ್ಯಯೇನಾದ್ಯುದಾತ್ತಃ ॥

### ಪ್ರತಿಪದಾರ್ಥ

(ಎಲೈ ಮಿತ್ರನೇ) ಅನಮೀವಾಸಃ—ರೋಗರಹಿತರಾಗಿಯೂ ! ಇಳಯಾ—ಅನ್ನದಿಂದ । ಮದಂತಃ—ತೃಪ್ತಿಯನ್ನು ಹೊಂದುವವರಾಗಿಯೂ । ಪೃಥಿವ್ಯಾಃ—ಪೃಥಿವಿಯ । ವರಿಮನ್—ವಿಸ್ತೃತವಾದ ಪ್ರದೇಶದಲ್ಲಿ । ಮಿತಜ್ಞವಃ—ಪರಿಮಿತವಾದ ನಡಗೆಯಿಂದ । ಆ (ಗಚ್ಛಂತ)—ಸ್ವತಂತ್ರವಾಗಿ ಸಂಚರಿಸುವವರಾಗಿಯೂ । ಆದಿತ್ಯಸ್ಯ—ಆದಿತ್ಯೋದ್ದೇಶಕವಾದ । ವ್ರತಂ—ಕರ್ಮವನ್ನು । ಉಪಕ್ಷಿಯಂತಃ—ನೆರವೇರಿಸುವವರೂ ಆದ । ವಯಂ—ನಾವು । ಮಿತ್ರಸ್ಯ—ಆದಿತ್ಯನ । ಸುಮತೌ—ಅನುಗ್ರಹಾತ್ಮಕವಾದ ಬುದ್ಧಿಯಲ್ಲಿ । ಸ್ಯಾಮ—ಇರುವಂತಾಗಲಿ.

### ಭಾವಾರ್ಥ

ಎಲೈ ಮಿತ್ರನೇ, ರೋಗರಹಿತರಾಗಿಯೂ, ಅನ್ನದಿಂದ ತೃಪ್ತಿಯನ್ನು ಹೊಂದಿದವರಾಗಿಯೂ ಪೃಥಿವಿಯ ವಿಸ್ತೃತವಾದ ಪ್ರದೇಶದಲ್ಲಿ ಸ್ವತಂತ್ರವಾಗಿ ಸಂಚರಿಸುವವರಾಗಿಯೂ, ಆದಿತ್ಯೋದ್ದೇಶಕವಾದ ಕರ್ಮವನ್ನು ನೆರವೇರಿಸುವವರಾಗಿಯೂ ಇರುವ ನಮ್ಮ ಮೇಲೆ ಆದಿತ್ಯನ ಅನುಗ್ರಹಾತ್ಮಕವಾದ ಬುದ್ಧಿಯು ಇರುವಂತಾಗಲಿ.

### English Translation

May we, exempt from disease, rejoicing in (abundant) food, roaming free over the wide (expanse) of the earth, diligent in the worship of Aditya, ever be in the good favour of Mitra.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ದೇವಸುವವೆಂಬ ಹವಿಸ್ಸುಗಳನ್ನು ಹೋಮಮಾಡುವಾಗ **ಅನಮೀವಾಸ ಇಳಯಾ** ಎಂಬ ಈ ಋಕ್ಕನ್ನು ಮಿತ್ರದೇವತಾಕವಾದ ಪುರೋನುವಾಕ್ಯಾಮಂತ್ರಮನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಅನಮೀವಾಸ ಇಳಯಾ ಮದಂತಃ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್** ಎಂಬ ಸೂತ್ರದಿಂದ (ಆ ೪-೧೧) ವಿವೃತವಾಗಿರುವುದು.

ಈ ಮಂತ್ರದಲ್ಲಿ **ಮಿತ್ರ**ರೂಪನಾದ ಆದಿತ್ಯನ ಅನುಗ್ರಹವನ್ನು ಪ್ರಾರ್ಥಿಸಿದೆ. ಅನ್ನಸಂಪತ್ತನ್ನಾಗಲಿ, ಪಶುಸಂಪತ್ತನ್ನಾಗಲಿ ಅಪೇಕ್ಷಿಸಿಲ್ಲ. ಸಂಪದ್ಯುಕ್ತವಾದುದೂ, ತೃಪ್ತವಾದುದೂ ಆದ ಜೀವನವಿದ್ದರೂ ಸಹ ಸತ್ಕರ್ಮಕಾರರಾಗಿಯೂ. ಸನ್ಮಾರ್ಗಾನುವರ್ತಿಗಳಾಗಿಯೂ ಇರುವಂತೆ ಸದ್ಬುದ್ಧಿಗಾಗಿ ಪ್ರಾರ್ಥಿಸಿದೆ. **ಅನಮೀವಾಸಃ ಇಳಯಾ ಮದಂತಃ** ಎಂಬ ವಿಶೇಷಣಗಳು ಸ್ತೋತೃವಿನ ಸುಸ್ಥಿತಿಯನ್ನೂ ತಿಳಿಸುತ್ತವೆ.

## ಇಳಾಸ್ವರೂಪ ವಿಚಾರ.

**ಇಳಯಾ**—ಎಂಬ ಪದಕ್ಕೆ ಪ್ರಕೃತದಲ್ಲಿ ಅನ್ನವೆಂದರ್ಥಮಾಡಿದೆ. ಇಳಾಶಬ್ದವಾಚ್ಯವಾದ ದೇವತಾ ವಿಶೇಷದ ವಿಷಯವನ್ನು ಹಿಂದೆ **ಆಪ್ರೀ** ಸೂಕ್ತದ ದೇವತೆಗಳ ವಿಷಯವನ್ನು ಹೇಳುವಾಗ ತಿಳಿಸಿದೆ. [ಋಗ್ವೇದ ಸಂಹಿತಾ ಭಾಗ ೧೧ ಪುಟ 264] ಆದರೆ ಈ ಪದದಿಂದ ಸೂಚಿತವಾಗುವ ಇನ್ನೂ ಇತರ ಅರ್ಥಗಳನ್ನೂ ಆ ಸಂದರ್ಭ ದಲ್ಲಿ ವಿವರಿಸಲಾಗಿಲ್ಲ. ಅನೇಕ ಸಂದರ್ಭಗಳಲ್ಲಿ ಸಂಶಯಕ್ಕೆ ಅವಕಾಶವನ್ನುಂಟುಮಾಡುವ ಈ ಪದದ ಪ್ರಯೋಗಗಳು ಯಾವಯಾವ ಸಂದರ್ಭಗಳಲ್ಲಿ ಯಾವಯಾವ ಅರ್ಥಗಳನ್ನು ಸೂಚಿಸುತ್ತದೆಂಬುದನ್ನು ಪರಿಶೀಲಿಸ ಬೇಕು.

ನಿರುಕ್ತಕಾರರು ಇಳಾ ಎಂಬ ಪದವನ್ನು ಪೃಥ್ವೀನಾಮಗಳಲ್ಲಿಯೂ (ನಿ. ೧-೧) ; ವಾಙ್‌ನಾಮಗಳಲ್ಲಿಯೂ (೧-೧೧) ; ಅನ್ನನಾಮಗಳಲ್ಲಿಯೂ (೨-೭) ; ಪಠಿಸಿದ್ದಾರೆ. ಪ್ರಕೃತದಲ್ಲಿ **ಅನ್ನ**ವೆಂದರ್ಥಮಾಡಿದೆ. ಅನ್ನವೆಂದರೆ ಪಾರ್ಥಿವವಾದ ಅನ್ನಸಂಪತ್ತಾದರೂ ಆಗಬಹುದು ಅಥವಾ ಈ ಅನ್ನಕ್ಕೆ ಮೂಲಕಾರಣವಾದ ದಿವ್ಯಶಕ್ತಿವಿಶೇಷ ವಾದರೂ ಆಗಬಹುದು.

**ಯೇಷಾಮಿಳಾ ಘೃತಹಸ್ತಾ ದುರೋಣ ಆँ ಅಪಿ ಪ್ರಾತಾ ನಿಷೀದತಿ ।**

(ಋ ಸಂ. ೭-೧೬-೮)

ಇತ್ಯಾದಿ ಸ್ಥಳಗಳಲ್ಲಿ **ಅನ್ನರೂಪಾ ಹವಿರ್ಲಕ್ಷಣಾ ದೇವೀ ನಿಷೀದತಿ ।** ಅನ್ನರೂಪಳಾದ ದೇವಿಯು ಘೃತಹಸ್ತಳಾಗಿ ಕುಳಿತಿದ್ದಾಳೆ ಎಂಬುದಾಗಿ ವರ್ಣಿತವಾಗಿರುವುದರಿಂದ ಶಕ್ತಿವಿಶೇಷವು ಸೂಚಿತವಾಗಿದೆ. ಆದರೆ ಆಪ್ರೀಸೂಕ್ತಗಳಲ್ಲಿ ಸ್ತುತಳಾಗಿರುವ ಇಳಾದೇವಿಯು ಬೇರೆಯೋ, ಈ ಅನ್ನರೂಪಳಾದ **ಇಳೆಯು** ಬೇರೆಯೋ ಎಂಬ ಶಂಕೆಗೂ ಅವಕಾಶವಿದೆ. ಆದರೆ ಶ್ರುತಿವಾಕ್ಯಗಳನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅಭೇದವೇ ತೋರುತ್ತದೆ.

**ಯಜ್ಞೇ ಚೇದ್ವೈ ಮಾವಕಲ್ಪಯಿಷ್ಯಸಿ ಬಹುಃ ಪ್ರಜಯಾ ಪಶುಭಿರ್ಭವಿಷ್ಯಸಿ ।**

(ಶ. ಬ್ರಾ. ೧-೮-೧-೯)

CC-0. Jangamwadi Math Collection. Digitized by eGangotri

ನನ್ನ ಸಹಾಯವನ್ನು ಪಡೆದು ಯಜ್ಞವನ್ನು ನೆರವೇರಿಸಿದರೆ ಯಜಮಾನನು ಅನ್ನಸಂಪತ್ತಿನಿಂದಲೂ, ಪಶುಸಂಪತ್ತಿನಿಂದಲೂ, ಪ್ರಜಾಸಂಪತ್ತಿನಿಂದಲೂ ಕೂಡಿರುವನು ಎಂಬ ಆಶ್ವಾಸನವಾಕ್ಯವು ಇಳಾದೇವಿಯಿಂದ ಉಕ್ತವಾದುದು ಈ ಇಳೆಯು ಯಾರು ? ಯಜ್ಞಕ್ಕೂ ಇವಳಿಗೂ ಸಂಬಂಧವೇನು ಎಂಬ ವಿಷಯಗಳು ಶತಪಥಬ್ರಾಹ್ಮಣದಲ್ಲಿ ವಿಶದವಾಗಿ ತಿಳಿಸಲ್ಪಟ್ಟಿದೆ. ಅನೇಕ ಸನ್ನಿವೇಶಗಳಲ್ಲಿ ಋಕ್ಸಂಹಿತೆಯಲ್ಲಿ ವರ್ಣಿತವಾಗಿರುವ ಇಳೆಗೂ, ಶತಪಥದಲ್ಲಿ ವರ್ಣಿತವಾಗಿರುವ ಇಳೆಗೂ ವಸ್ತುತತ್ತ್ವದ ದೃಷ್ಟ್ಯಾ ಅಭೇದವಿದ್ದರೂಸಹ ಪ್ರಯೋಗವಿಶೇಷಗಳಿಂದ ಸಂಶಯಕ್ಕೆ ಅವಕಾಶವಿರುತ್ತದೆ. ಕೆಲವು ಸಂದರ್ಭಗಳಲ್ಲಿ ಇಳೆ ಶಬ್ದವು ಪುಲ್ಲಿಂಗಪ್ರಯೋಗದಲ್ಲಿರುವುದರಿಂದಲೂ, **ಇತಿ ತ್ವಾ ದೇವಾ ಇಮ ಆಹುರೈಳ** .... .... (ಋ. ಸಂ. ೧೦-೯೫-೧೮) ಇತ್ಯಾದಿ ಸಂದರ್ಭಗಳಲ್ಲಿ ಐಳ (ಪುರೂರವಸ್) ಎಂಬುವನು ಇಳೆಪುತ್ರನೇ ಅಥವಾ ಇಳಾಪುತ್ರನೇ ಎಂಬ ಸಂಶಯಕ್ಕೆ ಕಾರಣವಾಗಿರುವುದರಿಂದಲೂ ಸಹ ಇಂತಹ ಸಂಶಯಕ್ಕೆ ಅವಕಾಶವಿದೆ. ಶ್ರುತಿವಾಕ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇಂತಹ ಸಂಶಯಗಳಿಗೆ ಅವಕಾಶವಿರುವುದಿಲ್ಲ. **ಯಜ್ಞೇ ಚೇದ್ವೈ ಮಾವಕಲ್ಪಯಿಷ್ಯಸಿ** ಎಂಬ ಮೇಲೆ ಉದಾಹೃತವಾಗಿರುವ ವಾಕ್ಯವು ಯಾವ ಸಂದರ್ಭದಲ್ಲಿ ಹೇಳಲ್ಪಟ್ಟಿತು, ಅದರ ತಾತ್ಪರ್ಯಾರ್ಥವೇನು ಎಂದು ತಿಳಿಯಲು ಶತಪಥದ ಕಥಾಸಂದರ್ಭವನ್ನು ತಿಳಿಯಬೇಕಾಗಿರುತ್ತದೆ. ಈ ಕಥಾನಿರೂಪಣೆಯಲ್ಲಿ ಇಳೆಯ ಉತ್ಪತ್ತಿ, ಶಕ್ತಿ ಮತ್ತು ಸ್ವರೂಪಗಳು ಪೂರ್ಣವಾಗಿ ತಿಳಿಯುತ್ತವೆ. ಅನಂತರ ಋಕ್ಸಂಹಿತೆಯಲ್ಲಿ ಸ್ತುತಳಾಗಿರತಕ್ಕ ಇಳೆಯು ಸ್ವರೂಪವೂ ಸಹ ಇದೇ ಎಂಬುದನ್ನು ತಿಳಿಯಬಹುದು. ಅಲ್ಲದೇ, ಪ್ರಕೃತವಾದ ಮಿತ್ರಸಂಬಂಧವಾದ ಮಂತ್ರದಲ್ಲಿ ಇಳಾ ಪ್ರಯೋಗವಿರುವ ಔಚಿತ್ಯವನ್ನೂ ಪರಿಶೀಲಿಸಬಹುದು.

## ಇಳೆಯು ಉತ್ಪತ್ತಿ ಮತ್ತು ಪಾರ್ಥಿವ ಸ್ವರೂಪ.

**ಮನವೇ ಹ ವೈ ಪ್ರಾತಃ .... .... .... .... ತದಪ್ಯೇತದುತ್ತರಸ್ಯ ಗಿರೇರ್ಮನೋರವಸರ್ಪಣಮಿತ್ಯೌಘೋ ಹ ತಾಃ ಸರ್ವಾಃ ಪ್ರಜಾ ನಿರುವಾಹಾಥೇಹ ಮನುರೇವೈಕಃ ಪರಿಶಿಶಿಷೇ ।**

(ಶ. ಬ್ರಾ. ೧-೮-೧-೧ ರಿಂದ ೬)

ಕ್ಷಾಲನಾರ್ಥವಾಗಿ ತಂದ ಉದಕದಲ್ಲಿ ಮತ್ಸ್ಯವನ್ನು **ಮನುವು** ಪೋಷಿಸಿ ಘೋಷಾತ್ಮಕವಾದ ಆ ಮತ್ಸ್ಯದ ಸಹಾಯದಿಂದಲೇ ಪ್ರಭೂತವಾದ ಪ್ರವಾಹವನ್ನು ದಾಟಿ **ಮನುಗಿರಿಯೆಂದು** ಪ್ರಸಿದ್ಧವಾದ ಸ್ಥಳದಲ್ಲಿ ಕುಳಿತು ತಪಸ್ಸುಮಾಡುತ್ತಿದ್ದನು. ಪ್ರವಾಹದಿಂದ ಇತರ ಸಕಲಪ್ರಾಣಿಗಳೂ ಕೊಚ್ಚಿಹೋದಾಗ ತಾನೊಬ್ಬನೇ ಆ ಪ್ರಶಾಂತವಾದ ಸನ್ನಿವೇಶದಲ್ಲಿ ಕುಳಿತು ತಪಸ್ಸುಮಾಡುತ್ತಿದ್ದಾಗ ಅವನಲ್ಲಿ ಸಂತಾನೇಚ್ಛೆಯುಂಟಾಯಿತು

**ಸೋಽರ್ಚಞ್ಛ್ರಾಮ್ಯಂಶ್ಚಚಾರ ಪ್ರಜಾಕಾಮಃ । ತತ್ರಾಪಿ ಪಾಕಯಜ್ಞೇನೇಜೇ ಸ ಘೃತಂ ದಧಿ ಮಸ್ತ್ವಾಮಿಕ್ಷಾಮಿತ್ಯಪ್ಸು ಜುಹವಾಂಚಕಾರ ತತಃ ಸಂವತ್ಸರೇ ಯೋಷಿತ್ಸಂಬಭೂವ ಸಾ ಹ ಪಿಬ್ದಮಾನೇವೋದೇಯಾಯ ತಸ್ಯೈ ಹ ಸ್ಮ ಘೃತಂ ಪದೇ ಸಂತಿಷ್ಠತೇ ತಯಾ ಮಿತ್ರಾವರುಣೌ ಸಂಜಗ್ಮಾತೇ ॥**

(ಶ. ಬ್ರಾ. ೧-೮-೧-೭)

ಸಂತಾನೇಚ್ಛೆಯಿಂದ ಮನುವು ತಪಸ್ಸನ್ನಾಚರಿಸುತ್ತಲೂ ದೇವಪೂಜಾನಿರತನಾಗಿಯೂ ಮೌನದಿಂದಿರುತ್ತಿದ್ದನು. ಈ ಸಮಯದಲ್ಲೇ ಪಾಕಯಜ್ಞವನ್ನಾಚರಿಸಿ ತದಂಗವಾದ ಕರ್ಮದಲ್ಲಿ ಘೃತವನ್ನೂ, ದಧಿಯನ್ನೂ, ಮಸ್ತುವನ್ನೂ (Whey), ಆಮಿಕ್ಷೆಯನ್ನೂ (Curds) ಉದಕದಲ್ಲಿ ಅರ್ಪಿಸಿದನು. ಸಂವತ್ಸರದೊಳಗೆ ಒಬ್ಬ ಸ್ತ್ರೀಯು ಆವಿರ್ಭೂತಳಾದಳು. ಪಿಬ್ದಮಾನವಾದ (ದೃಢವಾದ) ಅವಯವವುಳ್ಳವಳಾಗಿ ಅವಳು ಎದ್ದಾಗ ಅವಳು ಘೃತಸಾದಳಾಗಿ

CC-0. Jangamwadi Math Collection. Digitized by eGangotri

ಕಾಣಿಸಿಕೊಂಡಳು. (ಋಕ್ಸಂಹಿತೆಯಲ್ಲಿ ಘೃತಹಸ್ತಾ ೭-೧೬-೮ ಎಂಬ ವಿಶೇಷಣವಿರುವುದನ್ನು ಮೇಲೆ ತಿಳಿಸಿದೆ) ಆ ಕಾಲದಲ್ಲಿ ವಿತ್ರಾವರುಣರು ಅವಳನ್ನು ಸಂಧಿಸಿದರು.

ತಾಗ್ಂಹೋಚತುಃ ಕಾಸೀತಿ । ಮನೋರ್ದುಹಿತೇತ್ಯಾವಯೋರ್ಬ್ರೂಷ್ವೇತಿ ನೇತಿ ಹೋವಾಚ ಯ ಏವ ಮಾಮಜೀಜನತ ತಸ್ಯೈವಾಹಮಸ್ಮೀತಿ ತಸ್ಯಾಮಪಿತ್ವಮೀಷಾತೇ ತದ್ಧಾ ಜಜ್ಞಾ ತದ್ಧಾ ನ ಜಜ್ಞಾವತಿತ್ವೇವೇಯಾಯ ಸಾ ಮನುಮಾಜಗಾಮ ॥

ನೀನಾರೆಂದು ಅವರು ಕೇಳಲು, "ನಾನು ಮನುವಿನ ದುಹಿತೆ" ಯೆಂದವಳು ಹೇಳಿದಳು. "ನಮಗೆ ಸೇರಿದವಳೆಂದು ಹೇಳು" ಎಂದು ನಿರ್ಬಂಧಿಸಿದಾಗ "ಖಂಡಿತವಾಗಿಯೂ ಇಲ್ಲ, ನನ್ನ ಉತ್ಪತ್ತಿಗೆ ಕಾರಣನಾರೋ ನಾನು ಅವನಿಗೆ ಸೇರಿದವಳು. ಅವನ ಮಗಳು" ಎಂದು ನಿಷ್ಕೃಷ್ಟವಾಗಿ ಹೇಳಿದಳು. ಅವಳೊಂದಿಗೆ ತಾವೂ ಭಾಗವಹಿಸಲಿಚ್ಛಿಸಿದರು. ಆಗ ಅವಳು ತನ್ನ ಒಪ್ಪಿಗೆಯನ್ನು ಸೂಚಿಸಲೂ ಇಲ್ಲ. ಅಸಮ್ಮತಿಯನ್ನೂ ಸೂಚಿಸಲಿಲ್ಲ. ತನ್ನ ಜನಕನಾದ ಮನುವಿನಲ್ಲಿಗೆ ಹೋಗಿ ಸೇರಿದಳು.

ತಾಗ್ಂ ಹ ಮನುರುವಾಚ ಕಾಸೀತಿ। ತವ ದುಹಿತೇತಿ ಕಥಂ ಭಗವತಿ ಮಮ ದುಹಿತೇತಿ ಯಾ ಅಮೂರಪ್ಸ್ವಾಹುತೀರಹೌಷೀರ್ಘೃತಂ ದಧಿ ಮಸ್ತ್ವಾಮಿಕ್ಷಾಂ ತತೋ ಮಾಮಜೀಜನಥಾಃ ಸಾಶೀರಸ್ಮಿ ತಾಂ ಮಾ ಯಜ್ಞೇಽವಕಲ್ಪಯ ಯಜ್ಞೇ ಚೇದ್ವೈ ಮಾವಕಲ್ಪಯಿಷ್ಯಸಿ ಬಹುಃ ಪ್ರಜಯಾ ಪಶುಭಿರ್ಭವಿಷ್ಯಸಿ ಯಾಮುಮಯಾ ಕಾಂ ಚಾಶಿಷಮಾಶಾಸಿಷ್ಯಸೇ ಸಾ ತೇ ಸರ್ವಾ ಸಮರ್ಧಿಷ್ಯತ ಇತಿ ತಾಮೇತನ್ಮಧ್ಯೇ ಯಜ್ಞಸ್ಯಾವಾಕಲ್ಪಯನ್ಮಧ್ಯಗ್ಂ ಹ್ಯೇತದ್ಯಜ್ಞಸ್ಯ ಯದಂತರಾ ಪ್ರಯಾಜಾನುಯಾಜಾನ್ ॥

(ಶ. ಬ್ರಾ. ೧-೮-೧-೯)

ಆಗ ಮನುವೂ ಸಹ ಅವಳಾರೆಂದು ಪ್ರಶ್ನಿಸಿದನು. ನಿನ್ನ ಮಗಳೆಂದಳು. "ಎಲೈ ಪೂಜ್ಯಳೇ, ನೀನು ನನ್ನ ಮಗಳಾದುದು ಹೇಗೆ" ಎಂದನು. ಅದಕ್ಕವಳು ನೀನು ಪಾಕಯಜ್ಞಾಂಗವಾದ ಕರ್ಮದಲ್ಲಿ ಘೃತವನ್ನೂ, ದಧಿಯನ್ನೂ ಮಸ್ತುವನ್ನೂ ಮತ್ತು ಆಮಿಕ್ಷೆಯನ್ನೂ ಉದಕದಲ್ಲಿ ಅರ್ಪಿಸಿ ಪೂಜಿಸಿದುದರ ಫಲವಾಗಿ ನನ್ನ ಉತ್ಪತ್ತಿಯುಂಟಾಯಿತು ನಾನು ನಿನ್ನ ಕಾರ್ಯಗಳಿಗೆಲ್ಲಾ ಆಶೀರೂಪವಾಗಿದ್ದೇನೆ. ಯಜ್ಞಕಾರ್ಯಗಳಲ್ಲಿ ನೀನು ನನ್ನ ಸಹಾಯವನ್ನಪೇಕ್ಷಿಸಿ ನನ್ನ ಸಹಾಯದೊಡನೆ ನಿನ್ನ ಕರ್ಮಗಳನ್ನಾಚರಿಸಿದರೆ ಆಗ ಪಶುಪುತ್ರಾದಿ ಸಕಲಸಂಪದ್ಯುಕ್ತನಾಗುತ್ತೀಯೆ. ನೀನು ಯಾವಯಾವ ಆಕಾಂಕ್ಷೆಗಳನ್ನು ಹೊಂದಿರುತ್ತೀಯೋ ಅದೆಲ್ಲವನ್ನೂ ಪಡೆಯುತ್ತೀಯೆ ಎನ್ನಲು, ಆ ಆಶ್ವಾಸನದಮೇಲೆ ಮನುವು ಪ್ರಯಾಜಕ್ಕೂ, ಅನುಯಾಜಕ್ಕೂ ಮಧ್ಯಭಾಗದಲ್ಲಿ ಆಚರಿಸುವ ಯಜ್ಞಕರ್ಮಗಳ ಕಾಲದಲ್ಲಿ ಅವಳ ಸಹಾಯವನ್ನು ಪಡೆದನು.

ತಯಾರ್ಚಞ್ಛ್ರಾಮ್ಯಂಶ್ಚಚಾರ ಪ್ರಜಾಕಾಮಃ । ತಯೇಮಾಂ ಪ್ರಜಾತಿಂ ಪ್ರಜಜ್ಞೇ ಯೇಯಂ ಮನೋಃ ಪ್ರಜಾತಿರ್ಯಾಮ್ವೇನಯಾ ಕಾಂ ಚಾಶಿಷಮಾಶಾಸ್ತ ಸಾಸ್ಮೈ ಸರ್ವಾ ಸಮಾರ್ಧ್ಯತ॥

ಅವಳ ಸಹಾಯದೊಡನೆ ಅರ್ಚಿಸುತ್ತಲೂ, ತಪಸ್ಸನ್ನಾಚರಿಸುತ್ತಲೂ ಪುತ್ರಕಾಮನಾಗಿ ಧ್ಯಾನಾಸಕ್ತನಾಗಿರುತ್ತಿದ್ದನು. ಅವಳ ಮೂಲಕವಾಗಿ ಈ ಮಾನವೀಸಂತತಿಯನ್ನು ಸೃಷ್ಟಿಸಿದನು. ಅವಳ ಅನುಗ್ರಹಾತ್ಮಕವಾದ ಯಾವಯಾವ ಆಶೀರ್ವಾದಗಳನ್ನು ಪಡೆಯಬೇಕೋ ಅವೆಲ್ಲವನ್ನೂ ಪಡೆದು ತನ್ನ ಆಕಾಂಕ್ಷೆಗಳನ್ನು ನೆರವೇರಿಸಿಕೊಂಡನು.

CC-0. Jangamwadi Math Collection. Digitized by eGangotri

ಸೈಷಾ ನಿದಾನೇನ ಯದಿಡಾ । ಸ ಯೋ ಹೈವಂ ವಿದ್ವಾನಿಡಯಾ ಚರತ್ಯೇತಾಗ್‌ಂ ಹೈವ ಪ್ರಜಾತಿಂ ಪ್ರಜಾಯತೇ ಯಾಂ ಮನುಃ ಪ್ರಾಜಾಯತ ಯಾಮ್ವೇನಯಾ ಕಾಂ ಚಾಶಿಷಮಾ- ಶಾಸ್ತೇ ಸಾಸ್ಮೈ ಸರ್ವಾ ಸಮೃಧ್ಯತೇ ॥

(ಶ. ಬ್ರಾ. ೧-೮-೧-೧೧)

ಈ ಉತ್ತಮವಾದ ಸ್ತ್ರೀಯೇ ಸರ್ವಾಂಶಗಳಲ್ಲಿಯೂ ಇಡಾರೂಪಳಾಗಿದ್ದಾಳೆ. ಈ ತತ್ತ್ವವನ್ನರಿತು ಇಡೆಯೊಂದಿಗೆ ಯಾವನು ಕರ್ಮವನ್ನಾಚರಿಸುವನೋ ಅವನು ಈ ಮಾನವೀ ಸಂತತಿಯನ್ನು ವೃದ್ಧಿಪಡಿಸುತ್ತಾನೆ. ಅವಳ ಮೂಲಕ ಸಕಲಾಶೀರ್ವಾದಗಳನ್ನೂ ಪಡೆದು ತನ್ನ ಆಕಾಂಕ್ಷೆಗಳನ್ನೆಲ್ಲಾ ನೆರವೇರಿಸಿಕೊಳ್ಳುತ್ತಾನೆ. (ಇಡಯಾ ಚರತಿ ಎನ್ನು ವಾಗ ಎರಡರ್ಥವಿರುತ್ತದೆ. ಇಡಾರೂಪಳಾದ ಸ್ತ್ರೀಯೊಂದಿಗೆ ಎಂದು ಒಂದರ್ಥ. ಅಥವಾ ಇಡಾತ್ಮಕವಾದ ಪಾಕಯಜ್ಞ ಎಂದು ಇನ್ನೊಂದರ್ಥ).

## ಇಳೆಯ ಯಾಜ್ಞಿಕಸ್ವರೂಪ.

ಇಲ್ಲಿಯವರೆಗೆ ಇತಿಹಾಸರೂಪವಾದ ಇಡೆಯ ಉತ್ಪತ್ತಿ ಮತ್ತು ಸ್ವರೂಪವನ್ನು ವಿವರಿಸಿ ಇನ್ನುಮುಂದೆ ಯಜ್ಞರೂಪಿಣಿಯಾದ ಇಡೆಯ ಸ್ವರೂಪವನ್ನು ವಿವರಿಸಲಾಗಿದೆ. ಇಡೆಯೇ ಪಶುವು, ಇಡೆಯೇ ಅನ್ನವು, ಇಡೆಯೇ ಸರ್ವಸ್ವವು ಎಂದು ಸ್ತುತಿಸಿದೆ.

ಸಾ ವೈ ಪಂಚಾವತ್ತಾ ಭವತಿ । ಪಶವೋ ವಾ ಇಡಾಃ ಪಾಂಕ್ತಾ ವೈ ಪಶವಃ ತಸ್ಮಾತ್ಪಂಚಾವತ್ತಾ ಭವತಿ । ಸ ಸಮವದಾಯೇಡಾಂ । ಪೂರ್ವಾರ್ಧಂ ಪುರೋಡಾಶಸ್ಯ ಪ್ರಶೀರ್ಯ ಪುರಸ್ತಾ ದ್ಧ್ರುವಾಯೈ ನಿದಧಾತಿ ತಾಗ್‌ಂ ಹೋತ್ರೇ ಪ್ರದಾಯ ದಕ್ಷಿಣಾತ್ಯೇತಿ ॥

(ಶ. ಬ್ರಾ. ೧-೮-೧-೧೨, ೧೩)

ಇಡೆಯು ಪಶ್ವಾತ್ಮಕವಾದುದು. ಪಶುವಿಗೆ ಐದು ಮುಖ್ಯಾವಯವಗಳಿವೆ. ಆದುದರಿಂದ ಇಡೆಯೂ ಸಹ ಐದು ಅವಯವಗಳಲ್ಲಿ ವಿಭಜ್ಯವಾಗತಕ್ಕದ್ದಾಗಿದೆ. (ಯೋ ವೈ ಯಜ್ಞಂ ಹವಿಷ್ಪಂಕ್ತಿಂ ವೇದ ಹವಿಷ್ಪಂಕ್ತಿನಾ ಯಜ್ಞೇನ ರಾಧ್ನೋತಿ ಇತ್ಯಾದಿ ವಾಕ್ಯಗಳಿಂದ ಐತರೇಯಬ್ರಾಹ್ಮಣದಲ್ಲಿ ಈ ಐದು ವಿಧಗಳನ್ನೂ ಸಹ ನಾಲ್ಕೈದು ರೀತಿಗಳಲ್ಲಿ ವಿವರಿಸಿದೆ ಐ. ಬ್ರಾ. ೮-೨೪). ಅಧ್ವರ್ಯುವು ಇಡೆಯನ್ನು ಐದು ಭಾಗಗಳನ್ನಾಗಿ ವಿಂಗಡಿಸಿ ಪುರೋಡಾಶದ ಪೂರ್ವಭಾಗವನ್ನು ಬರ್ಹಿಯ ಮೇಲಿಡುತ್ತಾನೆ. ಅನಂತರ ಇಡೆಯನ್ನು ಹೋತೃವಿಗೆ ಒಪ್ಪಿಸುತ್ತಾನೆ. ಉಪಸ್ತರಣ ಅಭಿಘಾರಣ ಮತ್ತು ಸ್ವಿಷ್ಟಕೃತ್ ಎಂಬ ಈ ಮೂರು ಕ್ರಿಯೆಗಳಿಂದ ಐದು ವಿಭಾಗಮಾಡಲ್ಪಡುತ್ತದೆ.

ಈ ವಿಧವಾಗಿ ಯಾಜ್ಞಿಕಪ್ರಕ್ರಿಯೆಗೆ ಸಂಬಂಧಪಟ್ಟ ಕ್ರಮಗಳನ್ನು ತಿಳಿಸಿ ನಂತರ ಇಡೆಯ ಅಲೌಕಿಕವಾದ ಶಕ್ತಿಸ್ವರೂಪಗಳನ್ನು ಮುಂದೆ ತಿಳಿಸಿದೆ.

## ಇಳೆಯ ಲೌಕಿಕವಾದ ಶಕ್ತಿಸ್ವರೂಪಗಳು.

ಅಥೋಪಾಗ್‌ಂಶೂಪಹ್ವಯತೇ । ಏತದ್ಧ ವೈ ಮನುರ್ಬಿಭಯಾಂ ಚಕಾರೇದಂ ವೈ ಮೇ ಕನಿಷ್ಠಂ ಯಜ್ಞಸ್ಯ ಯದಿಯಮಿಡಾ ಪಾಕಯಜ್ಞಿಯಾ ಯದ್ವೈ ಮ ಇಹ ರಕ್ಷಾಗ್‌ಂಸಿ ಯಜ್ಞಂ ನ

CC-0. Jangamwadi Math Collection. Digitized by eGangotri

ಹನ್ಯುರಿತಿ ತಾಮೇತತ್ಪುರಾ ರಕ್ಷೋಭ್ಯಃ ಪುರಾ ರಕ್ಷೋಭ್ಯ ಇತ್ಯೇವೋಪಾಗ್‌ಂಶೂಪಾಹ್ವಯತೆ ತಥೋ ಏವೈನಮೇಷ ಏತತ್ಪುರಾ .... .... ಪಹ್ವಯತೇ ॥

ಈ ಸಂದರ್ಭದಲ್ಲಿ ಹೋತೃವು ಇಡೆಯನ್ನು ಮೃದುವಾದ ಧ್ವನಿಯಿಂದ ಕರೆಯುತ್ತಾನೆ. ಆದರೂ ಸಹ ಮನುವು ಯಜ್ಞಾಂಗವಾದ ಈ ಕ್ರಿಯೆಯು ಅಷ್ಟು ದೃಢವಾದುದಲ್ಲ. ಆದುದರಿಂದ ರಾಕ್ಷಸರ ಭೀತಿಯು ಸಮಾಪಿಸುವುದರೊಳಗೆ ಇಡೆಯನ್ನು ರಕ್ಷಿಸಬೇಕೆಂದು ಅದೇ ಇಚ್ಛೆಯನ್ನು ಪ್ರಕಟಿಸುತ್ತಾ ಕರೆಯುತ್ತಾನೆ.

ಸ ಉಪಹ್ವಯತೇ । ಉಪಹೂತಗ್‌ಂ ರಥಂತರಗ್‌ಂ ಸಹ ಪೃಥಿವ್ಯೋಪಮಾಂ ವಾಮದೇವ್ಯಗ್‌ಂ ಸಹಾಂತರಿಕ್ಷೇಣ ಹ್ವಯತಾಮುಪಹೂತಂ ವಾಮದೇವ್ಯಗ್‌ಂ ಸಹಾಂತರಿಕ್ಷೇಣ ಹ್ವಯತಾ-ಮುಪಹೂತಂ ಬೃಹತ್ಸಹ ದಿವೋಪ ಮಾಂ ಬೃಹತ್ಸಹ ದಿವಾ ಹ್ವಯತಾಮಿತಿ ತದೇತಾಮೇ-ವೈ ತದುಪಹ್ವಯಮಾನ ಇಮಾಂಶ್ಚ ಲೋಕಾನುಪಹ್ವಯತ ಏತಾನಿ ಚ ಸಾಮಾನಿ ॥

ಅನಂತರ ಇಡೆಯನ್ನು ಸ್ತುತಿಸುವ ಮಂತ್ರಗಳನ್ನು ಪಠಿಸುತ್ತಾನೆ ಈ ಮಂತ್ರಗಳಿಂದ ಇಡೆಯನ್ನು ಸ್ತುತಿಸಿದರೆ ಪೃಥಿವ್ಯಾದಿ ಮೂರು ಲೋಕಗಳನ್ನೂ ಸ್ತುತಿಸಿ ರಕ್ಷಣೆಗೆ ಕರೆದಂತಾಗುತ್ತದೆ. ಅದು ಹೇಗೆಂದರೆ, ರಥಂತರಸಾಮ ದೊಡನೆ ಪೃಥ್ವಿಯನ್ನೂ, ವಾಮದೇವ್ಯದೊಡನೆ ಅಂತರಿಕ್ಷವನ್ನೂ, ಬೃಹತ್ತಿನೊಡನೆ ದ್ಯುಲೋಕವನ್ನೂ ರಕ್ಷಣೆಗೆ ಕರೆಯುವುದರಿಂದ ತ್ರಿಲೋಕವ್ಯಾಪಿನಿಯಾದ ಇಡೆಯನ್ನೇ ರಕ್ಷಣೆಗೆ ಕರೆದಂತಾಯಿತು. ಈ ರೀತಿ ಇಡಾದೇವಿಗೆ ಸ್ತುತಿರೂಪವಾದ ಆಹ್ವಾನವು ಅವಳ ಶಕ್ತಿವಿಶೇಷಗಳನ್ನು ಸೂಚಿಸುವುದಾಗಿದೆ.

ಉಪಹೂತಾ ಗಾವಃ ಸಹರ್ಷಭಾ ಇತಿ । ಪಶವೋ ವಾ ಇಡಾ .... .... ಉಪಹೂತೇಡಾ ತಕುರಿರಿತಿ ತದೇನಾಂ ಪ್ರತ್ಯಕ್ಷಮುಪಹ್ವಯತೇ ತಕುರಿರಿತಿ ಸರ್ವಗ್‌ಂಹ್ಯೇಷಾ ಪಾಪ್ಮಾನಂ ತರತಿ ತಸ್ಮಾ ದಾಹ ತಕುರಿರಿತಿ ॥

ಇಡಾದೇವಿಯೇ ಪಶುರೂಪಳು. ಆದುದರಿಂದ ವೃಷಭದೊಂದಿಗೆ ಪ್ರತ್ಯಕ್ಷರಾಗಬೇಕೆಂದೂ, ಇಡೆಯೇ ಸರ್ವಪಾಪ-ಪ್ರಶಮನವನ್ನೂ ಮಾಡುವುದರಿಂದ ಅವಳು ಜಯಾತ್ಮಕಸ್ವರೂಪದಿಂದ ಯಜ್ಞಕ್ಕೆ ಬರಬೇಕೆಂದೂ ಪ್ರಾರ್ಥಿಸಿ ಕರೆಯಲ್ಪಡುತ್ತಾಳೆ

ಉಪಹೂತಃ ಸಖಾ ಭಕ್ಷ ಇತಿ । ಪ್ರಾಣಾ ವೈ ಸಖಾ ಭಕ್ಷಸ್ತಪ್ರಾಣಮುಪಹ್ವಯತ್ಯುಪಹೂತಗ್‌ಂ ಹೇಗಿತಿ ತಚ್ಛರೀರಮುಪಹ್ವಯತೇ ।

(ಶ. ಬ್ರಾ. ೧.೮-೧-೨೩)

ಇಡೆಯೇ ಪ್ರಿಯತಮನಾದ ಸಖನು. ಇಡೆಯೇ ಪ್ರಾಣಾತ್ಮಕವಾದ ಅನ್ನವು. ಸಖವೂ, ಅನ್ನವೂ ಪ್ರಾಣರೂಪ ಗಳೇ ಹೊರತು ಬೇರೆಯಲ್ಲ. ಇಂತಹ ಪ್ರಾಣರೂಪಿಣಿಯಾದ ಇಡೆಗೆ ಪ್ರಾರ್ಥನಾರೂಪದ ಆಹ್ವಾನವಿರುವುದು.

ಮಾನವೀ ಘೃತಪದೀತಿ । ಮನುರ್ಹ್ಯೇತಾಮಗ್ರೇಽಜನಯತ ತಸ್ಮಾದಾಹ ಮಾನವೀತಿ ಘೃತ-ಪದೀತಿ ಯದೇವಾಸ್ಯೈ ಘೃತಂ ಪದೇ ಸಮತಿಷ್ಠತ ತಸ್ಮಾದಾಹ ಘೃತಪದೀತಿ ॥

(ಶ. ಬ್ರಾ. ೧-೮-೧-೨೬)

CC-0. Jangamwadi Math Collection. Digitized by eGangotri

ಈರೀತಿ ಮೇಲೆ ವರ್ಣಿತವಾದಂತೆ ಗೋರೂಪಳೂ, ಜಯಪ್ರದಳೂ, ಅನ್ನಾತ್ಮಕಳೂ, ಪ್ರಾಣರೂಪಳೂ ಆದ ಇಡಾ ದೇವಿಯೇ ಮನುವಿನ ಪುತ್ರಿಯೆಂದು ಪ್ರಖ್ಯಾತಳಾಗಿದ್ದಾಳೆ. ಇವಳ ಪಾದದಲ್ಲಿ ಘೃತವು ಸಕ್ತವಾಗಿದ್ದುದರಿಂದ ಇವಳಿಗೆ ಘೃತಪದಿಯೆಂದೂ ಹೆಸರು ಪ್ರಸಿದ್ಧವಾಯಿತು.

## ಇಡೆಯ ಆಧ್ಯಾತ್ಮಿಕಸ್ವರೂಪವು.

ಉತ ಮೈತ್ರಾವರುಣೀತಿ । ಯದೇವ ಮಿತ್ರಾವರುಣಾಭ್ಯಾಗ್ಂ ಸಮಗಚ್ಛತ ಸ ಏವ ಮೈತ್ರಾ-ವರುಣೋ ನ್ಯಂಗೋ ಬ್ರಹ್ಮಾ ದೇವಕೃತೋಪಹೂತೇತಿ ಬ್ರಹ್ಮಾ ಹ್ಯೇಷಾಂ ದೇವಕೃತೋಪ-ಹೂತಾ ದೈವ್ಯಾ ಅಧ್ವರ್ಯವ ಉಪಹೂತಾ ಮನುಷ್ಯಾ ಇತಿ ತದ್ದೈವಾಂಶ್ಚೈವಾಧ್ವರ್ಯ್ಯೂನುಪಹ್ವ-ಯತೇ ಯೇ ಚ ಮಾನುಷಾ ವತ್ಸಾ ವೈ ದೈವ್ಯಾಅಧ್ವರ್ಯವೋಽಥ ಯ ಇತರೇ ತೇ ಮಾನುಷಾಃ॥

(ಶ. ಬ್ರಾ. ೧-೮-೧-೨೭)

ಈ ರೀತಿ ವರ್ಣಿತಳಾದ ಇಡೆಯೇ ಮಿತ್ರಾವರುಣರಿಗೂ ತನ್ನ ಸಂಬಂಧವನ್ನು ವ್ಯಕ್ತಪಡಿಸಿದ್ದಾಳೆ. ಮನುವಿನಿಂದ ಉತ್ಪನ್ನಳಾದೊಡನೆಯೇ ಮಿತ್ರಾವರುಣರಿಗೆ ಪ್ರತ್ಯಕ್ಷಳಾದುದರಿಂದ ಅವಳನ್ನು ಮೈತ್ರಾವರುಣರೂಪಳೆಂದೂ ಕರೆಯ ಬಹುದು. ದೇವನಿರ್ಮಿತಳಾದುದರಿಂದಲೇ ಅವಳು ಬ್ರಹ್ಮನೆಂದೂ ಕರೆಯಲ್ಪಡುವಳು. ಅವಳೇ ದೇವಸಂಬಂಧಿಯಾದ ಆಧ್ವರ್ಯವೂ ಆಗಿದ್ದಾಳೆ. ದೇವಸಂಬಂಧಿಯಾದ ಅಧ್ವರ್ಯುಗಳೇ ಗೋರೂಪಳಾದ ಇಡೆಗೆ ವತ್ಸ ಪ್ರಾಯರಾಗಿದ್ದಾರೆ. ದೇವಮಾನವಾದಿ ಸಕಲರೂ ಇಡೆಯ ಅನುಗ್ರಹದಿಂದಲೇ ಅನ್ನವನ್ನು ಪಡೆಯುತ್ತಾರೆ. ಆ ಇಡೆಯೇ ಅನ್ನದಾತಳೂ, ಅನ್ನರೂಪಳೂ ಆಗಿದ್ದಾಳೆ. ಮೈತ್ರಾವಾರುಣಿಯೆಂದು ಪ್ರಸಿದ್ಧಳೂ, ಅನ್ನರೂಪಳೂ ಆದ ಈ ಇಳೆಯೇ ಪ್ರಕೃತವಾದ ಋಕ್ಕಿನಲ್ಲಿ ನಿರ್ದಿಷ್ಟವಾಗಿದ್ದಾಳೆ. ಈ ಅನ್ನವೇ ಬ್ರಹ್ಮಸ್ವರೂಪವೆಂದರ್ಥ.

## ಇಳಾರೂಪಿಯಾದ ಧೇನುವಿನ ಕ್ಷೀರ.

ಸ ಹೋವಾಚ । ಇಡೈವ ಮೇ ಮಾನವ್ಯಗ್ನಿಹೋತ್ರೀ ವಾಯುರ್ವ್ವೋ ವತ್ಸಃ ಸಜೂರುಪಸೃಷ್ಟಾ ವಿರಾಟ್ ಸಂಯೋಜನಮಾಶ್ವಿನಂ ದುಹ್ಯಮಾನಂ ವೈಶ್ವದೇವಂ ದುಗ್ಧಂ ವಾಯವ್ಯಮಾಹ್ರಿಯ-ಮಾಣಮಾಗ್ನೇಯಮಧಿಶ್ರಿತಮೈಂದ್ರಾಗ್ನಮವಜ್ಯೋತ್ಯಮಾನಂ ವಾರುಣಮದ್ಭಿಃ ಪ್ರತ್ಯಾನೀತಂ ವಾಯುವ್ಯಮುದ್ವಾಸ್ಯಮಾನಂ ದ್ಯಾವಾಪೃಥಿವ್ಯಮುದ್ವಾಸಿತಮಾಶ್ವಿನಮುನ್ನೀಯಮಾನಂ ವೈಶ್ವದೇವಮುನ್ನೀತಂ ಮಹಾದೇವಾಯೋದ್ಯತಂ ವಾಯುವ್ಯಗ್ಂ ಹ್ರಿಯಮಾಣಂ ವೈಷ್ಣವಂ ನಿಗೃಹೀತಂ ॥

(ಶ. ಬ್ರಾ. ೧೧-೫-೩-೫)

“ಮನುಪುತ್ರಿಯಾದ ಇಡೆಯೇ ನನ್ನ ಅಗ್ನಿಹೋತ್ರರೂಪಿಯಾದ ಧೇನುವು. ವಾಯುತತ್ತ್ವವೇ ವತ್ಸವು. ಇವೆರಡರ ಸಂಬಂಧವೇ ವಿರಾಜವು. [ವಾಯುನಾ ಸಂಶ್ರಿತಃ ದ್ಯೌಃ—ವಾಯುವಿಗೂ, ಅಂತರಿಕ್ಷಕ್ಕೂ ಇರುವ ಸಂಬಂಧವು ಎಂದು ಇಲ್ಲಿ ಸಾಯಣರು ವಿವರಿಸಿದ್ದಾರೆ]. ಈ ಗೋವಿನೊಡನೆ ವತ್ಸವು ಸೇರಿ ಕ್ಷೀರವಾನದ ನಂತರ ದೋಹನಕಾಲ ದಲ್ಲಿ ಅಶ್ವಿನೀದೇವತೆಗಳಿಗೂ, ಕ್ಷೀರವನ್ನು ಕರೆದಾದಮೇಲೆ ವಿಶ್ವೇದೇವತೆಗಳಿಗೂ, ಗೋಷ್ಠದಿಂದ ತಂದಮೇಲೆ ವಾಯುವಿಗೂ, ಅಗ್ನಿಯಮೇಲೆ ಇಟ್ಟಾಗ ಅಗ್ನಿಗೂ, ಅದು ಪ್ರಕಾಶಿತವಾದಾಗ ಇಂದ್ರಾಗ್ನಿಗಳಿಗೂ, ಹೊರಕ್ಕೆ

CC-0. Jangamwadi Math Collection. Digitized by eGangotri

ತಂದಾಗ ದ್ಯಾವಾಪೃಥಿವಿಗಳಿಗೂ, ಉದ್ವಾಸನಕಾಲದಲ್ಲಿ ಅಶ್ವಿನೀದೇವತೆಗಳಿಗೂ, ಉನ್ನೀತವಾದಾಗ ಮಹಾದೇವನಿಗೂ, ಆಹವನೀಯಕ್ಕೆ ಸಿದ್ಧಪಡಿಸಿದಾಗ ವಿಷ್ಣುವಿಗೂ ಸೇರುತ್ತದೆ" ಎಂದು ಉದ್ದಾಲಕನು ವಿವರಿಸಿದನು. ಇಂತಹ ಸಂದರ್ಭದಲ್ಲಿ ಇಡೆಯು ಬಹಳ ಗೂಢವಾದ ತತ್ತ್ವವನ್ನು ಪ್ರತಿಪಾದಿಸುವ ಶಕ್ತಿವಿಶೇಷವಾಗಿರುತ್ತದೆಂದು ತಿಳಿಯಬೇಕು.

ಇಡಾರೂಪಿಯಾದ ಈ ಧೇನುವಿನ ಸ್ವರೂಪವನ್ನೂ, ಪಾಕಯಜ್ಞಾದಿಕಾಲಗಳಲ್ಲಿ ಅರ್ಪಿತವಾಗತಕ್ಕ ಈ ಕ್ಷೀರದ ಮಹತ್ತ್ವವನ್ನೂ ಇದರ ಸಹಾಯದಿಂದ ಯಜ್ಞವನ್ನಾಚರಿಸುವ ಯಜಮಾನನಿಗೆ ಲಭಿಸತಕ್ಕ ಇಡಾರೂಪದ ಅನ್ನಸಂಪತ್ಸ್ವರೂಪವನ್ನೂ ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ವರ್ಣಿಸಿದೆ.

> **ಪಾಕಯಜ್ಞಂ ವಾ ಅನ್ವಾಹಿತಾಗ್ನೇಃ ಪಶವ ಉಪ ತಿಷ್ಠಂತ ಇಡಾ ಖಲು ವೈ ಪಾಕಯಜ್ಞಸ್ಸೈಷಾಂತರಾ ಪ್ರಯಾಜಾನೂಯಾಜಾನ್ ಯಜಮಾನಸ್ಯ ಲೋಕೇವಹಿತಾ ತಾಮಾಹ್ರಿಯಮಾಣಾಮಭಿ ಮಂತ್ರಯೇತ ಸುರೂಪವರ್ಷವರ್ಣ ಏಹೀತಿ ಪಶವೋ ವಾ ಇಡಾ ಪಶೂನೇವೋಪಹ್ವಯತೇ ಯಜ್ಞಂ ವೈ ದೇವಾ ಅದುಹ್ರನ್ ಯಜ್ಞೋಽಸುರಾಗ್ಂ ಅದುಹತ್ತೇಽಸುರಾ ಯಜ್ಞದುಗ್ಧಾಃ ಪರಾಭವನ್**
>
> (ತೈ. ಸಂ. ೧-೭-೧-೧)

ಪಾಕಯಜ್ಞಕ್ಕಾಗಿ ಅಗ್ನಿಯನ್ನು ಪ್ರತಿಷ್ಠಾಪಿಸಿದವನಿಗೆ ಪಶುಸಂಪತ್ತೊದಗುವುದು. ಇಡೆಯೇ ಈ ಪಾಕಯಜ್ಞವು. ಇದು ಪ್ರಯಾಜಾನುಯಾಜಗಳ ನಡುವೆ ಸ್ಥಾಪಿತವಾಗುವುದು. ಅನಂತರ "ಸುರೂಪವಾದ ವರ್ಷವರ್ಣವುಳ್ಳ ದೇವಿಯೇ ದಯಮಾಡು" ಎಂದು ಪ್ರಾರ್ಥಿಸಬೇಕು. ಇಡೆಯೇ ಪಶುವಾದುದರಿಂದ ಈ ಆಹ್ವಾನದಿಂದ ಪಶುವನ್ನೇ ಕರೆದಂತಾಗುತ್ತದೆ. ದೇವತೆಗಳು ಯಜ್ಞವನ್ನು ಕರೆದರು- ಯಜ್ಞವು ಅಸುರರನ್ನು ಕರೆಯಿತು. ಆದುದರಿಂದಲೇ ಅಸುರರಿಗೆ ಅಪಜಯುವಾಯಿತು.

> **ಯೋ ವೈ ಯಜ್ಞಸ್ಯ ದೋಹಂ ವಿದ್ವಾನ್ ಯಜತೇಽಪ್ಯನ್ಯಂ ಯಜಮಾನಂ ದುಹೇ ಸಾ ಮೇ ಸತ್ಯಾಶೀರಸ್ಯ ಯಜ್ಞಸ್ಯ ಭೂಯಾದಿತ್ಯಾಹೈಷ ವೈ ಯಜ್ಞಸ್ಯ ದೋಹಸ್ತೇನೈವೈನಂ ದುಹೇ ಪ್ರತ್ತಾ ವೈ ಗೌರ್ದುಹೇ ಪ್ರತ್ತೇಡಾ ಯಜಮಾನಾಯ ದುಹ ಏತೇ ವಾ ಇಡಾಯೈ ಸ್ತನಾ ಇಡೋಪಹೂತೇತಿ ವಾಯುರ್ವತ್ಸೋ ಯರ್ಹಿ ಹೋತೇಡಾಮುಪಹ್ವಯೇತ ತರ್ಹಿ ಯಜಮಾನೋ ಹೋತಾರಮೀಕ್ಷಮಾಣೋ ವಾಯುಂ ಮನಸಾ ಧ್ಯಾಯೇತ್ ।**
>
> (ತೈ. ಸಂ. ೧-೭-೧-೨)

ಈ ತತ್ತ್ವವನ್ನರಿತು ಯಜ್ಞವನ್ನು ಕರೆಯುವ ಮಾರ್ಗವನ್ನು ಯಾವನು ತಿಳಿಯುತ್ತಾನೆಯೋ ಅವನಿಗೆ ಇಡಾರೂಪವಾದ ಯಜ್ಞವು ಬೇರೊಬ್ಬ ಯಜಮಾನನನ್ನು ಕರೆದು ಸಹಾಯುಮಾಡುತ್ತದೆ. "ಈ ಯಜ್ಞದ ಆಶೀರ್ವಾದವು ನನಗೆ ಫಲಿಸಲಿ" ಎಂದು ಯಜಮಾನನು ಪಠಿಸುವುದೇ ಯಜ್ಞದೋಹನವು. ಧೇನುವು ಈ ದೋಹನಕ್ಕೆ ಸಮ್ಮತಿಯನ್ನು ಕೊಡುತ್ತದೆ. ಇದೇ ಪ್ರಾರ್ಥನೆಯು ಇಡೆಯನ್ನುದ್ದೇಶಿಸಿದುದರಿಂದ ಇಡಾರೂಪವಾದ ಧೇನುವನ್ನೇ ಕರೆದಂತಾಗುತ್ತದೆ. [ಇಡೋಪಹೂತಾ ಎಂಬ ಪ್ರತಿಕ್ರಿಯೆಯು ದೇವತೆಗಳ ಕ್ರಮವನ್ನೂ, ಉಪಹೂತೇಡಾ ಎಂಬುದು ಅಸುರರ ಕ್ರಮವನ್ನೂ ತಿಳಿಸುವುದು. ಇದು ಯಾಜ್ಞಿಕಪ್ರಕ್ರಿಯೆಯಲ್ಲಿ ಗಮನಿಸಬೇಕಾದ ಅಂಶ]. ಈ ಧೇನುವನ್ನು ಕರೆಯು

CC-0. Jangamwadi Math Collection. Digitized by eGangotri

ವುದಕ್ಕೆ ಮೊದಲು ವತ್ಸವನ್ನು ಧೇನುವಿನೊಡನೆ ಸೇರಿಸಬೇಕು. ಯಜಮಾನನು ಇಡೆಯನ್ನುದ್ದೇಶಿಸಿ ಪ್ರಾರ್ಥಿಸಿದಾಗ ಹೋತೃಮುಖವನ್ನು ವೀಕ್ಷಿಸುತ್ತಾ ವಾಯುವನ್ನು ಧ್ಯಾನಿಸಬೇಕು.

**ಮಾತ್ರೇ ವತ್ಸಮುಪಾವ ಸೃಜತಿ ಸರ್ವೇಣ ವೈ ಯಜ್ಞೇನ ದೇವಾಸ್ಸುವರ್ಗಂ ಲೋಕಮಾಯ-ನ್ಪಾಕಯಜ್ಞೇನ ಮನುರಶ್ರಾಮ್ಯತ್ಸೇಡಾ ಮನುಮುಪಾವರ್ತತ ತಾಂ ದೇವಾಸುರಾ ವ್ಯಹ್ವ-ಯಂತ ಪ್ರತೀಚೀಂ ದೇವಾಃ ಪರಾಚೀಮಸುರಾಸ್ಸಾ ದೇವಾನುಪಾವರ್ತತ ಪಶವೋ ವೈ ತದ್ದೇವಾನವೃಣತ ಪಶವೋಽಸುರಾನಜಹುರ್ಯಂ ಕಾಮಯೇತಾಪಶುಸ್ಸ್ಯಾದಿತಿ ಪರಾಚೀಂ ತಸ್ಯೇಡಾಮುಪ ಹ್ವಯೇತಾಪಶುರೇವ ಭವತಿ ||**

(ತೈ. ಸಂ.೧-೭-೧-೩)

ವಾಯುವನ್ನು ಧ್ಯಾನಿಸುತ್ತಿರುವಾಗಲೇ ವತ್ಸವನ್ನು ಧೇನುವಿನ ಸಮೀಪಕ್ಕೆ ಬಿಡುತ್ತಾನೆ. ಈ ಪೂರ್ಣಯಾಗದ ಸಹಾಯದಿಂದಲೇ ದೇವತೆಗಳು ಸ್ವರ್ಗವನ್ನು ಪಡೆದರು. ಹಾಗೆಯೇ ಮನುವೂ ಸಹ ಈ ಯಜ್ಞಕ್ಕಾಗಿ ಶ್ರಮಿಸಿದನು. ಇಡೆಯು ಮನುವಿನಲ್ಲಿಗೆ ಹೋದಳು. ದೇವತೆಗಳೂ ಅಸುರರೂ ಇದೇ ಇಡೆಯನ್ನಾಶ್ರಯಿಸಲು ಬಂದಾಗ ದೇವತೆಗಳು ಸಾಕ್ಷಾತ್ತಾಗಿಯೂ, ಅಸುರರು ಪರಾಙ್ಮುಖರಾಗಿಯೂ ಕರೆದರು. ಇಡೆಯು ದೇವತೆಗಳಲ್ಲಿ ಹೋಗಿ ಸೇರಿದಳು. ಆದುದರಿಂದ ದೇವತೆಗಳು ಪಶುಸಂಪತ್ತನ್ನು ಪಡೆದರು. ಅಸುರರಿಗೆ ಅದು ಲಭಿಸಲಿಲ್ಲ. ಯಾರಾದರೂ ಯಜಮಾನನು ಪಶುರಹಿತನಾಗಿಯೇ ಇರಬೇಕೆಂದು ಅಪೇಕ್ಷಿಸಿದರೆ ಅವನ ಪರವಾಗಿ ಇಡೆಯನ್ನು ಪರಾಙ್ಮುಖನಾಗಿ ನಿಂತು ಕರೆದರೆ ಆಗ ಆ ಯಜಮಾನನು ಪಶುರಹಿತನಾಗುವನು.

**ಯಂ ಕಾಮಯೇತ ಪಶುಮಾನ್ಸ್ಯಾದಿತಿ ಪ್ರತೀಚೀಂ ತಸ್ಯೇಡಾಮುಪಹ್ವಯೇತ ಪಶುಮಾನೇವ ಭವತಿ ಬ್ರಹ್ಮವಾದಿನೋ ವದಂತಿ ಸ ತ್ವಾ ಇಡಾಮುಪ ಹ್ವಯೇತ ಯ ಇಡಾಮುಪಹೂಯಾ-ತ್ಮಾನಮಿಡಾಯಾಮುಪಹ್ವಯೇತೇತಿ ಸಾ ನಃ ಪ್ರಿಯಾ ಸುಪ್ರತೂರ್ತಿರ್ಮಘೋನೀತ್ಯಾ-ಹೇಡಾಮೇವೋಪಹೂಯಾತ್ಮಾನಮಿಡಾಯಾಮುಪಹ್ವಯತೇ ವ್ಯಸ್ತಮಿವ ವಾ ಏತದ್ಯಜ್ಞಸ್ಯ ಯದಿಡಾ ಸಾಮಿ ಪ್ರಾಶ್ನಂತಿ || ೪ ||**

(ತೈ. ಸಂ ೧-೭-೧-೪)

ಯಜಮಾನನಿಗೆ ಪಶುಸಂಪತ್ತು ಲಭಿಸಬೇಕೆಂಬ ಉದ್ದೇಶವಿದ್ದರೆ, ಆಗ ಅವನಿಗಾಗಿ ಇಡೆಯನ್ನು ಸಾಕ್ಷಾತ್ತಾಗಿ ನಿಂತು ಪ್ರಾರ್ಥಿಸಿ ಕರೆಯಬೇಕು. ಒಡನೆಯೇ ಆ ಯಜಮಾನನು ಪಶುಸಂಪತ್ತನ್ನು ಪಡೆಯುತ್ತಾನೆ. ಇಡೆಯನ್ನು ಪ್ರಾರ್ಥಿಸಿ ಕರೆಯುವಾಗ ಸ್ತೋತೃವು ತನಗೂ ಇಡೆಗೂ ಐಕ್ಯವನ್ನೇ ಕಾಣುತ್ತಾನೆ. ಇಡೆಯಲ್ಲಿ ತನ್ನ ಸ್ವರೂಪವನ್ನು ಐಕ್ಯಮಾಡಿರುತ್ತಾನೆ ಎಂಬುದಾಗಿ ತತ್ತ್ವವಿದರು ಹೇಳುತ್ತಾರೆ. ಇಡೆಯು ನನ್ನ ಭಾಗಕ್ಕೆ ಪ್ರಿಯಕಾರಕಳಾಗಿಯೂ, ಜಯಪ್ರದಳಾಗಿಯೂ ಪ್ರಭೂತವಾಗಿ ಸಂಪತ್ತನ್ನು ಕೊಡುವವಳಾಗಿಯೂ ಆಗಿರಲಿ ಎಂದು ಅವನು ಪ್ರಾರ್ಥಿಸುತ್ತಾನೆ. ಇಡೆಯು ಯಜ್ಞದ ಮಧ್ಯಭಾಗದಲ್ಲಿ ಸ್ವಲ್ಪ ಭಂಗವಾದಂತಿರುತ್ತೆ. ಅದರಲ್ಲಿ ಅರ್ಧವು ಭುಕ್ತವಾಗುತ್ತದೆ ಇತ್ಯಾದಿಯಾಗಿ ಇಡೆಯ ರಕ್ಷಣಾಸ್ವರೂಪವನ್ನೂ ಅಸುರಾದಿಗಳನ್ನು ಭಂಗಪಡಿಸುವ ಶಕ್ತಿಯನ್ನೂ ವರ್ಣಿಸಿದೆ. ಮತ್ತು ಇಡೆಯ ವಿಶ್ವರಕ್ಷಣಾಸಾಮರ್ಥ್ಯವನ್ನು ಇನ್ನೂ ವಿಶದವಾಗಿ ತಿಳಿಸಿದೆ.

**ಸಗ್ಗ್ರಶ್ರವಾ ಹ ಸೌವರ್ಚನಸಸ್ತುಮಿಂಜಮೌಪೋದಿತಿಮುವಾಚ ಯತ್ಸತ್ರಿಣಾಗ್ಂಹೋತಾ ಭೂಃ ಕಾಮಿಡಾಮುಪಾಹ್ವಥಾ ಇತಿ ತಾಮುಪಾಹ್ವ ಇತಿ ಹೋವಾಚ ಯಾ ಪ್ರಾಣೇನ ದೇವಾನ್ದಾ-**

CC-0. Jangamwadi Math Collection. Digitized by eGangotri

ಧಾರ ವ್ಯಾನೇನ ಮನುಷ್ಯಾನಪಾನೇನ ಪಿತ್ರೃನಿತಿ ಛಿನತ್ತೀ ಸಾ ನ ಛಿನತ್ತೀ೩ ಇತಿ ಛಿನತ್ತೀತಿ ಹೋವಾಚ ಶರೀರಂ ವಾ ಅಸ್ಯೈ ತದುಪಾಹ್ವಥಾ ಇತಿ ಹೋವಾಚ ಗೌರ್ವೈ ಅಸ್ಯೈ ಶರೀರಂ।

(ತೈ. ಸಂ. ೧-೭-೨-೧)

ಸತ್ರಯಾಗಮಾಡುವವರಿಗೆ ನೀನು ಯಾವಾಗ ಹೋತೃವಾಗಿದ್ದೆ ? ಇಡೆಯ ಯಾವ ಸ್ವರೂಪವನ್ನು ನೀನು ಸ್ತುತಿಸಿ ಪ್ರಾರ್ಥಿಸಿದೆ? ಎಂಬುದಾಗಿ ಸುವರ್ಚನಸನ ಪುತ್ರನಾದ ಸಂಶ್ರವಸ್ಸು ತುಮಿಂಜ ಔಪದಿತಿಯನ್ನು ಪ್ರಶ್ನಿಸಿದನು. ಯಾವ ಇಡೆಯು ಪ್ರಾಣದಿಂದ ದೇವತೆಗಳನ್ನೂ, ವ್ಯಾನದಿಂದ ಮನುಷ್ಯರನ್ನೂ, ಅಪಾನದಿಂದ ಪಿತೃಗಳನ್ನೂ, ಧರಿಸಿದ್ದಾಳೋ ಆ ಇಡೆಯನ್ನು, ಪ್ರಾರ್ಥಿಸಿದೆ ಎಂದು ಔಪದಿತಿಯು ಉತ್ತರಕೊಟ್ಟನು. ಅವಳು ವಿಭಾಜ್ಯಳೇ ಅಥವಾ ಅವಿಭಾಜ್ಯಳೇ ಎಂಬ ಪ್ರಶ್ನೆಗೆ ಅವಳು ವಿಭಾಜ್ಯಳು ಎಂದುತ್ತರವನ್ನು ಕೊಟ್ಟನು. ಹಾಗಾದರೆ ಅವಳ ಶರೀರವನ್ನು ಸ್ತುತಿಸಿದೆಯಾ ಎಂದನು ಆ ಇಡೆಯ ದೇಹವೇ ಧೇನುವು.

ಗಾಂ ವಾವ ತೌ ತತ್ಪರ್ಯವದತಾಂ ಯಾ ಯಜ್ಞೇ ದೀಯತೇ ಸಾ ಪ್ರಾಣೇನ ದೇವಾನ್ದಾಧಾರ ಯಯಾ ಮನುಷ್ಯಾ ಜೀವಂತಿ ಸಾ ವ್ಯಾನೇನ ಮನುಷ್ಯಾನ್ ಯಾಂ ಪಿತೃಭ್ಯೋ ಘ್ನಂತಿ ಸಾಪಾನೇನ ಪಿತ್ರೃನ್ ಯ ಏವಂ ವೇದ ಪಶುಮಾನ್ಭವತ್ಯಥ ವೈ ತಾಮುಪಾಹ್ವ ಇತಿ ಹೋವಾಚ ಯಾ ಪ್ರಜಾಃ ಪ್ರಭವಂತೀಃ ಪ್ರತ್ಯಾಭವತೀತಿ ॥

(ತೈ. ಸಂ. ೧-೭-೨-೨)

ಇಡಾರೂಪಳಾದ ಆ ಗೋವಿನ ವಿಷಯದಲ್ಲಿ ಅವರಿಬ್ಬರೂ ತತ್ತ್ವಾರ್ಥಜಿಜ್ಞಾಸುಗಳಾಗಿ ಚರ್ಚಿಸುತ್ತಿದ್ದರು. ಯಜ್ಞಾರ್ಥವಾಗಿ ಅರ್ಪಿತಳಾದ ಈ ಇಡೆಯು ದೇವತೆಗಳನ್ನು ಪ್ರಾಣರೂಪದಿಂದ ಧರಿಸಿದ್ದಾಳೆ. ಯಾವಳ ಆಶ್ರಯ ದಿಂದ ಮಾನವರು ಜೀವಿಸಿದ್ದಾರೋ ಅವರನ್ನು ವ್ಯಾನದಿಂದ ಧರಿಸಿ ಅವರ ವೃದ್ಧಿಗೆ ಕಾರಣಳಾಗಿದ್ದಾಳೆ. ಯಾರಿ ಗೋಸ್ಕರ ಅವಳನ್ನು ಹನನಮಾಡುತ್ತಾರೋ ಅಂತಹ ಪಿತೃಗಳನ್ನು ಅಪಾನದಿಂದ ಧರಿಸಿದ್ದಾಳೆ. ಈ ತತ್ತ್ವಗಳನ್ನೆಲ್ಲಾ ತಿಳಿದವನು ಪಶುಸಂಪತ್ತಿನಿಂದ ಕೂಡಿರುತ್ತಾನೆ. ಪ್ರಜೆಗಳ ವೃದ್ಧಿಗೆ ಯಾರು ಕಾರಣಳೋ ಅಂತಹ ಇಡೆಯನ್ನು ನಾನು ಪ್ರಾರ್ಥಿಸಿದ್ದೇನೆ ಎಂದು ಔಪೋದಿತಿಯು ಉತ್ತರಕೊಟ್ಟನು.

ಅನ್ನಂ ವಾ ಅಸ್ಯೈ ತದುಪಾಹ್ವಥಾ ಇತಿ ಹೋವಾಚೌಷಧಯೋ ವಾ ಅಸ್ಯಾ ಅನ್ನಮೌ ಷಧಯೋ ವೈ ಪ್ರಜಾಃ ಪ್ರಭವಂತೀಃ ಪ್ರತ್ಯಾ ಭವಂತಿ ಯ ಏವಂ ವೇದಾನ್ನಾದೋ ಭವತ್ಯಥ ವೈ ತಾಮುಪಾಹ್ವ ಇತಿ ಹೋವಾಚ ಯಾ ಪ್ರಜಾಃ ಪರಾಭವಂತೀರನುಗೃಹ್ಣಾತಿ ಪ್ರತ್ಯಾಭವಂ- ತೀರ್ಗೃಹ್ಣಾತೀತಿ ಪ್ರತಿಷ್ಠಾಂ ವಾ ಅಸ್ಯೈ ತದುಪಾಹ್ವಥಾ ಇತಿ ಹೋವಾಚ ॥

(ತೈ. ಸಂ. ೧-೭-೨. ೩)

ಹೀಗಾದರೆ ಇಡೆಯ ಅನ್ನವನ್ನೇ ಪ್ರಾರ್ಥಿಸಿದಂತಾಯಿತು. ಈ ಅನ್ನವೇ ಓಷಧಿರೂಪದಲ್ಲಿದೆ. ಪ್ರಜೆಗಳು ವೃದ್ಧಿ ಯನ್ನು ಹೊಂದಿದರೆ ಈ ಅನ್ನರೂಪವಾದ ಓಷಧಿಗಳನ್ನು ಪಡೆಯುವರು. ಈ ತತ್ತ್ವವನ್ನರಿತವನು ಅನ್ನವನ್ನು ತಿನ್ನುತ್ತಾನೆ ಎಂದು ಸಂಶ್ರವಸ್ಸು ಹೇಳಿದಾಗ ಆಪತ್ತಿನಲ್ಲಿ ಸಿಕ್ಕಿದವರನ್ನು ಉದ್ಧರಿಸುವವಳೂ ಮತ್ತು ವೃದ್ಧಿಯನ್ನು ಹೊಂದಿದಾಗ ಅನುಗ್ರಹಿಸುವವಳೂ ಆದ ಇಡೆಯನ್ನು ನಾನು ಪ್ರಾರ್ಥಿಸಿದ್ದೇನೆ ಎಂದು ಔಪೋದಿತಿಯು ಪುನಃ ಹೇಳಿದನು. ಹಾಗಾದರೆ ಅವಳ ಪೂರ್ಣವಾದ ಆಶ್ರಯವನ್ನೇ ಪಡೆದಂತಾಯಿತು ಎಂದು ಪ್ರತ್ಯುತ್ತರವನ್ನಿತ್ತನು.

CC-0. Jangamwadi Math Collection. Digitized by eGangotri

ಇಯಂ ವಾ ಅಸ್ಯೈ ಪ್ರತಿಷ್ಠೇಯಂ ವೈ ಪ್ರಜಾಃ ಪರಾಭವಂತೀರನು ಗೃಹ್ಣಾತಿ ಪ್ರತ್ಯಾಭವಂತೀ-ರ್ಗೃಹ್ಣಾತಿ ಯ ಏವಂ ವೇದ ಪ್ರತ್ಯೇವ ತಿಷ್ಠತ್ಯಥ ವೈ ತಾಮುಪಾಹ್ವ ಇತಿ ಹೋವಾಚ ಯಸ್ಯೈ ನಿಕ್ರಮಣೇ ಘೃತಂ ಪ್ರಜಾಸ್ಸಂಜೀವಂತೀಃ ಪಿಬಂತೀತಿ ಭಿನತ್ತಿ ಸಾ ನ ಭಿನತ್ತೀ೩ ಇತಿ ನ ಭಿನತ್ತೀತಿ ಹೋವಾಚ ಪ್ರ ತು ಜನಯತೀತ್ಯೇಷ ವಾ ಇಡಾಮುಪಾಹ್ವಥಾ ಇತಿ ಹೋವಾಚ ವೃಷ್ಟಿರ್ವಾ ಇಡಾ ವೃಷ್ಟ್ಯೈ ವೈ ನಿಕ್ರಮಣೇ ಘೃತಂ ಪ್ರಜಾಸ್ಸಂಜೀವಂತೀಃ ಪಿಬಂತಿ ಯ ಏವಂ ವೇದ ಪ್ರೈವ ಜಾಯತೇಽನ್ನಾದೋ ಭವತಿ॥

(ತೈ. ಸಂ. ೧-೭-೨-೪)

ಸರ್ವಾಧಾರಳಾದವಳೂ, ಇಡಾರೂಪಳಾದವಳೂ ಆದ ಈ ಪೃಥ್ವಿಯೇ ಆಪತ್ತಿನಲ್ಲಿ ಸಿಕ್ಕಿದವರನ್ನು ಉದ್ಧರಿಸುವವಳೂ ಮತ್ತು ವರ್ಧಿಷ್ಣುಗಳನ್ನು ಅನುಗ್ರಹಿಸುವವಳೂ ಆಗಿದ್ದಾಳೆ. ಈ ತತ್ತ್ವವನ್ನರಿತವನು ತನ್ನ ಅಸ್ತಿತ್ವಕ್ಕೂ ಮತ್ತು ವೃದ್ಧಿಗೂ ಪೂರ್ಣವಾದುದೂ ಸ್ಥಿರವಾದುದೂ ಆದ ಆಧಾರವನ್ನು ಪಡೆಯುತ್ತಾನೆ. ಎಂದಾಗ ಪುನಃ ಈ ಇಡೆಯು ವಿಭಾಜ್ಯಳೇ ಅಥವಾ ಅವಿಭಾಜ್ಯಳೇ ಎಂದು ಪ್ರಶ್ನಿಸಿದಾಗ, ಇವಳು ವಿಭಾಗಕರ್ತ್ಯವೇ ಅಥವಾ ಅಲ್ಲವೇ ಎಂದಾಗ ಇವಳು ವಿಭಾಗಿಸುವುದಿಲ್ಲ ಆದರೆ ವೃದ್ಧಿಕಾರಕಳಾಗುತ್ತಾಳೆ ಎಂದನು. ಈ ಮಹಚ್ಛಕ್ತಿಯುಳ್ಳ ಇಡೆಯೇ ವೃಷ್ಟಿಯು. ಈ ವೃಷ್ಟಿಯನ್ನಾಶ್ರಯಿಸಿಯೇ ಪ್ರಜೆಗಳು ತಮ್ಮ ಜೀವಾತುವಾದ ಘೃತವನ್ನು ಪಾನಮಾಡುತ್ತಾರೆ. ಈ ಸಂತೃಪ್ತಿಗೆ ಘೃತಪದಿಯಾದ ಇಡೆಯೇ ಕಾರಣಳು. ಇವಳನ್ನು ಆಶ್ರಯಿಸಿದ ಸ್ತೋತೃವು ಸಕಲ ಧನಸಂಪತ್ತನ್ನೂ, ಪ್ರಜಾ ಸಂಪತ್ತನ್ನೂ ಪಡೆಯುತ್ತಾನೆ ಎಂಬುದಾಗಿ ಇಡೆಯ ಮಹಾತ್ಮ್ಯವರ್ಣನವಿದೆ. ಮೇಲಿನ ವಿವರಣೆಗಳಲ್ಲಿ ಇಡೆಯು ವಿಶ್ವ ವ್ಯಾಪಕಳಾದ ದೇವಿಯೆಂದೂ, ದೇವಮಾನವಾದಿಗಳಿಗೆಲ್ಲಾ ಆಶ್ರಯದಾತಳೆಂದೂ, ಸರ್ವಾಧಾರಳಾದ ಪೃಥ್ವಿಯೆಂದೂ, ಸಕಲಲೋಕಗಳಿಗೆಲ್ಲ ಅನ್ನಸ್ವರೂಪಳಾಗಿ ತೃಪ್ತಿದಾಯಕಿಯೆಂದೂ, ಆಪದ್ಬಾಂಧವಳೆಂದೂ, ದುಷ್ಟಶಿಕ್ಷಣಕ್ಕೂ ಶಿಷ್ಟರಕ್ಷಣಕ್ಕೂ ಶಕ್ತಿಯುಳ್ಳವಳೆಂದೂ, ಜಗಜ್ಜೀವನಕ್ಕೆ ಆಧಾರಳಾದ ವೃಷ್ಟಿರೂಪಳೇ ಇವಳೆಂದೂ ಸ್ತುತಿಸಿದೆ. ಜಗತ್ತಿಗೆ ಜೀವಾತುವಾದ ಘೃತವೇ ಇವಳ ಅನುಗ್ರಹದಿಂದ ಲಬ್ಧವಾಗತಕ್ಕದ್ದು. ಋಕ್ಸಂಹಿತೆಯಲ್ಲಿ ಯಾವ ಈ ಇಳೆಯನ್ನು ಘೃತಹಸ್ತಾ ಎಂದು ಸ್ತುತಿಸಿದೆಯೋ ಅವಳನ್ನು ಶತಪಥಾದಿಗಳಲ್ಲಿ ಘೃತಪದೀ ಎಂದೂ ಸ್ತುತಿಸಿದೆ. ಮಿತ್ರನನ್ನು ಸ್ತುತಿಸುವ ಪ್ರಕೃತವಾದ ಋಕ್ಕಿನಲ್ಲಿ ಅನ್ನರೂಪಳಾದ ಇಳೆಯನ್ನು ನಿರ್ದೇಶಿಸಿ ಮಿತ್ರನಿಗೂ, ಇಳೆಗೂ ಇರುವ ಸಂಬಂಧವನ್ನೂ ತಿಳಿಸಿದೆ. ಮೈತ್ರಾವರುಣರೂಪಳೇ ಇವಳೆಂದು ಮೇಲೆ ತಿಳಿಸಿ ಅದರ ಅರ್ಥವನ್ನೂ ವಿವರಿಸಿದೆ. ಪ್ರಕೃತವಾದ ಋಕ್ಕಿನಲ್ಲಿ ಇಳಾಶಬ್ದಕ್ಕೆ ಅನ್ನವೆಂದರ್ಥಮಾಡಿರುವುದರಿಂದ ಇಳೆಯ ಸ್ವರೂಪದಲ್ಲಿ ಒಂದಂಶವು ಮಾತ್ರ ನಿರೂಪಿತವಾಗಿದೆ.

**ಅನಮೀವಾಸಃ**—**ಅಮ ರೋಗೇ**—ರೋಗವೆಂಬರ್ಥವನ್ನು ಕೊಡುವ **ಅಮ**ಶಬ್ದದಿಂದ **ಅಮೀವ** ಶಬ್ದವು ನಿಷ್ಪನ್ನವಾಗಿದೆ. **ಅನಮೀವಾಸಃ** ಎಂಬುದು ಇದರ ನಿಷೇಧಾರ್ಥವನ್ನು ತೋರಿಸುತ್ತದೆ. ರೋಗರಹಿತರೆಂದರ್ಥ. ಅಮೀವಶಬ್ದವು ಶತ್ರುವೆಂಬರ್ಥದಲ್ಲಿಯೂ ಪ್ರಯುಕ್ತವಾಗಿದೆ. **ಅಮೀವಹನ್** । ಶತ್ರುನಾಶಕನೆಂದು ಇಂದ್ರಾದಿಗಳಿಗೂ ವಿಶೇಷಣವಾಗಿದೆ.

**ಉಪಕ್ಷಿಯಂತಃ**—**ಕ್ಷಿ** ಧಾತುವಿನೊಡನೆ **ಉಪ** ಎಂಬ ಉಪಸರ್ಗವು ಸೇರಿದರೆ ಸಮೀಪದಲ್ಲಿ ವಾಸಮಾಡು ಎಂಬರ್ಥವಾಗುತ್ತದೆ. ಇದೇ ಅರ್ಥದಲ್ಲಿ ಈ ಪದವು ಅನೇಕ ಸಂದರ್ಭಗಳಲ್ಲಿ ಪ್ರಯೋಗಿಸಲ್ಪಟ್ಟಿವೆ. ಉದಾಹರಣೆಗೆ

CC-0. Jangamwadi Math Collection. Digitized by eGangotri

**ಯಸ್ಯ ತೇ ಅಗ್ನೇ ಅನ್ಯೇ ಅಗ್ನಯ ಉಪಕ್ಷಿತೋ ವಯಾ ಇವ ।**

(ಋ. ಸಂ. ೮-೧೯-೩೩)

ಮುಖ್ಯಾಗ್ನಿಯ ಸಮೀಪದಲ್ಲಿ ಇತರ ಅಗ್ನಿಗಳೂ ವಾಸಿಸುವುವು ಎಂಬ ಅಭಿಪ್ರಾಯವನ್ನು ಕೊಡಲು ಉಪಕ್ಷಿತಃ ಎಂಬ ಪದದ ಪ್ರಯೋಗವಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಅದೇ ಅರ್ಥವು ಸಹಜವಾದರೂ ಸಹ ಅಗ್ನಿಯ ಸಮೀಪ ದಲ್ಲಿದ್ದು ಯಜ್ಞಕರ್ಮವನ್ನು ನೆರವೇರಿಸುವುದು ಎಂದು ತಾತ್ಪರ್ಯ.

——— : o : ———

ಸಂಹಿತಾಪಾಠಃ

ಅಯಂ ಮಿತ್ರೋ ನಮಸ್ಯಃ ಸುಶೇವೋ ರಾಜಾ ಸುಕ್ಷತ್ರೋ ಅಜನಿಷ್ಟ ವೇಧಾಃ ।

ತಸ್ಯ ವಯಂ ಸುಮತೌ ಯಜ್ಞಿಯಸ್ಯಾಪಿ ಭದ್ರೇ ಸೌಮನಸೇ ಸ್ಯಾಮ ॥೪॥

ಪದಪಾಠಃ

ಅಯಂ । ಮಿತ್ರಃ । ನಮಸ್ಯಃ । ಸುऽಶೇವಃ ರಾಜಾ । ಸುऽಕ್ಷತ್ರಃ । ಅಜನಿಷ್ಟ । ವೇಧಾಃ ।

ತಸ್ಯ । ವಯಂ । ಸುऽಮತೌ । ಯಜ್ಞಿಯಸ್ಯ । ಅಪಿ । ಭದ್ರೇ । ಸೌಮನಸೇ । ಸ್ಯಾಮ ॥ ೪ ॥

ಸಾಯಣಭಾಷ್ಯಂ

ಅಯಂ ಪೂರ್ವಮಂತ್ರೇ ಪ್ರತಿಪಾದಿತೋ ಮಿತ್ರಃ ಸೂರ್ಯೋ ನಮಸ್ಯಃ ಸರ್ವೈರ್ನಮಸ್ಕರ-ಣೀಯಃ ಸುಶೇವಃ ಶೋಭನಸುಖಃ । ಸುಖೇನ ಸೇವ್ಯ ಇತ್ಯರ್ಥಃ । ರಾಜಾ ಸರ್ವಸ್ಯ ಜಗತಃ ಪ್ರಕಾಶ-ಪ್ರದಾನೇನ ಸ್ವಾಮೀ ಸುಕ್ಷತ್ರಃ । ಕ್ಷತ್ರಶಬ್ದೇನ ಬಲಮುಚ್ಯತೇ । ಶೋಭನಬಲೋಪೇತೋ ವೇಧಾಃ ಸರ್ವಸ್ಯ ಜಗತೋ ವಿಧಾತಾ । ಏವಂಗುಣೋಪೇತಃ ಸೂರ್ಯೋऽಜನಿಷ್ಟ । ಪ್ರಾದುರಭೂತ್ । ತಸ್ಯೈ-ವಂವಿಧಗುಣೋಪೇತಸ್ಯ ಯಜ್ಞಿಯಸ್ಯ ಯಜ್ಞಾರ್ಹಸ್ಯ ಸೂರ್ಯಸ್ಯ ಸುಮತೌ ಶೋಭನಾಯಾಂ ಬುದ್ಧ್ಯಾಂ ಭದ್ರೇ ಕಲ್ಯಾಣಕಾರಿಣಿ ಸೌಮನಸೇ ಸೌಮನಸ್ಯೇऽಪಿ ಯಜಮಾನಾ ವಯಂ ಸ್ಯಾಮ । ಭವೇಮ ॥ ನಮಸ್ಯಃ ನಮಸಿ ಸಾಧುಃ । ತತ್ರ ಸಾಧುರಿತಿ ಯತ್ । ತಿತ್ಸ್ವರಿತಃ । ಅಜನಿಷ್ಟ । ಜನೀ ಪ್ರಾದುರ್ಭಾವ ಇತ್ಯಸ್ಯ ಲುಙಿ ಸಿಚಿ ರೂಪಂ । ಸೌಮನಸೇ । ಸುಮನಸ ಇದಮಿತ್ಯರ್ಥೇ ತಸ್ಯೇದಮಿತ್ಯಣ್ । ಪ್ರತ್ಯಯ-ಸ್ವರಃ ॥

ಪ್ರತಿಪದಾರ್ಥ

ಅಯಂ ಮಿತ್ರಃ—ಇಲ್ಲಿ ಸ್ತುತನಾಗಿರುವ ಮಿತ್ರನು । ನಮಸ್ಯಃ—ಪೂಜ್ಯನಾಗಿಯೂ । ಸುಶೇವಃ—ಸುಖದಿಂದ ಸೇವಿಸಲ್ಪಡುವವನಾಗಿಯೂ । ರಾಜಾ—ಸಕಲಜಗತ್ತಿಗೂ ಒಡೆಯನಾಗಿಯೂ । ಸುಕ್ಷತ್ರಃ—ಶ್ರೇಷ್ಠ

CC-0. Jangamwadi Math Collection. Digitized by eGangotri

ವಾದ ಬಲವುಳ್ಳವನಾಗಿಯೂ । **ವೇಧಾಃ**—ಜಗತ್ಸೃಷ್ಟಿಕರ್ತನಾಗಿಯೂ । **ಅಜನಿಷ್ಟ**—ಉತ್ಪನ್ನನಾಗಿದ್ದಾನೆ । **ತಸ್ಯ**—ಇಂತಹ । **ಯಜ್ಞಿಯಸ್ಯ**—ಪೂಜಾರ್ಹನಾದ ಮಿತ್ರನ (ಸೂರ್ಯನ) । **ಸುಮತೌ**—ಅನುಗ್ರಹಾತ್ಮಕ ವಾದುದೂ । **ಭದ್ರೇ**—ಕಲ್ಯಾಣಾತ್ಮಕವಾದುದೂ ಆದ । **ಸೌಮನಸೇ**—ಹಿತಕರವಾದುದೂ ಆದ ಬುದ್ಧಿಯಲ್ಲಿ । **ಅಪಿ ವಯಂ**—ಯಜಮಾನರಾದ ನಾವು । **ಸ್ಯಾಮ**—ಇರುವಂತಾಗಲಿ.

ಭಾವಾರ್ಥ

ಇಲ್ಲಿ ಸ್ತುತನಾಗಿರುವ ಮಿತ್ರನು ಪೂಜ್ಯನಾಗಿಯೂ, ಸುಖದಿಂದ ಸೇವಿಸಲ್ಪಡುವವನಾಗಿಯೂ, ಸಕಲಜಗತ್ತಿಗೂ ಒಡೆಯನಾಗಿಯೂ ಶ್ರೇಷ್ಠವಾದ ಬಲವುಳ್ಳವನಾಗಿಯೂ ಜಗತ್ಸೃಷ್ಟಿಕರ್ತನಾಗಿಯೂ ಉತ್ಪನ್ನನಾಗಿದ್ದಾನೆ. ಇಂತಹ ಪೂಜಾರ್ಹನಾದ ಸೂರ್ಯನ ಅನುಗ್ರಹಾತ್ಮಕವಾದುದೂ ಕಲ್ಯಾಣಾತ್ಮಕವಾದುದೂ ಆದ ಬುದ್ಧಿಯಲ್ಲಿ ಯಜಮಾನರಾದ ನಾವು ಇರುವಂತಾಗಲಿ.

English Translation

This Mitra has been engendered adorable and to be served, the sovereign (over all), endowed with vigour, the creator (of the universe); may we ever be in the good favour, in the auspicious approbation, of this adorable (Aditya).

ವಿಶೇಷವಿಷಯಗಳು

ಮಿತ್ರಪರವಾದ ಈ ಮಂತ್ರದಲ್ಲಿ **ರಾಜಾ, ಸುಕ್ಷತ್ರಃ** ಎಂಬ ಎರಡು ವಿಶೇಷಣಗಳೂ ಮಿತ್ರನ ಗುಣಗಳನ್ನು ತಿಳಿಸುತ್ತವೆ. ದಿವ್ಯಶಕ್ತಿಯನ್ನು ಬ್ರಹ್ಮ, ಕ್ಷತ್ರ ಎಂದು ಎರಡು ವಿಧವಾಗಿ ವರ್ಣಿಸಿರುವಾಗ ಶ್ರುತಿವಾಕ್ಯಗಳಲ್ಲಿ ಮಿತ್ರನನ್ನು ಬ್ರಹ್ಮಶಕ್ತಿದ್ಯೋತಕವಾದ ದೇವನೆಂದೂ, ವರುಣನನ್ನು ಕ್ಷತ್ರಶಕ್ತಿದ್ಯೋತಕವಾದ ದೇವನೆಂದೂ ಸ್ತುತಿಸಿದೆ.

**ಕ್ರತುದಕ್ಷೌ ಹ ವಾ ಅಸ್ಯ ಮಿತ್ರಾವರುಣೌ .... .... ಸ ದಕ್ಷೋ ಮಿತ್ರ ಏವ ಕ್ರತುರ್ವರುಣೋ ದಕ್ಷೋ ಬ್ರಹ್ಮೈವ ಮಿತ್ರಃ ಕ್ಷತ್ರಂ ವರುಣೋಽಭಿಗಂತೈವ ಬ್ರಹ್ಮ ಕರ್ತಾ ಕ್ಷತ್ರಿಯಃ ॥**

(ಶ. ಬ್ರಾ. ೪-೧-೪-೧)

ಮಿತ್ರನು ಇಚ್ಛಾ (ಸಂಕಲ್ಪ) ಶಕ್ತಿಸ್ವರೂಪನು; ವರುಣನು ಕ್ರಿಯಾಶಕ್ತಿರೂಪನು. ಮಿತ್ರನು ಬ್ರಹ್ಮಸ್ವರೂಪನು, ವರುಣನು ಕ್ಷತ್ರಸ್ವರೂಪನು; ಬ್ರಹ್ಮವು ಸಂಕಲ್ಪಾತ್ಮಕವಾದ ಇಚ್ಛೆಯನ್ನೂ, ಕ್ಷತ್ರವು ಆ ಸಂಕಲ್ಪವನ್ನು ಕಾರ್ಯರೂಪಕ್ಕೆ ತರುವ ಶಕ್ತಿಯನ್ನೂ ಹೊಂದಿರುತ್ತದೆಯೆಂದು ಬ್ರಹ್ಮಕ್ಷತ್ರಗಳ ಸಂಬಂಧವನ್ನೂ, ವ್ಯತ್ಯಾಸವನ್ನೂ ತಿಳಿಸಿದೆ. ಹೀಗಿರುವಾಗ ಪ್ರಕೃತವಾದ ಋಕ್ಕಿನಲ್ಲಿ **ಸುಕ್ಷತ್ರಃ** ಎಂಬ ವಿಶೇಷಣವು **ಮಿತ್ರಪರವಾಗಿ ಹೇಗೆ ಹೊಂದಿಕೊಳ್ಳುತ್ತದೆ** ಎಂಬ ಪ್ರಶ್ನೆಗೂ ಅವಕಾಶವಿದೆ. ಆದರೆ ಸಾಯಣರು ಇಲ್ಲಿ ಕ್ಷತ್ರಶಬ್ದಕ್ಕೆ ಬಲವೆಂಬ ಅರ್ಥವೆಂದೂ **ರಾಜಾ** ಎಂಬ ವಿಶೇಷಣಕ್ಕೆ ಸ್ವಯಂಪ್ರಕಾಶ್ಯನೂ, ಜಗತ್ಪ್ರಕಾಶಕನೂ ಆದ ಜ್ಯೋತೀರೂಪನೆಂದೂ ತಾತ್ಪರ್ಯವನ್ನು ಹೇಳಿದ್ದಾರೆ.

CC-0. Jangamwadi Math Collection. Digitized by eGangotri

ಆದರೆ ಕ್ಷತ್ರಶಬ್ದಕ್ಕೆ ಕೇವಲ ಭೌತಿಕಶಕ್ತಿಯೆಂದರ್ಥವಲ್ಲ. ಇತರ ವಿಶೇಷಣಗಳೊಡನೆ ಇದನ್ನೂ ಸೇರಿಸಿರುವುದರಿಂದ ಮಿತ್ರನ ಅಸಾಧಾರಣವಾದ ಗುಣಗಳನ್ನು ತಿಳಿಸುತ್ತದೆ. ಮಿತ್ರನೆಂದರೆ ಇಲ್ಲಿ ಮಿತ್ರಾತ್ಮಕನಾದ ಆದಿತ್ಯನೆಂದರ್ಥ.

> ದೈವಂ ಕ್ಷತ್ರಂ ಯೋಚೇದಿತ್ಯಾಹುರಾದಿತ್ಯೋ ವೈ ದೈವಂ ಕ್ಷತ್ರಮಾದಿತ್ಯ ಏಷಾಂ ಭೂತಾನಾಮಧಿಪತಿಃ ॥
>
> (ಐ. ಬ್ರಾ. ೭-೨೦)

ಜಗಚ್ಚಕ್ಷುವಾದ ಈ ಆದಿತ್ಯನೇ ಕ್ಷತ್ರದ ಸತ್ವವು. ಈ ಮಹಿಮೆಯನ್ನು ಉಪಾಸನಮಾಡುವುದರಿಂದ ಯಜ್ಞಕರ್ತನು ಕ್ಷತ್ರರೂಪದ ಆದಿತ್ಯಶಕ್ತಿಯ ರಕ್ಷಣೆಯಿಂದ ತಾನೂ ಪ್ರಭುತ್ವವನ್ನು ಪಡೆಯುತ್ತಾನೆ ಎಂದು ಆದಿತ್ಯನ ಸ್ವರೂಪವನ್ನು ಸ್ತುತಿಸಿದೆ. ಈ ಕ್ಷತ್ರದ ಶಕ್ತಿಯು ಬ್ರಹ್ಮವನ್ನೂ ರಕ್ಷಿಸುವ ಶಕ್ತಿಯಿದೆ.

> ಕ್ಷತ್ರಂ ತದಪಿ ವಿಜ್ಞೇಯಂ ಬ್ರಹ್ಮ ಯತ್ಪಾತಿ ಶಾಶ್ವತಂ ।
>
> (ಬೃ. ದೇ. ೫-೧೨೬)

ಶಾಶ್ವತವಾದ ಬ್ರಹ್ಮವನ್ನು ರಕ್ಷಿಸುವ ಶಕ್ತಿಯು ಯಾವುದಕ್ಕಿದೆಯೋ ಅದೇ ಕ್ಷತ್ರವೆಂದು ಪ್ರಸಿದ್ಧವಾಗಿದೆ. ಈ ಮಹಚ್ಛಕ್ತಿಯಿಂದಲೇ ಇತರ ಸಕಲ ಶಕ್ತಿಗಳೂ ರಕ್ಷಿಸಲ್ಪಡಬೇಕು.

> ತಸ್ಮಾಕ್ಷತ್ರಾತ್ಪರಂ ನಾಸ್ತಿ ತಸ್ಮಾದ್ಬ್ರಾಹ್ಮಣಃ ಕ್ಷತ್ರಿಯಮಧಸ್ತಾತ್ ಉಪಾಸ್ತೇ ।
>
> (ಬೃ. ಉ. ೧-೪-೧೧)

ಆದುದರಿಂದಲೇ ರಾಜಸೂಯಾದಿಗಳಲ್ಲಿ ಬ್ರಾಹ್ಮಣನೂ ಸಹ ಕ್ಷತ್ರಿಯನಿಗಿಂತ ಕೆಳಗಿನ ಸ್ಥಾನದಲ್ಲಿಯೇ ಕುಳಿತುಕೊಳ್ಳುತ್ತಾನೆ. ಇದು ದೈವೀಶಕ್ತಿಯು.

> ತಚ್ಛ್ರೇಯೋರೂಪಮತ್ಯಸೃಜತ ಧರ್ಮಂ ತದೇತತ್ಕ್ಷತ್ರಸ್ಯ ಕ್ಷತ್ರಂ ಯದ್ಧರ್ಮಸ್ತಸ್ಮಾದ್ಧರ್ಮಾತ್ಪರಂ ।
>
> (ಬೃ. ಉ ೧-೪-೨೪)

ಈ ಕ್ಷತ್ರಶಕ್ತಿಯೇ ವಿಶ್ವನಿಯಮನರೂಪವು. ವಿಶ್ವಧರ್ಮವೇ ಇದಾದುದರಿಂದ ಇದರ ರಕ್ಷಣೆಯನ್ನು ಪಡೆದವನು ದುರ್ಬಲನಾದರೂ ಸಹ ಪ್ರಬಲನೊಂದಿಗೆ ಸಾಮ್ಯರಕ್ಷಣೆಯನ್ನು ಹೊಂದಬಹುದು. ಈ ಕ್ಷತ್ರವೇ ಸತ್ಯಸ್ವರೂಪವು. ಯಾವುದು ಕ್ಷತ್ರವೋ ಅದೇ ಧರ್ಮವು. ಯಾವುದು ಧರ್ಮವೋ ಅದೇ ಕ್ಷತ್ರವು. ಆದುದರಿಂದ ಲೋಕದ ಶ್ರೇಯಸ್ಸಿಗೆ ಕಾರಣವಾದ ಈ ಕ್ಷತ್ರವು ಆದಿತ್ಯನ ವಿಶ್ವನಿಯಮನದ ಶಕ್ತಿಯನ್ನೂ, ಶ್ರೇಯಸ್ಸನ್ನುಂಟುಮಾಡತಕ್ಕದ್ದೆಂದೂ, ನೀತಿಪಾಲಕವೆಂದೂ ವರ್ಣಿತವಾಗಿದೆ. ನೈತಿಕವ್ಯವಹಾರದಲ್ಲಿ ಅತ್ಯಾದರವಿರುವುದರಿಂದಲೇ ಪ್ರಕೃತವಾದ ಮಂತ್ರದಲ್ಲಿ—ಭದ್ರೇ ಸೌಮನಸೇ ಸ್ಯಾಮ ಎಂದು ಶ್ರೇಷ್ಠವಾದ ವ್ಯವಹಾರಕ್ಕೆ ಬೇಕಾದ ಶುದ್ಧಬುದ್ಧಿಯನ್ನು ಅಪೇಕ್ಷಿಸಿ ಪ್ರಾರ್ಥಿಸಲ್ಪಟ್ಟಿದೆ. ಆದುದರಿಂದ ಕ್ಷತ್ರಪದವು ಮಿತ್ರಶಬ್ದಕ್ಕೆ ವಿಶೇಷಣವಾಗಿರುವಾಗಲೆಲ್ಲಾ ಈ ತಾತ್ಪರ್ಯವನ್ನೇ ಹೇಳಬೇಕು.

> ಮಿತ್ರಃ ಕ್ಷತ್ರಂ ಕ್ಷತ್ರಪತಿಃ । ಕ್ಷತ್ರಮಸ್ಮಿನ್ಯಜ್ಞೇ ಮಯಿ ದಧಾತು ।
>
> (ಶ. ಬ್ರಾ. ೧೧-೪-೩-೧೦)

CC-0. Jangamwadi Math Collection. Digitized by eGangotri

ಇತ್ಯಾದಿ ವಾಕ್ಯಗಳಲ್ಲೆಲ್ಲಾ ಮಿತ್ರನನ್ನು ಕ್ಷತ್ರಪತಿಯೆಂದು ಕರೆದಿರುವುದೂ ಸಹ ಈ ಅರ್ಥದಲ್ಲೇ. ಜಗತ್ಪ್ರಕಾಶಕನಾದುದರಿಂದ ರಾಜಾ ಎಂಬ ವಿಶೇಷಣವೂ ಇರುತ್ತದೆ. ಈ ವಿಶೇಷಣವು ಮಿತ್ರರೂಪನಾದ ಆದಿತ್ಯನ ಜಗತ್ಪ್ರಭುತ್ವವನ್ನೂ ತಿಳಿಸುತ್ತದೆ.

ಅಸಾವಾದಿತ್ಯ ಏಕವಿಗ್‌ಂಶಸ್ತದ್ದೈವಂ ಕ್ಷತ್ರಗ್‌ಂ ಸಾ ಶ್ರೀಸ್ತದಾಧಿಪತ್ಯಂ ತದ್ಬ್ರಧ್ನಸ್ಯ ವಿಷ್ಟಪಂ ತತ್ಸ್ವಾರಾಜ್ಯಮಶ್ನುತೇ ॥

(ಶ. ಬ್ರಾ. ೧೩-೧-೭-೩)

ಅಂತರಿಕ್ಷದಲ್ಲಿ ಪ್ರಕಾಶಿಸುವ ಈ ದಿವ್ಯಪ್ರಭುವೇ ಕ್ಷತ್ರರೂಪದ ಶಕ್ತಿಯು. ಲೋಕಪ್ರಕಾಶಕವೂ, ಲೋಕಕ್ಕೆ ಶ್ರೇಯಃಕಾರಕವೂ ಆದ ಈ ಪ್ರಭಾರೂಪವಾದ ಆದಿತ್ಯನ ಉಪಾಸನವನ್ನು ಮಾಡುವುದರಿಂದ ಪ್ರಭಾಯುತವಾದ ಸ್ವರಾಜ್ಯವು ಲಭಿಸುತ್ತದೆ ಇತ್ಯಾದಿಯಾಗಿ ವರ್ಣಿತವಾಗಿರುವ ಆದಿತ್ಯನ ಸ್ವರೂಪವು ಪ್ರಕೃತವಾದ ಋಕ್ಕಿನಲ್ಲಿಯೂ ವರ್ಣಿತವಾಗಿ ಅವನ ಅನುಗ್ರಹದಿಂದ ಲಭಿಸತಕ್ಕ ಸೌಮನಸ್ಯವನ್ನೂ ಕಲ್ಯಾಣಕಾರಕವಾದ ಸದ್ಬುದ್ಧಿಯನ್ನೂ ಪ್ರಾರ್ಥಿಸಿದೆ.

———....———

ಸಂಹಿತಾಪಾಠಃ

ಮಹಾಁ ಆದಿತ್ಯೋ ನಮಸೋಪಸದ್ಯೋ ಯಾತಯಜ್ಜನೋ ಗೃಣತೇ ಸುಶೇವಃ ।

ತಸ್ಮಾ ಏತತ್ಪನ್ಯತಮಾಯ ಜುಷ್ಟಮಗ್ನೌ ಮಿತ್ರಾಯ ಹವಿರಾ ಜುಹೋತ ॥

ಪದಪಾಠಃ

ಮಹಾನ್ । ಆದಿತ್ಯಃ । ನಮಸಾ । ಉಪಽಸದ್ಯಃ । ಯಾತಯತ್ಽಜನಃ । ಗೃಣತೇ । ಸುಽಶೇವಃ ।

ತಸ್ಮೈ । ಏತತ್ । ಪನ್ಯಽತಮಾಯ । ಜುಷ್ಟಂ । ಅಗ್ನೌ । ಮಿತ್ರಾಯ । ಹವಿಃ । ಆ । ಜುಹೋತ ॥ ೫ ॥

ಸಾಯಣಭಾಷ್ಯಂ

ಯೋಽಯಮಾದಿತ್ಯೋ ಮಹಾನ್ ಅತ ಏವ ನಮಸಾ ನಮಸ್ಕಾರೇಣೋಪಸದ್ಯಃ ಸರ್ವೈರುಪಸದನೀಯೋ ಯಾತಯಜ್ಜನಃ । ಪ್ರಾತಃ ಪ್ರಾತಃ ಸ್ವಸ್ವಕರ್ಮಣಿ ಪ್ರವರ್ತನೀಯಾ ಜನಾ ಯೇನೇತಿ ಸ ತಥೋಕ್ತಃ । ಗೃಣತೇ ಸ್ತೋತ್ರಂ ಕುರ್ವತೇ ಜನಾಯ ಸುಶೇವಶ್ಚ ಭವತಿ ತಸ್ಮೈ ಪನ್ಯತಮಾಯ ಸ್ತುತ್ಯತಮಾಯ ಮಿತ್ರಾಯಾದಿತ್ಯಾಯ ಜುಷ್ಟಂ ಪ್ರೀತಿವಿಷಯಮೇತದ್ಧವಿರಗ್ನಾವಾ ಜುಹೋತ । ಜುಹುತ ॥ ಯಾತಯಜ್ಜನಃ । ಯತೀ ಪ್ರಯತ್ನೇ ಇತ್ಯಸ್ಯ ಣ್ಯಂತಸ್ಯ ಶತರಿ ರೂಪಂ । ಬಹುವ್ರೀಹೌ ಪೂರ್ವಪದ-



CC-0. Jangamwadi Math Collection. Digitized by eGangotri

ಪ್ರಕೃತಿಸ್ವರೇ ಪ್ರಾಪ್ತೇ ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಗೃಣತೇ । ಗೄ ಶಬ್ದೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಪನ್ಯತಮಾಯ । ಪನತೇರಘ್ನ್ಯಾದಿತ್ವಾದ್ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಜುಷ್ಟಂ । ನಿತ್ಯಂ ಮಂತ್ರ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಆದಿತ್ಯಃ—ಆದಿತ್ಯನು । ಮಹಾನ್—ಮಹತ್ಸ್ವರೂಪವುಳ್ಳವನಾಗಿಯೂ । ನಮಸಾ—ನಮಸ್ಕಾರಪೂರ್ವಕವಾಗಿ । ಉಪಸದ್ಯಃ—ಸಮೀಪಿಸಲ್ಪಡುವವನಾಗಿಯೂ । ಯಾತಯಜ್ಜನಃ—ಜನರನ್ನು ಅವರವರ ಕರ್ಮಕ್ಕೆ ಪ್ರೇರಿಸುವವನಾಗಿಯೂ । ಗೃಣತೇ—ಸ್ತುತಿಕರ್ತನಾದ ಯಜಮಾನನಿಗೆ । ಸುಶೇವಃ—ಸುಖಕಾರಕನಾಗಿಯೂ ಇದ್ದಾನೆ । ಪನ್ಯತಮಾಯ—ಸ್ತುತ್ಯತಮನೂ । ಮಿತ್ರಾಯ—ಮಿತ್ರರೂಪನೂ ಆದ । ತಸ್ಮೈ—ಆ ಆದಿತ್ಯನನ್ನುದ್ದೇಶಿಸಿ । ಜುಷ್ಟಂ—ಪ್ರೀತಿಯಿಂದ ಸೇವಿಸಲು ಯೋಗ್ಯವಾದ । ಏತತ್ ಹವಿಃ—ಈ ಹವಿಸ್ಸನ್ನು । ಅಗ್ನೌ—ಅಗ್ನಿಯಲ್ಲಿ । ಆ ಜುಹೋತ—ಆಹುತಿರೂಪದಿಂದ ಅರ್ಪಿಸಿರಿ.

ಭಾವಾರ್ಥ

ಆದಿತ್ಯನು ಮಹತ್ಸ್ವರೂಪವುಳ್ಳವನಾಗಿಯೂ, ನಮಸ್ಕಾರಪೂರ್ವಕವಾಗಿ ಸಮೀಪಿಸಲ್ಪಡುವವನಾಗಿಯೂ, ಜನರನ್ನು ಅವರವರ ಕರ್ಮಕ್ಕೆ ಪ್ರೇರಿಸುವವನಾಗಿಯೂ, ಸ್ತುತಿಕರ್ತನಾದ ಯಜಮಾನನಿಗೆ ಸುಖಕಾರಕನಾಗಿಯೂ ಇದ್ದಾನೆ. ಸ್ತುತ್ಯತಮನೂ, ಮಿತ್ರರೂಪನೂ ಆದ ಈ ಆದಿತ್ಯನನ್ನುದ್ದೇಶಿಸಿ ಪ್ರೀತಿಯಿಂದ ಸೇವಿಸಲು ಯೋಗ್ಯವಾದ ಈ ಹವಿಸ್ಸನ್ನು ಆಹುತಿರೂಪದಿಂದ ಅರ್ಪಿಸಿರಿ.

English Translation

The great Aditya, the animator of men to exertion, is to be approached with reverence: he is the giver of happiness to him who praises him: offer with fire the acceptable libation to that most glorifiable Mitra.

ವಿಶೇಷವಿಷಯಗಳು

ಅಭಿಪ್ಲವನೆಂಬ ಯಾಗದ ಐದನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರ ಪಠನಮಾಡುವಾದ ಈ ಸೂಕ್ತದ ಇಂದ್ರ ಋಭುಭಿಃ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಋಭುದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-ಘೃತವತೀ ಭುವನಾನಾಮಭಿಶ್ರಿಯೇಂದ್ರ ಋಭುಭಿರ್ವಾಜವದ್ಭಿರಿತಿ ತೇಷಾ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭ ೭) ಮತ್ತು ಈ ಸೂಕ್ತದ ಮೊದಲನೆಯ ಋಕ್ಕನ್ನು ತೃತೀಯಸವನದಲ್ಲಿ ಹೋತೃವು ಪಠಿಸುವ ಪ್ರಸ್ಥಿತಯಾಜ್ಯಾಮಂತ್ರನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಸೂತ್ರದ-ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತೆಮಿಂದ್ರಾವರುಣಾ ಸುತಪಾವಿಮಂ ಸುತಂ ಎಂಬ ಸೂತ್ರದಿಂದ (ಆ. ೫-೫) ವಿವೃತನಾಗಿರುವುದು.

ಜಗತ್ಪ್ರೇರಕನಾದ ಆದಿತ್ಯನ ಪೂಜ್ಯತೆಯನ್ನು ಈ ಋಕ್ಕಿನಲ್ಲಿ ಸ್ತುತಿಸಿದೆ. ಆದುದರಿಂದಲೇ ಪನ್ಯತಮಾಯ ಎಂಬ ವಿಶೇಷಣದಿಂದ ವರ್ಣಿತನಾಗಿದ್ದಾನೆ.

CC-0. Jangamwadi Math Collection. Digitized by eGangotri

ಪನ್ಯತಮಾಯ— ಸ್ತುತ್ಯತಮಾಯ । ಸ್ತುತ್ಯರಲ್ಲಿ ಅತ್ಯಂತಶ್ರೇಷ್ಠನಾದವನೂ, ಮಿತ್ರರೂಪನೂ ಆದ ಆದಿತ್ಯನಿಗೆ ಪನಸ್ಯತಿ, ಪನಾಯತೇ ಎಂಬ ಪದಗಳು ಅರ್ಚತಿಕರ್ಮನಾಮಗಳಲ್ಲಿ ಪಠಿತವಾಗಿವೆ. (ನಿ. ೩-೧೪) ಅಭೀಶೂನಾಂ ಮಹಿಮಾನಂ ಪನಾಯತ (ಋ. ಸಂ. ೬-೭೫-೬) ಇತ್ಯಾದ್ಯುದಾಹರಣಗಳೊಂದಿಗೆ ಹಿಂದೆ ಪನಿತಾರಃ, ವಿಪನ್ಯವಃ ಇತ್ಯಾದಿ ಪದಗಳ ತಾತ್ಪರ್ಯವನ್ನು ವಿವರಿಸಿದೆ. ಪೂಜ್ಯತೆಯನ್ನು ತಿಳಿಸುವ ಪದಗಳಾಗಿವೆ. ಪ್ರಕೃತದಲ್ಲಿಯೂ ಆದಿತ್ಯನ ಪೂಜ್ಯತೆಯನ್ನು ಸೂಚಿಸುತ್ತದೆ.

ಸುಶೇವಃ— ಶೇವಶಬ್ದವು ಸುಖನಾಮಗಳಲ್ಲಿ ಪಠಿತವಾಗಿದೆ. (ನಿ. ೩-೬) ಪ್ರೀತಿಪಾತ್ರವಾದುದೂ, ಸುಖವನ್ನುಂಟುಮಾಡತಕ್ಕದ್ದು ಇತ್ಯಾದ್ಯರ್ಥಗಳಲ್ಲಿ ಈ ಪದದ ಪ್ರಯೋಗವಿದೆ.

ನ ಹಿ ಗ್ರಭಾಯಾರಣಃ ಸುಶೇವೋಽನ್ಯೋದರ್ಯಃ (ಋ. ಸಂ. ೭-೪-೮) ಇತರರ ಹೊಟ್ಟೆಯಲ್ಲಿ ಹುಟ್ಟಿದವನು ಸುಶೇವನಾದರೂ ಸ್ವೀಕೃತನಾಗಲು ಅರ್ಹನಲ್ಲ ಎಂಬ ಈ ವಾಕ್ಯದಲ್ಲಿ ಸಂತೋಷಕಾರಕನೆಂಬರ್ಥ.

ಪ್ರತಿ ಮೇ ಸ್ತೋಮಮದಿತಿರ್ಜಗೃಭ್ಯಾತ್ ಸೂನುಂ ನ ಮಾತಾ ಹೃದ್ಯಂ ಸುಶೇವಂ ।
(ಋ. ಸಂ. ೫-೪೨-೨)

ಉಪಸರ್ಪ ಮಾತರಂ ಭೂಮಿಮೇತಾಮುರುವ್ಯಚಸಂ ಪೃಥಿವೀಂ ಸುಶೇವಾಂ ॥
(೧೦-೧೮-೧೦)

ಇತ್ಯಾದಿ ಸ್ಥಳಗಳಲ್ಲಿ ಅತ್ಯಂತಪ್ರೀತಿಪಾತ್ರವಾದ ಎಂಬರ್ಥದಲ್ಲಿ ಪ್ರಯೋಗಿಸಿದೆ. ಇವುಗಳಲ್ಲಿ ಮೊದಲನೆಯ ಉದಾಹರಣೆಯಲ್ಲಿ ಮಾತೆಯು ಸುಶೇವನಾದ ಸೂನುವನ್ನು ಆಲಂಗಿಸುವಂತೆ ಎನ್ನುವಾಗ ಮಾತೃಪುತ್ರ ಸಂಬಂಧವನ್ನೂ, ಎರಡನೆಯ ಉದಾಹರಣೆಯಲ್ಲಿ ಸುಶೇವಳಾದ ಪೃಥಿವಿಯನ್ನು ಎನ್ನುವಾಗ ಮಾತರಂ ಎಂಬ ವಿಶೇಷಣವಿರುವುದರಿಂದ ಪುತ್ರರಿಗೂ, ಮಾತೃವಿಗೂ ಇರುವ ಸಂಬಂಧವನ್ನೂ ತಿಳಿಸುತ್ತದೆ. ಹೃದ್ಯವಾದ, ರಮ್ಯವಾದ, ಸಂತೋಷಜನಕವಾದ ವಸ್ತುಗಳನ್ನು ವರ್ಣಿಸುವಾಗ ಈ ವಿಶೇಷಣವಿರುತ್ತದೆ. ಇವುಗಳ ನಿಷೇಧಾರ್ಥವನ್ನು ತೋರಿಸುವಾಗಲೂ ಸಹ ಇದರ ಪ್ರಯೋಗವನ್ನು ನೋಡಬಹುದು. ಉದಾಹರಣೆಗೆ, ಅತ್ರಾ ಜಹಾಮ ಯೇ ಅಸನ್ನಶೇವಾಃ (೧೦-೫೩-೮) ನಾವು ನಮಗೆ ಬೇಡದಿರುವವರನ್ನೆಲ್ಲಾ ಇಲ್ಲೇ ಬಿಟ್ಟುಬಿಡುತ್ತೇವೆ ಎಂಬಲ್ಲಿ ಅಶೇವಪದಕ್ಕೆ ಅನಾದರಣೀಯವೆಂದರ್ಥವಾಗುತ್ತದೆ.

ವ್ಯೇತು ದಿದ್ಯುದ್ದ್ವಿಷಾಮಶೇವಾ ಯುಯೋತ ವಿಷ್ವಗ್ರಪಸ್ತನೂನಾಂ ।
(ಋ. ಸಂ. ೭-೩೪-೧೩)

ಶತ್ರುಗಳ ಈ ಆಯುಧವು ಅಥವಾ ಆಯುಧದಂತೆ ಹಿಂಸಾಕಾರಕವಾದ ಈ ದಾರಿದ್ರ್ಯವು ಅಶೇವವಾದುದರಿಂದ ನಮ್ಮಿಂದ ದೂರವಾಗಿರಲಿ ಎಂದರೆ ನಾಶವಾಗಲಿ ಎಂಬಲ್ಲಿ ಅಶೇವಶಬ್ದಕ್ಕೆ ಅಸುಖಕಾರಿ, ಹಿಂಸಾಕಾರಿ ಎಂಬರ್ಥವಿರುತ್ತದೆ. ಹೀಗೆ ಸುಶೇವ ಮತ್ತು ಅಶೇವ ಎಂಬ ಪದಗಳ ಪ್ರಯೋಗಗಳಿವೆ.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಮಿತ್ರಸ್ಯ ಚರ್ಷಣೀಧೃತೋಽವೋ ದೇವಸ್ಯ ಸಾನಸಿ ।

ದ್ಯುಮ್ನಂ ಚಿತ್ರಶ್ರವಸ್ತಮಂ ॥ ೬ ॥

ಪದಪಾಠಃ

ಮಿತ್ರಸ್ಯ । ಚರ್ಷಣಿಽಧೃತಃ । ಅವಃ । ದೇವಸ್ಯ । ಸಾನಸಿ ।

ದ್ಯುಮ್ನಂ । ಚಿತ್ರಶ್ರವಃಽತಮಂ ॥ ೬ ॥

ಸಾಯಣಭಾಷ್ಯಂ

ಅಭಿಪ್ಲವಷಡಹೇ ದಶರಾತ್ರೇ ಚ ಸಪ್ತದಶೈಕವಿಂಶಾದಿಸ್ತೋಮೇ ಸತಿ ಹೋತ್ರಾದಿಕಶಸ್ತ್ರೇಷ್ವಾ-ವಾಪಸ್ಥಾನೇ ಪಂಚಸಪ್ತಾದಿಸಂಖ್ಯಾಕಾ ಋಚ ಆವಪನೀಯಾಃ । ತತ್ರ ಮೈತ್ರಾವರುಣಶಸ್ತ್ರೇ ಮಿತ್ರಸ್ಯ ಚರ್ಷಣೀಧೃತ ಇತ್ಯಾದ್ಯಾಶ್ಚತಸ್ರ ಆವಾಪಾರ್ಥಾಃ । ಸೂತ್ರಿತಂ ಚ । ಮಿತ್ರಸ್ಯ ಚರ್ಷಣೀಧೃತ ಇತಿ ಚತಸ್ರೋ ಮೈತ್ರ್ಯಃ । ಆ. ೭-೫ । ಇತಿ ॥

ಚರ್ಷಣೀಧೃತೋ ಮನುಷ್ಯಾಣಾಂ ವೃಷ್ಟಿಪ್ರದಾನೇನ ಧಾರಕಸ್ಯ ಮಿತ್ರಸ್ಯ ದೇವಸ್ಯ ಸಂಜಂಧ್ಯ-ವೋಽನ್ನಂ ಸಾನಸಿ ಸರ್ವೈಃ ಸಂಭಜನೀಯಂ ದ್ಯುಮ್ನಂ ತದೀಯಂ ಧನಂ ಚ ಚಿತ್ರಶ್ರವಸ್ತಮಂ । ಅತಿ-ಶಯೇನ ಚಾಯನೀಯಕೀರ್ತಿಯುಕ್ತಂ ॥ ಸಾನಸಿ । ಸನೋತೇಃ ಸಾನಸಿಪರ್ಣಸೀತ್ಯಾದಿನಾಸಿಚ್ಪ್ರತ್ಯ-ಯಾಂತತ್ವೇನ ನಿಪಾತನಾದುಪಧಾವೃದ್ಧಿಃ । ಚಿತ್ತ್ವಾದಂತೋದಾತ್ತಃ । ಸ್ವನೋರಿತಿ ಸ್ವನೋರ್ಲುಕ್ ॥

ಪ್ರತಿಪದಾರ್ಥ

ಚರ್ಷಣೀಧೃತಃ—ವೃಷ್ಟಿಪ್ರದಾನದಿಂದ ಸಕಲಪ್ರಜೆಗಳನ್ನೂ ಧರಿಸುವವನೂ । ದೇವಸ್ಯ—ದೇವತಾತ್ಮನೂ ಆದ । ಮಿತ್ರಸ್ಯ—ಮಿತ್ರನ । ಅವಃ—ಅನ್ನವೂ । ಸಾನಸಿ—ಸಕಲರಿಂದಲೂ ಆದೃತವಾದ। ದ್ಯುಮ್ನಂ—ಧನವೂ। ಚಿತ್ರಶ್ರವಸ್ತಮಂ—ಅತಿಶಯವಾದ ಕೀರ್ತಿಗೆ ಪಾತ್ರವಾಗಿದೆ ।

ಭಾವಾರ್ಥ

ವೃಷ್ಟಿಪ್ರದಾನದಿಂದ ಸಕಲಪ್ರಜೆಗಳನ್ನೂ ಧರಿಸುವವನೂ, ದೇವತಾತ್ಮನೂ ಆದ ಮಿತ್ರನ ಅನ್ನವೂ, ಸಕಲ ರಿಂದಲೂ ಆದೃತವಾದ ಧನವೂ ಸಹ ಅತಿಶಯವಾದ ಕೀರ್ತಿಗೆ ಪಾತ್ರವಾಗಿದೆ.

English Translation

Desirable food and most renowned wealth are (the gifts) of the divine Mitra, the supporter of man

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಅಭಿಪ್ಲವಷಡಹ ಮತ್ತು ದಶರಾತ್ರವೆಂಬ ಯಾಗಗಳಲ್ಲಿ ಸಪ್ತದಶಸ್ತೋಮ ಮತ್ತು ಏಕವಿಂಶಸ್ತೋಮಗಳನ್ನು ಪಠಿಸುವಾಗ ಹೋತೃವರ್ಗದ ಋತ್ವಿಕ್ಕುಗಳು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಐದು, ಏಳು ಮೊದಲಾದ ಸಂಖ್ಯಾ ಯುಕ್ತವಾದ ಋಕ್ಕುಗಳನ್ನು ಆವಪನೀಯಮಂತ್ರಗಳಾಗಿ ಪಠಿಸುವರು. ಆಗ ಮೈತ್ರಾವರುಣನೆಂಬ ಋತ್ವಿಜನು ಶಸ್ತ್ರಮಂತ್ರವನ್ನು ಪಠಿಸುವಾಗ **ಮಿತ್ರಸ್ಯ ಚರ್ಷಣೀಧೃತಃ** ಎಂದು ಮೊದಲಾಗುವ ನಾಲ್ಕು ಋಕ್ಕುಗಳನ್ನು (ಈ ಸೂಕ್ತದ ೬, ೭, ೮, ೯ ನೆಯ ಋಕ್ಕುಗಳನ್ನು) ಆವಾಪಾರ್ಥವಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ–**ಮಿತ್ರಸ್ಯ ಚರ್ಷಣೀಧೃತ ಇತಿ ಚತಸ್ರೋ ಮೈತ್ರ್ಯಃ** ಎಂಬ ಸೂತ್ರದಿಂದ (ಆ. ೭–೫) ವಿವೃತ ವಾಗಿರುವುದು.

**ಚರ್ಷಣೀಧೃತಃ** ಎಂಬ ವಿಶೇಷಣದಿಂದ ವಿಶ್ವಾಧಾರನಾದ ಮಿತ್ರನು ಸ್ತುತನಾಗಿದ್ದಾನೆ. ಈ ವಿಶೇಷವಾದ ಮಹತ್ತ್ವವೇನೆಂಬುದನ್ನು ಪರಿಶೀಲಿಸಿದರೆ ಮಿತ್ರನ ಎಂದರೆ ಮಿತ್ರ ರೂಪವಾದ ಆದಿತ್ಯನ ಪ್ರಭಾವವು ತಿಳಿಯುತ್ತದೆ. ಈ ಋಕ್ಕಿನಲ್ಲಿ **ಚರ್ಷಣೀಧೃತಃ** ಎಂಬ ಪದಕ್ಕೆ ಸಾಯಣರು **ಮನುಷ್ಯಾಣಾಂ ಧಾರಕಸ್ಯ** । ಮಾನವರನ್ನು ಎತ್ತಿಹಿಡಿದಿರುವ ಎಂಬರ್ಥವೆಂದು ತಿಳಿಸಿದ್ದಾರೆ. ಹಿಂದೆ **ಪಂಚಕೃಷ್ಟಯಃ, ಪಂಚಜನಾಃ** ಇತ್ಯಾದಿ ಪದಗಳ ತಾತ್ಪರ್ಯವನ್ನು ವಿವರಿಸುವಾಗ ಐತರೇಯಬ್ರಾಹ್ಮಣ, ಬೃಹದ್ದೇವತಾ ಇತ್ಯಾದ್ಯಾಧಾರಗ್ರಂಥಗಳ ವಾಕ್ಯಗಳನ್ನುದಾ ಹರಿಸಿ ಈ ಪದಕ್ಕೆ ಕೇವಲ ಪಾರ್ಥಿವವಾದ ಮಾನವರೆಂದೇ ಅರ್ಥವಲ್ಲ, ಈ ಪದಗಳು ದೇವಮಾನವಾದಿಗಳೆಲ್ಲರನ್ನೂ ಸೇರಿಸಿ ಒಳಗೊಂಡಿರುವ ಪದಗಳಾಗಿವೆ ಯೆಂಬುದನ್ನು ತಿಳಿಸಿದೆ. **"ಗಂಧರ್ವಾಃ ಪಿತರೋ ದೇವಾಃ...."** (ಬೃ. ದೇ. ೭–೬೮) ಅಥವಾ **ಚಕ್ಷುಃಶ್ರೋತ್ರಂ ಮನೋ ವಾಕ್** (೭–೬೭) ಇತ್ಯಾದಿ ವಾಕ್ಯಗಳಿಂದ ಈ ವಿಸ್ತೃತ ವಾದ ಅರ್ಥವು ನಿಷ್ಕೃಷ್ಟವಾಗಿದೆ. (ಋಗ್ವೇದಸಂಹಿತೆ. ಭಾಗ. ೧೨. ಪುಟ. 378–381). ಋಕ್ಸಂಹಿತೆ ಯಲ್ಲಿಯೂ ಸಹ **ಪಂಚ ಜನಾ ಮಮ ಹೋತ್ರಂ ಜುಷಂತಾಂ** (ಋ. ಸಂ. ೧೦–೫೩–೫) ಇತ್ಯಾದಿ ವಾಕ್ಯಗಳು **ದೇವಾದಯಃ** ಎಂಬರ್ಥವನ್ನೇ ಸಮರ್ಥಿಸುತ್ತವೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿ ಮಿತ್ರನ ಸಕಲ ವಿಶ್ವಧಾರಕತ್ವವೂ **ಚರ್ಷಣೀಧೃತಃ** ಎಂಬ ಪದದಿಂದ ಸೂಚಿತವಾಗುತ್ತದೆ.



ಸಂಹಿತಾಪಾಠಃ

**ಅಭಿ ಯೋ ಮಹಿನಾ ದಿವಂ ಮಿತ್ರೋ ಬಭೂವ ಸಪ್ರಥಾಃ ।**

**ಅಭಿ ಶ್ರವೋಭಿಃ ಪೃಥಿವೀಂ ॥ ೭ ॥**

ಪದಪಾಠಃ

**ಅಭಿ । ಯಃ । ಮಹಿನಾ । ದಿವಂ । ಮಿತ್ರಃ । ಬಭೂವ । ಸऽಪ್ರಥಾಃ ।**

**ಅಭಿ । ಶ್ರವಃऽಭಿಃ । ಪೃಥಿವೀಂ ॥ ೭ ॥**

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

**ಪ್ರಾತರ್ಹೋಮಸ್ಯ ಕಾಲಾತ್ಯಯೇ ಮೈತ್ರೇಷ್ಟಿಃ । ತಸ್ಯಾಮಭಿ ಯೋ ಮಹಿನೇತ್ಯನುವಾಕ್ಯಾ । ಸೂತ್ರಿತಂ ಚ । ಅಭಿ ಯೋ ಮಹಿನಾ ದಿವಂ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್ । ಆ. ೩-೧೨ । ಇತಿ ॥**

**ಯೋ ಮಿತ್ರೋ ಮಹಿನಾ ಸ್ವಕೀಯೇನ ಮಹಿಮ್ನಾ ದಿವಮುಂತರಿಕ್ಷಮಭಿ ಬಭೂವಾಭಿಭವತಿ ಸ ಮಿತ್ರಃ ಸಪ್ರಥಾಃ ಪ್ರಥಃ ಪ್ರಸಿದ್ಧಿಃ ಕೀರ್ತಿಃ । ತತ್ಸಹಿತಃ ಶ್ರವೋಭಿರ್ವೃಷ್ಟಿದ್ವಾರೋತ್ಪಾದಿತೈರನ್ನೈಃ ಪೃಥಿವೀಮಪ್ಯಭಿಭವತಿ । ಬಹ್ವನ್ನಯುಕ್ತಾಂ ಕರೋತೀತ್ಯರ್ಥಃ ॥ ಸಪ್ರಥಾಃ । ಪ್ರಥ ಪ್ರಖ್ಯಾನೇ । ಅಸುನ್ । ವೋಪಸರ್ಜನಸ್ಯೇತಿ ಸಹಸ್ಯ ಸಭಾವಃ ॥**

ಪ್ರತಿಪದಾರ್ಥ

**ಯಃ**—ಯಾವ । **ಮಿತ್ರಃ**—ಮಿತ್ರನು । **ಮಹಿನಾ**—ತನ್ನ ಮಹಾತ್ಮ್ಯದಿಂದ । **ದಿವಂ**—ಅಂತರಿಕ್ಷವನ್ನು । **ಅಭಿ ಬಭೂವ**—ಆಕ್ರಮಿಸಿ ವ್ಯಾಪ್ತನಾಗಿದ್ದಾನೆಯೋ (ಅದೇ ಮಿತ್ರನು) । **ಸಪ್ರಥಾಃ**—ಕೀರ್ತಿಯುಕ್ತನಾಗಿಯೂ। **ಶ್ರವೋಭಿಃ**—ಅನ್ನಯುಕ್ತನಾಗಿಯೂ । **ಪೃಥಿವೀಂ**—ಪೃಥಿವಿಯನ್ನೂ ವ್ಯಾಪಿಸಿದ್ದಾನೆ.

ಭಾವಾರ್ಥ

ಮಿತ್ರನು ತನ್ನ ಮಾಹಾತ್ಮ್ಯದಿಂದ ಅಂತರಿಕ್ಷವನ್ನು ಆಕ್ರಮಿಸಿ ವ್ಯಾಪಿಸಿರುವಂತೆಯೇ ಪೃಥಿವಿಯನ್ನೂ ಸಹ ತನ್ನ ಕೀರ್ತಿಯಿಂದಲೂ, ಅನ್ನದಿಂದಲೂ ಕೂಡಿಕೊಂಡು ವ್ಯಾಪಿಸಿ ನಿಂತಿದ್ದಾನೆ.

## English Translation

The renowned Mitra, who by his might presides over heaven, is he who presides over the earth by (the gift of) food.

ವಿಶೇಷವಿಷಯಗಳು

ಮೈತ್ರೇಷ್ಟಿಯಲ್ಲಿ ಪ್ರಾತಃಕಾಲದ ಹೋಮವನ್ನು ಮಾಡುವಾಗ ಕಾಲಾತೀತವಾಗಿದ್ದರೆ ಅದರ ಪ್ರಾಯಶ್ಚಿತ್ತಾರ್ಥವಾಗಿ ಮಾಡುವ ಹೋಮದಲ್ಲಿ **ಅಭಿ ಯೋ ಮಹಿನಾ** ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಭಿ ಯೋ ಮಹಿನಾ ದಿವಂ ಪ್ರ ಸ ಮಿತ್ರ ಮರ್ತೋ ಅಸ್ತು ಪ್ರಯಸ್ವಾನ್** ಎಂಬ ಸೂತ್ರದಿಂದ (ಆ. ೩-೧೨) ವಿವೃತವಾಗಿರುವುದು.

ಈ ಸೂಕ್ತದಲ್ಲಿ ಎಲ್ಲಾ ಋಕ್ಕುಗಳಲ್ಲಿಯೂ ಸಹ ಮಿತ್ರರೂಪನಾದ ಆದಿತ್ಯನ ಸ್ತುತಿಯಿದೆ. ಆದರಲ್ಲೂ ೬, ೭ ಮತ್ತು ೮ನೇ ಋಕ್ಕುಗಳಲ್ಲಿ ಮಿತ್ರನ ಒಂದು ಮುಖ್ಯವಾದ ವ್ಯಾಪಕಗುಣವನ್ನು ವಿವರಿಸಿ ತಿಳಿಸಿದೆ. ಇದಕ್ಕೆ ಹಿಂದಿನ ಎಂದರೆ ೬ನೇ ಋಕ್ಕಿನಲ್ಲಿ **ಮಿತ್ರಸ್ಯ ಚರ್ಷಣೀಧೃತಃ** ಎಂದು ವರ್ಣಿಸಿದೆ. ಆ ಋಕ್ಕಿನ ವಿಶೇಷವಿಷಯಗಳಲ್ಲಿ **ಚರ್ಷಣಿ** ಶಬ್ದವು ಕೇವಲ ಪೃಥ್ವೀಸ್ಥವಾದ ಮಾನವರೆಂದು ಮಾತ್ರ ಅರ್ಥವಾಗಿರದೆ, ದೇವಮಾನವಾದಿ ಸಕಲರನ್ನೂ ಸೂಚಿಸ ತಕ್ಕ ವ್ಯಾಪಕಧರ್ಮವುಳ್ಳ ಪದವೆಂದು ತಿಳಿಸಿದೆ. ಇದಕ್ಕೆ ಮುಂದಿನ ಎಂದರೆ ೮ನೇ ಋಕ್ಕಿನಲ್ಲೂ ಸಹ **ಪಂಚ ಜನಾಃ ಯೇಮಿರೇ** ಪಂಚಜನರು ಸೇವಿಸುತ್ತಾರೆ ಎಂದು ವರ್ಣಿತವಾಗಿದೆ.

CC-0. Jangamwadi Math Collection. Digitized by eGangotri

**ಅಭಿ ಬಭೂವ**—ಭೂಧಾತುವು ಅಭಿ ಎಂಬ ಉಪಸರ್ಗದೊಡನೆ ಸೇರಿದರೆ ಸಾಧಾರಣವಾಗಿ ಸೋಲಿಸು, ಆಕ್ರಮಿಸು ಎಂಬರ್ಥವಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ಅಂತರಿಕ್ಷವನ್ನೆಲ್ಲಾ ತನ್ನ ಪ್ರಭುತ್ವದಿಂದ ತನ್ನ ವಶಮಾಡಿಕೊಂಡು ದ್ಯಾವಾಪೃಥಿವಿಗಳನ್ನೆಲ್ಲಾ ಆಕ್ರಮಿಸಿ ನಿಂತಿದ್ದಾನೆಂದರ್ಥವಾಗುತ್ತದೆ. ಆದರೆ,

**ಅಭೀ ಷೂ ಣಃ ಸಖೀನಾಮವಿತಾ ಜರಿತೄಣಾಂ । ಶತಂ ಭವಾಸ್ಯೂತಿಭಿಃ ॥**

(ಋ. ಸಂ. ೪-೩೧-೩)

ಎಂಬಲ್ಲಿ ಎಲೈ ಇಂದ್ರನೇ, ನೀನು ಸ್ತೋತೃಗಳಿಗೆ ಅಭಿ ಭವಾಸಿ ಅಭಿಮುಖನಾಗು ಎಂಬ ತಾತ್ಪರ್ಯವಿರುತ್ತದೆ. ಇತರ ಕಡೆಗಳಲ್ಲಿ ನಿಗ್ರಹಮಾಡಿ ಸೋಲಿಸು ಎಂದು ತಾತ್ಪರ್ಯವಾಗಿರುವ ಈ ಋಕ್ಕಿನಲ್ಲಿ ಅನುಗ್ರಹಾತ್ಮಕವಾದ ಆಗಮನವಿರಲಿ ಎಂದು ಪ್ರಾರ್ಥಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಮಿತ್ರನು ಅನುಗ್ರಹರೂಪವಾಗಿಯೇ ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ನಿಂತಿದ್ದಾನೆ ಎಂದು ಹೇಳಿದರೂ ತಪ್ಪಾಗಲಾರದು.

**ಸಪ್ರಥಾಃ**—ಪ್ರಥಃ ಪ್ರಸಿದ್ಧಿಃ ಕೀರ್ತಿಃ । ತತ್ಸಹಿತಃ । ಪ್ರಥವೆಂದರೆ ಕೀರ್ತಿ, ಸಪ್ರಥವೆಂದರೆ ಕೀರ್ತಿ ಯುಕ್ತನೆಂದರ್ಥ. ಪ್ರಥಶಬ್ದಕ್ಕೆ ಮೂಲಾರ್ಥವು ವಿಸ್ತೃತವಾಗಿ ಹರಡುವುದು ಎಂದರ್ಥ. ವ್ಯಕ್ತಿಯ ಗುಣವು ಎಲ್ಲಾ ಕಡೆಯೂ ವಿಸ್ತೃತವಾಗಿ ಹರಡುವುದರಿಂದ ಎಲ್ಲೆಲ್ಲೂ ಪ್ರಸಿದ್ಧವಾಗುವುದು. ಎಂದರೆ ಕೀರ್ತಿಯೆಂಬುದರಲ್ಲಿ ತಾತ್ಪರ್ಯ. ನಿರುಕ್ತಕಾರರೂ ಸಹ ಇದೇ ರೀತಿ ವಿವರಿಸಿದ್ದಾರೆ. **ಸಪ್ರಥಾಃ ಸರ್ವತಃ ಪೃಥುಃ ।** ಸುತ್ತಲೂ ವಿಸ್ತೃತವಾಗಿ ಹರಡಿರುವುದೆಂದರ್ಥವೆಂದು ತೋರಿಸಿ **ತ್ವಮಗ್ನೇ ಸಪ್ರಥಾ ಅಸಿ ...., ....** (ಋ. ಸಂ. ೫-೧೩-೪) ಎಂಬ ಋಕ್ಕನ್ನುದಾಹರಿಸಿ ಈ ಪದಕ್ಕಿರುವ ಅರ್ಥವೈಶಿಷ್ಟ್ಯವನ್ನು ತೋರಿಸಿದ್ದಾರೆ. (ನಿ. ೬-೮).



ಸಂಹಿತಾಪಾಠಃ

ಮಿತ್ರಾಯ ಪಂಚ ಯೇಮಿರೇ ಜನಾ ಅಭಿಷ್ಟಿಶವಸೇ ।

ಸ ದೇವಾನ್ವಿಶ್ವಾನ್ಬಿಭರ್ತಿ ॥ ೮ ॥

ಪದಪಾಠಃ

ಮಿತ್ರಾಯ । ಪಂಚ । ಯೇಮಿರೇ । ಜನಾಃ । ಅಭಿಷ್ಟಿಽಶವಸೇ ।

ಸಃ । ದೇವಾನ್ । ವಿಶ್ವಾನ್ । ಬಿಭರ್ತಿ ॥ ೮ ॥

ಸಾಯಣಭಾಷ್ಯಂ

ಪಂಚ ಜನಾ ನಿಷಾದಪಂಚಮಾಶ್ಚತ್ವಾರೋ ವರ್ಣಾ ಅಭಿಷ್ಟಿಶವಸೇ ಶತ್ರೂಣಾಮಭಿಗಂತೃಬಲಯುಕ್ತಾಯ ಮಿತ್ರಾಯ ಯೇಮಿರೇ । ಹವೀಂಷ್ಯುದ್ಯಚ್ಛಂತಿ । ಸ ತಾದೃಶೋ ಮಿತ್ರೋ ವಿಶ್ವಾನ್

CC-0. Jangamwadi Math Collection. Digitized by eGangotri

**ಸರ್ವಾನ್ದೇವಾನ್ಬಿಭರ್ತಿ । ಸ್ವಸ್ವರೂಪತಯಾ ಧಾರಯತಿ ॥ ಅಭಿಷ್ಟಿಶವಸೇ । ಇಷೇರ್ಮಂತ್ರೇ ವೃಷೇತ್ಯಾ- ದಿನಾ ಕ್ತಿನ್ । ತಾದೌ ಚ ನಿತೀಕೃತ್ಯಭೇರಂತೋದಾತ್ತತ್ವಂ । ಶಕಂಧ್ವಾದಿತ್ವಾತ್ಪರರೂಪತ್ವಂ । ಬಹುವ್ರೀಹೌ ಪೂರ್ವಪದಸ್ವರಃ ॥**

ಪ್ರತಿಪದಾರ್ಥ

**ಪಂಚಜನಾಃ**—ನಿಷಾದಾದಿ ಪಂಚವರ್ಣಾತ್ಮಕವಾದ ಜನರೂ ಸಹ । **ಅಭಿಷ್ಟಿಶವಸೇ**—ಶತ್ರುಗಳನ್ನು ನಾಶಮಾಡತಕ್ಕ ಶಕ್ತಿಯುಳ್ಳ । **ಮಿತ್ರಾಯ**—ಮಿತ್ರನನ್ನುದ್ದೇಶಿಸಿ । **ಯೇಮಿರೇ**—ಹವಿಸ್ಸನ್ನರ್ಪಿಸುತ್ತಾರೆ । **ಸಃ**—ಅಂತಹ ಮಿತ್ರನು । **ವಿಶ್ವಾನ್**—ಸಮಸ್ತವಾದ । **ದೇವಾನ್**—ದೇವತೆಗಳನ್ನೂ । **ಬಿಭರ್ತಿ**—ತನ್ನ ಸ್ವರೂಪ ದಿಂದಲೇ ಧರಿಸಿದ್ದಾನೆ ।

ಭಾವಾರ್ಥ

ನಿಷಾದಾದಿ ಪಂಚವರ್ಣಾತ್ಮಕರಾದ ಜನರೂ ಸಹ ಶತ್ರುನಾಶಕವಾದ ಶಕ್ತಿಯುಳ್ಳ ಮಿತ್ರನನ್ನುದ್ದೇಶಿಸಿ ಹವಿಸ್ಸನ್ನರ್ಪಿಸುತ್ತಾರೆ. ಅಂತಹ ಮಿತ್ರನು ಸಮಸ್ತರಾದ ದೇವತೆಗಳನ್ನೂ ತನ್ನ ಸ್ವರೂಪದಿಂದಲೇ ಧರಿಸಿದ್ದಾನೆ.

English Translation

The five classes of men have repaired to the victorious Mitra, for he supports all the gods.

ವಿಶೇಷವಿಷಯಗಳು

**ಅಭಿಷ್ಟಿಶವಸೇ**—ಅಭಿಷ್ಟಿಶಬ್ದವು ಸಾಧಾರಣವಾಗಿ ರಕ್ಷಣಾತ್ಮಕವಾದ ಸಹಾಯವೆಂಬರ್ಥದಲ್ಲಿಯೇ ಪ್ರಯುಕ್ತವಾಗಿದೆ. ಶವಃಶಬ್ದಕ್ಕೆ ಬಲವೆಂದರ್ಥ. ಪ್ರಕೃತದಲ್ಲಿ ಶತ್ರುಗಳನ್ನು ನಾಶಮಾಡಿ ಸ್ತೋತೃವನ್ನು ರಕ್ಷಿಸಬಲ್ಲ ಶಕ್ತಿಯೆಂದು ತಾತ್ಪರ್ಯ. **ಅಭಿಷ್ಟಿಮನ್ನಾಸತ್ಯಾ ವರೂಥಂ** (ಋ. ಸಂ. ೧-೧೧೬-೧೧) ಇತ್ಯಾದಿ ಸಂದರ್ಭಗಳಲ್ಲಿ ಈ ಪದದ ವಿಶೇಷಾರ್ಥಗಳನ್ನು ವಿವರಿಸಿದೆ.

**ಪಂಚ ಜನಾಃ-ಗಂಧರ್ವಾ ಅಪ್ಸರಸೋ ದೇವಾ ಅಸುರಾ ರಕ್ಷಾಂಸಿ ಪಂಚಜನಾಃ । ನಿಷಾದಪಂಚ- ಮಾಶ್ಚಾತ್ವಾರೋ ವರ್ಣಾ ವಾ ।** ಗಂಧರ್ವರೂ, ಅಪ್ಸರಸ್ಸುಗಳೂ- ದೇವತೆಗಳೂ, ಅಸುರರೂ ಮತ್ತು ರಾಕ್ಷಸರೂ ಸೇರಿ ಐದು ಗುಂಪುಗಳು ಅಥವಾ ಐದನೆಯದಾದ ನಿಷಾದರ ಎಂದರೆ ಬೇಡರ ಗುಂಪಿನೊಂದಿಗೆ ಸೇರಿದ ನಾಲ್ಕು ವರ್ಣದ ಜನರು ಎಂದು ಸಾಯಣರ ವಿವರಣೆಯಿದೆ. ಈ ವರ್ಗೀಕರಣದಲ್ಲಿ ಅಭಿಪ್ರಾಯಭೇದಗಳಿವೆ. ನಿರುಕ್ತಕಾರರು ತಮ್ಮ ಮತವೇನೆಂದು ಹೇಳದೇ ಇತರರ ಅಭಿಪ್ರಾಯಗಳನ್ನು ಮಾತ್ರ ಉದಹರಿಸಿರುವರು.

> **ಪಂಚಜನಾ ( ಮಮ ಹೋತ್ರಂ ಜುಷಧ್ವಂ ) ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತ್ಯೇಕೇ । ಚತ್ವಾರೋ ವರ್ಣಾ ನಿಷಾದಃ ಪಂಚಮ ಇತ್ಯೌಪಮನ್ಯವಃ ।** (ನಿ. ೩-೮).

ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದುವಿಧವಾದ ಜನರೆಂದು ಕೆಲವರೂ ಬ್ರಾಹ್ಮಣಾದಿ ನಾಲ್ಕು ವರ್ಣದವರೊಂದಿಗೆ ನಿಷಾದರೆಂಬ ಐದನೆಯ ಗುಂಪೂ ಸೇರಿ ಪಂಚಜನರೆಂದು ಉಪಮನ್ಯುವೇ ಮುಂತಾದವರೂ ಅಭಿಪ್ರಾಯಪಡುವರೆಂದು ಇತರರ ಅಭಿಪ್ರಾಯಗಳನ್ನು ಮಾತ್ರ ಹೇಳಿರುವರು.

CC-0. Jangamwadi Math Collection. Digitized by eGangotri

ಹಿಂದೆ ದೇವತೆಗಳೆಲ್ಲರೂ ಅಗ್ನಿಯನ್ನು ಕುರಿತು ತಮಗಾಗಿ ಯಜ್ಞದಲ್ಲಿ ಅರ್ಪಿತವಾದ ಹವಿಸ್ಸನ್ನು ಸ್ವೀಕರಿಸಿ ಎಲ್ಲರಿಗೂ ಹಂಚಬೇಕೆಂದು ಪ್ರಾರ್ಥಿಸಿದಾಗ ಅಗ್ನಿಯು ಅದಕ್ಕೆ ಒಪ್ಪಿಕೊಂಡು,

ತದದ್ಯ ವಾಚಃ ಪ್ರಥಮಂ ಮಸೀಯ ಯೇನಾಸುರಾँ ಅಭಿ ದೇವಾ ಅಸಾಮ ।
ಊರ್ಜಾದ ಉತ ಯಜ್ಞಿಯಾಸಃ ಪಂಚ ಜನಾ ಮಮ ಹೋತ್ರಂ ಜುಷಧ್ವಂ ।

(ಋ. ಸಂ. ೧೦-೫೩-೪)

ಪಂಚಜನರೂ ಈ ಹವಿಸ್ಸನ್ನು ಭೋಗಿಸಲಿ ಎಂದು ಉತ್ತರವನ್ನು ಕೊಟ್ಟಿರುವ ಈ ವಾಕ್ಯವನ್ನು ಬೃಹದ್ದೇವತಾ ಕಾರರು ಉದಹರಿಸಿ ಪಂಚಜನರು ಯಾರು ಎಂದು ಅಭಿಪ್ರಾಯಭೇದಗಳನ್ನು ತೋರಿಸಿ ಚರ್ಚಿಸಿದ್ದಾರೆ.

ಪ್ರತ್ಯುವಾಚಾಥ ತಾನಗ್ನಿರ್ವಿಶ್ವೇದೇವಾ ಯದೂಚ ಮಾಂ ।
ತತ್ಕರಿಷ್ಯೇ ಜುಷಂತಾಂ ತು ಹೋತ್ರಂ ಪಂಚಜನಾ ಮಮ ॥

(ಬೃ. ದೇ. ೭-೬೬)

ಎಂಬ ಶ್ಲೋಕದಲ್ಲಿ ಅಗ್ನಿಯು ದೇವತೆಗಳಿಗೆ ಕೊಟ್ಟ ಉತ್ತರವನ್ನು ತಿಳಿಸಿ ಅನಂತರ ಪಂಚಜನಶಬ್ದವನ್ನು ವಿವರಿಸಿದ್ದಾರೆ.

ಶಾಲಾಮುಖ್ಯಃ ಪ್ರಣೀತಶ್ಚ ಪುತ್ರೋ ಗೃಹಪತೇಶ್ಚ ಯಃ ।
ಉತ್ತರೋ ದಕ್ಷಿಣಶ್ಚಾಗ್ನಿರೇತೇ ಪಂಚಜನಾಃ ಸ್ಮೃತಾಃ ॥

(ಬೃ. ದೇ. ೭-೬೭)

ಎಂದರೆ, ಶಾಲೆಯ ಪ್ರವೇಶಭಾಗದಲ್ಲಿರುವ ಅಗ್ನಿಯೂ, ಪ್ರಣೀತವಾದ ಆಹವನೀಯಾಗ್ನಿಯೂ ಯಜಮಾನನ ಪುತ್ರ ಭೂತನಾದ ಗಾರ್ಹಪತ್ಯಾಗ್ನಿಯೂ, ದಕ್ಷಿಣೋತ್ತರಾಗ್ನಿಗಳೂ ಸೇರಿ ಈ ಐದು ವಿಧವಾದ ಅಗ್ನಿಗಳೂ ಐದು ಬಗೆಯ ವರ್ಗಗಳೆಂದು ಸಾಂಪ್ರದಾಯಿಕವಾದ ವ್ಯವಹಾರ. ಇದೊಂದು ಮತ. ಅಲ್ಲದೇ,

ಮನುಷ್ಯಾಃ ಪಿತರೋ ದೇವಾ ಗಂಧರ್ವೋರಗರಾಕ್ಷಸಾಃ ।
ಗಂಧರ್ವಾಃ ಪಿತರೋ ದೇವಾ ಅಸುರಾ ಯಕ್ಷರಾಕ್ಷಸಾಃ ॥

(ಬೃ. ದೇ. ೭-೬೮)

ಮೊದಲನೆಯ ಅಭಿಪ್ರಾಯದಂತೆ ಮನುಷ್ಯಾದಿಗಳ ಜತೆಗೆ ಉರಗ ರಾಕ್ಷಸರು ಸೇರಿ ಒಂದು ಗುಂಪು; ಎರಡನೆಯ ದರಲ್ಲಿ ಯಕ್ಷರಾಕ್ಷಸರು ಒಂದು ಗುಂಪು.

ಯಾಸ್ಕೌಪಮನ್ಯವಾವೇತಾನಾಹತುಃ ಪಂಚ ವೈ ಜನಾನ್ ।
ನಿಷಾದಪಂಚಮಾನ್ವರ್ಣಾ ಮನ್ಯತೇ ಶಾಕಟಾಯನಃ ॥

(ಬೃ. ದೇ. ೭-೬೯)

ಯಾಸ್ಕರ ಮತವು ಮೊದಲನೆಯದೆಂದು ಬೃಹದ್ದೇವತಾಕಾರರು ಈ ವಾಕ್ಯದಲ್ಲಿ ಹೇಳಿರುವರು. ಆದರೆ ನಿರುಕ್ತದಲ್ಲಿ ಇತರರ ಮತಗಳನ್ನು ಹೇಳಿದೆಯೇ ಹೊರತು ಯಾಸ್ಕರ ಮತವನ್ನು ನಿಷ್ಕರ್ಷವಾಗಿ ತಿಳಿಸಿಲ್ಲ. ಪ್ರಾಯಃ ಅದನ್ನೇ ಅವರೂ ಅಂಗೀಕರಿಸಿರಬಹುದು.

CC-0. Jangamwadi Math Collection. Digitized by eGangotri

ಋತ್ವಿಜೋ ಯಜಮಾನಂ ಚ ಶಾಕಪೂಣಿಸ್ತು ಮನ್ಯತೇ ।

(ಬೃ. ದೇ. ೭-೭೦)

ಹೋತ್ರಾದಿ ನಾಲ್ಕು ಋತ್ವಿಕ್ಕುಗಳೂ, ಯಜಮಾನನೂ ಸೇರಿ ಐದು ಜನರ ಗುಂಪೆಂದು ಶಾಕಪೂಣಿಯವರ ಮತ.

ಚಕ್ಷುಃ ಶ್ರೋತ್ರಂ ಮನೋ ವಾಕ್ ಚ ಪ್ರಾಣಶ್ಚೇತ್ಯಾತ್ಮವಾದಿನಃ ।
ಗಂಧರ್ವಾಪ್ಸರಸೋ ದೇವಾ ಮನುಷ್ಯಾಃ ಪಿತರಸ್ತಥಾ ॥
ಸರ್ಪಾಶ್ಚ ಬ್ರಾಹ್ಮಣೇ ಚೈವ ಶ್ರೂಯಂತೇ ಹ್ಯೈತರೇಯಕೇ ।

ಚಕ್ಷುಸ್ಸು, ಶ್ರೋತ್ರ, ಮನಸ್ಸು, ವಾಕ್ಕು ಮತ್ತು ಪ್ರಾಣ ಈ ಐದೂ ಪಂಚಜನರೆಂದು ಆಧ್ಯಾತ್ಮಿಕವಾದಿಗಳ ಮತ. ಗಂಧರ್ವಾದಿಗಳೆಂದು ಐತರೇಯ ಬ್ರಾಹ್ಮಣದಲ್ಲಿ ವಿವರಿಸಿದೆ. (ಐ. ಬ್ರಾ. ೩-೩೧-೫) ಇಂತಹ **ಪಂಚಜನರೂ** ಹವಿಸ್ಸನ್ನು ಭೋಗಿಸಲಿ ಎಂದು ಅಗ್ನಿಯು ದೇವತೆಗಳಿಗೆ ಉತ್ತರವನ್ನು ಕೊಟ್ಟಿದ್ದಾನೆ, ಎಂದು ಬೃಹದ್ದೇವತೆಯ ವಿವರಣೆಯಲ್ಲಿಯೂ ಅಭಿಪ್ರಾಯಭೇದಗಳು ಉದಹರಿಸಲ್ಪಟ್ಟಿವೆ. ಕೆಲವು ಕಡೆ ಜನಾಃ ಎಂಬ ಶಬ್ದಕ್ಕೆ ಬದಲಾಗಿ ಕ್ಷಿತಯಃ ಎಂಬ ಶಬ್ದಪ್ರಯೋಗವಿರುವುದು.

**ಕ್ಷಿತಯಃ** ಎಂಬ ಶಬ್ದವು ಮನುಷ್ಯಾಃ ನರಾಃ ಮೊದಲಾದ ಇಪ್ಪತ್ತೈದು ಮನುಷ್ಯ ವಾಚಕನಾಮಗಳ ಮಧ್ಯದಲ್ಲಿ ಪಠಿತವಾಗಿದೆ. (ನಿ. ೩-೭) **ಪಂಚ ಕ್ಷಿತೀನಾಂ** ಎಂದರೆ ಪಂಚ ಜನಾನಾಂ ಎಂದರ್ಥವು ಇದಕ್ಕೆ ಭಾಷ್ಯಕಾರರು **ನಿಷಾದಪಂಚಮಾನಾಂ** ಎಂದೂ, ಸ್ಕಂದಸ್ವಾಮಿಯು **ಕ್ಷಿತೀನಾಂ ಮನುಷ್ಯ ಜಾತೀನಾಂ ಗಂಧರ್ವಾಃ ಪಿತರೋ ದೇವಾ ಇತ್ಯೇತಾಸಾಂ** ಎಂದೂ ವೆಂಕಟಮಾಧವರು—**ಮನುಷ್ಯಾಣಾಂ ಪಂಚಾನಾಂ ಕ್ಷಿತೀನಾಂ ನಿವಸತಾಂ ಗಂಧರ್ವಾಃ ಪಿತರೋ ದೇವಾ ಅಸುರಾ ರಕ್ಷಾಂಸೀತಿ ಪಂಚತ್ವಂ** ಎಂದೂ ಅರ್ಥನಿವರಣೆಮಾಡಿದಾರೆ. ಸಾಯಣರ ಅಭಿಪ್ರಾಯದಂತೆ ಕ್ಷಿತೀನಾಂ ಎಂದರೆ ಭೂಮಿಯಲ್ಲಿ ವಾಸಮಾಡಲು ಯೋಗ್ಯರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ನಿಷಾದ ಎಂಬ ಐದು ಜಾತಿಯ ಜನರೆಂದು ಅರ್ಥವಾಗುವುದು. ನಿಷಾದರೆಂದರೆ ಬ್ರಾಹ್ಮಣಾದಿ ನಾಲ್ಕು ವರ್ಣಗಳಲ್ಲಿ ಸೇರದಿರುವ ಮತ್ತು ಮೃಗಗಳ ಬೇಟೆಯಿಂದಲೇ ಜೀವಿಸುವ ಜನರೆಂದರ್ಥವು. ಈ ದೇಶದ ಪೂರ್ವನಿವಾಸಿಗಳಾದ ಗೊಂಡರು, ಕೋಲರು, ಭಿಲ್ಲರು ಮೊದಲಾದವರು ಈ ಜಾತಿಗೆ ಸೇರಿದವರು. ಇವರು ಮಧ್ಯಪ್ರಾಂತ ಮೊದಲಾದ ಕೆಲವು ಸ್ಥಳಗಳಲ್ಲಿ ಮಾತ್ರ ಈಗಲೂ ಬಹು ಅಲ್ಪಸಂಖ್ಯೆಯಲ್ಲಿ ವಾಸಿಸುತ್ತಿರುವರು. ಪಂಚ ಜನಾಃ ಮತ್ತು ಪಂಚ ಕೃಷ್ಟೀಃ ಎಂಬ ಶಬ್ದಗಳು ಋಗ್ವೇದದಲ್ಲಿ ಅನೇಕಕಡೆ ಇವೆ.

ಒಟ್ಟಿನಲ್ಲಿ ಪಂಚಜನರೆಂದರೆ, ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು ಎಂದು ಐದು ವಿಧ ಜನರೆಂದು ಕೆಲವರು ಹೇಳುವರು. ಬ್ರಾಹ್ಮಣಾದಿ ನಾಲ್ಕುವರ್ಣದವರೂ ನಿಷಾದ ಎಂಬ ಬೇಡರ ಜಾತಿಗೆ ಸೇರಿದ ಜನರೂ ಸೇರಿ ಐದು ವಿಧ ಜನರೆಂದು ಉಪಮನ್ಯು ಮುಂತಾದವರ ಮತವು. (ಇದನ್ನೇ ಸಾಯಣರು ಅನುಮೋದಿಸಿರುವರು). ನಿಷಾದರೆಂದರೆ ಪ್ರಾಣಿಗಳನ್ನು ಕೊಲ್ಲುವವರು ಅಥವಾ ಇವರಲ್ಲಿ ಪಾಪವು ತುಂಬಿರುವುದರಿಂದ ಇವರಿಗೆ ನಿಷಾದರೆಂದು ನೈರುಕ್ತಕಾರರು ಹೇಳುವರು. ಇದಲ್ಲದೆ ಆ ಕಾಲದಲ್ಲಿ ಐದು ಮುಖ್ಯವಾದ ಪಂಗಡಗಳು (tribes) ಇದ್ದಿರಬಹುದು. ಕವಿಯು ಈ ಅಭಿಪ್ರಾಯವನ್ನೇ ಇಟ್ಟುಕೊಂಡು **ಪಂಚ ಜನಾಃ** ಎಂದು ಹೇಳಿರಬಹುದು. ಹೇಗಾದರೂ ಈ ವಿಚಾರದಲ್ಲಿ ನಿರುಕ್ತಕಾರರಾದ ಯಾಸ್ಕರ ಕಾಲದಲ್ಲಿಯೂ ಸಹ ಅಭಿಪ್ರಾಯಭೇದವಿದ್ದಿತೆಂಬುದು ಸ್ಪಷ್ಟವಾಗಿದೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಮಿತ್ರೋ ದೇವೇಷ್ವಾಯುಷು ಜನಾಯ ವೃಕ್ತಬರ್ಹಿಷೇ ।

ಇಷ ಇಷ್ಟವ್ರತಾ ಅಕಃ ॥ ೯ ॥

ಪದಪಾಠಃ

ಮಿತ್ರಃ । ದೇವೇಷು । ಆಯುಷು । ಜನಾಯ । ವೃಕ್ತಽಬರ್ಹಿಷೇ ।

ಇಷಃ । ಇಷ್ಟಽವ್ರತಾಃ । ಅಕರಿತ್ಯಕಃ ॥ ೯ ॥

ಸಾಯಣಭಾಷ್ಯಂ

ಮಿತ್ರೋ ಭಗವಾನಾದಿತ್ಯೋ ದೇವೇಷು ದ್ಯೋತಮಾನಾದಿಗುಣಯುಕ್ತೇಷ್ವಾಯುಷು ಮನುಷ್ಯೇಷು ಮಧ್ಯೇ ಯೋ ಜನೋ ವೃಕ್ತಬರ್ಹಿಃ । ವೃಕ್ತಂ ಲೂನಂ ಬರ್ಹಿರ್ಯೇನ ಸಃ । ಬರ್ಹಿರ್ಲವನಾಸಾದನಪೂರ್ವಂ ಹವಿಷೋ ದಾತಾ ಋತ್ವಿಗಿತ್ಯರ್ಥಃ । ತಸ್ಮೈ ವೃಕ್ತಬರ್ಹಿಷೇ ಜನಾಯೇಷ್ಟವ್ರತಾಃ । ಇಷ್ಟಾನಿ ಕಲ್ಯಾಣಾನಿ ವ್ರತಾನಿ ಕರ್ಮಾಣಿ ಯಾಭಿಃ ಸಿಧ್ಯಂತಿ ತಾ ಇಷಸ್ತಾದೃಶಾನ್ಯನ್ನಾನ್ಯಕಃ । ಕರೋತಿ । ತಸ್ಮೈ ದದಾತೀತ್ಯರ್ಥಃ ॥ ವೃಕ್ತಬರ್ಹಿಷೇ । ಓವ್ರಶ್ಚೂ ಛೇದನೇ । ಕರ್ಮಣಿ ನಿಷ್ಠಾಯಾಂ ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಬಹುವ್ರೀಹೌ ಪೂರ್ವಪದಸ್ವರಃ । ಅಕಃ । ಕರೋತೇರ್ಲುಙಃ ಚ್ಲೇರ್ಮಂತ್ರೇ ಘಸೇತ್ಯಾದಿನಾ ಲುಕ್ । ಸಿಪೋ ಹಲ್ಙ್ಯಾದಿಲೋಪಃ । ನಿಘಾತಃ ॥

ಪ್ರತಿಪದಾರ್ಥ

ಮಿತ್ರಃ—ಮಿತ್ರರೂಪನಾದ ಆದಿತ್ಯನು । ದೇವೇಷು— ಪ್ರಕಾಶಮಾನವಾದ ಗುಣಗಳುಳ್ಳ। ಆಯುಷು—ಮಾನವರಲ್ಲಿ । ವೃಕ್ತಬರ್ಹಿಷೇ— ಕರ್ಮಾಚರಣೆಗಾಗಿ ದರ್ಭವನ್ನು ಹರಡಿ ಸಿದ್ಧನಾಗಿರುವ । ಜನಾಯ—ಯಜಮಾನನಿಗೆ । ಇಷ್ಟವ್ರತಾಃ—ಮಂಗಳಾತ್ಮಕವಾದ ವ್ರತಾಚರಣೆಗೆ ಯೋಗ್ಯವಾದ । ಇಷಃ—ಅನ್ನಗಳನ್ನು । ಅಕಃ—ಉತ್ಪನ್ನಮಾಡುತ್ತಾನೆ ।

ಭಾವಾರ್ಥ

ಮಿತ್ರರೂಪನಾದ ಆದಿತ್ಯನು ಪ್ರಕಾಶಮಾನವಾದ ಗುಣಗಳುಳ್ಳ ಮಾನವರಲ್ಲಿ ದರ್ಭವನ್ನು ಹರಡಿ ಕರ್ಮಾಚರಣೆಗಾಗಿ ಸಿದ್ಧನಾಗಿರುವ ಯಜಮಾನನಿಗೆ ಮಂಗಳಾತ್ಮಕವಾದ ವ್ರತಾಚರಣೆಗೆ ಯೋಗ್ಯವಾದ ಅನ್ನಗಳನ್ನು ಉತ್ಪನ್ನಮಾಡುತ್ತಾನೆ.

English Translation

Mitra is he who amongst gods and men bestows food as the reward of pious acts upon the man who has prepared (for him) the lopped sacred grass.

CC-0. Jangamwadi Math Collection. Digitized by eGangotri

## ವಿಶೇಷವಿಷಯಗಳು

**ದೇವೇಷು ಆಯುಷು–ದ್ಯೋತಮಾನಾದಿಗುಣಯುಕ್ತೇಷು ಮನುಷ್ಯೇಷು ಮಧ್ಯೇ।** ಪ್ರಕಾಶಮಾನವಾದ ಗುಣಗಳುಳ್ಳ ಮನಷ್ಯರ ಮಧ್ಯದಲ್ಲಿ ಎಂದು ಭಾಷ್ಯಕಾರರ ವಿವರಣೆ ಇರುವುದು. ಆಯವಃ ಎಂಬ ಶಬ್ದವು ಮನುಷ್ಯನಾಮಗಳಲ್ಲಿ ಪಠಿತವಾಗಿರುವುದರಿಂದ (ನಿ. ೩-೭) ಆಯುಷು ಎಂದರೆ ಮನುಷ್ಯರಲ್ಲಿ ಎಂದರ್ಥವು. ಆದರೆ ದೇವೇಷು ಎಂಬ ಶಬ್ದವನ್ನು ಆಯುಷು ಎಂಬ ಶಬ್ದಕ್ಕೆ ವಿಶೇಷಣಪದವನ್ನಾಗಿಮಾಡಿ ಹೇಳಿರುವ ಭಾಷ್ಯಕಾರರ ಅರ್ಥವು ಚೆನ್ನಾಗಿ ಹೊಂದುವುದಿಲ್ಲ. ಈ ಶಬ್ದಕ್ಕೆ ಸಹಜವಾದ ಎಂದರೆ, ದೇವತೆಗಳಲ್ಲಿ ಎಂಬ ಅರ್ಥವನ್ನೇ ಹೇಳಿದರೆ ಅರ್ಥವು ಸರಿಯಾಗಿ ಹೊಂದುವುದು. ಆದುದರಿಂದ **ದೇವೇಷು ಆಯುಷು** ಎಂಬ ಶಬ್ದಗಳನ್ನು ವಿಶೇಷಣ ವಿಶೇಷ್ಯ ಪದಗಳೆಂದು ಭಾವಿಸದೆ ಎರಡೂ ಸ್ವತಂತ್ರಶಬ್ದಗಳೆಂದು ಪರಿಗಣಿಸಿ ದೇವತೆಗಳಲ್ಲಿಯೂ ಮನುಷ್ಯರಲ್ಲಿಯೂ ಎಂದು ಅರ್ಥವಿವರಣೆಮಾಡುವುದೇ ಯುಕ್ತವಾಗಿರುವುದು. ಅರ್ಥವೂ ಸರಿಯಾಗಿ ಹೊಂದಿಕೊಳ್ಳುವುದು.

**ವೃಕ್ತಬರ್ಹಿಷೇ**—ಬರ್ಹಿಶ್ಶಬ್ದಾರ್ಥವನ್ನು ಹಿಂದೆಯೇ ವಿವರಿಸಿದೇವೆ. ಬರ್ಹಿಃ ಎಂದರೆ ಉದ್ದವಾಗಿರುವ ದರ್ಭೆಎಂಬ ಒಂದು ಜಾತಿಯ ಹುಲ್ಲನ್ನು ತಂದು ಅದರ ಮೊನುಚಾದ ತುದಿಗಳನ್ನು ಕತ್ತರಿಸಿ, ಒಂದೇ ಅಳತೆಗೆ ಸಮನಾಗಿರುವಂತೆ ಕತ್ತರಿಸಿ ಆ ದರ್ಭೆಗಳನ್ನು ಯಜ್ಞಭೂಮಿಯಲ್ಲಿ ಒಂದು ನಿರ್ದಿಷ್ಟವಾದ ಪ್ರದೇಶದಲ್ಲಿ ದೇವತೆಗಳು ಬಂದು ಕುಳಿತುಕೊಳ್ಳುವುದಕ್ಕಾಗಿ ಹರಡಿ ಆಸನವನ್ನು ಸಿದ್ಧಪಡಿಸುವರು. ಈ ರೀತಿ ಹರಡುವಾಗ. ಕುಳಿತುಕೊಳ್ಳುವವರಿಗೆ ಮೆತ್ತಗಿರುವುದಕ್ಕಾಗಿ ದರ್ಭೆಗಳಲ್ಲಿ ಕೆಲವನ್ನು ಮೊದಲು ಒಂದು ಪದರವನ್ನು ಉದ್ದುದ್ದವಾಗಿಯೂ, ಆ ಪದರದ ಮೇಲೆ ಇನ್ನೊಂದು ಪದರವನ್ನು ಅಡ್ಡಡ್ಡಲಾಗಿಯೂ, ಅದರ ಮೇಲೆ ಮತ್ತೊಂದು ಪದರವನ್ನು ಮೊದಲಿನಂತೆ ಉದ್ದುದ್ದವಾಗಿಯೂ ಹರಡುವರು. ಈ ರೀತಿ ದರ್ಭೆಗಳನ್ನು ಮೂರು ಪದರಗಳನ್ನಾಗಿ ಹರಡುವುದು ರೂಢಿಯಾಗಿದೆ. **ತ್ರಿವೃದ್ಬರ್ಹಿರ್ಭವತಿ। ಮಾತಾ ಪಿತಾ ಪುತ್ರಃ।** ಎಂದು ಈ ವಿಷಯದಲ್ಲಿ ಶ್ರುತಿವಾಕ್ಯವೂ ಇರುವುದು. ದರ್ಭೆಗಳ ತುದಿಯು ಬಹಳ ಮೊನುಚಾಗಿ ಇರುವುದರಿಂದ ಚುಚ್ಚದಿರುವುದಕ್ಕಾಗಿ ತುದಿಗಳನ್ನು ಕತ್ತರಿಸುವರು. ಈರೀತಿ ತುದಿಯನ್ನು ಕತ್ತರಿಸಿ ಒಂದೇ ಅಳತೆಗೆ ಸಮನಾಗಿರುವ ದರ್ಭೆಗಳನ್ನು ಒಂದರಮೇಲೊಂದು ಪದರದಂತೆ ಮೂರುಪದರಗಳನ್ನಾಗಿ ಹರಡಿ ಸಿದ್ಧಪಡಿಸಿದ ಆಸನದ ಮೇಲೆ ಆಹ್ವಾನಿತರಾದ ದೇವತೆಗಳು ಬಂದು ಕುಳಿತುಕೊಳ್ಳಬೇಕೆಂದು ಅನೇಕಋಕ್ಕುಗಳಲ್ಲಿ ಪ್ರಾರ್ಥಿಸಲಾಗಿದೆ. ಪ್ರಕೃತ ಋಕ್ಕಿನಲ್ಲಿ ಯಜ್ಞಮಾಡುವ ಯಜ್ಞಮಾನನು ಇಂತಹ ದರ್ಭಾಸನವನ್ನು ಸಿದ್ಧಪಡಿಸಿರುವನೆಂಬಅಂಶವು ವೃಕ್ತಬರ್ಹಿಷೇ ಎಂಬ ಶಬ್ದದಿಂದ ಸೂಚಿತವಾಗಿದೆ.

**ಇಷ್ಟವ್ರತಾಃ—ಇಷ್ಟಾನಿ ಕಲ್ಯಾಣಾನಿ ವ್ರತಾನಿ ಕರ್ಮಾಣಿ ಯಾಭಿಃ ಸಿಧ್ಯಂತಿ ತಾಃ ಇಷಃ।** ಈ ಶಬ್ದವು ಇಷಃ ಎಂಬ ಶಬ್ದಕ್ಕ ವಿಶೇಷಣವಾಗಿದೆ. ಆದುದರಿಂದ ಯಾವ (ಹವಿಸ್ಸಿನರೂಪವಾದ) ಅನ್ನಗಳಿಂದ ಶುಭಕರವಾದ ಕರ್ಮಗಳು ಸಿದ್ಧಿಸುವವೋ ಅಂತಹ ಅನ್ನಗಳನ್ನು ಎಂದು ಭಾಷ್ಯಕಾರರ ವಿವರಣೆಯು. ಎಂದರೆ ಯಜ್ಞಾದಿಕರ್ಮಗಳಲ್ಲಿ ದೇವತೆಗಳನ್ನು ತೃಪ್ತಿಪಡಿಸುವುದಕ್ಕಾಗಿ ಅರ್ಪಿಸುವ ಹವಿಸ್ಸಿನರೂಪವಾದ ಅನ್ನಗಳನ್ನು ಉದ್ದೇಶಿಸಿ ನೆರವೇರಿಸಲ್ಪಡುವ ಕರ್ಮಗಳು, ಇಂತಹ ಹವಿಸ್ಸಿನ ರೂಪವಾದ ಅನ್ನಗಳನ್ನು ಅರ್ಪಿಸುವುದರಿಂದ ಸಿದ್ಧಿಸುವುದು. ಆದುದರಿಂದ ಈ ಅನ್ನಗಳು ಕರ್ಮಸಿದ್ಧಿಗೆ ಸಾಧನಗಳಾಗಿರುವವು. ಇಂತಹ ಅನ್ನಗಳನ್ನು ನಮಗೆ ಕೊಡಬೇಕೆಂದು ಮಿತ್ರನನ್ನು ಪ್ರಾರ್ಥಿಸುವ ವಿಷಯವು ಇಲ್ಲಿ ಉಕ್ತವಾಗಿದೆ.

———————

CC-0. Jangamwadi Math Collection. Digitized by eGangotri

# ಅರವತ್ತನೆಯ ಸೂಕ್ತವು.

## ಪೀಠಿಕೆ

ಈ ಸೂಕ್ತಕ್ಕೆ ಋಭುಗಳು ದೇವತೆಯು. ಇವರ ವಿಷಯವಾದ ಪೂರ್ವೇತಿಹಾಸವನ್ನೂ, ಇವರು ಮಾಡಿದ ಸಾಹಸಕಾರ್ಯಗಳನ್ನೂ, ಇವರು ತಮ್ಮ ಕೆಲಸಕಾರ್ಯಗಳಲ್ಲಿ ತೋರಿಸಿರುವ ಬುದ್ಧಿಕುಶಲತೆಯನ್ನು ತಿಳಿಯಬೇಕಾದುದು ಅವಶ್ಯಕವು.

ಋಭುಗಳೆಂಬುವರು ಪೂರ್ವದಲ್ಲಿ ಮನುಷ್ಯರಾಗಿದ್ದು ತಮ್ಮ ಉತ್ತಮವಾದ ನಡವಳಿಕೆಗಳಿಂದಲೂ ಸತ್ಕರ್ಮಾನುಷ್ಠಾನದಿಂದಲೂ ದೇವತ್ವವನ್ನು ಪಡೆದರೆಂದು ಋಗ್ವೇದದಲ್ಲಿ ಅನೇಕಕಡೆ ಹೇಳಲ್ಪಟ್ಟಿರುವುದು. ಪೂರ್ವದಲ್ಲಿ ಅಂಗಿರಾಋಷಿಗೆ ನೀತಿಮಂಜರಿ ಎಂಬ ಓರ್ವ ಪುತ್ರನಿದ್ದನು. ಇವನ ವಂಶದಲ್ಲಿ ಸುಧನ್ವಾ ಎಂಬ ಋಷಿಗೆ ಋಭು, ವಿಭು, ವಾಜ ಎಂಬ ಮೂವರು ಪುತ್ರರಿದ್ದರು. ಇವರು ಸತ್ಕರ್ಮಾನುಷ್ಠಾನ, ದೇವತೆಗಳಿಗೆ ಸಹಾಯಮಾಡುವುದು ಮೊದಲಾದ ಒಳ್ಳೆಯ ಕೆಲಸಗಳಿಂದ ದೇವತೆಗಳ ಜನ್ಮವನ್ನು ಪಡೆದರು ಅಥವಾ ದೇವತೆಗಳಾದರು ಎಂದು ಪ್ರತೀತಿ ಇದೆ. ಈ ಋಭು ಮೊದಲಾದ ಸುಧನ್ವನ ಮೂವರು ಪುತ್ರರಿಗೂ ಋಭುಗಳೆಂದು ಹೇಳುವ ರೂಢಿಯಿದೆ. ಹಿರಿಯವನ ಹೆಸರಿನಿಂದಲೇ ಈ ಮೂವರು ಪುತ್ರರೂ ಕರೆಯಲ್ಪಡುವರು. ಇವರು ತ್ವಷ್ಟೃವಿನ ಶಿಷ್ಯರಾದುದರಿಂದ ಇವರನ್ನು ದೇವಶಿಲ್ಪಿಗಳೆಂದೂ ಹೇಳುವರು. ಇವರು ಇಂದ್ರನೇ ಮೊದಲಾದ ದೇವತೆಗಳಿಗೆ ಬೇಕಾದ ಸಲಕರಣೆಗಳನ್ನು ಎಂದರೆ ಇಂದ್ರನ ರಥವನ್ನೂ ಅಗ್ನಿಯ ಚಮಸಪಾತ್ರೆಯನ್ನೂ ಮಾಡಿಕೊಟ್ಟರೆಂದು ಅಲ್ಲಲ್ಲಿ ಹೇಳಿದೆ. ಈ ಸೂಕ್ತದಲ್ಲಿ ಇವರು ಮಾಡಿದ ಕೆಲವು ಕೆಲಸಗಳ ವಿವರಣೆ ಇರುವುದು. ಇವರಿಗೆ ಅದ್ಭುತವಾದ ಶಕ್ತಿಯಿರುವುದೆಂದೂ ಇವರು ಎಂತಹ ಕೆಲಸಗಳನ್ನಾದರೂ ಮಾಡಲು ಸಮರ್ಥರೆಂದೂ ಅಲ್ಲಲ್ಲಿ ವರ್ಣನೆಗಳಿವೆ. ದೇವತೆಗಳಿಗಿರುವ ಶಕ್ತಿಸಾಮರ್ಥ್ಯಗಳೇ ಇವರಿಗೂ ಇರುವುದರಿಂದ ಇವರನ್ನು ದೇವತೆಗಳ ಗುಂಪಿಗೆ ಸೇರಿದವರೆಂದು ಭಾವಿಸಿ ಋಷಿಗಳು ಇವರನ್ನೂ ಇವರು ಮಾಡಿರುವ ಕಾರ್ಯಗಳನ್ನೂ ವಿಧವಿಧವಾಗಿ ವರ್ಣಿಸಿರುವರು. ಇವರು ಸೂರ್ಯಮಂಡಲದಲ್ಲಿ ವಾಸವಾಗಿದ್ದು ಸೂರ್ಯರಶ್ಮಿಗಳ ಮೂಲಕ ಕಾರ್ಯಗಳನ್ನು ಮಾಡುವರೆಂದು ಪ್ರತೀತಿ ಇರುವುದು.

ಋಭುಶಬ್ದಕ್ಕೆ ಯಾಸ್ಕರು ಮೂರು ವಿಧವಾದ ನಿಷ್ಪತ್ತಿಯನ್ನು ಹೇಳಿರುವರು—

(೧) **ಋಭವ ಉರು ಭಾಂತೀತಿ ವಾ ।** ಉರು-ಬಹಳವಾಗಿ ಭಾಂತಿ-ಪ್ರಕಾಶಿಸುವವರು. ಆದ್ದರಿಂದ ಇವರಿಗೆ ಋಭುಗಳೆಂದು ಹೆಸರು—ಇಲ್ಲಿ ಉರು ಶಬ್ದದ ಅಂತ್ಯಾಕ್ಷರವಾದ ರುಕಾರವನ್ನೂ ಭಾಂತಿ ಶಬ್ದದ ಆದ್ಯಕ್ಷರವನ್ನೂ ಸೇರಿಸಿ ರುಭು ಅಥವಾ ಋಭು ಎಂದು ಶಬ್ದವಾಗಿರುವುದಾಗಿ ಕೆಲವರ ಅಭಿಪ್ರಾಯವು. ಅಹಃ+ರಾತ್ರಿಃ= ಹೋರಾ ಎಂಬಂತೆ

(೨) **ಋತೇನ ಭಾಂತೀತಿ ಇತಿ ವಾ ।** ಋತೇನ-ಎಂದರೆ ಸತ್ಯದಿಂದ ಅಥವಾ ಯಜ್ಞದಿಂದ ಪ್ರಕಾಶಿಸುವವರಾದ್ದರಿಂದ ಇವರಿಗೆ ಋಭುಗಳೆಂದು ಹೆಸರು.

(೩) **ಋತೇನ ಭವಂತೀತಿ ವಾ ॥** ಋತೇನ ಎಂದರೆ ಸತ್ಯದಿಂದ (ಸಾಮರ್ಥ್ಯದಿಂದ) ಇರುವವರಾದ್ದರಿಂದ ಎಂದರೆ ಸಾಮರ್ಥ್ಯವುಳ್ಳವರಾಪ್ಪರಿಂದ ಇವರಿಗೆ ಋಭುಗಳೆಂದು ಹೆಸರು. ಋತೇನ ಎಂಬ ಶಬ್ದದ

CC-0. Jangamwadi Math Collection. Digitized by eGangotri

ಆದ್ಯಕ್ಷರವಾದ ಋಕಾರವೂ ಭವಂತಿಶಬ್ದದ ಆದ್ಯಕ್ಷರವಾದ ಭಕಾರವೂ ಸೇರಿ ಋಭುವೆಂದು ಆಗಿರುವುದೆಂದು ಕೆಲವರು ಹೇಳುವರು.

ಈ ಋಭುಗಳು ಹಿಂದೆ ಮನುಷ್ಯರಾಗಿದ್ದು ಅನಂತರ ದೇವತ್ವವನ್ನು ಪಡೆದ ವಿಷಯವನ್ನು ಈ ಋಕ್ಕು ವಿಶದವಾಗಿ ತಿಳಿಸುವುದು—

**ವಿಷ್ಟ್ವೀ ಶಮೀ ತರಣಿತ್ವೇನ ವಾಘತೋ ಮರ್ತಾಸಃ ಸಂತೋ ಅಮೃತತ್ವಮಾನಶುಃ ।**
**ಸೌಧನ್ವನಾ ಋಭವಃ ಸೂರಚಕ್ಷಸಃ ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ॥**

(ಸಂ. ಸಂ. ೧.೧೧೦-೪)

ಇದಕ್ಕೆ ಯಾಸ್ಕರ ನಿರುಕ್ತವು—

**ಕೃತ್ವಾ ಕರ್ಮಾಣಿ ಕ್ಷಿಪ್ರತ್ವೇನ ವೋಢಾರೋ ಮೇಧಾವಿನೋ ವಾ ಮರ್ತಾಸಃ ಸಂತೋ ಅಮೃತ-ತತ್ವಮಾನಶಿರೇ ಋಭವಃ ಸೂರಖ್ಯಾನಾ ವಾ ಸೂರಪ್ರಜ್ಞಾ ವಾ, ಸಂವತ್ಸರೇ ಸಮಪೃಚ್ಯಂತ ಧೀತಿಭಿಃ ಕರ್ಮಭಿಃ ॥**

ಮುಖ್ಯಾಭಿಪ್ರಾಯವೇನೆಂದರೆ—ಸುಧನ್ವನ ಪುತ್ರರಾದ ಈ ಋಭುಗಳು ಹಿಂದೆ ಮನುಷ್ಯರಾಗಿದ್ದರು. ಅವರು ಸೂರ್ಯನಿಗೆ ಸಮಾನವಾದ ತಮ್ಮ ಪ್ರಜ್ಞೆ ಅಥವಾ ಬುದ್ಧಿಶಕ್ತಿಯಿಂದ ಬೇಗನೆ ಎಂದರೆ ಒಂದೇ ಸಂವತ್ಸರದಲ್ಲಿ ಸರ್ವಯಜ್ಞಗಳನ್ನೂ ಮಾಡಿ **ಅಮೃತತ್ವಂ** ಎಂದರೆ ದೇವತ್ವವನ್ನು (ಮರಣರಹಿತತ್ವವನ್ನು) ಪಡೆದರು.

ಋಭುಶಬ್ದಕ್ಕೆ ಯಾಸ್ಕರು ಮತ್ತೊಂದರ್ಥವನ್ನೂ ಹೇಳಿರುವರು—

**ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ**—ಸೂರ್ಯನ ರಶ್ಮಿಗಳಿಗೂ ಋಭವಃ ಎಂದು ಹೇಳುವರು ಎಂದು. ಉದಾಹರಣೆಗಾಗಿ—

**ಉದ್ವತ್ಸ್ವಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।**
**ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ॥**

(ಋ. ಸಂ. ೧-೧೬೧-೧೧).

ಈ ಋಕ್ಕಿಗೆ ಯಾಸ್ಕರು—ಅಗೋಹ್ಯ ಆದಿತ್ಯೋಽಗೂಹನೀಯಸ್ತಸ್ಯ ಯದಸ್ವಪಥ ಗೃಹೇ ಯಾವ-ತ್ತತ್ರ ಭವಥ ನ ತಾವದಿಹ ಭವಥೇತಿ । ಎಂದು ನಿರುಕ್ತವನ್ನು ಹೇಳಿರುವರು. ಭಾಷ್ಯಕಾರರೂ ಸಹ ಈ ಋಕ್ಕಿನ ಅರ್ಥವಿವರಣೆ ಮಾಡುವಾಗ ಋಭವಃ ಎಂಬ ಶಬ್ದಕ್ಕೆ—**ಋಭವಃ ಉರು ಪ್ರಭೂತಂ ಭಾಸಮಾನಾಃ ಋತೇನಾ-ದಿತ್ಯೇನ ಭಾಸಮಾನಾ ವಾ ಋತೇನೋದಕೇನೋದಕಾರ್ಥಮುತ್ಪನ್ನಾ ವಾ**—ಎಂದು ಅರ್ಥಮಾಡಿರುವರು.

ಋ. ಸಂ ೧-೧೧೦-೨ನೆಯ ಋಕ್ಕಿನಲ್ಲಿ ಯಜ್ಞದಲ್ಲಿ ಹವಿಸ್ಸನ್ನು ಅರ್ಪಿಸಿದ ಅಥವಾ ಆತಿಥ್ಯವನ್ನು ನೀಡಿದ ಸವಿತೃವಿನ ಮನೆಗೆ ಋಭುಗಳು ಹೋದರು ಎಂದು ಪೂರ್ವದ ಇತಿಹಾಸದ ಸಂದರ್ಭವು ಸೂಚಿಸಿದೆ. ಈ ಇತಿಹಾಸವನ್ನು ಸ್ಕಂದಸ್ವಾಮಿಗಳು ಒಂದು ವಿಧವಾಗಿಯೂ, ಸಾಯಣರು ಇನ್ನೊಂದುವಿಧವಾಗಿಯೂ ವಿವರಿಸಿದ್ದಾರೆ. ಈ ಸಂದರ್ಭದಲ್ಲಿ,

**ಅತ್ರೇತಿಹಾಸಮಾಚಕ್ಷತೇ । ಋಭವೋ ಯಜ್ಞಿಯತ್ವಂ ಪ್ರಾರ್ಥಯಮಾನಾಃ ಪ್ರಜಾಪತೇಃ ಸಕಾಶಮುಗಮನ್ । ಅಥ ಪ್ರಜಾಪತಿಃ ಸವಿತಾರಮಾಹೂಯಾವೋಚತ್ । ಏತೇಽಪಿ ಯಜ್ಞಿ-**

CC-0. Jangamwadi Math Collection. Digitized by eGangotri

ಯಾ ಭವಂತ್ವಿತಿ । ತಥೇತಿ ಸವಿತಾ ಪ್ರತಿಪದ್ಯ ತಾನ್ ಸ್ವಗೃಹಂ ನೀತ್ವಾ ದ್ವಾದಶ ದಿನಾನ್ಯಾತಿಥ್ಯಮೇಷಾಮಕಾರ್ಷೀದಿತಿ । ತದೇತದ್ವಾಮದೇವೋ ವಕ್ಷ್ಯತಿ ।

ಋಭುಗಳು ಯಜ್ಞದಲ್ಲಿ ಭಾಗವಹಿಸಿ ಹವಿಸ್ಸನ್ನು ಸ್ವೀಕರಿಸಲು ಅರ್ಹತೆಯನ್ನು ಪಡೆಯಬೇಕೆಂದು ಇಚ್ಛಿಸಿ ಪ್ರಜಾಪತಿಯ ಸಮೀಪಕ್ಕೆ ಹೋದರು. ಆಗ ಪ್ರಜಾಪತಿಯು ಸವಿತೃವನ್ನು ಕರೆದು ಇವರೂ ಸಹ ಯಜ್ಞಾರ್ಹರಾಗಲಿ (ಅದಕ್ಕೆ ಸಹಾಯಮಾಡು) ಎಂದು ಹೇಳಿದ ನಂತರ ಸವಿತೃವು ಹಾಗೇ ಆಗಲೆಂದು ಒಪ್ಪಿಕೊಂಡು ತನ್ನ ಮನೆಗೆ ಕರೆದುಕೊಂಡು ಹೋಗಿ ಹನ್ನೆರಡು ದಿನಗಳು ಅವರಿಗೆ ಅತಿಥಿಸತ್ಕಾರವನ್ನು ನೆರವೇರಿಸಿದನು ಎಂದು ಸ್ಕಂದಸ್ವಾಮಿಗಳು ಕಥೆಯನ್ನು ಸಂಕ್ಷೇಪವಾಗಿ ಹೇಳಿ, ಈ ಕಥಾಸಂದರ್ಭವನ್ನು ಸೂಚಿಸತಕ್ಕ,

ದ್ವಾದಶ ದ್ಯೂನ್ಯದಗೋಹ್ಯಸ್ಯಾತಿಥ್ಯೇ ರಣನ್ನೃಭವಃ ಸಸಂತಃ ।
ಸುಕ್ಷೇತ್ರಾಕೃಣ್ವನ್ನನಯಂತ ಸಿಂಧೂನ್ಧನ್ವಾತಿಷ್ಠನ್ನೋಷಧೀರ್ನಿಮ್ನಮಾಪಃ ॥

(ಋ. ಸಂ. ೪-೩೩-೭)

ಎಂಬ ಋಕ್ಕನ್ನು ಉದಾಹರಿಸಿದ್ದಾರೆ. ಇದೇ ಸಂದರ್ಭದಲ್ಲಿ ಸಾಯಣರು ಋಭುಗಳು ಸವಿತೃವಿನ ಮನೆಗೆ ಹೋಗಲು ಒದಗಿದ ಕಾರಣವನ್ನು ತಿಳಿಸತಕ್ಕ ಅಂಶವನ್ನು ಸೂಚಿಸಿದ್ದಾರೆ.

ದಾಶುಷಃ ಪ್ರಾತಃಸವನಾದಿಷ್ವಗ್ನ್ಯಾದಿಭಿರಪಸಾರಿತೇಭ್ಯ ಋಭುಭ್ಯಃ ಸೋಮಪಾನಂ ದತ್ತವತಃ ಸವಿತುಃ ಗೃಹಂ ನಿವಾಸಸ್ಥಾನಂ ತೃತೀಯಸವನಾಖ್ಯಮುಗಚ್ಛತ ಪ್ರಾಪ್ತಾಃ ॥

ಪ್ರಾತಃಸವನಾದಿಗಳಲ್ಲಿ ಅಗ್ನ್ಯಾದಿದೇವತೆಗಳಿಂದ ತಿರಸ್ಕರಿಸಲ್ಪಟ್ಟು ಹೊರಕ್ಕೆ ಕಳುಹಲ್ಪಟ್ಟ ಋಭುಗಳಾದ ನಿಮಗೆ ಸೋಮಪಾನವನ್ನು ಅರ್ಪಿಸಿದ ಸವಿತೃವಿನ ತೃತೀಯಸವನರೂಪವಾದ ಯಜ್ಞಗೃಹವನ್ನು ಪ್ರವೇಶಿಸಿರಿ ಎಂದು ಅಗ್ನ್ಯಾದಿಗಳಿಂದ ಸಂಭವಿಸಿದ ತಿರಸ್ಕಾರದ ವಿಷಯವನ್ನೂ ಹೇಳಿದ್ದಾರೆ. ಈ ವಿಷಯವು ಐತರೇಯಬ್ರಾಹ್ಮಣದಲ್ಲಿ ವಿಶದವಾಗಿ ಉಕ್ತವಾಗಿದೆ.

ಋಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯಂಸ್ತೇಭ್ಯಃ ಪ್ರಾತಃಸವನೇ ವಾಚಿ ಕಲ್ಪಯಿಷಂಸ್ತಾನಗ್ನಿರ್ವಸುಭಿಃ ಪ್ರಾತಃಸವನಾದನುದತ ತೇಭ್ಯೋ ಮಾಧ್ಯಂದಿನೇ ಸವನೇ ವಾಚಿ ಕಲ್ಪಯಿಷಂಸ್ತಾನಿಂದ್ರೋ ರುದ್ರೈರ್ಮಾಧ್ಯಂದಿನಾತ್ಸವನಾದನುದತ ತೇಭ್ಯಸ್ತೃತೀಯ-ಸವನೇ ವಾಚಿ ಕಲ್ಪಯಿಷಂಸ್ತಾನ್ವಿಶ್ವೇ ದೇವಾ ಅನೋನುದ್ಯಂತ ನೇಹ ಪಾಸ್ಯಂತಿ ನೇಹೇತಿ ಸ ಪ್ರಜಾಪತಿರಬ್ರವೀತ್ಸವಿತಾರಂ ತವ ವಾ ಇಮೇಽಂತೇವಾಸಾಸ್ತ್ವಮೇವೈಭಿಃ ಸಂಪಿಬಸ್ವೇತಿ ಸ ತಥೇತ್ಯಬ್ರವೀತ್ಸವಿತಾ ತಾನ್ವೈ ತ್ವಮುಭಯತಃ ಪರಿಪಿಬೇತಿ ತಾನ್ಪ್ರಜಾಪತಿರುಭಯತಃ ಪರ್ಯಪಿಬತ್ ।

(ಐ ಬ್ರಾ ೧೩-೩೦)

ಋಭುಗಳು ತಮ್ಮ ತಪಃಸಾಧನೆಯಿಂದಲೂ, ಉತ್ಕಟವಾದ ಇಚ್ಛೆಯಿಂದಲೂ ದೇವತೆಗಳ ನಡುವೆ ಸೋಮಪಾನವನ್ನು ಸಂಪಾದಿಸಿದರು ಮೊದಲು ಪ್ರಾತಃಸವನದಲ್ಲಿ ಅದನ್ನು ಹೊಂದಲು ಇಚ್ಛಿಸಿದಾಗ ಅಗ್ನಿಯು ವಸುಗಳೊಂದಿಗೆ ಸೇರಿಕೊಂಡು ಅವರನ್ನು ತಿರಸ್ಕರಿಸಿ ಅಟ್ಟಿಬಿಟ್ಟನು. ಆಗ ಮಾಧ್ಯಂದಿನ ಸವನದಲ್ಲಿ ಅದನ್ನು ಪಡೆಯಲಿಚ್ಛಿಸಿದಾಗ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು. ಪುನಃ ತೃತೀಯಸವನದಲ್ಲಿ ಅದನ್ನು

CC-0. Jangamwadi Math Collection. Digitized by eGangotri

ಪಡೆಯಲಿಚ್ಛಿಸಿದಾಗ ವಿಶ್ವೇದೇವತೆಗಳು 'ನೀವು ಇಲ್ಲಿ ಖಂಡಿತ ಸೋಮಪಾನಮಾಡಲರ್ಹರಲ್ಲ, ನೀವು ಮಾಡಕೂಡದು' ಎಂದು ಕಠಿಣವಾದ ಮಾತಿನಿಂದ ಅಲ್ಲಿಯೂ ತಿರಸ್ಕರಿಸಿದರು. ಆಗ ಪ್ರಜಾಪತಿಯು ಸವಿತೃವನ್ನು ಕುರಿತು 'ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡು' ಎಂದನು. ಅನಂತರ ಸವಿತೃವು ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಅಕ್ಕಪಕ್ಕದಲ್ಲೇ ಸೋಮರಸವನ್ನು ಪಾನಮಾಡಿದನು, ಎಂಬುದಾಗಿ ಐತರೇಯ ಬ್ರಾಹ್ಮಣದಲ್ಲಿ ವಿಸ್ತಾರವಾಗಿ ಹೇಳಿರುವ ಸನ್ನಿವೇಶವನ್ನು ಸಾಯಣರು ಸೂಕ್ಷ್ಮವಾಗಿ ಹೇಳಿದ್ದಾರೆ.

ಋಭುಗಳ ಕಲಾಕೌಶಲ್ಯದ ವಿಷಯದಲ್ಲಿ ಕೆಲವು ಉದಾಹರಣೆಗಳನ್ನು ಕೊಡಬಹುದು—ತ್ವಷ್ಟೃವಿನಿಂದ ನಿರ್ಮಿತವಾದಾಗ ಒಂದೇ ಆಗಿ ಇದ್ದ ಚಮಸಪಾತ್ರೆಯನ್ನು ನಾಲ್ಕುಪಾತ್ರೆಗಳನ್ನಾಗಿ ಮಾಡಿದಿರಿ ಎಂದು ಋಭುಗಳ ಕಲಾಕೌಶಲ್ಯವನ್ನು ಶ್ಲಾಘಿಸಿದೆ.

ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।
ಅಕರ್ತ ಚತುರಃ ಪುನಃ ।

(ಋ. ಸಂ. ೧-೨೦-೬)

ಎಂಬ ಋಕ್ಕಿನಲ್ಲಿ ಹೇಳಿರುವಂತೆಯೂ ಮತ್ತು ಇದೇ ವಿವರವನ್ನು ಮುಂದೆಯೂ

ಜ್ಯೇಷ್ಠ ಆಹ ಚಮಸಾ ದ್ವಾ ಕರೇತಿ ಕನೀಯಾನ್ತ್ರೀನ್ಕೃಣವಾಮೇತ್ಯಾಹ ।
ಕನಿಷ್ಠ ಆಹ ಚತುರಸ್ಕರೇತಿ ತ್ವಷ್ಟ ಋಭವಸ್ತತ್ಪನಯದ್ವಚೋ ವಃ ॥

(ಋ. ಸಂ. ೪-೩೩-೫)

ಇತ್ಯಾದಿ ಋಕ್ಕುಗಳಲ್ಲಿ ಹೇಳುವಂತೆಯೂ ಸಹ ಒಂದಾದ ಪಾತ್ರೆಯನ್ನು ತಮ್ಮ ಕಲಾಕೌಶಲ್ಯದಿಂದ ನಾಲ್ಕನ್ನಾಗಿ ಮಾಡಿದ ವಿಷಯವು ಪ್ರಸಿದ್ಧವಾಗಿದೆ. ಈ ಕಾರ್ಯದಲ್ಲೂ ಸಹ ತ್ವಷ್ಟೃವಿನ ಶಿಕ್ಷಣದಿಂದ ಇವರಿಗೆ ಈ ಶಕ್ತಿಯು ಬಂದಿತೆಂದೂ, ಇವರು ತ್ವಷ್ಟೃವಿನ ಶಿಷ್ಯರಾಗಿದ್ದರೆಂಬುದೂ ಬೃಹದ್ದೇವತೆಯಲ್ಲಿ ಉಕ್ತವಾಗಿದೆ

ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇಽಭವನ್ ॥
ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।
ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್ ॥
ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಽಪಿ ಯತ್ ॥
ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।
ಉಕ್ತ್ವಾ ತತಶ್ಚತುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ ॥
ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ ।
ಸರ್ವಾನ್ದೇವಾನ್ ಸಮಾಮಂತ್ರ್ಯ ಅಮೃತತ್ವಂ ವದುಶ್ಚ ತೇ ॥

CC-0. Jangamwadi Math Collection. Digitized by eGangotri

ತೇಷಾಮಾದ್ಯಾಂತ್ಯಯೋರ್ನಾಮ್ನಾ ದೃಶ್ಯತೇ ಬಹುವತ್ ಸ್ತವಃ ।
ತೃತೀಯೆಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ॥
ಆಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ॥

(ಬೃ. ದೇ. ೩-೮೩ ರಿಂದ ೮೮)

ಪೂರ್ವದಲ್ಲಿ ಸುಧನ್ವಪುತ್ರರಾದ ಋಭು, ವಿಭ್ವ, ವಾಜ ಎಂಬ ಮೂವರೂ ಸಹ ತ್ವಷ್ಟೃವಿನ ಶಿಷ್ಯರಾದರು. ಸಕಲಕಲಾಕುಶಲನಾದ ತ್ವಷ್ಟೃವು ಅವರಿಗೂ ಸಹ ಎಲ್ಲಾ ಕಲೆಗಳನ್ನೂ ಕಲಿಸಿದನು. ಆಗ ಕಲೆಗಳಲ್ಲಿ ನಿಪುಣರಾದ ವಿಶ್ವೇದೇವತೆಗಳು ಅವರನ್ನು ಪ್ರತಿಭಟನಾದೃಷ್ಟಿಯಿಂದ ಎದುರಿಸಿದರು. ಆಗ ಇವರು ಸಕಲದೇವತೆಗಳಿಗೂ ಸಹ ಆಯುಧಗಳನ್ನೂ, ವಾಹನಗಳನ್ನೂ ನಿರ್ಮಿಸಿದರು. ಅನಂತರ ಅಮೃತದಾಯಿಯಾದ ಧೇನುವನ್ನು ಸೃಷ್ಟಿಸಿದರು. ಬೃಹಸ್ಪತಿ ಮತ್ತು ಅಶ್ವಿನೀದೇವತೆಗಳಿಗೆ, ಆಸನತ್ರಯುಗಳುಳ್ಳ ರಥಗಳನ್ನೂ, ಇಂದ್ರನಿಗೆ ಅಶ್ವಗಳನ್ನೂ ಮತ್ತು ದೇವತೆಗಳಿಂದ ದೂತನಾಗಿ ಕಳುಹಲ್ಪಟ್ಟ ಅಗ್ನಿಗೆ ಯಥೋಕ್ತವಾದುವನ್ನೂ, ಎಂದರೆ,

ಕಿಮು ಶ್ರೇಷ್ಠಃ ಕಿಂ ಯವಿಷ್ಠೋ ನ ಆಜಗನ್ಕಿಮೀಯತೇ ದೂತ್ಯಂ೧ ಕದ್ಯದೂಚಿಮ ।
ನ ನಿಂದಿಮ ಚಮಸಂ ಯೋ ಮಹಾಕುಲೋಽಗ್ನೇ ಭ್ರಾತರ್ದ್ರುಣ ಇದ್ಭೂತಿಮೂದಿಮ ॥
ಏಕಂ ಚಮಸಂ ಚತುರಃ ಕೃಣೋತನ ತದ್ವೋ ದೇವಾ ಅಬ್ರುವನ್ತದ್ವ ಆಗಮಂ ।
ಸೌಧನ್ವನಾ ಯದ್ಯೇವಾ ಕರಿಷ್ಯಥ ಸಾಕಂ ದೇವೈರ್ಯಜ್ಞಿಯಾಸೋ ಭವಿಷ್ಯಥ ॥
ಅಗ್ನಿಂ ದೂತಂ ಪ್ರತಿ ಯದಬ್ರವೀತನಾಶ್ವಃ ಕರ್ತ್ವೋ ರಥ ಉತೇಹ ಕರ್ತ್ವಃ ।
ಧೇನುಃ ಕರ್ತ್ವಾ ಯುವಶಾ ಕರ್ತ್ವಾ ದ್ವಾ ತಾನಿ ಭ್ರಾತರನು ವಃ ಕೃತ್ವ್ಯೇಮಸಿ ॥

(ಋ. ಸಂ. ೧-೧೬೧-೧ ರಿಂದ ೩)

ಎಂಬ ಋಕ್ಕುಗಳಲ್ಲಿ ವರ್ಣಿಸಿರುವಂತೆ ಅಗ್ನಿಯು ದೇವದೂತನಾಗಿ ಸುಧನ್ವಪುತ್ರರಲ್ಲಿಗೆ ಹೋಗಿ ಒಂದೇ ಆಗಿರುವ ಚಮಸಪಾತ್ರೆಯನ್ನು ನಾಲ್ಕನ್ನಾಗಿ ಮಾಡಿ ದೇವತೆಗಳಿಗೆ ಸಹಾಯಮಾಡಿದರೆ ಆಗ ಅವರ ಜೊತೆಯಲ್ಲಿ ಸೋಮರಸಪಾನಕ್ಕೆ ಅರ್ಹತೆಯನ್ನು ಅವರು ಪಡೆಯುವರೆಂದು ಹೇಳಿದಾಗ ಅವರು ನಿಮಗೆ ಇದೊಂದು ಕೆಲಸಮಾತ್ರವಲ್ಲದೇ ಅಶ್ವನಿರ್ಮಾಣವಾಗಲಿ, ರಥನಿರ್ಮಾಣವಾಗಲಿ ಅಥವಾ ಧೇನುನಿರ್ಮಾಣವಾಗಲಿ ಅಥವಾ ವೃದ್ಧರಾದ ಮಾತಾಪಿತಗಳನ್ನು ಯುವಕರನ್ನಾಗಿ ಮಾಡುವುದಾಗಲಿ ಇವೆಲ್ಲಾ ನಮ್ಮಿಂದ ಸಾಧ್ಯವಾಗಿದ್ದು, ಆದರಂತೆಯೇ ಈಗಲೂ ಸಹ ನಿಮಗೆ ಅಪೇಕ್ಷಿತವಾದುದನ್ನೆಲ್ಲಾ ಮಾಡಿಕೊಡುವೆವು ಎಂದು ಅದನ್ನು ಮಾಡಿಕೊಟ್ಟರು ಎಂಬ ವಿಷಯವನ್ನು ಇಲ್ಲಿ ಸೂಚಿಸಿದೆಯಾದ್ದರಿಂದ ಅಂತಹ ಕುಶಲಕಾರ್ಯದಿಂದ ಅಗ್ನಿಗೆ ಸಹಾಯವನ್ನು ಮಾಡಿದರು. ಆಗ ತ್ವಷ್ಟೃವೂ ಸವಿತೃವೂ, ದೇವದೇವನಾದ ಪ್ರಜಾಪತಿಯೂ ಸಕಲ ದೇವತೆಗಳನ್ನೂ ಕರೆದು ಋಭುಗಳಿಗೆ ಅಮೃತತ್ವವು ಲಭಿಸುವಂತೆ ಅನುಗ್ರಹಿಸಿದರು. ಆಗ (ಅವರನ್ನು ಮೊದಲು ತಿರಸ್ಕರಿಸಿದ್ದ) ಇಂದ್ರನೂ ಸಹ ಅವರೊಂದಿಗೆ ಸೋಮರಸವನ್ನು ಪಾನಮಾಡಿದನು ಎಂಬ ಕಥೆಯು ಬೃಹದ್ದೇವತೆಯಲ್ಲಿ ಉಕ್ತವಾಗಿದೆ.

ಸಾಯಣಭಾಷ್ಯದಲ್ಲಿ ಹೇಳಿರುವ ಕಥೆಯು ಈ ರೀತಿಯಿದೆ.—**ಪುರಾ ಕಸ್ಯಚಿದೃಷೇರ್ಧೇನುರ್ಮೃತಾ । ಸ ಋಷಿಸ್ತಸ್ಯಾ ಧೇನೋರ್ವತ್ಸಂ ದೃಷ್ಟ್ವಾ ಋಭುಂ ತುಷ್ಟಾವ । ಋಭವಸ್ತತ್ಸದೃಶೀಮನ್ಯಾಂ ಧೇನುಂ**



CC-0. Jangamwadi Math Collection. Digitized by eGangotri

ಕೃತ್ವಾ ತದೀಯೇನ ಚರ್ಮಣಾ ಸಂವೀಯ ತೇನ ವತ್ಸೇನ ಸಮಯೋಜಯನ್ನಿತಿ । ಹಿಂದೆ ಒಬ್ಬ ಋಷಿಯ ಧೇನುವು ಮೃತವಾದಾಗ ಅದರ ಸಣ್ಣ ಕರುವಿನ ಮೇಲಿನ ಕನಿಕರದಿಂದ ಅದಕ್ಕೆ ಸಹಾಯಮಾಡಬೇಕೆಂದು ಋಭು ಗಳನ್ನು ಪ್ರಾರ್ಥಿಸಿದನು. ಆಗ ಋಭುಗಳು ಬೇರೆ ಹಸುವನ್ನು ಸೃಷ್ಟಿಸಿ ಅದಕ್ಕೆ ಸತ್ತ ಹಸುವಿನ ಚರ್ಮವನ್ನು ಹೊದ್ದಿಸಿ ಆ ಕರುವಿನೊಂದಿಗೆ ಸೇರುವಂತೆ ಮಾಡಿದರು. ಇದು ಇವರ ಮಹಿಮೆಯು- ಸ್ಕಂದಸ್ವಾಮಿಗಳ ವಿವರಣೆಯಂತೆ,

> ಅತ್ರೇತಿಹಾಸಮಾಚಕ್ಷತೇ । ಋಷೇಃ ಕಸ್ಯಚಿದಗ್ನಿಹೋತ್ರಧೇನುಸ್ತರುಣವತ್ಸಾ ಮಮಾರ । ತಸ್ಯಾಂ ವಿಕರ್ತಿತಾಯಾಂ ಆರುದತಾ ವತ್ಸೇನ ಉದ್ವೇಜಿತಃ ಋಭೂನ್ ಸ್ವಪಿತರೌ ವೃದ್ಧೌ ಪುನರ್ಯು ವಾನೌ ಕುರ್ವತೋ ದದರ್ಶ । ತಾನುವಾಚ । ಮಮಾಪ್ಯಗ್ನಿಹೋತ್ರಧೇನುಂ ಮೃತಾಂ ಪುನರ್ಜೀವಯತೇತಿ । ತಸ್ಯ ಸ್ವಮಾಹಾತ್ಮ್ಯೇನ ತಸ್ಮಾಚ್ಚರ್ಮಣಃ ತಾಮೇವ ಗಾಂ ಅಶೇಷಾ ವಯವೋಪೇತಾಂ ಚಕ್ರುಃ ಇತಿ । ತದೇತದಿಹೋಚ್ಯತೇ ನಿಶ್ಚರ್ಮಣ ಇತಿ ।

ಒಬ್ಬ ಋಷಿಯ ಅಗ್ನಿಹೋತ್ರಧೇನುವು ತನ್ನ ಎಳೆಯ ಕರುವನ್ನು ಬಿಟ್ಟು ಸತ್ತುಹೋಯಿತು ಅದನ್ನು ಕುಯ್ಯುವಾಗ ಆ ಎಳೆಯ ಕರುವಿನ ಆರ್ತನಾದವನ್ನು ಕೇಳಿ ಕನಿಕರದಿಂದ ಋಷಿಯು ಋಭುಗಳನ್ನು ಜ್ಞಾಪಿಸಿಕೊಂಡನು. ಅವರು ತಮ್ಮ ವೃದ್ಧರಾದ ಮಾತಾಪಿತೃಗಳನ್ನು ಪುನಃ ವಯಸ್ಕರನ್ನಾಗಿ ಮಾಡುತ್ತಿದ್ದರು. ಅವರ ಆ ಶಕ್ತಿಯನ್ನು ನೋಡಿ ಮೃತವಾದ ತನ್ನ ಅಗ್ನಿಹೋತ್ರಧೇನುವನ್ನೂ ಬದುಕಿಸಬೇಕೆಂದು ಕೇಳಿಕೊಂಡನು. ಅವರು ಸತ್ತುಹೋಗಿದ್ದ ಆ ಹಸುವನ್ನು ಅದೇ ವಿಕರ್ತಿತವಾದ ಚರ್ಮದ ಹೊದ್ದಿಕೆಯಿಂದ ಪೂರ್ಣವಾದ ಅವಯವಗಳುಳ್ಳದ್ದನ್ನಾಗಿ ಮಾಡಿ ಆ ಹಸುವನ್ನು ಬದುಕಿಸಿದರು ಎಂದು ಹೇಳಿದೆ. ಸಾಯಣರು ಹೇಳುವುದಕ್ಕೂ ಇದಕ್ಕೂ ಇರುವ ಮುಖ್ಯವ್ಯತ್ಯಾಸವು ಏನೆಂದರೆ, ಅವರು ಅನ್ಯಾಂ ಧೇನುಂ ಕೃತ್ವಾ ಎಂದಿದ್ದಾರೆ. ಸ್ಕಂದಸ್ವಾಮಿಯು ತಾಮೇವ ಗಾಂ ಅಶೇಷಾವ-ಯವೋಪೇತಾಂ ಚಕ್ರುಃ ಎಂದು ಹೇಳಿದಾರೆ.

ಋಭು ಎಂಬ ಪದವು ಪ್ರಾಯಶಃ ರಭ್ (ಹಿಡಿದಿಕೋ) ಧಾತುವಿನಿಂದ ನಿಷ್ಪನ್ನವಾಗಿದೆ. (೨-೩-ಅನ್ನು ಹೋಲಿಸಿ) ; ಆದುದರಿಂದಲೇ ಆ ಪದಕ್ಕೆ 'ಸಮಯಕ್ಕೆ ಒದಗುವ' 'ಕೈಚಳಕವುಳ್ಳ' ಎಂದು ಅರ್ಥವಾಗಿದೆ. ಈ ಋಭುಪದವು ಇದೇ ಅರ್ಥದಲ್ಲಿ ವಿಶೇಷಣವಾಗಿ ಇಂದ್ರ, ಅಗ್ನಿ, ಮತ್ತು ಆದಿತ್ಯರುಗಳಿಗೆ ಅನೇಕ ಸಲ ಉಪ ಯೋಗಿಸಲ್ಪಟ್ಟಿದೆ. ವಾಜ ಎಂಬ ಪದಕ್ಕೆ ಸಮರ್ಥ ಎಂತಲೂ ವಿಭ್ವಾ ಎಂಬುದಕ್ಕೆ ಪ್ರಸಿದ್ಧವಾದ ಎಂತಲೂ ಅರ್ಥ ವಾಗುತ್ತದೆ. ಆದುದರಿಂದ ಋಭು ಮೊದಲಾದ ಪದಗಳು, ಅವರುಗಳ ಕೌಶಲ್ಯವನ್ನೂ ಸೂಚಿಸುವ ಅನ್ವರ್ಥ ನಾಮಗಳಾಗಿವೆ.

ಇವರು ಮೊದಲು ದೇವತೆಗಳಾಗಿರಲಿಲ್ಲವೆಂಬುದು ಸ್ಪಷ್ಟವಾದ ವಿಷಯ. ಆದರೆ ದೇವತೆಗಳಾಗುವ ಮುಂಚೆ ಅವರ ಸ್ವಭಾವವೇನು ಎಂಬುದು ಸ್ಪಷ್ಟವಾಗಿಲ್ಲ. ಸೌಧನ್ವರು ಎಂದು ಹೇಳಿದಾಗಲೂ ಅವರು ಯಾರೆಂಬುದು ಗೊತ್ತಾಗುವುದಿಲ್ಲ. ಸುಧನ್ವಾನ್ ಎಂಬುದು ರುದ್ರ ಮತ್ತು ಮರುತರಿಗೆ ಅನ್ವಯಿಸುವಂತೆ ಎರಡೇ ಸಲ ಋಗ್ವೇದದಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಅನೇಕ ಕಡೆ ಹೇಳಿರುವಂತೆ, ದ್ಯಾವಾಭೂಮಿಗಳು ಅವರ ಮಾತಾಪಿತೃಗಳಿರಬಹುದು. ಮರೆಮಾಡಲಸಾಧ್ಯವಾದ ಸವಿತೃವಿನ ಮನೆಯಲ್ಲಿದುದ್ದರಿಂದ ಅವರಿಗೆ ಭೂಮಿ ಯನ್ನು ಫಲವತ್ತಾಗಿ ಮಾಡುವ ಶಕ್ತಿಯಿದೆಯೆಂದು ಹೇಳಿರಬಹುದು. ಅನೇಕ ವಿದ್ವಾಂಸರು, ಈ ಮೂವರೂ

CC-0. Jangamwadi Math Collection. Digitized by eGangotri

ಮೂರು ಋತುಗಳ ಅಭಿಮಾನಿಗಳೆಂದೂ, ಅವರು ಹನ್ನೆರಡು ದಿನಗಳು ನಿದ್ರಿಸಿದರೆಂಬುದು ಮಕರಸಂಕ್ರಾಂತಿ ಕಾಲದಲ್ಲಿ ಋತುಗಳು ಹನ್ನೆರಡು ದಿವಸ ಚಲಿಸದೇ ಇರುವುದಕ್ಕೆ ಅನ್ವಯಿಸುತ್ತದೆಯೆಂತಲೂ, ಬಟ್ಟಲೆಂಬುದು ಚಂದ್ರನೆಂತಲೂ, ಅದು ನಾಲ್ಕು ಆಯಿತೆಂಬುದು ಚಂದ್ರನ ನಾಲ್ಕು ರೂಪಗಳೆಂತಲೂ ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಇವರು ಭೂಮಿ ಅಥವಾ ವಾಯುಮಂಡಲದಲ್ಲಿರುವ ಅಪ್ರಾಕೃತವ್ಯಕ್ತಿಗಳೆಂದೂ, ಅವರ ಕೌಶಲ್ಯವು ಅವರ ವಿಷಯವಾಗಿ ಅನೇಕ ಸಾಹಸಕರ್ಮಗಳ ಕಥೆಗಳು ಹೊರಡುವಂತೆ ಮಾಡಿತೆಂದೂ ಹೇಳಬಹುದು. ಆದರೆ ಋಗ್ವೇದವೊಂದನ್ನೇ ಆಧಾರವಾಗಿಟ್ಟುಕೊಳ್ಳುವುದಾದರೆ ಯಾವ ನಿಶ್ಚಿತಅಭಿಪ್ರಾಯಕ್ಕೂ ಅವಕಾಶವಿಲ್ಲ.

——— : o : ———

ಸಾಯಣಭಾಷ್ಯಂ

**ಇಹೇಹ ವ ಇತಿ ಸಪ್ತರ್ಚಂ ಸಪ್ತಮಂ ಸೂಕ್ತಂ ವೈಶ್ವಾಮಿತ್ರಂ ಜಾಗತಮೃಭುದೇವತಾಕಂ । ಅಂತ್ಯಸ್ತೃಚ ಇಂದ್ರದೇವತಾಕಶ್ಚ । ತಥಾ ಚಾನುಕ್ರಾಂತಂ । ಇಹೇಹ ವಃ ಸಪ್ತಾರ್ಭವಂ ಜಾಗತಂ ತೃಚೋಽಂತ್ಯ ಐಂದ್ರಶ್ಚೇತಿ ॥ ಸೂಕ್ತವಿನಿಯೋಗೋ ಲೈಂಗಿಕಃ । ಆದ್ಯಾಶ್ಚತಸ್ರಃ ಪೃಷ್ಠ್ಯಾಭಿಪ್ಲವಷಡಹಯೋಃ ಪ್ರಥಮೇಽಹನಿ ವೈಶ್ವದೇವಶಸ್ತ್ರ ಆರ್ಭವನಿವಿದ್ಧಾನೀಯಾಃ । ಸೂತ್ರಿತಂ ಚ । ಇಹೇಹ ವ ಇತಿ ಚತಸ್ರಃ । ಆ. ೭-೫ । ಇತಿ ॥**

ಅನುವಾದವು— **ಇಹೇಹ ವಃ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು ; ಋಭುಗಳು ದೇವತೆಯು ; ಈ ಸೂಕ್ತದ ಕೊನೆಯ ಮೂರು ಋಕ್ಕುಗಳು ಇಂದ್ರದೇವತಾಕವು ; ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ— **ಇಹೇಹ ವಃ ಸಪ್ತಾರ್ಭವಂ ಜಾಗತಂ ತೃಚೋಂತ್ಯ ಐಂದ್ರಶ್ಚ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಪೃಷ್ಠ್ಯ ಮತ್ತು ಅಭಿಪ್ಲವಷಡಹವೆಂಬ ಯಾಗಗಳಲ್ಲಿ ಮೊದಲನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ಈ ಸೂಕ್ತದ ಮೊದಲನೆಯ ನಾಲ್ಕು ಋಕ್ಕುಗಳನ್ನು ಋಭುದೇವತಾಕವಾದ ನಿವಿದ್ಧಾನೀಯಮಂತ್ರಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಇಹೇಹ ವ ಇತಿ ಚತಸ್ರಃ** ಎಂಬ ಸೂತ್ರದಿಂದ (ಆ. ೭-೫) ವಿವೃತವಾಗಿರುವುದು.

---

## ॥ ಓಂ ॥

## ಸೂಕ್ತ—೬೦

**ಮಂಡಲ—೩ ॥ ಅನುವಾಕ—೫ ॥ ಸೂಕ್ತ—೬೦ ॥**

**ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೭ ॥**

**॥ ಸೂಕ್ತದಲ್ಲಿರುವ ಋಕ್ಸಂಖ್ಯೆ— ೭॥**

**ಋಷಿಃ—ವಿಶ್ವಾಮಿತ್ರಃ ॥**

**ದೇವತಾ—೧-೪. ಋಭವಃ । ೫-೭. ಋಭವ ಇಂದ್ರಶ್ಚ.**

**ಛಂದಃ—ಜಗತೀ ॥**

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಹೇಹ ವೋ ಮನಸಾ ಬಂಧುತಾ ನರ ಉಶಿಜೋ ಜಗ್ಮುರಭಿ ತಾನಿ ವೇದಸಾ ।

ಯಾಭಿರ್ಮಾಯಾಭಿಃ ಪ್ರತಿಜೂತಿವರ್ಪಸಃ ಸೌಧನ್ವನಾ ಯಜ್ಞಿಯಂ ಭಾಗಮಾನಶ ॥ ೧ ॥

ಪದಪಾಠಃ

ಇಹಽಇಹ । ವಃ । ಮನಸಾ । ಬಂಧುತಾ । ನರಃ । ಉಶಿಜಃ । ಜಗ್ಮುಃ । ಅಭಿ । ತಾನಿ । ವೇದಸಾ ।

ಯಾಭಿಃ । ಮಾಯಾಭಿಃ । ಪ್ರತಿಜೂತಿಽವರ್ಪಸಃ । ಸೌಧನ್ವನಾಃ । ಯಜ್ಞಿಯಂ । ಭಾಗಂ । ಆನಶ ॥ ೧ ॥

ಸಾಯಣಭಾಷ್ಯಂ

ಹೇ ಋಭವೋ ವೋ ಯುಷ್ಮಾಕಂ ಬಂಧುತಾ । ಬಧ್ನಂತಿ ಫಲೇನ ಸಂಯೋಜಯಂತೀತಿ ಬಂಧವಃ ಕರ್ಮಾಣಿ । ತೇಷಾಂ ಸಮೂಹೋ ಬಂಧುತಾ । ಇಹೇಹ ಸರ್ವತ್ರ ಮನಸಾ ಸರ್ವೈರ್ಜ್ಞಾಯತೇ । ನರೋ ಹಿ ಮನುಷ್ಯಾ ಋಭವ ಉಶಿಜೋ ಯಜ್ಞಭಾಗಂ ಕಾಮಯಮಾನಾ ಭವಂತೋ ವೇದಸಾ ಯಜ್ಞಭಾಗಪ್ರಾಪಕಕರ್ಮವಿಷಯಜ್ಞಾನೇನ ತಾನಿ ತಾದೃಶಾನಿ ಕರ್ಮಾಣ್ಯಭಿ ಜಗ್ಮುಃ । ಪ್ರಾಪ್ನುವಂತಿ । ಕಾನಿ ತಾನಿ । ಮಾಯಾಭಿಃ । ಮೀಯಂತೇ ಜ್ಞಾಯಂತ ಇತಿ ಮಾಯಾಃ ಕರ್ಮಾಣಿ । ಯಾಭಿರ್ಮಾಯಾಭಿರ್ಯೈಃ ಕರ್ಮಭಿಃ ಪ್ರತಿಜೂತಿವರ್ಪಸಃ ಪ್ರತಿಪಕ್ಷಾಭಿಭವನಶೀಲತೇಜೋಯುಕ್ತಾಃ ಸೌಧನ್ವನಾಃ । ಸುಧನ್ವನಾಮಾಂಗಿರಸಃ ಪುತ್ರಃ ಕಶ್ಚಿದೃಷಿಃ । ತಸ್ಯ ಪುತ್ರಾಃ ಸೌಧನ್ವನಾಃ । ತೇ ಚ ತ್ರಯ ಋಭುರ್ವಿಭ್ವಾ ವಾಜ ಇತಿ । ಏತನ್ನಾಮಕಾ ಯೂಯಂ ಯಜ್ಞಿಯಂ ಯಜ್ಞಾರ್ಹಂ ಭಾಗಂ ಸೋಮಪಾನಾದಿಲಕ್ಷಣಮಾನಶ । ಪ್ರಾಪ್ತಾಃ ಸ್ಥ । ತಥಾ ಚ ಮಂತ್ರವರ್ಣಃ । ಋಭುರ್ವಿಭ್ವಾ ವಾಜೋ ದೇವಾँ ಅಗಚ್ಛತ ಸ್ವಪಸೋ ಯಜ್ಞಿಯಂ ಭಾಗಮೈತನ । ಋಗ್ವೇ. ೧-೧೬೧-೬ । ಇತಿ । ಅಯಮರ್ಥೋ ಬ್ರಾಹ್ಮಣೇಽಪ್ಯೃಭವೋ ವೈ ದೇವೇಷು ತಪಸಾ ಸೋಮಪೀಥಮಭ್ಯಜಯನ್ನಿತ್ಯತ್ರೋಪಖ್ಯಾನಪೂರ್ವಕಂ ಸ್ಪಷ್ಟಮಭಿಹಿತಃ । ಯದ್ವಾ । ನರಃ ಕರ್ಮಣಾಂ ನೇತಾರೋ ಹೇ ಋಭವ ಉಶಿಜಃ ಕಾಮಯಮಾನಾ ವೇದಸಾ ಹವಿರ್ಲಕ್ಷಣೇನ ಧನೇನ ಯುಕ್ತಾಃ ಸ್ತೋತಾರೋ ವೋ ಯುಷ್ಮಾಕಂ ತಾನಿ ಚಮಸತಕ್ಷಣಾದೀನಿ ಕರ್ಮಾಣಿ ಬಂಧುತಾ ಬಂಧುತಯಾ ಸಖ್ಯೇನ ಮನಸಾ ಜಗ್ಮುಃ । ಅಭಿಗಚ್ಛಂತಿ । ಕಾನೀತ್ಯಾಶಂಕಾಯಾಮಾಹ । ಯೈಶ್ಚಮಸತಕ್ಷಣಾದಿಭಿಃ ಕರ್ಮಭಿರ್ಯಜ್ಞಾರ್ಹಂ ಭಾಗಂ ಯೂಯಮಾಪ್ನುತ ತಾನ್ಯಭಿಗಚ್ಛಂತಿ । ಯುಷ್ಮಾಕಂ ಬುದ್ಧಿನೈಪುಣಾನಿ ಚಿಂತಯಂತೀತ್ಯರ್ಥಃ ॥ ಇಹೇಹ । ನಿತ್ಯವೀಪ್ಸ-

CC-0. Jangamwadi Math Collection. Digitized by eGangotri

ಯೋರಿತಿ ದ್ವಿರ್ವಚನಂ । ಪರಸ್ಯಾಮ್ರೇಡಿತೇತ್ಯಾದನುದಾತ್ತತ್ವೇ ಪೂರ್ವಪದಸ್ವರಃ । ಬಂಧುತಾ । ಬನ್ಧ ಬಂಧನೇ । ಶೄಸ್ಪೃಸ್ನಿಹೀತ್ಯಾದಿನಾ ಕರ್ತರಿಯುಪ್ರತ್ಯಯಃ । ಸಮೂಹ ಇತ್ಯರ್ಥೇ ಗ್ರಾಮಜನಬಂಧು-ಸಹಾಯೇಭ್ಯಸ್ತಲ್ । ಪಾ. ೪-೨-೪೩ । ಇತಿ ತಲ್ । ಲಿತ್ಸ್ವರಃ ॥

ಪ್ರತಿಪದಾರ್ಥ

(ಎಲೈ ಋಭುಗಳೇ) ವಃ—ನಿಮ್ಮ । ಬಂಧುತಾ—ಕ್ರಿಯಾಕೌಶಲವು । ಇಹೇಹ—ಸಕಲಪ್ರದೇಶಗಳಲ್ಲಿಯೂ । ಮನಸಾ—ವಿದಿತವಾಗಿದೆ । ನರಃ—ಮಾನವರಾದ ಋಭುಗಳೇ । ಉಶಿಜಃ—ಯಜ್ಞಭಾಗವನ್ನಪೇಕ್ಷಿಸಿದ ನೀವು । ವೇದಸಾ—(ಈ ಅರ್ಹತೆಯನ್ನುಂಟುಮಾಡುವ ಕರ್ಮದ ಸ್ವರೂಪವನ್ನು ತಿಳಿಯುವ ಜ್ಞಾನದಿಂದ) । ತಾನಿ—ಅಂತಹ ಉತ್ತಮವಾದ ಕರ್ಮಗಳನ್ನು । ಅಭಿಜಗ್ಮುಃ—ಸೃಷ್ಟಿಸಿದ್ದೀರಿ । ಯಾಭಿಃ ಮಾಯಾಭಿಃ—ಯಾವ ಅದೇ ಅಸಾಧಾರಣವಾದ ಕರ್ಮಗಳಿಂದ ಲಭಿಸಿದ । ಪ್ರತಿಜೂತಿವರ್ಪಸಃ—ಶತ್ರುನಾಶಕವಾದ ತೇಜಸ್ಸಿನಿಂದ ಯುಕ್ತರಾದ । ಸೌಧನ್ವನಾಃ—ಸುಧನ್ವಪುತ್ರರಾದ ನೀವು । ಯಜ್ಞಿಯಂ ಭಾಗಂ—ಯಜ್ಞಾರ್ಹವಾದ ಸೋಮಾದಿಗಳನ್ನು । ಆನಶ—ಪಡೆದಿದ್ದೀರಿ.

ಭಾವಾರ್ಥ

ಎಲೈ ಋಭುಗಳೇ, ನಿಮ್ಮ ಕ್ರಿಯಾಕೌಶಲವು ಸಕಲ ಪ್ರದೇಶಗಳಲ್ಲಿಯೂ ವಿದಿತವಾಗಿದೆ. ಮಾನವರಾದ ಋಭುಗಳೇ, ಯಜ್ಞಭಾಗವನ್ನಪೇಕ್ಷಿಸಿದ ನೀವು ಈ ಅರ್ಹತೆಯನ್ನುಂಟುಮಾಡುವ ಕರ್ಮದ ಜ್ಞಾನದಿಂದ ಅಂತಹ ಉತ್ತಮವಾದ ಕರ್ಮಗಳನ್ನು ಸೃಷ್ಟಿಸಿದ್ದೀರಿ. ಯಾವ ಅದೇ ಅಸಾಧಾರಣವಾದ ಕರ್ಮಗಳಿಂದ ಲಭಿಸಿದ ಶತ್ರುನಾಶಕವಾದ ತೇಜಸ್ಸಿನಿಂದ ಯುಕ್ತರಾದ ಸುಧನ್ವಪುತ್ರರಾದ ನೀವು ಯಜ್ಞಾರ್ಹವಾದ ಸೋಮಾದಿಗಳನ್ನು ಪಡೆದಿದ್ದೀರಿ.

English Translation

Your connexion (with the consequence, of acts) Ribhus is here (acknowledged) by the minds of all : desiring their share (of the sacrifice), oh men, they have come with a knowledge (of their claims) to these (rites) : the sons of Sudhanvan, with the devices by which they are victorious over foes, you have accepted the share of the sacrifice.

ವಿಶೇಷವಿಷಯಗಳು

ಆದ್ಯಾಶ್ಚತಸ್ರಃ ಪೃಷ್ಠ್ಯಾಭಿಪ್ಲವಷಡಹಯೋಃ ಪ್ರಥಮೇಽಹನಿ ವೈಶ್ವದೇವಶಸ್ತ್ರೇ ಆರ್ಭವನಿವಿದ್ಧಾನೀಯಾಃ । ಈ ಸೂಕ್ತದ ಮೊದಲನೆಯ ನಾಲ್ಕು ಮಂತ್ರಗಳೂ ಸಹ ಪೃಷ್ಠ್ಯ ಮತ್ತು ಅಭಿಪ್ಲವ ಷಡಹಗಳ ಮೊದಲನೆಯದಿನದಲ್ಲಿ ವೈಶ್ವದೇವಶಸ್ತ್ರಾತ್ಮಕವಾಗಿ ಪಠಿಸಲ್ಪಡತಕ್ಕವು ಎಂಬ ವಿಧಿಯನ್ನು ಭಾಷ್ಯಕಾರರು ಸೂಚಿಸಿದ್ದಾರೆ. ಅಭಿಪ್ಲವ ಮತ್ತು ಪೃಷ್ಠ್ಯ ಎಂಬುವು ಷಡಹಗಳಲ್ಲಿ ನಡೆಸಲ್ಪಡತಕ್ಕ ಶಸ್ತ್ರ ಮತ್ತು ಸ್ತೋತ್ರಾತ್ಮಕವಾದ ಯಜ್ಞಗಳು. ಇವುಗಳಿಗಿರುವ ವ್ಯತ್ಯಾಸಗಳನ್ನು ಆಯಾ ಸಂದರ್ಭಾನುಸಾರವಾಗಿ ತಿಳಿಸಲಾಗುತ್ತದೆ. ಪ್ರಕೃತದಲ್ಲಿ ಇವುಗಳ ವೈಶಿಷ್ಟ್ಯವೇನು ಎಂಬುದನ್ನು ಮಾತ್ರ ವಿವರಿಸಲಾಗುತ್ತದೆ.

CC-0. Jangamwadi Math Collection. Digitized by eGangotri

ಅಭಿಪ್ಲವಃ ಷಡಹಃ ಸ್ವರ್ಗಸ್ಯ ಲೋಕಸ್ಯಾಥ ಯಥಾ ಮಹಾಪಥಃ ಪರ್ಯಾಣ ಏವಂ ಪೃಷ್ಠ್ಯಃ ಷಳಹಃ ಸ್ವರ್ಗಸ್ಯ ಲೋಕಸ್ಯ ।

(ಐ. ಬ್ರಾ. ೪-೧೭)

ಅಭಿಪ್ಲವ ಷಡಹವು ಸ್ವರ್ಗಕ್ಕೆ ನೇರವಾಗಿ ಕರೆದುಕೊಂಡು ಹೋಗತಕ್ಕ ಮಾರ್ಗವು. ಆದರೆ ಪೃಷ್ಠ್ಯಷಡಹವು ಅದೇ ಸ್ವರ್ಗಕ್ಕೆ ಕೊಂಚ ಬಳಸಿಕೊಂಡು ಕರೆದುಕೊಂಡು ಹೋಗತಕ್ಕ ಮಾರ್ಗವು ಎಂದು ತಿಳಿಸಿದೆ. ಆದರೆ ಎರಡೂ ಸಹ ಸ್ವರ್ಗಗಮನದ ಮುಖ್ಯಸಾಧನಗಳೆಂದು ವಿಶದಪಡಿಸಿದೆ. ಇವುಗಳ ವಿವರಗಳಲ್ಲಿ, ಪ್ರಕೃತದಲ್ಲಿ ಅಭಿಪ್ಲವಷಡಹಗಳ ಸ್ವರೂಪವನ್ನೂ, ಮಹತ್ತ್ವವನ್ನೂ ತಿಳಿಸಿ ಪೃಷ್ಠ್ಯಷಡಹಗಳ ಕಾರ್ಯಕಲಾಪಗಳನ್ನೂ, ಅವುಗಳ ಮಹತ್ತ್ವವನ್ನೂ ಮುಂದೆ ಸಂದರ್ಭಾನುಸಾರವಾಗಿ ತಿಳಿಸಲಾಗುತ್ತದೆ.

೧) ಅಭಿಪ್ಲವ ಮತ್ತು ಪೃಷ್ಠ್ಯ ಎಂಬ ಹೆಸರುಗಳು ಬರಲು ಕಾರಣ ಮತ್ತು ಇವುಗಳ ಸಮಾನಧರ್ಮಗಳು—

ತ್ಯಽಆದಿತ್ಯಾಃ । ಚತುರ್ಭಿಃ ಸ್ತೋಮೈಶ್ಚತುರ್ಭಿಃ ಪೃಷ್ಠೈರ್ಲಘುಭಿಃ ಸಾಮಭಿಃ ಸ್ವರ್ಗಂ ಲೋಕಮಭ್ಯಪ್ಲವಂತ ಯದಭ್ಯಪ್ಲವಂತ ತಸ್ಮಾದಭಿಪ್ಲವಾಃ ।

(ಶ. ಬ್ರಾ. ೧೨-೨-೨-೧೦)

ನಾಲ್ಕು ಸೋಮಗಳಿಂದಲೂ, ನಾಲ್ಕು ಪೃಷ್ಠಗಳಿಂದಲೂ, ನಾಲ್ಕು ಲಘುನಾಮಗಳಿಂದಲೂ ಆದಿತ್ಯರು ಸ್ವರ್ಗವನ್ನು ದಾಟಿದರು. ಈ ವಿಧವಾಗಿ ಅಭಿಪ್ಲವನನ್ನು ಮಾಡಿದುದರಿಂದ (ಎಂದರೆ ದಾಟಿದುದರಿಂದ) ಅಭಿಪ್ಲವಸಾಧನವಾದ ಈ ಕ್ರಿಯೆಗೂ ಸಹ ಅಭಿಪ್ಲವವೆಂದೇ ಹೆಸರಾಯಿತು

ಅನ್ಯಂಚ ಇವಾಂಗಿರಸಃ । ಸರ್ವೈಃ ಸ್ತೋಮೈಃ ಸರ್ವೈಃ ಪೃಷ್ಠೈರ್ಗುರುಭಿಃ ಸಾಮಭಿಃ ಸ್ವರ್ಗಂ ಲೋಕಮಸ್ಪೃಶನ್ಯದಸ್ಪೃಶಂಸ್ತಸ್ಮಾತ್ಪೃಷ್ಠ್ಯಃ ॥

(ಶ. ಬ್ರಾ. ೧೨-೨-೨-೧೧)

ಸರ್ವಸ್ತೋಮಗಳಿಂದಲೂ, ಸರ್ವಪೃಷ್ಠಗಳಿಂದಲೂ, ಗುರುನಾಮಗಳಿಂದಲೂ ಆಂಗಿರಸ್ಸುಗಳು ಸ್ವರ್ಗವನ್ನು ಸ್ಪರ್ಶಿಸಿದರು. ಈರೀತಿ ಸ್ಪರ್ಶಸಾಧನವಾದುದರಿಂದ ಈ ಕ್ರಿಯೆಗೆ ಪೃಷ್ಠ್ಯವೆಂಬ ಹೆಸರು ಬಂದಿತು ಎಂದು ಎರಡು ಕ್ರಿಯೆಗಳ ಲಕ್ಷಣಗಳನ್ನೂ ತಿಳಿಸಿದೆ

ತದಾಹುಃ । ಕಸ್ಮಾದುಭಯತೋ ಜ್ಯೋತಿಷೋಽಭಿಪ್ಲವಾ ಭವಂತ್ಯನ್ಯತೋ ಜ್ಯೋತಿಃ ಪೃಷ್ಠ್ಯ ಇತಿಮೇ ವೈ ಲೋಕಾ ಅಭಿಪ್ಲವಾ ಉಭಯತೋ ಜ್ಯೋತಿಷೋ ವಾ ಇಮೇ ಲೋಕಾ ಅಗ್ನಿನೇತ ಆದಿತ್ಯೇನಾಮುತ ಋತವಃ ಪೃಷ್ಠ್ಯೋಽನ್ಯತೋ ಜ್ಯೋತಿಷೋ ವಾ ಋತವ ಏಷ ಏಷಾಂ ಜ್ಯೋತಿರ್ಯ ಏಷ ತಪತಿ ॥

(ಶ. ಬ್ರಾ. ೧೨-೨-೨-೧)

ಅಭಿಪ್ಲವಷಡಹವು ಎರಡು ಕಡೆಗಳಲ್ಲಿಯೂ ಜ್ಯೋತಿರ್ಮಯವಾಗಿದೆ. ಆದರೆ ಪೃಷ್ಠ್ಯಕ್ಕೆ ಮಾತ್ರ ಒಂದು ಕಡೆಯಲ್ಲಿ ಮಾತ್ರ ಜ್ಯೋತಿಯಿದೆ. ಇದಕ್ಕೆ ಕಾರಣವೇನು ಎಂದು ಕೇಳಿದರೆ, ಅಭಿಪ್ಲವಷಡಹಗಳು ಈ ಲೋಕಗಳಲ್ಲದೇ ಬೇರೆಯಲ್ಲ. ಈ ಲೋಕಗಳೆಂದಮೇಲೆ ಒಂದುಕಡೆ ಪಾರ್ಥಿವಾಗ್ನಿಯಿಂದಲೂ, ಇನ್ನೊಂದುಕಡೆ ಅಂತರಿಕ್ಷಸ್ಥನಾದ ಆದಿತ

CC-0. Jangamwadi Math Collection. Digitized by eGangotri

ನಿಂದಲೂ ಜ್ಯೋತಿಯು ಪ್ರವಹಿಸುತ್ತದೆ ಪೃಷ್ಠ್ಯಷಡಹಗಳು ಋತ್ವಾತ್ಮಕವಾದುದರಿಂದ ಒಂದುಕಡೆಯಿಂದ ಮಾತ್ರ ಜ್ಯೋತಿಯಿರಲು ಸಾಧ್ಯ. ಅಂತರಿಕ್ಷಸ್ಥನಾದ ಸೂರ್ಯನಿಂದ ಮಾತ್ರ ಅವು ತೇಜಸ್ಸನ್ನು ಪಡೆಯುತ್ತವೆ.

ದೇವಚಕ್ರೇ ವಾ ಏತೇ ಪೃಷ್ಠ್ಯಪ್ರತಿಷ್ಠಿತೇ । ಯಜಮಾನಸ್ಯ ಪಾಪ್ಮಾನಂ ತೃಗ್‌ಂಹಿತೋ ಪರಿಪ್ಲವೇತೇ ಸ ಯೋ ಹೈವಂ ವಿದುಷಾಂ ದೀಕ್ಷಿತಾನಾಂ ಪಾಪಗ್‌ಂ ಸತ್ರೇ ಕೀರ್ತಯತ್ಯೇತೇ ಹಾಸ್ಯ ದೇವಚಕ್ರೇ ಶಿರಶ್ಛಿಂತೋ ದಶರಾತ್ರ ಉದ್ಧಿಃ ಪೃಷ್ಠ್ಯಾಭಿಪ್ಲವೌ ಚಕ್ರೇ ॥

ಈ ಪೃಷ್ಠ್ಯವೂ, ಪ್ರತಿಷ್ಠಿತವಾದ ಅಭಿಪ್ಲವವೂ ಸಹ ಎರಡು ದೇವಚಕ್ರಗಳು. ಇವುಗಳ ಪರಿಭ್ರಮಣಕಾಲದಲ್ಲಿ ಯಜಮಾನನ ದುರಿತಗಳೆಲ್ಲವೂ ಚೂರ್ಣಿತವಾಗಿ ನಾಶವಾಗುವುವು. ಯಜ್ಞಕಾಲದಲ್ಲಿ ಯಾರಾದರೂ ಇವುಗಳನ್ನು ಅವಹೇಳನಮಾಡುವ ವಾಕ್ಯಗಳನ್ನಾಡಿದರೆ ಅವನ ತಲೆಯು ಛೇದಿಸಲ್ಪಡುತ್ತದೆ. ದೇವತೆಗಳ ರಥಕ್ಕೆ ಮುಖ್ಯಾಸನವೇ ದಶರಾತ್ರವು. ಪೃಷ್ಠ್ಯಾಭಿಪ್ಲವಗಳೇ ಎರಡು ಚಕ್ರಗಳು.

ತದಾಹುಃ । ಯತ್ಸಮೇ ಏವ ಚಕ್ರೇ ಭವತೋಽಥೈತೇ ವಿಷಮಾಸ್ತೋಮಾಃ ಕಥಮಸ್ಯೈತೇ ಸಮಾಃ ಸ್ತೋಮಾಸ್ತೋಮಾ ಉಪೇತಾ ಭವಂತೀತಿ ಯದೇವ ಷಡನ್ಯಾನ್ಯಹಾನಿ ಷಡನ್ಯಾನಿ ತೇನೇತಿ ಬ್ರೂಯಾತ್ ॥

ಈ ಚಕ್ರಗಳೆರಡೂ ಒಂದೇಸಮನಾಗಿವೆ. (ಷಡಹಾತ್ಮಕವಾಗಿ ಸಮಾನರೂಪವುಳ್ಳದ್ದಾಗಿದೆ) ಆದರೆ ಇವುಗಳಿಗೆ ಸಂಬಂಧಿಸಿದ ಸ್ತೋಮಗಳು ಮಾತ್ರ ಸಮಾನರೂಪವುಳ್ಳವಾಗಿಲ್ಲ. ಅದು ಹೇಗೆ ಸಮಂಜಸವಾಗುತ್ತದೆ ಎಂದು ಕೇಳಿದರೆ, ಆಗ ಒಂದೊಂದೂ ಆರಾರು ಸಮಾನಧರ್ಮವುಳ್ಳವಾಗಿವೆಯೆಂದು ಹೇಳಿದರೆ ಸರಿಯಾಗುತ್ತದೆ.

ಪೃಷ್ಠ್ಯಾಭಿಪ್ಲವೌ ತಂತ್ರೇ ಕುರ್ವೀತೇತಿ ಹ ಸ್ಮಾಹ ಪೈಂಗ್ಯಃ । ತಯೋಃ ಸ್ತೋತ್ರಾಣಿ ಚ ಶಸ್ತ್ರಾಣಿ ಚ ಸಂಚಾರಯೇದಿತಿ ಸ ಯತ್ಸಂಚಾರಯತಿ ತಸ್ಮಾದಿಮೇ ಪ್ರಾಣಾ ನಾನಾ ಸಂತ ಏಕೋತಯಃ ಸಮಾನಮೂತಿಮನುಸಂಚರಂತ್ಯಥ ಯನ್ನ ಸಂಚಾರಯೇತ್ಪ್ರಮಾಯುಕೋ ಯಜಮಾನಃ ಸ್ಯಾದೇಷ ಹ ವೈ ಪ್ರಮಾಯುಕ್ತೋ ಯೋಽಂಧೋ ವಾ ಬಧಿರೋ ವಾ ॥

(ಶ. ಬ್ರಾ. ೧೨-೨-೨-೪)

ಪೃಷ್ಠ್ಯವನ್ನೂ, ಅಭಿಪ್ಲವವನ್ನೂ ಎರಡು ತಂತ್ರಗಳನ್ನಾಗಿ ಮಾಡಿ ಅವೆರಡನ್ನೂ ಸಮಾನವಾದ ರೀತಿಯಲ್ಲಿ ಸಂಚರಿಸುವಂತೆ ಮಾಡಬೇಕು. ಆ ಸಂದರ್ಭದಲ್ಲಿ, ಬೇರೆ ಬೇರೆ ನಾಡಿಗಳಲ್ಲಿ ಪ್ರವಹಿಸಿದರೂ ಸಹ ಪ್ರಾಣವಾಯುಗಳು ಯಾವ ರೀತಿ ಒಂದೇ ರೀತಿಯಲ್ಲಿ ಸಂಚರಿಸುವುವೋ ಮತ್ತು ಒಂದೇ ಧ್ಯೇಯವುಳ್ಳವಾಗಿರುವುವೋ ಅದೇ ರೀತಿ ಇವೂ ಕೂಡ ಸಮಾನಧ್ಯೇಯವುಳ್ಳವಾಗಿರುವುವು. ಅದಿಲ್ಲದಿದ್ದರೆ ಯಜಮಾನನ ನಾಶಕ್ಕೂ ಕಾರಣವಾಗಬಹುದು ಅಥವಾ ಅವನು ಕುರುಡನೋ, ಕಿವುಡನೋ ಆಗುತ್ತಾನೆ. ಇತ್ಯಾದಿಯಾಗಿ ಇವೆರಡರ ಮಹತ್ತ್ವವನ್ನೂ ಕೊಂಡಾಡಿದೆ. ಮತ್ತು ಯಾವ ರೀತಿ ಅಭಿಪ್ಲವಕ್ಕೆ ಎರಡು ದಿಕ್ಕುಗಳಲ್ಲಿಯೂ ಜ್ಯೋತಿರ್ಮಯವಾಗಿದೆಯೆಂದು ವರ್ಣಿತವಾಗಿದೆಯೋ ಅದೇ ರೀತಿ ಅದೇ ಅಂಶವನ್ನು ಇನ್ನೂ ವಿಸ್ತೃತವಾಗಿ ಐತರೇಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.—

ಜ್ಯೋತಿರ್ಗೌರಾಯುರಿತಿ ಸ್ತೋಮೇಭಿರ್ಯಂತ್ಯಯಂ ವೈ ಲೋಕೋ ಜ್ಯೋತಿರಂತರಿಕ್ಷಂ ಗೌರಸಾ ಲೋಕ ಆಯುಃ ॥

(ಐ. ಬ್ರಾ. ೧೪-೧೫)

CC-0. Jangamwadi Math Collection. Digitized by eGangotri

ಜ್ಯೋತಿಃ, ಗೌಃ, ಆಯುಃ ಎಂದರೆ, ಜ್ಯೋತಿಷ್ಟೋಮ, ಗೋಷ್ಟೋಮ ಮತ್ತು ಆಯುಷ್ಟೋಮಗಳು ಎಂದರ್ಥ. ಜ್ಯೋತಿಷ್ಟೋಮವೇ ಪೃಥ್ವೀಲೋಕವು, ಗೋಷ್ಟೋಮವೇ ಅಂತರಿಕ್ಷವು ಮತ್ತು ಆಯುಷ್ಟೋಮವೇ ದ್ಯುಲೋಕವು. "ಜ್ಯೋತಿಷ್ಟೋಮಂ ಪ್ರಥಮಮುಪಯಂತ್ಯಸ್ಮಿನ್ನೇವ ತೇನ ಲೋಕೇ ಪ್ರತಿತಿಷ್ಠಂತಿ ಗೋಷ್ಟೋಮಂ ದ್ವಿತೀಯಮುಪಯಂತ್ಯಂತರಿಕ್ಷ ಏವ ತೇನ ಪ್ರತಿತಿಷ್ಠಂತಿ ಆಯುಷ್ಟೋಮಂ ತೃತೀಯಮುಪಯಂತ್ಯಮುಷ್ಮಿನ್ನೇವ ಲೋಕೇ ಪ್ರತಿತಿಷ್ಠಂತಿ" ಎಂಬುದಾಗಿ ಇದೇ ಅಭಿಪ್ರಾಯವನ್ನು ಯಜುರ್ವೇದದಲ್ಲಿಯೂ ತಿಳಿಸಿದೆ.

> ಸ ಏಷ್ವೈಷ ಉತ್ತರಸ್ತ್ರ್ಯಹಃ । ಜ್ಯೋತಿರ್ಗೌರಾಯುರಿತಿ ತ್ರೀಣ್ಯಹಾನಿ ಗೌರಾಯುರ್ಜ್ಯೋತಿರಿತಿ ತ್ರೀಣಿ । ಅಯಂ ವೈ ಲೋಕೋ ಜ್ಯೋತಿರಸೌ ಲೋಕೋ ಜ್ಯೋತಿಸ್ತೇ ಏತೇ ಜ್ಯೋತಿಷೀ ಉಭಯತಃ ಸಂಲೋಕೇತೇ ॥

ತ್ರ್ಯಹದ ಎರಡನೇ ಸಮೂಹದ ಕ್ರಮವು ಹೀಗಿದೆ: ಜ್ಯೋತಿಃ, ಗೌಃ, ಆಯುಃ ಎಂಬ ಮೂರೂ ಒಂದು ಗುಂಪು ಗೌಃ, ಆಯುಃ, ಜ್ಯೋತಿಃ । ಪುನಃ ಮೂರೂ ಮೂರು ಲೋಕಗಳಿಗೆ ಸೇರಿದವಾಗಿಯೂ ಮತ್ತು ಎರಡು ಕಡೆಗಳಲ್ಲಿಯೂ ಜ್ಯೋತಿಯನ್ನು ತುಂಬಿಕೊಂಡು ಷಡಹಾತ್ಮಕವಾಗಿಯೂ ಈ ಎರಡು ಗುಂಪುಗಳೂ ಇವೆ.

> ತೈನೇತೇನೋಭಯತೋ ಜ್ಯೋತಿಷಾ ಷಳಹೇನ ಯಂತಿ ತದ್ಯದೇತೇನೋಭಯತೋ ಜ್ಯೋತಿಷಾ ಷಳಹೇನ ಯಂತ್ಯನಯೋರೇವ ತಲ್ಲೋಕಯೋರುಭಯತಃ ಪ್ರತಿತಿಷ್ಠಂತೋ ಯಂತ್ಯಸ್ಮಿಂಶ್ಚ ಲೋಕೇಽಮುಷ್ಮಿಂಶ್ಚೋಭಯೋಃ । ಪರಿಯದ್ವಾ ಏತದ್ದೇವಚಕ್ರಂ ಯದಭಿಪ್ಲವಃ ಷಳಹಸ್ತಸ್ಯ ಯಾವಭಿತೋಽಗ್ನಿಷ್ಟೋಮೌ ತೌ ಪ್ರಧೀ ಯೇ ಚತ್ವಾರೋ ಮಧ್ಯ ಉಕ್ಥ್ಯಾಸ್ತನ್ನಭ್ಯಂ ॥
>
> (ಐ. ಬ್ರಾ. ೧೮-೧೫)

ಷಡಹಾತ್ಮಕವಾದ ಆರು ಗುಂಪುಗಳಿಂದಲೂ ಎರಡು ಕಡೆಗಳಲ್ಲಿಯೂ ಜ್ಯೋತಿರ್ಭರಿತವಾಗಿಯೂ, ಈ ಎರಡು ಲೋಕಗಳ ಎರಡು ಕಡೆಗಳಲ್ಲಿಯೂ ಆಶ್ರಯವನ್ನೂ, ಅವಲಂಬನವನ್ನೂ ಪಡೆಯುತ್ತಲೂ ಮುಂದುವರಿಯುತ್ತವೆ. ಅಭಿಪ್ಲವಷಡಹವು ಒಂದು ದೇವಚಕ್ರವು. ಇದು ವಲಯಾಕಾರದಲ್ಲಿ ಪರಿಭ್ರಮಿಸುತ್ತಿರುವುದು. ಇದಕ್ಕೆ ಅಗ್ನಿಷ್ಟೋಮಗಳೆರಡೂ ಪ್ರಧಿಗಳು. ಮಧ್ಯಭಾಗದಲ್ಲಿರುವ ನಾಲ್ಕು ಉಕ್ಥ್ಯಗಳೂ ನಾಭಿಗಳು. ಇತ್ಯಾದಿಯಾಗಿ ಅಭಿಪ್ಲವದ ಮಹತ್ವವನ್ನು ಸ್ತುತಿಸಿದೆ. ಹೀಗೆ ಉಭಯಪಾರ್ಶ್ವಗಳಲ್ಲಿಯೂ ಜ್ಯೋತಿಯಿಂದ ಕೂಡಿಕೊಂಡಿರುವ ಆ ಅಭಿಪ್ಲವ ಕಾಲದಲ್ಲಿ ಪ್ರಕೃತವಾದ ಸೂಕ್ತದಲ್ಲಿ ಮೊದಲನೆಯ ನಾಲ್ಕು ಮಂತ್ರಗಳು ಪಠಿತವಾಗತಕ್ಕವು ಎಂದು ಹೇಳಿದೆ. ಇವರ ವಿನಿಯೋಗದ ವಿಷಯದಲ್ಲಿ ಐತರೇಯಬ್ರಾಹ್ಮಣದಲ್ಲಿ ಈ ರೀತಿ ತಿಳಿಸಿದೆ.

> ಇಹೇಹ ವೋ ಮನಸಾ ಬಂಧುತಾ ನರ ಇತ್ಯಾರ್ಭವಂ ಯದ್ವಾ ಏತಿ ಚ ಪ್ರೇತಿ ಚ ತತ್ಪ್ರಥಮಸ್ಯಾಹ್ನೋ ರೂಪಂ ತದ್ಯತ್ಪ್ರೇತಿ ಸರ್ವಮಭವಿಷ್ಯತ್ಪ್ರೈವ್ಯಷ್ಯನ್ನೇವಾಸ್ಮಾಲ್ಲೋಕಾದ್ಯಜಮಾನಾ ಇತಿ ತದ್ಯದಿಹೇಹ ವೋ ಮನಸಾ ಬಂಧುತಾ ನರ ಇತ್ಯಾರ್ಭವಂ ಪ್ರಥಮೇಽಹನಿ ಶಂಸತ್ಯಯಂ ವೈ ಲೋಕ ಇಹೇಹಾಸ್ಮಿನ್ನೇವೈನಾಂಸ್ತಲ್ಲೋಕೇ ರಮಯತಿ ॥
>
> (ಐ. ಬ್ರಾ. ೨೮-೩೦)

CC-0. Jangamwadi Math Collection. Digitized by eGangotri

ಎಂಬಲ್ಲಿ ಏತಿ, ಪ್ರೇತಿ ಎಂಬ ಸಂಜ್ಞೆಗಳು ಪ್ರಥಮಾಹ್ನದ ರೂಪಗಳು. ಆದುದರಿಂದಲೇ ಋಭುದೇವತಾತ್ಮಕವಾದ "ಇಹೇಹ ವೋ ಮನಸಾ" ಎಂಬ ಮಂತ್ರವು ಪೃಷ್ಠ್ಯಷಡಹದ ಪ್ರಥಮಾಹ್ನದಲ್ಲಿ ಪಠಿಸಲ್ಪಡುತ್ತದೆ ಎಂಬುದಾಗಿ ನಿರ್ದೇಶಿಸಿದೆ. ಪೃಷ್ಠ್ಯಷಡಹದ ಸ್ವರೂಪವೇನು ? ಅದರಲ್ಲಿ ಆರ್ಭವಸ್ತುತಿಯಿರಲು ಕಾರಣವೇನು ಎಂಬುದನ್ನು ಮುಂದೆ ತಿಳಿಸಲಾಗುತ್ತದೆ.

ಮಾನವರಾದ ಋಭುಗಳು ಯಜ್ಞಭಾಗವನ್ನಪೇಕ್ಷಿಸಿದುದನ್ನೂ ತದರ್ಥವಾಗಿ ಆ ಅರ್ಹತೆಯನ್ನು ಪಡೆಯಲು ಉತ್ತಮವಾದ ಕ್ರಿಯೆಗಳನ್ನು ನೆರವೇರಿಸಿ ದೇವತ್ವವನ್ನು ಪಡೆದು ನಂತರ ಯಜ್ಞಾರ್ಹವಾದ ಸೋಮಾದಿಗಳನ್ನು ಪಡೆದುದೂ ಸಹ ಪ್ರಕೃತವಾದ ಮಂತ್ರದಲ್ಲಿ ವರ್ಣಿತವಾಗಿದೆ. ಇದೇ ವಿಷಯವನ್ನು ಐತರೇಯಬ್ರಾಹ್ಮಣದಲ್ಲಿ ಈ ರೀತಿ ಕಥಾರೂಪದಲ್ಲಿ ತಿಳಿಸಿದೆ.

**ಋಭವೋ ವೈ .... .... .... ಪರ್ಯಪಿಬತ್ ॥**

(ಐ. ಬ್ರಾ ೧೩-೩೦)

ಮಾನವರಾದ ಋಭುಗಳು ತಮ್ಮ ಮಾನವಾತೀತವಾದ ಶಕ್ತಿಯಿಂದ ಅಲೌಕಿಕವಾದ ಕ್ರಿಯೆಗಳನ್ನು ನೆರವೇರಿಸಿ, ಅತ್ಯುತ್ತಮವಾದ ತಪಶ್ಶಕ್ತಿಯಿಂದ ದಿವ್ಯಕರ್ಮಕರ್ತರಾಗಿ ದೇವತ್ವವನ್ನು ಪಡೆದರು. ನಂತರ ತಾವೂ ಸಹ ದೇವತೆಗಳೊಡನೆ ಸೋಮಪಾನವನ್ನು ಮಾಡಬೇಕೆಂದು ಅಪೇಕ್ಷಿಸಿದರು. ಪ್ರಥಮತಃ ಪ್ರಾತಃಸವನದಲ್ಲಿ ಅವರು ಪ್ರಯತ್ನಿಸಿದರು. ಪ್ರಾತಃಸವನಕ್ಕೆ ಮುಖ್ಯದೇವತೆಯಾದ ಅಗ್ನಿಯು ತನ್ನ ಸಹಚಾರಿಗಳಾದ ವಸುಗಳೊಡನೆ ಸೇರಿಕೊಂಡು ಅವರಿಗೆ ಸೋಮಪಾನಕ್ಕವಕಾಶವನ್ನು ಕೊಡದೇ, ತಿರಸ್ಕರಿಸಿ ಅಟ್ಟಿಬಿಟ್ಟನು. ಆಗ ಅವರು ಪುನಃ ಮಾಧ್ಯಂದಿನ ಸವನದಲ್ಲಿ ಪ್ರಯತ್ನಿಸಿದರು. ಆಗ ಮಾಧ್ಯಂದಿನದ ಸವನಕ್ಕೆ ಅಧಿಪತಿಯಾದ ಇಂದ್ರನು ರುದ್ರರೊಂದಿಗೆ ಸೇರಿಕೊಂಡು ಅವರನ್ನು ಅಟ್ಟಿಬಿಟ್ಟನು. ಪುನಃ ತೃತೀಯಸವನದಲ್ಲಿ ಪ್ರಯತ್ನಿಸಿದರು. ಆಗ ವಿಶ್ವೇದೇವತೆಗಳು "ನಿಮಗೆ ಸೋಮಪಾನವನ್ನು ಮಾಡುವ ಅಧಿಕಾರವಿಲ್ಲ. ನಿಮಗೆ ಇಲ್ಲಿ ಪ್ರವೇಶವಿಲ್ಲ" ಎಂದು ನಿಷ್ಠುರೋಕ್ತಿಯನ್ನು ಹೇಳಿ ಕಳುಹಿಸಿಬಿಟ್ಟರು. ಆಗ ಅವರ ಕ್ಲೇಶವನ್ನು ನೋಡಿ ಪ್ರಜಾಪತಿಯು ಸವಿತೃವನ್ನು ಕುರಿತು, ಈ ಋಭುಗಳು ನಿನ್ನ ಶಿಷ್ಯರು. ನೀನು ಇವರೊಂದಿಗೆ ಸೋಮಪಾನವನ್ನು ಮಾಡಬೇಕು ಎಂದನು. ಅದಕ್ಕೆ ಸವಿತೃವು ಒಪ್ಪಿಕೊಂಡನು. ಪ್ರಜಾಪತಿಯೂ ಸಹ ಅವರ ಜೊತೆಯಲ್ಲಿಯೇ ಸೋಮಪಾನವನ್ನು ಮಾಡಿದನು. ಇದೇ ಐತರೇಯಬ್ರಾಹ್ಮಣದಲ್ಲಿ ಹೇಳಿರುವ ಸನ್ನಿವೇಶ. ಇದನ್ನೇ ಪ್ರಕೃತವಾದ ಋಕ್ಕಿನಲ್ಲಿ ಸಾಯಣರು ಸೂಚಿಸುತ್ತಾ **ಅಯಮರ್ಥೋ ಬ್ರಾಹ್ಮಣೇಽಪಿ "ಋಭವೋ ವೈ.... ...." ಇತ್ಯತ್ರೋಪಾಖ್ಯಾನಪೂರ್ವಕಂ ಸ್ಪಷ್ಟಮಭಿಹಿತಃ ।** ಇದೇ ಅರ್ಥವು ಬ್ರಾಹ್ಮಣದಲ್ಲಿಯೂ ಸ್ಪಷ್ಟವಾಗಿ ಉಕ್ತವಾಗಿದೆ ಎಂದು ಹೇಳಿದ್ದಾರೆ.

**ಬಂಧುತಾ— ಬಧ್ನಂತಿ ಫಲೇನ ಸಂಯೋಜಯಂತೀತಿ ಬಂಧವಃ ಕರ್ಮಾಣಿ । ತೇಷಾಂ ಸಮೂಹಃ ಬಂಧುತಾ ।** ಕ್ರಿಯೆಗಳನ್ನೆಲ್ಲಾ ಫಲದೊಡನೆ ಸೇರಿಸುವುದಾದುದರಿಂದ ಅಥವಾ ಕರ್ತನನ್ನು ಫಲದೊಡನೆ ಸೇರಿಸುವುದರಿಂದ ಬಂಧುಶಬ್ದಕ್ಕೆ ಕರ್ಮವೆಂದರ್ಥ. ಇಂತಹ ಕರ್ಮಗಳ ಸಮೂಹಕ್ಕೆ **ಬಂಧುತಾ** ಎಂದು ಹೇಳಿದೆ. ಈ ಅರ್ಥವು ಈ ಪದಕ್ಕೆ ಪ್ರಕೃತವಾದ ಋಕ್ಕಿನಲ್ಲಿ ಮಾತ್ರ ಯಥೋಚಿತವಾಗಿ ಹೇಳಲ್ಪಟ್ಟಿದೆ.

CC-0. Jangamwadi Math Collection. Digitized by eGangotri

**ನರಃ—ಮನುಷ್ಯಾಃ** । ಮಾನವರಾಗಿದ್ದು (ದೇವತ್ವವನ್ನು ಪಡೆದವರು) ಋಭುರ್ವಿಭ್ವಾ ವಾಜ ಇತಿ **ಸುಧನ್ವನ ಆಂಗಿರಸಸ್ಯ ತ್ರಯಃ ಪುತ್ರಾ ಬಭೂವುಃ** । (ನಿ. ೧೧-೧೬) ತೇ ಅತಿಶಯವದ್ಭಿಃ ಕರ್ಮಭಿರ್ದೇ-**ವತ್ವಮೀಯುಃ** । ಸುಧನ್ವ ಆಂಗಿರಸನಿಗೆ ಋಭು, ವಿಭ್ವ, ವಾಜ ಎಂಬ ಹೆಸರಿನಿಂದ ಮೂವರು ಪುತ್ರರಿದ್ದರು. ಇವರು ಅತಿಶಯವಾಗಿ ಸತ್ಕರ್ಮಾಚರಣೆಯನ್ನು ಮಾಡಿ ದೇವತ್ವವನ್ನು ಪಡೆದರು ಇಲ್ಲಿ ಸಾಹಚರ್ಯದಿಂದ ಹಿರಿಯವನ ಹೆಸರಿನಿಂದಲೇ ಮೂವರನ್ನೂ ಒಟ್ಟಿಗೆ ಸಂಬೋಧಿಸಿದೆ ಎಂದು ನಿರುಕ್ತಕಾರರು ವಿವರಿಸಿದ್ದಾರೆ.

**ಯಾಭಿಃ ಮಾಯಾಭಿಃ**—ಮಾಯಾಶಬ್ದಕ್ಕೆ ಇರತಕ್ಕ ಅರ್ಥವೈಶಿಷ್ಟ್ಯಗಳನ್ನು ಹಿಂದೆ ಇದೇ ಭಾಗದಲ್ಲಿ ೩-೫೩ನೇ ಸೂಕ್ತದ ಮೊದಲನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ. ಪ್ರಕೃತದಲ್ಲಿ, ಅಸಾಧಾರಣವಾದ ಕರ್ಮಗಳಿಂದ ಎಂದರ್ಥ.

**ಪ್ರತಿಜೂತಿವರ್ಪಸಃ**—ಈ ವಿಶೇಷಣಕ್ಕೆ ಅರ್ಥವನ್ನು ಹೇಳುವುದು ಸ್ವಲ್ಪ ಶ್ರಮವಾಗಿದೆ. **ಪ್ರತಿಪಕ್ಷಾ-ಭಿಭವನಶೀಲತೇಜೋಯುಕ್ತಾಃ** । ಶತ್ರುಗಳನ್ನು ಪ್ರತಿಭಟಿಸಿ ಸೋಲಿಸುವ ಶಕ್ತಿಯುಳ್ಳವರು ಎಂದು ಸಾಯಣರ ಅರ್ಥಮಾಡಿದ್ದಾರೆ. Monier Williams ಎಂಬ ಪಂಡಿತನು ತನ್ನ Sanskrit-English Dictionary ಯಲ್ಲಿ ಈ ಪದಕ್ಕೆ Assuming any form according to their will, ತಮ್ಮ ಇಚ್ಛೆಬಂದಂತೆ ಯಾವ ರೂಪವನ್ನೂ ಸಹ ಧರಿಸುವ ಶಕ್ತಿಯುಳ್ಳವರೆಂದರ್ಥಮಾಡಿದ್ದಾನೆ. ಎರಡರ್ಥವೂ ಇಲ್ಲಿ ಹೊಂದಿಕೊಳ್ಳಲವಕಾಶವಿದೆ. ಹೇಗೆಂದರೆ,

**ಜೂತಿಃ**ಶಬ್ದಕ್ಕೆ ವೇಗ, ಶಕ್ತಿ ಎಂಬೆರಡು ಅರ್ಥಗಳೂ ಉಂಟು. **ವರ್ಪಸ್** ಎಂದರೆ ತೇಜೋಯುತವಾದ ಕಾಂತಿಯೆಂಬರ್ಥವು ಸಾಧಾರಣವಾಗಿರುತ್ತದೆ. ಅಥವಾ ದೇಹವೆಂದೂ ಅರ್ಥವಾಗಬಹುದು. ಶತ್ರುವಿನ ಶಕ್ತಿಯನ್ನು ನಾಶಪಡಿಸುವ ಆತ್ಮತೇಜಸ್ಸೆಂದಾಗಲಿ ಅಥವಾ ಮನಸ್ಸಂಕಲ್ಪದಂತೆ ಬದಲಾಯಿಸಿಕೊಳ್ಳುವ ದೇಹದ ತೇಜಸ್ಸೆಂದೂ ಅರ್ಥವಾಗುತ್ತದೆ. ಇದರ ಶಕ್ತಿವಿಶೇಷವನ್ನು ಮುಂದಿನ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಲಾಗುತ್ತದೆ.

---

ಸಂಹಿತಾಪಾಠಃ

**ಯಾಭಿಃ ಶಚೀಭಿಶ್ಚಮಸಾಁ ಅಪಿಂಶತ ಯಯಾ ಧಿಯಾ ಗಾಮರಿಣೀತ ಚರ್ಮಣಃ ।**

**ಯೇನ ಹರೀ ಮನಸಾ ನಿರತಕ್ಷತ ತೇನ ದೇವತ್ವಮೃಭವಃ ಸಮಾನಶ ॥ ೨ ॥**

ಪದಪಾಠಃ

ಯಾಭಿಃ । ಶಚೀಭಿಃ । ಚಮಸಾನ್ । ಅಪಿಂಶತ । ಯಯಾ । ಧಿಯಾ । ಗಾಂ । ಅರಿಣೀತ । ಚರ್ಮಣಃ । ಯೇನ । ಹರೀ ಇತಿ । ಮನಸಾ । ನಿಃಅತಕ್ಷತ । ತೇನ । ದೇವಽತ್ವಂ । ಋಭವಃ । ಸಮ್ । ಆನಶ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಹೇ ಋಭವೋ ಯಾಭಿಃ ಶಚೀಭಿಃ ಶಕ್ತಿಭಿಶ್ಚಮಸಾನ್ ಚತುರೋऽಪಿಂಶತ ವಿಭಕ್ತವಂತಃ ಸ್ಥ । ಯಯಾ ಧಿಯಾ ಪ್ರಜ್ಞಯಾ ಗಾಂ ಮೃತಾಮರಿಣೀತ ಚರ್ಮಣಾ ಚರ್ಮಣಾ ಯೋಜನಾತ್ಪ್ರಾಪಿತವಂತಃ ಸ್ಥ । ಯೇನ ಮನಸಾ ಪ್ರಜ್ಞಾನೇನ ಹರೀ ಏತನ್ನಾಮಕಾವಿಂದ್ರಸ್ಯಾಶ್ವೌ ನಿರತಕ್ಷತ ನಿತರಾಮಕುರುತ । ತಥಾಯಂ ಮಂತ್ರವರ್ಣಃ । ಯ ಇಂದ್ರಾಯ ವಚೋಯುಜಾ ತತಕ್ಷುರ್ಮನಸಾ ಹರೀ । ಋಗ್ವೇ. ೧-೨೦-೨ । ಇತಿ । ತೇನ ಸರ್ವೇಣಾನೇನ ಕರ್ಮಣಾ ದೇವತ್ವಂ ಯಜ್ಞಭಾಗಾರ್ಹತ್ವಲಕ್ಷಣಂ ದೇವಭಾವಂ ಸಮಾನಶ । ಸಮ್ಯಕ್ ಪ್ರಾಪ್ತಾಃ ಸ್ಥ ॥ ಅಪಿಂಶತ । ಪಿಶ ಅವಯವೇ । ತುದಾದಿಃ । ತಸ್ಯ ಲಙಿ ಮಧ್ಯಮೇ ರೂಪಂ । ಯದ್ವೃತ್ತಯೋಗಾದನಿಘಾತಃ । ಅರಿಣೀತ । ರೀ ಗತಿರೇಷಣಯೋಃ । ಕ್ರ್ಯಾದಿಃ । ತಸ್ಯ ಲಙಿ ರೂಪಂ । ಅತ್ರಾಪಿ ಪೂರ್ವವದನಿಘಾತಃ । ನಿರತಕ್ಷತ । ತಕ್ಷೂ ತ್ವಕ್ಷೂ ತನೂಕರಣೇ । ಲಙಿ ರೂಪಂ । ಪೂರ್ವವದನಿಘಾತೇ ತಿಙಿ ಚೋದಾತ್ತವತೀತಿ ಗತೇರ್ನಿಘಾತಃ। ಅಡುದಾತ್ತಃ । ಆನಶ। ಅಶ್ನೋತೇರ್ಲಿಟಿ ರೂಪಂ । ನಿಘಾತಃ ॥

## ಪ್ರತಿಪದಾರ್ಥ

ಋಭವಃ—ಎಲೈ ಋಭುಗಳೇ । ಯಾಭಿಃ—ಯಾವ । ಶಚೀಭಿಃ—ಶಕ್ತಿಗಳಿಂದ । ಚಮಸಾನ್—ಚಮಸ ಪಾತ್ರೆಗಳನ್ನು । ಅಪಿಂಶತ—ನಾಲ್ಕು ಭಾಗಗಳಾಗುವಂತೆ ಮಾಡಿದಿರೋ । ಯಯಾ ಧಿಯಾ—ಯಾವ ಪ್ರಜ್ಞೆಯಿಂದ । ಗಾಂ—ಮೃತವಾದ ಗೋವನ್ನು । ಚರ್ಮಣಃ ಅರಿಣೀತ—ಚರ್ಮದ ಹೊದ್ದಿಕೆಯಿಂದ ಜೀವಿಸುವಂತೆ ಮಾಡಿದಿರೋ । ಯೇನ ಮನಸಾ—ಯಾವ ಬುದ್ಧಿಯಿಂದ । ಹರೀ—ಇಂದ್ರನ ಅಶ್ವಗಳನ್ನು । ನಿರತಕ್ಷತ—ನಿರ್ಮಿಸಿದಿರೋ । ತೇನ—ಈ ಎಲ್ಲಾ ಸಾಮರ್ಥ್ಯಗಳಿಂದಲೂ । ದೇವತ್ವಂ—ಯಜ್ಞಾರ್ಹವಾದ ದೇವತ್ವವನ್ನು । ಸಮಾನಶ—ಪೂರ್ಣವಾಗಿ ಹೊಂದಿದಿರಿ ।

## ಭಾವಾರ್ಥ

ಎಲೈ ಋಭುಗಳೇ, ಯಾವ ಶಕ್ತಿಗಳಿಂದ ನೀವು ಚಮಸಪಾತ್ರೆಗಳನ್ನು ನಾಲ್ಕು ಭಾಗಗಳಾಗುವಂತೆ ಮಾಡಿದಿರೋ, ಯಾವ ಪ್ರಜ್ಞೆಯಿಂದ ಮೃತವಾದ ಗೋವನ್ನು ಚರ್ಮದ ಹೊದ್ದಿಕೆಯಿಂದ ಜೀವಿಸುವಂತೆ ಮಾಡಿದರೋ ಯಾವ ಬುದ್ಧಿಯಿಂದ ಇಂದ್ರನ ಅಶ್ವಗಳನ್ನು ನಿರ್ಮಿಸಿದಿರೋ ಈ ಎಲ್ಲಾ ಸಾಮರ್ಥ್ಯಗಳಿರುವುದರಿಂದಲೇ ನೀವು ಯಜ್ಞಾರ್ಹವಾದ ದೇವತ್ವವನ್ನು ಪೂರ್ಣವಾಗಿ ಹೊಂದಿದಿರಿ.

## English Translation

With those faculties by which you have divided the ladles ; with that intelligence wherewith you have covered the (dead) cow with skin; with that will by which you have fabricated the two horses (of Indra) ; with those (means), Ribhus, you have attained divinity.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಋಕ್ಸಂಹಿತೆಯ ಮೊದಲನೇ ಮಂಡಲದ ಇಪ್ಪತ್ತನೇ ಸೂಕ್ತದಲ್ಲಿ (ಭಾಗ. ೩) ಋಭುಗಳ ಕ್ರಿಯಾ ಕೌಶಲಗಳನ್ನು ಪ್ರಶಂಸಿಸುತ್ತಾ ಯಾವ ಯಾವ ಅಂಶಗಳು ವರ್ಣಿತವಾಗಿವೆಯೋ ಅವೆಲ್ಲವೂ ಇಲ್ಲಿಯೂ ಸಹ ವರ್ಣಿತವಾಗಿವೆ. ಈ ವರ್ಣನೆಗಳ ತಾತ್ಪರ್ಯವನ್ನು ಅಲ್ಲಿ ಸೂಕ್ಷ್ಮವಾಗಿ ತಿಳಿಸಿದೆ. ಅಲ್ಲಿ ಹೇಳದಿರುವ ಕೆಲವು ಅಂಶಗಳನ್ನು ಇಲ್ಲಿ ವಿವರಿಸಲಾಗುತ್ತದೆ. ಒಂದಾದ ಚಮಸಪಾತ್ರೆಗಳನ್ನು ನಾಲ್ಕಾಗುವಂತೆ ಮಾಡಿದರು ಎಂಬುದಕ್ಕೆ ವಿಶೇಷಾರ್ಥವಿದೆ ಎಂಬುದನ್ನು ತೋರಿಸುತ್ತಾ ಬೃಹದ್ದೇವತೆಯಲ್ಲಿ ಈ ವಿಷಯವನ್ನು ಈ ರೀತಿ ತಿಳಿಸಿದೆ.

ಸುಧನ್ವನ ಆಂಗಿರಸಸ್ಯಾಸನ್ಪುತ್ರಾಸ್ತ್ರಯಃ ಪುರಾ ।
ಋಭುರ್ವಿಭ್ವಾ ಚ ವಾಜಶ್ಚ ಶಿಷ್ಯಾಸ್ತ್ವಷ್ಟುಶ್ಚ ತೇಽಭವನ್ ॥ ೩-೮೩ ॥

ಹಿಂದೆ ಅಂಗಿರಸಪುತ್ರನಾದ ಸುಧನ್ವನೆಂಬುವನು ಪ್ರಸಿದ್ಧನಾದ ರಾಜನಾಗಿದ್ದನು. ಅವನಿಗೆ ಋಭು, ವಿಭ್ವ ಮತ್ತು ವಾಜ ಎಂಬ ಮೂವರು ಮಕ್ಕಳಿದ್ದರು. ಅವರು ತ್ವಷ್ಟೃವಿನ ಶಿಷ್ಯರಾಗಿದ್ದರು.

ಶಿಕ್ಷಯಾಮಾಸ ತಾಂಸ್ತ್ವಷ್ಟಾ ತ್ವಾಷ್ಟ್ರಂ ಯತ್ಕರ್ಮ ಕಿಂಚನ ।
ಪರಿನಿಷ್ಠಿತಕರ್ಮಾಣೋ ವಿಶ್ವೇದೇವಾ ಉಪಾಹ್ವಯನ್ ॥ ೩-೮೪ ॥

ಸಕಲಕಲಾವಿದ್ಯೆಯಲ್ಲಿಯೂ ಪ್ರಾವೀಣ್ಯವನ್ನು ಹೊಂದಿದ ತ್ವಷ್ಟೃವು ಅವರಿಗೂ ಸಹ ಆ ಸಕಲ ಕಲಾವಿದ್ಯೆಯತೆಯನ್ನೂ ಉಪದೇಶಿಸಿದನು. ಆಗ ಅವರನ್ನು ನೋಡಿ ಅಸೂಯೆಯಿಂದ ಆ ವಿದ್ಯೆಗಳಲ್ಲಿ ನಿಪುಣರಾದ ವಿಶ್ವೇದೇವತೆಗಳು ತಮ್ಮ ಅಸಹನೆಯನ್ನು ವ್ಯಕ್ತಪಡಿಸಿದರು. ಮತ್ತು ಋಭುಗಳು ತಮ್ಮ ಸಮಾನವಾದ ಅರ್ಹತೆಯನ್ನು ಖಂಡಿತವಾಗಿಯೂ ಪಡೆಯಲಾರರೆಂದು ಘೋಷಿಸಿ ಅವರನ್ನು ಸ್ಪರ್ಧೆಗೂ ಎಳೆದರು.

ವಿಶ್ವೇಷಾಂ ತೇ ತತಶ್ಚಕ್ರುರ್ವಾಹನಾನ್ಯಾಯುಧಾನಿ ತು ।
ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ॥ ೩-೮೫ ॥

ಆಗ ಆ ಸ್ಪರ್ಧೆಗೆ ಉತ್ತರವಾಗಿ ವಿಶ್ವೇದೇವತೆಗಳಿಗೆ ತೃಪ್ತಿಯನ್ನುಂಟುಮಾಡತಕ್ಕ ವಾಹನಗಳನ್ನೂ ಆಯುಧಗಳನ್ನು ಸೃಷ್ಟಿಸಿಕೊಟ್ಟರು. ಮತ್ತು ಅಮೃತದಾಯಿಯಾದ ಧೇನುವನ್ನು ನಿರ್ಮಿಸಿದರು. ಅಮೃತತ್ವವನ್ನು ಸಂಪಾದಿಸತಕ್ಕ ಶಕ್ತಿಯೇ ಸಬರ್ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ।
ಇಂದ್ರಾಯ ಚ ಹರೀ ದೇವಪ್ರಹಿತೇನಾಗ್ನಿನಾಪಿ ಯತ್ ॥ ೩-೮೬ ॥

ನಂತರ ಬೃಹಸ್ಪತಿಗೂ, ಅಶ್ವಿನೀದೇವತೆಗಳಿಗೂ ಸಹ ತ್ರಿವಂಧುರಾತ್ಮಕವಾದ ರಥವನ್ನು ನಿರ್ಮಿಸಿದರು. ಇಂದ್ರನಿಗೆ ಅತ್ಯವಶ್ಯವಾದ (ಅಶ್ವ)ಗಳನ್ನೂ ಮತ್ತು ದೇವತೆಗಳಿಂದ ಅವರಲ್ಲಿಗೆ ಕಳುಹಿಸಲ್ಪಟ್ಟ ಅಗ್ನಿಗೆ ಯಥೋಚಿತವಾದ ಮರ್ಯಾದೆಯನ್ನೂ ಮಾಡಿ ಕಳುಹಿಸಿದರು.

ಏಕಂ ಚಮಸಮಿತ್ಯುಕ್ತೇ ಜ್ಯೇಷ್ಠ ಆಹೇತ್ಯಥೋ ದಿವಿ ।
ಉಕ್ತ್ವಾ ತತಶ್ಚತುಶ್ಚಮಸಾನ್ ಯಥೋಕ್ತಂ ತೇನ ಹರ್ಷಿತಾಃ ॥ ೩-೮೭ ॥

CC-0. Jangamwadi Math Collection. Digitized by eGangotri

ಅನಂತರ ತ್ವಷ್ಟೃವಿನಿಂದ ನಿರ್ಮಿತವಾದ ಒಂದು ಚಮಸಪಾತ್ರೆಯನ್ನು ನಾಲ್ಕು ಭಾಗಗಳನ್ನಾಗಿ ಮಾಡಿದರು. ಅದರಿಂದ ತ್ವಷ್ಟೃವು ಹರ್ಷಿತನಾದನು.

ತ್ವಷ್ಟಾ ಚ ಸವಿತಾ ಚೈವ ದೇವದೇವಃ ಪ್ರಜಾಪತಿಃ ।
ಸರ್ವಾನ್ ದೇವಾನ್ ಸಮಾಮಂತ್ರ್ಯ ಅಮೃತತ್ವಂ ದುದುಶ್ಚ ತೇ ॥

(೩-೮೮)

ಅನಂತರ ಇವರ ಕೌಶಲ್ಯದಿಂದ ಸಂತುಷ್ಟರಾದ ತ್ವಷ್ಟೃವೂ, ಸವಿತೃವೂ, ದೇವತೆಗಳಿಗೂ ದೇವನಾದ ಪ್ರಜಾಪತಿಯು ಸಕಲ ದೇವತೆಗಳನ್ನೂ ಕರೆದು ಅವರ ಪ್ರಸಾದಪೂರ್ವಕವಾಗಿ ಅವರಿಗೆ ಅಮೃತತ್ತ್ವವನ್ನನುಗ್ರಹಿಸಿದನು.

ತೃತೀಯಸವನೇ ತೇಷಾಂ ತೈಸ್ತು ಭಾಗಃ ಪ್ರಕಲ್ಪಿತಃ ।
ಅಪಿಬತ್ಸೋಮಮಿಂದ್ರಶ್ಚ ತೈಸ್ತತ್ರ ಸವನೇ ಸಹ ॥ ೩-೮೯ ॥

ತೃತೀಯಸವನದಲ್ಲಿ ಅವರಿಗೆ ವಿಶ್ವೇದೇವತೆಗಳೊಡನೆ ಹವಿಸ್ಸಿನ ಭಾಗವು ಕ್ಲೃಪ್ತವಾಗಿದೆ. ಇಂದ್ರನೂ ಸಹ ಅವರೊಡನೆ ಸೋಮಪಾನವನ್ನು ಮಾಡಿದನು. ಇತ್ಯಾದಿಯಾಗಿ ಅವರ ಮಹತ್ತ್ವವನ್ನು ಸ್ತುತಿಸಿ ೧-೨೦ನೇ ಸೂಕ್ತವು ಅವರನ್ನುದ್ದೇಶಿಸಿ ಪಠಿತವಾಗಿವೆಯೆಂದು ತಿಳಿಸಿದೆ. ಪ್ರಕೃತದಲ್ಲಿ **ಶಚೀಭಿಃ ಚಮಸಾನ್ ಅಪಿಂಶತ** ಎಂಬುದರ ಅರ್ಥವೇನು ಎಂಬುದನ್ನು ಪರಿಶೀಲಿಸಬೇಕು.

ಉತ ತ್ಯಂ ಚಮಸಂ ನವಂ ತ್ವಷ್ಟುರ್ದೇವಸ್ಯ ನಿಷ್ಕೃತಂ ।
ಅಕರ್ತ ಚತುರಃ ಪುನಃ ॥

(ಋ. ಸಂ. ೧-೨೦-೬)

ಎಂಬಲ್ಲಿ ಈ ಚಮಸಪಾತ್ರೆಯು ತ್ವಷ್ಟೃವಿನ ಪಾತ್ರೆಯೆಂದು ತಿಳಿಸಿದೆ. ಮತ್ತು ಇದೇ ಚಮಸಪಾತ್ರೆಯನ್ನೂ ಈ ಸಂದರ್ಭವನ್ನೂ ವಿವರಿಸುತ್ತಾ, ಋಕ್ಸಂಹಿತೆಯು ಬೇರೆ ಭಾಗದಲ್ಲಿ ಇನ್ನೊಂದು ವಿಧವಾಗಿ ವರ್ಣಿಸಿದೆ. ಆ ವಿವರಣೆಯು ಸ್ವರೂಪವನ್ನು ತಿಳಿದರೆ, ಆಗ ಈ ಚಮಸಪಾತ್ರೆಯೆಂದರೇನು, ಇದನ್ನು ನಾಲ್ಕು ಭಾಗಗಳನ್ನಾಗಿ ಮಾಡಿದರು ಎಂಬುದರ ಅರ್ಥವೇನು ಎಂಬುದು ತಿಳಿಯುತ್ತದೆ

ತತ್ಸವಿತಾ ವೋಽಮೃತತ್ವಮಾಸುವದಗೋಹ್ಯಂ ಯಚ್ಛ್ರವಯಂತ ಐತನ ।
ತ್ಯಂ ಚಿಚ್ಚಮಸಮಸುರಸ್ಯ ಭಕ್ಷಣಮೇಕಂ ಸಂತಮಕೃಣುತಾ ಚತುರ್ವಯಂ ॥

(ಋ. ಸಂ. ೧-೧೧೦-೩)

ಎಲೈ ಋಭುಗಳೇ. ಎಲ್ಲರಿಗೂ ಸುಲಭವಾಗಿ ಗೋಚರವಾಗಿ ಯಾರಿಂದಲೂ ಮರೆಮಾಡಲು ಸಾಧ್ಯವಿಲ್ಲದ ಸವಿತೃವನ್ನು ನೀವು ಸಮೀಪಿಸಿ ಸೋಮರಸದ ಪಾನದಲ್ಲಿ ನೀವೂ ಭಾಗವಹಿಸಬೇಕೆಂದು ವಿಜ್ಞಾಪಿಸಿಕೊಂಡಾಗ ಸವಿತೃದೇವನು ನಿಮಗೆ ಮರಣರಹಿತವಾದ ದೇವತ್ವವನ್ನು ಪೂರ್ಣವಾಗಿ ಅನುಗ್ರಹಿಸಿಕೊಟ್ಟನು. ಆದುದರಿಂದ ತ್ವಷ್ಟೃವಿನಿಂದ ನಿರ್ಮಿತವಾದುದೂ, ಸೋಮರಸದ ಪಾನಕ್ಕೆ ಸಾಧನವಾದುದೂ, ಪ್ರಸಿದ್ಧವಾದುದೂ, ಅದರ ಸೃಷ್ಟಿಕಾಲದಲ್ಲಿ ಒಂದೇ ಒಂದಾಗಿ ಸೃಷ್ಟವಾದುದೂ ಆದ ಚಮಸಪಾತ್ರೆಯನ್ನು ನಾಲ್ಕು ಆಗುವಂತೆ ಮಾಡಿದ್ದೀರಿ ಎಂದಿದೆ.

ಈ ಮೇಲಿನ ಉದಾಹರಣೆಯಿಂದ ಆದಿತ್ಯನಿಗೂ ಜಗತ್ಸೃಷ್ಟಿಗೂ ಸಂಬಂಧವನ್ನು ತೋರಿಸಿ ಅದರಲ್ಲಿ ಋಭುಗಳ ಪಾತ್ರವೇನು ಎಂಬುದನ್ನು ಸೂಚಿಸಿವೆ. **"ಅಸುರಸ್ಯ ಭಕ್ಷಣಂ । ಏಕಂ ಸಂತಂ" (ಪಾತ್ರಂ)**

CC-0. Jangamwadi Math Collection. Digitized by eGangotri

ಎಂದು ವರ್ಣಿತವಾಗಿರುವುದು ಸೂರ್ಯಮಂಡಲವಲ್ಲದೇ ಬೇರೊಂದಲ್ಲವೆಂದು ಹೇಳಲು ಅನೇಕ ಆಧಾರಗಳಿವೆ. ಸೃಷ್ಟಿರೂಪದಲ್ಲಿ ವಿಭಕ್ತರಾಗುವುದಕ್ಕೆ ಮೊದಲು ಸೂರ್ಯ, ಚಂದ್ರ, ದ್ಯೌಃ, ಪೃಥಿವೀ ಎಂಬ ಈ ನಾಲ್ಕು ತತ್ತ್ವಗಳೂ ಸಂವೃತವಾಗಿ ಒಂದೇ ಮೂಲತತ್ತ್ವವಾಗಿದ್ದವು. ಈ ಐಕ್ಯವು ಸೃಷ್ಟಿಗೆ ಪೂರ್ವ ಹೇಗೋ ಹಾಗೆಯೇ ಪ್ರಳಯ ಕಾಲದಲ್ಲೂ ಇರುತ್ತದೆ. ಈ ಸನ್ನಿವೇಶದಲ್ಲಿ ಸತ್ಯದ ಎರಡು ಸ್ವರೂಪಗಳ ವರ್ಣನೆಯನ್ನು ನೋಡಬೇಕು.

ಮೊದಲನೆಯದಾಗಿ, ಸವಿತೃವು ಮತ್ತು ಅವನ ಅಗೋಹ್ಯವಾದ ಚಮಸ. ಅಥವಾ ಅಗೋಹ್ಯನಾದ ಸವಿತೃವಿನ ಚಮಸ. (**ಚಮಸ .... .... ಯಸ್ಮಿನ್ ಯಶೋ ನಿಹಿತಂ ವಿಶ್ವರೂಪಂ** ಅ. ವೇ. ೧೦-೮-೯) ಎರಡನೆಯದಾಗಿ ಹಿರಣ್ಮಯಪಾತ್ರದಿಂದ ಆಪಿಹಿತವಾದ ಸತ್ಯದ ಪ್ರವೇಶದ ದ್ವಾರ. (**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ** ಈಶ. ಉ. ೧೫). ಚಮಸವೆಂದು ಪ್ರಸಿದ್ಧವಾದ ಈ ಆದಿತ್ಯನ ಹಿರಣ್ಮಯಪಾತ್ರವೇ ಯಜ್ಞಪಾತ್ರೆಯಾದ ಚಮಸಕ್ಕೂ ಮಾದರಿಯಾಗಿದೆ. ಇಲ್ಲಿ ಮೂಲರೂಪವಾದ ಏಕತತ್ತ್ವವಾವುದು, ನಾಲ್ಕು ಭಾಗಗಳ ಸ್ವರೂಪವೇನು ಎಂದು ತಿಳಿಯಬೇಕು.

ತ್ವಷ್ಟೃವಿನ ಏಕಾತ್ಮಕವಾದ ಚಮಸವೇ ಆದಿತ್ಯನು. ಈ ಆದಿತ್ಯನ ಮೂಲಕವೇ ತ್ವಷ್ಟೃವನ್ನು ಆಶ್ರಯಿಸಿರುವ ಸಕಲಲೋಕಗಳನ್ನು ವೀಕ್ಷಿಸುತ್ತಲೂ, ರಚಿಸುತ್ತಲೂ ಇರುತ್ತಾನೆ. ಒಂದೇ ಆಗಿರುವ ಈ ಆದಿತ್ಯ ತತ್ತ್ವವನ್ನು **ಋಭು**ಗಳು ನಾಲ್ಕು ಭಾಗಗಳನ್ನಾಗಿ ವಿಂಗಡಿಸಿದರು ಎಂದರೆ ಅಹೋರಾತ್ರಗಳನ್ನು ವಿಭಾಗಮಾಡುತ್ತಾ ಪೂರ್ವದಿಂದ ಪಶ್ಚಿಮಕ್ಕೆ ಹೋಗುವಾಗ ಪೂರ್ವ ಮತ್ತು ಪಶ್ಚಿಮ ಇವೆರಡೂ ಆದಿತ್ಯನ ಎರಡು ಸ್ಥಾನಗಳು. ಮತ್ತು ಸಂವತ್ಸರದ ಎರಡು ವಿಭಾಗಗಳಲ್ಲಿ ದಕ್ಷಿಣ ಮತ್ತು ಉತ್ತರ (ದಕ್ಷಿಣಾಯನ, ಉತ್ತರಾಯಣ) ಈ ಎರಡು ಸ್ಥಾನಗಳು. ಹೀಗೆ ಸೂರ್ಯನ ನಾಲ್ಕು ಸ್ಥಾನಗಳೆಂದರೆ ಪೂರ್ವ, ಪಶ್ಚಿಮ, ದಕ್ಷಿಣ ಮತ್ತು ಉತ್ತರ. ಇದನ್ನೇ ಪಂಚವಿಂಶಬ್ರಾಹ್ಮಣದಲ್ಲಿ **ಚತಸ್ರೋ ದಿಶಃ** ಎಂದು ವರ್ಣಿಸಿದೆ. (೧೫-೩-೨೫). " **ತ್ವಷ್ಟಾ ಯದ್ವಜ್ರಂ ಸುಕೃತೇ ಹಿರಣ್ಯಯಂ** '' (ಋ. ಸಂ. ೧.೮೫-೯) ತ್ವಷ್ಟೃವು ಯಾವ ವಜ್ರಾಯುಧವನ್ನು ಇಂದ್ರನಿಗೆ ಕೊಟ್ಟನು ಎಂದು ಉಕ್ತವಾಗಿದೆಯೋ ಆ ಆಯುಧವೇ ಈ ಪಾತ್ರರೂಪವೆಂದು ಹೇಳಿದರೂ ಹೇಳಬಹುದು. ಏಕೆಂದರೆ, ಅದೇ ವಜ್ರವು ನಾಲ್ಕು ಭಾಗಗಳಾದವು. ಎಂದಿದೆ.

**ಇಂದ್ರೋ ಹ ಯತ್ರ ವೃತ್ರಾಯ ವಜ್ರಂ ಪ್ರಜಹಾರ । ಸ ಪ್ರಹತಶ್ಚತುರ್ಧಾಽಭವತ್ ॥**

(ಶ. ಬ್ರಾ. ೧-೨-೪-೧)

ತ್ವಷ್ಟೃವಿನಿಂದ ದತ್ತವಾದ ವಜ್ರವನ್ನು ಇಂದ್ರನು ವೃತ್ರನ ಮೇಲೆ ಪ್ರಯೋಗಿಸಿದಾಗ ಅದು ನಾಲ್ಕು ಭಾಗವುಳ್ಳದ್ದಾಯಿತು, ಇತ್ಯಾದಿ ವಾಕ್ಯಗಳಲ್ಲಿರುವ ವಿವರಣೆಯು ಮೂಲರೂಪದಲ್ಲಿ ಒಂದಾದ ವಸ್ತುವು ಕಾರ್ಯರೂಪದಲ್ಲಿ ನಾಲ್ಕು ವಿಭಾಗಗಳಾಯಿತೆಂದು ತಿಳಿಸಿದೆ.

ನಿರುಕ್ತಕಾರರ ನಿರ್ವಚನವೂ ಸಹ ಮೇಲೆ ಹೇಳಿರುವ ತಾತ್ಪರ್ಯವನ್ನು ಸಮರ್ಥಿಸುತ್ತದೆ. ಹೇಗೆಂದರೆ, **ಉರು ಭಾಂತೀತಿ ವಾ ; ಋತೇನ ಭಾಂತೀತಿ ವಾ ; ಋತೇನ ಭವಂತೀತಿ ವಾ ।** ಅಧಿಕವಾಗಿ ಪ್ರಕಾಶಿಸುವವರು ಎಂದಾಗ ಸತ್ಯದಿಂದ ಪ್ರಕಾಶಿಸುವವರು ಎಂಬುದರಿಂದಾಗಲಿ, ಸತ್ತ್ವ ಅಥವಾ ಸಾಮರ್ಥ್ಯ ಇದರಿಂದ ಪ್ರಕಾಶಿಸುವವರು ಎಂಬುದರಿಂದಾಗಲಿ, ಋಭುಗಳುಎಂಬ ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರ ವಿವರಣೆಯಿದೆ.

CC-0. Jangamwadi Math Collection. Digitized by eGangotri

ಇದೇ ಅರ್ಥವನ್ನೇ ವಿಸ್ತರಿಸುತ್ತಾ, ಆದಿತ್ಯರಶ್ಮಯೋಽಪ್ಯೃಭವ ಉಚ್ಯಂತೇ–ಆದಿತ್ಯರಶ್ಮಿಗಳಿಗೂ ಋಭುಗಳೆಂದು ಹೆಸರು ಎಂದೂ ತೋರಿಸಿದ್ದಾರೆ.

ಆದುದರಿಂದ ಒಂದು, ನಾಲ್ಕು ಎಂಬ ಪ್ರಭೇದಗಳಿಗೆ ಆದಿತ್ಯತತ್ತ್ವವೇ ಆಧಾರ. ಕಾರಣಾವಸ್ಥೆಯಲ್ಲಿರತಕ್ಕ ಆದಿತ್ಯಮಂಡಲವು ವಿಭಕ್ತವಾಗಿರದೇ ಏಕತತ್ತ್ವಪ್ರತಿಪಾದಕವಾಗಿರುತ್ತದೆ. ಕಾರ್ಯಾವಸ್ಥೆಯಲ್ಲಿ ಆದಿತ್ಯತತ್ತ್ವವು ರಶ್ಮ್ಯಾದಿಗಳ ದ್ವಾರಾ ಚಲಿಸುವಾಗ ಕಾಲದೇಶಾದಿಗಳ ಪ್ರಭೇದಗಳಿಗೆ ಕಾರಣವಾಗುತ್ತದೆ. ಈ ಪ್ರಭೇದಗಳಿಗೆ ಕಾರಣವಾದ ರಶ್ಮಿತತ್ತ್ವನೇ ಋಭ್ವಾತ್ಮಕಗಳು, ಎಂದು ಮೇಲೆ ಉದಾಹರಿಸಿರುವ ಶ್ರುತಿವಾಕ್ಯಗಳ ಆಧಾರದ ಮೇಲೆ ತಾತ್ಪರ್ಯವನ್ನು ಹೇಳಿದರೆ ತಪ್ಪಾಗಲಾರದು. ಈ ತಾತ್ಪರ್ಯವನ್ನು ಸಮರ್ಥಿಸುವ ಶ್ರುತಿವಾಕ್ಯಗಳು ಇನ್ನೂ ಹೇರಳ ವಾಗಿವೆ. ಅವುಗಳಲ್ಲಿ ಕೆಲವು ಋಭುಗಳಿಗೂ ಆದಿತ್ಯರಶ್ಮಿಗಳಿಗೂ ಸ್ಪಷ್ಟವಾಗಿ ತಾದಾತ್ಮ್ಯವನ್ನೇ ತಿಳಿಸುತ್ತವೆ. ಉದಾಹರಣೆಗೆ—

ಉದ್ವತ್ಸ್ವಸ್ಮಾ ಅಕೃಣೋತನಾ ತೃಣಂ ನಿವತ್ಸ್ವಪಃ ಸ್ವಪಸ್ಯಯಾ ನರಃ ।
ಅಗೋಹ್ಯಸ್ಯ ಯದಸಸ್ತನಾ ಗೃಹೇ ತದದ್ಯೇದಮೃಭವೋ ನಾನು ಗಚ್ಛಥ ॥

(ಋ. ಸಂ. ೧-೧೬೧-೧೧)

ಸೂರ್ಯರಶ್ಮಿಗಳ ರೂಪದಲ್ಲಿರುವ ಋಭುಗಳು ವೃಷ್ಟ್ಯಾದಿಗಳಿಗೆಲ್ಲಾ ನೇತೃಗಳು, ವ್ರೀಹ್ಯಾದಿ ಸಸ್ಯಾದಿಗಳ ಪೋಷಕರು, ಆದಿತ್ಯನ ವಾಸಸ್ಥಾನದಲ್ಲಿ ಆಶ್ರಯವನ್ನು ಪಡೆಯುವವರು ಇತ್ಯಾದಿಯಾದ ವರ್ಣನಗಳು ಆದಿತ್ಯನ ರಶ್ಮಿಗನ್ನಲ್ಲದೇ ಬೇರೆ ವಸ್ತುವನ್ನು ತಿಳಿಸುವಂತಿಲ್ಲ. "ಸಂಮೀಲ್ಯ ಯದ್ಭುವನಾ ಪರ್ಯಸರ್ಪತ ಕ್ವ ಸ್ವಿತ್ತಾತ್ಯಾ ಪಿತರಾ ವ ಆಸತುಃ" (೧-೧೬೧-೧೨) ಇತ್ಯಾದ್ಯನೇಕ ವಾಕ್ಯಗಳು ಈ ತಾತ್ಪರ್ಯವನ್ನೇ ಸಮರ್ಥಿಸುತ್ತವೆ. ಸೌಧನ್ವನಾ ಋಭವಃ ಸೂರಚಕ್ಷಸಃ (೧-೧೧೦-೪) ; ತರಣಿತ್ವಾ ಯೇ ಪಿತುರಸ್ಯ ಸಶ್ಚಿರ ಋಭವಃ । (ಋ. ಸಂ. ೧-೧೧೦-೬) ಇತ್ಯಾದಿ ವರ್ಣನಗಳು ಆದಿತ್ಯನಿಗೂ ಋಭುಗಳಿಗೂ ಇರತಕ್ಕ ಅಭೇದವನ್ನು ತಿಳಿಸುತ್ತವೆ. ಇವರೇ ಸೂರ್ಯಚಕ್ಷುಸ್ಸು. ತಮ್ಮ ಪಿತೃವಾದ ಆದಿತ್ಯನಿಂದ ಅವನ ಸಂಚಾರವೇಗವನ್ನು ಪಡೆದರು ಇತ್ಯಾದಿಯಾಗಿ ಋಭು ಗಳಿಗಿರುವ ಆದಿತ್ಯಸಂಬಂಧ, ಆದಿತ್ಯಸ್ವರೂಪ ಇವುಗಳನ್ನು ವರ್ಣಿಸಿದೆ.

ಕ್ವ ಸ್ವಿದಾಸಾಂ ಕತಮಾ ಪುರಾಣೀ ಯಯಾ ವಿಧಾನಾ ವಿದಧುರ್ಋಭೂಣಾಂ ॥

(ಋ. ಸಂ. ೪-೫೧-೬)

ಇತ್ಯಾದಿಗಳಲ್ಲಿ ಪ್ರಕಾಶಮಾನರಾದ ಉಷಸ್ಸುಗಳ ಪರಿಭ್ರಮಣವು ಋಭುಗಳ ಚಮಸಾದಿನಿರ್ಮಾಣಗಳ ಕಾರ್ಯಕ್ಕೆ ಸಾಹಾಯ್ಯಕವಾಗಿರುವುವು ಎಂದು ಉಷಸ್ಸಿಗೂ ಆದಿತ್ಯರಶ್ಮಿರೂಪರಾದ ಋಭುಗಳಿಗೂ ಸಂಬಂಧವನ್ನು ತೋರಿಸಿದೆ.

ಯಯಾ ಧಿಯಾ — ಯಯಾ ಪ್ರಜ್ಞಯಾ । ಯಾವ ಪ್ರಜ್ಞೆಯಿಂದ ಎಂದು ಋಭುಗಳ ಪ್ರಜ್ಞೆಯನ್ನು ಪ್ರಶಂಸಿಸಿದೆ. ಸಾಧಾರಣವಾಗಿ, ಇಂತಹ ಸಂದರ್ಭಗಳಲ್ಲಿ ಧೀ ಶಬ್ದಕ್ಕೆ ಕೇವಲ ಮಾನಸಿಕವಾದ ಬುದ್ಧಿಯೆಂದು ಮಾತ್ರ ಅರ್ಥವಾಗದೇ, ಧ್ಯಾನಾತ್ಮಕವಾದ ಪ್ರಜ್ಞೆಯೆಂದೇ ತಾತ್ಪರ್ಯವಾಗುತ್ತದೆ. ಧೀರ ಎನ್ನುವಾಗ ಯಾವ ರೀತಿ ಧ್ಯಾನಾತ್ಮಕವಾದ ಬುದ್ಧಿಯುಳ್ಳವನು ಎಂದು ಉಪನಿಷದಾದಿಗಳಲ್ಲಿ ಅರ್ಥವನ್ನು ಹೇಳಿದೆಯೋ ಅದರಂತೆಯೇ ಋಕ್ಸಂಹಿತೆಯಲ್ಲಿಯೂ ಸಹ ಧೀ ಶಬ್ದವು ಧ್ಯಾನವನ್ನು ನಿರ್ದೇಶಿಸುತ್ತದೆ. ಉದಾಹರಣೆ–

CC-0. Jangamwadi Math Collection. Digitized by eGangotri

ದ್ವಿತಾ ಹೋತಾರಾಂ ಮನುಷಶ್ಚ ವಾಘತೋ ಧಿಯಾ ರಥಂ ನ ಕುಲಿಶಃ ಸಮೃಣ್ವತಿ ॥
(ಋ. ಸಂ. ೩-೨-೧)

ಇತ್ಯಾದಿ ಸ್ಥಳಗಳಲ್ಲಿ ಧ್ಯಾನಾತ್ಮಕವಾದ ಕರ್ಮಗಳಿಂದ ಅಗ್ನ್ಯಾದಿದೇವತಾಸ್ತುತಿಯನ್ನು ನೆರವೇರಿಸಿದರೆಂದು ಧೀ ಶಬ್ದಕ್ಕಿರುವ ವಿಶೇಷಾರ್ಥವನ್ನು ತೋರಿಸಿದೆ. ಚೇತೆಯಧ್ವಮಿತಿ, ಚಿತಿಮಿಚ್ಛತೇತಿ (ಶ. ಬ್ರಾ. ೬-೨-೩೧) ಇತ್ಯಾದಿ ಸನ್ನಿವೇಶಗಳಲ್ಲಿ ಚೇತನಪದಕ್ಕೆ ಕೇವಲ ಮಾನಸಿಕಸ್ಥಿತಿಯಲ್ಲದೇ ಯಾವ ರೀತಿ ಧ್ಯಾನವೆಂದರ್ಥ ಮಾಡಿದೆಯೋ ಪ್ರಕೃತದಲ್ಲಿ ಧೀಶಬ್ದಕ್ಕೂ ಅದೇ ಅರ್ಥವನ್ನೇ ಹೇಳಬೇಕು. ಸೃಷ್ಟ್ಯಾದಿಕಾರ್ಯಗಳಿಗೆ ತಪಸ್ಸೇ ಮೂಲವೆಂದು ಉಪನಿಷದಾದಿಗಳಲ್ಲಿ ವರ್ಣಿಸಿರುವುದು. ಇಲ್ಲಿಯೂ ಋಭುಗಳು ಸೃಷ್ಟಿಕಾರ್ಯಕರ್ತರಾದುದರಿಂದ ಆ ಕಾರ್ಯಕ್ಕೆ ತಕ್ಕ ಧ್ಯಾನರೂಪವಾದ ಪ್ರಜ್ಞೆಯಿಂದ ತಮ್ಮ ಕಾರ್ಯಸಿದ್ಧಿಯನ್ನು ಪಡೆದರು ಎಂದು ತಾತ್ಪರ್ಯ.



ಸಂಹಿತಾಪಾಠಃ

ಇಂದ್ರಸ್ಯ ಸಖ್ಯಮೃಭವಃ ಸಮಾನಶುರ್ಮನೋರ್ನಪಾತೋ ಅಪಸೋ ದಧನ್ವಿರೇ ।
ಸೌಧನ್ವನಾಸೋ ಅಮೃತತ್ವಮೇರಿರೇ ವಿಷ್ಟ್ವೀ ಶಮೀಭಿಃ ಸುಕೃತಃ ಸುಕೃತ್ಯಯಾ ॥ ೩ ॥

ಪದಪಾಠಃ

ಇಂದ್ರಸ್ಯ । ಸಖ್ಯಂ । ಋಭವಃ । ಸಮ್ । ಆನಶುಃ । ಮನೋಃ । ನಪಾತಃ । ಅಪಸಃ । ದಧನ್ವಿರೇ ।
ಸೌಧನ್ವನಾಸಃ । ಅಮೃತ್ಽತ್ವಂ । ಆ । ಈರಿರೇ । ವಿಷ್ಟ್ವೀ । ಶಮೀಭಿಃ । ಸುಽಕೃತಃ । ಸುಽಕೃತ್ಯಯಾ ॥೩॥

ಸಾಯಣಭಾಷ್ಯಂ

ಮನೋರ್ನಪಾತೋ ಮನುಷ್ಯಸ್ಯಾಂಗಿರಸಃ ಪುತ್ರಾ ಅಪಸೋ ಯಾಗಾದಿಲಕ್ಷಣಕರ್ಮವಂತ ಋಭವ ಇಂದ್ರಸ್ಯ ಸಖ್ಯಂ ಸಮಾನಖ್ಯಾನತ್ವಂ ಸಮಾನಶುಃ । ಸಮ್ಯಕ್ ಪ್ರಾಪ್ನುವನ್ । ತಥೇಂದ್ರಸ್ಯ ಸಖ್ಯಂ ಪ್ರಾಪ್ತಾಸ್ತ ಋಭವೋ ದಧನ್ವಿರೇ । ಪೂರ್ವಂ ಮನುಷ್ಯತ್ವೇನ ಮರಣಯೋಗ್ಯಾ ಅಪೀದಾನೀಮಿಂದ್ರಸ್ಯ ಸಖ್ಯೇನ ಪ್ರಾಣಾನ್ಧಾರಯಂತಿ । ತಥಾ ಮಂತ್ರಃ । ಅಧಾರಯಂತ ವಹ್ನಯಃ ! ಋಗ್ವೇ. ೧-೨೦-೮। ಇತಿ । ಸೌಧನ್ವನಾಸಃ ಸುಧನ್ವನಾಮಕಸ್ಯರ್ಷೇಃ ಪುತ್ರಾ ಋಭವಃ ಸುಕೃತಃ ಶೋಭನಕರ್ಮಾಣಃ ಸಂತಃ ಪ್ರಭೂತ್ಯೈಃ ಶಮೀಭಿರ್ದೇವತ್ವಪ್ರಾಪ್ತಿಪ್ರತಿಬಂಧನಿವಾರಣಹೇತುಭಿಃ ಕರ್ಮಭಿಃ ಸುಕೃತ್ಯಯಾ ಶೋಭನೇನ ಕರ್ಮಣಾ ಚ ವಿಷ್ಟ್ವೀ ವ್ಯಾಪ್ಯಾಮೃತತ್ವಮೇರಿರೇ । ದೇವತ್ವಂ ಪ್ರಾಪುಃ । ತಥಾ ಚ

CC-0. Jangamwadi Math Collection. Digitized by eGangotri

ಮಂತ್ರಾಂತರಮಾಮ್ನಾಯತೇ । ಮರ್ತಾಸಃ ಸಂತೋ ಅಮೃತತ್ವಮಾನಶುಃ । ಋಗ್ವೇ. ೧-೧೧೦-೪ । ಇತಿ॥ ನಪಾತಃ । ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ । ದಧನ್ವಿರೇ । ಧವಿರ್ಗತ್ಯರ್ಥಃ । ವ್ಯತ್ಯಯೇ-ನಾತ್ಮನೇಪದಂ । ಲಿಟಿ ರೂಪಂ । ಈರಿರೇ । ಈರ ಗತೌ । ಮಂತ್ರೇತ್ವಾದಾಮ್ನ ಭವತಿ । ನಿಘಾತಃ । ಸುಕೃತ್ಯಯಾ । ಕರೋತೇರ್ಭಾವೇ ಕೃಞಃ ಶ ಚೇತಿ ಕ್ಯಪ್ । ಪ್ರತ್ಯಯಸ್ಯ ವ್ಯತ್ಯಯೇನಾಂತೋದಾತ್ತತ್ವಂ । ಸಮಾಸೇ ಕೃದುತ್ತರಸ್ವರಃ ॥

ಪ್ರತಿಪದಾರ್ಥ

**ಮನೋಃ**—ಮಾನವನಾದ ಅಂಗಿರಸ್ಸಿನ । **ನಪಾತಃ**—ಪುತ್ರರೂ । **ಅಪಸಃ**—ಯಾಗಾದಿ ಕರ್ಮವಂತರೂ ಆದ । **ಋಭವಃ**—ಋಭುಗಳು । **ಇಂದ್ರಸ್ಯ**—ಇಂದ್ರನ । **ಸಖ್ಯಂ**—ಸ್ನೇಹವನ್ನು । **ಸಮಾನಶುಃ**—ಪಡೆದರು ಮತ್ತು । **ದಧನ್ವಿರೇ**—ಮರಣರಾಹಿತ್ಯವನ್ನೂ ಹೊಂದಿದರು । **ಸೌಧನ್ವನಾಸಃ**- ಸುಧನ್ವಪುತ್ರರಾದ ಋಭುಗಳು । **ಸುಕೃತಃ**—ಶ್ರೇಷ್ಠರಾದ ಕರ್ಮಕರ್ತರಾಗಿ । **ಶಮೀಭಿಃ**—ಶ್ರೇಷ್ಠವಾದ ಕರ್ಮಗಳಿಂದಲೂ । **ಸುಕೃತ್ಯಯಾ**—ಉತ್ತಮವಾದ ವ್ಯವಹಾರಗಳಿಂದಲೂ । **ವಿಷ್ಟ್ವೀ**—ಸರ್ವತ್ರ ವ್ಯಾಪಿಸಿ । **ಅಮೃತತ್ವಂ**—ಮರಣರಾಹಿತ್ಯವನ್ನು । **ಏರಿರೇ**—ಪಡೆದರು.

ಭಾವಾರ್ಥ

ಮಾನವನಾದ ಅಂಗಿರಸ್ಸಿನ ಪುತ್ರರೂ, ಯಾಗಾದಿ ಕರ್ಮಕರ್ತರೂ ಆದ ಋಭುಗಳು ಇಂದ್ರನ ಸಖ್ಯವನ್ನು ಪಡೆದರು. ಮತ್ತು ಆ ಸಹಾಯದಿಂದಲೇ ಮರಣರಾಹಿತ್ಯವನ್ನೂ ಹೊಂದಿದರು. ಸುಧನ್ವಪುತ್ರರಾದ ಋಭುಗಳು ಶ್ರೇಷ್ಠವಾದ ಕರ್ಮಕರ್ತರಾಗಿ ಉತ್ತಮವಾದ ಕರ್ತವ್ಯಜ್ಞಾನದಿಂದಲೂ, ವ್ಯವಹಾರಗಳಿಂದಲೂ ಸಹ ಸರ್ವತ್ರ ವ್ಯಾಪಿಸಿ ಮರಣರಾಹಿತ್ಯವನ್ನು ಪಡೆದರು.

English Translation

The Ribhus, the performers of (good) works, the grandsons of a man, have attained the friendship of Indra: they have perpetuated (existence): the sons of Sudhanvan have attained immortality: performers of pious acts influencing (the result), through their devotion (they have attained divinity) by their works.

ವಿಶೇಷವಿಷಯಗಳು

ಅಂಗಿರಸ್ಸಿನ ಪುತ್ರರೂಪರಾದ ಋಭುಗಳು ಇಂದ್ರನ ಸಖ್ಯವನ್ನು ಪಡೆದರು ಎಂದು ಪ್ರಕೃತವಾದ ಋಕ್ಕಿನಲ್ಲಿ ತಿಳಿಸಿದೆ. ಮನೋಃ ಎಂಬ ಪದವು ಮಾನವನಾದ ಅಂಗಿರಸ್ಸು ಎಂಬುದರ ಪರ್ಯಾಯಪದವೆಂದೂ ತಿಳಿಸಿದೆ. ಮನೋಃ ಎಂಬುದಕ್ಕೆ ಅಂಗಿರಸ್ಸು ಎಂದಾದರೆ, ಆಗ ಹಿಂದಿನ ಋಕ್ಕಿನಲ್ಲಿ ವರ್ಣಿತವಾಗಿರುವ ಆದಿತ್ಯರಶ್ಮಿರೂಪವಾದ ಋಭುಗಳಿಗೂ, ಅಂಗಿರಸ್ಸಿಗೂ ಇರುವ ಸಂಬಂಧವನ್ನು ತಿಳಿಯಬೇಕಾದರೆ, ಆದಿತ್ಯನಿಗೂ ಅಂಗಿರಸ್ಸಿಗೂ ಇರುವ ಸಂಬಂಧವನ್ನರಿಯಬೇಕು. ಅನಂತರ ಅಂಗಿರಸ್ಸಿಗೂ ಇಂದ್ರನ ಸಂಬಂಧವನ್ನು ತಿಳಿದು, ಅಂತಹ ನಿಕಟಸಂಬಂಧವುಳ್ಳ ಇಂದ್ರನ ಸಖ್ಯವನ್ನು ಋಭುಗಳು ಬೆಳಸಿದರು ಎಂಬುದರ ತಾತ್ಪರ್ಯವನ್ನರಿಯಬಹುದು.



CC-0. Jangamwadi Math Collection. Digitized by eGangotri

ಯಾವ ಆದಿತ್ಯನನ್ನು ಛಾಂದೋಗ್ಯಾದಿಗಳಲ್ಲಿ ಉದ್ಗೀಥವೆಂದು ಪ್ರಶಂಸಿಸಿದೆಯೋ, ಅದೇ ಆದಿತ್ಯಸ್ವರೂಪವೇ ಅಂಗಿರಸ್ಸೂ ಆಗಿದೆ. ಇದು ಹೇಗೆಂದರೆ,

> ಅಥಾಧಿದೈವತಂ ಯ ಏವಾಽಸೌ ತಪತಿ ತಮುದ್ಗೀಥಮುಪಾಸೀತೋದ್ಯನ್ವಾ ಏಷ ಪ್ರಜಾಭ್ಯ ಉದ್ಗಾಯತಿ । ಉದ್ಯನ್‌ಸ್ತಮೋ ಭಯಮಪಹನ್ತ್ಯಪಹಂತಾ ಹ ವೈ ಭಯಸ್ಯ ತಮಸೋ ಭವತಿ ಯ ಏವಂ ವೇದ ॥
>
> (ಛಾ. ಉ. ೧-೩-೧)

ಪ್ರಕಾಶಯುತನಾದ ಆದಿತ್ಯನನ್ನೇ ಉದ್ಗೀಥವೆಂದು ಪೂಜಿಸಬೇಕು. ಉದಯಿಸಿದೊಡನೆಯೇ ಅವನು ಪ್ರಜೆಗಳಿಗೆ ಸಂತೋಷವಾಗತಕ್ಕ ರೀತಿಯಲ್ಲಿ ಗಾನಮಾಡುತ್ತಾನೆ. ಅಂಧಕಾರವನ್ನೂ, ಭಯವನ್ನೂ ನಾಶಮಾಡುತ್ತಾನೆ. ಆದುದರಿಂದ ಈ ಆದಿತ್ಯನೇ ಜೀವರಾಶಿಗಳ ಜೀವದ ಸಾರ ಮತ್ತು ತುಷ್ಟಿದಾಯಕ. ಈ ವಿಧವಾಗಿ ಜೀವದ ಸಾರ ವಾಗಿರುವುದರಿಂದಲೇ, ಆದಿತ್ಯರೂಪಿಯಾದ ಉದ್ಗೀಥವನ್ನೇ ಅಂಗಿರಸ್ಸು ಎಂದು ಕರೆದಿದೆ. ಹೇಗೆಂದರೆ,

> ತಂ ಹಾಂಗಿರಾ ಉದ್ಗೀಥಮುಪಾಸಾಂ ಚಕ್ರ ಏತಮು ಏವಾಂಗಿರಸಂ ಮನ್ಯಂತೇಽಂಗಾನಾಂ ಯದ್ರಸಃ ॥
>
> (ಛಾ. ಉ. ೧-೨-೧೦)

ಅಂಗಿರಸ್ಸುಗಳು ಉದ್ಗೀಥವನ್ನು ಆರಾಧಿಸಿದರು. ಹಾಗಾದರೆ ಅವರು ಆರಾಧಿಸಲು ಕಾರಣವೇನು ಎಂದರೆ ಅವರೇ ಉದ್ಗೀಥಪ್ರಾಯರು. ಹೇಗೆಂದರೆ, ಉದ್ಗೀಥವೇ ಅಂಗಗಳ ರಸವು. ಆದುದರಿಂದ ಉದ್ಗೀಥನೆಂದರೆ ಅಂಗಿರಸ್ಸು ಎಂದರ್ಥ. ಜೀವರಾಶಿಗಳ ಅಂಗಕ್ಕೆ ರಸದಾಯಕವು ಆದಿತ್ಯರಶ್ಮಿಗಳು. ಆದುದರಿಂದ ಉದ್ಗೀಥವು ಆದಿತ್ಯಪ್ರಾಯವೂ, ಅಂಗಿರಃ ಪ್ರಾಯವೂ ಆಗಿದೆ ಎಂದು ವಿವರಿಸಿರುವುದರಲ್ಲಿ ಆದಿತ್ಯ ಮತ್ತು ಅಂಗಿರಸ್ಸಿಗೆ ಅಭೇದವನ್ನು ಹೇಳಿದಂತಾಯಿತು. ಹಾಗಾದರೆ ಇಂತಹ ಅಂಗಿರಸ್ಸಿಗೂ ಇಂದ್ರನಿಗೂ ಇರುವ ಸಂಬಂಧವೇನೆಂದರೆ, ಹಿಂದೆ ಋ. ಸಂ. ೧-೧೦೦-ಳನೇ ಋಕ್ಕಿನ ವಿಶೇಷವಿಷಯಗಳಲ್ಲಿ **ಅಂಗಿರೋಭಿಃ ಅಂಗಿರಸ್ತಮಃ** ಎಂಬ ವಿಶೇಷಣವು ಇಂದ್ರನ ಅಂಗಿರಾಸ್ತ್ವವನ್ನು ಯಾವರೀತಿ ತಿಳಿಸುವುದೆಂದು ವಿವರಿಸಿದೆ. ಅಂಗಿರಾರೂಪನಾದ ಇಂದ್ರನು ಗೋವುಗಳನ್ನು ಮುಕ್ತವಾಗುವಂತೆ ಮಾಡಿದನುಎಂಬುದಕ್ಕೆ ಆದಿತ್ಯರೂಪನಾದ ಇಂದ್ರನು ತಮೋರೂಪವಾದ ಪರ್ವತವನ್ನು ಸೀಳಿ ರಶ್ಮಿರೂಪಗಳಾದ ಗೋವುಗಳನ್ನು ಬಿಡಿಸಿದನು ಎಂದು ತಾತ್ಪರ್ಯ.

> ಅಗಚ್ಛದು ವಿಪ್ರತಮಃ ಸಖೀಯನ್ನಸೂದಯತ್ಸುಕೃತೇ ಗರ್ಭಮದ್ರಿಃ ।
> ಸಸಾನ ಮರ್ಯೋ ಯುವಭಿರ್ಮಖಸ್ಯನ್ನಥಾಭವದಂಗಿರಾಃ ಸದ್ಯೋ ಅರ್ಚನ್ ॥
>
> (ಋ. ಸಂ. ೩-೩೧-೭)

ಇತ್ಯಾದಿ ಋಕ್ಕುಗಳಲ್ಲಿ ಈ ಅಂಶವು ವಿಶದವಾಗಿ ಹೇಳಲ್ಪಟ್ಟಿದೆ.

**ಶಮೀಭಿಃ**—ಈ ಪದವು ಕರ್ಮನಾಮಗಳಲ್ಲಿ ಪಠಿತವಾಗಿದೆ (ನಿ. ೩-೧). ಹಿಂದೆಲ್ಲಾ ವರ್ಣಿತವಾದ ನಾನಾವಿಧವಾದ ಕುಶಲಕರ್ಮಗಳು ಮತ್ತು ಯಜ್ಞಕರ್ಮಗಳು ಎಂದರ್ಥ.

**ವಿಷ್ಟ್ವೀ**—ಈ ಪದವೂ ಸಹ ಕರ್ಮನಾಮಗಳಲ್ಲಿ ಪಠಿತವಾಗಿದೆ. (ನಿ. ೩-೧) ಸಾಯಣರು ಈ ಪದವನ್ನು ಬೇರೆ ಕಡೆಯಲ್ಲಿ ವಿವರಿಸುತ್ತಾ ಹೀಗೆಂದು ತಿಳಿಸಿದ್ದಾರೆ. ಅಲ್ಲಿಯೂ ವಿಷ್ಟ್ವೀ, ಶಮೀ ಎಂಬ ಎರಡು

CC-0. Jangamwadi Math Collection. Digitized by eGangotri

ಪದಗಳ ಪ್ರಯೋಗವೂ ಒಂದೇ ಕಡೆಯಿರುವುದರಿಂದ ಶಮೀ ಎಂಬ ಪದಕ್ಕೆ ಕರ್ಮವೆಂದರ್ಥವಾದರೆ, ವಿಷ್ಟ್ವೀ ಎಂಬ ಪದಕ್ಕೂ ಅದೇ ಅರ್ಥವನ್ನು ಹೇಳಲಾಗುವುದಿಲ್ಲ. ಬೇರೆ ಅರ್ಥವನ್ನು ಹೇಳಬೇಕು ಎಂದು ಈ ರೀತಿ ವಿವರಿಸಿದ್ದಾರೆ.

ವಿಷ್ಟ್ವೀತ್ಯತ್ರ ನ ಕರ್ಮನಾಮ । ಶಮೀತ್ಯನೇನ ಪೌನರುಕ್ತ್ಯಪ್ರಸಂಗಾತ್ । ಕಿಂ ತರ್ಹಿ । ವಿಷೇರ್ವ್ಯಾಪ್ತ್ಯರ್ಥಸ್ಯ ಕ್ರಿಯಾಶಬ್ದೋಽಯಂ ವಿಷ್ಟ್ವೀತಿ । ವಿಷ್ಟ್ವಾ ವ್ಯಾಪ್ತ್ವಾ ॥

ಕರ್ಮನಾಮಗಳಲ್ಲಿ ಪಠಿತವಾಗಿದ್ದರೂ ಸಹ ಕರ್ಮವಾಚಕವಾದ ಶಮೀ ಎಂದು ಪುನರುಕ್ತಿಯಿರುವುದರಿಂದ ವ್ಯಾಪ್ತ್ಯರ್ಥವುಳ್ಳ ವಿಷ್ ಧಾತುವಿನಿಂದ ನಿಷ್ಪನ್ನವಾದ ಈ ಪದಕ್ಕೆ ಸರ್ವವ್ಯಾಪಕವೆಂದರ್ಥವೆಂದು ತಿಳಿಸಿದ್ದಾರೆ.



ಸಂಹಿತಾಪಾಠಃ

ಇಂದ್ರೇಣ ಯಾಥ ಸರಥಂ ಸುತೇ ಸಚಾಁ ಅಥೋ ವಶಾನಾಂ ಭವಥಾ ಸಹ ಶ್ರಿಯಾ ।

ನ ವಃ ಪ್ರತಿಮೈ ಸುಕೃತಾನಿ ವಾಘತಃ ಸೌಧನ್ವನಾ ಋಭವೋ ವೀರ್ಯಾಣಿ ಚ ॥ ೪ ॥

ಪದಪಾಠಃ

ಇಂದ್ರೇಣ । ಯಾಥ । ಸऽರಥಂ । ಸುತೇ । ಸಚಾ । ಅಥೋ ಇತಿ । ವಶಾನಾಂ । ಭವಥ । ಸಹ । ಶ್ರಿಯಾ ।

ನ । ವಃ । ಪ್ರತಿऽಮೈ । ಸುऽಕೃತಾನಿ । ವಾಘತಃ । ಸೌಧನ್ವನಾಃ । ಋಭವಃ । ವೀರ್ಯಾಣಿ । ಚ ॥ ೪ ॥

ಸಾಯಣಭಾಷ್ಯಂ

ಹೇ ಋಭವೋ ಯೂಯಮಿಂದ್ರೇಣ ಸಚಾ ಸಹ ಸರಥಂ ಸಮಾನಮೇಕಂ ರಥಮಾರುಹ್ಯ ಸುತೇಽಭಿಷುತಸೋಮವತಿ ಯಜ್ಞೇ ಯಾಥ । ಗಚ್ಛಥ । ಅಥೋ ಅನಂತರಮಿಂದ್ರೇಣ ಸಹೈಕರಥ-ಮಾರೂಢಾ ಯೂಯಂ ವಶಾನಾಂ । ಉಶ್ಯತೇ ಕಾಮ್ಯತೇ ಯಜಮಾನೇನ ಸ್ವರ್ಗಾದಿಲಕ್ಷಣಂ ಫಲಮೇ-ಭಿರಿತಿ ವಶಾ ಮನುಷ್ಯಾಃ । ತೇಷಾಂ ಶ್ರಿಯಾ ಸ್ತುತಿಹವಿರಾದಿರೂಪಯಾ ಸಹ ಭವಥ । ಹೇ ಸೌಧನ್ವನಾಃ ಸುಧನ್ವನಃ ಪುತ್ರಾ ವಾಘತೋಽಮೃತತ್ವಾದಿಲಕ್ಷಣಫಲಸ್ಯ ವೋಢಾರೋ ಮೇಧಾವಿನೋ ವೇತಿ ಯಾಸ್ಕಃ। ತಾದೃಶಾ ಹೇ ಋಭವೋ ವೋ ಯುಷ್ಮಾಕಂ ಸುಕೃತಾನಿ ದೇವತ್ವಸ್ಯ ಪ್ರಾಪಕಾಣಿ ಶೋಭನಾನಿ ಕರ್ಮಾಣಿ ನ ಪ್ರತಿಮೈ । ಪ್ರತಿಮಾತುಮಿಯತ್ತಯಾ ಪರಿಚ್ಛೇತ್ತುಂ ನ ಕೇನಾಪಿ ಶಕ್ಯಾನಿ । ತಥಾ ವೀರ್ಯಾಣಿ ಯುಷ್ಮಾಕಂ ಸಾಮರ್ಥ್ಯಾನಿ ಚ ನೈವ ಪ್ರತಿಮಾತುಂ ಶಕ್ಯಾನಿ ॥ ವಶಾನಾಂ । ವಶ ಕಾಂತೌ ।

CC-0. Jangamwadi Math Collection. Digitized by eGangotri

ವಶಿರಣ್ಯೋರುಪಸಂಖ್ಯಾನಮಿತಿ ಕರಣೇಽಪ್ಪ್ರತ್ಯಯಃ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ವಶಾಶಬ್ದೋ ಬಂಧ್ಯಾವಚನಶ್ಚೇದಂತೋದಾತ್ತೋ ಭವತಿ । ವಶಾ ಮೇಷಾ ಅವಸೃಷ್ಟಾಸ ಆಹುತಾಃ । ಋಗ್ವೇ. ೧೦-೯೧-೧೪ । ಇತಿ । ವಃ । ಯುಷ್ಮಚ್ಛಬ್ದಸ್ಯ ಷಷ್ಠೀಬಹುವಚನೇ ವಸಾದೇಶಃ । ನಿಘಾತಃ । ಪ್ರತಿಮೈ । ಮಾಙ್ ಮಾನೇ । ವಿಚ್ । ಪ್ರತಿಮಾಃ ಪ್ರತಿಮಾನಂ । ತಸ್ಯ ಚತುರ್ಥ್ಯೇಕವಚನ ಆತೋ ಲೋಪಶ್ಛಾಂದಸಃ । ಏಕಾದೇಶಸ್ವರಃ ॥

## ಪ್ರತಿಪದಾರ್ಥ

(ಎಲೈ ಋಭುಗಳೇ) **ಇಂದ್ರೇಣ ಸಚಾ**—ಇಂದ್ರನೊಂದಿಗೆ । **ಸರಥಂ**—ಒಂದೇ ರಥವನ್ನು ಹತ್ತಿಕುಳಿತು । **ಸುತೇ**—ಸೋಮವನ್ನು ಹಿಂಡಿರುವ ಯಜ್ಞಕ್ಕೆ । **ಯಾಥ**—ಬನ್ನಿರಿ । **ಅಥ**—ಅನಂತರ । **ವಶಾನಾಂ**—ಮಾನವರಿಗೆ ಸಂಬಂಧಿಸಿದ । **ಶ್ರಿಯಾ ಸಹ**—ಸ್ತುತ್ಯಾದಿ ಸಂಪತ್ತುಗಳೊಂದಿಗೆ । **ಭವಥ**—ಒಂದಾಗಿ ಸೇರಿಕೊಳ್ಳಿರಿ । **ಸೌಧನ್ವನಾಃ**—ಸುಧನ್ವಪುತ್ರರೂ । **ವಾಘತಃ**—ಮೇಧಾವಿಗಳೂ ಆದ । **ಋಭವಃ**—ಎಲೈ ಋಭುಗಳೇ । **ವಃ**—ನಿಮ್ಮ । **ಸುಕೃತಾನಿ**—ಶೋಭನಾತ್ಮಕಗಳಾದ ಕರ್ಮಗಳನ್ನಾಗಲಿ । **ವೀರ್ಯಾಣಿ ಚ**—ಪರಾಕ್ರಮಕಾರ್ಯಗಳನ್ನಾಗಲಿ । **ನ ಪ್ರತಿಮೈ**—ಅಳೆಯಲು ಯಾರಿಗೂ ಸಾಧ್ಯವಿಲ್ಲ ।

## ಭಾವಾರ್ಥ

ಎಲೈ ಋಭುಗಳೇ, ಇಂದ್ರನೊಂದಿಗೆ ಒಂದೇ ರಥವನ್ನು ಹತ್ತಿಕೊಂಡು ಸೋಮವನ್ನು ಹಿಂಡಿರುವ ಯಜ್ಞಕ್ಕೆ ಬನ್ನಿರಿ. ಅನಂತರ ಮಾನವರಗೆ ಸಂಬಂಧಿಸಿದ ಸ್ತುತ್ಯಾದಿಸಂಪತ್ತುಗಳೊಡನೆ ಒಂದಾಗಿ ಸೇರಿಕೊಳ್ಳಿರಿ. ಸುಧನ್ವಪುತ್ರರೂ, ಮೇಧಾವಿಗಳೂ ಆದ ಎಲೈ ಋಭುಗಳೇ, ನಿಮ್ಮ ಶೋಭನಾತ್ಮಕಗಳಾದ ಕರ್ಮಗಳನ್ನಾಗಲಿ, ಪರಾಕ್ರಮಕಾರ್ಯಗಳನ್ನಾಗಲಿ ಅಳೆಯಲು ಯಾರಿಗೂ ಸಾಧ್ಯವಿಲ್ಲ.

## English Translation

Go with Indra in his chariot when the libation is poured out, and be (welcomed) with honour by the (worshipper) desiring (your favour): Ribhus, sons of Sudhanwan, bestowers (of the rewards of pious acts), your virtuons deeds, your great faculties, are not to be measured.

## ವಿಶೇಷವಿಷಯಗಳು

**ವಶಾನಾಂ**— **ಉಶ್ಯತೇ ಕಾಮ್ಯತೇ ಯಜಮಾನೇನ ಸ್ವರ್ಗಾದಿಲಕ್ಷಣಂ ಫಲಂ ಏಭಿಃ ಇತಿ ವಶಾಃ ಮನುಷ್ಯಾಃ** । ಯಜ್ಞಯಾಗಾದಿಕರ್ಮಗಳ ಮೂಲಕ ಸ್ವರ್ಗಾದಿಫಲಗಳು ಅಪೇಕ್ಷಿತವಾಗುತ್ತವೆಯಾದುದರಿಂದ ಇಂತಹ ಅಪೇಕ್ಷೆಯನ್ನು ಸೂಚಿಸುವ ಮಾನವರಿಗೆ ವಶರೆಂದು ಹೆಸರು ಪ್ರಸಿದ್ಧವಾಗಿದೆ. ಐತರೇಯಾರಣ್ಯಕಾದಿಗಳಲ್ಲಿ ನಿರ್ದಿಷ್ಟವಾಗಿರುವ **ವಶಾ ನಿವಿತ್** ಎಂಬ ಪ್ರಯೋಗಗಳೂ ಸಹ ಇದೇ ಅರ್ಥವನ್ನು ಸೂಚಿಸುತ್ತವೆ. (ಐ. ಆ. ೧-೫-೨)

———————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಂ ಸುತಂ ಸೋಮಮಾ ವೃಷಸ್ವಾ ಗಭಸ್ತ್ಯೋಃ ।
ಧಿಯೇಷಿತೋ ಮಘವನ್ದಾಶುಷೋ ಗೃಹೇ ಸೌಧನ್ವನೇಭಿಃ ಸಹ ಮತ್ಸ್ವಾ ನೃಭಿಃ ॥ ೫ ॥

ಪದಪಾಠಃ

ಇಂದ್ರ । ಋಭುಽಭಿಃ । ವಾಜವತ್‌ಽಭಿಃ । ಸಮ್‌ಽಉಕ್ಷಿತಂ । ಸುತಂ । ಸೋಮಂ । ಆ । ವೃಷಸ್ವ । ಗಭಸ್ತ್ಯೋಃ ।
ಧಿಯಾ । ಇಷಿತಃ । ಮಘಽವನ್ । ದಾಶುಷಃ । ಗೃಹೇ । ಸೌಧನ್ವನೇಭಿಃ । ಸಹ । ಮತ್ಸ್ವ । ನೃಽಭಿಃ ॥

ಸಾಯಣಭಾಷ್ಯಂ

ಆಭಿಪ್ಲವಿಕೇ ಪಂಚಮೇಽಹನಿ ವೈಶ್ವದೇವಶಸ್ತ್ರ ಇಂದ್ರ ಋಭುಭಿರಿತ್ಯಾರ್ಭವಸ್ತೃಚಃ । ಸೂತ್ರಿತಂ ಚ । ಘೃತವತೀ ಭುವನಾನಾಮಭಿಶ್ರಿಯೇಂದ್ರ ಋಭುಭಿರ್ವಾಜವದ್ಭಿರಿತಿ ತೃಚೌ । ಆ. ೭-೭ । ಇತಿ ॥ ಆದ್ಯಸ್ತೃತೀಯಸವನೇ ಹೋತುಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಮಿಂದ್ರಾವರುಣಾ ಸುತಪಾವಿಮಂ ಸುತಂ । ಆ. ೫-೫ । ಇತಿ ॥

ಹೇ ಇಂದ್ರ ವಾಜವದ್ಭಿಃ । ವಾಜೋ ನಾಮ ಋಭೂಣಾಂ ಭ್ರಾತಾ । ಯದ್ವಾ । ವಾಜೋಽನ್ನಂ ತತ್ಸಹಿತೈರ್ಋಭುಭಿಃ ಸಹಿತಸ್ತ್ವಂ ಸಮುಕ್ಷಿತಂ ಸಮ್ಯಗದ್ಭಿಃ ಸಿಕ್ತಂ ಗ್ರಾವಭಿಃ ಸುತಂ ಸೋಮಂ ಗಭಸ್ತ್ಯೋಃ । ಬಪ್ಸತ್ಯದಂತ್ಯಾಭ್ಯಾಮನ್ನಮಿತಿ ಗೃಹ್ಣಂತಿ ಪದಾರ್ಥಾನಾಭ್ಯಾಮಿತಿ ವಾ ಗಭಸ್ತೀ ಬಾಹೂ । ತಯೋರ್ಬಾಹ್ವೋರಾ ವೃಷಸ್ವ । ಆಕ್ಷಾರಯ । ಗೃಹಮುಭಾಭ್ಯಾಂ ಬಾಹುಭ್ಯಾಂ ಗೃಹೀತ್ವಾ ಸೋಮಂ ಪಿಬೇತ್ಯರ್ಥಃ । ಹೇ ಮಘವನ್ ಹೇ ಇಂದ್ರ ಧಿಯಾ ಸ್ತೋತ್ರರೂಪೇಣ ಕರ್ಮಣೇಷಿತಃ ಪ್ರೇರಿತಸ್ತ್ವಂ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಗೃಹೇ ಸೌಧನ್ವನೇಭಿಃ ಸುಧನ್ವನಃ ಪುತ್ರೈರ್ನೃಭಿರ್ಮನುಷ್ಯೈರ್ಋಭುಭಿಃ ಸಹ ಸಾಕಂ ಮತ್ಸ್ವ । ಸೋಮಪಾನೇನ ಹೃಷ್ಟೋ ಭವ ॥ ಸಮುಕ್ಷಿತಂ । ಉಕ್ಷ ಸೇಚನೇ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಸ್ವರಃ । ನಭಸ್ತ್ಯೋಃ । ಭಸ ಭರ್ತ್ಸನದೀಪ್ತ್ಯೋರಿತ್ಯಸ್ಮಾದ್ಭಸೇರ್ಗಟ್ಚೇತಿ ಸೂತ್ರೇಣ ತಿಪ್ರತ್ಯಯೋ ಧಾತೋರ್ಗಡಾಗಮಶ್ಚ । ಯದ್ವಾ । ಗೃಹ್ಣಾತೇಃ ಪೃಷೋದರಾದಿತ್ವಾದೇವಂ ನೇಯಂ । ಮತ್ಸ್ವ । ಮದಿ ಸ್ತುತ್ಯಾದಿಷು । ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ನಿಘಾತಃ ॥

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಂ ಸುತಂ ಸೋಮಮಾ ವೃಷಸ್ವಾ ಗಭಸ್ತ್ಯೋಃ ।
ಧಿಯೇಷಿತೋ ಮಘವನ್ದಾಶುಷೋ ಗೃಹೇ ಸೌಧನ್ವನೇಭಿಃ ಸಹ ಮತ್ಸ್ವಾ ನೃಭಿಃ ॥ ೫ ॥

ಪದಪಾಠಃ

ಇಂದ್ರ । ಋಭುಽಭಿಃ । ವಾಜವತ್ಽಭಿಃ । ಸಮ್ಽಉಕ್ಷಿತಂ । ಸುತಂ । ಸೋಮಂ । ಆ । ವೃಷಸ್ವ । ಗಭಸ್ತ್ಯೋಃ ।
ಧಿಯಾ । ಇಷಿತಃ । ಮಘಽವನ್ । ದಾಶುಷಃ । ಗೃಹೇ । ಸೌಧನ್ವನೇಭಿಃ । ಸಹ । ಮತ್ಸ್ವ । ನೃಽಭಿಃ ॥

ಸಾಯಣಭಾಷ್ಯಂ

ಆಭಿಪ್ಲವಿಕೇ ಪಂಚಮೇಽಹನಿ ವೈಶ್ವದೇವಶಸ್ತ್ರ ಇಂದ್ರ ಋಭುಭಿರಿತ್ಯಾರ್ಭವಸ್ತೃಚಃ । ಸೂತ್ರಿತಂ ಚ । ಘೃತವತೀ ಭುವನಾನಾಮಭಿಶ್ರಿಯೇಂದ್ರ ಋಭುಭಿರ್ವಾಜವದ್ಭಿರಿತಿ ತೃಚೌ । ಆ. ೭-೭ । ಇತಿ ॥ ಆದ್ಯಸ್ತೃತೀಯಸವನೇ ಹೋತುಃ ಪ್ರಸ್ಥಿತಯಾಜ್ಯಾ । ಸೂತ್ರಿತಂ ಚ । ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಮಿಂದ್ರಾವರುಣಾ ಸುತಪಾವಿಮಂ ಸುತಂ । ಆ. ೫-೫ । ಇತಿ ॥

ಹೇ ಇಂದ್ರ ವಾಜವದ್ಭಿಃ । ವಾಜೋ ನಾಮ ಋಭೂಣಾಂ ಭ್ರಾತಾ । ಯದ್ವಾ । ವಾಜೋಽನ್ನಂ ತತ್ಸಹಿತೈರ್ಋಭುಭಿಃ ಸಹಿತಸ್ತ್ವಂ ಸಮುಕ್ಷಿತಂ ಸಮ್ಯಗದ್ಭಿಃ ಸಿಕ್ತಂ ಗ್ರಾವಭಿಃ ಸುತಂ ಸೋಮಂ ಗಭಸ್ತ್ಯೋಃ । ಬಪ್ಸತ್ಯದಂತ್ಯಾಭ್ಯಾಮನ್ನಮಿತಿ ಗೃಹ್ಣಂತಿ ಪದಾರ್ಥಾನಾಭ್ಯಾಮಿತಿ ವಾ ಗಭಸ್ತೀ ಬಾಹೂ । ತಯೋರ್ಬಾಹ್ವೋರಾ ವೃಷಸ್ವ । ಆಕ್ಷಾರಯ । ಗೃಹಮುಭಾಭ್ಯಾಂ ಬಾಹುಭ್ಯಾಂ ಗೃಹೀತ್ವಾ ಸೋಮಂ ಪಿಬೇತ್ಯರ್ಥಃ । ಹೇ ಮಘವನ್ ಹೇ ಇಂದ್ರ ಧಿಯಾ ಸ್ತೋತ್ರರೂಪೇಣ ಕರ್ಮಣೇಷಿತಃ ಪ್ರೇರಿತಸ್ತ್ವಂ ದಾಶುಷೋ ಹವಿರ್ದತ್ತವತೋ ಯಜಮಾನಸ್ಯ ಗೃಹೇ ಸೌಧನ್ವನೇಭಿಃ ಸುಧನ್ವನಃ ಪುತ್ರೈರ್ನೃಭಿರ್ಮನುಷ್ಯೈರ್ಋಭುಭಿಃ ಸಹ ಸಾಕಂ ಮತ್ಸ್ವ । ಸೋಮಪಾನೇನ ಹೃಷ್ಟೋ ಭವ ॥ ಸಮುಕ್ಷಿತಂ । ಉಕ್ಷ ಸೇಚನೇ । ಕರ್ಮಣಿ ಕ್ತಃ । ಗತಿರನಂತರ ಇತಿ ಗತೇಃ ಸ್ವರಃ । ಗಭಸ್ತ್ಯೋಃ । ಭಸ ಭರ್ತ್ಸನದೀಪ್ತ್ಯೋರಿತ್ಯಸ್ಮಾದ್ಭಸೇರ್ಗಟ್ಚೇತಿ ಸೂತ್ರೇಣ ತಿಪ್ರತ್ಯಯೋ ಧಾತೋರ್ಗಡಾಗಮಶ್ಚ । ಯದ್ವಾ । ಗೃಹ್ಣಾತೇಃ ಪೃಷೋದರಾದಿತ್ವಾದೇವಂ ನೇಯಂ । ಮತ್ಸ್ವ । ಮದಿ ಸ್ತುತ್ಯಾದಿಷು । ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ನಿಘಾತಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ವಾಜವದ್ಭಿಃ**—ಅನ್ನಯುಕ್ತರಾದ । **ಋಭುಭಿಃ**—ಋಭುಗಳೊಡನೆ ಕೂಡಿ । **ಸಮುಕ್ಷಿತಂ**—ಉದಕದೊಡನೆ ಮಿಶ್ರಿತವಾಗಿ । **ಸುತಂ**—ಹಿಂಡುವ ಕಲ್ಲುಗಳಿಂದ ಹಿಂಡಲ್ಪಟ್ಟುದೂ ಆದ । **ಸೋಮಂ**—ಸೋಮವನ್ನು । **ಗಭಸ್ತ್ಯೋಃ**—ಎರಡು ತೋಳುಗಳಿಂದಲೂ ಎತ್ತಿಹಿಡಿದು । **ಆ ವೃಷಸ್ವ**—ಪಾನ ಮಾಡು । **ಮಘವನ್**—ಧನವಂತನಾದ ಎಲೈ ಇಂದ್ರನೇ । **ಧಿಯಾ**—ಸ್ತುತಿರೂಪವಾದ ಕರ್ಮದಿಂದ । **ಇಷಿತಃ**—ಪ್ರೇರಿತನಾದ ನೀನು । **ದಾಶುಷಃ**—ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನ । **ಗೃಹೇ**—ಗೃಹದಲ್ಲಿ । **ಸೌಧನ್ವನೇಭಿಃ**—ಸುಧನ್ವಪುತ್ರರೂ । **ನೃಭಿಃ ಸಹ**—ನರರೂಪರೂ ಆದ ಋಭುಗಳೊಂದಿಗೆ । **ಮತ್ಸ್ವ**—ಸೋಮಪಾನವನ್ನು ಮಾಡಿ ತುಷ್ಟನಾಗು ।

ಭಾವಾರ್ಥ

ಎಲೈ ಇಂದ್ರನೇ, ಅನ್ನಯುಕ್ತರಾದ ಋಭುಗಳೊಡನೆ ಕೂಡಿ ಉದಕಗಳಲ್ಲಿ ನೆನೆಯಿಸಿ ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟುದೂ ಆದ ಸೋಮವನ್ನು ಎರಡು ತೋಳುಗಳಿಂದಲೂ ಎತ್ತಿಹಿಡಿದು ಪಾನಮಾಡು. ಧನವಂತನಾದ ಎಲೈ ಇಂದ್ರನೇ, ಸ್ತುತಿರೂಪವಾದ ಕರ್ಮದಿಂದ ಪ್ರೇರಿತನಾದ ನೀನು ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನ ಗೃಹದಲ್ಲಿ ಸುಧನ್ವಪುತ್ರರೂ ನರರೂಪರೂ ಆದ ಋಭುಗಳೊಂದಿಗೆ ಸೋಮಪಾನವನ್ನು ಮಾಡಿ ತುಷ್ಟನಾಗು.

English Translation

Indra, along with the food-bestowing Ribhus, accept with both hands the (cup of the) effused Soma libation; excited Maghavan, by worship, rejoice with the human sons of Sudhanwan in the dwelling of the donor (of the offering).

ವಿಶೇಷವಿಷಯಗಳು

ಅಭಿಪ್ಲವನೆಂಬ ಯಾಗದ ಐದನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರ ಪಠನಮಾಡುವಾಗ ಈ ಸೂಕ್ತದ **ಇಂದ್ರ ಋಭುಭಿಃ** ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಋಭುದೇವತಾಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ- **ಘೃತವತೀ ಭುವನಾನಾಮಭಿಶ್ರಿಯೇಂದ್ರ ಋಭುಭಿರ್ವಾಜವದ್ಭಿರಿತಿ ತೃಚೌ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೭) ಮತ್ತು ಈ ಸೂಕ್ತದ ಮೊದಲನೆಯ ಋಕ್ಕನ್ನು ತೃತೀಯಸವನದಲ್ಲಿ ಹೋತೃವು ಪಠಿಸುವ ಪ್ರಸ್ಥಿತಯಾಜ್ಯಾಮಂತ್ರನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಸೂತ್ರದ-**ಇಂದ್ರ ಋಭುಭಿರ್ವಾಜವದ್ಭಿಃ ಸಮುಕ್ಷಿತಮಿಂದ್ರಾವರುಣಾ ಸುತಪಾವಿಮಂ ಸುತಂ** ಎಂಬ ಸೂತ್ರದಿಂದ (ಅ. ೫-೫) ವಿವೃತವಾಗಿರುವುದು.

ಪ್ರಕೃತವಾದ ಮಂತ್ರವನ್ನೂ, ಇದರ ಮುಂದಿನ ಮಂತ್ರವನ್ನೂ ವೈಶ್ವದೇವಶಸ್ತ್ರರೂಪದಲ್ಲಿ ಪಠಿಸಬೇಕೆಂದು ವಿಧಿಯು ಉಕ್ತವಾಗಿದೆ. ಈ ಎರಡು ಮಂತ್ರಗಳಲ್ಲಿಯೂ ಸಹ ಇಂದ್ರನು ಋಭುಗಳೊಂದಿಗೆ ಕೂಡಿಕೊಂಡು ಸೋಮ ಪಾನವನ್ನು ಮಾಡಬೇಕೆಂದು ಪ್ರಾರ್ಥಿಸಿದೆ- ಇವು ಆರ್ಭವಪವಮಾನಸ್ತೋತ್ರರೂಪವಾಗಿಯೂ ಇವೆ. ಇದಕ್ಕೆ ಆರ್ಭವಪವಮಾನವೆಂಬ ಹೆಸರು ಹೇಗೆ ಬಂತು ಎಂಬ ವಿಷಯವನ್ನು ಋ. ಸಂ. ಭಾಗ ೧೫ರಲ್ಲಿ ತೃತೀಯಸವನದ ವಿವರಣೆಯಲ್ಲಿ ವಿಸ್ತಾರವಾಗಿ ತಿಳಿಸಿದೆ.

CC-0. Jangamwadi Math Collection. Digitized by eGangotri

ಗಭಸ್ತ್ಯೋಃ—ಗಭಸ್ತಿಶಬ್ದವು ರಶ್ಮಿನಾಮಗಳಲ್ಲಿ ಪಠಿತವಾಗಿದೆ. ಅನೇಕಕಡೆಗಳಲ್ಲಿ ಹಸ್ತವೆಂಬರ್ಥದಲ್ಲಿಯೂ ಪ್ರಯುಕ್ತವಾಗಿದೆ ಈ ಪದಪ್ರಯೋಗವಿರುವ ಕಡೆಗಳಲ್ಲಿ ಸಾಯಣರೇ ಕೆಲವೆಡೆ ರಶ್ಮಿಯೆಂದೂ, ಕೆಲವೆಡೆ ಹಸ್ತವೆಂದೂ ಅರ್ಥಮಾಡಿದ್ದಾರೆ. ಉದಾಹರಣೆಗೆ,

ವಾಚಸ್ಪತೆಯೇ ಪವಸ್ವೇತಿ ವೃಷ್ಣೋಽಗ್ಂಶುಭ್ಯಾಂ ಗಭಸ್ತಿ ಪೂತ ಇತಿ ।

(ಶ. ಬ್ರಾ. ೪-೧-೧-೯)

ಎಂಬಲ್ಲಿ ಗಭಸ್ತಿಪೂತಃ ಎಂಬುದಕ್ಕೆ ಹಸ್ತಾಭ್ಯಾಂ ಪೂತಃ ಎಂದರ್ಥಮಾಡಿದೆ. ಆದರೆ ಇದೇ ವಾಕ್ಯವು ತೈತ್ತಿರೀಯ ಸಂಹಿತೆಯಲ್ಲಿ ಪ್ರಯುಕ್ತವಾಗಿರುವಾಗ ಸೂರ್ಯರಶ್ಮಿಯಿಂದ ಪೂತವಾಗಿ ಎಂದರ್ಥಮಾಡಿದ್ದಾರೆ. (ತೈ. ಸಂ. ೧-೪-೨) ಪುನಃ ಅದೇ ತೈತ್ತಿರೀಯಸಂಹಿತೆಯಲ್ಲಿ ೬-೪-೫ನೇ ವಾಕ್ಯದಲ್ಲಿ ಗಭಸ್ತಿನಾ ಹಿ ಏನಂ ಪಾವಯತಿ ಎಂಬಲ್ಲಿ ಹಸ್ತವೆಂದರ್ಥಮಾಡಿದ್ದಾರೆ. ಗಭಸ್ತಿಶಬ್ದಕ್ಕೆ ರೂಢವಾಗಿ ಸೂರ್ಯಕಿರಣವೆಂಬರ್ಥವೇ ಅಧಿಕವಾಗಿದ್ದರೂ ಸಹ ಋಕ್ಸಂಹಿತೆಯಲ್ಲಿಯೂ ಸಹ ಅನೇಕಕಡೆಗಳಲ್ಲಿ ಹಸ್ತವೆಂದೇ ಅರ್ಥಮಾಡಿದೆ.

ಗಭಸ್ತಿಪೂತಂ ಭರತ ಶ್ರುತಾಯೇಂದ್ರಾಯ ಸೋಮಂ ಯಜ್ಯವೋ ಜುಹೋತ ।

(ಋ. ಸಂ. ೨-೧೪-೮)

ಗಭಸ್ತಿಪೂತವಾದ ಎಂದರೆ ಹಸ್ತಗಳಿಂದ ಪೂತವಾದ ಸೋಮವನ್ನು ಇಂದ್ರನಿಗೆ ಅರ್ಪಿಸಿ ಎಂಬಲ್ಲೂ ಮತ್ತು

ಗಭಸ್ತಿಪೂತೋ ನೃಭಿರದ್ರಿಭಿಃ ಸುತೋ ಮಹೇ ವಾಜಾಯ ಧನ್ಯಾಯ ಧನ್ವಸಿ ।

(ಋ. ಸಂ. ೯-೮೬-೩೪)

ಎಂಬಲ್ಲೂ ಸಹ ಹಸ್ತವೆಂದೇ ಅರ್ಥವು ನಿಷ್ಕೃಷ್ಟವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಎರಡು ಗಭಸ್ತಿಗಳಿಂದಲೂ ಎಂದರೆ ಎರಡು ತೋಳುಗಳಿಂದಲೂ ಎತ್ತಿ ಕುಡಿ ಎಂದು ಇಂದ್ರನನ್ನು ಪ್ರಾರ್ಥಿಸಿದೆ.

——....——

ಸಂಹಿತಾಪಾಠಃ

ಇಂದ್ರ ಋಭುಮಾನ್ವಾಜವಾನ್ಮತ್ಸ್ವೇಹ ನೋಽಸ್ಮಿನ್ತ್ಸವನೇ ಶಚ್ಯಾ ಪುರುಷ್ಟುತ ।
ಇಮಾನಿ ತುಭ್ಯಂ ಸ್ವಸರಾಣಿ ಯೇಮಿರೇ ವ್ರತಾ ದೇವಾನಾಂ ಮನುಷಶ್ಚ ಧರ್ಮಭಿಃ ॥ ೬ ॥

ಪದಪಾಠಃ

ಇಂದ್ರ । ಋಭುಽಮಾನ್ । ವಾಜಽವಾನ್ । ಮತ್ಸ್ವ । ಇಹ । ನಃ । ಅಸ್ಮಿನ್ । ಸವನೇ । ಶಚ್ಯಾ । ಪುರುಽಸ್ತುತ ।
ಇಮಾನಿ । ತುಭ್ಯಂ । ಸ್ವಸರಾಣಿ । ಯೇಮಿರೇ । ವ್ರತಾ । ದೇವಾನಾಂ । ಮನುಷಃ । ಚ । ಧರ್ಮಽಭಿಃ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

**ಪುರುಷ್ಟುತ ಬಹುಭಿಃ ಸ್ತುತ ಹೇ ಇಂದ್ರ ಋಭುಮಾನ್ ಋಭುಣಾ ತದ್ವಾನ್ ವಾಜವಾನ್ ವಾಜೇನ ಋಭೋರ್ಭ್ರಾತ್ರಾ ಯುಕ್ತಃ ಶಚ್ಯೇಂದ್ರಾಣ್ಯಾ ಕರ್ಮಣಾ ವಾ ಸಹಿತಃ ಸನ್ ನೋಽಸ್ಮಾಕಮಿಹ ಕರ್ಮಣ್ಯಸ್ಮಿನ್ ತೃತೀಯಸವನೇ ಮತ್ಸ್ವ । ಹೃಷ್ಟೋ ಭವ । ಹೇ ಇಂದ್ರ ತುಭ್ಯಂ ತ್ವದರ್ಥಮಿಮಾನಿ ಸ್ವಸರಾಣ್ಯಹಾನಿ ಯೇಮಿರೇ । ತವ ಸೋಮಪಾನಾರ್ಥಂ ತ್ರಿಷು ಸವನೇಷು ನಿಯತಾನ್ಯಾಸತೇ । ಕಿಂಚ ದೇವಾನಾಮಗ್ನ್ಯಾದೀನಾಂ ವ್ರತಾ ವ್ರತಾನಿ ಕರ್ಮಾಣಿ ಚ ಮನುಷೋ ಮನುಷ್ಯಸ್ಯ ಧರ್ಮಭಿಃ ಕರ್ಮಭಿಃ ಸಾಕಂ ತ್ವದರ್ಥಂ ನಿಯತಾನ್ಯಾಸತೇ॥**

### ಪ್ರತಿಪದಾರ್ಥ

**ಪುರುಷ್ಟುತ**— ಅನೇಕರಿಂದ ಸ್ತುತನಾಗತಕ್ಕ । **ಇಂದ್ರ**— ಎಲೈ ಇಂದ್ರನೇ । **ಋಭುಮಾನ್**— ಋಭುವಿನೊಂದಿಗೆ ಕೂಡಿದವನೂ। **ವಾಜವಾನ್**— ವಾಜನೊಂದಿಗೆ ಕೂಡಿದವನೂ। **ಶಚ್ಯಾ**- ಇಂದ್ರಾಣಿಯೊಡನೆ ಸೇರಿದವನೂ ಆಗಿ । **ನಃ**— ನಮ್ಮ । **ಇಹ**— ಈ ಕರ್ಮಾಂಗವಾದ । **ಅಸ್ಮಿನ್**— ತೃತೀಯಸವನದಲ್ಲಿ । **ಮತ್ಸ್ವ**— ತುಷ್ಟಿಯನ್ನು ಹೊಂದು । **ತುಭ್ಯಂ**— ನಿನ್ನ ತೃಪ್ತ್ಯರ್ಥವಾಗಿ । **ಇಮಾನಿ ಸ್ವಸರಾಣಿ**— ಈ ಅಹಸ್ಸುಗಳು । **ಯೇಮಿರೇ**— ನಿಯತವಾಗಿ ಸಂಚರಿಸುತ್ತಾ ಪುನರಾವೃತ್ತವಾಗುತ್ತವೆ । **ದೇವಾನಾಂ**— ಇತರ ದೇವತೆಗಳ । **ವ್ರತಾ ಚ**— ಕರ್ಮಗಳೂ ಸಹ । **ಮನುಷಃ**— ಮಾನವನ । **ಧರ್ಮಭಿಃ**— ಕರ್ಮಗಳೊಡನೆ ಸೇರಿ (ನಿನ್ನ ತೃಪ್ತ್ಯರ್ಥವಾಗಿ ನೆರವೇರಿಸಲ್ಪಡುತ್ತವೆ.

### ಭಾವಾರ್ಥ

ಅನೇಕರಿಂದ ಸ್ತುತನಾಗತಕ್ಕ ಎಲೈ ಇಂದ್ರನೇ, ಋಭುವಿನೊಂದಿಗೂ, ವಾಜನೊಂದಿಗೂ, ಶಚಿಯೊಂದಿಗೂ ಕೂಡಿದವನಾಗಿ ನಮ್ಮ ಕರ್ಮಾಂಗವಾದ ಈ ತೃತೀಯಸವನದಲ್ಲಿ ತುಷ್ಟಿಯನ್ನು ಹೊಂದು. ನಿನ್ನ ತೃಪ್ತ್ಯರ್ಥವಾಗಿ ಈ ಅಹಸ್ಸುಗಳು ನಿಯತವಾಗಿ ಸಂಚರಿಸುತ್ತಾ ಪುನರಾವೃತ್ತವಾಗುತ್ತವೆ. ಇತರ ದೇವತೆಗಳ ಕರ್ಮಗಳೂ ಸಹ ಮಾನವನ ಕರ್ಮಗಳೊಡನೆ ಸೇರಿ ನಿನ್ನ ತೃಪ್ತ್ಯರ್ಥವಾಗಿ ನೆರವೇರಿಸಲ್ಪಡುತ್ತವೆ.

### English Translation

Indra, the praised of many associated with Ribhu, and with Vaja, exult with Shachi, at this our sacrifice: these self-revolving (days) are devoted to you, as well as the ceremonies (addressed) to the gods, and the virtuous acts of man.

### ವಿಶೇಷವಿಷಯಗಳು

**ಶಚ್ಯಾ**— **ಇಂದ್ರಾಣ್ಯಾ ಕರ್ಮಣಾ ವಾ** । ಇಂದ್ರಾಣಿಯೊಂದಿಗಾಗಲಿ ಅಥವಾ ಕರ್ಮದೊಂದಿಗೆಯಾಗಲಿ ಎಂದರ್ಥಮಾಡಿದೆ ನಿಘಂಟುವಿನಲ್ಲಿ ಶಚೀಶಬ್ದವನ್ನು ವಾಙ್‌ನಾಮಗಳಲ್ಲೂ (ನಿ. ೧-೧೧), ಕರ್ಮನಾಮಗಳಲ್ಲೂ (ನಿ. ೨-೧) ಮತ್ತು ಪ್ರಜ್ಞಾನಾಮಗಳಲ್ಲೂ (೩-೯) ಪಠಿಸಿದೆ. ಸಾಧಾರಣವಾಗಿ ಕರ್ಮವೆಂಬರ್ಥದಲ್ಲಿಯೇ ಅಧಿಕವಾಗಿ ಪ್ರಯುಕ್ತವಾಗಿದೆ. ಶಚೀಶಬ್ದಕ್ಕೆ ಇಂದ್ರನ ಪತ್ನಿ ಎಂಬರ್ಥವು ಋಗ್ವೇದದಲ್ಲಿ ಸಮರ್ಥಿತವಾಗಿಲ್ಲ-

CC-0. Jangamwadi Math Collection. Digitized by eGangotri

ತುಭ್ಯಂ ಶ್ಚೋತಂತ್ಯಧ್ರಿಗೋ ಶಚೀವ ಸ್ತೋಕಾಸೋ ಅಗ್ನೇ ।

(ಐ. ಬ್ರಾ. ೨-೧೨)

ಇತ್ಯಾದಿ ಸ್ಥಳಗಳಲ್ಲಿ ಶಚೀವಃ—ಶಕ್ತಿಮಾನ್ । ಎಲೈ ಶಕ್ತಿವಂತನಾದ ಅಗ್ನಿಯೇ ಎಂದು ಸಂಬೋಧಿಸಿ ಶಚೀ ಶಬ್ದಕ್ಕೆ ಶಕ್ತಿಯೆಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಶಕ್ತಿ, ಕರ್ಮ, ಪ್ರಜ್ಞೆ ಈ ಅರ್ಥಗಳಲ್ಲಿ ಯಾವುದನ್ನು ಹೇಳಿದರೂ ಸರಿಯಾಗುತ್ತದೆ. ವೃತ್ರಹತ್ಯಾದಿ ಕರ್ಮಗಳ ಕರ್ತೃವಾಗಿರುವುದರಿಂದಲೂ, ನಾನಾ ಶಕ್ತಿಗಳನ್ನು ಪಡೆದಿರುವುದರಿಂದಲೂ, ಪ್ರಜ್ಞಾವಂತನಾದುದರಿಂದಲೂ ಸಹ ಇಂದ್ರನಿಗೆ ವಿಶೇಷಣವಾಗಿರುವ ಈ ಪದಕ್ಕೆ ಯಾವ ಅರ್ಥವನ್ನಾದರೂ ಹೇಳಬಹುದು.

ಸ್ವಸರಾಣಿ—ಸ್ವಸರಶಬ್ದವು ಅಹರ್ನಾಮಗಳಲ್ಲಿಯೂ (ನಿ. ೧-೯) ಮತ್ತು ಗೃಹನಾಮಗಳಲ್ಲಿಯೂ ಪಠಿತ ವಾಗಿದೆ. (ನಿ. ೩-೪).

ಆ ಹಂಸಾಸೋ ನ ಸ್ವಸರಾಣಿ ಗಂತನ ಮಧೋರ್ಮದಾಯ ಮರುತಃ ಸಮನ್ಯವಃ ।

(ಋ. ಸಂ. ೨-೩೪-೫)

ಇತ್ಯಾದಿ ಋಕ್ಕುಗಳಲ್ಲಿ ಗೃಹವೆಂದರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಅಹಸ್ಸುಗಳೆಂದರ್ಥ.

---

ಸಂಹಿತಾಪಾಠಃ

ಇಂದ್ರ ಋಭುಭಿರ್ವಾಜಿಭಿರ್ವಾಜಯನ್ನಿಹ ಸ್ತೋಮಂ ಜರಿತುರುಪ ಯಾಹಿ ಯಜ್ಞಿಯಂ ।

ಶತಂ ಕೇತೇಭಿರಿಷಿರೇಭಿರಾಯವೇ ಸಹಸ್ರಣೀಥೋ ಅಧ್ವರಸ್ಯ ಹೋಮನಿ ॥

ಪದಪಾಠಃ

ಇಂದ್ರ । ಋಭುಽಭಿಃ । ವಾಜಿಽಭಿಃ । ವಾಜಯನ್ । ಇಹ । ಸ್ತೋಮಂ । ಜರಿತುಃ । ಉಪ । ಯಾಹಿ । ಯಜ್ಞಿಯಂ ।

ಶತಂ । ಕೇತೇಭಿಃ । ಇಷಿರೇಭಿಃ । ಆಯವೇ । ಸಹಸ್ರಽನೀಥಃ । ಅಧ್ವರಸ್ಯ । ಹೋಮನಿ ॥ ೭ ॥

ಸಾಯಣಭಾಷ್ಯಂ

ಹೇ ಇಂದ್ರ ವಾಜಿಭಿರ್ವಾಜಯುಕ್ತೈರ್ಋಭುಭಿಃ ಸಹಿತಸ್ತ್ವಂ ವಾಜಯನ್ ಸ್ತೋತುರ್ವಾಜಮನ್ನಂ ಕುರ್ವಾಣ ಇಹ ಯಜ್ಞೇ ಯಜ್ಞಿಯಂ ಯಜ್ಞಾರ್ಹಂ ಜರಿತುಃ ಸ್ತೋಮಂ ಸ್ತೋತ್ರಮುಪ

CC-0. Jangamwadi Math Collection. Digitized by eGangotri

**ಯಾಹಿ । ಆಗಚ್ಛ । ಪುನಃ ಕಿಂವಿಶಿಷ್ಟಃ । ಕೇತೇಭಿಃ । ಕೇತ್ಯತೇ ಜ್ಞಾಯತೇ ಸರ್ವಮೇಭಿರಿತಿ ಕೇತಾಃ ಪ್ರಾಜ್ಞಾ ಮರುತಃ । ತೈಃ ಶತಂ ಶತಸಂಖ್ಯಾಕೈರಿಷಿರೇಭಿರಿಷಿರೈರ್ಗಮನಕುಶಲೈರಶ್ವೈಃ ಸಹಿತ ಆಯವೇ ಮನುಷ್ಯಾಯ ಯಜಮಾನಾಯ ಸಹಸ್ರನೀಥೋ ಬಹುಪ್ರಕಾರನಯನೋಪೇತೋಽಧ್ವರಸ್ಯ । ನ ವಿದ್ಯತೇ ಧ್ವರೋ ಹಿಂಸಾ ಯಸ್ಯ ತಾದೃಶಸ್ಯ ಸೋಮಸ್ಯ ಹೋಮನಿ ಹೋಮ ಆಗಚ್ಛೇತಿ ಶೇಷಃ ॥ ವಾಜಯನ್ । ವಾಜಂ ಕರೋತೀತಿ ಣಿಚ್ । ಣಾವಿಷ್ಠವದಿತೀಷ್ಠವದ್ಭಾವಾತ್ತೇರಿಷ್ಠೇಮೇಯಃಸ್ವಿತಿ ಟಿಲೋಪಃ । ಕೇತೇಭಿಃ । ಕಿತ ಜ್ಞಾನೇ । ಘಞ್ । ಞಿತ್ತ್ಯಾದಿರ್ನಿತ್ಯಮಿತ್ಯಾದ್ಯುದಾತ್ತಃ ॥**

ಪ್ರತಿಪದಾರ್ಥ

**ಇಂದ್ರ**—ಎಲೈ ಇಂದ್ರನೇ । **ವಾಜಭಿಃ**—ಅನ್ನಯುಕ್ತರಾದ । **ಋಭುಭಿಃ**—ಋಭುಗಳೊಡಗೂಡಿ । **ವಾಜಯನ್**—ಸ್ತುತಕರ್ತನಿಗೆ ಬೇಕಾದ ಅನ್ನವನ್ನು ಉತ್ಪನ್ನಮಾಡುತ್ತಾ । **ಇಹ**—ಈ ಯಜ್ಞದಲ್ಲಿ । **ಜರಿತುಃ**—ಸ್ತುತಿಕರ್ತನ । **ಯಜ್ಞಿಯಂ**—ಯಜ್ಞಾರ್ಹವಾದ । **ಸ್ತೋಮಂ**—ಸ್ತೋತ್ರವನ್ನುದ್ದೇಶಿಸಿ । **ಉಪ ಯಾಹಿ**—ಬರುವವನಾಗು । **ಕೇತೇಭಿಃ**—ಪ್ರಾಜ್ಞರಾದ ಮರುತ್ತುಗಳೊಡನೆಯೂ । **ಶತಂ ಇಷಿರೇಭಿಃ**—ಶತಸಂಖ್ಯಾಕವಾದ ಅಶ್ವಗಳೊಡನೆಯೂ ಕೂಡಿದವನಾಗಿ । **ಆಯವೇ**—ಮಾನವನಿಗೆ (ಯಜಮಾನನಿಗೆ) । **ಸಹಸ್ರನೀಥಃ**—ಬಹು ಪ್ರಕಾರವಾದ ಅನ್ನವನ್ನು ತೆಗೆದುಕೊಂಡು । **ಅಧ್ವರಸ್ಯ**—ಹಿಂಸಾರಹಿತವಾದ ಸೋಮದ । **ಹೋಮನಿ**—ಹೋಮದಲ್ಲಿ ಇರುವವನಾಗು.

ಭಾವಾರ್ಥ

ಎಲೈ ಇಂದ್ರನೇ, ಅನ್ನಯುಕ್ತರಾದ ಋಭುಗಳೊಡಗೂಡಿ ಸ್ತುತಿಕರ್ತನಿಗೆ ಬೇಕಾದ ಅನ್ನವನ್ನು ಉತ್ಪನ್ನ ಮಾಡುತ್ತಾ ಈ ಯಜ್ಞದಲ್ಲಿ ಸ್ತುತಿಕರ್ತನ ಯಜ್ಞಾರ್ಹವಾದ ಸ್ತೋತ್ರವನ್ನುದ್ದೇಶಿಸಿ ಬಾ. ಪ್ರಾಜ್ಞರಾದ ಮರುತ್ತುಗಳೊಡನೆಯೂ, ಶತಸಂಖ್ಯಾಕವಾದ ಅಶ್ವಗಳೊಡನೆಯೂ ಕೂಡಿದವನಾಗಿ ಮಾನವನಾದ ಯಜಮಾನನಿಗೆ ಬಹು ಪ್ರಕಾರವಾದ ಅನ್ನವನ್ನು ತೆಗೆದುಕೊಂಡು ಹಿಂಸಾರಹಿತವಾದ ಸೋಮದ ಹೋಮದಲ್ಲಿರುವವನಾಗು.

English Translation

Indra, with the food-bestowing Ribhus rewarding (worship) with food, come hither to (receive) the reverential praise of the adorer, with a hundred quick-going steeds, the indications (of the Maruts): come to the burnt offering of the sacrifice, yielding a thousand blessings to the sacrificer.

ವಿಶೇಷವಿಷಯಗಳು

ಪ್ರಕೃತವಾದ ಮಂತ್ರದಲ್ಲಿ ಇಂದ್ರನಿಗೂ, ಋಭುಗಳಿಗೂ ಇರುವ ಸಂಬಂಧವನ್ನೂ ಮತ್ತು ಇವರ ಅನ್ನ ದಾತೃತ್ವಸ್ವರೂಪವನ್ನು ತಿಳಿಸಿದೆ. ಇಂದ್ರ ಮತ್ತು ಋಭುಗಳು ಇವರುಗಳ ಸಂಬಂಧದ ವಿಷಯದಲ್ಲಿಯೂ ಇವರನ್ನು ಉದ್ದೇಶಿಸಿ ಅರ್ಪಿಸಿದ ಹವಿಸ್ಸಿನ ವಿಷಯವಾಗಿ ಉಂಟಾದ ಸಂಶಯ ವಿಷಯದಲ್ಲೂ ಮತ್ತು ಆರ್ಭವಪವಮಾನ ವೆಂದರೇನು ಎಂಬ ವಿಷಯದಲ್ಲೂ ಋ ಸಂ, ಭಾಗ ೧೫ ರಲ್ಲಿ ತೃತೀಯಸವನ ವರ್ಣನೆಯಲ್ಲಿ ವಿವರವನ್ನು ತಿಳಿಸಿದೆ.

CC-0. Jangamwadi Math Collection. Digitized by eGangotri

**ವಾಜಯನ್—ಸ್ತೋತುಃ ಅನ್ನಂ ಕುರ್ವಾಣಃ** । ಸ್ತೋತೃವಿಗೆ ಅನ್ನವನ್ನು ಸಂಪಾದಿಸಿ ಕೊಡುವವನಾಗಿ ಎಂದಿದೆ. **ವಾಜಿಭಿಃ** ಎಂಬಪದಕ್ಕೂ ಸಹ ಅನ್ನಯುಕ್ತರಾದ (ಋಭುಭಿಃ) ಎಂದರ್ಥಮಾಡಿದೆ.

**ವಾಜಯತೀತ್ಯರ್ಚತಿಕರ್ಮಾ** (ನಿ. ೩-೧೯) ಕೆಲವು ಸಂದರ್ಭಗಳಲ್ಲಿ **ವಾಜಯತಿ** ಎಂದರೆ ಪೂಜಿಸುವವನು ಎಂದರ್ಥವಾಗಬೇಕು. ಅಲ್ಲದೇ **ವಾಜಶ್ಶಬ್ದವು** ಅನ್ನನಾಮಗಳಲ್ಲಿಯೂ (ನಿ.೩-೯) ಸಂಗ್ರಾಮನಾಮಗಳಲ್ಲೂ ಮತ್ತು ಬಲನಾಮಗಳಲ್ಲೂ ಪಠಿತವಾಗಿದೆ. ಸ್ತುತ್ಯರ್ಥದಲ್ಲೂ ಪ್ರಯೋಗಿಸಲ್ಪಟ್ಟಿದೆ

**ಮಾಂ ನರಃ ಸ್ವಶ್ವಾ ವಾಜಯಂತೋ ಮಾಂ ವೃತಾಃ ಸಮರಣೇ ಹವಂತೇ ।**

(ಋ. ಸಂ. ೪-೪೨-೫)

ಎಂಬಲ್ಲಿ **ವಾಜಯಂತಃ** ಎಂಬ ಪದವು **ನರಃ, ಅಶ್ವಾಃ** ಎಂಬುದಕ್ಕೆ ವಿಶೇಷಣವಾಗಿದೆ. ಸಂಗ್ರಾಮವನ್ನು ಇಚ್ಛಿಸುವ ನರರೂ, ಅಶ್ವಗಳೂ ಎಂದರ್ಥಮಾಡಿದೆ.

**ಸ ಮಾತರಾ ವಿಚರನ್ವಾಜಯನ್ನಪಃ ಪ್ರ ಮೇಧಿರಃ ಸ್ವಧಯಾ ಪಿನ್ವತೇ ಪದಂ ।**

(ಋ. ಸಂ. ೯-೬೮-೪)

ಇತ್ಯಾದಿ ಸಂದರ್ಭಗಳಲ್ಲಿ **ಪ್ರೇರಯನ್** ಎಂದೂ ಅರ್ಥವಾಗಿದೆ. ಆದರೆ **ವಾಜಶ್ಶಬ್ದವು** ಅಧಿಕವಾಗಿ **ಅನ್ನ ಬಲ** ಎಂಬ ಅರ್ಥಗಳಲ್ಲಿ ಪ್ರಯುಕ್ತವಾಗಿರುವುದೇ ಅಧಿಕವಾಗಿದೆ. ಪ್ರಕೃತವಾದ ಋಕ್ಕಿನಲ್ಲಿ ಅನ್ನವನ್ನುಂಟುಮಾಡುತ್ತಾ ಎಂದೇ ಅರ್ಥಮಾಡಿದೆ.

**ಋಭುಗಳೊಡನೆ** ಇಂದ್ರನು ಸೇರಿದಾಗ **ವಾಜದ** ಪೌಷ್ಕಲ್ಯವು ಅಧಿಕವಾಗಿರುತ್ತದೆ ಎಂಬ ವಿಷಯವು ಶ್ರುತಿಪ್ರಸಿದ್ಧವಾಗಿದೆ. ಋಭುಗಳು ಅಗ್ನಿನಿರ್ಮಾಪಕರು ಎಂಬ ವಿಷಯವೂ ಸಹ ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ಅನ್ನಕ್ಕೂ ಅವರಿಗೂ ನಿಯತವಾದ ಸಾಹಚರ್ಯವನ್ನೇ ಹೇಳಿದೆ. ಉದಾಹರಣೆಗೆ,

**ವಿದಾನಾಸೋ ಜನ್ಮನೋ ವಾಜರತ್ನಾ ಉತ ಋತುಭಿರ್ಋಭವೋ ಮಾದಯಧ್ವಂ ।**

(ಋ. ಸಂ. ೪-೩೪-೨)

ಎಂಬಲ್ಲಿ **ವಾಜರತ್ನಾಃ—ಅನ್ನೇನ ರಾಜಮಾನಾಃ** । ಅನ್ನದಿಂದ ಪ್ರಕಾಶಮಾನರಾದ ಋಭುಗಳು ಎಂದು ಋಭುಗಳ ನಿಯತವಾದ ಅನ್ನಯುಕ್ತತ್ವವನ್ನು ತಿಳಿಸಿದೆ. ಅದೇ ಅಂಶವನ್ನು ಪ್ರಕೃತವಾದ ಋಕ್ಕಿನಲ್ಲಿಯೂ ತಿಳಿಸಿ ಅವರಿಂದಲೂ ಅವರ ಸಖನಾದ ಇಂದ್ರನಿಂದಲೂ ಅನ್ನವನ್ನಪೇಕ್ಷಿಸಿದೆ.

**ಕೇತೇಭಿಃ—ಕೇತ್ಯತೇ ಜ್ಞಾಯತೇ ಸರ್ವಮೇಭಿರಿತಿ ಕೇತಾಃ ಪ್ರಾಜ್ಞಾಃ ಮರುತಃ** । ಇವರಿಂದ ಸಕಲವೂ ತಿಳಿಯಲ್ಪಡುತ್ತಿಯಾದ್ದರಿಂದ ಇಂತಹ ಗುಣವುಳ್ಳ ಮರುತ್ತುಗಳನ್ನು **ಕೇತರೆಂದೇ** ಕರೆದಿದೆ. ಅಂತಹ ಮರುತ್ತುಗಳೊಡನೆ ಕೂಡಿ, ಎಂದರ್ಥ.

———

CC-0. Jangamwadi Math Collection. Digitized by eGangotri

# ಅರವತ್ತೊಂದನೇಯ ಸೂಕ್ತವು.

ಸಾಯಣಭಾಷ್ಯಂ

**ಉಷೋ ವಾಜೇನೇತಿ ಸಪ್ತರ್ಚಮಷ್ಟಮಂ ಸೂಕ್ತಂ ವೈಶ್ವಾಮಿತ್ರಮುಷೋದೇವತಾಕಂ । ತಥಾ ಚಾನುಕ್ರಾಂತಂ । ಉಷ ಉಷಸ್ಯಮಿತಿ ॥ ಪ್ರಾತರನುವಾಕ ಉಷಸ್ಯೇ ಕ್ರತಾವಾಶ್ವಿನಶಸ್ತ್ರೇ ಚ ತ್ರೈಷ್ಟುಭೇ ಛಂದಸ್ಯೇತಸ್ಯ ಸೂಕ್ತಸ್ಯ ವಿನಿಯೋಗಃ । ಸೂತ್ರಿತಂ ಚ । ಉಷೋ ವಾಜೇನೇದಮು ತ್ಯತ । ಆ. ೪-೧೪ । ಇತಿ ॥**

ಅನುವಾದವು—**ಉಷೋ ವಾಜೇನ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವುವು. ಈ ಸೂಕ್ತಕ್ಕೆ ವಿಶ್ವಾಮಿತ್ರನು ಋಷಿಯು; ಉಷೋ ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಉಷ ಉಷಸ್ಯಂ** ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನ ಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಆಶ್ವಿನಶಸ್ತ್ರಮಂತ್ರಗಳ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ **ಉಷೋ ವಾಜೇನೇದಮು** ತ್ಯತ ಎಂಬ ಸೂತ್ರದಿಂದ (ಆ. ೪-೧೪) ವಿವೃತವಾಗಿರುವುದು.

:o:

॥ ಓಂ ॥

**ಸೂಕ್ತ—೬೧**

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೬೧ ॥
ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೮ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೭ ॥
ಋಷಿಃ—ವಿಶ್ವಾಮಿತ್ರಃ ॥
ದೇವತಾ—ಉಷಾಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಉಷೋ ವಾಜೇನ ವಾಜಿನಿ ಪ್ರಚೇತಾಃ ಸ್ತೋಮಂ ಜುಷಸ್ವ ಗೃಣತೋ ಮಘೋನಿ ।

CC-0. Jangamwadi Math Collection. Digitized by eGangotri

ಪುರಾಣೀ ದೇವಿ ಯುವತಿಃ ಪುರಂಧಿರನು ವ್ರತಂ ಚರಸಿ ವಿಶ್ವವಾರೇ ॥ ೧ ॥

ಪದಪಾಠಃ

ಉಷಃ । ವಾಜೇನ । ವಾಜಿನಿ । ಪ್ರಽಚೇತಾಃ । ಸ್ತೋಮಂ । ಜುಷಸ್ವ । ಗೃಣತಃ । ಮಘೋನಿ ।

ಪುರಾಣೀ । ದೇವಿ । ಯುವತಿಃ । ಪುರಂಽಧಿಃ । ಅನು । ವ್ರತಂ । ಚರಸಿ । ವಿಶ್ವಽವಾರೇ ॥ ೧ ॥

ಸಾಯಣಭಾಷ್ಯಂ

ವಾಜೇನ ವಾಜಿನ್ಯನ್ನೇನಾನ್ನವತಿ । ತಥಾ ಚ ಮಂತ್ರಃ । ಸಂ ವಾಜೈರ್ವಾಜಿನೀವತಿ । ಋಗ್ವೇ. ೧-೪೮-೧೬ । ಇತಿ । ಮಘೋನಿ ಧನವತಿ ಹೇ ಉಷಃ ಪ್ರಚೇತಾಃ ಪ್ರಕೃಷ್ಟಜ್ಞಾನವತೀ ಸತೀ ಗೃಣತಃ ತವ ಸ್ತೋತ್ರಂ ಕುರ್ವತಃ ಸ್ತೋತುಃ ಸ್ತೋಮಂ ಸ್ತೋತ್ರಂ ಜುಷಸ್ವ । ಸೇವಸ್ವ । ಯದ್ವಾ । ವಾಜೇನ ಹವಿರ್ಲಕ್ಷಣೇನಾನ್ನೇನ ಸಹ ಸ್ತೋಮಂ ಜುಷಸ್ವೇತಿ ಸಂಬಂಧಃ । ವಿಶ್ವವಾರೇ ವಿಶ್ವೈಃ ಸರ್ವೈರ್ವರಣೀಯೇ ಹೇ ಉಷೋ ದೇವಿ ಪುರಾಣೀ ಪುರಾತನೀ ಯುವತಿರಿತ್ಯುಪಮಾ ತದ್ವಚ್ಛೋಭಮಾನಾ । ಸುಸಂಕಾಶಾ ಮಾತೃಮೃಷ್ಟೇವ ಯೋಷಾ । ಋಗ್ವೇ ೧-೧೨೩-೧೧ । ಇತಿವತ್ । ಪುರಂಧಿಃ । ಪುರು ಬಹು ಧೀಃ ಸ್ತೋತ್ರಲಕ್ಷಣಂ ಕರ್ಮ ಯಸ್ಯಾಃ ಸಾ । ಬಹುಸ್ತೋತ್ರವತೀ । ಪುರಂಧಿರ್ಬಹುಧೀರಿತಿ ಯಾಸ್ಕಃ । ಪುರಂಧಿಃ ಶೋಭಮಾನಾ ವಾ । ಏವಂವಿಧಗುಣೋಪೇತಾ ತ್ವಮನು ವ್ರತಂ ಯಜ್ಞಕರ್ಮಾಭಿಲಕ್ಷ್ಯ ಚರಸಿ। ಯುಷ್ಮವ್ಯತಯೋ ವರ್ತಸೇ ॥ ಮಘೋನಿ । ಮಘಶಬ್ದಾನ್ಮತುಬರ್ಥೇ ಛಂದಸೀವನಿಪಾವಿತಿ ವನಿಪ್ । ಸ್ತ್ರಿಯಾಮ್ವನ್ನೇಭ್ಯೋ ಙೀಪ್ । ಶ್ವಯುವಮಘೋನಾಮತದ್ಧಿತ ಇತಿ ಸಂಪ್ರಸಾರಣೇ ಕೃತೇ ಗುಣಃ । ಸಂಬುದ್ಧಾವಂಬಾರ್ಥನದ್ಯೋರ್ಹ್ರಸ್ವಃ । ನಿಘಾತಃ । ಪುರಾಣೀ । ಪುರಾಣಶಬ್ದಃ ಪುರಾಣಪ್ರೋಕ್ತೇಷ್ವಿತ್ಯಂತೋದಾತ್ತತ್ವೇನ ನಿಪಾತಿತಃ । ಟಿಡ್ಢಾಣಞಿತಿ ಙೀಪ್ । ಅನುದಾತ್ತಸ್ಯ ಚ ಯತ್ರೋದಾತ್ತಲೋಪ ಇತ್ಯಂತೋದಾತ್ತತ್ವಂ । ಪುರಂಧಿಃ । ಪೃಷೋದರಾದಿತ್ವಾದುಕಾರಸ್ಯಾಮಾದೇಶ ಈಕಾರಸ್ಯ ಹ್ರಸ್ವಶ್ಚ । ಆದ್ಯುದಾತ್ತಪ್ರಕರಣೇ ದಿವೋದಾಸಾದೀನಾಂ ಛಂದಸ್ಯುಪಸಂಖ್ಯಾನಮಿತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ವಾಜೇನ ವಾಜಿನಿ—ಅನ್ನಸಂಪದ್ಯುಕ್ತಳೂ । **ಮಘೋನಿ**—ಧನವಂತಳೂ ಆದ । **ಉಷಃ**—ಎಲೈ ಉಷಸ್ಸೇ । **ಪ್ರಚೇತಾಃ**—ಉತ್ಕೃಷ್ಟವಾದ ಪ್ರಜ್ಞೆಯುಳ್ಳವಳಾಗಿ । **ಗೃಣತಃ**—ನಿನ್ನನ್ನು ಸ್ತುತಿಸುವವನ । **ಸ್ತೋಮಂ**—ಸ್ತುತಿಯನ್ನು । **ಜುಷಸ್ವ**—ಸೇವಿಸು । **ವಿಶ್ವವಾರೇ**—ಸರ್ವರಿಂದಲೂ ಆದೃತಳಾದವಳೂ । **ದೇವಿ**—ದೇವತಾತ್ಮಳೂ । **ಪುರಾಣೀ**—ಪುರಾತನಳೂ । **ಯುವತಿಃ**—ನಿತ್ಯತರುಣಿಯೂ । **ಪುರಂಧಿಃ**—ಅನೇಕ ಸ್ತುತಿಗಳಿಗೆ ಪಾತ್ರಳೂ ಆದ ನೀನು । **ಅನುವ್ರತಂ**—ಯಜ್ಞಕರ್ಮಕ್ಕೆ ಅನುಗ್ರಹವನ್ನು ತೋರಿಸುತ್ತಾ । **ಚರಸಿ**—ವ್ಯವಹರಿಸುತ್ತೀಯೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಅನ್ನಸಂಪದ್ಯುಕ್ತಳೂ, ಧನವಂತಳೂ ಆದ ಎಲೈ ಉಷಸ್ಸೇ, ಉತ್ಕೃಷ್ಟವಾದ ಪ್ರಜ್ಞೆಯುಳ್ಳ ನೀನು ನಿನ್ನನ್ನು ಸ್ತುತಿಸುವ ಸ್ತುತಿಕರ್ತನ ಸ್ತುತಿಯನ್ನು ಸೇವಿಸು. ಸರ್ವರಿಂದಲೂ ಆದೃತಳಾದವಳೂ, ದೇವತಾತ್ಮಳೂ, ಪುರಾತನಳೂ ನಿತ್ಯತರುಣಿಯೂ, ಅನೇಕ ಸ್ತುತಿಗಳಿಗೆ ಪಾತ್ರಳೂ ಆದ ನೀನು ಯಜ್ಞಕರ್ಮಕ್ಕೆ ಅನುಗ್ರಹವನ್ನು ತೋರಿಸುತ್ತಾ ವ್ಯವಹರಿಸುತ್ತೀಯೆ.

English Translation

Affluent Ushas, giver of sustenance, possesed of intelligence, be propitiated by the praise of him who lauds you, (and worships) with (sacrificial) food : divine Ushas, adored by all, you (though) ancient are (still) young ; the object of manifold worship, you are present at the recurring (morning) rite.

ವಿಶೇಷವಿಷಯಗಳು

ಉಷಸ್ಸನ್ನು ಸ್ತುತಿಸುವ ಸಕಲ ಋಕ್ಕುಗಳೂ ಸಹ ಅತ್ಯುತ್ತಮವಾದ ಕಾವ್ಯಸ್ವರೂಪವನ್ನು ಹೊಂದಿವೆ. **ಪುರಾಣೀ, ಯುವತಿಃ** ಇತ್ಯಾದಿಯಾಗಿ ರೂಢವಾಗಿ ಯಾವ ವಿಶೇಷಣಗಳು ವಿರೋಧಗುಣಗಳನ್ನು ತೋರಿಸುವುವೋ ಆ ವಿಶೇಷಣಗಳು ಅದೇ ಗುಣಗಳನ್ನು ಉಷಸ್ಸಿನಲ್ಲಿ ಏಕಕಾಲದಲ್ಲಿ ನಿರ್ದೇಶಿಸಿ ವರ್ಣಿಸುತ್ತವೆ. ಇಂತಹ ವಿಶೇಷಣ ಗಳಲ್ಲೆಲ್ಲಾ **ಪುರಂಧಿಃ** ಎಂಬ ವಿಶೇಷಣವು ಉಷಸ್ಸಿನ ಸರ್ವವ್ಯಾಪಕವಾದ ಗುಣಗಳನ್ನು ತೋರಿಸುತ್ತದೆ.

> **ಪುರಂಧಿರ್ಬಹುಧೀಸ್ತತ್ಕಃ ಪುರಂಧಿರ್ಭಗಃ ಪುರಸ್ತಾತ್ತಸ್ಯಾನ್ವಾದೇಶ ಇತ್ಯೇಕಂ। ಇಂದ್ರ ಇತ್ಯಪರಂ ಸ ಬಹುಕರ್ಮತಃ ಪುರಾಂ ಚ ದಾರಯಿತೃತಮಃ। ವರುಣ ಇತ್ಯಪರಂ ತಂ ಪ್ರಜ್ಞಯಾ ಸ್ತೌತಿ ॥**
>
> (ನಿ. ೬–೧೩.)

ಈ ನಿರ್ವಚನವನ್ನು ನಿರುಕ್ತಕಾರರು **ಭಗಂ ನಾಸತ್ಯಾ ಪುರಂಧಿಂ** ಎಂಬ ಋಕ್ಕನ್ನು ಉದಹರಿಸುವಾಗ (ಋ. ಸಂ. ೭-೩೯-೪) ತಿಳಿಸಿದ್ದಾರೆ. ಸಮೃದ್ಧವಾದ ಧೀಯುಳ್ಳವನು ಎಂದು ನಿರುಕ್ತಕಾರರು ಈ ಪದಕ್ಕೆ ಅರ್ಥವನ್ನು ಹೇಳಿದ್ದಾರೆ. ಎಂದರೆ, **ಪ್ರಭೂತ, ಪೌಷ್ಕಳ್ಯ, ಸಮೃದ್ಧಿ** ಇತ್ಯಾದ್ಯರ್ಥಗಳನ್ನು ತಿಳಿಸುವಾಗ ಈ ಪದದ ಪ್ರಯೋಗ ವಿದೆಯೆಂದು ಇತರ ಉದಾಹರಣೆಗಳಿಂದಲೂ ತಿಳಿಯುತ್ತದೆ. ನಿರುಕ್ತದಲ್ಲಿ ಪುನಃ,

> **ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾಁ ಅಯುತಂ ಚ ಸಾಕಂ।**
> **ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ।**
>
> (ಋ ಸಂ. ೫-೨೭-೭)

ಎಂಬ ಋಕ್ಕನ್ನುದಾಹರಿಸಿದೆ. (ನಿ. ೧೧-೨) ಈ ಪದಕ್ಕೆ ಸಾಯಣರು ಬಹುಕರ್ಮ ಎಂದು ಕರ್ಮದ ಪೌಷ್ಕಳ್ಯ ವನ್ನೂ, ದುರ್ಗಾಚಾರ್ಯರು ನಿರುಕ್ತದಲ್ಲಿ **ಬಹು ನಃ ಧನಸ್ಯ ದಾತಾ** ಅತಿ ಪ್ರಭೂತವಾಗಿ ಧನವನ್ನು ದಾನಮಾಡು ವವನೆಂದೂ ತಿಳಿಸಿದ್ದಾರೆ. ಪುನಃ ನಿರುಕ್ತಕಾರರು,

CC-0. Jangamwadi Math Collection. Digitized by eGangotri

ಪಾವೀರವೀ ಕನ್ಯಾ ಚಿತ್ರಾಯುಃ ಸರಸ್ವತೀ ವೀರಪತ್ನೀ ಧಿಯಂ ಧಾತ್ ।
ಪಾವೀರವೀ ತನ್ಯತುರೇಕಪಾದಜೋ ದಿವೋ ಧರ್ತಾ ಸಿಂಧುರಾಪಃ ಸಮುದ್ರಿಯಃ ।
ವಿಶ್ವೇ ದೇವಾಸಃ ಶೃಣವನ್ ವಚಾಂಸಿ ಮೇ ಸರಸ್ವತೀ ಸಹ ಧೀಭಿಃ ಪುರಂಧ್ಯಾ ॥

(ಋ. ಸಂ. ೧೦-೬೫-೧೩)

ಎಂಬ ಮಂತ್ರವನ್ನೂ ಸಹ ಉದಾಹರಿಸಿ (ನಿ. ೧೨-೩೦) ಇಲ್ಲಿ ಪುರಂಧಿಶಬ್ದಕ್ಕೆ ಪುರಂಧ್ಯಾ ಸ್ತುತ್ಯಾ ಪ್ರಯುಕ್ತಾನಿ ; ಬಹುವಿಧವಾದ ಸ್ತುತಿಗಳಿಂದ ಕೂಡಿಕೊಂಡಿರತಕ್ಕ ವಚನಗಳನ್ನು ಎಂದರ್ಥಮಾಡಿದ್ದಾರೆ. ಇದೇ ಮಂತ್ರಕ್ಕೆ ಸಾಯಣರು ವ್ಯಾಖ್ಯಾನವನ್ನು ಮಾಡುತ್ತಾ ಬಹುವಿಧಯಾ ಪ್ರಜ್ಞಯಾ ಸಹಿತಾ ಸರಸ್ವತೀ । ಬಹುವಿಧವಾದ ಪ್ರಜ್ಞೆಯಿಂದ ಕೂಡಿದ ಎಂದು ಸರಸ್ವತಿಗೆ ವಿಶೇಷಣವೆಂದು ತಿಳಿಸಿದ್ದಾರೆ. ಆದರೆ ದುರ್ಗಾಚಾರ್ಯರು ಮಾಡಿರುವ (ನಿ. ೧೨-೩೦) ಬಹುಧಾತ್ಮ್ಯಾ ಮಾಧ್ಯಮಿಕಯಾ ವಾಚಾ ಎಂಬ ವಿವರಣೆಯಿಂದ ಸರಸ್ವತೀಸದೃಶವಾದ ಒಂದು ದೇವತಾ ವಿಶೇಷವೆಂದೂ ತಿಳಿಯುತ್ತದೆ. ಇದರಂತೆಯೇ,

ಶಂ ನೋ ಭಗಃ ಶಮು ನಃ ಶಂಸೋ ಅಸ್ತು ಶಂ ನಃ ಪುರಂಧಿಃ ಶಮು ಸಂತು ರಾಯಃ ।
ಶಂ ನಃ ಸತ್ಯಸ್ಯ ಸುಯಮಸ್ಯ ಶಂಸಃ ಶಂ ನೋ ಅರ್ಯಮಾ ಪುರುಜಾತೋ ಅಸ್ತು ॥

(ಋ. ಸಂ. ೭-೩೫-೨)

ಇತ್ಯಾದಿ ಋಕ್ಕುಗಳಲ್ಲಿ ಭಗ, ಅರ್ಯಮಾ ಇತ್ಯಾದಿ ದೇವತೆಗಳನ್ನು ಪ್ರಾರ್ಥಿಸಿರುವಂತೆಯೇ ಪುರಂಧಿಯನ್ನೂ ಸಹ ರಕ್ಷಣಾತ್ಮಕವಾದುದೂ, ಕಲ್ಯಾಣಾತ್ಮಕವಾದುದೂ ಆದ ಅನುಗ್ರಹಕ್ಕಾಗಿ ಪ್ರಾರ್ಥಿಸಿದೆ. ಸಾಯಣರೂ ಸಹ ತಮ್ಮ ಭಾಷ್ಯದಲ್ಲಿ ಪುರಂಧಿಯೆಂಬ ಪ್ರತ್ಯೇಕದೇವತೆಯೆಂದೇ ತಿಳಿಸಿದ್ದಾರೆ.

ಅನೇಕ ಕಡೆಗಳಲ್ಲಿ ಈ ಪದವು ಪತ್ನಿಯ ಪರವಾಗಿಯೂ ಅಥವಾ ಸ್ತ್ರೀಸಾಮಾನ್ಯದ ಪರವಾಗಿಯೂ ಉಪಯೋಗಿಸಲ್ಪಟ್ಟು ಬಂಜೆಯರಲ್ಲದ ಮತ್ತು ಸಂತಾನಸಂಪತ್ತನ್ನುಪಡೆಯಲು ಅರ್ಹರೂ ಪುಷ್ಟರೂ ಆದ ಸ್ತ್ರೀಯರು ಎಂಬರ್ಥವನ್ನು ಕೊಡುತ್ತದೆ. ಉದಾಹರಣೆಗೆ,

ಅಗ್ನಿಃ ಸಪ್ತಿಂ ವಾಜಂಭರಂ ದದಾತ್ಯಗ್ನಿರ್ವೀರಂ ಶ್ರುತ್ಯಂ ಕರ್ಮನಿಷ್ಠಾಂ ।
ಅಗ್ನೀ ರೋದಸೀ ವಿ ಚರತ್ಸಮಂಜನ್ನಗ್ನಿರ್ನಾರೀಂ ವೀರಕುಕ್ಷಿಂ ಪುರಂಧಿಂ ॥

(ಋ. ಸಂ. ೧೦-೮೦-೧)

ಇತ್ಯಾದಿ ಋಕ್ಕುಗಳಲ್ಲಿ ಪ್ರಸವಸಮರ್ಥಳಾದ ಪತ್ನಿಯೆಂದೂ,

ಪ್ರ ಬೋಧಯಾ ಪುರಂಧಿಂ ಜಾರ ಆ ಸಸತೀಮಿವ ।

(ಋ. ಸಂ. ೧-೧೩೪-೩)

ಇತ್ಯಾದಿ ಋಕ್ಕುಗಳಲ್ಲಿ ಭೋಗಕ್ಕೆ ಯೋಗ್ಯಳಾದ ಸ್ತ್ರೀಯೆಂದೂ ಅರ್ಥವಾಗುತ್ತದೆ. ಹೀಗೆ ನಾನಾವಿಧವಾದ ಗುಣಗಳನ್ನು ತಿಳಿಸುವ ಸಾಮರ್ಥ್ಯವುಳ್ಳ ಈ ವಿಶೇಷಣವು ಪ್ರಕೃತವಾದ ಋಕ್ಕಿನಲ್ಲಿ ಉಷಸ್ಸಿನ ಅನೇಕವಾದ ಗುಣಗಳನ್ನು ತಿಳಿಸುತ್ತದೆ.

ಸಾಯಣರು ಧೀಶಬ್ದಕ್ಕೆ ಇಲ್ಲಿ ಸ್ತುತಿಯೆಂದರ್ಥಮಾಡಿ ಬಹುಸ್ತೋತ್ರವತಿಯೆಂದು ಒಂದು ವಿಧವಾದ ತಾತ್ಪರ್ಯವನ್ನೂ, ಬಹುಶೋಭಮಾನಾ ವಾ ಎಂದು ಇನ್ನೊಂದುವಿಧವಾದ ತಾತ್ಪರ್ಯವನ್ನೂ ಹೇಳಿದ್ದಾರೆ. ಪ್ರಭೂತವಾದ ಮತ್ತು ಪುಷ್ಕಲವಾದ ಗುಣವನ್ನು ತಿಳಿಸುವುದಾದುದರಿಂದ ಉಷಸ್ಸಿನಲ್ಲಿ ಮೇಲೆ ಹೇಳಿದ ಗುಣಗಳೆಲ್ಲವೂ

CC-0. Jangamwadi Math Collection. Digitized by eGangotri

ಸಮೃದ್ಧವಾಗಿಯೇ ಇವೆ. ಸಮೃದ್ಧವಾದ ಬುದ್ಧಿಯುಳ್ಳವಳೆಂದಾಗಲಿ, ಕರ್ಮವುಳ್ಳವಳೆಂದಾಗಲಿ, ಸ್ತುತಿಯುಳ್ಳವಳೆಂದಾಗಲಿ, ಧನದಾತ್ರಿಯೆಂದಾಗಲಿ ಅಥವಾ ಲೋಕಕ್ಕೆ ಅನ್ನದಾತಳಾದುದರಿಂದಲೂ ಚೈತನ್ಯದಾಯಿನಿಯಾದುದರಿಂದಲೂ ಸಹ ಪ್ರಸವಸಾಮರ್ಥ್ಯವುಳ್ಳವಳೆಂದಾಗಲಿ ಯಾವ ಅರ್ಥವನ್ನು ಹೇಳಿದರೂ ಹೊಂದಿಕೊಳ್ಳುತ್ತದೆ.

———

ಸಂಹಿತಾಪಾಠಃ

ಉಷೋ ದೇವ್ಯಮರ್ತ್ಯಾ ವಿ ಭಾಹಿ ಚಂದ್ರರಥಾ ಸೂನೃತಾ ಈರಯಂತೀ ।
ಆ ತ್ವಾ ವಹಂತು ಸುಯಮಾಸೋ ಅಶ್ವಾ ಹಿರಣ್ಯವರ್ಣಾಂ ಪೃಥುಪಾಜಸೋ ಯೇ ॥ ೨ ॥

ಪದಪಾಠಃ

ಉಷಃ । ದೇವಿ । ಅಮರ್ತ್ಯಾ । ವಿ । ಭಾಹಿ । ಚಂದ್ರಽರಥಾ । ಸೂನೃತಾಃ । ಈರಯಂತೀ ।
ಆ । ತ್ವಾ । ವಹಂತು । ಸುಽಯಮಾಸಃ । ಅಶ್ವಾಃ । ಹಿರಣ್ಯಽವರ್ಣಾಂ । ಪೃಥುಽಪಾಜಸಃ । ಯೇ ॥ ೨ ॥

ಸಾಯಣಭಾಷ್ಯಂ

ಹೇ ಉಷೋ ದೇವ್ಯಮರ್ತ್ಯಾ ಮರಣಧರ್ಮರಹಿತಾ ಚಂದ್ರರಥಾ ಸುವರ್ಣಮಯರಥೋಪೇತಾ ಸೂನೃತಾಃ ಪ್ರಿಯಸತ್ಯರೂಪಾ ವಾಚ ಈರಯಂತ್ಯುಚ್ಚಾರಯಂತೀ । ತಥಾ ಚ ಮಂತ್ರವರ್ಣಃ । ಸುಮ್ನಾವರೀ ಸೂನೃತಾ ಈರಯಂತೀ । ಋಗ್ವೇ. ೧-೧೧೩-೧೨ । ಇತಿ । ತಾದೃಶೀ ತ್ವಂ ವಿ ಭಾಹಿ । ಸೂರ್ಯಕಿರಣಸಂಬಂಧಾದ್ವಿಶೇಷೇಣ ದೀಪ್ಯಸ್ವ । ಪೃಥುಪಾಜಸಃ ಪ್ರಭೂತಬಲಯುಕ್ತಾ ಅರುಣವರ್ಣಾ ಯೇಽಶ್ವಾ ವಿದ್ಯಂತೇ ಸುಯಮಾಸಃ ಸುಷ್ಠು ನಿಯಂತುಂ ಶಕ್ಯಾ ರಥೇ ಯೋಜಿತಾಸ್ತೇಽಶ್ವಾ ಹಿರಣ್ಯವರ್ಣಾಂ ತ್ವಾ ತ್ವಾಮಾ ವಹಂತು ॥ ಸುಯಮಾಸಃ । ಯಮೋರಕೃಚ್ಛ್ರಾರ್ಥೇ ಖಲ್ । ಲಿತ್ಸ್ವರಃ ॥

ಪ್ರತಿಪದಾರ್ಥ

ದೇವಿ—ದೇವತಾತ್ಮಳಾದ। ಉಷಃ—ಎಲೈ ಉಷೋದೇವಿಯೇ। ಅಮರ್ತ್ಯಾ—ಮರಣಧರ್ಮರಹಿತಳಾಗಿಯೂ। ಚಂದ್ರರಥಾ—ಸುವರ್ಣಮಯವಾದ ರಥವುಳ್ಳವಳಾಗಿಯೂ । ಸೂನೃತಾಃ—ಪ್ರಿಯವಾದ ವಾಕ್ಕುಗಳನ್ನು । ಈರಯಂತೀ—ಉಚ್ಚರಿಸುವವಳಾಗಿಯೂ । ವಿಭಾಹಿ—ಪ್ರಕಾಶಿಸು । ಪೃಥುಪಾಜಸಃ—ಪ್ರಭೂತವಾದ ಶಕ್ತಿಯುಳ್ಳ । ಯೇ ಅಶ್ವಾಃ—ಯಾವ ಅಶ್ವಗಳು। ಸುಯಮಾಸಃ—ರಥಕ್ಕೆ ಯೋಜಿತವಾಗಿವೆಯೋ ಅವು । ಹಿರಣ್ಯವರ್ಣಾಂ—ಸುವರ್ಣರೂಪವುಳ್ಳ । ತ್ವಾ—ನಿನ್ನನ್ನು । ಆ ವಹಂತು—ವಹಿಸಿಕೊಂಡು ಬರಲಿ.

CC-0. Jangamwadi Math Collection. Digitized by eGangotri

ಭಾವಾರ್ಥ

ದೇವತಾತ್ಮಳಾದ ಎಲೈ ಉಷಸ್ಸೇ, ಮರಣಧರ್ಮರಹಿತಳಾಗಿಯೂ, ಸುವರ್ಣಮಯವಾದ ರಥವುಳ್ಳವ ಳಾಗಿಯೂ, ಪ್ರಿಯವಾದ ವಾಕ್ಕುಗಳನ್ನು ಉಚ್ಚರಿಸುವವಳಾಗಿಯೂ ನೀನು ಪ್ರಕಾಶಿಸು. ಪ್ರಭೂತವಾದ ಶಕ್ತಿಯುಳ್ಳ ಅಶ್ವಗಳು ರಥಕ್ಕೆ ಯೋಜಿತವಾಗಿ ಸುವರ್ಣರೂಪವುಳ್ಳ ನಿನ್ನನ್ನು ವಹಿಸಿಕೊಂಡು ಬರಲಿ.

English Translation

Ushas, who are divine and immortal, mounted in a golden chariot, shine radiant, causing to be heard the sounds of truth; may your vigorous and well-trained horses bring you who are golden-haired, (hither),

ವಿಶೇಷವಿಷಯಗಳು

ಚಂದ್ರರಥಾ— ಚಂದ್ರಶಬ್ದವು ಹಿರಣ್ಯನಾಮಗಳಲ್ಲಿ ಪಠಿತವಾಗಿದೆ (ನಿ. ೨-೧೦). ಚಂದ್ರರಥಳೆಂದರೆ ಸುವರ್ಣಮಯವಾದ ರಥವುಳ್ಳವಳೆಂದರ್ಥ. ಅಥವಾ ಚಂದ್ರಶ್ಚಂದತೇಃ ಕಾಂತಿಕರ್ಮಣಃ । (ನಿ. ೧೧-೫) ಕಾಂತಿಯುತವಾದುದೂ, ರಮ್ಯವಾದುದೂ ಆದ ಎಂಬರ್ಥವನ್ನು ಕೊಡುವುದರಿಂದ ಚಂದ್ ಧಾತುವಿನಿಂದ ಚಂದ್ರ ಶಬ್ದವು ನಿಷ್ಪನ್ನವಾಗಬಹುದೆಂದು ನಿರುಕ್ತಕಾರರ ನಿರ್ವಚನವನ್ನನುಸರಿಸಿ ಸಾಯಣರು,

ವಿ ತದ್ಯಯುರರುಣಯುಗ್ಭಿರಶ್ವೈಶ್ಚಿತ್ರಂ ಭಾಂತ್ಯುಷಸಶ್ಚಂದ್ರರಥಾಃ ।
ಅಗ್ರಂ ಯಜ್ಞಸ್ಯ ಬೃಹತೋ ನಯಂತೀರ್ವಿ ತಾ ಬಾಧಂತೇ ತಮ ಊರ್ಮ್ಯಾಯಾಃ ॥

(ಋ. ಸಂ. ೬-೬೫-೨)

ಎಂಬಲ್ಲಿ ಉಷಸ್ಸುಗಳಿಗೆ ವಿಶೇಷಣವಾಗಿರುವ ಚಂದ್ರರಥಾಃ ಎಂಬ ಪದಕ್ಕೆ ಕಾಂತಿಯುತರಥಾಃ ಎಂದರ್ಥಮಾಡಿ ದ್ದಾರೆ. ಅದರಂತೆಯೇ,

ಚಂದ್ರಮಗ್ನಿಂ ಚಂದ್ರರಥಂ ಹರಿವ್ರತಂ ವೈಶ್ವಾನರಮಪ್ಸುಷದಂ ಸ್ವರ್ವಿದಂ ।
ವಿಗಾಹಂ ತೂರ್ಣಿಂ ತವಿಷೀಭಿರಾವೃತಂ ಭೂರ್ಣಿಂ ದೇವಾಸ ಇಹ ಸುಶ್ರಿಯಂ ದಧುಃ ॥

(ಋ. ಸಂ. ೩-೩-೫)

ಎಂಬ ಋಕ್ಕಿನಲ್ಲಿ ಸಾಯಣರು ವೈಶ್ವಾನರಾಗ್ನಿಗೆ ವಿಶೇಷಣವಾಗಿರುವ ಚಂದ್ರರಥಂ ಎಂಬ ಪದಕ್ಕೆ ಆಹ್ಲಾದಕಃ ರಥಃ ಯಸ್ಯ । ಸಂತೋಷಕಾರಕವಾದ ರಥವುಳ್ಳವನು ಎಂದರ್ಥಮಾಡಿದ್ದಾರೆ. ಆದುದರಿಂದ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಸುವರ್ಣಮಯವಾದ ರಥವೆಂದಾಗಲಿ, ಆಹ್ಲಾದಜನಕವಾದ ರಥವೆಂದಾಗಲಿ ಅರ್ಥವನ್ನು ಹೇಳಬಹುದು.

ಸೂನೃತಾಃ ಈರಯಂತೀ— ಸೂನೃತಾ, ಸೂನೃತಾವತೀ, ಸೂನೃತಾವರೀ ಇತ್ಯಾದಿ ಪದಗಳೆಲ್ಲವೂ ಉಷಸ್ಸಿನ ವಿಶೇಷಣಗಳು ಅಥವಾ ಪರ್ಯಾಯಪದಗಳು (ನಿ. ೨-೧೮) ಸೂನೃತೇತಿ ವಾಙ್ನಾಮ । ನೇತ್ರೀ— ಉತ್ಪಾದಯಿತ್ರೀ । ಉಷಸಃ ಪ್ರಾದುರ್ಭಾವಾನಂತರಂ ಹಿ ಪಶುಪಕ್ಷಿಮೃಗಾದಯಃ ಸರ್ವೇ ಶಬ್ದಂ ಕುರ್ವಂತಿ । ಅತಸ್ಸೈವ ತಾಸಾಂ ವಾಚಾಂ ಪ್ರವರ್ತಯಿತಾ ಇತ್ಯುಚ್ಯತೇ । ಸೂನೃತವೆಂಬ ಪದವು ಸಮಸ್ತ



CC-0. Jangamwadi Math Collection. Digitized by eGangotri

ವಾದ ವಾಗ್ವ್ಯವಹಾರಗಳಿಗೆಲ್ಲಾ ಅನ್ವಯಿಸುತ್ತದೆ. ಉಷಸ್ಸಿನ ಉದಯದ ನಂತರವೇ ಸಮಸ್ತ ಪಶುಪಕ್ಷ್ಯಾದಿಗಳ ವಾಗ್ವ್ಯವಹಾರವೆಲ್ಲವೂ ಪ್ರವರ್ತಿಸುವುದರಿಂದ ಉಷಸ್ಸೇ ಅವೆಲ್ಲಕ್ಕೂ ಉತ್ಪಾದಕಳು ಎಂದರ್ಥ. ಈ ವಿಶೇಷಣವನ್ನು ಕುತ್ಸರೂ, ವಸಿಷ್ಠರೂ ಹೇರಳವಾಗಿ ಉಪಯೋಗಿಸಿದ್ದಾರೆ.

ಏಷಾ ನೇತ್ರೀ ರಾಧಸಃ ಸೂನೃತಾನಾಮುಷಾ ಉಚ್ಛಂತೀ ರಿಭ್ಯತೇ ವಸಿಷ್ಠೈಃ ।
(ಋ. ಸಂ. ೭-೭೬-೭)

ಇತ್ಯಾದಿ ಕೆಲವೆಡೆಗಳಲ್ಲಿ ಮಾತ್ರ ಸೂನೃತಾನಾಂ ಎಂಬ ಪದಕ್ಕೆ ಸಾಯಣರು ಸ್ತುತೀನಾಂ ನೇತ್ರೀ ಎಂದರ್ಥಮಾಡಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿ ಸೂನೃತಾಃ ಈರಯಂತೀ ಎಂದಿದೆ. ಪ್ರಿಯವಾದ ವಾಕ್ಕುಗಳನ್ನು ಉಚ್ಚರಿಸುವವಳು ಎಂದಾಗಲಿ ಅಥವಾ ಪ್ರೇರಿಸುವವಳು ಎಂದಾಗಲಿ ಅರ್ಥವಾಗುತ್ತದೆ.

---

ಸಂಹಿತಾಪಾಠಃ

ಉಷಃ ಪ್ರತೀಚೀ ಭುವನಾನಿ ವಿಶ್ವೋರ್ಧ್ವಾ ತಿಷ್ಠಸ್ಯಮೃತಸ್ಯ ಕೇತುಃ ।
ಸಮಾನಮರ್ಥಂ ಚರಣೀಯಮಾನಾ ಚಕ್ರಮಿವ ನವ್ಯಸ್ಯಾ ವವೃತ್ಸ್ವ ॥ ೩ ॥

ಪದಪಾಠಃ

ಉಷಃ । ಪ್ರತೀಚೀ । ಭುವನಾನಿ । ವಿಶ್ವಾ । ಊರ್ಧ್ವಾ । ತಿಷ್ಠಸಿ । ಅಮೃತಸ್ಯ । ಕೇತುಃ ।
ಸಮಾನಂ । ಅರ್ಥಂ । ಚರಣೀಯಮಾನಾ । ಚಕ್ರಂಽಇವ । ನವ್ಯಸಿ । ಆ । ವವೃತ್ಸ್ವ ॥ ೩ ॥

ಸಾಯಣಭಾಷ್ಯಂ

ಹೇ ಉಷೋ ದೇವಿ ವಿಶ್ವಾ ಸರ್ವಾಣಿ ಭುವನಾನಿ ಪ್ರತೀಚೀ । ಪ್ರತ್ಯಾಭಿಮುಖ್ಯೇನಾಂಚತಿ ಪ್ರಾಪ್ನೋತೀತಿ ಪ್ರತೀಚೀ । ಅಮೃತಸ್ಯ ಮರಣಧರ್ಮರಹಿತಸ್ಯ ಸೂರ್ಯಸ್ಯ ಕೇತುಃ ಪ್ರಜ್ಞಾಪಯಿತ್ರೀ ತ್ವಮೂರ್ಧ್ವಾ ನಭಸ್ಯುನ್ನತಾ ತಿಷ್ಠಸಿ । ನವ್ಯಸಿ ಪುನಃಪುನರ್ಜಾಯಮಾನತಯಾ ನವತರೇ ಹೇ ಉಷೋ ದೇವ್ಯರ್ಥಂ । ಅರ್ಯತೇ ಗಮ್ಯತೇಽಸ್ಮಿನ್ನಿತ್ಯರ್ಥೋ ಮಾರ್ಗಃ । ಸಮಾನಮೇಕಂ ಮಾರ್ಗಮುದಯಾತ್ಪ್ರಾಚೀನಕಾಲಲಕ್ಷಣಂ ಚರಣೀಯಮಾನಾ ಚರಿತುಮಿಚ್ಛಂತೀ ತ್ವಮಾ ವವೃತ್ಸ್ವ । ಪುನಸ್ತಸ್ಮಿನ್ಮಾರ್ಗ ಆವೃತ್ತಾ ಭವ । ತತ್ರ ದೃಷ್ಟಾಂತಃ । ಚಕ್ರಮಿವ । ಯಥಾ ನಭಸಿ ಚರಿತುಃ ಸೂರ್ಯಸ್ಯ ರಥಾಂಗಂ ಪುನಃಪುನರಾವರ್ತತೇ ತದ್ವತ್ ॥ ಪ್ರತೀಚೀ । ಪ್ರತಿಪೂರ್ವಾದಂಚತೇಃ ಕ್ವಿನ್ । ಅಂಚತೇಶ್ಚೋಪಸಂಖ್ಯಾನಮಿತಿ ಙೀಪ್ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘಃ । ಉದಾತ್ತನಿವೃತ್ತಿಸ್ವರೇಣಾಂತೋದಾತ್ತಃ । ಕೇತುಃ । ಚಾಯೃ ಪೂಜಾನಿಶಾಮನಯೋರಿತ್ಯಸ್ಮಾಚ್ಚಾಯಃ ಕೀ ಚೇತಿ ತುಃ । ಕೀ ಇತ್ಯಾದೇಶಃ । ಆರ್ಧಧಾತು-

CC-0. Jangamwadi Math Collection. Digitized by eGangotri

ಕಲಕ್ಷಣೋ ಗುಣಃ । ಅರ್ಥಂ । ಅರ್ತೇಃಸ್ಥನ್ಪ್ರತ್ಯಯಃ । ನವ್ಯಸಿ । ನವಶಬ್ದಾದೀಯಸುನಿ ಜಾಪಿ ರೂಪಂ । ಈಕಾರಲೋಪಶ್ಛಾಂದಸಃ । ವವೃತ್ಸ್ವ । ವೃತು ವರ್ತನೇ । ಬಹುಲಂ ಛಂಧಸೀತಿ ವಿಕರಣಸ್ಯ ಶ್ಲುಃ ॥

ಪ್ರತಿಪದಾರ್ಥ

ಉಷಃ—ಎಲೈ ಉಷೋದೇವಿಯೇ । ವಿಶ್ವಾ ಭುವನಾನಿ—ಸಮಸ್ತ ಪ್ರಪಂಚಗಳನ್ನೂ । ಪ್ರತೀಚೀ—ವ್ಯಾಪಿಸುತ್ತಾ । ಅಮೃತಸ್ಯ—ಮರಣರಹಿತನಾದ ಆದಿತ್ಯನಿಗೆ । ಕೇತುಃ—ಪ್ರಜ್ಞಾಪಕಳಾಗಿ । ಊರ್ಧ್ವಾ—ಅಂತರಿಕ್ಷದಲ್ಲಿ । ತಿಷ್ಠಸಿ—ನಿಂತಿದ್ದೀಯೆ । ನವ್ಯಸಿ—ಪ್ರತಿದಿನವೂ ನೂತನವಾಗಿ ಆವಿರ್ಭವಿಸುವ ಎಲೈ ಉಷಸ್ಸೇ । ಸಮಾನಂ ಅರ್ಥಂ—ಒಂದೇ ಮಾರ್ಗವನ್ನು । ಚರಣೀಯಮಾನಾ—ಸಂಚರಿಸಲಿಷ್ಟವುಳ್ಳವಳಾಗಿ । ಚಕ್ರಮಿವ—ಚಕ್ರವು ಸುತ್ತುವಂತೆ । ಆ ವವೃತ್ಸ್ವ—ಪ್ರತಿದಿನವೂ ಪುನರಾವೃತ್ತಿಗಳುಳ್ಳ ಸಂಚಾರವುಳ್ಳವಳಾಗಿರುವೆ.

ಭಾವಾರ್ಥ

ಎಲೈ ಉಷೋದೇವಿಯೇ, ಸಮಸ್ತ ಪ್ರಪಂಚಗಳನ್ನೂ ವ್ಯಾಪಿಸುತ್ತಾ ಮರಣರಹಿತನಾದ ಆದಿತ್ಯನಿಗೆ ಪ್ರಜ್ಞಾಪಕಳಾಗಿ ಅಂತರಿಕ್ಷದಲ್ಲಿ ನಿಂತಿದ್ದೀಯೆ. ಪ್ರತಿದಿನವೂ ನೂತನವಾಗಿ ಆವಿರ್ಭವಿಸುವ ಎಲೈ ಉಷಸ್ಸೇ, ನೀನು ಒಂದೇ ಮಾರ್ಗದಲ್ಲಿ ಸಂಚರಿಸಲಿಷ್ಟವುಳ್ಳವಳಾಗಿ ಚಕ್ರವು ಸುತ್ತುವಂತೆ ಪ್ರತಿದಿನವೂ ಪುನರಾವೃತ್ತಗಳುಳ್ಳ ಸಂಚಾರ ವುಳ್ಳವಳಾಗಿರುತ್ತೀಯೆ.

Tnglish Translation

Ushas, who spread over all the regions, you abide on high, the ensign of the immortal (sun), purposing to travel the same road, repeatedly turn back ever new, (revolving) like a wheel.

ವಿಶೇಷವಿಷಯಗಳು

ನವ್ಯಸಿ, ಚಕ್ರಮಿವ ಆ ವವೃತ್ಸ್ವ ಇತ್ಯಾದಿ ಪದಗಳಿಂದ ಸೂಚಿತವಾಗುವ ಭಾವವು ತೈತ್ತಿರೀಯ ಸಂಹಿತೆಯಲ್ಲಿ ವಿವರಿಸಲ್ಪಟ್ಟಿದೆ. ಉಷೆಯ ಮೂವತ್ತು ಸ್ವರೂಪಗಳೂ ಚಕ್ರಾಕಾರವಾಗಿ ಪರಿಭ್ರಮಣವನ್ನು ಹೊಂದುತ್ತಿರುವುದೂ ಆ ಮೂವತ್ತು ಸ್ವರೂಪಗಳೂ ಸಹ ಒಂದೇ ತತ್ತ್ವವನ್ನು ಪ್ರತಿಪಾದಿಸುವುದೂ, ಋತದ ಪಥಕ್ಕೂ ಉಷಸ್ಸಿನ ಭ್ರಮಣಕ್ಕೂ ಅಭೇದಾತ್ಮಕವಾದ ಸಂಬಂಧವಿರುವುದೂ ಅಲ್ಲಿ ವರ್ಣಿತವಾಗಿದೆ.

ನೂತನಾತ್ಮಕವಾಗಿ ಪುನಃ ಪುನಃ ಆವಿರ್ಭವಿಸಿದರೂ ಸಹ "ಪುನಃಪುನರ್ಜಾಯಮಾನಾ ಪುರಾಣೀ" ಇತ್ಯಾದಿ ವಾಕ್ಯಗಳಿಂದ ಉಷಸ್ಸಿನ ಅನಾದಿತ್ವವು ವರ್ಣಿತವಾಗಿದೆ. ಇದನ್ನೇ ತೈತ್ತಿರೀಯಬ್ರಾಹ್ಮದಲ್ಲೂ ಈ ರೀತಿ ತಿಳಿಸಿದೆ.

ಇಮಾ ಏವ ತಾ ಉಷಸೋ ಯಾಃ ಪ್ರಥಮಾ ವ್ಯೌಚ್ಛನ್ । ತಾ ದೇವ್ಯಃ ಕುರ್ವತೇ ಪಂಚ-
ರೂಪಾ । ಶಶ್ವತೀರ್ನಾವಪೃಜ್ಯಂತಿ । ನ ಗಮುಂತ್ಯಂತಂ ॥

(ತೈ. ಬ್ರಾ. ೨-೫-೬-೫)

CC-0. Jangamwadi Math Collection. Digitized by eGangotri

"ವಿಶ್ವಾ ಭುವನಾನಿ ಪ್ರತೀಚೀ" ಸಮಸ್ತ ವಿಶ್ವಗಳನ್ನೂ ವ್ಯಾಪಿಸಿ ಪ್ರಕಾಶಿಸಿದಳು ಎಂದು ಉಷಸ್ಸಿನ ಯಾವ ಸ್ವರೂಪವು ಪ್ರಕೃತವಾದ ಋಕ್ಕಿನಲ್ಲಿ ವರ್ಣಿತವಾಗಿದೆಯೋ ಅದೇ ಉಷಸ್ಸಿನ ಪ್ರಥಮಸ್ವರೂಪವು ಸೃಷ್ಟಿಕಾಲದಲ್ಲಿ ಇದ್ದಂತೆಯೇ ಇದೆ. ಅದಕ್ಕೆ ವ್ಯತ್ಯಾಸವಿಲ್ಲ. "ತಾ ಇಮಾ ಉಷಸಃ ಪ್ರತಿದಿನಂ ವರ್ತಮಾನಾ ಏವ" ಆ ಉಷಸ್ಸಿನ ಸ್ವರೂಪವೇ ಈಗಲೂ ಅನುಸ್ಯೂತವಾಗಿಯೂ ಅನಂತಾತ್ಮಕವಾಗಿಯೂ ಮುಂದುವರಿಯುತ್ತಿದೆ (ಭಟ್ಟ ಭಾಸ್ಕರ). ವಸಂತಾದಿ ಪಂಚರೂಪಾತ್ಮಕವಾದ ರೂಪಗಳನ್ನು ಹೊಂದುತ್ತಿದ್ದರೂ ಮೂಲತತ್ತ್ವವೊಂದೇ. ಅದು ನಿರಂತರವಾಗಿರತಕ್ಕದು. ಚಕ್ರದಂತೆ ಪುನರಾವೃತ್ತಿಗಳುಳ್ಳದ್ದಾದರೂ ಸಹ ಒಂದೇ ಋತದ ಮಾರ್ಗವನ್ನನುಸರಿಸ ತಕ್ಕದ್ದು.

ಅದರ್ಶಿ ಗಾತುರುರವೇ ವರೀಯಸೀ ಪಂಥಾ ಋತಸ್ಯ ಸಮಯಂಸ್ತ ರಶ್ಮಿಭಿಶ್ಚಕ್ಷುರ್ಭಗಸ್ಯ ರಶ್ಮಿಭಿಃ।
(ಋ. ಸಂ. ೧-೧೩೬-೨)

ವಿಸ್ತೃತವಾದ ಸ್ವರೂಪವುಳ್ಳ ಸೂರ್ಯನಿಗೆ ಇನ್ನೂ ಅಧಿಕವಾಗಿ ವಿಸ್ತೃತವಾಗಿರುವ ಋತದ ಮಾರ್ಗವು ಅವನ ಕಿರಣಗಳ ಸಹಾಯದಿಂದ ನಿರ್ದಿಷ್ಟವಾಯಿತು ಎಂಬ ವರ್ಣನೆಯಲ್ಲಿ ಅಂತರಿಕ್ಷದ ಯಾವ ವಿಶಾಲವಾದ ಋತದ ಮಾರ್ಗವು ಸೂಚಿತವಾಗಿದೆಯೋ ಅದೇ ಉಷಸ್ಸಿನ ಶಾಶ್ವತವಾದ ಸಂಚಾರಮಾರ್ಗವು.

---

ಸಂಹಿತಾಪಾಠಃ

ಅವ ಸ್ಯೂಮೇವ ಚಿನ್ವತೀ ಮಘೋನ್ಯುಷಾ ಯಾತಿ ಸ್ವಸರಸ್ಯ ಪತ್ನೀ ।
ಸ್ವ೧ರ್ಜನಂತೀ ಸುಭಗಾ ಸುದಂಸಾ ಆಂತಾದ್ದಿವಃ ಪಪ್ರಥ ಆ ಪೃಥಿವ್ಯಾಃ ॥

ಪದಪಾಠಃ

ಅವ । ಸ್ಯೂಮ॒ಽಇವ । ಚಿನ್ವತೀ । ಮಘೋನೀ । ಉಷಾಃ । ಯಾತಿ । ಸ್ವಸರಸ್ಯ । ಪತ್ನೀ ।
ಸ್ವ೧ಃ । ಜನಂತೀ । ಸುಽಭಗಾ । ಸುಽದಂಸಾಃ । ಆ । ಅಂತಾತ್ । ದಿವಃ । ಪಪ್ರಥೇ । ಆ । ಪೃಥಿವ್ಯಾಃ ॥೪॥

ಸಾಯಣಭಾಷ್ಯಂ

ಯೇಯಮುಷಾಃ ಸ್ಯೂಮೇವ ವಸ್ತ್ರಮಿವ ವಿಸ್ತೃತಂ ತಮೋಽವಚಿನ್ವತ್ಯವಚಯಮಪಕ್ಷಯಂ ಪ್ರಾಪಯಂತೀ ಮಘೋನೀ ಧನವತೀ ಸ್ವಸರಸ್ಯ । ಸುಷ್ಠ್ವಸ್ಯತಿ ಕ್ಷಿಪತಿ ತಮ ಇತಿ ಸ್ವಸರಃ ಸೂರ್ಯೋ ವಾಸರೋ ವಾ । ತಸ್ಯ ಪತ್ನೀ ಸತೀ ಯಾತಿ ಗಚ್ಛತಿ । ಸ್ವಃ ಸ್ವಕೀಯಂ ತೇಜೋ ಜನಂತೀ ಜನಯಂತೀ ಸುಭಗಾ ಸುಧನಾ ಸೌಭಾಗ್ಯಯುಕ್ತಾ ವಾ ಸುದಂಸಾಃ ಶೋಭನಾಗ್ನಿಹೋತ್ರಕರ್ಮಾ ಸೇಯಮುಷಾ ದಿವೋ ದ್ಯುಲೋಕಸ್ಯಾಂತಾತ್ಪೃಥಿವ್ಯಾಶ್ಚಾಂತಾದಾವಸಾನಾತ್ಪಪ್ರಥೇ । ಪ್ರಥತೇ । ಪ್ರಕಾಶತ ಇತ್ಯರ್ಥಃ ॥ ಸ್ಯೂಮೇವ । ಷಿವು ತಂತುಸಂತಾನೇ । ಅವಿಷಿವಿಶುಷಿಭ್ಯಃ ಕಿದಿತಿ ಮನ್ಪ್ರತ್ಯಯಃ । ಛ್ವೋಃ ಶೂಡನು-

CC-0. Jangamwadi Math Collection. Digitized by eGangotri

ನಾಸಿಕೇ ಚೇಶ್ರ್ಯೋಟ್ | ಯಣಾದೇಶಃ | ಸುಪಾಂ ಸುಲುಗಿತಿ ಸೋರ್ಲುಕ್ | ನಿತ್ತ್ವಾದಾದ್ಯುದಾತ್ತಃ | ಚಿನ್ವತೀ | ಶತುರನುಮ ಇತಿ ಙೀಪ ಉದಾತ್ತತ್ವಂ | ಜನಂತೀ | ಜನ ಜನನ ಇತ್ಯಸ್ಯ ಣ್ಯಂತಸ್ಯ ಶತರಿ ರೂಪಂ | ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವೇನ ಣಿಲೋಪಃ ||

ಪ್ರತಿಪದಾರ್ಥ

**ಮಘೋನೀ**—ಧನವಂತಳೂ | **ಸ್ವಸರಸ್ಯ**—ಆದಿತ್ಯನ | **ಪತ್ನೀ**—ಪತ್ನಿಯೂ ಆದ | **ಉಷಾಃ**—ಉಷೋದೇವಿಯು | **ಸ್ಯೂಮ ಇವ**—ವಸ್ತ್ರದಂತೆ ಪ್ರಸರಿಸುವ ಅಂಧಕಾರವನ್ನು | **ಅವ ಚಿನ್ವತೀ**—ನಾಶಗೊಳಿಸುತ್ತಾ | **ಯಾತಿ**—ಸಂಚರಿಸುತ್ತಾಳೆ | **ಸ್ವಃ**—ತನ್ನ ತೇಜಸ್ಸನ್ನು | **ಜನಂತೀ**—ಸೃಷ್ಟಿಸುತ್ತಾ (ಪ್ರಸರಿಸುತ್ತಾ) | **ಸುಭಗಾ**—ಸೌಭಾಗ್ಯಯುಕ್ತಳೂ | **ಸುದಂಸಾಃ**—ಶ್ರೇಷ್ಠವಾದ ಕರ್ಮಕ್ಕೆ ಸಹಾಯಕಳೂ ಆಗಿ | **ದಿವಃ**—ದ್ಯುಲೋಕದ | **ಆ ಅಂತಾತ್**—ಕೊನೆಯಿಂದ | **ಪೃಥಿವ್ಯಾಃ ಆ**—ಪೃಥಿವಿಯ ಕೊನೆಯುವರೆಗೆ | **ಪಪ್ರಥೇ**—ಪ್ರಸಿದ್ಧಳಾಗಿ ಪ್ರಕಾಶಿಸುತ್ತಾಳೆ.

ಭಾವಾರ್ಥ

ಧನವಂತಳೂ, ಆದಿತ್ಯನ ಪತ್ನಿಯೂ ಆದ ಉಷೋದೇವಿಯು ವಸ್ತ್ರದಂತೆ ಪ್ರಸರಿಸಿರುವ ಅಂಧಕಾರವನ್ನು ನಾಶಗೊಳಿಸುತ್ತಾ ಸಂಚರಿಸುತ್ತಾಳೆ. ತನ್ನ ತೇಜಸ್ಸನ್ನು ಪ್ರಸರಿಸುತ್ತಾ ಸೌಭಾಗ್ಯಯುಕ್ತಳೂ ಶ್ರೇಷ್ಠವಾದ ಕರ್ಮಕ್ಕೆ ಸಹಾಯಕಳೂ ಆಗಿ ದ್ಯುಲೋಕದ ಅಂತ್ಯದಿಂದ ಪೃಥಿವಿಯ ಅಂತ್ಯದವರೆಗೆ ಪ್ರಸಿದ್ಧಳಾಗಿ ಪ್ರಕಾಶಿಸುತ್ತಾಳೆ.

English Translation

The opulent Ushas, the bride of the far-darting (sun), throwing off (darkness) like a garment, proceeds: diffusing her own (lustre), auspicious, promoting sacred acts, she is renowned to the ends of the heaven and of the earth.

ವಿಶೇಷವಿಷಯಗಳು

**ಸ್ವಸರಸ್ಯ**—**ಸುಷ್ಠು ಅಸ್ಯತಿ ಕ್ಷಿಪತಿ ತಮ ಇತಿ ಸ್ವಸರಃ ಸೂರ್ಯೋ ವಾಸರೋ ವಾ** | ತಮಸ್ಸನ್ನು ಪೂರ್ಣವಾಗಿ ಚದುರಿಸಿ ನಾಶಮಾಡುವುದರಿಂದ ಸ್ವಸರಶಬ್ದಕ್ಕೆ ಸೂರ್ಯನೆಂದಾಗಲಿ ಅಥವಾ ಅಹಸ್ಸೆಂದಾಗಲಿ ಅರ್ಥವಾಗುತ್ತದೆ. ಪುನಃ ಮುಂದೆ ಸ್ವಃ ಎಂಬ ಪದಕ್ಕೆ ತೇಜಸ್ಸೆಂದರ್ಥಮಾಡಿದೆ.

**ವಿಶ್ವಾಃ ಪಿನ್ವಥಃ ಸ್ವಸರಸ್ಯ ಧೇನಾ ಅನು ವಾಮೇಕಃ ಪವಿರಾ ವವರ್ತ |**

**(ಋ. ಸಂ. ೫-೬೨-೨)**

ಇತ್ಯಾದಿ ಸ್ಥಳಗಳಲ್ಲಿ ಸ್ವಸರವೆಂದರೆ ಆದಿತ್ಯನೆಂದೇ ನಿಷ್ಕೃಷ್ಟವಾದ ಅರ್ಥವನ್ನು ಹೇಳಿದೆ.

**ಸ್ವಃ**—ಈ ಪದವು ಸ್ವಃ, ಪೃಶ್ನಿಃ, ನಾಕಃ ಮುಂತಾದ ಸಾಧಾರಣನಾಮಗಳಲ್ಲಿ ಪಠಿತವಾಗಿದೆ. ಇವೆಲ್ಲವೂ ದ್ಯುಲೋಕಪರ್ಯಾಯವಾಗಿಯೂ, ಆದಿತ್ಯಪರ್ಯಾಯವಾಗಿಯೂ ಇವೆಯೆಂದು ನಿರುಕ್ತಕಾರರು ಹೇಳಿದ್ದಾರೆ ಆದಿತ್ಯನೂ ಸಹ ತೇಜೋರೂಪನಾಗಿರುವುದರಿಂದಲೇ ಸ್ವಃ ಎಂಬ ಪದದಿಂದ ನಿರ್ದಿಷ್ಟನಾಗಿದ್ದಾನೆ. ಮತ್ತು,

CC-0. Jangamwadi Math Collection. Digitized by eGangotri

ಸ್ವೃತೋ ಭಾಸಂ ಜ್ಯೋತಿಷಾಂ । ಸ್ವೃತೋ ಭಾಸೇತಿ ವಾ ॥

(ನಿ ೨-೧೪)

ಇತ್ಯಾದಿ ನಿರ್ವಚನಗಳನ್ನು ತಿಳಿಸಿ ಈ ಪದದ ವಿಶೇಷಾರ್ಥಗಳನ್ನು ಹಿಂದೆ ತಿಳಿಸಿದೆ ಪ್ರಕೃತವಾದ ಋಕ್ಕಿನಲ್ಲಿ ಉಷಸ್ಸಿನ ತೇಜಸ್ಸನ್ನು ವರ್ಣಿಸಲು ಈ ಪದದ ಪ್ರಯೋಗವಿದೆ.

ಸ್ವಸರಸ್ಯ ಪತ್ನೀ ಎಂಬುದಕ್ಕೆ ಸೂರ್ಯನ ಪತ್ನಿಯೆಂದಾಗಲಿ ಅಥವಾ ಅಹಸ್ಸಿನ ಪತ್ನಿಯೆಂದಾಗಲಿ ಅರ್ಥವಾಗಬಹುದು. ಸೂರ್ಯನಿಗೂ ಉಷಸ್ಸಿಗೂ ಇರುವ ಸಂಬಂಧವು ಒಂದೊಂದು ಕಡೆಗಳಲ್ಲಿ ಒಂದೊಂದು ವಿಧವಾಗಿ ವರ್ಣಿತವಾಗಿದೆ. ಯೋಷಾ ಜಾರಸ್ಯ ಚಕ್ಷಸಾ ವಿಭಾತಿ (ಋ. ಸಂ. ೧-೯೨-೧೧) ಇತ್ಯಾದಿ ವಾಕ್ಯಗಳಲ್ಲಿ ಆದಿತ್ಯನ ಪತ್ನಿಯೆಂಬುದು ನಿಸ್ಪಷ್ಟವಾಗಿದೆ.

ಕದಾ ನೋ ದೇವೀರಮೃತಸ್ಯ ಪತ್ನೀಃ ಸೂರೋ ವರ್ಣೇನ ತತನನ್ನುಷಾಸಃ ।

(ಋ. ಸಂ. ೪-೫-೧೩)

ಸೂರ್ಯನ ಪತ್ನಿಯರೂ, ಲೋಕದ ಚೈತನ್ಯದಾಯಕರೂ, ಪಾಲಕರೂ ಆದ ಉಷಸ್ಸುಗಳು ಪ್ರಕಾಶವನ್ನು ವಿಸ್ತರಿಸುತ್ತಾರೆ ಎಂಬ ವರ್ಣನವು ಪ್ರಕೃತವಾದ ಋಕ್ಕಿನಲ್ಲಿರುವಂತೆಯೇ ಇರುತ್ತದೆ ಆದರೆ,

ಏತಾ ಉ ತ್ಯಾಃ ಪ್ರತ್ಯದೃಶ್ರನ್ ಪುರಸ್ತಾಜ್ಜ್ಯೋತಿರ್ಯಚ್ಛಂತೀರುಷಸೋ ವಿಭಾತೀಃ ।
ಅಜೀಜನನ್ತ್ಸೂರ್ಯಂ ಯಜ್ಞಮಗ್ನಿಮಪಾಚೀನಂ ತಮೋ ಅಗಾದಜುಷ್ಟಂ ॥

(ಋ. ಸಂ. ೭-೭೮-೩)

ಪ್ರಕಾಶಮಾನರೂ, ಜಗತ್ತಿಗೆ ತೇಜಸ್ಸನ್ನು ಪ್ರಸರಿಸುವವರೂ ಆದ ಉಷಸ್ಸುಗಳು ಸೂರ್ಯನನ್ನು ಉತ್ಪನ್ನಮಾಡಿದರು ಎಂದಿರುವ ಕೆಲವು ಕಡೆಗಳಲ್ಲಿ ಜನನೀಜನ್ಯಸಂಬಂಧವೂ ಹೇಳಲ್ಪಟ್ಟಿದೆ.

ಸ್ಯೂಮ ಇವ—ಸ್ಯೂಮಶಬ್ದಕ್ಕೆ ವಸ್ತ್ರವೆಂದರ್ಥಮಾಡಿದೆ. ಹಾಸುಹೊಕ್ಕುಗಳಿಂದ ಹೆಣೆದಿರುವುದರಿಂದ ವಸ್ತ್ರಕ್ಕೆ ಸ್ಯೂಮಃವೆಂಬ ಪರ್ಯಾಯಪದವಿದೆ. ಅದರಂತೆಯೇ ಹಾಸುಹೊಕ್ಕುಗಳಂತಿರುವ ಘನವಾದ ಅಂಧಕಾರವೂ ಸಹ ಇಲ್ಲಿ ಸ್ಯೂಮದೊಂದಿಗೆ ಹೋಲಿಸಲ್ಪಟ್ಟಿದೆ. ಕೆಲವೆಡೆಗಳಲ್ಲಿ ಇದೇ ಗುಣವಿರುವ ತೇಜಸ್ಸಿಗೂ ಇದೇ ಪರ್ಯಾಯ ಪದವಾಗಿರುತ್ತದೆ. ಉದಾಹರಣೆಗೆ,

ಸ್ಯೂಮಗಭಸ್ತಿಮೃತಯುಗ್ಭಿರಶ್ವೈರಾಶ್ವಿನಾ ವಸುಮಂತಂ ವಹೇಥಾಂ ॥

(ಋ. ಸಂ. ೭-೭೧-೩)

ಇತ್ಯಾದಿ ಸ್ಥಳಗಳಲ್ಲಿ ಸ್ಯೂಮಗಭಸ್ತಿಯೆಂಬುದಕ್ಕೆ ಸುಖರಶ್ಮಿಯೆಂದಾಗಲಿ, ಸ್ಯೂತರಶ್ಮಿಯೆಂದಾಗಲಿ ಅರ್ಥವೆಂದು ತಿಳಿಸಿದೆ.

——————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಚ್ಛಾ ವೋ ದೇವೀಮುಷಸಂ ವಿಭಾತೀಂ ಪ್ರ ವೋ ಭರಧ್ವಂ ನಮಸಾ ಸುವೃಕ್ತಿಂ ।

ಊರ್ಧ್ವಂ ಮಧುಧಾ ದಿವಿ ಪಾಜೋ ಅಶ್ರೇತ್ಪ್ರ ರೋಚನಾ ರುರುಚೇ ರಣ್ವಸಂದೃಕ್ ॥ ೩ ॥

ಪದಪಾಠಃ

ಅಚ್ಛ । ವಃ । ದೇವೀಂ । ಉಷಸಂ । ವಿಽಭಾತೀಂ । ಪ್ರ । ವಃ । ಭರಧ್ವಂ । ನಮಸಾ । ಸುಽವೃಕ್ತಿಂ ।

ಊರ್ಧ್ವಂ । ಮಧುಧಾ । ದಿವಿ । ಪಾಜಃ । ಅಶ್ರೇತ್ । ಪ್ರ । ರೋಚನಾ । ರುರುಚೇ । ರಣ್ವಽಸಂದೃಕ್ ॥

ಸಾಯಣಭಾಷ್ಯಂ

ಹೇ ಸ್ತೋತಾರೋ ವೋ ಯುಷ್ಮಾನಚ್ಛಾಭಿಲಕ್ಷ್ಯ ವಿಭಾತೀಂ ಶೋಭಮಾನಾಮುಷಸಂ ದೇವೀಂ ಪ್ರತಿ ವೋ ಯುಷ್ಮಾಕಂ ಸಂಬಂಧಿನಾ ನಮಸಾ ನಮಸ್ಕಾರೇಣ ಸಹ ಸುವೃಕ್ತಿಂ ಶೋಭನಾಂ ಸ್ತುತಿಂ ಪ್ರಭರಧ್ವಂ । ಯೂಯಂ ಕುರುತ । ಮಧುಧಾ । ಮಧುರಾಣಿ ಸ್ತುತಿಲಕ್ಷಣಾನಿ ವಾಕ್ಯಾನಿ ದಧಾತೀತಿ । ಮಧು ಸೋಮಃ । ತಂ ಧಾರಯತೀತಿ ವಾ । ಯದ್ವಾ । ಮಧುಧಾದಿತ್ಯಧಾತ್ರೀ । ಯದ್ವಾ । ಅವಗ್ರಹಾಭಾವಾದವ್ಯುತ್ಪನ್ನಾವಯವಮಖಂಡಮಿದಂ ಪದಮುಷೋನಾಮ । ಸೇಯಮುಷಾ ದಿವಿ ನಭಸ್ಯೂರ್ಧ್ವಂ ಪಾಜ ಊರ್ಧ್ವಾಭಿಮುಖಂ ಪಾಜಸ್ತೇಜೋಽಶ್ರೇತ್ । ಶ್ರಯತಿ । ತಥಾ ರೋಚನಾ ರೋಚನಶೀಲಾ ರಣ್ವಸಂದೃಕ್ ರಮಣೀಯದರ್ಶನೋಷಾಃ ಪ್ರ ರುರುಚೇ । ಪ್ರಕರ್ಷೇಣ ದೀಪ್ಯತೇ । ಯದ್ವಾ । ರೋಚನಾ ಲೋಕಾನ್ಪ್ರ ರುರುಚೇ । ಪ್ರಕರ್ಷೇಣ ಸ್ವತೇಜಸಾ ದೀಪಯತಿ । ತಥಾ ಚ ಮಂತ್ರವರ್ಣಃ । ವ್ಯುಚ್ಛಂತೀ ಹಿ ರಶ್ಮಿಭಿರ್ವಿಶ್ವಮಾಭಾಸಿ ರೋಚನಂ । ಋಗ್ವೇ. ೧-೪೯-೪ । ಇತಿ ॥ ರಣ್ವಸಂದೃಕ್ । ರಮೇರ್ಗತ್ಯರ್ಥಸ್ಯಾಚ್ಪ್ರತ್ಯಯಃ । ಇದಿತ್ತ್ವಾನ್ನುಮಾಗಮಃ । ಸಂಪೂರ್ವಾದ್ದೃಶೇಃ ಕ್ವಿನ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

(ಎಲೈ ಸ್ತೋತೃಗಳೇ) ವಃ ಅಚ್ಛ—ನಿಮಗೆ ಅಭಿಮುಖವಾಗಿ । ವಿಭಾತೀಂ—ಪ್ರಕಾಶಿಸುತ್ತಿರುವ । ಉಷಸಂ ದೇವೀಂ—ಉಷೋದೇವಿಯನ್ನುದ್ದೇಶಿಸಿ । ವಃ—ನಿಮ್ಮ । ನಮಸಾ—ನಮಸ್ಕಾರದೊಡನೆ ಕೂಡಿದ । ಸುವೃಕ್ತಿಂ—ಶ್ರೇಷ್ಠವಾದ ಸ್ತುತಿಯನ್ನು । ಪ್ರ ಭರಧ್ವಂ—ನಿರ್ಮಿಸಿ (ಅರ್ಪಿಸಿರಿ) । ಮಧುಧಾ—ಮಾಧುರ್ಯಕ್ಕೆ ನಿಧಿಯಾದ ಉಷಸ್ಸು । ದಿವಿ—ಅಂತರಿಕ್ಷದಲ್ಲಿ । ಊರ್ಧ್ವಂ—ಊರ್ಧ್ವಾಭಿಮುಖವಾಗಿರುವ । ಪಾಜಃ—

CC-0. Jangamwadi Math Collection. Digitized by eGangotri

ತೇಜಸ್ಸನ್ನು । **ಅಶ್ರೇತ್**— ಪಡೆದಿದ್ದಾಳೆ । **ರೋಚನಾ**— ಕಾಂತಿಯುಕ್ತಳೂ । **ರಣ್ವಸಂದೃಕ್**— ರಮಣೀಯವಾದ ದರ್ಶನವುಳ್ಳವಳೂ ಆಗಿ । **ಪ್ರ ರುರುಚೇ**— ಅತಿಶಯವಾಗಿ ಪ್ರಕಾಶಿಸುತ್ತಾಳೆ.

ಭಾವಾರ್ಥ

ಎಲೈ ಸ್ತೋತೃಗಳೇ, ನಿಮಗೆ ಅಭಿಮುಖವಾಗಿ ಪ್ರಕಾಶಿಸುತ್ತಿರುವ ಉಷೋದೇವಿಯನ್ನುದ್ದೇಶಿಸಿ ನಿಮ್ಮ ನಮಸ್ಕಾರಪೂರ್ವಕವಾದ, ಶ್ರೇಷ್ಠವಾದ ಸ್ತುತಿಯನ್ನು ನಿರ್ಮಿಸಿ ಅರ್ಪಿಸಿರಿ. ಮಾಧುರ್ಯಕ್ಕೆ ನಿಧಿಯಾದ ಉಷಸ್ಸು ಅಂತರಿಕ್ಷದಲ್ಲಿ ಊರ್ಧ್ವಾಭಿಮುಖವಾಗಿರುವ ತೇಜಸ್ಸನ್ನು ಪಡೆದಿದ್ದಾಳೆ. ಕಾಂತಿಯುಕ್ತಳೂ ರಮಣೀಯವಾದ ದರ್ಶನವುಳ್ಳವಳೂ ಆಗಿ ಅತಿಶಯವಾಗಿ ಪ್ರಕಾಶಿಸುತ್ತಾಳೆ.

English Translation

Offer, with your prostrations, due praise to the divine Ushas, shining upon you: the repository of sweetness manifests her brightness aloft in the sky, and, radiant and lovely, lights the regions.

ವಿಶೇಷವಿಷಯಗಳು

**ಸುವೃಕ್ತಿಂ**— **ವೃಂಚ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ತಿಳಿಸಿದೆ. ಎಂದರೆ ಬಿಡಿಸಿ ಪರಿಷ್ಕೃತವನ್ನಾಗಿ ಮಾಡಿ ನಿರ್ಮಿಸಿದ ಸ್ತುತಿಯು ವೃಕ್ತಿಶಬ್ದವಾಚ್ಯವಾಗಿರುತ್ತದೆಯೆಂದು ಈ ನಿರ್ವಚನವು ತಿಳಿಸುತ್ತದೆ. ಅಥವಾ **ಸುಪ್ರವೃತ್ತಾ ಸ್ತುತಿಃ** । ಅತ್ಯಂತ ಉತ್ತಮವಾದ ಮನಃಪ್ರೇರಣೆಯಿಂದ ನಿರ್ಮಿತವಾದ ಸ್ತುತಿಯೆಂದೂ ಅರ್ಥವಾಗಬಹುದು.

**ಮಧುಧಾ**— ಈ ಪದಕ್ಕೆ ಎರಡು ಮೂರು ವಿಧವಾದ ನಿರ್ವಚನವನ್ನು ತೋರಿಸಿ ವಿವರಿಸಿದೆ. **ಮಧು** ಶಬ್ದಕ್ಕೆ **ಮಧುರಾಣಿ ಸ್ತುತಿಲಕ್ಷಣಾನಿ ವಾಕ್ಯಾನಿ ದಧಾತೀತಿ** । **ಮಧು ಸೋಮಃ ಶಂ ಧಾರಯತೀತಿ ವಾ** । **ಯದ್ವಾ** । ಮಧುಧಾ-ಆದಿತ್ಯಧಾತ್ರೀ । **ಯದ್ವಾ** । **ಅವಗ್ರಹಾಭಾವಾದವ್ಯುತ್ಪನ್ನಾವಯವಂ ಅಖಂಡಮಿದಂ ಪದಂ ಉಷೋನಾಮ**, ಮಧುರವಾದ ಸ್ತುತಿಯೋಗ್ಯವಾದ ಲಕ್ಷಣಗಳನ್ನು ಧರಿಸಿರುವುದರಿಂದಲಾಗಲಿ, ಸೋಮವನ್ನು ಧರಿಸಿರುವುದರಿಂದಾಗಲಿ, (ಮಧುವೆಂದರೆ ಸೋಮವೆಂದರ್ಥ) ಅಥವಾ ಮಧು ಶಬ್ದಕ್ಕೆ ಆದಿತ್ಯನೆಂದರ್ಥ ಮಾಡಿದರೆ ಅಥವಾ, ಅಖಂಡಾತ್ಮಕವಾದ ಪದವಾಚ್ಯಳು ಎಂದಿರುವುದರಿಂದಾಗಲಿ ಉಷಸ್ಸಿಗೆ **ಮಧುಧಾ** ಎಂಬ ವಿಶೇಷಣವು ಉಚಿತವಾಗಿದೆಯೆಂದು ಸಾಯಣರು ವಿವರಿಸಿದ್ದಾರೆ.

**ರಣ್ವಸಂದೃಕ್**— ರಣ್ವಶಬ್ದಕ್ಕೆ ರಮಣೀಯವೆಂದೂ, ಸಂದೃಕ್‌ಶಬ್ದಕ್ಕೆ ರೂಪವೆಂದೂ ಅರ್ಥ, ರಮಣೀಯವಾದ ಸ್ವರೂಪವುಳ್ಳವಳೆಂದರ್ಥ.

——— : o : ———

ಸಂಹಿತಾಪಾಠಃ

ಋತಾವರೀ ದಿವೋ ಅರ್ಕೈರಬೋಧ್ಯಾ ರೇವತೀ ರೋದಸೀ ಚಿತ್ರಮಸ್ಥಾತ್।
ಆಯತೀಮಗ್ನ ಉಷಸಂ ವಿಭಾತೀಂ ವಾಮಮೇಷಿ ದ್ರವಿಣಂ ಭಿಕ್ಷಮಾಣಃ

CC-0. Jangamwadi Math Collection. Digitized by eGangotri

## ಪದಪಾಠಃ

ಋತ್ಽವರೀ। ದಿವಃ । ಅರ್ಕೈಃ । ಅಬೋಧಿ । ಆ । ರೇವತೀ । ರೋದಸೀ ಇತಿ । ಚಿತ್ರಂ । ಅಸ್ಥಾತ್ ।

ಆಽಯತೀಂ । ಅಗ್ನೇ । ಉಷಸಂ । ವಿಽಭಾತೀಂ । ವಾಮಂ । ಏಷಿ। ದ್ರವಿಣಂ । ಭಿಕ್ಷಮಾಣಃ ॥ ೬ ॥

## ಸಾಯಣಭಾಷ್ಯಂ

ಋತಾವರೀ ಸತ್ಯವತೀ ಯೇಯಮುಷಾ ದಿವೋ ದ್ಯುಲೋಕಾದರ್ಕೈಸ್ತೇಜೋಭಿರಬೋಧಿ ಸರ್ವೈರ್ಜ್ಞಾಯತೇ । ತತೋ ರೇವತೀ ಧನವತೀ ಯೇಯಂ ರೋದಸೀ ದ್ಯಾವಾಪೃಥಿವ್ಯೌ ಚಿತ್ರಂ ನಾನಾವಿಧರೂಪಯುಕ್ತಂ ಯಥಾ ಭವತಿ ತಥಾಸ್ಥಾತ್ ಸರ್ವತೋ ವ್ಯಾಪ್ಯ ತಿಷ್ಠತಿ ಹೇ ಅಗ್ನೇ ಆಯತೀಂ ತ್ವದಭಿಮುಖಮಾಗಚ್ಛಂತೀಂ ವಿಭಾತೀಂ ಭಾಸಮಾನಾಮುಷಸಮುಷೋದೇವೀಂ ಭಿಕ್ಷಮಾಣೋ ಹವೀಂಷಿ ಯಾಚಮಾನಸ್ತ್ವಂ ವಾಮಂ ವನನೀಯಂ ದ್ರವಿಣಮಗ್ನಿಹೋತ್ರಾದಿಲಕ್ಷಣಂ ಧನಮೇಷಿ । ಪ್ರಾಪ್ನೋಷಿ ॥ ಅಬೋಧಿ । ಬುಧ ಅವಗಮನೇ । ಕರ್ಮಣಿ ಲುಙಿ ಚಿಣ್ ಭಾವಕರ್ಮಣೋರಿತಿ ಚಿಣ್ । ಚಿಣೋ ಲುಕ್ । ರೇವತೀ । ರಯಿಶಬ್ದಾನ್ಮತುಪ್ । ಛಂದಸೀರ ಇತಿ ವತ್ವಂ । ರಯೇರ್ಮತೌ ಬಹುಲಮಿತಿ ಸಂಪ್ರಸಾರಣಪರಪೂರ್ವತ್ವೇ । ಗುಣಃ । ಉಗಿತಶ್ಚೇತಿ ಙೀಪ್ । ರೇಶಬ್ದಾಚ್ಚೋಪಸಂಖ್ಯಾನಮಿತಿ ಮತುಪ ಉದಾತ್ತತ್ವಂ ॥

## ಪ್ರತಿಪದಾರ್ಥ

ಋತಾವರೀ—ಸತ್ಯವತಿಯಾದ ಉಷಸ್ಸು । ದಿವಃ—ದ್ಯುಲೋಕದಿಂದ । ಅರ್ಕೈಃ—ತನ್ನ ತೇಜಸ್ಸುಗಳಿಂ ದೊಡಗೂಡಿದವಳಾಗಿ । ಅಬೋಧಿ—ಸರ್ವರಿಂದಲೂ ತಿಳಿಯಲ್ಪಡುತ್ತಾಳೆ । ರೇವತೀ—ಧನವಂತಳಾದ ಉಷಸ್ಸು । ರೋದಸೀ—ದ್ಯಾವಾಪೃಥಿವಿಗಳನ್ನು । ಚಿತ್ರಂ—ಅನೇಕವಿಧವಾದ ರೂಪಗಳಿಂದ ಕೂಡಿರುವಂತೆ ಮಾಡುತ್ತಾ । ಆ ಅಸ್ಥಾತ್—ವ್ಯಾಪಿಸಿ ನಿಂತಿದ್ದಾಳೆ । ಅಗ್ನೇ—ಎಲೈ ಅಗ್ನಿಯೇ । ಆಯತೀಂ—ನಿನ್ನ ಅಭಿಮುಖವಾಗಿ ಬರುತ್ತಿರುವವಳೂ । ವಿಭಾತೀಂ—ಪ್ರಕಾಶಮಾನಳೂ ಆದ । ಉಷಸಂ—ಉಷೋದೇವಿಯನ್ನು । ಭಿಕ್ಷಮಾಣಃ—ಹವಿಸ್ಸನ್ನು ಪ್ರಾರ್ಥಿಸುವ ನೀನು । ವಾಮಂ—ಆಕರ್ಷಕವಾದುದೂ । ದ್ರವಿಣಂ—ಅಗ್ನಿಹೋತ್ರಾದಿ ರೂಪವುಳ್ಳದ್ದೂ ಆದ ಧನವನ್ನು । ಏಷಿ—ಪಡೆಯುತ್ತೀಯೆ.

## ಭಾವಾರ್ಥ

ಸತ್ಯವತಿಯಾದ ಉಷಸ್ಸು ದ್ಯುಲೋಕದಿಂದ ತನ್ನ ತೇಜಸ್ಸುಗಳಿಂದೊಡಗೂಡಿದವಳಾಗಿ ಸರ್ವರಿಂದಲೂ ತಿಳಿಯಲ್ಪಡುತ್ತಾಳೆ. ಧನವಂತಳಾದ ಉಷಸ್ಸು ದ್ಯಾವಾಪೃಥಿವಿಗಳನ್ನು ಅನೇಕ ವಿಧವಾದ ರೂಪಗಳಿಂದ ಕೂಡಿರುವಂತೆ ಮಾಡುತ್ತಾ ವ್ಯಾಪಿಸಿ ನಿಂತಿದ್ದಾಳೆ. ಎಲೈ ಅಗ್ನಿಯೇ, ನಿನ್ನ ಅಭಿಮುಖವಾಗಿ ಬರುತ್ತಿರುವವಳೂ, ಪ್ರಕಾಶಮಾನಳೂ ಆದ ಉಷೋದೇವಿಯನ್ನು ಹವಿಸ್ಸಿಗಾಗಿ ಪ್ರಾರ್ಥಿಸುವ ನೀನು ಆಕರ್ಷಕವಾದುದೂ, ಅಗ್ನಿಹೋತ್ರಾದಿ ರೂಪವುಳ್ಳದ್ದೂ ಆದ ಧನವನ್ನು ಪಡೆಯುತ್ತೀಯೆ.

CC-0. Jangamwadi Math Collection. Digitized by eGangotri

## English Translation

The possessor of truth is recognized in the sky by her rays: the possessor of wealth has taken a marvellous station in earth and heaven: Agni, soliciting alms of the radiant advancing Ushas,obtain your desired treasure (of oblations).

### ವಿಶೇಷವಿಷಯಗಳು

**ಋತಾವರೀ—ಸತ್ಯವತೀ ।** ಋತಶಬ್ದಕ್ಕೆ ಸತ್ಯವೆಂದರ್ಥ. ಸತ್ಯವನ್ನು ಪಾಲಿಸುವವಳಾದುದರಿಂದ ಉಷಸ್ಸಿಗೆ ಋತಾವರೀ ಎಂಬ ವಿಶೇಷಣವಿರುತ್ತದೆ.

**ಅರ್ಕೈಃ—ತೇಜೋಭಿಃ ।** ತೇಜಸ್ಸುಗಳಿಂದ ಎಂದರ್ಥ. ತೇಜೋಯುತರಾದ ಅಗ್ನ್ಯಾದಿದೇವತೆಗಳೆಲ್ಲರೂ ಅರ್ಕಶಬ್ದವಾಚ್ಯರಾಗಿರುತ್ತಾರೆ. ಉದಾಹರಣೆಗೆ **ಅಗ್ನಿರ್ವಾ ಅರ್ಕಃ** (ಐ. ಆ. ೧-೪-೧) ಅಗ್ನಿಯೇ ಅರ್ಕನು ಇತ್ಯಾದಿಯಾಗಿ ಸ್ತುತವಾಗಿದೆ. ಪ್ರಭೂತವಾದ ತೇಜಸ್ಸೂ ಅರ್ಕಶಬ್ದವಾಚ್ಯವಾಗಿರುತ್ತದೆ.

**ಚಿತ್ರಂ—** ಚಿತ್ರಶಬ್ದವು ಅನೇಕಾರ್ಥಗಳಲ್ಲಿ ಪ್ರಯುಕ್ತವಾಗಿದೆ **ಪಶೂನ್ನ ಚಿತ್ರಾ ಸುಭಗಾ ಪ್ರಥಾನಾ** (೧-೯೨-೧೨) ಎಂಬ ಋಕ್ಕಿನಲ್ಲಿಯೂ **ಚಿತ್ರಾ** ಎಂಬ ಪದವು ಉಷಸ್ಸಿಗೇ ವಿಶೇಷಣವಾಗಿದೆ. ಅಲ್ಲಿ **ಚಾಯನೀಯಾ ಪೂಜನೀಯಾ** ಎಂಬ ಎರಡು ಅರ್ಥಗಳನ್ನು ಹೇಳಿದೆ. ರಮ್ಯವಾದ, ಆಕರ್ಷಕವಾದ ಎಂಬರ್ಥವೇ ಅಧಿಕವಾಗಿ ರೂಢಿಯಲ್ಲಿದೆ. **ಚಿತ್ರಂ ಮಹನೀಯಂ** ಎಂದರೆ ಪೂಜ್ಯವಾದುದು ಎಂಬ ಅರ್ಥವೂ ಇರುತ್ತದೆ. ಪ್ರಕೃತದಲ್ಲಿ ನಾನಾವಿಧ-**ರೂಪಯುಕ್ತಂ ।** ಆಕರ್ಷಕವಾಗಿರುವಂತೆ ಅನೇಕ ವಿಧವಾದ ರೂಪವನ್ನು ಧರಿಸಿದ ಉಷಸ್ಸು ಎಂದರ್ಥವಾಗುತ್ತದೆ.

**ವಾಮಂ—ವನನೀಯಂ ।** ಸರ್ವರಿಂದಲೂ ಅಪೇಕ್ಷಿತವಾದುದು ಎಂದರ್ಥ. **ಅಸ್ಯ ವಾಮಸ್ಯ ಪಲಿತಃ** ಎಂಬಲ್ಲಿ (೧-೧೬೪-೧) ಎರಡು ವಿಧವಾದ ಅರ್ಥವನ್ನು ಹೇಳಿದೆ. ಮೊದಲನೆಯದಾಗಿ **ವನನೀಯಸ್ಯ** ಸರ್ವರಿಂದಲೂ ಅಪೇಕ್ಷಿತನಾಗಿ ಸೇವಿಸಲ್ಪಡುವವನೆಂದೂ, ಎರಡನೆಯದಾಗಿ **ವಾಮಸ್ಯ ವಿಶ್ವಸ್ಯ ಉದ್ಗರಿತುಃ ।** ಬ್ರಹ್ಮಾಂಡರೂಪದಲ್ಲಿ ಪ್ರಪಂಚವನ್ನು ವಿಸ್ತರಿಸಿದವನೆಂದೂ ಅರ್ಥಮಾಡಿದೆ. ಪ್ರಕೃತದಲ್ಲಿಯೂ ಸಹ ಆ ಎರಡು ವಿಧವಾದ ಅರ್ಥವನ್ನೂ ಹೇಳಬಹುದು. ಉಷಸ್ಸು ಸರ್ವರಿಂದಲೂ ಅಪೇಕ್ಷಿತಳು. ಆದುದರಿಂದ ವನನೀಯಳು. ಅಲ್ಲದೆ ಸ್ವಪ್ರಕಾಶದಿಂದ ಪ್ರಪಂಚವನ್ನು ವಿಸ್ತರಿಸುವಂತೆ ಮಾಡುವವಳು. ಆದುದರಿಂದ ಇಲ್ಲಿಯೂ ಎರಡರ್ಥವೂ ಹೊಂದಿಕೊಳ್ಳುತ್ತದೆ.

---

### ಸಂಹಿತಾಪಾಠಃ

ಋತಸ್ಯ ಬುಧ್ನ ಉಷಸಾಮಿಷಣ್ಯನ್ವೃಷಾ ಮಹೀ ರೋದಸೀ ಆ ವಿವೇಶ ।
ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ ವಿ ದಧೇ ಪುರುತ್ರಾ ॥ ೭ ॥

CC-0. Jangamwadi Math Collection. Digitized by eGangotri

ಪದಪಾಠಃ

ಋತಸ್ಯ । ಬುಧ್ನೇ । ಉಷಸಾಂ । ಇಷಣ್ಯನ್ । ವೃಷಾ । ಮಹೀ ಇತಿ । ರೋದಸೀ ಇತಿ । ಆ । ವಿವೇಶ ।

ಮಹೀ । ಮಿತ್ರಸ್ಯ । ವರುಣಸ್ಯ । ಮಾಯಾ । ಚಂದ್ರಾಽಇವ । ಭಾನುಂ । ವಿ । ದಧೇ । ಪುರುಽತ್ರಾ ॥೭॥

ಸಾಯಣಭಾಷ್ಯಂ

ವೃಷಾ ವೃಷ್ಟಿದ್ವಾರಾ ಪ್ರೇರಕ ಆದಿತ್ಯ ಋತಸ್ಯಾಗ್ನಿಹೋತ್ರಾದಿಕರ್ಮಕರಣೇ ಸತ್ಯಭೂತ-ಸ್ಯಾಹ್ನೋ ಬುಧ್ನೇ ಮೂಲ ಉಷಸಾಮಿಷಣ್ಯನ್ ಪ್ರೇರಣಂ ಕುರ್ವನ್ಮಹೀ ಮಹತ್ಯಾ ರೋದಸೀ ದ್ಯಾವಾ-ಪೃಥಿವ್ಯಾವಾ ವಿವೇಶ । ಸ್ವತೇಜೋಭಿಃ ಸರ್ವತಃ ಪ್ರವಿಷ್ಟವಾನ್ । ಯದ್ವಾ । ವೃಷಾ ವರ್ಷಿತೇಷಣ್ಯನ್ ಸರ್ವತೋ ಗಚ್ಛನ್ನುಷಸಾಂ ಸಂಬಂಧೀ ರಶ್ಮಿಸಮೂಹೋ ರೋದಸೀ ದ್ಯಾವಾಪೃಥಿವ್ಯಾ ವಿಷ್ಟವಾನಿತಿ ಯೋಜನೀಯಂ । ತತ ಉಷಾ ಮಹೀ ಮಹತೀ ಮಿತ್ರಸ್ಯ ವರುಣಸ್ಯ ಮಿತ್ರಾವರುಣಯೋರ್ಮಾಯಾ ಪ್ರಭಾರೂಪಾ ಸತೀ ಚಂದ್ರೇವ ಸುವರ್ಣಾನೀವ ಭಾನುಂ ಸ್ವಪ್ರಭಾಂ ಪುರುತ್ರಾ ಬಹುಷು ದೇಶೇಷು ವಿ ದಧೇ । ವಿದಧಾತಿ । ಸರ್ವತ್ರ ಪ್ರಸಾರಯತಿ ॥ ಮಹೀ । ಅಲ್ಲೋಪಶ್ಛಾಂದಸಃ । ಪುರುತ್ರಾ । ದೇವ-ಮನುಷ್ಯೇತ್ಯಾದಿನಾಧಿಕರಣೇ ತ್ರಾಪ್ರತ್ಯಯಃ ॥

ಪ್ರತಿಪದಾರ್ಥ

ವೃಷಾ—ವೃಷ್ಟಿಕಾರಕನಾದ ಆದಿತ್ಯನು । ಋತಸ್ಯ—ಸತ್ಯಾತ್ಮಕವಾದ ಅಹಸ್ಸಿನ । ಬುಧ್ನೇ—ಮೂಲ ಭಾಗದಲ್ಲಿ । ಉಷಸಾಂ—ಉಷಸ್ಸುಗಳ ಆವಿರ್ಭಾವಕ್ಕೆ । ಇಷಣ್ಯನ್—ಪ್ರೇರಿಸುತ್ತಾ । ಮಹೀ—ಮಹತ್ತಾದ । ರೋದಸೀ—ದ್ಯಾವಾಪೃಥಿವಿಗಳನ್ನು । ಆ ವಿವೇಶ—ತನ್ನ ತೇಜಸ್ಸಿನಿಂದ ವ್ಯಾಪಿಸಿದ್ದಾನೆ (ಉಷಸ್ಸೂ ಸಹ) । ಮಹೀ—ಮಹತ್ಸ್ವರೂಪವುಳ್ಳವಳೂ । ಮಿತ್ರಸ್ಯ—ಮಿತ್ರನ । ವರುಣಸ್ಯ—ಮತ್ತು ವರುಣನ (ಮಿತ್ರಾವರುಣರ); ಮಾಯಾ—ಪ್ರಭಾರೂಪಳಾಗಿಯೂ । ಭಾನುಂ—ತನ್ನ ಪ್ರಭೆಯನ್ನು । ಚಂದ್ರೇವ—ಸುವರ್ಣಕಾಂತಿಯಂತೆ ಹರಡುತ್ತಲೂ । ಪುರುತ್ರಾ—ಬಹುಪ್ರದೇಶಗಳಲ್ಲಿ । ವಿದಧೇ—ಪ್ರಸರಿಸಿದ್ದಾಳೆ ।

ಭಾವಾರ್ಥ

ವೃಷ್ಟಿಕಾರಕನಾದ ಆದಿತ್ಯನು ಸತ್ಯಾತ್ಮಕವಾದ ಅಹಸ್ಸಿನ ಮೂಲಭಾಗದಲ್ಲಿ ಉಷಸ್ಸುಗಳ ಆವಿರ್ಭಾವಕ್ಕೆ ಪ್ರೇರಿಸುತ್ತಾ ವ್ಯಾಪಿಸಿದ್ದಾನೆ. ಉಷಸ್ಸೂ ಸಹ ಮಹತ್ಸ್ವರೂಪವುಳ್ಳವಳಾಗಿಯೂ ಮಿತ್ರಾವರುಣರ ಪ್ರಭಾರೂಪಳಾಗಿಯೂ ತನ್ನ ಪ್ರಭೆಯನ್ನು ಸುವರ್ಣಕಾಂತಿಯಂತೆ ಹರಡುತ್ತಲೂ ಬಹುಪ್ರದೇಶಗಳಲ್ಲಿ ಪ್ರಸರಿಸಿದ್ದಾಳೆ.

English Translation

The showerer (of rain, the sun), urging on the dawn, at the root of the truthful (day has) pervaded the vast heaven and earth; the mighty Ushas, the golden light, as it were, of Mitra and Varuna, diffuses her lustre in different directions.

CC-0. Jangamwadi Math Collection. Digitized by eGangotri

### ವಿಶೇಷವಿಷಯಗಳು

**ಋತಸ್ಯ ಬುಧ್ನೇ-ಅಹ್ನಃ ಮೂಲೇ**—ಸತ್ಯಾತ್ಮಕವಾದ ಅಹಸ್ಸಿನ ಮೂಲಭಾಗದಲ್ಲಿ ಎಂದರ್ಥ. ಹಿಂದೆ ಉಷಸ್ಸಿನ ಪಥವನ್ನು ತಿಳಿಸುವಾಗ ಆ ಸಂದರ್ಭದಲ್ಲಿ ಋತದ ಪಥವೇನೆಂದು ತಿಳಿಸಿದೆ. ಅಂತಹ ಸತ್ಯಾತ್ಮಕವಾದ ಋತದ ಬುಧ್ನವೆಂದರೆ ಅದರ ಮೂಲವೆಂದರ್ಥಮಾಡಬೇಕು.

ಬುಧ್ನಶಬ್ದಕ್ಕೆ ಋಕ್ಸಂಹಿತೆಯಲ್ಲಿ ಸಾಧಾರಣವಾಗಿ ಮೂಲ, ಆಧಾರ ಇತ್ಯಾದಿಯಾಗಿ ಅರ್ಥಮಾಡಿದ್ದಾರೆ. ಮತ್ತು ಕೆಲವೆಡೆಯಲ್ಲಿ ಅಂತರಿಕ್ಷಪರ್ಯಾಯವಾಗಿಯೂ ಪ್ರಯೋಗಿಸಿದೆ. ಆದರೆ ಅಂತರಿಕ್ಷಪರ್ಯಾಯವಾಗಿ ಉಪಯೋಗಿಸುವಾಗಲೂ ಸಹಬದ್ಧಾ ಅಸ್ಮಿನ್, ಧೃತಾ ಆಪಃ-ನೀರನ್ನು ಹಿಡಿದು ನಿಲ್ಲಿಸಿಕೊಳ್ಳುವುದರಿಂದ ಎಂದರೆ ನೀರಿಗೆ ಆಧಾರವಾಗಿರುವುದರಿಂದ ಅಂತರಿಕ್ಷಕ್ಕೆ ಬುಧ್ನವೆಂದು ಹೆಸರು. (ನಿ. ೧೦-೪೪) ಎಂದು ನಿರುಕ್ತಕಾರರ ನಿರ್ವಚನವಿದೆ.

**ಇಂದ್ರಾಯ ಗಿರೋ ಅನಿಶಿತಸರ್ಗಾ ಅಪಃ ಪ್ರೇರಯಂ ಸಗರಸ್ಯ ಬುಧ್ನಾತ್ ॥**

(ಋ. ಸಂ. ೧೦-೮೯-೪)

ಎಂಬಲ್ಲಿ **ಸಗರಸ್ಯ ಬುಧ್ನಾತ್** ಎಂದರೆ ಅಂತರಿಕ್ಷಕ್ಕೇ ಆಧಾರಭೂತವಾದದ್ದು. ಅಂತರಿಕ್ಷದ ಗಹನವಾದ ಮೂಲ ಪ್ರದೇಶವೆಂದರ್ಥವೆಂದು ತಿಳಿಸಿದೆ. ಪ್ರಕೃತವಾದ ಋಕ್ಕಿನಲ್ಲಿಯೂ ಇದೇ ಅರ್ಥವನ್ನು ಮಾಡಬಹುದು.

**ಮಾಯಾ**—ಈ ಪದಕ್ಕೆ ಇರತಕ್ಕ ವಿಶೇಷಾರ್ಥಗಳನ್ನು ಹಿಂದೆ ಇದೇ ಭಾಗದಲ್ಲಿ ತಿಳಿಸಿದೆ. ಉಷಸ್ಸು ಮಿತ್ರಾವರುಣಾದಿಗಳ ಸ್ವಸ್ವವಾದುದರಿಂದ ಪ್ರಕೃತದಲ್ಲಿ ಅವರ ಶಕ್ತಿದ್ಯೋತಕವಾದ ಪ್ರಭಾರೂಪಳೆಂದು ಹೇಳಬಹುದು.

---

## ಅರವತ್ತೆರಡನೆಯ ಸೂಕ್ತವು.

### ಸಾಯಣಭಾಷ್ಯಂ

**ಇಮಾ ಉ ವಾಮಿತ್ಯಷ್ಟಾದಶರ್ಚಂ ನವಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ಇಮಾ ಉ ದ್ವ್ಯೂನೈಂದ್ರಾವರುಣಬಾರ್ಹಸ್ಪತ್ಯಪೌಷ್ಣಸಾವಿತ್ರಸೌಮ್ಯಮೈತ್ರಾವರುಣಾಸ್ತ್ರೃಚಾ ಅಂತ್ಯೋ ಜಮದಗ್ನ್ಯೃಷೋ ವಾ ಚತುರ್ಥ್ಯಾದ್ಯಾ ಗಾಯತ್ರ್ಯ ಇತಿ । ಕೃತ್ಸ್ನಸ್ಯ ವಿಶ್ವಾಮಿತ್ರ ಋಷಿರಂತ್ಯಸ್ಯ ತೃಚಸ್ಯ ಜಮದಗ್ನಿರ್ವಾ । ಆದ್ಯಾಸ್ತಿಸ್ರಸ್ತ್ರಿಷ್ಟುಭಃ ಶಿಷ್ಟಾಃ ಪಂಚದಶ ಗಾಯತ್ರ್ಯಃ । ಪ್ರಥಮಸ್ಯೇಂದ್ರಾವರುಣೌ ದೇವತಾ ದ್ವಿತೀಯಸ್ಯ ಬೃಹಸ್ಪತಿಸ್ತೃತೀಯಸ್ಯ ಪೂಷಾ ಚತುರ್ಥಸ್ಯ ಸವಿತಾ ಪಂಚಮಸ್ಯ ಸೋಮಃ ಷಷ್ಠಸ್ಯ ಮಿತ್ರಾವರುಣೌ ॥ ಅಭಿಪ್ಲವಿಕೇಷೂಕ್ಥ್ಯೇಷು ತೃತೀಯಸವನೇ ಸ್ತೋಮವೃದ್ಧೌ ಸತ್ಯಾಂ ಸ್ವಸ್ವಶಸ್ತ್ರೇ ಹೋತ್ರಕಾ ಅಂತ್ಯಸೂಕ್ತಮವಶೇಷ್ಯ ಸ್ತೋಮಾಭಿಶಂಸನಾರ್ಥಂ ತೃಚಾದಿಸಂಖ್ಯಾ ಋಚ ಆವಪೇಯುಃ । ತತ್ರ ಮೈತ್ರಾವರುಣಸ್ಯಾವಾಪಾರ್ಥಮಾದ್ಯಸ್ತ್ರೃಚಃ । ಸೂತ್ರಿತಂ ಚ । ಇಮಾ ಉ ವಾಂ ಭೃಮಯೋ ಮನ್ಯಮಾನಾ ಇತಿ ತಿಸ್ರಃ । ಆ. ೭-೯ । ಇತಿ ॥**

CC-0. Jangamwadi Math Collection. Digitized by eGangotri

ಅನುವಾದವು—**ಇಮಾ ಉ ವಾಂ** ಎಂಬ ಈ ಸೂಕ್ತವು ಐದನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಹದಿನೆಂಟು ಋಕ್ಕುಗಳಿರುವುವು. ಅನುಕ್ರಮಣಿಕೆಯಲ್ಲಿ—**ಇಮಾ ಉ ದ್ವ್ಯೂನ್ಯೈಂದ್ರಾವರುಣಬಾರ್ಹಸ್ಪತ್ಯಪೌಷ್ಣಸಾವಿತ್ರಸೌಮ್ಯಮೈತ್ರಾವರುಣಾಸ್ತ್ರ್ಯೃಚಾ ಅಂತ್ಯೋ ಜಮದಗ್ನ್ಯೃಷೇರ್ವಾ ಚತುರ್ಥ್ಯಾದ್ಯಾ ಗಾಯತ್ರ್ಯಃ** ಎಂದು ಹೇಳಿರುವುದು. ಈ ಸೂಕ್ತಕ್ಕೆಲ್ಲಾ ವಿಶ್ವಾಮಿತ್ರನು ಋಷಿಯು; ಕೊನೆಯ ಮೂರು ಋಕ್ಕುಗಳಿಗೆ ವಿಶ್ವಾಮಿತ್ರನು ಅಥವಾ ಜಮದಗ್ನಿಯು ಋಷಿಯು. ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳು ತ್ರಿಷ್ಟುಪ್ ಛಂದಸ್ಸು; ಉಳಿದ ಹದಿನೈದು ಋಕ್ಕುಗಳು ಗಾಯತ್ರೀಛಂದಸ್ಸು. ಮೊದಲನೆಯ ತೃಚಕ್ಕೆ ಎಂದರೆ ಮೂರು ಋಕ್ಕುಗಳಿಗೆ (೧-೩ ಋಕ್ಕುಗಳಿಗೆ) ಇಂದ್ರಾವರುಣರು ದೇವತೆಗಳು; ಎರಡನೆಯ ತೃಚಕ್ಕೆ (೪-೬ ಋಕ್ಕುಗಳು) ಬೃಹಸ್ಪತಿಯೂ, ಮೂರನೆಯ ತೃಚಕ್ಕೆ (೭-೯) ಪೂಷನೂ, ನಾಲ್ಕನೆಯ ತೃಚಕ್ಕೆ ೧೦-೧೨) ಸವಿತೃವೂ, ಐದನೆಯ ತೃಚಕ್ಕೆ (೧೩-೧೫) ಸೋಮನೂ, ಆರನೆಯ ತೃಚಕ್ಕೆ (೧೬-೧೮) ಮಿತ್ರಾವರುಣರೂ ದೇವತೆಗಳು. ಅಭಿಪ್ಲವ ಯಾಗದ ಉಕ್ಥ್ಯಸಂಬಂಧವಾದ ತೃತೀಯಸವನದಲ್ಲಿ ಹೋತೃವರ್ಗದ ಋತ್ವಿಕ್ಕುಗಳು ತಮ್ಮ ತಮ್ಮ ಶಸ್ತ್ರಮಂತ್ರಗಳನ್ನು ಪಠಿಸುವಾಗ ಸ್ತೋಮವೃದ್ಧಿಗಾಗಿ ಪಠಿಸುವ ಆವಪನಋಕ್ಕುಗಳಿಗಾಗಿ ಈ ಕೊನೆಯ ಸೂಕ್ತದ ಸಂಬಂಧಪಟ್ಟ ತೃಚಗಳನ್ನು ಪಠಿಸಬೇಕೆಂದೂ, ಮೈತ್ರಾವರುಣನೆಂಬ ಋತ್ವಿಜನು ಮೊದಲನೆಯ ಮೂರು ಋಕ್ಕುಗಳನ್ನು ಆವಾಪಮಂತ್ರಗಳಿಗಾಗಿ ಪಠಿಸಬೇಕೆಂದೂ ಆಶ್ವಲಾಯನಶ್ರೌತಸೂತ್ರದ—**ಇಮಾ ಉ ವಾಂ ಭೃಮಯೋ ಮನ್ಯಮಾನಾ ಇತಿ ತಿಸ್ರಃ** ಎಂಬ ಸೂತ್ರದಿಂದ (ಆ. ೭-೯) ವಿವೃತವಾಗಿರುವುದು.

---

॥ ಓಂ ॥

**ಸೂಕ್ತ—೬೨**

ಮಂಡಲ—೩ ॥ ಅನುವಾಕ—೫ ॥ ಸೂಕ್ತ—೬೨ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೯, ೧೦, ೧೧ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೮ ॥

ಋಷಿಃ—೧-೧೫. ವಿಶ್ವಾಮಿತ್ರಃ । ೧೬-೧೮. ವಿಶ್ವಾಮಿತ್ರೋ ಜಮದಗ್ನಿರ್ವಾ ॥

ದೇವತಾ—೧-೩. ಇಂದ್ರಾವರುಣೌ । ೪-೬. ಬೃಹಸ್ಪತೀ । ೭-೯. ಪೂಷಾ । ೧೦-೧೨. ಸವಿತಾ । ೧೩-೧೫. ಸೋಮಃ । ೧೬-೧೮. ಮಿತ್ರಾವರುಣೌ ॥

ಛಂದಃ—೧-೩. ತ್ರಿಷ್ಟುಪ್. । ೪-೧೮. ಗಾಯತ್ರೀ ॥

---

ಸಂಹಿತಾಪಾಠಃ

**ಇಮಾ ಉ ವಾಂ ಭೃಮಯೋ ಮನ್ಯಮಾನಾ ಯುವಾವತೇ ನ ತುಜ್ಯಾ ಅಭೂವನ್ ।**

CC-0. Jangamwadi Math Collection. Digitized by eGangotri

ಕ್ವ೧ತ್ಯದಿಂದ್ರಾವರುಣಾ ಯಶೋ ವಾಂ ಯೇನ ಸ್ಮಾ ಸಿನಂ ಭರಥಃ ಸಖಿಭ್ಯಃ ॥ ೧ ॥

ಪದಪಾಠಃ

ಇಮಾಃ । ಊಂ ಇತಿ । ವಾಂ । ಭೃಮಯಃ । ಮನ್ಯಮಾನಾಃ । ಯುವಾsವತೇ । ನ । ತುಜ್ಯಾಃ । ಅಭೂವನ್ ।

ಕ್ವ । ತ್ಯತ್ । ಇಂದ್ರಾವರುಣಾ । ಯಶಃ । ವಾಂ । ಯೇನ । ಸ್ಮ । ಸಿನಂ । ಭರಥಃ । ಸಖಿsಭ್ಯಃ ॥ ೧ ॥

ಸಾಯಣಭಾಷ್ಯಂ

ಹೇ ಇಂದ್ರಾವರುಣೌ ವಾಂ ಯುವಯೋಃ ಸಂಬಂಧಿನ್ಯೋ ಮನ್ಯಮಾನಾ ಬಲಿಭಿಃ ಶತ್ರುಭಿ-ರಭಿಮನ್ಯಮಾನಾ ಅತ ಏವ ಭೃಮಯೋ ಭ್ರಮಣಶೀಲಾ ಇಮಾಃ ಪ್ರಜಾಃ । ಉಃ ಪೂರಣಃ । ಯುವಾ-ವತೇ । ತೃತೀಯಾರ್ಥೇ ಚತುರ್ಥೀ । ಯೌವನವತಾ ಬಲಿನಾ ಶತ್ರುಣಾ ತುಜ್ಯಾ ಹಿಂಸ್ಯಾ ನಾಭೂವನ್ । ನ ಭವಂತು । ಅಪಿ ಚ ವಾಂ ಯುವಯೋಸ್ತ್ಯತ್ತಾದೃಶಂ ಯಶಃ ಕ್ವ ಕುತ್ರಾಸ್ತೇ । ಯೇನ ಯಶಸಾ ಸಖಿಭ್ಯೋsಸ್ಮಭ್ಯಂ ಸಿನ್ನಮನ್ನಂ ಭರಥಃ ಸ್ಮ ಪ್ರದಾತುಂ ಸಂಪಾದಯಥಃ । ತತ್ಕ್ವಾಸ್ತ ಇತ್ಯನ್ವಯಃ । ಯದ್ವಾ । ಹೇ ಇಂದ್ರಾವರುಣೌ ವಾಂ ಯುವಯೋಃ ಸಂಬಂಧಿನ್ಯ ಇಮಾ ಅಸ್ಮಾಭಿಃ ಕ್ರಿಯಮಾಣಾ ಭೃಮಯೋ ಯುವಾಂ ಪ್ರಾಪ್ತುಂ ಭ್ರಮಣಶೀಲಾ ಮನ್ಯಮಾನಾಃ । ಮನ್ಯತಿರರ್ಚತಿಕರ್ಮಾ । ಯುವಾ-ಮರ್ಚಂತ್ಯಸ್ತಾಃ ಸ್ತುತಯೋ ಯುವಾವತೇ ಯುವಾಭ್ಯಾಂ ಸದೃಶಾಯಾನ್ಯಸ್ಮೈ ದೇವಾಯ ನ ತುಜ್ಯಾಃ । ತುಜತಿರ್ದಾನಕರ್ಮಾರ್ಥಃ । ಪ್ರದೇಯಾ ಮಾ ಭೂವನ್ । ಶಿಷ್ಟಂ ಸಮಾನಂ ॥ ಭೃಮಯಃ । ಭ್ರಮು ಅನವಸ್ಥಾನೇ । ಭ್ರಮೇಃ ಸಂಪ್ರಸಾರಣಂ ಚೇತೀನ್ಪ್ರತ್ಯಯಃ ಸಂಪ್ರಸಾರಣಂ ಚ । ವ್ಯತ್ಯಯೇನಾಂ-ತೋದಾತ್ತತ್ವಂ । ಯುವಾವತೇ । ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಮಿತಿ ವತುಪ್ । ಅವಿಭಕ್ತಾವಪಿ ಯುವಾದೇಶಶ್ಛಾಂದಸಃ । ತುಜ್ಯಾಃ । ತುಜ ಹಿಂಸಾದಾನನಿಕೇತನೇಷು । ಅಘ್ನ್ಯಾದಯಶ್ಚೇತಿ ಯತ್ । ಯತೋsನಾವ ಇತ್ಯಾದ್ಯುದಾತ್ತತ್ವಂ । ಸಿನಂ । ಷಿಞ್ ಬಂಧನೇ । ಇಣ್ಷಿಞ್ಜಿದೀಙುಷ್ಯವಿಭ್ಯೋ ನಗಿತಿ ನಕ್ । ವ್ಯತ್ಯಯೇನಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ವಾಂ—ನಿಮಗೆ ಸೇರಿದವರೂ । ಮನ್ಯಮಾನಾಃ—ಶತ್ರುಗಳಿಂದ ಎದುರಿಸಲ್ಪಟ್ಟವರೂ । ಭೃಮಯಃ—(ಆದುದರಿಂದಲೆ) ದಿಕ್ಕೆಟ್ಟು ಪರಿಭ್ರಮಿಸುವವರೂ ಆದ । ಇಮಾಃ—ಈ ಪ್ರಜೆಗಳು । ಯುವಾವತೇ—ಯುವಕನಾದ ಶತ್ರುವಿನಿಂದ । ತುಜ್ಯಾಃ—ಹಿಂಸಿತರಾಗಿ । ನ ಅಭೂವನ್—

CC-0. Jangamwadi Math Collection. Digitized by eGangotri

ಆಗದಿರಲಿ । ಯೇನ—ಯಾವ ಯಶಸ್ಸಿನಿಂದ । ಸಖಿಭ್ಯಃ—ನಿಮ್ಮ ಸಖರಾದ ನಮಗೆ । ಸಿನಂ—ಅನ್ನವನ್ನು । ಭರಥಃ ಸ್ಮ—ಸಂಪಾದಿಸಿಕೊಡುತ್ತೀರೋ (ಅಂತಹ) । ವಾಂ—ನಿಮ್ಮ । ತ್ಯತ್ ಯಶಃ—ಅದೇ ಕೀರ್ತಿಯು । ಕ್ವ—ಎಲ್ಲಿ ?

ಭಾವಾರ್ಥ

ಎಲೈ ಇಂದ್ರಾವರುಣರೇ, ನಿಮಗೆ ಸೇರಿದವರೂ ಶತ್ರುಗಳಿಂದ ಎದುರಿಸಲ್ಪಟ್ಟವರೂ, ಆದುದರಿಂದಲೇ ದಿಕ್ಕೆಟ್ಟು ಪರಿಭ್ರಮಿಸುವವರೂ ಆದ ಈ ಪ್ರಜೆಗಳು ಯುವಕನಾದ ಶತ್ರುವಿನಿಂದ ಹಿಂಸಿತರಾಗಿ ಆಗದಿರಲಿ. ಯಾವ ಯಶಸ್ಸಿನಿಂದ ನಿಮ್ಮ ಸಖರಾದ ನಮಗೆ ಅನ್ನವನ್ನು ಸಂಪಾದಿಸಿಕೊಡುತ್ತೀರೋ ಅಂತಹ ನಿಮ್ಮ ಕೀರ್ತಿಯು ಎಲ್ಲಿ ?

English Translation

Indra and Varuna, may these people who are relying upon you, and wandering about (in alarm), sustain no injury from a youthful (adversary); for where is that reputation (you enjoy) on account that you bestow sustenance on your friends.

ವಿಶೇಷವಿಷಯಗಳು

ಈ ಮಂತ್ರಕ್ಕೆ ಎರಡು ವಿಧವಾದ ಅರ್ಥವನ್ನು ಹೇಳಿದೆ. ಪೂರ್ವಾರ್ಧದಲ್ಲಿ, ಮೊದಲನೆಯ ಅನ್ವಯದಂತೆ, **ಇಮಾಃ ವಾಂ ಭೃಮಯಃ ತುಜ್ಯಾಃ ನ ಅಭೂವನ್** । ನಿಮಗೆ ಸೇರಿದವರೂ, ಶತ್ರುಗಳಿಂದ ಹಿಂಸಿತರಾಗಿ ಅಲೆಯುತ್ತಿರುವವರೂ ಸಹ ನಿಮ್ಮ ಅನುಗ್ರಹದಿಂದ ಇನ್ನು ಮುಂದೆ ಶತ್ರುಗಳಿಂದ ಹಿಂಸಿತರಾಗದೇ ಇರುವಂತಾಗಲಿ ಎಂಬ ಪ್ರಾರ್ಥನೆ ಇರುತ್ತದೆ. **ಮನ್ಯಮಾನಾ:, ಭೃಮಯಃ** ಎಂಬೆರಡು ಪದಗಳೂ ಸಹ **ಇಮಾಃ** ಎಂಬುದಕ್ಕೆ ವಿಶೇಷಣವಾಗಿರುತ್ತವೆ. ಮನ್ಯಮಾನಾಃ ಎಂಬುದಕ್ಕೆ ಶತ್ರುಗಳಿಂದ ಪ್ರತಿಭಟಸಲ್ಪಟ್ಟವರೆಂದೂ, ಭೃಮಯಃ ಎಂದರೆ ದಿಕ್ಕೆಟ್ಟು ಅಲೆಯುತ್ತಿರುವವರೆಂದೂ ಅರ್ಥ. ಯುವಾವತೇ ಎಂಬ ಪದವು ಚತುರ್ಥೀವಿಭಕ್ತ್ಯಂತವಾಗಿದ್ದರೂ ಅದಕ್ಕೆ ತೃತೀಯಾರ್ಥವನ್ನೇ ಹೇಳಬೇಕು. **ಯೌವನವತಾ ಬಲಿನಾ ಶತ್ರುಣಾ** । ಯುವಕನೂ ಬಲಶಾಲಿಯೂ ಆದ ಶತ್ರುವಿನಿಂದ ನ ತುಜ್ಯಾಃ ಹಿಂಸಿತರಾಗದಂತಾಗಲಿ ಎಂದು ತಾತ್ಪರ್ಯ. ಎರಡನೆಯ ಅನ್ವಯದಂತೆ,

> **ಯುವಯೋಃ ಸಂಬಧಿನ್ಯಃ ಇಮಾಃ ಅಸ್ಮಾಭಿಃ ಕ್ರಿಯಮಾಣಾಃ ಭೃಮಯಃ ಯುವಾಂ ಪ್ರಾಪ್ತುಂ ಭ್ರಮಣಶೀಲಾಃ ಮನ್ಯಮಾನಾಃ ಅರ್ಚಂತ್ಯಸ್ತಾಃ ಸ್ತುತಯೋ ಯುವಾವತೇ ಯುವಾಭ್ಯಾಂ ಸದೃಶಾಯಾನ್ಯಸ್ಮೈದೇವಾಯ ನ ತುಜ್ಯಾಃ ನ ಪ್ರದೇಯಾಃ ।**

ನಮ್ಮಿಂದ ನೆರವೇರಿತವಾದ ಈ ಕರ್ಮಗಳೂ ಮತ್ತು ಸ್ತುತಿಗಳೂ, ನಿಮ್ಮನ್ನಲ್ಲದೇ ನಿಮ್ಮಂತಿರುವ ಇತರ ಯಾವ ದೇವತೆಗಳಿಗೂ ಸೇರದಿರಲಿ ಎಂಬ ಪ್ರಾರ್ಥನೆಯಾಗುತ್ತದೆ ಇದರಂತೆ, **ಇಮಾಃ, ಭೃಮಯಃ** ಎಂಬೆರಡು ಪದಗಳೂ **ಮನ್ಯಮಾನಾಃ** ಎಂಬುದಕ್ಕೆ ವಿಶೇಷಣಗಳು. ನಿಮ್ಮನ್ನು ಸೇರಲು ತವಕಪಡುತ್ತಿರುವ ಸ್ತುತ್ಯಾದಿ ಕರ್ಮಗಳು ಎಂದರ್ಥ. ತುಜ್ಯಾಃ ಎಂಬುದು ದಾನಾರ್ಥಕವು. **ನ ತುಜ್ಯಾಃ ನ ಪ್ರದೇಯಾಃ** । ಎಂದು ತಾತ್ಪರ್ಯ.

CC-0. Jangamwadi Math Collection. Digitized by eGangotri

**ಭೃಮಯಃ**— **ಭ್ರಮಣಶೀಲಾಃ** | ಸಾಧಾರಣವಾಗಿ ಸಂಚಾರಾತ್ಮಕವಾದ ಕ್ರಿಯೆಯುಳ್ಳ ವಸ್ತುವಿಗೆ ಈ ಪದವು ವಿಶೇಷಣವಾಗಿರುತ್ತದೆ ಅಥವಾ ಅಂತಹ ಕ್ರಿಯೆಯನ್ನು ತೋರಿಸುವ ವಸ್ತುವಿಗೆ ಪರ್ಯಾಯ ಪದವಾಗಿರುತ್ತದೆ. ಉದಾಹರಣೆಗೆ—

**ಧಾರಾವರಾ ಮರುತೋ ಧೃಷ್ಣ್ವೋಜಸೋ ಮೃಗಾ ನ ಭೀಮಾಸ್ತವಿಷೀಭಿರರ್ಚಿನಃ |**
**ಅಗ್ನಯೋ ನ ಶುಶುಚಾನಾ ಋಜೀಷಿಣೋ ಭೃಮಿಂ ಧಮಂತೋ ಅಪ ಗಾ ಅವೃಣ್ವತ ||**

(ಋ. ಸಂ. ೨-೩೪-೧)

ಎಂಬಲ್ಲಿ **ಭ್ರಾಮ್ಯಂತಂ ಮೇಘಂ** | ಸಂಚಾರಾತ್ಮಕವಾದ ಮೇಘವೆಂದರ್ಥಮಾಡಿದೆ. ವೃಕ್ಷಾದಿಗಳನ್ನೆಲ್ಲಾ ಚಲಿಸುವಂತೆ ಮಾಡುವುವೂ, ಭಯಂಕರವೂ, ಪ್ರಕಾಶಮಾನವೂ ಆದ ಮರುತ್ತುಗಳು ಅಲೆದಾಡುತ್ತಿರುವ ಮೇಘಗಳನ್ನು ಉದಕಾರ್ಥವಾಗಿ ಇನ್ನೂ ಅಧಿಕವಾದ ವೇಗದಿಂದ ಸಂಚರಿಸುವಂತೆ ಮಾಡಿದುವು ಎಂಬಲ್ಲಿ ಚಲನದ ವೇಗವೂ ಸಹ ಸೂಚಿತವಾಗಿದೆ. ಈ ಪದಕ್ಕೆ ಇದೇ ಸನ್ನಿವೇಶದಲ್ಲಿ ತಾತ್ಪರ್ಯವನ್ನು ಹೇಳುವಾಗ Max Muller ಎಂಬ ಪಂಡಿತನು ತನ್ನ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾನೆ.

**ಭೃಮಿ** Seems to me a name of the cloud, driven about by the wind. The Taithiriyas read **ಭೃಮಿಂ** and Sayana explains it by **ಮೇಘಂ ಧಮಂತಶ್ಚಾಲಯಂತಃ.** In most passages, no doubt, **ಭೃಮಿ** means quick, fresh and is opposed to **ರಧ್ರ**, (೪-೩೨-೨ ; ೭-೫೬-೨೦) In I. 31-17, as applied to **ಅಗ್ನಿ** it may mean quick. But in our passage, that meaning is impossible, and I prefer the tradional meaning of the cloud. Sayana's explanation according to which **ಭೃಮಿ** is a musical instrument, may rest on some traditional authority.

[ Sacred Books of the East. Vol. 32. P. 288 ]

ಈ ಮಂತ್ರದಲ್ಲಿ (೨-೩೧ ೪) ಭೃಮಿಃಯೆಂದರೆ ಮೇಘವೆಂದೇ ಅರ್ಥವಾಗಬೇಕು. ಅದರಲ್ಲಿಯೂ ಮರುತ್ತಿನಿಂದ ಚದುರಿಸಲ್ಪಟ್ಟ ಮೇಘವೇ ಆಗಿರಬೇಕು. ಸಾಯಣರೂ ಇದೇ ಅಭಿಪ್ರಾಯವನ್ನು ಸೂಚಿಸಿದ್ದಾರೆ. ಅನೇಕ ಸಂದರ್ಭಗಳಲ್ಲಿ ಚಲನದ ವೇಗವನ್ನೂ ಸಹ ಸೂಚಿಸುತ್ತದೆ ಅಥವಾ ನೂತನವಾದುದು ಎಂಬ ತಾತ್ಪರ್ಯವೂ ಸಾಧುವಾಗಬಹುದು. ಉದಾಹರಣೆಗೆ,

**ಇಮೇ ರಧ್ರಂ ಚಿನ್ಮರುತೋ ಜುನಂತಿ ಭೃಮಿಂ ಚಿದ್ಯಥಾ ವಸವೋ ಜುಷಂತ ||**

(ಋ. ಸಂ. ೭-೫೬-೨೦)

ಎಂಬಲ್ಲಿ ರಧ್ರಶಬ್ದಕ್ಕೆ ಇರತಕ್ಕ ಅರ್ಥಕ್ಕೆ ವಿರುದ್ಧವಾದ ಅರ್ಥವನ್ನು ಭೃಮಿಶಬ್ದವು ಸೂಚಿಸುತ್ತದೆ. ರಧ್ರಪದಕ್ಕೆ ಸಮೃದ್ಧನಾದ ಪುರುಷನೆಂದೂ ಭೃಮಿಶಬ್ದಕ್ಕೆ ತದ್ವಿರುದ್ಧಸ್ಥಿತಿಯುಳ್ಳ ಪುರುಷನೆಂದೂ ಅರ್ಥ. ಎಂದರೆ, ರಧ್ರನು ಸುಸ್ಥಿತನಾಗಿರುತ್ತಾನೆ. ದರಿದ್ರನು ಅಲೆಯಲೇ ಬೇಕು. ನಿತ್ಯಭ್ರಮಣವು ನಿಯತವಾದ ಕಾರ್ಯವೇ ಆದುದರಿಂದ ಅಂತಹ ಗುಣವುಳ್ಳ ದರಿದ್ರಪುರುಷನು ಭೃಮಿಶಬ್ದವಾಚ್ಯನೇ ಆಗಿದ್ದಾನೆ. ಕೆಲವೆಡೆಗಳಲ್ಲಿ ಸಾಯಣರು

CC-0. Jangamwadi Math Collection. Digitized by eGangotri

ಈ ಪದಕ್ಕೆ ಗಾನಸಾಧನವಾದ ವಾದ್ಯವಿಶೇಷವೆಂದೂ ಅರ್ಥಮಾಡಿದ್ದಾನೆ ವೇಗವಾದ ಚಲನವುಳ್ಳ ಅಶ್ವಾದಿಗಳಿಗೂ ಇದು ಪರ್ಯಾಯಪದವಾಗಿರುತ್ತದೆ. ಇತ್ಯಾದಿಯಾಗಿ Max-Muller ಪಂಡಿತನು ತನ್ನ ಅಭಿಪ್ರಾಯವನ್ನು ಸೂಚಿಸಿದ್ದಾನೆ. ಪ್ರಕೃತವಾದ ಋಕ್ಕಿನಲ್ಲಿ ಭೃಮಿ ಶಬ್ದಕ್ಕೆ ಭಕ್ತನಾದ **ಮಾನವ** ಅಥವಾ **ಸ್ತುತಿ** ಎಂಬೆರಡರ್ಥ ಮಾಡುವಾಗಲೂ ಸಹ ಸಂಚಲನವೇ ಮುಖ್ಯಗುಣವೆಂದು ತೋರಿಸುತ್ತದೆ. ಮಾನವನೆಂದರ್ಥಮಾಡಿದರೆ, ಆಗ ಶತ್ರುವಿನಿಂದ ಓಡಿಸಲ್ಪಟ್ಟು ದಿಕ್ಕೆಟ್ಟು ಪರಿಭ್ರಮಿಸುತ್ತಿರುವವನೆಂದೂ ಮತ್ತು ಸ್ತುತಿಯೆಂದರ್ಥಮಾಡಿರೆ ಆಗ ದೇವತೆಯನ್ನು ವೇಗದಿಂದ ಹೋಗಿಸೇರಲು ತವಕದಿಂದ ಭ್ರಮಿಸುತ್ತಿರುವುದೆಂದೂ ಅರ್ಥವಾಗುತ್ತದೆ.

**ಮನ್ಯಮಾನಾಃ—ಮನ್ಯತೇ** । ಎಂಬ ಪದವನ್ನು ನಿರುಕ್ತಕಾರರು ಕಾಂತಿಕರ್ಮನಾಮಗಳಲ್ಲೂ (ನಿ. ೨-೬) ಮತ್ತು ಅರ್ಚತಿಕರ್ಮನಾಮಗಳಲ್ಲೂ (ನಿ. ೩-೧೪) ಪಠಿಸಿದ್ದಾರೆ. ಪ್ರಕೃತದಲ್ಲಿ ಸ್ತುತಿಯೆಂದರ್ಥಮಾಡಿದರೆ ಕಾಂತಿಯುತವಾದ ಸ್ತುತಿಯೆಂದಾಗಲಿ ಅಥವಾ ಪೂಜಾಯೋಗ್ಯವಾದ ಸ್ತುತಿಯೆಂದಾಗಲಿ ಅರ್ಥವಾಗುತ್ತದೆ. ಮೊದಲನೆಯ ಅನ್ವಯದಂತೆ ಅಭಿಮನ್ಯಮಾನಾಃ ಎಂದರೆ ಶತ್ರುಗಳಿಂದ ಹೊಡೆದೋಡಿಸಲ್ಪಟ್ಟವರು ಎಂದರ್ಥ.

**ಸಿನಂ**—ಸಿನ ಶಬ್ದವು ಅನ್ನನಾಮಗಳಲ್ಲಿ ಪಠಿತವಾಗಿದೆ. (ನಿ. ೨-೭) **ಸುಮಂಗಲಂ ಸಿನವದಸ್ತು ಸಾತಂ** (ಋ. ಸಂ. ೧೦-೧೦೨-೧೧) ಇತ್ಯಾದಿ ಸ್ಥಳಗಳಲ್ಲಿ ಹೇಳುವಂತೆ ಇಲ್ಲಿಯೂ ಅನ್ನವೆಂದೇ ಅರ್ಥ. ಕೆಲವು ಸಂದರ್ಭಗಳಲ್ಲಿ ಪ್ರತಿಫಲವೆಂದೂ ಆಗುತ್ತದೆ. ಆದರೆ ಋಕ್ಸಂಹಿತೆಯಲ್ಲಿರುವ ನಾಲ್ಕೈದು ಸಂದರ್ಭಗಳಲ್ಲೂ ಅನ್ನಾರ್ಥದಲ್ಲಿಯೇ ಈ ಪದದ ಪ್ರಯೋಗವಿದೆ.

—....—

ಸಂಹಿತಾಪಾಠಃ

ಅಯಮು ವಾಂ ಪುರುತಮೋ ರಯೀಯಞ್ಛಶ್ವತ್ತಮಮವಸೇ ಜೋಹವೀತಿ ।
ಸಜೋಷಾವಿಂದ್ರಾವರುಣಾ ಮರುದ್ಭಿರ್ದಿವಾ ಪೃಥಿವ್ಯಾ ಶೃಣುತಂ ಹವಂ ಮೇ ॥ ೨ ॥

ಪದಪಾಠಃ

ಅಯಂ । ಊಂ ಇತಿ । ವಾಂ । ಪುರುಽತಮಃ । ರಯಿಽಯನ್ । ಶಶ್ವತ್ಽತಮಂ । ಅವಸೇ । ಜೋಹವೀತಿ ।
ಸಽಜೋಷೌ । ಇಂದ್ರಾವರುಣಾ । ಮರುತ್ಽಭಿಃ । ದಿವಾ । ಪೃಥಿವ್ಯಾ । ಶೃಣುತಂ । ಹವಂ । ಮೇ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರಾವರುಣೌ ರಯೀಯನ್ ರಯಿಮಾತ್ಮನ ಇಚ್ಛನ್ನಯಮು ಪುರುತಮೋ ವೈದಿಕಕರ್ಮಪ್ರವೃತ್ತತಯಾತಿಶಯೇನ ಪುರುರ್ಮಹಾನ್ಯಜಮಾನೋಽವಸೇ ರಕ್ಷಣಾಯಾನ್ನಾಯ ವಾ ವಾಂ ಯುವಾಂ



CC-0. Jangamwadi Math Collection. Digitized by eGangotri

ಶಶ್ವತ್ತಮಂ ಸರ್ವದಾ ಜೋಹವೀತಿ । ಭೃಶಮಾಹ್ವಯತಿ । ಮರುದ್ಭಿರ್ದೇವವಿಶೇಷೈರ್ದಿವಾ ಪೃಥಿವ್ಯಾ ಚ ಸಜೋಷಾ ಸಂಗಚ್ಛಂತಾ ಯುವಾಂ ಮೇ ಮಮ ಹವಂ ಯುಷ್ಮದೀಯಮಾಹ್ವಾನಂ ಶೃಣುತಂ ॥ ಪುರುತಮಃ । ಷಮುಪೋ ವ್ಯತ್ಯಯೇನಾದ್ಯುದಾತ್ತತ್ವಂ । ಜೋಹವೀತಿ । ಹ್ವಯತೇರ್ಯಙ್‌ಲುಕ್ಯಭ್ಯಸ್ತಸ್ಯ ಚೇತಿ ಸಂಪ್ರಸಾರಣೇ ರೂಪಂ । ದಿವಾ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ಪೃಥಿವ್ಯಾ । ಉದಾತ್ತಯಣೋ ಹಲ್ಪೂರ್ವಾದಿತ್ಯುದಾತ್ತತ್ವಂ । ಹವಂ । ಹ್ವಯತೇರ್ಭಾವೇಽನುಪಸರ್ಗಸ್ಯೇತ್ಯಪ್ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವಂ ॥

## ಪ್ರತಿಪದಾರ್ಥ

ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ರಯಿಯೇನ್—ಧನಾರ್ಥಿಯಾಗಿ । ಅಯಮು ಪುರುತಮಃ—ಕರ್ಮಾಚರಣೆಯಿಂದ ಶ್ರೇಷ್ಠನಾದ ಈ ಯಜಮಾನನು । ಅವಸೇ—ರಕ್ಷಣೆಗಾಗಿ । ವಾಂ—ನಿಮ್ಮನ್ನು । ಶಶ್ವತ್ತಮಂ—ಯಾವಾಗಲೂ । ಜೋಹವೀತಿ—ಕರೆಯುತ್ತಾನೆ । ಮರುದ್ಭಿಃ—ಮರುತ್ತುಗಳೊಡನೆಯೂ । ದಿವಾ—ದ್ಯುಲೋಕಾಧಿದೇವತೆಯೊಡನೆಯೂ । ಪೃಥಿವ್ಯಾ ಚ—ಪೃಥಿವಿಯೊಡನೆಯೂ । ಸಜೋಷಾ—ಸೇರಿಕೊಂಡಿರುವ ನೀವು । ಮೇ—ನನ್ನ । ಹವಂ—ಸ್ತುತಿರೂಪವಾದ ಆಹ್ವಾನವನ್ನು । ಶೃಣುತಂ—ಕೇಳಿರಿ.

## ಭಾವಾರ್ಥ

ಎಲೈ ಇಂದ್ರಾವರುಣರೇ, ಕರ್ಮಾಚರಣೆಯಿಂದ ಶ್ರೇಷ್ಠನಾದ ಈ ಯಜಮಾನನು ಧನಾರ್ಥಿಯಾಗಿಯೂ, ರಕ್ಷಣಾರ್ಥವಾಗಿಯೂ ನಿಮ್ಮನ್ನು ಯಾವಾಗಲೂ ಕರೆಯುತ್ತಾನೆ. ಮರುತ್ತುಗಳೊಡನೆಯೂ, ದ್ಯುಲೋಕಾಧಿದೇವತೆಯೊಡನೆಯೂ, ಪೃಥಿವಿಯೊಡನೆಯೂ ಸೇರಿಕೊಂಡಿರುವ ನೀವು ಸ್ತುತಿರೂಪವಾದ ನನ್ನ ಆಹ್ವಾನವನ್ನು ಕೇಳಿರಿ.

## English Translation

Most diligent (in pious rites) this (your worshipper), Indra and Varuna, desirous of wealth, incessantly invokes you for protection: associated with the Maruts, with heaven and earth, hear my invocation.

## ವಿಶೇಷವಿಷಯಗಳು

ರಯೀಯೇನ್—ರಯಿಂ ಆತ್ಮನ ಇಚ್ಛನ್ । ಧನವನ್ನು ಅಪೇಕ್ಷಿಸುವವನಾಗಿ ಎಂದು ಯಜಮಾನರ ಆಶಂಸೆಯನ್ನು ತಿಳಿಸಿದೆ.

ಪುರುತಮಃ—ವೈದಿಕಕರ್ಮಪ್ರವೃತ್ತತಯಾ ಅತಿಶಯೇನ ಪುರುಃ ಮಹಾನ್ । ವಿಧ್ಯುಕ್ತವಾದ ಯಜ್ಞಯಾಗಾದಿಕರ್ಮಗಳನ್ನು ನೆರವೇರಿಸುವುದರಿಂದ ಯಜಮಾನನು ಮಹತ್ತ್ವವನ್ನು ಸಂಪಾದಿಸುತ್ತಾನಾದುದರಿಂದ ಪುರುತಮಃ ಎಂಬ ವಿಶೇಷಣವಿದೆ. ಅತ್ಯಂತ ಮಹತ್ತ್ವವುಳ್ಳವನು ಎಂದಾಗಲಿ ಅಥವಾ ಪ್ರಭೂತವಾದ ಕರ್ಮವುಳ್ಳವನೆಂದಾಗಲಿ ಅರ್ಥ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಸ್ಮೇ ತದಿಂದ್ರಾವರುಣಾ ವಸು ಷ್ಯಾದಸ್ಮೇ ರಯಿರ್ಮರುತಃ ಸರ್ವವೀರಃ ।
ಅಸ್ಮಾನ್ವರೂತ್ರೀಃ ಶರಣೈರವಂತ್ವಸ್ಮಾನ್ಹೋತ್ರಾ ಭಾರತೀ ದಕ್ಷಿಣಾಭಿಃ ॥

ಪದಪಾಠಃ

ಅಸ್ಮೇ ಇತಿ । ತತ್ । ಇಂದ್ರಾವರುಣಾ । ವಸು । ಸ್ಯಾತ್ । ಅಸ್ಮೇ ಇತಿ । ರಯಿಃ । ಮರುತಃ । ಸರ್ವಽ-ವೀರಃ ।

ಅಸ್ಮಾನ್ । ವರೂತ್ರೀಃ । ಶರಣೈಃ । ಅವಂತು । ಅಸ್ಮಾನ್ । ಹೋತ್ರಾ । ಭಾರತೀ । ದಕ್ಷಿಣಾಭಿಃ ॥ ೩ ॥

ಸಾಯಣಭಾಷ್ಯಂ

ಹೇ ಇಂದ್ರಾವರುಣಾವಸ್ಮೇ ಅಸ್ಮಾಸು ತದಭಿಲಷಿತಂ ತಾದೃಶಂ ವಸು ಧನಂ ಸ್ಯಾತ್ । ಭವತು । ಹೇ ಮರುತಃ ಸರ್ವವೀರಃ ಸರ್ವೇಷು ಕರ್ಮಸು ವೀರಃ ಸಮರ್ಥೋ ರಯಿಃ ಪುತ್ರಪೌತ್ರಯುಕ್ತಃ ಪಶು-ಸಂಘಃ । ಪಶವೋ ವೈ ರಯಿರಿತಿ ತೈತ್ತಿರೀಯಕಂ । ಸೋಽಸ್ಮೇ ಅಸ್ಮಾಕಂ ಭವತು । ವರೂತ್ರೀಃ ಸರ್ವೈಃ ಸಂಭಜನೀಯಾ ದೇವಪತ್ನ್ಯಃ ಶರಣೈಃ । ಶೃಣಂತಿ ಶೀತಾದಿಕ್ಲೇಶಮಿತಿ ಶರಣಾನಿ ಗೃಹಾಃ । ತೈರಸ್ಮಾನ-ವಂತು । ಹೋತ್ರಾ । ಹೂಯಂತೇಽಸ್ಯಾಂ ಹವೀಂಷೀತಿ । ಯದ್ವಾ । ಹೂಯತೇ ತತ್ರ ಪ್ರಾಣ ಇತಿ ಹೋತ್ರಾ ವಾಕ್ । ತಥಾ ಚ ಶ್ರುತಿಃ । ವಾಚಿ ಹಿ ಪ್ರಾಣಂ ಜುಹುಮಃ ಪ್ರಾಣೇ ವಾ ವಾಚಂ । ಕೌ. ಉ. ೨-೫ । ಇತಿ । ಯದ್ವಾ । ಹೋತ್ರೇತಿ ಯಜ್ಞನಾಮ । ಹೂಯತೇ ತತ್ರ ಹವಿರಿತಿ । ಯಜ್ಞಶ್ಚ ವಾಗುಚ್ಯತೇ। ವಾಚಂ ಯಚ್ಛಂತಿ ವಾಗ್ಘಿ ಯಜ್ಞಃ । ಐ. ಬ್ರಾ. ೫-೨೪ । ಇತಿ ಬ್ರಾಹ್ಮಣಂ । ತಾದೃಶೀ ಭಾರತೀ ಸರಸ್ವತೀ ದಕ್ಷಿಣಾಭಿರ್ಗೋರೂಪಾಭಿರ್ದಕ್ಷಿಣಾಭಿಃ । ಯದ್ವಾ । ಉದಾರಾಭಿರ್ವಾಗ್ಭಿರಸ್ಮಾನ್ ಪಾಲಯತು ॥ ವಸು ಷ್ಯಾದಿತ್ಯತ್ರ ಸಂಹಿತಾಯಾಂ ಪೂರ್ವಪದಾದಿತಿ ಷತ್ವಂ । ವರೂತ್ರೀಃ । ಗ್ರಸಿತಸ್ಕಭಿತೇತ್ಯಾದಿನಾ ಛಾಂದಸತ್ವೇನ ನಿಪಾತನಾದಿಷ್ಟಸಿದ್ಧಿಃ । ಹೋತ್ರಾ । ಹು ದಾನಾದನಯೋಃ । ಹುಯಾಮಾಶ್ರುಭಸಿಭ್ಯಸ್ತ್ರನ್ನಿತ್ಯಧಿ-ಕರಣೇ ತ್ರನ್ಪ್ರತ್ಯಯಃ ॥

ಪ್ರತಿಪದಾರ್ಥ

ಇಂದ್ರಾವರುಣಾ—ಎಲೈ ಇಂದ್ರಾವರುಣರೇ । ಅಸ್ಮೇ—ನಮಗೆ । ತತ್—ನಾವು ಇಷ್ಟಪಟ್ಟ । ವಸು—ಧನವು । ಸ್ಯಾತ್—ಒದಗಲಿ । ಮರುತಃ—ಎಲೈ ಮರುತ್ತುಗಳೇ । ಸರ್ವವೀರಃ—ಸರ್ವಸಮರ್ಥವಾದ । ರಯಿಃ—ಪುತ್ರಪೌತ್ರಯುಕ್ತವಾದ ಧನವು । ಅಸ್ಮೇ—ನಮಗೊದಗಲಿ । ವರೂತ್ರೀಃ—ಪೂಜ್ಯರಾದ ದೇವಪತ್ನಿಯರು । ಶರಣೈಃ—ವಾಸಕ್ಕೆ ಯೋಗ್ಯವಾದ ಗೃಹಗಳಿಂದ । ಅಸ್ಮಾನ್—ನಮ್ಮನ್ನು । ಅವಂತು—ರಕ್ಷಿಸಲಿ । ಹೋತ್ರಾ—ವಾಗ್ದೇವತೆಯೂ । ಭಾರತೀ-ಸರಸ್ವತಿಯೂ (ಅಥವಾ ವಾಗ್ರೂಪಳಾದ ಸರಸ್ವತಿಯು) । ದಕ್ಷಿಣಾಭಿಃ—ಗೋಸಂಪತ್ತು ಅಥವಾ ವಾಕ್ಸಂಪತ್ತುಗಳೊಂದಿಗೆ । ಅಸ್ಮಾನ್—ನಮ್ಮನ್ನು (ರಕ್ಷಿಸಲಿ).

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಇಂದ್ರಾವರುಣರೇ, ನಮಗೆ ನಾವು ಇಷ್ಟಪಟ್ಟ ಧನವು ಒದಗಲಿ. ಎಲೈ ಮರುತ್ತುಗಳೇ, ಸರ್ವ-ಸಮರ್ಥವಾದುದೂ, ಪುತ್ರಪೌತ್ರಯುಕ್ತವಾದುದೂ ಆದ ಧನವು ನಮಗೊದಗಲಿ. ಪೂಜ್ಯರಾದ ದೇವಪತ್ನಿಯರು ವಾಸಕ್ಕೆ ಯೋಗ್ಯವಾದ ಗೃಹಗಳಿಂದ ನಮ್ಮನ್ನು ರಕ್ಷಿಸಲಿ, ವಾಗ್ದೇವತೆಯೂ, ಸರಸ್ವತಿಯೂ ಗೋಸಂಪತ್ತು ಅಥವಾ ವಾಕ್ಸಂಪತ್ತುಗಳೊಂದಿಗೆ ನಮ್ಮನ್ನು ರಕ್ಷಿಸಲಿ.

English Translation

May there be to us, Indra and Varuna, such wealth (as we covet): may there be, Maruts, to us wealth (of cattle) and numerous descendants: may the delightful (wives of the gods) shelter us with dwellings : may Hotra, and Bharati (enrich) us with gifts.

ವಿಶೇಷವಿಷಯಗಳು

**ವರೂತ್ರೀಃ–ಸರ್ವೈಃ ಸಂಭಜನೀಯಾ ದೇವಪತ್ನ್ಯಃ**—ಸರ್ವರಿಗೂ ಪೂಜ್ಯರಾದ ಭಾರತ್ಯಾದಿ ದೇವ ಪತ್ನಿಯರು ಎಂದು ಅವರ ಪೂಜ್ಯತ್ವವನ್ನೂ ತಿಳಿಸಿದೆ. ಸಾಧಾರಣವಾಗಿ ರಕ್ಷಕರು ಎಂಬರ್ಥದಲ್ಲಿಯೇ ಈ ಪದದ ಪ್ರಯೋಗವು ಅಧಿಕವಾಗಿದೆ.

**ವರೂತ್ರೀಭಿಃ ಸುಶರಣೋ ನೋ ಅಸ್ತು ತ್ವಷ್ಟಾ ಸುದತ್ರೋ ವಿ ದಧಾತು ರಾಯಃ ॥**

(ಋ. ಸಂ. ೭-೩೪-೨೨)

ಇತ್ಯಾದಿ ಸ್ಥಳಗಳಲ್ಲಿ **ವರೂತ್ರೀಭಿಃ** ಎಂದರೆ **ಉಪದ್ರವಾಣಾಂ ವಾರಯಿತ್ರೀಭಿಃ ದೇವಪತ್ನೀಭಿಃ ।** ತೊಂದರೆಗಳನ್ನು ತಪ್ಪಿಸತಕ್ಕ ದೇವಪತ್ನಿಯರು ಎಂದರ್ಥ. ಆದರೆ,

**ಅಹಿರ್ಬುಧ್ನ್ಯ ಉತ ನಃ ಶೃಣೋತು ವರೂತ್ರ್ಯೇಕಧೇನುಭಿರ್ನಿ ಪಾತು ।**

(ಋ. ಸಂ ೭-೩೮-೫)

ಎಂಬಲ್ಲಿ **ವರುತ್ರೀ** ಶಬ್ದವು ವಾಗ್ದೇವಿಯ ಪರ್ಯಾಯಪದವಾಗಿದೆಯೆಂದು ತಿಳಿಸಿದೆ. ರಕ್ಷಕಳಾದ ವಾಗ್ದೇವಿಯೆಂದೂ ಹೇಳಬಹುದು. ಪ್ರಕೃತದಲ್ಲಿ ವರೂತ್ರೀಃ ಎಂದು ಬಹುವಚನಪ್ರಯೋಗವಿರುವುರಿಂದ ದೇವಪತ್ನಿಯರೆಂದು ಸಾಮಾನ್ಯವಾಗಿ ಹೇಳಬಹುದು.

**ಹೋತ್ರಾ ಭಾರತೀ** ಎಂಬ ಈ ಪದಗಳು ಪ್ರತ್ಯೇಕವಾದ ದೇವತಾವಿಶೇಷಗಳನ್ನು ನಿರ್ದೇಶಿಸುವುವೇ ಅಥವಾ **ಹೋತ್ರಾ** ಎಂಬ ವಿಶೇಷಣಯುಕ್ತವಾದ **ಭಾರತೀ** ಎಂದರ್ಥಮಾಡಬಹುದೇ ಎಂಬ ವಿಷಯವು ಭಾಷ್ಯಕಾರರಿಗೇ ಸಂಶಯಾಸ್ಪದವಾಗಿದೆ.

**ಹೋತ್ರಾ**—ಈ ಪದಕ್ಕೆ ಮೂರು ವಿಧವಾದ ಅರ್ಥವನ್ನು ಹೇಳಬಹುದು. ಮೊದಲನೆಯದಾಗಿ, **ಹೂಯಂತೇ ಅಸ್ಯಾಂ ಹವೀಂಷಿ** ಇತಿ—ಹವಿಸ್ಸುಗಳು ಅರ್ಪಿಸಲ್ಪಡುತ್ತವೆಯಾದುದರಿಂದ **ಹೋತ್ರಾ**

CC-0. Jangamwadi Math Collection. Digitized by eGangotri

ಎಂಬ ದೇವತಾವಿಶೇಷವಾಗಬಹುದು. (ಅಥವಾ ಇಂತಹ ಸ್ವರೂಪವುಳ್ಳ ಭಾರತಿಯಾಗಬಹುದು) **ಹೋತ್ರಾಃ ಸಂಯಾಜಯಂತಿ** (ಶ. ಬ್ರಾ. ೪-೨-೧-೩೨) ಇತ್ಯಾದಿ ಸ್ಥಳಗಳಲ್ಲಿ **ಹೋತ್ರಾಃ** ಎಂಬ ಪದಕ್ಕೆ ದೇವಪತ್ನೀಃ ಎಂದರ್ಥಮಾಡಿದೆ. **ದಿಶಃ ಸಪ್ತ ಹೋತ್ರಾಃ** (ಶ. ಬ್ರಾ. ೭-೪-೧-೨೦) ಇತ್ಯಾದಿ ಸನ್ನಿವೇಶಗಳಲ್ಲಿ ದಿಗ್ದೇವತೆಗಳೆಂದೂ ತಿಳಿಸಿದೆ. ಈ ವಿಷಯವನ್ನು ಮುಂದೆ ವಿವರಿಸಲಾಗುತ್ತದೆ. ಪ್ರಕೃತವಾದ ಋಕ್ಕಿನಲ್ಲಿ ದೇವತಾಪರ್ಯಾಯವಾದ ಅರ್ಥವನ್ನು ಮೊದಲು ತಿಳಿಸಿ ನಂತರ, ಎರಡನೆಯದಾಗಿ, **ಹೂಯತೇ ತತ್ರ ಪ್ರಾಣ ಇತಿ ಹೋತ್ರಾ ವಾಕ್ ।** ವಾಕ್ಕಿನಲ್ಲಿ ಹವಿಸ್ಸು ಅರ್ಪಿತವಾಗುವುದರಿಂದ ವಾಕ್ಕೇ ಹೋತ್ರಾಪದವಾಚ್ಯವಾಗಿದೆ. **ವಾಚಿ ಹಿ ಪ್ರಾಣಂ ಜುಹುಮಃ ಪ್ರಾಣೇ ವಾ ವಾಚಂ** ಎಂಬ ಶ್ರುತಿವಾಕ್ಯದ ಆಧಾರದ ಮೇಲೆ ಈ ಅರ್ಥವನ್ನು ಹೇಳಿದೆಯೆಂದು ತಿಳಿಸಿದ್ದಾರೆ. ಆದರೆ ಈ ಆಧಾರವಾವುದು ಎಂಬುದನ್ನು ತಿಳಿಸಿಲ್ಲ. ಮೂರನೆಯದಾಗಿ, **ಹೋತ್ರೇತಿ ಯಜ್ಞನಾಮ ಹೂಯತೇ ಅತ್ರ ಹವಿರಿತಿ ।** ಯಜ್ಞದಲ್ಲಿ ಹವಿಸ್ಸು ಅರ್ಪಿತವಾಗುವುದರಿಂದ ಯಜ್ಞವೂ ಸಹ ಹೋತ್ರಾಶಬ್ದವಾಚ್ಯವಾಗಿರುತ್ತದೆ. ಅಥವಾ ಯಜ್ಞವೂ ಸಹ **ವಾಕ್** ಎಂದೇ ಪ್ರಸಿದ್ಧವಾಗಿದೆ. ಹೇಗೆಂದರೆ,

**ವಾಚಂ ಯಚ್ಛಂತಿ । ವಾಗ್ಘ್ಯೈ ಯಜ್ಞಃ ।**

(ಐ. ಆ. ೫-೨೪)

ವಾಕ್ಕನ್ನು ನಿಯಮಿಸಿದರೆಂದರೆ ಯಜ್ಞವನ್ನೇ ನಿಯಮಿಸಿದಂತೆ. ಏತಕ್ಕೆಂದರೆ ವಾಕ್ಕೇ ಯಜ್ಞವೆಂಬ ತಾದಾತ್ಮ್ಯವಿರುವುದರಿಂದ ಇವೆರಡೂ ಅಭಿನ್ನಾತ್ಮಕವಾದ ಸ್ವರೂಪವುಳ್ಳವು ಎಂದು ವಾಕ್ಕಿಗೂ, ಯಜ್ಞಕ್ಕೂ ಇರುವ ಅಭೇದವನ್ನು ತಿಳಿಸಿದೆ. ಇದಲ್ಲದೇ, ಇನ್ನೂ ಕಲವು ಕಡೆಗಳಲ್ಲಿ **ವಾಕ್ಕಿಗೂ ಯಜ್ಞಕ್ಕೂ** ದಾಂಪತ್ಯಸಂಬಂಧವನ್ನು ತೋರಿಸಿ ಎರಡರ ಐಕ್ಯವನ್ನು ನಿರ್ದೇಶಿಸಿದೆ. ಮನಸ್ಸಿಗೂ, ವಾಕ್ಕಿಗೂ ಇರುವ ಸಂಬಂಧವೇ ಯಜ್ಞಕ್ಕೂ ವಾಕ್ಕಿಗೂ ಇರುತ್ತದೆ. ಇದೇ ಸಂಬಂಧವನ್ನು ಸೂಚಿಸಿ ಪ್ರಕೃತವಾದ ಋಕ್ಕಿನಲ್ಲಿ **ಹೋತ್ರಾ** ಎಂಬುದಕ್ಕೆ ವಾಗಾತ್ಮಕವಾದ ಯಜ್ಞವೆಂದು ಹೇಗೆ ಅರ್ಥಮಾಡಬಹುದೆಂದರೆ, ಮೊದಲು ಈ ಐಕ್ಯವು ಹೇಗಾಯಿತು ಎಂಬುದನ್ನು ತಿಳಿಯಬೇಕು. ಈ ಸಂಬಂಧ ಸ್ವರೂಪವು ಶತಪಥಬ್ರಾಹ್ಮಣದಲ್ಲಿ ವರ್ಣಿತವಾಗಿದೆ. ಈ ಕಥೆಯು ಮೊದಲು ಯಜ್ಞಕ್ಕೂ ವಾಕ್ಕಿಗೂ ಇದ್ದ ಭೇದವನ್ನೂ ಅನಂತರ ಅವೆರಡರ ಐಕ್ಯವನ್ನೂ ಈ ರೀತಿ ತಿಳಿಸುತ್ತದೆ.

**ತೇ ದೇವಾ ಯಜ್ಞಮಬ್ರುವನ್ । ಯೋಷಾ ವಾ ಇಯಂ ವಾಗುಪಮಂತ್ರಯಸ್ವ ಹ್ವಯಿಷ್ಯತೇ ವೈ ತ್ವೇತಿ ಸ್ವಯಂ ವಾ ಹೈನ್ಯೈಕ್ಷತ ಯೋಷಾ ವಾ ಇಯಂ ವಾಗುಪಮಂತ್ರಯೈ ಹ್ವಯಿಷ್ಯತೇ ವೈ ಮೇತಿ ತಾಮುಪಾಮಂತ್ರಯತ .... .... ॥**

(ಶ. ಬ್ರಾ. ೩-೨-೧-೯)

ದೇವತೆಗಳು ಯಜ್ಞವನ್ನು ಕುರಿತು "ವಾಕ್ಕು ಸ್ತ್ರೀರೂಪಳಾಗಿದ್ದಾಳೆ. ಅವಳನ್ನು ನಿನ್ನ ಸಮೀಪಕ್ಕೆ ಬರುವಂತೆ ಸಂಜ್ಞೆಮಾಡು" ಎಂದರು. ಅಥವಾ ಯಜ್ಞವೇ ತನ್ನ ಮನಸ್ಸಿನಲ್ಲಿ, "ವಾಕ್ಕು ಸ್ತ್ರೀರೂಪಳು. ನಾನು ಆ ವಾಕ್ಕನ್ನು ನನ್ನ ಸಮೀಪಕ್ಕೆ ಬರುವಂತೆ ಸಂಜ್ಞೆಮಾಡಿದರೆ ಆಗ ಆ ಸ್ತ್ರೀಯೂ ಸಹ ನನಗೆ ಅದೇರೀತಿ ಸಂಜ್ಞೆಮಾಡುತ್ತಾಳೆ" ಎಂದು ಯೋಚಿಸಿದ್ದರೂ ಇರಬಹುದು. ಆದರೆ ಪ್ರಥಮದಲ್ಲಿಯೇ ವಾಕ್ಕು ಯಜ್ಞದ ಸಂಜ್ಞೆಯನ್ನು ನಿರಾಕರಿಸಿತು. ಅದು ಸ್ತ್ರೀಲಕ್ಷಣವಾಗಿಯೇ ಇದೆ.

CC-0. Jangamwadi Math Collection. Digitized by eGangotri

ತೇ ಹೋಚುಃ । ಉಪೈವ ಭಗವೋ ಮಂತ್ರಯಸ್ವ ಹ್ವಯಿಷ್ಯತೇ ವೈ ತ್ವೇತಿ ತಾಮುಪಾಮಂತ್ರ-
ಯತ ಸಾ ಹೈನಂ ಜುಹುವೇ ತಸ್ಮಾದು ಸ್ತ್ರೀ ಪುಮಾಂಸಗ್ಂ ಹ್ವಯತ ಏವೋತ್ತಮಗ್ಂ
ಸ ಹೋವಾಚಾಹ್ವತ ವೈ ಮೇತಿ ॥

(ಶ. ಬ್ರಾ. ೩-೨-೧-೨೧)

ಆಗ ದೇವತೆಗಳು "ಪುನಃ ಅವಳಿಗೆ ಆಹ್ವಾನರೂಪದಲ್ಲಿ ಸಂಜ್ಞೆಮಾಡು. ಅವಳು ಖಂಡಿತವಾಗಿಯೂ ತಿರಸ್ಕರಿಸದೆ ಪ್ರತ್ಯುತ್ತರವನ್ನು ಕೊಡುತ್ತಾಳೆ" ಎಂದರು. ಆಗ ಅದೇ ರೀತಿ ಯಜ್ಞಪುರುಷನು ಆಹ್ವಾನರೂಪದ ಸಂಜ್ಞೆಯನ್ನು ಮಾಡಿದನು. ಅವಳೂ ಸಹ ಅದೇರೀತಿ ಸಂಜ್ಞೆಮಾಡಿ ಅವನನ್ನು ಕರೆದಳು. ಆಗ ಅವನು, ಅವಳೂ ಸಹ ನನ್ನನ್ನು ಕರೆದಿದ್ದಾಳೆ ಎಂದುಕೊಂಡನು.

ತೇ ದೇವಾ ಈಕ್ಷಾಂಚಕ್ರಿರೇ । ಯೋಷಾ ವಾ ಇಯಂ ವಾಗ್ಯದೇನಂ ನ ಯುವಿತೇಹೈವ ಮಾ
ತಿಷ್ಠಂತಮಭ್ಯೇಹೀತಿ ಬ್ರೂಹಿ ತಾಂ ತು ನ ಆಗತಾಂ ಪ್ರತಿಪ್ರಬ್ರೂತಾದಿತಿ ಸಾ ಹೈನಂ ತದೇವ
ತಿಷ್ಠಂತಮಭ್ಯೇಯಾಯ ತಸ್ಮಾದು ಸ್ತ್ರೀ ಪುಮಾಂಸಗ್ಂ ಸಂಸ್ಕೃತೇ ತಿಷ್ಠಂತಮಭ್ಯೈತಿ
ತಾಗ್ಂಹೈಭ್ಯ ಆಗತಾಂ ಪ್ರತಿಪ್ರೋವಾಚೇಯಂ ವಾಗಾದಿತಿ ॥

(ಶ. ಬ್ರಾ. ೩-೨-೧-೨೨)

"ಈ ವಾಕ್ಕು ಸ್ತ್ರೀರೂಪಳು. ಅಸುರರ ಗುಂಪಿಗೆ ಸೇರಿದ ಈ ಸ್ತ್ರೀಯು ಒಂದುವೇಳೆ ಯಜ್ಞಪುರುಷನನ್ನು ತನ್ನಲ್ಲಿಗೇ ಬರಮಾಡಿಕೊಂಡು ಇವನನ್ನು ಒಲಿಸಿಕೊಂಡುಬಿಟ್ಟಾಳು. ಆಗ ಯಜ್ಞಪುರುಷನು ಅಸುರರ ಕಡೆ ಸೇರಿಯಾನು" ಎಂಬ ಆಲೋಚನೆಯನ್ನು ಮಾಡಿ ಯಜ್ಞಪುರುಷನನ್ನು ಕುರಿತು "ನೀನು ಅವಳಲ್ಲಿಗೆ ಹೋಗಬೇಡ. ಅವಳನ್ನೇ ನಿನ್ನಲ್ಲಿಗೆ ಬರಮಾಡು" ಎಂದರು. ಅದೇ ಪ್ರಕಾರ ಅವಳನ್ನು ಬರಮಾಡಿಕೊಂಡು ಅನಂತರ ಅವಳ ಆಗಮನವನ್ನು ದೇವತೆಗಳಿಗೆ ತಿಳಿಸಿದನು.

ತಾನ್ ದೇವಾಃ । ಅಸುರೇಭ್ಯೋಽಂತರಾಯಂಸ್ತಾಗ್ ಸ್ವೀಕೃತ್ಯಾಗ್ನಾವೇವ ಪರಿಗೃಹ್ಯ ಸರ್ವ-
ಹುತಮಜುಹವುರಾಹುತಿರ್ಹಿ ದೇವಾನಾಗ್ಂ ಸ ಯಾಮೇವಾಮೂಮನುಷ್ಟುಭಾಜುಹವುಸ್ತ-
ದೇವೈನಾಂ ತದ್ದೇವಾಃ ಸ್ವ್ಯಕುರ್ವತ ತೇಽಸುರಾ ಆತ್ತವಚಸೋ ಹೇಲವೋ ಹೇಲವ
ಇತಿ ವದಂತಃ ಪರಾಬಭೂವುಃ ॥

(ಶ. ಬ್ರಾ. ೩-೨-೧-೨೩)

ವಾಗ್ರೂಪಳಾದ ಸ್ತ್ರೀಯು ಅಸುರರನ್ನು ಬಿಟ್ಟು ಬಂದು ಯಜ್ಞಪುರುಷನನ್ನು ಸಮೀಪಿಸಿದೊಡನೆಯೇ ದೇವತೆಗಳು ಅವಳನ್ನು ಅವರಿಂದ ಪೂರ್ಣವಾಗಿ ಬೇರೆಮಾಡಿದರು. ಅವರೊಡನಿದ್ದ ಸಂಬಂಧವನ್ನು ಕತ್ತರಿಸಿದರು. ಮತ್ತು ಅವಳನ್ನು ಪೂರ್ಣವಾಗಿ ಅಗ್ನಿಯಿಂದ ಆವೃತವಾಗುವಂತೆ ಮಾಡಿ ದೇವತೆಗಳನ್ನುದ್ದೇಶಿಸಿ ಅವರಿಗೆ ಪೂರ್ಣಾಹುತಿಯ ರೂಪದಲ್ಲಿ ಅರ್ಪಿಸಿದರು. ಮತ್ತು ಅನುಷ್ಟುಪ್ ಛಂದಸ್ಸಿನ ಪೂರ್ವಕವಾಗಿ ಅರ್ಪಿಸಿದುದರಿಂದ ವಾಕ್ಕೂ ಸಹ ಯಜ್ಞಾತ್ಮಳೇ ಆಗಿ ಅವರ ಕಡೆ ಸೇರಿಕೊಂಡಳು. ಅಸುರರು ಕೂಗಿಕೊಂಡು ಓಡಿಹೋದರು.

ಸೋಽಯಂ ಯಜ್ಞೋ ವಾಚಮಭಿದಧ್ಯೌ । ಮಿಥುನ್ಯೇನಯಾ ಸ್ಯಾಮಿತಿ ತಾಗ್ಂ ಸಂಬಭೂವ ।

(ಶ. ಬ್ರಾ. ೩-೨-೧-೨೪)

CC-0. Jangamwadi Math Collection. Digitized by eGangotri

ಈ ರೀತಿ ಯಜ್ಞಪುರುಷನು ವಾಗ್ರೂಪಳಾದ ಸ್ತ್ರೀಯನ್ನು ಮೋಹಿಸಿ ಅವಳೊಡನೆ ಐಕ್ಯನಾಗಲು ಇಚ್ಛಿಸಿ ಅವಳನ್ನು ಪೂರ್ಣವಾಗಿ ತನ್ನಲ್ಲಿ ಸೇರಿಸಿಕೊಂಡನು

**ಇಂದ್ರೋ ಹ ವಾ ಈಕ್ಷಾಂಚಕ್ರೇ । ಮಹದ್ವಾ ಇತೋಽಭ್ವಂ ಜನಿಷ್ಯತೇ ಯಜ್ಞಸ್ಯ ಚ ಮಿಥುನಾದ್ವಾಚಶ್ಚ ಯನ್ಮಾ ತನ್ನಾಭಿಭವೇದಿತಿ ಸ ಇಂದ್ರ ಏವ ಗರ್ಭೋ ಭೂತ್ವೈತನ್ಮಿಥುನಂ ಪ್ರವಿವೇಶ ॥**

(ಶ. ಬ್ರಾ. ೩-೨-೧-೨೭)

ಆ ಐಕ್ಯವಾದನಂತರ ಇಂದ್ರನು ಈ ರೀತಿ ಯಜ್ಞಕ್ಕೂ ವಾಕ್ಕಿಗೂ ಇರುವ ದಾಂಪತ್ಯಸಂಬಂಧವನ್ನು ಹೀಗೆಯೇ ಬಿಟ್ಟರೆ ಈ ಮಿಥುನದಿಂದ ಒಂದು ದೊಡ್ಡ ರಾಕ್ಷಸಸ್ವರೂಪವು ಉತ್ಪನ್ನವಾಗಬಹುದು. ಅದಕ್ಕೆ ಅವಕಾಶಕೊಡದೇ ನಾನೇ ಇವುಗಳ ಗರ್ಭದಲ್ಲಿ ಪ್ರವೇಶಿಸಬೇಕು ಎಂದು ಯೋಚಿಸಿ ಅವುಗಳ ಗರ್ಭರೂಪನಾಗಿ ತಾನೇ ಪ್ರವೇಶಿಸಿದನು.

ಈ ರೀತಿ ಪೂರ್ಣಾಹುತಿರೂಪದಲ್ಲಿ ವಾಕ್ಕನ್ನು ಯಜ್ಞದಲ್ಲಿ ಅರ್ಪಿಸಿದುದರಿಂದಲೂ, ಈ ಅರ್ಪಣೆಯಿಂದ ಪೂರ್ಣವಾದ ಐಕ್ಯವುಂಟಾದುದರಿಂದಲೂ ಸಹ ಯಜ್ಞರೂಪಿಯಾದ ವಾಕ್ಕಿಗೇ ಪ್ರಕೃತವಾದ ಋಕ್ಕಿನಲ್ಲಿ **ಹೋತ್ರಾ** ಎಂಬ ನಾಮನಿರ್ದೇಶವಿದೆಯೆಂದು ಸಾಯಣರು ಅಭಿಪ್ರಾಯಪಟ್ಟಿದ್ದಾರೆ. ಐತರೇಯಬ್ರಾಹ್ಮಣದಿಂದ ಮೇಲೆ ಉದಾಹೃವಾದ ವಾಕ್ಯವನ್ನು ಆಧಾರವಾಗಿ ತೋರಿಸಿದ್ದಾರೆ. ಮತ್ತು ಇಂತಹ ವಾಗ್ರೂಪಳಾದ **ಭಾರತಿಯೆಂದು** ಹೇಳಿ, ಹೋತ್ರಾ ಎಂಬ ಪದವು ಭಾರತಿಗೆ ವಿಶೇಷಣವಾಗಿದೆಯೆಂದೂ ತಿಳಿಸಿದ್ದಾರೆ.

**ಭರತಃ ಆದಿತ್ಯಃ ತಸ್ಯ ಭಾಃ** (ನಿ. ೮-೧೩) ಆದಿತ್ಯನಿಗೆ ಭರತನೆಂಬ ಪರ್ಯಾಯಪದವಿದೆ. ಅವನ ಜ್ಯೋತಿಗೆ ಭಾರತೀ ಎಂದು ಹೆಸರು ಪ್ರಸಿದ್ಧವಾಗಿದೆಯೆಂದು ನಿರುಕ್ತಕಾರರು ನಿರ್ವಚನವನ್ನು ಹೇಳಿದ್ದಾರೆ.

**ಅಮೂ ಸ್ಥಿತಾಧಿಲೋಕಂ ತು ಭಾರತೀ ಭವತಿ ಹ್ಯಸೌ ।**
**ಸೈಷಾ ತು ತ್ರಿವಿಧಾ ವಾಗ್ಘ್ಯೆ ದಿವಿ ಚ ವ್ಯೋಮ್ನಿ ಚೇಹ ಚ ॥**

(ಬೃ. ದೇ. ೩-೧೩)

ಮೂರು ಲೋಕಗಳಲ್ಲೂ ಸ್ಥಿತರಾಗಿರುವ ವಾಗ್ರೂಪವಾದ ದೇವತೆಗಳಲ್ಲಿ ಪೃಥಿವೀಸ್ಥಳಾದ ದೇವತೆಗೆ **ಭಾರತೀ** ಎಂದು ಹೆಸರು. ಭಾರತಿಯು ದ್ಯುಲೋಕಸ್ಥಳಾಗಿ ಆದಿತ್ಯನನ್ನಾಶ್ರಯಿಸಿದಳು. ಅದನ್ನೇ ನಿರುಕ್ತಕಾರರು **ಆದಿತ್ಯಸ್ಯ ಭಾಃ** ಎಂದಿದ್ದಾರೆ. ಆದರೆ,

**ದೇವ್ಯಸ್ತಿಸ್ರಃ ಶ್ರಿತಾಶ್ಚೈನಂ ತ್ವೇಷ್ವಾ ಚೈನ್ಯೈತದಾಶ್ರಯಃ ।**

(ಬೃ. ದೇ. ೧-೧೦೪)

ಎಂಬಲ್ಲಿ ಮೂರು ಲೋಕದಲ್ಲೂ ಪ್ರಭಾರೂಪರಾಗಿ ಪ್ರಕಾಶಿಸುವ ಈ ಮೂರು ದೇವತೆಗಳೂ ಸಹ ಪಾರ್ಥಿವಾಗ್ನಿಯನ್ನೇ ಸೇವಿಸುತ್ತಾರೆಂದು ಎಲ್ಲವನ್ನೂ ಕೊನೆಯಲ್ಲಿ ಅಗ್ನಿಸಂಬಂಧವೆಂದೇ ತಿಳಿಸಿದೆ. ಈ ರೀತಿ ಹೇಳಲು ಋಕ್ಸಂಹಿತೆಯಲ್ಲಿಯೂ ಇದಕ್ಕೆ ಆಧಾರವನ್ನು ತೋರಿಸಬಹುದು.

**ತಸ್ಮಾ ಅಗ್ನಿರ್ಭಾರತಃ ಶರ್ಮ ಯಂಸಜ್ಜ್ಯೋಕ್ಪಶ್ಯಾತ್ಸೂರ್ಯಮುಚ್ಚರಂತಂ ।**
**ಯ ಇಂದ್ರಾಯ ಸುನವಾಮೇತ್ಯಾಹ ನರೇ ನರ್ಯಾಯ ನೃತಮಾಯ ನೃಣಾಂ ॥**

(ಋ. ಸಂ. ೪-೨೫-೪)

CC-0. Jangamwadi Math Collection. Digitized by eGangotri

ಹವಿಸ್ಸುಗಳಿಗೆ ಒಡೆಯನಾದ ಅಗ್ನಿಯೇ ಭಾರತನು, ಎಂದು ಅಗ್ನಿಯನ್ನೇ ಭಾರತಶಬ್ದದಿಂದ ಕರೆದಿದೆ. ಇಂತಹ ಅಗ್ನಿಯ ಸೇವೆಯನ್ನು ಮಾಡಿದುದರಿಂದ ಆ ದೇವತೆಗೆ **ಭಾರತೀ** ಎಂದು ಹೆಸರು. ಆದರೆ ಈ ದೇವತೆಯ ಸ್ವರೂಪ ವೇನು ? ಎಂದರೆ, ಸಾಯಣರು ಪ್ರಕೃತವಾದ ಋಕ್ಕಿನ ಭಾಷ್ಯದಲ್ಲಿ ತಿಳಿಸಿರುವಂತೆ (ಋ ಸಂ. ೩-೬೨-೩),

**ಹೋತ್ರಾ, ಪ್ರಾಣ, ವಾಕ್ಕು, ಯಜ್ಞ** ಇವೆಲ್ಲಕ್ಕೂ ಸಹ ಭಾರತೀಪರವಾದ ಅರ್ಥವನ್ನು ಸಂಹಿತಾ ಮತ್ತು ಬ್ರಾಹ್ಮಣವಾಕ್ಯಗಳ ಆಧಾರದ ಮೇಲೆ ಹೇಳಬಹುದೆಂದು ನಿಷ್ಕೃಷ್ಟವಾಗಿ ತಿಳಿಸಿದೆ. **ಪ್ರಾಣೋ ಭೂತ್ವಾ ಪ್ರಜಾ ಧಾರಯನ್ ಭಾರತಃ** । ಅಗ್ನಿಯು ಪ್ರಾಣರೂಪನಾಗಿ ಪ್ರಜೆಗಳನ್ನು ಧರಿಸಿದುದರಿಂದ ಭಾರತನೆಂದು ಕರೆಯಲ್ಪಟ್ಟನು ಎಂದು ವಾಜಸನೇಯಸಂಹಿತಾವಾಕ್ಯವನ್ನು ಸಾಯಣರು ಉದಾಹರಿಸಿದ್ದಾರೆ. (ಋ. ಸಂ. ಭಾ. ೪-೨೫-೪)

**ಶರಣ್ಯೈಃ—ಶೃಣಂತಿ ಶೀತಾದಿಕ್ಲೇಶಮಿತಿ ಶರಣಾನಿ ಗೃಹಾಃ** । ಶೀತಾದಿ ಕ್ಲೇಶಗಳನ್ನು ತಡೆಗಟ್ಟುವುದ ರಿಂದಲೂ, ರಕ್ಷಕವಾಗಿರುವುದರಿಂದಲೂ ಗೃಹಕ್ಕೆ ಶರಣವೆಂಬ ಹೆಸರು. ದುರ್ಗಾಚಾರ್ಯರು ನಿರುಕ್ತಕಾರರ ಅಭಿಪ್ರಾಯ ವನ್ನನುಸರಿಸಿ ಈ ಪದಕ್ಕೆ ಬಲವೆಂದರ್ಥಮಾಡಿದ್ದಾರೆ. ವಾಸಕ್ಕೆ ವಿಸ್ತೃತವಾದುದೂ, ಆಶ್ರಯದಾತೃವಾದುದೂ ಆದ ಸ್ಥಳವಿರುವುದರಿಂದ ಬಲ ಅಥವಾ ಗೃಹ ಎಂದು ಸಂದರ್ಭಾನುಸಾರವಾಗಿ ಅರ್ಥವನ್ನು ಹೇಳಬಹುದು-

**ಉದುಷ್ಯ ಶರಣೇ ದಿವೋ ಜ್ಯೋತಿರಯಂಸ್ತ ಸೂರ್ಯಃ** ।
**ಅಗ್ನಿರ್ನ ಶುಕ್ರಃ ಸಮಿಧಾನ ಆಹುತಃ** ॥

(ಋ. ಸಂ. ೮-೨೫-೧೯)

ಎಂಬಲ್ಲಿ ಶರಣೇ ಎಂಬ ಪದಕ್ಕೆ ಆದಿತ್ಯಸ್ಯ ಸ್ಥಾನೇ ನಭಸಿ ಆದಿತ್ಯನಿಗೆ ವಿಸ್ತೃತವಾದ ವಾಸಸ್ಥಾನವಾದುದರಿಂದ ಶರಣಪದಕ್ಕೆ ನಭಸ್ಸೆಂದರ್ಥಮಾಡಿದ್ದಾರೆ. **ಮದೇಮ ಶರಣೇ ಸಖಾಯಃ** (೭-೧೯-೮) ಇತ್ಯಾದ್ಯನೇಕ ಸಂದರ್ಭ ಗಳಲ್ಲಿ ವಾಸಗೃಹವೆಂಬರ್ಥವೇ ರೂಢವಾಗಿದೆ.

**ದಕ್ಷಿಣಾಭಿಃ—ಸತ್ರಾನ್ ದಕ್ಷಯತೀತ್ಯನೇನ ಇತಿ ದಕ್ಷಿಣಾ** । ಯಜ್ಞಯಾಗಾದಿ ಕರ್ಮಗಳ ಶಕ್ತಿಯನ್ನು ಅಧಿಕಪಡಿಸುವ ಸಾಧನವಾದುದರಿಂದ ಇದಕ್ಕೆ **ದಕ್ಷಿಣಾ** ಎಂದು ಹೆಸರು ಎಂದು ಕೌಷೀತಕೀಬ್ರಾಹ್ಮಣದಲ್ಲಿ ಈ ಪದದ ನಿರ್ವಚನವನ್ನು ತಿಳಿಸಿದೆ. (ಕೌ. ಬ್ರಾ. ೧೫-೧) ಯಜ್ಞಕ್ಕೂ, ದಕ್ಷಿಣೆಗೂ ಇರುವ ಸಂಬಂಧವನ್ನು ತೈತ್ತಿರೀಯ ಸಂಹಿತೆಯಲ್ಲಿ ಈರೀತಿ ತಿಳಿಸಿದೆ.

**ಯಜ್ಞೋ ದಕ್ಷಿಣಾ ಮಭ್ಯಧ್ಯಾಯತ್ತಾಗ್ಂ ಸಮಭವತ್** ।

(ತೈ. ಸಂ. ೬-೧-೩-೬)

ಮೇಲೆ ಯಜ್ಞಪುರುಷನು ವಾಕ್ಕಿನ ಸಂಬಂಧವನ್ನಪೇಕ್ಷಿಸಿ ಅದರೊಡನೆ ದಾಂಪತ್ಯಸಂಬಂಧವನ್ನು ಬೆಳೆಸಿದಾಗ ಇಂದ್ರನು ಯಾವ ರೀತಿ ಅವುಗಳ ಗರ್ಭದಲ್ಲಿ ಸೇರಿಕೊಂಡನೆಂದಿದೆಯೋ ಇಲ್ಲಿಯೂ ಸಹ ಅದೇರೀತಿ ಯಜ್ಞಕ್ಕೂ ದಕ್ಷಿಣೆಗೂ ಇರುವ ಸಂಬಂಧವನ್ನು ತಿಳಿಸಿದೆ.

———— :o: ————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಬೃಹಸ್ಪತೇ ಜುಷಸ್ವ ನೋ ಹವ್ಯಾನಿ ವಿಶ್ವದೇವ್ಯ ।

ರಾಸ್ವ ರತ್ನಾನಿ ದಾಶುಷೇ ॥ ೪ ॥

ಪದಪಾಠಃ

ಬೃಹಸ್ಪತೇ । ಜುಷಸ್ವ । ನಃ । ಹವ್ಯಾನಿ । ವಿಶ್ವऽದೇವ್ಯ ।

ರಾಸ್ವ । ರತ್ನಾನಿ । ದಾಶುಷೇ ॥ ೪ ॥

ಸಾಯಣಭಾಷ್ಯಂ

ವಿಶ್ವದೇವ್ಯ ಸರ್ವದೇವಹಿತ ಹೇ ಬೃಹಸ್ಪತೇ ನೋಽಸ್ಮತ್ಸಂಬಂಧೀನಿ ಹವ್ಯಾನಿ ಹವನಯೋಗ್ಯಾನಿ ಪುರೋಡಾಶಾದೀನಿ ಹವೀಂಷಿ ಜುಷಸ್ವ । ಸೇವಸ್ವ । ತತಸ್ತ್ವಂ ದಾಶುಷೇ ಹವಿರ್ದತ್ತವತೇ ಯಜಮಾನಾಯ ಮಹ್ಯಂ ರತ್ನಾನ್ಯುತ್ತಮಾನಿ ಧನಾನಿ ರಾಸ್ವ। ದೇಹಿ ॥ ರಾಸ್ವ। ರಾ ದಾನೇ। ವ್ಯತ್ಯಯೇನಾತ್ಮನೇಪದಂ ॥

ಪ್ರತಿಪದಾರ್ಥ

ವಿಶ್ವದೇವ್ಯ—ಸಕಲರಿಗೂ ಮಂಗಳವನ್ನುಂಟುಮಾಡತಕ್ಕ । ಬೃಹಸ್ಪತೇ—ಎಲೈ ಬೃಹಸ್ಪತಿಯೇ । ನಃ—ನಮ್ಮಿಂದ ದತ್ತವಾದ । ಹವ್ಯಾನಿ—ಹವಿಸ್ಸುಗಳನ್ನು । ಜುಷಸ್ವ—ಸೇವಿಸು । ದಾಶುಷೇ—ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ । ರತ್ನಾನಿ—ರತ್ನರೂಪವಾದ ಧನಗಳನ್ನು । ರಾಸ್ವ—ಕೊಡು.

ಭಾವಾರ್ಥ

ಸಕಲ ದೇವಮಾನವರಿಗೂ ಮಂಗಳಕಾರಿಯಾದ ಎಲೈ ಬೃಹಸ್ಪತಿಯೇ, ನಮ್ಮಿಂದ ದತ್ತವಾದ ಹವಿಸ್ಸುಗಳನ್ನು ಸೇವಿಸು. ಹವಿಸ್ಸನ್ನು ಅರ್ಪಿಸತಕ್ಕ ಯಜಮಾನನಿಗೆ ಧನವನ್ನು ಒದಗಿಸಿಕೊಡು.

English Translation

Brihaspati, friend of all the gods, accept our oblations: grant precious treasures to the offerer.

ವಿಶೇಷವಿಷಯಗಳು

ವಿಶ್ವದೇವ್ಯ ಬೃಹಸ್ಪತೇ ಎಂಬ ವಿಶೇಷಣಯುಕ್ತನಾದ ಬೃಹಸ್ಪತಿಯನ್ನು ಸ್ತುತಿಸಿ ಅವನ ಅನುಗ್ರಹಕ್ಕಾಗಿ ಪ್ರಾರ್ಥಿಸಿದೆ. ವಿಶ್ವದೇವ್ಯ ಎನ್ನುವುದಕ್ಕೆ ವಿಶ್ವದೇವತೆಗಳಿಗೆ ಸಂಬಂಧಿಸಿದವನು ಎಂದಾಗಲಿ ಅಥವಾ ಸಕಲದೇವತೆಗಳಿಗೂ ಹಿತಕಾರಕನು ಎಂದಾಗಲಿ ಅರ್ಥವಾಗುತ್ತದೆ. ಸಕಲರಿಗೂ ಹಿತಕಾರಿಯಾಗಿರುವುದೇ ಬೃಹಸ್ಪತಿಯ ಸ್ವರೂಪವಾಗಿದೆ. ಈ ಪದದ ನಿರ್ವಚನವು ಇದನ್ನು ತಿಳಿಸುತ್ತದೆ.

CC-0. Jangamwadi Math Collection. Digitized by eGangotri

ಬೃಹಸ್ಪತಿಃ ಬೃಹತಃ ಪಾತಾ ವಾ ಪಾಲಯಿತಾ ವಾ ।

(ನಿ. ೧೦-೧೧)

ಬೃಹಂತೌ ಪಾತಿ ಯಲ್ಲೋಕೌ ಏಷ ದ್ಯೌ ಮಧ್ಯಮೋತ್ತಮೌ ।
ಬೃಹತಾ ಕರ್ಮಣಾ ತೇನ ಬೃಹಸ್ಪತಿರಿತೀಳಿತಃ ॥

(ಬೃ. ದೇ. ೨-೩೯)

ಬೃಹತ್ಸ್ವರೂಪವುಳ್ಳ ಮಧ್ಯಮ ಮತ್ತು ಉತ್ತಮಲೋಕಗಳನ್ನು ಪೂರ್ಣವಾಗಿ ಕಾಪಾಡುವುದರಿಂದಾಗಲಿ ಅಥವಾ ಬೃಹತ್ಸ್ವರೂಪವುಳ್ಳ ಕರ್ಮಕರ್ತನಾದುದರಿಂದಾಗಲಿ ಬೃಹಸ್ಪತಿಯೆಂಬ ಹೆಸರು. ಬೃಹತ್ ಇತಿ ಮಹತೋ ನಾಮಧೇಯಂ (ನಿ. ೧೭) ಮಹತ್ತಾಗಿರುವುದಕ್ಕೇ ಬೃಹತ್ ಎಂದು ಹೆಸರು. ಮಹತ್ಸ್ವರೂಪವುಳ್ಳ ಸಕಲ ಲೋಕಗಳನ್ನೂ ಪಾಲಿಸುವವನೆಂದು ತಾತ್ಪರ್ಯ. ನಿರುಕ್ತಕಾರರು ಬೃಹಸ್ಪತಿಯನ್ನು ಇಂದ್ರಲೋಕಕ್ಕೆ (ಮಧ್ಯಮ ಲೋಕಕ್ಕೆ) ಸೇರಿದ ದೇವತೆಯೆಂದು ತಿಳಿಸಿದ್ದಾರೆ.

ಇಂದ್ರಾಶ್ರಯಸ್ತು ಪರ್ಜನ್ಯೋ ರುದ್ರೋ ವಾಯುರ್ಬೃಹಸ್ಪತಿಃ ।
ವರುಣಃ ಕಶ್ಚ ಮೃತ್ಯುಶ್ಚ ದೇವಶ್ಚ ಬ್ರಹ್ಮಣಸ್ಪತಿಃ ॥

(ಬೃ. ದೇ. ೧-೧೨೨)

ಪರ್ಜನ್ಯ, ರುದ್ರ, ವಾಯು, ಬೃಹಸ್ಪತಿ, ವರುಣ, ಕ, ಮೃತ್ಯು, ದೇವನಾದ ಬ್ರಹ್ಮಣಸ್ಪತಿ ಇವರೆಲ್ಲರೂ ಇಂದ್ರ ಲೋಕದಲ್ಲಿ ಇಂದ್ರಾಂತರ್ಗತರೂ ಇಂದ್ರಸ್ವರೂಪರೂ ಆಗಿರುವ ದೇವತೆಗಳೆಂದು ಬೃಹದ್ದೇವತೆಯಲ್ಲಿಯೂ ಸಹ ನಿರುಕ್ತಕಾರರ (ನಿ. ೫-೪,೫) ವಿಭಾಗಗಳನ್ನನುಸರಿಸಿ ತಿಳಿಸಿದೆ. ಆದರೆ ಈ ವಿಭಾಗದಿಂದ ಬೃಹಸ್ಪತಿಯ ಸ್ವರೂಪವು ಪ್ರಾದೇಶಿಕವಾದ ಸಂಕೋಚವನ್ನು ಹೊಂದುವುದಿಲ್ಲ. ಮಹತ್ಸ್ವರೂಪವುಳ್ಳ ಸಕಲ ಲೋಕಗಳನ್ನು ಪಾಲಿಸುವವನು ಎಂಬುದರಿಂದಲೇ ಬೃಹಸ್ಪತಿಯ ಮಹತ್ಸ್ವರೂಪವೂ ತಿಳಿಯುತ್ತದೆ.

ಏಕವಿಗ್ಂಶತಿಂ ವಶಾ ಅನೂಬಂಧ್ಯಾ ಆಲಭತೇ ಮೈತ್ರಾವರುಣೀರ್ವೈಶ್ವದೇವೀರ್ಬಾರ್ಹಸ್ಪತ್ಯಾ ಏತಾಸಾಂ ದೇವತಾನಾಮಾಪ್ತ್ಯೈ ತದ್ಯದ್ಬಾರ್ಹಸ್ಪತ್ಯಾನ್ತ್ಯಾ ಭವಂತಿ ಬ್ರಹ್ಮ ವೈ ಬೃಹಸ್ಪತಿಸ್ತದು ಬ್ರಹ್ಮಣ್ಯೇವಾಂತತಃ ಪ್ರತಿತಿಷ್ಠತಿ ॥

(ಶ. ಬ್ರಾ. ೧೩-೫-೪-೨೫)

ಉದಯನೀಯಾಖ್ಯವಾದ ಅರ್ಪಣವಾದನಂತರ ಮಿತ್ರಾವರುಣ, ವಿಶ್ವೇದೇವತೆಗಳು, ಬೃಹಸ್ಪತಿ ಈ ದೇವತೆಗಳ ಅನುಗ್ರಹವನ್ನು ಪಡೆಯಲು ಇವರಿಗೆ ಉಪಕಾರಕವಾದ ಪಶುಬಂಧಾಖ್ಯವಾದ ಕರ್ಮವನ್ನು ಆಚರಿಸಿದರೆ ಇವರಿಗೆ ತೃಪ್ತಿ. ಇಲ್ಲಿ ಬೃಹಸ್ಪತಿಯ ನಾಮವು ಕೊನೆಯಲ್ಲಿ ಸೇರಿಸಿರುವುದು ಬೃಹಸ್ಪತಿಯೇ ಎಲ್ಲರಿಗೂ ವಂದ್ಯನಾದ ದೇವತೆಯೆಂದು ತಿಳಿಸುತ್ತದೆ. ಈ ಬೃಹಸ್ಪತಿಯೇ ಪರಬ್ರಹ್ಮವು. ಜಗದ್ವ್ಯಾಪ್ಯವಾದ ಬ್ರಹ್ಮತತ್ತ್ವವನ್ನೇ ಬೃಹಸ್ಪತಿಯು ಪ್ರತಿಬಿಂಬಿಸುತ್ತಾನೆ ಎಂದು ಬೃಹಸ್ಪತಿಯ ಮಹತ್ತ್ವವನ್ನು ತಿಳಿಸಿದೆ.

ಬೃಹಸ್ಪತಿಗೂ, ವಿಶ್ವೇದೇವತೆಗಳಿಗೂ ಇರುವ ಸಂಬಂಧವೂ ನಿಕಟವಾಗಿರುತ್ತದೆ. ವಿಶ್ವದೇವ್ಯ ಎಂಬ ವಿಶೇಷಣವೂ ಸಹ ಅದನ್ನು ಸೂಚಿಸುತ್ತದೆ. ಇತರ ಶ್ರುತಿಗಳೂ ಈ ವಿಷಯವನ್ನೇ ತಿಳಿಸುತ್ತವೆ. ಉದಾಹರಣೆಗೆ,

CC-0. Jangamwadi Math Collection. Digitized by eGangotri

ತೇ ದೇವಾ ಅಬಿಭಯುರಸ್ಮಾಕಂ ವಿಪ್ರೇಮಾಣಮನ್ವಿದಮಸುರಾ ಅಭವಿಷ್ಯಂತೀತಿ ತೇ ವ್ಯುತ್ಕ್ರಮ್ಯಾಮಂತ್ರಯಂತಾಗ್ನಿರ್ವಸುಭಿರುದಕ್ರಾಮದಿಂದ್ರೋ ರುದ್ರೈರ್ವರುಣ ಆದಿತ್ಯೈ-ರ್ಬೃಹಸ್ಪತಿರ್ವಿಶ್ವೈರ್ದೇವೈಃ ॥

(ಐ. ಬ್ರಾ. ೪-೨೪)

ಅಸುರರ ಪ್ರಾಬಲ್ಯವನ್ನು ನೋಡಿ ದೇವತೆಗಳೆಲ್ಲಾ ಹೆದರಿದರು. ಆದಕ್ಕೆ ಪ್ರತೀಕಾರವನ್ನು ಹುಡುಕಲು ಅವರೆಲ್ಲರೂ ಮುಂದಿನ ಕ್ರಮವನ್ನು ಯೋಚಿಸುತ್ತಾ ಹೊರಕ್ಕೆ ಬಂದರು. ಆಗ ಅಗ್ನಿಯು ವಸುಗಳೊಂದಿಗೂ, ಇಂದ್ರನು ರುದ್ರರೊಂದಿಗೂ, ವರುಣನು ಆದಿತ್ಯರೊಂದಿಗೂ, ಬೃಹಸ್ಪತಿಯು ವಿಶ್ವೇದೇವರೊಂದಿಗೂ ಯೋಚಿಸುತ್ತಾ ಹೊರಕ್ಕೆ ಬಂದರು ಎಂದು ಬೃಹಸ್ಪತಿಗೂ ವಿಶ್ವೇದೇವತೆಗಳಿಗೂ ಇರತಕ್ಕ ಸಂಬಂಧವನ್ನು ತಿಳಿಸಿದೆ.

ಬೃಹಸ್ಪತಯೇ ತ್ವಾ ವಿಶ್ವದೇವ್ಯಾವತೇ ಸ್ವಾಹೇತಿ । ಅಯಂ ವೈ ಬೃಹಸ್ಪತಿರ್ಯೋಽಯಂ ಪವತೇ ತಸ್ಮಾ ಏವೈನಂ ಜುಹೋತಿ ತಸ್ಮಾದಾಹ ಬೃಹಸ್ಪತಯೇತ್ವೇತಿ ವಿಶ್ವದೇವ್ಯಾವತ ಇತಿ ತದಸ್ಮಿನ್ ವಿಶ್ವಾನ್ತ್ಸರ್ವಾನ್ ದೇವಾನನ್ವಾಭಜತಿ ।

(ಶ. ಬ್ರಾ. ೧೪-೨-೨-೧೦)

ಸರ್ವವ್ಯಾಪಕನಾಗಿ ಸಕಲ ಪ್ರದೇಶಗಳಲ್ಲಿಯೂ ಹರಡಿರುವ ವಾಯುರೂಪನೇ ಬೃಹಸ್ಪತಿಯು. ವಿಶ್ವೇದೇವತೆಗಳೊಡಗೂಡಿದ ಈ ಬೃಹಸ್ಪತಿಯನ್ನೇ ಉದ್ದೇಶಿಸಿ ಅರ್ಪಿತವಾಗತಕ್ಕದ್ದು. ಆದುದರಿಂದಲೇ ಬೃಹಸ್ಪತಯೇ ತ್ವಾ ಎಂಬ ಮಂತ್ರವನ್ನು ಪಠಿಸಿ ಅರ್ಪಿಸಬೇಕು. ಆಗ ವಿಶ್ವೇದೇವತೆಗಳೊಡಗೂಡಿದ ಬೃಹಸ್ಪತಿಗೆ ಅರ್ಪಿಸಿದಂತಾಗುತ್ತದೆ ಎಂದು ಇವರ ಸಂಬಂಧವನ್ನು ತಿಳಿಸಿದೆ. ಸರ್ವವ್ಯಾಪಿಯಾದ ವಾಯುವೂ ಮತ್ತು ವಾಯುತತ್ತ್ವವನ್ನು ಪ್ರತಿಬಿಂಬಿಸುವ ಶಬ್ದತತ್ತ್ವವೂ ಬೃಹಸ್ಪತಿಯೆಂಬ ನಾಮಾಂಕಿತವಾಗಿವೆ.

ಏಷ ಉ ಏವ ಬೃಹಸ್ಪತಿಃ । ವಾಗ್ವೈ ಬೃಹತೀ, ತಸ್ಯಾ ಏಷ ಪತಿಃ । ತಸ್ಮಾದು ಬೃಹಸ್ಪತಿಃ ।

(ಬೃ. ಉ. ೧-೩-೨೦)

ಶಬ್ದಬ್ರಹ್ಮವೇ ಬೃಹಸ್ಪತಿಯು. ಹೇಗೆಂದರೆ, ವಾಕ್ಕೇ ಬೃಹತಿಯು ಮತ್ತು ಈ ದೇವತೆಯು ವಾಕ್ಕಿನ ಪತಿಯು. ಆದುದರಿಂದಲೇ ಇವನು ಬೃಹಸ್ಪತಿಯೆಂದು ಪ್ರಖ್ಯಾತನಾಗಿದ್ದಾನೆ, ಇತ್ಯಾದಿಯಾಗಿ ಬೃಹಸ್ಪತಿಯ ವರ್ಣನವಿದೆ.



ಸಂಹಿತಾಪಾಠಃ

ಶುಚಿಮರ್ಕೈರ್ಬೃಹಸ್ಪತಿಮಧ್ವರೇಷು ನಮಸ್ಯತ ।

ಅನಾಮ್ಯೋಜ ಆ ಚಕೇ ॥ ೫ ॥

ಪದಪಾಠಃ

ಶುಚಿಂ । ಅರ್ಕೈಃ । ಬೃಹಸ್ಪತಿಂ । ಅಧ್ವರೇಷು । ನಮಸ್ಯತ ।

ಅನಾಮಿ । ಓಜಃ । ಆ । ಚಕೇ ॥ ೫ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

**ಹೇ ಋತ್ವಿಜೋ ಯೂಯಮಧ್ವರೇಷು ಶುಚಿಂ ಶುದ್ಧಂ ಬೃಹಸ್ಪತಿಮರ್ಕೈರರ್ಚನೀಯೈಃ ಸ್ತೋತ್ರೈರ್ನಮಸ್ಯತ । ಪರಿಚರತ । ಅನಾಮ್ಯನಮನಶೀಲಂ ಪರೈರನಭಿಭವನೀಯಮೋಜಸ್ತಸ್ಯ ಬಲಮಾ ಚಕೇ । ಸರ್ವತೋ ಯಾಚೇ ॥ ಬೃಹಸ್ಪತಿಂ । ವನಸ್ಪತ್ಯಾದಿತ್ವಾದುಭಯಪದಪ್ರಕೃತಿಸ್ವರಃ । ಚಕೇ । ಕಮೇರ್ಲಿಟ್ಯುತ್ತಮೇ ಮಕಾರಲೋಪಶ್ಛಾಂದಸಃ ॥**

ಪ್ರತಿಪದಾರ್ಥ

(ಎಲೈ ಋತ್ವಿಕ್ಕುಗಳೇ) **ಅಧ್ವರೇಷು**—ಯಜ್ಞಗಳಲ್ಲಿ । **ಶುಚಿಂ**—ಶುದ್ಧವಾದ । **ಬೃಹಸ್ಪತಿಂ**—ಬೃಹಸ್ಪತಿಯನ್ನು । **ಅರ್ಕೈಃ**—ಪೂಜ್ಯವಾದ ಸ್ತುತಿಗಳಿಂದ । **ನಮಸ್ಯತ**—ಪೂಜಿಸಿರಿ । **ಅನಾಮಿ**—ಶತ್ರುಗಳಿಂದ ಕುಗ್ಗಿಸಲು ಸಾಧ್ಯವಿಲ್ಲದ । **ಓಜಃ**—ಶಕ್ತಿಯನ್ನು । **ಆ ಚಕೇ**—ನಾನು (ಅವನಿಂದ) ಯಾಚಿಸುತ್ತೇನೆ ।

ಭಾವಾರ್ಥ

ಎಲೈ ಋತ್ವಿಕ್ಕುಗಳೇ, ಯಜ್ಞಗಳಲ್ಲಿ ಶುದ್ಧನಾದ ಬೃಹಸ್ಪತಿಯನ್ನು ಪೂಜ್ಯವಾದ ಸ್ತುತಿಗಳಿಂದ ಪೂಜಿಸಿರಿ. ಶತ್ರುಗಳಿಂದ ಕುಗ್ಗಿಸಲು ಸಾಧ್ಯವಿಲ್ಲದ ಶಕ್ತಿಯನ್ನು ನಾನು ಅವನಿಂದ ಯಾಚಿಸುತ್ತೇನೆ.

English Translation

Adore the pure Brihaspati at sacrifices with hymns: I solicit of him unsurpassable strength.

ವಿಶೇಷವಿಷಯಗಳು

**ಅಧ್ವರೇಷು ಶುಚಿಂ**—ಯಜ್ಞಗಳಲ್ಲಿ ಶುಚಿಯಾದ ಎಂದು ಬೃಹಸ್ಪತಿಯ ಸ್ವರೂಪವರ್ಣನವಿದೆ. ಶುಚಿ ಎಂಬ ವಿಶೇಷಣವು ಯಜ್ಞಾಗ್ನಿಪರವಾಗಿ ಉಪಯೋಗಿಸಿದಾಗ ಒಂದು ವಿಶೇಷಾರ್ಥವಿದೆ. ಮತ್ತು ಅಗ್ನಿಯ ವಿಶೇಷಗುಣವನ್ನು ಸೂಚಿಸುತ್ತದೆ. ಉದಾಹರಣೆಗೆ—

**ಅಗ್ನಿಶ್ಶುಚಿವ್ರತತಮಶ್ಶುಚಿರ್ವಿಪ್ರಃ ಶುಚಿಃ ಕವಿಃ । ಶುಚೀ ರೋಚತ ಆಹುತಃ । ಉದಗ್ನೇ ಶುಚಯಸ್ತವ ಶುಕ್ರಾ ಭ್ರಾಜಂತ ಈರತೇ । ತವ ಜ್ಯೋತೀಗ್‌ಂಷ್ಯರ್ಚಯಃ ॥**

(ತೈ. ಸಂ ೧-೩-೧೪-೮)

ಅಗ್ನಿಯ ವ್ರತಗಳೆಲ್ಲವೂ ಶುದ್ಧವು. ಅವನು ಶುದ್ಧನಾದ ವಿಪ್ರನು. ಶುದ್ಧನಾದ ಕವಿಯು. ಆಹುತಿಯನ್ನರ್ಪಿಸಿದಾಗ ಈ ಶುಚಿತ್ವದಿಂದಲೇ ಬೆಳಗುತ್ತಾನೆ. ಎಲೈ ಅಗ್ನಿಯೇ, ನಿನ್ನ ಶುಚ್ಯಾತ್ಮಕವೂ ಶುಕ್ರಾತ್ಮಕವೂ ಆದ ಜ್ವಾಲೆಗಳು ತೇಜಸ್ಸಿನಿಂದ ಬೆಳಗುತ್ತವೆ. ಇತ್ಯಾದಿಯಾಗಿ ಆಜ್ಯದಿಂದ ಪ್ರಜ್ವಲಿತವಾದ ಜ್ವಾಲಾರೂಪದ ಶರೀರದ ನಿರ್ಮಲವಾದುದೂ ಪ್ರಕಾಶಮಾನವಾದುದೂ ಆದ ತೇಜೋರೂಪಿಯಾದ ಅಗ್ನಿಯ ವೈಶಿಷ್ಟ್ಯವು ಸ್ತುತವಾಗಿದೆ.

ಇದೇ ವಿಧವಾದ ತೇಜಸ್ಸು ಬೃಹಸ್ಪತಿಯಲ್ಲಿಯೂ ಇದೆಯೆಂದು ತೋರಿಸಲು ಇಲ್ಲಿ **ಶುಚಿ**ಯೆಂಬ ವಿಶೇಷಣವು ಉಪಯೋಗಿಸಲ್ಪಟ್ಟಿದೆ. ಅಥವಾ ಬೃಹಸ್ಪತಿಯೇ ಅಗ್ನ್ಯಂಶವಾದುದರಿಂದ ಈ ವಿಶೇಷಣವು ಉಚಿತವಾಗಿಯೇ ಇದೆ. ಅಗ್ನಿಗೂ ಬೃಹಸ್ಪತಿಗೂ ತಾದಾತ್ಮ್ಯವನ್ನು ತೋರಿಸತಕ್ಕ ವಾಕ್ಯಗಳು ಋಕ್ಸಂಹಿತೆಯಲ್ಲಿಯೇ ಅನೇಕವಾಗಿವೆ. ಉದಾಹರಣೆಗೆ—

CC-0. Jangamwadi Math Collection. Digitized by eGangotri

ಅಚ್ಛಾ ವದಾ ತನಾ ಗಿರಾ ಜರಾಯೈ ಬ್ರಹ್ಮಣಸ್ಪತಿಂ । ಅಗ್ನಿಂ ಮಿತ್ರಂ ನ ದರ್ಶತಂ ॥
(ಋ. ಸಂ. ೧-೩೮-೧೩)

ಎಂಬ ಈ ಋಕ್ಕಿಗೆ Max Muller ಎಂಬ ಪಂಡಿತನು ಈ ರೀತಿ ಅರ್ಥಮಾಡಿದ್ದಾನೆ. "Speak out for ever, with thy voice to praise the lord of prayer, Agni, who is like a friend, the bright one" ಸ್ತುತಿಗಳಿಗೆ ಒಡೆಯನೂ, ಮಿತ್ರನಂತಿರುವವನೂ ಆದ ಅಗ್ನಿಯ ಸ್ತೋತ್ರವನ್ನು ಪಠಿಸಿ ಎಂಬ ತಾತ್ಪರ್ಯವನ್ನು ಹೇಳಿದೆ. ಎಂದರೆ, ಬೃಹಸ್ಪತಿ ಯೆಂಬ ಪದವು ಅಗ್ನಿಗೆ ವಿಶೇಷಣವಾಗಿದೆಯೆಂದು ತೋರಿಸಿದೆ. ಅಗ್ನಿಯೇ ಬೃಹಸ್ಪತಿಯೆಂದರ್ಥ. [ಸಾಯಣರು ಬೃಹಸ್ಪತಿಯೆಂಬುದಕ್ಕೆ ಮರುದ್ಗಣವೆಂದರ್ಥಮಾಡಿದ್ದಾರೆ. ಅದು ಒಂದು ಮತ. ಆದರೆ ಅಗ್ನಿಗೆ ವಿಶೇಷಣವಾಗಿದೆಯೆಂದು ಹೇಳುವುದೇ ಇಲ್ಲಿ ಸಾಧುವಾಗಿರುತ್ತದೆ].

ತಂ ಶುಭ್ರಮಗ್ನಿಮವಸೇ ಹವಾಮಹೇ ವೈಶ್ವಾನರಂ ಮಾತರಿಶ್ವಾನಮುಕ್ಥ್ಯಂ ।
ಬೃಹಸ್ಪತಿಂ ಮನುಷೋ ದೇವತಾತಯೇ ವಿಪ್ರಂ ಶ್ರೋತಾರಮತಿಥಿಂ ರಘುಷ್ಯದಂ ॥
(ಋ. ಸಂ. ೩-೨೬-೨)

ಮಾನವರಿಗೆ ಸ್ನೇಹಿತನೂ ಸ್ತುತ್ಯನೂ, ಮಾತರಿಶ್ವನೂ, ಬೃಹಸ್ಪತಿಯೂ ಆದ ಅಗ್ನಿಯನ್ನು ನಮ್ಮ ರಕ್ಷಣೆಗಾಗಿ ಕರೆಯುತ್ತೇವೆ ಎಂದಿರುವ ಈ ಮಂತ್ರದಲ್ಲಿ ಸಾಯಣರೂ ಸಹ ಬೃಹಸ್ಪತಿಂ ಎಂಬುದಕ್ಕೆ ಬೃಹತಃ ಯಜ್ಞಸ್ಯ ಪಾಲಯಿತಾರಂ-ಮಹತ್ತಾದ ಯಜ್ಞಕ್ಕೆಪಾಲಕನಾದ ಅಗ್ನಿಯನ್ನುಎಂದು ನಿಷ್ಕೃಷ್ಟವಾಗಿ ಈ ಪದಕ್ಕೆ ಅಗ್ನಿಪರವಾದ ಅರ್ಥವನ್ನೇ ಹೇಳಿದ್ದಾರೆ.

ಆ ವೇಧಸಂ ನೀಲಪೃಷ್ಠಂ ಬೃಹಂತಂ ಬೃಹಸ್ಪತಿಂ ಸದನೇ ಸಾಧಯಧ್ವಂ ।
ಸಾದದ್ಯೋನಿಂ ದಮ ಆ ದೀದಿವಾಂಸಂ ಹಿರಣ್ಯವರ್ಣಮರುಷಂ ಸಪೇಮ ॥
(ಋ. ಸಂ. ೫-೪೩-೧೨)

ಎಂಬಲ್ಲಿ ಸಾಯಣರು ಅಗ್ನಿ ಪರವಾಗಿ ಈ ಮಂತ್ರವನ್ನು ವಿವರಿಸುತ್ತಾ, ಬೃಹತಃ ಪರಿವೃಢಸ್ಯ ಕರ್ಮಣಃ ಸ್ವಾಮೀತಿ ಬೃಹಸ್ಪತಿರಗ್ನಿರುಚ್ಯತೇ। ತಥಾ ನೀಲವರ್ಣಧೂಮಪೃಷ್ಠತ್ವಸದನಸಾದನಹಿರಣ್ಯವರ್ಣತ್ವಾದಿಲಿಂಗೈರಪ್ಯಗ್ನಿರೇವ ಬೃಹಸ್ಪತಿಃ । ಅತ್ಯಂತ ಬೃಹತ್ತಾದ ಕರ್ಮಗಳಿಗೆ ಸ್ವಾಮಿಯಾದುದರಿಂದ ಅಗ್ನಿಯು ಬೃಹಸ್ಪತಿಶಬ್ದವಾಚ್ಯನು. ನೀಲಪೃಷ್ಠತ್ವ, ಹಿರಣ್ಯವರ್ಣತ್ವ, ಇತ್ಯಾದಿ ವಿಶೇಷಣಗಳೂ ಸಹ ಬೃಹಸ್ಪತಿರೂಪನಾದ ಅಗ್ನಿಯ ಗುಣಗಳನ್ನೇ ವರ್ಣಿಸುತ್ತವೆಯೆಂದು ನಿಷ್ಕೃಷ್ಟವಾಗಿ ತಿಳಿಸಿದ್ದಾರೆ.

ಅರ್ಕೈಃ ನಮಸ್ಯತ—ಎಂಬ ವಾಕ್ಯವೂ ಸಹ ಮೇಲಿನ ತಾತ್ಪರ್ಯವನ್ನು ಸಮರ್ಥಿಸುತ್ತದೆ. ಅಗ್ನಿರ್ವಾ ಅರ್ಕಃ ಎಂಬ ಐತರೇಯಾರಣ್ಯಕಮಂತ್ರವೂ (ಐ. ಆ. ೧-೪-೧) ಮತ್ತು

ಏಷೋಽಗ್ನಿರರ್ಕೋ ಯತ್ಪುರುಷಃ ಸ ಯೋ ಹೈತಮೇವಮಗ್ನಿಮರ್ಕಂ ಪುರುಷಮುಪಾಸ್ತೇಽಯ
ಮಹಮಗ್ನಿರರ್ಕೋಽಸ್ಮೀತಿ ವಿದ್ಯಯಾ ಹೈವಾಸ್ಯೈಷ ಆತ್ಮನ್ನಗ್ನಿರರ್ಕಶ್ಚಿತೋ ಭವತಿ ॥
(ಶ ಬ್ರಾ. ೧೦-೩-೪-೫)

ಪುರುಷರೂಪದಲ್ಲಿರುವ ಅಗ್ನಿಯೇ ಅರ್ಕನು. ಅಗ್ನಿಚಿತಿರೂಪದಲ್ಲಿರುವವನೂ ಅರ್ಕನು ಇತ್ಯಾದಿಯಾಗಿ ತಾದಾತ್ಮ್ಯವನ್ನು ಹೇಳಿದೆ. [ಅರ್ಕದ ವಿಶೇಷಾರ್ಥಗಳನ್ನು ಋಗ್ವೇದ ಸಂಹಿತಾ ಭಾಗ. ೧೨. ಪುಟ. 445ರಲ್ಲಿ ವಿಶದವಾಗಿ

CC-0. Jangamwadi Math Collection. Digitized by eGangotri

ತಿಳಿಸಿದೆ]. ಪ್ರಕೃತದಲ್ಲಿ ಬೃಹಸ್ಪತಿರೂಪನಾದ ಅಗ್ನಿಗೂ ಅರ್ಕಕ್ಕೂ ಇರುವ ಸಂಬಂಧವನ್ನು ಮಾತ್ರ ಸೂಚಿಸಿ ಪ್ರಕೃತವಾದ ಋಕ್ಕಿನಲ್ಲಿ **ಶುಚಿ, ಅರ್ಕ** ಎಂಬ ಪದಗಳ ಪ್ರಯೋಗದಲ್ಲಿರುವ ಔಚಿತ್ಯವನ್ನು ತಿಳಿಸಿದೆ.

ಬೃಹಸ್ಪತಿಯ ಯಾಜ್ಞಿಕಸ್ವರೂಪವನ್ನು ಶುಚಿ ಎಂಬ ಪದವು ತಿಳಿಸುವಂತೆ ಶುಕ್ರ ಎಂಬ ಪರ್ಯಾಯಪದವು ಬೃಹಸ್ಪತಿಯ ಆಧ್ಯಾತ್ಮಿಕಸ್ವರೂಪವನ್ನು ತಿಳಿಸುತ್ತದೆ.

ಬೃಹಸ್ಪತಿರ್ವೈ ಶುಕ್ರೋ ಭೂತ್ವೇದಸ್ಯಾಭಯಾಯಾಸುರೇಭ್ಯಃ ಕ್ಷಯಾಯೇಮಾಮವಿದ್ಯಾಮ-ಸೃಜತ್

(ಮೈತ್ರ್ಯುಪನಿಷತ್. ೭-೯)

ಬೃಹಸ್ಪತಿಯು ಶುಕ್ರನಾಗಿ ದೇವತೆಗಳಿಗೆ ಜ್ಞಾನರೂಪವಾದ ಬೆಳಕನ್ನೂ, ಅಸುರರಿಗೆ ಅಜ್ಞಾನರೂಪವಾದ ಕತ್ತಲನ್ನೂ ಸೃಷ್ಟಿಸಿದನೆಂದಿವೆ. ಶುಚಿಶಬ್ದವು ಯಾವ ರೀತಿ ಅಗ್ನಿಯ ವಿಶೇಷಗುಣವನ್ನು ತಿಳಿಸುವುದೋ ಅದೇ ರೀತಿ ಶುಕ್ರ ಶಬ್ದವೂ ಸಹ ಅಗ್ನಿಯ ವಿಶೇಷಗುಣವನ್ನು ತಿಳಿಸುತ್ತದೆ. ಈ **ಶುಕ್ರ**ಗುಣವೇ, ಪುರಾಣಾದಿಗಳಲ್ಲಿ ಶುಕ್ರಾಚಾರ್ಯರೆಂದು ಪ್ರಸಿದ್ಧವಾಯಿತು. ಈ ಪದವು ಐತಿಹಾಸಿಕಸತ್ಯಕ್ಕಿಂತಲೂ ಆಧ್ಯಾತ್ಮಿಕತತ್ತ್ವವನ್ನೇ ಅಧಿಕವಾಗಿ ತೋರಿಸುತ್ತದೆ.



ಸಂಹಿತಾಪಾಠಃ

ವೃಷಭಂ ಚರ್ಷಣೀನಾಂ ವಿಶ್ವರೂಪಮದಾಭ್ಯಂ ।

ಬೃಹಸ್ಪತಿಂ । ವರೇಣ್ಯಂ ॥ ೬ ॥

ಪದಪಾಠಃ

ವೃಷಭಂ । ಚರ್ಷಣೀನಾಂ । ವಿಶ್ವಽರೂಪಂ । ಅದಾಭ್ಯಂ ।

ಬೃಹಸ್ಪತಿಂ । ವರೇಣ್ಯಂ ॥ ೬ ॥

ಸಾಯಣಭಾಷ್ಯಂ

ಚರ್ಷಣೀನಾಂ ಮನುಷ್ಯಾಣಾಂ ವೃಷಭಮಭಿಮತಫಲವರ್ಷಕಂ ವಿಶ್ವರೂಪಂ ವ್ಯಾಪ್ತರೂಪಂ । ಯದ್ವಾ । ವಿಶ್ವರೂಪಾನಾಮುಕಗೋವಾಹನೋಪೇತಂ । ತಥಾ ಚ ಮಂತ್ರವರ್ಣಃ । ಬೃಹಸ್ಪತಿರ್ವಿಶ್ವ-ರೂಪಾಮುಪಾಜತ । ಋಗ್ವೇ. ೧-೧೬೧-೬ । ಇತಿ । ಅದಾಭ್ಯಂ ಕೇನಾಪ್ಯತಿರಸ್ಕರಣೀಯಂ ವರೇಣ್ಯಂ ಸರ್ವೈರ್ಭಜನೀಯಂ ಬೃಹಸ್ಪತಿಂ । ಅಭಿಮತಫಲಂ ಯಾಚ ಇತಿ ಪೂರ್ವೇಣಾನ್ವಯಃ ॥ ವಿಶ್ವರೂಪಂ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಯದ್ವಾ । ವಿಶ್ವರೂಪಾಸ್ಯ ಸತೀತಿ ಅರ್ಶಆದಿತ್ವಾದಚ್‌ಪ್ರತ್ಯಯಃ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಅದಾಭ್ಯಂ । ದಭೇಶ್ಚೇತಿ ವಕ್ತವ್ಯಮಿತಿ ಣ್ಯತ್ಪ್ರತ್ಯಯಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಚರ್ಷಣೀನಾಂ**—ಮಾನವರಿಗೆ । **ವೃಷಭಂ**—ಇಷ್ಟಾರ್ಥಗಳನ್ನು ಕೊಡುವವನೂ । **ವಿಶ್ವರೂಪಂ**—ನಾನಾರೂಪವುಳ್ಳವನೂ । **ಅದಾಭ್ಯಂ**—ಯಾರಿಂದಲೂ ತಿರಸ್ಕರಿಸಲ್ಪಡದಿರುವವನೂ । **ವರೇಣ್ಯಂ**—ಎಲ್ಲರಿಗೂ ಪೂಜ್ಯನೂ ಆದ । **ಬೃಹಸ್ಪತಿಂ**—ಬೃಹಸ್ಪತಿಯನ್ನು (ಯಾಚಿಸುತ್ತೇನೆ) ;

### ಭಾವಾರ್ಥ

ಮಾನವರಿಗೆ ಇಷ್ಟಾರ್ಥಗಳನ್ನು ಕೊಡುವವನೂ, ನಾನಾರೂಪವುಳ್ಳವನೂ, ಯಾರಿಂದಲೂ ತಿರಸ್ಕರಿಸಲ್ಪಡದಿರುವವನೂ, ಎಲ್ಲರಿಗೂ ಪೂಜ್ಯನೂ ಆದ ಬೃಹಸ್ಪತಿಯನ್ನು ಯಾಚಿಸುತ್ತೇನೆ.

### English Translation

The showerer (of benefits) on men, the omniform, the irreproachable, the excellent Brihaspati.

### ವಿಶೇಷವಿಷಯಗಳು

**ವಿಶ್ವರೂಪಂ** ಎಂಬ ವಿಶೇಷಣಕ್ಕೆ ಸಾಯಣರು ಎರಡು ವಿಧವಾಗಿ ಅರ್ಥವನ್ನು ಹೇಳಿದ್ದಾರೆ. ಮೊದಲನೆಯದಾಗಿ **ವ್ಯಾಪ್ತರೂಪಂ** । ಸಕಲಪ್ರದೇಶಗಳಲ್ಲಿಯೂ ವ್ಯಾಪಿಸಿರುವ ರೂಪವುಳ್ಳವನೆಂದೂ, ಎರಡನೆಯದಾಗಿ, **ಯದ್ವಾ ವಿಶ್ವರೂಪಾನಾಮ ಗೋವಾಹನೋಪೇತಂ** । ವಿಶ್ವರೂಪಾ ಎಂಬ ಹೆಸರಿನ ಗೋವೇ ವಾಹನವಾಗಿ ಉಳ್ಳವನು ಎಂದೂ ಹೇಳಿದಾರೆ. ಈ ಎರಡು ವಿಧವಾದ ವಿವರಣೆಗಳೂ ಸಹ ಬೃಹಸ್ಪತಿಯ ಸ್ವರೂಪವನ್ನು ವರ್ಣಿಸುತ್ತವೆ. **ಏಷ ಉ ಏವ ಬೃಹಸ್ಪತಿಃ । ವಾಗ್ವೈ ಬೃಹಸ್ಪತಿಃ** ಸರ್ವವ್ಯಾಪಿಯಾದ ವಾಕ್ಕೇ ಬೃಹಸ್ಪತಿಯೆಂದೂ, ಅಂಗಿರಸ್, ಆಯಾಸ್ಯ ಇತ್ಯಾದ್ಯನೇಕರೂಪವುಳ್ಳದ್ದೂ ವಿಶ್ವವ್ಯಾಪಿಯಾದದ್ದೂ ಆದ ಉದ್ಗೀಥವೇ ಬೃಹಸ್ಪತಿಯೆಂದೂ, ವೈಶ್ವಾನರಾದಿ ನಾಮಗಳಿಂದಲೂ ರೂಪಗಳಿಂದಲೂ ವಿಶ್ವವ್ಯಾಪಿಯಾದ ಅಗ್ನಿಯೇ ಬೃಹಸ್ಪತಿಯೆಂದೂ ಹಿಂದೆ ಬೃಹಸ್ಪತಿಯ ವಿಶ್ವವ್ಯಾಪಕತ್ವವನ್ನು ವಿವರಿಸಿ ತಿಳಿಸಿದೆ. ಪ್ರಕೃತ, **ವಿಶ್ವರೂಪಾನಾಮಗೋವಾಹನೋಪೇತಂ** ಎಂಬ ವಿವರಣೆಯಿಂದ ಈ ವಿಶೇಷಣದ ಔಚಿತ್ಯವೇನೆಂಬುದನ್ನು ಪರಿಶೀಲಿಸಬೇಕು.

**ಅರುಣ್ಯೋ ಗಾವ ಉಷಸಾಂ । ಶ್ಯಾವಾ ಸವಿತುಃ । ವಿಶ್ವರೂಪಾ ಬೃಹಸ್ಪತೇಃ ॥**

(ನಿ. ೨-೨೮)

ಇಂದ್ರನಿಗೆ ಹರೀನಾಮಕವಾದ ಅಶ್ವಗಳೂ, ಉಷಸ್ಸಿಗೆ ಅರುಣವರ್ಣದ ಗೋವುಗಳೂ ಪೂಷನಿಗೆ ಅಜಗಳೂ ಹೀಗೆಯೇ ಇತರ ದೇವತೆಗಳಿಗೆ ಅವರಿಗನುಗುಣಗಳಾದ ವಾಹನಗಳೂ ಪ್ರಸಿದ್ಧವಾಗಿರುವಂತೆ ಬೃಹಸ್ಪತಿಗೆ ವಿಶ್ವರೂಪಾ ಎಂಬ ಗೋವು ವಾಹನವಾಗಿರುತ್ತದೆಂದು ಪ್ರಸಿದ್ಧವಾಗಿದೆ. ಸಾಯಣರೂ ಸಹ **ಬೃಹಸ್ಪತೇರ್ವಿಶ್ವರೂಪಾಮುಪಾಜತ** ಎಂಬ (ಋ. ಸಂ. ೧-೧೬೧-೬) ವಾಕ್ಯವನ್ನುದಾಹರಿಸಿ ಅಲ್ಲಿ **ವಿಶ್ವರೂಪಾ** ಎಂದರೆ ತನ್ನಾಮಕವಾದ ಗೋವೆಂದರ್ಥವಾಗುವಂತೆಯೇ ಪ್ರಕೃತದಲ್ಲಿಯೂ ವಿಶ್ವರೂಪನಾಮಕವಾದ ಗೋವುಳ್ಳವನೆಂದರ್ಥವಾಗುತ್ತದೆಂದು ಹೇಳಿದ್ದಾರೆ. ಆದರೆ, ೧-೧೬೧-೬ ನೇ ಋಕ್ಕನ್ನು ವಿವರಿಸುವಾಗ **ವಿಶ್ವರೂಪಾಂ** ಎಂಬ ಪದಕ್ಕೆ **ಗೋವೆಂದೇ** ಏಕೆ ಅರ್ಥವಾಗಬೇಕು ಎಂಬ ಆಶಂಕೆಯನ್ನೂ ತೋರಿಸಿ ಅದಕ್ಕೆ ಸಮಾಧಾನವನ್ನೂ ಹೇಳಿದ್ದಾರೆ.

CC-0. Jangamwadi Math Collection. Digitized by eGangotri

ಧೇನುಂ ಸಬರ್ದುಘಾಂ ಚಕ್ರುರಮೃತಂ ಸಬರುಚ್ಯತೇ ।
ಬೃಹಸ್ಪತೇರಥಾಶ್ವಿಭ್ಯಾಂ ರಥಂ ದಿವ್ಯಂ ತ್ರಿವಂಧುರಂ ॥

(ಬೃ. ದೇ. ೩–೮೫,೮೬)

ಅಮೃತವನ್ನು ಕರೆಯತಕ್ಕ ಧೇನುವನ್ನು ಋಭುಗಳು ಬೃಹಸ್ಪತಿಗಾಗಿ ನಿರ್ಮಿಸಿದರು ಎಂದು ತಿಳಿಸಿದೆ. ವಿಶ್ವರೂಪಾ ಎಂಬ ಹೆಸರನ್ನು ಹೇಳಿಲ್ಲ. ವಾಗ್ದೇವಿಯೇ ಈ ಧೇನುವೆಂದೂ, ನಾನಾಸ್ವರೂಪವುಳ್ಳ ವಾಕ್ಕಿನ ವೈವಿಧ್ಯಗಳೇ ವಿಶ್ವ-ರೂಪವುಳ್ಳವೆಂದೂ, ಪರಬ್ರಹ್ಮಸ್ವರೂಪವುಳ್ಳ ವಾಕ್ಕೇ ಅಮೃತವೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಈ ತಾತ್ಪ ರ್ಯಕ್ಕೂ ಶ್ರುತಿವಾಕ್ಯಗಳ ಆಧಾರಗಳನ್ನು ತೋರಿಸಬಹುದು.

ಯದ್ಯಪ್ಯತ್ರ ಗೌರಿತಿ ವಿಶೇಷೋ ನ ಶ್ರುತಃ ತಥಾಪಿ ಪೂರ್ವಂ ಧೇನುಂ ತತಕ್ಷುರ್ ಇತ್ಯುಕ್ತತ್ವಾತ್ ಪರಸ್ತಾಚ್ಚ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಂ ಇತಿ ವಕ್ಷ್ಯಮಾಣತ್ವಾಚ್ಚ ವಿಶ್ವರೂಪಾ ಗೌಃ ಇತ್ಯೇವಾಧ್ಯವಸೀಯತೇ ॥

ಪ್ರಕೃತದಲ್ಲಿ ಗೌಃ ಎಂಬ ವಿಶೇಷ್ಯವಿಲ್ಲ. ಆದರೂ ಸಹ ಹಿಂದೆ ಧೇನುನಿರ್ಮಾಣದ ವಿಷಯವನ್ನು ಹೇಳಿರುವುದ ರಿಂದಲೂ (೧-೧೬೧-೩) ಮುಂದೆಯೂ ಸಹ ವಿಶ್ವರೂಪಾಂ ಎಂದು ಗೋವಿನ ಸೃಷ್ಟಿವಿಷಯವನ್ನು ಹೇಳಿರುವುದ ರಿಂದಲೂ ಇಲ್ಲಿಯೂ ಸಹ ಗೋವೆಂದೇ ಅರ್ಥಮಾಡಬೇಕೆಂದು ಋ. ಸಂ. ೧–೧೬೧–೬ ನೇ ಋಕ್ಕನ್ನು ವಿವರಿಸಿದ್ದಾರೆ. ಅಲ್ಲದೇ,

ರಥಂ ಯೇ ಚಕ್ರುಃ ಸುವೃತಂ ನರೇಷ್ಠಾಂ ಯೇ ಧೇನುಂ ವಿಶ್ವಜುವಂ ವಿಶ್ವರೂಪಾಂ ।
ತ ಆ ತಕ್ಷನ್ತ್ವೃಭವೋ ರಯಿಂ ನಃ ಸ್ವವಸಃ ಸ್ವಪಸಃ ಸುಹಸ್ತಾಃ ॥

(ಋ. ಸಂ. ೪-೩೩-೮)

ಎಂಬಲ್ಲಿ ಋಭುಗಳು ಬೃಹಸ್ಪತಿಗೆ ವಿಶ್ವರೂಪಾ ಎಂಬ ಧೇನುವನ್ನು ಸೃಷ್ಟಿಸಿದ ವಿಷಯವು ಸ್ಪಷ್ಟವಾಗಿದೆ. ಅದೇ ಅಂಶವನ್ನು ಪ್ರಕೃತದಲ್ಲಿಯೂ ತಿಳಿಸಿ "ವಿಶ್ವರೂಪಂ" ಎಂಬ ವಿಶೇಷಣದಿಂದ ಬೃಹಸ್ಪತಿಯ ಸ್ವರೂಪವನ್ನು ವರ್ಣಿಸಿದೆ.

ವರೇಣ್ಯಂ—ಸಂಭಜನೀಯಂ । ಪೂಜ್ಯನಾದ ಬೃಹಸ್ಪತಿಯನ್ನು ; ಸಕಲದೇವತೆಗಳಿಗೂ ಮಾನವರಿಗೂ ಬೃಹಸ್ಪತಿಯು ಪೂಜ್ಯನಾಗಿದ್ದಾನೆ.

ಬ್ರಹ್ಮ ಹಿ ಬೃಹಸ್ಪತಿರ್ಬ್ರಹ್ಮ ಹಿ ಬ್ರಾಹ್ಮಣಾಃ ।

(ಶ. ಬ್ರಾ. ೫–೧–೫–೬)

ಬ್ರಹ್ಮ ವೈ ಬೃಹಸ್ಪತಿರ್ಬ್ರಹ್ಮಣೈವೈನಂ ತದ್ಭಿಷಜ್ಯತಿ ॥

(ಐ. ಬ್ರಾ. ೮–೧೯)

ಇತ್ಯಾದಿ ವಾಕ್ಯಗಳಲ್ಲೆಲ್ಲಾ ಬೃಹಸ್ಪತಿಯ ವರೇಣ್ಯತ್ವವನ್ನು ಪ್ರಶಂಸಿಸಿದೆ. ಇಂತಹ ಮಹತ್ತ್ವವುಳ್ಳ ಬೃಹಸ್ಪತಿಯ ಅನುಗ್ರಹವನ್ನು ಇಲ್ಲಿ ಪ್ರಾರ್ಥಿಸಿದೆ.

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಇಯಮ್ ತೇ ಪೂಷನ್ನಾಘೃಣೇ ಸುಷ್ಟುತಿರ್ದೇವ ನವ್ಯಸೀ ।

ಅಸ್ಮಾಭಿಸ್ತುಭ್ಯಂ ಶಸ್ಯತೇ ॥ ೭ ॥

ಪದಪಾಠಃ

ಇಯಮ್ । ತೇ । ಪೂಷನ್ । ಆಘೃಣೇ । ಸುಽಸ್ತುತಿಃ । ದೇವ । ನವ್ಯಸೀ ।

ಅಸ್ಮಾಭಿಃ । ತುಭ್ಯಂ । ಶಸ್ಯತೇ ॥ ೭ ॥

ಸಾಯಣಭಾಷ್ಯಂ

ಆಘೃಣೇ ಆಗತದೀಪ್ತಿಮನ್ ಹೇ ಪೂಷನ್ ದೇವ ನವ್ಯಸೀ ನವತರೇಯಮ್ ಸುಷ್ಟುತಿಃ ಶೋಭನಸ್ತುತಿರೂಪಾ ವಾಕ್ ತೇ ತ್ವತ್ಸಂಬಂಧಿನೀ ಭವತಿ । ಸೈಷಾ ಸ್ತುತಿರಸ್ಮಾಭಿಃ ಸ್ತೋತೃಭಿಸ್ತುಭ್ಯಂ ತ್ವದರ್ಥಂ ಶಸ್ಯತೇ । ತಾಂ ಜುಷಸ್ವೇತ್ಯುತ್ತರೇಣಾನ್ವಯಃ ॥

ಪ್ರತಿಪದಾರ್ಥ

ಆಘೃಣೇ—ಪ್ರಕಾಶಮಾನನಾದ । ಪೂಷನ್ ದೇವ—ಎಲೈ ಪೂಷದೇವನೇ । ನವ್ಯಸೀ—ನೂತನವಾದುದೂ । ಇಯಮ್ ಸುಷ್ಟುತಿಃ—ಶ್ರೇಷ್ಠವಾದುದೂ ಆದ ಈ ಸ್ತುತಿಯು । ತೇ—ನಿನಗೆ ಅರ್ಪಿತವಾಗತಕ್ಕದ್ದು । ಅಸ್ಮಾಭಿಃ—ಸ್ತೋತೃಗಳಾದ ನಮ್ಮಿಂದ । ತುಭ್ಯಂ—ನಿನ್ನನ್ನುದ್ದೇಶಿಸಿ । ಶಸ್ಯತೇ—ಸ್ತುತಿಸಲ್ಪಡುತ್ತದೆ.

ಭಾವಾರ್ಥ

ಪ್ರಕಾಶಮಾನನಾದ ಎಲೈ ಪೂಷದೇವನೇ, ನೂತನವಾದುದೂ, ಶ್ರೇಷ್ಠವಾದುದೂ ಆದ ಈ ಸ್ತುತಿಯು ನಿನಗೆ ಅರ್ಪಿತವಾಗತಕ್ಕದ್ದು. ಸ್ತೋತೃಗಳಾದ ನಮ್ಮಿಂದ ಈ ಸ್ತುತಿಯು ನಿನ್ನನ್ನುದ್ದೇಶಿಸಿ ನಿರ್ಮಿತವಾಗಿದೆ.

English Translation

Divine, resplendent, Pushan, this, your most recent laudation, is uttered by us to you.

ವಿಶೇಷವಿಷಯಗಳು

ಪೂಷನ್—ಪೂಷಾ ಯದ್ರಶ್ಮಿಪೋಷಂ ಪುಷ್ಯತಿ ತತ್ ಪೂಷಾ ಭವತಿ । (ನಿ. ೧೨-೧೬) ರಶ್ಮಿಗಳ ಆಧಿಕ್ಯವನ್ನು ಹೊಂದಿ ಜಗತ್ತನ್ನು ಪೋಷಿಸುವವನಾದುದರಿಂದ ಪೂಷಾ ಎಂಬ ಹೆಸರು ಎಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿದ್ದಾರೆ. ಈ ಲಕ್ಷಣದ ಸಾಮಂಜಸ್ಯವನ್ನು ತೋರಿಸಲು ನಿರುಕ್ತಕಾರರು ಋಕ್ಸಂಹಿತೆಯ ವಾಕ್ಯವನ್ನು ಆಧಾರವಾಗಿ ತೋರಿಸಿದ್ದಾರೆ.



CC-0. Jangamwadi Math Collection. Digitized by eGangotri

ಶುಕ್ರಂ ತೇ ಅನ್ಯದ್ಯಜತಂ ತೇ ಅನ್ಯದ್ವಿಷುರೂಪೇ ಅಹನೀ ದ್ಯೌರಿವಾಸಿ ।
ವಿಶ್ವಾ ಹಿ ಮಾಯಾ ಅವಸಿ ಸ್ವಧಾವೋ ಭದ್ರಾ ತೇ ಪೂಷನ್ನಿಹ ರಾತಿರಸ್ತು ॥

(ಋ. ಸಂ. ೬-೫೮-೧)

ಎಲೈ ಪೂಷನೇ, ನೀನು ತೇಜಸ್ಸಿನ ವೈವಿಧ್ಯವನ್ನು ಹೊಂದಿದ್ದೀಯೆ. ಅಹೋರಾತ್ರಿಗಳೆಲ್ಲವೂ ನಿನ್ನ ತೇಜಸ್ಸಿನ ಪ್ರಭಾವವಾಗಿವೆ. ನಿನ್ನ ಪ್ರಜ್ಞಾಪೂರಿತವಾದ ಸಕಲ ಕರ್ಮಗಳೂ ಸಹ ಸೂರ್ಯನ ಪ್ರಭಾವವನ್ನು ಸೂಚಿಸುವುವಾಗಿವೆ. ನೀನು ಅತ್ಯಧಿಕವಾದ ತೇಜಸ್ಸನ್ನು ಹೊಂದಿರುವವನಾಗಿರುವೆ ಎಂದು ಪೂಷನ ಗುಣವನ್ನು ವರ್ಣಿಸಿರುವ ಋಕ್ಕನ್ನು ಸಹ ಉದಾಹರಿಸಿ ತೇಜಸ್ಸೇ ಪೂಷನ ವಿಶೇಷಗುಣವೆಂದು ತಿಳಿಸಿದ್ದಾರೆ.

ಪುಷ್ಯನ್ ಕ್ಷಿತಿಂ ಪೋಷಯತಿ ಪ್ರಣುದನ್ ರಶ್ಮಿಭಿಸ್ತಮಃ ।
ತೇನೈನಮುಸ್ತೌತ್ಪೂಷೇತಿ ಭರದ್ವಾಜಸ್ತು ಪಂಚಭಿಃ ॥

(ಬೃ. ದೇ- ೨-೬೩)

ತೇಜೋರಾಶಿಯಿಂದ ಅಂಧಕಾರವನ್ನು ನಾಶಮಾಡಿ ಪೃಥ್ವಿಯು ಪೌಷ್ಕಲ್ಯವನ್ನು ಪಡೆಯುವಂತೆ ಅದನ್ನು ಪೋಷಿಸುವುದರಿಂದ ಪೂಷಾ ಎಂಬ ಹೆಸರು. ಈ ಪೂಷದೇವನನ್ನುದ್ದೇಶಿಸಿ ಸ್ತುತಿಗಳಿಂದ ಭರದ್ವಾಜಋಷಿಯು ಐದು ಸೂಕ್ತಗಳಲ್ಲಿ ಪೂಷನನ್ನು ಪ್ರಶಂಸಿಸಿದ್ದಾರೆ. ಆ ಸನ್ನಿವೇಶದಲ್ಲಿ ಪೂಷನ ಸಕಲ ಸದ್ಗುಣಗಳನ್ನೂ ವರ್ಣಿಸಿದೆ ಎಂದು ಬೃಹದ್ದೇವತಾಕಾರರು ತಿಳಿಸಿದ್ದಾರೆ.

ಇಯಂ ವೈ ಪೂಷಾ ಪೂಷೇಯಂ ಹೀದಂ ಸರ್ವಂ ಪುಷ್ಯತಿ ಯದಿದಂ ಕಿಂಚ ।

(ಶ. ಬ್ರಾ. ೧೪-೪-೨-೨೫)

ಸಕಲ ಪದಾರ್ಥಗಳನ್ನೂ ಪೋಷಿಸುವವನಾದುದರಿಂದ ಪೂಷನೆಂದು ಕರೆಯಲ್ಪಡುತ್ತಾನೆ ಎಂದು ಶತಪಥಬ್ರಾಹ್ಮಣದಲ್ಲಿ ಇವನ ಸ್ವರೂಪವು ವರ್ಣಿತವಾಗಿದೆ. ಪೂಷನು ದ್ವಾದಶಾದಿತ್ಯರಲ್ಲಿ ಒಬ್ಬನೇ ಅಥವಾ ತದತಿರಿಕ್ತನಾದ ಸ್ವತಂತ್ರ ದೇವತೆಯೇ ಎಂಬ ವಿಷಯದಲ್ಲಿ ಚರ್ಚೆಗವಕಾಶವಿದೆ.

ಯಾಸ್ತೇ ಪೂಷನ್ನಾವೋ ಅಂತಃ ಸಮುದ್ರೇ ಹಿರಣ್ಯಯೀರಂತರಿಕ್ಷೇ ಚರಂತಿ ।
ತಾಭಿರ್ಯಾಸಿ ದೂತ್ಯಾಂ ಸೂರ್ಯಸ್ಯ ಕಾಮೇನ ಕೃತ ಶ್ರವ ಇಚ್ಛಮಾನಃ ॥

(ಋ. ಸಂ. ೬-೫೮-೩)

ಎಲೈ ಪೂಷನೇ, ಯಾವ ನಿನ್ನ ಹಿತಕರವಾದದೂ, ರಶ್ಮಿರೂಪವಾದದೂ ಆದ ನೌಕೆಯು ಅಂತರಿಕ್ಷವೆಂಬ ಸಮುದ್ರದಲ್ಲಿ ಯಾನಮಾಡುತ್ತದೆಯೋ ಅಂತಹ ರಶ್ಮಿರೂಪವಾದ ನೌಕೆಯೊಡಗೂಡಿ ನೀನು ಸೂರ್ಯನ ದೂತನಾಗಿರುತ್ತೀಯೆ ಎಂಬ ಕೆಲವು ಸನ್ನಿವೇಶಗಳಿಂದ ಸೂರ್ಯನಿಗೂ, ಪೂಷನಿಗೂ ವ್ಯತ್ಯಸ್ತವಾದ ಅಂಶಗಳು ತೋರುತ್ತಿವೆಯೆಂದೂ ತೋರಿಸಿದ್ದಾರೆ. ಋ. ಸಂ. ೮-೨೯ನೇ ಸೂಕ್ತದಲ್ಲಿ ವಿಶ್ವೇದೇವತೆಗಳ ಸ್ವರೂಪವನ್ನು ವರ್ಣಿಸುವಾಗ ಪೂಷನ ಪರವಾಗಿರುವ ವರ್ಣನೆಯಲ್ಲಿ ಸೌರಗುಣವಾವುದೂ ನಿರ್ದಿಷ್ಟವಾಗಿಲ್ಲ. ಆದುದರಿಂದ ಸಾಂಪ್ರದಾಯಿಕವಾಗಿ ಪರಿಗಣಿತವಾದಂತೆ ಪೂಷನು ಆದಿತ್ಯದೇವತೆಯಲ್ಲವೆಂದು ಚರ್ಚಿಸಿ ಇವನು 'ಪಶುಪಾಲಕ' ಸ್ವರೂಪವುಳ್ಳ ದೇವತೆಯಾಗಿದ್ದು ತಾನೇ ಒಂದು ಪ್ರತ್ಯೇಕವಾದ ವೈಶಿಷ್ಟ್ಯವನ್ನು ಪಡೆದಿರುತ್ತಾನೆಂದು ತೋರಿಸಿದ್ದಾರೆ.

CC-0. Jangamwadi Math Collection. Digitized by eGangotri

ಪೂಷದೇವತಾಸ್ತೋತ್ರದ ಮುಖ್ಯಭಾಗವು ಋಕ್ಸಂಹಿತೆಯ ಆರನೆಯ ಮಂಡಲದಲ್ಲಿ ಅಧಿಕವಾಗಿದೆ. ಬೃಹದ್ದೇವತೆಯಲ್ಲಿ ತಿಳಿಸಿರುವಂತೆ, ಭಾರದ್ವಾಜಸಂತತಿಯ ಋಷಿಗಳು ಪೂಷನನ್ನು ಮುಖ್ಯದೇವತೆಯನ್ನಾಗಿಟ್ಟುಕೊಂಡಿದ್ದರೆಂದು ತಿಳಿಯುತ್ತದೆ. ಈ ಭಾಗವನ್ನು ಕೆಲವರು ಪೂಷಸಂಹಿತಾ ಎಂದೂ ಕರೆಯುತ್ತಾರೆ. ಇದಲ್ಲದೇ, ಸಂಹಿತೆಯ ಇತರ ಭಾಗಗಳಲ್ಲೂ ಸಹ ಇಂದ್ರ, ಸೋಮ ಇತ್ಯಾದಿ ಇತರ ದೇವತೆಗಳ ಜೊತೆಯಲ್ಲಿಯೂ ಪೂಷನು ಸ್ತುತನಾಗಿದ್ದಾನೆ. ಕಪರ್ದೀ, ಪಶುಸಾಧನೀ, ಅಷ್ಟ್ರಾ, ಕರಂಭಾದ್, ಅಜಾಶ್ವ ಇತ್ಯಾದಿ ವರ್ಣನೆಗಳು ಪೂಷನ ನಿರ್ದಿಷ್ಟವಾದ ಒಂದು ಚಿತ್ರವನ್ನು ಕೊಡುತ್ತವೆ. ಇತರ ದೇವತೆಗಳಿಗೂ ಇರುವ ಸಾಧಾರಣವಾದ ಗುಣಗಳ ಜೊತೆಗೆ ಆರನೆಯ ಮಂಡಲದಲ್ಲಿ ಪೂಷನ ಒಂದು ವಿಶೇಷವಾದ ಅಂಶಕ್ಕೆ ಪ್ರಾಮುಖ್ಯವು ಇದ್ದಂತೆ ತೋರುತ್ತದೆ. ಇವನು ಪಶುಪಾಲದೇವತೆಯೆಂದೂ, ಈ ದೇವತೆಯ ಅನುಗ್ರಹದಿಂದಲೇ ಆರಾಧಕರ ಪಶುಸಂಪತ್ತು ಹೆಚ್ಚಿಸಬೇಕೆಂದೂ ದಾರಿತಪ್ಪಿಸಿಕೊಂಡ ಗವಾದಿಗಳಿಗೆ ಇವನೇ ರಕ್ಷಕನೆಂದೂ ವಿಶದವಾಗಿ ಉಕ್ತವಾಗಿರುತ್ತದೆ.

ಪೂಷಾ ಗಾ ಅನ್ವೇತು ನಃ ಪೂಷಾ ರಕ್ಷತ್ವರ್ವತಃ । ಪೂಷಾ ವಾಜಂ ಸನೋತು ನಃ ॥

(ಋ. ಸಂ. ೬-೫೪-೫)

ಮಾಕಿರ್ನೇಶನ್ಮಾಕೀಂ ರಿಷನ್ಮಾಕೀಂ ಸಂ ಶಾರಿ ಕೇವಟೇ । ಅಥಾರಿಷ್ಟಾಭಿರಾ ಗಹಿ ।

(ಋ ಸಂ. ೬-೫೪-೭)

ಇತ್ಯಾದಿಯಾಗಿ ನಾನಾವಿಧವಾಗಿ ಪ್ರಾರ್ಥಿಸಿ ತಮ್ಮ ಪಶುಸಂಪತ್ತನ್ನು ವೃದ್ಧಿಪಡಿಸಬೇಕೆಂದು ಪ್ರಾರ್ಥಿಸಿದೆ.

ಮೇಲಿನ ಉದಾಹರಣೆಗಳಿಂದ ಪೂಷನನ್ನು ಸ್ವತಂತ್ರವಾದ ದೇವತೆಯೆಂದು ಕರೆಯಬಹುದಾದರೂ ಸಹ ದ್ವಾದಶಾದಿತ್ಯರಿಗಿಂತಲೂ ಅತಿರಿಕ್ತನೆಂದು ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಿದರೆ ಅದು ತಪ್ಪು ಆಗುತ್ತದೆ. ಹೇಗೆಂದರೆ ಪಶುಪಾಲನನೇ ಮುಂತಾದ ವಿಶೇಷಣಗಳು ಪೂಷನ ವೈಶಿಷ್ಟ್ಯವನ್ನು ತೋರಿಸತಕ್ಕ ಅಂಶಗಳಾದರೂ ಸಹ **ಸೂರ್ಯ, ಆರ್ಯಮ,** ಭಗ ಇತ್ಯಾದಿ ದೇವತೆಗಳನ್ನು ವರ್ಣಿಸಿರುವಂತೆಯೇ ಪೂಷನನ್ನು ತೇಜಃಪುಂಜರೂಪನಾದ ದೇವತೆಯೆಂದು ನಿರ್ದೇಶಿಸಿದೆ. ಯಾಸ್ಕರು ಪೂಷನನ್ನು ದ್ವಾದಶಾದಿತ್ಯರಲ್ಲಿ ಒಬ್ಬನಲ್ಲಿ ಪರಿಗಣಿಸಿದ್ದಾರೆ. Bloomfield ಎಂಬ ವಿದ್ವಾಂಸನೂ ಸಹ ಯಾಸ್ಕರ ಮತವನ್ನೇ ಅನುಸರಿಸುತ್ತಾ ಋ. ಸಂ. ೬-೪೮.೧೬ ; ೬-೫೫-೬ ; ೬-೫೫-೧ ಇತ್ಯಾದಿ ಋಕ್ಕುಗಳಲ್ಲಿರುವ ಆಘೃಣಿ ಎಂಬ ವಿಶೇಷಣದ ಆಧಾರದ ಮೇಲೆ ಪೂಷನು ಜ್ಯೋತಿಯನ್ನು ಬೆಳಗುವ ಆದಿತ್ಯದೇವತೆ ಎಂದು ಪ್ರತಿಪಾದಿಸಿದ್ದಾನೆ. ಈ ಅಭಿಪ್ರಾಯವನ್ನು ವಿರೋಧಿಸುವವರೂ ಕೆಲವರಿದ್ದಾರೆ. ಪ್ರಕೃತವಾದ ಋಕ್ಕಿನಲ್ಲಿಯೂ ಪ್ರಯೋಗಿಸಿರುವ ಆಘೃಣಿ ಎಂಬ ಪದವು ತೇಜೋಯುತನಾದ ಯಾವ ದೇವತೆಯಗುಣವನ್ನು ಬೇಕಾದರೂ ಹೇಳಬಹುದೆಂದೂ, ತೇಜೋಮಯನಾದ ಯಾವ ದೇವತೆಗೆ ಬೇಕಾದರೂ ಈ ವಿಶೇಷಣವು ಉಪಯೋಗಿಸಲ್ಪಡಬಹುದೆಂದೂ, ಆದಿತ್ಯನೇ ಆಗಿರಬೇಕೆಂಬ ನಿಯಮವಿಲ್ಲವೆಂದೂ, ಉದಾಹರಣೆಗಾಗಿ (ಋ. ಸಂ. ೮-೬೦-೨೦) ಕೆಲವೆಡೆಗಳಲ್ಲಿ ಅಗ್ನಿಪರವಾಗಿಯೂ ಈ ವಿಶೇಷಣವಿರುತ್ತದೆಂದೂ, ಈ ಒಂದು ವಿಶೇಷಣದಿಂದ ಮಾತ್ರ ಪೂಷನನ್ನು ಆದಿತ್ಯದೇವತೆ ಎಂದು ನಿಷ್ಕರ್ಷಿಸಲು ಸಾಧ್ಯವಿಲ್ಲವೆಂದೂ ಚರ್ಚಿಸುತ್ತಾರೆ. ಯಾಸ್ಕರು, ಬೃಹದ್ದೇವತಾಕರ್ತರು ಇತ್ಯಾದಿ ವೈದಿಕಸಂಪ್ರದಾಯದವರು ಆಘೃಣಿ ಎಂಬುದು ಪೂಷನ ವೈಶಿಷ್ಟ್ಯವನ್ನು ಮಾತ್ರ ತೋರಿಸತಕ್ಕ ವಿಶೇಷಗುಣವೆಂದು ಪ್ರತಿಪಾದನೆಮಾಡಿದ್ದಾರೆ. ಯಾಸ್ಕರು ನಿರುಕ್ತದಲ್ಲಿ ಈ ಪದದ ನಿರ್ವಚನವನ್ನು ಹೇಳುವಾಗ **ಆಘೃಣಿರಾಹೃತ-ಹೃಣಿಃ** ಎಂದು ವಿವರಿಸಿ,

CC-0. Jangamwadi Math Collection. Digitized by eGangotri

ಏಹಿ ವಾಂ ವಿಮುಚೋ ನಪಾದಾಘೃಣೇ ಸಂ ಸಚಾವಹೈ । ರಥೀರ್ಋತಸ್ಯ ನೋ ಭವ ।

(ಋ. ಸಂ ೬-೫೫-೧)

ಎಂಬ ಋಕ್ಕಿನಲ್ಲಿರುವ ಪದವನ್ನು ನಿರ್ದೇಶಿಸಿ ತಮ್ಮ ಅಭಿಪ್ರಾಯವನ್ನು ಹೇಳಿದ್ದಾರೆ. ಆದರೆ, ಅಗತಘೃಣಿಃ ಎನ್ನುವಲ್ಲಿ ಘೃಣಿಯೆಂಬ ಶಬ್ದಕ್ಕೆ ನಿಷ್ಕೃಷ್ಟವಾದ ಅರ್ಥವನ್ನು ಹೇಳಿಲ್ಲ ಘೃಣಿಶಬ್ದವು ದೀಪ್ತಿವಚನಗಳಲ್ಲಿಯೂ (ನಿ. ೨-೨೮) ಹಾಗೆಯೇ ಕ್ರೋಧನಾಮಗಳಲ್ಲಿಯೂ (ನಿ. ೩-೯) ಪಠಿತವಾಗಿದೆ. ಆದುದರಿಂದ ದುರ್ಗಾಚಾರ್ಯರು ಈ ಪದಕ್ಕೆ ವ್ಯಾಖ್ಯಾನವನ್ನು ಮಾಡುವಾಗ ಅಘೃಣಿಶಬ್ದೋ ದೀಪ್ತಿವಾಚಕಃ । ದೀಪ್ತಿಕರ್ಮಸು ಚ ಪಠಿತ ಏವಾಯಂ ಘೃಣಿಃ ಇತಿ । ಘೃಣಿ ಶಬ್ದವು ಪ್ರಕಾಶವೆಂಬ ಅರ್ಥವನ್ನು ಕೊಡುವ ದೀಪ್ತಿವಾಚಕಗಳಲ್ಲಿ ಪಠಿತವಾಗಿರುವುದರಿಂದ ಪ್ರಕಾಶಮಾನವಾದ ಎಂಬ ಒಂದರ್ಥವೂ, ಕ್ರೋಧೋಽಪಿ ಘೃಣಿರುಚ್ಯತೇ । ಘೃಣಿಶಬ್ದಕ್ಕೆ ಕ್ರೋಧವೆಂಬರ್ಥವೂ ಇರುವುದರಿಂದ, ಯಾವ ಪೂಷನ ಆಗ್ರಹವು ನಮ್ಮ ಮೇಲೆ ಪ್ರಯೋಗಿಸಲ್ಪಡಬಹುದೋ ಅಂತಹ ಪೂಷನನ್ನು ಸೇವಿಸೋಣ ಎಂದೂ ಈ ರೀತಿ ಎರಡು ವಿಧವಾದ ವಿವರಣೆಯೂ ಸಾಧ್ಯವೆಂದು ತೋರಿಸಿದ್ದಾರೆ. ಬೃಹದ್ದೇವತಾಕಾರರು ಇನ್ನೊಂದು ವಿಧವಾಗಿ ಈ ವಿಶೇಷಣವನ್ನು ವಿವರಿಸಿದ್ದಾರೆ.

ತೃಚೋ ವಿಶ್ವೇಷಾಂ ದೇವಾನಾಂ ಪೂಷ್ಣ ಆಘೃಣಯೋ ತೃಚಃ ।
ಆಸಕ್ತೋ ಹಿ ಘೃಣಿಸ್ತಸ್ಯ ದಧ್ನಃ ಪೂರ್ಣೋ ದೃತೀ ರಥೇ ॥
ಆಘೃಣಿಸ್ತತ್ಸ್ಮೃತಃ ಪೂಷಾ ಕೀರಿಭೀ ರಿಭ್ಯತೇ ತತಃ ॥

(ಬೃ. ದೇ. ೩·೯೫, ೯೬)

ದಧಿಯಿಂದ (ಮಾದಕದ್ರವ್ಯ) ತುಂಬಿದ ಚರ್ಮದ ಚೀಲವು ಅವನ ರಥಕ್ಕೆ ಕಟ್ಟಿರುವುದರಿಂದ ಅವನಿಗೆ ಆಘೃಣಿಯೆಂಬ ಹೆಸರಿದೆಯೆಂದು ತೋರಿಸಿ ಆದುದರಿಂದಲೇ ಸ್ತುತಿಕರ್ತರಾದ ಕವಿಗಳು ಪೂಷನನ್ನು ಆಘೃಣಿ ಎಂದು ಸ್ತುತಿಸಿದ್ದಾರೆಂದೂ ತಿಳಿಸಿದೆ. ಸಾಧಾರಣವಾಗಿ ಸಾಯಣರು ಈ ಪದವು ಬರತಕ್ಕ ಎಲ್ಲಾ ಸ್ಥಳಗಳಲ್ಲಿಯೂ ಸಹ ಆಗತದೀಪ್ತೇ ಪೂಷನ್ ಎಂದೇ ಅರ್ಥಮಾಡಿದ್ದಾರೆ. ಈ ಪದವು (ಆಘೃಣಿ) ೮-೬೦-೨೦ ರಲ್ಲಿ ಮಾತ್ರ ಅಗ್ನಿಗೆ ವಿಶೇಷಣವಾಗಿದೆ. ಉಳಿದೆಡೆಗಳಲ್ಲೆಲ್ಲಾ ಪೂಷನಿಗೇ ವಿಶೇಷಣವಾಗಿ ಅವನ ವೈಶಿಷ್ಟ್ಯವನ್ನು ತಿಳಿಸುತ್ತದೆ.

———:o:———

ಸಂಹಿತಾಪಾಠಃ

ತಾಂ ಜುಷಸ್ವ ಗಿರಂ ಮಮ ವಾಜಯಂತೀಮವಾ ಧಿಯಂ ।
ವಧೂಯುರಿವ ಯೋಷಣಾಂ ॥ ೮ ॥

ಪದಪಾಠಃ

ತಾಂ । ಜುಷಸ್ವ । ಗಿರಂ । ಮಮ । ವಾಜಽಯಂತೀಂ । ಅವ । ಧಿಯಂ ।
ವಧೂಯುಃಽಇವ । ಯೋಷಣಾಂ ॥ ೮ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಪೂಷನ್ ಸ್ತೋತ್ರಂ ಕುರ್ವಾಣಸ್ಯ ಮಮ ತಾಂ ತಾದೃಶೀಂ ಗಿರಂ ಸ್ತುತಿಲಕ್ಷಣಾಂ ವಾಚಂ ಜುಷಸ್ವ । ಸೇವಸ್ವ । ಸ್ತುತ್ಯಾ ಪ್ರೀತಸ್ತ್ವಂ ವಾಜಯಂತೀಂ ವಾಜಮನ್ನಮಿಚ್ಛಂತೀಂ ಹರ್ಷಕಾರಿಣೀಂ ಧಿಯಮಿಮಾಂ ಸ್ತುತಿಂ ಪ್ರತ್ಯೇವ । ಅಭಿಗಚ್ಛ । ತತ್ರ ದೃಷ್ಟಾಂತಃ । ವಧೂಯುರಿವ । ಯಥಾ ವಧೂಯುಃ ಸ್ತ್ರೀಕಾಮೋ ಯೋಷಣಾಂ ಸ್ತ್ರಿಯಂ ಪ್ರತ್ಯಾಗಚ್ಛತಿ ತದ್ವತ್ ॥ ವಾಜಯಂತೀಂ । ವಾಜಶಬ್ದಾದಿಚ್ಛ- ತೀತ್ಯರ್ಥೇ ಕ್ಯಚ್ । ತದಂತಾಚ್ಛತರಿ ಜೀಪಿ ರೂಪಂ । ಜೀಪೋಽನುದಾತ್ತತ್ವೇ ಪ್ರತ್ಯಯಸ್ವರಃ । ಅವ । ಅವ ರಕ್ಷಣಾದಿಷ್ವಿತ್ಯಸ್ಯ ಲೋಟಿ ರೂಪಂ ॥

ಪ್ರತಿಪದಾರ್ಥ

ಎಲೈ (ಪೂಷದೇವನೇ) । ಮಮ—ಸ್ತುತಿಕರ್ತನಾದ ನನ್ನ । ತಾಂ ಗಿರಂ—ಸ್ತುತಿರೂಪವಾದ ಈ ವಾಕ್ಕನ್ನು । ಜುಷಸ್ವ—ಸೇವಿಸು । ವಾಜಯಂತೀಂ—ಅನ್ನವನ್ನು ಸಂಪಾದಿಸತಕ್ಕ । ಧಿಯಂ—ಈ ಸ್ತುತಿಯನ್ನು। ಯೋಷಣಾಂ—ಸ್ತ್ರೀಗೆ ಅಭಿಮುಖವಾಗಿ । ವಧೂಯುರಿವ—ಸ್ತ್ರೀಕಾಮನು ಬರುವಂತೆ । ಅವ—ಎದುರು ಗೊಂಡು ಬಾ.

ಭಾವಾರ್ಥ

ಎಲೈ ಪೂಷದೇವನೇ, ಸ್ತುತಿಕರ್ತನಾದ ನನ್ನ ಸ್ತುತಿರೂಪವಾದ ಈ ವಾಕ್ಕನ್ನು ಸೇವಿಸು. ಸ್ತ್ರೀಕಾಮನು ಸ್ತ್ರೀಗೆ ಅಭಿಮುಖನಾಗಿ ಬರುವಂತೆ ಅನ್ನವನ್ನು ಸಂಪಾದಿಸಿ ಹರ್ಷಕಾರಕವಾದ ಈ ಸ್ತುತಿಗೆ ಅಭಿಮುಖವಾಗಿ ಬಾ.

English Translation

Be pleased by this my praise, and incline to this food-supplicating laudation as an uxorious (husband) to his wife.

ವಿಶೇಷವಿಷಯಗಳು

ಗಿರಂ, ಧಿಯಂ ಎಂಬ ಎರಡು ಪದಗಳೂ ಇಲ್ಲಿ ಸ್ತುತಿ ಪರ್ಯಾಯವಾಗಿವೆ. ಸ್ತುತಯೋ ಗಿರಃ ಗೃಣಾತೇಃ (ನಿ. ೧-೧೧). ಶಬ್ದಮಾಡು ಎಂಬರ್ಥವಿರುವ ಗೄ ಧಾತುವಿನಿಂದ ಗಿರ್ ಶಬ್ದವು ನಿಷ್ಪನ್ನವಾಗಿದೆಯೆಂದು ನಿರುಕ್ತ ಕಾರರು ನಿರ್ವಚನವನ್ನು ತೋರಿಸಿದ್ದಾರೆ. ಮತ್ತು ಇದನ್ನು ಸಮರ್ಥಿಸಲು, ತಮಿದ್ವರ್ಧಂತು ನೋ ಗಿರಃ ಸದಾ- ವೃಧಂ (ಋ. ಸಂ. ೮-೧೩-೧೮) ಎಂಬ ಋಕ್ಕಿನಲ್ಲಿರುವ ಸ್ತುತ್ಯರ್ಥಕವಾದ ಗಿರಃ ಎಂಬ ಪದದ ಉದಾಹರಣೆಯನ್ನು ತೋರಿಸಿ ವಿವರಿಸಿದ್ದಾರೆ.

ಧಿಯಃ—ಈ ಪದವು ಕರ್ಮನಾಮಗಳಲ್ಲಿ ಪಠಿತವಾಗಿದೆ. ಅಲ್ಲದೇ,

ಮಹೋ ಅರ್ಣಃ ಸರಸ್ವತೀ ಪ್ರಚೇತಯತಿ ಕೇತುನಾ । ಧಿಯೋ ವಿಶ್ವಾ ವಿರಾಜತಿ ॥

(ಋ ಸಂ. ೧-೩-೧೨)

ಎಂಬ ಋಕ್ಕನ್ನುದಾಹರಿಸಿ ನಿರುಕ್ತಕಾರರು ಸರ್ವಾಣಿ ಪ್ರಜ್ಞಾನಾನಿ । ನಮ್ಮ ಸಕಲವಾದ ಮತ್ತು ಪ್ರಜ್ಞಾಯುತ ವಾದ ಧ್ಯಾನಗಳು ಎಂದರ್ಥಮಾಡಿದ್ದಾರೆ. ಸ್ತುತಿಯೂ ಸಹ ಧ್ಯಾನಾತ್ಮಕವೂ ಪ್ರಜ್ಞಾತ್ಮಕವೂ ಆದುದರಿಂದ

CC-0. Jangamwadi Math Collection. Digitized by eGangotri

ಧೀಶಬ್ದವಾಚ್ಯವಾಗಿದೆ. ಧ್ಯಾನಪರರಾದ ಸ್ತುತಿಕರ್ತರೂ ಕೆಲವು ಸಂದರ್ಭಗಳಲ್ಲಿ ಧೀಶಬ್ದವಾಚ್ಯರಾಗಿದ್ದಾರೆ. ಪ್ರಕೃತದಲ್ಲಿ ಧಿಯಂ ಎಂಬುದಕ್ಕೆ ಸ್ತುತಿಯನ್ನು ಎಂದರ್ಥ.

ಪೂಷನಿಗೂ ಧೀ ರೂಪವಾದ ಸ್ತುತಿಗೂ ಇರತಕ್ಕ ಸಂಬಂಧವನ್ನು ತಾರುಣ್ಯವನ್ನು ಹೊಂದಿರುವ ಸ್ತ್ರೀಪುರುಷರ ಸಂಬಂಧಕ್ಕೆ ಹೋಲಿಸಿದೆ. ಶೋಭನಾಲಂಕೃತಳೂ, ಸುಸಂಸ್ಕೃತಳೂ ಸುಂದರಳೂ ಆದ ಸ್ತ್ರೀಯು ಉತ್ತಮನಾದ ಪುರುಷನನ್ನು ಆಕರ್ಷಿಸುವಂತೆ ಸುಸಂಸ್ಕೃತವಾದ ಸ್ತುತಿಯು ಪೂಷನನ್ನು ಆಕರ್ಷಿಸುತ್ತದೆ ಎಂದು ಇಲ್ಲಿರುವ ಉಪಮಾರೂಪವಾದ ವರ್ಣನವು ಕಾವ್ಯಾತ್ಮಕವಾಗಿದೆ. ಅಗ್ನ್ಯಾದಿ ದೇವತೆಗಳಿಗೂ ಹವಿಸ್ಸಿಗೂ ಇರತಕ್ಕ ಪ್ರೇಮವನ್ನೂ, ಸ್ತುತಿಗಳಿಗೂ ದೇವತೆಗಳಿಗೂ ಇರುವ ಪ್ರೇಮವನ್ನೂ, ಇಂದ್ರನಿಗೂ ಸೋಮನಿಗೂ ಇರುವ ಪ್ರೇಮು ವನ್ನೂ ಸಹ ನವತರುಣತರುಣಿಯರಿಗಿರತಕ್ಕ ಪ್ರೇಮಬಂಧಕ್ಕೆ ಹೋಲಿಸಿರುವುದು ಋಕ್ಸಂಹಿತೆಯಲ್ಲಿ ಅಪರೂಪ ವೇನಲ್ಲ.

**ಶಯೇ ವವ್ರಿಶ್ಚರತಿ ಜಿಹ್ವಯಾದನ್ರೇರಿಹ್ಯತೇ ಯುವತಿಂ ವಿಶ್ಪತಿಃ ಸನ್ ।**

(ಋ. ಸಂ. ೧೦-೪-೪)

ಗೃಹಕ್ಕೂ ಅದರ ಪ್ರಜೆಗಳಿಗೂ ಒಡೆಯನಾದ ಅಗ್ನಿಯು ಆಹುತಿರೂಪದ ಯುವತಿಯನ್ನು ತನ್ನ ಜ್ವಾಲಾರೂಪದ ಮುಖದಿಂದ ಆಲಂಗಿಸುತ್ತಾನೆ. ಅಥವಾ ಪೃಥಿವೀರೂಪ ತರುಣಿಯನ್ನು ಆಲಿಂಗಿಸುತ್ತಾನೆ.

**ಅಯಂ ಯೋನಿಶ್ಚಕೃಮಾ ಯಂ ವಯಂ ತೇ ಜಾಯೇವ ಪತ್ಯ ಉಶತೀ ಸುವಾಸಾಃ ।**

(ಋ. ಸಂ. ೪-೩-೨)

ಎಲೈ ಅಗ್ನಿಯೇ, ಪತಿಯ ತೃಪ್ತ್ಯರ್ಥವಾಗಿ ಶ್ರೇಷ್ಠವಾದ ವಸ್ತ್ರಗಳಿಂದಲೂ ಆಭರಣಗಳಿಂದಲೂ ಪತ್ನಿಯನ್ನು ಅಲಂಕರಿಸಿ ತೃಪ್ತಿಪಡಿಸುವಂತೆ ನಿನ್ನ ಆಗಮನಕ್ಕಾಗಿ ಉತ್ತರವೇದಿರೂಪವಾದ ಈ ಯಜ್ಞಸ್ಥಾನವನ್ನು ಸುಸಂಸ್ಕೃತ ವನ್ನಾಗಿ ಮಾಡಿ ನಿನಗೆ ಆಕರ್ಷಕವಾಗಿರುವಂತೆ ಮಾಡುತ್ತೇವೆ, ಎಂದಿರುವಂತೆಯೇ ಸ್ತುತಿಗೂ ದೇವತೆಗೂ ಇರುವ ಆಕರ್ಷಕಸಂಬಂಧವನ್ನೂ ಇಲ್ಲಿ ವರ್ಣಿಸಿದೆ. **ಉಕ್ಥೇ ವಾ ಯಸ್ಯ ರಣ್ಯಸಿ** (೮-೧೨-೧೮) **ಯಸ್ಮಿನ್ನುಕ್ಥಾನಿ ರಣ್ಯಂತಿ ವಿಶ್ವಾನಿ ಚ ಶ್ರವಸ್ಯಾ** (೮-೧೬-೨) ಇತ್ಯಾದಿ ಸ್ಥಳಗಳಲ್ಲಿ ಇಂದ್ರಾದಿಗಳು ಸ್ತುತಿಗಳಲ್ಲಿ ಸೇರಿ ರಮಿಸು ವುದೂ, ಸ್ತುತಿಗಳು ಇಂದ್ರಾದಿದೇವತೆಗಳಲ್ಲಿ ಸೇರಿ ರಮಿಸುವುದೂ ಆಕರ್ಷಕವಾದ ರೀತಿಯಲ್ಲಿ ವರ್ಣಿತವಾಗಿವೆ. ಈ ಸಂತೋಷವೂ ಸಂತೃಪ್ತಿಯೂ ಸಹ ನವತರುಣತರುಣಿಯರ ಆಕರ್ಷಕವಾದ ಮಿಳನದಿಂದ ಉಂಟಾಗುವ ಸಂತೋಷಕ್ಕೂ ಸಂತೃಪ್ತಿಗೂ ಹೋಲಿಸಲ್ಪಟ್ಟಿರುವ ಸನ್ನಿವೇಶಗಳು ಮೇಲೆ ಉದಾಹೃತವಾಗಿರುವಂತೆಯೇ ಬಹು ಹೇರಳವಾಗಿವೆ. ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಅದೇ ಅಂಶವನ್ನು ವಿವರಿಸುತ್ತಾ ಸ್ತುತಿಯನ್ನು ಸುಂದರಳಾದ ಸ್ತ್ರೀಗೂ, ಪೂಷನನ್ನು ಇಂತಹ ಸ್ತ್ರೀಕಾಮುಕನಾದ ತರುಣನಿಗೂ ಹೋಲಿಸಿದೆ. ಎಂದರೆ ಸ್ತುತಿಕರ್ತನ ಸ್ತುತಿಯು ಪೂಷನನ್ನು ಆಕರ್ಷಿಸುವ ರೀತಿಯಲ್ಲಿ ಅಲಂಕೃತವೂ ಸುಸಂಸ್ಕೃತವೂ ಆಗಿರುವುದೆಂದು ತಾತ್ಪರ್ಯ.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯೋ ವಿಶ್ವಾಭಿ ವಿಪಶ್ಯತಿ ಭುವನಾ ಸಂಚ ಪಶ್ಯತಿ ।

ಸ ನಃ ಪೂಷಾವಿತಾ ಭುವತ್ ॥ ೯ ॥

ಪದಪಾಠಃ

ಯಃ । ವಿಶ್ವಾ । ಅಭಿ । ವಿಽಪಶ್ಯತಿ । ಭುವನಾ । ಸಂ । ಚ । ಪಶ್ಯತಿ ।

ಸಃ । ನಃ । ಪೂಷಾ । ಅವಿತಾ । ಭುವತ್ ॥ ೯ ॥

ಸಾಯಣಭಾಷ್ಯಂ

ಯಃ ಪೂಷಾ ವಿಶ್ವಾ ಭುವನಾ ಸರ್ವಾಁಲ್ಲೋಕಾನಭಿ ಆಭಿಮುಖ್ಯೇನ ವಿಪಶ್ಯತಿ ವಿಶೇಷೇಣ ಪಶ್ಯತಿ । ಕಿಂಚ ತಾನಿ ಸಂ ಪಶ್ಯತಿ ತತ್ತದ್ವಸ್ತುಯಾಥಾತ್ಮ್ಯಂ ಸಮ್ಯಕ್ ಜಾನಾತಿ । ಸ ತಾದೃಶಃ ಪೂಷಾ ದೇವೋ ನೋಽಸ್ಮಾಕಮವಿತಾ ರಕ್ಷಕೋ ಭುವತ್ । ಭವತು ॥ ವಿಪಶ್ಯತಿ । ಯದ್ವೃತ್ತಯೋಗಾದ-ನಿಘಾತಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ತಿಙಃ ಚೋದಾತ್ತವತೀತಿ ಗತೇರ್ನಿಘಾತಃ । ಪಶ್ಯತಿ । ಅತ್ರ ಸಕರ್ಮಕತ್ವಾತ್ಪರಸ್ಮೈಪದಂ । ಪೂರ್ವವದನಿಘಾತಃ । ಭುವತ್ । ಭವತೇರ್ಲೇಟ್ಯಡಾ-ಗಮಃ । ಭೂಸುವೋಸ್ತಿಙೀತಿ ಗುಣಪ್ರತಿಷೇಧ ಉವಙಾದೇಶಃ । ನಿಘಾತಃ ॥

ಪ್ರತಿಪದಾರ್ಥ

ಯಃ—ಯಾವ ಪೂಷದೇವನು । ವಿಶ್ವಾ—ಸಮುಸ್ತವಾದ । ಭುವನಾ—ಲೋಕಗಳನ್ನೂ । ಅಭಿ ವಿಪಶ್ಯತಿ—ವೀಕ್ಷಿಸಿ ನೋಡುತ್ತಾನೆಯೋ (ಮತ್ತು) । ಸಂ ಪಶ್ಯತಿ—ಸೂಕ್ಷ್ಮವಾಗಿ ಪ್ರತಿವಸ್ತುವಿನ ಸತ್ಯಸ್ವರೂಪ ವನ್ನು ತಿಳಿಯಬಲ್ಲನೋ । ಸಃ—ಅಂತಹ ಪೂಷಾ—ಪೂಷದೇವನು । ನಃ—ನಮಗೆ । ಅವಿತಾ—ರಕ್ಷಕನಾಗಿ । ಭುವತ್—ಆಗಿರಲಿ.

ಭಾವಾರ್ಥ

ಯಾವ ಪೂಷದೇವನು ಸಮುಸ್ತವಾದ ಲೋಕಗಳನ್ನೂ ವೀಕ್ಷಿಸಿ ನೋಡುತ್ತಾನೆಯೋ ಮತ್ತು ಪ್ರತಿಯೊಂದು ವಸ್ತುವಿನ ಯಾಥಾರ್ಥ್ಯವನ್ನೂ ಸೂಕ್ಷ್ಮವಾಗಿ ತಿಳಿಯುತ್ತಾನೆಯೋ ಅಂತಹ ಪೂಷದೇವನು ನಮಗೆ ರಕ್ಷಕನಾಗಿರಲಿ.

English Translation

May that Pushan, who looks upon all the worlds, who thoroughly contemplates them, be our protector.

ವಿಶೇಷವಿಷಯಗಳು

ಸವಿತೃವಿಗೂ, ಆದಿತ್ಯನಿಗೂ ಯಾವ ವಿಶ್ವದರ್ಶನಶಕ್ತಿಯು ಸ್ವರೂಪಗುಣವೆಂದು ವರ್ಣಿತವಾಗಿದೆಯೋ ಅದೇ ಗುಣವು ಪ್ರಕೃತವಾದ ಋಕ್ಕಿನಲ್ಲಿಯೂ ವರ್ಣಿತವಾಗಿದೆ. ವಿಶ್ವಾ ಭುವನಾ ಅಭಿ ವಿಪಶ್ಯತಿ ಎಂಬ ವಾಕ್ಯದಿಂದ

CC-0. Jangamwadi Math Collection. Digitized by eGangotri

ಜಗಚ್ಚಕ್ಷುವಾದ ಆದಿತ್ಯನ ಗುಣವನ್ನೇ ಹೇಳಿದಂತಾಯಿತು, ಎಂದರೆ, ಆಘೃಣಿಃ ಎಂಬ ವಿಶೇಷಣವು ಪೂಷನಲ್ಲಿರುವ ಆದಿತ್ಯಸ್ವರೂಪವನ್ನು ನಿರ್ದಿಷ್ಟವಾಗಿ ತಿಳಿಸುತ್ತದೆಂದು ಹಿಂದೆ ತಿಳಿಸಿದೆ. ಈ ತೇಜಸ್ಸಿನಿಂದಲೇ ವಿಶ್ವವನ್ನೆಲ್ಲಾ ವೀಕ್ಷಿಸ ತಕ್ಕ ಶಕ್ತಿಯು ಪೂಷನಲ್ಲಿದೆ.

> ಪ್ರಪಥೇ ಪಥಾಮಜನಿಷ್ಟ ಪೂಷಾ ಪ್ರಪಥೇ ದಿವಃ ಪ್ರಪಥೇ ಪೃಥಿವ್ಯಾಃ ।
> ಉಭೇ ಅಭಿ ಪ್ರಿಯತಮೇ ಸಧಸ್ಥೇ ಆ ಚ ಪರಾ ಚ ಚರತಿ ಪ್ರಜಾನನ್ ॥

(ಋ. ಸಂ. ೧೦-೧೭-೬)

ಅಂತರಿಕ್ಷಕ್ಕೆ ಹೋಗತಕ್ಕ ಯಾವ ಮಾರ್ಗವಿದೆಯೋ, ದ್ಯುಲೋಕಕ್ಕೆ ಒಯ್ಯುವ ಯಾವ ಉತ್ಕೃಷ್ಟವಾದ ಮಾರ್ಗ ವಿದೆಯೋ, ಪೃಥಿವಿಯ ಉತ್ಕೃಷ್ಟವಾದ ಯಾವ ಮಾರ್ಗವಿದೆಯೋ ಇಂತಹ ಸಕಲ ಲೋಕಗಳ ಮಾರ್ಗಗಳನ್ನು ವೀಕ್ಷಿಸುತ್ತಲೂ, ರಕ್ಷಿಸುತ್ತಲೂ ಸಹ ಪೂಷನು ಸರ್ವತ್ರ ಸಂಚರಿಸುತ್ತಾನೆ ಎಂಬ ವರ್ಣನೆಯು ಆದಿತ್ಯನ ವಿಶ್ವಸಂಚಾರ ಮಾರ್ಗವೇ ಆಗಿದೆ. ಇಂತಹ ಸಕಲಲೋಕಗಳನ್ನೂ ವೀಕ್ಷಿಸುತ್ತಾನೆ ಎಂಬುವಾಗ ಅಭಿ ವಿಪಶ್ಯತಿ; ಸಂಪಶ್ಯತಿ ಎಂಬ ದ್ವಿರುಕ್ತಿಯಿದೆ. ಸಂ ಪಶ್ಯತಿ ಎಂಬುದಕ್ಕೆ ತತ್ತದ್ವಸ್ತುಯಾಥಾತ್ಮ್ಯಂ ಸಮ್ಯಗ್ ಜಾನಾತಿ । ಆಯಾ ವಸ್ತುಗಳ ಸೂಕ್ಷ್ಮಸ್ವರೂಪವನ್ನೂ ಪೂರ್ಣವಾಗಿ ಅರಿಯುತ್ತಾನೆ ಎಂದರ್ಥ. ಇಂತಹ ಸಮ್ಯಗ್‌ದರ್ಶನಶಕ್ತಿಯು ವಿಶ್ವಾತ್ಮನಿಗೊಬ್ಬನಿಗಲ್ಲದೇ ಅನ್ಯರಿಗೆ ಸಾಧ್ಯವಿಲ್ಲ. ಸಾಧಾರಣದೃಷ್ಟಿಗೆ ಇದು ಗೋಚರವಾಗತಕ್ಕದ್ದಲ್ಲ. ಒಂದು ವೇಳೆ ಆ ಸಮ್ಯಗ್‌ದರ್ಶನಶಕ್ತಿಯನ್ನು ಅಪೇಕ್ಷಿಸುವ ತತ್ತ್ವಜ್ಞಾನಿಯೂ ಸಹ ಪೂಷನ ಅನುಗ್ರಹವನ್ನೇ ಅಪೇಕ್ಷಿಸು ತ್ತಾನೆ. ಹೇಗೆಂದರೆ,

> ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ । ತತ್ತ್ವಂ ಪೂಷನ್ನಪಾವೃಣು ಸತ್ಯ-
> ಧರ್ಮಾಯ ದೃಷ್ಟಯೇ । ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ ।
> ಸಮೂಹ ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ॥

(ಬೃ. ಉ. ೫-೧೫-೧,೨)

ಸತ್ಯಸ್ವರೂಪಿಯಾದ ಬ್ರಹ್ಮವು ಜ್ಯೋತಿರೂಪವಾದ ಮಂಡಲದಿಂದ ಮುಚ್ಚಲ್ಪಟ್ಟಿದೆ. ಎಲೈ ಪೂಷನೇ, ಸತ್ಯಧರ್ಮ ನಾದ ನಾನೂ ಸಹ ಇದನ್ನು ವೀಕ್ಷಿಸಲು ಅನುಕೂಲವಾಗುವಂತೆ ಈ ಮರೆಯನ್ನು ಬಿಚ್ಚು. ಎಲೈ ಪೂಷನೇ, ನೀನೊಬ್ಬನೇ ಸತ್ಯರೂಪನಾದ ಋಷಿಯು ! ಜಗಚ್ಚಕ್ಷುವಾದ ಆದಿತ್ಯನು ಪ್ರಾಜಾಪತ್ಯನು. ನಿನ್ನ ಸರ್ವತೇಜಸ್ಸಿನ ಸಹಾಯದಿಂದ ಎಲ್ಲಾ ತತ್ತ್ವಗಳನ್ನೂ ಒಂದುಗೂಡಿಸು. ಸಕಲತತ್ತ್ವಗಳನ್ನೂ ತಿಳಿಯುವ ಶಕ್ತಿಯನ್ನು ದಯಪಾಲಿಸು ಎಂಬುದಾಗಿ ಪ್ರಾರ್ಥಿತವಾಗಿರುವ ಪೂಷನು ಆದಿತ್ಯತತ್ತ್ವವನ್ನು ಪ್ರತಿಪಾದಿಸುವ ದೇವತೆಯೇ ಆಗಿದ್ದಾನೆ. ಇಂತಹ ಆದಿತ್ಯರೂಪನಾದ ಸವಿತೃವಿನ ದರ್ಶನಶಕ್ತಿಯನ್ನು ಅಭಿ ವಿಪಶ್ಯತಿ, ಸಂಪಶ್ಯತಿ ಎಂಬ ವಾಕ್ಯಗಳಿಂದ ತಿಳಿಸಿದೆ. ಇಂತಹ ಮಹತ್ತ್ವವುಳ್ಳ ಸವಿತೃವಿನ ದಿವ್ಯಸ್ವರೂಪವನ್ನರಿಯುವ ಶಕ್ತಿಯನ್ನು ಸಂಪಾದಿಸಲು ಮುಂದಿನ ಮಂತ್ರದ ಪ್ರಾರ್ಥನೆಯಾಗಿದೆ.



CC-0. Jangamwadi Math Collection. Digitized by eGangotri

# ಗಾಯತ್ರೀಮಹಾಮಂತ್ರದ ಪೀಠಿಕೆ.

———— :o: ————

ಈ ಸೂಕ್ತಗಳ್ಲಿರುವ ತತ್ಸವಿತುರ್ವರೇಣ್ಯಂ ಎಂಬ ೧೦ ನೆಯ ಋಕ್ಕಿಗೆ ಗಾಯತ್ರೀ ಎಂಬ ಹೆಸರು ಪ್ರಸಿದ್ಧವಾಗಿದೆ. ಈ ಋಕ್ಕು ಮೂರು ವೇದಗಳಲ್ಲಿಯೂ ಪಠಿತವಾಗಿದೆ. ಋಗ್ವೇದದಲ್ಲಿ—೩-೬೨-೧೦ ; ಸಾಮವೇದದಲ್ಲಿ-೧೪೬೨ ; ವಾಜಸನೇಯಸಂಹಿತಾ (ಶುಕ್ಲಯಜುರ್ವೇದ) ದಲ್ಲಿ—೩-೩೫ ; ೨೨-೯ ; ೩೦-೨ ; ೩೬-೩ ; ತೈತ್ತಿರೀಯ ಸಂಹಿತಾ (ಕೃಷ್ಣಯಜುರ್ವೇದದಲ್ಲಿ)—೧-೫-೬-೪ ; ೪-೧-೧೧-೧ ; ತೈತ್ತಿರೀಯ ಆರಣ್ಯಕದಲ್ಲಿ—೧-೧೧-೨ ಈ ಸ್ಥಳಗಳಲ್ಲಿ ಈ ಗಾಯತ್ರೀಮಂತ್ರವು ಪಠಿತವಾಗಿರುವುದು. ಮತ್ತು ಬಹುಭಾಗ ಗದ್ಯಾತ್ಮಕವಾಗಿರುವ ಯಜುರ್ವೇದವನ್ನು ಬಿಟ್ಟರೆ ಉಳಿದ ಋಗ್ವೇದ, ಸಾಮವೇದ, ಅಥರ್ವಣವೆಂಬ ಮೂರು ವೇದಗಳೂ ಗಾಯತ್ರೀಛಂದಸ್ಸಿನ ಋಕ್ಕುಗಳಿಂದಲೇ ಪ್ರಾರಂಭವಾಗಿವೆ. ಸಾಮಾನ್ಯವಾಗಿ ಇದು ಎಂಟೆಂಟು ಅಕ್ಷರಗಳ ಮೂರು ಪಾದಗಳುಳ್ಳ ಛಂದಸ್ಸಿನ ಹೆಸರಾದರೂ, ಈ ಛಂದಸ್ಸಿನ ಮಂತ್ರಗಳಲ್ಲೆಲ್ಲಾ ಈ ಋಕ್ಕನ್ನೇ ಗಾಯತ್ರೀ ಎಂದು ಕರೆಯುವುದು ರೂಢಿಗೆ ಬಂದಿದೆ. ಗೈ ಶಬ್ದೇ ಎಂಬ ಧಾತುವಿನಿಂದ ಗಾಯತ್ರೀ ಎಂಬ ಶಬ್ದವು ನಿಷ್ಪನ್ನವಾಗಿರುವುದರಿಂದ ಗಾಯತ್ರೀ ಎಂಬ ಶಬ್ದಕ್ಕೆ ಗಾನಮಾಡಲು ಅನುಕೂಲವಾದ ಋಕ್ಕು ಎಂದರ್ಥವಾಗುವುದು. ಆದುದರಿಂದಲೇ ಗಾನರೂಪದಲ್ಲಿ ಪಠಿಸಲ್ಪಡುವ ಸಾಮವೇದದ ಬಹು ಭಾಗವು ಋಗ್ವೇದದಲ್ಲಿರುವ ಗಾಯತ್ರೀಛಂದಸ್ಸಿನ ಋಕ್ಕುಗಳೇ ಆಗಿವೆ. ಋ. ಸಂ. ೧-೧೦-೧ನೇ ಋಕ್ಕಿನಲ್ಲಿ ಹೇಳಿರುವಂತೆ **ಗಾಯಂತಿ ತ್ವಾ ಗಾಯತ್ರಿಣಃ** ಎಂಬ ವಾಕ್ಯಕ್ಕೆ-ಎಲೈ ಇಂದ್ರನೇ, ಉದ್ಗಾತೃವೊದಲಾದ, ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಗಾನಮಾಡುವ ಋತ್ವಿಜರು ನಿನ್ನನ್ನು ಸಾಮಮಂತ್ರಗಳಿಂದ ಸ್ತುತಿಸಿ ಗಾನ ಮಾಡುವರು ಎಂದು ಹೇಳಿದೆ.

ವೇದಗಳಲ್ಲಿ ಋಗ್ವೇದಕ್ಕೆ ಯಾವರೀತಿ ಪ್ರಥಮ (ಮುಖ್ಯ) ಸ್ಥಾನವಿದೆಯೋ ಛಂದಸ್ಸುಗಳಲ್ಲಿ ಗಾಯತ್ರೀ ಛಂದಸ್ಸಿಗೆ ಪ್ರಥಮಸ್ಥಾನವಿದೆ. ಮತ್ತು ಬ್ರಹ್ಮ, ಕ್ಷತ್ರಿಯ, ವೈಶ್ಯ ಎಂಬ ವರ್ಣತ್ರಯದವರಲ್ಲಿ ಬ್ರಾಹ್ಮಣನಿಗೆ ಅಗ್ರ ಸ್ಥಾನವಿರುವಂತೆ ಗಾಯತ್ರಿಗೆ ಛಂದಸ್ಸುಗಳಲ್ಲಿ ಅಗ್ರಸ್ಥಾನವಿದೆ. ಆದುದರಿಂದಲೇ ಯಜುರ್ವೇದದ ತೈತ್ತಿರೀಯ ಬ್ರಾಹ್ಮಣದಲ್ಲಿ—

> **ಗಾಯತ್ರೀಭಿರ್ಬ್ರಾಹ್ಮಣಸ್ಯಾದಧ್ಯಾತ್ । ಗಾಯತ್ರಛಂದಾ ವೈ ಬ್ರಾಹ್ಮಣಃ । ಸ್ವಸ್ಯ ಛಂದಸಃ ಪ್ರತ್ಯೆಯನಸ್ತ್ವಾಯ । ತ್ರಿಷ್ಟುಗ್ಭೀ ರಾಜನ್ಯಸ್ಯ । ತ್ರಿಷ್ಟುಪ್‌ಛಂದಾ ವೈ ರಾಜನ್ಯಃ । ಸ್ವಸ್ಯ ಛಂದಸಃ ಪ್ರತ್ಯೆಯನಸ್ತ್ವಾಯ । ಜಗತೀಭಿರ್ವೈಶ್ಯಸ್ಯ । ಜಗತೀಛಂದಾ ವೈ ವೈಶ್ಯಃ । ಸ್ವಸ್ಯ ಛಂದಸಃ ಪ್ರತ್ಯೆಯನಸ್ತ್ವಾಯ ।**
>
> (ತೈ. ಬ್ರಾ. ೧-೧-೯-೬, ೭)

ಎಂದು ಹೇಳಿದೆ. ಎಂದರೆ ಆಧಾನಕರ್ಮದಲ್ಲಿಯೂ (ಆಧಾನವೆಂದರೆ ಹೊಸದಾಗಿ ಯಜ್ಞಾಗ್ನಿಯನ್ನು ಪ್ರತಿಷ್ಠಾಪನೆ ಮಾಡುವುದು) ಇತರ ಯಜ್ಞಕರ್ಮಗಳಲ್ಲಿಯೂ ಬ್ರಾಹ್ಮಣನಾದವನು ಗಾಯತ್ರೀಛಂದಸ್ಸಿನ ಮಂತ್ರಗಳಿಂದಲೇ ಕಾರ್ಯಕಲಾಪಗಳನ್ನು ನೆರವೇರಿಸಬೇಕು. ಏಕೆಂದರೆ ಗಾಯತ್ರೀಛಂದಸ್ಸೇ ಬ್ರಾಹ್ಮಣನ ಸ್ವಂತಛಂದಸ್ಸೆಂದು

CC-0. Jangamwadi Math Collection. Digitized by eGangotri

ಹೇಳಿದೆ. ಇದರಂತೆ ಕ್ಷತ್ರಿಯನು (ರಾಜನು) ತನ್ನ ಸ್ವಂತಛಂದಸ್ಸಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದಲೂ, ವೈಶ್ಯನು ತನ್ನ ಸ್ವಂತಛಂದಸ್ಸಾದ ಜಗತೀಛಂದಸ್ಸಿನ ಮಂತ್ರಗಳಿಂದಲೂ ಯಜ್ಞಯಾಗಾದಿಗಳಲ್ಲಿ ಕಾರ್ಯಕಲಾಪ ಗಳನ್ನು ನೆರವೇರಿಸಬೇಕು. ಇಷ್ಟೇ ಅಲ್ಲದೇ ಯಜ್ಞಾದಿಗಳಲ್ಲಿ ನಡೆಯುವ ಮುಖ್ಯವಾದ ಕಾರ್ಯಗಳಲ್ಲಿ ಮೊದಲು ಗಾಯತ್ರೀಛಂದಸ್ಸಿನ ಮಂತ್ರಗಳಿಂದಲೇ ಕರ್ಮವನ್ನು ನೆರವೇರಿಸಬೇಕು. ಹೇಗೆಂದರೆ—

**ಗಾಯತ್ರೀರನ್ವಾಹ ಗಾಯತ್ರಂ ವೈ ಪ್ರಾತಸ್ಸವನಂ** (ಐ. ಬ್ರಾ. ೨೮-೯)
**ತ್ರೈಷ್ಟುಭಂ ವೈ ಮಾಧ್ಯಂದಿನಂ ಸವನಂ** (ಐ. ಬ್ರಾ. ೨೮-೧೦)
**ಜಾಗತಂ ವೈ ತೃತೀಯಸವನಂ** (ಐ. ಬ್ರಾ. ೨೮-೧೫)

ಎಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ. ಎಂದರೆ ಯಜ್ಞದಲ್ಲಿ ಮುಖ್ಯಕರ್ಮಾಂಗಗಳಾದ ಪ್ರಾತಃಸವನ ಮಾಧ್ಯಂದಿನಸವನ, ತೃತೀಯಸವನವೆಂಬ ಮೂರು ಸವನಗಳಿರುವವು. ಸವನವೆಂದರೆ ಸೋಮಲತೆಗಳನ್ನು ಕಲ್ಲು ಗಳಿಂದ ಜಜ್ಜಿ ರಸವನ್ನು ಹಿಂಡಿ ತೆಗೆಯುವ ಕರ್ಮವಿಶೇಷವು. ಇದನ್ನು ಮಂತ್ರಪೂರ್ವಕವಾಗಿಯೂ ವಿಧ್ಯುಕ್ತ ವಾಗಿಯೂ ಮಾಡಬೇಕಾಗಿರುವುದು. ಆದುದರಿಂದ ಪ್ರಾತಃಕಾಲದಲ್ಲಿ ನಡೆಯುವ ಪ್ರಾತಸ್ಸವನಕರ್ಮದಲ್ಲಿ ಗಾಯತ್ರೀ ಛಂದಸ್ಸಿನ ಮಂತ್ರಗಳಿಂದ ಈ ಸೋಮರಸವನ್ನು ಹಿಂಡಿತೆಗೆಯುವ ಅಭಿಷವಣವೆಂಬ ಕಾರ್ಯವನ್ನು ನೆರವೇರಿಸುವರು. ಮಾಧ್ಯಂದಿನಸವನದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದಲೂ, ತೃತೀಯಯಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳಿಂದಲೂ ಕಾರ್ಯಕಲಾಪಗಳನ್ನು ನೆರವೇರಿಸುವರು. ಆದುದರಿಂದ ಯಜ್ಞದಲ್ಲಿ ನಡೆಯಬೇಕಾದ ಮುಖ್ಯ ಕಾರ್ಯಗಳಲ್ಲಿ ಗಾಯತ್ರೀಛಂದಸ್ಸಿನ ಮಂತ್ರಗಳಿಗೇ ಪ್ರಾಶಸ್ತ್ಯವಿದೆ. ಮತ್ತು ದೇವತೆಗಳಿಗೂ ಛಂದಸ್ಸುಗಳಿಗೂ ಇರುವ ಸಂಬಂಧವನ್ನು ಪರಿಶೀಲಿಸಿದರೆ ಅಗ್ನಿಗೆ ಗಾಯತ್ರಿಛಂದಸ್ಸೂ, ಇಂದ್ರನಿಗೆ ತ್ರಿಷುಪ್‌ಛಂದಸ್ಸೂ, ವಿಶ್ವೇದೇವತೆಗಳಿಗೆ ಜಗತೀಛಂದಸ್ಸೂ ಪ್ರಿಯವಾಗಿರುವುದೆಂದು ಹೇಳಲ್ಪಟ್ಟಿರುವುದು. **ಅಷ್ಟಾಕ್ಷರಾ ಗಾಯತ್ರೀ । ಗಾಯತ್ರೀ ಬ್ರಹ್ಮವರ್ಚಸಂ** (ತೈ. ಬ್ರಾ. ೨-೭-೩-೯) ಇತ್ಯಾದಿಯಾಗಿ ಹೇಳಿರುವುದರಿಂದ ಗಾಯತ್ರೀಛಂದಸ್ಸಿನ ಮಂತ್ರಗಳಿಂದ ಬ್ರಾಹ್ಮಣನು ಕರ್ಮಗಳನ್ನು ನೆರವೇರಿಸಿದರೆ ಬ್ರಹ್ಮವರ್ಚಸ್ವಿಯಾಗುವನು. ರಾಜನು (ಕ್ಷತ್ರಿಯನು) ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಂದ ಮಾಡಿದರೆ ವೀರ್ಯ, ಬಲ, ಯಶಸ್ಸು ಇವುಗಳನ್ನು ಪಡೆಯುವನು. ವೈಶ್ಯನು ಜಗತೀಛಂದಸ್ಸಿನ ಮಂತ್ರಗಳಿಂದ ಮಾಡಿದರೆ ಪಶುಸಂಪತ್ತು, ಧನ, ಐಶ್ವರ್ಯ ಮುಂತಾದುವುಗಳನ್ನು ಪಡೆಯುವನು ಎಂದು ಯಜು ರ್ವೇದದಲ್ಲಿ ಅನೇಕಕಡೆ ಹೇಳಿದೆ. ಮತ್ತು ಋಗ್ವೇದದ ಒಂಭತ್ತನೆಯ ಮಂಡಲದಲ್ಲಿ ಇರುವ ೧೧೪ ಸೂಕ್ತಗಳಿಗೆಲ್ಲಾ ಪವಮಾನಃ ಸೋಮಃ ಎಂಬ ಸೋಮವೇ ದೇವತೆಯು. ಆದರೆ ಈ ಮಂಡಲದ ಮೊದಲಿನ ೬೭ಸೂಕ್ತಗಳು ಗಾಯತ್ರೀ ಛಂದಸ್ಸಿನವು. ಇವುಗಳೆಲ್ಲಾ ನಾನಾಋಷಿದೃಷ್ಟವಾದವು. ಇವುಗಳು ಪವಮಾನಸೂಕ್ತಗಳೆಂದು ಪ್ರಸಿದ್ಧವಾಗಿ ವೇದಗಳ ಕಾಲದಿಂದಲೂ ಬಹಳ ಪ್ರಾಶಸ್ತ್ಯವನ್ನು ಪಡೆದಿವೆ. ಇದರ ಪ್ರಾಧಾನ್ಯತೆಯನ್ನೂ ಮಹಿಮೆಯನ್ನೂ ಅಲ್ಲಿಯೇ ವರ್ಣಿಸಿದೆ.

**ಯಃ ಪಾವಮಾನೀರಧ್ಯೇತಿ .... .... .... ಸರ್ವಂ ಸ ಪೂತಮಶ್ನಾತಿ ।**
**ಪಾವಮಾನೀರ್ಯೋ ಅಧ್ಯೇತಿ .... .... .... ।**
**ತಸ್ಮೈ ಸರಸ್ವತೀ ದುಹೇ ಕ್ಷೀರಂ ಸರ್ಪಿರ್ಮಧೂದಕಂ ।**

(ಋ. ಸಂ. ೯-೬೭-೩೧, ೩೨)

CC-0. Jangamwadi Math Collection. Digitized by eGangotri

ಎಂದರೆ ಗಾಯತ್ರೀಛಂದಸ್ಸಿನ ಋಕ್ಕುಗಳಿಂದ ಕೂಡಿರುವ ಈ ಪಾವಮಾನೀ ಸೂಕ್ತಗಳನ್ನು ಯಾವ ಪುರುಷನು ಅಧ್ಯಯನಮಾಡುವನೋ (ಪಠಿಸುವನೋ) ಅವನು ಸಮಸ್ತ ಇಷ್ಟಾರ್ಥಗಳನ್ನು ಪಡೆದು ಸುಖಿಸುವನು. ಸರಸ್ವತೀ ದೇವಿಯು ಅವನ ಇಷ್ಟಾರ್ಥಗಳನ್ನೆಲ್ಲಾ ಪೂರಯಿಸುವುದಲ್ಲದೆ ಹಾಲು, ತುಪ್ಪ, ಮಧು, ಉದಕ ಮುಂತಾದ ಸಕಲ ಸಮೃದ್ಧಿಯನ್ನು ಸುರಿಸುವಳು ಎಂದಿದೆ. ಇದೆಲ್ಲಾ ವೇದಗಳಲ್ಲಿ ಹೇಳಿರುವ ಗಾಯತ್ರಿಮಂತ್ರದ ಮಹಿಮೆಯು. ಪ್ರಸಕ್ತವಾದ ಗಾಯತ್ರೀ ಮಂತ್ರದ ಅರ್ಥದ ವಿಷಯದಲ್ಲಿ ಇದಕ್ಕಿರುವ ಪ್ರಾಶಸ್ತ್ಯ ಮೊದಲಾದ ವಿಷಯಗಳನ್ನು ಈ ಋಕ್ಕಿನ ವಿಶೇಷವಿಷಯಗಳಲ್ಲಿ ವಿವರಿಸಲಾಗಿದೆ.

---

ಸಂಹಿತಾಪಾಠಃ

ತತ್ಸ॒ವಿ॒ತುರ್ವರೇ᳚ಣ್ಯಂ॒ ಭರ್ಗೋ᳚ ದೇ॒ವಸ್ಯ॑ ಧೀಮಹಿ ।

ಧಿಯೋ॒ ಯೋ ನಃ॑ ಪ್ರಚೋ॒ದಯಾ᳚ತ್ ॥ ೧೦ ॥

ಪದಪಾಠಃ

ತತ್ । ಸ॒ವಿ॒ತುಃ । ವರೇ᳚ಣ್ಯಂ । ಭರ್ಗಃ॑ । ದೇ॒ವಸ್ಯ॑ । ಧೀ॒ಮ॒ಹಿ॒ ।

ಧಿಯಃ॑ । ಯಃ । ನ॒ಃ । ಪ್ರ॒ಽಚೋ॒ದಯಾ᳚ತ್ ॥ ೧೦ ॥

ಸಾಯಣಭಾಷ್ಯಂ

ದಶರಾತ್ರಸ್ಯ ಷಷ್ಠೇಽಹನಿ ವೈಶ್ವದೇವಶಸ್ತ್ರೇ ತತ್ಸವಿತುರಿತಿ ದ್ವೇ ಋಚೌ ಪ್ರತಿಪತ್ತೃಚಸ್ಯ ದ್ವಿತೀಯಾತೃತೀಯೇ । ಸೂತ್ರಿತಂ ಚ । ತತ್ಸವಿತುರ್ವರೇಣ್ಯಮಿತಿ ದ್ವೇ ದೋಷೋ ಆಗಾತ್ । ಆ. ೮-೧ । ಇತಿ ॥ ಅಭಿಪ್ಲವಷೃಷ್ಠ್ಯಷಡಹಯೋರ್ದ್ವಿತೀಯೇಽಹನಿ ವೈಶ್ವದೇವಶಸ್ತ್ರೇ ಪ್ರತಿಪತ್ತೃಚಸ್ಯೈತೇ ಏವ ಪ್ರಥಮಾದ್ವಿತೀಯೇ । ಸೂತ್ರಿತಂ ಚ । ತತ್ಸವಿತುರ್ವರೇಣ್ಯಮಿತಿ ದ್ವೇ ಆವಿಶ್ವದೇವಂ । ಆ. ೭-೬ । ಇತಿ ॥

ಯಃ ಸವಿತಾ ದೇವೋ ನೋಽಸ್ಮಾಕಂ ಧಿಯಃ ಕರ್ಮಾಣಿ ಧರ್ಮಾದಿವಿಷಯಾ ವಾ ಬುದ್ಧೀಃ ಪ್ರಚೋದಯಾತ್ ಪ್ರೇರಯೇತ್ ತತ್ತಸ್ಯ ದೇವಸ್ಯ ಸವಿತುಃ ಸರ್ವಾಂತರ್ಯಾಮಿತಯಾ ಪ್ರೇರಕಸ್ಯ ಜಗತ್ಸ್ರಷ್ಟುಃ ಪರಮೇಶ್ವರಸ್ಯ ವರೇಣ್ಯಂ ಸರ್ವೈರುಪಾಸ್ಯತಯಾ ಜ್ಞೇಯತಯಾ ಚ ಸಂಭಜನೀಯಂ ಭರ್ಗೋಽವಿದ್ಯಾತತ್ಕಾರ್ಯಯೋರ್ಭರ್ಜನಾದ್ಭರ್ಗಃ ಸ್ವಯಂಜ್ಯೋತಿಃ ಪರಬ್ರಹ್ಮಾತ್ಮಕಂ ತೇಜೋ ಧೀಮಹಿ । ವಯಂ ಧ್ಯಾಯಾಮಃ । ಯದ್ವಾ । ತದಿತಿ ಭರ್ಗೋವಿಶೇಷಣಂ । ಸವಿತುರ್ದೇವಸ್ಯ ತತ್ತಾ-ದೃಶಂ ಭರ್ಗೋ ಧೀಮಹಿ । ಕಿಂ ತದಿತ್ಯಪೇಕ್ಷಾಯಾಮಾಹ । ಯ ಇತಿ ಲಿಂಗವ್ಯತ್ಯಯಃ । ಯದ್ಭರ್ಗೋ ಧಿಯಃ ಪ್ರಚೋದಯಾತ್ । ತದ್ಧ್ಯಾಯೇಮೇತಿ ಸಮನ್ವಯಃ । ಯದ್ವಾ । ಯಃ ಸವಿತಾ ಸೂರ್ಯೋ ಧಿಯಃ ಕರ್ಮಾಣಿ ಪ್ರಚೋದಯಾತ್ ಪ್ರೇರಯತಿ ತಸ್ಯ ಸವಿತುಃ ಸರ್ವಸ್ಯ ಪ್ರಸವಿತುರ್ದೇವಸ್ಯ ದ್ಯೋತ-

CC-0. Jangamwadi Math Collection. Digitized by eGangotri

ಮಾನಸ್ಯ ಸೂರ್ಯಸ್ಯ ತತ್ಸರ್ವೈರ್ದೃಶ್ಯಮಾನತಯಾ ಪ್ರಸಿದ್ಧಂ ವರೇಣ್ಯಂ ಸರ್ವೈಃ ಸಂಭಜನೀಯಂ ಭರ್ಗಃ ಪಾಪಾನಾಂ ತಾಪಕಂ ತೇಜೋಮಂಡಲಂ ಧೀಮಹಿ । ಧ್ಯೇಯತಯಾ ಮನಸಾ ಧಾರಯೇಮ । ಯದ್ವಾ । ಭರ್ಗಃಶಬ್ದೇನಾನ್ನಮಭಿಧೀಯತೇ । ಯಃ ಸವಿತಾ ದೇವೋ ಧಿಯಃ ಪ್ರಚೋದಯತಿ ತಸ್ಯ ಪ್ರಸಾದಾ-ದ್ಭರ್ಗೋಽನ್ನಾದಿಲಕ್ಷಣಂ ಫಲಂ ಧೀಮಹಿ । ಧಾರಯಾಮಃ । ತಸ್ಯಾಧಾರಭೂತಾ ಭವೇಮೇತ್ಯರ್ಥಃ । ಭರ್ಗಃಶಬ್ದಸ್ಯಾನ್ನಪರತ್ವೇ ಧೀಶಬ್ದಸ್ಯ ಕರ್ಮಪರತ್ವೇ ಚಾಥರ್ವಣಂ । ವೇದಾಂಶ್ಛಂದಾಂಸಿ ಸವಿತುರ್ವ-ರೇಣ್ಯಂ ಭರ್ಗೋ ದೇವಸ್ಯ ಕವಯೋಽನ್ನಮಾಹುಃ ಕರ್ಮಾಣಿ ಧಿಯಸ್ತದು ತೇ ಪ್ರಬ್ರವೀಮಿ ಪ್ರಚೋ-ದಯಂತ್ಸವಿತಾ ಯಾಭಿರೇತೀತಿ । ಗೋ. ಬ್ರಾ. ೧-೩೨ ॥ ಭರ್ಗಃ । ಭ್ರಸ್ಜ ಪಾಕೇ । ಅಸುನ್ । ಭ್ರಸ್ಜೋ ರೋಪಧಯೋ ರಮನ್ಯತರಸ್ಯಾಂ । ಪಾ. ೬-೪-೪೭ । ಇತಿ ರೋಪಧಯೋರ್ಲೋಪೋ ರಮಾಗಮಃ । ನ್ಯಂಕ್ವಾದಿಪಾಠಾತ್ ಕುತ್ವಂ । ಧೀಮಹಿ । ಧ್ಯಾಯತೇರ್ಲಿಙಿ ಬಹುಲಂ ಛಂದಸೀತಿ ಸಂಪ್ರಸಾರಣಂ । ವ್ಯತ್ಯಯೇನಾತ್ಮನೇಪದಂ । ಯದ್ವಾ । ಧೀಙ್ ಆಧಾರೇ । ಲಿಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಪ್ರಚೋದಯಾತ್ । ಚೋದಯತೇರ್ಲೇಟ್ಯಾಡಾಗಮಃ । ಯದ್ವೃತ್ತಯೋಗಾದನಿಘಾತಃ । ಆಗಮಸ್ಯಾನುದಾತ್ತತ್ವೇ ಣಿಚಃ ಸ್ವರಃ ॥

ಪ್ರತಿಪದಾರ್ಥ

**ಯಃ**—ಯಾವನು । **ನಃ**—ನಮಗೆ । **ಧಿಯಃ**—ಕರ್ಮವಿಷಯಕವಾದ ಪ್ರಜ್ಞೆಯನ್ನು । **ಪ್ರಚೋದ-ಯಾತ್**—ಪ್ರೇರಿಸುತ್ತಾನೆಯೋ । **ತತ್**—ಅಂತಹ । **ದೇವಸ್ಯ**—ದೇವತಾತ್ಮನಾದ । **ಸವಿತುಃ**—ಸವಿತೃವಿನ । **ವರೇಣ್ಯಂ**—ಸರ್ವರಿಂದಲೂ ಪೂಜಿಸಲ್ಪಡತಕ್ಕ । **ಭರ್ಗಃ**—ಜ್ಯೋತಿಯನ್ನು । **ಧೀಮಹಿ**—ಧ್ಯಾನಿಸುತ್ತೇವೆ ।

ಭಾವಾರ್ಥ

ಯಾವ ಸವಿತೃದೇವನು ನಮಗೆ ಕರ್ಮವಿಷಯಕವಾದ ಪ್ರಜ್ಞೆಯನ್ನು ಪ್ರೇರಿಸುತ್ತಾನೆಯೋ, ಅಂತಹ ದೇವತಾತ್ಮನಾದ ಸವಿತೃವಿನ ವಿಶ್ವಪೂಜ್ಯವಾದ ಜ್ಯೋತಿಯನ್ನು ಧ್ಯಾನಿಸುತ್ತೇವೆ.

English Translation

We meditate on that desirable light of the divine Savitri, who influences our pious rites.

ವಿಶೇಷವಿಷಯಗಳು

ದಶರಾತ್ರವೆಂಬ ಯಾಗದ ಆರನೆಯ ದಿವಸದಲ್ಲಿ ವೈಶ್ವದೇವಶಸ್ತ್ರಮಂತ್ರಪಠನಮಾಡುವಾಗ ತತ್ಸವಿತುಃ ಎಂಬ ಈ ಋಕ್ಕನ್ನೂ **ದೇವಸ್ಯ ಸವಿತುಃ** ಎಂಬ ಮುಂದಿನ ಋಕ್ಕನ್ನೂ ಪ್ರತಿಪತ್ತೃಚದ (ತೃಚವೆಂದರೆ ಮೂರು ಋಕ್ಕುಗಳು) ಎರಡನೆಯ ಮತ್ತು ಮೂರನೆಯ ಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ **ತತ್ಸವಿತುರ್ವರೇಣ್ಯಮಿತಿ ದ್ವೇ ದೋಷೋ ಆಗಾತ್** ಎಂಬ ಸೂತ್ರದಿಂದ (ಆ. ೮-೧) ವಿವೃತವಾಗಿರುವುದು. ಮತ್ತು ಅಭಿಪ್ಲವಪೃಷ್ಠ್ಯಷಡಹವೆಂಬ ಯಾಗಗಳ ಎರಡನೆಯ ದಿವಸ ವೈಶ್ವದೇವಶಸ್ತ್ರಮಂತ್ರಪಠನಕಾಲದಲ್ಲಿ ಈ ಎರಡು ಋಕ್ಕುಗಳೂ ಪ್ರತಿಪತ್ತೃಚದ ಮೊದಲನೆಯ ಮತ್ತು ಎರಡನೆಯ ಋಕ್ಕುಗಳನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ತತ್ಸವಿತುರ್ವರೇಣ್ಯಮಿತಿ ದ್ವೇ ಆ ವಿಶ್ವದೇವಂ** ಎಂಬ ಸೂತ್ರದಿಂದ (ಆ. ೭-೬) ವಿವೃತವಾಗಿರುವುದು.

CC-0. Jangamwadi Math Collection. Digitized by eGangotri

## ೧) ತತ್ಸವಿತುಃ ಎಂಬ ಮಂತ್ರಕ್ಕೆ ಸಾಯಣರ ತಾತ್ಪರ್ಯ ವಿವರಣೆ.



ಸಾಯಣರು ಈ ಋಕ್ಕಿನಲ್ಲಿರುವ ಸವಿತೃಶಬ್ದಕ್ಕೆ ಎರಡು ವಿಧವಾದ ಅರ್ಥವು ಸಾಧ್ಯವೆಂದು ತಿಳಿಸಿದ್ದಾರೆ. ಅದನ್ನನುಸರಿಸಿಯೇ ಭರ್ಗಶಬ್ದವನ್ನೂ ವಿವರಿಸಿದ್ದಾರೆ.

ಮೊದಲನೆಯದಾಗಿ, **ಸವಿತೃ**ವೆಂದರೆ ಸರ್ವಾಂತರ್ಯಾಮಿಯೂ, ಜಗತ್ಪ್ರೇರಕನೂ, ಜಗತ್ಸ್ರಷ್ಟೃವೂ ಆದ ಪರಮೇಶ್ವರನೆಂದರ್ಥ. ಪರಬ್ರಹ್ಮಾತ್ಮಕವಾದ ತೇಜಸ್ಸೇ **ಭರ್ಗ**ಶಬ್ದಾರ್ಥ. ಅವಿದ್ಯೆ ಮತ್ತು ತತ್ಪರಿಣಾಮವಾದ ದುಷ್ಕೃತಿಗಳನ್ನು ನಾಶಮಾಡುವುದರಿಂದ ಈ ತೇಜಸ್ಸಿಗೆ ಭರ್ಗವೆಂಬ ಅನ್ವರ್ಥನಾಮವು ಪ್ರಸಿದ್ಧವಾಗಿದೆ. ಇದು ಸಕಲರಿಗೂ ಉಪಾಸ್ಯವೂ ಪೂಜ್ಯವೂ ಆಗಿರುವುದರಿಂದ **ವರೇಣ್ಯಂ** ಎಂಬ ವಿಶೇಷಣಯುಕ್ತವಾಗಿದೆ. **ಧೀ** ಶಬ್ದಕ್ಕೆ ಬುದ್ಧಿಯೆಂದರ್ಥ. ಇಂತಹ ಅಜ್ಞಾನನಾಶಕವಾದ ಪರಬ್ರಹ್ಮಾತ್ಮಕವಾದ ತೇಜಸ್ಸನ್ನು ಧ್ಯಾನಮಾಡೋಣ ಮತ್ತು ಆ ರೀತಿ ಧ್ಯಾನಮಾಡುವಂತೆ ಸವಿತೃವು ನಮ್ಮನ್ನು ಪ್ರೇರಿಸಲಿ ಎಂದು ತಾತ್ಪರ್ಯ.

ಎರಡನೆಯದಾಗಿ, **ಸವಿತೃ**ವೆಂದರೆ ಲೋಕಪ್ರಸಿದ್ಧನಾದ ಸೂರ್ಯನು. **ಧೀ**ಶಬ್ದಕ್ಕೆ ಸೂರ್ಯಾರಾಧಕವಾದ ಕರ್ಮವೆಂದರ್ಥ. **ಭರ್ಗ**ವೆಂದರೆ ಪಾಪನಾಶಕನಾದ ಆದಿತ್ಯನ ತೇಜೋಮಂಡಲವು. ಇಂತಹ ತೇಜೋಮಂಡಲ ವನ್ನು ಧ್ಯಾನಿಸುತ್ತಾ ಕರ್ಮಪರರಾಗಿರುವತೆ | ಸವಿತೃವಾದ ಸೂರ್ಯನು ನಮ್ಮನ್ನು ಪ್ರೇರಿಸಲಿ ಎಂಬುದೇ ಪ್ರಾರ್ಥ ನೆಯು. ಅಲ್ಲದೇ,

ವೇದಾಶ್ಛಂದಾಂಸಿ ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಕವಯೋಽನ್ನಮಾಹುಃ (ಗೋ. ಬ್ರಾ. ೧-೩-೨) ಎಂಬ ಬ್ರಾಹ್ಮಣವಾಕ್ಯದ ಆಧಾರದ ಮೇಲೆ ಭರ್ಗಶಬ್ದಕ್ಕೆ ಅನ್ನವೆಂದರ್ಥಮಾಡಿದರೆ, ಯಾವ ಸವಿತೃವು ನಮ್ಮ ಬುದ್ಧಿಯನ್ನು ಸತ್ಕರ್ಮಪರವಾಗಿರುವಂತೆ ಪ್ರೇರಿಸುತ್ತಾನೆಯೋ ಆ ಸವಿತೃವಿನ ಅನುಗ್ರಹದಿಂದ ಅನ್ನಾದಿರೂಪ ವಾದ ಫಲವನ್ನು ಪಡೆಯೋಣ ಎಂದು ತಾತ್ಪರ್ಯವಾಗುತ್ತದೆ. ಈ ವಿಧವಾಗಿ ಸವಿತೃಶಬ್ದಕ್ಕೆ ಅರ್ಥವ್ಯತ್ಯಾಸವನ್ನು ತೋರಿಸಿದರೆ ಆಗ ತತ್ತ್ವವ್ಯತ್ಯಾಸವಾಗುವುದೇ ? ಉಪಾಸ್ಯದೇವತೆಯು ಸ್ವರೂಪದಲ್ಲಿ ವ್ಯತ್ಯಾಸವನ್ನು ಹೇಳಿದಂತಾಗು ವುದೇ ? ಸವಿತೃ, ಸೂರ್ಯ, ಆದಿತ್ಯ, ಪರಬ್ರಹ್ಮ ಎಂಬ ಪದಗಳು ಒಂದೇ ತತ್ತ್ವದ ಬೇರೆಬೇರೆ ಸ್ವರೂಪಗಳನ್ನು ತೋರಿಸುವುವೇ ಅಥವಾ ತತ್ತ್ವಭೇದಗಳನ್ನೂ ತೋರಿಸವುವೇ ? ಎಂಬ ವಿಮರ್ಶೆಯು ಪ್ರಕೃತಸಂದರ್ಭದಲ್ಲಿ ಅತ್ಯವಶ್ಯ ವಾಗಿರುತ್ತದೆ.

―――――

## ೨) ಸವಿತೃ ದೇವತೆಯು ತತ್ತ್ವಪ್ರತಿಪಾದಕವಾದುದರಿಂದ ಗಾಯತ್ರಿಯೇ ಸಾವಿತ್ರೀಶಬ್ದವಾಚ್ಯವು

'ತತ್ಸವಿತುರ್ವರೇಣ್ಯಂ' ಎಂಬುದು ಜಗತ್ಪ್ರಸಿದ್ಧವಾದ **ಗಾಯತ್ರೀ** ಮಹಾಮಂತ್ರವು. ಇದ ಸವಿತೃದೇವತಾಕವಾದುದು. ಆದುದರಿಂದಲೇ ಇದಕ್ಕೆ **ಸಾವಿತ್ರೀ** ಎಂಬ ಹೆಸರೂ ಪ್ರಸಿದ್ಧವಾಗಿದೆ. **ಗಾಯತ್ರೀ ಮೇವ ಸಾವಿತ್ರೀಮನುಬ್ರೂಯಾತ್** ಎಂಬ ಉಪನಿಷನ್ಮಂತ್ರವೇ ಈ ಐಕ್ಯತೆಯನ್ನು ಪದೇಶಿಸುತ್ತದೆ. (ಬೃ. ಉ ೫-೧೪-೫) ಸವಿತೃಶಬ್ದಕ್ಕೆ ಪರಬ್ರಹ್ಮವೆಂದರ್ಥ. ಪರಬ್ರಹ್ಮನೇ ಈ ಮಂತ್ರಕ್ಕೆ ಉಪಾಸ್ಯದೇವತೆಯು, ಎಂಬುದೆ

CC-0. Jangamwadi Math Collection. Digitized by eGangotri

ಉಪನಿಷತ್ತುಗಳ ತಾತ್ಪರ್ಯ. ಆದರೆ, ಛಂದೋಽಭಿಧಾನಾನ್ನ ಇತ್ಯಾದಿ ಪೂರ್ವಪಕ್ಷಗಳು (ಬ್ರ. ಸೂ. ೧-೧-೫೫) ಈ ತಾತ್ಪರ್ಯಕ್ಕೆ ವಿರುದ್ಧವಾದ ಅರ್ಥವನ್ನು ಹೇಳಿ ಪರಬ್ರಹ್ಮವು ಈ ಮಂತ್ರದ ಉಪಾಸ್ಯದೇವತೆಯಲ್ಲ ಎಂದು ವಿರೋಧಿಸುವ ಅವಕಾಶವೂ ಇರುವುದರಿಂದ ಈ ಮಂತ್ರದ ಅರ್ಥವನ್ನು ಕೂಲಂಕಷವಾಗಿ ಪರಿಶೀಲಿಸಿ ಇದರ ಗಭೀರವಾದ ತಾತ್ಪರ್ಯವೇನೆಂದರಿಯಬೇಕು. ಈ ತಾತ್ಪರ್ಯನಿರ್ಣಯವು ಸವಿತೃಶಬ್ದದ ಅರ್ಥವನ್ನು ಆಶ್ರಯಿಸುತ್ತದೆ

———————

## ೩) ಸವಿತೃವಿನ ಏಕತತ್ತ್ವಪ್ರತಿಪಾದಕಸ್ವರೂಪ.

ಸೂರ್ಯ, ಸವಿತೃ, ಆದಿತ್ಯ ಇತ್ಯಾದಿ ಪದಗಳು ಋಕ್ಸಂಹಿತೆಯಲ್ಲಿ ದೇವತೆಗಳ ವೈವಿಧ್ಯವನ್ನೂ, ಪ್ರಭೇದಗಳನ್ನೂ ತೋರಿಸುತ್ತವೆಯೆಂಬುದೇ ಆಧುನಿಕಪಂಡಿತರಲ್ಲಿ ಕೆಲವರ ಮತವಾಗಿದೆ.

"Savitri is comparatively a younger member of the Vedic Pantheon ; this fact is simply corroborated by the very name of that God. The genesis of ಸವಿತೃ indicates cleanly a very last phase in the evolution of Vedic religious thought. The earlier and more important Gods of the Rig-Veda like ವರುಣ, ಮಿತ್ರ and ಇಂದ್ರ are mainly the personification of natural phenomena". ಇತ್ಯಾದಿಯಾಗಿ Oldenberg ಮುಂತಾದ ಪಾಶ್ಚಾತ್ಯ ಪಂಡಿತರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ವರುಣ, ಇಂದ್ರ, ಮಿತ್ರ ಇತ್ಯಾದಿ ದೇವತೆಗಳು ಪ್ರಾಚೀನರೆಂದೂ, ಸವಿತೃವು ಅರ್ವಾಚೀನದೇವತೆಯೆಂದೂ ಅರ್ಥ. ಎಂದರೆ, ಋಕ್ಸಂಹಿತೆಯನ್ನು ರಚಿಸುವ ಋಷಿಗಳಿಗೆ ಸವಿತೃದೇವತಾತ್ಮಕವಾದ ಭಾವನೆಯು ಬಂದುದು ಬಹಳಕಾಲದ ನಂತರ, ಈ ದೇವತೆಯ ಭಾವನೆಯೇ ಮೊದಲು ಇರಲಿಲ್ಲ. ಸೃಷ್ಟಿವೈಚಿತ್ರ್ಯದ ಗಭೀರತೆಯನ್ನರಿತು ತದನಂತರ ಆ ತತ್ತ್ವವನ್ನು ಪ್ರತಿಬಿಂಬಿಸಲು ಸವಿತೃನಾಮಕವಾದ ದೇವತಾವಿಶೇಷದ ಭಾವನೆಯು ಅವರಲ್ಲಿ ಬೆಳೆಯಿತು ಎಂಬುದೇ ತಾತ್ಪರ್ಯ. ಈರೀತಿ ನಾಮಭೇದದಿಂದ ದೇವತಾಪ್ರಭೇದವು ಸೂಚಿತವಾಗುತ್ತದೆಂಬುದು ಅವರ ಮತ. ಆದರೆ ಅದು ಅಷ್ಟು ಸರಿಯಾದ ಅಭಿಪ್ರಾಯವಲ್ಲವೆಂಬುದು ಸೂಕ್ಷ್ಮವಾದ ಪರಿಶೀಲನೆಯಿಂದ ತಿಳಿಯುತ್ತದೆ.

ಏಕ ಏವಾಗ್ನಿರ್ಬಹುಧಾ ಸಮಿದ್ಧ ಏಕಃ ಸೂರ್ಯೋ ವಿಶ್ವಮನು ಪ್ರಭೂತಃ ।
ಏಕೈವೋಷಾಃ ಸರ್ವಮಿದಂ ವಿ ಭಾತ್ಯೇಕಂ ವಾ ಇದಂ ವಿ ಬಭೂವ ಸರ್ವಂ ॥

(ಋ. ಸಂ. ೮-೫೮-೨)

ಎಂಬ ಮಂತ್ರದಲ್ಲಿ ಸ್ಪಷ್ಟವಾಗಿ ತಿಳಿಸುವಂತೆ ಸಕಲವಿಶ್ವವ್ಯವಹಾರಗಳಿಗೂ ಪ್ರಚೋದಕವೂ, ಪೋಷಕವೂ ಆದ ಒಂದೇ ತತ್ತ್ವವು ವಿಶ್ವವ್ಯಾಪಕವಾಗಿದೆಯೆಂಬ ಅಭಿಪ್ರಾಯವು ಋಕ್ಸಂಹಿತೆಯಲ್ಲಿ ನಾನಾಕಡೆಗಳಲ್ಲಿ ಸ್ಪಷ್ಟವಾಗಿಯೂ, ಸೂಕ್ಷ್ಮವಾಗಿಯೂ ಸೂಚಿತವಾಗಿದೆ.

ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।
ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಂ ॥

(ಭ. ಗೀ. ೧೦-೪೧)

CC-0. Jangamwadi Math Collection. Digitized by eGangotri

ಎಂಬ ಗೀತಾವಾಕ್ಯದಲ್ಲಿ ಹೇಳಿರುವಂತೆಯೇ ನಿರುಕ್ತಕಾರರೂ ಸಹ ವೈದಿಕವಾಙ್ಮಯದಲ್ಲಿ ವರ್ಣಿತವಾಗಿರುವ ದೇವತಾ ಸಮೂಹಗಳ ಸ್ವರೂಪವನ್ನೂ ಸಕಲದೇವತೆಗಳಿಗೂ ಮೂಲವಾದ ಪರತತ್ತ್ವವನ್ನೂ ಈರೀತಿ ತಿಳಿಸಿದ್ದಾರೆ.

ಮಹಾಭಾಗ್ಯಾದ್ದೇವತಾಯಾ ಏಕ ಆತ್ಮಾ ಬಹುಧಾ ಸ್ತೂಯತೇ । .... ....
ಏಕಸ್ಯ ಆತ್ಮನಃ ಅನ್ಯೇ ದೇವಾಃ ಪ್ರತ್ಯಂಗಾನಿ ಭವಂತಿ ॥

(ನಿ. ೭-೪)

ಸಕಲದೇವತೆಗಳಿಗೂ ಮೂಲವಾದ ತತ್ತ್ವವು ಒಂದೇ ಆಗಿದೆ. ಆದರೆ ಆ ತತ್ತ್ವದ ಅನಂತವಾದ ಗುಣಗಳು ಅನಂತ ರೂಪದಲ್ಲಿ ಪ್ರಕಟಿತವಾಗಿ ಸಕಲ ವೈವಿಧ್ಯಗಳೂ ಈ ತತ್ತ್ವದ ವಿಭೂತಿವಿಶೇಷಣಗಳೇ ಆಗಿವೆ. ಏಕಂ ಸದ್ವಿಪ್ರಾ ಬಹುಧಾ ವದಂತಿ (೧-೧೬೪-೪೬) ಎಂಬ ವೇದವಾಕ್ಯವೂ ಸಹ ಇದೇ ಅಂಶವನ್ನು ತಿಳಿಸುತ್ತದೆ. ತತ್ರ್ತತ್‌ಸ್ಥಾನ-ವಿಭಾಗೇನ ತತ್ರ ತತ್ರೇಹ ದೃಶ್ಯತೇ (ಬೃ. ದೇ. ೧-೭೦) ಆಯಾಸ್ಥಾನ ಮತ್ತು ಕ್ರಿಯಾಸ್ವರೂಪವು ಆಯಾ ದೇವತೆಯ ಗುಣವನ್ನು ಸೂಚಿಸುವುದಾಗಿದೆಯಾದರೂ ಮೂಲತತ್ತ್ವವೊಂದೇ.

ಯೋ ನಃ ಪಿತಾ ಜನಿತಾ ಯೋ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ।
ಯೋ ದೇವಾನಾಂ ನಾಮಧಾ ಏಕ ಏವ ತಂ ಸಂಪ್ರಶ್ನಂ ಭುವನಾ ಯಂತ್ಯನ್ಯಾ ॥

(ಋ. ಸಂ. ೧೦-೮೨-೩)

ಸಕಲ ಜಗತ್ತಿಗೂ ಉತ್ಪಾದಕನಾದ ವಿಶ್ವಕರ್ಮನೊಬ್ಬನೇ ಇಂದ್ರಾದ್ಯನೇಕ ದೇವತಾಪ್ರಭೇದಗಳನ್ನು ಸೃಷ್ಟಿಸಿ ಸಕಲ ವಿಶ್ವವನ್ನೂ ವ್ಯಾಪಿಸಿದ್ದಾನೆ. ಸಕಲಕ್ಕೂ ಉತ್ಪಾದಕನಾದುದರಿಂದ ಇವನೇ ಸವಿತೃವೆಂಬ ನಾಮವನ್ನೂ ಪಡೆದಿದ್ದಾನೆ. ಮತ್ತು ಸೃಷ್ಟಿಕರ್ತನಾದ ಪ್ರಜಾಪತಿಯು ಸವಿತೃವೆಂದೂ, ತ್ವಷ್ಟೃವೆಂದೂ ವರ್ಣಿತನಾಗಿದ್ದಾನೆ-

ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ಪುಪೋಷ ಪ್ರಜಾಃ ಪುರುಧಾ ಜಜಾನ ।
ಇಮಾ ಚ ವಿಶ್ವಾ ಭುವನಾನ್ಯಸ್ಯ ಮಹದ್ದೇವಾನಾಮಸುರತ್ವಮೇಕಂ ॥

(ಋ. ಸಂ. ೩-೫೫-೧೯)

ಗರ್ಭೇ ನು ನೌ ಜನಿತಾ ದಂಪತೀ ಕರ್ದೇವಸ್ತ್ವಷ್ಟಾ ಸವಿತಾ ವಿಶ್ವರೂಪಃ ।
ನಕಿರಸ್ಯ ಪ್ರ ಮಿನಂತಿ ವ್ರತಾನಿ ವೇದ ನಾವಸ್ಯ ಪೃಥಿವೀ ಉತ ದ್ಯೌಃ ॥

(ಋ. ಸಂ. ೧೦-೧೦-೫)

ಇತ್ಯಾದಿ ಸ್ಥಳಗಳಲ್ಲೆಲ್ಲಾ ಸೃಷ್ಟಿಕರ್ತನೂ, ಜಗತ್ಪ್ರೇರಕನೂ ಆದ ಪ್ರಜಾಪತಿಯೇ ನಾಮಭೇದದಿಂದಲೂ, ಕ್ರಿಯಾ ಭೇದದಿಂದಲೂ ವೈವಿಧ್ಯವನ್ನು ತೋರಿಸುತ್ತಾ ಮೂಲತಃ ಎಲ್ಲಕ್ಕೂ ಒಂದೇ ತತ್ತ್ವವೆಂದು ವರ್ಣಿತನಾಗಿದ್ದಾನೆ. ಆದುದರಿಂದ ಸೂರ್ಯ, ಆದಿತ್ಯ, ಅಗ್ನಿ, ಇಂದ್ರ ಇತ್ಯಾದಿ ದೇವತೆಗಳಿಗಿಂತಲೂ ಭಿನ್ನಸ್ವರೂಪವುಳ್ಳ ಪ್ರತ್ಯೇಕವಾದ **ಸವಿತೃ**ನಾಮಕವಾದ ದೇವತೆಯೊಂದು ಮೂರ್ತರೂಪದಲ್ಲಿ ಅಸ್ತಿತ್ವವನ್ನು ಹೊಂದಿ ವರ್ಣಿತವಾಗಿದೆಯೆಂಬ ಅಭಿಪ್ರಾಯವು ತಪ್ಪಾಗುತ್ತದೆ. ಜಗತ್ಸೃಷ್ಟಿ, ಜಗದ್ವ್ಯವಹಾರಕ್ಕೆ ಪ್ರಚೋದನ, ವ್ಯವಹಾರದ ನಿಯತಿ ಇತ್ಯಾದಿ ಸಕಲ ವ್ಯಾಪಾರಗಳೂ ಸವಿತೃಸಂಬಂಧವಾದುದು. ಈ ಸವಿತೃವೇ ಆದಿತ್ಯನು, ಆದಿತ್ಯಾಂತರ್ಗತನಾದ ಪರಮ ಪುರುಷನು ಎಂದು ನಿಷ್ಕರ್ಷಿಸಲು ಈ ನಿಷ್ಕರ್ಷಕ್ಕೆ ಆಧಾರಭೂತವಾದ ವೈದಿಕವಾಕ್ಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸ ಬೇಕಾಗುತ್ತದೆ.

CC-0. Jangamwadi Math Collection. Digitized by eGangotri

**ಸವಿತಾ ಸರ್ವಸ್ಯ ಪ್ರಸವಿತಾ** (ನಿ. ೧೦-೩೧) ಸಕಲಕ್ಕೂ ಉತ್ಪಾದಕನಾದುದರಿಂದ ಸವಿತೃವೆಂದು ಹೆಸರು ಎಂದು ನಿರುಕ್ತಕಾರರು ಈ ಪದದ ನಿರ್ವಚನವನ್ನು ತೋರಿಸಿ,

**ಸವಿತಾ ಯಂತ್ರೈಃ ಪೃಥಿವೀಮರಮ್ಣಾದಸ್ಕಂಭನೇ ಸವಿತಾ ದ್ಯಾಮದೃಂಹತ್ ।**
**ಅಶ್ವಮಿವಾಧುಕ್ಷದ್ಧುನಿಮಂತರಿಕ್ಷಮತೂರ್ತೇ ಬದ್ಧಂ ಸವಿತಾ ಸಮುದ್ರಂ ॥**

(ಋ ಸಂ. ೧೦-೧೪೯-೧)

**ಸವಿತೃವು** ಪೃಥ್ವಿಯನ್ನು ಆಧಾರಸಹಿತವಾದುದನ್ನಾಗಿ ಮಾಡಿದ್ದಾನೆ. ನಿರಾಧಾರವಾದ ಅಂತರಿಕ್ಷವನ್ನು ಸ್ಥಿರವಾಗಿ ನಿಲ್ಲುವಂತೆ ಮಾಡಿದ್ದಾನೆ. ಮತ್ತು ಆಕಾಶವ್ಯಾಪಕವಾದ ಮೇಘವನ್ನು ವೃಷ್ಟಿಯನ್ನು ಸುರಿಸುವಂತೆ ಮಾಡಿದ್ದಾನೆ. ಎಂದು ಸವಿತೃವಿನ ಮಾಹಾತ್ಮ್ಯವನ್ನು ವರ್ಣಿಸಿ **ಕಂ ಅನ್ಯಂ ಮಧ್ಯಮಾತ್ ಏವಂ ಅವಕ್ಷ್ಯತ್** । ಅಂತರಿಕ್ಷಸ್ಥನಾದ ದೇವತೆಯನ್ನುಳಿದು ಇನ್ನಾವದೇವತೆಯನ್ನು ತಾನೇ ಋಷಿಯು ಈ ರೀತಿ ಪ್ರಶಂಸಿಸಿರುವನು ಎಂದು ಪ್ರಶ್ನಿಸಿ ಅದಕ್ಕೆ ಉತ್ತರವಾಗಿ **ಆದಿತ್ಯೋಽಪಿ ಸವಿತೋಚ್ಯತೇ** । ಸವಿತೃವೆಂಬುದು ಆದಿತ್ಯನಿಗೂ ಪರ್ಯಾಯನಾಮವಾಗಿದೆಯೆಂಬುದನ್ನು ತಿಳಿಸಿ

**ಹಿರಣ್ಯಸ್ತೂಪಃ ಸವಿತರ್ಯಥಾ ತ್ವಾಂಗಿರಸೋ ಜುಹ್ವೇ ವಾಜೇ ಅಸ್ಮಿನ್ ।**
**ಏವಾ ತ್ವಾರ್ಚನ್ನವಸೇ ವಂದಮಾನಃ ಸೋಮಸ್ಯೇವಾಂಶುಂ ಪ್ರತಿ ಜಾಗರಾಹಂ ॥**

(ಋ. ಸಂ. ೧೦-೧೪೯-೫)

ಎಂಬ ಋಕ್ಕನ್ನುದಾಹರಿಸಿ ಆದಿತ್ಯನಿಗೆ ಸವಿತೃವೆಂಬ ವಿಶೇಷಣವಿರುವುದನ್ನು ತಿಳಿಸಿ ಆದಿತ್ಯ ಮತ್ತು ಸವಿತೃವೆಂಬ ಪದಗಳು ಪರ್ಯಾಯನಾಮಗಳೆಂದು ಸೂಚಿಸಿದ್ದಾರೆ.

———

## ೪. ಸವಿತೃಶಬ್ದದ ನಿರ್ವಚನಪೂರ್ವಕವಾಗಿ ವಿಶ್ವನಿಯಾಮಕನಾದ ಸವಿತೃವಿನ ದಿವ್ಯಸ್ವರೂಪ ವರ್ಣನೆ.

**ಸವಿತೃಶಬ್ದಕ್ಕೆ** ಮೂಲವಾದ ಸೂ ಧಾತುವಿಗೆ, ೧) **ಷೂ= ಪ್ರೇರಣೇ ; ೨) ಷೂಙ್= ಪ್ರಾಣಿಗರ್ಭ-ವಿಮೋಚನೇ** ಎಂಬ ಅರ್ಥಭೇದಗಳಿವೆ. ಸೃಷ್ಟಿಸು ಎಂಬರ್ಥದಲ್ಲೂ, ಪ್ರೇರಿಸು ಎಂಬರ್ಥದಲ್ಲೂ ಮತ್ತು (ಹವಿರಾದಿಗಳನ್ನು) ಸುರಿಸು ಎಂಬರ್ಥದಲ್ಲೂ ಈ ಧಾತುವಿನಿಂದ ನಿಷ್ಪನ್ನವಾದ ಪದಗಳ ಪ್ರಯೋಗವಿರುತ್ತದೆ. ಸಾಯಣರು **ಸವಿತೃಶಬ್ದಕ್ಕೆ** ಈ ಎಲ್ಲಾ ಅರ್ಥಗಳಲ್ಲೂ ಸಹ ಆಯಾ ಸಂದರ್ಭಕ್ಕೆ ಸೇರಿದಂತೆ ವಿವರಣೆಯನ್ನು ಹೇಳಿದ್ದಾರೆ. ಈ ಅರ್ಥಗಳ ವಿವರಣೆಯಿಂದ ಸವಿತೃವೇ ಸಕಲಜಗನ್ನಿಯಾಮಕನೆಂದು ತೋರಿಸಿದ್ದಾರೆ. ಸವಿತೃವು ಸೃಷ್ಟಿಸ್ಥಿತಿನಿಯಮಗಳಿಗೆಲ್ಲಾ ಪ್ರಭುವೆಂಬುದು ಋಕ್ಸಂಹಿತೆಯ ವಿವರಣೆಗಳಿಂದಲೇ ಸ್ಪಷ್ಟವಾಗಿದೆ.

**ತತ್ಸವಿತಾ ವೋಽಮೃತತ್ವಮಾಸುವದಗೋಹ್ಯಂ ಯಚ್ಛ್ರವಯಂತ ಐತನ ।**
**ತ್ಯಂ ಚಿಚ್ಚಮಸಮಸುರಸ್ಯ ಭಕ್ಷಣಮೇಕಂ ಸಂತಮಕೃಣುತಾ ಚತುರ್ವಯಂ ॥**

(ಋ. ಸಂ ೧-೧೧೦-೩)

CC-0. Jangamwadi Math Collection. Digitized by eGangotri

ಎಂಬಲ್ಲಿ ಸವಿತೃವಿನ ಅನುಗ್ರಹದಿಂದ ಋಭುಗಳು ಪ್ರಥಮದಲ್ಲಿ ಒಂದಾದ ಚಮಸಪಾತ್ರೆಯನ್ನು ನಾಲ್ಕು ಆಗುವಂತೆ ಮಾಡಿದರು ಎಂಬ ಕಾರ್ಯವು ಜಗತ್ತಿನ ಆದಿಸೃಷ್ಟಿಗೆ ಸಂಬಂಧಿಸಿದುದಾಗಿ ಹೇಳಬೇಕು. ಅಮರ್ತ್ಯವೂ ಅನಂತವೂ ಆದ ಸ್ಥಿತಿಯನ್ನು ಮರ್ತ್ಯರೂಪಕ್ಕೆ ತಿರುಗಿಸಿ ಸಾಂತವಾದುದನ್ನಾಗಿ ಮಾಡುವುದು ಸೃಷ್ಟಿಕಾರ್ಯವಾಗುತ್ತದೆ. ಈ ರೀತಿ ಪರಿಚ್ಛಿನ್ನವಾದುದನ್ನಾಗಿ (ಪರಿಮಿತವಾದುದನ್ನಾಗಿ) ಮಾಡುವ ಕಾರ್ಯವು ಋತುಧರ್ಮದ ನಿಯಾಮಕನಾದ ಸವಿತೃ (ಅಥವಾ ಸೂರ್ಯ) ದೇವತೆಗೆ ಸಂಬಂಧಿಸಿದುದಾಗಿದೆ.

**ಯಃ ಪಾರ್ಥಿವಾನಿ ವಿಮಮೇ ಸ ಏತಶೋ ರಜಾಂಸಿ ದೇವಃ ಸವಿತಾ ಮಹಿತ್ವನಾ ।**

(ಋ. ಸಂ. ೫-೮೧-೩)

**ಮಾನೇನೇವ ತಸ್ಥಿವಾँ ಅಂತರಿಕ್ಷೇ ವಿ ಯೋ ಮಮೇ ಪೃಥಿವೀಂ ಸೂರ್ಯೇಣ ।**

(ಋ. ಸಂ. ೫-೮೫-೫)

ಎಂಬಲ್ಲೆಲ್ಲಾ ಪ್ರಯುಕ್ತವಾಗಿರುವ ವಿ ಉಪಸರ್ಗಪೂರ್ವಕವಾದ **ಮಾ** ಧಾತುವಿನ ಪ್ರಯೋಗವು ಸೂರ್ಯರೂಪನಾದ ಸವಿತೃವಿನ ಮತ್ತು ಸವಿತೃರೂಪನಾದ ಸೂರ್ಯನ ನಿಯಾಮಕಕಾರ್ಯವನ್ನು ಸೂಚಿಸುತ್ತದೆ. ಅಮೂರ್ತರೂಪದಲ್ಲಿದ್ದ ತ್ರಿಲೋಕಗಳನ್ನೂ ಮೂರ್ತರೂಪಕ್ಕೆ ತಂದುದು ಸವಿತೃವಿನಕಾರ್ಯವು. ಮೇಲೆ ಉದಾಹೃತವಾಗಿರುವ ೧-೧೧೦-೩ ನೇ ಋಕ್ಕಿನಲ್ಲಿರುವಂತೆ ಅಥರ್ವಸಂಹಿತೆಯಲ್ಲಿಯೂ ಸಹ—

**ಚಮಸ ಯಸ್ಮಿನ್ ಯಶೋ ನಿಹಿತಂ ವಿಶ್ವರೂಪಂ ।**

(ಅ. ವೇ. ೧೦-೮-೯)

ಎಂಬ ವರ್ಣನೆಯಿದೆ. ಈ ವರ್ಣನವು ಈಶಾವಾಸ್ಯೋಪನಿಷತ್ತಿನಲ್ಲಿ ಉಕ್ತವಾಗಿರುವ,

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।**

(ಈಶ. ೧೫)

ಎಂಬ ವರ್ಣನವೇ ಆಗಿದೆ. ಈಶಾವಾಸ್ಯದ ಈ ಮಂತ್ರದಲ್ಲಿ ಸಂಬೋಧಿಸಲ್ಪಟ್ಟಿರುವ **ಪೂಷಶಬ್ದಕ್ಕೆ ಸೂರ್ಯ** ನೆಂದರ್ಥ. ಹಿರಣ್ಮಯವಾದ ಪಾತ್ರೆಯಿಂದ ಮರೆಯಾಗಿರುವ ಆದಿತ್ಯಮಂಡಲದ ಸತ್ಯಬ್ರಹ್ಮದ ಮುಖವನ್ನು ತೆರೆಯುವವನಾಗು ಎಂದು ಇಲ್ಲಿ ಪ್ರಾರ್ಥಿಸಿದೆ. ಮುಚ್ಚಲ್ಪಟ್ಟು ಅಗೋಹ್ಯವೂ ಅಗೋಚರವೂ ಆದುದೂ ಐಕಾತ್ಮ್ಯ ವನ್ನು ಹೊಂದಿ ಅಮೂರ್ತವಾಗಿರತಕ್ಕದ್ದೂ ಆದ ಸತ್ಯವನ್ನು ಮೂರ್ತರೂಪದ್ದನ್ನಾಗಿ ಮಾಡಿ ಜಗತ್ತಿನ ಗೋಚರಕ್ಕೆ ಅನುಕೂಲವಾಗುವಂತೆ ವೈವಿಧ್ಯವನ್ನುಂಟುಮಾಡಿದರು ಎಂದು ಋಕ್ಸಂಹಿತೆಯಲ್ಲಿ ವರ್ಣಿಸಿದೆ. [ಋ. ಸಂ. ೧-೧೬೧-೧೧ ನೇ ಋಕ್ಕಿನಲ್ಲಿ **ಋಭು** ಶಬ್ದಕ್ಕೆ ಆದಿತ್ಯರಶ್ಮಿಗಳೆಂದೂ **ಅಗೋಹ್ಯ** ಶಬ್ದಕ್ಕೆ ಆದಿತ್ಯನೆಂದೂ ಅರ್ಥ ಮಾಡಿರುವುದನ್ನು ಹಿಂದೆ ಆ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ]. ಆದಿತ್ಯರೂಪಿಯಾದ ಸವಿತೃವಿನ ಅಂತೇವಾಸಿ ಗಳಾದ ಋಭುಗಳೂ ಸಹ (ಐ. ಬ್ರಾ. ೩-೩೦) ಆದಿತ್ಯರಶ್ಮಿಗಳೇ ಆಗಿವೆ. ಆದರೆ ಆಗ ಎಲ್ಲವೂ ಆದಿತ್ಯನಲ್ಲೇ ಅಂತ ರ್ಗತವಾದಂತಾಯಿತು.

ವನಾನಿ ವಿಭ್ವೋ ನಕಿರಸ್ಯ ತಾನಿ **ವ್ರತಾ ದೇವಸ್ಯ ಸವಿತುರ್ಮಿನಂತಿ** । ನ (ಋ. ಸಂ. ೨-೩೮-೭) **ಯಸ್ಯೇಂ ದ್ರೋ ವರುಣೋ** (ಋ. ಸಂ. ೨-೩೮-೯) ಇತ್ಯಾದಿ ವಾಕ್ಯಗಳಲ್ಲಿ ವರ್ಣಿತವಾಗಿರುವ ಸವಿತೃವಿನ ಪ್ರಭುತ್ವದಂತೆಯೇ. **ಏಕೋ ವಿಶ್ವಸ್ಯ ಭುವನಸ್ಯ ರಾಜಾ** (ಋ. ಸಂ. ೩-೪೬-೨) ಇತ್ಯಾದಿ ವಾಕ್ಯಗಳಿಂದ ಇಂದ್ರಾದಿಗಳ ಪ್ರಭುತ್ವವೂ ವರ್ಣಿತವಾಗಿದೆ. ಆದುದರಿಂದ ಪ್ರತಿಯೊಂದು ದೇವತೆಯ ವಿಷಯದಲ್ಲೂ ಸಹ ಇಂತಹ ವರ್ಣನೆಗಳಿರುವಾಗ



CC-0. Jangamwadi Math Collection. Digitized by eGangotri

ಸವಿತೃವಿನ ವೈಶಿಷ್ಟ್ಯವೇನು ಎಂಬ ಇನ್ನೊಂದು ಪ್ರಶ್ನೆಗೆ ಉತ್ತರವಾಗಿ ಕೆಲವರು ಇಂತಹ ವರ್ಣನವು ಔಪಚಾರಿಕವೇ ವಿನಹ ಇದರಲ್ಲಿ ವೈಶಿಷ್ಟ್ಯವಿಲ್ಲ, ಇತರ ದೇವತೆಗಳಂತೆಯೇ ಸವಿತೃವೂ ಅಪರದೇವತಾವಿಶೇಷಗಳಲ್ಲೊಂದು ಎಂದು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸವಿತೃವಿನ ವೈಶಿಷ್ಟ್ಯವನ್ನು ತಿಳಿಯಬೇಕಾದರೆ ಸವಿತೃವಿಗೆ ಸಂಬಂಧಿಸಿದ **ನಿವಿದ್** ಮಂತ್ರವನ್ನು ಪರಿಸಬೇಕು. ಉದಾಹರಣೆಗೆ—

**ನ ಪ್ರಮಿಯೇ ಸವಿತುರ್ದೈವ್ಯಸ್ಯ ತದ್ಯಥಾ ವಿಶ್ವಂ ಭುವನಂ ಧಾರಯಿಷ್ಯತಿ ।**
**ಯತ್ಪೃಥಿವ್ಯಾ ವರಿಮನ್ನಾ ಸ್ವಂಗುರಿರ್ವರ್ಷ್ಮನ್ದಿವಃ ಸುವತಿ ಸತ್ಯಮಸ್ಯ ತತ್ ॥**

(ಋ. ಸಂ. ೪-೫೫-೪)

ಇತ್ಯಾದಿ ಮಂತ್ರಗಳಲ್ಲಿ ಸವಿತೃವಿನ ಮುಖ್ಯಗುಣವು ವರ್ಣಿತವಾಗಿದೆ. ಇಲ್ಲಿ ವಿಶ್ವನಿಯಮನ ; ಸತ್ಯಪಾಲನ ಇತ್ಯಾದಿ ವ್ಯಾಪಾರಗಳು ಸೂಚಿತವಾಗಿವೆ. ಇದರಂತೆಯೇ,

———

## (೫) ಋತಾಧ್ಯಕ್ಷನಾದ ವರುಣನೂ ಸಹ ಸವಿತೃವಿನ ವಿಭೂತಿ ವಿಶೇಷವಲ್ಲದೆ ಬೇರೆಯಲ್ಲ.

**ತ್ರಿಪಂಚಾಶಃ ಕ್ರೀಳತಿ ವ್ರಾತ ಏಷಾಂ ದೇವ ಇವ ಸವಿತಾ ಸತ್ಯಧರ್ಮಾ** (ಋ. ಸಂ. ೧೦-೩೪-೮) ಎಂಬಲ್ಲೆಲ್ಲಾ ಸತ್ಯಪಾಲನವು ಸವಿತೃವಿನ ವಿಶೇಷಗುಣವೆಂದು ತಿಳಿಸಿದೆ. **ಜಗತಃ ಸ್ಥಾತುರುಭಯಸ್ಯ ಯೋ ವಶೀ** (೪-೫೩-೬) ಸವಿತೃವು ಸ್ಥಾವರ ಜಂಗಮಾತ್ಮಕವಾದ ಸಕಲಲೋಕಕ್ಕೂ ಒಡೆಯನು ; **ವಿಶ್ವಸ್ಯ ಹಿ ಶ್ರುಷ್ಟಯೇ .... .... .... ರಮತೇ ಪರಿಜ್ಮನ್** (೭-೩೮-೨) ; ಸೂಕ್ಷ್ಮವಾದ ವಸ್ತುವಾಗಲಿ, ಸ್ಥೂಲವಾದದ್ದಾಗಲಿ ಇವನ ನಿಯಮನದಿಂದಲೇ ಚಲಿಸುತ್ತದೆ. ಇದನ್ನೇ ಅಥರ್ವಣದಲ್ಲಿ **ದೇವಸ್ಯ ಸವಿತುಃ ಸರ್ವೇ ಕರ್ಮ ಕೃಣ್ವಂತು ಮಾನವಾಃ ।** (ಅ. ವೇ. ೬-೨೩-೩) ಇತ್ಯಾದಿ ವಾಕ್ಯಗಳಿಂದ ವರ್ಣಿಸಿದೆ. ಇವೆಲ್ಲವೂ ಸಹ ಋತಾಧ್ಯಕ್ಷನಾದ **ವರುಣದೇವನ** ವರ್ಣನೆಯಂತಿದೆ. ಆದುದರಿಂದ ಸವಿತೃವಿಗೂ ವರುಣನಿಗೂ ವ್ಯತ್ಯಾಸವಿದೆಯೇ ; ಇವರು ಭಿನ್ನ ದೇವತೆಗಳೇ ಅಥವಾ ಒಂದೇ ತತ್ತ್ವದ ಎರಡು ಸ್ವರೂಪಗಳೇ ಅಥವಾ ಒಂದೇ ವಸ್ತುವು ಬೇರೆ ಬೇರೆ ಗುಣಗಳಿಂದ ವರ್ಣಿತವಾಗಿದೆಯೇ ಎಂಬುದನ್ನೂ ಪರಿಶೀಲಿಸಬೇಕು.

ಕೆಲವು ಸಂಹಿತಾವಾಕ್ಯಗಳನ್ನು ಪರಿಶೀಲಿಸಿದರೆ ವರುಣನಿಗೂ ಸವಿತೃವಿಗೂ ತಾದಾತ್ಮ್ಯವನ್ನೇ ಹೇಳಿರುವಂತಿದೆ. ಉದಾಹರಣೆಗೆ—

**ಪ್ರ ತ್ವಾ ಮುಂಚಾಮಿ ವರುಣಸ್ಯ ಪಾಶಾದ್ಯೇನ ತ್ವಾಬಧ್ನಾತ್ ಸವಿತಾ ಸುಶೇವಃ ।**

(ಋ. ಸಂ. ೧೦-೮೫-೨೪)

ಎಂಬಲ್ಲಿ ವರುಣನ ಪಾಶಕ್ಕೂ ಸವಿತೃವಿನ ಪಾಶಕ್ಕೂ ಸಾಮ್ಯವಿದೆ. ಭಾಷ್ಯದಲ್ಲಿ ಸಾಯಣರು ಸವಿತೃವಿನಿಂದ ಪ್ರೇರಿತನಾದ ವರುಣನು ಜಾತಪ್ರಾಣಿಗಳನ್ನು ತನ್ನ ಪಾಶದಿಂದ ಬಂಧಿಸುತ್ತಾನೆ ಎಂದಿದ್ದಾರೆ. ಆದರೆ ಹಾಗೆ ಬಂಧಿತನಾದ ಪುರುಷನನ್ನು ವಿಮೋಚನಮಾಡುವುದೂ ಸವಿತೃವಿನ ಕಾರ್ಯವೇ ಆಗಿದೆ. ಅಥವಾ ಅವನ ಪ್ರಸಾದದಿಂದಲೇ ಆಗಬೇಕಾಗಿದೆ. ನೀತಿಪಾಲನವೂ, ಸತ್ಯಪಾಲನವೂ, ವಿಶ್ವನಿಯಮನವೂ ಸವಿತೃವಿಗೂ ವರುಣನಿಗೂ ಸಮಾನ

CC-0. Jangamwadi Math Collection. Digitized by eGangotri

ಧರ್ಮವೆಂಬುದು ೨-೩೮-೨ ; ೩-೩೩-೬ ; ೪-೫೩-೪ ; ೧೦-೩೪-೮ ; ೧೦-೧೪೯-೩ಇತ್ಯಾದಿ ಸನ್ನಿವೇಶಗಳಲ್ಲಿ ಸವಿತೃವನ್ನು ವರ್ಣಿಸುವಾಗಲೂ ಮತ್ತು ೬-೭೦-೧ ; ೭-೮೬-೧ ; ೮-೪೧-೧೦ ; ೮-೪೨-೧ಇತ್ಯಾದಿ ಋಕ್ಕುಗಳಲ್ಲಿ ವರುಣನನ್ನು ವರ್ಣಿಸುವಾಗಲೂ ವಿಶದವಾಗಿದೆ. ವಿಶ್ವನಿಯಮಕ್ಕೆ ಪಾಲಕನಾದುದರಿಂದಲೇ ಸವಿತೃವು ಮಿತ್ರನೆಂದೂ ಸಂಬೋಧಿತನಾಗಿದ್ದಾನೆ. **ಉತ ರಾತ್ರೀಮುಭಯತಃ ಪರೀಯಸ ಉತ ಮಿತ್ರೋ ಭವಸಿ ದೇವ ಧರ್ಮಭಿಃ** (೫-೮೧-೪) ಜಗದ್ಧಾರಣಕರ್ಮಕ್ಕೆ ಪ್ರಭುವಾದುದರಿಂದ ಸವಿತೃವಿಗೆ ಮಿತ್ರನೆಂದೂ ಹೆಸರು ಪ್ರಸಿದ್ಧವಾಗಿದೆಯೆಂದು ತಾತ್ಪರ್ಯ. **ಸರ್ವಸ್ಯ ಪ್ರಸವಿತಾ** ಎಂಬುದಾಗಿ ಉತ್ಪತ್ತಿಕ್ರಿಯೆಯು ಮಾತ್ರ ಸವಿತೃವಿನ ಕಾರ್ಯವಲ್ಲದೇ, ಜಗತ್ತಿನ ಸ್ಥಿತಿಗೂ ಇವನೇ ಕಾರಣನಾಗಿದ್ದಾನೆ.

"ಬೃಹತ್ಸುಮ್ನಃ ಪ್ರಸವೀತಾ ನಿವೇಶನೋ ಜಗತಃ" ಇತ್ಯಾದಿಯಾಗಿ (ಋ. ಸಂ. ೪-೫೩-೬) ಸವಿತೃವಿನ ಮಹಿಮೆಯು ವರ್ಣಿತವಾಗಿದೆ.

ಎರಡನೆಯದಾಗಿ, ವರುಣನಿಗೆ ವಿಶೇಷಣವಾಗಿರತಕ್ಕ ಅತಿ ಪ್ರಸಿದ್ಧವಾದ **ಅಸುರ** ಎಂಬ ಪದವು ಸವಿತೃವಿಗೂ ವಿಶೇಷಣವಾಗಿರುವುದು ಗಮನಾರ್ಹವಾದ ಅಂಶವಾಗಿದೆ. **ತದ್ದೇವಸ್ಯ ಸವಿತುರ್ವಾರ್ಯಂ ಮಹದ್ವೃಣೀಮಹೇ ಅಸುರಸ್ಯ ಪ್ರಚೇತಸಃ** (೪-೫೭-೧) ಇತ್ಯಾದಿ ಸ್ಥಳಗಳಲ್ಲಿ ಈ ವಿಶೇಷಗುಣವನ್ನು ವರ್ಣಿಸುವ ಸಂದರ್ಭದಲ್ಲಿ ಸವಿತೃವಿನ ಶಕ್ತಿಯು ಸೂಚಿತವಾಗಿದೆ. ಪಾಪನಾಶಕನಾದ ವರುಣನನ್ನು ಸ್ತುತಿಸುವ ರೀತಿಯಲ್ಲಿಯೇ ಸವಿತೃವನ್ನೂ ಸ್ತುತಿಸಿರುವುದು ಅವರಿಬ್ಬರ ಸಾಧಾರಣಗುಣವನ್ನು ತೋರಿಸುತ್ತದೆ ಉದಾಹರಣೆಗೆ—

**ಅಚಿತ್ತೀ ಯಚ್ಚಕೃಮಾ ದೈವ್ಯೇ ಜನೇ ದೀನೈರ್ದಕ್ಷೈಃ ಪ್ರಭೂತೀ ಪೂರುಷತ್ವತಾ ।**
**ದೇವೇಷು ಚ ಸವಿತರ್ಮಾನುಷೇಷು ಚ ತ್ವಂ ನೋ ಅತ್ರ ಸುವತಾದನಾಗಸಃ ॥**

(ಋ. ಸಂ. ೪-೫೪-೩)

ಎಲೈ ಸವಿತೃವೇ, ಅಜ್ಞಾನದಿಂದಾಗಲಿ, ಅಭಿಮಾನದಿಂದಾಗಲಿ, ಅಶಕ್ತಿಯಿಂದಾಗಲಿ ಮನುಷ್ಯಸಾಧಾರಣವಾದ ದೌರ್ಬಲ್ಯದಿಂದಾಗಲಿ ನಾವು ಪಾಪಮಾಡಿದ್ದರೆ ಅದನ್ನು ಕ್ಷಮಿಸು. ದೈವೀಪುರುಷನನ್ನಾಗಲಿ, ದೇವತೆಗಳನ್ನಾಗಲಿ ನಾವು ನಿಂದಿಸಿದ್ದರೆ ಅದನ್ನು ಕ್ಷಮಿಸು. ನಮಗೆ ಕೆಡಕಾಗದಿರಲಿ ಎಂದಿರುವ ಪ್ರಾರ್ಥನೆಯಂತೆಯೇ,

**ಯತ್ಕಿಂ ಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ ಮನುಷ್ಯಾ ೩ ಶ್ಚರಾಮಸಿ ।**
**ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ ಮಾ ನಸ್ತಸ್ಮಾದೇನಸೋ ದೇವ ರೀರಿಷಃ ॥**

(ಋ ಸಂ. ೭-೮೯-೫)

ಇಲ್ಲಿಯೂ ಪ್ರಾರ್ಥನೆಯ ಕ್ರಮವು ಏಕರೀತಿಯಾಗಿ ಒಂದೇ ವಿಧವಾದ ಶೈಲಿಯು ಗಮನಾರ್ಹವಾದ ಅಂಶವಾಗಿದೆ. ಇಂತಹ ಸನ್ನಿವೇಶಗಳನ್ನು ಗಮನಿಸಿದರೆ ವರುಣ ಮತ್ತು ಸವಿತೃ ಎಂಬಿಬ್ಬರೂ ಒಂದೇ ತತ್ತ್ವವನ್ನು ಪ್ರತಿಬಿಂಬಿಸುವ ದೇವತಾವಿಶೇಷನೆಂದು ಹೇಳಬಹುದು. **ಸಮ್ರಾಟ್** ಎಂಬ ವಿಶೇಷಣವು ವರುಣನಿಗಿರುವಂತೆಯೇ ಸವಿತೃವಿನ ಪ್ರಭುತ್ವವನ್ನೂ ಅನೇಕಕಡೆಗಳಲ್ಲಿ ಸೂಚಿಸುತ್ತದೆ.

————....

CC-0. Jangamwadi Math Collection. Digitized by eGangotri

## ೬) ಸವಿತೃ ಮತ್ತು ವರುಣನ ಸಾಧಾರಣಧರ್ಮವನ್ನು ತೋರಿಸುವ ವಿಶೇಷಣಗಳು

ಇವರಿಬ್ಬರ ಐಕ್ಯತೆಯನ್ನು ತಿಳಿಸಲು **ಅಮತಿ** ಮತ್ತು **ಮಾಯಾ** ಎಂಬ ಎರಡು ವಿಶೇಷಣಪದಗಳು ಸಾಧಕವಾಗಿವೆ. ಇವೆರಡೂ ಸಹ ಶಕ್ತಿಸೌಂದರ್ಯಗಳನ್ನು ತಿಳಿಸುವ ವಿಶೇಷಣಗಳಾಗಿವೆ. ಆದಿತ್ಯಾಂತರ್ಗತವಾದ ಹಿರಣ್ಮಯಪುರುಷನ ತೇಜಸ್ಸು ಯಾವ ಶೈಲಿಯಿಂದ ವರ್ಣಿತವಾಗಿದೆಯೋ ಅದೇ ರೀತಿ ಈ ಸವಿತೃ ಮತ್ತು ವರುಣರ ಶಕ್ತಿಸೌಂದರ್ಯಗಳೂ ವರ್ಣಿತವಾಗಿವೆ.

**ಉದು ಷ್ಯ ದೇವಃ ಸವಿತಾ ಯಯಾಮ ಹಿರಣ್ಯಯೀಮಮತಿಂ ಯಾಮಶಿಶ್ರೇತ್ ।**
**ನೂನಂ ಭಗೋ ಹವ್ಯೋ ಮಾನುಷೇಭಿರ್ವಿ ಯೋ ರತ್ನಾ ಪುರೂವಸುರ್ದಧಾತಿ ॥**
(ಋ. ಸಂ. ೭-೩೮-೧)

ಎಂಬಲ್ಲಿ ಹಿರಣ್ಯರೂಪನಾದ ಸವಿತೃವಿನ ವರ್ಣನವೂ,

**ಋತಸ್ಯ ಬುಧ್ನ ಉಷಸಾಮಿಷಣ್ಯನ್ವೃಷಾ ಮಹೀ ರೋದಸೀ ಆ ವಿವೇಶ ।**
**ಮಹೀ ಮಿತ್ರಸ್ಯ ವರುಣಸ್ಯ ಮಾಯಾ ಚಂದ್ರೇವ ಭಾನುಂ ವಿ ದಧೇ ಪುರುತ್ರಾ ॥**
(ಋ. ಸಂ. ೩-೬೧-೭)

ಎಂಬಲ್ಲಿ ವರುಣನ ತೇಜಃಶಕ್ತಿಯ ವರ್ಣನವೂ ಒಂದೇ ರೀತಿಯುಳ್ಳದ್ದಾಗಿದೆ. ಈ ಎರಡು ವರ್ಣನೆಗಳೂ ಸವಿತೃ ಮತ್ತು ವರುಣನಾಮಾಂಕಿತವಾದ ಒಂದೇ ದಿವ್ಯತತ್ತ್ವದ ಅಪ್ರಾಕೃತವೂ ಅಲೌಕಿಕವೂ ಆದ ಪ್ರಭೆಯನ್ನೂ ದಿವ್ಯ ಶಕ್ತಿಯನ್ನೂ ತಿಳಿಸುತ್ತವೆ. ಮೊದಲನೆಯ ಉದಾಹರಣೆಯಲ್ಲಿ **ಅಮತಿ**ಶಬ್ದಕ್ಕೆ ದಿವ್ಯಪ್ರಭೆಯೆಂದರ್ಥಮಾಡಿರುವಂತೆಯೇ, ಎರಡನೆಯದರಲ್ಲೂ ಸಹ **ಮಾಯಾ**ಶಬ್ದಕ್ಕೂ ದಿವ್ಯಪ್ರಭೆಯೆಂದೇ ಅರ್ಥಮಾಡಿದ್ದಾರೆ. **ಅಮತಿ**ಶಬ್ದಕ್ಕೆ **ಹಿರಣ್ಯಯೀಂ** ಎಂಬ ವಿಶೇಷಣವಿರುವಂತೆ **ಮಾಯಾ**ಶಬ್ದಕ್ಕೆ **ಚಂದ್ರೇವ** ಎಂಬ ಉಪಮಾನವಿದೆ. ಎರಡು ಪ್ರಭೆಗಳ ಸ್ವರೂಪವೂ ಒಂದೇ ಆಗಿದೆ. **ಋತೇನ ವಿಶ್ವಂ ಭುವನಂ ವಿ ರಾಜಥಃ ಸೂರ್ಯಮಾ ಧತ್ಥೋ ದಿವಿ ಚಿತ್ರ್ಯಂ ರಥಂ ।** (ಋ. ಸಂ. ೫-೬೩-೭) ಮತ್ತು **ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।** (ಋ. ಸಂ. ೫-೮೧-೨) ಇತ್ಯಾದಿ ಸ್ಥಳಗಳಲ್ಲಿ ವಿಶ್ವಕ್ಕೆಲ್ಲಾ ತಮ್ಮ ದಿವ್ಯ ಪ್ರಭೆಯನ್ನು ಹರಡಿ ಸಕಲವಿಶ್ವವನ್ನೂ ಆಕರ್ಷಕವಾಗಿರುವಂತೆ ಮಾಡುವ ಶಕ್ತಿಯು ವರ್ಣಿತವಾಗಿದೆ. ಈ ಸೌವರ್ಣಪ್ರಭೆಯನ್ನು ವಿವರಿಸುವ **ಹಿರಣ್ಯಪಕ್ಷಂ ವರುಣಸ್ಯ ದೂತಂ** (೧೦-೧೨೩-೬); ಎಂಬ ವರುಣನ ವರ್ಣನವೂ, **ಹಿರಣ್ಯಯೇನ ಸವಿತಾ ರಥೇನಾ ದೇವೋ ಯಾತಿ ಭುವನಾನಿ ಪಶ್ಯನ್** (ಋ. ಸಂ. ೧-೩೫-೨) ಇತ್ಯಾದಿ ಸವಿತೃವಿನ ವರ್ಣನವೂ ಇವರಿಬ್ಬರ ಅಭೇದರೂಪವನ್ನು ತಿಳಿಸುತ್ತದೆ. ಅಲ್ಲದೇ, ಸವಿತೃವನ್ನು ಆದಿತ್ಯ ಸ್ವರೂಪನೆಂದು ವೈದಿಕವಾಕ್ಯಗಳ ಆಧಾರದ ಮೇಲೆ ನಿಷ್ಕರ್ಷಿಸುವಂತೆ ವರುಣನನ್ನೂ ಸಹ ಆದಿತ್ಯಸ್ವರೂಪನೆಂದು ಹೇಳಲು ಸ್ಪಷ್ಟವಾದ ಪ್ರಮಾಣಗಳಿವೆ. ತೈತ್ತಿರೀಯಬ್ರಾಹ್ಮಣಾದಿಗಳಲ್ಲಿ **ವಾರುಣೋ ವಾ ಅಶ್ವಃ** (ತೈ. ಬ್ರಾ. ೩-೯-೧೬-೧) ಇತ್ಯಾದಿಯಾಗಿ ಉಕ್ತವಾಗಿರುವುದು. ಈ ವಾರುಣಾಶ್ವದ ರಹಸ್ಯಾರ್ಥವೇನು ಎಂಬ ವಿಷಯವನ್ನು Eggling ಎಂಬ ಪಂಡಿತನು ಶತಪಥಬ್ರಾಹ್ಮಣವನ್ನು ಪರಿವರ್ತಿಸುವ ಕಾಲದಲ್ಲಿ ಈ ರೀತಿ ಹೇಳಿದ್ದಾನೆ.

Varuna's horse is none other than the fiery races who pursue his diurual course across the all-encompassing arch of heaven, the sphere of

CC-0. Jangamwadi Math Collection. Digitized by eGangotri

Varuna, the all-ruler. It is in the form of the horse that the sun is thus lauded in the hymn in praise of Aswamedha.

[S. B. E. XLIV: p. XIX to XXX]

ದ್ಯಾವಾಪೃಥಿವಿಗಳಿಗೆಲ್ಲಾ ಪ್ರಭುವಾದ ವರುಣನ ಈ ಅಶ್ವವು ಯಾವುದೆಂದರೆ ತನ್ನ ದೈನಂದಿನದ ಪರಿಭ್ರಮಣವನ್ನು ಹೊಂದುತ್ತಿರುವ ಆದಿತ್ಯನಲ್ಲದೆ ಬೇರೆಯಲ್ಲ.

ಈ ರೀತಿ ಅನೇಕ ಪ್ರಮಾಣಗಳಿಂದ ವರುಣನೂ ಸಹ ಆದಿತ್ಯನ ವಿಭೂತಿವಿಶೇಷವೇ ಎಂದು ಹೇಳಬೇಕು. ಈ ಅಂಶವನ್ನು ಹಿಂದೆ ಋತಾದಧ್ಯಾದಧಾಥೇ ಅನೃತಂ (೧-೧೫೪-೨) ಎಂಬ ಮಂತ್ರವಾಕ್ಯವನ್ನೂ ಮತ್ತು ಅನಶ್ವೋ ಜಾತೋ ಅನಭೀಶುರರ್ವಾ........ಅಚಿತ್ತಂ ಬ್ರಹ್ಮ ಜುಜುಷುರ್ಯುವಾನಃ (ಋ. ಸಂ. ೧-೧೫೨-೫) ಎಂಬ ಮಂತ್ರವನ್ನೂ ವಿವರಿಸುವಾಗ ವಿಸ್ತರಿಸಿ ತಿಳಿಸಿದೆ. ಮತ್ತು ಇಲ್ಲಿ ಉದಾಹೃತವಾಗಿರುವ ಸನ್ನಿವೇಶಗಳಲ್ಲಿ ಸಾಧಾರಣವಾದ ದೃಷ್ಟಿಗೆ ಗೋಚರವಾಗದೇ ಗೂಢವಾದ ತತ್ತ್ವವುಳ್ಳ ಯಜ್ಞಕರ್ಮವನ್ನು ವರುಣನ ತೇಜೋರೂಪವಾದ ಸ್ಥಾನದೊಂದಿಗೆ ಒಂದುಗೂಡಿಸುವ ಒಂದು ಆಧ್ಯಾತ್ಮಿಕವಾದ ತತ್ತ್ವವು ಹೇಳಲ್ಪಟ್ಟಿದೆ.

---

## (೬) ಆದಿತ್ಯಾಂತರ್ಗತವೂ ಸವಿತ್ರಾತ್ಮಕವೂ ಆದ ಹಿರಣ್ಮಯಪುರುಷ.

ಹೀಗೆ ಸವಿತೃ ಮತ್ತು ವರುಣ ಇವರಿಬ್ಬರೂ ಆದಿತ್ಯನ ವಿಭೂತಿವಿಶೇಷಗಳಾದರೆ. ಇವರ ಹಿರಣ್ಮಯರೂಪದ ವರ್ಣನವು ಆದಿತ್ಯನ ಸ್ವರೂಪವನ್ನು ಹೇಳಿದಂತಾಯಿತು. ಋಕ್ಸಂಹಿತೆಯಲ್ಲಿ ಹಿರಣ್ಯಯೀಂ ಅಮತಿಂ ಇತ್ಯಾದಿ ವಾಕ್ಯಗಳಿಂದ ವರ್ಣಿತವಾಗಿರುವ ಆದಿತ್ಯನ ಸ್ವರೂಪವೂ, ಉಪನಿಷದಾದಿಗಳಲ್ಲಿ ವರ್ಣಿತವಾಗಿರುವ ಆದಿತ್ಯಾಂತರ್ಗತನಾದ ಪರಮಪುರುಷನ ಸ್ವರೂಪವೂ ಒಂದೇ ಆಗಿರುತ್ತದೆ.

> ತಸ್ಯ ಹೈತಸ್ಯ ಪುರುಷಸ್ಯ ರೂಪಂ । ಯಥಾ ಮಹಾರಜನಂ ವಾಸಃ । ಯಥಾ ಪಾಂಡ್ವಾವಿಕಂ, ಯಥೇಂದ್ರಗೋಪಃ, ಯಥಾಗ್ನ್ಯರ್ಚಿಃ, ಯಥಾ ಪುಂಡರೀಕಂ । ಯಥಾ ಸಕೃದ್ವಿದ್ಯುತ್ತಂ ॥
>
> (ಬೃ. ಉ. ೨-೩-೬)

ಈ ಪರಮಪುರುಷನ ಸ್ವರೂಪವು ಕೇಸರೀವರ್ಣದಿಂದ ಪೂರಿತವಾದ ವಸ್ತ್ರದಂತೆಯೂ ಶುಭ್ರವಾದ ರೇಷ್ಮೆಯಂತೆಯೂ, ಅರುಣವರ್ಣದ ಇಂದ್ರಗೋಪದ ಪ್ರಭೆಯಂತೆಯೂ ಅಗ್ನಿಜ್ವಾಲೆಯಂತೆಯೂ, ಪುಂಡರೀಕದಂತೆಯೂ, ವಿದ್ಯುತ್ಪ್ರಭೆಯಂತೆಯೂ ಪ್ರಕಾಶಮಾನವಾಗಿದೆಯೆಂಬ ಬೃಹದಾರಣ್ಯಕದ ವರ್ಣನೆಯೂ,

> ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ ॥
>
> (ಛಾ. ಉ. ೧-೬-೬)

ಆದಿತ್ಯಾಂತರ್ಗತನಾದ ಈ ಸುವರ್ಣಮಯನಾದ ಪರಮಪುರುಷನ ಶ್ಮಶ್ರುಗಳೆಲ್ಲವೂ ಹಿರಣ್ಮಯವಾಗಿಯೇ ಇದೆ. ಪಾದದನಖದಿಂದ ಶೀರ್ಷದವರೆಗೂ ಸಹ ಈ ಪುರುಷನ ಆಕೃತಿಯು ಅತ್ಯಂತ ಪ್ರಭಾಯುತವಾಗಿಯೂ, ದಿವ್ಯಜ್ಯೋತಿಯಿಂದ ಆಕರ್ಷಕವಾದುದಾಗಿಯೂ ಇದೆಯೆಂಬ ಛಾಂದೋಗ್ಯೋಪನಿಷತ್ತಿನ ವರ್ಣನೆಯೂ ಸಹ ಮೇಲೆ ಉದಾಹೃತವಾಗಿರುವ ಸವಿತೃವಿನ ಪ್ರಭೆಯ ವರ್ಣನೆಗೆ ಸಮಾನವಾಗಿದೆ. ಮತ್ತು, ಇದೇ ಆದಿತ್ಯನು ಉಪನಿಷದಾದಿಗಳಲ್ಲಿ

CC-0. Jangamwadi Math Collection. Digitized by eGangotri

ಎರಡುವಿಧವಾಗಿ ಸ್ತುತನಾಗಿದ್ದಾನೆ. ಆದಿತ್ಯನು ಉದಯಾಸ್ತಮಯವಾದ ಸಂಚಾರಗಳಿಂದ ಲೋಕನಿರ್ವಹಣವನ್ನು ಮಾಡುವುದು ಲೌಕಿಕಪ್ರತ್ಯಕ್ಷಕ್ಕೆ ಗೋಚರವಾಗತಕ್ಕದ್ದು. **ನ ವೈ ತತ್ರ ನ ನಿಮ್ಲೋಚ ನೋದಿಯಾಯ ಕದಾಚನ** (ಛಾ. ಉ. ೩-೧೧ ; ೧-೩) ಇತ್ಯಾದಿ ವಾಕ್ಯಗಳಲ್ಲಿ ವರ್ಣಿತನಾದ ಆದಿತ್ಯನಿಗೆ ಉದಯಾಸ್ತಮಯ ಗಳಿರುವುದಿಲ್ಲ. ಅವನಿಗೆ ಯಾವಾಗಲೂ ಶಾಶ್ವತವಾದ ಹಗಲೇ ಇರುತ್ತದೆ. ಮತ್ತು, **ಸಕೃದ್ವಿಭಾತೋ ಹ್ಯೇವೈಷ ಬ್ರಹ್ಮಲೋಕಃ** (ಛಾ. ಉ. ೮-೪-೨) ಈ ದಿವ್ಯಲೋಕದ ಪ್ರಭೆಯು ಶಾಶ್ವತವಾಗಿರುತ್ತದೆಯೆಂದು ಶಾಶ್ವತವಾದುದೂ, ಅಪ್ರಾಕೃತವಾದುದೂ ಆದ ಆದಿತ್ಯಾಂತರ್ಗತನಾದ ಪರಮಪುರುಷನ ಪ್ರಭೆಯ ಸ್ತುತಿಯಿದೆ. ಸಕಲಚರಾಚರಗಳನ್ನೂ ಒಂದು ನಿಯಮಿತಸ್ಥಿತಿಯಲ್ಲಿಟ್ಟಿರುವುದು ಈ ಆದಿತ್ಯತತ್ತ್ವವೇ ಆಗಿದೆ. **ತತ್ಸವಿತುರ್ವ-ರೇಣ್ಯಂ** ಎಂಬ ಗಾಯತ್ರೀಮಂತ್ರೋಚ್ಚಾರಣೆಯನಂತರ ಆಹ್ನಿಕಕಾಲದಲ್ಲಿ ಪಠಿಸತಕ್ಕ ಆದಿತ್ಯಸ್ತುತಿಯು ಪ್ರಸಿದ್ಧ ವಾಗಿದೆ

**ಚಿತ್ರಂ ದೇವಾನಾಮುದಗಾದನೀಕಂ ಚಕ್ಷುರ್ಮಿತ್ರಸ್ಯ ವರುಣಸ್ಯಾಗ್ನೇಃ ।**
**ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ ॥**

(ಋ. ಸಂ. ೧-೧೧೫-೧)

ಎಂಬ ಈ ಮಂತ್ರದಲ್ಲಿ ಆದಿತ್ಯನ ಲೌಕಿಕಪ್ರತ್ಯಕ್ಷವಾದ ಪ್ರಭಾಮಂಡಲವೂ, ಅಪ್ರಾಕೃತವಾದ ದಿವ್ಯತತ್ತ್ವವೂ ಸ್ತುತವಾಗಿದೆ. ಪ್ರಭಾಯುತವಾದ ರಶ್ಮಿಯುಕ್ತನಾದ ಆದಿತ್ಯನು ಮಿತ್ರಾವರುಣರ ಚಕ್ಷುರ್ಭೂತನಾಗಿ ಉದಯಿಸಿ ದ್ಯಾವಾಪೃಥಿವಿಗಳನ್ನೆಲ್ಲಾ ವ್ಯಾಪಿಸಿದ್ದಾನೆ. ಈ ಸೂರ್ಯಮಂಡಲಾಂತರ್ವರ್ತಿಯಾದ ಪರಮಾತ್ಮನು ಸಕಲಜಗತ್ತಿಗೂ ಐಕ್ಯತೆಯನ್ನುಂಟುಮಾಡುವ ಆತ್ಮಪ್ರಾಯವಾಗಿದ್ದಾನೆ. **ಹಿರಣ್ಯಗರ್ಭಃ ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್ ॥ ಸ ದಾಧಾರ ಪೃಥಿವೀಂ ದ್ಯಾಮುತೇಮಾಂ ॥** (೧೦-೧೨೧-೧), ಇತ್ಯಾದಿ ವಾಕ್ಯಗಳಿಂದ ಸ್ತುತನಾಗಿರುವವನೂ ಸಹ ಸವಿತೃರೂಪನಾದ ಈ ಪರಮಾತ್ಮನೇ ಆಗಿದ್ದಾನೆ. ಆದುದರಿಂದ ಪ್ರಕೃತವಾದ ಮಂತ್ರಕ್ಕೆ ಪರಮಾತ್ಮವಾದ ತಾತ್ಪರ್ಯವನ್ನು ಹೇಳುವುದು ಕ್ರಮವಾಗಿದೆ. ಈ ಮಂತ್ರಕ್ಕೆ ತೈತ್ತಿರೀಯಸಂಹಿತೆಗೆ ಭಟ್ಟಭಾಸ್ಕರರು ಬರೆದಿರುವ ಭಾಷ್ಯವು ಈ ರೀತಿಯಿದೆ.

**ಯೋ ದೇವಸ್ಸವಿತಾ ವಿಶ್ವಸ್ಯ ಪ್ರಸವಿತಾಸ್ಮಾಕಂ ಧರ್ಮಾದಿಗೋಚರಾ ಧಿಯಃ ಪ್ರೇರಯತಿ ತಸ್ಯ ಸ್ವಭೂತಂ ವರೇಣ್ಯಂ ಸರ್ವೈರ್ಭಜನೀಯಂ ಭರ್ಗಃ ಪಾಪಾನಾಂ ತಾಪನಂ ತೇಜೋಮಂಡ-ಲಾತ್ಮಕಂ ಧೀಮಹಿ ಮನಸಾ ಧಾರಯಾಮಃ ॥ ಏವಂ ಬೋಧಪ್ರಕಾಶಾಭ್ಯಾಂ ಸಮಸ್ತಸ್ಯ ಪ್ರಪಂಚಸ್ಯೋಪಕುರ್ವಾಣಂ ಶ್ರೇಯೋಽರ್ಥಿಭಿರ್ಭಜನೀಯಂ ಸೂರ್ಯಾತ್ಮನಾ ಸ್ಥಿತಂ ಪಾರಮೇಶ್ವರಂ ತೇಜಃ ಉಪಾಸ್ಯತ್ವೇನೋಪದಿಶ್ಯತೇ ॥**

(ತೈ. ಸಂ. ಭಾ. ೧-೫-೬-೬)

ಈ ಭಾಷ್ಯದಲ್ಲಿ **ಬೋಧಪ್ರಕಾಶಾಭ್ಯಾಂ ಉಪಕುರ್ವಾಣಂ** ಎಂದು ಆದಿತ್ಯನ ತೇಜಸ್ಸಿಗೆ ಎರಡು ಪ್ರಯೋಜನ ವನ್ನು ತೋರಿಸಿದೆ. ಮೊದಲನೆಯದಾಗಿ, ಲೌಕಿಕವ್ಯವಹಾರಕ್ಕೆ ಬೇಕಾದ ಭೌತಿಕವಾದ ಪ್ರಕಾಶ. ಎರಡನೆಯದು ಆಧ್ಯಾತ್ಮಿಕಜ್ಞಾನಕ್ಕೆ ಸಾಧಕವಾದ ಅಂತಃಪ್ರಕಾಶ, ಎಂದರೆ ದಿವ್ಯಜ್ಞಾನ. ಈ ಎರಡು ಪ್ರಯೋಜನವೂ **ಸವಿತೃವಿನ ಭರ್ಗ**ದಿಂದ ಸಾಧ್ಯ ಇದೇ ಮಂತ್ರಕ್ಕೆ ಶುಕ್ಲಯಜುಸ್ಸಂಹಿತೆಯಲ್ಲಿ ಮಹೀಧರಾಚಾರ್ಯರ ಭಾಷ್ಯವು ಈ ರೀತಿಯಿದೆ—

CC-0. Jangamwadi Math Collection. Digitized by eGangotri

**ಸವಿತುಃ ಪ್ರೇರಕಸ್ಯಾಂತರ್ಯಾಮಿಣೋ ವಿಜ್ಞಾನಾನಂದಸ್ವಭಾವಸ್ಯ ಹಿರಣ್ಯಗರ್ಭೋಪಾಧ್ಯವಚ್ಛಿನ್ನಸ್ಯ ವಾ ಆದಿತ್ಯಾಂತರಪುರುಷಸ್ಯ ವಾ ಬ್ರಹ್ಮಣಃ ಭರ್ಗಃ ಪಾಪಾನಾಂ ಭರ್ಜನಸಮರ್ಥಂ ತೇಜಃ ಸತ್ಯಜ್ಞಾನಾನನ್ದಾದಿವೇದಾನ್ತಪ್ರತಿಪಾದ್ಯಂ ವಯಂ ಧ್ಯಾಯೋಮಃ ||**

ಸಕಲಭೂತಗಳಲ್ಲಿಯೂ ಅಂತರ್ಯಾಮಿಯಾಗಿ ಜಗತ್ಪ್ರೇರಕನಾಗಿಯೂ ಹಿರಣ್ಯಗರ್ಭ ಇತ್ಯಾದಿ ನಾಮಗಳಿಂದ ಸಂಬೋಧಿತನಾಗಿಯೂ ಆದಿತ್ಯಾಂತರ್ವರ್ತಿಯಾಗಿಯೂ ಇರುವ ಪರಬ್ರಹ್ಮನ ಪಾಪನಾಶಕವಾದುದೂ, ಸತ್ಯಜ್ಞಾನಾನನ್ದಾದಿರೂಪದಲ್ಲಿ ವೇದಾಂತಪ್ರತಿಪಾದ್ಯವಾದುದೂ ಆದ ದಿವ್ಯತೇಜಸ್ಸನ್ನು ಧ್ಯಾನಿಸುವೆವು, ಎಂದು ಪ್ರಾರ್ಥನೆ. ಈ ರೀತಿಯಲ್ಲಿರುವ ಸವಿತೃವಿನ ತೇಜಸ್ಸಿಗೆ **ಸುತ-ತೇಜಸ್** ಎಂಬ ಪ್ರಸಿದ್ಧಿಯೂ ಇದೆ. ಯಾವ ಮಹಾತೇಜಸ್ಸು;

**ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ |**
**ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ||**

(ಋ. ಸಂ. ೧-೫೦-೧೦)

ಇತ್ಯಾದಿಯಾಗಿ ಋಕ್ಸಂಹಿತೆಯಲ್ಲಿಯೂ,

**ಅಗನ್ಮ ಜ್ಯೋತಿರುತ್ತಮಮಿತ್ಯಾಹಾಸೌ ವಾ ಆದಿತ್ಯೋ ಜ್ಯೋತಿರುತ್ತಮಮಾದಿತ್ಯಸ್ಯೈವ ಸಾಯುಜ್ಯಂ ಗಚ್ಛತಿ ||**       ತೈ. ಸಂ. ೫-೧-೮-೬.

ಈ ಆದಿತ್ಯನ ತೇಜಸ್ಸೇ ಪರಂಜ್ಯೋತಿಯು. ಅಜ್ಞಾನಾಂಧಕಾರವನ್ನು ದಾಟಿದವನು ಇದರ ಸಾಯುಜ್ಯವನ್ನು ಪಡೆಯುತ್ತಾನೆ ಎಂದು ತೈತ್ತಿರೀಯಸಂಹಿತೆಯಲ್ಲಿಯೂ ಸ್ತುತವಾಗಿರುವಂತೆ ಉಪನಿಷತ್ತುಗಳಲ್ಲಿ **ಸುತೇಜಃ ಸುತತೇಜಃ** ಇತ್ಯಾದಿಯಾಗಿ ವರ್ಣಿತವಾಗಿರುವುದು ಗಮನಾರ್ಹವಾದ ವಿಷಯ. **ಏಷ ವೈ ಸುತೇಜಾ ಆತ್ಮಾ ತಸ್ಮಾತ್ತವ ಸುತಂ, ಪ್ರಸುತಮಾಸುತಂ ಕುಲೇ ಜನ್ಮ** (ಛಾ. ೫-೧೨-೧) ಎಂಬಲ್ಲಿ ಆದಿತ್ಯನ ಸುತೇಜಸ್ಸಿಗೂ ಇಂತಹ ಸುತೇಜಸನ್ನು ಆರಾಧಿಸುವ ವಂಶದಲ್ಲಿ ಸರ್ವದಾ ಸೋಮವು ಸುತವಾಗಿರುವುದಕ್ಕೂ ಕಾರ್ಯಕಾರಣಸಂಬಂಧವನ್ನು ತಿಳಿಸಿದೆ. ಈ ಅಂಶವನ್ನು ಗಾಯತ್ರಿಗೂ ಸೋಮಕ್ಕೂ ಇರತಕ್ಕ ಸಂಬಂಧವನ್ನು ವಿವರಿಸುವಾಗ ಪರಿಶೀಲಿಸಲಾಗುತ್ತದೆ. ಪ್ರಕೃತದಲ್ಲಿ, **ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿಃ** (೧-೧೧೩-೧) ಇತ್ಯಾದಿಯಾಗಿ ಸ್ತುತವಾಗಿರುವ ಜ್ಯೋತಿಯು ಪ್ರಕೃತವಾದ ಮಂತ್ರದಲ್ಲಿ **ಭರ್ಗ**ಶಬ್ದದಿಂದ ವ್ಯವಹೃತವಾಗಿದೆ. ಈ ಭರ್ಗವೇ ಅಜ್ಞಾನನಾಶಕವಾದ ಪರಬ್ರಹ್ಮದ ಜ್ಯೋತಿಯು.

## (೮) ಪರಮಪುರುಷನ ಪರಂಜ್ಯೋತಿಯೇ ಸವಿತೃವಿನ ಭರ್ಗ.

### (ಆಕ್ಷೇಪ ಮತ್ತು ಸಮಾಧಾನ)

ಈ ವಿಧವಾಗಿ ಸವಿತೃವಿನ ಭರ್ಗವೇ ಪರಮಪುರುಷನ ಪರಂಜ್ಯೋತಿಯು ಎಂದು ಸಮರ್ಥಿಸುವ ಸನ್ನಿವೇಶದಲ್ಲಿ ಇನ್ನೊಂದು ಆಕ್ಷೇಪವನ್ನು ನಿರೀಕ್ಷಿಸಬಹುದು. ಸವಿತೃವನ್ನು ಅಪರದೇವತೆಗಳ ಗುಂಪಿಗೆ ಸೇರಿಸುವ ಪ್ರಯತ್ನದಂತೆ ಈ ಮಹಾತೇಜಸ್ಸನ್ನೂ ಸಹ ಕೇವಲ ಭೌತಿಕಪ್ರಕಾಶವೆಂದೂ ಪರಿಗಣಿಸುವ ಮತವು ಈ ಆಕ್ಷೇಪರೂಪದಲ್ಲಿ ತನ್ನ ಅಭಿಪ್ರಾಯವನ್ನು ತಿಳಿಸಬಹುದು. ಉದಾಹರಣೆಗೆ, ಋಕ್ಸಂಹಿತೆಯಲ್ಲಿ **ಸೂರ್ಯಮಗನ್ಮ ಜ್ಯೋತಿರುತ್ತಮಂ** ಎಂದು ವರ್ಣಿತವಾಗಿರುವ ಪರಂಜ್ಯೋತಿಯನ್ನು ಉಪನಿಷದಾದಿಗಳಲ್ಲಿ **ಅಥ ಯದತಃ ಪರೋ ದಿವೋ ಜ್ಯೋತಿಃ** (ಛಾ. ಉ. ೩-೧೩-೭) ಎಂದು ಸ್ತುತವಾಗಿದೆ ಇದು ಕೇವಲ ಸೂರ್ಯನ ಭೌತಿಕಪ್ರಕಾಶವೇ? ಅಥವಾ ಆದಿತ್ಯಾಂತರ್ಗತ

CC-0. Jangamwadi Math Collection. Digitized by eGangotri

ನಾದ ದಿವ್ಯಪುರುಷನ ದಿವ್ಯಪ್ರಕಾಶವೇ ಎಂಬ ವಿಚಿಕಿತ್ಸೆಯಿರುವಾಗ, **ಆದಿತ್ಯಾದಿಕಮೇವ ಜ್ಯೋತಿಶ್ಶಬ್ದೇನ ಪರಿಗೃಹ್ಯತ ಇತಿ** ಇದನ್ನು ನಾವು ಕೇವಲ ಭೌತಿಕಚಕ್ಷುಸ್ಸಿಗೆ ಗೋಚರಿಸಕ್ಕ ಸೂರ್ಯಪ್ರಕಾಶವೆಂದು ಮಾತ್ರ ಕರೆಯುವೆವು ಎಂದು ಪೂರ್ವಪಕ್ಷಿಯು ತಿಳಿಸುತ್ತಾನೆ. (ಬ್ರ. ಸೂ. ಶಂಕರಭಾಷ್ಯ, ೧-೧-೨೪).

> **ಕಿಂ ತಾವತ್ಪ್ರಾಪ್ತಂ ? ಆದಿತ್ಯಾದಿಕಮೇವ ಜ್ಯೋತಿಶ್ಶಬ್ದೇನ ಪರಿಗೃಹ್ಯತ ಇತಿ । ಕುತಃ ಪ್ರಸಿದ್ಧೇಃ । ತಮೋ ಜ್ಯೋತಿರಿತಿ ಹೀಮೌ ಶಬ್ದೌ ಪರಸ್ಪರಪ್ರತಿದ್ವಂದ್ವಿವಿಷಯೌ ಪ್ರಸಿದ್ಧೌ.... ನಹಿ ಚರಾಚರಬೀಜಸ್ಯ ಬ್ರಹ್ಮಣಃ ಸರ್ವಾತ್ಮಕಸ್ಯ ದ್ಯೌರ್ಮರ್ಯಾದಾ ಯುಕ್ತಾ ॥**

ತಮಸ್ಸು, **ಜ್ಯೋತಿಃ** ಎಂಬ ಈ ಪದಗಳು ಚಾಕ್ಷುಷಪ್ರತ್ಯಕ್ಷಕ್ಕೆ ಗೋಚರವಾಗತಕ್ಕವು. ಮತ್ತು ಜ್ಯೋತಿಸ್ಸು ಅಂತರಿಕ್ಷಸಂಬಂಧಿಯಾದುದರಿಂದ ಅದು ಅನಂತವೂ ಅಖಂಡವೂ ಆದ ಪರಬ್ರಹ್ಮಸ್ವರೂಪಿಯಾಗುವುದಿಲ್ಲ. ಅಂತರಿಕ್ಷವು ಖಂಡಾತ್ಮಕವಾದುದು. ವಿಶ್ವವ್ಯಾಪಿಯಲ್ಲ. ಆದುದರಿಂದ ಅಂತಹ ಅಂತರಿಕ್ಷಪರಿಚ್ಛಿನ್ನವಾದ ಜ್ಯೋತಿಯೂ ಖಂಡಾತ್ಮಕವಾಗಿ ಪರಬ್ರಹ್ಮನಂತೆ ವಿಶ್ವವ್ಯಾಪಿಯಾಗುವುದಿಲ್ಲ. ಆದುದರಿಂದ ಈ ಜ್ಯೋತಿಸ್ಸಿಗೂ ಬ್ರಹ್ಮನಿಗೂ ವ್ಯತ್ಯಾಸವಿದೆಯೆಂದು ಪೂರ್ವಪಕ್ಷ. ಇದಕ್ಕೆ ಉತ್ತರರೂಪವಾದ ಸಿದ್ಧಾಂತವೇನೆಂದರೆ,

> **"ನೈಷ ದೋಷಃ । ಸರ್ವತ್ರಾಪಿ ಗಮ್ಯಮಾನಸ್ಯ ಜ್ಯೋತಿಷಃ ಪರೋ ದಿವಃ ಇತ್ಯುಪಾಸನಾರ್ಥಃ ಪ್ರದೇಶವಿಶೇಷಪರಿಗ್ರಹೋ ನ ವಿರುಧ್ಯತೇ ॥ ನ ಚ ನಿಷ್ಪ್ರದೇಶಸ್ಯಾಪಿ ಬ್ರಹ್ಮಣಃ ಪ್ರದೇಶ-ವಿಶೇಷಕಲ್ಪನಾ ಭಾಗಿನೀ................"**

ಕಾರ್ಯರೂಪದ ತತ್ತ್ವವನ್ನು ವಿವರಿಸುವಾಗ ಕಾರಣರೂಪದ ತತ್ತ್ವಕ್ಕೆ ತಾದಾತ್ಮ್ಯವನ್ನು ಹೇಳಿ ಸರ್ವವ್ಯಾಪಿಯಾದ ಈಶ್ವರನಿಗೆ ಪ್ರದೇಶಸಂಕೋಚವನ್ನು ಹೇಳುವುದು ಸರಿಯಲ್ಲ. **ತದ್ದೇವಾ ಜ್ಯೋತಿಷಾಂ ಜ್ಯೋತಿರಾಯು-ರ್ಹೋಪಾಸತೇಽಮೃತಂ** । (ಬೃ. ಉ ೪-೪-೧೬) ಇತ್ಯಾದಿ ವಾಕ್ಯಗಳಲ್ಲಿ ನಿರ್ದೇಶಿಸಿರುವಂತೆ ಅದು ಪರಮಪುರುಷನ ಪರಂಜ್ಯೋತಿಯನ್ನೇ ನಿರ್ದೇಶಿಸುತ್ತದೆಂದು ಆ ಸಂದರ್ಭಾನುಸಾರವಾಗಿ ಸಮರ್ಥಿಸಿದೆ. ಈ ತಾತ್ಪರ್ಯವೇ ಪ್ರಕೃತದಲ್ಲಿ ಸವಿತೃವಿನ ಭರ್ಗಕ್ಕೂ ಅನ್ವಯಿಸುತ್ತದೆಂದು ಭಾಷ್ಯಕಾರರ **ತತ್ಸವಿತುಃ** ಎಂಬ ಮಂತ್ರದ ವಿವರಣೆಯಿಂದ ತಿಳಿಯುತ್ತದೆ.

:o:

## (೯) ಪರಂಜ್ಯೋತೀರೂಪವಾದ ಭರ್ಗವನ್ನರಿಯುಲು ಗಾಯತ್ರೀಪಠನ ರೂಪವಾದ ಧ್ಯಾನವೇ ಮುಖ್ಯ ಸಾಧನ.

ಲೌಕಿಕಪ್ರತ್ಯಕ್ಷಕ್ಕೆ ನಿಲುಕದ ಸವಿತೃವಿನ ಪರಂಜ್ಯೋತಿಯನ್ನು ಧ್ಯಾನರೂಪದಿಂದ ಸಾಕ್ಷಾತ್ಕರಿಸಲು ನಮ್ಮ ಬುದ್ಧಿಯನ್ನು ಪ್ರೇರಿಸು ಎಂದು ಪ್ರಾರ್ಥಿಸಿದೆ. ಎಂದರೆ, ಪರಬ್ರಹ್ಮದ ಪರಂಜ್ಯೋತಿಯ ಸ್ವರೂಪವನ್ನರಿಯ ಬೇಕಾದರೆ ಗಾಯತ್ರೀಮಹಾಮಂತ್ರಪಠನರೂಪವಾದ ಧ್ಯಾನದಿಂದಲೇ ಸಾಧ್ಯವೆಂದಾಯಿತು. ಇದೇ ವಿಷಯವನ್ನೇ ಶಂಕರಾಚಾರ್ಯರು ಛಾಂದೋಗ್ಯೋಪನಿಷತ್ತಿನಲ್ಲಿ ಗಾಯತ್ರೀಪ್ರಕರಣದ ಉಪೋದ್ಘಾತದಲ್ಲಿ ಈ ರೀತಿ ತಿಳಿಸಿದ್ದಾರೆ

> **ಗಾಯತ್ರೀದ್ವಾರೇಣ ಚೋಚ್ಯತೇ ಬ್ರಹ್ಮ ಸರ್ವವಿಶೇಷರಹಿತಸ್ಯ "ನೇತಿ ನೇತಿ" ಇತ್ಯಾದಿ ವಿಶೇಷಪ್ರತಿಷೇಧಗಮ್ಯಸ್ಯ ದುರ್ಬೋಧತ್ವಾತ್ । ಸತ್ಸ್ವನೇಕೇಷು ಛಂದಸ್ಸು ಗಾಯತ್ರ್ಯಾ ಏವ ಬ್ರಹ್ಮಜ್ಞಾನದ್ವಾರತಯೋಪಾದಾನಂ ಪ್ರಾಧಾನ್ಯಾತ್ । ಸೋಮಾಹರಣಾದಿತರಚ್ಛಂದೋಕ್ಷರಾ-**

CC-0. Jangamwadi Math Collection. Digitized by eGangotri

ಹರಣೇನೇತರಚ್ಛಂದೋವ್ಯಾಪ್ತ್ಯಾ ಚ ಸರ್ವಸವನವ್ಯಾಪಕತ್ವಾಚ್ಚ ಯಜ್ಞೇ ಪ್ರಾಧಾನ್ಯಂ ಗಾಯತ್ರ್ಯಾಃ । ಗಾಯತ್ರೀಸಾರತ್ವಾಚ್ಚ ಬ್ರಾಹ್ಮಣಸ್ಯ ಮಾತರಮಿವ । ಹಿತ್ವಾ ಗುರುತರಾಂ ಗಾಯತ್ರೀಂ ತತೋಽನ್ಯದ್ಗುರುತರಂ ನ ಪ್ರತಿಪದ್ಯತೇ ಯಥೋಕ್ತಂ ಬ್ರಹ್ಮಾಪೀತಿ ತಸ್ಯಾ- ಮತ್ಯಂತಗೌರವಸ್ಯ ಪ್ರಸಿದ್ಧತ್ವಾತ್ । ಅತೋ ಗಾಯತ್ರೀಮುಖೇನೈವ ಬ್ರಹ್ಮೋಚ್ಯತೇ ॥

ಚಾಕ್ಷುಷಾದಿಪ್ರತ್ಯಕ್ಷಕ್ಕೆ ಪರಬ್ರಹ್ಮನು ಅತೀತನು. ಪರಬ್ರಹ್ಮನು ಕಣ್ಣಿಗೆ ಕಾಣಿಸತಕ್ಕ ವಸ್ತುವಲ್ಲ, ಮಾನಸಿಕ ದೃಷ್ಟಿಗೂ ಗೋಚರನಾಗತಕ್ಕವನಲ್ಲ, ವ್ಯಾವಹಾರಿಕ ಪ್ರಪಂಚದಲ್ಲಿರುವ ವಸ್ತುವಾವುದೂ ಅಲ್ಲ, ಇತ್ಯಾದಿಯಾಗಿ ನಿಷೇಧರೂಪದಲ್ಲಿ ಮಾತ್ರ ಪರಮಾತ್ಮನ ವರ್ಣನೆಯು ಸಾಧ್ಯ. ಇತರ ಅನೇಕ ಛಂದಸ್ಸುಗಳಿದ್ದರೂ ಸಹ ಪರಮಾತ್ಮನ ಸಾಕ್ಷಾತ್ಕಾರವು ಗಾಯತ್ರಿಯ ಸಹಾಯದಿಂದ ಮಾತ್ರ ಸಾಧ್ಯ. ಗಾಯತ್ರಿಗೆ ಈ ಸಾಧನಶಕ್ತಿಯಿರುವ ಅಂಶವನ್ನು ಯಜ್ಞಕ್ರಿಯೆಯಲ್ಲಿ ಗಾಯತ್ರಿಗಿರುವ ಪ್ರಮುಖವಾದ ಪಾತ್ರವೇ ತಿಳಿಸುತ್ತದೆ. ಯಾಗಾದಿಕರ್ಮಗಳು ದಿವ್ಯಜ್ಞಾನಕ್ಕೆ ಸಾಧಕವಾಗಿರುವುದರಿಂದಲೂ, ಅಂತಹ ಯಜ್ಞಾದಿಗಳ ನಿರ್ವಹಣಕ್ಕೆ ಗಾಯತ್ರಿಯ ಅತ್ಯವಶ್ಯವಾದ ಸಹಾಯವಿರು ವುದರಿಂದಲೂ ಸಹ ಬ್ರಹ್ಮಜ್ಞಾನಕ್ಕೂ ಗಾಯತ್ರಿಯೇ ಅತಿಮುಖ್ಯವಾದ ಸಾಧನವು. ಈ ಪ್ರಾಮುಖ್ಯವು ಮೂರು ಅಂಶಗಳಿಂದ ತಿಳಿಯುತ್ತದೆ.

(೧) ಮೊದಲನೆಯದಾಗಿ, ಗಾಯತ್ರಿಯು ಯಜ್ಞಪ್ರಧಾನವಾದ ಸೋಮವನ್ನು ದೇವತೆಗಳಿಗೆ ತಂದೊಪ್ಪಿಸಿ ದುದರಿಂದಲೂ,

(೨) ಎರಡನೆಯದಾಗಿ, ಇತರ ಛಂದಸ್ಸುಗಳ ಅಕ್ಷರಗಳನ್ನೆಲ್ಲಾ ತಾನೇ ಐಕ್ಯಮಾಡಿಕೊಂಡು ಎಲ್ಲವನ್ನೂ ತಾನೇ ವ್ಯಾಪಿಸಿರುವುದರಿಂದಲೂ,

(೩) ಮೂರನೆಯದಾಗಿ ಸವನತ್ರಯಕಾಲದಲ್ಲೂ ತಾನು ವ್ಯಾಪಿಸಿರುವುದರಿಂದಲೂ ಸಹ ಯಜ್ಞಕ್ರಿಯೆಯಲ್ಲಿ ಗಾಯತ್ರಿಗೆ ಪ್ರಾಧಾನ್ಯವಿದೆ. ಬ್ರಾಹ್ಮಣಾದಿಗಳಿಗೆ ಮಾತೃಸ್ವರೂಪವಾಗಿರುವುದರಿಂದಲೂ, ಬ್ರಹ್ಮ ಸ್ವರೂಪಜ್ಞಾನವೂ ಗಾಯತ್ರಿಯನ್ನೇ ಆಶ್ರಯಿಸಿರುವುದರಿಂದಲೂ ಸಹ ಬ್ರಹ್ಮಜ್ಯೋತಿಯ ಸ್ವರೂಪ ಸಾಕ್ಷಾತ್ಕಾರಕ್ಕೆ ಗಾಯತ್ರಿಯೇ ಪ್ರಧಾನಸಾಧನವಾಗಿರುತ್ತದೆಯೆಂದು ಸ್ಪಷ್ಟಪಡಿಸಿದ್ದಾರೆ. ಹೀಗೆ ಶಂಕರಾಚಾರ್ಯರು ಹೇಳಿರುವ ಮೂರು ಅಂಶಗಳಿಗೂ ಶ್ರುತಿಯ ಆಧಾರವೇನು, ಗಾಯತ್ರಿಗೆ ಈ ಪ್ರಾಧಾನ್ಯವು ಶ್ರುತಿವಾಕ್ಯಗಳಿಂದ ಯಾವ ರೀತಿ ವರ್ಣಿತವಾಗಿದೆಯೆಂಬುದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕಾಗುತ್ತದೆ.



## (೧೦) ಗಾಯತ್ರಿಯ ಪ್ರಾಧಾನ್ಯವನ್ನು ತೋರಿಸುವ ಮೂರು ಅಂಶಗಳು.

### 1. ಸೋಮಾಹರಣದ ಪ್ರಸಂಗ. ಶ್ಯೇನಪಕ್ಷಿಯ ಪ್ರಯತ್ನ.

ಮೊದಲನೆಯದಾಗಿ ; **ಸೋಮಾಹರಣಾತ್** ; ಯಜ್ಞಪ್ರಧಾನವಾದ **ಸೋಮವನ್ನು** ತಂದೊದಗಿಸಿದುದ ರಿಂದಲೂ ಎಂದು ಗಾಯತ್ರಿಯ ಶಕ್ತಿವೈಶಿಷ್ಟ್ಯವು ಸೂಚಿತವಾಗಿದೆ. ಈ ಸೋಮಾಹರಣದ ಪ್ರಸಂಗವು ಸಂಹಿತೆ ಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅತಿಮುಖ್ಯವಾದೆಡೆಗಳಲ್ಲೆಲ್ಲಾ ವರ್ಣಿತವಾಗಿದೆ. ಎಲ್ಲಕ್ಕಿಂತಲೂ ಪ್ರಥಮದಲ್ಲಿ

CC-0. Jangamwadi Math Collection. Digitized by eGangotri

ಋಕ್ಸಂಹಿತೆಯಲ್ಲಿಯೇ ಈ ಪ್ರಸಂಗವು ಕಥಾರೂಪದಲ್ಲಿ ಉಕ್ತವಾಗಿದೆ. ಋ. ಸಂ. ೪-೨೬ ಮತ್ತು ೪-೨೭ನೇ ಸೂಕ್ತ ಗಳಲ್ಲಿ ಇಂದ್ರನು ತನ್ನ ಪರಾಕ್ರಮನನ್ನು ವರ್ಣಿಸಿಕೊಳ್ಳುವ ಕಾಲದಲ್ಲಿ ಸೋಮಪಾನದಿಂದ ಆ ಪರಾಕ್ರಮವು ವೃದ್ಧಿ ಯಾದುದನ್ನೂ ಆ ಸೋಮವನ್ನು ಗಾಯತ್ರಿಯು ತಂದೊದಗಿಸಿದ ಬಗೆಯನ್ನೂ ವಿವರಿಸುತ್ತಾನೆ.

[ಈ ವರ್ಣನವು ವಾಮದೇವಋಷಿಯ ವಾಕ್ಯವೇ ಅಥವಾ ಇಂದ್ರವಾಕ್ಯವೇ ಎಂಬುದೂ ಮತ್ತು ಈ ಸೂಕ್ತಗಳ ದೇವತೆಯು ಇಂದ್ರನೇ ಅಥವಾ ಪರಮಾತ್ಮನೇ ಎಂಬುದೂ ಸಹ ಗಮನಿಸಬೇಕದ ವಿಷಯ. ಪ್ರಕೃತದಲ್ಲಿ ಆ ಚರ್ಚೆಯು ಅನಾವಶ್ಯಕ.

ಪ್ರ ಸು ಷ ವಿಭ್ಯೋ ಮರುತೋ ವಿರಸ್ತು ಪ್ರ ಶ್ಯೇನಃ ಶ್ಯೇನೇಭ್ಯ ಆಶುಪತ್ವಾ |
ಅಚಕ್ರಯಾ ಯತ್ಸ್ವಧಯಾ ಸುಪರ್ಣೋ ಹವ್ಯಂ ಭರನ್ಮನವೇ ದೇವಜುಷ್ಟಂ ||
(ಋ. ಸಂ. ೪-೨೬-೪)

ಎಲೈ ಮರುತ್ತುಗಳೇ, ದೇವತೆಗಳಿಂದ ಅಪೇಕ್ಷಿತವಾದ ಈ ಸೋಮವನ್ನು ಮನುವಿಗೆ ತಂದೊದಗಿಸಿದ ಈ ಸುಪರ್ಣವು ಚಕ್ರರಹಿತವಾದ ರಥದಲ್ಲಿ ಶೀಘ್ರವಾಗಿ ತಂದೊದಗಿಸಿದ ಇತರ ಶ್ಯೇನಪಕ್ಷಿಗಳಿಗಿಂತಲೂ ವೀರ್ಯದಲ್ಲಿ ಅಧಿಕವಾಗಿರಲಿ ಮತ್ತು ಅಧಿಕವಾದ ಗೌರವವನ್ನು ಪಡೆಯಲಿ.

ಭರದ್ಯದಿ ವಿರತೋ ವೇವಿಜಾನಃ ಪಥೋರುಣಾ ಮನೋಜವಾ ಅಸರ್ಜಿ |
ತೂಯಂ ಯಯೌ ಮಧುನಾ ಸೋಮ್ಯೇನೋತ ಶ್ರವೋ ವಿವಿದೇ ಶ್ಯೇನೋ ಅತ್ರ ||
(ಋ. ಸಂ. ೪-೨೬-೫)

ಈ ಶ್ಯೇನಪಕ್ಷಿಯು ಸೋಮಪಾಲಕರನ್ನು ಗದರಿಸಿ ಸೋಮಾಪಹರಣವನ್ನು ಮಾಡಿ ಅಂತರಿಕ್ಷದಲ್ಲಿ ಮನೋವೇಗದಿಂದ ಜಾರಿ ಬಂದು ಉಪಕಾರಮಾಡಿದುದರಿಂದ ಈ ಶ್ಯೇನಪಕ್ಷಿಯ ಸಮೂಹಕ್ಕೇ ಪೃಥ್ವಿಯಲ್ಲಿ ಗೌರವವು ಲಭಿಸಿತು.

ಋಜೀಷೀ ಶ್ಯೇನೋ ದದಮಾನೋ ಅಂಶುಂ ಪರಾವತಃ ಶಕುನೋ ಮಂದ್ರಂ ಮದಂ |
ಸೋಮಂ ಭರದ್ದಾದೃಹಾಣೋ ದೇವಾವಾನ್ದಿವೋ ಅಮುಷ್ಮಾದುತ್ತರಾದಾದಾಯ ||
(ಋ. ಸಂ. ೪-೨೬-೬)

ಅಂತರಿಕ್ಷದಲ್ಲಿ ಮನೋವೇಗದಲ್ಲಿ ನೇರವಾಗಿ ಹಾರಿಬರತಕ್ಕ ಈ ಪಕ್ಷಿಯು ದೇವತೆಗಳಿಂದ ಅನುಸರಿಸಲ್ಪಟ್ಟು ಸೋಮ ವನ್ನು ತಂದು ಅದರೊಂದಿಗೆ ಸಂಕಲ್ಪಶಕ್ತಿಯನ್ನೂ ಶ್ರದ್ಧೆಯನ್ನು ವೃದ್ಧಿಪಡಿಸಿತು. ಸೋಮಾಹರಣದಿಂದ ಲೋಕಕ್ಕೆ ಉಪಕಾರವನ್ನು ಮಾಡಿತು.

ಆದಾಯ ಶ್ಯೇನೋ ಅಭರತ್ಸೋಮಂ ಸಹಸ್ರಂ ಸವಾँ ಅಯುತಂ ಚ ಸಾಕಂ |
ಅತ್ರಾ ಪುರಂಧಿರಜಹಾದರಾತೀರ್ಮದೇ ಸೋಮಸ್ಯ ಮೂರಾ ಅಮೂರಃ ||
(ಋ. ಸಂ. ೪-೨೬-೭)

ದ್ಯುಲೋಕದಿಂದ ಈ ಶ್ಯೇನಪಕ್ಷಿಯು ಸೋಮವನ್ನು ತಂದು ಸಹಸ್ರಾರು ಯಾಗಗಳ ನಿರ್ವಹಣಕ್ಕೆ ಸಹಾಯಮಾಡಿತು. ಈ ಸೋಮಪಾನದಿಂದ ತೃಪ್ತನಾದ ಇಂದ್ರನ ಪರಾಕ್ರಮವು ವೃದ್ಧಿಯಾಗಿ ಅವನು ತನ್ನ ಸಕಲಶತ್ರುಗಳನ್ನೂ ಸದೆಬಡಿದನು.

CC-0. Jangamwadi Math Collection. Digitized by eGangotri

ಅವ ಯಚ್ಛ್ಯೇನೋ ಅಸ್ವನೀದಧ ದ್ಯೋರ್ವಿ ಯದ್ಯದಿ ವಾತ ಊಹುಃ ಪುರಂಧಿಂ ।
ಸೃಜದ್ಯದಸ್ಮಾ ಅವ ಹ ಕ್ಷಿಪಜ್ಜ್ಯಾಂ ಕೃಶಾನುರಸ್ತಾ ಮನಸಾ ಭುರಣ್ಯನ್ ॥

(ಋ. ಸಂ. ೪-೨೭-೩)

ಸೋಮಾಹರಣವನ್ನು ಮಾಡಿ ಶ್ಯೇನವು ಸಂತೋಷವನ್ನು ವ್ಯಕ್ತಪಡಿಸುತ್ತಾ ಅಂತರಿಕ್ಷದಿಂದ ಇಳಿದು ಬರುತ್ತಿದ್ದಾಗ ಸೋಮಪಾಲಕರಲ್ಲೊಬ್ಬನೂ ಧನ್ವಿಯೂ ಆದ ಕೃಶಾನುವೂ ಸಹ ಮನೋವೇಗದಿಂದ ಕೆಳಕ್ಕೆ ಇಳಿದು ಇದನ್ನು ಅಟ್ಟಿಸಿಕೊಂಡು ಬಂದು ಧನುಸ್ಸಿನಿಂದ ಇದರ ಕಡೆಗೆ ಬಾಣವನ್ನು ಬಿಟ್ಟನು.

ಋಜಿಪ್ಯ ಈಮಿಂದ್ರಾವತೋ ನ ಭುಜ್ಯುಂ ಶ್ಯೇನೋ ಜಭಾರ ಬೃಹತೋ ಅಧಿ ಷ್ಣೋಃ ।
ಅಂತಃ ಪತತ್ಪತತ್ರ್ಯಸ್ಯ ಪರ್ಣಮಧ ಯಾಮನಿ ಪ್ರಸಿತಸ್ಯ ತದ್ವೇಃ ॥

(ಋ ಸಂ. ೪-೨೭-೪)

ಈ ಶ್ಯೇನವು ಇಂದ್ರನ ಪ್ರಭುತ್ವಕ್ಕೊಳಗಾದ ಅಂತರಿಕ್ಷದಿಂದ ಇಳಿದು ಬರುತ್ತಿದ್ದಾಗ ಕೃಶಾನುವಿನ ಬಾಣದಿಂದ ಹೊಡೆಯಲ್ಪಟ್ಟು ತನ್ನ ಹೋರಾಟದ ಕಾಲದಲ್ಲಿ ತನ್ನ ದೇಹಸ್ಥವಾದ ಒಂದು ರೆಕ್ಕೆಯನ್ನು ಕಳೆದುಕೊಂಡು ಗಾಯಹೊಂದಿತು.

ಈ ರೀತಿ ಕಥಾಭಾಗವಿರುವಾಗ ಇಲ್ಲಿ ತತ್ತ್ವವೇನೆಂದರಿಯಲು ಶ್ರಮಸಾಧ್ಯವೇ ಆಗುತ್ತದೆ. ಆದರೂ ಸಹ ಈ ಸೂಕ್ತಕರ್ತೃವಾದ ವಾಮದೇವಋಷಿಯ ಪರಿಚಯವನ್ನು ಮಾಡಿಕೊಡುತ್ತಾ ಐತರೇಯಾರಣ್ಯಕದಲ್ಲಿ ಇದೇ ಸಂದರ್ಭವನ್ನು ತಾತ್ತ್ವಿಕದೃಷ್ಟಿಯಿಂದ ವಿವರಿಸಿದೆ. ಅಲ್ಲಿ ಋಕ್ಸಂಹಿತೆಯ

ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ ।
ಶತಂ ಮಾ ಪುರ ಆಯಸೀರರಕ್ಷನ್ನಧ ಶ್ಯೇನೋ ಜವಸಾ ನಿರದೀಯಂ ॥

(ಋ. ಸಂ. ೪-೨೭-೧)

ಎಂಬ ಋಕ್ಕನ್ನುದಾಹರಿಸಿ **ಗರ್ಭ ಏವ ಏತಚ್ಛಯಾನೋ ವಾಮದೇವ ಏವಮುವಾಚ** (ಐ. ಆ. ೨-೫). ವಾಮದೇವನು ಗರ್ಭಸ್ಥನಾಗಿರುವಾಗಲೇ ಈ ತತ್ತ್ವಾರ್ಥವನ್ನು ತಿಳಿದುಹೇಳಿದನು ಎಂದಿದೆ. ಮೇಲಿನ ಮಂತ್ರದ ಅರ್ಥವೇನೆಂದರೆ, ವಾಮದೇವನಿಗೆ ಗರ್ಭದಲ್ಲಿರುವಾಗಲೇ ಸಕಲ ದೇವತೆಗಳ ಉತ್ಪತ್ತಿಸ್ವರೂಪಗಳೂ ಬೋಧವಾದವೆಂದೂ, ನೂರಾರು ಅಯಶ್ಶಲಾಕೆಗಳಿಂದ ನಿರ್ಮಿತವಾದ ಬಂಧವಿದ್ದರೂ ಸಹ ಶ್ಯೇನಪಕ್ಷಿಯಂತೆ ಅದನ್ನು ತಪ್ಪಿಸಿಕೊಂಡು ಪೃಥಿವ್ಯಭಿಮುಖವಾಗಿ ಹಾರಿಬಂದನೆಂದೂ ತಿಳಿಯುತ್ತದೆ. ಈ ಭಾಗದ ತಾತ್ಪರ್ಯವು ಸುಲಭವಲ್ಲ. ಶಂಕರಾಚಾರ್ಯರೂ, ಆನಂದತೀರ್ಥರೂ, ಸಾಯಣರೂ ಸಹ ಈ ಸಂದರ್ಭವನ್ನು ವಿವರಿಸುವಾಗ ವಾಮದೇವನು ನೂರಾರು ಬಂಧರೂಪವಾದ ಶರೀರಗಳನ್ನು ಪ್ರವೇಶಿಸಿ ಕೊನೆಗೆ ಜ್ಞಾನಿಯಾಗಿ ಅವುಗಳಿಂದ ಮುಕ್ತನಾದನು ಮತ್ತು ಮೋಕ್ಷವನ್ನು ಹೊಂದಿದನು ಎಂದು ತಾತ್ಪರ್ಯವೆಂಬುದಾಗಿ ಅಭಿಪ್ರಾಯಪಡುತ್ತಾರೆ. ಆದರೆ ಐತರೇಯ ಆರಣ್ಯಕದ ಸಂದರ್ಭವನ್ನು ಪರಿಶೀಲಿಸಿದರೆ **ಸ ಏವಂ ವಿದ್ವಾನ್ ಅಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಮೃತಃ ಸಮಭವತ್ಸಮಭವತ್** । (ಐ. ಆ. ೨-೫). ಗರ್ಭಸ್ಥನಾಗಿರುವಾಗಲೇ ಈ ತತ್ತ್ವವನ್ನು ತಿಳಿದ ವಾಮದೇವನು ಪಾರ್ಥಿವಶರೀರವನ್ನು ತ್ಯಾಗಮಾಡಿ ಮುಕ್ತಿಯನ್ನು ಪಡೆದನು ಎಂದಿದೆ. ಆದುದರಿಂದ ಋ. ಸಂ. ೪-೨೭-೧ ನೇ ಮಂತ್ರದ ವಾಕ್ಯವು ವಾಮದೇವನಿಗೇ ಅನ್ವಯಿಸುವುದೆಂದಭಿಪ್ರಾಯವಾಗುತ್ತದೆ. ಅಲ್ಲದೇ, ೧-೩೨-೧೪ ಮತ್ತು ೧೦-೯೯-೮ ಇತ್ಯಾದಿ ಮಂತ್ರಗಳಲ್ಲಿ ಇಂದ್ರನು ಶ್ಯೇನಪಕ್ಷಿಗೆ ಸದೃಶನಾಗಿರುವನೆಂದು ವರ್ಣಿತವಾಗಿರುವನೆಂಬ ವಾಕ್ಯದ ಆಧಾರದ ಮೇಲೆ ಕೆಲವು ಪಂಡಿತರು **ಗರ್ಭೇ ನು** .... ....

CC-0. Jangamwadi Math Collection. Digitized by eGangotri

ಎಂಬ ಮಂತ್ರವು ಇಂದ್ರನನ್ನೇ ನಿರ್ದೇಶಿಸುವುದೆಂದಭಿಪ್ರಾಯಪಡುತ್ತಾರೆ. ಆದರೆ ಅದು ತಪ್ಪಾಗುತ್ತದೆ. ಇನ್ನು ಕೆಲವರು ಇದು ಸೋಮನ ವಾಕ್ಯವೆಂದೂ ತಿಳಿಸಿದ್ದಾರೆ. (Ludwig).

---

## 2. ಪಕ್ಷ್ಯಾಕಾರವಾದ ಗಾಯತ್ರಿಯೇ ಶ್ಯೇನವು.

ಸಾಯಣರು ಮಾತ್ರ,

ಶ್ಯೇನಭಾವಂ ಸಮಾಸ್ಥಾಯ ಗರ್ಭಾದ್ಯೋಗೇನ ನಿಸ್ಸೃತಃ ।
ಋಷಿರ್ಗರ್ಭೇ ಶಯಾನಃಸನ್ ಬ್ರೂತೇ ಗರ್ಭೇ ನು ಸನ್ನಿತಿ ॥

(೪-೨೭-೧ ಭಾಷ್ಯಕ್ಕೆ ಪೀಠಿಕೆ)

ಎಂಬುದಾಗಿ ವಾಮದೇವನೇ ತನ್ನ ಯೋಗಮಹಿಮೆಯಿಂದ ಗರ್ಭದಿಂದ ಮುಕ್ತನಾಗಿ ಈ ವಾಕ್ಯವನ್ನು ಪಠಿಸುತ್ತಾನೆ ಎಂದು ಹೇಳಿದ್ದಾರೆ. Ludwig ಮುಂತಾದ ಆಂಗ್ಲವಿಮರ್ಶಕರಾರೂ ಸಹ ಈ ಶ್ಯೇನವು ಗಾಯತ್ರೀರೂಪದಲ್ಲಿ ವರ್ಣಿತವಾಗಿರಲು ಕಾರಣ ಮತ್ತು ಆಧಾರಗಳೇನು ಎಂಬುದನ್ನು ವಿಮರ್ಶಿಸಿಲ್ಲ. ಇದೇ ಸಂದರ್ಭವನ್ನು ವರ್ಣಿಸುವಾಗ ಶ್ಯೇನವು ಸುಪರ್ಣಪದದಿಂದಲೂ ವ್ಯವಹೃತವಾಗಿದೆ. ಗಾಯತ್ರೀಪದದಿಂದಲೂ ವ್ಯವಹೃತವಾಗಿದೆ, ಸಾಯಣರು ಕೆಲವೆಡೆಗಳಲ್ಲಿ ಶ್ಯೇನ ಶಬ್ದವನ್ನು ವಿವರಿಸುವಾಗ ಶ್ಯೇನಃ ಶಂಸನೀಯಗತಿಮಾನ್ಪಕ್ಷೀ ಪಕ್ಷ್ಯಾಕಾರಾ ಗಾಯತ್ರೀ ಎಂದು ವಿವರಿಸಿದ್ದಾರೆ. ಈ ರೀತಿ ಶ್ಯೇನ, ಸುಪರ್ಣ, ಗಾಯತ್ರೀ ಎಂಬ ಬೇರೆ ಬೇರೆ ಪದಗಳನ್ನು ಈ ಸಂದರ್ಭಗಳಲ್ಲಿ ಉಪಯೋಗಿಸಿರುವುದರಿಂದ ಈ ಕಥಾವಿವರಣೆಯನ್ನು ತಿಳಿದ ಹೊರತು ಇಲ್ಲಿ ನಿಷ್ಕೃಷ್ಟವಾದ ಅರ್ಥವನ್ನು ಹೇಳಲಾಗುವುದಿಲ್ಲ ಆದುದರಿಂದ ತೈತ್ತಿರೀಯಸಂಹಿತೆ, ಐತರೇಯ ಬ್ರಾಹ್ಮಣ ಮತ್ತು ಶತಪಥಬ್ರಾಹ್ಮಣಗಳಲ್ಲಿ ಉಕ್ತವಾಗಿರುವ ಈ ಕಥಾಭಾಗವನ್ನು ತಿಳಿದನಂತರ ಗಾಯತ್ರಿಯು ಸೋಮವನ್ನು ತಂದ ವಿಚಾರದಲ್ಲಿ ತತ್ತ್ವಾರ್ಥವೇನೆಂಬುದನ್ನು ಪರಿಶೀಲಿಸಬಹುದು.

---

## 3. ಪ್ರಾಸಂಗಿಕವಾದ ಕದ್ರು ಸುಪರ್ಣಿಯರ ಕಥೆ. ಸುಪರ್ಣಿಯ ಪುತ್ರರೇ ಛಂದಸ್ಸುಗಳು.

ತೈತ್ತಿರೀಯಸಂಹಿತೆಯಲ್ಲಿ ಈ ಕಥಾಭಾಗವು ಈ ರೀತಿ ವರ್ಣಿತವಾಗಿದೆ.

ಕದ್ರೂಶ್ಚ ವೈ ಸುಪರ್ಣೀ ಚಾತ್ಮರೂಪಯೋರಸ್ಪರ್ಧೇತಾಗ್ಂ ಸಾ ಕದ್ರೂಸ್ಸುಪರ್ಣೀಮಜಯ-ತ್ಸಾಬ್ರವೀತ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾತ್ಮಾನಂ ನಿಷ್ಕ್ರೀಣೀ-ಷ್ವೇತೀಯಂ ವೈ ಕದ್ರೂರಸೌ ಸುಪರ್ಣೀ ಛಂದಾಗ್ಂಸಿ ಸೌಪರ್ಣೇಯಾಸ್ಸಾಬ್ರವೀದಸ್ಮೈ ವೈ ಪಿತರೌ ಪುತ್ರಾನ್ ಬಿಭೃತಸ್ತೃತೀಯಸ್ಯಾಮಿತೋ ದಿವಿ ಸೋಮಸ್ತಮಾಹರ ತೇನಾ-ತ್ಮಾನಂ ನಿಷ್ಕ್ರೀಣೀಷ್ವೇತಿ ಮಾ ಕದ್ರೂರವೋಚದಿತಿ ಜಗತ್ಯುದಪತಚ್ಚತುರ್ದಶಾಕ್ಷರಾ ಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ ಅಕ್ಷರೇ ಅಮೀಯೇತಾಗ್ಂ ಸಾ ಪಶುಭಿಶ್ಚ ದೀಕ್ಷಯಾ ಚಾಗಚ್ಛತ್ತಸ್ಮಾಜ್ಜಗತೀ ಛಂದಸಾಂ ಪಶವ್ಯತಮಾ ತಸ್ಮಾತ್ಪಶುಮಂತಂ ದೀಕ್ಷೋ-ಪನಮತಿ ತ್ರಿಷ್ಟುಗುದಪತತ್ತ್ರಯೋದಶಾಕ್ಷರಾ ಸತೀ ಸಾಪ್ರಾಪ್ಯ ನ್ಯವರ್ತತ ತಸ್ಯೈ ದ್ವೇ

CC-0. Jangamwadi Math Collection. Digitized by eGangotri

ಅಕ್ಷರೇ ಅಮೀಯೇತಾಗ್ಂ ಸಾ ದಕ್ಷಿಣಾಭಿಶ್ಚ ತಪಸಾ ಚಾಗಚ್ಛತ್ತಸ್ಮಾತ್ರಿಷ್ಟುಭೋ ಲೋಕೇ ಮಾಧ್ಯಂದಿನೇ ಸವನೇ ದಕ್ಷಿಣಾ ನೀಯಂತೆ ಏತತ್ಖಲು ವಾವ ತಪ ಇತ್ಯಾಹುರ್ಯಸ್ಸ್ವಂ ದದಾತೀತಿ ಗಾಯತ್ರ್ಯುದಪತಚ್ಚತುರಕ್ಷರಾ ಸತ್ಯಜಯಾ ಜ್ಯೋತಿಷಾ ತಮಸ್ಯಾ ಅಜಾಭ್ಯ-ರುಂಧ ತದಜಾಯಾ ಅಜತ್ವಗ್ಂ ಸಾ ಸೋಮಂ ಚಾಹರಚ್ಚತ್ವಾರಿ ಚಾಕ್ಷರಾಣಿ ಸಾಷ್ಟಾಕ್ಷರಾ ಸಮಪದ್ಯತ ಬ್ರಹ್ಮವಾದಿನೋ ವದಂತಿ ಕಸ್ಮಾತ್ಸತ್ಯಾದ್ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯೇತಿ ಯದೇವಾದಸ್ಸೋಮಮಾಹರತ್ತಸ್ಮಾದ್ಯಜ್ಞಮುಖಂ ಪರ್ಯೈತ್ತಸ್ಮಾತ್ತೇಜಸ್ವಿನೀತಮಾ ಪದ್ಭ್ಯಾಂ ದ್ವೇ ಸವನೇ ಸಮಗೃಹ್ಣಾನ್ಮುಖೇನೈಕಂ ಯನ್ಮು-ಖೇನ ಸಮಗೃಹ್ಣಾತ್ತದಧಯತ್ತಸ್ಮಾದ್ದ್ವೇ ಸವನೇ ಶುಕ್ರವತೀ ಪ್ರಾತಸ್ಸವನಂ ಚ ಮಾಧ್ಯಂ-ದಿನಂ ಚ ತಸ್ಮಾತ್ತೃತೀಯಸವನ ಋಜೀಷಮಭಿಷುಣ್ವಂತಿ ಧೀತಮಿವ ಹಿ ಮನ್ಯಂತೇ ।

(ತೈ. ಸಂ. ೬-೧-೬.೧ ರಿಂದ ೩)

ಕದ್ರು ಮತ್ತು ಸುಪರ್ಣೀ ಎಂಬಿಬ್ಬರಿಗೂ ಸಹ ತಮ್ಮ ರೂಪದ ವಿಷಯದಲ್ಲಿ ಯಾರಧಿಕರೆಂಬ ಸ್ಪರ್ಧೆಯುಂಟಾಯಿತು. ಕದ್ರುವೇ ಜಯಿಸಿ ಸುಪರ್ಣಿಯನ್ನು ಸೋಲಿಸಿ ತನ್ನ ಅಧೀನದಲ್ಲಿರಿಸಿಕೊಂಡಳು. ಆಗ ಸೋತ ಸುಪರ್ಣಿಯನ್ನು ಕುರಿತು ಮೂರನೇ ಸ್ವರ್ಗಭಾಗದಲ್ಲಿ ಸೋಮವು ಇದೆ. ಅದನ್ನು ತಂದುಕೊಟ್ಟು ನೀನು ಬಿಡುಗಡೆಯನ್ನು ಹೊಂದ ಬಹುದು ಎಂದು ಭರವಸೆಯನ್ನು ಕೊಟ್ಟಳು. ಕದ್ರುವೇ ಈ ಪೃಥ್ವಿಯು ; ಸುಪರ್ಣಿಯೇ ಅಂತರಿಕ್ಷವು. ಛಂದಸ್ಸುಗಳೇ ಸುಪರ್ಣಿಯ ಸಂತಾನಗಳು. ತಾಯಿಯ ಸೇವೆಗಾಗಿಯೇ ಪೋಷಿಸಲ್ಪಡತಕ್ಕ ಮಕ್ಕಳುಗಳ ಸಹಾಯದಿಂದ ನೀನು ಸೋಮವನ್ನು ತರಿಸಿಕೊಟ್ಟು ನಿನ್ನ ಮುಕ್ತಿಯನ್ನು ಪಡೆಯಬಹುದೆಂದು ಕದ್ರುವು ಸುಪರ್ಣಿಗೆ ಹೇಳಿದಳು. ಆಗ ಅದೇ ರೀತಿ ಸುಪರ್ಣಿಯೂ ಸಹ ತನ್ನ ಮಕ್ಕಳಿಗೆ ಈ ಸಂದರ್ಭವನ್ನು ತಿಳಿಸಿದಳು. ಆಗ ಹದಿನಾಲ್ಕು ಅಕ್ಷರಾತ್ಮಕ ವಾದ ಜಗತಿಯು ಅಂತರಿಕ್ಷಕ್ಕೆ ಹಾರಿತು. ಆದರೆ ಸೋಮವನ್ನು ಪಡೆಯಲಾಗದೇ ಹಿಂತಿರುಗಿತು. ಹದಿನಾಲ್ಕರಲ್ಲಿ ಎರಡಕ್ಷರಗಳನ್ನು ಕಳೆದುಕೊಂಡಿತು, ಮತ್ತು ಯಜ್ಞಪಶುಗಳೊಡನೆಯೂ ಹಿಂತಿರುಗಿತು. ಆದುದರಿಂದಲೇ ಜಗತೀ ಛಂದಸ್ಸುಪಶುಸಂಪತ್ಸಮೃದ್ಧಿಯಿಂದ ಕೂಡಿದೆ ಪಶುಸಂಪತ್ಸಮೃದ್ಧನಾದ ಪುರುಷನು ಅಭಿಷಿಕ್ತನಾಗಲರ್ಹನಾಗುತ್ತಾನೆ. ನಂತರ ಹದಿಮೂರು ಅಕ್ಷರಗಳೊಡನೆ ಕೂಡಿದ ತ್ರಿಷ್ಟುಪ್‌ಛಂದಸ್ಸು ಅಂತರಿಕ್ಷಕ್ಕೆ ಹಾರಿತು. ಅದಕ್ಕೂ ಕೂಡ ಎರಡು ಅಕ್ಷರಗಳು ಊನವಾಗಿ ಸೋಮವು ಲಭಿಸಲಿಲ್ಲ. ಆದರೆ ಅದು ಹಿಂತಿರುಗಿ ಬರುವಾಗ ಯಜ್ಞಕ್ಕೆ ಉಪಯುಕ್ತವಾದ ದಕ್ಷಿಣೆಯೊಡನೆಯೂ, ತಪಸ್ಸಾಮಗ್ರಿಗಳೊಡನೆಯೂ ಹಿಂತಿರುಗಿತು. ಆದುದರಿಂದ ಲೋಕವ್ಯವಹಾರದಲ್ಲಿ ಮಾಧ್ಯಂದಿನಸವನಕಾಲದಲ್ಲಿ ದಕ್ಷಿಣೆಯು ಅರ್ಪಿತವಾಗುತ್ತದೆ. ಯಾವನು ತನ್ನ ಸಂಪತ್ತನ್ನು ದಾನರೂಪದಲ್ಲರ್ಪಿಸುವನೋ ಅದೇ ತಪಃಕ್ರಿಯೆಯೆನ್ನಿಸಿಕೊಳ್ಳುವುದು. ಅನಂತರ ನಾಲ್ಕು ಅಕ್ಷರಾತ್ಮಕವಾದ ಗಾಯತ್ರಿಯು ತನ್ನೊಡನೆ ಜ್ಯೋತಿ ರೂಪವಾದ ಒಂದು ಅಜದೊಡನೆ ಅಂತರಿಕ್ಷಾಭಿಮುಖವಾಗಿ ಹೊರಟಿತು. ಆ ಅಜವು ಗಾಯತ್ರಿಗೆ ಸೋಮವು ಲಭಿಸು ವಂತೆ ಮಾಡಿತು. ಆಗ ಗಾಯತ್ರಿಯು ಸೋಮವನ್ನು ತೆಗೆದುಕೊಂಡು ಬರುವಾಗ ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟುಬಂದ ನಾಲ್ಕು ಅಕ್ಷರಗಳನ್ನೂ ಹಿಂದಕ್ಕೆ ತೆಗೆದುಕೊಂಡು ಬಂದುದರಿಂದ ತನ್ನ ಪೂರ್ವಸ್ಥಿತಿಯಲ್ಲಿದ್ದ ನಾಲ್ಕು ಅಕ್ಷರಗಳೊಡನೆ ಈ ನಾಲ್ಕು ಅಕ್ಷರಗಳೂ ಸೇರಿಕೊಂಡು ಒಟ್ಟು ಅಷ್ಟಾಕ್ಷರಾತ್ಮಕವಾಯಿತು. ಹೀಗೆ ಛಂದಸ್ಸುಗಳಲ್ಲೆಲ್ಲಾ ಅತಿ ಚಿಕ್ಕದಾದರೂ ಸಹ ಯಜ್ಞಕ್ಕೆ ಅತಿ ಮುಖ್ಯವಾದ ಸೋಮವನ್ನು ತಂದುದಕ್ಕಾಗಿ ಯಜ್ಞ ಕಾರ್ಯದಲ್ಲಿ ಅತಿ ಪ್ರಧಾನವಾದ ಸ್ಥಾನವನ್ನು ಹೊಂದಿದೆಯೆಂದು ಬ್ರಹ್ಮವಾದಿಗಳ ಮತವಾಗಿದೆ. ಆದುದರಿಂದಲೇ ಅದು ಛಂದಸ್ಸುಗಳಲ್ಲೆಲ್ಲಾ ಅತ್ಯಂತ ತೇಜಸ್ವಿಯಾಗಿದೆ. ಅದು (ಪಕ್ಷಿರೂಪವಾದ ಗಾಯತ್ರಿಯು) ಎರಡು ಪಾದಗಳಿಂದಲೂ

CC-0. Jangamwadi Math Collection. Digitized by eGangotri

ಎರಡು ಸವನಗಳನ್ನೂ, ಮುಖದಿಂದ ಒಂದನ್ನೂ ತಂದಿತು. ಮುಖದಿಂದ ತಂದ ಸವನವನ್ನು ಪಾನಮಾಡಿತು. ಆದುದರಿಂದಲೇ ಪ್ರಾತಃಸವನವೂ, ಮಾಧ್ಯಂದಿನಸವನವೂ ಶುಭ್ರವಾದ ಸೋಮಯುಕ್ತವಾಗಿಯೂ ಮತ್ತು ತೃತೀಯ ಸವನವು ಋಜೀಷ (ಹಿಂಡಿದ ರಸವುಳ್ಳದ್ದು) ಯುಕ್ತವಾಗಿಯೂ ಇರುತ್ತದೆ. ಇದು ತೈತ್ತಿರೀಯ ಸಂಹಿತೆಯಲ್ಲಿ ಉಕ್ತವಾಗಿರುವ ಕ್ರಮ. ಐತರೇಯಬ್ರಾಹ್ಮಣದಲ್ಲಿ ಈ ವಿವರಣೆಯು ಕೊಂಚ ವ್ಯತ್ಯಸ್ತವಾಗಿದೆ. ಇದು ಎರಡು ಪ್ರಕರಣಗಳಲ್ಲಿ ಹೇಳಲ್ಪಟ್ಟಿದೆ. ಮೊದಲನೆಯದಾಗಿ,

ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯನ್ಕಥಮಯ-ಮಸ್ಮಾನ್ಸೋಮೋ ರಾಜಾಗಚ್ಛೇದಿತಿ ಸಾ ವಾಗಬ್ರವೀತ್ ಸ್ತ್ರೀಕಾಮಾ ವೈ ಗಂಧರ್ವಾ ಮಯ್ಯೈವ ಸ್ತ್ರಿಯಾ ಭೂತಯಾ ಪಣಧ್ವಮಿತಿ ನೇತಿ ದೇವಾ ಅಬ್ರುವನ್ಕಥಂ ವಯಂ ತ್ವದೃತೇ ಸ್ಯಾಮೇತಿ ಸಾಬ್ರವೀತ್ಕ್ರೀಣೀತೈವ ಯರ್ಹಿ ವಾವ ವೋ ಮಯಾರ್ಥೋ ಭವಿತಾ ತರ್ಹ್ಯೇವ ವೋಽಹಂ ಪುನರಾಗಂತಾಸ್ಮೀತಿ ತಥೇತಿ ತಯಾ ಮಹಾನಗ್ನ್ಯಾ ಭೂತಯಾ ಸೋಮಂ ರಾಜಾನಮಕ್ರೀಣನ್.

(ಐ ಬ್ರಾ. ೫-೨೭)

ಸೋಮರಾಜನು ಗಂಧರ್ವರೊಂದಿಗೆ ವಸಿಸುತ್ತಿದ್ದಾಗ ದೇವತೆಗಳೂ, ಋಷಿಗಳೂ ಸಹ ಅದನ್ನು ಪಡೆಯಬೇಕೆಂದಿಚ್ಛಿಸಿ ತದ್ಧ್ಯಾನನಿರತರಾದರು. ಅದನ್ನು ಪಡೆಯುವ ಕ್ರಮವೇನೆಂಬುದನ್ನು ಚಿಂತಿಸುತ್ತಿದ್ದಾಗ ವಾಗ್ದೇವಿಯು ಅವರೆದುರಿಗೆ ಬಂದು "ಗಂಧರ್ವರು ಸ್ತ್ರೀಕಾಮರು. ನನ್ನನ್ನು ಕಳುಹಿಸಿ, ನಾನು ನಿಮಗೆ ಸೋಮವನ್ನು ತಂದೊಪ್ಪಿಸುತ್ತೇನೆ" ಎಂದಳು. ಅದಕ್ಕೆ ದೇವತೆಗಳು "ನಾವು ನಿನ್ನನ್ನು ಬಿಟ್ಟಿರಲಾರೆವು. ಆದಾಗುವುದಿಲ್ಲ" ಎಂದರು. ಆಗ ವಾಗ್ದೇವಿಯು "ಸದ್ಯಕ್ಕೆ ನನ್ನನ್ನು ಕಳುಹಿ ಸೋಮವನ್ನು ಪಡೆಯಿರಿ. ಅನಂತರ ನೀವು ನನ್ನನ್ನು ಅಪೇಕ್ಷಿಸಿದೊಡನೆಯೇ ನಾನು ನಿಮ್ಮಲ್ಲಿಗೆ ಬರುತ್ತೇನೆ" ಎಂದು ಭರವಸೆಯನ್ನು ಕೊಟ್ಟ ನಂತರ ಅವಳ ಸಹಾಯದಿಂದ ಅವರು ಸೋಮವನ್ನು ಪಡೆದರು ಎಂದಿದೆ. ಇದೇ ಸಂದರ್ಭವನ್ನು ಬೇರೆ ಕಡೆಯಲ್ಲಿ ಈರೀತಿ ತಿಳಿಸಿದೆ.



### 4. ಸೋಮಾಹರಣಕ್ಕಾಗಿ ಛಂದಸ್ಸುಗಳ ಪ್ರಯತ್ನ ಮತ್ತು ಪರಾಭವ.

ಓಂ ಸೋಮೋ ವೈ ರಾಜಾಮುಷ್ಮಿಁಲೋಕ ಆಸೀತ್ತಂ ದೇವಾಶ್ಚ ಋಷಯಶ್ಚಾಭ್ಯಧ್ಯಾಯ-ನ್ಕಥಮಯಮಸ್ಮಾನ್ಸೋಮೋ ರಾಜಾಗಚ್ಛೇದಿತಿ ತೇಽಬ್ರುವಂಶ್ಛಂದಾಂಸಿ ಯೂಯಂ ನ ಇಮಂ ಸೋಮಂ ರಾಜಾನಮಾಹರತೇತಿ ತಥೇತಿ ತೇ ಸುಪರ್ಣಾ ಭೂತ್ವೋದಪತಂಸ್ತೇ ಯತ್ಸುಪರ್ಣಾ ಭೂತ್ವೋದಪತಂಸ್ತದೇತತ್ ಸೌಪರ್ಣಮಿತ್ಯಾಖ್ಯಾನವಿದ ಆಚಕ್ಷತೇ। ಛಂದಾಂಸಿ ವೈ ತತ್ಸೋಮಂ ರಾಜಾನಮಚ್ಛಾಚರಂಸ್ತಾನಿ ಹ ತರ್ಹಿ ಚತುರಕ್ಷರಾಣಿ ಚತುರಕ್ಷರಾಣ್ಯೇವ ಛಂದಾಂಸ್ಯಾಸನ್ ಸಾ ಜಗತೀ ಚತುರಕ್ಷರಾ ಪ್ರಥಮೋದಪತತ್ಸಾ ಪತಿತ್ವಾರ್ಧಮಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯ ತ್ರೀಣ್ಯಕ್ಷರಾಣ್ಯೇಕಾಕ್ಷರಾ ಭೂತ್ವಾ ದೀಕ್ಷಾಂ ಚ ತಪಶ್ಚ ಹರಂತೀ ಪುನರಭ್ಯವಾಪತತ್ತಸ್ಮಾತ್ತಸ್ಯ ವಿತ್ತಾ ದೀಕ್ಷಾ ವಿತ್ತಂ ತಪೋ ಯಸ್ಯ ಪಶವಃ ಸಂತಿ ಜಾಗತಾ ಹಿ ಪಶವೋ ಜಗತೀ ಹಿ ತಾನಾಹರದಥ ತ್ರಿಷ್ಟುಬುದಪತತ್ಸಾ

CC-0. Jangamwadi Math Collection. Digitized by eGangotri

ಪತಿತ್ವಾ ಭೂಯೋಽರ್ಧಾದಧ್ವನೋ ಗತ್ವಾಶ್ರಾಮ್ಯತ್ಸಾ ಪರಾಸ್ಯೈಕಮಕ್ಷರಂ ತ್ರ್ಯಕ್ಷರಾ ಭೂತ್ವಾ ದಕ್ಷಿಣಾ ಹರಂತೀ ಪುನರಭ್ಯವಾಪತತ್ತಸ್ಮಾನ್ಮಾಧ್ಯಂದಿನೇ ದಕ್ಷಿಣಾ ನೀಯಂತೇ ತ್ರಿಷ್ಟುಭೋ ಲೋಕೇ ತ್ರಿಷ್ಟುಬ್ಭಿ ತಾ ಆಹರತ್ । (ಐ. ಬ್ರಾ. ೧೩-೨೫)

ಅಂತರಿಕ್ಷಸ್ಥವಾದ ಸೋಮವನ್ನು ಹೇಗೆ ಪಡೆಯಬಹುದೆಂದು ದೇವತೆಗಳು ಬಹುಕಾಲ ಚಿಂತಿಸಿ, ಅನಂತರ ಛಂದಸ್ಸುಗಳನ್ನು ಸಮೀಪಿಸಿ "ನೀವು ನಮಗಾಗಿ ಅಂತರಿಕ್ಷಸ್ಥವಾದ ಸೋಮವನ್ನು ತಂದುಕೊಡಿ" ಎಂದು ಯಾಚಿಸಿದರು. "ತಥಾಸ್ತು" ಎಂದು ಭರವಸೆಯನ್ನು ಕೊಟ್ಟು ಪಕ್ಷಿರೂಪವನ್ನು ಹೊಂದಿ ಅವು ಅಂತರಿಕ್ಷಕ್ಕೆ ಹಾರಿದವು. ಅವು ಸುಪರ್ಣರೂಪದಲ್ಲಿ ಪರಿವರ್ತಿತವಾಗಿ ಸೋಮಾಹರಣಕ್ಕೆ ಹಾರಿದುದರಿಂದ ಈ ಸನ್ನಿವೇಶವು ಸುಪರ್ಣೋಪಾಖ್ಯಾನ ಎಂದು ಪ್ರಸಿದ್ಧವಾಯಿತು. ಈರೀತಿ ಆ ಪಕ್ಷಿರೂಪವಾದ ಛಂದಸ್ಸುಗಳು ಸೋಮನಲ್ಲಿಗೆ ಹಾರಿದಾಗ ಪ್ರತಿಯೊಂದೂ ಚತುರಕ್ಷರಾತ್ಮಕ (ನಾಲ್ಕು ಅಕ್ಷರಗಳು) ವಾಗಿ ಮಾತ್ರ ಇದ್ದವು. ಚತುರಕ್ಷಾತ್ಮಕವಾದ ಜಗತಿಯು ಪ್ರಥಮತಃ ಅಂತರಿಕ್ಷಕ್ಕೆ ಹಾರುತ್ತಿದ್ದಾಗ ಅರ್ಧದಾರಿಯಲ್ಲಿಯೇ ಬಳಲಿತು. ತನ್ನ ಮೂರು ಅಕ್ಷರಗಳನ್ನು ಅಲ್ಲೇ ಬಿಟ್ಟು ಉಳಿದ ಒಂದಕ್ಷರದೊಂದಿಗೆ ಮಾತ್ರ ಹಿಂತಿರುಗಿತು. ಆದರೆ ಹಿಂದಕ್ಕೆ ಬರುವಾಗ ಯಾಗದೀಕ್ಷೆಯನ್ನೂ, ತಪಸ್ಸನ್ನೂ ಪಡೆದುಕೊಂಡು ಬಂದಿತು. ಜಗತಿಗೂ, ಪಶುಸಂಪತ್ತಿಗೂ ಸಮೀಪಸಂಬಂಧವಿರುವುದರಿಂದ ಪಶುಸಂಪತ್ತುಳ್ಳವನು ಶ್ರದ್ಧೆಯನ್ನೂ, ತಪಶ್ಶಕ್ತಿಯನ್ನೂ ಪಡೆಯುತ್ತಾನೆ. ಅನಂತರ ತ್ರಿಷ್ಟುಪ್ಪೂ ಸಹ ಅರ್ಧದಾರಿಯನ್ನು ಮೀರಿ ಕೊಂಚ ದೂರ ಹೋಗುವುದರಲ್ಲಿಯೇ ಬಳಲಿತು. ತನ್ನ ಒಂದು ಅಕ್ಷರವನ್ನು ಮಾತ್ರ ಅಲ್ಲಿ ಬಿಟ್ಟು ಉಳಿದ ಮೂರು ಅಕ್ಷರಗಳೊಡನೆ ಹಿಂತಿರುಗಿತು. ಬರುವಾಗ ಯಜ್ಞಸಾಮಗ್ರಿಯಾದ ದಕ್ಷಿಣೆಯನ್ನು ತಂದಿತು. ಆದುದರಿಂದಲೇ ಮಾಧ್ಯಂದಿನ ಸವನದ ಕಾಲದಲ್ಲಿ ದಕ್ಷಿಣೆಗೆ ಪ್ರಾಶಸ್ತ್ಯವಿದೆ.

---

## 5. ಗಾಯತ್ರಿಯ ವಿಜಯ.

ತೇ ದೇವಾ ಅಬ್ರುವನ್ಗಾಯತ್ರೀಂ ತ್ವಂ ನ ಇಮಂ ಸೋಮಂ ರಾಜಾನಮಾಹರೇತಿ ಸಾ ತಥೇತ್ಯಬ್ರವೀತ್ತಾಂ ವೈ ಮಾ ಸರ್ವೇಣ ಸ್ವಸ್ತ್ಯಯನೇನಾನುಮಂತ್ರಯಧ್ವಮಿತಿ ತಥೇತಿ ಸೋದಪತತ್ತಾಂ ದೇವಾಃ ಸರ್ವೇಣ ಸ್ವಸ್ತ್ಯಯನೇನಾನ್ವಮಂತ್ರಯಂತ ಪ್ರೇತಿ ಚೇತಿ ಚೇತ್ಯೇತದ್ವೈ ಸರ್ವಂ ಸ್ವಸ್ತ್ಯಯನಂ ಯತ್ಪ್ರೇತಿ ಚೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿ ಚೇತಿ ತದ್ಯೋಽಸ್ಯ ಪ್ರಿಯಃ ಸ್ಯಾತ್ತಮೇತೇನಾನುಮಂತ್ರಯೇತ ಪ್ರೇತಿ ಚೇತಿ ಚೇತಿ ಸ್ವಸ್ತ್ಯೇವ ಗಚ್ಛತಿ ಸ್ವಸ್ತಿ ಪುನರಾಗಚ್ಛತಿ ಸಾ ಪತಿತ್ವಾ ಸೋಮಪಾಲಾನ್ ಭೀಷಯಿತ್ವಾ ಪದ್ಭ್ಯಾಂ ಚ ಮುಖೇನ ಚ ಸೋಮಂ ರಾಜಾನಂ ಸಮಗೃಭ್ಣಾದ್ಯಾನಿ ಚೇತರೇ ಛಂದಸೀ ಅಕ್ಷರಾಣ್ಯಜಹಿತಾಂ ತಾನಿ ಚೋಪಸಮಗೃಭ್ಣಾತ್ತಸ್ಯಾ ಅನು ವಿಸೃಜ್ಯ ಕೃಶಾನುಃ ಸೋಮಪಾಲಃ ಸವ್ಯಸ್ಯ ಪದೋ ನಖಮಚ್ಛಿದತ್ತಚ್ಛಲ್ಯಕೋಽಭವತ್ತಸ್ಮಾತ್ಸನಖಮಿವ ಯದ್ವಶಮಸ್ರವತ್ಸಾ ವಶಾಭವತ್ತಸ್ಮಾತ್ಸಾ ಹವಿರಿವಾಥ ಯಃ ಶಲ್ಯೋ ಯದನೀಕಮಾಸೀತ್ಸ ಸರ್ಪೋ ನಿರ್ದಂಶ್ಯಭವತ್ಸಹಸಸ್ವಜೋ ಯಾನಿ ಪರ್ಣಾನಿ ತೇ ಮಂಥಾವಲಾ ಯಾನಿ ಸ್ನಾವಾನಿ ತೇ ಗಂಡೂಪದಾ ಯತ್ತೇಜನಂ ಸೋಽಂಧಾಹಿಃ ಸೋ ಸಾ ತಥೇಷುರಭವತ್ ।

(ಐ. ಬ್ರಾ. ೧೩-೨೬)

CC-0. Jangamwadi Math Collection. Digitized by eGangotri

ಅನಂತರ ದೇವತೆಗಳು ಗಾಯತ್ರಿಯನ್ನು ಸಮೀಪಿಸಿ ನಮಗೆ ಸೋಮರಾಜನನ್ನು ತಂದುಕೊಡು ಎಂದು ಪ್ರಾರ್ಥಿಸಿದರು. ಹಾಗೇ ಆಗಲೆಂದು ಗಾಯತ್ರಿಯು ಒಪ್ಪಿ ದೇವತೆಗಳು ಸ್ವಸ್ತ್ಯಯನಮಂತ್ರವನ್ನು ಪಠಿಸುತ್ತಾ ತನ್ನನ್ನು ಹಿಂಬಾಲಿಸಬೇಕೆಂದಿತು. ದೇವತೆಗಳು ಸಂತೋಷದಿಂದ ಅದನ್ನು ಅಂಗೀಕರಿಸಿ "ಪ್ರ ಮತ್ತು ಆ" ಎಂಬ ಸ್ವಸ್ತ್ಯಯನ ಮಂತ್ರವನ್ನು ಪಠಿಸುತ್ತಾ ಹೊರಟರು. ಈ ಮಂತ್ರದ ಪಠನದಿಂದ ಪ್ರಯಾಣವು ನಿರ್ವಿಘ್ನವಾಗಿ ನೆರವೇರಿ ಕಾರ್ಯವು ಸಿದ್ಧಿಸುವುದರಿಂದ ದೇವತೆಗಳು ಇದನ್ನು ಪಠಿಸಿದರು. ಗಾಯತ್ರಿಯು ನಿರ್ವಿಘ್ನವಾಗಿ ಸೋಮವಿರುವ ಪ್ರದೇಶವನ್ನು ಸೇರಿ ತನ್ನ ಪಾದಗಳಿಂದಲೂ, ಮುಖದಿಂದಲೂ ಸೋಮವನ್ನೆತ್ತಿಕೊಂಡು ತ್ರಿಷ್ಟುಪ್ ಮತ್ತು ಜಗತಿಯು ಅಲ್ಲಿ ಬಿಟ್ಟು ಬಂದಿದ್ದ ಚತುರಕ್ಷರಗಳನ್ನೂ (೩+೧) ತೆಗೆದುಕೊಂಡು ಹಿಂತಿರುಗಿತು. ಆದರೆ ಸೋಮಪಾಲಕನಾದ ಕೃಶಾನುವು ಇದರ ಎಡಗಡೆ ಪಾದದ ನಖವನ್ನು ಕತ್ತರಿಸಿಹಾಕಿದನು. ಅದು ಮುಳ್ಳುಹಂದಿ ರೂಪಕ್ಕೆ ಪರಿವರ್ತಿತವಾಗಿ ಶಲ್ಯ ರೂಪಕ್ಕೆ ತಿರುಗಿತು. ಅದರಿಂದ ಸುರಿದ ರಕ್ತವು ಬಂಜೆಹಸುವಾಗಿಯೂ, ಎಲುಬುಗೂಡು ಸರ್ಪರೂಪಕ್ಕೂ ತಿರುಗಿತು. ಆದರೆ ವಿಷವನ್ನು ಕಾರಿ ಕಚ್ಚುವಂತಾಗಲಿಲ್ಲ. ಹೀಗೆಯೇ ರೆಕ್ಕೆ ಬಾವಲಿಯೂ, ಸ್ನಾಯುವಿನಿಂದ ಮಣ್ಣು ಹುಳುವೂ ಉತ್ಪನ್ನವಾಗಿ ಇಷುವಿನ ಸ್ವರೂಪವು ಈರೀತಿಯಾಯಿತು.

———

### 6· ಗಾಯತ್ರಿಗೆ ಸವನಕಾಲಗಳಲ್ಲಿರುವ ಪ್ರಾಧಾನ್ಯ.

ಸಾ ಯದ್ದಕ್ಷಿಣೇನ ಪದಾ ಸಮಗೃಭ್ಣಾತ್ತತ್ಪ್ರಾತಃಸವನಮಭವತ್ತದ್ಗಾಯತ್ರೀ ಸ್ವಮಾಯತನಮಕುರುತ ತಸ್ಮಾತ್ತತ್ಸಮೃದ್ಧತಮಂ ಮನ್ಯಂತೇ ಸರ್ವೇಷಾಂ ಸವನಾನಾಮಗ್ರಿಯೋ ಮುಖ್ಯೋ ಭವತಿ ಶ್ರೇಷ್ಠತಾಮಶ್ನುತೇ ಯ ಏವಂ ವೇದಾಥ ಯತ್ಸವ್ಯೇನ ಪದಾ ಸಮಗೃಭ್ಣಾತ್ತನ್ಮಾಧ್ಯಂದಿನಂ ಸವನಮಭವತ್ತದ್ವಿಸ್ರಂಸತ ತದ್ವಿಸ್ರಸ್ತಂ ನಾನ್ವಾಪ್ನೋತ್ಪೂರ್ವಂ ಸವನಂ ತೇ ದೇವಾಃ ಪ್ರಾಜಿಜ್ಞಾಸಂತ ತಸ್ಮಿಂಸ್ತ್ರಿಷ್ಟುಭಂ ಛಂದಸಾಮದಧುರಿಂದ್ರಂ ದೇವತಾನಾಂ ತೇನ ತತ್ಸಮಾವದ್ವೀರ್ಯಮಭವತ್ಪೂರ್ವೇಣ ಸವನೇನೋಭಾಭ್ಯಾಂ ಸವನಾಭ್ಯಾಂ ಸಮಾವದ್ವೀರ್ಯಾಭ್ಯಾಂ ಸಮಾವಜ್ಜಾಮಿಭ್ಯಾಂ ರಾಧ್ನೋತಿ ಯ ಏವಂ ವೇದಾಥ ಯನ್ಮುಖೇನ ಸಮಗೃಭ್ಣಾತ್ತತ್ತೃತೀಯಸವನಮಭವತ್ತಸ್ಯ ಪತಂತೀ ರಸಮಧಯತ್ತದ್ಧೀತರಸಂ ನಾನ್ವಾಪ್ನೋತ್ಪೂರ್ವೇ ಸವನೇ ತೇ ದೇವಾಃ ಪ್ರಾಜಿಜ್ಞಾಸಂತ ತತ್ಪಶುಷ್ವಪಶ್ಯಂಸ್ತದ್ಯದಾಶಿರಮವನಯನ್ನಾಜ್ಯೇನ ಪಶುನಾ ಚರಂತಿ ತೇನ ತತ್ಸಮಾವದ್ವೀರ್ಯಮಭವತ್ಪೂರ್ವಾಭ್ಯಾಂ ಸವನಾಭ್ಯಾಂ ಸರ್ವೈಃ ಸವನೈಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ ।

(ಐ ಬ್ರಾ. ೧೩-೨೨)

ಗಾಯತ್ರಿಯು ತನ್ನ ಬಲಭಾಗದ ಪಾದದಿಂದ ಹಿಡಿದುಕೊಂಡ ಸೋಮದ ಭಾಗವು ಪ್ರಾತಃಸವನವಾಯಿತು. ಈ ಪ್ರಾತಃಸವನವೇ ಗಾಯತ್ರಿಯ ನಿವಾಸಸ್ಥಾನವಾಯಿತು. ಆದುದರಿಂದಲೇ ಪ್ರಾತಃಸವನವನ್ನು ಸವನಗಳಲ್ಲೆಲ್ಲಾ ಸಮೃದ್ಧತಮವೆಂದು ತಿಳಿದಿದ್ದಾರೆ. ಈ ತತ್ತ್ವವನ್ನು ತಿಳಿದವ ಯಜ್ಞಕರ್ತರಲ್ಲಿ ಅಗ್ರಗಣ್ಯನೂ ಅತಿಮುಖ್ಯನೂ ಆಗುತ್ತಾನೆ. ಎಡಭಾಗದ ಪಾದದಿಂದ ಗಾಯತ್ರಿಯು ಹಿಡಿದುಕೊಂಡ ಸೋಮದ ಭಾಗವು ಮಾಧ್ಯಂದಿನಸವನವಾಯಿತು. ಅದು ಜಾರಿಹೋದುದರಿಂದ ಪ್ರಾತಃಸವನದ ಶ್ರೇಷ್ಠತೆಯು ಅದಕ್ಕೆ ಲಭಿಸಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಸರಿಪಡಿಸಲು ಪ್ರಯತ್ನಿಸಿ ಅದರಲ್ಲಿ ಛಂದಸ್ಸುಗಳಲ್ಲಿ ತ್ರಿಷ್ಟುಪ್ಪನ್ನೂ ದೇವತೆಗಳಲ್ಲಿ ಇಂದ್ರನನ್ನು

CC-0. Jangamwadi Math Collection. Digitized by eGangotri

ಸ್ಥಾಪಿಸಿದರು. ಅನಂತರ ಅದೂ ಸಹ ಪ್ರಾತಃಸವನದ ವೀರ್ಯವನ್ನೇ ಪಡೆಯಿತು. ಈ ಎರಡು ಸವನಗಳ ಸಮಾನ ಶಕ್ತಿಯನ್ನೂ ಸಂಪತ್ತನ್ನೂ ತಿಳಿದ ಪುರುಷನು ವೃದ್ಧಿಯನ್ನು ಹೊಂದುತ್ತಾನೆ. ಮುಖದಿಂದ ಹಿಡಿದುಕೊಂಡ ಸೋಮದ ಭಾಗವು ತೃತೀಯಸವನವಾಯಿತು. ಹಾರುತ್ತಿರುವಾಗಲೇ ಗಾಯತ್ರೀರೂಪವಾದ ಶ್ಯೇನವು ಅದನ್ನು ಪಾನಮಾಡಿತು. ಆದುದರಿಂದಲೇ ಅದು ಮೊದಲಿನ ಎರಡು ಸವನಗಳ ಶಕ್ತಿಸಮಾನತೆಯನ್ನು ಪಡೆಯಲಿಲ್ಲ. ದೇವತೆಗಳು ಈ ನ್ಯೂನತೆಯನ್ನು ಸರಿಪಡಿಸಬೇಕೆಂದರಿತರು. ಅವರು ಅನಂತರ ಅದನ್ನು ಪಶುಗಳಲ್ಲಿ ವೀಕ್ಷಿಸಿ ಅನಂತರ ಆಶಿರದಿಂದಲೂ ಆಜ್ಯಾರ್ಪಣೆಯಿಂದಲೂ ಆರಾಧಿಸಿದರು. ಅನಂತರ ಅದೂ ಸಹ ಮೊದಲಿನ ಎರಡು ಸವನಗಳ ಶಕ್ತಿಯನ್ನು ಪಡೆಯಿತು. ಈ ತತ್ತ್ವವನ್ನರಿತವನು ವೃದ್ಧಿಯನ್ನು ಪಡೆಯುತ್ತಾನೆ.

——— : o :———

## 7. ಛಂದಸ್ಸುಗಳ ಅಕ್ಷರವಿಭಾಗ ಪ್ರಕರಣ.

ತೇ ವಾ ಇಮೇ ಇತರೇ ಛಂದಸೀ ಗಾಯತ್ರೀಮಭ್ಯವದೇತಾಂ ವಿತ್ತಂ ನಾವಕ್ಷರಾಣ್ಯನುಪರ್ಯಾಗುರಿತಿ ನೇತ್ಯಬ್ರವೀದ್ಗಾಯತ್ರೀ ಯಥಾ ವಿತ್ತಮೇವ ನ ಇತಿ ತೇ ದೇವೇಷು ಪ್ರಶ್ನಮೈತಾಂ ತೇ ದೇವಾ ಅಬ್ರುವನ್ಯಥಾವಿತ್ತಮೇವ ವ ಇತಿ ತಸ್ಮಾದ್ಧಾಪ್ಯೇತರ್ಹಿ ವಿತ್ತ್ಯಾಂ ವ್ಯಾಹುರ್ಯಥಾ ವಿತ್ತಮೇವ ನ ಇತಿ ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವತ್ತ್ರ್ಯಕ್ಷರಾ ತ್ರಿಷ್ಟುಬೇಕಾಕ್ಷರಾ ಜಗತೀ ಸಾಷ್ಟಾಕ್ಷರಾ ಗಾಯತ್ರೀ ಪ್ರಾತಃಸವನಮುದಯಚ್ಛನ್ನಾಶಕ್ನೋತ್ತ್ರಿಷ್ಟುಪ್ ತ್ರ್ಯಕ್ಷರಾ ಮಾಧ್ಯಂದಿನಂ ಸವನಮುದ್ಯಂತುಂ ತಾಂ ಗಾಯತ್ರ್ಯಬ್ರವೀದಾಯಾನ್ಯಪಿ ಮೇಽತ್ರಾಸ್ತ್ವಿತಿ ಸಾ ತಥೇತ್ಯಬ್ರವೀತ್ ತ್ರಿಷ್ಟುಪ್ ತಾಂ ವೈ ಮೈತೈರಷ್ಟಾಭಿರಕ್ಷರೈರುಪಸಂಧೇಹೀತಿ ತಥೇತಿ .... .... .... .... .... .... .... .... .... .... .... .... .... .... .... .... .... .... .... .... ....

ಸಾ ದ್ವಾದಶಾಕ್ಷರಾ ಭೂತ್ವಾ ತೃತೀಯಸವನಮುದಯಚ್ಛತ್ತತೋ ವಾ ಅಷ್ಟಾಕ್ಷರಾ ಗಾಯತ್ರ್ಯಭವದೇಕಾದಶಾಕ್ಷರಾ ತ್ರಿಷ್ಟುಬ್ ದ್ವಾದಶಾಕ್ಷರಾ-ಜಗತೀ ಸರ್ವೈಶ್ಛಂದೋಭಿಃ ಸಮಾವದ್ವೀರ್ಯೈಃ ಸಮಾವಜ್ಜಾಮಿಭೀ ರಾಧ್ನೋತಿ ಯ ಏವಂ ವೇದ ||

(ಐ. ಬ್ರಾ. ೧೩-೨೮)

ಗಾಯತ್ರಿಯು ತ್ರಿಷ್ಟುಪ್ಪಿನ ಮೂರು ಅಕ್ಷರಗಳನ್ನೂ, ಜಗತಿಯ ಒಂದಕ್ಷರವನ್ನೂ ತೆಗೆದುಕೊಂಡು ಹಿಂತಿರುಗಿದ ನಂತರ ಅವೆರಡೂ ಇದನ್ನು ಸಮೀಪಿಸಿ ನಮ್ಮ ಐಶ್ವರ್ಯವಾದ ಅಕ್ಷರಗಳು ನಿನ್ನೊಡನೆ ಸೇರಿ ಬಂದಿವೆ. ಅವನ್ನು ಹಿಂತಿರುಗಿಸು, ಎಂದು ಪ್ರಾರ್ಥಿಸಿದಾಗ ಗಾಯತ್ರಿಯು ಇಲ್ಲ, ಅವು ನಿಮ್ಮವಲ್ಲ, ನಾನು ಅದನ್ನು ತಂದುದರಿಂದ ಅದು ನನ್ನದೇ ಆಯಿತು ಎಂದಿತು ಅನಂತರ ಅವೆರಡೂ ದೇವತೆಗಳನ್ನು ಸಮೀಪಿಸಿ ತಮ್ಮ ದೂರನ್ನು ಹೇಳಿಕೊಂಡವು. ದೇವತೆಗಳು ಗಾಯತ್ರಿಯ ಪಕ್ಷವನ್ನೇ ವಹಿಸಿ, ನೀನು ಅವನ್ನು ತಂದುದರಿಂದ ಆ ಮೂರಕ್ಷರಗಳೂ ನಿನ್ನದೇ ಆಯಿತು. ಲೌಕಿಕವಾದ ವ್ಯವಹಾರಗಳಲ್ಲೂ ಸಹ ನಾವು ಪಡೆದ ಯಾವುದೇ ಆಸ್ತಿಯಾಗಲಿ ಅದು ನಮ್ಮದೇ ಆಯಿತು ಎನ್ನುವ ರೂಢಿಯಿರುವಂತೆಯೇ ಅವನ್ನು ಸ್ವಾಯತ್ತೀಕರಿಸಿಕೊಳ್ಳುವ ಅಧಿಕಾರವು ನಿನಗಿದೆ ಎಂದರು. ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ತ್ರ್ಯಕ್ಷರಾತ್ಮಕವಾಗಿಯೂ ಜಗತಿಯು ಏಕಾಕ್ಷರಾತ್ಮಕವಾದುದೂ ಆದವು. ಆಗ ಗಾಯತ್ರಿಯು ಅಷ್ಟಾಕ್ಷರಗಳೊಡನೆ ಪ್ರಾತಃ ಸವನದಲ್ಲಿ ಭಾಗವಹಿಸಲು



CC-0. Jangamwadi Math Collection. Digitized by eGangotri

ಸಮರ್ಥವಾಯಿತು. ಆದರೆ, ತ್ರಿಷ್ಟುಪ್ಪು ತನ್ನ ಮೂರು ಅಕ್ಷರಗಳೊಡನೆ ಮಾಧ್ಯಂದನಸವನದಲ್ಲಿ ಭಾಗವಹಿಸಲಾಗಲಿಲ್ಲ. ಆಗ ಗಾಯತ್ರಿಯು ನಾನೂ ಸಹ ಮಾಧ್ಯಂದಿನಸವನದಲ್ಲಿ ಭಾಗವಹಿಸುತ್ತೇನೆ ನನಗೂ ಅದರ ಯಜ್ಞಭಾಗವಿರಬೇಕೆಂದಿತು. ಹಾಗೇ ಆಗಲಿ, ನೀನು ನಿನ್ನ ಅಷ್ಟಾಕ್ಷರಗಳೊಡನೆ ನನ್ನೊಂದಿಗೆ ಸೇರಿಕೋ ಎಂದು ತ್ರಿಷ್ಟುಪ್ಪು ಹೇಳಿತು. ಒಟ್ಟಿಗೆ ಏಕಾದಶಾಕ್ಷರಾತ್ಮಕವಾಗಿ ಮಾಧ್ಯಂದಿನಸವನಕ್ಕೆ ಸಹಾಯಕವಾಯಿತು. ಜಗತಿಯು ಏಕಾಕ್ಷರಾತ್ಮಕವಾಗಿ ತೃತೀಯಸವನದ ನಿರ್ವಹಣಕ್ಕೆ ಅಸಮರ್ಥವಾಯಿತು. ಆಗ ಪುನಃ ಗಾಯತ್ರಿಯು ಅದರೊಂದಿಗೆ ತಾನು ಸೇರುವುದಾಗಿಯೂ ತನಗೆ ತೃತೀಯಸವನದಲ್ಲೂ ಭಾಗವಿರಬೇಕೆಂದೂ ಕೇಳಿತು. ಜಗತಿಯು ಹಾಗೇ ಆಗಲೆಂದು ಒಪ್ಪಲಾಗಿ ತೃತೀಯಸವನದ ಕಾಲದಲ್ಲಿ ಅದರೊಂದಿಗೆ ಸೇರಿಕೊಂಡಿತು. ಆಗ ದ್ವಾದಶಾಕ್ಷರಾತ್ಮಕವಾಗಿ ತೃತೀಯಸವನಕ್ಕೆಸಾಹಾಯ್ಯಕವಾಯಿತು. ಆಗ ಗಾಯತ್ರಿಯು ಅಷ್ಟಾಕ್ಷರಾತ್ಮಕವಾಗಿಯೂ, ತ್ರಿಷ್ಟುಪ್ಪು ಏಕಾದಶಾಕ್ಷರಾತ್ಮಕವಾಗಿಯೂ ಜಗತಿಯು ದ್ವಾದಶಾಕ್ಷರಾತ್ಮಕವಾಗಿಯೂ ಆಯಿತು. ಈ ತತ್ತ್ವವನ್ನು ತಿಳಿದವನು ಸಮಾನವಾದ ಶಕ್ತಿಯನ್ನೂ ವೈಭವವನ್ನೂ ಪಡೆದಿರುವ ಈ ಛಂದಸ್ಸುಗಳ ಅನುಗ್ರಹದಿಂದ ಸಕಲ ಸಂಪತ್ತನ್ನೂ ಪಡೆಯುತ್ತಾನೆ. ಎಂದು ಗಾಯತ್ರೀಸ್ತುತಿಯಿದೆ.

—————

### 8. ಅಗ್ನಿ, ಗಾಯತ್ರೀ, ಶ್ಯೇನ ಇವುಗಳ ತಾದಾತ್ಮ್ಯ, ಸವನ ಕಾಲಗಳಲ್ಲಿ ಇವುಗಳ ಸ್ಥಾನ.

ಈ ರೀತಿಯಲ್ಲಿ ಈ ಗಾಯತ್ರಿಗೂ ಶ್ಯೇನಕ್ಕೂ ತಾದಾತ್ಮ್ಯವಿರುವಂತೆ ಕಥಾ ಸಂದರ್ಭವು ಅನೇಕಕಡೆಗಳಲ್ಲಿ ಉಕ್ತವಾಗಿದೆ. ಇದರಂತೆಯೇ ಶತಪಥಬ್ರಾಹ್ಮಣದಲ್ಲಿ,

> ಸ ವೈ ಖಲು ಬರ್ಹಿಃ ಪ್ರಥಮಂ ಯಜತಿ । ತದ್ವೈ ಕನಿಷ್ಠಛಂದಃ ಸದ್ಗಾಯತ್ರೀ ಪ್ರಥಮಾ ಛಂದಸಾಂ ಯುಜ್ಯತೇ ತೆದು ತದ್ವೀರ್ಯೇಣೈವ ಯಚ್ಛ್ಯೇನೋ ಭೂತ್ವಾ ದಿವಃ ಸೋಮ-ಮಾಹರತ್ತದ್ಯಥಾಯಥಂ ಮನ್ಯಂತೇ ಯಕ್ಕನಿಷ್ಠಂ ಛಂದಃಸದ್ಗಾಯತ್ರೀ ಪ್ರಥಮಾ ಛಂದಸಾಂ ಯುಜ್ಯತೇ.... .... .... .... ॥
>
> (ಶ. ಬ್ರಾ ೧-೮-೨-೧೦)

ಛಂದಸ್ಸುಗಳಲ್ಲೆಲ್ಲಾ ಅತಿಕನಿಷ್ಠವಾಗಿದ್ದರೂ ಸಹ ಗಾಯತ್ರಿಯು ತನ್ನ ಮಹಿಮೆಯಿಂದ ಅಂತರಿಕ್ಷದಿಂದ ಸೋಮವನ್ನು ಅಪಹರಿಸಿಕೊಂಡು ಬಂದಿತು. ಇದು ಆತ್ಮಶಕ್ತಿಯಿಂದಲೇ ಸಾಧ್ಯವಾಯಿತು. ಈ ಶಕ್ತಿಯಿಂದಲೇ ಶ್ಯೇನರೂಪದಲ್ಲಿ ಪರಿವರ್ತಿತವಾಗಿ ಆ ಕಾರ್ಯವನ್ನು ಸಾಧಿಸಿತು. ಅದರಿಂದಲೇ ದೇವತೆಗಳೂ ಸಹ ಇದಕ್ಕೆ ಅಗ್ರಮರ್ಯಾದೆಯನ್ನು ತೋರಿಸಿ ಗೌರವಿಸಿದರು.

> ಶ್ಯೇನಾಯ ತ್ವಾ ಸೋಮಭೃತೇ ವಿಷ್ಣವೇತ್ವೇತಿ । ತದ್ಗಾಯತ್ರೀಮನ್ವಾಭಜತಿ ಸಾ ಯದ್ಗಾಯತ್ರೀ ಶ್ಯೇನ್ಯೋ ಭೂತ್ವಾ ದಿವಃ ಸೋಮಮಾಭರತ್ ॥
>
> (ಶ. ಬ್ರಾ. ೩-೪-೧-೧೨)

ಗಾಯತ್ರಿಯು ಶ್ಯೇನರೂಪದಲ್ಲಿ ಅಂತರಿಕ್ಷದಿಂದ ಸೋಮಹರಣವನ್ನು ಮಾಡಿದ್ದರಿಂದ-ಸೋಮಭೃತ್ತೂ ವಿಷ್ಣುಸ್ವರೂಪವುಳ್ಳದ್ದೂ ಆದ ಶ್ಯೇನವನ್ನು ಉದ್ದೇಶಿಸಿದೆ—ಎಂದು ಗಾಯತ್ರಿಗೆ ಆತಿಥ್ಯವು ಅರ್ಪಿತವಾಗುತ್ತದೆ. ಇತ್ಯಾದಿಯಾಗಿ

CC-0. Jangamwadi Math Collection. Digitized by eGangotri

ಶತಪಥಬ್ರಾಹ್ಮಣದ ೩-೯-೪-೧೦ ; ೪-೩-೨-೭ ; ೧-೭-೧-೧ ; ೧೧-೭-೨-೮ ಇತ್ಯಾದಿಯಾಗಿ ಅನೇಕಕಡೆಗಳಲ್ಲಿ ಹೇಳಿರುವಾಗ ಒಂದಂಶವನ್ನು ಗಮನಿಸಬೇಕಾಗುತ್ತದೆ.

ಶ್ಯೇನಾಯ ತ್ವಾ ಸೋಮಭೃತ ಇತಿ । ತದ್ಗಾಯತ್ರ್ಯೈ ಮಿಮಿತೇಽಗ್ನಯೇ ತ್ವಾ ರಾಯ-ಸ್ಪೋಷದ ಇತ್ಯಗ್ನಿರ್ವೈ ಗಾಯತ್ರೀ ತದ್ಗಾಯತ್ರ್ಯೈ ಮಿಮೀತೇ ಸ ಯದ್ಗಾಯತ್ರೀ ಶ್ಯೇನೋ ಭೂತ್ವಾ । .... .... .... .... ।

(ಶ. ಬ್ರಾ ೩-೯-೪-೧೦)

ಎಂದು ಗಾಯತ್ರೀ, ಶ್ಯೇನ ಮತ್ತು ಅಗ್ನಿಗಳಿಗೆ ತಾದಾತ್ಮ್ಯವನ್ನು ಹೇಳಿದೆ. ಅಗ್ನಿರೂಪವಾದ ಗಾಯತ್ರಿಯು ಶ್ಯೇನಾತ್ಮಕವಾಗಿ ಸೋಮಾಹರಣವನ್ನು ಮಾಡಿತೆಂದು ಹೇಳುವ ಈ ಅಗ್ನಿ ಮತ್ತು ಗಾಯತ್ರಿಯ ಐಕ್ಯವನ್ನು ಋಕ್ಸಂಹಿತಾವಾಕ್ಯಗಳೂ ಸಹ ಸಮರ್ಥಿಸುತ್ತವೆ.

ಅಗ್ನೇರ್ಗಾಯತ್ರ್ಯಭವತ್ ಸಯುಗ್ವೋಷ್ಣಿಹಯಾ ಸವಿತಾ ಸಂ ಬಭೂವ ।
ಅನುಷ್ಟುಭಾ ಸೋಮ ಉಕ್ಥೈರ್ಮಹಸ್ವಾನ್ ಬೃಹಸ್ಪತೇರ್ಬೃಹತೀ ವಾಚಮಾವತ್ ॥

(೧೦-೧೩೦-೪)

ಎಂಬಲ್ಲಿ ಅಗ್ನಿಗೆ ಸಮೀಪಸಂಬಂಧಿಯಾದ ಗಾಯತ್ರಿಯು ಅಗ್ನಿಗೆ ಸಾಹಾಯ್ಯಕವಾಯಿತು ಎಂದು ತಿಳಿಸಿದೆ. ಇದನ್ನೇ. ತೈತ್ತಿರೀಯಸಂಹಿತೆಯಲ್ಲಿ " .... ....ನಿರಮಿಮೀತ ತಮಗ್ನಿರ್ದೇವತಾನ್ವಸೃಜ್ಯತ ಗಾಯತ್ರೀ ಛಂದಃ " (೭-೧-೧-೪) ಎಂದು ತಿಳಿಸಿದೆ. ಕೇವಲ ಸಮೀಪಸಂಬಂಧವೇ ಅಲ್ಲದೇ, ಗಾಯತ್ರೀ ವಾ ಅಗ್ನಿಃ ; ಗಾಯ-ತ್ರೋಽಗ್ನಿಃ ; ಅಗ್ನಿರ್ವೈ ಗಾಯತ್ರೀ ; ಗಾಯತ್ರಮಗ್ನೇಶ್ಛಂದಃ । ಇತ್ಯಾದಿ ಪ್ರಮಾಣಗಳೂ ಹೇರಳವಾಗಿವೆ (ಶ. ಬ್ರಾ. ೬-೧-೩-೧೯ ; ತೈ. ಬ್ರಾ. ೧-೧-೫-೩ ; ತೈ. ಸಂ. ೨ ೨-೫-೫ ಇತ್ಯಾದಿ) ಇಲ್ಲೆಲ್ಲಾ ತಾದಾತ್ಮ್ಯವನ್ನೇ ಹೇಳಿದೆ. ಅಲ್ಲದೇ, ಅಗ್ನಿ ಮತ್ತು ಗಾಯತ್ರೀ ಇವೆರಡೂ ಸಹ ಪ್ರಾತಃಸವನಕ್ಕೆ ಸಂಬಂಧಿಸಿದ ದೇವತೆಗಳು. ಇದನ್ನು ನಿರುಕ್ತದಲ್ಲಿ ತಿಳಿಸುತ್ತಾ,

ತಿಸ್ರ ಏವ ದೇವತಾಃ ಇತ್ಯುಕ್ತಂ ಪುರಸ್ತಾತ್ ತಾಸಾಂ ಭಕ್ತಿಸಾಹಚರ್ಯಂ ವ್ಯಾಖ್ಯಾಸ್ಯಾಮಃ ।
ಅಥೈತಾನ್ಯಗ್ನಿಭಕ್ತಾನ್ಯಯಂ ಲೋಕಃ ಪ್ರಾತಃಸವನಂ ವಸಂತೋ ಗಾಯತ್ರೀ ।

(ನಿ ೭-೮)

ಹಿಂದೆ ದೇವತೆಗಳ ವಿಷಯವನ್ನು ತಿಳಿಸುವಾಗ ಮೂರು ದೇವತೆಗಳೇ ಪ್ರಧಾನರೆಂದೂ ಉಳಿದ ದೇವತೆಗಳೆಲ್ಲಾ ಅವರ ವಿಭೂತಿವಿಶೇಷಗಳೆಂದೂ ತಿಳಿಸಿದೆ. ಅದರಲ್ಲಿ ಅಗ್ನಿಯ ಸಾಹಚರ್ಯವೂ, ಯಜ್ಞದಲ್ಲಿ ಭಾಗವುಳ್ಳವರೂ ಯಾರೆಂದರೆ-ಈ ಪೃಥ್ವಿಯು; ಪ್ರಾತಃಸವನವು, ವಸಂತವು, ಗಾಯತ್ರಿಯು ಇತ್ಯಾದಿಯೆಂದು ಅಗ್ನಿ, ಗಾಯತ್ರಿ ಮತ್ತು ಪ್ರಾತಃ-ಸವನಗಳ ಐಕ್ಯವನ್ನು ತಿಳಿಸಿದೆ. ಮೈತ್ರ್ಯುಪನಿಷತ್ತಿನಲ್ಲಿಯೂ ಸಹ—

ಅಗ್ನಿರ್ಗಾಯತ್ರಂ ತ್ರಿವೃದ್ರಥಂತರಂ ವಸಂತಃ ಪ್ರಾಣೋ ನಕ್ಷತ್ರಾಣಿ ವಸವಃ ।

(ಮೈ. ಉ. ೭-೧)

ಇತ್ಯಾದಿಯಾಗಿ ಇದೇ ವಿಷಯವನ್ನು ತಿಳಿಸಿದೆ. ಅಲ್ಲದೇ,

ಅಗ್ನೇ ಜುಷಸ್ವ ನೋ ಹವಿಃ ಪುರೋಳಾಶಂ ಜಾತವೇದಃ । ಪ್ರಾತಃಸಾವೇ ಧಿಯಾವಸೋ ॥

(ಋ. ಸಂ. ೩-೨೮-೧)

CC-0. Jangamwadi Math Collection. Digitized by eGangotri

**ಆಗ್ನೇಯಂ ಹಿ ಪ್ರಾತಃ ಸವನಂ** (ಶ. ಬ್ರಾ. ೩-೪-೯-೧೨) **ಭೂರಗ್ನಿರ್ಜ್ಯೋತಿರಗ್ನಿರಿತಿ ಪ್ರಾತಃಸವನಸ್ಯ ಚಕ್ಷುಷೀ** (ಐ. ಬ್ರಾ. ೨-೩೨). ಇತ್ಯಾದಿಯಾಗಿ ಪ್ರಾತಃಸವನಕ್ಕೂ, ಅಗ್ನಿಗೂ ಇರುವ ಸಾಕ್ಷಾತ್ಸಂಬಂಧವು ಶ್ರುತಿಪ್ರಸಿದ್ಧವಾದುದು. ಅಲ್ಲದೇ, **ವಸವಸ್ತರ್ಹ್ಯಗ್ನಿಃ। ತಸ್ಮಿನ್ ಯಸ್ಯ ತಥಾವಿಧೇ ಜುಹ್ವತಿ।ವಸುಷ್ವೇವಾಸ್ಯಾಗ್ನಿಹೋತ್ರಗ್‌ಂ ಹುತಂ ಭವತಿ ।** (ತೈ. ಬ್ರಾ. ೨-೧-೧೦-೧) ಎಂದು ಅಗ್ನಿಗೂ, ವಸುಗಳಿಗೂ ತಾದಾತ್ಮ್ಯವನ್ನು ಹೇಳಿ ಅಗ್ನಿಯಲ್ಲಿ ಅರ್ಪಿಸಿದ ಆಹುತ್ಯಾದಿಗಳು ವಸುಗಳಿಗೆ ಅರ್ಪಿಸಿದಂತೆಯೇ ಎಂದು ಪ್ರಶಂಸಿಸಿದೆ. ಆದುದರಿಂದಲೇ ಗಾಯತ್ರಿಯೊಂದಿಗೆ ಪ್ರಾತಃಸವನದಲ್ಲಿ ಭಾಗವಹಿಸುವ ದೇವತೆಯು ಕೆಲವೆಡೆಗಳಲ್ಲಿ ಅಗ್ನಿಯೆಂದೂ ಇನ್ನು ಕೆಲವೆಡೆಗಳಲ್ಲಿ ವಸುಗಳೆಂದೂ ಸಹ ನಿರ್ದೇಶಿಸಿದೆ.

**ಚತುರ್ವಿಂಶತ್ಯಕ್ಷರಾ ಗಾಯತ್ರೀ ಗಾಯತ್ರಂ ಪ್ರಾತಃಸವನಂ ತದಸ್ಯ ವಸವೋಽನ್ವಾಯತ್ತಾಃ ಪ್ರಾಣಾ ಏವ ವಸವ ಏತೇ ಹೀದಂ ಸರ್ವಂ ವಾಸಯಂತಿ ।**

(ಛಾ. ಉ. ೩-೧೬-೧)

ಪ್ರಾತಃಸವನವು ಚತುರ್ವಿಂಶತ್ಯಕ್ಷರಾತ್ಮಕವಾದ ಗಾಯತ್ರೀಮಂತ್ರದೊಡನೆ (ಛಂದಸ್ಸಿನೊಡನೆ) ಅರ್ಪಿತವಾಗುತ್ತದೆ. ವಸುಗಳೇ ಈ ಯಜ್ಞಭಾಗಾರ್ಹರು ಇತ್ಯಾದಿಯಾಗಿ ಅಗ್ನಿಗೂ, ಗಾಯತ್ರಿಗೂ ಇರತಕ್ಕ ಸಾಕ್ಷಾತ್ಸಂಬಂಧವನ್ನು ತಿಳಿಸುವ ಸಂದರ್ಭದಲ್ಲಿ ನಮಗೆ ಪ್ರಕೃತವಾದ ಅಂಶವೆಂದರೆ ಅಗ್ನಿ, ಶ್ಯೇನ ಮತ್ತು ಗಾಯತ್ರೀ ಈ ಮೂರೂ ಸಹ ತಾದಾತ್ಮ್ಯದ್ಯೋತಕವೇ ಅಥವಾ ಭಿನ್ನತತ್ತ್ವಗಳೇ ಎಂಬುದನ್ನು ಪರಿಶೀಲಿಸಬೇಕು.

**ನವಂ ನು ಸ್ತೋಮಮಗ್ನಯೇ ದಿವಃ ಶ್ಯೇನಾಯ ಜೀಜನಂ । ವಸ್ವಃ ಕುವಿದ್ವನಾತಿ ನಃ ॥**

(ಋ. ಸಂ. ೭-೧೫-೪)

ಎಂಬಲ್ಲಿ ಅಗ್ನಿಯನ್ನು ದ್ಯುಲೋಕದ ಶ್ಯೇನವೆಂದು ನಿರ್ದೇಶಿಸಿದೆ. ಇದೇ ವಾಕ್ಯವನ್ನು ತೈತ್ತಿರೀಯಬ್ರಾಹ್ಮಣದಲ್ಲೂ ಉದಾಹರಿಸಿದೆ. (ತೈ. ಬ್ರಾ. ೨-೪-೮-೧) **ದಿವಃ ಶ್ಯೇನಃ** ಎಂಬ ಪದಗಳು ಋಕ್ಸಂಹಿತೆಯಲ್ಲಿ ಮೇಲೆ ಉದಾಹೃತವಾದ ಮಂತ್ರವಲ್ಲದೇ, ೭-೫೬-೩; ಮತ್ತು ೧೦-೯೨-೬ ಎಂಬ ಎರಡು ಋಕ್ಕುಗಳಲ್ಲಿ ಪ್ರಯುಕ್ತವಾಗಿವೆ ಆದರೆ ಆ ಸಂದರ್ಭಗಳಲ್ಲಿ ಈ ಶ್ಯೇನಪದವು ಮರುದ್ದೇವತೆಗಳ ಸ್ವರೂಪವನ್ನು ತಿಳಿಸುತ್ತದೆ. ಆದರೆ, ಅಗ್ನಿಯನ್ನು ವೈದ್ಯುತನೆಂದು ಪರಿಗಣಿಸಿದರೆ ಆಗ ಈ ಶ್ಯೇನಪದವು ಅಗ್ನಿಗೂ ಅನ್ವಯಿಸಬಹುದು. **ವೈಶ್ವಾನರೋ ಯದಿ ವಾ ವೈದ್ಯುತೋಽಸಿ** (ತೈ. ಬ್ರಾ. ೩-೧೦-೫) ಇತ್ಯಾದಿ ವಾಕ್ಯಗಳ ಆಧಾರದಮೇಲೆ ಈ ನಿಷ್ಕರ್ಷವನ್ನು ಮಾಡಬಹುದು. **ಗರ್ಭೇ ಮಾತುಃ ಪಿತುಷ್ಪಿತಾ ವಿದಿದ್ಯುತಾನೋ ಅಕ್ಷರೇ**(ಋ ಸಂ. ೬-೧೬-೩೫) ಎಂದು ಋಕ್ಸಂಹಿತೆಯಲ್ಲಿಯೂ ಸಹ ಈ ನಿಷ್ಕರ್ಷಕ್ಕೆ ಸಮರ್ಥನೆಯು ದೊರಕುತ್ತದೆ. ಅಗ್ನ್ಯುತ್ಪನ್ನವಾದ ಅಥವಾ ಅಗ್ನಿರೂಪವನ್ನು ಹೊಂದಿರುವ ಗಾಯತ್ರಿಯೂ ಸಹ **ವಿದಿದ್ಯುತತೀ** ಎಂಬ ವಿಶೇಷಣದಿಂದ ವರ್ಣಿತವಾಗಿದೆ. (ಪಂಚವಿಂಶಬ್ರಾಹ್ಮಣ ೧೨-೧-೨) ಈ ಬ್ರಾಹ್ಮಣವಾಕ್ಯವನ್ನು ಭಾಷ್ಯಕಾರರು ವಿವರಿಸುತ್ತಾ, **ಗಾಯತ್ರೀ ಚ ಅಗ್ನಿನಾ ಸಹೋತ್ಪನ್ನೇತೇಜೋರೂಪತ್ವಾತ್ ದೀಪ್ಯಮಾನಾ ಭವತಿ । ಅತಃ .... .... ಗಾಯತ್ರೀ ವಿನೋಪಸ್ಥಾಸ್ಯತೇ ॥** ಗಾಯತ್ರಿಯೂ ಸಹ ಅಗ್ನಿಸಹೋತ್ಪನ್ನವಾದುದರಿಂದ ವಿದಿದ್ಯುತತೀ ಎಂಬ ವಿಶೇಷಣವು ಅಗ್ನಿಗೆ ಅನ್ವಿತವಾಗುವಂತೆಯೇ ಗಾಯತ್ರಿಗೂ ಅನ್ವಿತವಾಗುತ್ತದೆ. **ತೇಜೋ ಗಾಯತ್ರೀ** (ತೈ. ಬ್ರಾ. ೩-೮-೪) ಎಂಬ ವಾಕ್ಯದಲ್ಲಿ ವರ್ಣಿತವಾಗಿರುವಂತೆ ಅಗ್ನಿಯು ತೇಜೋರೂಪವಾಗಿರುವಂತೆ ಗಾಯತ್ರಿಯೂ ತೇಜೋರೂಪವುಳ್ಳದ್ದಾಗಿರುತ್ತದೆ. ಋ. ಸಂ. ೬-೩-೮ ರಲ್ಲೂ ಮತ್ತು ೧೦-೯೫-೧೦ ರಲ್ಲೂ ಸಹ **ದವಿದ್ಯೋತ್** ಎಂಬ ಪದವು ವಿದ್ಯುತ್ ಶಬ್ದದೊಡನೆ

CC-0. Jangamwadi Math Collection. Digitized by eGangotri

ಸಮನ್ವಯವನ್ನು ಹೊಂದುತ್ತದೆ. ತೈತ್ತಿರೀಯಬ್ರಾಹ್ಮಣದಲ್ಲಿ ದಿವಃಶ್ಯೇನೇಷ್ಟಿ ಪ್ರಕರಣದಲ್ಲಿ (೩-೧೨-೧,೨) **ತುಭ್ಯಂ ತಾ ಅಂಗಿರಸ್ತಮ** (ಋ. ಸಂ. ೮-೪೩-೧೮) ಎಂಬ ಮಂತ್ರವು ಅಗ್ನಿಯನ್ನೇ ನಿರ್ದೇಶಿಸಿದೆಯೆಂದು ಸ್ಪಷ್ಟವಾಗಿದೆ. ಅಲ್ಲದೇ ಅದೇ ಪ್ರಕರಣದಲ್ಲಿ **ಅಶ್ಯಾಮ ತಂ ಕಾಮಮಗ್ನೇ** (ಋ. ಸಂ. ೬-೫.೭) ಎಂಬ ಮಂತ್ರವೂ ಸಹ ಅಗ್ನಿಯನ್ನೇ ಉದ್ದೇಶಿಸಿದೆ. ಆದುದರಿಂದ **ದಿವಃಶ್ಯೇನ** ಎಂಬ ವಿಶೇಷಣವು ಅಗ್ನಿಯ ವರ್ಣನವೇ ಆಗಿದೆಯೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೇ, ಸುಪರ್ಣಪದವೂ ಸಹ ಶ್ಯೇನವನ್ನು ನಿರ್ದೇಶಿಸುವಂತೆ ಅಗ್ನಿಯನ್ನೂ ನಿರ್ದೇಶಿಸುವ ಸನ್ನಿವೇಶವಿರುವುದೇ ? ಇದ್ದಲ್ಲಿ ಈ ಪದದ ಅರ್ಥವೇನು ಎಂಬುದನ್ನೂ ಪರಿಶೀಲಿಸಬೇಕು. ಇದೇ ಸುಪರ್ಣಪದವು ಕೇವಲ ಪಕ್ಷಿಯ ಪರ್ಯಾಯವಾದರೂ ಸಹ ಅನೇಕ ಕಡೆಗಳಲ್ಲಿ ಇದಕ್ಕೆ ಗೂಢಾರ್ಥವಿರುತ್ತದೆ. ಉದಾಹರಣೆಗೆ—

**ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ ।**

(ಋ. ಸಂ ೧೦-೧೧೪ ೫)

ಎಂಬಲ್ಲಿ ಪರಮಾತ್ಮನಿಗೆ ವಿಶೇಷಣವಾಗಿದೆಯೆಂಬುದು ಸಾಯಣರ ಮತ. **ಸುಪರ್ಣಂ ಸುಪತನಂ ಏಕಂ ಸಂತಂ ಪರಮಾತ್ಮಾನಂ** ಎಂದು ವಿವರಿಸಿದ್ದಾರೆ. ಈ ತತ್ತ್ವಾರ್ಥವನ್ನು ಮುಂದೆ ಪರಿಶೀಲಿಸಬೇಕಾಗುತ್ತದೆ. ಪ್ರಕೃತದಲ್ಲಿ ಸುಪರ್ಣಪದವು ಆದಿತ್ಯ ಅಥವಾ ಅಗ್ನಿಪರವಾಗಿ ಉಪಯುಕ್ತವಾಗಿರುವ ಸಂದರ್ಭದಲ್ಲಿ ರಶ್ಮಿಗಳೆಂದರ್ಥಮಾಡಿದೆ

**ಯತ್ರಾ ಸುಪರ್ಣಾ ಅಮೃತಸ್ಯ ಭಾಗಮನಿಮೇಷಂ ವಿದಥಾಭಿಸ್ವರಂತಿ ।**

(೧-೧೬೪-೨೧)

**ಯಸ್ಮಿನ್ವೃಕ್ಷೇ ಮಧ್ವದಃ ಸುಪರ್ಣಾ ನಿವಿಶಂತೇ ಸುವತೇ ಚಾಧಿವಿಶ್ವೇ ॥**

(೧-೧೬೪-೨೨)

ಇತ್ಯಾದಿ ಸ್ಥಳಗಳಲ್ಲಿ ಭೌತಿಕವಾದ ಅರ್ಥವನ್ನು ಹೇಳಿದಾಗ ಆದಿತ್ಯರಶ್ಮಿಗಳೆಂದು ಹೇಳಿದೆ ಸುಪರ್ಣಪದವು ಅಗ್ನಿ ಅಥವಾ ಆದಿತ್ಯನಿಗೆ ಪರ್ಯಾಯಪದವಾಗಿಯೂ ಪ್ರಯುಕ್ತವಾಗಿರುತ್ತದೆ **ದಿವ್ಯಂ ಸುಪರ್ಣಂ ವಾಯಸಂ ಬೃಹಂತಮಪಾಂ ಗರ್ಭಂ ದರ್ಶತಮೋಷಧೀನಾಂ ।** (೧-೧೬೪-೫೨) ಎಂಬ ಈ ವರ್ಣನವು ಅಂತರಿಕ್ಷಸ್ಥನಾದ ಅಗ್ನಿಯನ್ನು ನಿರ್ದೇಶಿಸಿರುತ್ತದೆ. **ದಿವಃ ಶ್ಯೇನಃ, ದಿವ್ಯಂ ಸುಪರ್ಣಂ** ಎಂಬ ಸ್ಥಳಗಳಲ್ಲಿ ಅಗ್ನಿಗೂ, ಆದಿತ್ಯನಿಗೂ ತಾದಾತ್ಮ್ಯವನ್ನೇ ಹೇಳಿದೆ. ಹೀಗೆ ಶ್ಯೇನ, ಸುಪರ್ಣ, ಅಗ್ನಿ, ಗಾಯತ್ರೀ ಇವೆಲ್ಲವೂ ಸಹ ಒಂದೇ ತತ್ತ್ವದ ಪರ್ಯಾಯಪದಗಳೆಂದು ತಿಳಿಯುತ್ತದೆ. ಆದರೆ ಆಯಾ ಸಂದರ್ಭಕ್ಕನುಗುಣವಾಗಿ ಪಾರಿಭಾಷಿಕವಾದ ಅರ್ಥವನ್ನು ವಿವರಿಸಬೇಕಾಗುತ್ತದೆ.



## 9 ಸೋಮವೇ ಆದಿತ್ಯನ ತೇಜಸ್ಸು. ಗಾಯತ್ರಿಯೇ ಇದನ್ನರಿಯಲು ಮುಖ್ಯಸಾಧನ.

ಪ್ರಕೃತದಲ್ಲಿ ಶ್ಯೇನಪದಕ್ಕೆ ಅಂತರಿಕ್ಷಸ್ಥನಾದ ಅಗ್ನಿಯೆಂದಾಗಲಿ ಅಥವಾ ಆದಿತ್ಯನೆಂದಾಗಲಿ ಅರ್ಥಮಾಡಿದರೆ ಸೋಮಶಬ್ದಕ್ಕೆ ಆ ಆದಿತ್ಯನ ರೇತಸ್ಸೆಂದರ್ಥವಾಗುತ್ತದೆ. ಎಂದರೆ ಆದಿತ್ಯರೂಪದಲ್ಲಿರುವ ಪರಬ್ರಹ್ಮನಿಗೂ ಸೋಮವೇ ರೇತೋರೂಪದಲ್ಲಿರುತ್ತದೆ. ಈ ಸೋಮವೇ ಸಕಲಭೂತಗಳ ಸೃಷ್ಟಿಗೂ ಉತ್ಪಾದಕವಾದ ಬೀಜವು.

CC-0. Jangamwadi Math Collection. Digitized by eGangotri

ಅಥ ಯತ್ಕಿಂಚೇದಮಾರ್ದ್ರಂ ತದ್ರೇತಸೋಽಸೃಜತ ತದು ಸೋಮ ಏತಾವದ್ವಾ ಇದಂ ಸರ್ವ-
ಮನ್ನಂ ಚೈವಾನ್ನಾದಶ್ಚ ಸೋಮ ಏವಾನ್ನಮಗ್ನಿರನ್ನಾದಃ ।

(ಬೃ. ಉ. ೧-೪-೬)

ಅದ್ವಿತೀಯನಾದ ಪರಬ್ರಹ್ಮನು ತನ್ನ ರೇತಸ್ಸಿನಿಂದ ವಿಶ್ವದಲ್ಲಿ ಆರ್ದ್ರವಾಗಿರುವ ಸಕಲವಸ್ತುಗಳನ್ನೂ ಸೃಷ್ಟಿಸಿದನು. ಆ ರೇತಸ್ಸೇ ಸೋಮನು. ಈ ಸೋಮವು ಅಗ್ನಿಯಲ್ಲಿ ಅರ್ಪಿತವಾಗಿ ಎರಡೂ ಪರಸ್ಪರನಾದ ಭಕ್ಷ್ಯಭಕ್ಷಕಗಳಾಗುತ್ತವೆ ಇದನ್ನೇ ಮೈತ್ರ್ಯುಪನಿಷತ್ತಿನಲ್ಲಿ ವಿವರಿಸುತ್ತಾ,

ರವಿಮಧ್ಯೇ ಸ್ಥಿತಃ ಸೋಮಃ ಸೋಮಮಧ್ಯೇ ಹುತಾಶನಃ ।

(ಮೈ. ಉ. ೬-೩೮)

ಸೋಮನು ಆದಿತ್ಯಮಂಡಲದ ಮಧ್ಯವರ್ತಿಯಾಗಿಯೂ, ಅಗ್ನಿಯು ಸೋಮದ ಮಧ್ಯವರ್ತಿಯಾಗಿಯೂ ಇದ್ದಾರೆಂದು ತಿಳಿಸಿದೆ. ಸಾಧಾರಣವಾಗಿ ಆದಿತ್ಯನಿಗೂ, ಸೋಮನಿಗೂ ಇರುವ ಸಂಬಂಧವನ್ನು ಋಕ್ಸಂಹಿತೆಯಲ್ಲಿ ಅನೇಕಕಡೆಗಳಲ್ಲಿ ತಿಳಿಸಿದೆ. ಉದಾಹರಣೆಗೆ—

ಮಹತ್ತತ್ಸೋಮೋ ಮಹಿಷಶ್ಚಕಾರಾಪಾಂ ಯದ್ಗರ್ಭೋಽವೃಣೀತ ದೇವಾನ್ ।
ಅದಧಾದಿಂದ್ರೇ ಪವಮಾನ ಓಜೋಽಜನಯತ್ಸೂರ್ಯೇ ಜ್ಯೋತಿರಿಂದುಃ ॥

(ಋ. ಸಂ. ೯-೯೭-೪೧)

ಆದಿತ್ಯಸ್ಥವಾದ ಉದಕಗಳ ಗರ್ಭಭೂತವಾದ ಸೋಮವು ದೇವತೆಗಳಿಗೂ ತೃಪ್ತಿಯನ್ನುಂಟುಮಾಡಿತು. ವೀರ್ಯರೂಪದಲ್ಲಿದ್ದು ಆದಿತ್ಯನಲ್ಲಿ ವಿಶ್ವಜ್ಯೋತಿಯನ್ನು ಸೃಷ್ಟಿಸಿತು ಎಂದಿದೆ. ಮತ್ತು—

ತ್ವಂ ಸಮುದ್ರೋ ಅಸಿ ವಿಶ್ವವಿತ್ಕವೇ ತವೇಮಾಃ ಪಂಚ ಪ್ರದಿಶೋ ವಿಧರ್ಮಣಿ ।
ತ್ವಂ ದ್ಯಾಂ ಚ ಪೃಥಿವೀಂ ಚಾತಿ ಜಭ್ರಿಷೇ ತವ ಜ್ಯೋತೀಂಷಿ ಪವಮಾನ ಸೂರ್ಯಃ ॥

(ಋ. ಸಂ. ೯-೮೬-೨೯)

ಎಂಬಲ್ಲಿ ಸೋಮನೇ ಅಂತರಿಕ್ಷಸ್ಥವಾದ ಸಮುದ್ರವೆಂದೂ, ಸಕಲ ಜ್ಯೋತಿಗೂ ಆಧಾರವೆಂದೂ, ಆದಿತ್ಯನೇ ಸೋಮನ ಪ್ರಭಾವದಿಂದ ಬೆಳಗುತ್ತಿರುವನೆಂದೂ ತಿಳಿಸಿದೆ. ಇಲ್ಲಿ ಸೋಮವು ಯಾವ ತತ್ತ್ವವನ್ನು ಪ್ರತಿಬಿಂಬಿಸುತ್ತದೆ ಎಂಬುದನ್ನು ವಿವರಿಸುತ್ತಾ Eggling ಎಂಬ ಪಂಡಿತನು ಈರೀತಿ ತಿಳಿಸಿದ್ದಾನೆ.

"The poet of ೯-೮೬-೨೯ while saying 'Thou art the heavenly ocean (Samudra), thine are the lights (ಜ್ಯೋತೀಂಷಿ) O Pavamana, thine the Sun' seems to conceive Soma, as the bright ether, the azure 'Sea of light' generally".

[ Sacred Books of the East. Vol. XXVI. p. XV. ]

ಇತ್ಯಾದಿಯಾಗಿ ಶ್ರುತಿವಾಕ್ಯಗಳ ಆಧಾರದೊಡನೆ ಸೋಮವೇ ಆದಿತ್ಯನ ತೇಜಃಸತ್ತ್ವವೆಂದು ಅಭಿಪ್ರಾಯಪಡುತ್ತಾರೆ. ಇಂತಹ ತೇಜಸ್ಸಿನ ಸ್ವರೂಪವು ಗಾಯತ್ರಿಯ ಸಹಾಯದಿಂದ ಮಾತ್ರ ಲಭ್ಯವೆಂಬುದು ತಾತ್ಪರ್ಯ.

CC-0. Jangamwadi Math Collection. Digitized by eGangotri

ಎರಡನೆಯದಾಗಿ, **ಸೋಮೋ ವೈ ರಾಜಾ ಗಂಧರ್ವೇಷ್ವಾಸೀತ್.... ....ತಯಾ ಮಹಾನಗ್ನ್ಯಾ ಭೂತಯಾ ಸೋಮಂ ರಾಜಾನಮಕ್ರೀಣನ್** (ಐ. ಬ್ರಾ. ೧–೨೭) ಎಂದು ಐತರೇಯಬ್ರಾಹ್ಮಣದಿಂದ ಉದಾಹೃತವಾದ ಕಥೆಯಲ್ಲಿ ಗಾಯತ್ರಿಯ ಸ್ಥಾನವೇನು ? ಇಲ್ಲಿ ಸೋಮಾಹರಣವು ವಾಗ್ರೂಪಿಯಾದ ಸ್ತ್ರೀಯಿಂದ ನಡೆಯಿತೇ ಹೊರತು ಗಾಯತ್ರಿಗೂ ಸೋಮಕ್ಕೂ ಸಂಬಂಧವಿಲ್ಲ ಎಂಬ ಆಶಂಕೆಬರಲು ಕಾರಣವಿಲ್ಲ. ಇಲ್ಲಿ ಗಂಧರ್ವಶಬ್ದಕ್ಕೆ ಆದಿತ್ಯನೆಂದೂ ಸೋಮಶಬ್ದಕ್ಕೆ ಆದಿತ್ಯನ ತೇಜಸ್ಸೆಂದೂ ವಾಕ್‌ಶಬ್ದಕ್ಕೆ ವಾಗ್ರೂಪವಾದ ಗಾಯತ್ರಿಯೆಂದೂ ಅರ್ಥ ಮಾಡಬೇಕು. ಇದಕ್ಕೆ ಆಧಾರವೇನು ಎಂದರೆ ಶ್ರುತಿ ವಾಕ್ಯಗಳೇ ಆಧಾರ.

———

### 10 ಆದಿತ್ಯನ ತೇಜೋರೂಪವಾದ ಸೋಮವನ್ನು ರಕ್ಷಿಸಿದ ಗಂಧರ್ವನೇ ಹಿರಣ್ಯಗರ್ಭನು.

**ಗಂಧರ್ವ ಇತ್ಥಾ ಪದಮಸ್ಯ ರಕ್ಷತಿ ಪಾತಿ ದೇವಾನಾಂ ಜನಿಮಾನ್ಯದ್ಭುತಃ ।**

(ಋ. ಸಂ ೯-೮೩-೪)

**ಗಂಧರ್ವಃ ಉದಕಾನಾಂ ಧಾರಕಃ ಆದಿತ್ಯಃ ಸೋಮಸ್ಯ ದ್ಯುಸಂಬಂಧಿಸ್ಥಾನಂ ರಕ್ಷತಿ ।** ಉದಕಧಾರಕನಾದ ಆದಿತ್ಯನು ಸೋಮದ ನಿವಾಸಸ್ಥಾನವನ್ನು ರಕ್ಷಿಸುತ್ತಾನೆ. ಈ ಸೋಮವು ದೇವತೆಗಳನ್ನು ರಕ್ಷಿಸುತ್ತದೆಯೆಂದು ಆದಿತ್ಯನ ಸ್ತುತಿಯಿದೆ. ಇದೇ ಗಂದರ್ವನು ಹಿರಣ್ಯಗರ್ಭನೆಂದೂ ನಿರ್ದೇಶಿಸಲ್ಪಟ್ಟಿದ್ದಾನೆ. **ಪತಂಗೋ ವಾಚಂ ಮನಸಾ ಬಿಭರ್ತಿ ತಾಂ ಗಂಧರ್ವೋಽವದದ್ಗರ್ಭೇ ಅಂತಃ** (೧೦-೧೭೭-೨) ಎಂಬ ಈ ವಾಕ್ಯಕ್ಕೆ ಸಾಯಣರು **ಗರ್ಭೇ ಹಿರಣ್ಮಯೇ ಬ್ರಹ್ಮಾಂಡೇಽಂತರ್ವರ್ತಮಾನಃ ಗಂಧರ್ವಃ ಹಿರಣ್ಯಗರ್ಭಃ ತಾಂ ವಾಚಮವದತ್ ।** ಬ್ರಹ್ಮಾಂಡಾಂತರ್ಗತನಾದ ಹಿರಣ್ಯಗರ್ಭರೂಪನಾದ ಗಂಧರ್ವನು ಪ್ರಥಮತಃ ತನ್ನಲ್ಲಿ ನಿಹಿತವಾದ ವಾಕ್ಕನ್ನುಚ್ಚರಿಸಿದನು. ಅನಂತರ ಪ್ರಾಂತದರ್ಶಿಗಳಾದ ದೇವತೆಗಳು ಆ ವಾಕ್ಕನ್ನು ಸತ್ಯಸ್ಥಾನದಲ್ಲಿರಿಸಿದರು ಎಂದು ಆದಿತ್ಯಸ್ವರೂಪನಾದ ಪರಮಾತ್ಮನಿಗೂ ವಾಕ್ಕಿಗೂ ಇರುವ ಸಂಬಂಧವನ್ನು ವರ್ಣಿಸಿದೆ. ಶತಪಥಬ್ರಾಹ್ಮಣದಲ್ಲಿ ಉಕ್ತವಾಗಿರುವ ಸೋಮಾಹರಣದ ಕಥೆಯು ಈ ಆದಿತ್ಯಾಂತರ್ಗತವಾಗಿರುವ ಪರಮಪುರುಷನಿಗೂ ವಾಕ್ತತ್ತ್ವಕ್ಕೂ ಇರುವ ಸಂಬಂಧವನ್ನೂ ಅನಂತರ ಆದಿತ್ಯತೇಜೋರೂಪಿಯಾದ ಸೋಮವು ದೇವಪಾಲಕವಾದುದನ್ನೂ ತಿಳಿಸುತ್ತದೆ.

**ದಿವಿ ವೈ ಸೋಮ ಆಸೀತ್ ।....ಗಂಧರ್ವೋ ವಿಶ್ವಾವಸುಃ ಪರ್ಯಮುಷ್ಣಾತ್ ।....ಸೋಮೋ ವೈ ಭ್ರಾಟ್ ।**

(ಶ. ಬ್ರಾ. ೩-೨-೪-೪)

ಎಂಬ ವಾಕ್ಯಗಳಿಂದ ಶತಪಥಬ್ರಾಹ್ಮಣದಲ್ಲಿ ಹಿಂದೆ ಐತರೇಯಬ್ರಾಹ್ಮಣದಿಂದ ಉದಾಹೃತವಾದ ಕಥೆಯನ್ನು ಹೇಳಿದೆ. ಇಲ್ಲಿಯೂ ವಾಗ್ರೂಪಿಯಾದ ಗಾಯತ್ರಿಯು ಸೋಮಾಹರಣವನ್ನು ಮಾಡಿದ ಕ್ರಮವೂ ತೇಜೋರೂಪಿಯಾದ ಈ ಸೋಮವು ಆದಿತ್ಯರೂಪಿಯಾದ ಗಂಧರ್ವನಲ್ಲಿ ಅಂತರ್ಗತವಾಗಿದ್ದ ಕ್ರಮವೂ ಅನಂತರ ವಾಗ್ದೇವಿಯನ್ನು ಉಪಾಸನೆಮಾಡಿದ ಪುರುಷನಿಗೆ ಈ ತೇಜಸ್ಸು ಲಭಿಸುವುದೆಂಬುದನ್ನೂ ತಿಳಿಸಿದೆ. **ಸೋಮೋ ವೈ ಭ್ರಾಟ್** ಇತ್ಯಾದಿ ವಾಕ್ಯಗಳಿಂದ ಸೋಮನೇ ತೇಜಸ್ಸೆಂದು ವರ್ಣಿತವಾಗಿದೆ. ಆದಿತ್ಯರೂಪಿಯಾದ ಗಂಧರ್ವನಿಂದ ಸೋಮಾತ್ಮಕವಾದ ತೇಜಸ್ಸು ವಾಗಾತ್ಮಕವಾದ ಗಾಯತ್ರಿಯ ಮೂಲಕ ಈ ಗಾಯತ್ರಿಯು ದ್ವಾರಾ ಉಪಾಸನೆಯನ್ನು ಮಾಡತಕ್ಕ ಪುರುಷನಿಗೆ ಲಭ್ಯವಾಗುವುದೆಂದರ್ಥ. ಹೀಗೆ ಶ್ರುತಿವಾಕ್ಯಪ್ರಮಾಣಗಳೊಡನೆ **ಸುಪರ್ಣ, ಸೋಮ, ಗಂಧರ್ವ,**

CC-0. Jangamwadi Math Collection. Digitized by eGangotri

ವಾಕ್ ಇತ್ಯಾದಿ ಪದಗಳಿಗೆ ಹೇಳಿರುವ ತಾತ್ಪರ್ಯವು ಅಸಾಧುವಲ್ಲವೆಂಬುದನ್ನು ತಿಳಿಸಲು ಸಾಯಣಭಾಷ್ಯದೊಡನೆ ಉದಾಹರಿಸಿ ಮೇಲಿನ ವಿವರಣೆಯು ಸಮಂಜಸವಾಗಿದೆಯೆಂದೂ ತೋರಿಸಬಹುದು.

**ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ ವಸ್ತೇ ।**
**ತಸ್ಯಾಂ ಸುಪರ್ಣಾ ವೃಷಣಾ ನಿ ಷೇದತುರ್ಯತ್ರ ದೇವಾ ದಧಿರೇ ಭಾಗಧೇಯಂ ॥**

(ಋ ಸಂ. ೧೦-೧೧೪-೩)

ಇಲ್ಲಿಯೂ ಇದೇ ಸೂಕ್ತದ ಮುಂದಿನ ಮಂತ್ರಗಳಲ್ಲಿಯೂ ಎರಡುವಿಧವಾದ ತಾತ್ಪರ್ಯವನ್ನು ಸಾಯಣರು ಹೇಳಿರುತ್ತಾರೆ. ಒಂದು ಭೌತಿಕತತ್ತ್ವವನ್ನು ತಿಳಿಸುವ ವಿವರಣೆ, ಇನ್ನೊಂದು ಆಧ್ಯಾತ್ಮಿಕತತ್ತ್ವವನ್ನು ವಿವರಿಸತಕ್ಕದ್ದು. ಉದಾಹೃತವಾಗಿರುವ ಈ ಮಂತ್ರದಲ್ಲಿ ವಾಕ್ಕಿನಲ್ಲಿ ಸುಪರ್ಣಗಳು ಪ್ರತಿಷ್ಠಾಪಿತವಾಗುವುವು ಎಂದರ್ಥ. ನಾಮ, ಆಖ್ಯಾತ, ಉಪಸರ್ಗ ಮತ್ತು ನಿಪಾತ ಎಂಬ ನಾಲ್ಕು ಕಪರ್ದಾತ್ಮಕವಾದವಳೂ, ನಿತ್ಯತರುಣೀರೂಪವುಳ್ಳವಳೂ, ದೇದೀಪ್ಯಮಾನವಾದ ಉಪನಿಷದಾದಿಸ್ವರೂಪಳೂ ಆದ ಸ್ತ್ರೀಯು ಜ್ಞಾನರೂಪವಾದ ವಸ್ತ್ರಗಳಿಂದ ಅಲಂಕರಿಸಿಕೊಳ್ಳುತ್ತಾಳೆ. ಅಂತಹ ಸುಂದರ ಸ್ತ್ರೀಯಲ್ಲಿ ಜೀವಾತ್ಮಪರಮಾತ್ಮರು ಸ್ಥಾಪಿತರಾಗುತ್ತಾರೆ. ಸುಪರ್ಣಾತ್ಮಕವೆಂದೂ, ಗಂಧರ್ವಾತ್ಮಕವೆಂದೂ ವರ್ಣಿತವಾಗಿರುವ ಜ್ಯೋತಿಸ್ತತ್ತ್ವವನ್ನು ಸಾಕ್ಷಾತ್ಕರಿಸಲು ವಾಗ್ರೂಪಿಯಾದ ಸ್ತ್ರೀಯಿಂದ ಮಾತ್ರ ಸಾಧ್ಯವೆಂದರ್ಥ. ಅದನ್ನೇ **ಯೋಷಿತ್ಕಾಮಾ ವೈ ಗಂಧರ್ವಾಃ** ಇತ್ಯಾದಿಯಾಗಿ ವರ್ಣಿಸಿದೆಯೆಂದು ಸಾಯಣರು ಅಭಿಪ್ರಾಯಪಡುತ್ತಾರೆ. (ಶ. ಬ್ರಾಹ್ಮಣದಭಾಷ್ಯ. ೩-೨-೪-೫)-

**ಸುಪರ್ಣಂ ವಿಪ್ರಾಃ ಕವಯೋ ವಚೋಭಿರೇಕಂ ಸಂತಂ ಬಹುಧಾ ಕಲ್ಪಯಂತಿ ।**
**ಛಂದಾಂಸಿ ಚ ದಧತೋ ಅಧ್ವರೇಷು ಗ್ರಹಾನ್ತ್ಸೋಮಸ್ಯ ಮಿಮತೇ ದ್ವಾದಶ ॥**

(ಋ. ಸಂ. ೧೦-೧೧೪-೫)

ಇತ್ಯಾದಿ ಋಕ್ಕುಗಳಲ್ಲಿಯೂ ಸಹ ಮೇಲಿನ ಅಭಿಪ್ರಾಯವೇ ವಿವರಿಸಲ್ಪಟ್ಟಿದೆ. ಸುಪರ್ಣರೂಪದ ಪರಮಾತ್ಮ, ಗಾಯತ್ರ್ಯಾದಿ ಛಂದಸ್ಸುಗಳು ಮತ್ತು ಪೂಜಾಸಾಧಕವಾದ ಸೋಮ, ಇವುಗಳ ಸಂಬಂಧವನ್ನು ತಿಳಿಸಿ ಗಾಯತ್ರ್ಯಾದಿ ಛಂದಸ್ಸುಗಳ ಸಹಾಯದಿಂದಲೂ ಸೋಮರೂಪವಾದ ಸಾಧನದಿಂದಲೂ ಪರಮಾತ್ಮನ ಸ್ವರೂಪವನ್ನು ಅರಿಯಬಹುದೆಂದು ತಾತ್ಪರ್ಯ. ಇಂತಹ ಸನ್ನಿವೇಶಗಳಲ್ಲೆಲ್ಲಾ ಜ್ಞಾನಕ್ಕೆ ಸಾಕ್ಷಾತ್ಸಾಧನವಾಗಿಯೂ, ಅಥವಾ ಜ್ಞಾನಸಾಧನವಾದ ಕರ್ಮಕ್ಕೆ ಪೋಷಕವಾಗಿಯೂ ವಿಶಿಷ್ಟ ಶಕ್ತಿಯನ್ನು ಪಡೆದಿರತಕ್ಕ ಗಾಯತ್ರಿಯ ಸ್ತುತಿಯಿದೆ.

ಪರಬ್ರಹ್ಮಸಾಕ್ಷಾತ್ಕಾರಕ್ಕೆ ಗಾಯತ್ರಿಯು ಅತಿ ಪ್ರಧಾನವಾದ ಸಾಧನವೆಂದೂ ಗಾಯತ್ರಿಯ ಮಾಹಾತ್ಮ್ಯವು ಮೂರು ಅಂಶಗಳಿಂದ ತಿಳಿಯುವುದೆಂದೂ ಶಂಕರಭಾಷ್ಯದಲ್ಲಿ ಆಚಾರ್ಯರು ಹೇಳಿರುವುದನ್ನು ಹಿಂದೆ ತಿಳಿಸಿದೆ. ಅವುಗಳಲ್ಲಿ ಮೊದಲನೆಯದಾದ ಸೋಮಾಹರಣದ ಕ್ರಮವನ್ನೂ ಅದರ ಪ್ರಯೋಜನವನ್ನೂ ಗಾಯತ್ರಿಯು ಸೋಮವನ್ನಪಹರಿಸಿತು ಎಂಬುದರ ತಾತ್ಪರ್ಯವನ್ನೂ ಶ್ರುತಿವಾಕ್ಯಗಳ ಪ್ರಮಾಣಗಳೊಡನೆ ತಿಳಿಸಿದೆ. ಶಂಕರಾಚಾರ್ಯರು ಹೇಳಿರುವ ಅಂಶಗಳಲ್ಲಿ ಎರಡನೆಯದನ್ನು ಪ್ರಕೃತದಲ್ಲಿ ಪರಿಶೀಲಿಸಬೇಕು.

———

CC-0. Jangamwadi Math Collection. Digitized by eGangotri

॥ ಛಂದಸ್ಸುಗಳಲ್ಲಿ ಗಾಯತ್ರಿಯ ವೈಶಿಷ್ಟ್ಯ ॥

ಇತಶ್ಛಂದೋಽಕ್ಷರಾಹರಣೇನ.... ಅನೇಕೇಷು ಛಂದಸ್ಸು ಗಾಯತ್ರ್ಯಾ ಏವ ಬ್ರಹ್ಮಜ್ಞಾನದ್ವಾರತಯೋಪಾದಾನಂ ಪ್ರಾಧಾನ್ಯಂ । ಇತರ ಛಂದಸ್ಸುಗಳನ್ನೆಲ್ಲಾ ವ್ಯಾಪಿಸಿ ಎಲ್ಲವನ್ನೂ ತನ್ನಲ್ಲಿಯೇ ಐಕ್ಯಮಾಡಿಕೊಂಡಿರುವುದರಿಂದ ಗಾಯತ್ರಿಗೆ ಪ್ರಾಧಾನ್ಯವು ಎಂಬ ಸ್ತುತಿಯು ಶ್ರುತಿವಾಕ್ಯಗಳಲ್ಲಿಯೇ ಪ್ರಸಿದ್ಧವಾಗಿದೆ.

**ತದ್ವೈ ಕನಿಷ್ಠಂ ಛಂದಃ ಸದ್ಗಾಯತ್ರೀ ಪ್ರಥಮಾ ಛಂದಸಾಂ ಯುಜ್ಯತೇ ತದು ತದ್ವಿರ್ಯೇಣೈವ ಯಚ್ಛ್ಯೇನೋ ಭೂತ್ವಾ ದಿವಃ ಸೋಮಮಾಭರತ್ ।**

(ಶ. ಬ್ರಾ. ೧-೬-೨-೧೦)

ಛಂದಸ್ಸುಗಳಲ್ಲೆಲ್ಲಾ ಆಕಾರದಲ್ಲಿ ಅತ್ಯಂತ ಚಿಕ್ಕದಾದರೂ ಸಹ ಗಾಯತ್ರಿಯು ಎಲ್ಲಾ ಛಂದಸ್ಸುಗಳಿಗೂ ಅಗ್ರಸ್ಥಾನವನ್ನು ಪಡೆದಿರುತ್ತದೆ. ಅದು ಸ್ವಶಕ್ತಿಯಿಂದ ಶ್ಯೇನರೂಪವಾಗಿ ಪರಿವರ್ತಿತವಾಗಿ ಸೋಮವನ್ನು ತಂದಿತು ಎಂಬ ವಿವರಣೆಯನ್ನು ಮೇಲೆ ಹೇಳಿದೆ. ಅಲ್ಲದೇ, ತ್ರ್ಯಕ್ಷರಾತ್ಮಕವಾಗಿ ಉಳಿದ ತ್ರಿಷ್ಟುಪ್ಪಿಗೆ ತನ್ನ ಅಷ್ಟಾಕ್ಷರಗಳನ್ನೂ ಸೇರಿಸಿ ಏಕಾದಶಾಕ್ಷರಾತ್ಮಕವನ್ನಾಗಿ ಮಾಡಿದುದೂ, ಏಕಾಕ್ಷರವಾಗಿ ಉಳಿದ ಜಗತೀಗೆ ತನ್ನೊಡನೆ ಸೇರಿದ ತ್ರಿಷ್ಟುಪ್ಪಿನೊಡನೆ ಸೇರಿ ದ್ವಾದಶಾಕ್ಷರಾತ್ಮಕವನ್ನಾಗಿ ಆಗುವಂತೆ ಮಾಡಿದುದೂ ಹಿಂದೆ ಐತರೇಯಬ್ರಾಹ್ಮಣದ ವಾಕ್ಯಗಳನ್ನು ಉದಾಹರಿಸಿ ತಿಳಿಸಿದೆ. (ಐ. ಬ್ರಾ. ೧೩-೨೮).

**ಗಾಯತ್ರೀ ಕನಿಷ್ಠಾ ಛಂದಸಾಗ್ಂ ಸತೀ ಯಜ್ಞಮುಖಂ ಪರೀಯಾಯ ।**

(ತೈ. ಸಂ. ೬-೧-೬-೩)

**ಅಥಾತಃ ಶಿರಃ । ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರ್ಯಗ್ರಮಂಗಾನಾಂ ಶಿರಃ ।**

(ಐ. ಆ. ೧-೪-೧)

ಶರೀರದ ಅಂಗಗಳಿಗೆಲ್ಲಾ ಶಿರಸ್ಸೇ ಪ್ರಧಾನವಾಗಿರುವಂತೆ ಸಕಲ ಛಂದಸ್ಸುಗಳಿಗೂ ಗಾಯತ್ರಿಯೇ ಪ್ರಧಾನವಾಗಿ ಅನಂತರ ಅದರ ಆಧಾರದಮೇಲೆ ಉಳಿದ ಛಂದಸ್ಸುಗಳ ನಿರ್ಮಾಣವಾಯಿತೆಂದು ತಿಳಿಸಿದೆ. ಆದುದರಿಂದಲೇ **ಗಾಯತ್ರೀ ಛಂದಸಾಂ ಮಾತಾ** (ತೈ. ಉ. ೪-೧೫-೧) ಸಕಲ ಛಂದಸ್ಸುಗಳಿಗೂ ಗಾಯತ್ರಿಯೇ ಮಾತೆಯೆಂದು ಸ್ತುತಿಸಲ್ಪಟ್ಟಿದೆ. ಉಳಿದ ಇತರ ಛಂದಸ್ಸುಗಳೆಲ್ಲವೂ ಈ ಛಂದಸ್ಸಿನ ಆಧಾರದ ಮೇಲೆಯೇ ರಚಿತವಾಗುವುವು. ಸಾಯಣಭಾಷ್ಯದಲ್ಲಿ (ಐ. ಆ ೧೦-೪-೧) **ಇತರೇಷಾಂ ಛಂದಸಾಮಸ್ಯೈವ ಚತುಶ್ಚತುರಕ್ಷರಾಧಿಕ್ಯೇನ ತತ್ತಚ್ಛಂದೋಭಿಃ ಪ್ರತಿಮಿಮೀತೇ ॥** ಇತರ ಛಂದಸ್ಸುಗಳನ್ನು ಇದರ ಆಧಾರದ ಮೇಲೆಯೇ ರಚಿಸಿವೆಯೆಂದು **ಛಂದಸಾಂ ಮಾತಾ** ಎಂಬ ಐತರೇಯಾರಣ್ಯಕದ ವಾಕ್ಯಕ್ಕೆ ವಿವರಣೆಯಿದೆ. ಅದು ಹೇಗೆಂದರೆ ಗಾಯತ್ರೀಛಂದಸ್ಸಿಗೆ ಇಪ್ಪತ್ತನಾಲ್ಕು ಅಕ್ಷರಗಳಾದರೆ—

| | | | |
|---|---|---|---|
| ಉಷ್ಣಿಕ್ | ೨೪+೪ | = | ೨೮ |
| ಅನುಷ್ಟುಪ್ | ೨೪+೪+೪ | = | ೩೨ |
| ಬೃಹತೀ | ೨೪+೪+೪+೪ | = | ೩೬ |
| ಪಂಕ್ತಿಃ | ೨೪+೪+೪+೪+೪+ | = | ೪೦ |

CC-0. Jangamwadi Math Collection. Digitized by eGangotri

| | | | |
|---|---|---|---|
| ತ್ರಿಷ್ಟುಪ್ | ೨೪+೪+೪+೪+೪+೪ | = | ೪೪ |
| ಜಗತೀ | ೨೪+೪+೪+೪+೪+೪+೪ | = | ೪೮ |

ಈ ರೀತಿಯಾಗಿ ಗಾಯತ್ರಿಯ ಆಧಾರದ ಮೇಲೆ ನಾಲ್ಕು ನಾಲ್ಕು ಅಕ್ಷರಗಳು ಅಧಿಕವಾಗಿ ಉಷ್ಣಿಗಾದಿಗಳು ರಚಿತವಾಗಿವೆಯೆಂದು ತಾತ್ಪರ್ಯ. ಅಲ್ಲದೇ ಸಕಲ ಯಜ್ಞಗಳಿಗೂ ಅಗ್ನಿಯೇ ಪ್ರಧಾನವಾದುದರಿಂದಲೂ ಗಾಯತ್ರಿಛಂದಸ್ಸೇ ಅಗ್ನಿಪರ್ಯಾಯವಾದುದರಿಂದಲೂ ಇದು ಎಲ್ಲಕ್ಕೂ ಶಿರೋರೂಪವಾಗಿರುತ್ತದೆ.

**ಗಾಯತ್ರಂ ಪುರಸ್ತಾದ್ಗಾಯತಿ । ಅಗ್ನಿರ್ವೈಗಾಯತ್ರ್ಯಮುಗ್ನಿಮೇವಾಸ್ಯೈತಚ್ಛಿರಃ ಕರೋತ್ಯಥೋ ಶಿರಃ ॥**

(ಶ. ಬ್ರಾ. ೯-೧-೨-೩೫)

ಎಂದು ಇದರ ಪ್ರಾಧಾನ್ಯವು ಸ್ತುತವಾಗಿದೆ.

**ಶಿರೋ ವೈ ಯಜ್ಞಸ್ಯಾತಿಥ್ಯಂ ನವಾಕ್ಷರಾ ವೈ ಗಾಯತ್ರೀ ಅಷ್ಟೌ ತಾನಿ ಯಾನ್ಯನ್ವಾಹ ಪ್ರಣವೋ ನವಮಃ ಪೂರ್ವಾರ್ಧೋ ವೈ ಯಜ್ಞಸ್ಯ ಗಾಯತ್ರೀ ॥**

(ಶ. ಬ್ರಾ. ೩-೪-೧-೧೫)

ಗಾಯತ್ರಿಯು ನವಾಕ್ಷರಾತ್ಮಕವಾದದ್ದು. ಪ್ರಣವವು ಒಂದು, ಉಳಿದ ಎಂಟು ಮೂಲರೂಪವಾದ ಗಾಯತ್ರಿಯದು. ಯಜ್ಞಕ್ಕೆಲ್ಲಾ ಗಾಯತ್ರಿಯೇ ಪ್ರಧಾನವು. ಏತಕ್ಕೆಂದರೆ,

**ಯೋ ಗಾಯತ್ರೀಂ ಹರಿಣೀಂ ।.... ಯಜಮಾನಗ್ಂ ಸ್ವರ್ಗಂ ಲೋಕಮಭಿವಹಂತೀಂ ।**

(ಶ. ಬ್ರಾ. ೧೧-೪-೧-೮)

ಇಂತಹ ಪುಣ್ಯಾತ್ಮಕವಾದ ಗಾಯತ್ರಿಯು ಯಜಮಾನನನ್ನು ಸ್ವರ್ಗಕ್ಕೆ ಒಯ್ಯುತ್ತದೆ ಎಂದು ಪ್ರಶಂಸಿಸಿದೆ. ಇದೇ ಗಾಯತ್ರಿಯ ಪ್ರಭಾವ.

**॥ ಗಾಯತ್ರಿಯ ಸರ್ವಸವನವ್ಯಾಪಕತ್ವ ॥**

ಗಾಯತ್ರಿಯು ಯಜ್ಞದಲ್ಲಿ ಅತಿಪ್ರಧಾನಪಾತ್ರವನ್ನು ವಹಿಸುವುದೆಂಬುದಕ್ಕೆ ಶಂಕರಾಚಾರ್ಯರು ಮೂರನೆಯ ಅಂಶವನ್ನೂ ತೋರಿಸಿರುವರು. **ಸರ್ವಸವನವ್ಯಾಪಕತ್ವಾಚ್ಚ ಯಜ್ಞಸ್ಯ ಪ್ರಾಧಾನ್ಯಂ ಗಾಯತ್ರ್ಯಾಃ ।** ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಈ ಮೂರು ಕರ್ಮಗಳಲ್ಲೂ ಸಹ ವಿಧ್ಯುಕ್ತವಾದ ಕಾರ್ಯ ನಿರ್ವಹಣಕ್ಕೆ ಗಾಯತ್ರಿಯ ಸಹಾಯವು ಅತ್ಯವಶ್ಯವಾಗಿ ಬೇಕಾಗುತ್ತದೆಂದು ಬ್ರಾಹ್ಮಣಾದಿವಾಕ್ಯಗಳಿಂದ ತಿಳಿಯುತ್ತದೆ.

**ಗಾಯತ್ರೀ ವೈ ಪ್ರಾತಃಸವನಂ ವಹತಿ । ತ್ರಿಷ್ಟುಪ್ಮಾಧ್ಯಂದಿನಗ್ಂಸವನಂ ಜಗತೀ ತೃತೀಯಸವನಂ ತದ್ವಾ ಅನೇಕಾಕಿನ್ಯೇವ ತ್ರಿಷ್ಟುಪ್ಮಾಧ್ಯಂದಿನಗ್ಂಸವನಂ ವಹತಿ ಗಾಯತ್ರ್ಯಾ ಚ ಬೃಹತ್ಯಾ ಚಾನೇಕಾಕಿನೀ ಜಗತೀ ತೃತೀಯಸವನಂ ಗಾಯತ್ರ್ಯೋಷ್ಣಿಹಕಕುಭ್ಯಾಮನುಷ್ಟುಭಾ । ಗಾಯತ್ರ್ಯೇವೈಕಾಕಿನೀ ಪ್ರಾತಃಸವನಂ ವಹತಿ ।**

(ಶ. ಬ್ರಾ. ೪-೨-೪-೧೦)

ಗಾಯತ್ರಿಯು ಪ್ರಾತಃಸವನವನ್ನೂ ತ್ರಿಷ್ಟುಪ್ಪು ಮಾಧ್ಯಂದಿನಸವನವನ್ನೂ, ಜಗತಿಯು ತೃತೀಯಸವನವನ್ನೂ ವಹಿಸುತ್ತವೆ. ಆದರೆ, ತ್ರಿಷ್ಟುಪ್ಪು ಮಾಧ್ಯಂದಿನಸವನವನ್ನು ಗಾಯತ್ರಿಯ ಸಹಾಯವಿಲ್ಲದೇ ವಹಿಸಲಾಗುವುದಿಲ್ಲ. ಬೃಹತಿ

CC-0. Jangamwadi Math Collection. Digitized by eGangotri

ಯೊಂದಿಗೆ ಕೂಡಿ ಗಾಯತ್ರಿಯು ತ್ರಿಷ್ಟುಪ್ಪಿಗೆ ನೆರವಾದಾಗ ಮಾತ್ರ ಅದು ನಿರ್ವಹಿಸಬಲ್ಲುದು. ಅದರಂತೆಯೇ ಜಗತಿಯೂ ಸಹ ಗಾಯತ್ರಿಯ ಸಹಾಯವಿಲ್ಲದೇ ತೃತೀಯಸವನವನ್ನು ನಿರ್ವಹಿಸಲಾಗುವುದಿಲ್ಲ. ಕಕುಭ್ ಮತ್ತು ಉಷ್ಣಿಕ್ಕಿನೊಡನೆ ಕೂಡಿದ ಗಾಯತ್ರಿಯ ನೆರವಿನಿಂದ ಮಾತ್ರ ನಿರ್ವಹಿಸಬಲ್ಲುವು ಆದರೆ ಇತರ ಯಾವ ಛಂದಸ್ಸಿನ ಸಹಾಯವನ್ನೂ ಅಪೇಕ್ಷಿಸದೆ ಗಾಯತ್ರಿಯು ಮಾತ್ರ ಪ್ರಾತಃಸವನವನ್ನು ನಿರ್ವಹಿಸಬಲ್ಲುದು. ಸರ್ವಸವನವ್ಯಾಪಕತ್ವವು ಗಾಯತ್ರಿಗೆ ಇರುವುದರಿಂದ ಅದಕ್ಕೆ ಯಜ್ಞದಲ್ಲಿ ಪ್ರಾಧಾನ್ಯತೆಯಿದೆ. ಆದರೆ ತ್ರಿಷ್ಟುಪ್ಪಿಗೆ ಏಕಾದಶಾಕ್ಷರವೂ, ಜಗತಿಗೆ ದ್ವಾದಶಾಕ್ಷರವೂ ಗಾಯತ್ರಿಗೆ ಮಾತ್ರ ಅಷ್ಟಾಕ್ಷರವೂ ಇದ್ದರೂ ಸಹ ಗಾಯತ್ರಿಗೆ ಏಕೆ ಈ ಮಹತ್ತ್ವವೆಂದರೆ, ತ್ರಿಷ್ಟುಪ್ಪು ಮತ್ತು ಜಗತಿಗೆ ಅಕ್ಷರಾಧಿಕ್ಯವುಂಟಾಗಲು ಸಹ ಗಾಯತ್ರಿಯ ಶಕ್ತಿಯಿಂದಲೇ ಸಾಧ್ಯವಾಯಿತು ಎಂಬುದನ್ನು ಮೇಲೆ ಐತರೇಯಬ್ರಾಹ್ಮಣದ ವಾಕ್ಯಗಳನ್ನು ಉದಾಹರಿಸಿ ತಿಳಿಸಿದೆ. ಆ ವೈಶಿಷ್ಟ್ಯ ದಿಂದಲೇ ಸರ್ವಸವನವ್ಯಾಪಕತ್ವವೂ ಗಾಯತ್ರಿಗೆ ಲಭಿಸಿತು ಎಂಬುದನ್ನು ಶತಪಥದಲ್ಲಿಯೂ ಸಹ ಈ ರೀತಿ ತಿಳಿಸಿದೆ. ವಿವರಣೆಯಲ್ಲಿ ಸ್ವಲ್ಪ ಕ್ರಮವ್ಯತ್ಯಾಸವಿರುವುದರಿಂದ ಈ ವಾಕ್ಯಗಳನ್ನೂ ಉದಾಹರಿಸಿದೆ.

> ಚತುರಕ್ಷರಾಣಿ ಹ ವಾ ಅಗ್ರೇ ಛಂದಾಗ್‌ಸ್ಯಾಸುಃ । ತತೋ ಜಗತೀ ಸೋಮಮಚ್ಛಾಪತತ್ಸಾ ತ್ರೀಣ್ಯಕ್ಷರಾಣಿ ಹಿತ್ವಾಜಗಾಮ ತತಸ್ತ್ರಿಷ್ಟುಪ್ ಸೋಮಮಚ್ಛಾಪತತ್ಸೈಕಮಕ್ಷರಗ್‌ಂ ಹಿತ್ವಾ-ಜಗಾಮ ತತೋ ಗಾಯತ್ರೀ ಸೋಮಮಚ್ಛಾಪತತ್ಸೈತಾನಿ ಚಾಕ್ಷರಾಣಿ ಹರದಿತ್ಯಾಗಚ್ಛ-ತ್ಸೋಮಂ ಚ ತತೋಽಷ್ಟಾಕ್ಷರಾ ಗಾಯತ್ರ್ಯಭವತ್ತಸ್ಮಾದಾಹುರಷ್ಟಾಕ್ಷರಾ ಗಾಯತ್ರೀ ।
>
> (ಶ. ಬ್ರಾ. ೪-೩-೨-೭)

ಪೂರ್ವದಲ್ಲಿ ಛಂದಸ್ಸುಗಳಿಗೆಲ್ಲಾ ನಾಲ್ಕು ಅಕ್ಷರಗಳು ಮಾತ್ರವಿದ್ದವು. ಸೋಮಾಹರಣಕ್ಕಾಗಿ ಜಗತಿಯು ಹಾರಿದಾಗ ಬಳಲಿ ಮೂರು ಅಕ್ಷರಗಳನ್ನು ದಾರಿಯಲ್ಲಿ ಬಿಟ್ಟು ಒಂದಕ್ಷರದೊಂದಿಗೆ ಮಾತ್ರ ಹಿಂತಿರುಗಿತು. ನಂತರ ತ್ರಿಷ್ಟುಪ್ಪು ಹಾರಿ ಒಂದಕ್ಷರವನ್ನು ಬಿಟ್ಟು ಹಿಂತುರಿಗಿತು. ಗಾಯತ್ರಿಯು ಸ್ವಶಕ್ತಿಯಿಂದ ಸೋಮವನ್ನು ತರುವುದರ ಜೊತೆಗೆ ಅಲ್ಲಿ ಬಿಟ್ಟು ಬಂದಿದ್ದ ನಾಲ್ಕ್ಕಕ್ಷರಗಳನ್ನೂ ಹಿಂದಕ್ಕೆ ತಂದಿತು. ಆದುದರಿಂದ ಗಾಯತ್ರಿಯು ಅಷ್ಟಾಕ್ಷರಾತ್ಮಕ ವಾಗಿ ಅಷ್ಟಾಕ್ಷರಾ ಗಾಯತ್ರೀ ಎಂದು ಪ್ರಸಿದ್ಧಿಯನ್ನು ಪಡೆಯಿತು.

> ತಯಾ ಪ್ರಾತಃಸವನಮತನ್ವತ । ತಸ್ಮಾದ್ಗಾಯತ್ರಂ ಪ್ರಾತಃಸವನಮತನ್ವತ ತಾಗ್‌ಂಹ ತ್ರಿಷ್ಟು-ಬುವಾಚೋಪ ತ್ವಾಹಮಾಯಾನಿ ತ್ರಿಭಿರಕ್ಷರೈರುಪ ಮಾ ಹ್ವಯಸ್ವ ಮಾ ಮಾ ಯಜ್ಞಾ-ದಂತರ್ಗಾ ಇತಿ ತಥೇತಿ ತಾಮುಪಾಹ್ವಯತ ತತ ಏಕಾದಶಾಕ್ಷರಾ ತ್ರಿಷ್ಟುಬಭವತ್ತಸ್ಮಾ-ದಾಹುಸ್ತ್ರೈಷ್ಟುಭಂ ಮಾಧ್ಯಂದಿನಗ್‌ಂ ಸವನಮಿತಿ ॥
>
> (ಶ. ಬ್ರಾ. ೪-೩-೨-೮)

ಇಂತಹ ವೈಶಿಷ್ಟ್ಯವುಳ್ಳ ಗಾಯತ್ರಿಯೊಂದಿಗೆ ಪ್ರಾತಃಸವನವನ್ನು ನೆರವೇರಿಸಿದರು. ಆದುದರಿಂದ ಪ್ರಾತಃಸವನವು ಗಾಯತ್ರೀ ಸಂಬಂಧಿಯಾದದ್ದು. ಅದೇ ಗಾಯತ್ರಿಯ ಸಹಾಯದಿಂದ ಮಾಧ್ಯಂದಿನಸವನವನ್ನೂ ನೆರವೇರಿಸಲುಪ ಕ್ರಮಿಸಿದರು ಆಗ ತ್ರಿಷ್ಟುಪ್ಪು ಬಂದು, ನನಗೆ ಉಳಿದಿರುವ ಮೂರು ಅಕ್ಷರಗಳೊಡನೆ ನಾನೂ ಭಾಗವಹಿಸುತ್ತೇನೆ. ನನಗೆ ಯಜ್ಞಭಾಗವಿಲ್ಲದಿರುವಂತೆ ಮಾಡಬೇಡ ಎಂದು ಗಾಯತ್ರಿಯನ್ನು ಪ್ರಾರ್ಥಿಸಿತು. ಗಾಯತ್ರಿಯು ಒಪ್ಪಿ ಕೊಂಡು ಅದಕ್ಕೂ ಅವಕಾಶವನ್ನು ಕೊಟ್ಟಿತು ಆದುದರಿಂದ ಗಾಯತ್ರಿಯೊಡನೆ ಸೇರಿದ ತ್ರಿಷ್ಟುಪ್‌ಛಂದಸ್ಸು ಏಕಾದಶಾಕ್ಷರಾತ್ಮಕವಾಯಿತು.

CC-0. Jangamwadi Math Collection. Digitized by eGangotri

ತಯೈವ ತೃತೀಯಸವನಮತನ್ವತ । ತಾಗ್ಂ ಹ ಜಗತ್ಯುವಾಚೋಪ ತ್ವಾಹಮಾಯಾನ್ಯೇಕೇ-
ನಾಕ್ಷರೇಣೋಪ ಮಾ ಹ್ವಯಸ್ವ ಮಾ ಮಾ ಯಜ್ಞಾದಂತರ್ಗಾ ಇತಿ ತಥೇತಿ ತಾಮುಪಾಹ್ವ-
ಯತ ತತೋ ದ್ವಾದಶಾಕ್ಷರಾ ಜಗತ್ಯಭವತ್ತಸ್ಮಾದಾಹುರ್ಜಾಗತಂ ತೃತೀಯಸವನಮಿತಿ ।

(ಶ. ಬ್ರಾ. ೪-೩-೨-೯)

ಅದೇ ಗಾಯತ್ರಿಯೊಂದಿಗೆ ತೃತೀಯ ಸವನವನ್ನೂ ನಿರ್ವಹಿಸಲಾರಂಭಿಸಿದರು. ಆಗ ಜಗತಿಯು ಗಾಯತ್ರಿಯನ್ನು ಸಮಿಾಪಿಸಿ ನನಗೆ ಯಜ್ಞಭಾಗವಿಲ್ಲದಿರುವಂತೆ ಮಾಡಬೇಡ. ನನ್ನ ಉಳಿದಿರುವ ಒಂದಕ್ಷರದೊಡನೆ ನಾನೂ ನಿನ್ನೊಡನೆ ಸೇರಿಕೊಳ್ಳುತ್ತೇನೆ ಎಂದಿತು. ಗಾಯತ್ರಿಯು ಅದಕ್ಕೊಪ್ಪಿತು. ಜಗತಿಯು ಗಾಯತ್ರಿಯ ಎಂಟಕ್ಷರಗಳೊಡನೆಯೂ ಪುನಃ ತ್ರಿಷ್ಟುಪ್ಪಿನೊಡನೆ ಗಾಯತ್ರಿಯು ಸೇರಿದ್ದರಿಂದ ಆ ಮೂರಕ್ಷರಗಳೊಡನೆಯೂ ಸೇರಿ ದ್ವಾದಶಾಕ್ಷರವುಳ್ಳದ್ದಾಯಿತು. ಆದುದರಿಂದ ತೃತೀಯಸವನವು ಜಗತಿಗೆ ಸಂಬಂಧಿಸಿದುದೆಂದು ಪ್ರಸಿದ್ಧಿ.

ತದಾಹುಃ । ಗಾಯತ್ರಾಣಿ ವೈ ಸರ್ವಾಣಿ ಸವನಾನಿ ಗಾಯತ್ರೀ ಹ್ಯೇವೈತದುಪಸೃಜಮಾನೈದಿತಿ
ತಸ್ಮಾತ್ಸಗ್ಂಸಿದ್ಧಂ ಪ್ರಾತಃಸವನೇ ಪ್ರತಿಗೃಹ್ಣೀಯಾತ್ ಸಗ್ಂಸಿದ್ಧಾ ಹಿ ಗಾಯತ್ರ್ಯ-
ಗಚ್ಛತ್ ॥

(ಶ. ಬ್ರಾ. ೪.೩-೨.೧೦)

ಇಂತಹ ಸರ್ವಸವನವ್ಯಾಪಕತ್ವವಿರುವುದರಿಂದಲೇ ಸಕಲಸವನಗಳೂ ಗಾಯತ್ರಿಗೇ ಸೇರಿದ್ದು. ಕೇವಲ ಗಾಯತ್ರಿಯು ಮಾತ್ರ ವೃದ್ಧಿಯನ್ನು ಪಡೆಯುತ್ತಾ ಬಂದಿತು ಎಂದು ಯಜ್ಞಕರ್ತರು ತಿಳಿದಿದ್ದಾರೆ. ಗಾಯತ್ರಿಯು ಇತರ ಛಂದಸ್ಸುಗಳಂತೆ ನ್ಯೂನತೆಯನ್ನು ಹೊಂದದೆ ಮತ್ತು ಅಪೂರ್ಣವಾಗಿರದೆ ಇದ್ದುದರಿಂದ ಅದರ ಜಯಸೂಚಕವಾದ ಮಂತ್ರವನ್ನು ಪೂರ್ಣವಾಗಿ ಪಠಿಸಬೇಕು ಎಂದು ಪ್ರಶಂಸಿಸಿದೆ. ಇಂತಹ ಮಂತ್ರಗಳಲ್ಲಿ ಒಂದನ್ನು ಉದಾಹರಣೆಗೆ ತೆಗೆದುಕೊಂದು ಪರಿಶೀಲಿಸಿದರೆ ಅದರಲ್ಲಿ ಗಾಯತ್ರೀಛಂದಸ್ಸಿನ ಪ್ರಾಶಸ್ತ್ಯವೂ ಗಂಧರ್ವನೆಂದು ನಿರ್ದೇಶಿಸಲ್ಪಟ್ಟಿರುವ ಸವಿತೃದೇವತೋದ್ದೇಶಕವಾದ ಪ್ರಾರ್ಥನೆಯೂ ಅಡಕವಾಗಿದೆ ಎಂಬಂಶವು ಸ್ಪಷ್ಟವಾಗುವುದು

ಅಸೌ ವಾ ಆದಿತ್ಯೋ ದೇವಃ ಸವಿತಾ.........ದಿವ್ಯೋ ಗಂಧರ್ವಃ ಕೇತಪೂಃ ಕೇತಂ ನಃ
ಪುನಾತ್ವಿತ್ಯಸೌ ವಾ ಆದಿತ್ಯೋ ದಿವ್ಯೋ ಗಂಧರ್ವಃ । ಇಮಂ ನೋ ದೇವ ಸವಿತರ್ಯಜ್ಞಂ
ಪ್ರಣಯೇತಿ । ಅಸೌ ವಾ ಆದಿತ್ಯೋ ದೇವಃ ಸವಿತಾ ಯದು ವಾ ಏಷ ಯಜ್ಞಿಯಂ ಕರ್ಮ
ಪ್ರಣಯತಿ ತದನಾರ್ತಗ್ಂ ಸ್ವಸ್ತ್ಯುದೃಚಮಶ್ನುತೇ ದೇವಾವ್ಯಮಿತಿ ಯೋ ದೇವಾನವದಿತ್ಯೇ-
ತತ್ಸಖಿವಿದಗ್ಂ ಸತ್ರಾಜಿತಂ ಧನಜಿತಗ್ಂ ಸ್ವರ್ಜಿತಮಿತಿ ಯ ಏತತ್ಸರ್ವಂ ವಿಂದತಿತ್ಯೇ
ತದೃಚೇತ್ಯೃಚಾ ಸ್ತೋಮಗ್ಂ ಸಮರ್ಧಯ ಗಾಯತ್ರೇಣ ರಥಂತರಂ ಬೃಹದ್ಗಾಯತ್ರ-
ವರ್ತನೀತಿ ಸಾಮಾನಿ ಸ್ವಾಹೇತಿ..........॥ ತಾನ್ಯೇತಾನ್ಯಷ್ಟೌ ಸಾವಿತ್ರಾಣಿ । ಅಷ್ಟಾಕ್ಷರಾ
ಗಾಯತ್ರೀ ಗಾಯತ್ರೋಽಗ್ನಿರ್ಯಾವಾನಗ್ನಿರ್ಯಾವತ್ಯಸ್ಯ ಮಾತ್ರಾ ॥

(ಶ. ಬ್ರಾ. ೬-೩-೧-೧೯,೨೧)

"ಸವಿತೃದೇವನೇ, ನಮ್ಮ ಯಜ್ಞವು ಶೀಘ್ರವಾಗಿಯೂ, ನಿರ್ವಿಘ್ನವಾಗಿಯೂ ನೆರವೇರುವಂತೆ ತ್ವರೆಪಡಿಸಿ ಪ್ರೇರಿಸು" ಎಂಬ ವಾಜಸನೇಯಸಂಹಿತಾವಾಕ್ಯವನ್ನು (೧೧-೭) ಪಠಿಸಬೇಕು. ಸವಿತೃದೇವನೇ ಆದಿತ್ಯನು. ಯಜ್ಞಭಾಗವೆಲ್ಲಾ

CC-0. Jangamwadi Math Collection. Digitized by eGangotri

ಅವನಿಗೇ ಸೇರಿದುದು. “ಚಿತ್ತಶುದ್ಧಿಕಾರಕನೂ, ಅಂತರಿಕ್ಷದ ಗಂಧರ್ವನೂ ಆದ ಸವಿತೃವೇ ಆದಿತ್ಯನು. ಅವನು ಯಜ್ಞವನ್ನು ಸಾಂಗವಾಗಿ ನೆರವೇರುವಂತೆ ಮಾಡಲಿ” ಎಂಬುದೇ ಪ್ರಾರ್ಥನೆ. ರಥಂತರಸಾಮವನ್ನು ಗಾಯತ್ರೀ ಛಂದಸ್ಸಿನೊಡನೆಯೂ, ಬೃಹತ್ ಸಾಮವನ್ನು ಗಾಯತ್ರೀಪ್ರಮಾಣದೊಡನೆಯೂ ಯೋಜಿಸಿ ಸಿದ್ಧಿಕಾರಕವಾದ ಮಂತ್ರವನ್ನು ನಿರ್ಮಿಸಿ ಪಠಿಸದರೆ ಅದು ಸಂಪತ್ಸಿದ್ಧಿಯನ್ನೂ, ಸ್ವರ್ಗಸಿದ್ಧಿಯನ್ನೂ ಸರ್ವದಾ ಒದಗಿಸಿಕೊಡುತ್ತದೆ. ಸವಿತೃವನ್ನು ಪ್ರಾರ್ಥಿಸಿ ಪಠಿಸುವ ಮಂತ್ರಗಳು ಅಷ್ಟಸಂಖ್ಯಾಕವಾಗಿವೆ. ಗಾಯತ್ರಿಯು ಅಷ್ಟಾಕ್ಷರಾತ್ಮಕವಾದುದ ರಿಂದಲೇ ಈ ಮಂತ್ರಗಳ ಸಂಖ್ಯೆಯೂ ಎಂಟಾಗಿವೆ. ಯಜ್ಞಕ್ಕೆಲ್ಲಾ ಪ್ರಧಾನನಾದ ಅಗ್ನಿಯೇ ಗಾಯತ್ರವಾದುದರಿಂದ ಅಗ್ನಿಯ ವೈಭವವೇ ಗಾಯತ್ರಿಯ ವೈಭವವಾಗಿರುತ್ತದೆ ಎಂದು ಯಜ್ಞಕಾಲದಲ್ಲಿ ಗಾಯತ್ರಿಯ ಪ್ರಾಧಾನ್ಯವು ತಿಳಿಸಲ್ಪಟ್ಟದೆ.

:o:

## ೧೧. ಕರ್ಮಕ್ಕೆ ಪ್ರಧಾನವಾದ ಗಾಯತ್ರಿಯು ಬ್ರಹ್ಮಜ್ಞಾನಕ್ಕೆ ಸಾಧನ ವಾಗುವುದು ಹೇಗೆ? ಆಕ್ಷೇಪ ಮತ್ತು ಸಮಾಧಾನ.

ಲೌಕಿಕಪ್ರತ್ಯಕ್ಷಕ್ಕೆ ಅತೀತನಾದ ಪರಬ್ರಹ್ಮವಸ್ತುವನ್ನರಿಯಲು ಶಂಕರಾಚಾರ್ಯರು ಗಾಯತ್ರಿಯೇ ಪರಮ ಸಾಧನವೆಂದು ಗಾಯತ್ರಿಯ ಪ್ರಾಧಾನ್ಯತೆಯನ್ನು ತಿಳಿಸಲು ಮೂರು ಅಂಶಗಳಿಂದ ಗಾಯತ್ರಿಯು ಪ್ರಧಾನ ಪಾತ್ರವನ್ನು ವಹಿಸುವುದೆಂದು ತಿಳಿಸಿದರು. ಆದರೆ ಇಲ್ಲಿ ಇನ್ನೊಂದು ಶಂಕೆಯು ಉದ್ಭವಿಸುತ್ತದೆ. ಯಜ್ಞಾಂಗವಾದ ಸಕಲ ಛಂದಸ್ಸುಗಳಿಗೂ ಗಾಯತ್ರಿಯೇ ಆಧಾರವೆಂದೂ ಇದನ್ನು ಆಶ್ರಯಿಸಿಯೇ ಇತರ ಸಕಲಛಂದಸ್ಸುಗಳೂ ವೃದ್ಧಿಯನ್ನು ಪಡೆದವು ಎಂದೂ ಶ್ರುತಿವಾಕ್ಯಗಳ ವರ್ಣನವು ಸತ್ಯವಾಗಿರಬಹುದು. ಆದರೆ ಕೇವಲ ಕರ್ಮಪ್ರಧಾನ ವಾದ ಯಜ್ಞಕ್ಕೆ ಪ್ರಧಾನವೆಂದ ಮಾತ್ರಕ್ಕೆ ಗಾಯತ್ರಿಯು ಬ್ರಹ್ಮಜ್ಞಾನಸಾಧನವೂ ಹೇಗಾಗಬಲ್ಲುದು ಎಂಬ ಪ್ರಶ್ನೆಗೂ ಅವಕಾಶವಿರುತ್ತದೆ. ಆದರೆ ಗಾಯತ್ರಿಯೇ ಬ್ರಹ್ಮಸ್ವರೂಪವೆಂದೂ, ಬ್ರಹ್ಮಜ್ಞಾನಕ್ಕೆ ಬ್ರಹ್ಮವಲ್ಲದ ಬೇರೊಂದು ಸಾಧನದಿಂದ ಸಾಧ್ಯವಿಲ್ಲವೆಂದೂ ಶ್ರುತಿಗಳೇ ತಿಳಿಸುತ್ತವೆ. ಬ್ರಹ್ಮತತ್ತ್ವವನ್ನು ಪ್ರತಿಬಿಂಬಿಸುವ ಯಜ್ಞಕ್ಕೆ ಉಪಯುಕ್ತವಾದ ಸಕಲ ಛಂದಸ್ಸುಗಳೂ ಯಜ್ಞಕ್ಕೆ ಅತ್ಯವಶ್ಯವಾಗಿರುವಾಗ ಗಾಯತ್ರಿಗೆ ಮಾತ್ರ ಈ ಮಹಿಮೆಯೇನು ಎಂದರೆ, ಇತರ ಎಲ್ಲಾ ಛಂದಸ್ಸುಗಳೂ ಸಹ ಕೇವಲ ಅಸ್ಥಿರವಾದ ಸಂಪತ್ತಿಗೆ ಕಾರಣವಾದವೆಂದೂ, ಗಾಯತ್ರಿಯು ಮಾತ್ರ ಶಾಶ್ವತವಾದುದೂ, ಬ್ರಹ್ಮಸ್ವರೂಪವಾದುದೂ ಆದ ಸಂಪತ್ತನ್ನು ಒದಗಿಸಬಲ್ಲುದು ಎಂದೂ ಗಾಯತ್ರಿಯ ಮಹಿಮೆಯನ್ನು ಐತರೇಯಬ್ರಾಹ್ಮಣದಲ್ಲಿ “ಏತದ್ಧ ವೈ ಯಜಮಾನಸ್ಯಾಧ್ಯಾತ್ಮಾನಮಿತಿ....” ಎಂದು ವರ್ಣಿತವಾಗಿದೆ. ಮತ್ತು ಪ್ರಉಗಶಸ್ತ್ರಪಠನದ ಕಾಲದಲ್ಲಿ ಯಾವ ಛಂದಸ್ಸನ್ನು ಆಶ್ರಯಿಸಬೇಕು ಎಂದರೆ,

ಗಾಯತ್ರಂ ಪ್ರಉಗಂ ಕುರ್ಯಾದಿತ್ಯಾಹುಸ್ತೇಜೋ ವೈ ಬ್ರಹ್ಮವರ್ಚಸಂ ಗಾಯತ್ರೀ ತೇಜಸ್ವೀ ಬ್ರಹ್ಮವರ್ಚಸೀ ಭವತೀತಿ। ಔಷ್ಣಿಹಂ ಪ್ರಉಗಂ ಕುರ್ಯಾದಿತ್ಯಾಹುರಾಯುರ್ವಾ ಉಷ್ಣಿಗಾ-ಯುಷ್ಮಾನ್ಭವತೀತಿ। ಆನುಷ್ಟುಭಂ ಪ್ರಉಗಂ ಕುರ್ಯಾದಿತ್ಯಾಹುಃ ಕ್ಷತ್ರಂ ವಾ ಅನುಷ್ಟುಪ್-ಕ್ಷತ್ರಸ್ಯಾಪ್ತ್ಯಾ ಇತಿ। ಬಾರ್ಹತಂ ಪ್ರಉಗಂ ಕುರ್ಯಾದಿತ್ಯಾಹುಃ ಶ್ರೀರ್ವೈ ಬೃಹತೀ ಶ್ರೀ-

CC-0. Jangamwadi Math Collection. Digitized by eGangotri

ಮಾನ್ನವತೀತಿ । ಪಾಙ್ಕ್ತಂ ಪ್ರಉಗಂ ಕುರ್ಯಾದಿತ್ಯಾಹುರನ್ನಂ ವೈ ಪಂಕ್ತಿರನ್ನವಾನ್ನವತೀತಿ । ತ್ರೈಷ್ಟುಭಂ ಪ್ರಉಗಂ ಕುರ್ಯಾದ್ವೀರ್ಯಂ ವೈ ತ್ರಿಷ್ಟುಬ್ವೀರ್ಯವಾನ್ನವತೀತಿ । ಜಾಗತಂ ಪ್ರಉಗಂ ಕುರ್ಯಾದಿತ್ಯಾಹುರ್ಜಾಗತಾ ವೈ ಪಶವಃ ಪಶುಮಾನ್ನವತೀತಿ । ತದು ಗಾಯತ್ರಮೇವ ಕುರ್ಯಾದ್ಬ್ರಹ್ಮ ವೈ ಗಾಯತ್ರೀ ಬ್ರಹ್ಮೈತದಹರ್ಬ್ರಹ್ಮಣೈವ ತದ್ಬ್ರಹ್ಮ ಪ್ರತಿಪದ್ಯತೇ ॥

(ಐ. ಆರಣ್ಯಕ. ೧-೧-೩)

ತೇಜೋಯುತವಾದುದೂ, ಬ್ರಹ್ಮವರ್ಚಸ್ಸಿನಿಂದ ಕೂಡಿದುದೂ ಆದ ಗಾಯತ್ರೀಛಂದಸ್ಸಿನಲ್ಲಿಯೇ ಪ್ರಉಗಶಸ್ತ್ರವಿದ್ದರೆ ಇದನ್ನು ಪಠಿಸಿ ಯಜ್ಞಮಾಡತಕ್ಕ ಪುರುಷನೂ ಸಹ ತೇಜಸ್ವಿಯೂ, ಬ್ರಹ್ಮವರ್ಚಸ್ವಿಯೂ ಆಗುವನೆಂದು ಕೆಲವರ ಮತ. ಆದರೆ, ಜೀವಾತುವಾದ ಉಷ್ಣಿಕ್ಕಿನಿಂದ ನಿರ್ಮಿತವಾದ ಪ್ರಉಗಶಸ್ತ್ರವನ್ನು ಪಠಿಸಿದರೆ ಯಜಮಾನನು ದೀರ್ಘಾಯುವನ್ನು ಪಡೆಯುವನೆಂದು ಇನ್ನೊಂದು ಮತ. ವೀರ್ಯವತ್ತಾದ ಅನುಷ್ಟುಪ್ಪಿನಿಂದ ನಿರ್ಮಿತವಾದರೆ ಆಗ ಯಜಮಾನನು ವೀರ್ಯಯುತನಾಗುವನೆಂದು ಕೆಲವರೂ, ಸಂಪದ್ರೂಪವಾದ ಬೃಹತಿಯಿಂದ ನಿರ್ಮಿತವಾದ ಪ್ರಉಗದ ಪಠನದಿಂದ ಯಜಮಾನನು ಸಂಪದ್ಯುಕ್ತನಾಗುವನೆಂದು ಇನ್ನು ಕೆಲವರೂ ಅನ್ನಾತ್ಮಕವಾದ ಪಙ್ಕ್ತಿಯಿಂದ ನಿರ್ಮಿತವಾಗಿದ್ದು ಅದನ್ನು ಪಠಿಸಿದರೆ ಯಜಮಾನನು ಅನ್ನಸಂಪತ್ತಿನಿಂದ ಕೂಡಿದನಾಗುವನೆಂದು ಒಂದು ಸಂಪ್ರದಾಯದವರೂ, ಶಕ್ತ್ಯಾತ್ಮಕವಾದ ತ್ರಿಷ್ಟುಪ್ಪಿನಿಂದ ಶಕ್ತಿದಾಯಕವಾಗುವುದೆಂದು ಇನ್ನೊಂದು ಸಂಪ್ರದಾಯದವರೂ ಪಶುಸಂಪದ್ರೂಪವಾದ ಜಗತಿಯಿಂದ ನಿರ್ಮಿತವಾದ ಶಸ್ತ್ರವನ್ನು ಪಠಿಸಿದರೆ ಯಜಮಾನನಿಗೆ ಪಶುಸಂಪತ್ತು ಲಭಿಸು, ವುದೆಂದು ಇನ್ನೂ ಕೆಲವರೂ ಅಭಿಪ್ರಾಯಪಡುತ್ತಾರೆ. ಆದರೆ ಅನ್ನಾದಿಸಂಪತ್ತುಗಳೆಲ್ಲವೂ ಅಶಾಶ್ವತವಾದ ಐಶ್ವರ್ಯಗಳು. ಶಾಶ್ವತವಾದ ಬ್ರಹ್ಮಜ್ಞಾನರೂಪವಾದ ಸಂಪತ್ತು ಲಭಿಸಬೇಕಾದರೆ ಬ್ರಹ್ಮಾತ್ಮಕವಾದ ಗಾಯತ್ರಿಯಿಂದ ನಿರ್ಮಿತವಾದ ಪ್ರಉಗವನ್ನು ಪಠಿಸಿದರೆ ಮಾತ್ರ ಅದು ಲಭ್ಯವೆಂಬುದು ನಿರ್ವಿವಾದವಾದ ವಿಷಯ. ಆದುದರಿಂದ ಬ್ರಹ್ಮಜ್ಞಾನಕ್ಕೆ ಗಾಯತ್ರಿಯೇ ಸಾಕ್ಷಾತ್ಸಾಧನವಾಗುವುದೇ ಹೊರತು ಇನ್ನಾವ ಛಂದಸ್ಸೂ ಆಗಲಾರದು ಎಂಬ ಮತವು ಸಿದ್ಧಾಂತವಾಗುತ್ತದೆ. **ತದು ಮಾಧುಚ್ಛಂದಸಂ** । ಈ ಗಾಯತ್ರೀನಿರ್ಮಿತವಾದ ಪ್ರಉಗವು ಮಧುಚ್ಛಂದಸ್ಸಿನಿಂದ ನಿರ್ಮಿತವಾಗಿರಬೇಕು ಎಂದಿದೆ. ಆದರೆ ಇಲ್ಲಿ ಮಧುಚ್ಛಂದಸ್ ಎಂದರೇನು ? ಈ ಹೆಸರು ಬರಲು ಕಾರಣವೇನು ? ಗಾಯತ್ರಿಗೂ, ಮಧುಚ್ಛಂದಸ್ಸಿಗೂ ಇರತಕ್ಕ ನಿಕಟವಾದ ಸಂಬಂಧವೇನು ಎಂಬುದನ್ನು ಮುಂದೆ ತಿಳಿಸಲಾಗುತ್ತದೆ. ಐತರೇಯಾರಣ್ಯಕದಲ್ಲಿ ಹೇಳಿರುವಂತೆಯೇ ಗಾಯತ್ರಿಯು ಬ್ರಹ್ಮಾತ್ಮಕವೆಂದೂ ಬ್ರಹ್ಮಜ್ಞಾನಕ್ಕೆ ಇದೇ ಸಾಧನವೆಂದೂ ಅನೇಕ ಶ್ರುತಿವಾಕ್ಯಗಳಲ್ಲಿ ಪುನಃ ಪಠಿತವಾಗಿದೆ.



## ೧೨. ಕರ್ಮಾತ್ಮಕವಾದ ಯಜ್ಞವೇ ಬ್ರಹ್ಮಸ್ವರೂಪಿಯಾದುದರಿಂದ ಮೇಲಿನ ಆಕ್ಷೇಪಕ್ಕೆ ಅವಕಾಶವಿಲ್ಲ.

ಹೀಗೆ ಶ್ರುತಿಪ್ರಮಾಣಗಳಿದ್ದರೂ ಸಹ ಇನ್ನೊಂದು ಪ್ರಶ್ನೆಗೆ ಇಲ್ಲಿ ಅವಕಾಶವಿದೆ. ಕೇವಲ ಜ್ಞಾನವೇ ಇಲ್ಲಿ ಪ್ರಧಾನವಾಗಿದ್ದು ಧ್ಯಾನ, ಸಮಾಧಿ ಮತ್ತು ತಪಸ್ಸು ಇವುಗಳ ಮೂಲಕ ಬ್ರಹ್ಮಜ್ಞಾನದಲ್ಲಿ ಲಕ್ಷ್ಯವಿಟ್ಟರೆ ಆಗ ಗಾಯತ್ರಿಯು ಬ್ರಹ್ಮಜ್ಞಾನಕ್ಕೆ ಮುಖ್ಯಸಾಧಕವೆಂದು ಹೇಳಬಹುದು. ಆದರೆ ಗಾಯತ್ರಿಯ ಪ್ರಾಧಾನ್ಯವು ಯಜ್ಞದಲ್ಲಿ

CC-0. Jangamwadi Math Collection. Digitized by eGangotri

ಮಾತ್ರ. ಯಜ್ಞವು ಕರ್ಮಪ್ರಧಾನವಾದುದು. ಆದುದರಿಂದ ಕರ್ಮಪ್ರಧಾನವಾದ ಯಜ್ಞದಲ್ಲಿ ಪ್ರಾಧಾನ್ಯವನ್ನು ಹೊಂದಿರುವ ಗಾಯತ್ರಿಯು ಜ್ಞಾನಕ್ಕೆ ಹೇಗೆ ಸಾಕ್ಷಾತ್ಕಾರವಾಗುತ್ತದೆ ಎಂಬ ಆಶಂಕೆಗೂ ಅವಕಾಶವಿದೆ. ಈ ಪ್ರಶ್ನೆಗೆ ಉತ್ತರವು ಲಭಿಸಿ ಜ್ಞಾನದ ಅನ್ವೇಷಣದಲ್ಲಿ ಗಾಯತ್ರಿಯ ಪ್ರಧಾನಪಾತ್ರವನ್ನರಿಯಬೇಕಾದರೆ ಯಜ್ಞದ ನಿಜವಾದ ಸ್ವರೂಪವೇನು ? ಯಜ್ಞದ ಧ್ಯೇಯವೇನು ? ಬ್ರಹ್ಮತತ್ತ್ವಕ್ಕೂ ಯಜ್ಞತತ್ತ್ವಕ್ಕೂ ವಿರೋಧವೇ ? ಮುಂತಾದ ವಿಷಯುಗಳನ್ನು ಪರಿಶೀಲಿಸಬೇಕು. ಯಜ್ಞತತ್ತ್ವವನ್ನು ಪ್ರತಿಪಾದಿಸುವ ಸಂಹಿತಾವಾಕ್ಯಗಳೂ ಬ್ರಾಹ್ಮಣವಾಕ್ಯಗಳೂ ಸಹ ಯಜ್ಞವನ್ನು ಕೇವಲ ಐಹಿಕಫಲಸಾಧಕವಾದ ಕರ್ಮವೆಂದು ತಿಳಿಸಿಲ್ಲ. ಅನೇಕ ಕಡೆಗಳಲ್ಲಿ ಸೃಷ್ಟಿಸ್ಥಿತಿಲಯಕಾರಕನಾದ ಪ್ರಜಾಪತಿಗೂ ಯಜ್ಞಕ್ಕೂ ತಾದಾತ್ಮ್ಯವನ್ನೇ ಹೇಳಿದೆ.

> **ಸಂವತ್ಸರೋ ಯಜ್ಞಃ ಪ್ರಜಾಪತಿಃ ಸ ಯಾವಾನೇವ ಯಜ್ಞೋ ಯಾವತ್ಯಸ್ಯ ಮಾತ್ರಾ ತಾವಂತ-ಮೇವೈತತ್ಪರಿಗೃಹ್ಣಾತಿ ॥**
>
> (ಶ. ಬ್ರಾ. ೧-೨-೫-೧೨)

ಇತ್ಯಾದಿ ವಾಕ್ಯಗಳಲ್ಲಿ ಪ್ರಜಾಪತಿಗೂ ಕಾಲಾತ್ಮಕವಾದ ಸಂವತ್ಸರಕ್ಕೂ ಮತ್ತು ವತ್ಸರರೂಪವಾದ ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನು ಹೇಳಿದೆ. ಇಂತಹ ಯಜ್ಞದ ನಿರ್ಮಾಣವು ಹೇಗೆಂದರೆ—ತಂ **ಛಂದೋಭಿರಭಿತಃ ಪರಿಗೃಹ್ಯ** ಛಂದಸ್ಸುಗಳಿಂದ ಯಜ್ಞವೇದಿಯನ್ನು ಪರಿಗ್ರಹಿಸಿ ಅಗ್ನಿಯನ್ನು ಸ್ಥಾಪಿಸತಕ್ಕದ್ದು. ಯಜ್ಞನಿರ್ಮಾಣದಲ್ಲಿ ಸಕಲಸಾಮುಗ್ರಿಗಳಿಗಿಂತಲೂ ಛಂದಸ್ಸುಗಳೇ ಅತಿಮುಖ್ಯವಾದವು. ಈ ಯಜ್ಞವೇದಿಯೂ ಸಹ ಛಂದಸ್ಸುಗಳಿಗಿಂತಲೂ ಬೇರೆಯಾದುದಲ್ಲ.

> **ತಾನಿ ವಾ ಏತಾನಿ ಸಪ್ತವಿಗ್ಂಶತಿರ್ನಕ್ಷತ್ರಾಣಿ । ಛಂದಾಗ್ಂಸಿ ಹ ತ್ವೇವೈಷೋಽಗ್ನಿಶ್ಚಿತಃ ।**
> **ತಾನಿ ವಾ ಏತಾನಿ ಸಪ್ತಚ್ಛಂದಾಗ್ಂಸಿ । .... .... .... .... .... ॥**
> **ಅಯಂ ವಾವ ಲೋಕ ಏಷೋಽಗ್ನಿಶ್ಚಿತಃ ।**
> **ಅಂತರಿಕ್ಷಗ್ಂಹ ತ್ವೇವೈಷೋಽಗ್ನಿಶ್ಚಿತಃ । .... .... .... ದ್ಯೌರ್ಹತ್ವೇವೇಷೋಽಗ್ನಿಶ್ಚಿತಃ । .... ....**
> **.... .... .... ಆದಿತ್ಯೋ ಹ ತ್ವೇವೈಷೋಽಗ್ನಿಶ್ಚಿತಃ । .... .... ....**

ಈ ಯಜ್ಞವೇದಿಕೆಯೇ ಪಾರ್ಥಿವಲೋಕವು, ಇದೇ ಅಂತರಿಕ್ಷವು, ಇದೇ ದ್ಯುಲೋಕವು, ಇದೇ ಆದಿತ್ಯನು, ಆದಿತ್ಯನನ್ನು ಮುನ್ನೂರ ಅರವತ್ತು ದಿಕ್ಕುಗಳೂ, ಅವಾಂತರದಿಕ್ಕುಗಳೂ ಸುತ್ತುವರೆದಿವೆ. ಮುನ್ನೂರು ಅರವತ್ತು ಸಂಖ್ಯಾತಗಳಾದ ಯಜುಷ್ಮತಿಗಳೇ ಆದಿತ್ಯನ ಮುನ್ನೂರ ಅರವತ್ತು ರಶ್ಮಿಗಳಾಗಿವೆ. ಸೂದದೋಹಗಳೇ ಆದಿತ್ಯರಶ್ಮಿಗಳಿಗೂ ದಿಕ್ಕುಗಳಿಗೂ ಮಧ್ಯದಲ್ಲಿರುವ ತತ್ತ್ವವಿಶೇಷಗಳು, ಇವೇ ಸಪ್ತಚ್ಛಂದಸ್ಸುಗಳು.

> **ಸರ್ವಾಣಿ ಹ ತ್ವೇವ ಭೂತಾನಿ । ಸರ್ವೇ ದೇವಾ ಏಷೋಽಗ್ನಿಶ್ಚಿತ ಆಪೋ ವೈ ಸರ್ವೇ ದೇವಾಃ ಸರ್ವಾಣಿ ಭೂತಾನಿ ತಾ ಹ್ಯೇತಾ ಆಪ ಏವೈಷೋಽಗ್ನಿಶ್ಚಿತಸ್ತಸ್ಯ ನಾವ್ಯಾ ಏವ ಪರಿಶ್ರಿತಃ .... .... ಆತ್ಮಾಯಮೇವ ಸ ಯೋಽಯಂ ಹಿರಣ್ಮಯಃಪುರುಷಃ ।**
>
> (ಶ. ಬ್ರಾ. ೧೦-೫-೪-೧ ರಿಂದ ೧೫)

ಆದಿತ್ಯನ ಸುತ್ತಲೂ ಮುನ್ನೂರ ಅರವತ್ತು ರಶ್ಮಿರೂಪಗಳಾದ ನಾವೆಗಳು ಸುತ್ತುವರೆದಿರುವಂತೆ ಈ ವೇದಿಯ ಸುತ್ತಲೂ ಯಜುಃಷ್ಮತೀರೂಪದ ದೇವಮಾನವಾದಿಗಳು ಸುತ್ತುವರೆದಿದ್ದಾರೆ. ಈ ವೇದಿಕೆಯ ದೇಹವೇ ಆದಿತ್ಯಾಂತ

CC-0. Jangamwadi Math Collection. Digitized by eGangotri

ಗರ್ತನಾದ ಹಿರಣ್ಮಯಪುರುಷನು. ಈ ಹಿರಣ್ಮಯಪುರುಷನ ಸ್ವರೂಪವು ಎಷ್ಟು ಆಕರ್ಷಕವಾದದ್ದು, ಮತ್ತು ಎಷ್ಟು ಮಹತ್ತ್ವವುಳ್ಳದ್ದು ಎಂದರೆ—

ತಸ್ಯೈತೇ ಪ್ರತಿಷ್ಠೇ । ರುಕ್ಮಶ್ಚ ಪುಷ್ಕರಪರ್ಣಂ ಚಾಪಶ್ಚಾದಿತ್ಯಮಂಡಲಂ .... .... ತಾವಿಂದ್ರಾಗ್ನೀ ದ್ವೇ ಸ್ವಯಮಾತೃಣ್ಣೇ ಇಯಂ ಚಾಂತರಿಕ್ಷಂ ಚ .... .... ವಿಶ್ವಜ್ಯೋತಿಷ ಏತಾ ದೇವತಾ ಅಗ್ನಿರ್ವಾಯುರಾದಿತ್ಯ ಏತಾ ಹ್ಯೇವ ದೇವತಾಃ .... .... ಆತ್ಮಾ ಸ ಏಷಃ ಸರ್ವಾಸಾಮುಷಾಂ ಮಧ್ಯೇ ಸ ಏಷ ಸರ್ವೈಃ ಕಾಮೈಃ ಸಂಪನ್ನಃ .... .... ॥

ಸ್ವರ್ಣಪಾತ್ರವೂ ಪುಷ್ಕರಪರ್ಣವೂ ಈ ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನ ಎರಡು ಪಾದಗಳು. ಯಜ್ಞವೇದಿಯಲ್ಲಿರುವ ಎರಡು ಸ್ರುಚಗಳೂ ಇವನ ಬಾಹುಗಳು. ಇವರೇ ಇಂದ್ರಾಗ್ನಿಗಳು. ವಿಶ್ವಜ್ಯೋತೀರೂಪವಾದ ಇಷ್ಟಕಗಳೇ ಸಕಲ ದೇವತೆಗಳು. ಇವುಗಳ ಸಂಖ್ಯೆ ಮೂರು. ಈ ಮೂರೂ ಸಹ ಅಗ್ನಿ, ವಾಯು, ಮತ್ತು ಆದಿತ್ಯರನ್ನು ಪ್ರತಿಬಿಂಬಿಸುತ್ತದೆ. ಈ ವೇದಿಯ ದೇಹವೇ ಸಕಲಕ್ಕೂ ಅಂತವಾಗಿದೆ. ಈ ವೇದೀರೂಪನಾದವನೂ ಆದಿತ್ಯಾಂತರ್ಗತನೂ ಆದ ಹಿರಣ್ಮಯಪುರುಷನು ಸರ್ವಕಾಮುಗಳನ್ನೂ ಪಡೆದಿರುವುದರಿಂದ ಕಾಮರಹಿತನಾಗಿಯೂ ಪೂರ್ಣತೃಪ್ತನಾಗಿಯೂ ಇದ್ದಾನೆ.

ಹೀಗೆ ಈ ಯಜ್ಞತತ್ತ್ವವು ವಿಶ್ವದ ಐಕ್ಯವನ್ನೂ, ಈ ಐಕ್ಯದ ನೆಲೆಯು ಪರಬ್ರಹ್ಮನೆಂಬ ತತ್ತ್ವವನ್ನೂ ತಿಳಿಸುತ್ತದೆ. ಉಪನಿಷದಾದಿಗಳಲ್ಲಿ ಯಾವ ಮೂಲತತ್ತ್ವವನ್ನು ಪರಬ್ರಹ್ಮನೆಂದು ಕರೆದಿದೆಯೋ ಅದನ್ನು ಸಂಹಿತಾ ಮತ್ತು ಬ್ರಾಹ್ಮಣಗಳಲ್ಲಿ ಪ್ರಜಾಪತಿಯೆಂದು ಕರೆದಿದೆ. ಮತ್ತು ಯಜ್ಞಕ್ಕೂ ಪ್ರಜಾಪತಿಗೂ ತಾದಾತ್ಮ್ಯವನ್ನೇ ಹೇಳಿದೆ. ವಿಶ್ವಸೃಷ್ಟಿಯು ಪ್ರಜಾಪತಿಯ ಯಜ್ಞದ ತಪಸ್ಸಿನ ಫಲವು. ಜಗತ್ಕಾರಣನೂ ಜಗತ್ಸೃಷ್ಟಿಗೆ ಪೂರ್ವಭಾವಿಯಾಗಿ ಅದ್ವಿತೀಯನಾಗಿಯೂ ಇದ್ದ ಪ್ರಜಾಪತಿಯು ಸೃಷ್ಟಿಸಾಧನವಾದ ಯಜ್ಞವನ್ನು ನಿರ್ವಹಿಸಬೇಕಾದರೆ ಅದಕ್ಕೆ ಆಹುತಿಯಾಗಿ ತನ್ನನ್ನೇ ಅರ್ಪಿಸಬೇಕಾಯಿತು. **ಯ ಆತ್ಮದಾ ಬಲದಾ** । (ಋ. ಸಂ. ೧೦-೧೨೧-೨) ಇತ್ಯಾದಿ ವಾಕ್ಯಗಳಿಂದ ವರ್ಣಿತವಾಗಿರುವಂತೆ ಯಾವ ಪ್ರಜಾಪತಿಯು ಸೃಷ್ಟಿಕಾರ್ಯವನ್ನು ನಿರ್ವಹಿಸಿದನೋ ಯಾವನ ಆಜ್ಞೆಯನ್ನೇ ದೇವಾದಿಗಳೆಲ್ಲರೂ ನಿರ್ವಹಿಸುತ್ತಾರೆಯೋ, ಮೃತ್ಯುವೂ ಅಮೃತತತ್ತ್ವವೂ ಯಾವನ ಛಾಯೆಗಳೋ, ಅಂತಹ ವಿಶ್ವಹೇತುವಾದ ಪ್ರಜಾಪತಿಗೆ ನಾವೂ ಸಹ ಯಜ್ಞಕರ್ಮಗಳನ್ನಾಚರಿಸಿ ಆರಾಧಿಸೋಣ ಎಂದು ಯಜ್ಞದ ಪರಮಪ್ರಯೋಜನವನ್ನು ತಿಳಿಸಿದೆ.

ಯಜ್ಞತತ್ತ್ವದಲ್ಲಿಡಬೇಕಾದ ಈ ಶ್ರದ್ಧೆಯು ಕೇವಲ ಅಂಧಶ್ರದ್ಧೆಯಲ್ಲ. ಈ ಶ್ರದ್ಧೆಯು ಆಧ್ಯಾತ್ಮಿಕವಾದ ತತ್ತ್ವವನ್ನು ಗ್ರಹಣಮಾಡುವ ಶಕ್ತಿಯುಳ್ಳದ್ದಾಗಿರಬೇಕು. ಇದು ಭುವನನಾಭಿಯಾದ ಯಜ್ಞಕ್ಕೂ ಬ್ರಹ್ಮತತ್ತ್ವಕ್ಕೂ ಇರುವ ಸಂಬಂಧವನ್ನು ತಿಳಿಸುತ್ತದೆ. ಆಧ್ಯಾತ್ಮಿಕಜ್ಞಾನದ ಆಧಾರದ ಮೇಲೆ ನಿಂತಿರುವ ಈ ಶ್ರದ್ಧೆಯುಳ್ಳ ಯಜಮಾನನು ತನಗೂ ಯಜ್ಞಕ್ಕೂ ತಾದಾತ್ಮ್ಯವನ್ನು ಅರಿತುಕೊಳ್ಳುತ್ತಾನೆ. ಪ್ರಜಾಪತಿರೂಪಿಯಾದ ಪರಬ್ರಹ್ಮನ ವಿಶ್ವವ್ಯವಹಾರಗಳೆಲ್ಲವೂ ಈ ಯಜ್ಞತತ್ತ್ವದಲ್ಲಡಗಿರುತ್ತದೆಯೆಂದರಿಯುತ್ತಾನೆ. ಮತ್ತು ಆ ವಿಶ್ವಚಕ್ರದಲ್ಲಿ ತಾನೂ ಭಾಗವನ್ನು ವಹಿಸುತ್ತಾನೆ. ಈ ಸಾಕ್ಷಾತ್ಕಾರಕ್ಕೆ ಧ್ಯಾನವೂ ಅಂತಶ್ಚಕ್ಷುಸ್ಸಿನ ದರ್ಶನವೂ ಅತ್ಯವಶ್ಯವಾಗಿರುತ್ತದೆ.

ಪಶ್ಯನ್ ಮನ್ಯೇ ಮನಸಾ ಚಕ್ಷಸಾ ತಾನ್ ಯ ಇಮಂ ಯಜ್ಞಮಯಜಂತ ಪೂರ್ವೇ ॥

(ಋ. ಸಂ. ೧೦-೧೩೦-೬)

CC-0. Jangamwadi Math Collection. Digitized by eGangotri

ಈ ವಿಶ್ವವ್ಯವಹಾರಕ್ಕೆ ಮೂಲವಾದ ಯಜ್ಞತತ್ತ್ವವನ್ನರಿತ ದೇವತೆಗಳನ್ನೂ ಋಷಿಗಳನ್ನೂ ಸಹ ನಾನು ಧ್ಯಾನರೂಪವಾದ ಅಂತಶ್ಚಕ್ಷುಸ್ಸಿನ ಸಹಾಯದಿಂದ ಅರಿತು ಅವರನ್ನು ಸ್ತುತಿಸುತ್ತೇನೆ ಎಂದು ಧ್ಯಾನದ ಆವಶ್ಯಕತೆಯನ್ನು ತಿಳಿಸಿದೆ.

ಯಾವ ಸವಿತೃದೇವನ ಭರ್ಗವನ್ನರಿಯಬೇಕೆಂದು ಅಪೇಕ್ಷೆಯಿದೆಯೋ ಯಾವ ಮಹಾಜ್ಯೋತಿಯ ಸ್ವರೂಪವನ್ನರಿಯಲು ನಮಗೆ ಧ್ಯಾನಾತ್ಮಕವಾದ ಬುದ್ಧಿಯನ್ನು ಕೊಡು—**ಧಿಯೋ ಯೋ ನಃ ಪ್ರಚೋದಯಾತ್** ಎಂದು ಪ್ರಾರ್ಥಿಸಿದೆಯೋ ಅಂತಹ ಸವಿತೃದೇವತೆಯನ್ನುದ್ದೇಶಿಸಿದ ಸೂಕ್ತದಲ್ಲಿ ಈ ಯಜ್ಞಪ್ರಯೋಜನವು ತಿಳಿಸಲ್ಪಟ್ಟಿದೆ.

**ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ ।**
**ವಿ ಹೋತ್ರಾ ದಧೇ ವಯುನಾವಿದೇಕ ಇನ್ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ ॥**

(ಋ. ಸಂ. ೫-೮೧-೧)

ಯಜ್ಞಕರ್ಮದಲ್ಲಿ ನಿರತರಾದ ವಿಪ್ರರು ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಯೋಗರೂಪವಾದ ಧ್ಯಾನದಿಂದ ಸವಿತೃವನ್ನು ಆರಾಧಿಸುವರು ಎಂದು ಧ್ಯಾನದ ಆವಶ್ಯಕತೆಯನ್ನು ತಿಳಿಸಿದೆ. ಈ ಧ್ಯಾನದಿಂದ ಸವಿತೃವಿನ ದಿವ್ಯಸ್ವರೂಪವನ್ನರಿಯುವುದೇ ಯಜ್ಞದ ಪರಮಪ್ರಯೋಜನವೆಂದಾಯಿತು. ಪ್ರಕೃತವಾದ **ತತ್ಸವಿತುಃ** ಎಂಬ ಮಂತ್ರದಲ್ಲಿ ಧೀಯನ್ನನುಗ್ರಹಿಸು ಎಂಬ ಪ್ರಾರ್ಥನೆಯ ಮಹತ್ತ್ವವನ್ನು ತಿಳಿಸಿ ಧೀಶಬ್ದಕ್ಕೆ ಸರಿಯಾದ ಅರ್ಥವೇನೆಂಬುದನ್ನು ವಿಮರ್ಶಿಸುವಾಗ ಪುನಃ ಈ ವಿಷಯವನ್ನು ವಿವರಿಸಲಾಗುತ್ತದೆ.

ಯಾವ ರೀತಿ ಯಜ್ಞತತ್ತ್ವವು **ಯೋ ಯಜ್ಞೋ ವಿಶ್ವತಸ್ತಂತುಭಿಸ್ತತ ಏಕಶತಂ** ಎಂಬ ವಾಕ್ಯಗಳಿಂದ ವಿಶ್ವತಂತುವೆಂದು ವರ್ಣಿತವಾಗಿದೆಯೋ ಅದರಂತೆಯೇ ಯಜ್ಞನಿರ್ವಹಣಕಾರ್ಯದಲ್ಲಿ ಪ್ರಾಧಾನ್ಯವನ್ನು ಹೊಂದಿವರು ಗಾಯತ್ರಿಯೂ ಸಹ **ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ** ಜಂಗಮಾಜಂಗಮಾತ್ಮಕಗಳಾದ ಸಕಲಭೂತಗಳೂ ಸಹ ಗಾಯತ್ರ್ಯಾತ್ಮಕವಾಗಿಯೇ ಇವೆ ಎಂದು ಗಾಯತ್ರಿಯ ವಿಶ್ವವ್ಯಾಪಕತ್ವವನ್ನೂ ಸಕಲಜಗತ್ತನ್ನೂ ತನ್ನಲ್ಲಿ ಐಕ್ಯಮಾಡಿಕೊಂಡಿರುವುದನ್ನೂ ತಿಳಿಸಿದೆ.

---

## ೧೩. ಗಾಯತ್ರಿಯು ಬ್ರಹ್ಮಜ್ಞಾನಕ್ಕೆ ಕೇವಲ ಸಾಧನವೇ ಅಥವಾ ಜ್ಞಾನರೂಪವಾದ ಸಾಧ್ಯವೇ ಎಂಬ ವಿಷಯದಲ್ಲಿ ಚರ್ಚೆ.

ಆದರೆ, **ಅಥಾತಃ ಶಿರಃ । ತದ್ಗಾಯತ್ರೀಷು ಭವತ್ಯಗ್ರಂ ವೈ ಛಂದಸಾಂ ಗಾಯತ್ರೀ ।** (ಐ. ಆ. ೧-೪-೧) ಇತ್ಯಾದಿಯಾಗಿ ಛಂದೋರೂಪಿಯಾದ ಗಾಯತ್ರಿಯ ವೈಶಿಷ್ಟ್ಯವು ವರ್ಣಿತವಾಗಿದೆ. ಯಾಗಾದಿಕಾರ್ಯನಿರ್ವಹಣಕ್ಕೂ ಸಹ ಛಂದೋರೂಪಿಯಾದ ಗಾಯತ್ರಿಯೇ ಅತ್ಯಂತ ಪ್ರಯೋಜನಕಾರಿಯಾದ ಪ್ರಾಧಾನ್ಯವನ್ನು ವಹಿಸುತ್ತದೆ. ಛಂದಸ್ಸು ತತ್ತ್ವಾನ್ವೇಷಣೆಗೆ ಕೇವಲ ಸಾಧನವಾಗಬಲ್ಲುದೇ ವಿನಹ ಅದೇ ಸಾಧ್ಯವಸ್ತುವಾಗಲಾರದು. ಆದುದರಿಂದ ಛಂದಸ್ಸಿನ ರೂಪವನ್ನು ಹೊಂದಿರುವ ಗಾಯತ್ರಿಯು ಪರಬ್ರಹ್ಮತತ್ತ್ವವನ್ನು ಪ್ರತಿಬಿಂಬಿಸಿ ಪ್ರತಿಪಾದಿ



CC-0. Jangamwadi Math Collection. Digitized by eGangotri

ಸುವ ತತ್ತ್ವಾತ್ಮಕವಾಗಿರಬಲ್ಲುದೇ, ಅದು ಸಾಧ್ಯವೇ ಎಂಬ ಆಶಂಕೆಯೂ ಬರುತ್ತದೆ. ಇಂತಹುದೇ ಆಶಂಕೆಯು ಬ್ರಹ್ಮಸೂತ್ರದಲ್ಲೂ ಸಹ ನಿರೀಕ್ಷಿಸಲ್ಪಟ್ಟು ಅದಕ್ಕೆ ಸಮಾಧಾನವನ್ನು ಹೇಳಿ ಗಾಯತ್ರಿಯು ಪರಬ್ರಹ್ಮತತ್ತ್ವವೇ ಅಲ್ಲದೆ ಬೇರೆಯಲ್ಲ ಎಂಬ ಸಿದ್ಧಾಂತವನ್ನು ಸಮರ್ಥಿಸಿದೆ. ಆ ವಾಕ್ಯಾರ್ಥವೂ ಸಹ ವೈದಿಕವಾಕ್ಯಗಳನ್ನೇ ಪ್ರಮಾಣ ವಾಗಿ ತೆಗೆದುಕೊಂಡು ತತ್ತ್ವಪ್ರತಿಪಾದನೆಯನ್ನು ಮಾಡಿರುವುದರಿಂದ ಪ್ರಕೃತದಲ್ಲಿ ಆ ವಾಕ್ಯಾರ್ಥವನ್ನೂ ಪರಿಶೀಲಿಸ ಬಹುದು.

> ಅಪಿ ಯದುಕ್ತಂ ಪೂರ್ವಸ್ಮಿನ್ನಪಿ ವಾಕ್ಯೇ ನ ಬ್ರಹ್ಮ ಅಭಿಹಿತಮಸ್ತಿ । ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ, ಇತಿ ಗಾಯತ್ರ್ಯಾಖ್ಯಸ್ಯ ಛಂದಸೋಽಭಿಹಿತ್ವಾತ್ ಇತಿ ತತ್ ಪರಿಹರ್ತವ್ಯಂ । ಕಥಂ ಪುನಃ ಛಂದೋಽಭಿಧಾನಾತ್ ನ ಬ್ರಹ್ಮ ಅಭಿಹಿತಂ ಇತಿ ಶಕ್ಯತೇ ವಕ್ತುಂ । ಯಾವತಾ ತಾವಾನಸ್ಯ ಮಹಿಮಾ ಇತ್ಯೇತಸ್ಯಾಂ ಋಚಿ ಚತುಷ್ಪಾದ್ ಬ್ರಹ್ಮ ದರ್ಶಿತ್ವಂ । ನೈತದಸ್ತಿ । ಗಾಯತ್ರೀ ವಾ ಇದಂ ಸರ್ವಂ ಇತಿ ಗಾಯತ್ರೀಂ ಉಪಕ್ರಮ್ಯ ತಾಮೇವ ಭೂತಪೃಥಿವೀಶರೀರಹೃದಯವಾಕ್ಪ್ರಾಣಪ್ರಭೇದೈರ್ವ್ಯಾಖ್ಯಾಯ । ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯನೂಕ್ತಂ ತಾವಾನಸ್ಯ ಮಹಿಮಾ ಇತಿ ತಸ್ಯಾಮೇವ ವ್ಯಾಖ್ಯಾತರೂಪಾಯಾಂ ಗಾಯತ್ರ್ಯಾಂ ಉದಾಹೃತೋ ಮಂತ್ರಃ ಕಥಂ ಅಕಸ್ಮಾತ್ ಬ್ರಹ್ಮ ಚತುಷ್ಪಾತ್ ಅಭಿದಧ್ಯಾತ್ । ಯೋಽಪಿ ಯದ್ವೈತದ್ಬ್ರಹ್ಮ ಇತಿ ಬ್ರಹ್ಮಶಬ್ದಃ ಸೋಽಪಿ ಛಂದಸಃ ಪ್ರಕೃತತ್ವಾತ್ ಛಂದೋವಿಷಯ ಏವ .... .... ತಸ್ಮಾತ್ ಛಂದೋಽಭಿಧಾನಾತ್ ನ ಬ್ರಹ್ಮಣಃ ಪ್ರಕೃತತ್ವಂ ॥
>
> (ಬ್ರಹ್ಮಸೂತ್ರ. ಶಾ. ಭಾ. ೧-೧-೨೫)

ವಿಶ್ವದಲ್ಲಿರುವ ಸಕಲ ಸ್ಥಾವರಜಂಗಮಾತ್ಮಕವಾದ ಭೂತಗಳೆಲ್ಲವೂ ಗಾಯತ್ರಿಯೇ (ಛಾ. ಉ. ೩-೧೨-೧) ಎಂದು ಗಾಯತ್ರಿಯ ಸ್ವರೂಪವನ್ನು ವಿವರಿಸುವಾಗ ಅದು ಛಂದೋರೂಪವಾದ ಗಾಯತ್ರಿಯೇ ಹೊರತು ಪರಬ್ರಹ್ಮವನ್ನು ನಿರ್ದೇಶಿಸತಕ್ಕ ತತ್ತ್ವವನ್ನು ಹೇಳುವುದಿಲ್ಲ ಎಂಬ ಪೂರ್ವಪಕ್ಷವು ಸರಿಯಲ್ಲ ಎಂದು ಸಮರ್ಥಿಸಲು ಪುನಃ ಅದೇ ಛಂದೋಗ್ಯೋಪನಿಷತ್ತಿನಲ್ಲಿಯೇ ಏತಾವಾನಸ್ಯ ಮಹಿಮಾ—ಇದರ ಮಹಿಮೆಯು ಅಷ್ಟು ಅಪಾರವಾದುದು (ಛಾ. ಉ. ೩-೧೨-೬) ಎಂಬ ಮಂತ್ರದಲ್ಲಿ ನಾಲ್ಕುಪಾದದ ಬ್ರಹ್ಮದ ಸ್ವರೂಪವನ್ನು ತಿಳಿಸಿದೆ. ಆದುದರಿಂದ ಇಲ್ಲಿ ಗಾಯತ್ರೀ ಶಬ್ದದಿಂದ ಪರಬ್ರಹ್ಮವಸ್ತುವೇ ವಿನಹ ಕೇವಲ ಛಂದೋರೂಪಿಯಾದ ಗಾಯತ್ರಿಯಲ್ಲ ಎಂದು ಸಿದ್ಧಾಂತಿಯು ಹೇಳಿದರೆ ಪೂರ್ವಪಕ್ಷಿಯು ಅದಕ್ಕೆ ವಿರೋಧವಾಗಿ ಇನ್ನೊಂದರ್ಥವನ್ನು ಕಲ್ಪಿಸುತ್ತಾ ಆ ವಾಕ್ಯಕ್ಕೆ ಈ ರೀತಿ ವ್ಯಾಖ್ಯಾನ ಮಾಡುತ್ತಾನೆ. **ಗಾಯತ್ರೀ ವಾ ಇದಂ ಸರ್ವಂ ಭೂತಂ** ಎಂದು ಗಾಯತ್ರಿಯನ್ನುಪಕ್ರಮಿಸಿ ಅದೇ ಗಾಯತ್ರಿ ಯನ್ನು ಭೂತ, ಪೃಥಿವಿ, ಶರೀರ, ಹೃದಯ, ವಾಕ್ಕು, ಪ್ರಾಣ ಎಂಬ ಅವಾಂತರಭೇದಗಳನ್ನಾಗಿ ವಿಭಾಗಿಸಿ ಇದೇ ಚತುಷ್ಪದಾತ್ಮಕವಾದದ್ದು ಮತ್ತು ಆರು ವಿಧವಾದದ್ದು. ಇದನ್ನೇ ಋಙ್ಮಂತ್ರದಲ್ಲಿ ಏತಾವಾನಸ್ಯ ಮಹಿಮಾ ಎಂದು ವರ್ಣಿಸಿದೆ. ಇಂತಹ ಛಂದಸ್ಸಿನ ವರ್ಣನವು ಚತುಷ್ಪದಾತ್ಮಕವಾದ ಬ್ರಹ್ಮವನ್ನು ಹೇಗೆ ನಿರ್ದೇಶಿಸಬಲ್ಲುದು ? ಪ್ರಕೃತದಲ್ಲಿ ಛಂದಸ್ಸೇ ಉದ್ದಿಷ್ಟವಾದುದರಿಂದ ಛಂದಸ್ಸಿನ ವಿಷಯವು ಹೇಳಲ್ಪಟ್ಟಿದೆ. ಪರಬ್ರಹ್ಮದ ವಿಷಯವೇ ಇಲ್ಲ, ಎಂದು ಪೂರ್ವಪಕ್ಷಿಯು ಸಮರ್ಥಿಸಿಕೊಳ್ಳುತ್ತಾನೆ. ಅದಕ್ಕೆ ಉತ್ತರವಾಗಿ ಸಿದ್ಧಾಂತಿಯ ವಾಕ್ಯಾರ್ಥವು ಈ ರೀತಿ ಯಲ್ಲಿದೆ—

CC-0. Jangamwadi Math Collection. Digitized by eGangotri

ನೈಷ ದೋಷಃ । ತಥಾ ಚೇತೋಽರ್ಪಣನಿಗದಾತ್ । ತಥಾ ಗಾಯತ್ರ್ಯಾಖ್ಯಚ್ಛಂದೋದ್ವಾರೇಣ ತದನುಗತೇ ಬ್ರಹ್ಮಣಿ ಚೇತಸಃ ಅರ್ಪಣಂ ಚಿತ್ತಸಮಾಧಾನಂ ಅನೇನ ಬ್ರಾಹ್ಮಣವಾಕ್ಯೇನ ನಿಗದ್ಯತೇ । ಗಾಯತ್ರೀ ವಾ ಇದಂ ಸರ್ವಂ ಇತಿ । ನ ಹಿ ಅಕ್ಷರಸಂನಿವೇಶಮಾತ್ರಾಯಾ ಗಾಯತ್ರ್ಯಾಃ ಸರ್ವಾತ್ಮಕತ್ವಂ ಸಂಭವತಿ । ತಸ್ಮಾತ್ ಯತ್ ಗಾಯತ್ರ್ಯಾಖ್ಯವಿಕಾರೇ ಅನುಗತಂ ಜಗತ್ಕಾರಣಂ ಬ್ರಹ್ಮ ತದಿಹ ಸರ್ವಂ ಇತ್ಯುಚ್ಯತೇ ... .... .... ತಸ್ಮಾತ್ ಅಸ್ತಿ ಛಂದೋಽಭಿಧಾನೇಽಪಿ ಪೂರ್ವಸ್ಮಿನ್ ವಾಕ್ಯೇ ಚತುಷ್ಪಾತ್ ಬ್ರಹ್ಮ ನಿರ್ದಿಷ್ಟಂ । ತದೇವ ಜ್ಯೋತಿರ್ವಾಕ್ಯೇಽಪಿ ಪರಾಮೃಶ್ಯತೇ ಉಪಾಸನಾಂತರವಿಧಾನಾಯ ॥

(ಶ. ಭಾ. ಬ್ರ. ಸೂ. ೧-೧-.೫)

ಪೂರ್ವಪಕ್ಷಿಯ ವಾಕ್ಯಾರ್ಥವು ಸಮಂಜಸವಾಗಿಲ್ಲ. ಏಕೆಂದರೆ ಪ್ರಕೃತದಲ್ಲಿ ಪರಮವಸ್ತುವಿನಲ್ಲಿ ಚಿತ್ತವನ್ನು ಅರ್ಪಿಸಿ ಧ್ಯಾನಮಾಡಬೇಕು ಎಂದು ಹೇಳಿರುವುದರಿಂದ ಗಾಯತ್ರ್ಯಾಖ್ಯವಾದ ಛಂದಸ್ಸಿನ ದ್ವಾರಾ ಅದರಲ್ಲಿ ಅನುಗತವಾಗಿರುವ ಬ್ರಹ್ಮದಲ್ಲಿ ಚಿತ್ತವನ್ನು ಅರ್ಪಣಮಾಡಬೇಕೆಂದು **ಗಾಯತ್ರೀ ವಾ ಇದಂ ಸರ್ವಂ** ಎಂಬ ಮಂತ್ರವಾಕ್ಯದಿಂದ ಹೇಳಿದೆ. ಕೇವಲ ಅಕ್ಷರಗಳಸಂಯೋಗರೂಪದಲ್ಲಿರುವುದೂ ಛಂದೋರೂಪಿಯಾದುದೂ ಆದ ಗಾಯತ್ರಿಯು ಸರ್ವಾತ್ಮಕವಾಗಿರುವುದು ಎಂದು ಹೇಳುವುದು ಅಸಮಂಜಸವಾಗುತ್ತದೆ. ಆದುದರಿಂದ **ಗಾಯತ್ರೀ** ಎಂಬ ಕಾರ್ಯ ರೂಪದಲ್ಲಿರತಕ್ಕದ್ದೂ ಜಗತ್ತಿಗೆಲ್ಲಾ ಕಾರಣರೂಪವಾಗಿರತಕ್ಕದ್ದೂ ಆದ ಪರಬ್ರಹ್ಮವೇ ನಿರ್ದಿಷ್ಟವಾದ ವಸ್ತುವೆಂದು ನಿಷ್ಕೃಷ್ಟವಾಗಿ ಹೇಳಬಹುದು. ಕಾರ್ಯಕ್ಕಿಂತಲೂ ಕಾರಣವು ಬೇರೆಯಾದುದಲ್ಲ ಎಂದು **ತದನನ್ಯತ್ವಮಾರಂಭಣ-ಶಬ್ದಾದಿಭ್ಯಃ** ಎಂಬ (೨-೧-೧೪) ಸೂತ್ರದಲ್ಲಿ ಉಕ್ತವಾಗಿದೆ.

ಬೇರೆ ಶ್ರುತಿಗಳಲ್ಲಿಯೂ ಸಹ ಕಾರ್ಯದ ದ್ವಾರಾ ಕಾರಣರೂಪವಾದ ಪರಬ್ರಹ್ಮತತ್ತ್ವವನ್ನು ಉಪಾಸನೆ ಮಾಡಬೇಕು ಎಂದು ಹೇಳಿರುತ್ತದೆ. (ಐ. ಆ. ೩-೨-೩)

**ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ । ಸ ಏಷ ಸಂವತ್ಸರಸಮಾನಶ್ಚಕ್ಷುರ್ಮಯಃ ಶ್ರೋತ್ರಮಯಶ್ಛಂದೋಮಯೋ ಮನೋಮಯೋ ವಾಙ್ಮಯ ಆತ್ಮಾ ಸ ಯ ಏವಮೇತಂ .... .... ....ಶಂಸತಿ ॥**

(ಐ. ಆ. ೩-೨-೩)

ಚಕ್ಷುಸ್, ಶ್ರೋತ್ರ, ಛಂದಸ್ಸು ಇತ್ಯಾದಿಯಾಗಿ ಕಾರ್ಯರೂಪದಲ್ಲಿ ನಾನಾರೂಪಗಳಾಗಿ ಪರಿವರ್ತಿತವಾಗಿರುವ ಕಾರಣವಸ್ತುವೇ ಪರಬ್ರಹ್ಮನು. ಈ ಪರಬ್ರಹ್ಮವಸ್ತುವನ್ನೇ ಛಂದಸ್ಸೇ ಮೊದಲಾದ ರೂಪಗಳಲ್ಲಿ ಉಪಾಸಿಸಬೇಕು ಎಂದು ಮೇಲಿನ ಅರ್ಥವನ್ನು ಈ ಶ್ರುತಿವಾಕ್ಯಗಳು ಪ್ರತಿಪಾದಿಸುತ್ತವೆ.

ಆದುದರಿಂದ ಕೆಲವೆಡೆಗಳಲ್ಲಿ ಗಾಯತ್ರೀಪದವು ಛಂದಸ್ಸೆಂದು ಅರ್ಥವನ್ನು ಸ್ಪಷ್ಟವಾಗಿ ತಿಳಿಸಿದರೂ **ಗಾಯತ್ರೀ ವಾ ಇದಗ್ಂ ಸರ್ವಂ** ಎಂಬ ಉಪನಿಷದ್ವಾಕ್ಯವು ಪರಬ್ರಹ್ಮವಸ್ತುವನ್ನೇ ನಿರ್ದೇಶಿಸುವುದೆನ್ನುವುದರಲ್ಲಿ ಸಂಶಯವಿಲ್ಲ. ಛಂದಸ್ಸೆಂದು ಪರಿಗಣಿತವಾದರೂ ಸಹ, ಯಾವ ರೀತಿ ಅಲೌಕಿಕವೂ, ಲೌಕಿಕಸಾಮಾನ್ಯಪ್ರತ್ಯಕ್ಷಕ್ಕೆ ಅತೀತವೂ ಕಾರಣವಸ್ತುವೂ ಆದ ಪರಬ್ರಹ್ಮನು ಲೌಕಿಕವಾದ ಕಾರ್ಯವಸ್ತುಗಳ ದ್ವಾರಾ ತನ್ನನ್ನು ಪ್ರಕಾಶಪಡಿಸು ವಂತೆಯೇ, ಗಾಯತ್ರೀತತ್ತ್ವವೇ ಪರಬ್ರಹ್ಮತತ್ತ್ವವು **ಸೈಷಾ ಚತುಷ್ಪದಾ ಗಾಯತ್ರೀ** (ಛಾ. ಉ. ೩-೧೨-೫)

CC-0. Jangamwadi Math Collection. Digitized by eGangotri

ಎಂದು ವರ್ಣಿತವಾಗಿದೆ. ಈ ನಾಲ್ಕು ಪಾದಗಳಲ್ಲಿ ಮೊದಲನೆಯ ಮೂರು ಪಾದಗಳು ಕಾರ್ಯರೂಪವಾದ ಪ್ರಪಂಚವನ್ನೂ, ತುರೀಯ (ನಾಲ್ಕನೆಯ) ಪಾದವು ಕಾರಣರೂಪವಾದ ಬ್ರಹ್ಮತತ್ತ್ವವನ್ನೂ ಪ್ರತಿಬಿಂಬಿಸುವುವು. ಗಾಯತ್ರೀಪದಕ್ಕೆ ಛಂದಸ್ಸೆಂದು ಅರ್ಥಮಾಡಿದರೂ ಸಹ ಈ ಎರಡುಸ್ವರೂಪಗಳನ್ನೂ ಪಡೆದಿರತಕ್ಕ ಛಂದಸ್ಸೆಂದು ತಾತ್ಪರ್ಯವನ್ನು ಹೇಳಬೇಕು. ಮೊದಲನೆಯ ಮೂರು ಪಾದಗಳೂ ಸಹ ಲೌಕಿಕವಾದ ಬುದ್ಧಿಗೆ ಗ್ರಾಹ್ಯವಾಗತಕ್ಕವು ತುರೀಯ ಪಾದವು ಯೋಗದಿಂದಲೂ ಧ್ಯಾನದಿಂದಲೂ ಸಾಕ್ಷಾತ್ಕರಿಸಲ್ಪಡತಕ್ಕದ್ದು.

---

## ೧೪. ಛಂದಸ್ಸಿನ ಆಧ್ಯಾತ್ಮಿಕಲಕ್ಷಣ ಮತ್ತು ಜ್ಞಾನಾನ್ವೇಷಣದಲ್ಲಿ ಗಾಯತ್ರಿಯ ಪ್ರಾಧಾನ್ಯ.

ದೇವಾ ವೈ ಮೃತ್ಯೋರ್ಬಿಭ್ಯತಸ್ತ್ರಯೀಂ ವಿದ್ಯಾಂ ಪ್ರಾವಿಶಂಸ್ತೇ ಛಂದೋಭಿರಾಚ್ಛಾದಯನ್ಯ-ದೇಭಿರಾಚ್ಛಾದಯನ್ಸ್ತಚ್ಛಂದಸಾಂ ಛಂದಸ್ತ್ವಂ ।

(ಛಾ. ಉ. ೧-೪-೨)

ಎಂಬ ಈ ವಾಕ್ಯವು ಛಂದಸ್ಸಿನ ಸಾಮಾನ್ಯಲಕ್ಷಣವನ್ನು ತಿಳಿಸುತ್ತದೆ. ದೇವತೆಗಳು ಮೃತ್ಯುವಿಗೆ ಹೆದರಿ ತ್ರಯೀಯನ್ನು ಪ್ರವೇಶಿಸಿದಾಗ ತ್ರಯೀವಿದ್ಯೆಯು ಇವರನ್ನು ಛಂದಸ್ಸುಗಳಿಂದ ಮರೆಸಿತು. ಛಂದಶ್ಶಬ್ದವು, ಆಚ್ಛಾದಿಸು,' ಮರೆಸು ಎಂಬರ್ಥವುಳ್ಳ ಛದ್ ಧಾತುವಿನಿಂದ ನಿಷ್ಪನ್ನವಾಗಿದೆ. ಮೃತ್ಯುವಿನಿಂದ ಛಾದನಮಾಡಿದುದರಿಂದ ಇವುಗಳಿಗೆ ಛಂದಸ್ಸೆಂದು ಹೆಸರು ಎಂದು ಇದರ ಲಕ್ಷಣವನ್ನು ತಿಳಿಸಿದೆ. (ಸಂತೋಷಪಡಿಸು ಎಂಬರ್ಥದಲ್ಲೂ ಇದರ ಪ್ರಯೋಗವಿದೆ).

ಆದರೆ, ಮೃತ್ಯುಮುಖದಿಂದ ದೇವತೆಗಳನ್ನು ಛಂದಸ್ಸುಗಳು ಮರೆಸಿದರೂ ಸಹ, ಮೃತ್ಯುವು ಈ ದೇವತೆಗಳು ತ್ರಯಿಯಲ್ಲಿ ಅಡಗಿರುವುದನ್ನು ಕಂಡುಕೊಂಡಿತು ಎಂದು ಛಂದಸ್ಸುಗಳ ಶಕ್ತಿಯವಿಷಯದಲ್ಲಿ ಒಂದು ನ್ಯೂನತೆಯನ್ನೂ ತಿಳಿಸಿದೆ. ಇಂತಹ ಸಂದರ್ಭಗಳಲ್ಲಿ ಲೌಕಿಕವಾದುದೂ ಕಾರ್ಯಪ್ರಪಂಚಕ್ಕೆ ಸೇರಿದುದೂ ಆಗಿರುವುದೆಂದು ತಾತ್ಪರ್ಯ. ಇಂತಹ ಛಂದಸ್ಸು ಸಂತೋಷಕಾರಕವಾದರೂ ಸಹ ಆ ಸಂತೋಷವು ಪರಿಮಿತಿಯುಳ್ಳದ್ದು. ಗಾಯತ್ರೀಛಂದಸ್ಸಿನ ವಿಷಯವನ್ನು ಹೇಳುವಾಗಲೂ ಸಹ ಈ ವಿಧವಾದ ಎರಡು ರೂಪಗಳನ್ನೂ ವರ್ಣಿಸಿ ಗಾಯತ್ರಿಯನ್ನು ಸ್ತುತಿಸಿವೆ. ಗಾಯತ್ರಿಯ ಮೊದಲಿನ ಮೂರು ಪಾದಗಳು ಅಪರತತ್ತ್ವವನ್ನೂ ತುರೀಯಪಾದವು ಪರತತ್ತ್ವವನ್ನೂ ಪ್ರತಿಬಿಂಬಿಸುವುವು ಎಂದು ಉಪನಿಷತ್ತುಗಳು ಗಾಯತ್ರಿಯನ್ನು ಸ್ತುತಿಸಿವೆ.

ಭೂಮಿರಂತರಿಕ್ಷಂ ದ್ಯೌರಿತ್ಯಷ್ಟಾವಕ್ಷರಾಣಿ । ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಂ । ಏತದು ಹೈವಾಸ್ಯಾ ಏತದೇವಂ ಪದಂ ವೇದ ।

(ಬೃ. ಉ. ೫-೧೪-೧)

ಭೂಮಿ, ಅಂತರಿಕ್ಷ, ದ್ಯೌಃ ಎಂಬ ಈ ಅಷ್ಟಾಕ್ಷರಗಳು ಗಾಯತ್ರಿಯ ಪ್ರಥಮಪಾದವು. ಆದುದರಿಂದ ಈ ಮೂರು ಲೋಕಗಳೂ ಸೇರಿ ಗಾಯತ್ರಿಯ ಒಂದು ಪಾದವಾಗುತ್ತವೆ. ಈ ತತ್ತ್ವವನ್ನರಿತವನು ಈ ಮೂರು ಲೋಕಗಳ ಸಂಪತ್ತನ್ನೂ ಪಡೆಯುವನು.

CC-0. Jangamwadi Math Collection. Digitized by eGangotri

ಋಚೋ ಯಜೂಗ್ಂಷಿ, ಸಾಮಾನಿ ಇತ್ಯಷ್ಟಾವಕ್ಷರಾಣಿ । ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಂ । ಏತದು ಹೈವಾಸ್ಯಾ ಏತತ್ । ಸ ಯಾವತೀಯಂ ತ್ರಯೀ ವಿದ್ಯಾ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದ ।

(ಬೃ. ಉ. ೫-೧೪-೨)

ಋಚಃ, ಯಜೂಗ್ಂಷಿ, ಸಾಮಾನಿ ಎಂಬ ಈ ಅಷ್ಟಾಕ್ಷರಗಳು ಗಾಯತ್ರಿಯ ಎರಡನೆ ಪಾದವು. ಈ ತತ್ತ್ವವನ್ನರಿತವನು ಜ್ಞಾನನಿಧಿಯಾದ ತ್ರಯಿಯಿಂದ ಲಭಿಸತಕ್ಕ ಜ್ಞಾನಸಂಪತ್ತನ್ನೆಲ್ಲಾ ಪಡೆಯುವನು.

ಪ್ರಾಣೋಽಪಾನೋ ವ್ಯಾನ ಇತ್ಯಷ್ಟಾವಕ್ಷರಾಣಿ । ಅಷ್ಟಾಕ್ಷರಂ ಹ ವಾ ಏಕಂ ಗಾಯತ್ರ್ಯೈ ಪದಂ । ಏತದು ಹೈವಾಸ್ಯಾ ಏತತ್ । ಸ ಯಾವದಿದಂ ಪ್ರಾಣಿ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದ । ಅಥಾಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ । ಯದ್ವೈ ಚತುರ್ಥಂ ತತ್ತುರೀಯಂ ದರ್ಶತಂ ಪದಮಿತಿ ದದೃಶ ಇವ ಹ್ಯೇಷಃ । ಪರೋರಜಾ ಇತಿ ಸರ್ವಮು ಹ್ಯೇವೈಷ ರಜ ಉಪರ್ಯುಪರಿ ತಪತಿ । ಏವಂ ಹೈವ ಶ್ರಿಯಾ ಯಶಸಾ ತಪತಿ ಯೋಽಸ್ಯಾ ಏತದೇವಂ ಪದಂ ವೇದ ।

(ಬೃ. ಉ. ೫-೧೪-೩)

ಪ್ರಾಣ, ಅಪಾನ, ವ್ಯಾನ ಎಂಬ ಮೂರು ತತ್ತ್ವಗಳೂ ಅಷ್ಟಾಕ್ಷರಾತ್ಮಕವಾದ ಗಾಯತ್ರಿಯ ಮೂರನೆಯ ಪಾದವು. ಈ ತತ್ತ್ವವನ್ನರಿತವನು ಪ್ರಾಣಿಜಾತದ ಸಕಲಶಕ್ತಿಸಂಪತ್ತನ್ನೂ ಪಡೆಯುವನು. ಸ್ವಪ್ರಭೆಯಿಂದ ಪ್ರಕಾಶಿಸುತ್ತಾ ಸಕಲಲೋಕಕ್ಕೂ ಪ್ರತ್ಯಕ್ಷನಾಗಿರುವ ಆದಿತ್ಯನೇ ಗಾಯತ್ರಿಯ ನಾಲ್ಕನೆಯಪಾದವು. ಲೋಕ ಪ್ರತ್ಯಕ್ಷಕ್ಕೆ ಅತೀತವಾದ ಸ್ವರೂಪವನ್ನು ಹೊಂದಿದ್ದರೂ ಸಹ ಈ ಆದಿತ್ಯನು ಪ್ರತ್ಯಕ್ಷಗೋಚರವಾದ ರೂಪವನ್ನು ಹೊಂದಿ ಎಲ್ಲರಿಗೂ ಕಾಣಿಸಿಕೊಳ್ಳುವುದರಿಂದ ಇಲ್ಲಿ ದರ್ಶತಂ ಎಂಬ ವಿಶೇಷಣವಿದೆ. ಅಂಧಕಾರಮಯವಾದ ಲೋಕ ಗಳನ್ನೆಲ್ಲಾ ಮೀರಿ ಉತ್ತಮವಾದ ಅಂತರಿಕ್ಷದಲ್ಲಿ ಪ್ರಕಾಶಿಸುವುದರಿಂದ ಪರೋರಜಾಃ ಎಂಬ ವಿಶೇಷಣವಿದೆ. ಈ ತುರೀಯ ಪಾದದ ಸ್ವರೂಪವನ್ನರಿತವನು ತೇಜಸ್ವಿಯೂ ಬ್ರಹ್ಮವರ್ಚಸ್ಸಿನಿಂದ ಕೂಡಿದವನೂ ಆಗುತ್ತಾನೆ.

ಸೈಷಾ ಗಾಯತ್ರ್ಯೇತಸ್ಮಿಂಸ್ತುರೀಯೇ ದರ್ಶತೇ ಪದೇ ಪರೋರಜಸಿ ಪ್ರತಿಷ್ಠಿತಾ । ತದ್ವೈ ತತ್ಸತ್ಯೇ ಪ್ರತಿಷ್ಠಿತಂ । ಚಕ್ಷುರ್ವೈ ಸತ್ಯಂ । ಚಕ್ಷುರ್ಹಿ ವೈ ಸತ್ಯಂ .... .... .... ತಸ್ಮಾದಾಹು- ರ್ಬಲಂ ಸತ್ಯಾದೋಗೀಯ ಇತಿ । ಏವಂ ವೈಷಾ ಗಾಯತ್ರ್ಯಧ್ಯಾತ್ಮಂ ಪ್ರತಿಷ್ಠಿತಾ । ಸಾ ಹೈಷಾ ಗಯಾಂಸ್ತತ್ರೇ । ಪ್ರಾಣಾ ವೈ ಗಯಾಃ ತತ್ಪ್ರಾಣಾಂಸ್ತತ್ರೇ ತದ್ಯದ್ಗಯಾಂಸ್ತತ್ರೇ ತಸ್ಮಾದ್ಗಾಯತ್ರೀ ನಾಮ । ಸ ಯಾಮೇವಾಮೂಂ ಸಾವಿತ್ರೀಮನ್ವಾಹ । ಏಷೈವ ಸಾ । ಸ ಯಸ್ಮಾ ಅನ್ವಾಹ ತಸ್ಯ ಪ್ರಾಣಾಂಸ್ತ್ರಾಯಂತೇ ॥

ಪರೋರಜಸ್ಸೆಂದು ವರ್ಣಿತವಾಗಿರುವುದೂ, ದರ್ಶತವಾಗಿರುವುದೂ ಆದ ಈ ತುರೀಯ (ನಾಲ್ಕನೆಯ) ಪಾದದ ಮೇಲೆ ಗಾಯತ್ರಿಯು ಪ್ರತಿಷ್ಠಾಪಿತವಾಗಿದೆ. ಅದೇ ಸತ್ಯಲೋಕವು. ಆದುದರಿಂದ ಗಾಯತ್ರಿಯು ಸತ್ಯದ ಮೇಲೆ ಪ್ರತಿ ಷ್ಠಾಪಿತವಾಗಿದೆ ಚಕ್ಷುಸ್ಸೇ ಸತ್ಯವು. ಹೇಗೆಂದರೆ, ನಾನು ನೋಡಿದೆನು ಎಂದು ಒಬ್ಬನೂ, ನಾನು ಕೇಳಿದೆನು ಎಂದು ಇನ್ನೊಬ್ಬನೂ ವಿವಾದಮಾಡುತ್ತಿರುವಾಗ ನೋಡಿದವನ ಮಾತಿಗೇ ಅಧಿಕವಾದ ಪ್ರಾಮಾಣ್ಯವಿರುತ್ತದೆ.

CC-0. Jangamwadi Math Collection. Digitized by eGangotri

ಆ ಸತ್ಯವು ಶಕ್ತಿಯನ್ನವಲಂಬಿಸಿರುತ್ತದೆ. ಪ್ರಾಣವೇ ಶಕ್ತಿಯು. ಆದುದರಿಂದ ಸತ್ಯಕ್ಕಿಂತಲೂ ಬಲವೇ ಅಧಿಕವಾದ ಸತ್ತ್ವವುಳ್ಳದ್ದೆಂದು ತಿಳಿದವರು ಹೇಳುತ್ತಾರೆ. ದೇಹದ ಇಂದ್ರಿಯಗಳೇ ಗಯಗಳು. ಈ ಗಯಗಳನ್ನು ಪ್ರಾಣವು ಸಂರಕ್ಷಿಸುವುದಾದುದರಿಂದ ಗಾಯತ್ರಿಯೆಂಬ ಹೆಸರು. ಈ ಗಾಯತ್ರಿಯೇ ದೇಹದಲ್ಲಿ ಮುಖ್ಯಪ್ರಾಣರೂಪದಲ್ಲಿರುತ್ತದೆ. ಇದನ್ನೇ ಗುರುವು ಶಿಷ್ಯನಿಗೆ ಉಪದೇಶರೂಪದಲ್ಲಿ ಹೇಳಿಕೊಡತಕ್ಕ ಸಾವಿತ್ರಿಯೆಂದೂ ಕರೆಯುತ್ತಾರೆ. ಯಾವನು ಈ ಉಪದೇಶವನ್ನು ಗ್ರಹಿಸುತ್ತಾನೆಯೋ ಅವನ ಪ್ರಾಣಗಳನ್ನು ಇದು ಸಂರಕ್ಷಿಸುತ್ತದೆ.

ತಾಂ ಹೈತಮೇಕೇ ಸಾವಿತ್ರೀಮನುಷ್ಟುಭಮನ್ವಾಹುಃ । ವಾಗನುಷ್ಟುಪ್ । ತದ್ವಾಚಮನುಬ್ರೂಮ ಇತಿ । ನ ತಥಾ ಕುರ್ಯಾತ್ । ಗಾಯತ್ರೀಮೇವ ಸಾವಿತ್ರೀಮನುಬ್ರೂಯಾತ್ । ಯದಿ ಹ ವಾ ಅಪ್ಯೇವಂವಿದ್ಬಹ್ವಿವ ಪ್ರತಿಗೃಹ್ಣಾತಿ ನ ಹೈವ ತದ್ಗಾಯತ್ರ್ಯಾ ಏಕಂಚನ ಪದಂ ಪ್ರತಿ ।

(ಛಾ. ಉ. ೫-೧೪-೫)

ವಾಕ್ಕೇ ಅನುಷ್ಟುಬ್ರೂಪದಲ್ಲಿರುವುದರಿಂದಲೂ ವಾಕ್ಕೇ ಗಾಯತ್ರೀರೂಪಿಯಾದುದರಿಂದಲೂ ಕೆಲವು ಗುರುಗಳು ಅನುಷ್ಟುಪ್‌ರೂಪದ ಸಾವಿತ್ರಿಯನ್ನು ಉಪದೇಶಿಸುತ್ತಾರೆ. ಅದು ಸರಿಯಲ್ಲ. ಗಾಯತ್ರೀರೂಪದ ಸಾವಿತ್ರಿಯನ್ನೇ ಉಪದೇಶಿಸಬೇಕು. ಈ ತತ್ತ್ವವನ್ನರಿತ ಪುರುಷನು ಅತಿಪ್ರಭೂತವಾದ ದಾನವನ್ನು ಪರಿಗ್ರಹಿಸಿದರೂ ಸಹ ಅದು ಗಾಯತ್ರಿಯ ಒಂದು ಪಾದಕ್ಕೂ ತುಲನವಾಗುವುದಿಲ್ಲ.

ಸ ಯ ಇಮಾಂಸ್ತ್ರೀನ್‌ಲೋಕಾನ್ಪೂರ್ಣಾನ್ ಪ್ರತಿಗೃಹ್ಣೀಯಾತ್, ಸೋಽಸ್ಯಾ ಏತತ್ಪ್ರಥಮಂ ಪದಮಾಪ್ನುಯಾತ್ । ಅಥ ಯಾವತೀಯಂ ತ್ರಯೀ ವಿದ್ಯಾ ಯಸ್ತಾವತ್ಪ್ರತಿಗೃಹ್ಣೀಯಾತ್ ಸೋಽಸ್ಯಾ ಏತದ್ದ್ವಿತೀಯಂ ಪದಮಾಪ್ನುಯಾತ್ ಅಥ ಯಾವದಿದಂ ಪ್ರಾಣಿ ಯಸ್ತಾವತ್ಪ್ರತಿ-ಗೃಹ್ಣೀಯಾತ್ ಸೋಽಸ್ಯಾ ಏತತ್ತೃತೀಯಂ ಪದಮಾಪ್ನುಯಾತ್ ಅಥಾಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ । ನೈವ ಕೇನಚ ನಾಪ್ಯಂ ಕುತ ಉ ಏತಾವತ್ಪ್ರತಿಗೃಹ್ಣೀಯಾತ್ ।

(ಛಾ. ಉ. ೫-೧೪-೬)

ಸಂಪತ್ತಿನಿಂದ ಪೂರ್ಣವಾದ ಈ ಮೂರು ಲೋಕಗಳನ್ನು ಮಾತ್ರ ಪರಿಗ್ರಹಿಸುವವನು ಗಾಯತ್ರಿಯ ಪ್ರಥಮಪಾದವನ್ನು ಮಾತ್ರ ಗ್ರಹಿಸುತ್ತಾನೆ. ಜ್ಞಾನಸಿಧಿಯಾದ ವೇದತ್ರಯವನ್ನು ಮಾತ್ರ ಪರಿಗ್ರಹಿಸುವವನು ಗಾಯತ್ರಿಯ ಎರಡನೆಯ ಪಾದವನ್ನೂ ಕೇವಲ ಪ್ರಾಣಿಜಾತವನ್ನು ಮಾತ್ರ ಪರಿಗ್ರಹಿಸುವವನು. ಮೂರನೆಯ ಪಾದವನ್ನೂ ಪ್ರತಿಫಲವನ್ನಾಗಿ ಪಡೆಯುತ್ತಾನೆ. ಆದರೆ ದರ್ಶತವೂ, ಪರೋರಜಾತ್ಮಕವಾದುದೂ ಆದ ತುರೀಯಪಾದದ ಸಾಕ್ಷಾತ್ಕಾರವನ್ನು ಪಡೆದ ಪುರುಷನಿಗೆ ಲಭಿಸತಕ್ಕ ಪ್ರತಿಫಲಕ್ಕೆ ಸಮಾನವಾದ ಸಂಪತ್ತು ಲೋಕದಲ್ಲಿ ಇನ್ನಾವುದೂ ಇರಲಾರದು. ತಸ್ಮಾದ್ಗಾಯತ್ರೀ ಏವಂಪ್ರಕಾರೋಪಾಸ್ಯಾ (ಶಂ. ಭಾ). ಆದುದರಿಂದ ಗಾಯತ್ರಿಯ ಪೂರ್ಣರೂಪವು ಧ್ಯಾನರೂಪದಿಂದ ಉಪಾಸಿಸಲ್ಪಡತಕ್ಕದ್ದು ಎಂದು ತಾತ್ಪರ್ಯ.

ಏವಂ ಹೈವೈವಂ ವಿದ್ಯದ್ಯಪಿ ಬಹ್ವಿವ ಪಾಪಂ ಕುರುತೇ ಸರ್ವಮೇವ ತತ್ಸಂಪ್ಸಾಯ ಶುದ್ಧಃ ಪೂತೋಽಜರೋಽಮೃತಃ ಸಂಭವತಿ ।

(ಛಾ. ಉ. ೫-೧೪-೮)

ಈ ಗಾಯತ್ರೀತತ್ತ್ವವನ್ನು ಪೂರ್ಣವಾಗಿ ಅರಿತವನು ಆಕಸ್ಮಾತ್ತಾಗಿ ಪಾಪಕೃತ್ಯಗಳನ್ನು ಮಾಡಿದರೂ ಸಹ ಅವುಗಳೆಲ್ಲವನ್ನೂ ದಹಿಸಿ ತಾನು ಶುದ್ಧನೂ, ಅಜರನೂ, ಅಮರ್ತ್ಯನೂ ಆಗುತ್ತಾನೆ. ಅಗ್ನಿಯೇ ಗಾಯತ್ರಿಯ

CC-0. Jangamwadi Math Collection. Digitized by eGangotri

ಮುಖವಾದುದರಿಂದ ತಸ್ಯಾ ಅಗ್ನಿರೇವ ಮುಖಂ—ಗಾಯತ್ರೀತತ್ತ್ವವನ್ನು ಪೂರ್ಣವಾಗಿ ಅರಿತವನು ಪಾಪಗಳನ್ನು ದಹಿಸುವ ಅಗ್ನಿಯ ಶಕ್ತಿಯನ್ನು ಪಡೆಯುತ್ತಾನೆಂದು ತಾತ್ಪರ್ಯ. ಹೀಗೆ ವ್ಯಾಕೃತವೂ ಅವ್ಯಾಕೃತವೂ ಆದ ಗಾಯತ್ರಿಯ ಪೂರ್ಣಸ್ವರೂಪವನ್ನು ಬೃಹದಾರಣ್ಯಕೋಪನಿಷತ್ತಿನಲ್ಲಿ ಮೇಲಿನ ವಾಕ್ಯಗಳಿಂದ ವಿವರಿಸಿ ತಿಳಿಸಿದೆ. ಛಾಂದೋಗ್ಯೋಪನಿಷತ್ತಿನಲ್ಲಿಯೂ ಸಹ ಗಾಯತ್ರಿಯ ವಿಶ್ವವ್ಯಾಪಕತ್ವವನ್ನು ಕೆಳಗೆ ಉದಾಹೃತವಾಗಿರುವ ವಾಕ್ಯಗಳಿಂದ ಈ ರೀತಿ ವರ್ಣಿಸಿದೆ.

———

## ೧೫. ನಿಯುಮಿತವಾದ ಅಕ್ಷರಸಮೂಹವುಳ್ಳ ಛಂದಸ್ಸು ವಿಶ್ವವ್ಯಾಪಕವಾದ ಬ್ರಹ್ಮರೂಪಿಯಾಗಲು ಹೇಗೆ ಸಾಧ್ಯ ?

———

**ಗಾಯತ್ರೀ ವಾ ಇದಂ ಸರ್ವಂ ಭೂತಂ ಯದಿದಂ ಕಿಂಚ ವಾಗ್ವೈ ಗಾಯತ್ರೀ ವಾಗ್ವಾ ಇದಂ ಸರ್ವಂ ಭೂತಂ ಗಾಯತಿ ತ್ರಾಯತೇ ಚ ।**

(ಛಾ. ಉ. ೩-೧೨-೧)

**ಛಂದೋಮಾತ್ರಾಯಾಃ ಸರ್ವಭೂತತ್ವಮನುಪಪನ್ನಂ ಇತಿ ಗಾಯತ್ರೀಕಾರಣಂ ವಾಚಂ ಶಬ್ದರೂಪಮಾಪಾದಯತಿ ಗಾಯತ್ರೀ ವಾಗ್ವೈ ಗಾಯತ್ರೀತಿ ॥**

(ಶ. ಭಾ.)

ಚೇತನಾಚೇತನಾತ್ಮಕವಾದ ಸಕಲ ಭೂತಜಾತಗಳೂ ಸಹ ಗಾಯತ್ರಿಯೇ ಆಗಿದೆ ಎಂದು ಗಾಯತ್ರಿಯ ವಿಶ್ವ ವ್ಯಾಪಕತ್ವವನ್ನು ವರ್ಣಿಸುವಾಗ ಒಂದು ಆಶಂಕೆಗೂ ಅವಕಾಶವಿದೆಯೆಂದು ನಿರೀಕ್ಷಿಸಿ ವಾಗ್ವೈ ಗಾಯತ್ರೀ ಎಂದು ವಾಕ್ಕಿಗೂ ಗಾಯತ್ರಿಗೂ ತಾದಾತ್ಮ್ಯವನ್ನು ಹೇಳಿದೆ. ಇಲ್ಲಿ ಒಂದು ಪ್ರಶ್ನೆಗೆ ಅವಕಾಶವಿದೆ. ಕೇವಲ ಅಕ್ಷರ ಸಮುದಾಯರೂಪವಾದ ಛಂದಸ್ಸಿಗೆ ವಿಶ್ವವ್ಯಾಪಕತ್ವವೂ- ಸರ್ವಭೂತತ್ವವೂ ಹೇಗೆ ಸಂಭವಿಸಲ್ಲುದು, ಎಂಬುದು ಆಶಂಕೆ. ಅದಕ್ಕೆ ಉತ್ತರವಾಗಿ ವಾಕ್ಕೇ ಗಾಯತ್ರಿಯೆಂದು ಪ್ರತಿಪಾದಿಸುವುದು. ವಾಕ್ಕಿನ ಶಕ್ತಿಸ್ವರೂಪಗಳೇನು ಎಂದರೆ ವಿಶ್ವವ್ಯವಹಾರವನ್ನು ಪೂರ್ಣವಾಗಿ ಪ್ರಕಾಶಪಡಿಸಿ ವಿಶ್ವಾತ್ಮಕವಾಗಿರುವುದೇ ಅದರ ಶಕ್ತಿ. ಸಮಸ್ತ ಪ್ರಪಂಚದ ಅಸ್ತಿತ್ವವೂ ಅದರಿಂದಲೇ ಪ್ರಕಾಶಿತವಾಗುವುದರಿಂದಲೂ ಸಮಸ್ತಪ್ರಪಂಚದ ರಕ್ಷಣಾನಿರ್ವಹಣವೂ ವಾಕ್ಕಿಗೇ ಸೇರಿದ್ದರಿಂದಲೂ, ವಾಕ್ಕೇ ಸಮಸ್ತಪ್ರಪಂಚವನ್ನೂ ವ್ಯಾಪಿಸಿದೆ ಮತ್ತು ತದಾತ್ಮಕವಾಗಿದೆ. ಈ ವಾಗ್ದೇವಿಯೇ ಗಾಯತ್ರ್ಯಭಿಧಾನದಿಂದ ಕರೆಯಲ್ಪಟ್ಟಿದೆಯೆಂಬುದು ಗಾಯತ್ರಿಯ ಒಂದಂಶವನ್ನು ವಿವರಿಸಿದಂತಾಯಿತು ಅಲ್ಲದೇ,

**ಯಾ ವೈ ಸಾ ಗಾಯತ್ರೀಯಂ ವಾವ ಸಾ ಯೇಯಂ ಪೃಥಿವ್ಯಸ್ಯಾಂ ಹೀದಂ ಸರ್ವಂ ಭೂತಂ ಪ್ರತಿಷ್ಠಿತಮೇತಾಮೇವ ನಾತಿಶೀಯತೇ ।**

(ಛಾ. ಉ. ೩-೧೨-೨)

ಸಕಲಭೂತಗಳ ಅಸ್ತಿತ್ವವನ್ನು ಗಾನಮಾಡುತ್ತಲೂ ರಕ್ಷಿಸುತ್ತಲೂ ಇರುವುದರಿಂದ ಗಾಯತ್ರಿಯೇ ವಾಕ್ಕೆಂದು ಹೇಳಿದಂತೆ, ಇಲ್ಲಿ ಗಾಯತ್ರಿಯು ಪೃಥಿವಿಯ ಸ್ವರೂಪ ಮತ್ತು ಶಕ್ತಿಗಳನ್ನು ಹೊಂದಿರುವುದರಿಂದ ಗಾಯತ್ರಿಯನ್ನು ಇಷ್ಟ

CC-0. Jangamwadi Math Collection. Digitized by eGangotri

ಪೃಥಿವಿಯೆಂದು ಕರೆದಿದೆ. ಸಮಸ್ತಭೂತಗಳೂ ಪೃಥಿವಿಯನ್ನೇ ಆಶ್ರಯಿಸಿ ಇಲ್ಲೇ ಪ್ರತಿಷ್ಠಾಪಿತವಾಗಿವೆ. ಈ ಎಲ್ಲೆಯನ್ನು ಮೀರುವುದಿಲ್ಲ. ಆದುದರಿಂದ ಗಾಯತ್ರಿಗೂ ಪೃಥಿವಿಗೂ ತಾದಾತ್ಮ್ಯ.

---

## ೧೬. ಗಾಯತ್ರಿಯನ್ನು ಉಪಾಸನೆಮಾಡತಕ್ಕ ಎರಡು ಕ್ರಮಗಳು. ಬಾಹ್ಯರೂಪ ಪ್ರಪಂಚದೊಡನೆ ತಾದಾತ್ಮ್ಯ.

---

ಉಪಾಸನೆಯನ್ನು ಮಾಡತಕ್ಕ ಪುರುಷನು ಗಾಯತ್ರಿಯನ್ನು ಎರಡು ದೃಷ್ಟಿಯಿಂದ ಉಪಾಸನೆ ಮಾಡಬಹುದು. ಒಂದನೆಯದಾಗಿ, ಪೃಥಿವ್ಯಂತರಿಕ್ಷಾದಿ ಸಮಸ್ತ ಬಾಹ್ಯಪ್ರಪಂಚಗಳನ್ನೂ ಗಾಯತ್ರಿಯ ದ್ವಾರಾ ಧ್ಯಾನದಿಂದ ತಿಳಿದು ಅವೆಲ್ಲವೂ ಗಾಯತ್ರಿಯ ವಿಭೂತಿವಿಶೇಷಗಳೆಂದೇ ಅರಿಯಬಹುದು. ಅಥವಾ ಪುರುಷನ ದೇಹಾಂತರ್ಗತವಾದ ತತ್ತ್ವವಿಶೇಷಗಳನ್ನೂ ಮತ್ತು ಅವುಗಳೂ ಸಹ ಗಾಯತ್ರಿಯ ವಿಭೂತಿವಿಶೇಷಗಳೇ ಎಂಬುದನ್ನೂ ಸಹ ಆಧ್ಯಾತ್ಮಿಕದೃಷ್ಟಿಯಿಂದ ತಿಳಿಯಬಹುದು. ಈ ವಿಷಯವನ್ನೂ ಸಹ ಉಪನಿಷದ್ವಾಕ್ಯಗಳು ವರ್ಣಿಸುತ್ತವೆ.

> ಯೊ ವೈ ಸಾ ಪೃಥಿವೀಯಂ ವಾವ ಸಾ ಯದಿದಮಸ್ಮಿನ್ಪುರುಷೇ ಶರೀರಮಸ್ಮಿನ್ ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ ॥
>
> (ಛಾ. ಉ. ೩-೧೨-೩)

ಯಾವ ತತ್ತ್ವವನ್ನು ನಾವು ಪೃಥಿವಿಯೆಂದು ಕರೆಯುತ್ತೇವೆಯೋ, ಆ ತತ್ತ್ವವೇ ಕಾರ್ಯಕಾರಣಸಂಘಾತರೂಪದಲ್ಲಿ ಪುರುಷನ ದೇಹವೇ ಆಗಿರುತ್ತದೆ. ಸಕಲಭೂತಗಳೂ ಪೃಥ್ವಿಯಲ್ಲಿ ಪ್ರತಿಷ್ಠಾಪಿತವಾಗಿರುವಂತೆ ಸಕಲ ಮುಖ್ಯಪ್ರಾಣಗಳೂ ಸಹ ಈ ದೇಹದಲ್ಲಿಯೇ ಪ್ರತಿಷ್ಠಾಪಿತವಾಗಿದೆ. ಸಕಲಭೂತಗಳೂ ಪೃಥ್ವಿಯನ್ನತಿಕ್ರಮಿಸಿಹೋಗದೇ ನಿಯತವಾದ ಸ್ಥಿತಿಯಲ್ಲಿರುವಂತೆ ಈ ಮುಖ್ಯಪ್ರಾಣಗಳೂ ಸಹ ದೇಹನಿಯಮವನ್ನತಿಕ್ರಮಿಸದೇ ತಮ್ಮ ನಿಯತವಾದ ಎಲ್ಲೆಯೊಳಗಿರುತ್ತವೆ.

> ಯದ್ವೈ ತತ್ಪುರುಷೇ ಶರೀರಮಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಹೃದಯಮಸ್ಮಿನ್ಹೀಮೇ ಪ್ರಾಣಾಃ ಪ್ರತಿಷ್ಠಿತಾ ಏತದೇವ ನಾತಿಶೀಯಂತೇ ॥
>
> (ಛಾ. ಉ. ೩-೧೨-೪)

ಯಾವ ದೇಹತತ್ತ್ವವನ್ನು ಗಾಯತ್ರಿಯೆಂದು ಕರೆಯುತ್ತೇವೆಯೋ ಆ ತತ್ತ್ವವೇ ಪುರುಷನ ಹೃದಯಪುಂಡರೀಕವು. ಮುಖ್ಯಪ್ರಾಣತತ್ತ್ವವು ಪ್ರತಿಷ್ಠಾಪಿತವಾಗಿರುವುದು ಇಲ್ಲಿಯೇ. ಪ್ರಾಣತತ್ತ್ವವು ಈ ಎಲ್ಲೆಯನ್ನತಿಕ್ರಮಿಸುವುದಿಲ್ಲ.

> ಸೈಷಾ ಚತುಷ್ಪದಾ ಷಡ್ವಿಧಾ ಗಾಯತ್ರೀ ತದೇತದೃಚಾಭ್ಯನೂಕ್ತಂ ।

ಇಂತಹ ನಾಲ್ಕುಪಾದಗಳುಳ್ಳದ್ದೂ, ಷಡ್ವಿಧವಾದದ್ದೂ ಆದ ಗಾಯತ್ರಿಯು ಋಕ್ಸಂಹಿತೆಯಲ್ಲಿ ಈ ರೀತಿ ವರ್ಣಿತವಾಗಿದೆ—

CC-0. Jangamwadi Math Collection. Digitized by eGangotri

ಏತಾವಾನಸ್ಯ ಮಹಿಮಾತೋ ಜ್ಯಾಯಾँಶ್ಚ ಪೂರುಷಃ ।
ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ ॥

(ಋ. ಸಂ. ೧೦-೯೦-೩)

ಇದು ಪರಮಪುರುಷನ ಮಾಹಾತ್ಮ್ಯದ ವರ್ಣನವು. ಏತಾವಾನ್ ಎಂದರೆ ತ್ರಿಕಾಲಾತ್ಮಕವಾದುದೂ, ಚೇತನಾಚೇತನರೂಪವುಳ್ಳದ್ದೂ ಆದ ಯಾವ ಸಕಲವಾದ ವಿಶ್ವವಿದೆಯೋ ಅದೆಲ್ಲಾ ಈ ಪರಮಪುರುಷನ ವಿಭೂತಿಯು. ಆದರೆ ಆ ಪುರುಷನ ಸ್ವಂತ ಮಹಿಮೆಯು ಇವೆಲ್ಲಕ್ಕಿಂತಲೂ ಅತ್ಯಧಿಕವಾದುದು. ಸಕಲವಿಶ್ವವೂ ಸಹ ಈ ಪುರುಷನ ನಾಲ್ಕನೆಯ ಒಂದು ಅಂಶಮಾತ್ರವಾಗಿದೆ. ಉಳಿದ ಅಂಶಗಳೆಲ್ಲವೂ ಸಹ ನಾಶರಹಿತವಾದುದೂ, ಪ್ರಕಾಶಾತ್ಮಕವಾದುದೂ, ಅಪ್ರಾಕೃತವೂ ಆದ ಅವನ ಸ್ವರೂಪದಲ್ಲೇ ಪ್ರಭಾರೂಪವಾಗಿ ಉಳಿದಿದೆ.

---

## ಆಧ್ಯಾತ್ಮಿಕವಾದ ಅಂತಸ್ತತ್ತ್ವದೊಡನಿರುವ ತಾದಾತ್ಮ್ಯ ವರ್ಣನೆ.

:೦:

ಈ ವರ್ಣನದಲ್ಲಿ ಪರಮಪುರುಷನಿಗೂ ಗಾಯತ್ರಿಗೂ ತಾದಾತ್ಮ್ಯವನ್ನು ಹೇಳಿದೆ. ಇದನ್ನು ಶ್ರೀ ಶಂಕರಾಚಾರ್ಯರು ವಿವರಿಸುತ್ತಾ ತಾವಾನಸ್ಯ ಗಾಯತ್ರ್ಯಾಖ್ಯಸ್ಯ ಬ್ರಹ್ಮಣಃ ಸಮಸ್ತಸ್ಯ ಮಹಿಮಾ ವಿಭೂತಿವಿಸ್ತಾರಃ ॥ ಗಾಯತ್ರಿಯೆಂದು ಪ್ರಸಿದ್ಧವಾದ ಪರಬ್ರಹ್ಮದ ಸ್ವರೂಪವೂ ವಿಭೂತಿವಿಶೇಷವೂ ಈ ವಾಕ್ಯಗಳಿಂದ ವರ್ಣಿತವಾಗಿದೆಯೆಂದು ತಿಳಿಸಿ ಪಾದ, ತ್ರಿಪಾತ್ ಎಂಬ ಪದಗಳನ್ನು ಮೇಲೆ ವಿವರಿಸಿರುವಂತೆ ತಿಳಿಸಿದ್ದಾರೆ.

ಮೇಲೆ ಉದಾಹರಿಸಿರುವ ಉಪನಿಷದ್ವಾಕ್ಯಗಳಲ್ಲಿ ಗಾಯತ್ರಿಗೂ ಪರಬ್ರಹ್ಮವಸ್ತುವಿಗೂ ತಾದಾತ್ಮ್ಯವನ್ನು ಹೇಳಿದ್ದರೂ ಸಹ ಬೃಹದಾರಣ್ಯಕೋಪನಿಷತ್ತಿನಲ್ಲಿ ವರ್ಣಿತವಾಗಿರುವುದಕ್ಕೂ ಛಾಂದೋಗ್ಯದಲ್ಲಿ ಸ್ತುತವಾಗಿರುವುದಕ್ಕೂ ಕೆಲವಂಶಗಳಲ್ಲಿ ವ್ಯತ್ಯಾಸಗಳಿರುವವು. ಮೊದಲು ಆ ವ್ಯತ್ಯಾಸವನ್ನು ಗಮನಿಸಿ ಅನಂತರ ಪಾದತ್ರಯ, ತುರೀಯಪಾದ ಇತ್ಯಾದಿ ವರ್ಣನಗಳು ಪರವಸ್ತುವಿನ ಯಾವ ತತ್ತ್ವಗಳನ್ನು ತಿಳಿಸುತ್ತವೆ, ಮತ್ತು ಪ್ರಕೃತವಾದ **ತತ್ಸವಿತುರ್ವರೇಣ್ಯಂ** ಎಂಬ ಮಂತ್ರದಲ್ಲಿ ಸ್ತುತನಾಗಿರುವ ಸವಿತೃದೇವತೆಯೇ ಪರತತ್ತ್ವವಾದರೆ ಆಗ ಈ ವಿಶೇಷಣಗಳು ಸಂಹಿತಾದಿಗಳಲ್ಲಿ ಯಾವ ರೀತಿ ಪ್ರಯೋಗಿಸಲ್ಪಟ್ಟಿವೆ ಮುಂತಾದ ವಿವರಗಳನ್ನು ಪರಿಶೀಲಿಸಬೇಕು.

ಸಕಲಭೂತಗಳೂ, ತ್ರಯೀವಿದ್ಯೆಯೂ, ಪೃಥ್ವಿಯೂ, ಶರೀರವೂ, ಹೃದಯವೂ, ಮುಖ್ಯಪ್ರಾಣವೂ ಸಹ ಪರವಸ್ತುತತ್ತ್ವಾತ್ಮಕವಾದ ಗಾಯತ್ರಿಯ ಅಥವಾ ಗಾಯತ್ರ್ಯಾತ್ಮಕವಾದ ಪರವಸ್ತುವಿನ ಒಂದು ಪಾದವು. ಈ ಪಾದವು ಮೂರ್ತವು. ಎಂದರೆ ಲೌಕಿಕ ಪ್ರತ್ಯಕ್ಷಕ್ಕೆ ಗೋಚರವಾಗತಕ್ಕದ್ದು. ಉಳಿದ ಮೂರು ಪಾದಗಳೂ ಸಹ **ತ್ರಿಪಾದೂರ್ಧ್ವಮುದೈತ್** (ಋ. ಸಂ. ೧೦-೯೦-೩). ಎಂಬಲ್ಲಿ ಹೇಳಿರುವಂತೆ ಅಜರವಾದ ಅಂತರಿಕ್ಷಸ್ಥವಾಗಿ ಅಪ್ರಾಕೃತವಾದ ರೂಪವನ್ನು ಹೊಂದಿವೆ ಎಂದು ಛಂದೋಗ್ಯದ ವರ್ಣನೆ. ಬೃಹದಾರಣ್ಯಕದ ವಿವರಣೆಯು ಸ್ವಲ್ಪ ವ್ಯತ್ಯಸ್ತವಾಗಿದೆ. ಮೊದಲನೆಯ ಮೂರು ಪಾದಗಳೂ ಸಹ ಲೋಕತ್ರಯಾತ್ಮಕವಾಗಿಯೂ, ಋಗಾದಿವಾಗ್ರೂಪವಾಗಿಯೂ, ಪ್ರಾಣಾಪಾನವ್ಯಾನರೂಪವಾಗಿಯೂ ಇವೆ. ಇವು ಮೂರ್ತ (concrete) ರೂಪವನ್ನು ಹೊಂದಿವೆ. ತುರೀಯ (ಚತುರ್ಥ) ಪಾದವು ಲೌಕಿಕಪ್ರತ್ಯಕ್ಷಕ್ಕೆ ಮೀರಿದ ಅಂತರಿಕ್ಷಸ್ಥವಾಗಿ ಆದಿತ್ಯಾಂತರ್ಗತವಾಗಿದೆಯೆಂಬುದು

CC-0. Jangamwadi Math Collection. Digitized by eGangotri

ಬೃಹದಾರಣ್ಯಕದ ವರ್ಣನೆ. ಇವೆರಡು ವಿವರಣೆಗಳಲ್ಲೂ ತಾತ್ತ್ವಿಕವಾದ ವ್ಯತ್ಯಾಸವು ಅಧಿಕವಾಗಿಲ್ಲ. ಆದುದರಿಂದ ಒಂದು ಇನ್ನೊಂದಕ್ಕೆವಿರೋಧವಾಗಿದೆಯೆಂದು ಹೇಳಲಾಗದು. ಪ್ರಕೃತದಲ್ಲಿ, ಗಾಯತ್ರ್ಯಾತ್ಮಕವಾದ ಬ್ರಹ್ಮವಸ್ತುವಿನ ತುರೀಯಪಾದದ ಸ್ವರೂಪವನ್ನು ಇತರ ಶ್ರುತಿವಾಕ್ಯಗಳಲ್ಲಿ ಯಾವ ಬಗೆ ವರ್ಣಿಸಿದೆಯೆಂಬುದನ್ನು ಪರಿಶೀಲಿಸಬೇಕು.

---

## ೧೭. ಗಾಯತ್ರಿಯ ಪಾದತ್ರಯ ಮತ್ತು ತುರೀಯಪಾದಗಳ ಸ್ವರೂಪ. ಪಾದೋಽಸ್ಯ ವಿಶ್ವಾ ಭೂತಾನಿ ಎಂಬ ವಿವರಣೆಯ ತಾತ್ಪರ್ಯ.



ಮಾಂಡೂಕ್ಯಕಾರಿಕೆಯಲ್ಲಿಯೂ ತತ್ಸಂಬಂಧವಾದ ಇತರ ಭಾಷ್ಯಗಳಲ್ಲಿಯೂ ಸಹ ತುರೀಯ ಪದವು ಪಾರಿಭಾಷಿಕವಾದ ಸಂಕೇತವನ್ನು ಹೊಂದಿದೆ. ಆಧ್ಯಾತ್ಮಿಕವಾದ ತತ್ತ್ವಸ್ವರೂಪವರ್ಣನಕಾಲದಲ್ಲಿ ಪುರುಷನ ಜಾಗ್ರದಾದ್ಯವಸ್ಥೆಗಳನ್ನು ವಿವರಿಸುವಾಗ,

**ಸರ್ವಗ್ಂ ಹ್ಯೇತದ್ಬ್ರಹ್ಮಾಯಮಾತ್ಮಾ ಬ್ರಹ್ಮ ಸೋಽಯಮಾತ್ಮಾ ಚತುಷ್ಪಾತ್ ।**
(ಮಾ. ಉ. ೨)

ಆತ್ಮನಿಗೂ ಬ್ರಹ್ಮನಿಗೂ ತಾದಾತ್ಮ್ಯವನ್ನು ಹೇಳಿ, ಪಾದಚತುಷ್ಟಯಾತ್ಮಕವಾದ ಬ್ರಹ್ಮವಸ್ತುವಿನ ಅಥವಾ ಬ್ರಹ್ಮ ರೂಪಿಯಾದ ಆತ್ಮನ ನಾಲ್ಕು ಅವಸ್ಥೆಗಳನ್ನೂ ತಿಳಿಸಿದೆ. ಓಂಕಾರಕ್ಕೆ ಅಭಿಧೇಯನಾಗಿರುವ ಪರಬ್ರಹ್ಮವೂ ಅಪರ ಬ್ರಹ್ಮವೂ ಆಗಿರುವ ಈ ಆತ್ಮನು ನಾಲ್ಕು ಪಾದಗಳುಳ್ಳವನು. ಅವುಗಳ ಸ್ವರೂಪವೇನೆಂದರೆ,

(೧) **ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ**—
ಎಚ್ಚರವೆಂಬ ಸ್ಥಾನವುಳ್ಳ ಹೊರಗಿನ ಪ್ರಜ್ಞೆಯುಳ್ಳವನು

(೨) **ಸ್ವಪ್ನಸ್ಥಾನೋಽಂತಃಪ್ರಜ್ಞಃ**—
ಸ್ವಪ್ನಸ್ಥಾನವುಳ್ಳ ಅಂತಃಪ್ರಜ್ಞನು.

(೩) **ಸುಷುಪ್ತಸ್ಥಾನ ಏಕೀಭೂತಃ**—
ಕನಸ್ಸನ್ನೂ ಕಾಣದೇ ಪ್ರಜ್ಞಾನಘನವಾದ ಸುಷುಪ್ತ್ಯವಸ್ಥೆಯಲ್ಲಿರುವ ಪ್ರಾಜ್ಞನು.

(೪) **ನಾಂತಃಪ್ರಜ್ಞಂ ನ ಬಹಿಷ್ಪ್ರಜ್ಞಂ ನೋಭಯತಃ ಪ್ರಜ್ಞಂ .... .... ಅದೃಷ್ಟಮವ್ಯವಹಾರ್ಯಂ .... .... ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ ॥**
ಅಂತಃ ಪ್ರಜ್ಞನಲ್ಲದವನೂ, ಬಹಿಷ್ಪ್ರಜ್ಞನಲ್ಲದವನೂ, ಲೌಕಿಕಪ್ರತ್ಯಕ್ಷಕ್ಕೆ ಸಿಲುಕದವನೂ, ಶಾಂತನೂ, ಶಿವನೂ, ಏಕಾತ್ಮಪ್ರತ್ಯಯಸಾರನೂ ಅದ್ವೈತಸ್ವರೂಪನೂ ಆದ ಆತ್ಮನು ತುರೀಯನು

ಲೋಕಕ್ಕೆ ಸಾಧಾರಣವಾಗಿ ಗೋಚರವಾಗುತ್ತಿರುವ ಮೂರು ಪಾದಗಳನ್ನೂ ಮೀರಿ ನಾಲ್ಕನೆಯ ಸ್ವರೂಪವುಳ್ಳವನಾಗಿರುವನೆಂದು ತಾತ್ಪರ್ಯ. ಇದೇ ಆತ್ಮನನ್ನು ಏಷ ತ ಆತ್ಮಾಂತರ್ಯಾಮ್ಯಮೃತೋಽದೃಷ್ಟೋ ದ್ರಷ್ಟಾ-

CC-0. Jangamwadi Math Collection. Digitized by eGangotri

ಶ್ರುತೇಃ ಶ್ರೋತಾ । (ಬೃ. ಉ. ೩-೭-೨೩) ತಾನು ಲೋಕಕ್ಕೆಲ್ಲಾ ಸಾಕ್ಷಿಯು ಆದರೆ ಲೋಕದ ದೃಷ್ಟಿಗೆ ಗೋಚರವಾಗದವನು, ತಾನು ಸಕಲವನ್ನೂ ಕೇಳತಕ್ಕವನು ಆದರೆ ಲೋಕದ ಶ್ರವಣಕ್ಕೆ ಸಿಲುಕದವನು ಇತ್ಯಾದಿಯಾಗಿ ಸ್ತುತಿಸಿದೆ. ವಿಶ್ವದ ಪಾದತ್ರಯವನ್ನೂ ಮೀರಿದ ತುರಿಯಪಾದವುಳ್ಳವನು, ಎಂದು ವರ್ಣಿತವಾಗಿರುವ **ತುರೀಯಾ**ವಸ್ಥೆಯು ದರ್ಶನದ (Philosophical Systems) ಪ್ರಪಂಚದಲ್ಲಿ ಪ್ರಸಿದ್ಧವಾಗಿದೆ. ಇದೇ ತಾತ್ಪರ್ಯವನ್ನು ಪ್ರಕೃತದಲ್ಲಿಯೂ ಗಾಯತ್ರ್ಯಾತ್ಮಕವಾದ ಪರಬ್ರಹ್ಮದ ಸ್ವರೂಪವರ್ಣನಕಾಲದಲ್ಲಿ ಹೇಳಬೇಕು. ಅಪ್ರಾಕೃತವೂ, ಅಲೌಕಿಕವೂ ಆದ ತತ್ತ್ವವಿಶೇಷವನ್ನು ವರ್ಣಿಸುವ ವೇಳೆಯಲ್ಲಿ ಋಕ್ಸಂಹಿತೆಯಲ್ಲಿಯೂ ಸಹ **ತುರೀಯ** ಪದವನ್ನು ಇದೇ ಅರ್ಥದಲ್ಲಿ ಪ್ರಯೋಗಿಸಿರುವುದು ಕಂಡುಬರುವುದು. ಉದಾಹರಣೆಗೆ—

**ಏಷ ಸ್ಯ ಭಾನುರುದಿಯರ್ತಿ ಯುಜ್ಯತೇ ರಥಃ ಪರಿಜ್ಮಾ ದಿವೋ ಅಸ್ಯ ಸಾನವಿ ।**
**ಪೃಕ್ಷಾಸೋ ಅಸ್ಮಿನ್ಮಿಥುನಾ ಅಧಿ ತ್ರಯೋ ದೃತಿಸ್ತುರೀಯೋ ಮಧುನೋ ವಿ ರಪ್ಶತೇ ॥**
(ಋ. ಸಂ. ೪-೪೫-೧)

ಇದು ಆದಿತ್ಯನ ಗತಿವರ್ಣನವು. ಅವನ ರಥದಲ್ಲಿ ಪ್ರಸಿದ್ಧವಾಗಿ ಗೋಚರವಾಗತಕ್ಕ ಮೂರು ವಿಧವಾದ ಅನ್ನವಿಶೇಷಗಳೂ, ಇವನ್ನು ಮೀರಿದ ಮಾಧುರ್ಯವುಳ್ಳದ್ದೂ, (ಬೃಹದಾರಣ್ಯಕಾದಿಗಳಲ್ಲಿ **ಮಧು**ವೆಂದು ಪ್ರಸಿದ್ಧವಾದ) ಅಪ್ರಾಕೃತವಾದುದೂ ಆದ ತುರೀಯವಾದ (ನಾಲ್ಕನೆಯ) ಅನ್ನವೂ ಪ್ರಕಾಶಿಸುತ್ತದೆ ಎಂದಿದೆ. ಈ ನಾಲ್ಕನೆಯ **ಮಧು**ರೂಪವಾದ ಅನ್ನವು ಸ್ವಪ್ರಭೆಯಿಂದ ಪ್ರಕಾಶಿಸುತ್ತಿದ್ದರೂ ಸಹ ಮೊದಲಿನ ಮೂರೂ ಅನ್ನಗಳಿಗೂ ಇದಕ್ಕೂ ತಾತ್ತ್ವಿಕ ದೃಷ್ಟಿಯಿಂದಲೇ ವ್ಯತ್ಯಾಸವಿರುತ್ತದೆ. ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನ ಪ್ರಭೆಯು, ಕೇವಲ ಸೂರ್ಯನ ಪ್ರಭೆಗಿಂತಲೂ ಅತಿಶಯವಾದ ಕಾಂತಿಯನ್ನು ಹೊಂದಿರುವಂತೆ, ಮಧ್ವಾತ್ಮಕವಾದ ಈ ಅನ್ನದ ಪ್ರಭೆಯು ಸ್ತುತ್ಯರ್ಹವಾಗಿದೆಯೆಂದು ತಾತ್ಪರ್ಯ.

**ಸ್ವರ್ಭಾನೋರಧ ಯದಿಂದ್ರ ಮಾಯಾ ಅವೋ ದಿವೋ ವರ್ತಮಾನಾ ಅವಾಹನ್ ।**
**ಗೂಳ್ಹಂ ಸೂರ್ಯಂ ತಮಸಾಪವ್ರತೇನ ತುರೀಯೇಣ ಬ್ರಹ್ಮಣಾವಿಂದದತ್ರಿಃ ॥**
(ಋ. ಸಂ. ೫-೪೦-೬)

ಎಂಬಲ್ಲಿ ನಾಲ್ಕು ವಿಧವಾದ ಮಂತ್ರಗಳಿಂದ ನಾಲ್ಕುವಿಧವಾದ ತಮಸ್ಸನ್ನು ನಾಶಮಾಡಿ ಆದರಿಂದ ಆವೃತಗಳಾದ ಪ್ರಭಾವಿಶೇಷಗಳನ್ನು ಅತ್ರಿಋಷಿಯು ಅರಿತನು ಎಂದಿದೆ. ಇದು ಸೂರ್ಯಪ್ರಭೆಯ ವರ್ಣನೆ. ಎಂದರೆ, ಸೂರ್ಯನ ಸ್ವರೂಪವು ಪ್ರಪಂಚದ ದೃಷ್ಟಿಯಿಂದ ಒಂದೇವಿಧವಾದದ್ದು. ಎಲ್ಲರ ಕಣ್ಣಿಗೂ ಬೀಳತಕ್ಕ ಪ್ರಭೆಯು ಲೋಕಸಾಧಾರಣವಾದುದ್ದು. ಆದಕ್ಕಿಂತಲೂ ಅತಿಶಯವಾದ ಪ್ರಭಾವಿಶೇಷವು ಸಾಧಾರಣವಾದ ದೃಷ್ಟಿಗೆ ಗೋಚರವಾಗತಕ್ಕದ್ದಲ್ಲ. ಅದಕ್ಕೆ ಮಂತ್ರಸಹಾಯವೂ ತತ್ಪ್ರೇರಿತವಾದ ಧ್ಯಾನವಿಶೇಷವೂ ಅವಶ್ಯವಾಗಿರುತ್ತದೆ. ಇದರಂತೆಯೇ ತಮೋರೂಪದ ಅಜ್ಞಾನವೆಂದಾಗಲಿ ಅಜ್ಞಾನರೂಪದ ತಮಸ್ಸೆಂದಾಗಲಿ ಅರ್ಥಮಾಡಿದರೆ ಆಗ **ತುರೀಯಾವಸ್ಥೆ**ಯಲ್ಲಿರತಕ್ಕ ಆದಿತ್ಯನ ದಿವ್ಯಪ್ರಭೆಯನ್ನರಿಯಲು **ತುರೀಯ** ಮಂತ್ರದ ಪ್ರಭಾವದಿಂದಲೇ ಸಾಧ್ಯವೆಂದು ತಾತ್ಪರ್ಯವು ಸ್ಪಷ್ಟವಾಗಿದೆ. ಹೀಗೆಯೇ,

**ಚಮೂಷಚ್ಛ್ಯೇನಃ ಶಕುನೋ ವಿಭೃತ್ವಾ ಗೋವಿಂದುರ್ದ್ರಪ್ಸ ಆಯುಧಾನಿ ಬಿಭ್ರತ್ ।**
**ಅಪಾಮೂರ್ಮಿಂ ಸಚಮಾನಃ ಸಮುದ್ರಂ ತುರೀಯಂ ಧಾಮ ಮಹಿಷೋ ವಿವಕ್ತಿ ॥**
(ಋ. ಸಂ. ೯-೯೬-೧೯)

CC-0. Jangamwadi Math Collection. Digitized by eGangotri

ಎಂಬ ಮಂತ್ರದಲ್ಲಿ ಚಂದ್ರಲೋಕದ ಸ್ತುತಿಯಿದೆ. ಅಂತರಿಕ್ಷವನ್ನು ಸೇವಿಸತಕ್ಕ ಸೋಮನು ಸೂರ್ಯಲೋಕವನ್ನೂ ಮೀರಿರತಕ್ಕ ಚಂದ್ರಲೋಕವನ್ನು ಸೇವಿಸುತ್ತಾ ಪ್ರಕಾಶಿಸುತ್ತಿದ್ದನು ಎಂಬುದು ಮಂತ್ರದ ತಾತ್ಪರ್ಯ. ಇದೇ ಚಂದ್ರ ಲೋಕವು ಉಪನಿಷತ್ತುಗಳಲ್ಲಿ ಬೇರೆ ವಿಧವಾಗಿ ವರ್ಣಿತವಾಗಿದೆ. ಪ್ರಕೃತದಲ್ಲಿ ಇದು ಅಪ್ರಾಕೃತವಾದ ದಿವ್ಯಲೋಕ ವೆಂದು ತೋರಿಸಲು ಸಾಯಣರು **ಸೂರ್ಯಲೋಕಸ್ಯೋಪರಿ ವರ್ತಮಾನೇ** ಎಂದು ವಿವರಿಸಿದ್ದಾರೆ ಇಲ್ಲಿಯೂ ಸಹ **ತುರೀಯ**ಪದವು ಚಂದ್ರನ **ದಿವ್ಯಧಾಮ**ವನ್ನು ನಿರ್ದೇಶಿಸುತ್ತಾ ವಿಶೇಷಾರ್ಥವನ್ನು ವ್ಯಕ್ತಪಡಿಸುತ್ತದೆ. ಹೀಗೆ ಋಕ್ಸಂಹಿತೆಯಲ್ಲಿಯೂ ಸಹ ಅಲೌಕಿಕವಾದ ಪರತತ್ತ್ವನಿರ್ದೇಶಕ್ಕಾಗಿ **ತುರೀಯ**ಪದದ ಪ್ರಯೋಗವಿದೆ.

ಈ ತುರೀಯಭಾಗವು ವಿಶ್ವದ ಉಳಿದ ಮೂರು ಭಾಗಗಳಿಗಿಂತಲೂ ಮೀರಿದುದು ಎನ್ನುವಾಗ, ಅವ ಕ್ಕಿಂತಲೂ ಭಿನ್ನವಾದುದು ಎಂದರ್ಥಮಾಡಬಾರದು. ಒಂದೇ ತತ್ತ್ವವು ಪ್ರಾಕೃತವಾದ ವಿಶ್ವವನ್ನು ವ್ಯಾಪಿಸಿ ಅದಕ್ಕಿಂತಲೂ ಅತೀತವಾಗಿದೆಯೆಂದು ತಾತ್ಪರ್ಯ. ಆದು ಹೇಗೆಂದರೆ, **ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದ- ಶಾಂಗುಲಂ** (ಋ. ಸಂ. ೧೦-೯೦-೧) ಒಂದೇ ಆದ ಪರಮಪುರುಷತತ್ತ್ವವು ವಿಶ್ವವನ್ನೂ ವ್ಯಾಪಿಸಿ ದಶಾಂಗುಲ ಪರಿಮಾಣದಷ್ಟು ಅತೀತವಾಗಿ ನಿಂತಿತು ಎಂದು ವರ್ಣಿತವಾಗಿದೆ. ಇಲ್ಲಿ **ದಶಾಂಗುಲಂ** ಎಂಬುವಕ್ಕೆ ಅರ್ಥವನ್ನು ಮುಂದೆ ಸಂದರ್ಭಾನುಸಾರವಾಗಿ ತಿಳಿಸಲಾಗುತ್ತದೆ.

## ೧೮. ಪರಮಪುರುಷನ ವಿಶ್ವವ್ಯಾಪಕತ್ವ ಮತ್ತು ತದತಿರಿಕ್ತತ್ವ.

**ರೂಪಂರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ ।**
**ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶ ॥**
(ಋ. ಸಂ. ೬-೪೭-೧೮)

ಎಂಬ ಮಂತ್ರದಲ್ಲಿ ಈ ವಿಶ್ವವ್ಯಾಪಕತ್ವವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಇದು ಉಪನಿಷದಾದಿಗಳಲ್ಲಿ ಉದಾಹೃತ ವಾಗಿರುವ ಪ್ರಸಿದ್ಧವಾದ ಮಂತ್ರವು. ಇದು ಇಂದ್ರನನ್ನುದ್ದೇಶಿಸಿ ಇಂದ್ರನ ಮಹಾಮಹಿಮೆಯನ್ನು ವರ್ಣಿಸಿದೆ. ಇಂದ್ರನೇ ಅಗ್ನಿ, ವಿಷ್ಣು, ರುದ್ರ ಇತ್ಯಾದನೇಕ ದೇವತಾರೂಪಗಳನ್ನೂ, ವಿಶ್ವದಲ್ಲಿರತಕ್ಕ ಸಕಲ ಪ್ರಾಕೃತತತ್ತ್ವಗಳ ರೂಪಗಳನ್ನೂ ಧರಿಸಿ, ಒಂದೇ ಆದ ದೇವತಾತತ್ತ್ವವು ವಿಶ್ವರೂಪವಾಗಿ ವ್ಯಾಪಿಸಿದೆಯೆಂದು ತಾತ್ಪರ್ಯ. ಸಾಯಣರು ಈ ಮಂತ್ರವನ್ನು ಆಧ್ಯಾತ್ಮಿಕವಾದ ತತ್ತ್ವಪ್ರತಿಪಾದನಾಮಂತ್ರವನ್ನಾಗಿ ಪರಿಗಣಿಸಿ ಪರಬ್ರಹ್ಮತತ್ತ್ವದ ಸ್ವರೂಪ ವರ್ಣನೆಯೇ ಈ ಮಂತ್ರವೆಂದೂ ಸಹ ಅರ್ಥಮಾಡಿದ್ದಾರೆ. ಇಂದ್ರನೆಂದರೆ ಇಲ್ಲಿ ಪರಮಾತ್ಮನೆಂದರ್ಥ. ಆ ಪರಮಾತ್ಮನು ಆಕಾಶದಂತೆ ಸರ್ವವ್ಯಾಪಿ ಮತ್ತು ಸದಾನಂದರೂಪನು ಒಂದೇ ಪರಮಾತ್ಮರೂಪವು ವಿಶ್ವದಲ್ಲಿರುವ ಸಕಲ ದೇಹಗಳನ್ನೂ ಸಹ ಆಯಾ ಉಪಾಧಿಗಳಿಗನುಗುಣವಾಗಿ ಪ್ರವೇಶಿಸಿ ಜೀವಾತ್ಮಎಂಬ ವೈವಿಧ್ಯವನ್ನೂ ವಿಭಾಗ ವನ್ನೂ ಹೊಂದುತ್ತದೆ ಎಂದು ತಾತ್ಪರ್ಯ. ವಿಶ್ವವ್ಯಾಪಕತ್ವವೂ ವಿಶ್ವಾತೀತವಾದ ರೂಪವೂ ಸಮಾನಧರ್ಮವಾಗಿರತಕ್ಕ ಪರಮಾತ್ಮನು ಈ ರೀತಿ ವರ್ಣಿತನಾಗಿದ್ದಾನೆಂದು ತಿಳಿಸಿದ್ದಾರೆ.

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂರೂಪಂ ಪ್ರತಿರೂಪೋ ಬಭೂವ ॥**
(ಕಠ ೫-೯))

ಇತ್ಯಾದ್ಯುಪನಿಷನ್ಮಂತ್ರಗಳಲ್ಲೂ ಸಹ ವಿಶ್ವವ್ಯಾಪಕತ್ವವು ಮೇಲೆ ಹೇಳಿದಂತೆ ವರ್ಣಿತವಾದೆ. **ವೃಕ್ಷ ಇವ ಸ್ತಬ್ಧೋ ದಿವ ತಿಷ್ಠತ್ಯೇಕಸ್ತೇನೇದಂ ಪೂರ್ಣಂ ಪುರುಷೇಣ-ಸರ್ವಂ** ವಿಶ್ವದ ಎಲ್ಲೆಯನ್ನು ಮೀರಿ ವಿಶ್ವಾತೀತನಾಗಿ ವೃಕ್ಷ

CC-0. Jangamwadi Math Collection. Digitized by eGangotri

ದೋಪಾದಿಯಲ್ಲಿ ಅಚಲನಾಗಿ ಸ್ಥಾಪಿತನಾಗಿರುವ ಪರಮಪುರುಷನಿಂದ ವಿಶ್ವವೆಲ್ಲವೂ ವ್ಯಾಪಿತವಾಗಿದೆ ಎಂಬ ಈ ವ್ಯಾಪಕತ್ವ ಧರ್ಮವು ಗಾಯತ್ರಿಯ ಸ್ವರೂಪವರ್ಣನಕಾಲದಲ್ಲೂ ಸಹ ವರ್ಣಿತವಾಗಿದೆಯೆಂದು ಏತಾವಾನಸ್ಯ ಮಹಿಮಾತೋಜ್ಯಾಯಾಂಶ್ಚ ಪೂರುಷಃ ಎಂಬ ವಾಕ್ಯವನ್ನು ಉದಾಹರಿಸಿ ಮೇಲೆ ತಿಳಿಸಿದೆ. ಇದೇ ಅಂಶವನ್ನು ಛಾಂದೋಗ್ಯದಲ್ಲಿಯೂ ಕೆಳಗೆ ಉದಾಹರಿಸಿರುವ ವಾಕ್ಯಗಳಿಂದ ವರ್ಣಿಸಿದೆ.

———

## ೧೯. ಬಾಹ್ಯಾಕಾಶ ಮತ್ತು ಹೃದಯಾಕಾಶಗಳ ಸಾಧರ್ಮ್ಯ.

——: o :——

> ಯದ್ವೈ ತದ್ಬ್ರಹ್ಮೇತೀದಂ ವಾವ ತದ್ಯೋಽಯಂ ಬಹಿರ್ಧಾ ಪುರುಷಾದಾಕಾಶೋ ಯೋ ವೈ ಸ ಬಹಿರ್ಧಾ ಪುರುಷಾದಾಕಾಶಃ ॥ ಅಯಂ ವಾವ ಸ ಯೋಽಯಮಂತಃ ಪುರುಷ ಆಕಾಶೋ ಯೋ ವೈ ಸೋಽಂತಃಪುರುಷ ಆಕಾಶಃ ಅಯಂ ವಾವ ಸ ಯೋಽಯಮಂತರ್ಹೃದಯ ಆಕಾಶಸ್ತದೇತತ್ಪೂರ್ಣಮಪ್ರವೃತ್ತಿ ಪೂರ್ಣಾಮಪ್ರವರ್ತಿನೀಂ ಶ್ರಿಯಂ ಲಭತೇ ಯ ಏವಂ ವೇದ ॥
>
> (ಛಾ. ಉ. ೩-೧೨-೭ ರಿಂದ ೯)

ಗಾಯತ್ರೀರೂಪದಿಂದ ಸ್ತುತವಾಗಿ ಪಾದಚತುಷ್ಟಯವುಳ್ಳ ಈ ಪರಬ್ರಹ್ಮತತ್ತ್ವವೇ ಬಾಹ್ಯಪ್ರಪಂಚವನ್ನು ವ್ಯಾಪಿಸಿರುವ ಆಕಾಶರೂಪವಾಗಿದೆ. ಪುರುಷನಿಗೆ ಬಾಹ್ಯಪ್ರಪಂಚದಲ್ಲಿ ವ್ಯಾಪಿಸಿರುವ ಈ ಆಕಾಶತತ್ತ್ವವೇ ಪುರುಷನ ಅಂತಸ್ತತ್ತ್ವವೂ ಆಗಿದೆ. ಈ ಹೃದಯಾಕಾಶದಲ್ಲಿರುವ ಗಾಯತ್ರ್ಯಾಖ್ಯವಾದ ಈ ಬ್ರಹ್ಮತತ್ತ್ವವು ಸರ್ವವ್ಯಾಪಿಯೂ ಅಚಲವೂ ಆಗಿದೆ. ಈ ತತ್ತ್ವವನ್ನರಿತವನು ಸರ್ವವ್ಯಾಪಿಯಾದುದೂ ಶಾಶ್ವತವೂ ಸ್ಥಿರವೂ ಆದ ಜ್ಞಾನಸಂಪತ್ತನ್ನೂ ಸೌಖ್ಯವನ್ನೂ ಪಡೆಯುತ್ತಾನೆ. ಹೃತ್ಪುಂಡರೀಕದಲ್ಲಿರುವ ಈ ಪರತತ್ತ್ವದ ಸ್ವರೂಪವನ್ನು ಧ್ಯಾನಮುಖದಿಂದ ಉಪಾಸಿಸಬೇಕು.

> ದಹ್ರಂ ವಿಪಾಪಂ ವರವೇಽಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಗ್‌ಸ್ಥಂ ।
> ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ ॥
>
> (ತೈ. ಉ. ಉ. ೪-೧೨-೩)

ಎಂಬ ಈ ಮಂತ್ರದಲ್ಲಿ ವರ್ಣಿತವಾಗಿರುವ ಬ್ರಹ್ಮತತ್ತ್ವವೇ ಅಂತರ್ಹೃದಯಾಕಾಶಃ ಎಂಬ ಛಾಂದೋಗ್ಯದ ವಾಕ್ಯದಿಂದ ವರ್ಣಿತವಾಗಿದೆ. ಈ ರೀತಿ ಬ್ರಹ್ಮಪ್ರತಿಪಾದಕವಾದ ವಿಶೇಷಣಗಳಿಂದಲೇ ಗಾಯತ್ರಿಯನ್ನೂ ವರ್ಣಿಸಿರುವುದರಿಂದ ಇಲ್ಲಿ ಹೃದಯಾಕಾಶವೆಂದರೇನು ? ಹೃತ್ಪುಂಡರೀಕವೆಂದರೇನು ? ಈ ಹೃತ್ಪುಂಡರೀಕಾಂತರ್ಗತವಾಗಿಯೂ ಮತ್ತು ತತ್ಕಾಲದಲ್ಲೇ ಪೃಥಿವ್ಯಂತರಿಕ್ಷಾದಿಸಕಲಬಾಹ್ಯವಿಶ್ವವನ್ನು ವ್ಯಾಪಿಸಿಯೂ ಇರುವ ಗಾಯತ್ರಿಗೆ ಅಧಿಷ್ಠಾನವಾಗಿರುವ ಆಕಾಶತತ್ತ್ವವೇ ಪರಬ್ರಹ್ಮವಾದರೆ, ಗಾಯತ್ರಿಯ ಅಂಗಗಳಾದ ಭೂರಾದಿವ್ಯಾಹೃತಿಗಳಿಗೂ ಈ ಆಕಾಶತತ್ತ್ವಕ್ಕೂ ಯಾವ ಸಂಬಂಧವನ್ನು ತೋರಿಸಿದೆ ? ಭೂರಾದಿವ್ಯಾಹೃತಿಗಳೇ ಅವಯವಗಳಾಗಿ ಉಳ್ಳ ಪ್ರಣವಕ್ಕೂ ಗಾಯತ್ರ್ಯಾತ್ಮಕವಾದ ಬ್ರಹ್ಮಕ್ಕೂ ಇರುವ ಸಂಬಂಧವೇನು ? ಬ್ರಹ್ಮಸಾಕ್ಷಾತ್ಕಾರಕ್ಕೆ ಪ್ರಣವವು ಯಾವ ರೀತಿ ಮುಖ್ಯಸಾಧನವಾಗುತ್ತದೆ ? ಗಾಯತ್ರಿಯೇ ಪ್ರಣವಾತ್ಮಕವೇ ಇತ್ಯಾದಿ ವಿಷಯಗಳನ್ನು ಪರಿಶೀಲಿಸಬೇಕು.

CC-0. Jangamwadi Math Collection. Digitized by eGangotri

**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ** । ಇತ್ಯಾದಿ ವಾಕ್ಯಗಳು ಸಕಲಭುವನಗಳನ್ನೂ ವ್ಯಾಪಿಸಿರುವ ಬಾಹ್ಯತತ್ತ್ವವಾವುದೋ ಪುರುಷನ ಹೃದಯಾಂತರ್ಗತವಾಗಿರುವ ತತ್ತ್ವವೂ ಅದೇ ಎಂದು ಉಪದೇಶಿಸುತ್ತವೆ. ಈ ಒಂದೇ ತತ್ತ್ವವು ಬ್ರಹ್ಮ, ಆಕಾಶ, ಗಾಯತ್ರೀ ಇತ್ಯಾದಿ ನಾಮಾಂತರಗಳಿಂದ ನಿರ್ದೇಶಿಸಲ್ಪಡುತ್ತದೆ. ಪ್ರಕೃತ, ಈ ಅಂತರ್ಬಹಿರ್ವ್ಯಾಪ್ಯತ್ವವು ಬ್ರಹ್ಮ, ಆಕಾಶ, ಮತ್ತು ಗಾಯತ್ರೀ ಎಂಬ ಮೂರು ಸ್ವರೂಪಗಳನ್ನು ವರ್ಣಿಸುವಾಗಲೂ ಸಹ ನಿಷ್ಕೃಷ್ಟವಾಗಿ ತಿಳಿಸಲ್ಪಟ್ಟಿದೆ. ಮತ್ತು ಮೂರೂ ಸಹ ಒಂದೇ ತತ್ತ್ವದ ನಾಮಾಂತರಗಳೆಂದೂ ವ್ಯಕ್ತವಾಗಿದೆ.

> **ಏಷಾ ಗಾಯತ್ರ್ಯಧ್ಯಾತ್ಮಂ ಪ್ರತಿಷ್ಠಿತಾ ಸಾ ಹೈಷಾ ಗಯಾಂಸ್ತತ್ರೇ ಪ್ರಾಣಾ ವೈ ಗಯಾಸ್ತತ್ಪ್ರಾಣಾಂಸ್ತತ್ರೇ ತದ್ಯದ್ಗಯಾಂಸ್ತತ್ರೇ ತಸ್ಮಾದ್ಗಾಯತ್ರೀ ನಾಮ ಸ ಯಾಮೇವಾಮೂಂ ಸಾವಿತ್ರೀಮನ್ವಾಹೈಷೈವ ಸಾ ಸ ಯಸ್ಮಾ ಅನ್ವಾಹ ತಸ್ಯ ಪ್ರಾಣಾಂಸ್ತ್ರಾಯತೇ** ॥
>
> (ಬೃ. ಉ. ೫-೧೪-೪)

ಎಂದು ಮೇಲೆ ಉದಾಹೃತವಾಗಿರುವ ವಾಕ್ಯಗಳಲ್ಲಿ ವಿವರಿಸಿರುವಂತೆ ಪರೋರಜಾಃ ಇತ್ಯಾದಿ ವಿಶೇಷಣಗಳಿಂದ ವರ್ಣಿತವಾದುದೂ ವಿಶ್ವವ್ಯಾಪಕವಾದುದೂ ಆದ ಯಾವ ಗಾಯತ್ರೀತತ್ತ್ವವಿದೆಯೋ, ಅದೇ ಅಧ್ಯಾತ್ಮರೂಪದಲ್ಲಿ ಹೃದಯಾಂತರ್ಗತವಾಗಿರುತ್ತದೆಯೆಂದು ಗಾಯತ್ರಿಯ ಅಂತರ್ಬಹಿರ್ವ್ಯಾಪಕತ್ವವು ತಿಳಿಸಿದೆ. ಇದೇ ರೀತಿಯಲ್ಲಿ, ಆಕಾಶದ ಸ್ವರೂಪವನ್ನು ವರ್ಣಿಸುತ್ತಾ,

> **ಯಾವಾನ್ ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ ಉಭಾವಗ್ನಿಶ್ಚ ವಾಯುಶ್ಚ ಸೂರ್ಯಾಚಂದ್ರಮಸಾವುಭೌ ವಿದ್ಯುನ್ನಕ್ಷತ್ರಾಣಿ ಯಚ್ಚಾಸ್ಯೇಹಾಸ್ತಿ ಯಚ್ಚ ನಾಸ್ತಿ ಸರ್ವಂ ತದಸ್ಮಿನ್ ಸಮಾಹಿತಮಿತಿ** ॥
>
> (ಛಾ. ಉ. ೮-೧-೩)

ದೇಹರೂಪವಾದ ಈ ಬ್ರಹ್ಮಪುರದಲ್ಲಿ ಸೂಕ್ಷ್ಮವೂ ಪುಂಡರೀಕರೂಪವೂ ಆದ ಗೃಹವಿದೆ. ಅದು ಹೃದಯಾಕಾಶವು. ಅದು ಬ್ರಹ್ಮನ ಆವಾಸಸ್ಥಾನವು. ಅದರ ಅನ್ವೇಷಣವನ್ನು ಮಾಡಿ ಅಲ್ಲಿ ಬ್ರಹ್ಮತತ್ತ್ವವನ್ನು ಕಾಣಬೇಕು ಅಥ **ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರಾಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ** ತದ್ವಾವ ವಿಜಿಜ್ಞಾಸಿತವ್ಯಮಿತಿ (ಛಾ. ಉ. ೮-೧-೧). ಬ್ರಹ್ಮಾಂಡಕ್ಕಿಂತಲೂ ಮಹತ್ತಾದ ಈ ಬ್ರಹ್ಮತತ್ತ್ವವನ್ನು ಅಡಗಿಸಿಕೊಂಡಿರುವ ಸೂಕ್ಷ್ಮವಾದ ಈ ಅಂತರಾಕಾಶದ ಸ್ವರೂಪವೇನೆಂದರೆ, ಬಾಹ್ಯಾಕಾಶವು ಎಷ್ಟು ವಿಸ್ತೃತವಾಗಿ ಹರಡಿರುವುದೋ ಅಷ್ಟೇ ವಿಸ್ತೃತವಾಗಿ ಈ ಹೃದಯಾಕಾಶವು ಹರಡಿರುವುದು. ಇದರಲ್ಲೇ ದ್ಯಾವಾಪೃಥಿವಿಗಳೆರಡೂ ಹರಡಿರುವುವು. ಅಲ್ಲದೇ, ವಾಯ್ವಗ್ನಿಗಳೂ, ಚಂದ್ರಸೂರ್ಯರೂ, ವಿದ್ಯುತ್ತೂ, ನಕ್ಷತ್ರಗಳೂ, ದೇಹಾಂತರ್ಗತವಾಗಿರುವುದೂ, ಆಗಿಲ್ಲದಿರುವುದೂ ಆದ ಸಮಸ್ತವೂ ಈ ದಹರಾಕಾಶದಲ್ಲಿ ಅಡಕವಾಗಿದೆ. ಈ ಹೃದಯಾಕಾಶವು ಅತಿಸೂಕ್ಷ್ಮವಾದುದು. ಪಾಪರಹಿತವಾದುದು. ಇದು ಉತ್ತಮವಾದ ಆವಾಸಸ್ಥಾನವು. ಇದು ಪುಂಡರೀಕರೂಪದಲ್ಲಿ ದೇಹರೂಪವಾದ ಪುರದ ಮಧ್ಯಭಾಗದಲ್ಲಿ ಈ ಸೂಕ್ಷ್ಮವಾದ ಹೃದಯದಲ್ಲಿ ಅದಕ್ಕಿಂತಲೂ ಸೂಕ್ಷ್ಮವಾದ ಆಕಾಶವಿದ್ದು ಆ ಆಕಾಶದಲ್ಲಿ ಯಾವ ಬ್ರಹ್ಮತತ್ತ್ವವಡಗಿದೆಯೋ ಅದನ್ನು ಉಪಾಸನೆಮಾಡಬೇಕು ಎಂದು ಹೃದಯಾಕಾಶವನ್ನು ವರ್ಣಿಸಿದೆ.

CC-0. Jangamwadi Math Collection. Digitized by eGangotri

## ೨೦. ವಾಗ್ರೂಪವಾದ ಗಾಯತ್ರೀ ಮತ್ತು ನಾಮರೂಪವ್ಯವಹಾರಗಳಿಗೆ ಮೂಲವಾದ ಆಕಾಶ.

ವಾಗ್ವೈ ಗಾಯತ್ರೀ । ವಾಗ್ವಾ ಇದಂ ಸರ್ವಂ ಭೂತಂ ಗಾಯತಿ ತ್ರಾಯತೇ ಚ । ಸಮಸ್ತ ಪ್ರಪಂಚದ ಅಸ್ತಿತ್ವವು ವಾಕ್ಕಿನಿಂದಲೇ ಪ್ರಕಾಶಿತವಾಗುವುದರಿಂದಲೂ, ಸಮಸ್ತಪ್ರಪಂಚದ ರಕ್ಷಣಾನಿರ್ವಹಣವೂ ವಾಕ್ಕಿಗೇ ಸೇರಿದ್ದರಿಂದಲೂ ವಾಕ್ಕೇ ಸಮಸ್ತಪ್ರಪಂಚವನ್ನೂ ವ್ಯಾಪಿಸಿದೆ ಮತ್ತು ತದಾತ್ಮಕವಾಗಿದೆ. ಈ ವಾಗ್ದೇವಿಯೇ ಗಾಯತ್ರ್ಯಭಿಧಾನದಿಂದ ಕರೆಯಲ್ಪಟ್ಟಿದೆಯೆಂಬ ವಿಷಯವನ್ನು ಮೇಲೆ ತಿಳಿಸಿದೆ. ಪ್ರಕೃತದಲ್ಲಿ ವಿವೃತವಾಗಿರುವ ಹೃದಯಾಕಾಶಕ್ಕೂ, ಶಬ್ದಬ್ರಹ್ಮಾತ್ಮಕವಾದುದೂ ಮತ್ತು ಗಾಯತ್ರ್ಯಭಿಧಾನದಿಂದ ನಿರ್ದಿಷ್ಟವಾದುದೂ ಆದ ವಾಕ್ಕಿಗೂ ಆಧಾರಾಧೇಯಭಾವವೂ, ಆದುದರಿಂದಲೇ ಎರಡಕ್ಕೂ ಐಕ್ಯವೂ ಸಹ ಅನೇಕ ಕಡೆಗಳಲ್ಲಿ ತಿಳಿಸಲ್ಪಟ್ಟಿದೆ. ಇದೇ ಸಂಬಂಧವನ್ನು ಛಾಂದೋಗ್ಯದಲ್ಲಿಯೂ ತಿಳಿಸುತ್ತಾ, ಸಮಸ್ತಲೋಕವ್ಯವಹಾರಗಳಿಗೂ ಮೂಲವಾದ ವಾಕ್ಕಿಗೆ ಆಕಾಶವೇ ಆಧಾರವೆಂದು ತಿಳಿಸಿದೆ.

> ಆಕಾಶೋ ವೈ ನಾಮ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ತದ್ಬ್ರಹ್ಮ ತದಮೃತಂ ಸ ಆತ್ಮಾ ।
>
> (ಛಾ. ಉ. ೮-೧೪-೧)

ನಾಮರೂಪಗಳೆಂದು ವೈಯಕ್ತಿಕವಾದ ವಿಭಾಗವನ್ನು ಕೂಡಲು ಆಕಾಶವೇ ಕಾರಣ. ಇದರಲ್ಲಿ ಅಂತರ್ಗತನಾಗಿರು, ವವನೇ ಪರಬ್ರಹ್ಮನು, ಪರಮಾತ್ಮನು. ಈ ವಾಕ್ಯವನ್ನು ಶ್ರೀ ಶಂಕರಾಚಾರ್ಯರು ಬ್ರಹ್ಮಸೂತ್ರಭಾಷ್ಯದ ದಹರಾಧಿಕರಣದ ಪ್ರಕರಣದಲ್ಲಿ ಉದ್ಧರಿಸಿ ಪರಬ್ರಹ್ಮನಿಗೂ ಈ ದಹರಾಕಾಶಕ್ಕೂ ತಾದಾತ್ಮ್ಯವನ್ನು ಹೇಳಿದ್ದಾರೆ.

> ಪ್ರಸಿದ್ಧೇಶ್ಚ—ಇತಶ್ಚ ಪರಮೇಶ್ವರ ಏವ ದಹರೋಽಸ್ಮಿನ್ನಂತರಾಕಾಶ ಇತ್ಯುಚ್ಯತೇ । ಯತ್ಕಾರಣಮಾಕಾಶಶಬ್ದಃ ಪರಮೇಶ್ವರೇ ಪ್ರಸಿದ್ಧಃ । ಆಕಾಶೋ ವೈ ನಾಮ.... ....ಸ ಆತ್ಮಾ ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ (ಛಾ. ಉ. ೧-೯-೧) ಇತ್ಯಾದಿ ಪ್ರಯೋಗದರ್ಶನಾತ್ ॥
>
> (ಬ್ರಹ್ಮಸೂತ್ರಭಾಷ್ಯ. ೧-೩-೧೭)

ಈ ಅಂತರ್ಹೃದಯಾಕಾಶವೇ ಪರಮೇಶ್ವರನೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಪರಬ್ರಹ್ಮನ ಬಾಹ್ಯಾವಿರ್ಭಾವಗಳಾದ ನಾಮರೂಪಗಳ ವಿಭಾಗಕ್ಕೆ ಆಕಾಶವೇ ಕಾರಣವಾಗಿರುವುದರಿಂದಲೂ, ಈ ಸಕಲಭೂತಗಳೂ ಆಕಾಶದಿಂದಲೇ ಉತ್ಪನ್ನವಾಗುತ್ತವೆ ಇತ್ಯಾದಿ ಶ್ರುತಿವಾಕ್ಯಗಳಿದ್ದು ಆಕಾಶಕ್ಕೆ ಬ್ರಹ್ಮತಾದಾತ್ಮ್ಯವನ್ನು ಹೇಳಿರುವುದರಿಂದಲೂ ಸಹ ದಹರಾಕಾಶವು ಬ್ರಹ್ಮಾವಾಸಸ್ಥಾನವೆಂದು ಕೆಲವು ಕಡೆಗಳಲ್ಲಿಯೂ, ಬ್ರಹ್ಮರೂಪಿಯೇ ಎಂದು ಕೆಲವು ಕಡೆಗಳಲ್ಲಿಯೂ ಪ್ರಸಿದ್ಧವಾಗಿದೆ.

> ಸಾ ಇಯಂ ಶಬ್ದಬ್ರಹ್ಮಾತ್ಮಿಕಾ ವಾಕ್ ಉತ್ಕೃಷ್ಟೇ ಹೃದಯಾಕಾಶೇ ಮೂಲಾಧಾರೇ ಸಹಸ್ರಾಕ್ಷರಾ ಅನೇಕಾಕಾರೇಣ ವ್ಯಾಪ್ತಾ ಭವತಿ ॥
>
> (ಶಂ. ಭಾ.)

CC-0. Jangamwadi Math Collection. Digitized by eGangotri

ಶಬ್ದಬ್ರಹ್ಮರೂಪವಾದ ಈ ವಾಕ್ಕು ಅತಿಶಯವಾದುದೂ ಹೃದಯಾಕಾಶರೂಪವಾದುದೂ ಆದ ಮೂಲಾಧಾರದಲ್ಲಿದ್ದು ಅಪರಿಮಿತವಾದ ಆಕಾರಗಳನ್ನು ಪಡೆದು ವಿಶ್ವವನ್ನು ವ್ಯಾಪಿಸುತ್ತದೆ. ಇತ್ಯಾದಿಯಾದ ವರ್ಣನದಲ್ಲಿ ಗಾಯತ್ರ್ಯಭಿಧಾನವಾದ ಶಬ್ದಬ್ರಹ್ಮಕ್ಕೂ ಆಕಾಶಾತ್ಮಕವಾದ ಬ್ರಹ್ಮಕ್ಕೂ ತಾದಾತ್ಮ್ಯವನ್ನು ಹೇಳಿದೆ. ಈ ರೀತಿಯಲ್ಲಿ ವರ್ಣಿತವಾದ ಬ್ರಹ್ಮವೇ ಜ್ಯೋತೀರೂಪವು. ಈ ಬ್ರಹ್ಮಾಖ್ಯವಾದ ಜ್ಯೋತಿಯ ಸ್ವರೂಪವೇನೆಂಬುದನ್ನು ಉಪನಿಷತ್ತುಗಳಲ್ಲಿ ಈ ರೀತಿ ವರ್ಣಿಸಿದೆ.

---

## ೨೧. ಪರತತ್ತ್ವದ ಜ್ಯೋತೀರೂಪ.

---

**ಅಥ ಯ ಏಷೋಽಂತರೇ ಹೃತ್ಪುಷ್ಕರ ಏವಾಶ್ರಿತೋಽನ್ನಮತ್ತಿ ಸ ಏಷೋಽಗ್ನಿರ್ದಿವಿ ಶ್ರಿತಃ ಸೌರಃ ಕಾಲಾಖ್ಯೋಽದೃಶ್ಯಃ ಸರ್ವಭೂತಾನ್ಯನ್ನಮತ್ತೀತಿ । ಕಃ ಪುಷ್ಕರಃ ಕಿಂಮಯೋ ವೇತಿ। ಇದಂ ವಾವ ತತ್ಪುಷ್ಕರಂ ಯೋಽಯಮಾಕಾಶೋಽಸ್ಯೇಮಾಶ್ಚತಸ್ರೋ ದಿಶಶ್ಚತಸ್ರ ಉಪ-ದಿಶೋ ದಲಸಂಸ್ಥಾ ಆಸಂ । ಅರ್ವಾಗ್ವಿಚರತ ಏತೌ ಪ್ರಾಣಾದಿತ್ಯಾ ಏತಾ ಉಪಾಸೀತೋ-ಮಿತ್ಯೇತದಕ್ಷರೇಣ ವ್ಯಾಹೃತಿಭಿಃ ಸಾವಿತ್ರ್ಯಾ ಚೇತಿ ॥**

(ಮೈತ್ರ್ಯುಪನಿಷತ್. ೬-೨)

ಹೃತ್ಪುಂಡರೀಕದಲ್ಲಿದ್ದುಕೊಂಡು ಅನ್ನವನ್ನು ಭುಜಿಸುತ್ತಿರುವ ಪುರುಷನೇ ಸರ್ವಭಕ್ಷಕನೂ ಕಾಲಾತ್ಮನೂ ಆದಿತ್ಯರೂಪಿಯೂ ಆದ ದಿವ್ಯಜ್ಯೋತಿಯಾಗಿದ್ದಾನೆ. ಈ ಹೃತ್ಪುಂಡರೀಕವಾವುದು ? ಇದರ ಸ್ವರೂಪವೇನು ಎಂದರೆ, ಸರ್ವವ್ಯಾಪಿಯಾದ ಆಕಾಶವೇ ಈ ಹೃತ್ಪುಂಡರೀಕವು. ನಾಲ್ಕು ಮುಖ್ಯದಿಕ್ಕುಗಳೂ ನಾಲ್ಕು ಉಪದಿಕ್ಕುಗಳೂ ಸಹ ಈ ಆಕಾಶಾತ್ಮಕವಾದ ಪುಷ್ಕರದ ದಳಗಳು. ಪುಷ್ಕರಸ್ಥವಾದ ಆತ್ಮನೂ ಆಕಾಶಸ್ಥನಾದ ಆದಿತ್ಯನೂ ಸಹ ಪರಸ್ಪರ ಅಭಿಮುಖರಾಗಿದ್ದಾರೆ. ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿಗಳಿಂದಲೂ, ಅಕ್ಷರವಾದ ಓಂಕಾರರೂಪವಾದ ಪ್ರಣವದಿಂದಲೂ ಮತ್ತು ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಎಂಬ ಸಾವಿತ್ರೀರೂಪವಾದ ಗಾಯತ್ರೀಪಠನದಿಂದಲೂ ಸಹ ಈ ತತ್ತ್ವವನ್ನು ಅನುಸಂಧಾನಮಾಡಬೇಕು ಎಂದು ಉಪದೇಶಿಸಿದೆ.

ಭೂಃ, ಭುವಃ, ಸ್ವಃ ಎಂಬ ವಿಭಾಗವು ಜ್ಯೋತೀರೂಪನಾದ ಬ್ರಹ್ಮನ ಸ್ವರೂಪವನ್ನು ವರ್ಣಿಸುವಂತೆಯೇ ಪ್ರಣವ ಮತ್ತು ಗಾಯತ್ರೀಸ್ವರೂಪವನ್ನೂ ವರ್ಣಿಸುತ್ತದೆ. ಬ್ರಹ್ಮವು ಸಾಧ್ಯ ; ಪ್ರಣವ ಮತ್ತು ಗಾಯತ್ರಿಗಳು ಸಾಧನಗಳೆಂಬ ವ್ಯಾವಹಾರಿಕದೃಷ್ಟಿಯಿಂದಲೂ ಉಪಾಸ್ಯ ಮತ್ತು ಉಪಾಸನಸಾಧನ ಎಂಬ ಲೌಕಿಕವಾದ ವಿಭಾಗ ದೃಷ್ಟಿಯಿಂದಲೂ ಹೇಳಿದೆ. ಆದರೆ ಪಾರಮಾರ್ಥಿಕವಾಗಿ ಈ ಸಾಧ್ಯವೂ ಸಾಧನವೂ ಒಂದೇ ಎಂದು ತಿಳಿಯಬೇಕೆಂದು ಶ್ರುತಿಯು ಉಪದೇಶಿಸುತ್ತದೆ. ಜ್ಯೋತೀರೂಪವಾದ ತತ್ತ್ವವನ್ನರಿಯಲ ಜ್ಯೋತೀರೂಪವಾದ ಸಾಧನದಿಂದ ಮಾತ್ರ ಸಾಧ್ಯವಾಗುತ್ತದೆ ಎಂಬ ಅಂಶವನ್ನು ಮುಖ್ಯವಾಗಿ ಗಮನಿಸಬೇಕು. ಮತ್ತು ಈ ಸಾಧನವು ಧ್ಯಾನರೂಪವಾದುದು. ಆದುದರಿಂದ, ಸಾಧ್ಯವಾದ ಪರತತ್ತ್ವದ ಜ್ಯೋತಿಸ್ಸ್ವರೂಪವೇನು ? ಸಾಧನವಾದ ಗಾಯತ್ರಿಯ ಮತ್ತು ಪ್ರಣವದ ಜ್ಯೋತಿಸ್ಸ್ವರೂಪವಾವುದು ಮತ್ತು ಪರಂಜ್ಯೋತಿಯನ್ನರಿಯುವ ಧ್ಯಾನದ ಸ್ವರೂಪವೇನು, ತತ್ಸವಿತುಃ

CC-0. Jangamwadi Math Collection. Digitized by eGangotri

ಎಂಬ ಮಹಾಮಂತ್ರವೊಂದರಲ್ಲೇ ಈ ಸಾಧ್ಯ, ಸಾಧನ ಮತ್ತು ಧ್ಯಾನ ಎಂಬ ಮೂರು ರೂಪಗಳೂ ನಿರ್ದಿಷ್ಟವಾಗಿವೆ ಯೆಂದು ಹೇಳಬಹುದೇ ಎಂಬ ವಿಷಯವನ್ನು ಪರಿಶೀಲಿಸುವುದು ಸದ್ಯಃ ಅವಶ್ಯವಾಗಿರುತ್ತದೆ.

ಸ ತ್ರೇಧಾತ್ಮಾನಂ ವ್ಯಾಕುರುತಾದಿತ್ಯಂ ತೃತೀಯಂ ವಾಯುಂ ತೃತೀಯಂ ಸ ಏಷ ಪ್ರಾಣಸ್ತ್ರೇಧಾ ವಿಹಿತಃ । ತಸ್ಯ ಪ್ರಾಚೀ ದಿಕ್ಶಿರೋಽಸೌ ಚಾಸೌ ಚೇರ್ಮೌ । ತಸ್ಯ ಪ್ರಾಚೀ ದಿಕ್ಶಿರೋಽಸೌ ಚೇರ್ಮೌ । ಅಥಾಸ್ಯ ಪ್ರತೀಚೀ ದಿಕ್ಪುಚ್ಛಮಸೌ ಚಾಸೌ ಚ ಸಕ್ಥ್ಯೌ ದಕ್ಷಿಣಾ ಚೋದೀಚೀ ಚ ಪಾರ್ಶ್ವೇ ದ್ಯೌಃ ಪೃಷ್ಠಮಂತರಿಕ್ಷಮುದರಮಿಯಮುರಃ ಸ ಏಷೋಽಪ್ಸು ಪ್ರತಿಷ್ಠಿತೋ ಯತ್ರ ಕ್ವ ಚೈತಿ ತದೇವ ಪ್ರತಿತಿಷ್ಠತ್ಯೇವಂ ವಿದ್ವಾನ್ ।

(ಬೃ. ಉ. ೧-೨-೩)

ಮೇಧ್ಯಾಶ್ವವೆಂದು ವರ್ಣಿತವಾದ ಈ ಪರಬ್ರಹ್ಮವು ಮೂರು ವಿಧವಾಗಿ ಪರಿಣಮಿಸಿತು. ಒಂದು ಪಾರ್ಥಿವಾಗ್ನಿ ರೂಪದಲ್ಲಿಯೂ ಇನ್ನೊಂದು ಆದಿತ್ಯರೂಪದಲ್ಲಿಯೂ ಮೂರನೆಯದು ವಾಯುರೂಪದಲ್ಲಿಯೂ ಪ್ರಸಿದ್ಧವಾದವು ಅಧ್ಯಾತ್ಮಸ್ವರೂಪವುಳ್ಳ ಪ್ರಾಣವೇ ಈ ಮೂರು ಅವಸ್ಥೆಗಳನ್ನು ಹೊಂದಿದೆಯೆಂದೇ ಹೇಳಬೇಕು. ಅಗ್ನ್ಯಾದಿ ಜ್ಯೋತಿಗಳನ್ನೊಳಗೊಂಡ ಈ ಮೂರು ಲೋಕಗಳೂ ಸಹ ಅಶ್ವದ ಅವಯವಗಳಂತಿವೆ. ಪೂರ್ವದಿಕ್ಕೇ ಇದರ ತಲೆ, ಮುಂಭಾಗದ ಕಾಲುಗಳು ಮತ್ತು ಪಾರ್ಶ್ವಗಳು. ಪಶ್ಚಿಮವೇ ಇದರ ಹಿಂಭಾಗದ ಪಾದಗಳು ಮತ್ತು ಹಿಂಭಾಗದ ಎರಡು ಪಾರ್ಶ್ವಗಳು. ಎರಡು ಭಾಗದ ಎಲುಬುಗಳೂ ಸಹ ದಕ್ಷಿಣೋತ್ತರರೂಪಗಳು. ಪೃಷ್ಠವೇ ದ್ಯುಲೋಕವು. ಉದರವೇ ಅಂತರಿಕ್ಷವು. ಉರಸ್ಸೇ ಪೃಥ್ವಿಯು. ಅದು ಅಪ್ಪಿನಲ್ಲಿ ಪ್ರತಿಷ್ಠಾಪಿತವಾಗಿದೆ. ಈ ತತ್ತ್ವವನ್ನರಿತವನೂ ಸಹ ಸ್ಥಿರವಾಗಿ ಪ್ರತಿಷ್ಠಾಪಿತನಾಗುತ್ತಾನೆ. ಈ ಮೂರು ವಿಧವಾದ ವಿಭಾಗಗಳನ್ನು ಹಿಂದೆ ವಿವರಿಸಿ ತಿಳಿಸಿದೆ. ಮತ್ತು ತ್ರಯಃ ಕೇಶಿನಃ ಋತುಥಾ ವಿ ಚಕ್ಷತೇ । (ಋ. ಸಂ. ೧೬೪-೪೪) ಇತ್ಯಾದಿ ಋಕ್ಕುಗಳ ವಿಶೇಷವಿಷಯ ಗಳಲ್ಲಿ ಮೇಲೆ ವರ್ಣಿತವಾದ ಪರಂಜ್ಯೋತಿಯ ಮೂರು ವಿಭಾಗಗಳನ್ನೂ ವರ್ಣಿಸಿದೆ. ಈ ಮೂರು ವಿಧವಾದ ಜ್ಯೋತಿಗಳನ್ನೊಳಗೊಂಡ ಅಥವಾ ತದ್ರೂಪವೇ ಆಗಿರುವ ಪರಂಜ್ಯೋತಿಯೇ ಪರಬ್ರಹ್ಮವು, ಆದಿತ್ಯಾಂತರ್ಗತನಾದ ಹಿರಣ್ಮಯಪುರುಷನು. ಈ ಜ್ಯೋತಿಯನ್ನೇ ಋಕ್ಸಂಹಿತೆಯಲ್ಲಿ,

ಕೇಶ್ಯ೧ಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ ।
ಕೇಶೀ ವಿಶ್ವಂ ಸ್ವರ್ದೃಶೇ ಕೇಶೀದಂ ಜ್ಯೋತಿರುಚ್ಯತೇ ॥

(ಋ. ಸಂ. ೧೦-೧೩೬-೧)

ಕೇಶಿಯು, ಎಂದರೆ, ಪ್ರಕಾಶಮಾನನೂ ರಶ್ಮ್ಯಾತ್ಮಕನೂ ಆದ ಆದಿತ್ಯನು ಅಗ್ನಿಯನ್ನೂ ಉದಕವನ್ನೂ ಧರಿಸಿದ್ದಾನೆ. ಅವನೇ ದ್ಯಾವಾಪೃಥಿವಿಗಳನ್ನೂ ಧರಿಸಿದ್ದಾನೆ. ಸಕಲ ವಿಶ್ವವೂ ಅವನ ಪ್ರಭಾಮಯವಾದ ಸ್ವರೂಪವನು. ವೀಕ್ಷಿಸುತ್ತದೆ. ಇಂತಹ ಜ್ಯೋತೀರೂಪವಾದ ವಿಶ್ವಪ್ರಭುವಿಗೆ ಕೇಶಿಯೆಂಬ ಹೆಸರು ಎಂದು ವರ್ಣಿಸಿದೆ.

ಯಜ್ಜ್ಯೋತಿರಮೃತಂ ಬ್ರಹ್ಮ ಯದ್ಯೋಗಾತ್ಸಮುಪಾಸತೇ ।
ತಜ್ಜ್ಞಾನಮಭಿತುಷ್ಟಾವ ಸೂಕ್ತೇನಾಥ ಬೃಹಸ್ಪತಿಃ ॥

(ಬೃ. ದೇ. ೭-೧೧೯)



CC-0. Jangamwadi Math Collection. Digitized by eGangotri

ಬ್ರಹ್ಮಸ್ವರೂಪವನ್ನು ತಿಳಿಸುವ ಜ್ಯೋತಿಯೇ ಜ್ಞಾನವು. ಅದರ ಸಹಾಯದಿಂದಲೇ ಜ್ಯೋತೀರೂಪವಾದ ಬ್ರಹ್ಮ ಸಾಕ್ಷಾತ್ಕಾರವು ಸಾಧ್ಯ. ಆ ಜ್ಯೋತಿಯನ್ನೇ ಬೃಹಸ್ಪತಿಯು (ಋ. ಸಂ. ೧೦-೭೧) ಸ್ತುತಿಸಿದ್ದಾನೆ ಎಂದು ಬೃಹದ್ದೇವತೆಯಲ್ಲಿ ನಿರ್ದೇಶಿಸಿದೆ.

**ಯತ್ರ ಜ್ಯೋತಿರಜಸ್ರಂ ಯಸ್ಮಿಁಲ್ಲೋಕೇ ಸ್ವರ್ಹಿತಂ ।**
**ತಸ್ಮಿನ್ ಮಾಂ ಧೇಹಿ ಪವಮಾನಾಮೃತೇ ಲೋಕೇ ಅಕ್ಷಿತ ಇಂದ್ರಾಯೇಂದೋ ಪರಿ ಸ್ರವ ॥**
(ಋ ಸಂ ೯-೧೧೩-೭)

ಇತ್ಯಾದಿ ಶ್ರುತಿವಾಕ್ಯಗಳಲ್ಲೂ ಸಹ ಜ್ಯೋತೀರೂಪವಾದ ಬ್ರಹ್ಮಸ್ವರೂಪದ ವಿವರಣವಿದೆ. ಇಂತಹ ಜ್ಯೋತೀರೂಪ ವಾದ ಬ್ರಹ್ಮವು, ಭೂಃ, ಭುವಃ, ಸ್ವಃ ಎಂಬ ಮೂರು ಲೋಕಗಳಲ್ಲೂ ಸಹ ಅಗ್ನಿ, ವಾಯು ಮತ್ತು ಆದಿತ್ಯ ಎಂಬ ಮೂರು ರೂಪಗಳಲ್ಲಿ ಪ್ರಕಾಶಿಸುತ್ತಿದೆಯೆಂದು ಮೇಲಿನ ವಾಕ್ಯಗಳ ತಾತ್ಪರ್ಯ. ಈ ಮೂರು ಜ್ಯೋತಿಗಳೂ ನಾಮಾಂತರಗಳಿಂದಲೂ ಸಹ ನಿರ್ದೇಶಿಸಲ್ಪಟ್ಟಿವೆ

**ಅಗ್ನಿರ್ವಾಯುರಾದಿತ್ಯಃ ಕಾಲೋ ಯಃ ಪ್ರಾಣೋಽನ್ನಂ ಬ್ರಹ್ಮಾ ರುದ್ರೋ ವಿಷ್ಣುರಿತ್ಯೇಕೇಽನ್ಯ ಮಭಿಧ್ಯಾಯಂತಿ ...॥**
(ಮೈತ್ರ್ಯುಪನಿಷತ್. ೬-೫)

ಈ ಪರಂಜ್ಯೋತಿಯ ಮೂರು ರೂಪಗಳನ್ನು ಅಗ್ನಿ, ವಾಯು, ಆದಿತ್ಯ ಎಂದು ಕೆಲವರೂ, ಕಾಲ, ಪ್ರಾಣ ಅನ್ನ ಎಂದು ಕೆಲವರೂ, ಬ್ರಹ್ಮ, ರುದ್ರ ಮತ್ತು ವಿಷ್ಣು ಎಂದು ಕೆಲವರೂ ನಿರ್ದೇಶಿಸಿ ಉಪಾಸನೆ ಮಾಡುವರು. ಇವುಗಳಲ್ಲಿ ಯಾವುದು ಅತ್ಯುತ್ತಮವೂ ಸತ್ಯಾತ್ಮಕವೂ ಆಗಿದೆಯೆಂದರೆ, ಮೂರ್ತರೂಪದಲ್ಲಿರುವ ಇವೆಲ್ಲಕ್ಕಿಂತಲೂ ಮೀರಿದ ಯಾವ ತತ್ತ್ವವು ತುರೀಯವೆಂದು ಕರೆಯಲ್ಪಡುವುದೋ ಅದೇ ಪರಬ್ರಹ್ಮವೆಂದು ಮೈತ್ರ್ಯುಪನಿಷತ್ತಿನ ಸ್ತುತಿ ಇದೆ. ಇದೇ ಗಾಯತ್ರ್ಯಾಖ್ಯವಾದ ಪರತತ್ತ್ವದ ತುರೀಯಪಾದವೆಂದು ಮೇಲೆ ತಿಳಿಸಿದೆ. ಈ ನಾಲ್ಕು ಪಾದ ಗಳನ್ನು ಬೃಹದಾರಣ್ಯಕದಲ್ಲಿ ವರ್ಣಿಸುತ್ತಾ, **ತಸ್ಯಾ ಉಪಸ್ಥಾನಂ ಗಾಯತ್ರ್ಯೇಕಪದೀ, ದ್ವಿಪದೀ, ತ್ರಿಪದೀ, ಚತುಷ್ಪದ್ಯಪದಸಿ ನ ಹಿ ಪದ್ಯಸೇ । ನಮಸ್ತೇ ತುರೀಯಾಯ ದರ್ಶತಾಯ ಪದಾಯ ಪರೋರಜಸೇ** (ಬೃ. ಉ. ೫-೧೪-೭) ಎಂದು ಸ್ತುತಿಸಿದೆ. ಈ ನಾಲ್ಕು ಪಾದಗಳನ್ನೂ, ಪರೋರಜಸೇ ಇತ್ಯಾದಿ ವಿಶೇಷಣಗಳ ವಿಶೇಷಾರ್ಥಗಳನ್ನೂ ಸಹ ಮೇಲೆ ವಿವರಿಸಿದೆ.

---

## ೨೨. ಪರಂಜ್ಯೋತೀರೂಪವಾದ ಬ್ರಹ್ಮನ ಮೂರ್ತರೂಪಗಳು (ಭೂರಾದಿ ವ್ಯಾಹೃತಿವಿಭಾಗಗಳು)



ಪರಂಜ್ಯೋತೀರೂಪವಾದ ಪರಬ್ರಹ್ಮವು ಯಾವ ರೀತಿ, ಅಗ್ನ್ಯಾದಿ ಜ್ಯೋತೀರೂಪದಲ್ಲಿ ಪರಿಣಮಿತವಾಗಿದೆಯೆಂದು ವರ್ಣಿತವಾಗಿದೆಯೋ, ಅದೇ ರೀತಿ ವ್ಯಾಹೃತ್ಯಾತ್ಮಕವಾದ ಪ್ರಣವವೂ ಸಹ ಅಗ್ನಿ, ವಾಯು ಮತ್ತು ಆದಿತ್ಯರೂಪ ವಾದ ಜ್ಯೋತಿಗಳಿಗೆ ಆಧಾರವಾದ ಭೂರಾದಿ ಲೋಕತ್ರಯಾತ್ಮಕವಾಗಿ ಪರಿಣಮಿತವಾಗಿದೆಯೆಂದು ಅನೇಕಕಡೆಗಳಲ್ಲಿ ತಿಳಿಸಿದೆ. ಮತ್ತು ಈ ಪ್ರಣವವು ಪರಬ್ರಹ್ಮನೇ ಅಲ್ಲದೇ ಬೇರೆಯಲ್ಲ ಎಂಬುದೂ ಸಹ ಖಚಿತವಾಗಿದೆ. ಪ್ರಣವಾತ್ಮಕ

CC-0. Jangamwadi Math Collection. Digitized by eGangotri

ವಾದ ಪರಬ್ರಹ್ಮವೇ ತ್ರಿಪ್ರಕಾರಗಳಾಗಿ ಪರಿಣಮಿಸಿ ತತ್ತದ್ದೇಶಕಾಲೀನವಾದ ಮತ್ತು ಸ್ವರೂಪಾನುಗುಣವಾದ ನಾಮಾಂತರಗಳಿಂದ ಕರೆಯಲ್ಪಡುವುದೂ ಮತ್ತು ಸಾವಿತ್ರ್ಯಾಖ್ಯವಾದ ಗಾಯತ್ರಿಯಿಂದ ಪರಬ್ರಹ್ಮರೂಪಾತ್ಮಕ ವೆಂದು ಸ್ತುತವಾಗಿರುವುದೂ ಸಹ ಮೈತ್ರ್ಯುಪನಿಷತ್ತಿನಲ್ಲಿ ವಿಶದವಾಗಿದೆ. ಇದರಿಂದ, ವ್ಯಾಹೃತ್ಯಾತ್ಮಕವಾದ ಗಾಯ ತ್ರಿಯೂ, ವ್ಯಾಹೃತ್ಯಾತ್ಮಕವಾದ ಪ್ರಣವವೂ ಸಹ ಜ್ಯೋತೀರೂಪವಾದ ಒಂದೇ ಬ್ರಹ್ಮತತ್ತ್ವದ ನಾಮಾಂತರಗಳು ಎಂಬುದೂ ಸಹ ಸ್ಪಷ್ಟವಾಗಿ ತಿಳಿಯುತ್ತದೆ. **ಉಪಾಸೀತ ಓಮಿತ್ಯೇತದಕ್ಷರೇಣ ವ್ಯಾಹೃತಿಭಿಃ ಸಾವಿತ್ರ್ಯಾ ಚೇತಿ** ವ್ಯಾಹೃತಿಗಳಿಂದಲೂ, ಪ್ರಣವದಿಂದಲೂ, ಸಾವಿತ್ರೀಪಠನದಿಂದಲೂ (೩-೬೨-೧೮) ಧ್ಯಾನವನ್ನಾಚರಿಸಿ ಬ್ರಹ ಸಾಕ್ಷಾತ್ಕಾರವನ್ನು ಪಡೆಯಬೇಕು ಎಂದು ಯಾವ ಬ್ರಹ್ಮತತ್ತ್ವವನ್ನು ಪ್ರಶಂಸಿಸಿದೆಯೋ ಅದೇ ಬ್ರಹ್ಮತತ್ತ್ವವು ರೂಪವಲ್ಲೂ ಪ್ರಣವರೂಪದಲ್ಲೂ ಪರಿಣಮಿತವಾಗಿರುವುದು ವರ್ಣಿತವಾಗಿ, ಗಾಯತ್ರಿಯಿಂದ ಸ್ತುತವಾಗಿದೆ.

> **ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಂ ಚಾಥ ತದಸತ್ಯಂ ಯದಮೂರ್ತಂ ತತ್ಸತ್ಯಂ ತದ್ಬ್ರಹ್ಮ ತಜ್ಜ್ಯೋತಿಃ ಯಜ್ಜ್ಯೋತಿಃ ಸ ಆದಿತ್ಯಃ ಸ ವಾ ಏಷ ಓಮಿತ್ಯೇತ- ದಾತ್ಮಾಭವತ್ ಸ ತ್ರೇಧಾತ್ಮಾನಂ ವ್ಯಕುರುತಾ ಓಮಿತಿ ತಿಸ್ರೋ ಮಾತ್ರಾ ಏತಾಭಿಃ ಸರ್ವ- ಮಿದಮೋತಂ ಪ್ರೋತಂ ಚೈವಾಸ್ಮೀತ್ಯೇವಂ ಹ್ಯಾಹೈತದ್ವಾ ಆದಿತ್ಯ ಓಮಿತ್ಯೇವಂ ಧ್ಯಾಯತ ಆತ್ಮಾನಂ ಯುಂಜೀತೇತಿ ॥**
>
> (ಮೈ. ಉ. ೬-೩)

ಬ್ರಹ್ಮನ ರೂಪಗಳು ಎರಡು. ಮೂರ್ತ ಮತ್ತು ಅಮೂರ್ತ. ಮೂರ್ತವು ಅಸತ್ಯ. ಅಮೂರ್ತವು ಸತ್ಯ. ಅದೇ ಸತ್ಯಾ ತ್ಮಕವೂ ಜ್ಯೋತೀರೂಪವೂ ಆದ ಬ್ರಹ್ಮವಾಗಿದೆ. ಈ ಜ್ಯೋತಿಯೇ ಆದಿತ್ಯನು. ಈ ಜ್ಯೋತಿರೂಪನೂ ಆದಿತ್ಯಾ ತ್ಮನೂ ಆದ ಬ್ರಹ್ಮನಿಗೆ ಓಂಕಾರರೂಪವಾದ ಪ್ರಣವವೇ ಆತ್ಮನು. (ಬೃಹದಾರಣ್ಯಕದಲ್ಲಿ ಬ್ರಹ್ಮನು ಅಗ್ನಿ, ಆದಿತ್ಯ ಮತ್ತು ವಾಯು ಎಂದು ಮೂರು ರೂಪಗಳಾಗಿ ಪರಿಣಮಿತನಾದನು ಎಂದು ಹೇಳಿರುವಂತೆ ಇಲ್ಲಿಯೂ ಅದೇ ರೀತಿಯ ವಿಭಾಗವನ್ನು ತಿಳಿಸಿದೆ). ಈ ಪ್ರಣವವು ಅಕಾರ, ಉಕಾರ ಮತ್ತು ಮಕಾರ ಎಂದು ಮೂರು ರೂಪಗಳನ್ನು ಹೊಂದಿದೆ. ಪ್ರಣವದ ಈ ಅ, ಉ ಮತ್ತು ಮ ಎಂಬ ಅವಯವಗಳಿಂದಲೇ ಸಮಸ್ತಪ್ರಪಂಚವೂ ಸಹ ಓತ ಪ್ರೋತಗಳಂತೆ ಹೆಣೆದುಕೊಂಡಿವೆ. ಆದುದರಿಂದಲೇ, ವಿಶ್ವಾತ್ಮಕನಾದ ಆದಿತ್ಯನನ್ನು ಪ್ರಣವಾತ್ಮನೆಂದೇ ಉಪಾಸಿಸ ಬೇಕು

ಮೂರ್ತರೂಪದಲ್ಲಿ ಈ ಪ್ರಣವದ ಸ್ವರೂಪವು ತ್ರಿಪ್ರಕಾರವಾಗಿದೆ. ಈ ಭಾಗಗಳೇ ಪರಮಾತ್ಮನ ಅವಯವ ಗಳೆಂದೂ ಕರೆಯಲ್ಪಡಬಹುದು. ಅವುಗಳ ರೂಪಗಳು ಈ ರೀತಿಯಿವೆ—

**ಅಥಾನ್ಯತ್ರಾಪ್ಯುಕ್ತಂ ಸ್ವನವತ್ಯೇಷಾಸ್ಯ ತನೂರ್ಯಾ ಓಮಿತಿ (ಅ. ಉ. ಮ.)**

| | | | |
|---|---|---|---|
| ಅಥ ಸ್ತ್ರೀ, ಪುಂ, ನಪುಂಸಕ ಇತಿ | .... | .... | ಲಿಂಗವತ್ಯೇಷಾ |
| ಅಥ ಅಗ್ನಿಃ, ವಾಯುಃ, ಆದಿತ್ಯ ಇತಿ | .... | .... | ಭಾಸ್ವತ್ಯೇಷಾ |
| ಅಥ ಬ್ರಹ್ಮ, ರುದ್ರೋ. ವಿಷ್ಣುರಿತಿ | .... | .... | ಅಧಿಪತಿವತ್ಯೇಷಾ |
| ಅಥ ಗಾರ್ಹಪತ್ಯೋ ದಕ್ಷಿಣಾಗ್ನಿರಾಹವನೀಯ ಇತಿ | | .... | ಮುಖವತ್ಯೇಷಾ |
| ಅಥ ಋಗ್ಯಜುಃ ಸಾಮೇತಿ | .... | .... | ವಿಜ್ಞಾನವತ್ಯೇಷಾ |

CC-0. Jangamwadi Math Collection. Digitized by eGangotri

ಅಥ ಭೂಃ, ಭುವಃ, ಸ್ವಃ ಇತಿ .... .... ಲೋಕವತ್ಯೈಷಾ
ಅಥ ಭೂತಂ ಭವ್ಯಂ ಭವಿಷ್ಯದಿತಿ .... .... ಕಾಲವತ್ಯೈಷಾ
ಅಥ ಪ್ರಾಣೋಽಗ್ನಿಸ್ಸೂರ್ಯ ಇತಿ .... .... ಪ್ರತಾಪವತ್ಯೈಷಾ
ಅಥ ಅನ್ನಮಾಪಶ್ಚಂದ್ರಮಾ ಇತಿ .... .... ಆಪ್ಯಾಯನವತ್ಯೈಷಾ
ಅಥ ಬುದ್ಧಿರ್ಮನೋಽಹಂಕಾರ ಇತಿ .... .... ಚೇತನವತ್ಯೈಷಾ
ಅಥ ಪ್ರಾಣೋಽಪಾನೋ ವ್ಯಾನ ಇತಿ .... .... ಪ್ರಾಣವತ್ಯೈಷಾ

ಇತ್ಯತ ಓಮಿತ್ಯುಕ್ತೇನೈತಾಃ ಪ್ರಸ್ತುತಾ ಅರ್ಚಿತಾ ಅರ್ಪಿತಾ ಭವಂತೀತ್ಯೇವಂ .... .... .... ಬ್ರಹ್ಮಯದೋ-ಮಿತ್ಯೇತದಕ್ಷರಮಿತಿ ।

(ಮೈತ್ರ್ಯುಪನಿಷತ್. ೬-೫)

ಸ್ತ್ರೀ, ಪುಮಾನ್ ಮತ್ತು ನಪುಂಸಕಗಳೆಂಬುದು ಲಿಂಗಾತ್ಮಕವಾದ ವಿಭಾಗವು. ಅಗ್ನಿ, ವಾಯು ಮತ್ತು ಆದಿತ್ಯ ಎಂಬುದು ಪ್ರಕಾಶಾತ್ಮಕವಾದುದು. ಬ್ರಹ್ಮ, ರುದ್ರ ಮತ್ತು ವಿಷ್ಣು ಎಂಬುದು ಅಧಿಪತಿರೂಪವಾದುದು. ಗಾರ್ಹಪತ್ಯ, ದಕ್ಷಿಣಾಗ್ನಿ ಮತ್ತು ಆಹವನೀಯ ಎಂಬುದು ಮುಖಾತ್ಮಕವು. ಋಕ್, ಯಜುಃ ಮತ್ತು ಸಾಮ ಎಂಬುದು ವಿಜ್ಞಾನಾತ್ಮಕವು ; ಭೂಃ, ಭುವಃ, ಸ್ವಃ ಎಂದು ಲೋಕಾತ್ಮಕವೂ ; ಭೂತ, ವರ್ತಮಾನ, ಭವಿಷ್ಯತ್ ಎಂದು ಕಾಲಾತ್ಮಕವೂ, ಪ್ರಾಣ, ಅಗ್ನಿ, ಸೂರ್ಯ ಎಂದು ಪ್ರತಾಪರೂಪವೂ, ಅನ್ನ, ಆಪಃ, ಚಂದ್ರಮಾಃ ಎಂದು ವೃದ್ಧಿಸ್ವರೂಪವೂ; ಬುದ್ಧಿ, ಮನಃ, ಅಹಂಕಾರ ಎಂದು ಚೈತನ್ಯರೂಪವೂ ; ಪ್ರಾಣ, ಅಪಾನ ಮತ್ತು ವ್ಯಾನ ಎಂಬ ಪ್ರಾಣರೂಪವೂ ಉಳ್ಳದ್ದಾಗಿದೆ. ಆದುದರಿಂದಲೇ ಬ್ರಹ್ಮವನ್ನು ಪ್ರಣವರೂಪದಿಂದ ಉಪಾಸಿಸಬೇಕು. ಸಕಲ ಜಗತ್ತೂ ಸಹ ಪ್ರಣವಾವಯವಗಳಾದ ವ್ಯಾಹೃತಿಸ್ವರೂಪವುಳ್ಳದ್ದಾಗಿದೆ. ಆದುದರಿಂದಲೇ, ತತ್ಸವಿತುಃ ಎಂಬ ಸವಿತೃದೇವತಾ ಪ್ರಾರ್ಥನಾರೂಪವಾದ ಮಂತ್ರದಿಂದಲೇ ಈ ಬ್ರಹ್ಮವನ್ನು ಆರಾಧಿಸಬೇಕು.

---

## ೨೩. ಪೃಥಿವ್ಯಾದಿ ಜಗದ್ರೂಪಗಳಾದ ವ್ಯಾಹೃತಿಗಳೇ ತನ್ಮೂಲವಾದ ಬ್ರಹ್ಮದ ಉಪಾಸನೆಗೆ ಮುಖ್ಯಸಾಧನ

---

ಮೇಲಿನ ವಿವರಣೆಯಲ್ಲೂ ಮತ್ತು ಇದರ ಮುಂದಿನ ಪ್ರಕರಣದಲ್ಲೂ ಸಹ ಎರಡು ಅಂಶಗಳನ್ನು ಗಮನಿಸಬೇಕು. ಮೊದಲನೆಯದಾಗಿ, ಪೃಥಿವ್ಯಾದಿ ಲೋಕತ್ರಯವೂ ಭೂರಾದಿ ವ್ಯಾಹೃತಿಗಳ ಉಚ್ಚಾರಣೆಯಿಂದ ಉತ್ಪನ್ನವಾದವೆಂದೂ, ಎರಡನೆಯದಾಗಿ ಈ ಕಾರಣದಿಂದಲೇ, ಗಾಯತ್ರ್ಯಾತ್ಮಕವಾದ ವ್ಯಾಹೃತಿಗಳಿಂದಲೇ ಬ್ರಹ್ಮೋಪಾಸನೆಯನ್ನು ಮಾಡಬೇಕೆಂದೂ ತಿಳಿಸಿದೆ.

ಅಥಾವ್ಯಾಹೃತಂ ವಾ ಇದಮಾಸೀತ್ ಸ ಸತ್ಯಂ ಪ್ರಜಾಪತಿಸ್ತಪಸ್ತಪ್ತ್ವಾನುವ್ಯಾಹರದ್ಭೂರ್ಭುವಸ್ಸ್ವರಿತ್ಯೇಷೈವಾಸ್ಯ ಪ್ರಜಾಪತೇಃ ಸ್ಥವಿಷ್ಠಾ ತನೂರ್ಯಾ ಲೋಕವತೀತಿ ಸ್ವರಿತ್ಯಸ್ಯಾಃ ಶಿರೋ ನಾಭಿರ್ಭುವೋ ಭೂಃ ಪಾದಾ ಆದಿತ್ಯಶ್ಚಕ್ಷುಃ । ಚಕ್ಷುರಾಯತ್ತಾ ಹಿ ಪುರುಷಸ್ಯ ಮಹತೀ ಮಾತ್ರಾ ಚಕ್ಷುಷಾ ಹ್ಯಯಂ ಮಾತ್ರಾಶ್ಚರತಿ ಸತ್ಯಂ ವೈ ಚಕ್ಷುರಕ್ಷಿಣ್ಯವಸ್ಥಿತೋ ಹಿ ಪುರುಷಃ

CC-0. Jangamwadi Math Collection. Digitized by eGangotri

ಸರ್ವಾರ್ಥೇಷು ಚರತ್ಯೇತಸ್ಮಾತ್ ಭೂರ್ಭುವಃ ಸ್ವರಿತ್ಯುಪಾಸೀತಾನೇನ ಹಿ ಪ್ರಜಾಪತಿರ್ವಿಶ್ವಾತ್ಮಾ ವಿಶ್ವಚಕ್ಷುರಿವೋಪಾಸಿತೋ ಭವತೀತ್ಯೇವಂ ಹ್ಯಾಹೈಷಾ ವೈ .... .... ತಸ್ಮಾದೇಷೋಪಾಸೀತ ||

(ಮೈ. ಉ. ೬-೬)

ಪ್ರಥಮದಲ್ಲಿ ಈ ವಿಶ್ವವು ಅವ್ಯಾಹೃತವಾಗಿದ್ದಿತು. ಸತ್ಯಾತ್ಮನೂ, ಪ್ರಜಾಪತಿರೂಪನೂ ಆದ ಪರಮಪುರುಷನು ತಪಸ್ಸನ್ನಾಚರಿಸಿ ಭೂಃ, (ಪೃಥ್ವೀ), ಭುವಃ (ಅಂತರಿಕ್ಷ), ಸ್ವಃ (ಆದಿತ್ಯಲೋಕ) ಎಂದು ವ್ಯಾಹರಿಸಿದನು. ಇದೇ ಪ್ರಜಾಪತಿಯ ಪ್ರಪಂಚಾತ್ಮಕವಾದ ಸ್ಥೂಲರೂಪವು. ಆದಿತ್ಯಲೋಕವೇ ಈ ರೂಪದ ಶಿರಸ್ಸು ಅಂತರಿಕ್ಷವೇ ನಾಭಿಯು. ಪೃಥ್ವಿಯೇ ಪಾದಗಳು. ಸರ್ವವನ್ನೂ ವೀಕ್ಷಿಸಲು ಸಾಧನವಾದ ಚಕ್ಷುಸ್ಸೇ ಆದಿತ್ಯರೂಪವಾಗಿದೆ. ಆದುದರಿಂದಲೇ ಬ್ರಹ್ಮವನ್ನು ಭೂಃ, ಭುವಃ, ಸ್ವಃ ಎಂಬ ವ್ಯಾಹೃತಿರೂಪದ ಸಾಧನದಿಂದ ಉಪಾಸಿಸಬೇಕು. ಪ್ರಜಾಪತಿರೂಪನಾದ ಬ್ರಹ್ಮವೇ ಸಕಲಲೋಕಗಳಿಗೂ ಅಂತರಾತ್ಮನು, ದಿವ್ಯಚಕ್ಷುಸ್ಸು ಮತ್ತು ವಿಶ್ವಪೂಜ್ಯನು. ಸಕಲ ಬ್ರಹ್ಮಾಂಡವೂ ಯಾವ ಪ್ರಜಾಪತಿರೂಪನಾದ ಬ್ರಹ್ಮದಲ್ಲಿ ಅಡಗಿದೆಯೋ ಆ ಬ್ರಹ್ಮವನ್ನು ಸಾವಿತ್ರ್ಯಾಖ್ಯವಾದುದೂ, ವ್ಯಾಹೃತಿರೂಪವಾದುದೂ ಆದ ಗಾಯತ್ರೀಮಂತ್ರದಿಂದಲೇ ಉಪಾಸಿಸಬೇಕು. ಅದರ ಕ್ರಮವೇನೆಂದರೆ,

ತತ್ಸವಿತುರ್ವರೇಣ್ಯಮಿತ್ಯಸೌ ವಾ ಆದಿತ್ಯಃ ಸವಿತಾ ಸ ವಾ ಏವಂ ಪ್ರವರಣೀಯ ಆತ್ಮಕಾಮೇನೇತ್ಯಾಹುರ್ಬ್ರಹ್ಮವಾದಿನಃ ||

ಅತ್ಯಂತ ಪೂಜ್ಯವಾದ ಆ ಸವಿತೃವಿನ ಮಹತ್ತೇಜಸ್ಸು ಎಂದರೆ, ಆ ಸವಿತೃವಾರು? ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಿರುವ ಆದಿತ್ಯನೇ ಸವಿತೃವು. ಆತ್ಮಾನುಸಂಧಾನಮಾಡಬೇಕೆಂಬ ಪುರುಷನು ಈ ಸವಿತೃವಿನ ಸ್ವರೂಪವನ್ನರಿತು ಉಪಾಸಿಸಬೇಕೆಂದು ಬ್ರಹ್ಮವಾದಿಗಳು ಉಪದೇಶಿಸಿದ್ದಾರೆ.

ಭರ್ಗೋ ದೇವಸ್ಯ ಧೀಮಹೀತಿ ಸವಿತಾ ವೈ ದೇವಸ್ತತೋ ಯೋಽಸ್ಯ ಭರ್ಗಾಖ್ಯಸ್ತಂ ಚಿಂತಯಾಮೀತ್ಯಾಹುರ್ಬ್ರಹ್ಮವಾದಿನಃ ||

ಆ ಸವಿತೃವಿನ ಭರ್ಗವನ್ನು ನಾವು ಅರಿಯೋಣ ಮತ್ತು ಧ್ಯಾನಿಸೋಣ. ಈ ಸವಿತೃವೇ ಪರಬ್ರಹ್ಮನು. ಇದರ ಅನುಸಂಧಾನಮಾಡಬೇಕು ಎಂದು ಬ್ರಹ್ಮವಾದಿಗಳ ಉಪದೇಶವಾಗಿದೆ.

ಧಿಯೋ ಯೋ ನಃ ಪ್ರಚೋದಯಾತ್ ಇತಿ ಬುದ್ಧಯೋ ವೈ ಧಿಯಃ ಯೋ ನಃ ಪ್ರಚೋದಯಾದಿತಿ ಬುದ್ಧಯೋ ವೈ ಧಿಯಸ್ತಾ ಯೋಽಸ್ಮಾಕಂ ಪ್ರಚೋದಯಾದಿತ್ಯಾಹುರ್ಬ್ರಹ್ಮವಾದಿನಃ ||

(ಮೈ ಉ. ೬-೭)

ಅದೇ ಸವಿತೃವು ನಮಗೆ ಪ್ರಜ್ಞೆಯನ್ನುಂಟುಮಾಡಲಿ. ಸವಿತೃವಿನ ಭರ್ಗವನ್ನರಿಯಲು ನಮಗೆ ಚೈತನ್ಯವನ್ನುಂಟುಮಾಡಲಿ ಎಂದು ಪ್ರಾರ್ಥಿಸಬೇಕೆಂದು ಬ್ರಹ್ಮವಾದಿಗಳು ಹೇಳಿದ್ದಾರೆ ಎಂದು ಮೈತ್ರ್ಯುಪನಿಷತ್ತಿನಲ್ಲಿ ತತ್ಸವಿತುಃ ಎಂಬ ಋಕ್ಕಿನ ನಿರ್ವಚನರೂಪವಾದ ವಿವರಣೆಯನ್ನು ಹೇಳಿದೆ. ಅದನ್ನು ಇದೇ ಮಂತ್ರದ ವಿಶೇಷವಿಷಯಗಳಲ್ಲಿ ಮುಂದೆ ತಿಳಿಸಲಾಗುತ್ತದೆ.

CC-0. Jangamwadi Math Collection. Digitized by eGangotri

## ೨೪. ಸವಿತೃವಿನ ಭರ್ಗವೆಂದು ಪ್ರಸಿದ್ಧವಾದ ಈ ಜ್ಯೋತಿಯ ಸಾಕ್ಷಾತ್ಕಾರವು ಧ್ಯಾನದಿಂದ ಮಾತ್ರ ಸಾಧ್ಯ.

———

**ಅಥ ಯದತಃ ಪರೋ ದಿವೋ ಜ್ಯೋತಿರ್ದೀಪ್ಯತೇ ವಿಶ್ವತಃ ಪೃಷ್ಠೇಷು ಸರ್ವತಃ ಪೃಷ್ಠೇಷ್ವನು-ತ್ತಮೇಷೂತ್ತಮೇಷು ಲೋಕೇಷ್ವಿದಂ ವಾವ ತದ್ಯದಿದಮಸ್ಮಿನ್ನಂತಃ ಪುರುಷೇ ಜ್ಯೋತಿಃ ॥**

(ಛಾ. ಉ ೩-೧೩-೭)

ದ್ಯುಲೋಕಕ್ಕಿಂತಲೂ ಮೀರಿದುದೂ ಮತ್ತು ಯಾವುದನ್ನು ಮೀರಿ ಇತರ ಯಾವ ಲೋಕವೂ ಇಲ್ಲವೋ ಅಂತಹ ಅತ್ಯುತ್ತಮವಾದ ಲೋಕದಲ್ಲಿ ಯಾವ ಮಹಾಜ್ಯೋತಿಯು ಬೆಳಗುವುದೋ ಅದೇ ಜ್ಯೋತಿಯು ಪುರುಷನ ಹೃತ್ಪುಂಡರೀಕದಲ್ಲಿಯೂ ಪ್ರಕಾಶಿಸುತ್ತದೆ ಎಂದು ಯಾವ ಮಹತ್ತೇಜಸ್ಸು ಛಾಂದೋಗ್ಯಾದಿಗಳಲ್ಲಿ ವರ್ಣಿತವಾಗಿದೆಯೋ ಅದೇ ಇಲ್ಲಿ ಸವಿತೃವಿನ ಭರ್ಗವೆಂಬ ಹೆಸರಿನಿಂದ ಸ್ತುತವಾಗಿದೆ. ಈ ಜ್ಯೋತಿಯೇ ಪರತತ್ತ್ವದ ಪರಂಜ್ಯೋತಿಯು. ಆದುದರಿಂದಲೇ ಬ್ರಹ್ಮಸೂತ್ರದಲ್ಲಿ **ಜ್ಯೋತಿಶ್ಚರಣಾಭಿಧಾನಾತ್** ಎಂಬ ಸೂತ್ರದಿಂದ ನಿರ್ದೇಶಿಸಿದೆ. (ಬ್ರ. ಸೂ. ೧-೧-೨೫) ಮತ್ತು ಇದೇ ಸಂದರ್ಭದಲ್ಲಿ ನಿರೀಕ್ಷಿಸಬಹುದಾದ ಆಶಂಕವನ್ನು ಪೂರ್ವಪಕ್ಷಿಯಿಂದ ನಿರೀಕ್ಷಿಸಿ ಅದಕ್ಕೆ ಹೇಳಿರುವ ಸಮಾಧಾನವೂ ಮೇಲೆ ತಿಳಿಸಲ್ಪಟ್ಟಿದೆ. **ಛಂದೋಭಿಧಾನಾನ್ನೇತಿ ಚೇನ್ನ** (೧-೧-೨೬) ಎಂಬ ಸೂತ್ರವನ್ನೂ ಸಹ ಮೇಲೆ ವಿವರಿಸಿ ಛಂದೋರೂಪಿಯಾದ **ಗಾಯತ್ರಿ**ಯೆಂದರೆ ಕೇವಲ ಅಷ್ಟಾಕ್ಷರಾತ್ಮಕವಾದುದೆಂದು ಮಾತ್ರವಲ್ಲ. ಆದರೆ, ಪರಬ್ರಹ್ಮವೇ ಈ ಛಂದಸ್ಸಿನಿಂದ ನಿರ್ದೇಶಿಸಲ್ಪಟ್ಟಿದೆಯೆಂದೂ ಸಹ ತಿಳಿಸಿದೆ.

**ಗಾಯತ್ರ್ಯಾಖ್ಯಚ್ಛಂದೋದ್ವಾರೇಣ ತದನುಗತೇ ಬ್ರಹ್ಮಣಿ ಚೇತಸೋಽರ್ಪಣಂ ಚಿತ್ತಸಮಾಧಾನ-ಮನೇನ ಬ್ರಾಹ್ಮಣವಾಕ್ಯೇನ ನಿಗದ್ಯತೇ ।**

(ಬ್ರ. ಸೂ. ಶಂ. ೧-೧-೨೫)

ಗಾಯತ್ರ್ಯಾಖ್ಯವಾದ ಛಂದಸ್ಸಿನ ಮೂಲಕವೇ ತದನುಗತವಾದ ಬ್ರಹ್ಮನಲ್ಲಿ ಪೂರ್ಣವಾಗಿ ಚೇತಸ್ಸನ್ನರ್ಪಿಸಿ ತದಾತ್ಮಕವಾದ ಧ್ಯಾನವನ್ನು ಮಾಡಬೇಕು ಎಂಬುದು ವಿದಿತವಾಗುತ್ತದೆ. ಪ್ರಕೃತದಲ್ಲಿ **ಭರ್ಗೋ ದೇವಸ್ಯ ಧೀಮಹಿ** ಎಂಬ ಪ್ರಾರ್ಥನೆಯಲ್ಲಿ ಧೀಮಹಿ ಎಂಬ ಪದವು ಜ್ಞಾನ ಮತ್ತು ಧ್ಯಾನ ಎರಡು ಪ್ರಕಾರವನ್ನೂ ತಿಳಿಸುತ್ತದೆ. **ಪರಬ್ರಹ್ಮಾತ್ಮಕಂ ತೇಜಃ ಧ್ಯೇಯತಯಾ ಮನಸಾ ಧಾರಯಾಮಃ** ಎಂದು ಸಾಯಣರು ಧೀಮಹಿ ಎಂಬ ಪದಕ್ಕೆ ತಾತ್ಪರ್ಯವನ್ನು ತಿಳಿಸಿದ್ದಾರೆ. **ಶಾಧಿ ಯಾಂ ದೇವತಾಮುಪಾಸ್ಯೇ** (ಛಾ. ಉ. ೪-೨-೨) **ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ** (ಮುಂ.ಉ. ೩-೧-೮) ಇತ್ಯಾದಿ ಸ್ಥಳಗಳಲ್ಲೆಲ್ಲಾ " **ಉಪಾಸ್** '' " ವಿದ್ " " **ಧ್ಯೈ** " ಎಂಬ ಮೂರು ಧಾತುಗಳನ್ನೂ ಸಹ ಧ್ಯಾನಾತ್ಮಕವಾದ ಜ್ಞಾನವೆಂಬರ್ಥದಲ್ಲಿಯೇ ಪ್ರಯೋಗಿಸಿರುವಂತೆ **ಭರ್ಗೋ ದೇವಸ್ಯ ಧೀಮಹಿ** ಎನ್ನುವಾಗಲೂ ಸಹ ಜ್ಞಾನಾತ್ಮಕವಾದ ಧ್ಯಾನವೆಂದೇ ತಾತ್ಪರ್ಯ. ಆದರೆ ಜ್ಞಾನಾತ್ಮಕವಾದ ಈ ಧ್ಯಾನವು ಗಾಯತ್ರಿಯ ಮೂಲಕ ಹೇಗೆ ಸಾಧ್ಯ, ಇದರ ಪ್ರಕಾರವೇನು ಎಂಬುದನ್ನೂ ತಿಳಿಯಬೇಕು.

**ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ ।**
**ವಿ ಹೋತ್ರಾ ದಧೇ ವಯುನಾವಿದೇಕ ಇನ್ಮಹೀ ದೇವಸ್ಯ ಸವಿತುಃ ಪರಿಷ್ಟುತಿಃ ॥**

(ಋ. ಸಂ ೫-೮೧-೧)

CC-0. Jangamwadi Math Collection. Digitized by eGangotri

ಮೇಧಾವಿಗಳಾದ ಋಷಿಗಳು ತಮ್ಮ ಮನಸ್ಸನ್ನು ಕೇಂದ್ರೀಕರಿಸಿ ಸವಿತ್ರಾತ್ಮಕವಾದ ಧ್ಯಾನವನ್ನು ಮಾಡುತ್ತಾರೆ ಎಂದು ವರ್ಣಿಸುವ ಈ ಧ್ಯಾನದಲ್ಲಿ ಪುರುಷನ ಧ್ಯೇಯವೆಲ್ಲವೂ ಸೂಚಿತವಾಗಿದೆ. ಆದರೆ ಈ ಧ್ಯಾನವು ಯಾವ ಪ್ರಕಾರವಾಗಿರಬೇಕು ? ಧ್ಯಾನದ ವಿಷಯವೇನು ? ಬ್ರಹ್ಮಪರವಾದ ಈ ಧ್ಯಾನಕ್ಕೆ ಗಾಯತ್ರಿಯೇ ಪ್ರಧಾನವಾದ ಸಾಧನವೆಂಬುದು ಹೇಗೆ ? ಅಥವಾ ಗಾಯತ್ರೀರೂಪವಾದ ಧ್ಯಾನದಿಂದ ಗಾಯತ್ರ್ಯಾಖ್ಯವಾದ ಬ್ರಹ್ಮಸಾಕ್ಷಾತ್ಕಾರ ವೆಂಬುದು ಹೇಗೆ ?

## ೨೫. ಧ್ಯಾನಸಾಧಕವಾದುದೂ, ವ್ಯಾಹೃತ್ಯಾತ್ಮಕವಾದುದೂ ಆದ ಪ್ರಣವದ ಸ್ವರೂಪ.

ತೇಜ್ಯೋತಿರ್ಯಜ್ಯೋತಿಃ ಸ ಆದಿತ್ಯಃ ಸ ವಾ ಏಷ ಓಮಿತ್ಯೇತದಾತ್ಮಾಭವತ್ ಸ ತ್ರೇಧಾತ್ಮಾ-
ನಂ ವ್ಯಕುರುತಾ ಓಮಿತಿ ತಿಸ್ರೋ ಮಾತ್ರಾ ಏತಾಭಿಃ ಸರ್ವಮಿದಮೋತಂ ಪ್ರೋತಂ
ಚೈವಾಸ್ಮೀತ್ಯೇವಂ ಹ್ಯಾಹೈತದ್ವಾ ಆದಿತ್ಯ ಓಮಿತ್ಯೇವಂ ಧ್ಯಾಯತ ಆತ್ಮಾನಂ ಯುಂಜೀತೇತಿ॥
(ಮೈ. ಉ. ೬-೩)

ಮೇಲೆ ವರ್ಣಿತವಾದ ಆದಿತ್ಯಜ್ಯೋತಿಯು ಓಂಕಾರಾತ್ಮಕವಾಗಿ ಪರಿಣಮಿಸಿತು. ಅದು ಮೂರು ಪ್ರಕಾರವಾಯಿತು. ವ್ಯಾಹೃತಿತ್ರಯಾತ್ಮಕವಾದ ಈ ಓಂಕಾರದಿಂದಲೇ ಜಗತ್ತೆಲ್ಲವೂ ಓತಪ್ರೋತರೂಪದಲ್ಲಿ ಹೆಣೆದುಕೊಂಡಿವೆಯೆಂದೂ ಮೇಲೆ ತಿಳಿಸಿದೆ. ಆದುದರಿಂದ, ಈ ಆದಿತ್ಯಜ್ಯೋತಿಯು ಸಾಕ್ಷಾತ್ಕಾರವಾಗಬೇಕಾದರೆ ಭೂರಾದಿ ಸಮಸ್ತ ಜಗತ್ತನ್ನೂ ನಿರ್ದೇಶಿಸುವ ವ್ಯಾಹೃತ್ಯಾತ್ಮಕವಾದುದೂ, ಓಂಕಾರಾತ್ಮಕವಾದುದೂ ಆದ ಪ್ರಣವದ ಮೂಲಕವೇ ಸಾಧ್ಯವು. ಈ ಪ್ರಣವಾತ್ಮಕವಾದ ಧ್ಯಾನದಿಂದಲೇ ವೈವಿಧ್ಯವನ್ನು ಹೊಂದಿರುವ ಸಕಲ ಜಗತ್ತುಗಳ ಐಕ್ಯವೂ ಸಹ ಸಾಕ್ಷಾತ್ಕರಿಸಲ್ಪಡುತ್ತದೆ.

ಏತತ್ತೇಜೋ ಯದಸಾವಾದಿತ್ಯ ಓಮಿತ್ಯೇತದಕ್ಷರಸ್ಯ ಚೈತತ್ ತಸ್ಮಾದೋಮಿತ್ಯನೇನೈತದುಪಾ-
ಸೀತಾಜಸ್ರಂ ಇತ್ಯೇಕೋऽಸ್ಯ ಸಂಬೋಧಯಿತಾ ॥
(ಮೈ. ಉ. ೬-೪)

ಸಮಸ್ತವಿಶ್ವಕ್ಕೂ ಏಕಮಾತ್ರ **ಸಂಬೋಧಯಿತೃ** (ಪ್ರಕಾಶಕನು) ವಾಗಿರುವವನೂ, ಪ್ರಣವಾತ್ಮನೂ ಆದ ಆದಿತ್ಯ ನನ್ನು ಓಂಕಾರರೂಪವಾದ ಧ್ಯಾನದಿಂದಲೇ ಅರಿಯಬೇಕು. ಆದರೆ ಧ್ಯಾನಸಾಧನವಾಗಿರುವಾಗ ಗಾಯತ್ರಿಗೂ ಪ್ರಣವಕ್ಕೂ ಇರುವ ಸಂಬಂಧವನ್ನು ಮೇಲೆ ತಿಳಿಸಿದೆ. ಎರಡರ ಸ್ವರೂಪವೂ ಭೂರಾದಿ ವ್ಯಾಹೃತಿರೂಪಾತ್ಮಕವೇ ಆಗಿದೆ. ಅಲ್ಲದೇ ಪ್ರಣವವೂ ಗಾಯತ್ರಿಯ ಅವಯವವೇ ಆಗಿದೆ.

ನವಾಕ್ಷರಾಣಿ ಗಾಯತ್ರ್ಯಷ್ಟೌ ತಾನಿ ಯಾನ್ಯಷ್ಟಾಹ ಪ್ರಣವೋ ನವಮಃ ॥
(ಶ. ಬ್ರಾ. ೩-೪-೧-೧೫)

CC-0. Jangamwadi Math Collection. Digitized by eGangotri

ಗಾಯತ್ರಿಯು ನವಾಕ್ಷರಾತ್ಮಕವಾಗಿದೆ. ಓಂಕಾರರೂಪವಾದ ಪ್ರಣವವು ಒಂಭತ್ತನೆಯದು. ಇದು ಅಷ್ಟಾಕ್ಷರಾತ್ಮಕವಾಗಿ ಪಠಿಸತಕ್ಕ ಮಂತ್ರದ ಅವಯವವೇ ಆಗಿದೆಯೆಂದು ಧ್ಯಾನಸಾಧನವಾದ ಗಾಯತ್ರಿಯೊಂದಿಗೆ ನಿಯತವಾಗಿ ಪಠಿಸಲ್ಪಡಬೇಕಾದ ಪ್ರಣವವೂ ಸಹ ಗಾಯತ್ರ್ಯಾತ್ಮಕವೇ ಆಗಿದೆಯೆಂದು ತಿಳಿಸಿದೆ. **ಗಾಯತ್ರೀ ವಾ ಇದಗ್ಂ ಸರ್ವಂ ಭೂತಂ** ಇತ್ಯಾದಿಯಾಗಿ ಗಾಯತ್ರಿಯನ್ನೇ ಸರ್ವವ್ಯಾಪಕವಾದ ಪರಬ್ರಹ್ಮಸ್ವರೂಪವೆಂದು ಯಾವ ರೀತಿ ಪ್ರಶಂಸಿಸಿದೆಯೋ ಅದೇ ರೀತಿ ತ್ರಿಕಾಲಾತೀತವಾದ ಬ್ರಹ್ಮತತ್ತ್ವವನ್ನು ಪ್ರತಿಪಾದಿಸುವುದರಿಂದ ಪ್ರಣವಕ್ಕಿಂತಲೂ ಉತ್ಕೃಷ್ಟವಾದ ಮಂತ್ರವೇ ಇಲ್ಲವೆಂದು ತಿಳಿಸಿದೆ. **ನ ಹಿ ಪ್ರಣವಾದಧಿಕಂ ಕಿಂಚಿನ್ಮಂತ್ರಜಾತ್ರಮಸ್ತಿ ತ್ರಿಕಾಲಾತೀತಸ್ಯ ಬ್ರಹ್ಮಣಃ ಪ್ರತಿಪಾದಕತ್ವಾತ್.** ಈ ಪ್ರಣವದ ಮಹಿಮೆಯನ್ನು ಈ ರೀತಿ ವರ್ಣಿಸಿದೆ.

> **ಓಮಿತ್ಯೇತದಕ್ಷರಮಿದಗ್ಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ ॥**
>
> (ಮಾ. ಉ. ೧)

ವಿಶ್ವವೆಲ್ಲವೂ ಓಂಕಾರಮಯವೇ ಆಗಿದೆ. ಆದುದರಿಂದ ಓಂಕಾರರೂಪವಾದ ಪ್ರಣವವೇ ಪರಬ್ರಹ್ಮನು ಎಂಬ ಈ ವಾಕ್ಯಕ್ಕೆ ಶ್ರೀ ಶಂಕರಾಚಾರ್ಯರು ವ್ಯಾಖ್ಯಾನಮಾಡುತ್ತಾ,

> **ಯದಿದಂ ಅರ್ಥಜಾತಂ ಅಭಿಧೇಯಭೂತಂ ತಸ್ಯ ಅಭಿಧಾನಾವ್ಯತಿರೇಕಾತ್ ಅಭಿಧಾನಸ್ಯ ಚ ಓಂಕಾರಾವ್ಯತಿರೇಕಾತ್ ಓಂಕಾರ ಏವೇದಂ ಸರ್ವಂ ಪರಂ ಚ ಬ್ರಹ್ಮ ಅಭಿಧಾನಾಭಿಧೇಯೋಪಾಯಪೂರ್ವಕಮೇವ ಗಮ್ಯತ ಇತಿ ಓಂಕಾರ ಏವ । ತಸ್ಯ ಏತಸ್ಯ ಪರಾಪರಬ್ರಹ್ಮರೂಪಸ್ಯ ಅಕ್ಷರಸ್ಯ ಓಂ ಇತ್ಯೇತಸ್ಯ ಉಪವ್ಯಾಖ್ಯಾನಂ ॥**
>
> (ಮಾ. ಉ. ಶ. ಭಾ. ೧)

ನಾಮರೂಪಗಳಿಂದ ನಿರ್ದೇಶಿಸಲ್ಪಟ್ಟ ಯಾವ ಯಾವ ವಸ್ತುಗಳು ಲೋಕದಲ್ಲಿ ಅಭಿಧೇಯವಾಗಿರುವುವೋ ಅವೆಲ್ಲವೂ ಓಂಕಾರಮಯವೇ ಆಗಿವೆ. ಅಭಿಧಾನವೂ ಸಹ (ನಿರ್ದೇಶಮಾಡುವ ಕ್ರಮವೂ) ಓಂಕಾರವೇ ಆಗಿದೆ. ಪರಬ್ರಹ್ಮವೂ ಸಹ ಅಭಿಧಾನ ಮತ್ತು ಅಭಿಧೇಯ ಎಂಬ ಸಾಧನದ ಮೂಲಕವಾಗಿಯೇ ತಿಳಿಯಬರುತ್ತಾದುದರಿಂದ ಅದೂ ಓಂಕಾರವೇ. ಅಂತಹ ಪರಾಪರಬ್ರಹ್ಮರೂಪವಾದ ಓಂ ಎಂಬೀ ಅಕ್ಷರದ ಉಪಾಖ್ಯಾನವು ಬ್ರಹ್ಮವನ್ನು ಅರಿತುಕೊಳ್ಳುವುದಕ್ಕೆ ಸಾಧನವಾಗಿರುವುದರಿಂದ ಬ್ರಹ್ಮಕ್ಕೆ ಸಮೀಪವಾಗಿದೆ ಎಂದು ಪ್ರಣವಕ್ಕೂ ಬ್ರಹ್ಮಕ್ಕೂ ತಾದಾತ್ಮ್ಯವನ್ನು ತೋರಿಸಿದ್ದಾರೆ. ಪ್ರಕೃತದಲ್ಲಿ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಧಕವಾದ ಗಾಯತ್ರೀಜಪದ ಕಾಲದಲ್ಲಿ ಪ್ರಣವದ ಮಹತ್ವವೇನು ಎಂಬುದನ್ನು ಮಾತ್ರ ಪರಿಶೀಲಿಸಲಾಗುತ್ತದೆ. ಉಪನಿಷದ್ವಾಕ್ಯಗಳಿಂದ ಯಾವ ರೀತಿ ಬ್ರಹ್ಮರೂಪವಾದ ಗಾಯತ್ರಿಯೇ ಬ್ರಹ್ಮಜ್ಞಾನಕ್ಕೆ ಸಾಕ್ಷಾತ್ಸಾಧನವೆಂದು ವರ್ಣಿತವಾಗಿದೆಯೋ ಅದೇ ರೀತಿ ಗಾಯತ್ರ್ಯಾವಯವವೂ ಬ್ರಹ್ಮರೂಪಿಯೂ ಆದ ಪ್ರಣವವೂ ಸಹ ಗಾಯತ್ರೀರೂಪವಾದ ಧ್ಯಾನಕ್ಕೆ ಮುಖ್ಯವಾದ ಅಂಗವಾಗಿದ್ದು ತದಾತ್ಮಕವಾದ ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಕ್ಷಾತ್ಸಾಧಕವಾಗುವುದೆಂಬುದನ್ನೂ ವಿಶದವಾಗಿ ತಿಳಿಸಿದೆ.

> **ಏತದ್ವಾವ ತತ್ಸ್ವರೂಪಂ ನಭಸಃ ಖೇಽಂತರ್ಭೂತಸ್ಯ ಯತ್ ಪರಂ ತೇಜಸ್ತತ್ತ್ರೇಧಾಭಿಹಿತಮಗ್ನ್ಯಾದಿತ್ಯೇ ಪ್ರಾಣ ಏತದ್ವಾವ ತತ್ ಸ್ವರೂಪಂ ನಭಸಃ ಖೇಽಂತರ್ಭೂತಸ್ಯ ಯದೋ-**

CC-0. Jangamwadi Math Collection. Digitized by eGangotri

ಮಿತ್ಯೇತದಕ್ಷರಮನೇನೈವ ತದುದ್ಬುಧ್ಯತ್ಯುದಯತ್ಯುಚ್ಛ್ವಸತ್ಯಜಸ್ರಂ ಬ್ರಹ್ಮಧೀಯಾಲಂಬಂ .... .... .... .... ||

(ಮೈತ್ರ್ಯುಪನಿಷತ್. ೭-೧೧)

ಹೃತ್ಪುಂಡರೀಕದಲ್ಲಿರುವ ಆಕಾಶವೇ ಪರಂಜ್ಯೋತಿಯು. ಇದು ಆದಿತ್ಯ, ವಾಯು ಮತ್ತು ಅಗ್ನಿರೂಪದಲ್ಲಿ ಪರಿಣಮಿತವಾಗಿದೆ. (ಇದರ ವಿವರಣೆಯನ್ನು ಹಿಂದೆ ತಿಳಿಸಿದೆ) ಹೃತ್ಪುಂಡರೀಕದಲ್ಲಿ ಆಕಾಶಾತ್ಮಕವಾಗಿರುವ ಬ್ರಹ್ಮತತ್ತ್ವವೇ ಓಂಕಾರರೂಪವಾದ ಪ್ರಣವವಾಗಿದೆ. ಈ ಪ್ರಣವದಿಂದಲೇ ಪರಂಜ್ಯೋತಿಯು ಉದ್ಭವಿಸುತ್ತದೆ, ಉದಯಿಸುತ್ತದೆ ಮತ್ತು ವಿಶ್ವಕ್ಕೆಲ್ಲಾ ಪ್ರಸರಿಸುತ್ತದೆ. ಈ ಜ್ಯೋತಿಯೇ ವಿಶ್ವಕ್ಕೆ ಆಲಂಬನವು. ಛಂದಸ್ಸುಗಳಿಗೆ ಮಾತೃವೂ, ವೇದಗಳಿಗೆ ಸಾರಭೂತವೂ ಆದ ಗಾಯತ್ರೀರೂಪವೇ ಈ ಪ್ರಣವಾತ್ಮಕವಾಗಿದೆ. (ಏತದ್ವಾವ ತತ್ಸ್ವರೂಪಂ) ಧ್ಯಾನಕಾಲದಲ್ಲಿ ಇದರ ಅನುಸಂಧಾನವೇ ಬ್ರಹ್ಮದ ಅನುಸಂಧಾನವಾಗುತ್ತದೆ. ಪರಿಪೂರ್ಣವಾದ ಈ ಅನುಸಂಧಾನದಿಂದ ಸಾಧ್ಯಸಾಧನಗಳೆರಡೂ ಒಂದೇ ಎಂದರಿಯಬಹುದು. ಈ ಪ್ರಣವವೇ ಬ್ರಹ್ಮವೆಂಬುದು. ಹೇಗೆಂದರೆ—

ಓಮಿತಿ ಬ್ರಹ್ಮ | ಓಮಿತೀದಗ್ಂ ಸರ್ವಂ | ಓಮಿತ್ಯೇತದನುಕೃತಿ ಹ ಸ್ಮ ವಾ ಅಪ್ಯೋ ಶ್ರಾವಯೇತ್ಯಾಶ್ರಾವಯಂತಿ | ಓಮಿತಿ ಸಾಮಾನಿ ಗಾಯಂತಿ | ಓಗ್ಂ ಶೋಮಿತಿ ಶಸ್ತ್ರಾಣಿ ಶಗ್ಂಸಂತಿ | ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ | ಓಮಿತಿ ಬ್ರಹ್ಮಾ ಪ್ರಸೌತಿ | ಓಮಿತ್ಯಗ್ನಿಹೋತ್ರಮನುಜಾನಾತಿ | ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ | ಬ್ರಹ್ಮೈವೋಪಾಪ್ನೋತಿ ||

(ತೈ. ಉ. ೧-೮)

ಓಂ ಎಂಬುದೇ (ಪ್ರಣವವೇ) ಬ್ರಹ್ಮವು. ವಿಶ್ವವೆಲ್ಲವೂ ಓಂ ಎಂಬುದೇ ಆಗಿದೆ. ಅದೇ ಅನುಕರಣವು. ಸಾಮಗಾನಮಾಡುವವರೂ ಅಧ್ವರ್ಯ್ವಾದಿಗಳೂ ಇದರಿಂದಲೇ ಪ್ರತಿಗರವನ್ನು ಹೇಳುತ್ತಾರೆ. ಅಧ್ಯಯನವನ್ನು ಮಾಡುವುದಕ್ಕೆ ಮೊದಲು ಬ್ರಹ್ಮನನ್ನು ಪಡೆಯೋಣ ಎಂದು ವೇದಾಧ್ಯಯನವನ್ನು ಮಾಡತಕ್ಕವನು ಓಂಕಾರೋಚ್ಚಾರಣದಿಂದ ಬ್ರಹ್ಮನನ್ನೇ ಪಡೆಯುತ್ತಾನೆ. ಓಂ ಎಂದರೆ ಪರಮಾತ್ಮನು. ಇದರ ಉಚ್ಚಾರಣೆಯಿಂದ ಪರಮಾತ್ಮನ ಪ್ರಾಪ್ತಿಯಾಗುತ್ತದೆ.

ಸ ಯ ಏತದೇವಂ ವಿದ್ವಾನಕ್ಷರಂ ಪ್ರಣೌತ್ಯೇತದೇವಾಕ್ಷರಂ ಸ್ವರಮಮೃತಮಭಯಂ ಪ್ರವಿಶತಿ ತತ್ಪ್ರವಿಶ್ಯ ಯದಮೃತಾ ದೇವಾಸ್ತದಮೃತೋ ಭವತಿ ||

(ಛಾ. ಉ. ೧-೪-೫)

ಈ ಓಂಕಾರರೂಪವಾದ ಪ್ರಣವವು ಅಮೃತವೂ ಅಭಯಾತ್ಮಕವೂ ಆಗಿದೆ. ದೇವತೆಗಳೂ ಸಹ ಇದರ ಆಶ್ರಯವನ್ನು ಪಡೆದು ಅಮೃತತ್ವವನ್ನೂ ಅಭಯವನ್ನೂ ಪಡೆದರು. ಯಾರು ಈ ತತ್ತ್ವವನ್ನರಿತು ಈ ಓಂಕಾರರೂಪವಾದ ಸ್ವರದ ಆಶ್ರಯವನ್ನು ಪಡೆಯುತ್ತಾರೆಯೋ ಅವರು ಅಮೃತರಾಗುತ್ತಾರೆ. ಅಭಯವನ್ನು ಪಡೆಯುತ್ತಾರೆ. **ಯುಂಜತೇ ಮನ ಉತ ಯುಂಜತೇ** ಎಂಬ ಮಂತ್ರದಿಂದ ನಿರ್ದಿಷ್ಟವಾಗಿರುವ ಚಿತ್ತಸ್ಥಿತಿಯೂ ಅದರಲ್ಲಿ ಧ್ಯಾನಾತ್ಮಕವಾದ ಜ್ಞಾನಾನ್ವೇಷಣೆಯೂ ಪ್ರಣವದ ಪ್ರಭಾವದಿಂದ ಧ್ಯೇಯವನ್ನು ಸಾಧಿಸುವುದು ಎಂಬುದು ಹೇಗೆ ಸಾಧ್ಯವೆಂದರೆ—

CC-0. Jangamwadi Math Collection. Digitized by eGangotri

ಪ್ರಣವೋ ಧನುಃ ಶರೋ ಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥

(ಮು. ಉ. ೨-೨-೪)

ಪ್ರಣವವೇ ಧನುಸ್ಸು. ಆತ್ಮನೇ ಬಾಣ. ಬ್ರಹ್ಮವೇ ಲಕ್ಷ್ಯ. ಅದನ್ನು ಎಚ್ಚರತಪ್ಪದೇ ಹೊಡೆಯಬೇಕು. ಬಾಣದಂತೆ ತನ್ಮಯವಾಗಬೇಕು. ಗುರಿಯಲ್ಲಿ ಬಾಣವು ಹೋಗಿ ಸೇರುವುದಕ್ಕೆ ಧನಸ್ಸು ಹೇಗೆ ಕಾರಣವಾಗಿರುವುದೋ ಅದರಂತೆ ಆತ್ಮನೆಂಬ ಬಾಣವು ಅಕ್ಷರವೆಂಬ ಗುರಿಯಲ್ಲಿ ಸೇರುವುಪಕ್ಕೆ ಪ್ರಣವವು ಸಾಧಕವಾಗಬೇಕು ಎಂಬುದಾಗಿ ಧ್ಯಾನಸಾಧನ ವಾದ ಪ್ರಣವದ ಸ್ವರೂಪವನ್ನು ತಿಳಿಸಿದೆ ಅಲ್ಲದೇ,

ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ । ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ ಸ ಏತಸ್ಮಾಜ್ಜೀವ-ಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ॥

(ಪ್ರಶ್ನ. ಉ. ೫-೫)

ಪ್ರಣವದ ಅವಯುವಗಳೂ, ಗಾಯತ್ರಿಯ ಅವಯುವಗಳಾದ ಭೂಃ, ಭುವಃ, ಸ್ವಃ ಎಂಬ ಮೂರು ಲೋಕಗಳನ್ನೂ ನಿರ್ದೇಶಿಸುವುವೂ ಆದ ಅ, ಉ, ಮ ಎಂಬ ಮೂರು ಮಾತ್ರೆಗಳ ಸಹಾಯದಿಂದ ಪರಮಪುರುಷನನ್ನು ಧ್ಯಾನಿಸುವ ಪುರುಷನು ಆದಿತ್ಯನ ತೇಜಸ್ಸಿನೊಡನೆ ಐಕ್ಯವನ್ನು ಪಡೆಯುತ್ತಾನೆ. ಸರ್ಪವು ತನ್ನ ಪೊರೆಯನ್ನು ಕಳೆದುಕೊಂಡು ಶುದ್ಧವಾಗುವಂತೆ ಇಂತಹ ಉಪಾಸಕನೂ ಸಹ ಪೂರ್ಣವಾಗಿ ತನ್ನ ಪಾಪವನ್ನು ತಳೆದುಕೊಂಡು ಪೂತನಾಗುತ್ತಾನೆ. ಮತ್ತು ಸಾಮಗಾನದ ಮೂಲಕ ಬ್ರಹ್ಮಲೋಕಕ್ಕೆ ಒಯ್ಯಲ್ಪಡುವನು. ಚೇತನಾತ್ಮಕವಾದ ಸಕಲ ಜೀವಘನ ಕ್ಕಿಂತಲೂ ಉತ್ತಮನಾದವನೂ ಹೃದಯಾಂತರ್ಗತನೂ ಆದ ಪರಮಾತ್ಮನ ದರ್ಶನವನ್ನು ಪಡೆಯುತ್ತಾನೆ. ಮತ್ತು ಈ ಧ್ಯಾನದ ಫಲವೇನೆಂದರೆ,

ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।
ಕ್ರಿಯಾಸು ಬಾಹ್ಯಾಭ್ಯಂತರಮಧ್ಯಮಾಸು ಸಮ್ಯಕ್ಪ್ರಯುಕ್ತಾಸು ನ ಕಂಪತೇ ಜ್ಞಃ ॥

(ಪ್ರ. ಉ. ೫-೬)

ಈ ಮೂರು ಮಾತ್ರೆಗಳೂ ಸಹ ಪ್ರತ್ಯೇಕಮಾಡಲ್ಪಟ್ಟು ಒಂದರ ಸಂಬಂಧವು ಇನ್ನೊಂದಕ್ಕಿಲ್ಲದೇ ಪ್ರಯುಕ್ತವಾದರೆ ಆಗ ನಾಶಕಾರಕವಾಗುವುವು. ಬಾಹ್ಯವೂ, ಅಭ್ಯಂತರವೂ, ಮಧ್ಯಮವೂ ಆದ ಮಾನವನ ಶಾರೀರಕವಾದ ಕ್ರಿಯೆ ಗಳಲ್ಲೆಲ್ಲಾ ಇವುಗಳನ್ನೆಲ್ಲಾ ಒಟ್ಟಿಗೆ ಯೋಜಿಸಿ ಅವುಗಳ ಸಾಮರಸ್ಯವನ್ನುಂಟುಮಾಡುವಂತೆ ಉಪಾಸಿಸಿ ಸಕಲ ವ್ಯವಹಾರಗಳಿಗೂ ಅವುಗಳ ಪ್ರಭಾವವನ್ನು ಪಡೆದರೆ ಆಗ ಪುರುಷನು ಯಾವ ಸನ್ನಿವೇಶದಲ್ಲಿಯೂ ಹೆದರದೆ ಅಚಲ ನಾಗಿರುತ್ತಾನೆ

ಋಗ್ಭಿರೇತಂ ಯಜುರ್ಭಿರಂತರಿಕ್ಷಂ ಸಾಮಭಿರ್ಯತ್ತತ್ಕವಯೋ ವೇದಯಂತೇ ।
ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್ಯತ್ತಚ್ಛಾಂತಮಜರಮಮೃತಮಭಯಂ ಪರಂ ಚೇತಿ॥

(ಪ್ರ. ಉ. ೫-೭)

CC-0. Jangamwadi Math Collection. Digitized by eGangotri

ಈ ರೀತಿ ಉಪಾಸನೆಯನ್ನು ಮಾಡತಕ್ಕ ಪುರುಷನು ಋಕ್ಕುಗಳಿಂದ ಈ ಲೋಕವನ್ನೂ, ಯಜುಸ್ಸಿನಿಂದ ಅಂತರಿಕ್ಷವನ್ನೂ ಸಾಮಗಳಿಂದ ಕವಿಗೋಚರವಾದ ಆದಿತ್ಯಲೋಕವನ್ನೂ ಪಡೆಯುತ್ತಾನೆ. ಅಲ್ಲದೇ ಇವುಗಳೆಲ್ಲದರ ಸಮನ್ವಯರೂಪವಾದ ಓಂಕಾರದ ಸಹಾಯದಿಂದ ಶಾಂತವೂ, ಜರೆಯಿಲ್ಲದ್ದೂ, ಮರಣರಹಿತವಾದದ್ದೂ, ಭಯರಹಿತವಾದದ್ದೂ ಮತ್ತು ಪರಾತ್ಪರವಾದುದೂ ಆದ ತತ್ತ್ವವನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ.

ಈ ರೀತಿಯಾದ ಮೇಲಿನ ವರ್ಣನೆಗಳಿಂದಲೂ ವಿವರಣೆಗಳಿಂದಲೂ ಸಹ **ಗಾಯತ್ರಿಗೂ ಪ್ರಣವಕೂ** ಸಮಾನಧರ್ಮವನ್ನು ಸೂಚಿಸಿದಂತಾಗಿದೆ. ವ್ಯಾವಹಾರಿಕದೃಷ್ಟಿಯಿಂದ ಪ್ರಣವವು ಪೂರ್ವ; ಗಾಯತ್ರಿಯು ಪಶ್ಚಾತ್ ಎಂದು ಉಚ್ಚಾರಣೆಯ ಕಾಲಕ್ರಮವು ತಿಳಿಸಿದ್ದರೂ ಸಹ ಪ್ರಣವದ ಸ್ವರೂಪ ಮತ್ತು ಪ್ರಭಾವಗಳೇ ಗಾಯತ್ರಿಯ ಸ್ವರೂಪ ಮತ್ತು ಪ್ರಭಾವಗಳಾಗಿಯೇ ಇವೆ.

## ೨೬. ಪ್ರಣವ ಮತ್ತು ಗಾಯತ್ರೀ ಎರಡೂ ಬ್ರಹ್ಮಸ್ವರೂಪಗಳೇ ; ಭೂಃ, ಭುವಃ, ಸುವಃ, ಮಹಃ ಎಂಬ ವ್ಯಾಹೃತಿರೂಪವಾದ ಬ್ರಹ್ಮದ ಉಪಾಸನೆಯ ಫಲ.

ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಕ್ಷಾತ್ಸಾಧನವಾದ ಇವೆರಡೂ ಸಹ ಬ್ರಹ್ಮರೂಪಗಳೇ ಆಗಿವೆಯೆಂದು ಹೇಳಿದರೆ, ಆಗ, ಸವಿತೃವೆಂದು ನಿರ್ದಿಷ್ಟನಾಗಿರುವ ಬ್ರಹ್ಮನು ಲೌಕಿಕಪ್ರಭೇದರೂಪಗಳೂ **ಪ್ರಣವ** ಮತ್ತು **ಗಾಯತ್ರಿಗಳ** ಸಮಾನಾವಯವಗಳೂ ಆದ **ವ್ಯಾಹೃತಿಗಳ** ಸ್ವರೂಪಗಳೇನು ? ಅವುಗಳ ಪ್ರಭೇದಗಳೆಷ್ಟು ; ಪ್ರಣವಾತ್ಮಕವೂ ಗಾಯತ್ರ್ಯಾತ್ಮಕವೂ ಆದ ಧ್ಯಾನಕ್ಕೆ ವ್ಯಾಹೃತಿಗಳ ಸಾಧಕಸ್ವರೂಪವೇನು ಮುಂತಾದ ವಿಷಯಗಳ ಪರಿಶೀಲನವು ಸದ್ಯಃ ಅವಶ್ಯವಾಗಿರುತ್ತದೆ. ಪ್ರಣವಾವಯವಗಳಿಂದ **ಅ, ಉ, ಮ** ಎಂಬ ಅಕ್ಷರಗಳು **ಪುಂ, ಸ್ತ್ರೀ, ನಪುಂಸಕ**ಗಳೆಂದೂ, ಇತರ ವಿಧವಾಗಿಯೂ ಸಹ ಮೈತ್ರ್ಯುಪನಿಷತ್ತಿನಲ್ಲಿ ವಿವರಿಸಿರುವುದನ್ನು ಮೇಲೆ ತಿಳಿಸಿದೆ. ಅದೇ ರೀತಿಯಾದ ವಿಭಾಗಗಳು ತೈತ್ತಿರೀಯೋಪನಿಷತ್ತಿನಲ್ಲಿಯೂ ಸಹ ಸ್ವಲ್ಪ ವ್ಯತ್ಯಸ್ತವಾಗಿ ಹೇಳಲ್ಪಟ್ಟಿದೆ. ಆದರೆ, ತೈತ್ತಿರೀಯೋಪನಿಷತ್ತಿನ ವಿಭಾಗಗಳು ಆಧ್ಯಾತ್ಮಿಕಜ್ಞಾನದೃಷ್ಟಿಯಿಂದಲೂ, ಉಪಾಸನಾದೃಷ್ಟಿಯಿಂದಲೂ ಬಹಳ ಪ್ರಾಧಾನ್ಯವನ್ನು ಪಡೆದಿವೆ. ಶಂಕರಾಚಾರ್ಯರೂ ಸಹ ಈ ವಿಭಾಗಗಳಿಗೆ ಉಪಾಸನಾದೃಷ್ಟಿಯಿಂದ ಬಹಳ ಪ್ರಾಮುಖ್ಯತೆಯನ್ನು ಕೊಟ್ಟು ವಿಸ್ತಾರವಾಗಿ ವಿವರಿಸಿದ್ದಾರೆ. ತೈತ್ತಿರೀಯದಲ್ಲಿ ಇವುಗಳ ವಿಭಾಗಗಳು ಈ ರೀತಿಯಲ್ಲಿ ತಿಳಿಸಿದೆ—

**ಅನಂತರಂ ವ್ಯಾಹೃತ್ಯಾತ್ಮನೋ ಬ್ರಹ್ಮಣಃ ಅಂತರುಪಾಸನಂ ಸ್ವಾರಾಜ್ಯಫಲಂ ಪ್ರಸ್ತೂಯತೇ** (ತೈ. ಉ. ಶ. ಭಾ. ೧-೫) ಸಂಹಿತೆಗಳ ವಿಷಯಕವಾದ ಉಪಾಸನೆಯೂ ಸಹ ಜ್ಞಾನಸಾಧಕವೆಂದು ತಿಳಿಸಿ, ಮುಂದಕ್ಕೆ ಸ್ವಾರಾಜ್ಯವೆಂಬ ಫಲವನ್ನು ಕೊಡುವ ವ್ಯಾಹೃತಿರೂಪವಾದ ಬ್ರಹ್ಮವನ್ನು ಅಂತತಃ ಉಪಾಸನೆಮಾಡುವ ಕ್ರಮವು ಹೇಳಲ್ಪಟ್ಟಿದೆಯೆಂದು ಶಂಕರಾಚಾರ್ಯರು ವ್ಯಾಹೃತ್ಯಾ ಬ್ರಹ್ಮೋಪಾಸನೆಯ ಅವತರಣಿಕೆಯಲ್ಲಿ ತಿಳಿಸಿದ್ದಾರೆ. ಅದರ ಕ್ರಮವು ಹೀಗಿದೆ—

CC-0. Jangamwadi Math Collection. Digitized by eGangotri

**ಭೂರ್ಭುವಃ ಸುವರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾ ಮುಹಸ್ಮೈ ತಾಂ ಚತುರ್ಥೀಂ। ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತತ್ ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಂ । ಸುವರಿತ್ಯಸೌ ಲೋಕಃ । ಮಹ ಇತ್ಯಾದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಗ್ಂಷಿ ಮಹೀಯಂತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಗ್ಂಷಿ । ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀಯಂತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಂ । ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ। ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ ॥**

(ತೈ. ಉ. ೧-೫)

**ಭೂಃ, ಭುವಃ, ಸುವಃ** ಎಂಬ ಮೂರು ಅಂಗರೂಪಗಳಾದ ವ್ಯಾಹೃತಿಗಳು ನಾಲ್ಕನೆಯ **ಮಹಃ** ಎಂಬ ವ್ಯಾಹೃತಿಯನ್ನು ಮಾಹಾಚಮಸ್ಯನು ತಿಳಿದನು. (ಋಷ್ಯನುಸ್ಮರಣಮಪಿ ಉಪಾಸನಾಂಗಂ (ಶ. ಭಾ.) ಋಷಿಯ ನಾಮಸ್ಮರಣೆಯೂ ಸಹ ಉಪಾಸನೆಯ ಅಂಗವಾಗಿರುತ್ತದೆ). **ಮಹಃ** ಎಂಬ ನಾಮಾಂಕಿತವಾದ ಈ ವ್ಯಾಹೃತಿಯೇ ಮಹತ್ತಾದ ಬ್ರಹ್ಮವು. ಅದೇ ಸರ್ವವ್ಯಾಪಿಯಾದ ಆತ್ಮನು. ಉಳಿದವೆಲ್ಲ ಅದರ ಅಂಗಗಳು.

**ಇತರಾಶ್ಚ ವ್ಯಾಹೃತಯೋ ಲೋಕಾಃ ದೇವಾಃ ವೇದಾಃ ಪ್ರಾಣಾಶ್ಚ ಮಹಃ ಇತ್ಯನೇನ ವ್ಯಾಹೃತ್ಯಾತ್ಮನಾ ಆದಿತ್ಯಚಂದ್ರಬ್ರಹ್ಮಾನ್ನಭೂತೇನ ವ್ಯಾಪ್ಯಂತೇ ಯತಃ ॥**

(ಶ. ಭಾ.)

ಭೂರಾದಿ ಸಕಲಲೋಕಗಳೂ, ದೇವತೆಗಳೂ, ವೇದಗಳೂ, ಪ್ರಾಣಗಳೂ ಸಹ **ಮಹಃ** ಎಂಬ ಆದಿತ್ಯ, ಚಂದ್ರ, ಬ್ರಹ್ಮ ಮತ್ತು ಅನ್ನ ಈ ರೂಪದಲ್ಲಿರುವ ಮಹಾವ್ಯಾಹೃತಿರೂಪವಾದ ಆತ್ಮನಿಂದ ವ್ಯಾಪಿಸಲ್ಪಟ್ಟಿವೆ. ಆದುದರಿಂದ ಅವೆಲ್ಲವೂ ಈ **ಮಹಃ** ಎಂಬ ಆತ್ಮನ ಅಂಗಗಳು. **ಅಂಗಾನ್ಯನ್ಯಾ ದೇವತಾಃ** ಎಂದು ಹೇಳಿರುವಲ್ಲಿ **ದೇವತಾ** ಎಂಬುದು ಉಪಲಕ್ಷಣವಾಗಿ ಹೇಳಿದೆ. ಆತ್ಮವ್ಯಾಪ್ಯವಾದ ಸಕಲ ಲೌಕಿಕಸತ್ವಗಳೂ ಇದರಲ್ಲಿ ಅಡಕವಾಗಿವೆ. **ತಾ ವಾ ಏತಾಶ್ಚತಸ್ರಶ್ಚತುರ್ಧಾ** ಎಂಬ ವಿಭಾಗದ ಕ್ರಮವು ಈ ರೀತಿಯಿದೆ—

(೧) **ಭೂಃ** ಎಂಬುದೇ ಈ **ಲೋಕವು. ಭುವಃ** ಎಂಬುದು ಅಂತರಿಕ್ಷವು. **ಸುವಃ** ಎಂಬುದು **ದ್ಯು**ಲೋಕವು. **ಮಹಃ** ಎಂದರೆ ಆದಿತ್ಯನು. ಆದಿತ್ಯನಿಂದಲೇ ಸಕಲಲೋಕಗಳೂ ಮಹತ್ತಾಗುತ್ತವೆ. ಇವನೇ ಸರ್ವಾಂತರ್ಯಾಮಿಯಾದ ಪರಬ್ರಹ್ಮನು.

(೨) **ಭೂಃ** ಎಂಬುದೇ ಅಗ್ನಿಯು. **ಭುವಃ** ಎಂಬುದೇ **ವಾಯುವು. ಸುವಃ** ಎಂಬುದೇ ಆದಿತ್ಯನು. **ಮಹಃ** ಎಂದರೆ **ಚಂದ್ರನು.** ಚಂದ್ರನಿಂದಲೇ ಜ್ಯೋತಿಗಳೆಲ್ಲವೂ ಮಹತ್ತಾಗುತ್ತವೆ. (ಈ ಚಂದ್ರಲೋಕವು

CC-0. Jangamwadi Math Collection. Digitized by eGangotri

ಆದಿತ್ಯಲೋಕಕ್ಕಿಂತಲೂ ಮೀರಿರುವುದೆಂದೂ, ಇಲ್ಲಿ ರೂಢವಾಗಿರುವ ಚಂದ್ರಬಿಂಬವೆಂಬರ್ಥವಲ್ಲವೆಂದೂ ಹಿಂದೆ ೧-೧೬೪ನೇ ಸೂಕ್ತದಲ್ಲಿ ತಿಳಿಸಿದೆ.

(೩) ಭೂಃ ಎಂಬುದೇ ಋಕ್ಕುಗಳು. ಭುವಃ ಎಂಬುದು ಸಾಮಗಳು. ಸುವಃ ಎಂಬುದು ಯಜುಸ್ಸು ಗಳು. ಮಹಃ ಎಂಬುದು ಬ್ರಹ್ಮ. ಬ್ರಹ್ಮನಿಂದಲೇ ಸಕಲವೂ ಮಹತ್ತ್ವಾಗುತ್ತವೆ.

(೪) ನಾಲ್ಕನೆಯ ವಿಭಾಗಗಳಾದ ಭೂಃ ಎಂದರೆ ಪ್ರಾಣವು. ಭುವಃ ಎಂದರೆ ಅಪಾನವು. ಸುವಃ ಎಂದರೆ ವ್ಯಾನವು. ಮಹಃ ಎಂದರೆ ಅನ್ನವು. ಸಕಲ ಪ್ರಾಣಗಳ ಮಹತ್ವಕ್ಕೂ ಅನ್ನವೇ ಕಾರಣವು.

ಈ ರೀತಿಯಾಗಿ ಪ್ರತಿಯೊಂದೂ ನಾಲ್ಕು ಬಗೆಯುಳ್ಳವಾಗಿರುತ್ತವೆ ಅವುಗಳ ಸ್ವರೂಪವನ್ನು ಪೂರ್ಣವಾಗಿ ಯಾವನು ಅರಿಯುತ್ತಾನೆಯೋ ಅವನು ಪೂರ್ಣನಾದ ಬ್ರಹ್ಮನನ್ನು ಅರಿತಂತೆಯೇ ಆಗುತ್ತದೆ. ದೇವತೆಗಳೆಲ್ಲರೂ ಇವನನ್ನು ಸೇವಿಸುತ್ತಾರೆ. ಬಲಿಯನ್ನು ಅರ್ಪಿಸುತ್ತಾರೆ.

ಭೂಃ, ಭುವಃ, ಸುವಃ ಎಂಬ ನಾಮಾಂಕಿತರಾದ ಇತರ ಎಲ್ಲಾ ದೇವತೆಗಳೂ ಸಹ ಮಹಃ ಎಂದು ಪ್ರಸಿದ್ಧವಾದ ಬ್ರಹ್ಮನಿಗೆ ಅಂಗಗಳಾಗಿದ್ದಾರೆ ಎಂದು ಮೇಲೆ ಯಾವ ಬ್ರಹ್ಮಸ್ವರೂಪವನ್ನು ವಿವರಿಸಿದೆಯೋ, ಅಂತಹ ಪರಬ್ರಹ್ಮನ ಸಾಕ್ಷಾತ್ಕಾರಸಾಧನವಾದ ಉಪಾಸನೆಯ ಕ್ರಮುವನ್ನೂಸಹ ತೈತ್ತಿರೀಯದಲ್ಲಿ ಈ ರೀತಿ ತಿಳಿಸಿದೆ.

> ಸ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಂ । ಆಪ್ನೋತಿ ಮನಸಸ್ಪತಿಂ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ । ಏತತ್ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮಪ್ರಾಣಾರಾಮಂ ಮನ ಆನಂದಂ ಶಾಂತಿಸಮೃದ್ಧಮಮೃತಂ । ಇತಿ ಪ್ರಾಚೀನಯೋಗ್ಯೋಪಾಸ್ವ ॥
>
> (ತೈ. ಉ. ೧-೬)

ಹೃದಯಾಂತರ್ಗತವಾದ ಯಾವ ಈ ಆಕಾಶವಿದೆಯೋ ಅದರಲ್ಲಿ ಮನೋಮಯನೂ, ಅಮೃತನೂ, ಹಿರಣ್ಮಯನಾದ ಪುರುಷನೂ ಇದ್ದಾನೆ. ಎರಡು ದವಡೆಗಳ ನಡುವೆ ಯಾವುದು ಸ್ತನದಂತೆ ನೇತಾಡುತ್ತಿರುವುದೋ, ಎಲ್ಲಿ ಕೂದಲುಗಳ ಕೊನೆಯು ಇಬ್ಬಗೆಯಾಗಿರುವುದೋ ಅದೇ ಇಂದ್ರನ ಯೋನಿಯು. ಉಪಾಸಕನು—ಭೂಃ, ಎಂಬ ಅಗ್ನಿಯಲ್ಲಿಯೂ, ಭುವಃ ಎಂಬ ವಾಯುವಿನಲ್ಲಿಯೂ, ಸುವಃ ಎಂಬ ಆದಿತ್ಯನಲ್ಲಿಯೂ, ಮಹಃ ಎಂಬ ಬ್ರಹ್ಮನಲ್ಲಿಯೂ ಪ್ರತಿಷ್ಠಾಪಿತನಾಗುತ್ತಾನೆ. ಸ್ವಾರಾಜ್ಯವನ್ನು ಪಡೆಯುತ್ತಾನೆ. ಮನಸ್ಸಿನ ಪ್ರಭುವಾಗುತ್ತಾನೆ. ವಾಕ್ಕಗಳಿಗೂ, ಚಕ್ಷುಸ್ಸುಗಳಿಗೂ, ಶ್ರೋತ್ರಗಳಿಗೂ ವಿಜ್ಞಾನಗಳಿಗೂ ಒಡೆಯನಾಗುತ್ತಾನೆ. ಅದಕ್ಕಿಂತಲೂ ಅಧಿಕವಾಗಿ ಆಕಾಶಶರೀರವೂ, ಸರ್ವಾತ್ಮವೂ ಪ್ರಾಣಾರಾಮವೂ, ಮನ ಆನಂದವೂ, ಶಾಂತಿಸಮೃದ್ಧವೂ ಅಮೃತವೂ ಆಗಿರುವ ಬ್ರಹ್ಮನಲ್ಲಿಯೇ ಪ್ರತಿಷ್ಠಾಪಿತನಾಗಿ ಬ್ರಹ್ಮರೂಪಿಯೇ ಆಗುತ್ತಾನೆ.

> ತೇಷು ಆತ್ಮಭಾವೇನ ಸ್ಥಿತ್ವಾ ಆಪ್ನೋತಿ ಬ್ರಹ್ಮಭೂತಃ ಸ್ವಾರಾಜ್ಯಂ ಸ್ವರಾಡ್ಭಾವಂ । ಸ್ವಯಮೇವ ರಾಜಾ ಅಧಿಪತಿರ್ಭವತಿ ಅಂಗಭೂತಾನಾಂ ದೇವಾನಾಂ ಯಥಾಬ್ರಹ್ಮ ॥
>
> (ಶ. ಭಾ.)

CC-0. Jangamwadi Math Collection. Digitized by eGangotri

ಸಕಲವ್ಯಾಹೃತಿಗಳಲ್ಲಿಯೂ ಆತ್ಮಭಾವದಿಂದ ಇದ್ದುಕೊಂಡು ಬ್ರಹ್ಮವೇ ಆಗಿ ಸ್ವಾರಾಜ್ಯವನ್ನು ಎಂದರೆ ಸ್ವರಾಡ್ರೂಪವನ್ನು ಪಡೆದುಕೊಳ್ಳುತ್ತಾನೆ. ಅವನು ತಾನೇ ರಾಜನು. ಅಂಗವಾಗಿರುವ ದೇವತೆಗಳಿಗೆ ಬ್ರಹ್ಮವು ಅಧಿಪತಿಯಾಗಿರುವಂತೆಯೇ ತಾನೂ ಅಧಿಪತಿಯು. ದೇವತೆಗಳೆಲ್ಲರೂ ಬ್ರಹ್ಮಕ್ಕೆ ಯಾವ ರೀತಿ ಬಲಿಯನ್ನರ್ಪಿಸುವರೋ ಅದರಂತೆ ಇವನಿಗೂ ಅರ್ಪಿಸುತ್ತಾರೆ. ಬ್ರಹ್ಮವು ಸರ್ವಾತ್ಮಕವಾಗಿರುವುದರಿಂದ ಎಲ್ಲಾ ಮನಸ್ಸುಗಳಿಗೂ ಒಡೆಯನಾಗಿರುವಂತೆ ಇವನೂ ಆಗಿರುತ್ತಾನೆ. ಆದುದರಿಂದಲೇ ಆರಾಮನಾಗಿಯೂ, ಆನಂದಸ್ವರೂಪನಾಗಿಯೂ, ಶಾಂತಚಿತ್ತನಾಗಿಯೂ, ಮರಣರಹಿತನಾಗಿಯೂ, ಆಗುವುದರಿಂದ ವ್ಯಾಹೃತ್ಯಾತ್ಮನಾದ ಬ್ರಹ್ಮದ ಉಪಾಸನೆಯನ್ನು ಮಾಡು ಎಂದು ಪ್ರಾಚೀನಯೋಗ್ಯನಿಗೆ ಮಾಡಿರುವ ಉಪದೇಶದಲ್ಲಿ ವ್ಯಾಹೃತಿರೂಪವಾದ ಉಪಾಸನೆಯ ಸ್ವರೂಪವು ತಿಳಿಯುತ್ತದೆ.

———:o:———

## ೨೭. ಆದಿತ್ಯರೂಪನಾದ ಬ್ರಹ್ಮನ ದಿವ್ಯಗಾನವನ್ನು ಪ್ರಶಂಸಿಸುವ ಗಾಯತ್ರೀ ಮತ್ತು ಪ್ರಣವವೂ ಗಾನಾತ್ಮಕವಾಗಿಯೇ ಇವೆ.

———————

ಹೀಗೆ ಭೂರಾದಿ ವ್ಯಾಹೃತ್ಯಾತ್ಮಕಗಳಾದ ಪ್ರಣವವೂ ಗಾಯತ್ರಿಯೂ ಸಹ ತದಕ್ಷರನಿರ್ದಿಷ್ಟಗಳಾದ ಭೂರಾದಿಲೋಕಗಳನ್ನೆಲ್ಲಾ ವ್ಯಾಪಿಸಿರುವ ಪರತತ್ತ್ವದ ಅನುಸಂಧಾನಕ್ಕೆ ಸಾಕ್ಷಾತ್ಸಾಧನವಾಗುತ್ತವೆಂದು ಶ್ರುತಿಗಳು ಪ್ರಶಂಸಿಸುತ್ತವೆ. ಯಾವ ಮಹಾಮಂತ್ರವಾದ ಗಾಯತ್ರಿಯನ್ನು **ಗಾಯತಿ, ತ್ರಾಯತೇ ಚ** ಅದು ರಕ್ಷಿಸುತ್ತದೆ ಮತ್ತು ಗಾನಮಾಡುತ್ತದೆ ಎಂದು ವರ್ಣಿಸಿ ಅದರ ವಿಶೇಷಗುಣವನ್ನು ತೋರಿಸಿದೆಯೋ ಅದೇ ರೀತಿಯಲ್ಲಿ ಓಂಕಾರಾತ್ಮಕವಾದ ಪ್ರಣವವನ್ನೂ ಸ್ತುತಿಸಿದೆ.

**ಓಂ ಇತ್ಯೇತದಕ್ಷರಮುದ್ಗೀಥಮುಪಾಸೀತ । ಓಮಿತಿ ಹ್ಯುದ್ಗಾಯತಿ ॥**

(ಛಾ. ಉ. ೧-೧-೧)

ಓಂ ಎಂಬ ವರ್ಣವನ್ನು ಉದ್ಗೀಥವೆಂದು ಉಪಾಸಿಸಬೇಕು. ಇದು ಬ್ರಹ್ಮತತ್ತ್ವವನ್ನು ಗಾನರೂಪದಲ್ಲಿ ಸ್ತುತಿಸುತ್ತದೆ. ವಿಶ್ವವ್ಯಾಪಕವಾದ ಈ ಬ್ರಹ್ಮತತ್ತ್ವವೇ ಉದ್ಗೀಥರೂಪದಲ್ಲಿರುತ್ತದೆ.

**ಅಥ ಖಲು ಯ ಉದ್ಗೀಥಃ ಸ ಪ್ರಣವೋ ಯಃ ಪ್ರಣವ ಸ ಉದ್ಗೀಥ ಇತ್ಯಸೌ ವಾ ಆದಿತ್ಯ ಉದ್ಗೀಥ ಏಷ ಪ್ರಣವ ಓಮಿತಿ ಹ್ಯೇಷ ಸ್ವರನ್ನೇತಿ ॥**

(ಛಾ. ಉ. ೧-೫-೧)

ಉದ್ಗೀಥವೇ ಪ್ರಣವವು. ಪ್ರಣವವೇ ಉದ್ಗೀಥವು. ಆದಿತ್ಯನೇ ಉದ್ಗೀಥವು ಮತ್ತು ಪ್ರಣವಾತ್ಮಕನು. ಯಾವ ಆದಿತ್ಯರೂಪದಲ್ಲಿರುವ ಬ್ರಹ್ಮನನ್ನೇ ಪ್ರಣವವೆಂದೂ ಉದ್ಗೀಥವೆಂದೂ ಕರೆಯುತ್ತಾರೆಯೋ, ಪುರುಷನ ಹೃದಯಾಂತರ್ಗತನಾಗಿರುವ ಪುರುಷನೂ ಈ ರೂಪದಲ್ಲಿಯೇ ಇರುತ್ತಾನೆ. ಹೇಗೆಂದರೆ,

**ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ಸಾಮ .... .... ಯೊವಮುಷ್ಯ ಗೋಷ್ಣೌತೌ ಗೋಷ್ಣೌ ಯನ್ನಾಮ ತನ್ನಾಮ ॥**

(ಛಾ. ಉ. ೧-೭-೫)

CC-0. Jangamwadi Math Collection. Digitized by eGangotri

ಆದಿತ್ಯಲೋಕದಲ್ಲಿ ಪರತತ್ತ್ವವು ಯಾವ ರೀತಿ ಗಾನಾತ್ಮಕವಾಗಿ ವಿಹರಿಸುತ್ತದೆಯೋ ಅದರಂತೆಯೇ ಪುರುಷಾಂತರ್ಗತ ವಾದ ತತ್ತ್ವವೂ ಸಹ ಅದೇ ನಾಮದಿಂದ ಅದೇ ರೀತಿಯಲ್ಲಿ ಗಾನಾತ್ಮಕವಾಗಿ ವಿಹರಿಸುತ್ತದೆ. ಇಂತಹ ಗಾನಾತ್ಮಕ ವಾದ ದಿವ್ಯಪುರುಷನನ್ನು ಗಾನಾತ್ಮಕವೂ ಜಗದ್ರಕ್ಷಕವೂ ಆದ ಪ್ರಣವದಿಂದಲೂ ಗಾಯತ್ರೀಮಹಾಮಂತ್ರದಿಂದಲೂ ಉಪಾಸಿಸಬೇಕು ಎಂಬುದೇ ತಾತ್ಪರ್ಯ. ಬ್ರಹ್ಮಸಾಕ್ಷಾತ್ಕಾರಕ್ಕೆ ಸಾಕ್ಷಾತ್ಸಾಧನವೂ, ಬ್ರಹ್ಮರೂಪವೂ ಆಗಿರತಕ್ಕ ಈ ಗಾಯತ್ರೀಪಠನದಿಂದ ಮಾನವನ ದುರಿತಗಳೆಲ್ಲವೂ ನಾಶವಾಗುತ್ತವೆ

> ಅಗ್ನಿರೇವ ಮುಖಂ ಯದಿ ಹ ವಾ ಅಪಿ ಬಹ್ವಿವಾಗ್ನಾವಭ್ಯಾದಧತಿ ಸರ್ವಮೇವ ತತ್ಸಂದಹತ್ಯೇ-
> ವಂ ಹೈವೈವಂ ವಿದ್ಯದ್ಯಪಿ ಬಹ್ವಿವ ಪಾಪಂ ಕುರುತೇ ಸರ್ವಮೇವ ತತ್ಸಂಪ್ಸಾಯ ಶುದ್ಧಃ
> ಪೂತೋಽಜರೋಽಮೃತಃ ಸಂಭವತಿ ॥
>
> (ಬೃ. ಉ. ೫-೧೪-೮)

ಗಾಯತ್ರಿಯ ಮುಖವೇ ಅಗ್ನಿಯು. ಯಾವ ರೀತಿ ಅಗ್ನಿಯಲ್ಲಿ ಯಾವ ಪದಾರ್ಥವನ್ನು ಎಷ್ಟೇ ಅಧಿಕವಾದ ಪ್ರಮಾಣ ದಲ್ಲಿ ಇಟ್ಟರೂ ಸಹ ಎಲ್ಲವನ್ನೂ ಪೂರ್ಣವಾಗಿ ದಹಿಸುವುದೋ ಅದೇ ರೀತಿಯಲ್ಲಿ ಗಾಯತ್ರೀತತ್ತ್ವವನ್ನು ತಿಳಿದ ಪುರುಷನು ಯಾವ ಪ್ರಮಾಣದಲ್ಲಿ ಪಾಪಗಳನ್ನು ಮಾಡಿದ್ದರೂ ಸಹ ಅವನ ದುರಿತಗಳೆಲ್ಲವೂ ನಾಶವಾಗಿ ಅವನು ಅಜರನೂ ಅಮೃತನೂ ಶುದ್ಧನೂ ಪವಿತ್ರಾತ್ಮನೂ ಆಗುತ್ತಾನೆ ಎಂದು ಗಾಯತ್ರಿಯ ಮಹಾಪ್ರಭಾವವನ್ನು ವರ್ಣಿಸಿದೆ ಈ ಮಹಾಮಂತ್ರದ ಪ್ರಭಾವವನ್ನು ತಿಳಿದು ಇದನ್ನು ಉಪಾಸಿಸುವವನು ಬ್ರಹ್ಮಸಾನ್ನಿಧ್ಯವನ್ನು ಪಡೆದು ಬ್ರಹ್ಮನೇ ಆಗುತ್ತಾನೆ ಎಂದು ತಿಳಿಸಲು ತೈತ್ತಿರೀಯ ಆರಣ್ಯಕದಲ್ಲಿ ಕಥಾರೂಪದಲ್ಲಿ ಇದರ ಮಹಿಮೆಯು ಈ ರೀತಿ ವರ್ಣಿತ ವಾಗಿದೆ.

---

## ೨೮. ಗಾಯತ್ರಿಯ ಪ್ರಶಂಸೆ.



> ರಕ್ಷಾಗ್ಂಸಿ ಹ ವಾ ಪುರೋಽನುವಾಕೇ ತಪೋಽಗ್ರಮತಿಷ್ಠಂತ ತಾನ್ಪ್ರಜಾಪತಿರ್ವರೇಣೋಪಾ-
> ಮಂತ್ರಯತ ತಾನಿ ವರಮವೃಣೀತಾದಿತ್ಯೋ ನೋ ಯೋದ್ಧಾ ಇತಿ ತಾನ್ಪ್ರಜಾಪತಿರಬ್ರವೀ-
> ದ್ಯೋಧಯಧ್ವಮಿತಿ ತಸ್ಮಾದುತ್ತಿಷ್ಠಂತಗ್ಂ ಹ ವಾ ತಾನಿ ರಕ್ಷಾಗ್ಸ್ಯಾದಿತ್ಯಂ ಯೋಧಯಂತಿ
> ಯಾವದಸ್ತಮನ್ವಗಾತ್ತಾನಿ ಹ ವಾ ಏತಾನಿ ರಕ್ಷಾಗ್ಂಸಿ ಗಾಯತ್ರಿಯಾಭಿಮಂತ್ರಿತೇನಾಂಭಸಾ
> ಶಾಮ್ಯಂತಿ ತದು ಹ ವಾ ಏತೇ ಬ್ರಹ್ಮವಾದಿನಃ ಪೂರ್ವಾಭಿಮುಖಾಸ್ಸಂಧ್ಯಾಯಾಂ ಗಾಯ-
> ತ್ರಿಯಾಭಿಮಂತ್ರಿತಾ ಆಪ ಊರ್ಧ್ವಂ ವಿಕ್ಷಿಪಂತಿ ತಾ ಏತಾ ಆಪೋ ವಜ್ರೀ ಭೂತ್ವಾ ತಾನಿ
> ರಕ್ಷಾಗ್ಂಸಿ ಮಂದೇಹಾರುಣೇ ದ್ವೀಪೇ ಪ್ರಕ್ಷಿಪಂತಿ ಯತ್ಪ್ರದಕ್ಷಿಣಂ ಪ್ರಕ್ರಮಂತಿ ತೇನ
> ಪಾಪ್ಮಾನಮವಧೂನ್ವಂತ್ಯುದ್ಯಂತಮಸ್ತಂಯಂತಮಾದಿತ್ಯಮಭಿಧ್ಯಾಯನ್ಕುರ್ವನ್ ಬ್ರಾಹ್ಮ-
> ಣೋ ವಿದ್ವಾನ್ತ್ಸಕಲಂ ಭದ್ರಮಶ್ನುತೇಽಸಾವಾದಿತ್ಯೋ ಬ್ರಹ್ಮೇತಿ ಬ್ರಹ್ಮೈವ ಸನ್ ಬ್ರಹ್ಮಾ-
> ಪ್ಯೇತಿ ಯ ಏವಂ ವೇದ ॥
>
> (ತೈ. ಆ. ೨-೨)

CC-0. Jangamwadi Math Collection. Digitized by eGangotri

ಪೂರ್ವದಲ್ಲಿ ರಾಕ್ಷಸರು ಉಗ್ರವಾದ ತಪಸ್ಸನ್ನಾಚರಿಸಿದರು. ಆಗ ದೇವನಾದ ಪ್ರಜಾಪತಿಯು ಪ್ರತ್ಯಕ್ಷನಾಗಿ ಅವರಿಗೆ ಯಾವ ವರವು ಬೇಕೆಂದು ಪ್ರಶ್ನಿಸಿದನು. ಆಗ ಅವರು ನಮಗೆ ಸೂರ್ಯನೊಂದಿಗೆ ಯುದ್ಧಮಾಡುವ ಶಕ್ತಿಯನ್ನೂ ಅವಕಾಶವನ್ನೂ ಕಲ್ಪಿಸಿಕೊಡು ಎಂದು ಪ್ರಾರ್ಥಿಸಿದರು. ಹಾಗೆಯೇ ಆಗಬಹುದು ಎಂದು ಪ್ರಜಾಪತಿಯು ಸಮ್ಮತಿಸಿದನು. ಆದುದರಿಂದಲೇ ರಾಕ್ಷಸರು ಸೂರ್ಯನು ಉದಯಿಸಿದೊಡನೆಯೇ ಅವನೊಡನೆ ಹೋರಾಡಲುಪಕ್ರಮಿಸಿ ಅಸ್ತಕಾಲದವರೆಗೂ ಹೋರಾಡುತ್ತಲೇ ಇರುವರು. ಆದರೆ **ಗಾಯತ್ರೀ** ಪಠನದಿಂದ ಪೂತವಾದ ಉದಕದಿಂದ ಅವರನ್ನು ಓಡಿಸಲು ಸಾಧ್ಯ. ಆದುದರಿಂದಲೇ ಬ್ರಹ್ಮವಾದಿಗಳು ಪ್ರಾತಃಸಂಧ್ಯಾಕಾಲದಲ್ಲಿಯೂ (ಸಾಯಂಸಂಧ್ಯಾಕಾಲದಲ್ಲಿಯೂ ಸಹ) ಗಾಯತ್ರಿಯನ್ನು ಪಠಿಸಿ ತತ್ಪೂತವಾದ ಉದಕದಿಂದ ಅರ್ಘ್ಯವನ್ನು ಸಮರ್ಪಿಸುತ್ತಾರೆ. ಅರ್ಘ್ಯರೂಪದಲ್ಲಿ ಅರ್ಪಿಸಿದ ಈ ಉದಕಬಿಂದುಗಳು ವಜ್ರಾತ್ಮಕವಾಗಿ ಪರಿಣಮಿಸಿ ರಾಕ್ಷಸರನ್ನು **ಮಂದೇಹಾರಣ**ವೆಂಬ ದ್ವೀಪದಲ್ಲಿ ಎಸೆಯುತ್ತದೆ. ನಂತರ ಬ್ರಹ್ಮವಾದಿಗಳು ಪ್ರದಕ್ಷಿಣನಮಸ್ಕಾರಪೂರ್ವಕವಾದ ಪೂಜೆಯಿಂದ ತಮ್ಮ ಪಾಪವನ್ನು ನೀಗಿಕೊಳ್ಳುತ್ತಾರೆ. ಈ ತತ್ತ್ವವನ್ನರಿತ ಬ್ರಾಹ್ಮಣನು (ಬ್ರಹ್ಮಜ್ಞಾನಿಯು) ಸೂರ್ಯೋದಯಕಾಲದಲ್ಲೂ ಸೂರ್ಯಾಸ್ತಮಯಕಾಲದಲ್ಲೂ ಸಹ **ಗಾಯತ್ರೀ**ಯನ್ನು ಪಠಿಸಿ ಅರ್ಘ್ಯವನ್ನರ್ಪಿಸುತ್ತಲೂ ಮತ್ತು ತನ್ಮೂಲಕ ಆದಿತ್ಯನನ್ನು ಉಪಾಸಿಸಿ ಧ್ಯಾನಿಸಿದರೆ ಅವನಿಗೆ ಸಕಲವಿಧವಾದ ಭದ್ರವೂ (ಕಲ್ಯಾಣವೂ) ಉಂಟಾಗುತ್ತದೆ. **ಆದಿತ್ಯನೇ** ಪರಬ್ರಹ್ಮನು. ಗಾಯತ್ರ್ಯುಪಾಸ್ಯನಾದ ಆದಿತ್ಯನೇ ಬ್ರಹ್ಮನೆಂದರಿತು ಉಪಾಸನೆಯನ್ನು ಮಾಡತಕ್ಕ ಪುರುಷನು ಬ್ರಹ್ಮಸಾಯುಜ್ಯವನ್ನು ಪಡೆದು ಬ್ರಹ್ಮರೂಪಿಯೇ ಆಗುತ್ತಾನೆ ಎಂದು ಗಾಯತ್ರೀಪಠನದ ಪ್ರಶಂಸೆಯಿದೆ.



# ಗಾಯತ್ರಿಯ ಮಹತ್ತ್ವ

:o:

ಜಗತ್ಪ್ರಸಿದ್ಧವಾದುದೂ ಮಾನವನ ಆಧ್ಯಾತ್ಮಿಕಧ್ಯೇಯವನ್ನು ತಿಳಿಸತಕ್ಕದ್ದೂ ಆದ **ತತ್ಸವಿತುಃ** ಎಂಬ ಮಂತ್ರವೇ **ಗಾಯತ್ರೀ**ಯೆಂದು ಪ್ರಖ್ಯಾತವಾಗಿದೆ. ಈ ಮಂತ್ರದ ಸ್ಫೂರ್ತಿಯು ಪೃಥ್ವಿಯಲ್ಲೆಲ್ಲಾ ಹರಡಿ ಜಗತ್ತಿನ ಸಕಲ ತತ್ತ್ವಜಿಜ್ಞಾಸುಗಳ ಚಿತ್ತವನ್ನೂ ಆಕರ್ಷಿಸಿದೆ. ಸಕಲರೂ ಸಹ ಇದನ್ನು ಮಾನವನ ಉದಾತ್ತಧ್ಯೇಯವನ್ನು ತಿಳಿಸುವ ಮಹಾಮಂತ್ರವೆಂದು ಕೊಂಡಾಡಿದ್ದಾರೆ.

ಇತಿಹಾಸದ ಅರುಣೋದಯದಲ್ಲಿ ಸರ್ವಜ್ಞರಾದ ಮಹರ್ಷಿಗಳು ವೇದಗಳಲ್ಲೂ ಉಪನಿಷತ್ತುಗಳಲ್ಲೂ ಉಪದೇಶಿಸಿದ ಸ್ಫೂರ್ತಿಯನ್ನು ಭಾರತವು ಎಂದೆಂದಿಗೂ ಮರೆಯುವುದಿಲ್ಲ. ವಿಶ್ರಾಂತಿಯಿಲ್ಲದೇ ತತ್ತ್ವಜ್ಞಾನದಲ್ಲೇ ನಿರತವಾದ ಅವರ ತೀಕ್ಷ್ಣವಾದ **ಚಿತ್ತವು** ಅಂಧಕಾರಾತ್ಮಕವಾದ ತಮಸ್ಸನ್ನು ಭೇದಿಸಿ ದಿವ್ಯತೇಜಸ್ಸನ್ನು ಪ್ರವೇಶಿಸುವುದರಲ್ಲಿಯೇ ಸರ್ವದಾ ನಿರತವಾಗಿದ್ದಿತು. ಕೇವಲ ವೈಯಕ್ತಿಕವಾದ ಐಹಿಕಸುಖವಾಗಲಿ ಸ್ವರ್ಗರೂಪವಾದ ಆಮುಷ್ಮಿಕ ಸುಖವಾಗಲಿ ಅವರ ಧ್ಯೇಯವಾಗಿರಲಿಲ್ಲ. **ಧಿಯೋ ಯೋ ನಃ ಪ್ರಚೋದಯಾತ್** ಎಂಬ ಮಹಾಮಂತ್ರದಲ್ಲಿ ಹೇಳಿರುವಂತೆ ಅವರ ಧ್ಯೇಯವೆಲ್ಲವೂ ಜ್ಞಾನಾರ್ಜನೆಯಲ್ಲಿಯೇ ಇರುತ್ತಿದ್ದಿತು. ಇದಕ್ಕಿಂತಲೂ ಉತ್ತಮವಾದ ಧ್ಯೇಯವು ಮಾನವನಿಗೆ ಇರಲು ಸಾಧ್ಯವಿಲ್ಲ, ಇತ್ಯಾದಿಯಾಗಿ **ಗಾಯತ್ರಿಯ** ಮಹತ್ತ್ವವನ್ನು ಪ್ರಶಂಸಿಸಿದ್ದಾರೆ.

CC-0. Jangamwadi Math Collection. Digitized by eGangotri

ಯಾವ ಪುರುಷಾರ್ಥದ ಅನುಸಂಧಾನದಿಂದ ಜೀವನದ ಸಕಲಕರ್ಮಗಳೂ ಇದು ಸಣ್ಣದು, ಇದು ದೊಡ್ಡದು, ಇದು ಕೀಳು, ಇದು ಮೇಲು ಎಂಬ ಭೇದವಿಲ್ಲದೇ. ಉತ್ತಮವಾದ ಪುರುಷಾರ್ಥಗಳಾಗುವುವೋ ಆ ಪುರುಷಾರ್ಥದ ಅನುಸಂಧಾನವೇ **ಗಾಯತ್ರೀ** ಮಂತ್ರದಿಂದ ಉಪದಿಷ್ಟವಾಗಿರುವ ವಿಷಯ. ಆತ್ಮ, ಪರಮಾತ್ಮ, ಬ್ರಹ್ಮ ಇತ್ಯಾದಿ ನಾನಾವಿಧವಾಗಿ ಕರೆದಿರುವ ಪರತತ್ತ್ವದ ಅನುಸಂಧಾನದಲ್ಲಿಯೇ ಬದುಕಿನ ಪರಮಪುರುಷಾರ್ಥವೂ ಅಡಕವಾಗಿದೆ. ಈ ಸಮನ್ವಯದೃಷ್ಟಿಯ ದರ್ಶನಜ್ಯೋತಿಯಿಂದ ವ್ಯಕ್ತಿತ್ವವು ದೀಪ್ತವಾಗಿ ಪರಿಪೂರ್ಣತೆಯನ್ನು ಪಡೆಯಬೇಕಾದರೆ ಧ್ಯಾನದೇಕಾಂತದಲ್ಲಿ ಭಗವಂತನ ದಿವ್ಯಸಾನ್ನಿಧ್ಯವು ಲಭಿಸಬೇಕು. ಈ ಧ್ಯಾನದ ಸಮಯದಲ್ಲಿ ವ್ಯಕ್ತಿಯ ಶುದ್ಧಬುದ್ಧಿಯು ಲೋಕಾಲೋಕ ಚೇತನವನ್ನು ಸ್ಪರ್ಶಿಸಿ ಆ ದಿವ್ಯ ಚೈತನ್ಯದ ತೇಜಸ್ಸು ತನ್ನನ್ನು ತುಂಬಲಿ ಎಂದು ಪ್ರಾರ್ಥಿಸಬೇಕು.

**ತೇಜೋಽಸಿ ತೇಜೋ ಮಯಿ ಧೇಹಿ .... .... ಓಜೋಽಸಿ ಓಜೋ ಮಯಿ ಧೇಹಿ ||**

ತೇಜಸ್ಸಿಗೆ ತೇಜಸ್ಸಾದ ನೀನು ನನ್ನನ್ನು ತೇಜಸ್ಸಿನಿಂದ ತುಂಬು. ಶಕ್ತಿಗೆ ಶಕ್ತಿಯಾದ ನೀನು ನನ್ನನ್ನು ಬಲದಿಂದ ತುಂಬು. ಎಲ್ಲ ಓಜಸ್ಸಿಗೂ ನೀನು ಓಜಸ್ಸು. ನನ್ನಲ್ಲೂ ಓಜಸ್ಸಾಗಿ ಆವಿರ್ಭವಿಸು. ಸರ್ವಸಹನೆಗೂ ನೀನು ಶಾಂತಿ. ಆ ಸಹನಾಶಾಂತಿಯಾಗಿ ನನ್ನ ಆತ್ಮದಲ್ಲಿ ಸಂಭವಿಸು. ಇತ್ಯಾದಿಯಾಗಿ ಧ್ಯಾನಸಮಯದಲ್ಲಿ ಬ್ರಹ್ಮಸ್ಪರ್ಶಿಯಾಗಿ ಪ್ರಜ್ವಲಿಸುವ ಆಕಾಂಕ್ಷೆಯನ್ನು ತತ್ತ್ವಜಿಜ್ಞಾಸುವೂ, ಆತ್ಮಶಾಂತಿಯನ್ನೂ ತದ್ದ್ವಾರಾ ವಿಶ್ವಶಾಂತಿಯನ್ನು (ಓಂ ದ್ಯೌಃ ಶಾಂತಿರಂತರಿಕ್ಷಂ ಶಾಂತಿಃ ........ ) ಅಪೇಕ್ಷಿಸುವ ಚೇತನವೂ, **ಭರ್ಗೋ ದೇವಸ್ಯ ಧೀಮಹಿ, ಧಿಯೋ ಯೋ ನಃ ಪ್ರಚೋದಯಾತ್** ಎಂಬ ಮಂತ್ರಾತ್ಮಕವಾದ ಧ್ಯಾನದಿಂದ ಪ್ರಾರ್ಥಿಸುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ವಿಶ್ವಸಾಮರಸ್ಯವನ್ನು ಪ್ರತಿಪಾದಿಸುವ ತತ್ತ್ವವನ್ನು ಸ್ತುತಿಸಿ ಆ ತತ್ತ್ವಜ್ಞಾನಕ್ಕೆ ಸಾಧನವಾಗಿರುವುದೇ ಗಾಯತ್ರಿಯ ಸ್ವರೂಪ. **ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ** (ಋ. ಸಂ. ೧-೧೧೫-೧) **ಯೋಽಸೌ ತಪನ್ನುದೇತಿ । ಸ ಸರ್ವೇಷಾಂ ಭೂತಾನಾಂ ಪ್ರಾಣಾನಾದಾಯೋದೇತಿ** (ತೈ. ಆ. ೧-೧೪-೧) ; **ಅಸಾವಾದಿತ್ಯೋ ಬ್ರಹ್ಮ** (ತೈ. ಆ. ೨-೨-೧). ಇತ್ಯಾದಿಯಾಗಿ ಯಾವ ಆದಿತ್ಯತತ್ತ್ವವೂ ಆದಿತ್ಯಜ್ಯೋತಿಯೂ ಪ್ರಶಂಸಿತವಾಗಿದೆಯೋ ಅದೇ ಜ್ಯೋತಿಯು ಪ್ರಕೃತವಾದ ಮಂತ್ರದಲ್ಲಿಯೂ ಸ್ತುತವಾಗಿದೆ. ವಿಶ್ವಾತ್ಮನಾದ ಸವಿತೃವನ್ನು ಸ್ತುತಿಸಿ ಆ ಸವಿತೃವಿನ ಸಾಕ್ಷಾತ್ಕಾರಕ್ಕೆ ಧ್ಯಾನರೂಪದಲ್ಲಿ ಸಾಧನವಾಗಿರುವುದೇ ಈ ಗಾಯತ್ರೀಮಹಾಮಂತ್ರವು. ಇದನ್ನೇ ಪರಬ್ರಹ್ಮತತ್ತ್ವವೆಂದೂ ಉಪನಿಷತ್ತುಗಳಲ್ಲಿ ಸ್ತುತಿಸಿದೆ. ವಿಶ್ವಾತ್ಮನಾದ ಸವಿತೃವೇ ಪರಬ್ರಹ್ಮತತ್ತ್ವ ಪ್ರತಿಪಾದಕವಾದ ದೇವತೆಯೆಂಬುದು ಹೇಗೆ ? ಸವಿತೃವಿನ ಭರ್ಗವೇ ಪರಮಪುರುಷನ ಪರಂಜ್ಯೋತೀಸ್ವರೂಪವೇ ? ಈ ಪರಂಜ್ಯೋತಿಯನ್ನರಿಯಲು ಗಾಯತ್ರೀರೂಪವಾದ ಧ್ಯಾನವೇ ಮುಖ್ಯಸಾಧನವೆಂಬುದು ಹೇಗೆ? ಮತ್ತು ಕೇವಲ ಛಂದೋರೂಪಿಯಾದ ಗಾಯತ್ರಿಯನ್ನೇ ಪರಬ್ರಹ್ಮಾಖ್ಯವಾದ ಪರತತ್ತ್ವವೆಂದು ಕರೆಯುವುದರಲ್ಲಿ ಔಚಿತ್ಯವಿದೆಯೇ ? ಎಂಬಿವೇ ಮುಂತಾದ ಪ್ರಶ್ನೆಗಳು ಸಹಜವಾಗಿರುವುದರಿಂದ ಈ ವಿಷಯಗಳನ್ನು ಸದ್ಯಃ ಪರಿಶೀಲಿಸಬೇಕಾದುದು ಅವಶ್ಯಕವಾಗಿರುತ್ತದೆ.

ಲೋಕಕ್ಕೆಲ್ಲಾ ಪೂಜ್ಯವಾದ ಸವಿತೃವಿನ ಭರ್ಗವನ್ನು ಧ್ಯಾನರೂಪದಲ್ಲಿ ಅನುಸಂಧಾನಮಾಡಿ ಉಪಾಸಿಸುವುದೇ ಮಂತ್ರದ ಉದ್ದಿಶ್ಯ. ಯಾವ ತತ್ತ್ವದಿಂದ ಸಕಲ ಜಗತ್ತೂ ಉತ್ಪನ್ನವಾಗುವುದೋ, ಯಾವುದರ ಶಕ್ತಿಯಿಂದ ಉತ್ಪನ್ನವಾದ ಸಕಲ ಭೂತಗಳೂ ಜೀವಿಸುವುವೋ ಮತ್ತು ಪುನಃ ಲಯಕಾಲದಲ್ಲಿ ಯಾವ ತತ್ತ್ವವನ್ನೇ



CC-0. Jangamwadi Math Collection. Digitized by eGangotri

ಜಗತ್ತೆಲ್ಲವೂ ಸೇರಿಕೊಳ್ಳುವುದೋ ಅಂತಹ ಬ್ರಹ್ಮವು ಸವಿತೃಶಬ್ದವಾಚ್ಯವಾಗಿದೆಯೆಂದು ಮೇಲಿನ ವಿವರಣೆಗಳಲ್ಲಿ ತಿಳಿಸಿದೆ. ಇಂತಹ ಬ್ರಹ್ಮತತ್ತ್ವವನ್ನರಿಯಲು ಗಾಯತ್ರ್ಯುಪಾಸನೆಯೇ ಮುಖ್ಯಸಾಧನವೆಂದೂ ಸ್ಪಷ್ಟಪಡಿಸಿದೆ. ಈ ವಿಧವಾದ ಉಪಾಸನೆಯೇ ತತ್ಸವಿತುಃ ಎಂಬ ಪ್ರಕೃತ ಮಂತ್ರದ ಸ್ವರೂಪವಾಗಿದೆ. ಈ ಮಂತ್ರಕ್ಕೆ ಸಾಯಣರ ಭಾಷ್ಯವನ್ನು ಮೇಲೆ ಉದ್ಧರಿಸಿ ಅದರ ತಾತ್ಪರ್ಯವನ್ನು ತಿಳಿಸಿದೆ. ಪ್ರಕೃತದಲ್ಲಿ ಈ ಮಂತ್ರದ ಅವಯವಗಳಂತಿರುವ ಪದಗಳನ್ನು ಶ್ರುತಿವಾಕ್ಯಗಳ ಆಧಾರದ ಮೇಲೆ ವಿವರಿಸಿ ತಿಳಿಸಿ, ಈ ಮಂತ್ರದ ಅನುಸಂಧಾನಫಲವೇನೆಂಬುದನ್ನೂ ತಿಳಿಸಲಾಗುತ್ತದೆ. ವಿದ್ಯಾರಣ್ಯಸ್ವಾಮಿಗಳು ಗಾಯತ್ರೀಮಂತ್ರಾರ್ಥವನ್ನು ಶ್ಲೋಕರೂಪದಲ್ಲಿ ಈ ರೀತಿ ತಿಸಿದ್ದಾರೆ—

ತದಿತ್ಯವಾಙ್ಮನೋಗಮ್ಯಂ ಧ್ಯೇಯಂ ಯತ್ಸೂರ್ಯಮಂಡಲೇ ।<br>
ಸವಿತುಃ ಸಕಲೋತ್ಪತ್ತಿಸ್ಥಿತಿಸಂಹಾರಕಾರಿಣಃ ॥<br>
ವರೇಣ್ಯಮಾಶ್ರಯಣೀಯಂ ಯದಾಧಾರಮಿದಂ ಜಗತ್ ।<br>
ಭರ್ಗಃ ಸ್ವಸಾಕ್ಷಾತ್ಕಾರೇಣಾವಿದ್ಯಾತತ್ಕಾರ್ಯದಾಹಕಂ ॥<br>
ದೇವಸ್ಯ ದ್ಯೋತಮಾನಸ್ಯ ಹ್ಯಾನಂದಾತ್ಕ್ರೀಡತೋಽಪಿ ವಾ ।<br>
ಧೀಮಹ್ಯಹಂ ಸ ಏವೇತಿ ತೇನೈವಾಭೇದಸಿದ್ಧಯೇ ॥<br>
ಧಿಯೋಽಂತಃಕರಣವೃತ್ತೀಶ್ಚ ಪ್ರತ್ಯಕ್ಪ್ರವಣಚಾರಿಣೀಃ ।<br>
ಯ ಇತ್ಯಲಿಂಗಧರ್ಮಂ ಯತ್ಸತ್ಯಜ್ಞಾನಾದಿಲಕ್ಷಣಂ ॥<br>
ನೋಽಸ್ಮಾಕಂ ಬಹುಧಾಭ್ಯಸ್ತಭಿನ್ನಭೇದದೃಶಾಂ ತಥಾ ।<br>
ಪ್ರಚೋದಯಾತ್ಪ್ರೇರಯತು ಪ್ರಾರ್ಥನೇಯಂ ವಿಚಾರ್ಯತೇ ॥

ವಾಕ್ಕಿಗೂ ಮನಸ್ಸಿಗೂ ಗೋಚರವಾಗದೇ ಇರತಕ್ಕದ್ದೂ (ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ) ಮತ್ತು ಸೂರ್ಯಮಂಡಲದಲ್ಲಿರತಕ್ಕದ್ದೂ ಆದ ಪರತತ್ತ್ವವು ತತ್‌ಶಬ್ದವಾಚ್ಯವಾಗಿದೆ. ಸಕಲ ಲೋಕದ ಉತ್ಪತ್ತಿಗೂ, ಸ್ಥಿತಿಗೂ, ಸಂಹಾರಕ್ಕೂ ಮೂಲಕಾರಣವಾಗಿರುವುದರಿಂದಲೇ ಈ ಬ್ರಹ್ಮವು ಸವಿತೃಶಬ್ದವಾಚ್ಯವಾಗಿದೆ. ಸಕಲಜಗತ್ತಿಗೂ ಆಧಾರವಾದ ಈ ಬ್ರಹ್ಮವೇ ಅತ್ಯಂತಪೂಜ್ಯವಾದ ಮತ್ತು ಆದೃತವಾದ ಆಶ್ರಯಸ್ಥಾನವು. ಸ್ವಯಂ ಪ್ರಕಾಶಿತವೂ ಲೋಕಪ್ರಕಾಶಕವೂ ಆದ ಈ ದಿವ್ಯಜ್ಯೋತಿಯು ಜಗತ್ತಿನ ಅಜ್ಞಾನವನ್ನೂ ತತ್ಕಾರ್ಯವಾದ ದುಃಖಾದಿಗಳನ್ನೂ ದಹಿಸಿ ನಾಶಪಡಿಸುವುದರಿಂದ ಇದಕ್ಕೆ ಭರ್ಗವೆಂದು ನಾಮಧೇಯವು. ಪ್ರಕಾಶಮಾನನೂ, ಆನಂದರೂಪದ ಕ್ರೀಡೆಯಲ್ಲಿ ತತ್ಪರನೂ ಆಗಿರುವುದರಿಂದಲೇ ಸವಿತೃವಿಗೆ ದೇವಸ್ಯ ಎಂಬ ವಿಶೇಷಣವಿದೆ. ಸವಿತೃರೂಪನಾದ ಈ ಬ್ರಹ್ಮನೇ ನಾನು ಎಂಬ ಅಭೇದರೂಪದ ಅನುಸಂಧಾನವೇ ಧೀಮಹಿಶಬ್ದದ ಅರ್ಥವು. ಜೀವನ ಅಂತಃಕರಣವೃತ್ತಿಗಳೇ ಧೀಶಬ್ದವಾಚ್ಯಗಳು. ಸತ್ಯಜ್ಞಾನಾದಿಲಕ್ಷಣವುಳ್ಳದ್ದೂ ಲಿಂಗಾತೀತವಾದ ಧರ್ಮವುಳ್ಳದ್ದೂ ಆದ ತತ್ತ್ವವು ಯಃ ಎಂದು ನಿರ್ದಿಷ್ಟವಾಗಿದೆ. ಬ್ರಹ್ಮನಿಗಿಂತಲೂ ಭಿನ್ನವೆಂಬ ಪ್ರತೀತಿಯಿಂದ ಮೊದಲಿನಿಂದಲೂ ಯಾವುದರ ವಿಷಯದಲ್ಲಿ ಭೇದಭಾವವವು ಬೆಳೆದಿದೆಯೋ ಆ ಜೀವರನ್ನು ನಃ ಎಂಬ ಪದವು ನಿರ್ದೇಶಿಸುತ್ತದೆ. ಭೇದಪ್ರತೀತಿಯಿಂದ ಭಿನ್ನಾತ್ಮಕರಂತೆ ಇರತಕ್ಕ ನಮ್ಮನ್ನು ಬ್ರಹ್ಮದೊಡನೆ ಅಭೇದಸಾಕ್ಷಾತ್ಕಾರವಾಗಲು ಸಾಧನವಾದ ಧ್ಯಾನರೂಪವಾದ ಅನುಸಂಧಾನಮಾಡಲು ಪ್ರೇರಿಸಲಿ ಎಂಬುದೇ ಪ್ರಾರ್ಥನೆ. ವಿದ್ಯಾರಣ್ಯರು ಹೇಳಿರುವ ತಾತ್ಪರ್ಯಕ್ಕೆ ಶಾಸ್ತ್ರಾಧಾರವೇನು ಎಂಬುದನ್ನು ಪರಿಶೀಲಿಸಬೇಕು

CC-0. Jangamwadi Math Collection. Digitized by eGangotri

## ತತ್.

ಪ್ರಕೃತವಾದ ಮಂತ್ರದಲ್ಲಿ ತತ್ ಎಂಬ ಪದಕ್ಕೆ ಎರಡು ವಿಧವಾದ ಅನ್ವಯವನ್ನು ತೋರಿಸಿದೆ. ಈ ಪದವು **ಸವಿತುಃ** ಎಂಬುದಕ್ಕೆ ವಿಶೇಷಣವೆಂದು ಕೆಲವರೂ, **ಭರ್ಗಃ** ಎಂಬುದಕ್ಕೆ ವಿಶೇಷಣವೆಂದು ಇನ್ನು ಕೆಲವರೂ ಅಭಿಪ್ರಾಯಪಟ್ಟಿದ್ದಾರೆ. ವಿವರಣೆಯಲ್ಲಿ ಈ ರೀತಿ ಎರಡು ಮತಗಳಿದ್ದರೂ ಸಹ ಒಟ್ಟಿನಲ್ಲಿ ಎರಡರ ತಾತ್ಪರ್ಯವೂ ಒಂದೇ ಆಗುತ್ತದೆ. ಹೇಗೆಂದರೆ, ಮೊದಲನೆಯದಾಗಿ, **ತತ್ ಇತಿ ಷಷ್ಠ್ಯಾ ಪರಿಣಮ್ಯತೇ ತಸ್ಯೇತ್ಯರ್ಥಃ।** ತಚ್ಛಬ್ದದ ಷಷ್ಠ್ಯಂತವಾದ ತಸ್ಯ ಎಂಬರ್ಥವು ತಚ್ಛಬ್ದಕ್ಕೆ ಪ್ರಾಪ್ತವಾಗುತ್ತದೆ. **ತಸ್ಯ ದೇವಸ್ಯ** ಎಂದರ್ಥ. ಅಥವಾ ತಸ್ಯ ಎಂಬುದಕ್ಕೇ ಬ್ರಹ್ಮಣಃ ಎಂದೂ ಆಗುತ್ತದೆ. **ತಚ್ಛಬ್ದವೇ** ಬ್ರಹ್ಮವಾಚಿಯಾಗಿದೆ.

**ಓಂ ತತ್ಸದಿತಿ ನಿರ್ದೇಶಃ ತ್ರಿವಿಧೋ ಬ್ರಹ್ಮಣಃ ಸ್ಮೃತಃ ।**

(ಭ. ಗೀ. ೧೭-೨೩)

ಎಂಬಲ್ಲಿ ತತ್ ಶಬ್ದವನ್ನು ವಿವರಿಸುವಾಗ ಭಾಷ್ಯಕಾರರುಗಳು ಇದನ್ನೇ ಸ್ಪಷ್ಟಪಡಿಸಿದ್ದಾರೆ. **ತಚ್ಛಬ್ದೋ ಹಿ ಬ್ರಹ್ಮವಾಚೀ ಪ್ರಸಿದ್ಧಃ।** ತಚ್ಛಬ್ದವು ಬ್ರಹ್ಮವಾಚಿಯೆಂದು ಪ್ರಸಿದ್ಧವಾಗಿಯೇ ಇದೆ ಎಂದು ರಾಮಾನುಜಾಚಾರ್ಯರೂ **ತತ್ ಇತಿ ಬ್ರಹ್ಮಾಭಿಧಾನಂ ಉಚ್ಚಾರ್ಯ।** ಬ್ರಹ್ಮಪರನಾಮವಾದ **ತತ್** ಎಂದು ಉಚ್ಚರಿಸಿ, ಎಂದು ಶಂಕರಾಚಾರ್ಯರೂ **ತಚ್ಛಬ್ದದ** ಅರ್ಥವನ್ನು ಹೇಳಿದ್ದಾರೆ ಉಪನಿಷತ್ತುಗಳಲ್ಲಿ **ತಚ್ಛಬ್ದವನ್ನು** ಅನೇಕಕಡೆಗಳಲ್ಲಿ **ಬ್ರಹ್ಮಪರ್ಯಾಯ**ವಾಗಿಯೇ ಉಪಯೋಗಿಸಿದೆ. ಉದಾಹರಣೆಗೆ—**ತತ್ತ್ವಮಸಿ ಶ್ವೇತಕೇತೋ** ಎಂಬ ಪ್ರಯೋಗವು ಜಗತ್ಪ್ರಸಿದ್ಧವಾಗಿದೆ. ತತ್ ಎಂದರೆ ಬ್ರಹ್ಮ, ತ್ವಂ ಎಂದರೆ ಜೀವಾತ್ಮ. **ತತ್ತ್ವಮಸಿ** ಎಂಬುದರಿಂದ ಜೀವಬ್ರಹ್ಮರಿಗೆ ಅಭೇದವನ್ನು ಹೇಳಿದಂತೆ ಎಂಬುದು ಸ್ಪಷ್ಟವಾಗಿದೆ. **ತತ್ಪದಂ ಹಿ ಸರ್ವಜ್ಞಂ ಸತ್ಯಸಂಕಲ್ಪಂ ಜಗತ್ಕಾರಣಂ ಬ್ರಹ್ಮ ಪರಾಮೃಶತಿ। ತದೈಕ್ಷತ ಬಹು ಸ್ಯಾಂ। ಇತ್ಯಾದಿಷು ತಸ್ಯೈವ ಪ್ರಕೃತಿತ್ವಾತ್।** ಸರ್ವಜ್ಞನೂ ಸತ್ಯಸಂಕಲ್ಪನೂ ಜಗತ್ಕಾರಣನೂ ಆದ ಬ್ರಹ್ಮನನ್ನೇ **ತತ್ಪದವು** ನಿರ್ದೇಶಿಸುತ್ತದೆ. **ತದೈಕ್ಷತ** ಇತ್ಯಾದಿ ವಾಕ್ಯಗಳೂ ಇದನ್ನೇ ಬೋಧಿಸುತ್ತವೆ ಇತ್ಯಾದಿಯಾಗಿ ಸರ್ವತ್ರ ವಿವರಿಸಲ್ಪಟ್ಟಿದೆ. ಛಾಂದೋಗ್ಯದಲ್ಲಿ, **ತಜ್ಜಲಾನಿತಿ** (ಛಾ. ಉ. ೩-೧೪-೧) ಎಂಬ ಪ್ರಕರಣಕ್ಕೆ **ತತ್ಕ್ರತುಮಯ** ಪ್ರಕರಣವೆಂದೇ ಪ್ರಸಿದ್ಧಿಯಿದೆ. **ಓಂ ತತ್ಬ್ರಹ್ಮ। ಓಂ ತದ್ವಾಯುಃ। ಓಂ ತದಾತ್ಮಾ** ಇತ್ಯಾದಿ ವಾಕ್ಯಗಳೂ ಇದನ್ನೇ ಪ್ರತಿಪಾದಿಸುತ್ತವೆ. ಆದುದರಿಂದ ಪ್ರಕೃತವಾದ ಮಂತ್ರದಲ್ಲಿ ತತ್‌ಶಬ್ದವು ಬ್ರಹ್ಮಪರ್ಯಾಯಪದವಾದುದರಿಂದ, ಪರಬ್ರಹ್ಮರೂಪಿಯಾದ ಸವಿತೃವಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ. **ತಸ್ಯ ಸವಿತುಃ** ಎಂದರ್ಥಮಾಡಬೇಕೆಂದು ಹೇಳಿರುವುದು ಸರಿಯೆಂದು ಹೇಳುವುದು ಒಂದು ಮತ.

ಎರಡನೆಯದಾಗಿ, ತತ್ ಶಬ್ದವನ್ನು ಭರ್ಗಃ ಎಂಬುದಕ್ಕೆ ವಿಶೇಷಣವೆಂದು ಹೇಳುವುದು ಇನ್ನೊಂದು ಮತ. ಭಟ್ಟಭಾಸ್ಕರರು ತೈತ್ತಿರೀಯಾರಣ್ಯಕದಲ್ಲಿ (ತೈ. ಆ. ೧-೧೧) ಈ ಮಂತ್ರಕ್ಕೆ ತಾತ್ಪರ್ಯವನ್ನು ವಿವರಿಸುವಾಗ **ತತ್ಸವಿತುಃ ಇತಿ। ವ್ಯಾಖ್ಯಾತಂ ಸಂ ಪಶ್ಯಾಮಿ ಇತ್ಯತ್ರ।** ತೈತ್ತಿರೀಯಸಂಹಿತೆಯಲ್ಲಿ **ಸಂ ಪಶ್ಯಾಮಿ** ಎಂಬ ಪ್ರಕರಣದಲ್ಲಿ ಈ ಮಂತ್ರಕ್ಕೆ ವ್ಯಾಖ್ಯಾನವನ್ನು ಹೇಳಿದೆಯೆಂದು ತಿಳಿಸಿ ಪುನಃ ಅದನ್ನೇ ವಿವರಿಸುತ್ತಾರೆ. ಆದರೆ, ಆರಣ್ಯಕದಲ್ಲಿ ಹೇಳಿರುವ ವಿವರಣೆಗೂ ಸಂಹಿತಾ ಪ್ರಕರಣದಲ್ಲಿ ಹೇಳಿರುವ ವಿವರಣೆಗೂ ವ್ಯತ್ಯಾಸವಿದೆ. ಆರಣ್ಯಕದಲ್ಲಿ **ಸವಿತುಃ ದೇವಸ್ಯ ಪ್ರೇರಯಿತುಃ ತತ್ ತಾದೃಶಂ ವರೇಣ್ಯಂ ಭರ್ಗಃ।** ಜಗತ್ಪ್ರೇರಕನಾದ ಸವಿತೃ

CC-0. Jangamwadi Math Collection. Digitized by eGangotri

ದೇವನ ಜಗತ್ಪ್ರಸಿದ್ಧವಾದುದೂ, ಪೂಜ್ಯವಾದುದೂ ಆದ ತೇಜಸ್ಸು ಎಂದು ವಿವರಿಸಿ ತತ್ ಶಬ್ದವು ಭರ್ಗಶಬ್ದಕ್ಕೆ ವಿಶೇಷಣವೆಂದು ತಿಳಿಸಿದ್ದಾರೆ. ಮತ್ತು ಇದನ್ನೇ ತೈತ್ತಿರೀಯ ಸಂಹಿತಾಪ್ರಕರಣದಲ್ಲಿಯೂ ವಿವರಿಸಿದೆಯೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ, ಅಲ್ಲಿ, **ಆಹವನೀಯಮುಪತಿಷ್ಠತೇ—ತತ್ಸವಿತುರಿತಿ ಗಾಯತ್ರ್ಯಾ । ತತ್ತ್ರಸ್ಯ ಸುಪಾಂ ಸುಲುಕ್ ಇತಿ ಷಷ್ಠ್ಯಾ ಲುಕ್ । ತಸ್ಯ ಸವಿತುಃ ದೇವಸ್ಯ ಸುಪಾಂ ಸುಲುಕ್** ಎಂಬ ಸೂತ್ರವು **ತತ್** ಶಬ್ದದಲ್ಲಿ ಷಷ್ಠೀಲುಪ್ತವಾಗಿದೆಯೆಂದು ತೋರಿಸುತ್ತದೆ. **ತಸ್ಯ ಸವಿತುಃ** ಎಂದರ್ಥಮಾಡಬೇಕೆಂದು ಸ್ಪಷ್ಟಪಡಿಸಿದ್ದಾರೆ. (ತೈ. ಸಂ. ಭಾ. ೧-೫-೬) ಅಲ್ಲದೇ, **ಸವಿತುಃ ದೇವಸ್ಯ ತದನ್ನಾದಿ ಧೀಮಹಿ** ಎಂದು **ತಚ್ಛಬ್ದವು** ಅನ್ನಾದ್ಯರ್ಥವನ್ನು ಕೊಡುವ **ಭರ್ಗ** ಶಬ್ದಕ್ಕೂ ವಿಶೇಷಣವಾಗಿರಬಹುದೆಂದೂ ತಿಳಿಸಿದ್ದಾರೆ. ಈ ರೀತಿ ವಿವರಣೆಯಲ್ಲಿ ವ್ಯತ್ಯಾಸವಿದ್ದರೂ ಸಹ, ತತ್ತ್ವವಿಮರ್ಶನದ ದೃಷ್ಟಿಯಿಂದ ನೋಡಿದರೆ ಎರಡು ವಿವರಣೆಗೂ ವಿರೋಧವೇನೂ ಇಲ್ಲವೆಂದು ಹೇಳಬಹುದು.

**ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮವಿದೋ ವಿದುಃ ॥**

(ಮು. ಉ. ೨-೨-೯)

ಪರಾತ್ಮಕವಾದುದೂ, ಹಿರಣ್ಮಯಾತ್ಮಕವಾದುದೂ ಆದ ಹಿರಣ್ಮಯಕೋಶದಲ್ಲಿ ರಾಗರಹಿತವೂ, ನಿಷ್ಕಲವೂ (ಭೇದರಹಿತವೂ) ಆದ ಬ್ರಹ್ಮವಿದೆ. ಇದು ಅತ್ಯಂತ ಪ್ರಭಾಯುತವಾದ ಜ್ಯೋತಿಗಳಿಗಿಂತಲೂ ಹೆಚ್ಚು ಪ್ರಕಾಶಮಾನವಾದ ಜ್ಯೋತೀರೂಪವಾಗಿದೆ. ಆತ್ಮವಿತ್ತುಗಳು ಮಾತ್ರ ಇದನ್ನು ಅರಿಯಬಲ್ಲರು,

**ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
**ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥**

(ಮು. ಉ. ೨-೨-೧೦)

ಆ ಬ್ರಹ್ಮರೂಪವಾದ ದಿವ್ಯಜ್ಯೋತಿಯ ಮುಂದೆ ಸೂರ್ಯನು ಪ್ರಕಾಶಿಸಲಾರನು. ಚಂದ್ರನ ಪ್ರಕಾಶವಾಗಲಿ ನಕ್ಷತ್ರಗಳ ಪ್ರಕಾಶವಾಗಲಿ ಆದರ ಮುಂದೆ ಬೆಳಗಲಾರವು. ಆದರ ಸ್ವಯಂಪ್ರಕಾಶದಿಂದಲೇ ಪ್ರಭಾಯುತವಾದ ಸಕಲ ಜ್ಯೋತಿಗಳೂ ಬೆಳಗುವುವು. ಜಗತ್ತಿನಲ್ಲಿ ಸಮಸ್ತವೂ ಆ ಜ್ಯೋತಿಯಿಂದಲೇ ಪ್ರಕಾಶಮಾನವಾಗುತ್ತದೆ ಇತ್ಯಾದಿ ವಾಕ್ಯಗಳಲ್ಲಿ ಬ್ರಹ್ಮನಿಗೂ ಜ್ಯೋತಿಗೂ ತಾದಾತ್ಮ್ಯವನ್ನು ಹೇಳಿ ಒಂದೇ ತತ್ತ್ವವು ಎರಡು ಹೆಸರುಗಳಿಂದ ಕರೆಯಲ್ಪಡುತ್ತದೆಂದು ತೋರಿಸಿರುವುದರಿಂದ **ತಚ್ಛಬ್ದವು** ಸವಿತೃವಿಗೆ ವಿಶೇಷಣವಾದ **ತಸ್ಯ ಜಗತ್ಪ್ರೇರಕಸ್ಯ ಸವಿತುಃ** ಎಂದೂ **ಭರ್ಗ** ಶಬ್ದಕ್ಕೆ ವಿಶೇಷಣವಾದರೆ **ಬ್ರಹ್ಮರೂಪಸ್ಯ ಸವಿತುಃ ಜಗತ್ಪ್ರಸಿದ್ಧಂ ಜ್ಯೋತಿಃ** ಎಂದೂ ಅರ್ಥವಾಗುತ್ತದೆ.

## ಸವಿತುಃ

**ಸವಿತೃ** ಶಬ್ದದ ನಿರ್ವಚನವನ್ನೂ ಪರಬ್ರಹ್ಮನೇ **ಸವಿತೃ**ಶಬ್ದವಾಚ್ಯನೆಂದೂ ಮೇಲೆ ತಿಳಿಸಿದೆ. **ಸೂತೇ ಸಕಲಜನನಿರ್ವೃತಿಹೇತುಂ ವೃಷ್ಟಿಂ ।** ಸಕಲಲೋಕಕ್ಕೂ ತೃಪ್ತಿಕಾರಕವಾದ ವೃಷ್ಟಿಯನ್ನು ಉತ್ಪನ್ನಮಾಡುವುದರಿಂದ ಆದಿತ್ಯನಿಗೆ ಸವಿತೃವೆಂಬ ಹೆಸರು ಎಂಬುದು ಒಂದು ವಿಧವಾದ ನಿರ್ವಚನ. **ಸೌತಿ ಸಕಲಶ್ರೇಯಾಂಸಿ**

CC-0. Jangamwadi Math Collection. Digitized by eGangotri

ಧಾತ್ಯಾಣಾಂ ಸವಿತಾ । ಉಪಾಸಕರಿಗೆ ಸಕಲಶ್ರೇಯಸ್ಸುಗಳನ್ನೂ ಕೊಡುವುದರಿಂದ ಈ ಹೆಸರಿನಿಂದ ಕರೆಯಲ್ಪಡುತ್ತಾನೆ. **ಉದ್ಯಂತಮಸ್ತಂಯನ್ತಮಾದಿತ್ಯಮಭಿಧ್ಯಾಯನ್ಕುರ್ವನ್ಬ್ರಾಹ್ಮಣೋ ವಿದ್ವಾನ್ ಸಕಲಂ ಭದ್ರಮಶ್ನುತೇ** । ಉದಯಿಸುವ ಮತ್ತು ಅಸ್ತಂಗತನಾಗುವ ಆದಿತ್ಯನ ಅನುಸಂಧಾನದಿಂದ ಲೋಕಕ್ಕೆಲ್ಲಾ ಕಲ್ಯಾಣವುಂಟಾಗುತ್ತದೆ. ಇತ್ಯಾದಿ ಶ್ರುತಿವಾಕ್ಯಗಳು ಮೇಲಿನ ನಿರ್ವಚನವನ್ನು ಸಮರ್ಥಿಸುತ್ತವೆ.

**ಸವಿತಾ ಸರ್ವಭೂತಾನಾಂ ಸರ್ವಭಾವಾನ್ ಪ್ರಸೂಯತೇ ।**
**ಸವನಾತ್ ಪ್ರೇರಣಾಚ್ಚೈವ ಸವಿತಾ ತೇನ ಚೋಚ್ಯತೇ ॥**

**(ಯೋಗಿ ಯಾಜ್ಞವಲ್ಕ್ಯಃ)**

ಸಕಲ ಜಗತ್ತಿಗೂ ಪ್ರಸವಕಾರಣನಾದುದರಿಂದಲೂ ಜಗದ್ವ್ಯವಹಾರಗಳಿಗೆಲ್ಲಾ ಪ್ರೇರಕನಾದುದರಿಂದಲೂ ಸಹ ಸವಿತೃವೆಂಬ ಹೆಸರು, ಎಂಬ ನಿರ್ವಚನವು ಹಿಂದೆ ಉದ್ಧರಿಸಿರುವ ಸಂಹಿತಾವಾಕ್ಯಗಳಲ್ಲಿರುವಂತೆಯೇ ಇತರ ಉಪನಿಷದಾದಿಗಳಲ್ಲಿಯೂ ಇದೆ. ಅದೇ ವಿವರಣೆಯನ್ನು ಉದಾಹೃತವಾಗಿರುವ ಈ ಶ್ಲೋಕವೂ ತಿಳಿಸುತ್ತದೆ. ಅಲ್ಲದೇ, ಋಕ್ಸಂಹಿತೆಯಲ್ಲಿ ಸವಿತೃವಿನ ಪ್ರಶಂಸೆಯು ಇಂತಹ ನಿರ್ವಚನಪೂರ್ವಕವಾಗಿಯೇ ಇರುತ್ತವೆ. ಮತ್ತು ಅದೇ ಪ್ರಶಂಸೆಗಳು ಪ್ರಕೃತವಾದ ಮಂತ್ರದ ಅರ್ಥವನ್ನು ವಿವರಿಸುವುದಾಗಿಯೂ ಇವೆ.

**ವಿಶ್ವಾ ರೂಪಾಣಿ ಪ್ರತಿ ಮುಂಚತೇ ಕವಿಃ ಪ್ರಾಸಾವೀದ್ಭದ್ರಂ ದ್ವಿಪದೇ ಚತುಷ್ಪದೇ ।**
**ವಿ ನಾಕಮಖ್ಯತ್ಸವಿತಾ ವರೇಣ್ಯೋಽನು ಪ್ರಯಾಣಮುಷಸೋ ವಿ ರಾಜತಿ ॥**

**(ಋ. ಸಂ. ೫-೮೧-೨)**

ಕವಿಯಾದ ಸವಿತೃವು ಜಗತ್ತಿನ ಸಕಲರೂಪಗಳನ್ನೂ ತನ್ನಲ್ಲೇ ಧರಿಸಿದ್ದಾನೆ. ಎರಡು ಪಾದಗಳುಳ್ಳವೂ, ನಾಲ್ಕು ಪಾದಗಳುಳ್ಳವೂ ಆದ ಸಕಲ ಜಗತ್ಪ್ರಜೆಗಳಿಗೂ ಮಂಗಳವನ್ನು ಪ್ರಸವಿಸುತ್ತಾನೆ. ಸಕಲ ಚೈತನ್ಯಗಳಿಗೂ ಪ್ರೇರಕನಾಗಿದ್ದಾನೆ. ಆದುದರಿಂದಲೇ ಅತ್ಯಂತ ವರೇಣ್ಯನು. ಈ ಗುಣದಿಂದಲೇ ಜಗತ್ತನ್ನು ಪ್ರಕಾಶಗೊಳಿಸುತ್ತಾನೆ ಇತ್ಯಾದಿಯಾದ ವರ್ಣನವು ಮೇಲೆ ಉದಹರಿಸಿದ– **ತಸ್ಯ ಭಾಸಾ ಸರ್ವಮಿದಂ ವಿಭಾತಿ** ಎಂಬ ಉಪನಿಷದ್ವಾಕ್ಯಗಳಲ್ಲಿ ಬ್ರಹ್ಮನನ್ನು ಯಾವ ರೀತಿ ಪ್ರಶಂಸಿಸಿದೆಯೋ ಅದೇ ರೀತಿ ಸವಿತೃವನ್ನೂ ಪ್ರಶಂಸಿದೆ.

**ಉತೇಶಿಷೇ ಪ್ರಸವಸ್ಯ ತ್ವಮೇಕ ಇದುತ ಪೂಷಾ ಭವಸಿ ದೇವ ಯಾಮಭಿಃ ।**
**ಉತೇದಂ ವಿಶ್ವಂ ಭುವನಂ ವಿ ರಾಜಸಿ ಶ್ಯಾವಾಶ್ವಸ್ತೇ ಸವಿತಃ ಸ್ತೋಮಮಾನಶೇ ॥**

**(ಋ. ಸಂ. ೫-೮೧-೫)**

**ತತ್ಸವಿತುರ್ವೃಣೀಮಹೇ ವಯಂ ದೇವಸ್ಯ ಭೋಜನಂ ।**
**ಶ್ರೇಷ್ಠಂ ಸರ್ವಧಾತಮಂ ತುರಂ ಭಗಸ್ಯ ಧೀಮಹಿ ॥**

**(ಋ. ಸಂ. ೫-೮೨-೧)**

ಸವಿತೃವೇ ಸಕಲ ಜಗದ್ವ್ಯವಹಾರಗಳಿಗೂ ಪ್ರಭುವು. ಸಕಲ ಜಗತ್ಪಾಲಕನು. ಸಮಸ್ತ ಭೂತಜಾತಗಳನ್ನೂ ತನ್ನಲ್ಲೇ ಧರಿಸಿದ್ದಾನೆ. ಇವನೇ ಸಕಲ ಸೃಷ್ಟಿಸ್ಥಿತಿಲಯಗಳಿಗೂ ಕಾರಣನು. ಇಂತಹ ಜಗತ್ಪ್ರಭುವಾದ ಸವಿತೃವಿನ ಮಹಿಮೆಯನ್ನು ತಿಳಿಯಲಿಚ್ಛಿಸುತ್ತೇವೆ. ಇತ್ಯಾದಿಯಾಗಿ ಸವಿತೃವಿನ ಸ್ವರೂಪಪ್ರಶಂಸೆಯಿರುವುದರಿಂದ ಸವಿತೃವೇ

CC-0. Jangamwadi Math Collection. Digitized by eGangotri

ಜಗನ್ನಿಯಾಮಕನಾದ ಪರದೇವತೆಯೆಂಬುದು ವಿದಿತವಾಗುತ್ತದೆ. **ದೇವಾಯ ಸವಿತ್ರೇ ಸತ್ಯಪ್ರಸವಾಯ** (ಬೃ. ಉ. ೬-೫-೧೯) ಇತ್ಯಾದ್ಯುಪನಿಷದ್ವಾಕ್ಯಗಳು ಈ ಸ್ವರೂಪವನ್ನು ವಿಶದವಾಗಿ ತಿಳಿಸುತ್ತವೆ.

**ಯುಂಜಾನಃ ಪ್ರಥಮಂ ಮನಸ್ತತ್ತ್ವಾಯ ಸವಿತಾ ಧಿಯಃ ।**
**ಅಗ್ನೇರ್ಜ್ಯೋತಿರ್ನಿಚಾಯ್ಯ ಪೃಥಿವ್ಯಾ ಅಧ್ಯಾಭರತ್ ॥**

(ಶ್ವೇ. ಉ ೨-೧)

ಚೈತನ್ಯಪ್ರೇರಕನಾದ ಸವಿತೃವು ಪ್ರಥಮತಃ ಸಂಯಮಚಿತ್ತನಾಗಿ ಸತ್ಯಪ್ರಸವಾತ್ಮಕವಾದ ಬುದ್ಧಿಯನ್ನು ಹೊಂದಿದನು. ನಂತರ ಅಗ್ನಿರೂಪವಾದ ಜ್ಯೋತಿಯನ್ನು ಪೃಥ್ವಿಯಲ್ಲಿ ಪ್ರಸರಿಸುವಂತೆ ಮಾಡಿದನು. ಆದುದರಿಂದಲೇ, **ಯುಂಜತೇ ಮನ ಉತ ಯುಂಜತೇ ಧಿಯೋ ವಿಪ್ರಾ ವಿಪ್ರಸ್ಯ ಬೃಹತೋ ವಿಪಶ್ಚಿತಃ ।** ಇಂತಹ ಧ್ಯಾನ ರೂಪದಲ್ಲಿಯೇ ಜಗತ್ಕಾರಣನಾದ ಸವಿತೃವಿನ ದಿವ್ಯಜ್ಯೋತಿಯನ್ನು ಸಾಕ್ಷಾತ್ಕರಿಸಲು ಸಂಯಮಚಿತ್ತದಿಂದ ಧ್ಯಾನ ರೂಪದಲ್ಲಿಯೇ ಅನುಸಂಧಾನಮಾಡತಕ್ಕದ್ದೆಂದು ಉಪಾಸನಾಕ್ರಮವು ಬೋಧಿಸಲ್ಪಟ್ಟಿದೆ. ಜಗತ್ಕಾರಣನಾದ ಈ ಸವಿತೃವಿನ ದಿವ್ಯಸ್ವರೂಪವನ್ನು ಮೇಲೆ ವಿವರಿಸಿ ತಿಳಿಸಿದೆ.

## ವರೇಣ್ಯಂ.

**ವರೇಣ್ಯಂ ಪುರುಷಾರ್ಥಕಾಮಿಭಿರ್ವರಣೀಯಂ । ಶ್ರೇಷ್ಠಂ ವಾ ।** ಸಕಲ ಪುರುಷಾರ್ಥಗಳೂ ಸವಿತೃವಿನ ಅನುಗ್ರಹದಿಂದಲೇ ಲಭಿಸುವುದರಿಂದಲೂ ಮತ್ತು ಜ್ಯೋತೀರೂಪವಾಗಿ ಅತ್ಯಂತ ಶ್ರೇಷ್ಠವಾದುದರಿಂದಲೂ ಸಹ ಜಗತ್ತಿಗೆ ಅತ್ಯಾದೃತವಾಗಿದೆ. **ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಂ । ಶಾಂತಿಸಮೃದ್ಧಮಮೃತಂ ।** ಯಾವ ಪರಬ್ರಹ್ಮನ ಆತ್ಮವೇ ಸತ್ಯವೋ ಪ್ರಾಣವೋ ಆರಾಮಸ್ಥಾನವೋ, ಮನಸ್ಸೇ ಆನಂದಭೂಮಿಯೋ ಮತ್ತು ಯಾವುದು ಶಾಂತಿಸಮೃದ್ಧವೋ ಅಂತಹ ಪರಮಾತ್ಮನು ಜಗತ್ತಿಗೆ ಆದೃತವಾಗಿರುವುದರಿಂದ **ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ** ಇದೇ ಶ್ರವಣ ಯೋಗ್ಯವು, ಮನನಯೋಗ್ಯವು ಮತ್ತು ಧ್ಯಾನಯೋಗ್ಯವು ಎಂದು ಸ್ತುತವಾಗಿದೆ.

## ಭರ್ಗಃ.

ಸವಿತೃವಿನ ವರೇಣ್ಯವಾದ ಜ್ಯೋತಿಯೇ **ಭರ್ಗ**ಶಬ್ದವಾಚ್ಯವಾಗಿದೆ-**ಅವಿದ್ಯಾತತ್ಕಾರ್ಯಯೋರ್ಭರ್ಜನಾದ್ಭರ್ಗಃ ಸ್ವಯಂಜ್ಯೋತಿಃ ಪರಬ್ರಹ್ಮಾತ್ಮಕಂ ತೇಜಃ ।** ಅಜ್ಞಾನ ಮತ್ತು ಅದರ ಫಲವಾದ ಪಾಪ ಮತ್ತು ದುಃಖ ಇವನ್ನು ನಾಶಪಡಿಸುವುದರಿಂದ ಪರಬ್ರಹ್ಮನ ಪರಂಜ್ಯೋತಿಯು **ಭರ್ಗ**ವೆಂದು ಪ್ರಸಿದ್ಧವಾಗಿದೆ. ಈ ಪದದ ತಾತ್ಪರ್ಯವನ್ನು ಮೈತ್ರ್ಯುಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

**ಅಥ ಭರ್ಗಾ ಇತಿ ಯೋ ಹ ವಾ ಅಮುಷ್ಮಿನ್ನಾದಿತ್ಯೇ ನಿಹಿತಸ್ತಾರಕೋಽಕ್ಷಿಣಿ ವೈಷ ಭರ್ಗಾಖ್ಯೋ ಭಾಭಿರ್ಗತಿರಸ್ಯ ಹೀತಿ ಭರ್ಗೋ ಭರ್ಜಯತೀತಿ ವೈಷ ಭರ್ಗಾ ಇತಿ ರುದ್ರೋ ಬ್ರಹ್ಮವಾದಿನೋಽಥ ಭ ಇತಿ ಭಾಸಯತೀಮಾನ್ ಲೋಕಾನ್ ರ ಇತಿ ರಂಜಯತೀಮಾನಿ ಭೂತಾದಿ ಗ ಇತಿ ಗಚ್ಛಂತ್ಯಸ್ಮಿನ್ನಾಗಚ್ಛಂತ್ಯಸ್ಮಾದಿಮಾಃ ಪ್ರಜಾಸ್ತಸ್ಮಾದ್ಭರಗತ್ವಾದ್ಭರ್ಗಃ ॥ ಶಶ್ವತ್ ಸೂಯಮಾನಾತ್ ಸೂರ್ಯಃ ಸವನಾತ್ ಸವಿತಾ .... .... .... .... ॥**

(ಮೈ. ಉ. ೬-೭)

CC-0. Jangamwadi Math Collection. Digitized by eGangotri

ಸವಿತೃವಿನ ಭರ್ಗವೆಂದರೇನು ಎಂಬುದನ್ನು ಪರಿಶೀಲಿಸಬೇಕು. **ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ**— ಯಾವ ತೇಜಸ್ಸು ಆದಿತ್ಯಾಂತರ್ಗತವಾಗಿ ಪ್ರಕಾಶಿಸುವುದೋ ಅದೇ ಪುರುಷನ ಅಕ್ಷಿಯಲ್ಲಿಯೂ ತೇಜೋ ರೂಪವಾಗಿ ಪ್ರಕಾಶಿಸುತ್ತದೆ ಎಂದು ಛಾಂದೋಗ್ಯಾದಿಗಳಲ್ಲಿ (ಛಾ. ಉ. ೧-೭-೫) ಯಾವ ತೇಜಸ್ಸನ್ನು ಸ್ತುತಿಸಿದೆಯೋ ಆ ತೇಜಸ್ಸೇ ಭರ್ಗಾಖ್ಯವಾಗಿದೆ.

(೧) **ಭಾಭಿಃ ಕಿರಣೈರಧಿಷ್ಠಾನಭೂತೈ ರ್ಯರಸ್ಯ ಗತಿರ್ಗಮನಂ ವಿಷಯವ್ಯಾಪ್ತಿರಸ್ಯ ಇತಿ ವ್ಯುತ್ಪತ್ತ್ಯಾ ಭರ್ಗ ಇತ್ಯೇಕಂ ನಿರ್ವಚನಂ**— ಭಾಃ ಎಂದರೆ ತೇಜೋಯುತವಾದ ಕಿರಣವೆಂದರ್ಥ. ಇಂತಹ ಕಿರಣರೂಪದಲ್ಲಿ ಗಮನವು ಇರುವುದರಿಂದಲೂ ಈ ಗಮನದಿಂದಲೇ ಸರ್ವವ್ಯಾಪಕತ್ವವೂ ಇರುವುದರಿಂದಲೂ ಆದಿತ್ಯನ ಪ್ರಭೆಗೆ ಭರ್ಗವೆಂದು ಹೆಸರು ಎಂದು ಒಂದು ವಿಧವಾದ ನಿರ್ವಚನವನ್ನು ಹೇಳಬಹುದು.

(೨) ಎರಡನೆಯದಾಗಿ, **ಅಥವಾ ಭರ್ಜಯತಿ ಜಗತ್ ಸಂಹರತೀತಿ ರುದ್ರೋ ಭರ್ಗ ಇತಿ**— ಜಗತ್ತನ್ನು ಸಂಹರಿಸುವುದರಿಂದ ರುದ್ರನಿಗೆ ಭರ್ಗನೆಂದು ಹೆಸರು ಎಂದು ಬ್ರಹ್ಮವಾದಿಗಳ ಮತವಾಗಿದೆ.

(೩) ಮೂರನೆಯದಾಗಿ, **ಭಕಾರರೇಫಗಕಾರಾಣಾಂ ಪ್ರತ್ಯೇಕನಿರ್ವಚನಂ । ಭಾಸಯತಿ ತೇಜೋಮಂಡಲಾಂತರ್ಗತಚಿತ್ಪ್ರಕಾಶೇನ ಇಮಾನ್ ಸರ್ವಾನೇವ ಲೋಕಾನ್ ಇತಿ ಭ ಇತ್ಯುಚ್ಯತೇ । ಇಮಾನಿ ಭೂತಾನಿ ಸ್ಥಾವರಜಂಗಮಾತ್ಮಕಾನಿ ಪ್ರಾಣಾನುಗತಚಿದಾನಂದಾತ್ಮನಾ ರಂಜಯತಿ ಪ್ರೀಣಯತಿ ಸುಖಾತ್ಮಕಂ ಕರೋತಿ ಇತಿ ರ ಉಚ್ಯತೇ । ಅಸ್ಮಿನ್ ಸರ್ವಕಾರಣಾತ್ಮನಿ ಸುಷುಪ್ತಿಪ್ರಳಯಯೋಃ ಸರ್ವಾ ಇಮಾಃ ಪ್ರಜಾಃ ಗಚ್ಛಂತಿ ಲಯಂ ಪ್ರಾಪ್ನುವಂತಿ ತಥಾ ಪ್ರಬೋಧಸೃಷ್ಟ್ಯೋರಸ್ಮಾದೇವಾಗಚ್ಛಂತ್ಯಾವಿರ್ಭವಂತೀತಿ ಗ ಇತ್ಯುಚ್ಯತೇ ॥**

ಭ, ರ, ಗ ಎಂಬ ಮೂರು ಅಕ್ಷರಗಳಿಗೂ ಪ್ರತ್ಯೇಕವಾದ ನಿರ್ವಚನವನ್ನು ಹೇಳಬಹುದು. ಹೇಗೆಂದರೆ, ೧) ಸಕಲ ಲೋಕಗಳನ್ನೂ ತನ್ನ ತೇಜಸ್ಸಿನಿಂದ ಭಾಸಮಾನವನ್ನಾಗಿ ಮಾಡುವುದರಿಂದ **ಭ** ಎಂದು ಹೆಸರು. ೨) ಸ್ಥಾವರ ಜಂಗಮಾತ್ಮಕವಾದ ಸಕಲ ಭೂತಗಳನ್ನೂ ತನ್ನ ಚಿದಾನಂದಸ್ವರೂಪದಿಂದ ರಂಜಿಸಿ ಅವುಗಳಿಗೆ ಸುಖವನ್ನುಂಟುಮಾಡುವುದರಿಂದ ರ ಎಂದು ಹೆಸರು. ೩) ಮತ್ತು ಸುಷುಪ್ತಿಯಲ್ಲಿಯೂ ಪ್ರಳಯಕಾಲದಲ್ಲಿಯೂ ಸಕಲ ಭೂತಗಳೂ ಸಹ ಸರ್ವಕಾರಣನಾದ ಪರಬ್ರಹ್ಮನಲ್ಲಿಯೇ ಲಯವನ್ನು ಹೊಂದುವುದರಿಂದಲೂ ಮತ್ತು ಪ್ರಬೋಧ ಕಾಲದಲ್ಲಿಯೂ, ಸೃಷ್ಟಿಕಾಲದಲ್ಲಿಯೂ ಬ್ರಹ್ಮನಿಂದಲೇ ಆಗಮಿಸುವುದರಿಂದಲೂ ಸಹ **ಗ** ಎಂದು ಹೆಸರು. ಪರಬ್ರಹ್ಮನು ಈ ರೀತಿ **ಭ, ರ, ಗ** ಎಂಬುವುಗಳ ಸಮುಚ್ಚಯವೂ, ಸಾಮರಸ್ಯಾತ್ಮಕನೂ ಆದುದರಿಂದ ಅವನಿಗೆ ಭರ್ಗವೆಂದು ಹೆಸರು ಎಂದು ಈ ಪದದ ನಿರ್ವಚನಗಳನ್ನು ತಿಳಿಸಿದೆ.

ಭರ್ಗಶಬ್ದಕ್ಕೆ ಸವಿತೃವಿನ ತೇಜಸ್ಸು ಅಥವಾ ಅನ್ನ ಇತ್ಯಾದ್ಯರ್ಥಾಂತರಗಳನ್ನು ಹೇಳಿರುವುದನ್ನು ಮೇಲೆ ತಿಳಿಸಿದೆ. **ಭರ್ಗಃ, ತೇಜಃ, ಅನ್ನಂ, ಧನಂ**— ಭರ್ಗಶಬ್ದಕ್ಕೆ ತೇಜಸ್ಸು, ಅನ್ನ ಅಥವಾ ಧನ ಎಂಬರ್ಥವಿರುವುದು. ಅವುಗಳಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು ಎಂದು ತೈತ್ತಿರೀಯಸಂಹಿತೆಯ ಭಟ್ಟಭಾಸ್ಕರಭಾಷ್ಯವನ್ನೂ ಸಹ ಮೇಲೆ ಉದ್ಧರಿಸಿ ವಿವರಿಸಿದೆ. (ತೈ. ಸಂ. ಭ. ಭಾ. ೧-೫-೬).

**ಭ್ರಜಃ ಪಾಕೇ ಭವೇದ್ಧಾತುರ್ಯಸ್ಮಾತ್ ಪಾಚಯತೇ ಹ್ಯಸೌ ।**
**ಭ್ರಾಜತೇ ದೀಪ್ಯತೇ ಯಸ್ಮಾತ್ ಜಗದಂತೇ ಹರತ್ಯಪಿ ॥**

CC-0. Jangamwadi Math Collection. Digitized by eGangotri

**ಕಾಲಾಗ್ನಿರೂಪಮಾಸ್ಥಾಯ ಸಪ್ತಾರ್ಚಿಃ ಸಪ್ತರಶ್ಮಿಭಿಃ ।**
**ಭ್ರಾಜತೇ ತತ್ಸ್ವರೂಪೇಣ ತಸ್ಮಾದ್ಭರ್ಗಃ ಸ ಉಚ್ಯತೇ ॥**
(ಯೋಗಿಯಾಜ್ಞವಲ್ಕ್ಯಃ)

ಜಗತ್ತನ್ನು ಪಕ್ವಗೊಳಿಸುವುದರಿಂದಲೂ, ಅಂತಕಾಲದಲ್ಲಿ ನಾಶಗೊಳಿಸುವುದರಿಂದಲೂ ಕಾಲಾಗ್ನಿರೂಪವನ್ನು ಧರಿಸಿ ಸಪ್ತರಶ್ಮಿಗಳಿಂದಲೂ ಭ್ರಾಜಿಸುವುದರಿಂದಲೂ **ಭರ್ಗ**ವೆಂಬ ಹೆಸರು ಪ್ರಸಿದ್ಧವಾಗಿದೆ. **ಭೇತಿ ಭಾಸಯತೇ ಲೋಕಾನ್ । ರೇತಿ ರಂಜಯತೇ ಪ್ರಜಾಃ । ಗ ಇತ್ಯಾಗಚ್ಛತೇಽಜಸ್ರಂ ಭರಗೋ ಭರ್ಗ ಉಚ್ಯತೇ ।** ಎಂಬ ವಿವರಣೆಯಲ್ಲಿಯೂ ಸಹ ಮೇಲೆ ಮೈತ್ರ್ಯುಪನಿಷತ್ತಿನ ವಾಕ್ಯದಲ್ಲಿ ವಿವರಿಸಿದಂತೆ **ಭ**, ರ, ಗ ಎಂಬ ಅಕ್ಷರಗಳಿಂದ ಸೂಚಿತವಾಗುವ ಸವಿತ್ರಾಖ್ಯವಾದ ಬ್ರಹ್ಮದ ಪ್ರಭಾವಗಳ ಸಮುಚ್ಚಯವೂ, ಸಾಮರಸ್ಯವೂ ತಿಳಿಸಲ್ಪಟ್ಟಿದೆ.

## ದೇವಸ್ಯ.

**ದೇವೋ ದ್ಯುಲೋಕವರ್ತಿತ್ವಾದ್ದ್ಯೋತನಾದ್ದೇವನೇನ ವಾ ।** ದ್ಯುಲೋಕವರ್ತಿಯಾದುದರಿಂದಾಗಲಿ, ಪ್ರಕಾಶಮಾನನಾದುದರಿಂದಾಗಲಿ ಅಥವಾ ಕ್ರೀಡಾತ್ಮಕವಾದ ಸ್ವರೂಪವಿರುವುದರಿಂದಾಗಲಿ ಸವಿತೃವು ದೇವಶಬ್ದ ವಾಚ್ಯನು,

**ದೀವ್ಯತೇ ಕ್ರೀಡತೇ ಯಸ್ಮಾದ್ರೋಚತೇ ದ್ಯೋತತೇ ದಿವಿ ।**
**ತಸ್ಮಾದ್ದೇವ ಇತಿ ಪ್ರೋಕ್ತಃ ಸ್ತೂಯತೇ ಸರ್ವದೇವತೈಃ ॥**

ಯಾವ ಮಹಿಮೆಯಿಂದ ಈ ಸವಿತೃದೇವನು ತನ್ನ ಲೀಲಾರೂಪದಲ್ಲಿರುವ ಜಗತ್ತಿನಲ್ಲಿ ಕ್ರೀಡಿಸುತ್ತಾನೆಯೋ ಮತ್ತು ತನ್ನ ಕ್ರೀಡೆಯಿಂದ ಈ ಲೋಕಕ್ಕೆ ಆಹ್ಲಾದಕಾರಕನಾಗಿದ್ದಾನೆಯೋ, ಯಾವ ಮಹಿಮೆಯಿಂದ ದ್ಯುಲೋಕದಲ್ಲಿ ಪ್ರಭಾಯುತನಾಗಿ ಪ್ರಕಾಶಿಸುತ್ತಾನೆಯೋ ಆ ಮಹಿಮೆಯಿಂದಲೇ ಇವನಿಗೆ ದೇವನೆಂಬ ವಿಶೇಷಣವೂ ಪ್ರಸಿದ್ಧವಾಗಿದೆ. ಅಥವಾ **ದೀವ್ಯತಿ ನಂದತೀತಿ ದೇವಃ । ಅಖಂಡಾನಂದೈಕರಸ ಇತ್ಯರ್ಥಃ ।** ಕ್ರೀಡಾರೂಪವಾದ ಆನಂದದಲ್ಲಿಯೇ ಸರ್ವದಾ ಇರುವುದರಿಂದಲೂ, ಆನಂದರೂಪನೇ ಆಗಿರುವುದರಿಂದಲೂ ಈ ವಿಶೇಷಣವು. ಶಂಕರಾಚಾರ್ಯರೂ ಸಹ– **ದೇವಸ್ಯೇತಿ ಸರ್ವದ್ಯೋತನಾತ್ಮಕಾಖಂಡಚಿದೇಕರಸಂ ।** ಸರ್ವವನ್ನೂ ಪ್ರಕಾಶಪಡಿಸತಕ್ಕದ್ದೂ ಅಖಂಡಾತ್ಮಕವಾದುದೂ, ಆನಂದರಸಾತ್ಮಕವಾದುದೂ ಆದ ತತ್ತ್ವನಿರ್ದೇಶವೆಂದು ತಿಳಿಸಿದ್ದಾರೆ.

**ಅನ್ಯೋಽನ್ತರ ಆತ್ಮಾನಂದಮಯಃ । ತೇನೈಷ ಪೂರ್ಣಃ । .... .... .... .... ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಂ ಪಕ್ಷಃ । ಆನಂದ ಆತ್ಮಾ ॥**
(ತೈ. ಉ. ೨-೫)

ಆನಂದಮಯನಾದ ಈ ಪುರುಷನು ಮೋದಪ್ರಮೋದರೂಪಗಳಾದ ಪಕ್ಷಗಳಿಂದ ಯುಕ್ತನಾಗಿ ಆನಂದಾತ್ಮಕನೇ ಆಗಿದ್ದಾನೆಂದು ವರ್ಣಿಸಿರುವ ಪರಬ್ರಹ್ಮನ ವಿಶೇಷಗುಣವೇ **ದೇವ**ಶಬ್ದವಾಚ್ಯವು ಎಂದು ತಾತ್ಪರ್ಯವು ಹೇಳಲ್ಪಟ್ಟಿದೆ. **ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ** (ಕ. ಉ. ೧–೧೭) ಇತ್ಯಾದಿ ಸ್ಥಳಗಳಲ್ಲೂ ಸಹ **ದೇವ**ಶಬ್ದಕ್ಕೆ ಈ ಅರ್ಥವನ್ನೇ ಹೇಳಿದೆ. ಗುಣವನ್ನೇ **ಆತ್ಮರತಿಃ ಆತ್ಮಕ್ರೀಡ ಯಸ್ಯ ವಿಶ್ವ ಉಪಾಸತೇ** ಇತ್ಯಾದಿ ವಾಕ್ಯಗಳೂ ಪ್ರಶಂಸಿಸುತ್ತವೆ.

CC-0. Jangamwadi Math Collection. Digitized by eGangotri

## ಧೀಮಹಿ

ಧೀಮಹಿಪದಕ್ಕೆ **ಧ್ಯಾಯಾಮಃ, ಮನಸಾ ಧಾರಯಾಮಃ** । ಎಂಬ ಅರ್ಥಗಳನ್ನು ಹೇಳಿದೆ. ಅಥವಾ **ಧ್ಯೇಯತಯಾ ಧಾರಯಾಮಃ** ಎಂದೂ ಹೇಳಬಹುದು. ಇದರಲ್ಲಿ **ಧ್ಯಾನ, ಧಾರಣ** ಎಂಬೆರಡು ಅರ್ಥವನ್ನೂ ಹೇಳಿದಂತಾಯಿತು. ಧ್ಯಾನರೂಪದಲ್ಲಿ ಮನಸ್ಸಿನಲ್ಲಿ ಧರಿಸೋಣವೆಂದರ್ಥ. ಧ್ಯಾನದ ಪ್ರಯೋಜನವನ್ನೂ ಆವಶ್ಯಕತೆಯನ್ನೂ ಮೇಲೆ ತಿಳಿಸಿದೆ. **ಅವಾಙ್ಮನೋಗಮ್ಯ**ನಾದ ಪರಬ್ರಹ್ಮನು ವಾಕ್ಕಿಗೂ ಮನಸ್ಸಿಗೂ ಗೋಚರನಾಗತಕ್ಕವನಲ್ಲ. ಆದುದರಿಂದ ಧ್ಯಾನರೂಪವಾದ ಉಪಾಸನೆಯಿಂದಲೇ ಸಾಕ್ಷಾತ್ಕಾರವನ್ನು ಮಾಡಿಕೊಳ್ಳತಕ್ಕದ್ದು. ಈ ಧ್ಯಾನದಲ್ಲಿ ಸಾಕ್ಷಾತ್ಕಾರದ ಕ್ರಮವೂ ನಿರ್ದಿಷ್ಟವಾಗಿದೆ. **ಧೀಮಹ್ಯಹಂ ಸ ಏವೇತಿ ತೇನೈವಾಭೇದಸಿದ್ಧಯೇ।** ಪರಬ್ರಹ್ಮನಿಗಿಂತಲೂ ಭಿನ್ನನೆಂದು ಪ್ರತ್ಯೇಕಮನೋಭಾವವನ್ನಿಟ್ಟರತಕ್ಕ ಜೀವನು ತಾನೇ ಬ್ರಹ್ಮವೆಂದು ತಿಳಿದು ಐಕ್ಯಸಾಕ್ಷಾತ್ಕಾರಮಾಡಿಕೊಳ್ಳುವ ಧ್ಯಾನರೂಪವಾದ ಧಾರಣವು **ಧೀಮಹಿ** ಎಂಬ ಪದದಿಂದ ತಿಳಿಸಲ್ಪಟ್ಟಿದೆ. **ಬುಧ್ಯಾದಿಸರ್ವದೃಶ್ಯಸಾಕ್ಷಿಲಕ್ಷಣಂ ಯನ್ಮೇ ಸ್ವರೂಪಂ ತತ್ಸರ್ವಾಧಿಷ್ಠಾನಭೂತಂ ಪರಮಾನಂದಂ ನಿರಸ್ತಸಮಸ್ತಾನರ್ಥರೂಪಂ ಸ್ವಪ್ರಕಾಶಚಿದಾತ್ಮಕಂ ಬ್ರಹ್ಮೇತ್ಯೇವಂ ಧೀಮಹಿ ಧ್ಯಾಯೇಮ** । ಬುದ್ಧ್ಯಾದಿ ಸಕಲವಾದ ದೃಶ್ಯಪ್ರಪಂಚಕ್ಕೂ ಸಾಕ್ಷಿಲಕ್ಷಣಭೂತವಾದ ಯಾವ ನನ್ನ ಅಂತರಾತ್ಮವಿದೆಯೋ ಮತ್ತು ಸಕಲಲೋಕಕ್ಕೂ ಅಧಿಷ್ಠಾನಭೂತವೂ, ಪರಮಾನಂದಸ್ವರೂಪವೂ, ಸಮಸ್ತವಾದ ಅನರ್ಥವನ್ನೂ ನಾಶಪಡಿಸಿ ಸ್ವಯಂಪ್ರಕಾಶಿತವೂ ಬ್ರಹ್ಮಾಖ್ಯವೂ ಆದ ಯಾವ ಈ ಆತ್ಮತತ್ತ್ವವಿದೆಯೋ ಅದನ್ನು **ಬ್ರಹ್ಮ** ಎಂದು ಧ್ಯಾನಿಸುವುದರಿಂದಲೇ ಬ್ರಹ್ಮಸಾಕ್ಷಾತ್ಕಾರವು ಎಂದು ಶಂಕರಾಚಾರ್ಯರು **ಧೀಮಹಿ** ಎಂಬ ಪದದ ತಾತ್ಪರ್ಯವನ್ನು ವಿವರಿಸಿದ್ದಾರೆ. ಈ ಧ್ಯಾನವು ಬ್ರಹ್ಮೈಕ್ಯಜ್ಞಾನರೂಪವಾದುದು ಎಂದೂ ತಿಳಿಸಿದ್ದಾರೆ. ಅವಿದ್ಯಾದಿದೋಷಗಳನ್ನು ನಾಶಮಾಡುವುದರಿಂದ ಸವಿತೃವಿನ ಜ್ಯೋತಿಗೆ **ಭರ್ಗ**ವೆಂಬ ಹೆಸರು ಎಂದು ಹಿಂದೆ ಹೇಳಿದೆ. **ಧೀಮಹಿ** ಶಬ್ದದಿಂದ ಸೂಚಿತವಾಗುವ ಧ್ಯಾನದಿಂದಲೂ ಸಹ ಇದೇ ಫಲವು.

**ಅಹಂ ವಿಶ್ವಂ ಭುವನಮಭ್ಯಭವಾಂ । ಸುವರ್ನ ಜ್ಯೋತೀಃ ।** (ತೈ. ಉ. ೩-೮)
ನಾನು ಭಿನ್ನಾತ್ಮಕವಾದ ಸಮಸ್ತ ಲೋಕಗಳನ್ನೂ ಮೀರಿದ ಪರಂಜ್ಯೋತೀ ರೂಪನಾದ ಬ್ರಹ್ಮಸಾಕ್ಷಾತ್ಕಾರವನ್ನು ಪಡೆದು ಬ್ರಹ್ಮರೂಪನೇ ಆಗಿರುವೆನು ಎಂಬ ಐಕ್ಯಭಾವನೆಯು ಬರುವುದಕ್ಕೆ ಯಾವ ಧ್ಯಾನರೂಪವಾದ ಸಾಧನವಿದೆಯೋ ಅದನ್ನು ಆಶಂಸಿಸಿದೆ. ಈ ಜ್ಞಾನಾತ್ಮಕವಾದ ಧ್ಯಾನದ ಫಲವಾಗಿ **ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ** ಮರ್ತ್ಯನಾದ ಮಾನವನು ಅಮೃತತ್ವವನ್ನು ಪಡೆದು ಇಲ್ಲಿಯೇ ಬ್ರಹ್ಮಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಅಂತರಿಕ್ಷದಲ್ಲಿ ಆದಿತ್ಯನು ಪ್ರಕಾಶಿಸುವಂತೆ ತಾನೂ ಬ್ರಹ್ಮರೂಪವಾದ ದಿವ್ಯತೇಜಸ್ಸಿಂದ ಪ್ರಕಾಶಿಸುತ್ತಾನೆ.

## ಧಿಯಃ

ಬ್ರಹ್ಮೈಕ್ಯಜ್ಞಾನವನ್ನು ಪಡೆಯಬೇಕಾದರೆ ತತ್ಸಾಧನವಾದ ಜ್ಞಾನವೂ ತದ್ಧ್ಯಾನಸಾಧಕವಾದ ಕರ್ಮವೂ ಅತ್ಯವಶ್ಯವಾಗಿರುತ್ತದೆ. ಅಂತಹ ಧೀಯನ್ನು ಸವಿತೃವು ಪ್ರೇರಿಸಲಿ ಎಂದು ಪ್ರಾರ್ಥಿಸಿದೆ. ಇಲ್ಲಿ ಧೀಶಬ್ದಕ್ಕೆ ಬುದ್ಧಿ ಅಥವಾ ಪ್ರಜ್ಞೆಯೆಂದಾಗಲಿ ಅಥವಾ ಕರ್ಮವೆಂದಾಗಲಿ ಎರಡು ವಿಧವಾದ ಅರ್ಥವನ್ನು ಹೇಳಬಹುದು. ಅವಿದ್ಯೆಯು ನಾಶವಾಗಬೇಕಾದುದರಿಂದ ಪ್ರಜ್ಞೆಯು ಅವಶ್ಯವಾಗಿರುತ್ತದೆ. ಈ ಪ್ರಜ್ಞೆಯು ಉಪಾಸನಾರೂಪದ ಕರ್ಮದಿಂದಲೇ

CC-0. Jangamwadi Math Collection. Digitized by eGangotri

ಸಾಧ್ಯ. ಆದುದರಿಂದ ಎರಡರ್ಥವೂ ಸಮಂಜಸವಾಗಿರುತ್ತದೆ. ಅಲ್ಲದೇ, ಸವಿತೃವಿನ ಸ್ತೋತ್ರರೂಪವಾದ ಧ್ಯಾನ ವಾದುದರಿಂದ ಧೀಶಬ್ದಕ್ಕೆ ಸ್ತುತಿಯೆಂದರ್ಥಮಾಡಿದರೂ ತಪ್ಪಾಗಲಾರದು. ಬ್ರಹ್ಮಜ್ಞಾನಕ್ಕೆ ಸತ್ಕರ್ಮವೇ ಸಾಧನವು. ವಿಶೇಷಜ್ಞಾನಪೂರ್ವಕವಾದ ಕರ್ಮವೂ ಸ್ತುತಿರೂಪವೇ ಆಗಿರುತ್ತದೆ. ಈ ಜ್ಞಾನಕರ್ಮಗಳ ತಾದಾತ್ಮ್ಯ ಅಥವಾ ಸಾಹಚರ್ಯವನ್ನು ತೈತ್ತಿರೀಯೋಪನಿಷತ್ತಿನಲ್ಲಿ ಈ ರೀತಿ ತಿಳಿಸಿದೆ.

**ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಸ್ಸರ್ವೇ ಬ್ರಹ್ಮ ಜ್ಯೇಷ್ಠಮುಪಾಸತೇ ।**

(ತೈ. ಉ. ೨-೧)

ವಿಶೇಷವಾದ ಜ್ಞಾನವಿರತಕ್ಕವನೇ ಯಜ್ಞವನ್ನಾಚರಿಸುತ್ತಾನೆ. ಈ ರೀತಿ ವಿಜ್ಞಾನರೂಪವಾದ ಕರ್ತೃತ್ವವಿರುವುದ ರಿಂದಲೇ ವಿಜ್ಞಾನಮಯನಾದ ಆತ್ಮನು ಬ್ರಹ್ಮನು ಎಂಬ ಪ್ರತೀತಿಯಿದೆ. ಆದರೆ ವಿಜ್ಞಾನಮಯನಾದ ಬ್ರಹ್ಮನಿಗಿಂತಲೂ ಮೀರಿದ ಆನಂದಮಯನಾದ ಬ್ರಹ್ಮನನ್ನು ಸಾಕ್ಷಾತ್ಕರಿಸಲು. ವಿಜ್ಞಾನಾತ್ಮಕವಾದ ಕರ್ಮರೂಪದ ಧ್ಯಾನವು ಅತ್ಯವಶ್ಯಕ ಎಂದು ಜ್ಞಾನ, ಕರ್ಮ ಧ್ಯಾನ ಇವೆಲ್ಲವುಗಳ ಸಮುಚ್ಚಯರೂಪದ ಧೀಶಬ್ದವು ಪ್ರಕೃತದಲ್ಲಿ ಜ್ಞಾನಪೂರ್ವಕವೂ ಕರ್ಮಾತ್ಮಕವೂ ಆದ ಧ್ಯಾನವನ್ನು ತಿಳಿಸುತ್ತದೆ. ಇಂತಹ ಕರ್ಮಾತ್ಮಕವಾದ ಧ್ಯಾನಕ್ಕೆ ನಮ್ಮನ್ನು ಪ್ರೇರಿಸಲಿ ಎಂಬುದೇ ಪ್ರಾರ್ಥನೆ.

## ಯಃ

**ಯಃ ಸವಿತಾ ಸೂರ್ಯಃ ।** ಯಾವ ಸವಿತೃರೂಪನಾದ ಬ್ರಹ್ಮನಿರುವನೋ ಅವನು ನಮ್ಮನ್ನು ಪ್ರೇರಿಸಲಿ ಎಂದು ಒಂದರ್ಥ. ಅಥವಾ **ಯಃ** ಇತಿ **ಲಿಂಗವ್ಯತ್ಯಯಃ । ಯದ್ಭರ್ಗೋ ಧಿಯಃ ಪ್ರಚೋದಯಾತ್ । ತತ್ ಧ್ಯಾಯೇಮ ಇತಿ ಸಮನ್ವಯಃ ।** ಯಾವ ಭರ್ಗವು ಎಂದರೆ ಆದಿತ್ಯಜ್ಯೋತಿಯು ನಮ್ಮ ಜ್ಞಾನಪೂರ್ವಕವಾದ ಕರ್ಮವನ್ನು ಪ್ರೇರಿಸುವುದೋ ಅಂತಹ ಭರ್ಗವನ್ನು ಧ್ಯಾನಿಸೋಣ ಎಂಬ ಆಶಂಸೆಯನ್ನು ತೋರಿಸುವ ಇನ್ನೊಂದರ್ಥ ವೆಂದು ಸಾಯಣರು ಎರಡು ವಿಧವಾದ ಅನ್ವಯವನ್ನು ತೋರಿಸಿದ್ದಾರೆ. ಅಲ್ಲದೇ, **ಯಃ** ಎಂಬುದು ಲಿಂಗವ್ಯತ್ಯಯ ವಾಗಿ ಪ್ರತ್ಯಗ್ಬ್ರಹ್ಮನನ್ನೇ ನಿರ್ದೇಶಿಸಬಹುದು ಎಂಬುದೂ ಒಂದು ಮತ. ಅದನ್ನೇ ಮಾಧವರು **ಯ ಇತ್ಯಲಿಂಗ ಸರ್ಮಂ ಯತ್ಸತ್ಯಜ್ಞಾನಾದಿಲಕ್ಷಣಂ** ಎಂದು ಪರಬ್ರಹ್ಮವೇ ನಮ್ಮ ಧೀಯನ್ನು ಪ್ರೇರಿಸಲಿ ಎಂದು ತಾತ್ಪರ್ಯ. **ತಸ್ಯ ಯಚ್ಛಬ್ದನಿರ್ದಿಷ್ಟಸ್ಯಾತ್ಮನಃ ಸ್ವರೂಪಭೂತಂ ಪರಂ ಬ್ರಹ್ಮ ತತ್ಸವಿತುರಿತ್ಯಾದಿಪದ್ಯೈಃ ನಿರ್ದಿಶ್ಯತೇ ।** ಆತ್ಮಸ್ವರೂಪಭೂತವಾಗ ಯಾವ ಪರಬ್ರಹ್ಮವುಂಟೋ ಅದೇ ತತ್ಸವಿತುಃ ಇತ್ಯಾದಿಗಳಿಂದ ನಿರ್ದೇಶಿಸಲ್ಪಟ್ಟಿದೆ ಯೆಂದು **ಯಃ** ಎಂಬ ಪದಕ್ಕೆ ಪರಬ್ರಹ್ಮಪರವಾದ ಅರ್ಥವನ್ನು ಶಂಕರಾಚಾರ್ಯರು ಹೇಳಿದ್ದಾರೆ.

## ನಃ

ನಃ ಎಂದರೆ ನಮಗೆ ಎಂದರ್ಥ. ಬ್ರಹ್ಮನು ಬೇರೆ, ಜೀವಾತ್ಮರಾ ನಾವು ಬೇರೆ, ನಾವು ಅನಂತ ಎಂಬ ಪ್ರತೀತಿಯು ಬ್ರಹ್ಮನಿಗೂ, ಜೀವರಿಗೂ ಭೇದಬುದ್ಧಿಯನ್ನು ಕಲ್ಪಿಸುತ್ತದೆ. ಆದರೆ ಇದು ಪುರುಷನಿಗೆ ಸಹಜವಾಗಿ ಬೆಳೆದು ಬಂದಿರುವ ಭೇದಬುದ್ಧಿಯು, ಸುಲಭವಾಗಿ ಹೋಗತಕ್ಕದ್ದಲ್ಲ. ವಸ್ತುತಃ ಪರಮಾತ್ಮನಿಗೂ ಜೀವಾತ್ಮರಿಗೂ ಯಾವ ವಿಧವಾಧ ಭೇದರೂಪವಿಲ್ಲದಿದ್ದರೂ ಸಹ ಪುರುಷನಿಗೆ ಸಹಜವಾದ ಅಜ್ಞಾನದಿಂದ ಈ ಭೇದಬುದ್ಧಿಯು

CC-0. Jangamwadi Math Collection. Digitized by eGangotri

ಬೆಳೆಯುತ್ತದೆ. ಆದುದರಿಂದ ಜೀವಾತ್ಮರನ್ನು ಬ್ರಹ್ಮನಿಗಿಂತಲೂ ಪ್ರತ್ಯೇಕವಾದ ಸ್ಥಿತಿಯುಳ್ಳವರು ಎಂದು ಭಾವಿಸಿ "ನಿನಗಿಂತಲೂ ಭಿನ್ನರಾದ ನಮಗೆ ಸತ್ಕರ್ಮಕ್ಕೆ ಪ್ರೇರಕವಾದುದೂ, ನಿನ್ನ ಉಪಾಸನೆಗೆ ಸಾಧಕವಾದುದೂ ಆದ ಬುದ್ಧಿಯನ್ನನುಗ್ರಹಿಸು"- ಎಂದು ಪ್ರಾರ್ಥಿಸಿದೆ.

## ಪ್ರಚೋದಯಾತ್

ಪ್ರಚೋದಯಾತ್ । ಪ್ರೇರಯೇತ್ । ಸತ್ಕರ್ಮಕಾರಕವಾದ ಸದ್ಬುದ್ಧಿಯನ್ನು ಪ್ರೇರಿಸಲಿ. ಜ್ಞಾನ ಪೂರ್ವಕವಾದ ಕರ್ಮದಿಂದ ಸವಿತೃವಿನ ಭರ್ಗವನ್ನು ತಿಳಿಯಲು ಶಕ್ತಿಯನ್ನು ಕೊಡಲಿ ಎಂದು ಪ್ರಾರ್ಥಿಸಿದೆ. ಈ ಪ್ರಾರ್ಥನೆಯಲ್ಲಿ ಒಂದು ಮುಖ್ಯವಾದ ಅಂಶವನ್ನು ಗಮನಿಸಬೇಕು. ಈಶ್ವರಾನುಗ್ರಹವನ್ನು ಪಡೆದ ಹೊರತು ಜ್ಞಾನದ ಫಲವು ಲಭಿಸಲಾರದು ಎಂಬುದೇ ಮುಖ್ಯ ವಿಷಯವು.

ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥

(ಭ. ಗೀ. ೭-೧)

ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ । ಜ್ಞಾನವೇ ಎಲ್ಲಕ್ಕಿಂತಲೂ ಶ್ರೇಷ್ಠವೆಂದಮೇಲೆ ನನ್ನನ್ನು ಕರ್ಮಕ್ಕೆ ಏತಕ್ಕೆ ಅಟ್ಟುತ್ತೀಯೆ ಎಂದು ಅರ್ಜುನನು ಪ್ರಶ್ನಿಸಿದಾಗ ಕರ್ಮರಹಿತವಾದ ಜ್ಞಾನಕ್ಕೆ ಬೆಲೆಯಿಲ್ಲವೆಂದು ಕೃಷ್ಣನು ತಿಳಿಸುತ್ತಾನೆ. ಆದರೆ ಆ ಕರ್ಮವು ಯಾವ ರೂಪದಲ್ಲಿರಬೇಕೆಂದರೆ ಸಮಸ್ತ ಬುದ್ಧಿ ಯನ್ನೂ ಈಶ್ವರನಲ್ಲಿ ಅರ್ಪಿಸಿ ತಲ್ಲೀನನಾಗಿ ತದಾಶ್ರಯುವನ್ನು ಪಡೆದು ತತ್ಫಲವಾದ ಈಶ್ವರಾನುಗ್ರಹವನ್ನು ಪಡೆದಿರ ಬೇಕು. ಇಲ್ಲದಿದ್ದರೆ ಕೇವಲ ಜ್ಞಾನಕ್ಕೆ ಪ್ರಯೋಜನವಿಲ್ಲ ಎಂದು ಉತ್ತರವನ್ನು ಕೊಡುತ್ತಾನೆ. ಎಂದರೆ ಎಂತಹ ಜ್ಞಾನಿಯಾದರೂ ಸಹ ಈಶ್ವರಾನುಗ್ರಹವಿಲ್ಲದೇ ಸ್ವತಃ ಸಿದ್ಧಿಯನ್ನು ಪಡೆಯಲಾರನು ಎಂಬುದೇ ಸಾರಾಂಶ.

ಮಯಾ ಪ್ರಸನ್ನೇನ ತವಾರ್ಜುನೇದಂ ರೂಪಂ ಪರಂ ದರ್ಶಿತಮಾತ್ಮಯೋಗಾತ್ ।

(ಭ. ಗೀ. ೧೧-೪೭)

ದಿವ್ಯಜ್ಯೋತೀರೂಪವಾದ ನನ್ನ ಸ್ವರೂಪವು ನನ್ನ ಅನುಗ್ರಹದಿಂದಲೇ ನಿನಗೆ ಗೋಚರವಾಯಿತು ಎಂಬಲ್ಲಿ ಈಶ್ವರ ಸಾಕ್ಷಾತ್ಕಾರಕ್ಕೆ ಈಶ್ವರಾನುಗ್ರಹವು ಇಲ್ಲದೆ ಸಾಧ್ಯವಿಲ್ಲ ಎಂಬಂಶವು ತಿಳಿಸಲ್ಪಟ್ಟಿದೆ. ಇದೇ ವಿಷಯವನ್ನು ಉಪನಿಷದಾದಿಗಳಲ್ಲೂ ಸ್ಪಷ್ಟವಾಗಿ ತಿಳಿಸಿದೆ.

ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ ನ ಬಹುನಾ ಶ್ರುತೇನ ॥
ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥

(ಕಠ. ೨-೨೩)

ಈ ಪರಮಾತ್ಮನು ಪ್ರವಚನದಿಂದ ದೊರೆಯತಕ್ಕವನಲ್ಲ. ಮೇಧಾಶಕ್ತಿಯಿಂದ ದೊರೆಯುವವನಲ್ಲ. ಶ್ರುತಿಶ್ರವಣ ದಿಂದಲೂ ಲಭಿಸುವವನಲ್ಲ. ಯಾವ ಪರಮಾತ್ಮನನ್ನೇ ಆಶ್ರಯಿಸಿ ಅವನ ಅನುಗ್ರಹವನ್ನು ಸಂಪಾದಿಸುವನೋ

CC-0. Jangamwadi Math Collection. Digitized by eGangotri

ಅವನ ಅನುಗ್ರಹದಿಂದ ಮಾತ್ರ ಪಡೆಯಬಲ್ಲನು. ಅಂತಹ ಅನುಗ್ರಹವನ್ನು ಸಂಪಾದಿಸಿದವನಿಗೆ ಪರಮಾತ್ಮನು ತನ್ನ ತನುವನ್ನು ಬಿಚ್ಚಿ ತೋರಿಸುವನು ಎಂದು ಈಶ್ವರಾನುಗ್ರಹದ ಆವಶ್ಯಕತೆಯನ್ನು ತಿಳಿಸಿದೆ. ಯಾವ ರೀತಿ ಈಶೋಪ ನಿಷತ್ತಿನಲ್ಲಿ,

**ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ ॥**

(ಈಶ. ೧೮)

ಎಲೈ ಅಗ್ನಿಯೇ, ಸಕಲ ಕರ್ಮಗಳನ್ನೂ ತಿಳಿದ ನೀನು ನಮಗೆ ಸದ್ಬುದ್ಧಿಯನ್ನು ಕೊಟ್ಟು ಸನ್ಮಾರ್ಗದಲ್ಲಿ ಕರೆದು ಕೊಂಡು ಹೋಗು ಎಂದು ಈಶ್ವರನ ಅನುಗ್ರಹವನ್ನು ಪ್ರಾರ್ಥಿಸಿರುವಂತೆ ಪ್ರಕೃತವಾದ ಋಕ್ಕಿನಲ್ಲಿಯೂ ಸಹ ಈಶ್ವರನ ಭರ್ಗವನ್ನು ತಿಳಿಯಲು ಸಾಧನವಾದ ಜ್ಞಾನವನ್ನೂ, ತದಾತ್ಮಕವಾದುದೂ ಈಶ್ವರಸೇವಾರೂಪವಾದುದೂ ಆದ ಕರ್ಮವನ್ನೂ ನಮಗೆ ತಿಳಿಸಿ ಅದನ್ನು ಆಚರಿಸಿ ಈಶ್ವರೋಪಾಸನೆಯನ್ನು ಮಾಡುವ ಶಕ್ತಿಯನ್ನುಂಟುಮಾಡು ಎಂದು ಪ್ರಾರ್ಥಿಸಿದೆ.

## ವ್ಯಾಕರಣಪ್ರಕ್ರಿಯ

**ಸವಿತುಃ**—ಷು ಪ್ರಸವೈಶ್ವರ್ಯಯೋಃ ಧಾತು. ಅಥವಾ ಷೂಙ್ ಪ್ರಾಣಿಗರ್ಭವಿಮೋಚನೇ. ಕರ್ತ್ರರ್ಥ ದಲ್ಲಿ ತೃಚ್ ಪ್ರತ್ಯಯ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಅದಕ್ಕೆ ಇಡಾಗಮ. ಪ್ರತ್ಯಯ ನಿಮಿತ್ತ ವಾಗಿ ಧಾತುವಿನ ಉಕಾರಕ್ಕೆ ಗುಣ, ಅವಾದೇಶ. ಸವಿತೃಶಬ್ದ. ಷಷ್ಠೀ ಏಕವಚನಾಂತರೂಪ. ಪ್ರತ್ಯಯ ಚಿತ್ತಾ ದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ವರೇಣ್ಯಂ**—ವೃಞ್ ವರಣೇ. ಧಾತು. **ವೃಞ ಏಣ್ಯಃ** (ಉ. ಸೂ. ೩೭೮) ಎಂಬುದರಿಂದ ಏಣ್ಯ ಪ್ರತ್ಯಯ. ಆರ್ಧಧಾತುಕವಾದುದರಿಂದ ಇದನ್ನು ನಿಮಿತ್ತೀಕರಿಸಿ ಧಾತುವಿನ ಋಕಾರಕ್ಕೆ **ಸಾರ್ವಧಾತುಕಾರ್ಧ-ಧಾತುಕಯೋಃ** ಎಂಬುದರಿಂದ ಗುಣ. ಋಕಾರದ ಸ್ಥಾನಕ್ಕೆ ಬರುವುದರಿಂದ ರಪರವಾಗಿ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಭರ್ಗಃ**—ಭ್ರಸ್ಜ ಪಾಕೇ. ಧಾತು. **ಸರ್ವಧಾತುಭ್ಯ ಅಸನ್** ಎಂಬುದರಿಂದ ಅಸುನ್ ಪ್ರತ್ಯಯ. **ಭ್ರಸ್ಜೋ ರೋಪಧಯೋರಮನ್ಯತರಸ್ಯಾಂ** (ಪಾ. ಸೂ. ೬-೪-೪೭) ಭಸ್ಜಧಾತುಸಂಬಂಧಿಯಾದ ರೇಫಕ್ಕೂ ಉಪ ಧೆಗೂ ಲೋಪವೂ ಸಮಾಗಮವೂ ಬರುತ್ತದೆ ಎಂಬುದರಿಂದ ಇಲ್ಲಿ ರಮಾಗಮ. ಇದು ಮಿತ್ತಾದುದರಿಂದ **ಮಿದ-ಚೋಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ನ್ಯಂಕ್ವಾದಿಗಣದಲ್ಲಿ ಇದನ್ನು ಪಾಠಮಾಡಿರು ವುದರಿಂದ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ದೇವಸ್ಯ**—ದಿವು ಕ್ರೀಡಾದಿಷು ಧಾತು. **ನಂದಿಗ್ರಹಪಚಾದಿಭ್ಯಃ** ಎಂಬುದರಿಂದ ಪಚಾದಿಪಠಿತವಾದುದ ರಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಧಾತುವಿನ ಲಘೂಪಧೆಗೆ ಗುಣ. ಚಿತಃ ಎಂಬುದರಿಂದ ಅಂತೋ ದಾತ್ತಸ್ವರ ಬರುತ್ತದೆ. ಷಷ್ಠೀ ಏಕವಚನಾಂತರೂಪ.

CC-0. Jangamwadi Math Collection. Digitized by eGangotri

ಧೀಮಹಿ—ಧ್ಯೈ ಚಿಂತಾಯಾಂ ಧಾತು. ಲಿಜ್ ಉತ್ತಮಪುರುಷಬಹುವಚನದಲ್ಲಿ ವ್ಯತ್ಯಯದಿಂದ ಆತ್ಮನೇಪದದ ಮಹಿಜ್ ಪ್ರತ್ಯಯ. **ಬಹುಲಂ ಛಂದಸಿ** ಎಂಬುದರಿಂದ ಧಾತುವಿನ ಯಕಾರಕ್ಕೆ ಸಂಪ್ರಸಾರಣ (ಇಕಾರಾದೇಶ) **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ. **ಹಲಃ** ಎಂಬುದರಿಂದ ಸಂಪ್ರಸಾರಣಕ್ಕೆ ದೀರ್ಘ. ಅಥವಾ ಧೀಙ್ ಆಧಾರೇ ಧಾತು. ಙಿತ್ತಾದುದರಿಂದ ಆತ್ಮನೇಪದೀ. ಹಿಂದಿನಂತೆ ಲಿಙನಲ್ಲಿ **ಬಹುಲಂ ಛಂಧಸಿ** ಎಂಬುದರಿಂದ ವಿಕರಣ ಪ್ರತ್ಯಯಕ್ಕೆ ಲುಕ್. ಅತಿಙಂತದ ಪರದಲ್ಲಿ ಬಂದಿರುವುದರಿಂದ **ತಿಙಂತ** ನಿಘಾತಸ್ವರ ಬರುತ್ತದೆ.

ಧಿಯಃ—ಧ್ಯೈ ಚಿಂತಾಯಾಂ ಧಾತು. **ಧ್ಯಾಯತೇಃ ಸಂಪ್ರಸಾರಣಂಚ** (ವಾ. ೨೧--೫೧) ಎಂಬುದ ರಿಂದ ಕ್ವಿಪ್ ಪ್ರತ್ಯಯ. ಅದರೊಡನೆ ಧಾತುವಿನ ಯಕಾರಕ್ಕೆ ಸಂಪ್ರಸಾರಣ. ಪೂರ್ವರೂಪ. **ಹಲಃ** ಎಂಬುದ ರಿಂದ ದೀರ್ಘ. ಧೀ ಶಬ್ದ. ಧಾತುಸ್ವರ ಬರುತ್ತದೆ. ದ್ವಿತೀಯಾಬಹುವಚನದಲ್ಲಿ ಶಸ್‌ಪ್ರತ್ಯಯ. **ಅಚಿಶ್ನು-ಧಾತು**—ಎಂಬುದರಿಂದ ಧಾತುವಿನ ಇಕಾರಕ್ಕೆ ಇಯಙಾದೇಶ. ಪ್ರತ್ಯಯಸಕಾರಕ್ಕೆ ರುತ್ವ. ವಿಸರ್ಗ.

**ಪ್ರಚೋದಯಾತ್**—ಪ್ರ ಉಪಸರ್ಗ. ಚುದ ಪ್ರೇರಣೇ. ಧಾತು. ಲೇಟ್ ಪ್ರಥಮಪುರುಷ ಏಕವಚನ ದಲ್ಲಿ ತಿಪ್ ಪ್ರತ್ಯಯ. ಇಕಾರಲೋಪ. **ಲೇಟೋಽಡಾಟೌ** ಎಂಬುದರಿಂದ ಆಡಾಗಮ. ಚುರಾದಿಯಲ್ಲಿ ಪಠಿತ ವಾದುದರಿಂದ ಧಾತುವಿಗೆ ಸ್ವಾರ್ಥದಲ್ಲಿ ಣಿಚ್. ಅದಕ್ಕೆ ಗುಣ, ಅಯಾದೇಶ. ಯಃ ಎಂಬುದರ ಸಂಬಂಧವಿರುವುದ ರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ನಿಷೇಧ ಬರುತ್ತದೆ. **ಆಗಮಾ ಅನುದಾತ್ತಾಃ** ಎಂಬುದ ರಿಂದ ಆಡಾಗಮ ಅನುದಾತ್ತವಾಗುವುದರಿಂದ ಣಿಚ್‌ಪ್ರತ್ಯಯಸ್ವರದಿಂದ ದಕಾರೋತ್ತರಾಕಾರವು ಉದಾತ್ತವಾಗುತ್ತದೆ. **ತಿಙಃ ಚೋದಾತ್ತವತಿ** ಎಂಬುದರಿಂದ ಉದಾತ್ತವಿಶಿಷ್ಟತಿಙಂತಪರವಾದುದರಿಂದ ಗತಿಗೆ (ಪ್ರ) ಅನುದಾತ್ತಸ್ವರ ಬರುತ್ತದೆ.

———

ಸಂಹಿತಾಪಾಠಃ

ದೇವಸ್ಯ ಸವಿತುರ್ವಯಂ ವಾಜಯಂತಃ ಪುರಂಧ್ಯಾ ।
ಭಗಸ್ಯ ರಾತಿಮೀಮಹೇ ॥ ೧೧ ॥

ಪದಪಾಠಃ

ದೇವಸ್ಯ । ಸವಿತುಃ । ವಯಂ । ವಾಜಽಯಂತಃ । ಪುರಂಽಧ್ಯಾ ।
ಭಗಸ್ಯ । ರಾತಿಂ । ಈಮಹೇ ॥ ೧೧ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

**ವಾಜಯಂತೋ ವಾಜಮನ್ನಮಾತ್ಮನ ಇಚ್ಛಂತೋ ವಯಂ ದೇವಸ್ಯ ದ್ಯೋತಮಾನಸ್ಯ ಸವಿತುಃ ಪುರಂಧ್ಯಾ ತದ್ವಿಷಯಸ್ತುತ್ಯಾ ಪ್ರಜ್ಞಯಾ ವಾ ಭಗಸ್ಯ ಭಜನೀಯಸ್ಯ ಧನಸ್ಯ** ರಾತಿಂ ದಾನಮೀಮಹೇ । **ಯಾಚಾಮಹೇ ॥ ರಾತಿಂ । ಮಂತ್ರೇ ವೃಷೇತ್ಯಾದಿನಾ ಕ್ತಿನ ಉದಾತ್ತತ್ವಂ ॥**

## ಪ್ರತಿಪದಾರ್ಥ

**ವಾಜಯಂತಃ**—ಅನ್ನವನ್ನು ಪಡೆಯಲಿಚ್ಛೆಯುಳ್ಳ । **ವಯಂ**—ನಾವು । **ದೇವಸ್ಯ**—ಪ್ರಕಾಶಮಾನನಾದ । **ಸವಿತುಃ**—ಸವಿತೃವಿನ । **ಪುರಂಧ್ಯಾ**—ಸ್ತುತಿರೂಪವಾದ ಪ್ರಜ್ಞೆಯಿಂದ । **ಭಗಸ್ಯ**—ಪೂಜ್ಯವಾದ ಧನದ । **ರಾತಿಂ**—ದಾನವನ್ನು । **ಈಮಹೇ**—ಯಾಚಿಸುತ್ತೇವೆ ।

## ಭಾವಾರ್ಥ

ಅನ್ನವನ್ನು ಪಡೆಯಲಿಚ್ಛೆಯುಳ್ಳ ನಾವು ಪ್ರಕಾಶಮಾನನಾದ ಸವಿತೃವಿನ ಸ್ತುತಿರೂಪವಾದ ಪ್ರಜ್ಞೆಯಿಂದ ಪೂಜ್ಯವಾದ ಧನದ ದಾನವನ್ನು ಯಾಚಿಸುತ್ತೇವೆ.

## English Translation

Desirous of food, we solicit with praise, of the divine Savitri, the gift of affluence.

## ವಿಶೇಷವಿಷಯಗಳು

**ಪುರಂಧ್ಯಾ—ತದ್ವಿಷಯಸ್ತುತ್ಯಾ ಪ್ರಜ್ಞಯಾ ವಾ ।** ಸವಿತೃವಿಷಯಕವಾದ ಸ್ತುತಿಯಿಂದ ಅಥವಾ ಪ್ರಜ್ಞೆಯಿಂದ ಎಂದು ಅರ್ಥ. **ಪುರಂಧಿರ್ಬಹುಧೀಃ** ಸಮೃದ್ಧವಾದ ಬುದ್ಧಿಯುಳ್ಳವನಿಗೆ ಪುರಂಧಿಯೆಂದು ಹೇಳಬಹುದು. ಅಂತಹ ದೇವನು ಯಾರು ಎಂದು ಪ್ರಶ್ನಿಸಿ ನಿರುಕ್ತಕಾರರು ಈ ಪದದ ನಿರ್ವಚನಪೂರ್ವಕವಾದ ತಾತ್ಪರ್ಯವನ್ನು ಹೇಳಿದ್ದಾರೆ. (ನಿ. ೬-೧೩). **ಧೀಶಬ್ದವು ಕರ್ಮನಾಮಗಳಲ್ಲಿ** ಪಠಿತವಾಗಿರುವುದರಿಂದ ಇಂದ್ರನ ವಿಶೇಷಗುಣವನ್ನೂ ಈ ವಿಶೇಷಣವು ಸೂಚಿಸಬಹುದು. **ಪುರಾಣೀ ದೇವಿ ಯುವತಿಃ ಪುರಂಧಿ** (೩-೬೧-೧) ಇತ್ಯಾದಿ ಸ್ಥಳಗಳಲ್ಲಿ ಬಹುಸ್ತೋತ್ರವತಿಯೆಂದರ್ಥಮಾಡಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತವಾದ ಮಂತ್ರದಲ್ಲಿ ಸ್ತುತಿಯ ಅಥವಾ ಪ್ರಜ್ಞೆಯ ಬಾಹುಳ್ಯವನ್ನು ತಿಳಿಸಲು ಈ ಪದವು ಪ್ರಯುಕ್ತವಾಗಿದೆಯೆಂದು ಹೇಳಬಹುದು. ಈ ಪದದ ವಿಶೇಷಾರ್ಥಗಳನ್ನೂ ವಿಶೇಷಪ್ರಯೋಗಗಳನ್ನೂ ಹಿಂದೆ ಇದೇ ಭಾಗದಲ್ಲಿ ಋ. ಸಂ. ೩-೬೧-೧ನೇ ಋಕ್ಕಿನ ವಿಶೇಷವಿಷಯಗಳಲ್ಲಿ ತಿಳಿಸಿದೆ.

**ದೇವಸ್ಯ—ದ್ಯೋತಮಾನಸ್ಯ** । ಪ್ರಕಾಶಮಾನನಾದ ಸವಿತೃವಿನ ಎಂದರ್ಥ.

**ದೀವ್ಯತೇ ಕ್ರೀಡತೇ ಯಸ್ಮಾದ್ರೋಚತೇ ದ್ಯೋತತೇ ದಿವಿ ।**
**ತಸ್ಮಾದ್ದೇವ ಇತಿ ಪ್ರೋಕ್ತಃ ಸ್ತೂಯತೇ ಸರ್ವದೇವತೈಃ ॥**

(ಯೋಗಿಯಾಜ್ಞವಲ್ಕ್ಯಃ)

CC-0. Jangamwadi Math Collection. Digitized by eGangotri

ಯಾವ ಪ್ರಭಾವದಿಂದಲೂ ಲೀಲಾರೂಪವಾದ ಸಂಕಲ್ಪ ಮತ್ತು ಕ್ರಿಯೆಗಳಿಂದಲೂ ಜಗತ್ತಿನಲ್ಲಿ ಕ್ರೀಡಿಸುವನೋ ಮತ್ತು ಯಾವ ಮಹಿಮೆಯಿಂದ ದ್ಯುಲೋಕದಲ್ಲಿ ಪ್ರಭಾಯುತನಾಗಿ ಪ್ರಕಾಶಿಸುವನೋ ಆ ಕಾರಣದಿಂದ **ಸವಿತೃವು** ದೇವಶಬ್ದವಾಚ್ಯನಾಗಿದ್ದಾನೆಂದು ವಿಶೇಷಣದ ಮಹತ್ವವನ್ನು ತಿಳಿಸಿದೆ.

---

ಸಂಹಿತಾಪಾಠಃ

ದೇವಂ ನರಃ ಸವಿತಾರಂ ವಿಪ್ರಾ ಯಜ್ಞೈಃ ಸುವೃಕ್ತಿಭಿಃ ।
ನಮಸ್ಯಂತಿ ಧಿಯೇಷಿತಾಃ ॥ ೧೨ ॥

ಪದಪಾಠಃ

ದೇವಂ । ನರಃ । ಸವಿತಾರಂ । ವಿಪ್ರಾಃ । ಯಜ್ಞೈಃ । ಸುವೃಕ್ತಿऽಭಿಃ ।
ನಮಸ್ಯಂತಿ । ಧಿಯಾ । ಇಷಿತಾಃ ॥ ೧೨ ॥

ಸಾಯಣಭಾಷ್ಯಂ

ನರಃ ಕರ್ಮಣಾಂ ನೇತಾರೋ ವಿಪ್ರಾ ಮೇಧಾವಿನೋऽಧ್ವರ್ಯ್ವಾದಯೋ ಧಿಯೇಷಿತಾಃ ಕರ್ಮಣಾ ಬುದ್ಧ್ಯಾ ವಾ ಪ್ರೇರ್ಯಮಾಣಾಃ ಸಂತಃ ಸವಿತಾರಂ ದೇವಂ ತ್ವಾಂ ಯಜ್ಞೈರ್ಯಜನೀಯೈರ್ಹವಿರ್ಭಿಃ ಸುವೃಕ್ತಿಭಿಃ ಶೋಭನಸ್ತೋತ್ರೈಶ್ಚ ನಮಸ್ಯಂತಿ । ಪರಿಚರಂತಿ ॥ ನಮಸ್ಯಂತಿ । ನಮೋವರಿವಶ್ಚಿತ್ರಙಃ ಕ್ಯಜಿತಿ ಕ್ಯಚ್ ॥

ಪ್ರತಿಪದಾರ್ಥ

ನರಃ—ಕರ್ಮಗಳಿಗೆ ನೇತೃಗಳೂ । ವಿಪ್ರಾಃ—ಮೇಧಾವಿಗಳೂ ಆದ ಅಧ್ವರ್ಯ್ವಾದಿಗಳು । **ಧಿಯೇಷಿತಾಃ**—ಪ್ರಜ್ಞೆಯಿಂದ ಪ್ರೇರಿತರಾಗಿ । **ದೇವಂ**—ದೇವತಾತ್ಮನೂ । **ಸವಿತಾರಂ**—ಸವಿತೃರೂಪನೂ ಆದ ನಿನ್ನನ್ನು । **ಯಜ್ಞೈಃ**—ಯಜ್ಞಾರ್ಹವಾದ ಹವಿಸ್ಸುಗಳಿಂದಲೂ । **ಸುವೃಕ್ತಿಭಿಃ**—ಶ್ರೇಷ್ಠವಾದ ಸ್ತುತಿಗಳಿಂದಲೂ । **ನಮಸ್ಯಂತಿ**—ಸೇವಿಸುತ್ತಾರೆ.

ಭಾವಾರ್ಥ

ಎಲೈ ಸವಿತೃವೇ, ಕರ್ಮಗಳಿಗೆ ನೇತೃಗಳೂ ಮೇಧಾವಿಗಳೂ ಆದ ಅಧ್ವರ್ಯ್ವಾದಿಗಳು ತಮ್ಮ ಪ್ರಜ್ಞೆಯಿಂದ ಪ್ರೇರಿತರಾಗಿ ದೇವತಾತ್ಮನೂ ಸವಿತೃರೂಪನೂ ಆದ ನಿನ್ನನ್ನು ಯಜ್ಞಾರ್ಹವಾದ ಹವಿಸ್ಸುಗಳಿಂದಲೂ ಶ್ರೇಷ್ಠವಾದ ಸ್ತುತಿಗಳಿಂದಲೂ ಸೇವಿಸುತ್ತಾರೆ.

## English Translation

Devout and wise men, impelled by intelligence, adore the divine Savitri with sacrifices and sacred hymns.

CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

**ಸುವೃಕ್ತಿಭಿಃ—ಸುವೃಕ್ತಿ**ಶಬ್ದಕ್ಕೆ ಶ್ರೇಷ್ಠವಾದ ಸ್ತುತಿಯೆಂದರ್ಥ. ಸುಪೂರ್ವಕವಾದ **ವೃಜ್** ಧಾತುವಿನಿಂದ ನಿಷ್ಪನ್ನವಾಗಿದೆಯೆಂದು ಹೇಳಬಹುದು. **ನಾಸತ್ಯಾಭ್ಯಾಂ ಬರ್ಹಿರಿವ ಪ್ರ ವೃಂಜೇ** ಇತ್ಯಾದಿ ಸ್ಥಳಗಳಲ್ಲಿ (ವೃಜ್ (ವೃಂಜ್) ಧಾತುವಿಗೆ) **ಛಿನತ್ತಿ** ಎಂಬರ್ಥವಿದ್ದರೂ ಸಂಪಾದಿಸು ಎಂದು ತಾತ್ಪರ್ಯವನ್ನು ಹೇಳಿರುವಂತೆ ಸುವೃಕ್ತಿಶಬ್ದಕ್ಕೂ ಸಹ ಶ್ರೇಷ್ಠವಾಗಿ ನಿರ್ಮಿತವಾದದ್ದು, ಸಂಪಾದಿತವಾದದ್ದು ಎಂದು ತಾತ್ಪರ್ಯವನ್ನು ಹೇಳಬಹುದು. ಸಾಧಾರಣವಾಗಿ **ಸುವೃಕ್ತಿ**ಶಬ್ದವು ಸ್ತೋತ್ರಪರ್ಯಾಯವಾಗಿಯೇ ಪ್ರಯೋಗಿಸಲ್ಪಟ್ಟಿದೆ. ಛೇದನಪೂರ್ವಕವಾಗಿ ಶುದ್ಧಿಮಾಡು ಎಂಬರ್ಥವು ಸಹಜವಾಗಿರುತ್ತದೆ. ಉದಾಹರಣೆಗೆ— **ದಧಿಧ್ವೇ ವೃಕ್ತಬರ್ಹಿಷಃ** (೧-೩೮-೧) ಇತ್ಯಾದಿ ಸ್ಥಳಗಳಲ್ಲಿ ದರ್ಭೆಯನ್ನು ಸರಿಯಾಗಿ ಕತ್ತರಿಸಿ ಶುದ್ಧಿಮಾಡುವುದು ಎಂಬ ತಾತ್ಪರ್ಯವನ್ನು ಕೊಡುವಂತೆ ಇಲ್ಲಿಯೂ ಸಹ ಶುದ್ಧಿಮಾಡಿದ ಪದಗಳಿಂದ ನಿರ್ಮಿತವಾದ ಸ್ತೋತ್ರವೆಂದು ಅರ್ಥ. ಎಂದರೆ ಪವಿತ್ರವಾದುದೂ ಪೂಜ್ಯವಾದುದೂ ಆದ ಸ್ತುತಿಯೆಂದು ತಾತ್ಪರ್ಯ.

ಕೆಲವು ಪಂಡಿತರು **ಸು** ಪೂರ್ವಕವಾದ **ಋಕ್ತಿ** ಎಂದು ಈ ಪದದ ನಿರ್ವಚನವನ್ನು ತೋರಿಸಿ ಶ್ರೇಷ್ಠವಾದ ಸ್ತುತಿಯೆಂದರ್ಥಮಾಡಿದ್ದಾರೆ. ಉದಾಹರಣೆಗೆ—Monier Williams ಎಂಬ ಪಂಡಿತನು ತನ್ನ Sanskrit English Dictionary ಯಲ್ಲಿ **ಸು-ಋಕ್ತಿ= ಸು-ಋಚ್, ಸು** ಪೂರ್ವಕವಾದ **ಋಚ್**, ಶ್ರೇಷ್ಠವಾದುದೂ ಋಗಾತ್ಮಕವಾದುದೂ ಆದ ಸ್ತುತಿಯೆಂದರ್ಥಮಾಡಿ **ಸು-ಇತ** ಎಂಬಲ್ಲಿ ಯಾವ ರೀತಿ **ಸುವಿತ** ಎಂದಾಗುತ್ತದೆಯೋ ಆದರಂತೆಯೇ **ಸುವೃಕ್ತಿ** ಎಂಬಲ್ಲಿಯೂ ನಿರ್ವಚನವನ್ನು ತೋರಿಸಬೇಕೆಂದು ತಿಳಿಸಿದ್ದಾನೆ. ಆದರೆ, **ನಮೋವೃಕ್ತಿ** ಇತ್ಯಾದಿ ಸ್ಥಳಗಳಲ್ಲಿ **ನಮಃ+ಋಚ್** ಎಂಬ ನಿರ್ವಚನವು ಸಾಧುವಾಗಿರುವುದಿಲ್ಲ.

**ಇಹೇಹೈಷಾಂ ಕೃಣುಹಿ ಭೋಜನಾನಿ ಯೇ ಬರ್ಹಿಷೋ ನಮೋವೃಕ್ತಿಂ ನ ಜಗ್ಮುಃ** ||

(ಋ. ಸಂ. ೧೦-೧೩೧-೨)

ಇತ್ಯಾದಿ ಸ್ಥಳಗಳಲ್ಲಿ **ನಮಸ್** ಶಬ್ದಕ್ಕೆ ಅನ್ನ ಅಥವಾ **ಸ್ತುತಿ**ಯೆಂದರ್ಥಮಾಡಿ, **ವೃಕ್ತಿ** ಶಬ್ದಕ್ಕೆ ವರ್ಜನವೆಂದರ್ಥಮಾಡಿದೆ. **ವೃಜ್** ಧಾತುವಿನಿಂದ ನಿಷ್ಪನ್ನವಾಗಿ ಛೇದಕಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆಯೆಂದೂ, ಸ್ತುತಿಯ ಛೇದನವು ಸಂಭವಿಸುವುದಿಲ್ಲ ಎಂದು ಉದಾಹೃತವಾದ ಋಕ್ಕಿನಲ್ಲಿ ತಾತ್ಪರ್ಯವೆಂದೂ ತಿಳಿಸಿದೆ. ಇಂತಹ ಉದಾಹರಣೆಗಳ ಆಧಾರದಿಂದ ಪ್ರಕೃತವಾದ **ಸು-ವೃಕ್ತಿ** ಎಂಬ ಪದವೂ **ವೃಜ್** ಧಾತುವಿನಿಂದಲೇ ನಿಷ್ಪನ್ನವಾಗಿದೆಯೆಂದು ಹೇಳಲು ತೊಂದರೆಯಿಲ್ಲ. ಸಂದರ್ಭಗಳಿಗನುಗುಣವಾಗಿ ಪದಗಳನ್ನು ಆರಿಸಿ ಕಾವ್ಯಾತ್ಮಕವಾದ ಸ್ತುತಿಗಳಲ್ಲಿ ಆ ಪದಗಳನ್ನು ಸುಸಂಸ್ಕೃತಗಳನ್ನಾಗಿ ಮಾಡಿ ನಿರ್ಮಿತವಾದ ಸ್ತೋತ್ರಗಳು **ಸುವೃಕ್ತಿ** ಶಬ್ದ ವಾಚ್ಯಗಳಾಗುತ್ತವೆ.

**ನಮೋವೃಕ್ತಿ**ಯೆಂಬ ಪದದಲ್ಲಿ **ವೃಜ್** ಧಾತುವಿನಿಂದ **ವೃಕ್ತಿ** ಶಬ್ದವು ನಿಷ್ಪನ್ನವಾಗಿದೆಯೆಂದು ತೋರಿಸಲು ಮಾತ್ರ ಆ ಉದಾಹರಣೆಯನ್ನು ತೆಗೆದುಕೊಂಡಿದೆ. ಎರಡು ಪದಗಳಿಗೂ ತಾತ್ಪರ್ಯವು ಸಮಾನವಾದುದಲ್ಲ.

ಅಥವಾ ವರ್ಜನಾರ್ಥದಲ್ಲಿಯೂ ಈ ಪದದ ಪ್ರಯೋಗವಿದ್ದು ಆಗಲೂ ಸಹ ಶ್ರೇಷ್ಠವಾದ ಸ್ತುತಿಯೆಂದೇ ಅರ್ಥವಾಗಬಹುದು ಎಂದು ಹೇಳಲೂ ಅವಕಾಶವಿದೆ. ಉದಾಹರಣೆಗೆ—

CC-0. Jangamwadi Math Collection. Digitized by eGangotri

ಅಗ್ನಿಂ ನ ಸ್ವವೃಕ್ತಿಭಿರ್ಹೋತಾರಂ ತ್ವಾ ವೃಣೀಮಹೇ ॥
(ಋ. ಸಂ. ೧೦-೭೧-೧)

ಎಂಬಲ್ಲಿ ಸ್ವವೃಕ್ತಿ ಶಬ್ದದಲ್ಲಿ, ಸ್ವಶಬ್ದಕ್ಕೆ ಸ್ವಯಂಕೃತಾಭಿಃ—ತನ್ನಿಂದಲೇ ನಿರ್ಮಿತವಾದುದು ಎಂದೂ, ವೃಕ್ತಿಭಿಃ ಎಂಬುದಕ್ಕೆ ದೋಷವರ್ಜಿತಾಭಿಃ—ದೋಷಗಳಿಂದ ಬೇರೆಮಾಡಲ್ಪಟ್ಟುದು ಎಂದೂ ಅರ್ಥಮಾಡಿದೆ. ಸ್ವವೃಕ್ತಿಭಿಃ ಸ್ವಯಂಕೃತವಾದುದೂ, ದೋಷವರ್ಜಿತವಾದುದೂ ಆದುದರಿಂದಲೇ ಉತ್ತಮವಾದುದೂ ಆದ ಸ್ತುತಿಗಳಿಂದ (ವೃಣೀಮಹೇ) ಎಂದು ತಾತ್ಪರ್ಯವನ್ನು ಹೇಳುವಂತೆ ಪ್ರಕೃತದಲ್ಲಿಯೂ ಸಹ ಸುವೃಕ್ತಿಭಿಃ ಎಂಬ ಪದಕ್ಕೆ ಶ್ರೇಷ್ಠವಾದುದೂ, ದೋಷವರ್ಜಿತವಾದುದೂ ಆದುದರಿಂದಲೇ ಉತ್ತಮವಾದುದೂ ಆದ ಸ್ತುತಿಗಳಿಂದ ಎಂದರ್ಥವನ್ನು ಹೇಳಬಹುದು.

---

ಸಂಹಿತಾಪಾಠಃ

ಸೋಮೋ ಜಿಗಾತಿ ಗಾತುವಿದ್ದೇವಾನಾಮೇತಿ ನಿಷ್ಕೃತಂ ।
ಋತಸ್ಯ ಯೋನಿಮಾಸದಂ ॥ ೧೩ ॥

ಪದಪಾಠಃ

ಸೋಮಃ । ಜಿಗಾತಿ । ಗಾತುऽವಿತ್ । ದೇವಾನಾಂ । ಏತಿ । ನಿಃऽಕೃತಂ ।
ಋತಸ್ಯ । ಯೋನಿಂ । ಆऽಸದಂ ॥ ೧೩ ॥

ಸಾಯಣಭಾಷ್ಯಂ

ಅಗ್ನೀಷೋಮಪ್ರಣಯನೇ ಸೋಮೋ ಜಿಗಾತೀತ್ಯಾದ್ಯಾಸ್ತಿಸ್ರ ಋಚಃ । ಸೂತ್ರಿತಂ ಚ । ಸೋಮೋ ಜಿಗಾತಿ ಗಾತುವಿದ್ದೇವಾನಾಂ ತಮಸ್ಯ ರಾಜಾ ವರುಣಸ್ತಮಶ್ವಿನೇತ್ಯರ್ಧರ್ಚ ಆರಮೇತ್ । ಆ. ೪-೧೦ । ಇತಿ ॥

ಗಾತುವಿತ್ । ಗಾತುರ್ವೇದಿಮಾರ್ಗಃ । ತಂ ಜಾನಾನಃ ಸೋಮೋ ಜಿಗಾತಿ । ಗಚ್ಛತಿ । ಗಂತವ್ಯಂ ಸ್ಥಾನಂ ದರ್ಶಯತಿ । ದೇವಾನಾಂ ಸಂಬಂಧಿ ನಿಷ್ಕೃತಂ ಸಂಸ್ಕೃತಮಾಸದಂ ಸರ್ವೈರಾಸದನೀಯಮೃತಸ್ಯ ಯಜ್ಞಸ್ಯ ಯೋನಿಂ ಸ್ಥಾನಂ ಹವಿರ್ಧಾನಾಖ್ಯಮೇತಿ । ಪ್ರಾಪ್ನೋತಿ ॥ ಜಿಗಾತಿ । ಗಾ ಸ್ತುತೌ । ಜುಹೋತ್ಯಾದಿಃ ॥

ಪ್ರತಿಪದಾರ್ಥ

ಗಾತುವಿತ್—ತನ್ನ ಗಂತವ್ಯಪ್ರದೇಶವನ್ನು ಅರಿತ । ಸೋಮಃ—ಸೋಮವು । ಜಿಗಾತಿ—ಹೋಗಿ ಸೇರುತ್ತದೆ । ದೇವಾನಾಂ—ದೇವತೆಗಳಿಗೆ ಸೇರತಕ್ಕದ್ದೂ । ನಿಷ್ಕೃತಂ—ಸುಸಂಸ್ಕೃತವಾದದ್ದೂ । ಆಸದಂ—



CC-0. Jangamwadi Math Collection. Digitized by eGangotri

ದೇವತೆಗಳ ಆಸನವುಳ್ಳದ್ದೂ ಆದ | **ಋತಸ್ಯ ಯೋನಿಂ**—ಯಜ್ಞದ ಯೋನಿರೂಪವಾಗಿ (ಹವಿರ್ಧಾನ ರೂಪದಲ್ಲಿ) | **ಏತಿ**—ಪರಿಣಮಿಸುತ್ತದೆ |

ಭಾವಾರ್ಥ

ತನ್ನ ಗಂತವ್ಯಪ್ರದೇಶವನ್ನರಿತ ಸೋಮವು ದೇವತೆಗಳ ಆಸನರೂಪವೂ ಸುಸಂಸ್ಕೃತವೂ ಆದ ಯಜ್ಞ ವೇದಿಕೆಯನ್ನು ಸೇರಿ ಹವಿಸ್ಸಿನ ರೂಪದಲ್ಲಿ ದೇವತೆಗಳಿಗೆ ಅರ್ಪಿತವಾಗುತ್ತದೆ.

English Translation

Soma, knowing the right path, proceeds (by it): he goes to the excellent seat of the gods, the place of sacrifice.

ವಿಶೇಷವಿಷಯಗಳು

ಅಗ್ನೀಷೋಮಪ್ರಣಯನಕರ್ಮದಲ್ಲಿ **ಸೋಮೋ ಜಿಗಾತಿ** ಎಂದು ಮೊದಲಾಗುವ ಈ ಮೂರು ಋಕ್ಕುಗಳನ್ನು ಆ ಕಾಲದಲ್ಲಿ ಪಠಿಸಬೇಕಾದ ಮೊದಲನೆಯ ಮೂರು ಋಕ್ಕುಗಳಿಗಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—**ಸೋಮೋ ಜಿಗಾತಿ ಗಾತುವಿದ್ದೇವಾನಾಂ ತಮಸ್ಯ ರಾಜಾ ವರುಣಸ್ತಮಶ್ವಿನೇತ್ಯರ್ಧರ್ಚ ಆರಮೇತ್** ಎಂಬ ಸೂತ್ರದಿಂದ (ಆ. ೪-೧೦) ವಿವೃತವಾಗಿರುವುದು

**ಗಾತುವಿತ್—ಗಾತುಶಬ್ದಕ್ಕೆ** ಗಂತವ್ಯಪ್ರದೇಶವೆಂದರ್ಥ. ಗಂತವ್ಯಮಾರ್ಗವೆಂದೂ ಆಗುತ್ತದೆ. ಈ ಗಂತವ್ಯಪ್ರದೇಶವು ಪೃಥ್ವಿಯಲ್ಲಿ ಯಜ್ಞಸ್ಥಾನವು. ಇದು ಅನುಷ್ಠಾನಮಾರ್ಗವು. (ದೇವಲೋಕಗಮನದ ಮಾರ್ಗವೂ ಆಗಬಹುದು) ಪ್ರಕೃತದಲ್ಲಿ ಯಜ್ಞವೇದಿಕೆಗೆ ಒಯ್ಯುವ ಮಾರ್ಗವೆಂದರ್ಥಮಾಡಿದೆ. ಈ ಪದಕ್ಕೆ ಗೃಹ, ಸ್ತೋತ್ರ ಇತ್ಯಾದ್ಯರ್ಥಗಳಲ್ಲಿಯೂ ಪ್ರಯೋಗವಿರುವ ವಿಷಯವನ್ನು ಹಿಂದೆ ತಿಳಿಸಿದೆ (ಋಗ್ವೇದಸಂಹಿತಾ. ಭಾಗ. ೧೧. ಪುಟ. 503)

**ಋತಸ್ಯ ಯೋನಿಂ ಏತಿ—ಯಜ್ಞಸ್ಯ ಸ್ಥಾನಂ ಹವಿರ್ಧಾನಾಖ್ಯಂ ಪ್ರಾಪ್ನೋತಿ** | ಹವಿರ್ಧಾನವೆಂದು ಕರೆಯಲ್ಪಡುವ ಯಜ್ಞಸ್ಥಾನವನ್ನು ಸೇರುತ್ತದೆಂದು ತಾತ್ಪರ್ಯವನ್ನು ತಿಳಿಸುತ್ತದೆ. ಆದುದರಿಂದ ಇಲ್ಲಿ ಗಾತುಶಬ್ದಕ್ಕೆ **ಋತದ ಯೋನಿಯೆಂದರ್ಥ- ಯೋನಿಶಬ್ದಕ್ಕೂ** ಗೃಹ, ಉತ್ಪತ್ತಿಸ್ಥಾನ, ವೇದ್ಯಾಖ್ಯವಾದ ಪ್ರಧಾನಸ್ಥಾನ ಇತ್ಯಾದ್ಯರ್ಥಗಳಿರುವುದನ್ನು ಹಿಂದೆ ತಿಳಿಸಿದೆ. ಪ್ರಕೃತದಲ್ಲಿ ಹವಿರ್ಧಾನಾಖ್ಯವಾದ ಪ್ರಧಾನವಾದ ಸ್ಥಾನವೆಂದರ್ಥ ಮಾಡಿದೆ. ಸೋಮಯಾಗಕ್ಕೆ ಪ್ರಧಾನೋಪಕರಣವಾದ ಸೋಮವನ್ನಿಡುವುದಕ್ಕಾಗಿಯೇ ಪ್ರತ್ಯೇಕವಾಗಿ ನಿರ್ಮಿತವಾಗಿರುವ ಮಂಡಪಕ್ಕೆ ಹವಿರ್ಧಾನವೆಂದು ಹೆಸರು. ಅಥವಾ ಸೋಮಾತ್ಮಕವಾದ ಹವಿಸ್ಸನ್ನು ತರತಕ್ಕ ಗಾಡಿಗೂ ಈ ಹೆಸರು ಪ್ರಸಿದ್ಧವಾಗಿದೆ.

**ಯದಸ್ಮಿನ್ಸೋಮೋ ಭವತಿ ಹವಿರ್ವೈ ದೇವಾನಾಗ್ಂ ಸೋಮಸ್ತಸ್ಮಾದ್ಧವಿರ್ಧಾನಂ ನಾಮ** ||

(ಶ. ಬ್ರಾ. ೩-೫-೩-೨)

CC-0. Jangamwadi Math Collection. Digitized by eGangotri

ದೇವತೆಗಳಿಗೆ ಹವಿಸ್ಸಾದ ಸೋಮವು ಇದರಲ್ಲಿ ಇಡಲ್ಪಡುವುದರಿಂದ ಇದಕ್ಕೆ ಹವಿರ್ಧಾನವೆಂದು ಹೆಸರು ಎಂದು ಶತಪಥಬ್ರಾಹ್ಮಣದಲ್ಲಿ ಇದರ ತಾತ್ಪರ್ಯವನ್ನು ತಿಳಿಸಿದೆ. ಸೋಮವಾಹಕವು ಸೋಮವನ್ನು ತರುವ ಗಾಡಿಯಾಗಬಹುದು ಅಥವಾ ಅದನ್ನಿಡುವ ಮುಖ್ಯಸ್ಥಾನವಾಗಬಹುದು.

**ಯಜ್ಞಂ ವಾ ಏತತ್ಸಂಭರಂತಿ ಯತ್ಸೋಮಕ್ರಯಣ್ಯೈ ಪದಂ ಯಜ್ಞಮುಖಗ್ಂ ಹವಿರ್ಧಾನೇ ಯರ್ಹಿ ಹವಿರ್ಧಾನೇ ಪ್ರಾಚೀ ಪ್ರವರ್ತಯೇಯುಃ ॥**

(ತೈ. ಸಂ ೩-೧-೩-೧)

ಹವಿರ್ಧಾನಗಳೇ ಯಜ್ಞಮುಖಗಳು. ಇವುಗಳು ಮುಂದಕ್ಕೆ ಸರಿದಾಗ ಅವುಗಳ ಅಕ್ಷಗಳಿಗೆ ತೈಲಗಳನ್ನು ಹಾಕಬೇಕು ಎಂಬ ಈ ವರ್ಣನೆಯಲ್ಲಿ ಸೋಮವನ್ನು ತರುವ ಗಾಡಿಗಳೆಂದು ಸ್ಪಷ್ಟವಾಗಿದೆ. ಭಟ್ಟಭಾಸ್ಕರರು ಈ ಪದದ ತಾತ್ಪರ್ಯವನ್ನು ವಿವರಿಸುತ್ತಾ **ಹವೀಂಷಿ ನಿಧೀಯಂತೇ ಅನಯೋರಿತಿ ಹವಿರ್ಧಾನೇ ಶಕಟೇ**—ಇವುಗಳಲ್ಲಿ ಹವಿಸ್ಸುಗಳು ಇಡಲ್ಪಡುವುದರಿಂದ ಈ ಹೆಸರು ಎಂದು ಮೇಲೆ ಉದಾಹೃತವಾಗಿರುವ ವಾಕ್ಯದಲ್ಲಿರುವಂತೆ ವಿವರಿಸಿದ್ದಾರೆ. ಸೋಮವಾಹಕವಾದ ಶಕಟವಾಗಲಿ ಅಥವಾ ಅದನ್ನಿಡುವುದಕ್ಕಾಗಿಯೇ ಪ್ರತ್ಯೇಕವಾಗಿ ನಿರ್ಮಿತವಾಗಿರುವ ಮಂಡಪವಾಗಲಿ, ಎರಡೂ ಯಜ್ಞಕ್ಕೆ ಪ್ರಧಾನವಾದ ಉಪಕರಣವನ್ನು ಇಟ್ಟಿರುವುದರಿಂದ ಇವನ್ನು ನಿರ್ದೇಶಿಸುವ ಹವಿರ್ಧಾನವು ಯಜ್ಞಮುಖವೆಂದೇ ಪ್ರಸಿದ್ಧವಾಗಿದೆ. ಅನೇಕ ಕಡೆಗಳಲ್ಲಿ ಈ ಹವಿರ್ಧಾನವು ಲಾಕ್ಷಣಿಕವಾಗಿಯೂ ಪ್ರಯೋಗಿಸಲ್ಪಟ್ಟಿದೆ ಮತ್ತು ಗಭೀರವಾದ ರಹಸ್ಯಾರ್ಥವನ್ನೂ ಒಳಗೊಂಡಿದೆ.

**ಪುರುಷೋ ವಾವ ಯಜ್ಞಃ**.... .... .... .... (ಛಾ. ಉ. ೩-೧೬-೧) ಪುರುಷನೇ ಯಜ್ಞರೂಪನು ಎಂದು ಛಾಂದೋಗ್ಯಾದಿಗಳಲ್ಲಿ ಪುರುಷನ ಅವಯವಗಳಿಗೂ ಯಜ್ಞದ ಉಪಕರಣಾತ್ಮಕವಾದ ಅವಯವಗಳಿಗೂ ತಾದಾತ್ಮ್ಯವನ್ನು ತೋರಿಸುವ ವರ್ಣನೆಯಿದೆ. ಇದನ್ನೇ ಶತಪಥಬ್ರಾಹ್ಮಣದಲ್ಲಿ ವಿವರಿಸುತ್ತಾ,

**ಪುರುಷೋ ವೈ ಯಜ್ಞಃ ... ....ಶಿರ ಏವಾಸ್ಯ ಹವಿರ್ಧಾನಂ ।**

**ಮುಖಮೇವಾಸ್ಯಾಹವನೀಯಃ .... ....। ಉದರಮೇವಾಸ್ಯ ಸದಃ.... ....।**

(ಶ. ಬ್ರಾ. ೩-೫-೩-೧ ರಿಂದ ೨೪)

ಪುರುಷನಿಗೆ ಶಿರಸ್ಸು ಹೇಗೆ ಪ್ರಧಾನಾಂಗವೋ ಆರೀತಿ ಪುರುಷರೂಪವಾದ ಯಜ್ಞಕ್ಕೆ ಹವಿರ್ಧಾನವು ಪ್ರಧಾನವಾಗಿರುತ್ತದೆ. ಆಹವನೀಯವೇ ಮುಖವು. ಸದಸ್ಸೇ ಉದರವು ಇತ್ಯಾದಿಯಾಗಿ ವರ್ಣಿಸುತ್ತಾ ಹವಿರ್ಧಾನದ ಪ್ರಾಧಾನ್ಯವನ್ನು ತಿಳಿಸಿದೆ. ಅನೇಕವಾಗಿ ಶಕಟದ್ವಯವೇ ಹವಿರ್ಧಾನವೆಂದು ನಿರ್ದಿಷ್ಟವಾಗಿದೆ. ಮತ್ತು ಅತ್ಯಂತ ಪೂಜ್ಯಸ್ಥಾನವನ್ನೂ ಹೊಂದಿದೆ.

**ಪ್ರೇತಾಂ ಯಜ್ಞಸ್ಯ ಶಂಭುವಾ ಯುವಾಮಿದಾ ವೃಣೀಮಹೇ । ಅಗ್ನಿಂ ಚ ಹವ್ಯವಾಹನಂ ॥**

(ಋ. ಸಂ. ೨-೪೧-೧೯)

**ಆ ವಾಮುಪಸ್ಥಮದ್ರುಹಾ ದೇವಾಃ ಸೀದಂತು ಯಜ್ಞಿಯಾಃ । ಇಹಾದ್ಯ ಸೋಮಪೀತಯೇ ॥**

(ಋ. ಸಂ. ೨-೪೧-೨೧)

ಇತ್ಯಾದಿ ಋಕ್ಕುಗಳಲ್ಲಿ ಹವಿರ್ಧಾನಗಳೆರಡೂ ಯಜ್ಞಕ್ಕೆ ಸುಖಸಂಪಾದಕವೆಂದೂ ದ್ರೋಹವರ್ಜಿತವೆಂದೂ ವರ್ಣಿತವಾಗಿವೆ. ಆದರೆ ಇಲ್ಲಿ ಹವಿರ್ಧಾನವೆಂದರೇನು ? ಶಕಟದ್ವಯವೆಂದಾಗಬಹುದು ಅಥವಾ ದ್ಯಾವಾಪೃಥಿವಿಗಳಾಗಬಹುದು. **ಹವಿರ್ಧಾನೇ ಅನಸೀ ತೇದ್ರೋಪೇ ದ್ಯಾವಾಪೃಥಿವ್ಯೌ ವಾ** ಹವಿಸ್ಸನ್ನು ವಹಿಸುವ ಎರಡು ಶಕಟ

CC-0. Jangamwadi Math Collection. Digitized by eGangotri

ಗಳನ್ನು ಅಲಂಕರಿಸುವಾಗ ದ್ಯಾವಾಪೃಥಿವಿಗಳನ್ನು ಪ್ರಶಂಸಿಸುವ ಮಂತ್ರಗಳನ್ನೇ ಪಠಿಸುತ್ತಾ ಇವಕ್ಕೆ ಅಂಜನಾದಿ ಗಳನ್ನರ್ಪಿಸುವ ಕ್ರಮವೂ ಉಂಟು. ದ್ಯಾವಾಪೃಥಿವಿಗಳನ್ನೇ ಹವಿರ್ಧಾನಗಳೆಂದು ಸಂಬೋಧಿಸುವುದೂ ಉಂಟು. ಇವುಗಳನ್ನು ಅಲಂಕರಿಸುವ ವೇಳೆಯಲ್ಲಿ ಇವುಗಳ ಪ್ರಶಂಸೆಯು ಐತರೇಯ ಬ್ರಾಹ್ಮಣದಲ್ಲಿ ಈ ರೀತಿ ಉಕ್ತವಾಗಿದೆ.

**ಹವಿರ್ಧಾನಾಭ್ಯಾಂ ಪ್ರೋಹ್ಯಮಾಣಾಭ್ಯಾಮನುಬ್ರೂಹೀತ್ಯಾಹಾಧ್ವರ್ಯುಃ |**

(ಐ. ಬ್ರಾ. ೧-೨೯)

ಹವಿರ್ಧಾನಾಖ್ಯಾವಾದ ಸೋಮಶಕಟಗಳನ್ನುಮುಂದಕ್ಕೆ ಬರಮಾಡುವಾಗ ಅವನ್ನು ಪ್ರಶಂಸಿಸುವ ಮಂತ್ರವನ್ನು ಪಠಿಸು ಎಂದು ಅಧ್ವರ್ಯುವು ಆದೇಶವನ್ನು ಕೊಡುತ್ತಾನೆ. ಆಗ ಹೋತೃವು ಕೆಲವು ಋಙ್ಮಂತ್ರಗಳನ್ನು ಪಠಿಸಿ ಅವನ್ನು ಸ್ತುತಿಸುತ್ತಾನೆ. ಅವುಗಳಲ್ಲಿ ಮೊದಲನೆಯದಾಗಿ,

**ಯುಜೇ ವಾಂ ಬ್ರಹ್ಮ ಪೂರ್ವ್ಯಂ ನಮೋಭಿರ್ವಿ ಶ್ಲೋಕ ಏತು ಪಥ್ಯೇವ ಸೂರೇಃ |**
**ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾ ಆ ಯೇ ಧಾಮಾನಿ ದಿವ್ಯಾನಿ ತಸ್ಥುಃ ||**

(ಋ. ಸಂ. ೧೦-೧೩-೧)

ಪ್ರಾಚೀನವಾದ ಮಂತ್ರವನ್ನು ಪಠಿಸುತ್ತಾ ಪೂಜ್ಯವಾದ ಹವಿಸ್ಸನ್ನು ನಿಮ್ಮಲ್ಲಿ ತಂಬುತ್ತೇನೆ. ನಿಮ್ಮ ಶಬ್ದವು ದೇವತೆಗಳನ್ನು ಮುಟ್ಟಲಿ. ಅಮೃತನಾದ ಪ್ರಜಾಪತಿಯ ಪುತ್ರರೆಲ್ಲರೂ ನಿಮ್ಮ ಶಬ್ದವನ್ನು ಕೇಳಲಿ ಎಂದ ಪಠಿಸುತ್ತಾನೆ.

**ಬ್ರಹ್ಮಣಾ ವಾ ಏತೇ ದೇವಾ ಅಯುಂಜತ ಯದ್ಧವಿರ್ಧಾನೇ ಬ್ರಹ್ಮಣೈವೈನೇ ಏತದ್ಯುಂಕ್ತೇ ನ ವೈ ಬ್ರಹ್ಮಣ್ವದ್ರಿಷ್ಯತಿ ||**

ಎಲೈ ಶಕಟಗಳೇ, ಪೂರ್ವದಲ್ಲಿ ದೇವತೆಗಳು ಇದೇ ಪ್ರಾಚೀನವಾದ ಮಂತ್ರವನ್ನು ಪಠಿಸುತ್ತಾ ನಿಮ್ಮನ್ನು ಯೋಜಿಸಿದರು. ಈಗಲೂ ಅದೇ ಕ್ರಮವು ಅನುಸರಿಸಲ್ಪಡುತ್ತದೆ. ಈ ಮಂತ್ರಪಠನದಿಂದ ಯಾವ ತೊಂದರೆಯೂ ಪುರುಷನನ್ನು ಸಮೀಪಿಸುವುದಿಲ್ಲ. ಅನಂತರ, **"ಪ್ರೇತಾಂ ಯಜ್ಞಸ್ಯ.... ...."** ಎಂಬ ದ್ಯಾವಾಪೃಥಿವಿಗಳನ್ನು ಸ್ತುತಿಸುವ ಮಂತ್ರಗಳನ್ನು ಪಠಿಸುತ್ತಾನೆ. ಆದರೆ ಹವಿರ್ಧಾನದ ಸ್ತುತಿಗೂ, ದ್ಯಾವಾಪೃಥಿವಿಗಳ ಸ್ತುತಿಗೂ ಸಂಬಂಧ ವೇನೆಂದರೆ,

**ದ್ಯಾವಾಪೃಥಿವೀ ವೈ ದೇವಾನಾಂ ಹವಿರ್ಧಾನೇ ಆಸ್ತಾಂ ತೇ ಉ ಏವಾದ್ಯಾಪಿ ಹವಿರ್ಧಾನೇ ತೇ ಹೀದಮಂತರೇಣ ಸರ್ವಂ ಹವಿರ್ಯದಿದಂ ಕಿಂ ಚ ತಸ್ಮಾತ್ತ್ರ್ಯುಚಂ ದ್ಯಾವಾಪೃಥಿವೀಯ- ಮನ್ವಾಹ ||**

ದ್ಯಾವಾಪೃಥಿವಿಗಳೇ ದೇವತೆಗಳ ಹವಿರ್ಧಾನಗಳು. ಈಗಲೂ ಅವೇ ಆಗಿವೆ. ಇವುಗಳಲ್ಲಿಯೇ ಸಮಸ್ತವಾದ ಹವಿಸ್ಸುಗಳೂ ಅಡಕವಾಗಿವೆ. ಆದುದರಿಂದ ದ್ಯಾವಾಪೃಥಿವಿಗಳನ್ನುದ್ದೇಶಿಸಿ ಪ್ರಾರ್ಥಿಸಿದ ಮೂರು ಋಕ್ಕುಗಳನ್ನು ಪಠಿಸತಕ್ಕದ್ದು. **"ಪ್ರೇತಾಂ ಯಜ್ಞಸ್ಯ....", "ದ್ಯಾವಾ ನಃ ಪೃಥಿವೀ...."; "ಆ ವಾ ಮುಪಸ್ಥ- ಮದ್ರುಹಾ...."** (ಋ. ಸಂ. ೨-೪೧-೧೯ ರಿಂದ ೨೧.) ಎಂಬ ಮೂರೂ ಈ ಕಾಲದಲ್ಲಿ ಪಠಿಸಲ್ಪಡಬೇಕಾದ ತೃಚಗಳು. ಇದೇ ಪ್ರಶಂಸೆಯನ್ನು ಮುಂದುವರಿಸುತ್ತಾ, ಋ. ಸಂ. ೧೦-೧೩-೨ನೇ ಋಕ್ಕನ್ನು ಪಠಿಸಿ ಈ ರೀತಿ ಸ್ತುತಿಸಿದೆ.

CC-0. Jangamwadi Math Collection. Digitized by eGangotri

ಯಮೇ ಇವ ಯತಮಾನೇ ಯದ್ವೈತಮಿತಿ ಯಮೇ ಇವ ಹ್ಯೇತೇ ಯತಮಾನೇ ಪ್ರಬಾಹುಗಿತಃ॥
ನೀವಿಬ್ಬರೂ ಒಂದೇ ಉದರದಲ್ಲಿ ಜನಿಸಿದ ಎರಡು ಕನ್ಯೆಯರಂತೆ ಒಟ್ಟಿಗೆ ಕೂಡಿಕೊಂಡು ಜಗದುಪಕಾರಾರ್ಥವಾಗಿ ಒಂದೇ ರೀತಿ ಕೂಡಿಕೊಂಡು ಬರುತ್ತಿದ್ದೀರಿ.

ಪ್ರ ವಾಂ ಭರನ್ಮಾನುಷಾ ದೇವಯಂತ ಇತಿ ದೇವಯಂತೋ ಹ್ಯೇನೇ ಮಾನುಷಾಃ ಪ್ರಭರಂತಿ ॥
ಎಲೈ ಹವಿರ್ಧಾನಗಳೇ, ಯಾವ ಲೋಕೋಪಕಾರಾರ್ಥವಾಗಿ ನೀವು ಒಟ್ಟಿಗೆ ಸೇರಿಕೊಂಡು ಬರುತ್ತೀರೋ ಅದಕ್ಕಾಗಿಯೇ ಋತ್ವಿಗ್ಯಜಮಾನರು ನಿಮ್ಮನ್ನು ಬರಮಾಡಿಕೊಳ್ಳುತ್ತಾರೆ.

ಆಸೀದತಂ ಸ್ವಮು ಲೋಕಂ ವಿದಾನೇ ಸ್ವಾಸಸ್ಥೇ ಭವತಮಿಂದವೇ ನ ಇತಿ ಸೋಮೋ ವೈ ರಾಜೇಂದುಃ ಸೋಮಾಯೈವೈನೇ ಏತದ್ರಾಜ್ಞ ಆಸದೇಽಚೀಕ್ಲೃಪತ್ ॥

ಎಲೈ ಹವಿರ್ಧಾನಗಳೇ, ನೀವು ನಿಮ್ಮ ಪ್ರತ್ಯೇಕವಾದ ಸ್ಥಾನವನ್ನರಿತು ಕುಳಿತುಕೊಳ್ಳಿ. ನಮ್ಮ ಸೋಮಕ್ಕೆ ಸುರಕ್ಷಿತಗಳಾದ ಆಧಾರಗಳಾಗಿರಿ. ಸೋಮನೇ ರಾಜನಾಗಿರುವುದರಿಂದ ಅವನು ಆಸೀನನಾಗಲು ಈ ಎರಡು ಆಸನಗಳೂ ಸಿದ್ಧಪಡಿಸಲ್ಪಡುತ್ತವೆ, ಎಂದು ಸ್ತುತಿಸಿ ನಂತರ ಋ. ಸಂ. ೧-೮೩-೩ ನೇ ಮಂತ್ರವನ್ನು ಪಠಿಸುತ್ತಾ ಈ ರೀತಿ ಸ್ತುತಿಸಿದೆ.

ಅಧಿ ದ್ವಯೋರದಧಾ ಉಕ್ಥ್ಯಂ ವಚ ಇತಿ ದ್ವಯೋರ್ಹ್ಯೇತತ್ತೃತೀಯಂ ಛದಿರಧಿ ನಿಧೀಯತೇ, ಉಕ್ಥ್ಯಂ ವಚ ಇತಿ ಯದಾಹ ಯಜ್ಞಿಯಂ ವೈ ಕರ್ಮೋಕ್ಥ್ಯಂ ವಚೋ ಯಜ್ಞಮೇವೈ-ತೇನ ಸಮರ್ಧಯತಿ । ಯತಸ್ರುಚಾ ಮಿಥುನಾ ಯಾ ಸಪರ್ಯತಃ । ಅಸಂಯತ್ತೋ ವ್ರತೇ ತೇ ಕ್ಷೇತಿ ಪುಷ್ಯತೀತಿ । ಯದೇವಾದಃ ಪೂರ್ವಂ ಯತ್ತವತ್ಪದಮಾಹ ತದೇವೈತೇನ ಶಾಂತ್ಯಾ ಶಮಯತಿ । ಭದ್ರಾ ಶಕ್ತಿರ್ಯಜಮಾನಾಯ ಸುನ್ವತ ಇತ್ಯಾಶಿಷಮಾಶಾಸ್ತೇ ॥

ಎರಡು ಛದಿಗಳ ಮೇಲೂ ಉಕ್ಥ್ಯವು ಅರ್ಪಿತವಾಗುತ್ತದೆ. ಹವಿರ್ಧಾನಾಖ್ಯವಾದ ಶಕಟಗಳ ಮೇಲೆ ಸೋಮವನ್ನಿಡುವುದಕ್ಕಾಗಿ ಗೃಹಾಕಾರದಲ್ಲಿ ಸುತ್ತಲೂ ನಿರ್ಮಿತವಾಗುವ ಆಚ್ಛಾದನವೇ ಛದಿಯೆಂದು ವ್ಯವಹರಿಸಲ್ಪಟ್ಟಿದೆ. ಇಂತಹ ಎರಡು ಛದಿಗಳನ್ನೂ ಎರಡು ಹವಿರ್ಧಾನಗಳ ಮೇಲೂ ನಿರ್ಮಿಸಿ ಇವೆರಡರ ಮೇಲೂ ಮೂರನೆಯದು ಇಡಲ್ಪಡುತ್ತದೆ ಇದನ್ನೇ ತೈತ್ತಿರೀಯದಲ್ಲೂ ದಂಡೋ ವಾ ಔದುಂಬರಸ್ತೃತೀಯಸ್ಯ ಹವಿರ್ಧಾನಸ್ಯ.... ಎಂಬ ವಾಕ್ಯಗಳಿಂದ ನಿರ್ದೇಶಿಸಿದೆ. ಎರಡರ ಮೇಲೆ ಮೂರನೆಯ ಛದಿಯು ಸ್ಥಾಪಿತವಾಗುವುದರಿಂದಲೇ ಈ ಕ್ರಮವು. ಉಕ್ಥ್ಯವೇ ಯಾಜ್ಞಿಕ ಕ್ರಿಯಾರೂಪವಾದುದರಿಂದ ಉಕ್ಥ್ಯಂ ವಚಃ ಎಂಬ ಪಠನದಿಂದ ಅಥವಾ ಇಂತಹ ಕ್ರಿಯಾಕಲಾಪಗಳಿಂದ ಯಜ್ಞವು ನಿರ್ವಿಘ್ನವಾಗಿ ನೇರವೇರುವಂತೆ ಆಗುತ್ತದೆ. ಆದುದರಿಂದಲೇ ಚಮಸಾದಿ ಪಾತ್ರೆಗಳಲ್ಲಿ ಒಟ್ಟಿಗೆ ಇಡಲ್ಪಟ್ಟ ಯವ, ಹವಿಸ್ಸು ಮತ್ತು ಧಾನ್ಯಗಳು ನಿನ್ನ ಪೂಜೆಗಾಗಿ ಒಟ್ಟಿಗೆ ಅರ್ಪಿತವಾಗುವುವೋ ಅಂತಹ ಹವಿರ್ಧಾನಗಳೆರಡರಲ್ಲೂ ನೀನು ಉಕ್ಥ್ಯರೂಪವಾದ ಮಂತ್ರವನ್ನು ಸೇರಿಸಿಟ್ಟಿದ್ದೀಯೆ. ಹೀಗೆ ಮಂತ್ರಪೂತವಾದ ಹವಿರ್ಧಾನಗಳನ್ನಿಟ್ಟುಕೊಂಡಿರುವ ಯಜಮಾನನು ಶತ್ರುಗಳೊಡನೆ ಯುದ್ಧಮಾಡುವ ತೊಂದರೆಯಿಲ್ಲದೇ ನಿನ್ನನ್ನು ಉದ್ದೇಶಿಸಿದ ಕರ್ಮದಲ್ಲಿ ನಿರತನಾಗಿರುತ್ತಾನೆ. ಪಶುಪುತ್ರಾದಿ ಸಂಪತ್ತನ್ನು ಪಡೆಯುತ್ತಾನೆ. ಮತ್ತು ಯಜ್ಞದಲ್ಲಿ

CC-0. Jangamwadi Math Collection. Digitized by eGangotri

ನಿನಗಾಗಿ ಸೋಮರಸವನ್ನು ಹಿಂಡುವ ಆ ಯಜಮಾನನಿಗೆ ಮಂಗಳವುಂಟಾಗಿ ಅವನ ಶಕ್ತಿಯು ವೃದ್ಧಿಯಾಗುತ್ತದೆ ಎಂದಿರುವುದರಿಂದ ಈ ರೀತಿ ಪ್ರಾರ್ಥಿಸಿದೆ.

> ವಿಶ್ವಾರೂಪಾಣಿ ಪ್ರತಿಮುಂಚತೇ ಕವಿರಿತಿ ವಿಶ್ವರೂಪಾಮನ್ವಾಹ ಸ ರರಾಟ್ಯಾಮೀಕ್ಷಮಾಣೋಽನುಬ್ರೂಯಾತ್ ವಿಶ್ವಮಿವ ಹಿ ರೂಪಂ ರರಾಟ್ಯಾಃ ಶುಕ್ಲಮಿವ ಚ ಕೃಷ್ಣಮಿವ ಚ ವಿಶ್ವಂ ರೂಪಮುವರುಂಧ ಆತ್ಮನೇ ಚ ಯಜಮಾನಾಯ ಚ ಯತ್ರೈವಂ ವಿದ್ವಾನೇತಾಂ ರರಾಟ್ಯಾಮೀಕ್ಷಮಾಣೋಽನ್ವಾಹ ॥

**ರರಾಟಿಯನ್ನು** ವೀಕ್ಷಿಸುತ್ತಾ, **ವಿಶ್ವಾರೂಪಾಣಿ** (ಋ. ಸಂ. ೫-೮೧-೨) ಎಂಬ ಮಂತ್ರವನ್ನು ಪಠಿಸಬೇಕು. (ಹವಿರ್ಧಾನಮಂಟಪದ ನಿರ್ಮಾಣಕಾಲದಲ್ಲಿ ಪೂರ್ವದಿಕ್ಕಿನ ದ್ವಾರಪ್ರದೇಶದಲ್ಲಿ ಕಟ್ಟತಕ್ಕ ದರ್ಭಮಾಲೆಗೆ ರರಾಟಿಯೆಂದು ಹೆಸರು). ಈ ದರ್ಭಮಾಲೆಯಲ್ಲಿ ಕೆಲವು ಒಣಗಿ ಇನ್ನು ಕೆಲವು ದರ್ಭೆಗಳು ಹಸಿಯಾಗಿರುವುವು. ಈ ರೀತಿ ನಾನಾ ವರ್ಣಗಳಿರುವುದರಿಂದ ವಿಶ್ವಾ ರೂಪಾಣಿ ಎಂಬ ಮಂತ್ರದ ಪಠನವು ಈ ರೀತಿ ರರಾಟಿಯನ್ನು ವೀಕ್ಷಿಸುತ್ತಾ ಈ ಮಂತ್ರವನ್ನು ಪಠಿಸುವುದರಿಂದ ಯಜಮಾನನು ವಿಶ್ವರೂಪವನ್ನು ಪಡೆಯುವ ಶಕ್ತಿಯನ್ನು ಪಡೆಯುತ್ತಾನೆ.

> ಪರಿ ತ್ವಾ ಗಿರ್ವಣೋ ಗಿರ ಇತ್ಯುತ್ತಮಯಾ ಪರಿದಧಾತಿ। ಸ ಯದ್ಯೈವ ಹವಿರ್ಧಾನೇ ಸಂಪರಿಶ್ರಿತೇ ಮನ್ಯೇತಾಥ ಪರಿದಧ್ಯಾತ್ । ಅನಗ್ನಂಭಾವುಕಾ ಹ ಹೋತುಶ್ಚ ಯಜಮಾನಸ್ಯ ಚ ಭಾರ್ಯಾ ಭವಂತಿ ಯತ್ರೈವಂ ವಿದ್ವಾನೇತಯಾ ಹವಿರ್ಧಾನಯೋಃ ಸಂಪರಿಶ್ರಿತಯೋಃ ಪರಿದಧಾತಿ । ಯಜುಷಾ ವಾ ಏತೇ ಸಂ ಪರಿಶ್ರಿಯೇತೇ ಯದ್ಧವಿರ್ಧಾನೇ ಯಜುಷೈವೈನೇ ಏತತ್ಪರಿ ಶ್ರಯಂತಿ ॥

**ಪರಿ ತ್ವಾ ಗಿರ್ವಣೋ ಗಿರಃ** (ಋ. ಸಂ. ೧-೧೦-೧೨) ಎಂಬ ಕೊನೆಯ ಮಂತ್ರವನ್ನು ಪಠಿಸಿ ಮುಕ್ತಾಯ ಮಾಡುತ್ತಾನೆ. ನಮ್ಮಿಂದ ನಿರ್ಮಿತವಾಗುವ ಸ್ತುತಿರೂಪವಾದ ಈ ವಾಕ್ಯಗಳು ನಿನ್ನನ್ನು ಎಲ್ಲಾ ಕಡೆಯಿಂದಲೂ ಬಂದು ಸೇರಿ ನಿನ್ನನ್ನು ವ್ಯಾಪಿಸಿ ನಿನಗೆ ಸಂತೋಷವನ್ನುಂಟುಮಾಡಲಿ. ಇದರಿಂದ ನಮಗೂ ಸಂತೋಷವೂ ಆಯುರ್ವೃದ್ಧಿಯೂ ಉಂಟಾಗಲಿ ಎಂಬುದೇ ಈ ಮಂತ್ರದ ತಾತ್ಪರ್ಯವು. ಹವಿರ್ಧಾನಗಳ ಆಚ್ಛಾದನಕ್ರಿಯೆಯಾದೊಡನೆಯೇ ಹೋತೃವು ತನ್ನ ಕ್ರಿಯೆಯನ್ನು ಸಮಾಪ್ತಿಗೊಳಿಸಬೇಕು. ಈ ವಿಧವಾದ ಆಚ್ಛಾದನಕ್ರಿಯೆಯು ನಿರ್ವಿಘ್ನವಾಗಿ ನೆರವೇರಿದರೆ ಆಗ ಹೋತೃವಿನ ಮತ್ತು ಯಜಮಾನನ ಭಾರ್ಯೆಯರೂ ಸಹ ವಸ್ತ್ರಭರಿತರಾಗಿರುತ್ತಾರೆ. ಅವರು ನಗ್ನರಾಗುವ ಅವಕಾಶವೇ ಇರುವುದಿಲ್ಲ. ವಿಷ್ಣೋ ರರಾಟಮಸಿ ವಿಷ್ಣೋಃ ಪೃಷ್ಠಮಸಿ ಎಂಬ ಯಜುರ್ಮಂತ್ರವನ್ನು ಪಠಿಸಿ (ತೈ. ಸಂ. ೧-೨-೧೩) ಆಚ್ಛಾದನವನ್ನು ಮಾಡಬೇಕು. ಇತ್ಯಾದಿಯಾಗಿ ಹವಿರ್ಧಾನಗಳ ಸ್ವರೂಪವೂ ಸಂಸ್ಕಾರಕ್ರಿಯೆಗಳೂ ವರ್ಣಿತವಾಗಿವೆ.

> ಏತದ್ವೈ ದೇವಾನಾಂ ನಿಷ್ಕೇವಲ್ಯಂ ಯದ್ಧವಿರ್ಧಾನಂ ತಸ್ಮಾತ್ತತ್ರ ನಾಶ್ನಂತಿ ನ ಭಕ್ಷಯಂತಿ ॥
>
> (ಶ. ಬ್ರಾ. ೩-೬-೧-೨೩)

CC-0. Jangamwadi Math Collection. Digitized by eGangotri

ಹವಿರ್ಧಾನವು ಪೂರ್ಣವಾಗಿ ದೇವತೆಗಳಿಗೇ ಸೇರಿದುದರಿಂದ ಇಲ್ಲಿ ಭೋಜನಪಾನಾದಿಗಳು ನಿಷಿದ್ಧವಾದವು ಎಂದು ಇದರ ಪವಿತ್ರತೆಯನ್ನು ತಿಳಿಸಿದೆ. ಮತ್ತು,

> ಶಿರ ಏವಾಸ್ಯ ಹವಿರ್ಧಾನಂ । ವೈಷ್ಣವಂ ದೇವತಯಾಥ ಯದಸ್ಮಿನ್ತ್ಸೋಮೋ ಭವತಿ ಹವಿರ್ವೈ ದೇವಾನಾಂ ಸೋಮಸ್ತಸ್ಮಾದ್ಧವಿರ್ಧಾನಂ ನಾಮ ॥
>
> (ಶ. ಬ್ರಾ- ೩-೫-೩-೨)

ಆದುದರಿಂದಲೇ ಹವಿರ್ಧಾನವು ಯಜ್ಞಾತ್ಮನಾದ ಪುರುಷನ ಶಿರಸ್ಸು. ಇದರಲ್ಲಿ ಸೋಮವು ಪೂರ್ಣವಾಗಿರುವುದರಿಂದಲೂ, ಸೋಮನೇ ವಿಷ್ಣುರೂಪನಾದುದರಿಂದಲೂ ಇದು ವಿಷ್ಣುದೇವತಾಕವಾದುದು. ದೇವತೆಗಳ ಹವಿಸ್ಸಾದ ಸೋಮವು ಇದರಲ್ಲಿರುವುದರಿಂದ ಇದಕ್ಕೆ ಹವಿರ್ಧಾನವೆಂಬ ಹೆಸರು ಪ್ರಸಿದ್ಧವಾಯಿತು ಎಂದು ಹವಿರ್ಧಾನದ ಪ್ರಶಂಸೆಯಿದೆ. ಇಂತಹ ಹವಿರ್ಧಾನಾಖ್ಯತ್ವವನ್ನು ಸೋಮವು ಪಡೆಯಿತು ಎಂದು **ಋತಸ್ಯ ಯೋನಿಂ ಇತಿ** ಎಂಬ ವಾಕ್ಯಕ್ಕೆ ಪ್ರಕೃತವಾದ ಋಕ್ಕಿನಲ್ಲಿ ತಾತ್ಪರ್ಯವನ್ನು ಹೇಳಿದೆ.



ಸಂಹಿತಾಪಾಠಃ

## ಸೋಮೋ ಅಸ್ಮಭ್ಯಂ ದ್ವಿಪದೇ ಚತುಷ್ಪದೇ ಚ ಪಶವೇ ।
## ಅನಮೀವಾ ಇಷಸ್ಕರತ್ ॥ ೧೪ ॥

ಪದಪಾಠಃ

**ಸೋಮಃ । ಅಸ್ಮಭ್ಯಂ । ದ್ವಿಽಪದೇ । ಚತುಃಽಪದೇ । ಚ । ಪಶವೇ ।**

**ಅನಮೀವಾಃ । ಇಷಃ । ಕರತ್ ॥ ೧೪ ॥**

ಸಾಯಣಭಾಷ್ಯಂ

**ಸೋಮಃ ಸ್ತೋತೃಭ್ಯೋಽಸ್ಮಭ್ಯಂ ತಥಾ ದ್ವಿಪದೇಽಸ್ಮದೀಯಾಭ್ಯೋ ದ್ವಿಪಾದ್ಭ್ಯಃ ಪ್ರಜಾಭ್ಯಶ್ಚತುಷ್ಪದೇ ಪಶವೇ ಚತುಷ್ಪಾದ್ಭ್ಯೋ ಗವಾದಿಪಶುಭ್ಯಶ್ಚಾನಮೀವಾ ರೋಗವರ್ಜಿತಾನೀಷೋಽನ್ನಾನಿ ಕರತ್ । ಕರೋತು ॥ ಚತುಷ್ಪದೇ । ಭಸಂಜ್ಞಾಯಾಂ ಪಾದಸ್ಯ ಪದ್ಭಾವಃ । ಇಸುಸೋಃ ಸಾಮರ್ಥ್ಯ ಇತಿ ಸಂಹಿತಾಯಾಂ ಷತ್ವಂ । ಆದೇಶಪ್ರತ್ಯಯಯೋರಿತಿ ಷತ್ವಂ । ಬಹುವ್ರೀಹೌ ಪೂರ್ವಪದಸ್ವರಃ । ಕರತ್ । ಕರೋತೇರ್ಲೇಟ್ಯಡಾಗಮಃ । ಇಷಸ್ಕರದಿತ್ಯತ್ರ ಸಂಹಿತಾಯಾಂ ಕಃಕರತ್ಕರತೀತ್ಯಾದಿನಾ ಸತ್ವಂ ॥**

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಸೋಮಃ**—ಸೋಮನು । **ಅಸ್ಮಭ್ಯಂ**—ಸ್ತೋತೃಗಳಾದ ನಮಗೂ । **ದ್ವಿಪದೇ**—ನಮ್ಮ ಪುತ್ರಾದಿಗಳಿಗೂ । **ಚತುಷ್ಪದೇ**—ಚತುಷ್ಪಾದಗಳುಳ್ಳ । **ಪಶವೇ ಚ**—ನಮ್ಮ ಪಶುಗಳಿಗೂ ಸಹ । ಅನಮೀವಾಃ—ರೋಗರಹಿತವಾದ । **ಇಷಃ**—ಅನ್ನವನ್ನು । **ಕರತ್**—ಒದಗಿಸಲಿ ।

ಭಾವಾರ್ಥ

ಸೋಮನು ಸ್ತೋತೃಗಳಾದ ನಮಗೂ, ನಮ್ಮ ಪುತ್ರಾದಿಗಳಿಗೂ ಚತುಷ್ಪಾದಗಳುಳ್ಳ ನಮ್ಮ ಪಶುಗಳಿಗೂ ಸಹ ರೋಗರಹಿತವಾದ ಅನ್ನವನ್ನು ಒದಗಿಸಲಿ.

English Translation

May Soma grant to us and to (our) biped and quadruped animals, wholesome food.

ವಿಶೇಷವಿಷಯಗಳು

**ಅನಮೀವಾಃ**—ಅಮ-ರೋಗೇ । ರೋಗವೆಂದರ್ಥವನ್ನು ಕೊಡುವ ಅಮಶಬ್ದದಿಂದ ಅಮೀವಶಬ್ದವು ನಿಷ್ಪನ್ನವಾಗಿದೆ. ಅಮೀವಹಾ ರೋಗನಾಶಕ ಎಂದು ಇಂದ್ರಾದಿದೇವತೆಗಳ ವಿಶೇಷಣವು ಅನೇಕಕಡೆಗಳಲ್ಲಿ ಶತ್ರುನಾಶಕ ಎಂಬರ್ಥವನ್ನೂ ಕೊಡುತ್ತದೆ. ಪ್ರಕೃತದಲ್ಲಿ ಅನಮೀವಾಃ ಎಂಬ ಪದಕ್ಕೂ ರೋಗರಹಿತವಾದುದು ಅಥವಾ ಶತ್ರುರಹಿತವಾದುದು ಎಂಬ ಎರಡರ್ಥವೂ ಸಾಧ್ಯವಾಗುತ್ತದೆ.

———— :o: ————

ಸಂಹಿತಾಪಾಠಃ

ಅಸ್ಮಾಕಮಾಯುರ್ವರ್ಧಯನ್ನಭಿಮಾತೀಃ ಸಹಮಾನಃ ।

ಸೋಮಃ ಸಧಸ್ಥಮಾಸದತ್ ॥ ೧೫ ॥

ಪದಪಾಠಃ

ಅಸ್ಮಾಕಂ । ಆಯುಃ । ವರ್ಧಯನ್ । ಅಭಿಽಮಾತೀಃ । ಸಹಮಾನಃ ।

ಸೋಮಃ । ಸಧಽಸ್ಥಂ । ಆ । ಅಸದತ್ ॥ ೧೫ ॥

ಸಾಯಣಭಾಷ್ಯಂ

ಸ ಸೋಮೋ ದೇವೋಽಸ್ಮಾಕಮಾಯುರನ್ನಂ ಜೀವನಂ ವಾ ವರ್ಧಯನ್ವೃದ್ಧಿಂ ಪ್ರಾಪಯನ್ನಭಿಮಾತೀಃ ಕರ್ಮವಿಘ್ನಕಾರಿಣಃ ಶತ್ರೂನ್ ಸಹಮಾನೋಽಭಿಭವನ್ನಸ್ಮಾಕಂ ಸಧಸ್ಥಂ ಹವಿರ್ಧಾನಾಖ್ಯಂ ಸ್ಥಾನಮಾಸದತ್ । ಆಸೀದತು ॥ ಅಸದತ್ । ಸದೇರ್ಲೇಟಿ ರೂಪಂ । ನಿಘಾತಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಸೋಮಃ**—ಸೋಮದೇವನು । **ಅಸ್ಮಾಕಂ**—ನಮ್ಮ । **ಆಯುಃ**—ಆಯುಸ್ಸನ್ನು । **ವರ್ಧಯನ್**—ವೃದ್ಧಿಪಡಿಸುತ್ತಾ । **ಅಭಿಮಾತೀಃ**—ನಮಗೆ ಹಿಂಸೆಯನ್ನುಂಟುಮಾಡುವ ಶತ್ರುಗಳನ್ನು । **ಸಹಮಾನಃ**—ಹೊಡೆದೋಡಿಸುತ್ತಾ । **ಸಧಸ್ಥಂ**—ಯಜ್ಞವೇದಿಕೆಯಲ್ಲಿ । **ಆಸದತ್**—ಬಂದು ಸೇರಲಿ ।

### ಭಾವಾರ್ಥ

ಸೋಮದೇವನು ನಮ್ಮ ಆಯುಸ್ಸನ್ನು ವೃದ್ಧಿಪಡಿಸುತ್ತಲೂ ನಮಗೆ ಹಿಂಸೆಯನ್ನುಂಟುಮಾಡುವ ಶತ್ರುಗಳನ್ನು ಹೊಡೆದೋಡಿಸುತ್ತಲೂ ಯಜ್ಞವೇದಿಕೆಯಲ್ಲಿ ಬಂದು ಕುಳಿತುಕೊಳ್ಳಲಿ.

### English Translation

May Soma, prolonging our lives and overcoming our adversaries, sit down in our place of sacrifice.

### ವಿಶೇಷವಿಷಯಗಳು

**ಅಭಿಮಾತೀಃ**—**ಅಭಿತಃ ಹಿಂಸತೀತ್ಯಭಿಮಾತಿಃ** । ಸುತ್ತಲೂ ಹಿಂಸಿಸತಕ್ಕ ಶತ್ರುವೆಂದರ್ಥ. ಹಿಂಸಿಸುವವನು ಶತ್ರುವೇ ಆಗಿರಬೇಕೆಂದೂ ನಿಯಮವಿಲ್ಲ.

**ಪಾಪ್ಮಾ ವಾ ಅಭಿಮಾತಿರಿಂದ್ರಮೇವಾಭಿಮಾತಿಹನಗ್ಂ ಸ್ವೇನ ಭಾಗಧೇಯೇನೋಪಧಾವತಿ** ॥

(ತೈ. ಸಂ. ೨-೧-೩-೫)

ಪಾಪವೇ ಶತ್ರುವು. ಇಂದ್ರನೇ ಪಾಪರೂಪವಾದ ಈ ಶತ್ರುವನ್ನು ನಾಶಪಡಿಸುತ್ತಾನೆ, ಇತ್ಯಾದಿ ವಾಕ್ಯಗಳಿಂದ ಪಾಪ ಅಥವಾ ಪಾಪಿಷ್ಠ ಇತ್ಯಾದ್ಯರ್ಥಗಳಲ್ಲಿಯೂ ಅಭಿಮಾತಿಶಬ್ದದ ಪ್ರಯೋಗವಿರುವುದು ತಿಳಿಯುತ್ತದೆ.

**ಸಧಸ್ಥಂ**—ಇಲ್ಲಿ **ಸಧಸ್ಥ**ಶಬ್ದಕ್ಕೆ ಹವಿರ್ಧಾನವೆಂಬ ಸ್ಥಾನವೆಂದರ್ಥಮಾಡಿದೆ. ಎಲ್ಲರೂ ಒಟ್ಟಿಗೆ ಕೂಡಿಕೊಂಡಿರುವ ಯಾವ ಸ್ಥಾನವಾದರೂ ನಿರ್ದಿಷ್ಟವಾಗಬಹುದು. **ಸಹಸ್ಥಾನಂ ಲೋಕತ್ರಯಾಶಯಭೂತಮಂತರಿಕ್ಷಂ** । ಎಂದು ಅಂತರಿಕ್ಷಪರ್ಯಾಯವಾಗಿ ಕೆಲವೆಡೆಗಳಲ್ಲಿ ಅರ್ಥಮಾಡಿದೆ. ಋತ್ವಿಕ್ಕುಗಳೆಲ್ಲರೂ ಒಟ್ಟುಗೂಡಿ ಸೇರುವ ವೇದಿಕಾರೂಪವಾದ ಸ್ಥಾನಕ್ಕೂ ಸದಸ್ಥವೆಂದು ಹೇಳುತ್ತಾರೆ.

**ಕುಹ ಸ್ವಿದ್ದೋಷಾ ಕುಹ ವಸ್ತೋರಶ್ವಿನಾ ಕುಹಾಭಿಪಿತ್ವಂ ಕರತಃ ಕುಹೋಷತುಃ** ।
**ಕೋ ವಾಂ ಶಯುತ್ರಾ ವಿಧವೇವ ದೇವರಂ ಮರ್ಯಂ ನ ಯೋಷಾ ಕೃಣುತೇ ಸದಸ್ಥ ಆ** ॥

(ಋ. ಸಂ. ೧೦-೪೦-೨)

ಎಂಬ ವಾಕ್ಯದಲ್ಲಿ **ಸಧಸ್ಥ**ಶಬ್ದಕ್ಕೆ ವೇದಿರೂಪವಾದ ಸ್ಥಾನವೆಂದು ಸಾಯಣರೂ, ಎಲ್ಲರೂ ಒಟ್ಟಿಗೆ ವಾಸಿಸುವ ಗೃಹರೂಪವಾದ ವಾಸಸ್ಥಾನವೆಂದು ನಿರುಕ್ತಕಾರರೂ ಅಭಿಪ್ರಾಯಪಟ್ಟಿದ್ದಾರೆ. ಇದರಂತೆಯೇ **ತ್ರಿಷಧಸ್ಥಃ** ಎಂಬ ಪದಕ್ಕೂ ಸಹ (ಋ. ಸಂ. ೬-೧೨-೨ಇತ್ಯಾದಿ) ಲೋಕೇಷು ಸಹಾವಸ್ಥಾನಂ ಎಂದರ್ಥಮಾಡಿದೆ. **ಸಹಸ್ಥಾನಂ**

CC-0. Jangamwadi Math Collection. Digitized by eGangotri

ಪುಣ್ಯಕೃತಾಂ ಸಹನಿವಾಸಯೋಗ್ಯಂ ಭೂರಾದಿಲೋಕಸಪ್ತಕಂ । ಸುಕೃತಿಗಳು ಒಟ್ಟಿಗೆ ವಾಸಮಾಡಬಹುದಾದ ಏಳುಲೋಕಗಳೆಂದು ಕೆಲವೆಡೆಗಳಲ್ಲಿಯೂ, ಉತ್ತರಂ ಉತ್ಕೃಷ್ಟತರಂ ಸರ್ವೇಷಾಂ ಲೋಕಾನಾಂ ಉಪರಿಭೂತಂ ಸಹಸ್ಥಾನಂ ಸತ್ಯಲೋಕಂ । ಸಕಲಲೋಕಗಳಿಗೂ ಮೇಲ್ಭಾಗದಲ್ಲಿರುವುದೂ, ಎಲ್ಲಕ್ಕಿಂತಲೂ ಶ್ರೇಷ್ಠವಾದುದೂ ಆದ ಸತ್ಯಲೋಕವೆಂದು ಕೆಲವೆಡೆಗಳಲ್ಲಿಯೂ ಅರ್ಥಮಾಡಿದೆ. ಪ್ರಕೃತವಾದ ಋಕ್ಕಿನಲ್ಲಿ ಯಜ್ಞವೇದಿರೂಪವಾದ ಸ್ಥಾನವೆಂದಾಗಲಿ ಹವಿರ್ಧಾನಾಖ್ಯವಾದ ಸ್ಥಾನವೆಂದಾಗಲಿ ಅರ್ಥವಾಗುತ್ತದೆ.



ಸಂಹಿತಾಪಾಠಃ

ಆ ನೋ ಮಿತ್ರಾವರುಣಾ ಘೃತೈರ್ಗವ್ಯೂತಿಮುಕ್ಷತಂ ।

ಮಧ್ವಾ ರಜಾಂಸಿ ಸುಕ್ರತೂ ॥ ೧೬ ॥

ಪದಪಾಠಃ

ಆ । ನಃ । ಮಿತ್ರಾವರುಣಾ । ಘೃತೈಃ । ಗವ್ಯೂತಿಂ । ಉಕ್ಷತಂ ।

ಮಧ್ವಾ । ರಜಾಂಸಿ । ಸುಕ್ರತೂ ಇತಿ ಸುಽಕ್ರತೂ ॥ ೧೬ ॥

ಸಾಯಣಭಾಷ್ಯಂ

ಅಗ್ನಿಷ್ಟೋಮೇ ಪ್ರಾತಃಸವನೇ ಮೈತ್ರಾವರುಣಶಸ್ತ್ರ ಆ ನೋ ಮಿತ್ರಾವರುಣೇತಿ ಸ್ತೋತ್ರಿಯಸ್ತೃಚಃ । ಸೂತ್ರಿತಂ ಚ । ಆ ನೋ ಮಿತ್ರಾವರುಣಾ ನೋ ಗಂತಂ ರಿಶಾದಸಾ । ಆ. ೫-೧೦ । ಇತಿ ॥ ಚತುರ್ವಿಂಶೇಽಹನಿ ಪ್ರಾತಃಸವನೇ ಮೈತ್ರಾವರುಣೇ ಶಸ್ತ್ರ ಆ ನೋ ಮಿತ್ರಾವರುಣೇತಿ ಷಡಹಸ್ತೋತ್ರಿಯಸಂಜ್ಞಕಸ್ತೃಚಃ । ಸೂತ್ರಿತಂ ಚ । ಆ ನೋ ಮಿತ್ರಾವರುಣಾ ಮಿತ್ರಂ ವಯಂ ಹವಾಮಹೇ । ಆ. ೭-೨ । ಇತಿ ॥ ಸ್ತೋಮವೃದ್ಧಾವಯಮೇವ ತೃಚ ಆವಾಪಾರ್ಥಃ । ಸೂತ್ರಿತಂ ಚ । ಆ ನೋ ಮಿತ್ರಾವರುಣೇತಿ ತೃಚೌ । ಆ. ೭-೫ । ಇತಿ ॥ ದಾಕ್ಷಾಯಣೇ ಯಜ್ಞೇ ದ್ವೇ ಅಮಾವಾಸ್ಯೇ ಕರ್ತವ್ಯೇ । ತತ್ರೋತ್ತರಸ್ಯಾಮಮಾವಾಸ್ಯಾಯಾಂ ದ್ವಿತೀಯೇಽಹನಿ ಮೈತ್ರಾವರುಣ ಆ ನೋ ಮಿತ್ರಾವರುಣೇತಿ ತಸ್ಯಾನುವಾಕ್ಯಾ । ಸೂತ್ರಿತಂ ಚ । ಆ ನೋ ಮಿತ್ರಾವರುಣಾ ಯದ್ಬಂಹಿಷ್ಠಂ ನಾತಿವಿಧೇ ಸುದಾನೂ । ಆ. ೨-೧೪ । ಇತಿ ॥

ಸುಕ್ರತೂ ಶೋಭನಕರ್ಮಾಣೌ ಹೇ ಮಿತ್ರಾವರುಣೌ ನೋಽಸ್ಮಾಕಂ ಗವ್ಯೂತಿಂ ಗವಾಂ ಮಾರ್ಗಂ ಗೋನಿವಾಸಸ್ಥಾನಂ ಘೃತೈಃ ಕ್ಷರಣಸಾಧನೈಃ ಪಯೋಭಿರೋಕ್ಷತಂ । ಸಮಂತಾತ್ಸಿಂಚತಂ । ಅಸ್ಮಭ್ಯಂ ದೋಗ್ಧ್ರೀರ್ಗಾಃ ಪ್ರಯಚ್ಛತಮಿತಿ ಭಾವಃ । ರಜಾಂಸ್ಯಸ್ಮದಾವಾಸಸ್ಥಾನಾನಿ ಮಧ್ವಾ ಮಧುರರಸೇನ

CC-0. Jangamwadi Math Collection. Digitized by eGangotri

ಸಿಂಚತಂ ॥ ಗವ್ಯೂತಿಂ । ಗೋರ್ಯೂತೌ ಛಂದಸೀತಿ ವಾಂತಾದೇಶಃ । ಮಧ್ವಾ। ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾದತ್ರ ನುಮಾಗಮಾಭಾವಃ ॥

ಪ್ರತಿಪದಾರ್ಥ

ಸುಕ್ರತೂ—ಶ್ರೇಷ್ಠವಾದ ಕರ್ಮಕರ್ತರಾದ । ಮಿತ್ರಾವರುಣಾ—ಎಲೈ ಮಿತ್ರಾವರುಣರೇ । ನಃ—ನಮ್ಮ । ಗವ್ಯೂತಿಂ—ಗೋವುಗಳ ನಿವಾಸಸ್ಥಾನವನ್ನು । ಘೃತೈಃ—ಉದಕಗಳಿಂದ । ಆ ಉಕ್ಷತಂ—ಪೂರ್ಣವಾಗಿ ತುಂಬಿರಿ । ರಜಾಂಸಿ—ಲೋಕಗಳನ್ನೆಲ್ಲಾ । ಮಧ್ವಾ—ಮಧುರವಾದ ರಸದಿಂದ (ತುಂಬಿರಿ) ।

ಭಾವಾರ್ಥ

ಶ್ರೇಷ್ಠವಾದ ಕರ್ಮಕರ್ತರಾದ ಎಲೈ ಮಿತ್ರಾವರುಣರೇ, ನಮ್ಮ ಗೋವುಗಳ ನಿವಾಸಸ್ಥಾನವನ್ನು ಕ್ಷೀರಾದಿಗಳಿಂದ ಪೂರ್ಣವಾಗಿ ತುಂಬಿರಿ. ಲೋಕಗಳನ್ನೆಲ್ಲಾ ಮಧುರವಾದ ರಸದಿಂದ ತುಂಬಿರಿ.

English Translation

Mitra and Varuna, sprinkle our cow-stalls with butter ; performers of of good works, (sprinkle) the worlds with honey.

ವಿಶೇಷವಿಷಯಗಳು

ಅಗ್ನಿಷ್ಟೋಮಯಾಗದ ಪ್ರಾತಃಸವನದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಶಸ್ತ್ರಮಂತ್ರಗಳನ್ನು ಪಠಿಸುವಾಗ—ಆ ನೋ ಮಿತ್ರಾವರುಣಾ ಎಂದು ಮೊದಲಾಗುವ ಮೂರು ಋಕ್ಕುಗಳನ್ನು (ಈ ಸೂಕ್ತದ ೧೬–೧೮ ಋಕ್ಕುಗಳನ್ನು) ಸ್ತೋತ್ರಿಯ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಆ ನೋ ಮಿತ್ರಾವರುಣಾ ನೋ ಗಂತಂ ರಿಶಾದಸಾ ಎಂಬ ಸೂತ್ರದಿಂದ (ಆ. ೫–೧೦) ವಿವೃತವಾಗಿರುವುದು; ಇಪ್ಪತ್ತನಾಲ್ಕನೆಯ ದಿವಸದಲ್ಲಿ ಪ್ರಾತಃಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಶಸ್ತ್ರಮಂತ್ರವನ್ನು ಪಠಿಸುವಾಗ ಆ ನೋ ಮಿತ್ರಾ-ವರುಣಾ ಎಂಬ ಈ ಮೂರು ಋಕ್ಕುಗಳನ್ನು ಪಡಹಸ್ತೋತ್ರಿಯಸಂಜ್ಞಕವಾದ ತೃಚವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಆ ನೋ ಮಿತ್ರಾವರುಣಾ ಮಿತ್ರಂ ವಯಂ ಹವಾಮಹೇ ಎಂಬ ಸೂತ್ರದಿಂದ (ಆ. ೭–೨) ವಿವೃತವಾಗಿರುವುದು; ಸ್ತೋಮವೃದ್ಧಿಗಾಗಿ ಪಠಿಸಬೇಕಾದ ಆವಾಪಮಂತ್ರಗಳಿಗಾಗಿಯೂ ಈ ತೃಚದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— ಆ ನೋ ಮಿತ್ರಾವರುಣೇತಿ ತೃಚೌ ಎಂಬ ಸೂತ್ರದಿಂದ (ಆ. ೭–೫) ವಿವೃತವಾಗಿರುವುದು ; ದಾಕ್ಷಾಯಣವೆಂಬ ಯಜ್ಞವು ಎರಡು ಅಮಾವಾಸ್ಯೆಗಳಲ್ಲಿ ಮಾಡಲ್ಪಡಬೇಕು. ಆ ಸಂದರ್ಭದಲ್ಲಿ ಎರಡನೆಯ ಅಮಾವಾಸ್ಯೆಯ ದಿವಸ ಆ ನೋ ಮಿತ್ರಾವರುಣಾ ಎಂಬ ಈ ಋಕ್ಕನ್ನು ಎರಡನೆಯ ದಿವಸ ಮಿತ್ರಾವರುಣದೇವತಾಕವಾದ ಪುರೋನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಸೂತ್ರದ— ಆ ನೋ ಮಿತ್ರಾವರುಣಾ ಯದ್ಬಂಹಿಷ್ಠಂ ನಾತಿವಿಧೇ ಸುದಾನೂ ಎಂಬ ಸೂತ್ರದಿಂದ (ಆ. ೨–೧೪) ವಿವೃತವಾಗಿರುವುದು.

ಗವ್ಯೂತಿಂ— ಈ ಪದಕ್ಕೆ ಗವಾಂ ಮಾರ್ಗಂ ಗೋನಿವಾಸಸ್ಥಾನಂ ಗೋವುಗಳು ಸಂಚರಿಸುವ ಮಾರ್ಗ ಅಥವಾ ಗೋವುಗಳ ನಿವಾಸಸ್ಥಾನವೆಂದರ್ಥವಾಗುತ್ತದೆ. ಗಾವೋ ನ ಗವ್ಯೂತೀಃ (೧–೨೫–೧೬)ಎಂಬಲ್ಲಿ

CC-0. Jangamwadi Math Collection. Digitized by eGangotri

ಗವ್ಯೂತಿಶಬ್ದಕ್ಕೆ ಗೋಷ್ಠ ಎಂದರೆ ಕೊಟ್ಟಿಗೆಯೆಂದರ್ಥಮಾಡಿದೆ. ಹಸುವಿಗೆ ಪ್ರಿಯವಾದ ಹುಲ್ಲು ತುಂಬಿರುವ ಯಾವ ಕೊಟ್ಟಿಗೆ, ಹುಲ್ಲುಗಾವಲು ಅಥವಾ ಹುಲ್ಲುತುಂಬಿರುವ ಮಾರ್ಗ ಇವೆಲ್ಲವೂ ಗವ್ಯೂ ತಿಶಬ್ದ ವಾಚ್ಯಗಳಾಗಿರುತ್ತವೆ.

ಪ್ರ ಬಾಹವಾ ಸಿಸೃತಂ ಜೀವಸೇ ನ ಆ ನೋ ಗವ್ಯೂತಿಮುಕ್ಷತಂ ಘೃತೇನ ।

(ಋ. ಸಂ. ೭-೬೨-೫)

ಆ ನೋ ಮಿತ್ರಾವರುಣಾ ಹವ್ಯಜುಷ್ಟಿಂ ಘೃತೈರ್ಗವ್ಯೂತಿಮುಕ್ಷತಮಿಳಾಭಿಃ ॥

(ಋ. ಸಂ. ೭-೬೫-೪)

ಇತ್ಯಾದಿ ಸ್ಥಳಗಳಲ್ಲಿ ಪ್ರಕೃತವಾದ ಋಕ್ಕಿನಲ್ಲಿರುವಂತೆಯೇ ಮಿತ್ರಾವರುಣರನ್ನುದ್ದೇಶಿಸಿ ಘೃತೈಃ ಗವ್ಯೂತಿಂ ಉಕ್ಷತಾಂ ಎಂದು ಒಂದೇ ರೀತಿಯಲ್ಲಿ ಪ್ರಾರ್ಥಿಸಿದೆ. ಗಾವೋ ಯೊಂತಿ ಗಚ್ಛಂತ್ಯತ್ರೇತಿ ಗವ್ಯೂತಿಃ ಗೋಮಾರ್ಗಭೂಮಿಃ ಗೋವುಗಳು ಸಂಚರಿಸುವ ಮಾರ್ಗಕ್ಕೆ ಗವ್ಯೂತಿಯೆಂದು ಹೆಸರೆಂದು ಸಾಯಣರು ಅರ್ಥಮಾಡಿದ್ದಾರೆ.

ಘೃತ ಶಬ್ದಕ್ಕೆ ಈ ಸನ್ನಿವೇಶಗಳಲ್ಲೆಲ್ಲಾ ಉದಕವೆಂದೇ ಅರ್ಥ. ತೃತೀಯೋ ಭ್ರಾತಾ ಘೃತಪೃಷ್ಠಃ (೧-೧೬೪-೧). ಇತ್ಯಾದಿ ಸ್ಥಳಗಳಲ್ಲಿ ಘೃತ ಶಬ್ದಕ್ಕೆ ಉದಕವೆಂಬರ್ಥವನ್ನು ಹೇಳಿರುವಂತೆ ಇಲ್ಲಿಯೂ ಉದಕವೆಂದೇ ಅರ್ಥಮಾಡಬೇಕು. ನಿರುಕ್ತದಲ್ಲಿಯೂ ಘೃತ ಪದವು ಉದಕ ನಾಮಗಳಲ್ಲಿ ಪಠಿತವಾಗಿದೆ (ನಿ. ೧-೨೪) ನಮ್ಮ ಗೋವುಗಳಿಗೆ ತೃಣಸಮೃದ್ಧಿಯನ್ನುಂಟುಮಾಡುವಂತೆ ಅವುಗಳು ಮೇಯುವ ಪ್ರದೇಶವನ್ನು ಉದಕದಿಂದ ಫಲವತ್ತ ನ್ನಾಗಿ ಮಾಡಿರಿ ಎಂದು ಮಿತ್ರಾವರುಣರನ್ನು ಪ್ರಾರ್ಥಿಸಿದೆ.

---

ಸಂಹಿತಾಪಾಠಃ

ಉರುಶಂಸಾ ನಮೋವೃಧಾ ಮಹ್ನಾ ದಕ್ಷಸ್ಯ ರಾಜಥಃ ।

ದ್ರಾಘಿಷ್ಠಾಭಿಃ ಶುಚಿವ್ರತಾ ॥ ೧೭ ॥

ಪದಪಾಠಃ

ಉರುऽಶಂಸಾ । ನಮಃऽವೃಧಾ । ಮಹ್ನಾ । ದಕ್ಷಸ್ಯ । ರಾಜಥಃ ।

ದ್ರಾಘಿಷ್ಠಾಭಿಃ । ಶುಚಿऽವ್ರತಾ ॥ ೧೭ ॥

ಸಾಯಣಭಾಷ್ಯಂ

ಶುಚಿವ್ರತಾ ಪರಿಶುದ್ಧಕರ್ಮಾಣೌ ಹೇ ಮಿತ್ರಾವರುಣಾವುರುಶಂಸಾ ಉರುಭಿರ್ಬಹುಭಿಃ ಶಂಸನೀಯೌ । ಯದ್ವಾ । ಉರು ಮಹಚ್ಛಂಸಃ ಶಸ್ತ್ರಂ ಯಯೋಸ್ತೌ । ನಮೋವೃಧಾ ನಮಸಾ ಹವಿರ್ಲಕ್ಷಣೇ-

CC-0. Jangamwadi Math Collection. Digitized by eGangotri

ನಾನ್ನೇನ ಸ್ತೋತ್ರೇಣ ವಾ ವರ್ಧಮಾನೌ ದ್ರಾಘಿಷ್ಠಾಭಿರತ್ಯಂತಂ ದೀರ್ಘಸ್ತುತಿಲಕ್ಷಣಾಭಿರ್ವಾಗ್ಭಿರ್ಯುಕ್ತೌ ಯುವಾಂ ದಕ್ಷಸ್ಯ । ದಕ್ಷಂ ಧನಂ ಬಲಂ ವಾ । ತಸ್ಯ ಮಹ್ನಾ ಮಹತ್ತ್ವೇನ ರಾಜಥಃ । ಈಶಾಥೇ ॥ ಉರುಶಂಸಾ । ಶಸ್ಸು ಸ್ತುತೌ । ಕರ್ಮಣಿ ಘಞ್ । ಕೃತ್ಸ್ವರಃ । ದ್ರಾಘಿಷ್ಠಾಭಿಃ । ದೀರ್ಘಶಬ್ದಾದಿಷ್ಠನಿ ಪ್ರಿಯಸ್ಥಿರೇತ್ಯಾದಿನಾ ದ್ರಾಘೀತ್ಯಾದೇಶಃ । ನಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) **ಶುಚಿವ್ರತಾ**—ಪರಿಶುದ್ಧವಾದ ಕರ್ಮವುಳ್ಳವರೂ। **ಉರುಶಂಸಾ**—ಅನೇಕರಿಂದ ಪ್ರಶಂಸಿತರೂ । **ನಮೋವೃಧಾ**—ಹವಿಸ್ಸಿನಿಂದ ವೃದ್ಧಿಯನ್ನು ಹೊಂದುವವರೂ । **ದ್ರಾಘಿಷ್ಠಾಭಿಃ**—ದೀರ್ಘವಾದ ಸ್ತುತಿಯಿಂದ ಕೂಡಿದವರೂ ಆದ ನೀವು । **ದಕ್ಷಸ್ಯ**—ಶಕ್ತಿಸಂಪತ್ತಿನ । **ಮಹ್ನಾ**—ಆಧಿಕ್ಯದಿಂದ । **ರಾಜಥಃ**—ಪ್ರಕಾಶಿಸುತ್ತಿದ್ದೀರಿ ।

ಭಾವಾರ್ಥ

ಎಲೈ ಮಿತ್ರಾವರುಣರೇ, ಪರಿಶುದ್ಧವಾದ ಕರ್ಮವುಳ್ಳವರೂ. ಅನೇಕರಿಂದ ಪ್ರಶಂಸಿತರೂ, ಹವಿಸ್ಸಿನಿಂದ ವೃದ್ಧಿಯನ್ನು ಹೊಂದುವವರೂ, ದೀರ್ಘವಾದ ಸ್ತುತಿಯಿಂದ ಕೂಡಿದವರೂ ಆದ ನೀವು ನಿಮ್ಮ ಶಕ್ತಿಸಂಪತ್ತಿನ ಆಧಿಕ್ಯದಿಂದ ಪ್ರಕಾಶಿಸುತ್ತಿದ್ದೀರಿ.

English Translation

Performers of pure rites, glorified by many, exalted by adoration, (celebrated) by prolonged praises, you reign by the greatness of (your) strength.

ವಿಶೇಷವಿಷಯಗಳು

**ನಮೋವೃಧಾ**—ನಮಸಾ ಹವಿರ್ಲಕ್ಷಣೇನ ಅನ್ನೇನ ಸ್ತೋತ್ರೇಣ ವಾ ವರ್ಧಮಾನೌ । **ನಮಸ್** ಶಬ್ದಕ್ಕೆ ಅನ್ನ, ಸ್ತುತಿ ಎಂಬೆರಡು ಅರ್ಥವೂ ಇರುತ್ತದೆ. ಆದುದರಿಂದ ಅನ್ನದಿಂದ ವೃದ್ಧಿಹೊಂದುವವರೆಂದಾಗಲಿ ಅಥವಾ ಸ್ತುತಿಯಿಂದ ವೃದ್ಧಿಹೊಂದುವವರೆಂದಾಗಲಿ ಅರ್ಥವಾಗುತ್ತದೆ.

**ದಕ್ಷಸ್ಯ ಮಹತ್ತ್ವೇನ ರಾಜಥಃ** । ದಕ್ಷ ಶಬ್ದಕ್ಕೆ ಧನ ಅಥವಾ ಬಲ ಎಂಬೆರಡರ್ಥವನ್ನು ಹೇಳಬಹುದು. ಅಥವಾ ದಕ್ಷನೆಂಬ ಮಿತ್ರಾವರುಣರ ಪಿತೃವಿನ ಹೆಸರೇ ನಿರ್ದಿಷ್ಟವಾಗಬಹುದು. ಧನದ ಮಹತ್ತ್ವದಿಂದಾಗಲಿ, ಬಲದ ಮಹತ್ವದಿಂದಾಗಲಿ ಅಥವಾ ಅವರ ಪಿತೃವಾದ ದಕ್ಷನ ಮಹತ್ವದಿಂದಾಗಲಿ, ಪ್ರಕಾಶಿಸುತ್ತಾರೆಂದರ್ಥ. ಶಕ್ತಿ ಅಥವಾ ಧನವೆಂದರ್ಥಮಾಡಿದರೆ ಆಗ ಮಿತ್ರಾವರುಣರೇ ದಕ್ಷದ ಪಿತೃಗಳಾಗುತ್ತಾರೆ.

**ಯಾ ಧಾರಯಂತ ದೇವಾಃ ಸುದಕ್ಷಾ ದಕ್ಷಪಿತರಾ । ಅಸುರ್ಯಾಯ ಪ್ರಮಹಸಾ ॥**

**(ಋ. ಸಂ. ೭-೬೬-೨)**

CC-0. Jangamwadi Math Collection. Digitized by eGangotri

ಇತ್ಯಾದಿ ಸ್ಥಳಗಳಲ್ಲಿ ಮಿತ್ರಾವರುಣರನ್ನು ಶಕ್ತಿಪಾಲಕರೆಂದು ವರ್ಣಿಸಿದೆ. ಅಲ್ಲದೇ ಕ್ರತು, ದಕ್ಷ ಎಂಬೆರಡರ ಸಾಮರಸ್ಯವೇ ಮಿತ್ರಾವರುಣರ ಸಮಸ್ತಶಕ್ತಿಗಳನ್ನೂ ತೋರಿಸುತ್ತವೆಯೆಂಬ ವಿಷಯವನ್ನು ಹಿಂದೆ ತಿಳಿಸಿದೆ. ಆದುದರಿಂದಲೇ ಶುಚಿವ್ರತಾ, ಉರುಶಂಸಾ ಇತ್ಯಾದಿ ವಿಶೇಷಣಗಳಿಂದ ಸ್ತುತಿಸಿದೆ.

———:o:———

ಸಂಹಿತಾಪಾಠಃ

ಗೃಣಾನಾ ಜಮದಗ್ನಿನಾ ಯೋನಾವೃತಸ್ಯ ಸೀದತಂ ।

ಪಾತಂ ಸೋಮಮೃತಾವೃಧಾ ॥ ೧೮ ॥

ಪದಪಾಠಃ

ಗೃಣಾನಾ । ಜಮತ್ऽಅಗ್ನಿನಾ । ಯೋನೌ । ಋತಸ್ಯ । ಸೀದತಂ ।

ಪಾತಂ । ಸೋಮಂ । ಋತಽವೃಧಾ ॥ ೧೮ ॥

ಸಾಯಣಭಾಷ್ಯಂ

ಮೈತ್ರಾವರುಣಸ್ಯ ಗ್ರಹಸ್ಯ ಯಾಜ್ಯಾ ಗೃಣಾನಾ ಜಮದಗ್ನಿನೇತ್ಯೇಷಾ । ಸೂತ್ರಿತಂ ಚ । ಹೋತಾ ಯಕ್ಷನ್ಮಿತ್ರಾವರುಣಾ ಗೃಣಾನಾ ಜಮದಗ್ನಿನಾ । ಆ. ೫-೫ । ಇತಿ ॥ ಅಧ್ಯಾಯೋಪಾಕರಣೇ ಮಂಡಲಾದ್ಯಂತಹೋಮೇ ಗೃಣಾನಾ ಜಮದಗ್ನಿನೇತ್ಯೇಷಾ । ಆ. ಗೃ. ೩-೫ ॥

ಹೇ ಮಿತ್ರಾವರುಣೌ ಜಮದಗ್ನಿನೈತನ್ನಾಮಕೇನ ಮಹರ್ಷಿಣಾ ಗೃಣಾನಾ ಸ್ತೂಯಮಾನೌ ಯದ್ವಾ । ಜಮದಗ್ನಿನಾ ಪ್ರಜ್ವಲಿತಾಗ್ನಿನಾ ವಿಶ್ವಾಮಿತ್ರೇಣ ಸ್ತೂಯಮಾನೌ ಯುವಾಮೃತಸ್ಯ ಯಜ್ಞಸ್ಯ ಯೋನೌ ದೇವಯಜನಾಖ್ಯೇ ದೇಶೇ ಸೀದತಂ । ಉಪವಿಶತಂ । ಋತಾವೃಧಾ ಋತಸ್ಯ ಕರ್ಮಫಲಸ್ಯ ವರ್ಧಯಿತಾರೌ ಯುವಾಂ ಸೋಮಂ ಪಾತಂ । ಪಿಬತಂ ॥ ಗೃಣಾನಾ । ಗೄ ಶಬ್ದೇ । ವ್ಯತ್ಯಯೇನ ಕರ್ಮಣಿ ಶಾನಚ್ । ಚಿತ್ತ್ವಾದಂತೋದಾತ್ತಃ । ಸೀದತಂ । ಸದೇರ್ಲೋಟಿ ಪ್ರಾಘ್ರೇತ್ಯಾದಿನಾ ಸೀದಾದೇಶಃ । ಪಾತಂ । ಪಾ ಪಾನೇ । ಬಹುಲಂ ಛಂದಸೀತಿ ಶಪೋ ಲುಕ್ ॥

ಪ್ರತಿಪದಾರ್ಥ

(ಎಲೈ ಮಿತ್ರಾವರುಣರೇ) ಜಮದಗ್ನಿನಾ—ಜಮದಗ್ನಿ ಋಷಿಯಿಂದ । ಗೃಣಾನಾ—ಸ್ತುತಿಸಲ್ಪಡತಕ್ಕ ನೀವು । ಋತಸ್ಯ—ಯಜ್ಞದ । ಯೋನೌ—ವೇದಿಸ್ಥಾನದಲ್ಲಿ । ಸೀದತಂ—ಕುಳಿತುಕೊಳ್ಳಿ । ಋತಾವೃಧಾ—ಯಜ್ಞದ ವರ್ಧಕರಾದ ನೀವು । ಸೋಮಂ—ಸೋಮವನ್ನು । ಪಾತಂ—ಪಾನಮಾಡಿರಿ.

CC-0. Jangamwadi Math Collection. Digitized by eGangotri

ಭಾವಾರ್ಥ

ಜಮದಗ್ನಿಯಿಂದ ಸ್ತುತರಾಗತಕ್ಕ ಎಲೈ ಮಿತ್ರಾವರುಣರೇ, ನೀವು ಈ ಯಜ್ಞವೇದಿಕೆಯಲ್ಲಿ ಕುಳಿತು, ಯಜ್ಞವರ್ಧಕರಾಗಿ ಸೋಮವನ್ನು ಪಾನಮಾಡಿರಿ.

English Translation

Glorified by Jamadagni, sit down in the place of sacrifice (the altar); drink, augmenters (of the reward) of sacrifice, the Soma libation.

ವಿಶೇಷವಿಷಯಗಳು

ಗೃಣಾನಾ ಜಮದಗ್ನಿನಾ—ಎಂಬ ಈ ಋಕ್ಕನ್ನು ಮೈತ್ರಾವರುಣಗ್ರಹದ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಹೋತಾ ಯಕ್ಷನ್ಮಿತ್ರಾವರುಣಾ ಗೃಣಾನಾ ಜಮದಗ್ನಿನಾ** ಎಂಬ ಸೂತ್ರದಿಂದ (ಆ. ೫-೫) ವಿವೃತವಾಗಿರುವುದು. ಮತ್ತು ಅಧ್ಯಾಯೋಪಾಕರಣದಲ್ಲಿ **ಗೃಣಾನಾ ಜಮದಗ್ನಿನಾ** ಎಂಬ ಋಕ್ಕನ್ನು ಮಂಡಲಾಂತ್ಯದ ಹೋಮಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಗೃಹ್ಯಸೂತ್ರದ—**ಗೃಣಾನಾ** ಜಮದಗ್ನಿನಾ ಎಂಬ ಸೂತ್ರದಿಂದ (ಆ. ಗೃ. ೩-೫-೭) ವಿವೃತವಾಗಿರುವುದು.

**ಗೃಣಾನಾ ಜಮದಗ್ನಿನಾ**—ಏತನ್ನಾಮಕೇನ **ಮಹರ್ಷಿಣಾ ಸ್ತೂಯಮಾನೌ । ಯದ್ವಾ । ಜಮದಗ್ನಿನಾ ಪ್ರಜ್ವಲಿತಾಗ್ನಿನಾ ವಿಶ್ವಾಮಿತ್ರೇಣ ಸ್ತೂಯಮಾನೌ ।** ಜಮದಗ್ನಿಯೆಂಬ ಹೆಸರುಳ್ಳ ಮಹರ್ಷಿಯಿಂದ ಸ್ತುತರಾದ ಮಿತ್ರಾವರುಣರು ಎಂದು ಒಂದರ್ಥ. ಅಥವಾ **ಜಮದಗ್ನಿ**ಶಬ್ದಕ್ಕೆ **ಪ್ರಜ್ವಲಿತಾಗ್ನಿ**ಯೆಂದರ್ಥಮಾಡಿದರೆ, ಯಜ್ಞಕ್ಕಾಗಿ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿದ ವಿಶ್ವಾಮಿತ್ರನೆಂದರ್ಥವಾಗುತ್ತದೆ. ಅಂತಹ ವಿಶ್ವಾಮಿತ್ರನಿಂದ ಸ್ತುತರಾದ ಮಿತ್ರಾವರುಣರು ಎಂದು ಒಂದರ್ಥ. ಹೀಗೆ ಸಾಯಣರು ಎರಡು ವಿಧವಾದ ವಿವರಣೆಯನ್ನು ಹೇಳಿದ್ದಾರೆ. ಜಮದಗ್ನಿಯೆಂಬ ಋಷಿಯೆಂದು ಹೇಳುವುದು ಸಾಧುವಾಗಿರುತ್ತದೆ.

ಜಮದಗ್ನಿಮಹರ್ಷಿಯು ವಿಶ್ವಾಮಿತ್ರನಿಗೆ ಆಪ್ತಮಿತ್ರನು. ಋಕ್ಸಂಹಿತೆಯಲ್ಲಿ, ೩-೬೨-೧೬ ರಿಂದ ೧೮ ; ೮-೧೦೧ ; ೯-೬೨ ; ೯-೬೫ ; ೯-೬೭-೧೬ ರಿಂದ ೧೮ ; ೧೦-೧೧೦ ; ೧೦-೧೬೭-೬ ; ೧೦-೧೬೭ ಇವಿಷ್ಟು ಮಂತ್ರಗಳೂ ಜಮದಗ್ನಿಕೃತವೆಂದು ಪ್ರಸಿದ್ಧವಾಗಿವೆ. ಇವನು ಭೃಗುಪುತ್ರನು. ಆದುದರಿಂದ ಜಮದಗ್ನಿಭಾರ್ಗವ ಎಂದೇ ಪ್ರಸಿದ್ಧನಾಗಿದ್ದಾನೆ. **ಗೃಣಾನೋ ಜಮದಗ್ನಿನಾ** ಎಂದು ತನ್ನ ಸ್ತುತಿಯನ್ನು ಅನೇಕಕಡೆಗಳಲ್ಲಿ ವಾಚ್ಯವಾಗಿ ಹೇಳಿಕೊಂಡಿದ್ದಾನೆ. (ಋ. ಸಂ. ೯-೬೨-೨೪ ; ೯-೬೫-೨೫ ಇತ್ಯಾದಿ).

**ಪ್ರಸೂತೋ ಭಕ್ಷಮಕರಂ ಚರಾವಪಿ ಸ್ತೋಮಂ ಚೇಮಂ ಪ್ರಥಮಃ ಸೂರಿರುನ್ಮೃಜೇ ।**
**ಸುತೇ ಸಾತೇನ ಯದ್ಯಾಗಮಂ ವಾಂ ಪ್ರತಿ ವಿಶ್ವಾಮಿತ್ರಜಮದಗ್ನೀ ದಮೇ ॥**

(ಋ. ಸಂ. ೧೦-೧೬೭-೪)

ಎಂಬಲ್ಲಿ ಇಂದ್ರನು ವಿಶ್ವಾಮಿತ್ರಜಮದಗ್ನಿಗಳಿಬ್ಬರನ್ನೂ ಒಟ್ಟಿಗೆ ಸೇರಿಸಿ ಸಂಬೋಧಿಸಿ ತನ್ನ ಅನುಗ್ರಹವನ್ನು ವ್ಯಕ್ತಪಡಿಸಿದ್ದಾನೆ. ಈ ವಿಧವಾದ ಸಾಹಚರ್ಯವು ಅನೇಕಕಡೆಗಳಲ್ಲಿ ವರ್ಣಿತವಾಗಿದೆ. ವಸಿಷ್ಠನೊಂದಿಗೆ ಹೋರಾಡಲ ಸಮರ್ಥನಾದನು ಎಂಬ ವಿಷಯವೂ ಸಹ ಸಂಹಿತಾದಿಗಳಲ್ಲಿ ಪ್ರಸಿದ್ಧವಾಗಿದೆ.

CC-0. Jangamwadi Math Collection. Digitized by eGangotri

ವಿಶ್ವಾಮಿತ್ರಜಮದಗ್ನೀ ವಸಿಷ್ಠೇನಾಸ್ಪರ್ಧೇತಾಗ್ಂ ಸ ಏತಜ್ಜಮದಗ್ನಿರ್ವಿಹವ್ಯಮಪಶ್ಯತ್ತೇನ ವೈ
ಸ ವಸಿಷ್ಠಸ್ಯೇಂದ್ರಿಯಂ ವೀರ್ಯಮವೃಂಕ್ತ ॥

(ತೈ. ಸಂ. ೩-೧-೭-೩)

ವಿಶ್ವಾಮಿತ್ರ ಮತ್ತು ಜಮದಗ್ನಿ ಇಬ್ಬರೂ ಸಹ ವಸಿಷ್ಠನೊಂದಿಗೆ ಹೋರಾಡುತ್ತಿದ್ದಾಗ ಜಮದಗ್ನಿಯು **ಮಮಾಗ್ನೇ ವರ್ಚೋ ವಿಹವೇಷ್ವಸ್ತು ವಯಂ ತ್ವೇಂಧಾನಾಸ್ತನ್ವಂ ಪುಷೇಮ** ಎಂಬ ಮಂತ್ರದಿಂದ ಆರಂಭವಾಗುವ ವಿಹವ್ಯ ಸೂಕ್ತದ ದರ್ಶನವನ್ನು ಪಡೆದನು (ಋ. ಸಂ. ೧೦-೧೨೮). ಇದರ ಸಹಾಯದಿಂದ ವಸಿಷ್ಠನ ಶಕ್ತಿಯನ್ನೆಲ್ಲಾ ತಾನೇ ಪಡೆದನು ಎಂದು ತೈತ್ತಿರೀಯ ಸಂಹಿತೆಯಲ್ಲಿ ಕಥಾರೂಪದಲ್ಲಿ ತಿಳಿಸಿದೆ. ಬೃಹದ್ದೇವತೆಯಲ್ಲಿಯೂ ಸಹ ಇದೇ ರೀತಿಯಾದ ಇನ್ನೊಂದು ಐತಿಹಾಸಿಕಸನ್ನಿವೇಶವು ಈ ರೀತಿ ಉಕ್ತವಾಗಿದೆ.

**ಸುದಾಸಶ್ಚ ಮಹಾಯಜ್ಞೇ ಶಕ್ತಿನಾ ಗಾಥಿಸೂನವೇ ।**
**ನಿಗೃಹೀತಂ ಬಲಾಚ್ಚೇತಃ ಸೋಽವಸೀದದ್ವಿಚೇತನಃ ।**
**ತಸ್ಮೈ ಬ್ರಾಹ್ಮೀಂ ತು ಸೌರೀಂ ವಾ ನಾಮ್ನಾ ವಾಚಂ ಸಸರ್ಪರೀಂ ।**
**ಸೂರ್ಯಕ್ಷಯಾದಿಹಾಹೃತ್ಯ ದದುಸ್ತೇ ಜಮದಗ್ನಯಃ ।**
**ಕುಶಿಕಾನಾಂ ತತಃ ಸಾ ವಾಗಮತಿಂ ತಾಮಪಾಹನತ್ ॥**

(ಬೃ. ದೇ. ೪-೧೧೨ ರಿಂದ ೧೧೪)

ಸುದಾಸನ ಮಹಾಯಾಗದಲ್ಲಿ ವಸಿಷ್ಠಪುತ್ರನಾದ ಶಕ್ತಿಯಿಂದ ಹೊಡೆಯಲ್ಪಟ್ಟ ಗಾಥಿಪುತ್ರನು (ವಿಶ್ವಾಮಿತ್ರನು) ಮೂರ್ಛೆಹೊಂದಿದನು. ಮತ್ತು ಜ್ಞಾನಶೂನ್ಯನಾಗಿ ಕೆಳಕ್ಕೆ ಬಿದ್ದುಬಿಟ್ಟನು ಆಗ ಜಮದಗ್ನಿಗಳು ಸೂರ್ಯಪುತ್ರಿಯಾದ (ಅಥವಾ ಬ್ರಹ್ಮಪುತ್ರಿಯಾದ) **ಸಸರ್ಪರೀ** ನಾಮಕವಾದ ವಾಕ್ಕಿನ ಸಹಾಯವನ್ನು ಒದಗಿಸಿದರು. ಆ ವಾಗ್ದೇವಿಯು ಕುಶಿಕಪುತ್ರರ ಮೂರ್ಛೆಯನ್ನು ಹೋಗಲಾಡಿಸಿ ಅವರಿಗೆ ಪ್ರಜ್ಞೆಯು ಬರುವಂತೆ ಮಾಡಿದಳು ಎಂದು ಹೇಳಿದೆ. ಇದೇ ಸಂದರ್ಭವನ್ನು, ಋಕ್ಸಂಹಿತೆಯಲ್ಲಿ,

**ಸಸರ್ಪರೀರಮತಿಂ ಬಾಧಮಾನಾ ಬೃಹನ್ಮಿಮಾಯ ಜಮದಗ್ನಿದತ್ತಾ ।**
**ಆ ಸೂರ್ಯಸ್ಯ ದುಹಿತಾ ತತಾನ ಶ್ರವೋ ದೇವೇಷ್ವಮೃತಮಜುರ್ಯಂ ॥**

(ಋ. ಸಂ. ೩-೫೩-೧೫)

ಇತ್ಯಾದಿ ಋಕ್ಕುಗಳಲ್ಲಿ ಸೂಚಿಸಿದೆ. ಇದರ ವಿಶೇಷಾರ್ಥವನ್ನು ಹಿಂದೆ ತಿಳಿಸಿದೆ.

ಈ ರೀತಿ ಕಥಾಸಂದರ್ಭಗಳನ್ನು ತಿಳಿಸುವಾಗಲೂ ಸಹ ಜಮದಗ್ನಿಪದಕ್ಕೆ ಕೆಲವು ವೇಳೆ ಆಧ್ಯಾತ್ಮಿಕ ದೃಷ್ಟಿಯಿಂದಲೂ ಅರ್ಥವನ್ನು ಹೇಳಿದೆ. ಇಂತಹ ಸಂದರ್ಭಗಳಲ್ಲಿ ಜಮದಗ್ನಿಯು ಪ್ರಜಾಪತಿಯ ಪುತ್ರನೆಂದೂ ಜಗತ್ತ್ರಯವನ್ನು ತನ್ನ ದಿವ್ಯದೃಷ್ಟಿಯಿಂದ ವೀಕ್ಷಿಸಿ ಪ್ರಪಂಚಕ್ಕೆ ಜ್ಞಾನರೂಪವಾದ ಪ್ರಕಾಶವನ್ನುಂಟುಮಾಡಿದನೆಂದೂ ತಿಳಿಸಿದೆ. ಉದಾಹರಣೆಗೆ—

**ಪ್ರಜಾಪತಿರ್ವಿರಾಜಮಪಶ್ಯತ್ತಯಾ ಭೂತಂ ಚ ಭವ್ಯಂ ಚಾಸೃಜತ ತಾಮೃಷಿಭ್ಯಸ್ತಿರೋಽದ-**
**ಧಾತ್ತಾಂ ಜಮದಗ್ನಿಸ್ತಪಸಾಽಪಶ್ಯತ್ತಯಾ ವೈ ಸ ಪೃಶ್ನೀನ್ಕಾಮಾನಸೃಜತ ।**

(ತೈ ಸಂ. ೩-೩-೫-೨)

CC-0. Jangamwadi Math Collection. Digitized by eGangotri

ಪ್ರಜಾಪತಿಯು ವಿರಾಟ್‌ದರ್ಶನವನ್ನು ಪಡೆದನು. ಅದರ ಸಹಾಯದಿಂದ ಭೂತವನ್ನೂ ಭವಿಷ್ಯತ್ತನ್ನೂ ಸೃಷ್ಟಿಸಿದನು. ಆದರೆ ಅವೆರಡನ್ನೂ ಋಷಿಗಳ ಗೋಚರಕ್ಕೂ ಬೀಳದಂತೆ ಮಾಡಿದನು. ಆಗ ಜಮದಗ್ನಿಯು ತನ್ನ ತಪಸ್ಸಿನ ಮಹಿಮೆಯಿಂದ ಅವುಗಳ ದರ್ಶನವನ್ನು ಪಡೆದು ಅವುಗಳಿಂದ ಅನೇಕವಿಧವಾದ ಕಾಮವಿಷಯಗಳನ್ನು ಸೃಷ್ಟಿಸಿದನು ಎಂದು ಅವನ ದಿವ್ಯದರ್ಶನಶಕ್ತಿಯನ್ನು ವರ್ಣಿಸಿದೆ. ಇದೇ ವಿಧವಾಗಿ ಜಮದಗ್ನಿಯು ಆಧ್ಯಾತ್ಮಿಕ ತತ್ತ್ವವನ್ನು ಪ್ರತಿಬಿಂಬಿಸುವ ಅಂಶವೆಂಬುದನ್ನು ಉಪನಿಷತ್ತುಗಳು ತಿಳಿಸುತ್ತವೆ.

**ಇಮಾವೇವ ಗೋತಮಭಾರದ್ವಾಜೌ, ಅಯಮೇವ ಗೋತಮಃ, ಅಯಂ ಭಾರದ್ವಾಜಃ । ಇಮಾವೇವ ವಿಶ್ವಾಮಿತ್ರಜಮದಗ್ನೀ, ಅಯಮೇವ ವಿಶ್ವಾಮಿತ್ರಃ, ಅಯಂ ಜಮದಗ್ನಿಃ ।**

(ಬೃ. ಉ. ೨-೨-೪)

ಎಂದು ಬೃಹದಾರಣ್ಯಕದಲ್ಲಿ ಶರೀರತತ್ತ್ವವನ್ನು ವಿವರಿಸುವಾಗ ತಿಳಿಸಿದೆ. ಅವುಗಳಲ್ಲಿ ಗೋತಮ ಮತ್ತು ಭರದ್ವಾಜರು ಶ್ರೋತೃತತ್ತ್ವಪ್ರತಿಪಾದಕರು. ವಿಶ್ವಾಮಿತ್ರ ಮತ್ತು ಜಮದಗ್ನಿಗಳು ಚಕ್ಷುಸ್ತತ್ತ್ವಪ್ರತಿಪಾದಕರು. ವಿಶ್ವಾಮಿತ್ರನೇ ದಕ್ಷಿಣಚಕ್ಷುಸ್ಸು ಮತ್ತು ಜಮದಗ್ನಿಯೇ ವಾಮಚಕ್ಷುಸ್ಸು ಎಂದಿದೆ. ಆದರೆ ಇಲ್ಲಿ ಕೇವಲ ಭೌತಿಕವಾದ ಚಕ್ಷುಸ್ಸೆಂದು ಮಾತ್ರ ಅರ್ಥವಲ್ಲ. ಜ್ಞಾನಚಕ್ಷುಸ್ಸೆಂದೂ ಅರ್ಥಮಾಡಿಕೊಳ್ಳಬೇಕು. ಹೇಗೆಂದರೆ—

**ಪ್ರಜಾಪತಿರ್ವೈ ಜಮದಗ್ನಿಃ, ಸೋಽಶ್ವಮೇಧಃ ।**

(ಶ ಬ್ರಾ. ೧೩-೨-೨-೧೪)

ಎಂಬ ವಾಕ್ಯದಲ್ಲಿ ಯಾವ ಜಮದಗ್ನಿಯನ್ನು ಪ್ರಜಾಪತಿಯೆಂದೇ ನಿರ್ದೇಶಿಸಿದೆಯೋ ಅಂತಹ ಜಮದಗ್ನಿಯ ವಿಶೇಷ ಗುಣವೇನೆಂದರೆ,

**ಜಮದಗ್ನಿರ್ಋಷಿರಿತಿ । ಚಕ್ಷುರ್ವೈ ಜಮದಗ್ನಿರ್ಋಷಿರ್ಯದೇನೇನ ಜಗತ್ಪಶ್ಯತ್ಯಥೋ ಮನುತೇ ತಸ್ಮಾಚ್ಚಕ್ಷುರ್ಜಮದಗ್ನಿರ್ಋಷಿಃ ಪ್ರಜಾಪತಿಗೃಹೀತಯಾ ತ್ವಯೇತಿ ಪ್ರಜಾಪತಿಸೃಷ್ಟಯಾ ತ್ವಯೇತ್ಯೇತಚ್ಚಕ್ಷುರ್ಗೃಹ್ಣಾಮಿ ॥**

(ಶ. ಬ್ರಾ. ೮-೧-೨-೩)

ಮಹರ್ಷಿಯಾದ ಜಮದಗ್ನಿಯೇ ಚಕ್ಷುಸ್ಸು. ಜಗತ್ತೆಲ್ಲವೂ ಯಾವುದರ ಸಹಾಯದಿಂದ ದರ್ಶನಶಕ್ತಿಯನ್ನೂ ಚೇತನಶಕ್ತಿಯನ್ನೂ ಪಡೆಯುವುದೋ ಅಂತಹ ದಿವ್ಯಚಕ್ಷುಸ್ಸೇ ಜಮದಗ್ನಿಯು. ಪ್ರಜಾಪತಿಸೃಷ್ಟನಾದ ಎಲೈ ಜಮದಗ್ನಿಯೇ, ನಿನ್ನ ದಿವ್ಯಾನುಗ್ರಹದಿಂದ ನನ್ನ ಸಂತತಿಗೆಲ್ಲಾ ದರ್ಶನಶಕ್ತಿಯು ಲಭಿಸಲಿ ಎಂದು ಆಧ್ಯಾತ್ಮಿಕ ತತ್ತ್ವವನ್ನರಿಯುವ ದಿವ್ಯಜ್ಞಾನಕ್ಕಾಗಿ ಜಮದಗ್ನಿಯನ್ನು ಪ್ರಾರ್ಥಿಸಿದೆ. ಈ ತಾತ್ಪರ್ಯವನ್ನೇ ತೈತ್ತಿರೀಯಾರಣ್ಯಕದಲ್ಲೂ ತಿಳಿಸುತ್ತಾ,

**ಯದಕ್ಷರಂ ಭೂತಕೃತಂ । ವಿಶ್ವೇದೇವಾ ಉಪಾಸತೇ । ಮಹರ್ಷಿಮಸ್ಯ ಗೋಪ್ತಾರಂ । ಜಮದಗ್ನಿಮಕುರ್ವತ । ಜಮದಗ್ನಿರಾಪ್ಯಾಯತೇ । ಛಂದೋಭಿಶ್ಚತುರುತ್ತರೈಃ । ರಾಜ್ಞಸ್ಸೋಮಸ್ಯ ತೃಪ್ತಾಸಃ ॥**

(ತೈ ಆ. ೧-೯-೭)

ಎಂಬ ವಾಕ್ಯಗಳಿಂದ ಜಮದಗ್ನಿಯು ಅಕ್ಷರಾತ್ಮಕನಾದ ಪರಮಾತ್ಮಸ್ವರೂಪನೆಂದೇ ತಿಳಿಸಿದೆ.



CC-0. Jangamwadi Math Collection. Digitized by eGangotri

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ।

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ತೃತೀಯಾಷ್ಟಕೇ ತೃತೀಯೇ ಮಂಡಲೇ
ಪಂಚಮೋಽನುವಾಕಃ

ಸಮಾಪ್ತಂ ಚ ತೃತೀಯಂ ಮಂಡಲಂ

॥ ಓಂ ತತ್ಸತ್ ।

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ (ತೃತೀಯಾಷ್ಟಕದಲ್ಲಿ)
ಮೂರನೆಯ ಮಂಡಲವು ಸಮಾಪ್ತವಾದುದು.

———

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

ಶುಭಂ ಭೂಯಾತ್

ಮಂಗಳಂ

———— :o: ————

CC-0. Jangamwadi Math Collection. Digitized by eGangotri

ಶ್ರೀಃ

## ॥ ಅಥ ಚತುರ್ಥಂ ಮಂಡಲಂ ॥

# ನಾಲ್ಕನೆಯ ಮಂಡಲವು.

## ಪೀಠಿಕೆ

---

### ವಾಮದೇವಋಷಿಯ ಸೂಕ್ಷ್ಮಪರಿಚಯ.

ಈ ಸೂಕ್ತವು ವಾಮದೇವಋಷಿದೃಷ್ಟವಾದುದು. ವಾಮದೇವಋಷಿಯ ವಿಷಯವನ್ನು ನಾವು ಈ ಮಂಡಲದ ಪ್ರಾರಂಭದಲ್ಲಿ ಸೂಕ್ಷ್ಮವಾಗಿ ವಿವರಿಸುವೆವು. ಈ ವಾಮದೇವನು ಗೋತಮಋಷಿಯ ಪುತ್ರನು. ಈ ನಾಲ್ಕನೆಯ ಮಂಡಲದ ಸೂಕ್ತಗಳು ೧-೭ (ಒಟ್ಟು ಋಕ್ಕುಗಳು ೨೦೭); ೧೮ ನೆಯ ಸೂಕ್ತದಲ್ಲಿ ೨-೩॥ ಮತ್ತು ೮-೧೩ (ಒಟ್ಟು ೮॥ ಎಂಟುವರೆ ಋಕ್ಕುಗಳು); ೧೯-೪೧ ಸೂಕ್ತಗಳು (ಒಟ್ಟು ೨೪೯ ಋಕ್ಕುಗಳು); ೪೫-೫೮ (ಒಟ್ಟು ೧೦೭ ಋಕ್ಕುಗಳು) ಇವೆಲ್ಲವೂ ಸೇರಿ ಆಗುವ ಒಟ್ಟು ೫೬೦॥ ಐನೂರ ಅರವತ್ತೂವರೆ ಋಕ್ಕುಗಳಿಗೆ ಋಷಿಯಾಗಿರುವನು.

ವಾಮದೇವನು ಬ್ರಹ್ಮಜ್ಞಾನವನ್ನು ಪಡೆದ ಮಹರ್ಷಿಯೆಂದು ಶ್ರುತಿವಾಕ್ಯಗಳು ಅನೇಕ ವಿಧವಾಗಿ ಇವನನ್ನು ಪ್ರಶಂಸಿಸುತ್ತವೆ. ಬೃಹದಾರಣ್ಯಕಾದ್ಯುಪನಿಷತ್ತುಗಳೂ ಬ್ರಹ್ಮಸೂತ್ರಕಾರರೂ ಇತರರೂ ಸಹ ಬ್ರಹ್ಮ ಜ್ಞಾನದ ಸ್ವರೂಪ ಮತ್ತು ಸಾಧನಗಳ ವಿಚಾರವನ್ನು ವಿಮರ್ಶಿಸುವಾಗ ವಾಮದೇವನ ಉದಾಹರಣೆಯನ್ನೇ ಪ್ರಶಂಸಿಸಿದ್ದಾರೆ. ಇಂತಹ ದಿವ್ಯಜ್ಞಾನಿಯೇ ಋಕ್ಸಂಹಿತೆಯ ನಾಲ್ಕನೆಯ ಮಂಡಲದ ದ್ರಷ್ಟೃವೆಂದು ಪ್ರಸಿದ್ಧನಾಗಿ ದ್ದಾನೆ. ಬಾಹ್ಯಾಕಾಶದಲ್ಲಿ ಆದಿತ್ಯರೂಪದಲ್ಲಿಯೂ ಪುರುಷನ ಹೃದಯಾಕಾಶದಲ್ಲಿ ಪ್ರಾಣರೂಪದಲ್ಲಿಯೂ ಪ್ರಕಾಶಿಸು ತ್ತಿರುವ ಬ್ರಹ್ಮನ ಅಂಶವೇ ಆಗಿದ್ದಾನೆಂದೂ ತಿಳಿಸಿದೆ. ಋಕ್ಸಂಹಿತಾದ್ರಷ್ಟೃಗಳಾದ ಸಮಸ್ತಋಷಿಗಳೂ ಬ್ರಹ್ಮನ ವಿಭೂತಿವಿಶೇಷಗಳೆಂದೇ ವರ್ಣಿತರಾಗಿದ್ದರೂ ಸಹ, ವಾಮದೇವನ ವಿಷಯದಲ್ಲಿರುವ ಪ್ರಶಂಸೆಯು ಅಸಾಧಾರಣ ವಾದುದು. ಈ ಮಹರ್ಷಿಯು ಪ್ರಾಣರೂಪದ ಬ್ರಹ್ಮನ ವಿಭೂತಿಪುರುಷನೆಂದು ಐತರೇಯಾರಣ್ಯಕದಲ್ಲಿ ಈ ರೀತಿ ವರ್ಣಿಸಿದೆ.

> ಏಷ ಇಮಂ ಲೋಕಮಭ್ಯಾರ್ಚತ್ಪುರುಷರೂಪೇಣ ಯ ಏಷ ತಪತಿ ಪ್ರಾಣೋ ವಾವ ತದಭ್ಯಾ- ರ್ಚತ್ಪ್ರಾಣೋ ಹ್ಯೇಷ ಯ ಏಷ ತಪತಿ |.... .... .... .... .... .... .... .... .... .... .... ....
> ತಂ ದೇವಾ ಅಬ್ರುವನ್ನಯಂ ವೈ ನಃ ಸರ್ವೇಷಾಂ ವಾಮ ಇತಿ ತಂ ಯದ್ದೇವಾ ಅಬ್ರುವ- ನ್ನಯಂ ವೈ ನಃ ಸರ್ವೇಷಾಂ ವಾಮ ಇತಿ ತಸ್ಮಾದ್ವಾಮದೇವಸ್ತಸ್ಮಾದ್ವಾಮದೇವ ಇತ್ಯಾ- ಚಕ್ಷತ ಏತಮೇವ ಸಂತಂ ||
>
> (ಐ. ಆ. ೨-೨-೧)

ಆದಿತ್ಯರೂಪದಲ್ಲಿ ಪ್ರಕಾಶಿಸುತ್ತಿರುವ ಪರಬ್ರಹ್ಮನೇ ಪುರುಷರೂಪದಲ್ಲಿ ಪೃಥ್ವಿಯನ್ನು ವ್ಯಾಪಿಸಿದನು. ಆಗ ದೇವತೆ ಗಳೆಲ್ಲರೂ ಸಹ ಈತನು ನಮಗೆಲ್ಲ ಪ್ರಿಯನಾಗಿರಲಿ ಎಂದು ಆಶಿಸಿದರು. ದೇವತೆಗಳೆಲ್ಲರೂ ಯಾವನನ್ನು ತಮಗೆ ಪ್ರಿಯನಾಗಬೇಕೆಂದಾಶಿಸಿದರೋ ಅವನು ಆ ಕಾರಣದಿಂದಲೇ ವಾಮದೇವನೆಂದು ಪ್ರಸಿದ್ಧನಾದನು ಪುರುಷರೂಪ

CC-0. Jangamwadi Math Collection. Digitized by eGangotri

ದಿಂದ ಉತ್ಪನ್ನನಾದರೂ ಸಹ ಪುರುಷನಿಗೆ ಸಹಜವಾದ ಅಜ್ಞಾನದಿಂದ ಆವೃತನಾಗಲಿಲ್ಲ. ಅಹಂ ಮನುರಭವಂ **ಇತ್ಯಾದಿಮಂತ್ರತ್ರಯೇಣ ಗರ್ಭೇ ವಸನ್ ವಾಮದೇವಃ ಉತ್ಪನ್ನತತ್ತ್ವಜ್ಞಾನಃ ಸನ್ ಸಾರ್ವಾತ್ಮ್ಯಂ ಸ್ವಾನುಭವಂ ಮನ್ವಾದಿರೂಪೇಣ ಪ್ರದರ್ಶಯನ್ನಾಹ** । ನಾನೇ ಮನುರೂಪನಾದ ಪ್ರಜಾಪತಿಯು ಇತ್ಯಾದಿ ಅರ್ಥವುಳ್ಳ ಮೂರು ಮಂತ್ರಗಳಿಂದ ವಾಮದೇವನು ತಾನು ಗರ್ಭಸ್ಥನಾಗಿರುವಾಗಲೇ ಸರ್ವಜ್ಞತ್ವವನ್ನು ಪಡೆದುದನ್ನೂ ಮನ್ವಾದಿರೂಪಗಳಲ್ಲಿ ಸ್ವಾನುಭವವನ್ನು ಪಡೆದುದನ್ನೂ ವಿವರಿಸಿ ತಿಳಿಸುತ್ತಾನೆ.

**ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ ।**
**ಶತಂ ಮಾ ಪುರ ಆಯಸೀರರಕ್ಷನ್ನಧ ಶ್ಯೇನೋ ಜವಸಾ ನಿರದೀಯಂ ॥**

(ಋ. ಸಂ. ೪-೨೭-೧)

ಗರ್ಭಸ್ಥನಾಗಿರುವಾಗಲೇ ನಾನು ಸಕಲದೇವತೆಗಳ ಉತ್ಪತ್ತಿಕ್ರಮಗಳನ್ನೂ ತಿಳಿದೆನು. ನೂರಾರು ಆಯಃಶಲಾಕೆಗಳು ನನ್ನನ್ನು ಬಂಧಿಸಿದ್ದವು. ಆದರೆ ಅವುಗಳಿಂದ ಮುಕ್ತನಾಗಿ ಶ್ಯೇನಪಕ್ಷಿಯಂತೆ ವೇಗವಾಗಿ ಹಾರಿಬಂದೆನು ಎಂದು ತಾನೇ ಹೇಳಿಕೊಂಡಿರುವ ಸಂಹಿತಾವಾಕ್ಯವನ್ನು ಐತರೇಯಾರಣ್ಯಕದಲ್ಲಿ ಉದ್ಧರಿಸಿ,

**ಗರ್ಭ ಏವೈತಚ್ಛಯಾನೋ ವಾಮದೇವ ಏವಮುವಾಚ । ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾಮೃತಃ ಸಮಭವತ್ಸಮಭವತ್ ॥**

(ಐ. ಆ. ೨-೫-೧)

ವಾಮದೇವನು ಗರ್ಭಸ್ಥನಾಗಿರುವಾಗಲೇ ಈ ವಾಕ್ಯವನ್ನು ಪಠಿಸಿದ್ದಾನೆ. ಈ ತತ್ತ್ವಜ್ಞಾನವನ್ನರಿತು, ಗರ್ಭಸ್ಥವಾದ ಶರೀರವನ್ನು ಭೇದಿಸಿ ತನ್ಮುಕ್ತನಾಗಿ ಸ್ವರ್ಗದ ಸಕಲಮೋದಪ್ರಮೋದಗಳನ್ನೂ ಅನುಭವಿಸಿ ಅಮರ್ತ್ಯನಾದನು ಎಂದು ಪ್ರಶಂಸಿಸಿದೆ. **ಅಧ ಶ್ಯೇನೋ ಜವಸಾ ನಿರದೀಯಂ** ಎಂಬಲ್ಲಿ ಶ್ಯೇನಃ ಎಂಬುದಕ್ಕೆ ಸಾಯಣರು ಶ್ಯೇನವತ್ ಶ್ಯೇನಪಕ್ಷಿಯಂತೆ ಎಂದು ಶ್ಯೇನಶಬ್ದವು ಉಪಮಾಸೂಚಕವೆಂದು ತಿಳಿಸಿದ್ದಾರೆ. ಮತ್ತೆ ಕೆಲವರು ಇಲ್ಲಿ ಉಪಮಾಸೂಚಕವಾದ ಪದವೇ ಇಲ್ಲದಿರುವುದರಿಂದ ವಾಮದೇವನಿಗೂ ಶ್ಯೇನಕ್ಕೂ ತಾದಾತ್ಮ್ಯವನ್ನು ಹೇಳಿದ್ದಾರೆ. ಈ ರೀತಿ ತಾದಾತ್ಮ್ಯವನ್ನು ಹೇಳಿದರೆ ಶ್ಯೇನಶಬ್ದಕ್ಕೇನರ್ಥ ಎಂಬುದನ್ನು ಪರಿಶೀಲಿಸಬೇಕು. ಅಲ್ಲದೇ, ಇಂತಹ ದಿವ ಜ್ಞಾನಿಯು ದಾರಿದ್ರ್ಯದ ಕ್ಲೇಶವನ್ನೂ ಅನುಭವಿಸಿ ತತ್ಫಲವಾಗಿ ದೂಷ್ಯವಾದ ಕಾರ್ಯವನ್ನೂ ಮಾಡಿದನೆಂದು ಹೇಳಿರುವುದೂ ಸಹ ಸಂಶಯಕ್ಕೆ ಕಾರಣವಾಗಿದೆ.

**ಅವರ್ತ್ಯಾ ಶುನ ಆಂತ್ರಾಣಿ ಪೇಚೇ ನ ದೇವೇಷು ವಿವಿದೇ ಮರ್ಡಿತಾರಂ ।**
**ಅಪಶ್ಯಂ ಜಾಯಾಮಮಹೀಯಮಾನಾಮಧಾ ಮೇ ಶ್ಯೇನೋ ಮಧ್ವಾ ಜಭಾರ ॥**

(ಋ. ಸಂ. ೪-೧೮-೧೩)

ಜೀವನೋಪಾಯರಹಿತನಾಗಿ ನಾನು ಶ್ವಾನಸಂಬಂಧಿಯಾದ ಕರುಳನ್ನು ಪಾಕಮಾಡಿದೆನು. ನನ್ನನ್ನು ಸುಖಪಡಿಸುವ ದೇವತೆಯಾರೂ ನನಗೆ ಪ್ರತ್ಯಕ್ಷನಾಗಲಿಲ್ಲ. ನನ್ನ ಪತ್ನಿಯೂ ಸಹ ದುರವಸ್ಥೆಯಲ್ಲಿರುವುದನ್ನು ಕಂಡೆನು. ಆಗ ಶ್ಯೇನದಂತೆ ವೇಗಗಾಮಿಯಾದ ಇಂದ್ರನು ನನಗೆ ಮಧುವನ್ನು ತಂದುಕೊಟ್ಟನು ಎಂಬ ವರ್ಣನೆಯಿದೆ. ಇಂತಹ ಸನ್ನಿವೇಶಗಳಲ್ಲಿ ತತ್ತ್ವಾರ್ಥವೇನೆಂಬುದನ್ನು ತಿಳಿಯುವುದು ಶ್ರಮವಾಗಿದೆ. ಸ್ವವಿಷಯವನ್ನು ತಿಳಿಸುತ್ತಾ,

CC-0. Jangamwadi Math Collection. Digitized by eGangotri

ಮಹೋ ರುಜಾಮಿ ಬಂಧುತಾ ವಚೋಭಿಸ್ತನ್ಮಾ ಪಿತುರ್ಗೋತಮಾದನ್ವಿಯಾಯ ।

(ಋ. ಸಂ. ೪-೪-೧೧)

ಎಲೈ ಅಗ್ನಿಯೇ, ನನ್ನ ಪಿತೃವಾದ ಗೋತಮನಿಂದ ಲಬ್ಧವಾದ ಸ್ತುತಿರೂಪವಾದ ವಾಕ್ಕಿನಿಂದ ನಿನ್ನನ್ನು ಸ್ತುತಿಸಿ ನಿನ್ನ ಅನುಗ್ರಹದಿಂದ ಸಮಸ್ತ ಶತ್ರುಗಳನ್ನೂ ನಾಶಪಡಿಸಬಲ್ಲೆನು ಎಂದು ಹೇಳುವಾಗ ಗೋತಮಪುತ್ರನೆಂದು ಹೇಳಿಕೊಂಡಿದ್ದಾನೆ. ಈ ಋಷಿಯು ಅಗ್ನಿ, ಇಂದ್ರ ಇತ್ಯಾದಿ ದೇವತೆಗಳನ್ನುದ್ದೇಶಿಸಿ ಅತ್ಯುತ್ತಮವಾದ ಸೂಕ್ತಗಳನ್ನು ನಿರ್ಮಿಸಿದ್ದಾನೆ. ಇದನ್ನೇ ಬೃಹದ್ದೇವತೆಯಲ್ಲಿ ತಿಳಿಸುತ್ತಾ,

ಸೋಽಗ್ನಿಂ ತು ಪಂಚದಶಭಿರಿಂದ್ರಂ ಷೋಡಶಭಿಃ ಪರೈಃ ।
ಋಷಿಸ್ತ್ವಾಮಿತಿ ತುಷ್ಟಾವ ಸೂಕ್ತೈರೇತಿ ತು ಗೌತಮಃ ॥

(ಬೃ. ದೇ. ೪-೧೨೭)

ಗೋತಮಪುತ್ರನಾದ ವಾಮದೇವನು ತ್ವಾಂ ಹ್ಯಗ್ನೇ ಸದಮಿತ್ ಎಂಬ ಮಂತ್ರದಿಂದ ಪ್ರಾರಂಭವಾಗುವ ಹದಿನೈದು ಸೂಕ್ತಗಳಿಂದ ಅಗ್ನಿಯನ್ನೂ, ಮತ್ತು ಆ ಸತ್ಯೋ ಯಾತು ಎಂಬ ಮಂತ್ರದಿಂದ ಪ್ರಾರಂಭವಾಗುವ ಹದಿನಾರು ಸೂಕ್ತಗಳಿಂದ (ಋ. ಸಂ. ೪-೧೬-೩೨) ಇಂದ್ರನನ್ನೂ ಸ್ತುತಿಸಿದ್ದಾನೆ ಎಂದು ಸೂಕ್ತಗಳನ್ನು ದೇವತೆಗಳ ಕ್ರಮದಿಂದ ವಿಭಾಗಿಸಿದೆ. ಮತ್ತು ಸ ಭ್ರಾತರಂ ಇತ್ಯಾದಿ ಮಂತ್ರಗಳಲ್ಲಿ ಸಂಶಯಕ್ಕೆ ಅವಕಾಶವಿರುವ ಸಂದರ್ಭಗಳನ್ನೂ ವಿವರಿಸಿದೆ. ವಾಮದೇವನಿಗೂ ಇಂದ್ರನಿಗೂ ಹೋರಾಟವು ನಡೆದು, ಇಂದ್ರನು ಪರಾಜಿತನಾದರೂ, ವಾಮದೇವನು ಇಂದ್ರನನ್ನು ಸ್ತುತಿಸಿದುದೂ ಸಹ ಲೌಕಿಕದೃಷ್ಟಿಯಿಂದ ವಿಚಿತ್ರವಾದ ಸನ್ನಿವೇಶವಾಗಿದೆ. ಈ ಕಥೆಯು ಈ ರೀತಿ ವರ್ಣಿತವಾಗಿದೆ.

ಅಂಜಸಾ ನ ಜನಿಷ್ಯೇಽಹಂ ಬ್ರುವಾಣಂ ಗರ್ಭಮೇವ ತು ।
ಅನ್ವಶಾದದಿತಿಃ ಪುತ್ರಂ ಇಂದ್ರಮಾತ್ಮಹಿತೈಷಿಣೀ ।
ಸ ಜಾತಮಾತ್ರೋ ಯುದ್ಧಾಯ ಋಷಿಮೇವಾಜುಹಾವ ತು ॥

(ಬೃ. ದೇ. ೪-೧೩೦, ೧೩೧)

ನಾನು ಸಹಜವಾದ ರೀತಿಯಲ್ಲಿ ಉತ್ಪನ್ನನಾಗುವುದಿಲ್ಲ ಎಂದು ಗರ್ಭಸ್ಥನಾಗಿರುವ ಪುತ್ರನು ಹೇಳಿದೊಡನೆಯೇ, ತನ್ನ ಸ್ವರಕ್ಷಣೆಯಲ್ಲಿ ಆಸಕ್ತಿಯನ್ನು ಹೊಂದಿದ ಅದಿತಿಯು ತನ್ನ ಪುತ್ರನಾದ ಇಂದ್ರನನ್ನು ಗದರಿಸಿದಳು. ಅದೇ ಇಂದ್ರನು ಉತ್ಪನ್ನನಾದೊಡನೆಯೇ ಋಷಿಯಾದ ವಾಮದೇವನೊಡನೆ ಹೋರಾಟಮಾಡುವಂತೆ ಎದುರಿಸಿದನು.

ಯೋಧಯನ್ವಾಮದೇವಸ್ತಂ ಕೃತ್ವಾತ್ಮನಿ ಬಲಂ ತಥಾ ।
ದಿನಾನಿ ದಶ ರಾತ್ರೀಶ್ಚ ವಿಜಿಗ್ಯೇ ಚೈನಮೋಜಸಾ ॥

(ಬೃ. ದೇ. ೪-೧೩೨).

ತನಗೆ ಕೇಡುಕನ್ನು ಮಾಡಲೆಣಿಸಿದ ಇಂದ್ರನೊಡನೆ ಹೋರಾಡುತ್ತಾ ಅವನನ್ನು ಹತ್ತುದಿನಗಳು ರಾತ್ರಿಹಗಲೆಲ್ಲಾ ಹೆಣಗಾಡಿಸಿದನು. ಕೊನೆಯಲ್ಲಿ ತನ್ನ ಶಕ್ತ್ಯಾಧಿಕ್ಯದಿಂದ ಅವನನ್ನು ಪೂರ್ಣವಾಗಿ ಸೋಲಿಸಿದನು.

CC-0. Jangamwadi Math Collection. Digitized by eGangotri

ಸ ತಂ ಕ ಇಮಮಿತ್ಯ ಸ್ಯಾಂ ವಿಕ್ರೀಣನ್ನೃಷಿಸಂಸದಿ ।
ಸ್ವಯಂ ತೇನಾಭಿತುಷ್ಟಾವ ನಕಿರಿಂದ್ರೇತಿ ಗೌತಮಃ ॥

(ಬೃ. ದೇ. ೪-೧೩೩)

ಆಗ ವಾಮದೇವನು ಕ ಇಮಂ (ಋ. ಸಂ. ೪-೨೪-೧೦) ಎಂಬ ಋಕ್ಕಿನಿಂದ ತನ್ನ ವಶನಾದ ಇಂದ್ರನನ್ನು ಪ್ರಕಟಿಸುತ್ತಾ ಋಷಿಸಂಘದಲ್ಲಿ ಇಂದ್ರವಿಕ್ರೇತನಾಗಿ ತನ್ನ ವಿಕ್ರಯಕಾಲದಲ್ಲೂ ಸಮಯವನ್ನು ಕಲ್ಪಿಸುತ್ತಾನೆ. (ಇದೇ ಸಮಯದ ಸನ್ನಿವೇಶವನ್ನು ಸಾಯಣಾಚಾರ್ಯರು ಪೂರ್ವಾಚಾರ್ಯರಿಂದ ಕೃತವಾದ ಶ್ಲೋಕರೂಪದಲ್ಲಿ ೪-೨೪-೧೦ ನೇ ಮಂತ್ರದ ಪೀಠಿಕೆಯಲ್ಲಿ ವಿವರಿಸಿದ್ದಾರೆ). ಮತ್ತು ನ ಕಿರಿಂದ್ರ ತ್ವದುತ್ತರಃ (ಋ. ಸಂ. ೪-೩೦-೧) ಇತ್ಯಾದಿ ಮಂತ್ರಗಳಿಂದ ಇಂದ್ರನನ್ನು ಪ್ರಶಂಸಿಸಿದ್ದಾನೆ.

ಕಿಮಾದುತಾಸೀತಿ ಚಾಸ್ಯಾಂ ಮನ್ಯುಮರ್ಧೇ ಪರಾಣುದತ್ ।
ಅಥಾಸ್ಯ ರೂಪವೀರ್ಯಾಣಿ ಧೈರ್ಯಕಾರ್ಯಾಣಿ ಚಾನ್ಯೃಷಿಃ ॥
ವಿವಿಧಾನಿ ಚ ಕರ್ಮಾಣಿ ಶಶಂಸಾದಿತಯೇ ತಥಾ ।
ಅಹ ಮಿತ್ಯಾತ್ಮಸಂಸ್ತಾವಸ್ತ್ವೃಚೇ ಸ್ತುತಿರಿವಾಸ್ಯ ಹಿ ॥
ಪ್ರ ಸು ಷ ವಿಭ್ಯೋ ನವಭಿರ್ಋಗ್ಭಿಃ ಶ್ಯೇನಸ್ಯ ಸಂಸ್ತವಃ ।
ಪರಾಭಿಸ್ತ್ವೇತಿ ಪಂಚರ್ಚೇ ಸೋಮೇನೇಂದ್ರಃ ಸ್ತುತಃ ಸಹ ॥

(ಬೃ. ದೇ. ೪-೧೩೪ ರಿಂದ ೭)

**ಕಿಮಾದುತಾಸಿ** ಎಂಬ ಮಂತ್ರದಿಂದ (೪-೩೦-೭) ಇಂದ್ರನನ್ನು ಸ್ತುತಿಸಿ ಅವನ ಕೋಪವನ್ನು ಸಮಾಧಾನಗೊಳಿಸಿದನು. ನಂತರ ಇಂದ್ರನ ವೀರ್ಯಕರ್ಮಗಳನ್ನೂ ಅವನ ಧೈರ್ಯ ಮತ್ತು ಸಾಹಸಗಳನ್ನೂ ಸ್ತುತಿಸಿ ಕೊಂಡಾಡಿದನು. **ಅಹಂ ಮನುಃ** (೪-೨೬-೧). ಇತ್ಯಾದಿ ಮಂತ್ರಗಳಿಂದ ತನ್ನ ಸ್ವಮಹಿಮೆಯನ್ನೂ ಸಹ ಪ್ರಶಂಸಿಸಿ ಅದಿತಿಯ ಮುಂದೆ ಪ್ರಕಟಿಸಿದನು. ಈ ಪ್ರಶಂಸೆಗಳಲ್ಲಿ ತನಗೂ ಇಂದ್ರನಿಗೂ ತಾದಾತ್ಮ್ಯವನ್ನೇ ಹೇಳಿಕೊಂಡಿರುವಂತಿದೆ. **ಪ್ರ ಸು ಷ ವಿಭ್ಯಃ** (೪-೨೬-೪-೭) ಇತ್ಯಾದಿ ಮಂತ್ರಗಳಲ್ಲಿ ಶ್ಯೇನದ ಪ್ರಶಂಸೆಯಿದೆ. ನಂತರ ಪುನಃ ಸೋಮಸಹಿತನಾದ ಇಂದ್ರನ ಸ್ತುತಿಯಿದೆ ಎಂದು ವಾಮದೇವನ ಕೃತಿಕೌಶಲ್ಯವು ಸ್ತುತವಾಗಿದೆ. ಇದೇ ರೀತಿಯಲ್ಲಿ ವಾಮದೇವನ ನಿರ್ಮಾಣಕೌಶಲ್ಯವು ಇತರ ಕಡೆಗಳಲ್ಲಿಯೂ ಪ್ರಶಂಸಿತವಾಗಿವೆ.

ಸಂಪಾತೌ ಭವತೋ ನಿಷ್ಕೇವಲ್ಯಮರುತ್ವತೀಯಯೋರ್ನಿವಿದ್ಧಾನೇ ವಾಮದೇವೋ ವಾ ಇಮಾಁಲ್ಲೋಕಾನಪಶ್ಯತ್ತಾನ್ಸಂಪಾತೈಃ ಸಮಪತದ್ಯತ್ಸಂಪಾತೈಃ ಸಮಪತತ್ತತ್ಸಂಪಾತಾನಾಂ ಸಂಪಾತತ್ವಂ ತದ್ಯತ್ಸಂಪಾತೌ ಪ್ರಥಮೇಽಹನಿ ಶಂಸತಿ ಸ್ವರ್ಗಸ್ಯ ಲೋಕಸ್ಯ ಸಮಷ್ಟ್ಯೈ ಸಂಪತ್ತ್ಯೈ ಸಂಗತ್ಯೈ ॥

(ಐ ಬ್ರಾ ೪-೩೦)

ನಿಷ್ಕೇವಲ್ಯಶಸ್ತ್ರದಲ್ಲಿಯೂ ಮರುತ್ವತೀಯಶಸ್ತ್ರದಲ್ಲಿಯೂ ಸಹ ಅರ್ಪಿತವಾಗತಕ್ಕ ಮಂತ್ರಗಳು ಸಂಪಾತರೂಪವಲ್ಲಿವೆ. (ಅನುಸ್ಯೂತವಾಗಿವೆ.). **ಆ ಯಾತ್ವಿಂದ್ರೋಽವಸ** (ಋ. ಸಂ. ೪-೨೧-೧). ಎಂಬುದು ಮರುತ್ವತೀಯಶಸ್ತ್ರವಲ್ಲಿ ಅರ್ಪಿತವಾಗತಕ್ಕ ನಿವಿದ್ಧಾನರೂಪವಾದ ಸೂಕ್ತವು. **ಆ ನ ಇಂದ್ರೋ ದೂರಾತ್** (ಋ. ಸಂ. ೪-೨೦-೧) ಎಂಬ

CC-0. Jangamwadi Math Collection. Digitized by eGangotri

ಮಂತ್ರದಿಂದ ಪ್ರಾರಂಭವಾಗತಕ್ಕದ್ದು ನಿಷ್ಕೇವಲ್ಯಶಸ್ತ್ರದಲ್ಲಿ ನಿವಿದ್ಧಾನರೂಪದಲ್ಲಿ ಅರ್ಪಿತವಾಗತಕ್ಕ ಸೂಕ್ತವು. ಇವೆರಡಕ್ಕೂ ಸಂಪಾತವೆಂಬ ಸಂಜ್ಞೆಯಿದೆ. ಹಿಂದೆ ವಾಮದೇವಋಷಿಯು ಭೂರಾದಿಲೋಕಗಳೆಲ್ಲವನ್ನೂ ವೀಕ್ಷಿಸಿ ಅವುಗಳೆಲ್ಲವನ್ನು ಸಂದರ್ಶಿಸಬೇಕೆಂಬುದ್ದೇಶದಿಂದ ತತ್ಪ್ರಾಪ್ತ್ಯುಪಾಯವನ್ನು ಕುರಿತು ಯೋಚಿಸುತ್ತಾ ಕೊನೆಗೆ ಈ ಸಂಪಾತಸೂಕ್ತಗಳನ್ನು ನಿರ್ಮಿಸಿ ಇವುಗಳ ಪ್ರಭಾವದಿಂದ ಅವೆಲ್ಲಕ್ಕೂ ಪಕ್ಷ್ಯುತ್ಪತನರೂಪದಲ್ಲಿ ಹಾರಿ ಹೋಗಿ ಸೇರಿದನು. ಇವುಗಳ ಮಹಿಮೆಯಿಂದ ಇದನ್ನು ಪಠಿಸುವವರೆಲ್ಲರೂ ಸಹ ಭೂರಾದಿಲೋಕಗಳನ್ನು ಹೋಗಿ ಸೇರುವರು ಎಂಬುದು ಸಿದ್ಧವಾದುದರಿಂದ ಇವಕ್ಕೆ **ಸಂಪಾತವೆಂಬ** ಹೆಸರು ಪ್ರಸಿದ್ಧವಾಯಿತು. ಯಾವ ಪುರುಷನು **ನಿಷ್ಕೇವಲ್ಯ** ಮತ್ತು **ಮರುತ್ವತೀಯ** ಶಸ್ತ್ರಗಳ ಪ್ರಥಮದಿನದಲ್ಲಿ ಈ ಸಂಪಾತಸೂಕ್ತಗಳನ್ನು ಶ್ರದ್ಧೆಯಿಂದ ಪಠಿಸುವನೋ ಅವನು ಸಕಲ ಸಂಪತ್ತುಗಳನ್ನೂ ಪಡೆದು ಸ್ವರ್ಗಸಾಯುಜ್ಯವನ್ನು ಪಡೆಯುತ್ತಾನೆ ಎಂದು ವಾಮದೇವಕೃತಿಯ ಪ್ರಭಾವದ ಪ್ರಶಂಸೆಯಿದೆ. ಈ ಮಂತ್ರಗಳ ಪ್ರಭಾವವು ಅಧಿಕವಾಗಿರುವುದನ್ನು ವಿಶ್ವಾಮಿತ್ರಋಷಿಯು ಸಹಿಸಲಿಲ್ಲ ಎಂಬೊಂದು ಸನ್ನಿವೇಶವೂ ಸಹ ಈ ರೀತಿ ತಿಳಿಸಲ್ಪಟ್ಟಿದೆ

ತಾನ್ವಾ ಏತಾನ್ಸಂಪಾತಾನ್ವಿಶ್ವಾಮಿತ್ರಃ ಪ್ರಥಮಮಪಶ್ಯತ್ತಾನ್ವಿಶ್ವಾಮಿತ್ರೇಣ ದೃಷ್ಟಾನ್ವಾಮದೇ-ವೋಽಸೃಜತೈವಾ ತ್ವಾಮಿಂದ್ರ ವಜ್ರಿನ್ನತ್ರ .... .... .... ತತ್ಸಂಪಾತಾನಾಂ ಸಂಪಾತತ್ವಂ ॥

(ಐ. ಬ್ರಾ. ೬-೧೮)

ವಿಶ್ವಾಮಿತ್ರಮಹರ್ಷಿಯು ಈಶ್ವರಾನುಗ್ರಹದಿಂದ ಸೃಷ್ಟಿಕಾಲದಲ್ಲಿಯೇ ಸಂಪಾತಸೂಕ್ತಗಳನ್ನು ದರ್ಶಿಸಿದನು, ಮತ್ತು ವೇದಗಳ ಮಧ್ಯದಲ್ಲಿ ಈ ಮಂತ್ರಗಳ ಪ್ರಭಾವವನ್ನೂ ಮನಸ್ಸಿನಲ್ಲಿ ಅರಿತನು. ವಿಶ್ವಾಮಿತ್ರನಿಂದ ದೃಷ್ಟವಾದ ಈ ಸೂಕ್ತಗಳನ್ನು ವಾಮದೇವನು ಅಧ್ಯಯನಮಾಡಿ ತನ್ನ ಹೆಸರಿನಿಂದ ಲೋಕದಲ್ಲಿ ಪ್ರಕಟಿಸಿದನು. **ಏವಾ ತ್ವಾ-ಮಿಂದ್ರ ವಜ್ರಿನ್** (ಋ. ಸಂ. ೪-೧೯-೧), **ಯನ್ನ ಇಂದ್ರೋ ಜುಜುಷೇ** (ಋ. ಸಂ. ೪-೨೨-೧), **ಕಥಾ ಮಹಾಮವೃಧತ್ಕಸ್ಯ ಹೋತುಃ** (ಋ. ಸಂ. ೪-೨೩-೧) ಎಂಬಿವೇ ವಿಶ್ವಾಮಿತ್ರನಿಂದ ದೃಷ್ಟವಾಗಿ ವಾಮದೇವನಿಂದ ಸೃಷ್ಟವಾದವು. ಇದನ್ನರಿತ ವಿಶ್ವಾಮಿತ್ರನು ತನ್ನ ಹೆಸರನ್ನೂ ಪ್ರಸಿದ್ಧಪಡಿಸಬೇಕೆಂದು ಇವುಗಳಿಗೆ ಪ್ರತಿಯಾಗಿ **ಸದ್ಯೋ ಹ ಜಾತೋ ವೃಷಭಃ** (ಋ. ಸಂ. ೩-೪೮-೧). ಇತ್ಯಾದಿ ಸಂಪಾತಮಂತ್ರಗಳನ್ನು ನಿರ್ಮಿಸಿದನು ಎಂದೂ ಸಹ ಸನ್ನಿವೇಶವು ವರ್ಣಿತವಾಗಿದೆ. ಈ ವಿಧವಾದ ಸನ್ನಿವೇಶಗಳೂ ಸಹ ವಾಮದೇವನ ನಿರ್ಮಾಣಕೌಶಲವನ್ನೇ ಪ್ರಶಂಸಿಸುತ್ತವೆ.

ವಾಮದೇವನು ಮಹಾದಿವ್ಯಜ್ಞಾನಿಯೆಂದೂ, ಸಂಸಾರದುಃಖದಿಂದ ಮುಕ್ತನಾಗಿ ಶಾಶ್ವತವಾದ ಬ್ರಹ್ಮಸಾಯುಜ್ಯವನ್ನು ಸೇರಲಪೇಕ್ಷಿಸುವ ಪ್ರತಿಯೊಬ್ಬನೂ ಸಹ ವಾಮದೇವಮಹರ್ಷಿಯ ಜ್ಞಾನಸ್ವರೂಪವೇನೆಂಬುದನ್ನರಿಯಬೇಕು ಎಂದೂ ಉಪನಿಷದಾದಿಗಳು ಇವನ ದಿವ್ಯಜ್ಞಾನದ ಪ್ರಶಂಸೆಯನ್ನು ಮಾಡಿವೆ. ಐತರೇಯೋಪನಿಷತ್ತಿನಲ್ಲಿ,

**ತದುಕ್ತಮೃಷಿಣಾ—ಗರ್ಭೇ ನು ಸನ್ನನ್ವೇಷಾಂ .... .... .... ಇತಿ । ಗರ್ಭ ಏ ವೈತಚ್ಛಯಾನೋ ವಾಮದೇವ ಏವಮುವಾಚ ॥**

(ಐ. ಉ. ೨.೫)

CC-0. Jangamwadi Math Collection. Digitized by eGangotri

ಜನ್ಮಾದಿ ಬಂಧಕವಾದ ಮೂರು ಅವಸ್ಥೆಗಳಲ್ಲಿಯೂ ಮಾನವನು ಸಂಸಾರಸಮುದ್ರದಲ್ಲಿ ಬಿದ್ದು ತೊಳಲುತ್ತಿರುವ ಮಾನವನು ಆತ್ಮನ ಸ್ವರೂಪವನ್ನು ತಿಳಿದೊಡನೆಯೇ ಸಂಸಾರ ಬಂಧನದಿಂದ ಮುಕ್ತನಾಗುತ್ತಾನೆ ಎಂಬ ವಿಷಯವು ವಾಮದೇವಋಷಿಯಿಂದ ಉಕ್ತವಾಗಿದೆ. ತಾಯಿಯ ಗರ್ಭದಲ್ಲಿದ್ದುಕೊಂಡೇ ನಾನು ವಾಕ್ಕು, ಅಗ್ನಿ ಮುಂತಾದ ದೇವತೆಗಳ ಸಮಸ್ತ ಜನ್ಮಗಳನ್ನೂ ತಿಳಿದುಕೊಂಡುಬಿಟ್ಟೆನು. ಕಬ್ಬಿಣದ ಶಲಾಕೆಗಳಂತೆ ಶರೀರದ ಅವಯವಗಳು ನನಗೆ ಬಂಧಕವಾಗಿದ್ದವು. ಗಿಡಗನು ಬಲೆಯನ್ನು ಕಿತ್ತೊಡನೆಯೇ ವಾಯುವೇಗದಿಂದ ಹಾರಿಹೋಗುವಂತೆ ನಾನೂ ಸಹ ಬಂಧನರಹಿತನಾದೊಡನೆಯೇ ಆತ್ಮಜ್ಞಾನದಿಂಧ ಲಬ್ಧವಾದ ಬಲದಿಂದ ಹೊರಕ್ಕೆ ಹಾರಿಬಂದೆನು ಎಂಬ ವಾಕ್ಯವನ್ನು ವಾಮದೇವನು ಗರ್ಭಸ್ಥನಾಗಿರುವಾಗಲೇ ನುಡಿದನು.

> ಸ ಏವಂ ವಿದ್ವಾನಸ್ಮಾಚ್ಛರೀರಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ಸಮಭವತ್ ||
>
> (ಐ. ಉ. ೨-೬)

ವಾಮದೇವನಿಗೆ ಆತ್ಮಜ್ಞಾನವುಂಟಾದೊಡನೆಯೇ ಶರೀರವು ಭಿನ್ನವಾಯಿತು. ಎಂದರೆ, ಅಜ್ಞಾನದಿಂದ ಕಲ್ಪಿತವಾಗಿ ಕಬ್ಬಿಣದ ಪದಾರ್ಥಗಳಂತೆ ಕಠಿಣವಾಗಿಯೂ ಅತ್ಯಂತ ದೃಢವಾದ ಬಂಧಕವಾಗಿಯೂ ಇರತಕ್ಕ ಜನ್ಮ, ಮರಣ ಮುಂತಾದ ನೂರಾರು ಅನರ್ಥಪರಂಪರೆಗಳಿಂದೊಡಗೂಡಿದ ಶರೀರಗಳ ಶ್ರೇಣಿಯು ಪರಮಾತ್ಮಜ್ಞಾನವೆಂಬಮೃತವನ್ನು ಆಸ್ವಾದನೆಮಾಡಿದೊಡನೆಯೇ ಅವಿದ್ಯಾರೂಪವಾದ ಶೃಂಖಲೆಗಳೆಲ್ಲವೂ ನಷ್ಟವಾದವು. ನಂತರ ಪರಮಾತ್ಮಸ್ವರೂಪನಾಗಿಯೂ, ಸರ್ವಾತ್ಮಭಾವವನ್ನು ಹೊಂದಿಯೂ ಅಮೃತನಾದನು.

> ಬ್ರಹ್ಮವಿದ್ಯಾಸಾಧನಕೃತಸರ್ವಾತ್ಮಭಾವಫಲಾವಾಪ್ತಿಂ ವಾಮದೇವಾದ್ಯಾಚಾರ್ಯಪರಂಪರಯಾ ಶ್ರುತ್ಯಾ ಅವದ್ಯೋತ್ಯಮಾನಾಂ ಬ್ರಹ್ಮವಿತ್ಪರಿಷದಿ ಅತ್ಯಂತಪ್ರಸಿದ್ಧಾಂ ಉಪಲಭಮಾನಾ ಮುಮುಕ್ಷವಃ ಅಧುನಾತನಾಃ ಬ್ರಹ್ಮಜಿಜ್ಞಾಸವಃ ಅನಿತ್ಯಾತ್ ಸಾಧ್ಯಸಾಧನಲಕ್ಷಣಾತ್ ಸಂಸಾರಾತ್ ಆಜೀವಭಾವಾದ್ವ್ಯಾವಿವೃತ್ಸವೋ ವಿಚಾರಯಂತೋಽನ್ಯೋಽನ್ಯಂ ಪೃಚ್ಛಂತಿ |.... ಯದೇತದ್ಧೃದಯಂ ಮನಶ್ಚೈತತ್ ||
>
> (ಐ. ಉ. ಶ. ಭಾ. ೩-೧)

ಬ್ರಹ್ಮವಿದ್ಯಾರೂಪವಾದ ಸಾಧನದಿಂದ ಸರ್ವಾತ್ಮಭಾವವೆಂಬ ಫಲವು ಪ್ರಾಪ್ತವಾಗುತ್ತದೆ ಎಂದು ವಾಮದೇವನೇ ಮುಂತಾದ ಆಚಾರ್ಯಪರಂಪರೆಯಿಂದಲೂ, ತತ್ಕೃತವಾದ ಶ್ರುತಿವಾಕ್ಯಗಳಿಂದಲೂ ಪ್ರಕಾಶಿತವಾಗಿದೆ. ಅನಿತ್ಯವಾದ ಸಂಸಾರದಿಂದ ಮುಕ್ತರಾಗಬೇಕೆನ್ನುವವರೂ, ಬ್ರಹ್ಮಜಿಜ್ಞಾಸುಗಳೂ ಸಹ ಈ ವಿಷಯದಲ್ಲಿ ಪರಸ್ಪರ ವಿಚಾರಮಾಡುವವರಾಗಿ ಒಬ್ಬರನ್ನೊಬ್ಬರು ಆತ್ಮನು ಯಾರು ? ಹೇಗೆ ಉಪಾಸನೆ ಮಾಡಬೇಕು ? ಇತ್ಯಾದಿಯಾಗಿ ಪ್ರಶ್ನಿಸುತ್ತಿದ್ದಾರೆ. ಇಂತಹ ಪ್ರಶ್ನೆಗಳಿಗೂ ಸಹ ವಾಮದೇವನಂತಹ ಋಷಿವಾಕ್ಯಗಳೇ ಆಧಾರವಾಗಿವೆಯೆಂದು ವಾಮದೇವನ ದಿವ್ಯಜ್ಞಾನವು ಪ್ರಶಂಸಿತವಾಗಿದೆ. ವಾಮದೇವನು ತಿಳಿದಂತೆ ಅಹಂ ಬ್ರಹ್ಮಾಸ್ಮಿ ಎಂಬ ದಿವ್ಯಜ್ಞಾನವುಂಟಾದೊಡನೆಯೇ ವಾಮದೇವನಂತೆಯೇ ಸಂಸಾರದಿಂದಲೂ ಮುಕ್ತರಾಗುತ್ತಾರೆಂದರ್ಥ.

CC-0. Jangamwadi Math Collection. Digitized by eGangotri

ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನಮೇವಾವೇತ್ । ಅಹಂ ಬ್ರಹ್ಮಾಸ್ಮೀತಿ । ತಸ್ಮಾತ್ತತ್ಸರ್ವ-ಮಭವತ್ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದಭವತ್ತಥರ್ಷೀಣಾಂ ತಥಾ ಮನುಷ್ಯಾಣಾಂ ತದ್ಧೈತತ್ಪಶ್ಯನ್ನೃಷಿರ್ವಾಮದೇವಃ ಪ್ರತಿಪೇದೇಽಹಂ ಮನುರಭವಂ ಸೂರ್ಯ-ಶ್ಚೇತಿ । ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ॥

(ಬೃ. ಉ. ೧-೪-೧೦)

ಪ್ರಥಮತಃ, ಸೃಷ್ಟಿಗೆ ಪೂರ್ವದಲ್ಲಿ ಬ್ರಹ್ಮವು ಮಾತ್ರವಿದ್ದಿತು. ಅದು ನಾನು ಬ್ರಹ್ಮ ಎಂಬ ಆತ್ಮಜ್ಞಾನವನ್ನು ಪಡೆಯಿತು. ಆದುದರಿಂದಲೇ ಅದು ಸರ್ವಾತ್ಮಭಾವವನ್ನು ಪಡೆದು ಸರ್ವವ್ಯಾಪಕವಾಯಿತು. ದೇವತೆಗಳಲ್ಲಿಯೂ ಸಹ ಯಾರು ಈ ಜ್ಞಾನವನ್ನು ಪಡೆದರೋ ಅವರೆಲ್ಲರೂ ಇದೇ ಭಾವವನ್ನು ಪಡೆದರು. ಋಷಿಗಳೂ ಮಾನವರೂ ಈ ಜ್ಞಾನರೂಪವಾದ ಸಾಧನದಿಂದಲೇ ಸಿದ್ಧಿಯನ್ನು ಪಡೆದರು. ಇದೇ ಬ್ರಹ್ಮಜ್ಞಾನವನ್ನು ಪಡೆದ ವಾಮದೇವನೂ ಸಹ ನಾನೇ ಮನುವು, ನಾನೇ ಸೂರ್ಯನು ಎಂದು ತನ್ನ ಸರ್ವಾತ್ಮಭಾವವನ್ನು ಪ್ರಕಟಿಸಿದ್ದಾನೆ. ಆದುದರಿಂದ ಅಹಂ ಬ್ರಹ್ಮ ಎಂಬ ಜ್ಞಾನವನ್ನು ಪಡೆಯತಕ್ಕವರೆಲ್ಲರೂ ಸಹ ಸರ್ವಾತ್ಮಭಾವರೂಪವಾದ ಸಿದ್ಧಿಯನ್ನು ಪಡೆಯು ತ್ತಾರೆಂದು ಬ್ರಹ್ಮಜ್ಞಾನದ ಸ್ವರೂಪವು ತಿಳಿಸಲ್ಪಟ್ಟಿದೆ.

ಅಹಂ ಮನುರಭವಂ ಎಂಬ ವಾಮದೇವವಾಕ್ಯವು ವೇದಾಂತಸೂತ್ರದಲ್ಲಿ ಉದ್ಧೃತವಾಗಿ ಅದು ಬ್ರಹ್ಮಜ್ಞಾನ ಸ್ವರೂಪ ವಿಚಾರದಲ್ಲಿ ವಾಕ್ಯಾರ್ಥಕ್ಕವಕಾಶವನ್ನುಂಟುಮಾಡಿದೆ.

ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್ ।

(ಬ್ರ. ಸೂ. ೧-೧-೩೧)

ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣೀತಿ (ಛಾ. ಉ. ೬-೩-೨) ಜೀವಾತ್ಮರೂಪ ದಿಂದ ಎಲ್ಲಾ ಪ್ರದೇಶಗಳಲ್ಲಿಯೂ ಪ್ರವೇಶಿಸಿ ತತ್ತನ್ನಾಮರೂಪಗಳಿಂದ ವಿಕೃತನಾಗುವನು ಎಂಬ ಛಾಂದೋಗ್ಯೋಪ ನಿಷತ್ತಿನ ವಾಕ್ಯದಲ್ಲಿ ಯಾವ ರೀತಿಯಾದ ಬ್ರಹ್ಮದೇವರ ತಾದಾತ್ಮ್ಯಸಂಬಂಧವಿದೆಯೋ ಅದೇ ವಿಧವಾದ ಸಂಬಂಧವು ವಾಮದೇವನ ಅಹಂ ಮನುಃ ಇತ್ಯಾದಿ ವಾಕ್ಯಗಳಿಂದಲೂ ತಿಳಿಯುತ್ತದೆ. ಆದರೆ ಇಲ್ಲಿ ಜೀವನ ವೈಯಕ್ತಿಕವಾದ ಸ್ವರೂಪವು ಬ್ರಹ್ಮತತ್ತ್ವದಲ್ಲೇ ಐಕ್ಯವೇ ಅಥವಾ ಭಿನ್ನವೇ ಎಂಬ ದ್ವೈತಾದ್ವೈತದ ವಿಮರ್ಶೆಗೂ ಅವಕಾಶವನ್ನು ಕೊಟ್ಟಿದೆ. ಈ ವಿಚಾರವು ಸದ್ಯಃ ಅಪ್ರಕೃತ. ಮುಖ್ಯವಾಗಿ ವಾಮದೇವನ ದಿವ್ಯಜ್ಞಾನವು ಸಮಸ್ತಶ್ರುತಿವಾಕ್ಯ ಗಳಲ್ಲಿಯೂ ಪ್ರಶಂಸಿತವಾಗಿ ಬ್ರಾಹ್ಮಣಾದಿ ಸಕಲ ಶ್ರುತಿಗಳೂ ಒಂದಲ್ಲ ಒಂದುಕಡೆ ಈ ಮಹರ್ಷಿಯ ಕೃತಿಯನ್ನುದ್ಧ ರಿಸಿ ವಿಮರ್ಶಿಸಿವೆ.

———

CC-0. Jangamwadi Math Collection. Digitized by eGangotri

# ಮೊದಲನೆಯ ಸೂಕ್ತವು.

## ಸಾಯಣಭಾಷ್ಯಂ

ವಾಮದೇವ್ಯೇ ಚತುರ್ಥೇ ಮಂಡಲೇ ಪಂಚಾನುವಾಕಾಃ । ತತ್ರ ಪ್ರಥಮೋಽನುವಾಕೇ ದಶ ಸೂಕ್ತಾನಿ । ತೇಷು ತ್ವಾಂ ಹ್ಯಗ್ನೇ ಸದಮಿದಿತಿ ವಿಂಶತ್ಯೃಚಂ ಪ್ರಥಮಂ ಸೂಕ್ತಂ । ಆತ್ರೇಯಮನುಕ್ರಮಣಿಕಾ । ತ್ವಾಂ ಹ್ಯಗ್ನೇ ವಿಂಶತಿರಷ್ಟ್ಯತಿಜಗತೀಧೃತಯ ಆದ್ಯಾ ಉಪಾದ್ಯಾಶ್ಚತಸ್ರೋ ವಾರುಣ್ಯಶ್ಚ ವೇತಿ । ಮಂಡಲದ್ರಷ್ಟಾ ವಾಮದೇವಋಷಿಃ । ಪ್ರಥಮಾ ಚತುಃಷಷ್ಟ್ಯಕ್ಷರಾಷ್ಟಿರ್ದ್ವಿತೀಯಾ ದ್ವಿಪಂಚಾಶದಕ್ಷರಾತಿಜಗತೀ ತೃತೀಯಾ ದ್ವಿಸಪ್ತತ್ಯಕ್ಷರಾ ಧೃತಿಶ್ಚತುರ್ಥ್ಯಾದ್ಯಾ ಅನಾದೇಶಪರಿಭಾಷಯಾ ಸಪ್ತದಶ ತ್ರಿಷ್ಟುಭಃ । ಕೃತ್ಸ್ನಸ್ಯ ಸೂಕ್ತಸ್ಯ ಮಂಡಲಾದಿಷ್ವಾಗ್ನೇಯಮಿತಿ ಪರಿಭಾಷಯಾಗ್ನಿರ್ದೇವತಾ ದ್ವಿತೀಯಾದ್ಯಾಶ್ಚತಸ್ರೋ ವರುಣದೇವತ್ಯಾ ವಾ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಅಧ್ಯಾಯೋಪಾಕರಣೇ ಮಂಡಲಾದಿಹೋಮೇ ವಿನಿಯುಕ್ತಾ ॥

ಅನುವಾದವು— ವಾಮದೇವಋಷಿದೃಷ್ಟವಾದ ಈ ನಾಲ್ಕನೆಯ ಮಂಡಲದಲ್ಲಿ ಐದು ಅನುವಾಕಗಳಿರುವವು. ಅವುಗಳಲ್ಲಿ ಮೊದಲನೆಯ ಅನುವಾಕದಲ್ಲಿ ಹತ್ತು ಸೂಕ್ತಗಳಿರುವವು. ಆ ಹತ್ತು ಸೂಕ್ತಗಳಲ್ಲಿ **ತ್ವಾಂ ಹ್ಯಗ್ನೇ ಸದಮಿತ್** ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಇಪ್ಪತ್ತು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ— **ತ್ವಾಂ ಹ್ಯಗ್ನೇ ವಿಂಶತಿರಷ್ಟ್ಯತಿಜಗತೀಧೃತಯ ಆದ್ಯಾ ಉಪಾದ್ಯಾಶ್ಚತಸ್ರೋ ವಾರುಣ್ಯಶ್ಚ ವಾ** ಎಂದು ಹೇಳಿರುವುದು. ಈ ಸೂಕ್ತಕ್ಕೆ ಮಂಡಲದ್ರಷ್ಟೃವಾದ ವಾಮದೇವನೇ ಋಷಿಯು ; ಈ ಸೂಕ್ತದಲ್ಲಿ ಅರವತ್ತನಾಲ್ಕು ಅಕ್ಷರಗಳುಳ್ಳ ಮೊದಲನೆಯ ಋಕ್ಕು ಅಷ್ಟಿ ಎಂಬ ಛಂದಸ್ಸಿನದು ; ಐವತ್ತೆರಡು ಅಕ್ಷರಗಳುಳ್ಳ ಎರಡನೆಯ ಋಕ್ಕು ಅತಿಜಗತೀಛಂದಸ್ಕವು ; ಎಪ್ಪತ್ತೆರಡು ಅಕ್ಷರಗಳುಳ್ಳ ಮೂರನೆಯ ಋಕ್ಕು ಧೃತಿ ಎಂಬ ಛಂದಸ್ಸಿನದು ; ನಾಲ್ಕನೆಯ ಋಕ್ಕಿನಿಂದ ಸೂಕ್ತದ ಕೊನೆಯವರೆಗಿನ ಹದಿನೇಳು ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಕವು. **ಮಂಡಲಾದಿಷ್ವಾಗ್ನೇಯಂ**— ಮಂಡಲದ ಪ್ರಾರಂಭದ ಸೂಕ್ತವು ಅಗ್ನಿದೇವತಾಕವಾಗಿರುವುದು ಎಂಬ ಪರಿಭಾಷೆಗನುಸಾರವಾಗಿ ಈ ಮೊದಲನೆಯ ಪೂರ್ತಾ ಸೂಕ್ತಕ್ಕೆ ಅಗ್ನಿಯು ದೇವತೆಯು ; ಎರಡನೆಯ ಋಕ್ಕಿನಿಂದ ನಾಲ್ಕು ಋಕ್ಕುಗಳಿಗೆ (೨-೫ ಋಕ್ಕುಗಳಿಗೆ) ಅಗ್ನಿ ಅಥವಾ ವರುಣನು ದೇವತೆಯು. ಸೂಕ್ತವಿನಿಯೋಗವು ಲೈಂಗಿಕವು. ಈ ಸೂಕ್ತದ ಮೊದಲನೆಯ ಋಕ್ಕನ್ನು ಅಧ್ಯಾಯೋತ್ಸರ್ಜನ ಉಪಾಕರ್ಮಹೋಮಗಳಲ್ಲಿ ಮಂಡಲಹೋಮಕ್ಕಾಗಿ ವಿನಿಯೋಗಿಸುವ ರೂಢಿ ಇರುವುದು.

CC-0. Jangamwadi Math Collection. Digitized by eGangotri

|| ಓಂ ||

## ಸೂಕ್ತ—೧

ಮಂಡಲ—೪ || ಅನುವಾಕ—೧ || ಸೂಕ್ತ—೧ ||
ಅಷ್ಟಕ—೩ || ಅಧ್ಯಾಯ—೪ || ವರ್ಗ—೧೨, ೧೩, ೧೪, ೧೫ ||
|| ಸೂಕ್ತದಲ್ಲಿರುವ ಋಕ್ಸಂಖ್ಯೆ—೨೦ ||

ಋಷಿಃ—ವಾಮದೇವಃ ||
ದೇವತಾ—೧, ೬-೨೦ ಅಗ್ನಿಃ | ೨-೫. ಅಗ್ನಿರಗ್ನಿರ್ವಾ ವರುಣಶ್ಚ ||
ಛಂದಃ—೧. ಅಷ್ಟಿಃ | ೨. ಅತಿಜಗತೀ | ೩. ಧೃತಿಃ | ೪-೨೦. ತ್ರಿಷ್ಟುಪ್ ||

---

ಸಂಹಿತಾಪಾಠಃ

ತ್ವಾಂ ಹ್ಯಗ್ನೇ ಸದಮಿತ್ಸಮನ್ಯವೋ ದೇವಾಸೋ ದೇವಮರತಿಂ ನ್ಯೇರಿರ ಇತಿ ಕ್ರತ್ವಾ ನ್ಯೇರಿರೇ ।
ಅಮರ್ತ್ಯಂ ಯಜತ ಮರ್ತ್ಯೇಷ್ವಾ ದೇವಮಾದೇವಂ ಜನತ ಪ್ರಚೇತಸಂ ವಿಶ್ವಮಾದೇವಂ ಜನತ ಪ್ರಚೇತಸಂ ॥ ೧ ॥

ಪದಪಾಠಃ

ತ್ವಾಂ । ಹಿ । ಅಗ್ನೇ । ಸದಂ । ಇತ್ । ಸ್ಽಮನ್ಯವಃ । ದೇವಾಸಃ । ದೇವಂ । ಅರತಿಂ । ನಿಽಏರಿರೇ । ಇತಿ । ಕ್ರತ್ವಾ । ನಿಽಏರಿರೇ ।
ಅಮರ್ತ್ಯಂ । ಯಜತ । ಮರ್ತ್ಯೇಷು । ಆ । ದೇವಂ । ಆಽದೇವಂ । ಜನತ । ಪ್ರಽಚೇತಸಂ । ವಿಶ್ವಂ । ಆಽದೇವಂ । ಜನತ । ಪ್ರಽಚೇತಸಂ ॥ ೧ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ವಾಮದೇವಃ ಸ್ತೌತಿ । ಹೇ ಅಗ್ನೇ ಸಮನ್ಯವಃ । ಮನ್ಯುಃ ಸ್ಪರ್ಧಾ । ತಯಾ ಸಹ ವರ್ತಮಾನಾಃ । ಸ್ವಸಮಾನೈಃ ಸ್ಪರ್ಧಮಾನಾ ಇತ್ಯರ್ಥಃ । ದೇವಾಸೋ ದೇವನಶೀಲಾ ಇಂದ್ರಾದಯೋ ದೇವಾ ದೇವಂ ದ್ಯೋತಮಾನಮರತಿಂ ಶೀಘ್ರಂ ಗಂತಾರಂ ತ್ವಾಂ ಸದಮಿತ್ಸದೈವ ನ್ಯೇರಿರೇ ಹಿ। ಸ್ಪರ್ಧಾನಿಮಿತ್ತೇ ಯುದ್ಧೇ ಪ್ರೇರಯಂತಿ ಖಲು । ಇತಿಶಬ್ದೋ ಹೇತ್ವರ್ಥಃ । ಯಸ್ಮಾದ್ದೇವಾಸ್ತ್ವಾಂ ಯುದ್ಧಾರ್ಥಂ ನಿತರಾಂ ಪ್ರೇರಯಂತಿ ತಸ್ಮಾದ್ಯಜಮಾನಾಃ ಕ್ರತ್ವಾ ಸ್ತುತಿಲಕ್ಷಣೇನ ಕರ್ಮಣಾ ನ್ಯೇರಿರೇ । ಯಜ್ಞಕರ್ಮಣಿ ದೇವಾನ್ಹವಿಃ ಪ್ರಾಪಯಿತುಂ ದೇವಾನಾಹ್ವಾತುಂ ಚ ತ್ವಾಂ ನಿತರಾಂ ಪ್ರೇರಯಂತಿ ಖಲು । ಯಜತ ಯಜನೀಯ ಹೇ ಅಗ್ನೇ ಅಮರ್ತ್ಯಂ ಮರಣಧರ್ಮರಹಿತಮಾ ಸರ್ವತೋ ದೇವಂ ದ್ಯೋತಮಾನಂ ಪ್ರಚೇತಸಂ । ಪ್ರಕೃಷ್ಟಂ ಕರ್ಮವಿಷಯಂ ಚೇತೋ ಜ್ಞಾನಂ ಯಸ್ಯ ತಾದೃಶಂ ತ್ವಾಂ ಮರ್ತ್ಯೇಷು ಯಾಗಂ ಕುರ್ವಾಣೇಷು ಮನುಷ್ಯೇಷ್ವಾದೇವಮಾಗಂತಾರಂ ಜನತ । ದೇವಾ ಹವಿಃಪ್ರಾಪಣಾರ್ಥಮಜನಯನ್ । ತಥಾ ಪ್ರಚೇತಸಂ ಕರ್ಮಾಭಿಜ್ಞಮಾದೇವಂ ತತ್ತದ್ಯಜ್ಞೇಷ್ವಾಗಂತಾರಂ ತ್ವಾಂ ವಿಶ್ವಂ ಜನತ । ಯುಗಪನ್ನಾನಾದೇಶವರ್ತಿಷು ಯಜ್ಞೇಷು ಯೌಗಪದ್ಯೇನ ಹವಿರಾನಯನಾರ್ಥಂ ವ್ಯಾಪ್ತಂ ದೇವಾ ಅಕುರ್ವನ್ ॥ ನ್ಯೇರಿರೇ । ಈರ ಗತೌ । ಲಿಟಿ ಮಂತ್ರತ್ವಾದಾಮ್ನ ಭವತಿ । ಸಹೇತಿ ಯೋಗವಿಭಾಗಾತ್ಸಮಾಸಃ । ಹಿಯೋಗಾದನಿಘಾತಃ । ಕ್ರತ್ವಾ । ಜಸಾದಿಷು ಛಂದಸಿ ವಾವಚನಮಿತಿ ನಾದೇಶಾಭಾವಃ । ಯಣಾದೇಶಃ ॥

## ಪ್ರತಿಪದಾರ್ಥ

**ಅಗ್ನೇ**—ಎಲೈ ಅಗ್ನಿಯೇ । **ಸಮನ್ಯವಃ**—ಪರಸ್ಪರ ಸ್ಪರ್ಧಿಸತಕ್ಕ । **ದೇವಾಸಃ**—ದೇವತೆಗಳು । **ದೇವಂ**—ಪ್ರಕಾಶಮಾನನೂ । **ಅರತಿಂ**—ಶೀಘ್ರಸಂಚಾರಿಯೂ ಆದ । **ತ್ವಾಂ**—ನಿನ್ನನ್ನು । **ಸದಮಿತ್**—ಯಾವಾಗಲೂ । **ನ್ಯೇರಿರೇ ಹಿ**—(ಯುದ್ಧಕ್ಕಾಗಿ) ಪ್ರೇರಿಸುತ್ತಾರಲ್ಲವೇ ? (ಅದೇ ಕಾರಣದಿಂದ ಯಜ್ಞಕರ್ತರೂ ಸಹ) । **ಕ್ರತ್ವಾ**—ಸ್ತುತಿರೂಪವಾದ ಕರ್ಮದಿಂದ । **ನ್ಯೇರಿರೇ**—(ದೇವತೆಗಳನ್ನು ಕರೆಯುವುದಕ್ಕಾಗಿ ನಿನ್ನನ್ನು) ಪ್ರೇರಿಸುತ್ತಾರೆ । **ಯಜತ**—ಯಜ್ಞಾರ್ಹನಾದ ಅಗ್ನಿಯೇ । **ಅಮರ್ತ್ಯಂ**—ಮರಣರಹಿತನೂ । **ಆ**—ಸರ್ವತ್ರ । **ದೇವಂ**—ಪ್ರಕಾಶಮಾನನೂ । **ಪ್ರಚೇತಸಂ**—ಪ್ರಕೃಷ್ಟವಾದ ಜ್ಞಾನವುಳ್ಳವನೂ ಆದ ನಿನ್ನನ್ನು । **ಮರ್ತ್ಯೇಷು**—ಯಾಗಮಾಡತಕ್ಕ ಮಾನವರಲ್ಲಿ । **ಆದೇವಂ**—ಸರ್ವದಾ ಆಗಮಿಸುವವನೆಂದು । **ಜನತ**—(ದೇವತೆಗಳು) ತಿಳಿದಿದ್ದಾರೆ । **ಪ್ರಚೇತಸಂ**—ಕರ್ಮವಿಷಯಕವಾದ ಜ್ಞಾನವುಳ್ಳವನೂ । **ಆದೇವಂ**—ಆಯಾ ಯಜ್ಞಕ್ಕಾಗಿ ಬರುವವನೂ ಆದ ನಿನ್ನನ್ನು । **ವಿಶ್ವಂ ಜನತ**—ವಿಶ್ವವ್ಯಾಪಿಯಾಗಿ ಎಲ್ಲಾ ಯಾಗಗಳಲ್ಲೂ ಭಾಗವಹಿಸುವಂತೆ ಮಾಡಿದರು.

## ಭಾವಾರ್ಥ

ಎಲೈ ಅಗ್ನಿಯೇ, ಪರಸ್ಪರ ಸ್ಪರ್ಧಿಸತಕ್ಕ ದೇವತೆಗಳು ಪ್ರಕಾಶಮಾನನೂ ಶೀಘ್ರಸಂಚಾರಿಯೂ ಆದ ನಿನ್ನನ್ನು ಯಾವಾಗಲೂ ಯುದ್ಧಕ್ಕಾಗಿ ಪ್ರೇರಿಸುತ್ತಾರೆ. ಅದೇ ಕಾರಣದಿಂದ ಯಜ್ಞಕರ್ತರೂ ಸಹ ಸ್ತುತಿರೂಪವಾದ ಕರ್ಮದಿಂದ ದೇವತೆಗಳ ಆಹ್ವಾನಕ್ಕಾಗಿ ನಿನ್ನನ್ನು ಪ್ರೇರಿಸುತ್ತಾರೆ. ಯಜ್ಞಾರ್ಹನಾದ ಅಗ್ನಿಯೇ, ಮರಣರಹಿತನೂ ಸರ್ವತ್ರ ಪ್ರಕಾಶಮಾನನೂ ಪ್ರಕೃಷ್ಟವಾದ ಜ್ಞಾನವುಳ್ಳವನೂ ಆದ ನಿನ್ನನ್ನು ಯಾಗಮಾಡತಕ್ಕ ಮಾನವ

CC-0. Jangamwadi Math Collection. Digitized by eGangotri

ರಲ್ಲಿರುವವನೆಂದು ದೇವತೆಗಳು ತಿಳಿದಿದ್ದಾರೆ. ಕರ್ಮವಿಷಯಕವಾದ ಜ್ಞಾನವುಳ್ಳವನೂ ಆಯಾ ಯಜ್ಞಕ್ಕಾಗಿ ಆಗಮಿಸುವವನೂ ಆದ ನಿನ್ನನ್ನು ಆ ದೇವತೆಗಳು ವಿಶ್ವವ್ಯಾಪಿಯಾಗಿ ಎಲ್ಲಾ ಯಾಗಗಳಲ್ಲೂ ಭಾಗವಹಿಸುವಂತೆ ಮಾಡಿದರು.

## English Translation

Since the emuolus gods ever excite you, Agni, who is a deity swift of motion, (to contest), therefore do (your worshippers) urge you by their devotions (to bring the deities to their sacrifices) : adorable Agni, they (the deities), have generated you, immortal, divine, all-wise, as the present divinity among men : they have generated you as the all-wise deity.

## ವಿಶೇಷವಿಷಯಗಳು

ಈ ಸೂಕ್ತದ ಮೊದಲನೆಯ ಋಕ್ಕು ಅಷ್ಟಿ ಎಂಬ ಛಂದಸ್ಸಿನದು. ಎರಡನೆಯ ಋಕ್ಕು ಅತಿಜಗತೀ ಮತ್ತು ಮೂರನೆಯ ಋಕ್ಕು ಧೃತಿ ಎಂಬ ಛಂದಸ್ಸಿನದು. ಈ ಋಕ್ಕುಗಳಲ್ಲಿರುವ ವೈಶಿಷ್ಟ್ಯವೇನೆಂದರೆ—ಋಕ್ಕಿನ ಪೂರ್ವಾರ್ಧದ ಮತ್ತು ಉತ್ತರಾರ್ಧದ (ಋಕ್ಕಿನಲ್ಲಿ ಮೂರು ಅರ್ಧಗಳಿದ್ದ ಪಕ್ಷದಲ್ಲಿ ಕೊನೆಯ ಅರ್ಧದ) ಕೊನೆಯ ಒಂದೆರಡು ಶಬ್ದಗಳು ಎರಡಾವರ್ತಿ ಪಠಿತವಾಗಿರುವವು, ಎಂದರೆ ಒಂದೇಕಡೆ ಎರಡಾವರ್ತಿ ಪಠಿತವಾಗಿರುವುದಿಲ್ಲ ಇವುಗಳ ಮಧ್ಯದಲ್ಲಿ ಒಂದೆರಡು ಶಬ್ದಗಳಿರುವವು. ಹೇಗೆಂದರೆ **ನ್ಯೇರಿರ ಇತಿ ಕ್ರತ್ವಾ ನ್ಯೇರಿರೇ** ಎಂಬಲ್ಲಿ **ನ್ಯೇರಿರೇ** ಎಂಬ ಶಬ್ದವು ಎರಡಾವರ್ತಿ ಪಠಿತವಾಗಿರುವುದು. ಈ ಶಬ್ದಗಳ ಮಧ್ಯದಲ್ಲಿ **ಇತಿ ಕ್ರತ್ವಾ** ಎಂಬ ಪದಗಳಿರುವವು. ಇದರಂತೆ **ಪ್ರಚೇತಸಂ ವಿಶ್ವಮಾದೇವಂ ಜನತ ಪ್ರಚೇತಸಂ** ಎಂಬಲ್ಲಿಯೂ ಹೀಗೆಯೇ ಇರುವುದು. ಈ ರೀತಿ ಇರುವ ಪ್ರಾಸವು ಪಠಿಸುವಾಗ ಶುಶ್ರಾವ್ಯವಾಗಿರಲೆಂಬ ಉದ್ದೇಶದಿಂದ ಉಪಯೋಗಿಸಲ್ಪಡುವುದು. ಆದರೆ ಭಾಷ್ಯ ಕಾರರು ಎರಡಾವರ್ತಿ ಪಠಿತವಾಗಿರತಕ್ಕ ಶಬ್ದಗಳಿಗೆ ಕೆಲವು ಸಂದರ್ಭಗಳಲ್ಲಿ ಪ್ರತ್ಯೇಕವಾದ ಅರ್ಥವನ್ನು ವಿವರಿಸಿರು ವರು. ಈ ವಿಧವಾದ ಛಂದಸ್ಸು ಮತ್ತು ಪ್ರಾಸವು ದಿವೋದಾಸನ ಪುತ್ರನಾದ ಪರುಚ್ಛೇಪನೆಂಬ ಋಷಿದೃಷ್ಟವಾದ ಸೂಕ್ತಗಳಲ್ಲಿ ಎಂದರೆ ಪ್ರಥಮ ಮಂಡಲದ ೧೨೭-೧೩೯ ನೆಯ ಸೂಕ್ತಗಳಲ್ಲಿ ವಿಶೇಷವಾಗಿ ಕಂಡು ಬರುವುದು

**ಸಮನ್ಯವಃ—ಮನ್ಯುಃ ಸ್ಪರ್ಧಾ । ತಯಾ ಸಹ ವರ್ತಮಾನಾಃ । ಸ್ವಸಮಾನೈಃ ಸ್ಪರ್ಧಮಾನಾ ಇತ್ಯರ್ಥಃ ।** ಮನ್ಯುಶಬ್ದಕ್ಕೆ, ಕ್ರೋಧ, ಕೋಪ ಎಂಬರ್ಥವಿದ್ದರೂ ಇಲ್ಲಿ ಭಾಷ್ಯಕಾರರು ಸ್ಪರ್ಧೆ (ಹೋರಾಟ) ಎಂದು ಅರ್ಥಮಾಡಿ ತಮ್ಮ ತಮ್ಮಲ್ಲಿ ಪರಸ್ಪರವಾಗಿ ಸ್ಪರ್ಧಿಸತಕ್ಕವರು ಎಂದು ಅರ್ಥವಿವರಣೆ ಮಾಡಿರುವರು. ಈ ಶಬ್ದವು ದೇವಾಸಃ ಎಂಬ ಪದಕ್ಕೆ ವಿಶೇಷಣವಾಗಿರುವುದು.

**ಅರತಿಂ—ಶೀಘ್ರಂ ಗಂತಾರಂ । ಋ ಗತೌ** ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ವೇಗವಾದ ಗಮನವುಳ್ಳವನು ಎಂದರ್ಥ ವಿವರಣೆಮಾಡಿದಾರೆ.

**ಇತಿ—** ಇತಿ ಎಂಬ ಶಬ್ದವು ಇಲ್ಲಿ ಹೇತ್ವರ್ಥದಲ್ಲಿ (ಆದ್ದರಿಂದ ಎಂಬ ಅರ್ಥದಲ್ಲಿ) ಉಪಯೋಗಿಸಲ್ಪಟ್ಟಿರು ವುದು.

CC-0. Jangamwadi Math Collection. Digitized by eGangotri

**ಪ್ರ ಚೇತಸಂ—** ಪ್ರಕೃಷ್ಟಂ ಕರ್ಮವಿಷಯಂ ಚೇತೋ ಜ್ಞಾನಂ ಯಸ್ಯ । ಕರ್ಮಾಭಿಜ್ಞಂ। ಯಜ್ಞಾನುಷ್ಠಾನಾದಿಕರ್ಮಗಳಲ್ಲಿ ಸರಿಯಾದ ತಿಳುವಳಿಕೆಯುಳ್ಳವನೆಂದರ್ಥವು.

**ವಿಶ್ವಂ ಜನತ—** ದೇಶದ ನಾನಾಭಾಗಗಳಲ್ಲಿ ಅನೇಕ ಯಜಮಾನರು ಏಕಕಾಲದಲ್ಲಿ ಯಜ್ಞಮಾಡಿದರೂ ಅವುಗಳೆಲ್ಲೆಲ್ಲಾ ಅಗ್ನಿಯು ತನ್ನ ಅನೇಕ ರೂಪಗಳಿಂದ ಏಕಕಾಲದಲ್ಲಿ ಯಜ್ಞಕರ್ಮದಲ್ಲಿ ಭಾಗವಹಿಸಿ ಅದನ್ನು ಯಶಸ್ವಿಯಾಗಿ ನೆರವೇರಿಸುವ ಸಾಮರ್ಥ್ಯವು ಅಗ್ನಿಗೆ ಇರುವುದು. ಇಂತಹ ವಿಶ್ವವ್ಯಾಪಕವಾದ ಸಾಮರ್ಥ್ಯವು ಅಗ್ನಿಗೆ ದೇವತೆಗಳಿಂದ ಉಂಟಾಯಿತು ಎಂದು ಈ ಋಕ್ಕಿನಲ್ಲಿ ವಾಮದೇವಋಷಿಯು ವಿವರಿಸಿದಾನೆ.

---

ಸಂಹಿತಾಪಾಠಃ

ಸ ಭ್ರಾತರಂ ವರುಣಮಗ್ನ ಆ ವವೃತ್ಸ್ವ ದೇವಾಁ ಅಚ್ಛಾ ಸುಮತೀ ಯಜ್ಞ-
ವನಸಂ ಜ್ಯೇಷ್ಠಂ ಯಜ್ಞವನಸಂ ।
ಋತಾವಾನಮಾದಿತ್ಯಂ ಚರ್ಷಣೀಧೃತಂ ರಾಜಾನಂ ಚರ್ಷಣೀಧೃತಂ ॥ ೨ ॥

ಪದಪಾಠಃ

ಸಃ । ಭ್ರಾತರಂ । ವರುಣಂ । ಅಗ್ನೇ । ಆ । ವವೃತ್ಸ್ವ । ದೇವಾನ್ । ಅಚ್ಛ । ಸುऽಮತೀ । ಯಜ್ಞऽ-
ವನಸಂ । ಜ್ಯೇಷ್ಠಂ । ಯಜ್ಞऽವನಸಂ ॥
ಋತ್ಽವಾನಂ । ಆದಿತ್ಯಂ । ಚರ್ಷಣಿऽಧೃತಂ । ರಾಜಾನಂ । ಚರ್ಷಣಿऽಧೃತಂ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ಸ ತಾದೃಶಸ್ತ್ವಂ ಭ್ರಾತರಮೇಕಸ್ಥಾನವಾಸೇನ ಭ್ರಾತರಂ ವರುಣಂ । ವೃಣೋತ್ಯು-ದಕಮಿತಿ ವರುಣಃ । ತಂ ದೇವಂ ಯಜ್ಞವನಸಂ ಯಜ್ಞೈರ್ವನನೀಯೈರ್ಹವಿರ್ಭಿಃ ಸಂಭಜನೀಯಂ ಯಜ್ಞವನಸಂ ಚ ಯಜ್ಞಸ್ಯ ಸಂಭಕ್ತಾರಂ ಜ್ಯೇಷ್ಠಮತಿಶಯೇನ ಪ್ರಶಸ್ಯಮೃತಾವಾನಮುಪಾಂ ಸ್ವಾಮಿ-ತಯೋದಕವಂತಂ ಸತ್ಯವಂತಂ ವಾ ಆದಿತ್ಯಮದಿತೇಃ ಪುತ್ರಂ ಚರ್ಷಣೀಧೃತಂ ಮನುಷ್ಯಾಣಾಮುದಕ-ಪ್ರದಾನೇನ ಧಾರಕಂ ಸುಮತೀ ಶೋಭನಬುದ್ಧ್ಯಾ ಹೇತುನಾ ಚರ್ಷಣೀಧೃತಂ ಚರ್ಷಣಿಭಿರ್ವಿದ್ವದ್ಭಿ-ರ್ಧೃತಂ ರಾಜಾನಂ ರಾಜಂತಂ ಏತಾದೃಶಂ ವರುಣಂ ದೇವಂ ದೇವಾನ್ ದೇವನಶೀಲಾನ್ ಸ್ತೋತೄ-ನಚ್ಛಾಭಿಮುಖ್ಯಾ ವವೃತ್ಸ್ವ । ಆವರ್ತಯ । ಅಭಿಮುಖೀಕುರು ॥ ವವೃತ್ಸ್ವ । ವೃತು ವರ್ತನೇ । ಲೋಟಿ

CC-0. Jangamwadi Math Collection. Digitized by eGangotri

ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ನಿಘಾತಃ । ಸುಮತೀ । ಮಂತ್ರೇ ವೃಷೇತ್ಯಾದಿನಾ ಕ್ತಿನ್ನು-ದಾತ್ತಃ । ಸುಪಾಂ ಸುಲುಗಿತಿ ತೃತೀಯಾಯಾಃ ಪೂರ್ವಸವರ್ಣದೀರ್ಘಃ । ಏಕಾದೇಶಸ್ವರಃ । ಜ್ಯೇಷ್ಠಂ । ಪ್ರಶಸ್ಯಸ್ಯೇಷ್ಠನಿ ಜ್ಯ ಚೇತಿ ಜ್ಯಾದೇಶಃ । ನಿತ್ತ್ವಾನ್ನಿದಾದ್ಯುದಾತ್ತಃ । ಏಕಾದೇಶಸ್ವರಃ । ಯಜ್ಞವನಸಂ । ವನ ಷಣ ಸಂಭಕ್ತೌ । ಕರ್ಮಣ್ಯಧಿಕರಣೇ ಚಾಸುನ್ಪ್ರತ್ಯಯಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿ-ಸ್ವರತ್ವಂ ಚೇತಿ ಪೂರ್ವಪದಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಸಃ—ಪ್ರಸಿದ್ಧವಾದ ನೀನು । ಭ್ರಾತರಂ—ನಿನಗೆ ಭ್ರಾತೃರೂಪನೂ । ಯಜ್ಞ ವನಸಂ—ಹವಿಸ್ಸುಗಳಿಂದ ಪೂಜಿಸಲ್ಪಡುವವನೂ । ಯಜ್ಞವನಸಂ—ಯಜ್ಞದಲ್ಲಿ ಭಾಗವನ್ನು ವಹಿಸುವವನೂ । ಜ್ಯೇಷ್ಠಂ—ಪ್ರಶಸ್ಯನೂ । ಋತಾವಾನಂ—ಸತ್ಯಾತ್ಮನೂ । ಆದಿತ್ಯಂ—ಅದಿತಿಪುತ್ರನೂ । ಚರ್ಷಣೀಧೃತಂ—ಮಾನವರಧಾರಕನೂ । ಸುಮತೀ—ಶ್ರೇಷ್ಠವಾದ ಬುದ್ಧಿಯಿಂದ । ಚರ್ಷಣೀಧೃತಂ—ಮಾನವರ ಮನಸ್ಸಿನಲ್ಲಿ ಧ್ಯಾನರೂಪದಲ್ಲಿ ಧೃತನಾಗಿರುವವನೂ । ರಾಜಾನಂ—ವಿಶ್ವಕ್ಕೆ ಪ್ರಭುವಾದವನೂ ಆದ । ವರುಣಂ—ವರುಣ ದೇವನನ್ನು । ದೇವಾನ್—ಸ್ತೋತೃಗಳಿಗೆ । ಅಚ್ಛ—ಅಭಿಮುಖವಾಗಿ । ಆ ವವೃತ್ಸ್ವ—ಕರೆದುಕೊಂಡು ಬಾ.

ಭಾವಾರ್ಥ

ಎಲೈ ಅಗ್ನಿಯೇ, ಪ್ರಸಿದ್ಧನಾದ ನೀನು ನಿನಗೆ ಭ್ರಾತೃರೂಪನೂ ಹವಿಸ್ಸುಗಳಿಂದ ಪೂಜಿಸಲ್ಪಡುವವನೂ ಯಜ್ಞದಲ್ಲಿ ಭಾಗವನ್ನು ವಹಿಸುವವನೂ ಪ್ರಶಸ್ಯನೂ ಸತ್ಯಾತ್ಮನೂ ಅದಿತಿಪುತ್ರನೂ ಮಾನವರಧಾರಕನೂ, ಶ್ರೇಷ್ಠ ವಾದ ಬುದ್ಧಿಯಿಂದ ಮಾನವರ ಮನಸ್ಸಿನಲ್ಲಿ ಧ್ಯಾನರೂಪದಲ್ಲಿ ಧೃತನಾಗಿರುವವನೂ, ವಿಶ್ವಕ್ಕೆ ಪ್ರಭುವಾದವನೂ ಆದ ವರುಣದೇವನನ್ನು ಸ್ತೋತೃಗಳಿಗೆ ಅಭಿಮುಖವಾಗಿ ಕರೆದುಕೊಂಡು ಬಾ.

English Translation

Bring to the presence of the worshippers, Agni, your brother Varuna, as a participator of the sacrifice, with a willing mind, the elder participator of the sacrifice ; the ruler of the water, the Aditya, the supporter of men,, the sovereign venerated by mankind.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಅದಿತಿಪುತ್ರನಾದ ವರುಣದೇವನನ್ನು ಯಜ್ಞಕ್ಕೆ ಕರತರಬೇಕೆಂದು ಅಗ್ನಿಯನ್ನು ಪ್ರಾರ್ಥಿಸ ಲಾಗಿದೆ.

ಭ್ರಾತರಂ—ವರುಣನು ಅಗ್ನಿಗೆ ಹೇಗೆ ಸಹೋದರನು ಎಂದರೆ ಅಗ್ನಿಯೂ, ಇಂದ್ರಾದಿದೇವತೆಗಳೂ, ವರುಣನೂ ಸಹೋದರರೆಂದು ಹೇಳುವುದು ಯುಕ್ತವಾಗಿದೆ. ಈ ವಿಷಯವು—

ಅಷ್ಟೌ ಪುತ್ರಾಸೋ ಅದಿತೇಃ । ಯೇ ಜಾತಾಸ್ತನ್ವಃಪರಿ । ದೇವಾಁ ಉಪಪ್ರೈತ್ಸಪ್ತಭಿಃ । ಪರಾ-ಮಾರ್ತಾಂಡಮಾಸ್ಯತ್ । ಸಪ್ತಭಿಃ ಪುತ್ರೈರದಿತಿಃ। ಉಪಪ್ರೈತ್ಪೂರ್ವ್ಯಂ ಯುಗಂ । ಪ್ರಜಾಯೈ

CC-0. Jangamwadi Math Collection. Digitized by eGangotri

ವ್ಯಕ್ತ್ಯನೇತತ್ । ಪರಾಮಾರ್ತಾಂಡಮಾ ಭರದಿತಿ । ತಾನನುಕ್ರಮಿಷ್ಯಾಮಃ । ಮಿತ್ರಶ್ಚ ವರುಣಶ್ಚ । ಧಾತಾ ಚಾರ್ಯಮಾ ಚ । ಅಗ್ಂಶಶ್ಚ ಭಗಶ್ಚ । ಇಂದ್ರಶ್ಚ ವಿವಸ್ವಾಗ್ ಶ್ಚೇತ್ಯೇತೇ ॥

(ತೈ. ಆ. ೧-೧೩-೨)

ಅದಿತಿದೇವಿಗೆ—ಮಿತ್ರ, ವರುಣ, ಧಾತಾ, ಅರ್ಯಮಾ, ಅಂಶ, ಭಗ, ಇಂದ್ರ, ವಿವಸ್ವಾನಾ ಎಂದು ಎಂಟು ಮಂದಿ ಪುತ್ರರೆಂದು ಹೇಳಿದೆ. ಇಲ್ಲಿ ಅಗ್ನಿಯು ಸ್ವರ್ಗದಲ್ಲಿ ಆದಿತ್ಯ ಅಥವಾ ಸೂರ್ಯರೂಪದಿಂದ ಇರುವನು ಎಂದು ಅನೇಕ ಕಡೆ ಹೇಳಿರುವುದು. ಆದಿತ್ಯನು ಅಗ್ನಿಯು ಮೂರು ರೂಪಗಳಲ್ಲೊಂದು ಎಂಬ ವಿಷಯವು ಪ್ರಸಿದ್ಧವಾಗಿರುವುದು. ಆದುದರಿಂದ ಅಗ್ನಿಯು ಮತ್ತು ವರುಣನು ಸಹೋದರರು ಎಂಬ ವಿಷಯವನ್ನು ಇಲ್ಲಿ ಭ್ರಾತರಂ ಎಂಬ ಶಬ್ದದಿಂದ ಸೂಚಿಸಿದೆ.

———

ಸಂಹಿತಾಪಾಠಃ

ಸಖೇ ಸಖಾಯಮಭ್ಯಾ ವವೃತ್ಸ್ವಾಶುಂ ನ ಚಕ್ರಂ ರಥ್ಯೇವ ರಂಹ್ಯಾಸ್ಮಭ್ಯಂ ದಸ್ಮ ರಂಹ್ಯಾ ।

ಅಗ್ನೇ ಮೃಳೀಕಂ ವರುಣೇ ಸಚಾ ವಿದೋ ಮರುತ್ಸು ವಿಶ್ವಭಾನುಷು ।

ತೋಕಾಯ ತುಜೇ ಶುಶುಚಾನ ಶಂ ಕೃಧ್ಯಸ್ಮಭ್ಯಂ ದಸ್ಮ ಶಂ ಕೃಧಿ ॥ ೩ ॥

ಪದಪಾಠಃ

ಸಖೇ । ಸಖಾಯಂ । ಅಭಿ । ಆ । ವವೃತ್ಸ್ವ । ಆಶುಂ । ನ । ಚಕ್ರಂ । ರಥ್ಯಾಽಇವ । ರಂಹ್ಯಾ । ಅಸ್ಮಭ್ಯಂ । ದಸ್ಮ । ರಂಹ್ಯಾ ।

ಅಗ್ನೇ । ಮೃಳೀಕಂ । ವರುಣೇ । ಸಚಾ । ವಿದಃ । ಮರುತ್ಽಸು । ವಿಶ್ವಽಭಾನುಷು ।

ತೋಕಾಯ । ತುಜೇ । ಶುಶುಚಾನ । ಶಮ್ । ಕೃಧಿ । ಅಸ್ಮಭ್ಯಂ । ದಸ್ಮ । ಶಂ । ಕೃಧಿ ॥ ೩ ॥

ಸಾಯಣಭಾಷ್ಯಂ

ಪ್ರವರ್ಗ್ಯೇಽಭಿಷ್ಟವ ಉತ್ತರಸ್ಮಿನ್ಪಟಲೇ ಸಖೇ ಸಖಾಯಮಿತ್ಯೇಷಾ । ಸೂತ್ರಿತಂ ಚ । ಸಖೇ ಸಖಾಯಮಭ್ಯಾ ವವೃತ್ಸ್ವೋರ್ಧ್ವ ಊ ಷು ಣ ಊತಯೇ । ಆ. ೪-೭ । ಇತಿ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಸಖೇ ಸಖಿಭೂತ ದಸ್ಮ ದರ್ಶನೀಯ ಹೇ ಅಗ್ನೇ ತ್ವಂ ತವ ಸಖಾಯಂ ವರುಣಮಸ್ಮಭ್ಯ-ಮಸ್ಮದರ್ಥಮಾ ವವೃತ್ಸ್ವ । ಅಭಿಮುಖೀಕುರು । ತತ್ರ ದೃಷ್ಟಾಂತಃ । ರಂಹ್ಯಾ ರಂಹಣೇ ಗಮನೇ ಸಾಧುಭೂತಾ ರಥ್ಯೇವ ರಥೇ ಯೋಜಿತಾವಶ್ವಾ ಯಥಾಶುಂ ಶೀಘ್ರಗಂತೃ ಚಕ್ರಂ ಲಕ್ಷ್ಯದೇಶಂ ಪ್ರತ್ಯಭಿ-ಮುಖೀಕುರುತಸ್ತದ್ವತ್ । ಹೇ ಅಗ್ನೇ ಸಚಾ ತವ ಸಹಾಯೋ ವರುಣೇ ಮೃಳೀಕಂ ಸುಖಕರಂ ಹವಿ-ರ್ವಿದಃ । ಲಬ್ಧವಾನಸಿ । ತಥಾ ವಿಶ್ವಭಾನುಷು ಸರ್ವತೋ ವ್ಯಾಪ್ತತೇಜಸ್ಕೇಷು ಮರುತ್ಸು ಸುಖಕರಂ ಲಬ್ಧವಾನಸಿ । ಆಗ್ನಿವಾರುಣಾಗ್ನಿಮಾರುತಯೋಃ ಕರ್ಮಣೋರಿಷ್ಟವಾನಸೀತ್ಯರ್ಥಃ । ಶುಶುಚಾನ ದೀಪ್ಯಮಾನ ಹೇ ಅಗ್ನೇ ತೋಕಾಯ । ತುಜ್ಯತೇ ಪೀಡ್ಯತೇಽನೇನ ಮಾತಾ ಗರ್ಭವಾಸೇನೇತಿ ತೋಕಂ ಪುತ್ರಃ । ತಸ್ಮೈ ತುಜೇ । ಗಚ್ಛತ್ಯನೇನಾನೃಣ್ಯಂ ಪಿತೇತಿ ತುಕ್ ಪೌತ್ರಃ । ತಸ್ಮೈ ಶಂ ಸುಖಂ ಕೃಧಿ । ಕುರು । ದಸ್ಮ ದರ್ಶನೀಯ ಹೇ ಅಗ್ನೇ ಅಸಭ್ಯಂ ಶಂ ಕೃಧಿ । ಸುಖಂ ಕುರು ॥ ರಥ್ಯೇವ । ರಥಸ್ಯೇಮಾ-ವಿತ್ಯರ್ಥೇ ರಥಾದ್ಯದಿತಿ ಯತ್ । ಸುಪಾಂ ಸುಲುಗಿತಿ ಸುಪೋ ಡಾದೇಶಃ । ರಂಹ್ಯಾ । ರಂಹಶಬ್ದಾತ್ತತ್ರ ಸಾಧುರಿತಿ ಯತ್ಪ್ರತ್ಯಯಃ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥

ಪ್ರತಿಪದಾರ್ಥ

**ಸಖೇ**—ಸಖಿಭೂತನಾದವನೂ । **ದಸ್ಮ**—ದರ್ಶನೀಯನೂ ಆದ ಎಲೈ ಅಗ್ನಿಯೇ । **ರಂಹ್ಯಾ**—ಶ್ರೇಷ್ಠವಾದ ಸಂಚಾರವುಳ್ಳ । **ರಥ್ಯೇವ**—ಅಶ್ವಗಳು । **ಆಶುಂ**— ಶೀಘ್ರಗಾಮಿಯಾದ । **ಚಕ್ರಂ ನ**—ರಥವನ್ನು (ನಿರ್ದಿಷ್ಟವಾದ ಪ್ರದೇಶಕ್ಕೆ ಒಯ್ಯುವಂತೆ) । **ಸಖಾಯಂ**—ನಮ್ಮ ಸಖಿಭೂತನಾದ ವರುಣನನ್ನು । **ಅಸ್ಮಭ್ಯಂ**—ನಮ್ಮ ಪ್ರಯೋಜನ ಕ್ಕಾಗಿ । **ಆ ವವೃತ್ಸ್ವ**—ಕರೆದುಕೊಂಡು ಬಾ । **ಅಗ್ನೇ**—ಎಲೈ ಅಗ್ನಿಯೇ । **ವರುಣೇ ಸಚಾ**—ವರುಣನೊಡನೆ । **ಮೃಳೀಕಂ**—ಸುಖಕರವಾದ ಹವಿಸ್ಸನ್ನು । **ವಿದಃ**—ಹೊಂದಿದ್ದೀಯೆ । **ವಿಶ್ವಭಾನುಷು**—ಸರ್ವತ್ರವ್ಯಾಪ್ತವಾದ ತೇಜಸ್ಸುಳ್ಳ । **ಮರುತ್ಸು**—ಮರುತ್ತುಗಳೊಡನೆಯೂ (ಹೊಂದಿದ್ದೀಯೆ) । **ಶುಶುಚಾನ**—ಪ್ರಕಾಶಮಾನನಾದ ಎಲೈ ಅಗ್ನಿಯೇ । **ತೋಕಾಯ**—ನಮ್ಮ ಪುತ್ರರಿಗೂ । **ತುಜೇ**—ಪೌತ್ರರಿಗೂ । **ಶಂ**-ಸುಖವನ್ನು । **ಕೃಧಿ**-ಉಂಟು ಮಾಡು । **ದಸ್ಮ**—ಆಕರ್ಷಕವಾದ ರೂಪವುಳ್ಳ ಎಲೈ ಅಗ್ನಿಯೇ । **ಅಸ್ಮಭ್ಯಂ**—ನಮಗೆ । **ಶಂ**—ಸುಖವನ್ನು । **ಕೃಧಿ**—ಉಂಟುಮಾಡು.

ಭಾವಾರ್ಥ

ಸಖಿಭೂತನೂ, ದರ್ಶನೀಯನೂ ಆದ ಎಲೈ ಅಗ್ನಿಯೇ, ಶ್ರೇಷ್ಠವಾದ ಸಂಚಾರವುಳ್ಳ ಅಶ್ವಗಳು ಶೀಘ್ರಗಾಮಿ ಯಾದ ರಥವನ್ನು ನಿರ್ದಿಷ್ಟವಾದ ಪ್ರದೇಶಕ್ಕೆ ಒಯ್ಯುವಂತೆ ನಮ್ಮ ಸಖಿಭೂತನಾದ ವರುಣನನ್ನು ನಮ್ಮ ಪ್ರಯೋ ಜನಕ್ಕಾಗಿ ಶೀಘ್ರವಾಗಿ ಕರೆದುಕೊಂಡು ಬಾ. ಎಲೈ ಅಗ್ನಿಯೇ, ನೀನು ವರುಣನೊಡನೆಯೂ, ಸರ್ವತ್ರವ್ಯಾಪ್ತ ವಾದ ತೇಜಸ್ಸುಳ್ಳ ಮರುತ್ತುಗಳೊಡನೆಯೂ ಸುಖಕರವಾದ ಹವಿಸ್ಸುಗಳನ್ನು ಹೊಂದಿದ್ದೀಯೆ. ಪ್ರಕಾಶಮಾನನಾದ ಅಗ್ನಿಯೇ, ನಮ್ಮ ಪುತ್ರರಿಗೂ, ಪೌತ್ರರಿಗೂ, ನಮಗೂ ಸುಖವನ್ನುಂಟುಮಾಡು.

English Translation

Friendly and beautiful (Agni), bring your friend (Varuna) to our presence, as two strong horses conyey the swift chariot along the road to



CC-0. Jangamwadi Math Collection. Digitized by eGangotri

its goal : you receive, Agni, the gratifying (oblation) together with Varuna, and with the all-illumining Maruts : grant, brilliant Agni, happiness to our sons and grandsons ; grant, beautiful Agni, happiness to ourselves.

ವಿಶೇಷವಿಷಯಗಳು

ಭಾಷ್ಯಕಾರರು ಈ ಋಕ್ಕಿನಲ್ಲಿರುವ **ತೋಕಾಯ, ತುಜೇ** ಎಂಬ ಶಬ್ದಗಳಿಗೆ ಅವಯವಾರ್ಥವನ್ನು ವಿವರಿಸಿರುವರು—

**ತೋಕಾಯ—ತುಜ್ಯತೇ ಪೀಡ್ಯತೇಽನೇನ ಮಾತಾ ಗರ್ಭವಾಸೇನೇತಿ ತೋಕಂ ಪುತ್ರಃ ತಸ್ಮೈ ।** ತುಜಧಾತುವಿಗೆ ಹಿಂಸೆಮಾಡು ಎಂದರ್ಥವಿರುವುದು. ಈ ಧಾತುವಿನಿಂದ ನಿಷ್ಪನ್ನವಾದ ತೋಕಶಬ್ದಕ್ಕೆ—ಪುತ್ರನು ತಾಯಿಯ ಗರ್ಭವಾಸದಲ್ಲಿದ್ದಾಗಲೂ ಮತ್ತು ಪ್ರಸವಕಾಲದಲ್ಲಿಯೂ ತಾಯಿಗೆ ಹಿಂಸೆಯನ್ನುಂಟುಮಾಡುವವನಾದ್ದರಿಂದ ಪುತ್ರನಿಗೆ **ತೋಕ** ಎಂದು ಹೆಸರು.

**ತುಜೇ—ಗಚ್ಛತ್ಯನೇನಾನೃಣ್ಯಂ ಪಿತೇತಿ ತುಕ್ ಪೌತ್ರಃ । ತಸ್ಮೈ । ತುಕ್** ಎಂದರೆ ಪೌತ್ರನು, ಮೊಮ್ಮಗನು. ಇವನಿಂದ ಎಂದರೆ ಇವನ ಜನನದಿಂದ (ತಂದೆ) ಎನಿಸಿದವನು ತನ್ನ ಋಣವನ್ನು ತೀರಿಸಿಕೊಳ್ಳುವನು, ಎಂದರೆ ಅನೃಣ (ಋಣವಿಲ್ಲದವನು) ನಾಗುವನು. ತೈ. ಸಂಹಿತೆಯಲ್ಲಿ—**ಜಾಯಮಾನೋ ವೈ ಬ್ರಾಹ್ಮಣಸ್ತ್ರಿಭಿರ್ಋಣವಾ ಜಾಯತೇ ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯ ಏಷ ವಾ ಅನೃಣೋ ಯಃ ಪುತ್ರೀ ಯಜ್ವಾ ಬ್ರಹ್ಮಚಾರಿವಾಸೀ** ಎಂದು ಹೇಳಿರುವುದು. ಎಂದರೆ ಬ್ರಾಹ್ಮಣನಾದವನು ಹುಟ್ಟುವಾಗಲೇ ಮೂರು ವಿಧವಾದ ಋಣಗಳಿಂದ ಸಹಿತನಾಗಿ ಹುಟ್ಟುವನು. ಋಷಿಋಣ, ದೇವಋಣ, ಪಿತೃಋಣಗಳೇ ಆ ಋಣಗಳು. ಅವುಗಳನ್ನು ತೀರಿಸುವ ಬಗೆ ಹೇಗೆಂದರೆ—ಬ್ರಹ್ಮಚರ್ಯನಿಯಮದಿಂದ ಗುರುಕುಲವಾಸಮಾಡುತ್ತಾ ವೇದಾಧ್ಯಯನ ಮಾಡಿದರೆ ಋಷಿಋಣವು ತೀರುವುದು. ಗೃಹಸ್ಥನಾಗಿ ಯಜ್ಞಯಾಗಾದಿಗಳನ್ನು ಮಾಡುತ್ತಾ ದೇವತೆಗಳನ್ನು ಸಂತೋಷಪಡಿಸಿದರೆ ದೇವಋಣವು ತೀರುವುದು. ವಿವಾಹಾನಂತರ ತನ್ನ ಧರ್ಮಪತ್ನಿಯಲ್ಲಿ ಪ್ರಜೋತ್ಪಾದನೆ ಮಾಡಿದರೆ ಪಿತೃಋಣವು ತೀರುವುದು. ಆದುದರಿಂದ ಬ್ರಾಹ್ಮಣನಾದವನು ಈ ಮೂರು ಋಣಗಳನ್ನು ಮೇಲೆ ಹೇಳಿದ ರೀತಿಯಲ್ಲಿ ತೀರಿಸಿದರೆ ಅವನು ಅನೃಣನೆನಿಸುವನು. ಪುತ್ರಪೌತ್ರಾದಿ ಸಂತತಿಯಿಂದ ಮೇಲೆ ಹೇಳಿದ ಋಣಗಳಲ್ಲಿ ಒಂದು ತೀರುವುದು. ಆದ್ದರಿಂದಲೇ ಪುತ್ರ ಮತ್ತು ಪೌತ್ರನು ತನ್ನ ತಂದೆಯನ್ನು ಅನೃಣ-ಋಣರಹಿತನನ್ನಾಗಿ ಮಾಡುವನು ಎಂದು ಇಲ್ಲಿ ಭಾಷ್ಯಕಾರರು ವಿವರಿಸಿದಾರೆ.

———————

ಸಂಹಿತಾಪಾಠಃ

ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ದೇವಸ್ಯ ಹೇಳೋಽವಯಾಸಿಸೀಷ್ಠಾಃ ।
ಯಜಿಷ್ಠೋ ವಹ್ನಿತಮಃ ಶೋಶುಚಾನೋ ವಿಶ್ವಾದ್ವೇಷಾಂಸಿ ಪ್ರ ಮುಮುಗ್ಧ್ಯಸ್ಮತ್ ॥ ೪ ॥

CC-0. Jangamwadi Math Collection. Digitized by eGangotri

ಪದಪಾಠಃ

ತ್ವಂ । ನಃ । ಅಗ್ನೇ । ವರುಣಸ್ಯ । ವಿದ್ವಾನ್ । ದೇವಸ್ಯ । ಹೇಳಃ । ಅವ । ಯಾಸಿಸೀಷ್ಠಾಃ ।

ಯಜಿಷ್ಠಃ । ವಹ್ನಿಽತಮಃ । ಶೋಶುಚಾನಃ । ವಿಶ್ವಾ । ದ್ವೇಷಾಂಸಿ । ಪ್ರ । ಮುಮುಗ್ಧಿ । ಅಸ್ಮತ್ ॥ ೪ ॥

ಸಾಯಣಭಾಷ್ಯಂ

ತ್ವಂ ನೋ ಅಗ್ನ ಇತ್ಯೇತದಾರಭ್ಯೇದಂ ಸೂಕ್ತಮುತ್ತರಾಣಿ ಸೂಕ್ತಾನಿ ಚ ಪ್ರಾತರನುವಾಕ ಆಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸ್ಯಾಶ್ವಿನಶಸ್ತ್ರೇ ಚ ವಿನಿಯುಕ್ತಾನಿ । ಸೂತ್ರಿತಂ ಚ । ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನಿತ್ಯೇತತ್ಪ್ರಭೃತೀನಿ ಚತ್ವಾರಿ । ಆ. ೪-೧೩ । ಇತಿ ॥ ಅವಭೃಥೇಷ್ಟ್ಯಾಂ ಸ್ವಿಷ್ಟ-ಕೃದರ್ಥೇಽಗ್ನೀವರುಣೌ ಯಷ್ಟವ್ಯೌ । ತತ್ರ ತ್ವಂ ನೋ ಅಗ್ನ ಇತಿ ದ್ವೇ ಯಾಜ್ಯಾನುವಾಕ್ಯೇ । ಸೂತ್ರಿತಂ ಚ । ಅಗ್ನೀವರುಣೌ ಸ್ವಿಷ್ಟಕೃದರ್ಥೇ ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನಿತಿ ದ್ವೇ । ಆ. ೬-೧೩ । ಇತಿ ॥ ಅಸ್ನಾತೋ ಯದ್ಯಗ್ನಿಹೋತ್ರಂ ಜುಹುಯಾತ್ತದಾಗ್ನಿವಾರುಣೇಷ್ಟಿಃ । ತಸ್ಯಾಮೇತೇ ಏವ ಯಾಜ್ಯಾನು-ವಾಕ್ಯೇ । ತದಾಹುರ್ಯ ಆಹಿತಾಗ್ನಿರಿತ್ಯುಪಕ್ರಮ್ಯಾಮ್ನಾತಂ । ತಸ್ಯ ಯಾಜ್ಯಾನುವಾಕ್ಯೇ ತ್ವಂ ನೋ ಅಗ್ನೇ ವರುಣಸ್ಯ ವಿದ್ವಾನ್ತ್ಸ ತ್ವಂ ನೋ ಅಗ್ನೇಽವಮೋ ಭವೋತೀ । ಐ. ಬ್ರಾ. ೭-೯ । ಇತಿ ॥

ಹೇ ಅಗ್ನೇ ವಿದ್ವಾನ್ ಸರ್ವಪುರುಷಾರ್ಥಸಾಧನೋಪಾಯಜ್ಞಸ್ತ್ವಂ ದೇವಸ್ಯ ದ್ಯೋತಮಾನಸ್ಯ ವರುಣಸ್ಯ ಹೇಳಃ ಕ್ರೋಧಾನ್ ನೋಽಸ್ಮತ್ಸಂಬಧಿನೋ ವರುಣಕರ್ತೃಕಾನ್ಪಾಶಗ್ರಹಣಾನವ ಯಾಸಿ-ಸೀಷ್ಠಾಃ । ಅಪನಯ । ಕಿಂಚ ಯಜಿಷ್ಠೋ ಯಷ್ಟೃತಮೋ ವಹ್ನಿತಮೋ ಹವಿಷಾಮತಿಶಯೇನ ವೋಢಾ ಶೋಶುಚಾನೋಽತಿಶಯೇನ ದೀಪ್ಯಮಾನಸ್ತ್ವಂ ವಿಶ್ವಾ ಸರ್ವಾಣಿ ದ್ವೇಷಾಂಸಿ ಪಾಪಾನಿ ದ್ವೇಷ್ಟೄಣಿ ರಜಾಂಸಿ ವಾ ಅಸ್ಮದಸ್ಮತ್ತಃ ಪ್ರ ಮುಮುಗ್ಧಿ । ಪ್ರಕರ್ಷೇಣ ಮೋಚಯ ॥ ಹೇಳಃ । ಹೇಡೃ ಅನಾದರೇ । ಕ್ವಿಪ್ । ಶಸಿ ರೂಪಂ । ಶಸಃ ಸುಪ್ತ್ವಾದನುದಾತ್ತತ್ವೇ ಧಾತುಸ್ವರಃ । ಯಾಸಿ-ಸೀಷ್ಠಾಃ । ಯಸೇರ್ಣ್ಯಂತಾದಾಶೀರ್ಲಿಙ್ । ಛಾಸಿ ಸೀಯುಡಾಗಮಃ । ಛಂದಸ್ಯುಭಯಥೇತಿ ಲಿಙಃ ಸಾರ್ವಧಾತುಕತ್ವಾಣ್ಣಿಲೋಪಾಭಾವಃ । ಅವಪೂರ್ವೋ ಯಾಸಿರ್ವಿನಾಶೇ ವರ್ತತೇ । ಮುಮುಗ್ಧಿ । ಮುಂಚತೇರ್ಲೋಟಿ ರೂಪಂ । ಬಹುಲಂ ಛಂದಸೀತಿ ಶಪಃ ಶ್ಲುಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ವಿದ್ವಾನ್—ಸರ್ವಜ್ಞನಾದ । ತ್ವಂ—ನೀನು । ದೇವಸ್ಯ—ದೇವತಾತ್ಮನಾದ । ವರುಣಸ್ಯ—ವರುಣನ । ಹೇಳಃ—ಕ್ರೋಧವನ್ನು । ನಃ—ನಮ್ಮಿಂದ । ಅವ ಯಾಸಿಸೀಷ್ಠಾಃ—ತಪ್ಪಿಸಿ ದೂರ ಮಾಡು । ಯಜಿಷ್ಠಃ—ಪೂಜ್ಯತಮನೂ । ವಹ್ನಿತಮಃ—ಹವಿಸ್ಸುಗಳನ್ನು ಅತಿಶಯವಾಗಿ ವಹಿಸುವವನೂ ॥ ಶೋಶುಚಾನಃ—ಪ್ರಕಾಶಮಾನನೂ ಆದ ನೀನು । ವಿಶ್ವಾ—ಸಮಸ್ತವಾದ । ದ್ವೇಷಾಂಸಿ—ಶತ್ರುರೂಪವಾದ ಪಾಪಗಳನ್ನು । ಅಸ್ಮತ್—ನಮ್ಮಿಂದ । ಪ್ರ ಮುಮುಗ್ಧಿ—ಬಿಡಿಸಿ ನಾಶಮಾಡು.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ಸರ್ವಜ್ಞನಾದ ನೀನು ದೇವತಾತ್ಮನಾದ ವರುಣನ ಕ್ರೋಧವನ್ನು ನಮ್ಮಿಂದ ತಪ್ಪಿಸಿ ದೂರಮಾಡು. ಪೂಜ್ಯತಮನೂ, ಹವಿಸ್ಸಿನ ವಾಹಕನೂ, ಪ್ರಕಾಶಮಾನನೂ ಆದ ನೀನು ಸಮಸ್ತವಾದ ಪಾಪ ಗಳನ್ನೂ ನಮ್ಮಿಂದ ಬಿಡಿಸಿ ನಾಶಮಾಡು.

English Translation

May you, Agni, who are wise, avert from us the wrath of the divine Varuna : you are the most frequent sacrificer, the most diligent bearer (of oblations), the most resplendent, liberate us from all animosities.



ಸಂಹಿತಾಪಾಠಃ

ಸ ತ್ವಂ ನೋ ಅಗ್ನೇಽವಮೋ ಭವೋತೀ ನೇದಿಷ್ಠೋ ಅಸ್ಯಾ ಉಷಸೋ ವ್ಯುಷ್ಟೌ ।
ಅವ ಯಕ್ಷ್ವ ನೋ ವರುಣಂ ರರಾಣೋ ವೀಹಿ ಮೃಳೀಕಂ ಸುಹವೋ ನ ಏಧಿ ॥ ೫ ॥

ಪದಪಾಠಃ

ಸಃ । ತ್ವಂ । ನಃ । ಅಗ್ನೇ । ಅವಮಃ । ಭವ । ಊತೀ । ನೇದಿಷ್ಠಃ । ಅಸ್ಯಾಃ । ಉಷಸಃ । ವಿಽಉಷ್ಟೌ ।
ಅವ । ಯಕ್ಷ್ವ । ನಃ । ವರುಣಂ । ರರಾಣಃ । ವೀಹಿ । ಮೃಳೀಕಂ । ಸುಽಹವಃ । ನಃ । ಏಧಿ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ಸ ತಾದೃಶಸ್ತ್ವಮೂತೀ ಊತ್ಯಾ ರಕ್ಷಣೇನ ನೋಽಸ್ಮಾಕಮವಮೋಽರ್ವಾಚೀನಃ ಪ್ರತ್ಯಾಸನ್ನಃ ಸನ್ ಅಸ್ಯಾ ಉಷಸೋ ವ್ಯುಷ್ಟೌ ವ್ಯುಚ್ಛನೇ ಪ್ರಾತಃಕಾಲೇಽಗ್ನಿಹೋತ್ರಾದಿಕರ್ಮಸಿದ್ಧ್ಯ-ರ್ಥಂ ನೇದಿಷ್ಠೋ ಭವ । ಅತಿಶಯೇನಾಸ್ಮದಂತಿಕಸ್ಥೋ ಭವ । ಯದ್ವಾ । ಊತ್ಯಾ ಗಮನೇನಾಸ್ಮಾಕ-ಮವಮೋ ರಕ್ಷಕೋ ಭವ । ಕಿಂಚ ನೋಽಸ್ಮಾಕಂ ವರುಣಂ ವರುಣಕೃತಂ ಜಲೋದರಾದಿರೋಗಂ ಆವಾರಕಂ ಪಾಪಂ ವಾ ಅವ ಯಕ್ಷ್ವ । ಅವಯಜ । ವಿನಾಶಯೇತ್ಯರ್ಥಃ । ರರಾಣೋಽಸ್ಮದತ್ತೇ ಹವಿಷಿ ರಮಮಾಣಃ । ಯದ್ವಾ । ಯಜಮಾನೇಭ್ಯೋಽತ್ಯಂತಮಾಪ್ಸಿತಫಲಪ್ರದಸ್ತ್ವಂ ಮೃಳೀಕಂ

CC-0. Jangamwadi Math Collection. Digitized by eGangotri

ಸುಖಕರಮಿದಂ ಹವಿರ್ವೀಹಿ । ಭಕ್ಷಯ । ಕಿಂಚ ನೋಽಸ್ಮಾಕಂ ಸುಹವಃ ಶೋಭನಾಹ್ವಾನೋಪೇತ ಏಧಿ । ಭವ ॥ ನೇದಿಷ್ಠಃ । ಅಂತಿಕಶಬ್ದಾದಿಷ್ಠನ್ಯಂತಿಕವಾಢಯೋರ್ನೇದಸಾಧಾವಿತಿ ನೇದ ಇತ್ಯಾದೇಶಃ। ನಿತ್ತ್ವಾದಾದ್ಯುದಾತ್ತಃ । ರರಾಣಃ । ರಮತೇಃ ಕಾನಚಿ ಮಕಾರಲೋಪಶ್ಛಾಂದಸಃ । ಯದ್ವಾ । ರಾತೇರ್ಯಙ್ಲುಕಿ ವ್ಯತ್ಯಯೇನ ಕಾನಚ್ । ಅಭ್ಯಸ್ತಾನಾಮಾದಿಃ । ಏಧಿ । ಅಸ್ತೇರ್ಲೋಟಿ ಧ್ವಸೋರೇದ್ಧಾವಭ್ಯಾಸಲೋಪಶ್ಚೇತಿ ಏ ಇತ್ಯಾದೇಶಃ । ತಸ್ಯಾಸಿದ್ಧತ್ವಾದ್ಧುಝಲ್ಭ್ಯೋ ಹೇರ್ಧಿಃ । ನಿಘಾತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಸಃ ತ್ವಂ—ಅಂತಹ ಪ್ರಸಿದ್ಧನಾದ ನೀನು । ನಃ—ನಮಗೆ । ಊತೀ—ನಿನ್ನ ರಕ್ಷಣೆಯೊಡನೆ । ಅವಮಃ—ಪಕ್ಕದಲ್ಲಿದ್ದು । ಅಸ್ಯಾಃ ಉಷಸಃ—ಈ ಉಷಸ್ಸಿನ । ವ್ಯುಷ್ಟೌ—ಆವಿರ್ಭಾವದ ಕಾಲದಲ್ಲಿ । ನೇದಿಷ್ಠಃ ಭವ—ನಮಗೆ ಸಾನ್ನಿಧ್ಯವನ್ನು ಕೊಡು । ನಃ—ನಮ್ಮಿಂದ । ವರುಣಂ—ವರುಣಕೃತವಾದ ರೋಗಗಳನ್ನು । ಅವ ಯಕ್ಷ್ವ—ನಾಶಪಡಿಸು । ರರಾಣಃ—ಹವಿಸ್ಸುಗಳನ್ನು ಭೋಗಿಸುತ್ತಾ । ಮೃಳೀಕಂ—ಸುಖಕರವಾದ ಈ ಹವಿಸ್ಸನ್ನು । ವೀಹಿ—ಭಕ್ಷಿಸು । ನಃ—ನಮಗೋಸ್ಕರ । ಸುಹವಃ—ಶ್ರೇಷ್ಠವಾದ ಆಹ್ವಾನ ವುಳ್ಳವನಾಗಿ । ಏಧಿ—ಆಗಿರು.

ಭಾವಾರ್ಥ

ಎಲೈ ಅಗ್ನಿಯೇ, ಅಂತಹ ಪ್ರಸಿದ್ಧನಾದ ನೀನು, ನಿನ್ನ ರಕ್ಷಣೆಯೊಡನೆ ನಮ್ಮ ಪಕ್ಕದಲ್ಲಿದ್ದು ಈ ಉಷಸ್ಸಿನ ಆವಿರ್ಭಾವದ ಕಾಲದಲ್ಲಿ ನಮಗೆ ಸಾನ್ನಿಧ್ಯವನ್ನು ಕೊಡು. ವರುಣಕೃತವಾದ ರೋಗಗಳನ್ನು ನಮ್ಮಿಂದ ನಾಶಪಡಿಸು. ಸುಖಕರವಾದ ಈ ಹವಿಸ್ಸನ್ನು ಭಕ್ಷಿಸುತ್ತಾ ರಮಿಸು. ನಮಗಾಗಿ ಶ್ರೇಷ್ಠವಾದ ಆಹ್ವಾನವುಳ್ಳವನಾಗಿರು.

English Translation

Agni, our preserver, be most nigh to us with your protection at the breaking of this dawn : deprecate Varuna for us, and, propitiated (by our praise), feed upon the grateful (oblation), and be to us of auspicious invocation.

ವಿಶೇಷವಿಷಯಗಳು

**(ಕಿಂಚ) ನಃ ವರುಣಂ ಅವಯಕ್ಷ್ವ—ಅಸ್ಮಾಕಂ ವರುಣಕೃತಂ ಜಲೋದರಾದಿರೋಗಾನ್ ಆವರಕಂ ಪಾಪಂ ವಾ ವಿನಾಶಯೇತ್ಯರ್ಥಃ ।** ಇಲ್ಲಿ ವರುಣಸಂಬಧವಾದ ಎಂದರೆ ವರುಣದೇವನ ಕೋಪದಿಂದ ಉಂಟಾಗಬಹುದಾದ ಜಲೋದರ ಮುಂತಾದ ಮಹಾರೋಗಗಳನ್ನೂ ಅಥವಾ ನಮ್ಮನ್ನು ಆವರಿಸುವ ನಾನಾವಿಧ ಪಾಪಗಳನ್ನೂ ನಾಶಮಾಡು ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ಇಲ್ಲಿ ಜಲೋದರ (Dropsy) ಎಂದರೆ ಶರೀರದಲ್ಲಿ ನೀರುತುಂಬಿಕೊಂಡು ಊದಿಕೊಳ್ಳುವ ಒಂದುವಿಧವಾದ 'ಮಹಾರೋಗವು. ಇದು ಜಲಕ್ಕೆ ಸಂಬಂಧ ಪಟ್ಟಿರುವುದರಿಂದಲೂ ವರುಣನು ಜಾಲಾಧಿಪತಿಯೆಂದು ಪ್ರಸಿದ್ಧನಾಗಿರುವುದರಿಂದಲೂ ಈ ವಿಧವಾದರೋಗವು ವರುಣನ ಆಗ್ರಹದಿಂದ ಪ್ರಾಪ್ತವಾಗುವುದೆಂದು ನಂಬಿಕೆ. ಅಥವಾ ನೀರಿನ ಭಯ ಎಂದರೆ ನೀರಿನಲ್ಲಿ ಮುಳುಗಿ

CC-0. Jangamwadi Math Collection. Digitized by eGangotri

ಸಾಯುವುದು ಸಹ ವರುಣನಿಂದಲೇ ಉಂಟಾಗಬಹುದು. ಇಂತಹ ಭಯಗಳನ್ನು ನಿವಾರಣೆಮಾಡಿ ಪಾಪಗಳನ್ನು ನಾಶಮಾಡಬೇಕೆಂದು ಪ್ರಾರ್ಥಿಸಿದೆ.

———— :o: ————

ಸಂಹಿತಾಪಾಠಃ

ಅಸ್ಯ ಶ್ರೇಷ್ಠಾ ಸುಭಗಸ್ಯ ಸಂದೃಗ್ದೇವಸ್ಯ ಚಿತ್ರತಮಾ ಮರ್ತ್ಯೇಷು ।
ಶುಚಿ ಘೃತಂ ನ ತಪ್ತಮಘ್ನ್ಯಾಯಾಃ ಸ್ಪಾರ್ಹಾ ದೇವಸ್ಯ ಮಂಹನೇವ ಧೇನೋಃ ॥ ೬ ॥

ಪದಪಾಠಃ

ಅಸ್ಯ । ಶ್ರೇಷ್ಠಾ । ಸುಽಭಗಸ್ಯ । ಸಂಽದೃಕ್ । ದೇವಸ್ಯ । ಚಿತ್ರಽತಮಾ । ಮರ್ತ್ಯೇಷು ।
ಶುಚಿ । ಘೃತಂ । ನ । ತಪ್ತಂ । ಅಘ್ನ್ಯಾಯಾಃ । ಸ್ಪಾರ್ಹಾ । ದೇವಸ್ಯ । ಮಂಹನಾಽಇವ । ಧೇನೋಃ ॥

ಸಾಯಣಭಾಷ್ಯಂ

ಸುಭಗಸ್ಯ ಸುಧನಸ್ಯ ಸುಷ್ಠು ಭಜನೀಯಸ್ಯಾಗ್ನೇರ್ದೇವಸ್ಯ ಶ್ರೇಷ್ಠಾತಿಶಯೇನ ಪ್ರಶಸ್ಯಾ ಸಂದೃಕ್ ಸಂದೃಷ್ಟಿರ್ಮರ್ತ್ಯೇಷು ಚಿತ್ರತಮಾತಿಶಯೇನ ಚಾಯನೀಯಾ ಪೂಜನೀಯಾ ಭವತಿ । ಸ್ಪಾರ್ಹಾ ಸರ್ವೈಃ ಸ್ಪೃಹಣೀಯಾ ಭವತಿ । ತತ್ರ ದೃಷ್ಟಾಂತಃ । ಯಥಾ ದೇವಸ್ಯ ಕ್ಷೀರಂ ಕಾಮಯಮಾನಸ್ಯ ಪುರುಷಸ್ಯಾಘ್ನ್ಯಾಯಾ ಗೋಃ ಶುಚಿ ತೇಜೋಯುಕ್ತಂ ಘೃತಂ ಕ್ಷರಣಯುಕ್ತಂ ಸಪ್ತಂ ಕ್ಷೀರಂ ಸ್ಪೃಹಣೀಯಂ ಭವತಿ । ತತ್ರೈವ ದೃಷ್ಟಾಂತಾಂತರಂ । ಯಥಾ ಗಾಂ ಭಿಕ್ಷಮಾಣಸ್ಯ ಮರ್ತ್ಯಸ್ಯ ಧೇನೋರ್ದೋಗ್ಧ್ರ್ಯಾ ಗೋರ್ಮಂಹನೇವ । ಮಂಹತಿರ್ದಾನಕರ್ಮಾ । ದಾನಂ ಯಥಾ ಪ್ರಿಯಕರಂ ಭವತಿ ತದ್ವತ್ ॥ ಸುಭಗಸ್ಯ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಸ್ಪಾರ್ಹಾ । ಕರ್ಷಾತ್ವತೋ ಘಞೋಽಂತ ಉದಾತ್ತಃ । ದೇವಸ್ಯ । ದೀವ್ಯತೀತಿ ದೇವಃ । ದೀವ್ಯತೇಃ ಕಾಂತ್ಯರ್ಥಸ್ಯ ಪಚಾದ್ಯಚಿ ರೂಪಂ ॥

ಪ್ರತಿಪದಾರ್ಥ

ದೇವಸ್ಯ—ಕ್ಷೀರವನ್ನಪೇಕ್ಷಿಸುವ ಪುರುಷನಿಗೆ । ಅಘ್ನ್ಯಾಯಾಃ—ಗೋವಿನ । ಶುಚಿ— ಪ್ರಕಾಶಮಾನವಾದುದೂ । ಘೃತಂ—ಸುಸಂಸ್ಕೃತವಾದುದೂ ಆದ । ತಪ್ತಂ ನ— ಕ್ಷೀರವು ಹೇಗೆ ಹಿತಕರವಾದುದೋ (ಮತ್ತು) । ಧೇನೋಃ— ಧೇನುವಿನ । ಮಂಹನೇವ—ದಾನವು ಯಾವ ರೀತಿ ಹಿತಕರವಾಗಿರುವುದೋ ಹಾಗೆ । ಸುಭಗಸ್ಯ—ವದಪೂಜ್ಯನಾನೂ । ಅಸ್ಯ ದೇವಸ್ಯ—ದೇವತಾತ್ಮನೂ ಆದ ಅಗ್ನಿಯ । ಶ್ರೇಷ್ಠಾ—ಪ್ರಶಸ್ಯವಾದ । ಸಂದೃಕ್—ಸಮ್ಯಗ್ದರ್ಶನವು । ಮರ್ತ್ಯೇಷು—ಮಾನವರಲ್ಲಿ । ಚಿತ್ರತಮಾ—ಪೂಜನೀಯವಾದುದೂ । ಸ್ಪಾರ್ಹಾ—ಆದೃತವಾದುದೂ ಆಗಿರುತ್ತದೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಕ್ಷೀರವನ್ನಪೇಕ್ಷಿಸುವ ಪುರುಷನಿಗೆ ಗೋವಿನ ಪ್ರಕಾಶಮಾನವಾದುದೂ, ಸುಸಂಸ್ಕೃತವಾದುದೂ ಆದ ಕ್ಷೀರವು ಹೇಗೆ ಹಿತಕರವಾದುದೋ ಮತ್ತು ಧೇನುವಿನ ದಾನವು ಯಾವ ರೀತಿ ಹಿತಕರವಾದುದೋ ಹಾಗೆ ಪೂಜ್ಯನಾದವನೂ, ದೇವತಾತ್ಮನೂ ಆದ ಅಗ್ನಿಯ ಪ್ರಶಸ್ಯವಾದ ದರ್ಶನವು ಮಾನವರಲ್ಲಿ ಪೂಜನೀಯವೂ, ಅದ್ಭುತವೂ ಆಗಿರುತ್ತದೆ.

English Translation

The glance of this auspicious deity, directed towards men, is most excellent, most wonderful, acceptable (to all), as the pure warm butter (from the milk) of the cow (is acceptable) to the deity ; as the gift of a milch-cow (is to a man).

ವಿಶೇಷವಿಷಯಗಳು

**ದೇವಸ್ಯ ಅಸ್ಯ ಅಗ್ನೇಃ ತಾ ಪರಮಾ ಸತ್ಯಾ ತ್ರಿಃ ಜನಿಮಾನಿ ಸ್ಪಾರ್ಹಾ ಸಂತಿ**—ದೇವತಾತ್ಮನಾದ ಅಥವಾ ಪ್ರಕಾಶಮಾನನಾದ ಈ ಅಗ್ನಿಯ ಪ್ರಸಿದ್ಧವೂ ಸತ್ಯಾತ್ಮಕವೂ ಆದ ಮೂರು ಜನ್ಮಗಳು ಅಥವಾ ಉತ್ಪತ್ತಿ ಸ್ವರೂಪಗಳು ಅತ್ಯಂತ ಆಕರ್ಷಣೆಯುಗಳಾಗಿವೆ ಎಂದು ಇಲ್ಲಿ ಹೇಳಿದೆ. ಭಾಷ್ಯಕಾರರು--

ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ ಸಮುದ್ರ ಏಕಂ ದಿವ್ಯೇಕಮಪ್ಸು ।

(ಋ. ಸಂ. ೧-೯೫-೩)

ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿರಸ್ಮದ್ದ್ವಿತೀಯಂ ಪರಿ ಜಾತವೇದಾಃ ।

(ಋ. ಸಂ. ೧೦-೪೫-೧)

ಎಂಬ ಋಕ್ಕುಗಳನ್ನುದಾಹರಿಸಿ ಅಗ್ನಿಯ ಮೂರುವಿಧವಾದ ಸ್ವರೂಪಗಳನ್ನು ವಿವರಿಸಿದಾರೆ. ಎಂದರೆ ಅಗ್ನಿಗೆ ಮೂರು ರೂಪಗಳಿವೆ. ಸಮುದ್ರದಲ್ಲಿ ಬಾಡಬಾನಲರೂಪದಿಂದಲೂ ಅಂತರಿಕ್ಷದಲ್ಲಿ ವೈದ್ಯುತಾಗ್ನಿರೂಪದಿಂದಲೂ (ಮಿಂಚಿನರೂಪ) ಸ್ವರ್ಗದಲ್ಲಿ ಆದಿತ್ಯರೂಪದಿಂದಲೂ ಅಗ್ನಿಯು ಇರುವನೆಂದು ಈ ಋಕ್ಕುಗಳಲ್ಲಿಯೂ ಹೇಳಿದೆ. ಇದಲ್ಲದೆ ಅಗ್ನಿಗೆ **ಪವಮಾನ, ವನಸ್ಪತಿ, ಶುಚಿ** ಎಂಬ ಮೂರು ವಿಧರೂಪಗಳು, **ಪವಮಾನ, ಶುಚಿ, ಪಾವಕ** ಎಂದೂ ಅಥವಾ **ಅಗ್ನಿ, ವೈಶ್ವಾನರ, ಜಾತವೇದಾಃ** ಎಂದೂ ಮೂರು ವಿಧಗಳಾದರೂಪಗಳಿರುವುವೆಂದು ಪ್ರಸಿದ್ಧಿಯಾಗಿದೆ. ಈ ವಿಷಯದಲ್ಲಿ ವಿಸ್ತಾರವಾದ ವಿವರಣೆಯನ್ನು ಋ. ಸಂ. ಭಾಗ. ೮. **ಪುಟ. 17-19ರಲ್ಲಿ ನೋಡಿ.**

———: o :———

ಸಂಹಿತಾಪಾಠಃ

ತ್ರಿರಸ್ಯ ತಾ ಪರಮಾ ಸಂತಿ ಸತ್ಯಾ ಸ್ಪಾರ್ಹಾ ದೇವಸ್ಯ ಜನಿಮಾನ್ಯಗ್ನೇಃ ।

CC-0. Jangamwadi Math Collection. Digitized by eGangotri

ಅನಂತೇ ಅಂತಃ ಪರಿವೀತ ಆಗಾಚ್ಛುಚಿಃ ಶುಕ್ರೋ ಅರ್ಯೋ ರೋರು-
ಚಾನಃ ॥ ೭ ॥

ಪದಪಾಠಃ

ತ್ರಿಃ । ಅಸ್ಯ । ತಾ । ಪರಮಾ । ಸಂತಿ । ಸತ್ಯಾ । ಸ್ಪಾರ್ಹಾ । ದೇವಸ್ಯ । ಜನಿಮಾನಿ । ಅಗ್ನೇಃ ।

ಅನಂತೇ । ಅಂತರಿತಿ । ಪರಿऽವೀತಃ । ಆ । ಅಗಾತ್ । ಶುಚಿಃ । ಶುಕ್ರಃ । ಅರ್ಯಃ । ರೋರುಚಾನಃ ॥೭॥

ಸಾಯಣಭಾಷ್ಯಂ

ಅಗ್ನೇರಗ್ನ್ಯಭಿಮಾನಿನೋऽಸ್ಯ ದೇವಸ್ಯ ತ್ರಿಸ್ತ್ರೀಣ್ಯಗ್ನಿವಾಯುಸೂರ್ಯಾತ್ಮನಾ ತ್ರೀಣಿ ತಾ ತಾನಿ ಪ್ರಸಿದ್ಧಾನಿ ಪರಮೋತ್ತಮಾನಿ ಸತ್ಯಾ ಯಥಾರ್ಥಭೂತಾನಿ ಜನಿಮಾನಿ ಜನ್ಮಾನಿ ಸ್ಪಾರ್ಹಾ ಸರ್ವೈಃ ಸ್ಪೃಹ-ಣೀಯಾನಿ ಸಂತಿ । ಯದ್ವಾ । ಅಗ್ನೇರೇವ ತ್ರೀಣಿ ಜನ್ಮಾನಿ ದಿವಸ್ಪರಿ ಪ್ರಥಮಂ ಜಜ್ಞೇ ಅಗ್ನಿಃ । ಋಗ್ವೇ. ೧೦-೪೫-೧ । ಇತಿ ತ್ರೀಣಿ ಜಾನಾ ಪರಿ ಭೂಷಂತ್ಯಸ್ಯ। ಋಗ್ವೇ. ೧-೯೫-೩ । ಇತ್ಯೇವಮಾದಿಷು ಮಂತ್ರೇಷು ಪ್ರಸಿದ್ಧಾನಿ । ಅನಂತೇऽಪರ್ಯಂತೇ ನಭಸ್ಯಂತರ್ಮಧ್ಯೇ ಸ್ವತೇಜಸಾ ಪರಿವೀತಃ ಪರಿವೇಷ್ಟಿತಃ ಶುಚಿಃ ಸರ್ವಸ್ಯ ಶೋಧಕಃ ಶುಕ್ರೋ ದೀಪ್ತಿಯುಕ್ತೋऽತ ಏವ ರೋರುಚಾನೋ ಭೃಶಂ ದೀಪ್ಯಮಾನೋऽರ್ಯಃ ಸ್ವಾಮೀ ತಾದೃಶೋ ದೇವ ಆಗಾತ್ । ಅಸ್ಮದೀಯಂ ಯಜ್ಞಂ ಪ್ರತ್ಯಾಗಚ್ಛತು ॥ ಸತ್ಯಾ । ಶೇಶ್ಛಂದಸಿ ಬಹುಲಮಿತಿ ಶೇರ್ಲುಕ್ । ಪರಿವೀತಃ । ವ್ಯೇಞ್ ಸಂವರಣೇ । ಕರ್ಮಣಿ ಕ್ತಃ । ಯಜಾದಿತ್ವಾತ್ಸಂ-ಪ್ರಸಾರಣಂ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಅರ್ಯಃ । ಋ ಗತೌ । ಅರ್ಯಃ ಸ್ವಾಮಿವೈಶ್ಯ-ಯೋರಿತಿ ಯತ್ಪ್ರತ್ಯಯಾಂತೋ ನಿಪಾತಿತಃ । ಸ್ವಾಮಿನ್ಯಂತೋದಾತ್ತತ್ವಂ ವಕ್ತವ್ಯಮಿತ್ಯಂತೋ-ದಾತ್ತತ್ವಂ ॥

ಪ್ರತಿಪದಾರ್ಥ

**ದೇವಸ್ಯ**—ದೇವತಾತ್ಮನಾದ । **ಅಸ್ಯ ಅಗ್ನೇಃ**—ಈ ಅಗ್ನಿಯ । **ತಾ**—ಪ್ರಸಿದ್ಧವಾದವೂ । **ಪರಮಾ**—ಉತ್ತಮವಾದವೂ । **ಸತ್ಯಾ**—ಸತ್ಯಾತ್ಮಕವಾದವೂ ಆದ । **ತ್ರಿಃ ಜನಿಮಾನಿ**—ಮೂರು ಉತ್ಪತ್ತಿಸ್ವರೂಪಗಳೂ ಸಹ। **ಸ್ಪಾರ್ಹಾ ಸಂತಿ**— ಅತ್ಯಂತ ಆಕರ್ಷಣೀಯಗಳಾಗಿವೆ । **ಅನಂತೇ**—ಅಂತರಹಿತವಾದ ಅಂತರಿಕ್ಷದ । **ಅಂತಃ**—ಮಧ್ಯಭಾಗದಲ್ಲಿ । **ಪರಿವೀತಃ**—ತನ್ನ ತೇಜಸ್ಸಿನಿಂದ ಆವೃತನಾಗಿಯೂ । **ಶುಚಿಃ**—ಶುದ್ಧಿಕಾರಕನಾಗಿಯೂ । **ಶುಕ್ರಃ**—ಕಾಂತಿಯುತನಾಗಿಯೂ । **ರೋರುಚಾನಃ**—ಅತ್ಯಂತ ಪ್ರಕಾಶಕನಾಗಿಯೂ ಆದ । **ಅರ್ಯಃ**—ಸ್ವಾಮಿಯಾದ ಅಗ್ನಿಯು । **ಆಗಾತ್**—ನಮ್ಮ ಯಜ್ಞಕ್ಕೆ ದಯಮಾಡಲಿ ।

ಭಾವಾರ್ಥ

ದೇವತಾತ್ಮನಾದ ಈ ಅಗ್ನಿಯ ಪ್ರಸಿದ್ಧವಾದವೂ ಉತ್ತಮವಾದವೂ ಸತ್ಯಾತ್ಮಕವಾದವೂ ಆದ (ಅಗ್ನಿ, ವಾಯು, ಸೂರ್ಯಾತ್ಮಕಗಳಾದ) ಮೂರು ಉತ್ಪತ್ತಿಸ್ವರೂಪಗಳೂ ಸಹ ಅತ್ಯಂತ ಆಕರ್ಷಣೀಯಗಳಾಗಿವೆ. ಅಗಾಧ

CC-0. Jangamwadi Math Collection. Digitized by eGangotri

ವಾದ ಅಂತರಿಕ್ಷದ ಮಧ್ಯಭಾಗದಲ್ಲಿ ತನ್ನ ತೇಜಸ್ಸಿನಿಂದ ಆವೃತನಾಗಿಯೂ, ಶುದ್ಧಿಕಾರಕನಾಗಿಯೂ, ಕಾಂತಿಯುತನಾಗಿಯೂ, ಅತ್ಯಂತ ಪ್ರಕಾಶಕನಾಗಿಯೂ, ಸ್ವಾಮಿಯೂ ಆದ ಅಗ್ನಿಯು ನಮ್ಮ ಯಜ್ಞಕ್ಕೆ ದಯಮಾಡಲಿ.

### English Translation

These are the supreme, true, and desirable births of this divine Agni, invested (with radiance) in the unbounded (firmament): pure, bright, radiant lord (of all), may he come (to our) sacrifice.

———————

### ಸಂಹಿತಾಪಾಠಃ

ಸ ದೂತೋ ವಿಶ್ವೇದಭಿ ವಷ್ಟಿ ಸದ್ಮಾ ಹೋತಾ ಹಿರಣ್ಯರಥೋ ರಂಸುಜಿಹ್ವಃ ।
ರೋಹಿದಶ್ವೋ ವಪುಷ್ಯೋ ವಿಭಾವಾ ಸದಾ ರಣ್ವಃ ಪಿತುಮತೀವ ಸಂಸತ್॥

### ಪದಪಾಠಃ

ಸಃ । ದೂತಃ । ವಿಶ್ವಾ । ಇತ್ । ಅಭಿ । ವಷ್ಟಿ । ಸದ್ಮ । ಹೋತಾ । ಹಿರಣ್ಯಽರಥಃ । ರಂಽಸುಜಿಹ್ವಃ ।
ರೋಹಿತ್ಽಅಶ್ವಃ । ವಪುಷ್ಯಃ । ವಿಭಾಽವಾ । ಸದಾ । ರಣ್ವಃ । ಪಿತುಮತೀಽಇವ । ಸಂಽಸತ್ ॥ ೮ ॥

### ಸಾಯಣಭಾಷ್ಯಂ

ದೇವಾನಾಂ ದೂತೋ ಹೋತಾ ದೇವಾನಾಮಾಹ್ವಾತಾ ಹಿರಣ್ಯರಥಃ ಸುವರ್ಣಮಯರಥೋಪೇತೋ ರಂಸುಜಿಹ್ವೋ ರಮಣೀಯಶೋಭನಜ್ವಾಲೋಪೇತಃ ಸ ತಾದೃಶೋಽಗ್ನಿರ್ವಿಶ್ವೇತ್ ಸರ್ವಾಣ್ಯೇವ ಸದ್ಮ ದೇವಯಜನಸ್ಥಾನಾನ್ಯಭಿ ವಷ್ಟಿ । ಕಾಮಯತೇ । ಪುನಶ್ಚ ಕೀದೃಶಃ । ರೋಹಿದಶ್ವಃ । ರೋಹಿತವರ್ಣಾ ಅಶ್ವಾ ಯಸ್ಯ ಸ ತಥೋಕ್ತಃ । ವಪುಷ್ಯೋ ವಪುಷಿ ರೂಪೇ ಸಾಧುರ್ವಿಭಾವಾ ಕಾಂತಿಯುಕ್ತೋಽತ ಏವ ಸದಾ ರಣ್ವೋ ರಮಣೀಯೋ ಭವತಿ । ತತ್ರ ದೃಷ್ಟಾಂತಃ । ಪಿತುಮತೀವ ಸಂಸತ್ । ಯಥಾನ್ನಾದಿವತ್ಸಮೃದ್ಧಂ ಗೃಹಂ ರಮಣೀಯಂ ತದ್ವತ್ ॥ ರಂಸುಜಿಹ್ವಃ । ರಮತೇರನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಬಹುವ್ರೀಹೌ ಪೂರ್ವಪದಸ್ವರಃ । ವಪುಷ್ಯಃ । ತತ್ರ ಸಾಧುರಿತಿ ಯತ್ । ತಿತ್ಸ್ವರಿತಃ। ವಿಭಾವಾ । ಛಂದಸೀವನಿಪಾವಿತಿ ವನಿಪ್ ॥

### ಪ್ರತಿಪದಾರ್ಥ

ದೂತಃ—ದೇವದೂತನೂ । ಹೋತಾ—ದೇವತೆಗಳನ್ನು ಕರೆಯುವವನೂ । ಹಿರ್ಣ್ಯರಥಃ—ಸುವರ್ಣಮಯವಾದ ರಥವುಳ್ಳವನೂ । ರಂಸುಜಿಹ್ವಃ—ರಮಣೀಯವಾಗ ಜ್ವಾಲಾಯುತನೂ । ಸಃ—ಪ್ರಸಿದ್ಧನೂ ಆದ

CC-0. Jangamwadi Math Collection. Digitized by eGangotri

ಅಗ್ನಿಯೂ । ವಿಶ್ವೇತ್ ಸದ್ಮ—ಸಮಸ್ತವಾದ ಯಜ್ಞಗೃಹಗಳನ್ನೂ । ಅಭಿ ವಷ್ಟಿ—ಅಪೇಕ್ಷಿಸುತ್ತಾನೆ । ಸಂಸತ್—ಗೃಹವು । ಪಿತುಮತೀವ—ಅನ್ನಯುಕ್ತವಾಗಿದ್ದರೆ ಪ್ರೀತಿಕಾರಕಾಗಿರುವಂತೆ । ರೋಹಿದಶ್ವಃ—ಹೊಂಬಣ್ಣವುಳ್ಳ ಅಶ್ವವುಳ್ಳವನೂ । ವಪುಷ್ಯಃ—ಆಕರ್ಷಕವಾದ ರೂಪವುಳ್ಳವನೂ । ವಿಭಾವಾ ಕಾಂತಿಯುತನೂ ಆದ ಅಗ್ನಿಯು । ಸದಾ—ಯಾವಾಗಲೂ । ರಣ್ವಃ—ತೃಪ್ತಿದಾಯಕನಾಗಿರುತ್ತಾನೆ ।

ಭಾವಾರ್ಥ

ದೇವದೂತನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಸುವರ್ಣಮಯವಾದ ರಥವುಳ್ಳವನೂ, ರಮಣೀಯವಾದ ಜ್ವಾಲಾಯುತನೂ, ಪ್ರಸಿದ್ಧನೂ ಆದ ಅಗ್ನಿಯು ಸಮಸ್ತವಾದ ಯಜ್ಞಗೃಹಗಳನ್ನೂ ಅಪೇಕ್ಷಿಸುತ್ತಾನೆ. ಅನ್ನಯುಕ್ತವಾಗಿರುವ ಗೃಹವು ತೃಪ್ತಿದಾಯಕವಾಗಿರುವಂತೆ, ಹೊಂಬಣ್ಣವುಳ್ಳ ಅಶ್ವವುಳ್ಳವನೂ, ಆಕರ್ಷಕವಾದ ರೂಪವುಳ್ಳವನೂ, ಕಾಂತಿಯುತನೂ ಆದ ಅಗ್ನಿಯು ಯಾವಾಗಲೂ ಪ್ರಿಯಕಾರಕನಾಗಿರುತ್ತಾನೆ.

English Translation

The messenger, the invoker (of the gods), riding in a golden chariot with a tongue of flame, he frequents all the chambers (of sacrifice); drawn by red horses, embodied, resplendent, always agreeable, as a dwelling well supplied with food.



ಸಂಹಿತಾಪಾಠಃ

ಸ ಚೇತಯನ್ಮನುಷೋ ಯಜ್ಞಬಂಧುಃ ಪ್ರ ತಂ ಮಹ್ಯಾ ರಶನಯಾ ನಯಂತಿ ।
ಸ ಕ್ಷೇತ್ಯಸ್ಯ ದುರ್ಯಾಸು ಸಾಧನ್ದೇವೋ ಮರ್ತಸ್ಯ ಸಧನಿತ್ವಮಾಪ ॥ ೯ ॥

ಪದಪಾಠಃ

ಸಃ । ಚೇತಯತ್ । ಮನುಷಃ । ಯಜ್ಞಽಬಂಧುಃ । ಪ್ರ । ತಮ್ । ಮಹ್ಯಾ । ರಶನಯಾ । ನಯಂತಿ ।
ಸಃ । ಕ್ಷೇತಿ । ಅಸ್ಯ । ದುರ್ಯಾಸು । ಸಾಧನ್ । ದೇವಃ । ಮರ್ತಸ್ಯ । ಸಧನಿಽತ್ವಂ । ಆಪ ॥ ೯ ॥

ಸಾಯಣಭಾಷ್ಯಂ

ಯಜ್ಞಬಂಧುಃ । ಯಜ್ಞೇಽಗ್ನಿಹೋತ್ರಾದೌ ಬಂಧನಂ ವಿನಿಯೋಜನಂ ಯಸ್ಯ ಸ ತಥೋಕ್ತಃ । ಸೋಽಗ್ನಿರ್ಮನುಷಃ ಕರ್ಮಣಿ ಪ್ರವೃತ್ತಾನ್ಮನುಷ್ಯಾನ್ ಚೇತಯತ್ । ಜಾನಾತಿ । ಮಹ್ಯಾ ಮಹತ್ಯಾ

CC-0. Jangamwadi Math Collection. Digitized by eGangotri

ರಶನಯಾ ಸ್ತುತಿರೂಪಯಾ ರಜ್ಜ್ವಾ ಯುಕ್ತಂ ತಂ ತಾದೃಶಮಗ್ನಿಂ ಪ್ರಣಯಂತಿ । ಉತ್ತರವೇದ್ಯಾದಿಷ್ವ-ಧ್ವರ್ಯ್ವಾದಯಃ ಪ್ರಕ್ಷಿಪಂತಿ । ಮರ್ತಸ್ಯ ಮನುಷ್ಯಸ್ಯಾಸ್ಯ ಯಜಮಾನಸ್ಯ ದುರ್ಯಾಸು ಗೃಹೇಷು ಸಾಧನ್ ಅಭೀಷ್ಟಾನಿ ಸಾಧಯನ್ ಸೋಽಗ್ನಿಃ ಕ್ಷೇತಿ । ವಸತಿ । ಸ ದೇವೋ ದ್ಯೋತಮಾನೋಽಗ್ನಿಃ ಸಧನಿತ್ವಂ ಯಸ್ಯ ಗೃಹೇ ನಿವಸತಿ ತೇನ ಧನಿನಾ ಸಾಹಿತ್ಯಮಾಪ । ಪ್ರಾಪ್ನೋತಿ । ಪ್ರಭೂತಂ ಧನಂ ಯಜಮಾನಾಯ ದಾಪಯಿತ್ವಾ ತೇನ ಸಹಿತೋಽಭವದಿತ್ಯರ್ಥಃ ॥ ಸಾಧನ್ । ರಾಧ ಸಾಧ ಸಂಸಿದ್ಧೌ । ಣ್ಯಂತಸ್ಯ ಶತರಿ ರೂಪಂ ॥

ಪ್ರತಿಪದಾರ್ಥ

ಯಜ್ಞಬಂಧುಃ—ಯಜ್ಞಕ್ಕೆ ಬಂಧುಭೂತನಾದ । ಸಃ—ಅಗ್ನಿಯು । ಮನುಷಃ—ಕರ್ಮದಲ್ಲಿ ಪ್ರವೃತ್ತರಾದ ಮಾನವರನ್ನು । ಚೇತಯತ್—ತಿಳಿಯುತ್ತಾನೆ । ಮಹ್ಯಾ—ಮಹತ್ತಾದುದೂ । ರಶನಯಾ—ಸ್ತುತಿರೂಪವಾದುದೂ ಆದ ರಜ್ಜುವಿನಿಂದ ಕೂಡಿದ । ತಂ—ಆ ಅಗ್ನಿಯನ್ನು । ಪ್ರ ನಯಂತಿ—ಅಧ್ವರ್ಯುಗಳು ಸ್ಥಾಪಿಸುತ್ತಾರೆ । ಮರ್ತಸ್ಯ—ಮಾನವನಾದ । ಅಸ್ಯ—ಈ ಯಜಮಾನನ । ದುರ್ಯಾಸು—ಗೃಹಗಳಲ್ಲಿ । ಸಾಧನ್—ಅವನ ಇಷ್ಟಾರ್ಥಗಳನ್ನು ಸಾಧಿಸಿಕೊಡುತ್ತಾ । ಸಃ—ಅಗ್ನಿಯು । ಕ್ಷೇತಿ—ವಾಸಿಸುತ್ತಾನೆ । ದೇವಃ—ಪ್ರಕಾಶಮಾನನಾದ ಅಗ್ನಿಯು । ಸಧನಿತ್ವಂ—ಧನಿಕನಾದ ಯಜಮಾನನೊಂದಿಗೆ ಐಕ್ಯವನ್ನು । ಆಪ—ಹೊಂದುತ್ತಾನೆ ।

ಭಾವಾರ್ಥ

ಯಜ್ಞಕ್ಕೆ ಬಂಧುಭೂತನಾದ ಅಗ್ನಿಯು ಕರ್ಮದಲ್ಲಿ ಪ್ರವೃತ್ತರಾದ ಮಾನವರ ಭಕ್ತಿಯನ್ನು ತಿಳಿದುಕೊಳ್ಳುತ್ತಾನೆ. ಮಹತ್ತಾದುದೂ ಸ್ತುತಿರೂಪವಾದುದೂ ಆದ ರಜ್ಜುವಿನಿಂದ ಕೂಡಿದ ಆ ಅಗ್ನಿಯನ್ನು ಅಧ್ವರ್ಯುಗಳು ಸ್ಥಾಪಿಸುತ್ತಾರೆ. ಮಾನವನಾದ ಈ ಯಜಮಾನನ ಗೃಹಗಳಲ್ಲಿ ಅವನ ಇಷ್ಟಾರ್ಥಗಳನ್ನು ಸಾಧಿಸಿಕೊಡುತ್ತಾ ಅಗ್ನಿಯು ವಾಸಿಸುತ್ತಾನೆ. ಪ್ರಕಾಶಮಾನನಾದ ಅಗ್ನಿಯು ಧನಿಕನಾದ ಯಜಮಾನನೊಂದಿಗೆ ಐಕ್ಯನಾಗಿ ಅವನ ಹಿತವನ್ನು ಸಾಧಿಸುತ್ತಾನೆ.

English Translation

Associated with sacrifice, and knowing those men (who are engaged in good works), they lead him with the strong cord (of praise): he the divine Agni, fulfilling (all desires), abides in the dwelling of this mortal, and obtains fellowship in his wealth.

———

ಸಂಹಿತಾಪಾಠಃ

ಸ ತೂ ನೋ ಅಗ್ನಿರ್ನಯತು ಪ್ರಜಾನನ್ನಚ್ಛಾ ರತ್ನಂ ದೇವಭಕ್ತಂ ಯದಸ್ಯ ।
ಧಿಯಾ ಯದ್ವಿಶ್ವೇ ಅಮೃತಾ ಅಕೃಣ್ವನ್ದ್ಯೌಷ್ಪಿತಾ ಜನಿತಾ ಸತ್ಯಮುಕ್ಷನ್ ॥

CC-0. Jangamwadi Math Collection. Digitized by eGangotri

ಪದಪಾಠಃ

ಸಃ । ತು । ನಃ । ಅಗ್ನಿಃ । ನಯತು । ಪ್ರಽಜಾನನ್ । ಅಚ್ಛ । ರತ್ನಂ । ದೇವಽಭಕ್ತಂ । ಯತ್ । ಅಸ್ಯ ।
ಧಿಯಾ । ಯತ್ । ವಿಶ್ವೇ । ಅಮೃತಾಃ । ಅಕೃಣ್ವನ್ । ದ್ಯೌಃ । ಪಿತಾ । ಜನಿತಾ । ಸತ್ಯಂ । ಉಕ್ಷನ್ ।೧೦॥

ಸಾಯಣಭಾಷ್ಯಂ

ಪ್ರಜಾನನ್ ಸರ್ವಂ ಜಾನಾನಃ ಸೋಽಗ್ನಿರ್ದೇವಭಕ್ತಂ ದೇವೈರ್ದೇವನಶೀಲೈಃ ಸ್ತೋತೃಭಿಃ ಸಂಭಜನೀಯಮಸ್ಯಾಗ್ನೇಃ ಸಂಬಂಧಿ ಯದುತ್ತಮಂ ರತ್ನಂ ಧನಮಸ್ತಿ ತದ್ರತ್ನಮಚ್ಛಾಭಿಮುಖ್ಯೇನ ತು ಕ್ಷಿಪ್ರಂ ನೋಽಸ್ಮಾನ್ನಯತು । ಪ್ರಾಪಯತು । ಅಮೃತಾ ಮರಣಧರ್ಮರಹಿತಾ ವಿಶ್ವೇ ಸರ್ವೇ ದೇವಾ ಧಿಯಾ ಹವಿರ್ವಹನಲಕ್ಷಣೇನ ಕರ್ಮಣಾ ಹೇತುನಾ ಯದ್ಯಮಗ್ನಿಮಕೃಣ್ವನ್ ಹವಿಷಾಂ ಪ್ರಾಪಯಿತಾರಮಕುರ್ವನ್ । ಯಸ್ಯ ಚಾಗ್ನೇರ್ದ್ಯೌಃ ಪಿತಾ ಪಾಲಯಿತ್ರೀ ಜನಿತಾ ಜನಯಿತ್ರೀ ಚ । ಅಗ್ನೇ ದಿವಃ ಸೂನುರಸಿ ಪ್ರಚೇತಾಃ । ಋಗ್ವೇ. ೩-೨೫-೧ । ಇತಿ ಶ್ರವಣಾತ್ । ಯದ್ವಾ । ದ್ಯೌರ್ದೇವನಶೀಲ ಆದಿತ್ಯಃ ಪಿತಾ ಜನಯಿತಾ ಚ ಆದಿತ್ಯಾದಗ್ನಿರಿತ್ಯಾಮ್ನಾನಾತ್ । ಸತ್ಯಂ ಯಥಾರ್ಥಭೂತಂ ತಮಗ್ನಿಮುಕ್ಷನ್ । ಘೃತಾದ್ಯಾಹುತಿಭಿರಧ್ವರ್ಯ್ವಾದಯಃ ಸಿಂಚಂತಿ ॥ ದೇವಭಕ್ತಂ । ಭಜ ಸೇವಾಯಾಂ । ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ । ಉಕ್ಷನ್ । ಉಕ್ಷ ಸೇಚನೇ । ಲಙಿ ರೂಪಂ । ಬಹುಲಂ ಛಂದಸೀತ್ಯಡಭಾವಃ ॥

ಪ್ರತಿಪದಾರ್ಥ

ಪ್ರಜಾನನ್—ಸಕಲವನ್ನೂ ತಿಳಿದ । ಸಃ ಅಗ್ನಿಃ—ಅಗ್ನಿಯು । ದೇವಭಕ್ತಂ—ಸ್ತೋತೃಗಳಿಗೆ ಪೂಜ್ಯವಾದುದೂ । ಅಸ್ಯ—ತತ್ಸಂಬಂಧಿಯಾದುದೂ ಆದ । ಯತ್ ರತ್ನಂ—ಯಾವ ಧನವಿದೆಯೋ ಅದನ್ನು । ತು—ಕ್ಷಿಪ್ರವಾಗಿ । ನಃ ಅಚ್ಛ—ನಮಗೆ ಅಭಿಮುಖವಾಗಿ । ನಯತು—ತಂದೊದಗಿಸಲಿ । ಅಮೃತಾಃ—ಮರಣಧರ್ಮರಹಿತರಾದ । ವಿಶ್ವೇ—ಸಮಸ್ತದೇವತೆಗಳೂ । ಧಿಯಾ—(ತಮಗೆ ಹವಿಸ್ಸನ್ನು ವಹಿಸತಕ್ಕ) ಕರ್ಮನಿಮಿತ್ತವಾಗಿ । ಯತ್—ಯಾವ ಅಗ್ನಿಯನ್ನು । ಅಕೃಣ್ವನ್—ದೇವದೂತನನ್ನಾಗಿ ಮಾಡಿದರೋ ಮತ್ತು । ಯಸ್ಯ—ಯಾವ ಅಗ್ನಿಗೆ । ದ್ಯೌಃ—ದ್ಯುಲೋಕವು । ಪಿತಾ—ಪಾಲಕವಾಗಿಯೂ । ಜನಿತಾ—ಜನಕವಾಗಿಯೂ ಇದೆಯೋ । ಸತ್ಯಂ—ಸತ್ಯಾತ್ಮನಾದ ಆ ಅಗ್ನಿಯನ್ನು । ಉಕ್ಷನ್—(ಅಧ್ವರ್ಯುಗಳು) ಘೃತಾದಿಗಳಿಂದ ಪ್ರೋಕ್ಷಿಸುತ್ತಾರೆ ।

ಭಾವಾರ್ಥ

ಸ್ತೋತೃಗಳಿಗೆಲ್ಲಾ ಪೂಜ್ಯವಾಗಿರತಕ್ಕ ಧನಸಂಪತ್ತಿಯನ್ನು ಸರ್ವಜ್ಞನಾದ ಅಗ್ನಿಯು ಕ್ಷಿಪ್ರವಾಗಿ ನಮಗೆ ತಂದೊದಗಿಸಲಿ. ಮರಣಧರ್ಮರಹಿತರಾದ ಸಮಸ್ತದೇವತೆಗಳೂ ಸಹ ತಮಗೆ ಹವಿಸ್ಸನ್ನು ವಹಿಸುವ ಕರ್ಮನಿಮಿತ್ತವಾಗಿ ಯಾವ ಅಗ್ನಿಯನ್ನು ತಮಗೆ ದೂತನನ್ನಾಗಿ ಮಾಡಿಕೊಂಡರೋ ಮತ್ತು ಯಾವ ಅಗ್ನಿಗೆ ದ್ಯುಲೋಕವು ಜನಕವೂ ಪಾಲಕವೂ ಆಗಿದೆಯೋ ಅಂತಹ ಸತ್ಯಾತ್ಮನಾದ ಅಗ್ನಿಯನ್ನು ಅಧ್ವರ್ಯುಗಳು ಘೃತಾದಿಗಳಿಂದ ಪ್ರೋಕ್ಷಿಸುತ್ತಾರೆ.

CC-0. Jangamwadi Math Collection. Digitized by eGangotri

## English Translation

May that wise Agni conduct us to that wealth which is desired by the devout; he whom all the immortals have created for (the performance of) sacred rites; of whom heaven is the parent and progenitor, and whom (the priests) verily sprinkle (with oblations).

ವಿಶೇಷವಿಷಯಗಳು

ಯಸ್ಯ ದ್ಯೌಃ ಪಿತಾ ಜನಿತಾ—ಅಗ್ನಿಗೆ ಸ್ವರ್ಗವು ತಂದೆಯೂ ಪಾಲಕನೂ ಆಗಿರುವನೆಂದು ಇಲ್ಲಿ ಹೇಳಿದೆ.
ಅಗ್ನೇ ದಿವಃ ಸೂನುರಸಿ ಪ್ರಚೇತಾಸ್ತನಾ ಪೃಥಿವ್ಯಾ ಉತ ವಿಶ್ವವೇದಾಃ ।

(ಋ ಸಂ. ೩-೨೫-೧)

ಎಲೈ ಅಗ್ನಿಯೇ, ನೀನು ಸಮಸ್ತವನ್ನೂ ತಿಳಿದ ಸರ್ವಜ್ಞನೆನಿಸಿದ್ದೀಯೆ. ನೀನು ಸ್ವರ್ಗದ (ಅಥವಾ ಸ್ವರ್ಗಾಭಿಮಾನಿ ದೇವತೆಯ) ಮತ್ತು ಪೃಥಿವಿಯ ಪುತ್ರನಾಗಿದ್ದೀಯೆ ಎಂದು ವಿಶ್ವಾಮಿತ್ರಋಷಿಯು ಅಗ್ನಿಯನ್ನು ಸ್ತೋತ್ರಮಾಡಿದಾನೆ. ಇದಲ್ಲದೆ ದ್ಯಾವಾಪೃಥಿವಿಗಳು ಅಗ್ನಿಯೇ ಮೊದಲಾದ ಇತರ ಎಲ್ಲಾ ದೇವತೆಗಳಿಗೂ ತಂದೆತಾಯಿಗಳೆಂದು ಅನೇಕ ಕಡೆಗಳಲ್ಲಿ ಹೇಳಿದೆ.

---

ಸಂಹಿತಾಪಾಠಃ

ಸ ಜಾಯತ ಪ್ರಥಮಃ ಪಸ್ತ್ಯಾಸು ಮಹೋ ಬುಧ್ನೇ ರಜಸೋ ಅಸ್ಯ ಯೋನೌ ।
ಅಪಾದಶೀರ್ಷಾ ಗುಹಮಾನೋ ಅಂತಾಯೋಯುವಾನೋ ವೃಷಭಸ್ಯ ನೀಳೇ ॥ ೧೧ ॥

ಪದಪಾಠಃ

ಸ । ಜಾಯತ । ಪ್ರಥಮಃ । ಪಸ್ತ್ಯಾಸು । ಮಹಃ । ಬುಧ್ನೇ । ರಜಸಃ । ಅಸ್ಯ । ಯೋನೌ ।
ಅಪಾತ್ । ಅಶೀರ್ಷಾ । ಗುಹಮಾನಃ । ಅಂತಾ । ಆऽಯೋಯುವಾನಃ । ವೃಷಭಸ್ಯ । ನೀಳೇ ॥ ೧೧ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

**ಸೋಽಗ್ನಿಃ ಪ್ರಥಮ ಆಹವನೀಯಾದಿರೂಪತಯಾ ಶ್ರೇಷ್ಠಃ ಸನ್ ಪಸ್ತ್ಯಾಸು ಯಜಮಾನಾನಾಂ ಗೃಹೇಷು ಜಾಯತ । ಆಹುತ್ಯಧಿಕರಣತಯಾ ಸಂಪದ್ಯತೇ । ತಥಾ ಮಹೋ ಮಹತೋಽಸ್ಯ ರಜಸೋಽಂತರಿಕ್ಷಸ್ಯ ಬುಧ್ನೇ ಮೂಲೇ ಪೃಥಿವ್ಯಾಂ ತತ್ರಾಪಿ ಯೋನಾವುತ್ತರವೇದ್ಯಾದಿಸ್ಥಾನೇ ಸಂಪದ್ಯತೇ । ಸೋಽಗ್ನಿರಪಾತ್ಪಾದವರ್ಜಿತೋಽಶೀರ್ಷಾ ಶಿರೋವರ್ಜಿತಃ । ತದೇವಾಹ ।। ಅಂತಾದ್ಯಂತೇ ಪಾದಶಿರಸೀ ಗುಹಮಾನೋ ಗೂಹಮಾನಃ । ಅವಿಜ್ಞೇಯಪಾದಶಿರಾ ಇತ್ಯರ್ಥಃ । ವೃಷಭಸ್ಯ ವರ್ಷಣಸಮರ್ಥಸ್ಯ ಮೇಘಸ್ಯ ನೀಳೇ ನಿಲಯೇ ನಭಸ್ಯಾಯೋಯುವಾನೋ ಧೂಮಾಕಾರೇಣಾತ್ಮಾನಮಾಯೋಜಯನ್ವರ್ತತೇ ಯದ್ವಾ । ಯಃ ಪ್ರಥಮೋ ವೈದ್ಯುತೋಽಗ್ನಿಃ ಪಸ್ತ್ಯಾದಿಸು ನದೀಷು ಬುಧ್ನೇಽಂತರಿಕ್ಷೇ ಮಹೋ ಮಹತೋ ರಜಸ ಉದಕಸ್ಯ ತೇಜಸೋ ವಾ ಯೋನೌ ಸ್ಥಾನೇ ಚ ಚರತಿ । ಅಪಾದಶೀರ್ಷಾ ಪಾದಶಿರೋವರ್ಜಿತೋಽಂತಾತ್ಮನಃ ಪರ್ಯಂತಪ್ರದೇಶಾನ್ ಸ್ವತೇಜಸಾ ಗುಹಮಾನ ಆಚ್ಛಾದಯನ್ ಪುನಶ್ಚಾಯೋಯುವಾನಸ್ತಾನಿ ತೇಜಾಂಸಿ ಸ್ವಾತ್ಮನಿ ಮಿಶ್ರೀಕುರ್ವನ್ವೃಷಭಸ್ಯ ಮೇಘಸ್ಯ ನೀಳೇ ಸ್ಥಾನೇ ನಭಸಿ ಚರತಿ ಸೋಽಗ್ನಿರಧುನಾ ಕರ್ಮಯೋಗ್ಯತಯಾಜಾಯತ ।। ಅಪಾತ್ । ಪಾದಸ್ಯ ಲೋಪೋಽಹಸ್ತ್ಯಾದಿಭ್ಯ ಇತ್ಯಕಾರಲೋಪಃ ಸಮಾಸಾಂತಃ । ಗುಹಮಾನಃ । ಗುಹೂ ಸಂವರಣೇ । ಶಪಿಕರಣೇ । ಶಾನಚಿ ರೂಪಂ । ಶಾನಚೋ ಲಸಾರ್ವಧಾತುಕಸ್ವರೇ ಕೃತೇ ಪ್ರತ್ಯಯಸ್ವರಃ । ಆಯೋಯುವಾನಃ । ಯು ಮಿಶ್ರಣೇ । ಯಙ್ಲುಕಿ ಶಾನಚಿ ರೂಪಂ । ಅಭ್ಯಸ್ತಸ್ವರೇಣಾದ್ಯುದಾತ್ತಃ ।।**

### ಪ್ರತಿಪದಾರ್ಥ

**ಸಃ**—ಅಗ್ನಿಯು । **ಪ್ರಥಮಃ**—ಮೊದಲು (ಆಹವನೀಯಾದಿ ರೂಪದಲ್ಲಿ) । **ಪಸ್ತ್ಯಾಸು**—ಯಜಮಾನರ ಗೃಹಗಳಲ್ಲಿ । **ಜಾಯತೇ**—ಉತ್ಪನ್ನನಾಗುತ್ತಾನೆ । **ಮಹಃ**—ಮಹತ್ತಾದ । **ಅಸ್ಯ ರಜಸಃ**—ಅಂತರಿಕ್ಷದ । **ಬುಧ್ನೇ**—ಮೂಲರೂಪವಾದ ಪೃಥಿವಿಯ । **ಯೋನೌ**—ಉತ್ತರವೇದಿಪ್ರದೇಶದಲ್ಲಿ (ಸ್ಥಾಪಿತನಾಗುತ್ತಾನೆ । **ಅಪಾತ್**—ಪಾದರಹಿತನೂ । **ಅಶೀರ್ಷಾ**—ಶಿರೋರಹಿತನೂ (ಮತ್ತು) (ಅದ್ಯಂತಗಳಾದ) । **ಅಂತಾ**—ಪಾದಗಳನ್ನೂ ಶಿರಸ್ಸುಗಳನ್ನೂ । **ಗುಹಮಾನಃ**—ಗೂಢವಾಗಿಟ್ಟಿರುವವನೂ ಆಗಿ । **ವೃಷಭಸ್ಯ**—ವೃಷ್ಟಿಕಾರಕವಾದ ಮೇಘದ । **ನೀಳೇ**—ನಿಲಯವಾದ ಅಂತರಿಕ್ಷದಲ್ಲಿ । **ಆಯೋಯುವಾನಃ**—ಧೂಮದೊಡನೆ ಐಕ್ಯವಾಗಿದ್ದಾನೆ ।

### ಭಾವಾರ್ಥ

ಅಗ್ನಿಯು ಮೊದಲು ಆಹವನೀಯಾದಿ ರೂಪದಲ್ಲಿ ಯಜಮಾನರ ಯಜ್ಞಗೃಹಗಳಲ್ಲಿ ಉತ್ಪನ್ನನಾಗುತ್ತಾನೆ. ಮಹತ್ತಾದ ಅಂತರಿಕ್ಷದ ಮೂಲರೂಪವಾದ ಪೃಥಿವಿಯ ಉತ್ತರವೇದಿಪ್ರದೇಶದಲ್ಲಿ ಸ್ಥಾಪಿತನಾಗುತ್ತಾನೆ. ಪಾದರಹಿತನೂ, ಶಿರೋರಹಿತನೂ ಮತ್ತು ಆದ್ಯಂತಗಳಾದ ಪಾದಶಿರಸ್ಸುಗಳನ್ನು ಗೂಢವಾಗಿಟ್ಟಿರುವವನೂ ಆಗಿ ವೃಷ್ಟಿಕಾರಕವಾದ ಮೇಘದ ನಿಲಯವಾದ ಅಂತರಿಕ್ಷದಲ್ಲಿ ಧೂಮದೊಡನೆ ಐಕ್ಯವಾಗಿದ್ದಾನೆ.

CC-0. Jangamwadi Math Collection. Digitized by eGangotri

## English Translation

He is first engendered in the habitations (of the sacrificers); then upon his stations, (the altar), the base of the vast firmament; without feet, without head, concealing his extremities, combining with smoke in the nest of the rain-cloud.

### ವಿಶೇಷವಿಷಯಗಳು

**ಅಪಾತ್ ಅಶೀರ್ಷಾ ಅಂತಾ ಗುಹಮಾನಃ ವೃಷಭಸ್ಯ ನೀಳೇ ಆಯೋಯುವಾನಃ**—ಈ ಅಗ್ನಿಯು ಪಾದ ಮತ್ತು ಶಿರಸ್ಸುಗಳಿಲ್ಲದವನಾಗಿ ಅಥವಾ ಅವುಗಳನ್ನು ಯಾರಿಗೂ ಕಾಣಿಸದಂತೆ ಗೂಢವಾಗಿಟ್ಟುಕೊಂಡು ವೃಷ್ಟಿ ಕಾರಕವಾದ ಮೇಘಮಂಡಲದಲ್ಲಿ ಧೂಮರೂಪದಿಂದ ಐಕ್ಯನಾಗಿದ್ದಾನೆ ಎಂದು ಇಲ್ಲಿ ಹೇಳಿದೆ. ಮೇಘಮಂಡಲದಲ್ಲಿ ರುವುದು ವೈದ್ಯುತಾಗ್ನಿಯು (ಮಿಂಚು). ಇದರ ಪ್ರಕಾಶಮಾತ್ರ ಎಲ್ಲರಿಗೂ ಗೋಚರವಾಗುವುದೇ ಹೊರತು ಅಗ್ನಿಯ ಇತರ ಭಾಗಗಳು (ಎಂದರೆ ಕಾಲುಗಳು ಶಿರಸ್ಸುಗಳು) ಯಾರಿಗೂ ಕಾಣಿಸುವುದಿಲ್ಲ. ಅಲ್ಲದೆ, ಭೂಮಿಯಮೇಲಿರುವ ಅಗ್ನಿಗೂ ಸಹ ಪಾದಗಳು ಶಿರಸ್ಸು ಮುಂತಾದ ವಿಭಾಗಗಳನ್ನು ಮಾಡಲಾಗುವುದಿಲ್ಲ. ಮೇಘಗಳು ನೀರಿನ ಆವಿಯ ರೂಪದಿಂದ ಇರುವುದರಿಂದ ಅವುಗಳಲ್ಲಿ ಐಕ್ಯನಾಗಿರುವ ಅಗ್ನಿಯೂ ಸಹ ಧೂಮ (ಹೊಗೆ) ರೂಪದಿಂದಲೇ ಇರುವನು ಎಂದಭಿಪ್ರಾಯವು.

---

### ಸಂಹಿತಪಾಠಃ

ಪ್ರ ಶರ್ಧ ಆರ್ತ ಪ್ರಥಮಂ ವಿಪನ್ಯಂ ಋತಸ್ಯ ಯೋನಾ ವೃಷಭಸ್ಯ ನೀಳೆ ।
ಸ್ಪಾರ್ಹೋ ಯುವಾ ವಪುಷ್ಯೋ ವಿಭಾವಾ ಸಪ್ತ ಪ್ರಿಯಾಸೋಽಜನಯಂತ ವೃಷ್ಣೇ ॥ ೧೨ ॥

### ಪದಪಾಠಃ

ಪ್ರ । ಶರ್ಧಃ । ಆರ್ತ । ಪ್ರಥಮಂ । ವಿಪನ್ಯಾ । ಋತಸ್ಯ । ಯೋನಾ । ವೃಷಭಸ್ಯ । ನೀಳೇ ।
ಸ್ಪಾರ್ಹಃ । ಯುವಾ । ವಪುಷ್ಯಃ । ವಿಭಾಽವಾ । ಸಪ್ತ । ಪ್ರಿಯಾಸಃ । ಅಜನಯಂತ । ವೃಷ್ಣೇ ॥ ೧೨ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಗ್ನೇ ವಿಪನ್ಯಾ ಸ್ತುತ್ಯಾ ಯುಕ್ತಮೃತಸ್ಯೋದಕಸ್ಯ ಯೋನೌ ಸ್ಥಾನೇ ವೃಷಭಸ್ಯ ವರ್ಷಣ-ಸಮರ್ಥಸ್ಯ ಮೇಘಸ್ಯ ನೀಳೇ ಕುಲಾಯಭೂತೇಽಂತರಿಕ್ಷೇ ವೈದ್ಯುತಾಗ್ನಿರೂಪೇಣ ವರ್ತಮಾನಂ ತ್ವಾಂ ಶರ್ಧಸ್ತೇಜಃ ಪ್ರಥಮಂ ಪ್ರಾರ್ತ । ಪ್ರಕರ್ಷೇಣ ಗಚ್ಛತಿ । ಯಶ್ಚಾಗ್ನಿಃ ಸ್ಪಾರ್ಹಃ ಸರ್ವೈಃ ಸ್ಪೃಹಣೀಯೋ ಯುವಾ ನಿತ್ಯತರುಣೋ ವಪುಷ್ಯಃ ಕಮನೀಯೋ ವಿಭಾವಾ ದೀಪ್ತಿಮಾನ್ ತಸ್ಮೈ ವೃಷ್ಣೇಽಭಿಮತಫಲ--ವರ್ಷಕಾಯಾಗ್ನಯೇ ಪ್ರಿಯಾಸಃ ಪ್ರಿಯಾಃ ಸಪ್ತ ಹೋತ್ರಕಾ ಅಜನಯಂತ । ಸ್ತೋತ್ರಮಕುರ್ವನ್ ॥ ಆರ್ತ । ಋ ಗತೌ । ಲಙಃ ವ್ಯತ್ಯಯೇನಾತ್ಮನೇಪದಂ । ನಿಘಾತಃ । ವಿಪನ್ಯಾ । ಪನ ಚೇತ್ಯಸ್ಯೇನ್ಪ್ರ-ತ್ಯಯಃ । ಕೃದಿಕಾರಾದಕ್ತಿನ ಇತಿ ಙೀಷ್ । ಪ್ರತ್ಯಯಸ್ವರೇಣಾಂತೋದಾತ್ತಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ । ವಿಪನ್ಯೆ ಋತಸ್ಯೇತ್ಯತ್ರ ಸಂಹಿತಾಯಾಮಿಕೋಽಸವರ್ಣೇ ಶಾಕಲ್ಯಸ್ಯ ಹ್ರಸ್ವಶ್ಚ । ಪಾ. ೬-೧-೧೨೭ । ಇತ್ಯನಿಕೋಽಪಿ ಹ್ರಸ್ವೋಽನುನಾಸಿಕಶ್ಚ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ವಿಪನ್ಯಾ—ಸ್ತುತಿಯೊಡನೆ ಕೂಡಿದುದೂ । ಋತಸ್ಯ—ಉದಕಕ್ಕೆ । ಯೋನಾ—ಯೋನಿಭೂತವಾದುದೂ । ವೃಷಭಸ್ಯ—ವೃಷ್ಟಿಕಾರಕವಾದುದೂ ಆದ ಮೇಘಕ್ಕೆ । ನೀಳೇ—ಗೂಡಿನಂತಿರುವ ಅಂತರಿಕ್ಷದಲ್ಲಿ (ವೈದ್ಯುತಾಗ್ನಿರೂಪದಲ್ಲಿರುವ ನಿನ್ನನ್ನು) । ಶರ್ಧಃ—ತೇಜಸ್ಸು । ಪ್ರಥಮಂ—ಪೂರ್ವಭಾವಿಯಾಗಿ । ಪ್ರ ಆರ್ತ—ಆಶ್ರಯಿಸಿ ಬರುತ್ತದೆ । ಸ್ಪಾರ್ಹಃ—ಎಲ್ಲರಿಗೂ ಆದೃತನೂ । ಯುವಾ—ನಿತ್ಯತರುಣನೂ । ವಪುಷ್ಯಃ—ಕಾಂತಿಯುತವಾದ ಆಕಾರವುಳ್ಳವನೂ । ವಿಭಾವಾ—ಪ್ರಕಾಶಮಾನನೂ । ವೃಷ್ಣೇ—ಇಷ್ಟಾರ್ಥ ಪ್ರದನೂ ಆದ ಅಗ್ನಿಗೋಸ್ಕರ । ಪ್ರಿಯಾಸಃ—ಪ್ರೀತಿಪಾತ್ರರಾದ । ಸಪ್ತ—ಸಪ್ತಹೋತೃಗಳೂ । ಅಜನಯಂತ—ಸ್ತುತಿಯನ್ನು ನಿರ್ಮಿಸಿದರು ।

ಭಾವಾರ್ಥ

ಸ್ತುತಿಯುಕ್ತವಾಗಿ ಉದಕಕ್ಕೆ ಯೋನಿಭೂತವಾದುದೂ, ವೃಷ್ಟಿಕಾರಕವೂ ಆದ ಮೇಘಕ್ಕೆ ಗೂಡಿನಂತಿರುವ ಅಂತರಿಕ್ಷದಲ್ಲಿ ವೈದ್ಯುತಾಗ್ನಿರೂಪದಲ್ಲಿರುವ ನಿನ್ನನ್ನು ಆಶ್ರಯಿಸಿ ಪ್ರಥಮತಃ ತೇಜಸ್ಸು ಸಮೀಪಿಸುತ್ತದೆ. ಎಲ್ಲರಿಗೂ ಸ್ಪೃಹಣೀಯನೂ, ನಿತ್ಯತರುಣನೂ ಕಾಂತಿಯುತವಾದ ಆಕಾರವುಳ್ಳವನೂ ಪ್ರಕಾಶಮಾನನೂ, ಇಷ್ಟಾರ್ಥಪ್ರದನೂ ಆದ ಅಗ್ನಿಗೋಸ್ಕರ ಪ್ರೀತಿಪಾತ್ರರಾದ ಸಪ್ತಹೋತೃಗಳೂ ಸಹ ಸ್ತುತಿಯನ್ನು ನಿರ್ಮಿಸಿದರು.

## English Translation

Radiance has first proceeded to you, (Agni), who are glorified by *praise*, in the womb of the water, in the nest of the rain-cloud : the seven attached (priests) have engendered (praise) to rer (of benefit seoswh), the who is desirable, ever young, embodied, and resplendent.

CC-0. Jangamwadi Math Collection. Digitized by eGangotri

### ವಿಶೇಷವಿಷಯಗಳು

ಪ್ರಿಯಾಸಃ ಸಪ್ತ ಅಜನಯಂತ—ಪ್ರೀತಿಪಾತ್ರರಾದ ಸಪ್ತಹೋತೃಗಳು ಸ್ತುತಿಯನ್ನು ನಿರ್ಮಿಸಿದರು ಎಂದು ಈ ವಾಕ್ಯದ ಅಭಿಪ್ರಾಯವು. ಇಲ್ಲಿ ಸಪ್ತಹೋತೃಗಳೆಂದರೆ—ಹೋತೃ, ಮೈತ್ರಾವರುಣ, ಬ್ರಾಹ್ಮಣಾಚ್ಛಂಸೀ, ಪೋತೃ, ನೇಷ್ಟೃ, ಅಚ್ಛಾವಾಕ ಮತ್ತು ಅಗ್ನೀಧ್ರ ಎಂಬ ಏಳುಜನ ಋತ್ವಿಕ್ಕುಗಳು. ಈ ಋತ್ವಿಕ್ಕುಗಳು ಪ್ರಾತಸ್ಸವನ, ಮಾಧ್ಯಂದಿನಸವನ, ತೃತೀಯಸವನಗಳೆಂಬ ಮೂರು ಸವನಗಳಲ್ಲಿಯೂ (ಸೋಮರಸವನ್ನು ಹಿಂಡಿ ತೆಗೆದು ಅಗ್ನಿಯಲ್ಲಿ ವಿಧಿಪೂರ್ವಕವಾಗಿ ಹೋಮಮಾಡುವ ಕರ್ಮಕ್ಕೆ ಸವನವೆಂದು ಹೆಸರು) ಒಬ್ಬೊಬ್ಬರು ಒಂದೊಂದು ಋಕ್ಕನ್ನು ವಷಟ್ಕಾರ ಪೂರ್ವಕವಾಗಿ ಎಂದರೆ ಮಂತ್ರಾಂತ್ಯದಲ್ಲಿ ವೌಷಟ್ ಎಂಬ ಪದವನ್ನು ಸೇರಿಸಿ ಸೋಮವನ್ನು ಅಗ್ನಿಯಲ್ಲಿ ಹೋಮ ಮಾಡುವರು. ಪ್ರಾತಸ್ಸವನಕಾಲದಲ್ಲಿ ಗಾಯತ್ರೀಛಂದಸ್ಸಿನ ಋಕ್ಕುಗಳಿಂದಲೂ, ಮಾಧ್ಯಂದಿನ ಸವನಕಾಲದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಂದಲೂ, ತೃತೀಯಸವನದಲ್ಲಿ ಜಗತೀಛಂದಸ್ಸಿನ ಮಂತ್ರಗಳಿಂದಲೂ ಹೋಮಮಾಡಬೇಕೆಂಬ ವಿಧಿ ಇದೆ. ಆಯಾ ಸವನಕಾಲದಲ್ಲಿ ಆಯಾ ಋತ್ವಿಕ್ಕುಗಳು ಪಠಿಸುವ ಈ ಮಂತ್ರಗಳಿಗೆ ಪ್ರಸ್ಥಿತಯಾಜ್ಯಾಮಂತ್ರಗಳೆಂದು ಅಥವಾ ಸಪ್ತಹೋತ್ರಮಂತ್ರಗಳೆಂದೂ ಹೆಸರು. ಈ ವಿಷಯದ ವಿಸ್ತಾರವಾದ ವಿವರಣೆಗಾಗಿ ಋ. ಸಂ. ಭಾಗ ೧೫, ಪೇಜು 693 ನ್ನು ನೋಡಿ.

———

### ಸಂಹಿತಾಪಾಠಃ

ಅಸ್ಮಾಕಮತ್ರ ಪಿತರೋ ಮನುಷ್ಯಾ ಅಭಿ ಪ್ರ ಸೇದುರ್ಋತಮಾಶುಷಾಣಾಃ।
ಅಶ್ಮವ್ರಜಾಃ ಸುದುಘಾ ವವ್ರೇ ಅಂತರುದುಸ್ರಾ ಆಜನ್ನುಷಸೋ ಹುವಾನಾಃ ॥ ೧೫ ॥

### ಪದಪಾಠಃ

ಅಸ್ಮಾಕಂ । ಅತ್ರ । ಪಿತರಃ । ಮನುಷ್ಯಾಃ । ಅಭಿ । ಪ್ರ । ಸೇದುಃ । ಋತಂ । ಆಶುಷಾಣಾಃ ।
ಅಶ್ಮಽವ್ರಜಾಃ । ಸುಽದುಘಾಃ । ವವ್ರೇ । ಅಂತಃ । ಉತ್ । ಉಸ್ರಾಃ । ಆಜನ್ । ಉಷಸಃ । ಹುವಾನಾಃ ॥

### ಸಾಯಣಭಾಷ್ಯಂ

ಅತ್ರ ಲೋಕೇ ಪೂರ್ವೇ ಮನುಷ್ಯಾ ಅಸ್ಮಾಕಂ ಪಿತರೋಽಂಗಿರಸ ಋತಂ ಯಜ್ಞಮಾಶುಷಾಣಾ ಅಶ್ನುವಾನಾಃ ಸಂತೋಽಭಿ ಪ್ರ ಸೇದುಃ । ಅಗ್ನಿಮಭಿಲಕ್ಷ್ಯ ಪ್ರಜಗ್ಮುಃ । ತೇಽಂಗಿರಸೋಽಗ್ನಿಪರಿಚರ್ಯಾಬಲಾದಶ್ಮವ್ರಜಾಃ ಪರ್ವತೈಃ ಪರಿವೃತಾ ವವ್ರೇ । ವೃಣೋತ್ಯಾಚ್ಛಾದಯತೀತಿ ವವ್ರಂ ಪರ್ವತಬಿಲಾಂತರ್ವರ್ತಿ ತಮಃ । ತಸ್ಮಿನ್ನಂತರ್ಮಧ್ಯೇ ಸ್ಥಿತಾಃ ಸುದುಘಾಃ ಸುಷ್ಠು ದೋಗ್ಧ್ರೀರುಸ್ರಾಃ ಪಣಿಭಿರಪಹೃತಾ



CC-0. Jangamwadi Math Collection. Digitized by eGangotri

**ಗಾ ಉದಾಜನ್ । ತಸ್ಮಾದ್ಬಿಲಾನ್ನಿರಗಮಯನ್ । ಕಿಂ ಕುರ್ವಂತಃ । ತಮಸೋ ವಿಧ್ವಂಸನೀರುಷಸೋ ದೇವೀಃ ಪ್ರಕಾಶಾರ್ಥಂ ಹುವಾನಾ ಆಹ್ವಯಂತಃ ॥ ವವ್ರೇ । ವೃಣೋತೇರೌಣಾದಿಕಃ ಕಃ । ಕೃಞಾದೀನಾಂ ದ್ವೇ ಭವತ ಇತಿ ದ್ವಿರ್ವಚನಂ ॥**

ಪ್ರತಿಪದಾರ್ಥ

(ಎಲೈ ಅಗ್ನಿಯೇ) **ಅತ್ರ**—ಈ ಲೋಕದಲ್ಲಿ । **ಮನುಷ್ಯಾಃ**—ಮರಣಧರ್ಮವುಳ್ಳ । **ಅಸ್ಮಾಕಂ**—ನಮ್ಮ । **ಪಿತರಃ**—ಪಿತೃಪಿತಾಮಹಾದಿಗಳು (ಅಂಗಿರಸ್ಸುಗಳು) । **ಋತಂ**—ಯಜ್ಞವನ್ನು । **ಆಶುಷಾಣಾಃ**—ಸ್ಥಾಪಿಸಿದವರಾಗಿ । **ಅಭಿ ಪ್ರ ಸೇದುಃ**—ಅಗ್ನಿಯನ್ನು ಅಭಿಲಕ್ಷಿಸಿ ಪೂಜಿಸಿದರು (ಆ ಅಗ್ನಿಪೂಜಾಫಲವಾಗಿ) । **ಉಷಸಃ**—ಉಷಸ್ಸನ್ನು । **ಹುವಾನಾಃ**—ಪ್ರಾರ್ಥಿಸುತ್ತಾ । **ಅಶ್ಮವ್ರಜಾಃ**—ಪರ್ವತಗಳಿಂದ ಸುತ್ತುವರಿಯಲ್ಪಟ್ಟ । **ವವ್ರೇ**—ಅಂಧಕಾರದ । **ಅಂತಃ**—ಮಧ್ಯಭಾಗದಲ್ಲಿದ್ದವೂ । **ಸುದುಘಾಃ**—ಶ್ರೇಷ್ಠವಾಗಿ ಕರೆಯತಕ್ಕವೂ ಆದ । **ಉಸ್ರಾಃ**—(ಪಣಿಗಳಿಂದ ಅಪಹೃತವಾದ) ಗೋವುಗಳನ್ನು । **ಉತ್ ಆಜನ್**—ಹೊರಕ್ಕೆ ಬರಮಾಡಿದರು.

ಭಾವಾರ್ಥ

ಎಲೈ ಅಗ್ನಿಯೇ, ಈ ಲೋಕದಲ್ಲಿ ಮರಣಧರ್ಮವುಳ್ಳ ನಮ್ಮ ಪಿತೃಪಿತಾಮಹಾದಿಗಳಾದ ಅಂಗಿರಸ್ಸುಗಳು ಯಜ್ಞವನ್ನು ಸ್ಥಾಪಿಸಿ ನಿನ್ನನ್ನುದ್ದೇಶಿಸಿ ಪೂಜಿಸಿದರು. ಆ ಪೂಜಾಫಲವಾಗಿ ಉಷಸ್ಸನ್ನು ಪ್ರಾರ್ಥಿಸಿ ಪ್ರಕಾಶವನ್ನು ಪಡೆದು ಪರ್ವತಗಳ ನಡುವೆ ಅಂಧಕಾರದಲ್ಲಡಗಿದ್ದವೂ, ಶ್ರೇಷ್ಠವಾಗಿ ಕರೆಯುತಕ್ಕವೂ ಆದ ಗೋವುಗಳನ್ನು ಗುಹೆಯಿಂದ ಹೊರಕ್ಕೆ ಬರಮಾಡಿದರು.

English Translation

In this world our mortal forefathers departed after instituting the sacred rite, when, calling upon the dawn, they extricated the milk-yielding cows, concealed among the rocks in the darkness (of the cave).

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ ಮುಂದಿನ ಎರಡು ಋಕ್ಕುಗಳಲ್ಲಿಯೂ ಅಂಗಿರಾಋಷಿಗಳ ಗೋವುಗಳನ್ನು ಪಣಿಗಳೆಂಬ ಅಸುರರು ಅಪಹರಿಸಿ ಪರ್ವತದ ಗುಹೆಯಲ್ಲಿ ಬಚ್ಚಿಟ್ಟಿದ್ದನ್ನು ಅಂಗಿರಾಋಷಿಗಳು ತಮ್ಮ ಮಂತ್ರಶಕ್ತಿಯಿಂದ ಬಿಡಿಸಿದ ವಿಷಯವು ಉಕ್ತವಾಗಿದೆ. ಈ ವಿಷಯವನ್ನು ನಾವು ಋ. ಸಂ. ಭಾಗ. ೮ ಪೇಜು 189, ಭಾಗ. ೬ ಪೇಜು 365, ಭಾಗ. ೧೦ ಪೇಜು 577 ಇತ್ಯಾದಿ ಸ್ಥಳಗಳಲ್ಲಿ ವಿಸ್ತಾರವಾಗಿ ವಿವರಿಸಿದೇವೆ. ಅಗ್ನಿಸಂಬಂಧವಾದ ಈ ಸೂಕ್ತದಲ್ಲಿ ಅಂಗಿರಾಋಷಿಗಳ ವಿಷಯವು ಬರಲು ಕಾರಣವೇನೆಂಬುದನ್ನು ನಾವು ಋ. ಸಂ. ಭಾಗ. ೧ ಪೇಜು 640-641ರಲ್ಲಿ ವಿಸ್ತಾರವಾಗಿ ವಿವರಿಸಿದೇವೆ.

————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ತೇ ಮರ್ಮೃಜತ ದದೃವಾಂಸೋ ಅದ್ರಿಂ ತದೇಷಾಮನ್ಯೇ ಅಭಿತೋ ವಿ ವೋಚನ್ ।
ಪಶ್ವಯಂತ್ರಾಸೋ ಅಭಿ ಕಾರಮರ್ಚನ್ವಿದಂತ ಜ್ಯೋತಿಶ್ಚಕೃಪಂತ ಧೀಭಿಃ ॥

ಪದಪಾಠಃ

ತೇ । ಮರ್ಮೃಜತ । ದದೃವಾಂಸಃ । ಅದ್ರಿಂ । ತತ್ । ಏಷಾಂ । ಅನ್ಯೇ । ಅಭಿತಃ । ವಿ । ವೋಚನ್ ।
ಪಶ್ವಽಯಂತ್ರಾಸಃ । ಅಭಿ । ಕಾರಂ । ಅರ್ಚನ್ । ವಿದಂತ । ಜ್ಯೋತಿಃ । ಚಕೃಪಂತ । ಧೀಭಿಃ ॥ ೧೪ ॥

ಸಾಯಣಭಾಷ್ಯಂ

ತೇಽಂಗಿರಸೋಽದ್ರಿಂ ಪಣಿಭಿರಪಹೃತಾನಾಂ ಗವಾಂ ನಿರೋಧಕಂ ಪರ್ವತಂ ದದೃವಾಂಸೋ ವಿದಾರಯಂತಃ ಸಂತೋ ಮರ್ಮೃಜತ । ಅಗ್ನಿಂ ಪರ್ಯಚರನ್ । ಏಷಾಮಂಗಿರಸಾಂ ತತ್ತಾದೃಶಂ ಕರ್ಮಾನ್ಯೇ ಮಹರ್ಷಯೋಽಭಿತಃ ಸರ್ವತ್ರ ಜಗತಿ ವಿ ವೋಚನ್ । ವಿಶೇಷೇಣಾಕಥಯನ್ । ಪಶ್ವಯಂತ್ರಾಸಃ ಪಶುನಿರ್ಗಮನಾರ್ಥಾನಿ ಯಂತ್ರಾಣ್ಯುಪಾಯಾ ಯೇಷಾಂ ತೇಽಂಗಿರಸಃ ಕಾರಮಭಿಮತಸ್ಯ ಪ್ರಯೋಜನಸ್ಯ ಕರ್ತಾರಮಗ್ನಿಮಭ್ಯರ್ಚನ್ । ಅಸ್ತುವನ್ । ತತಸ್ತನೋಪಹವಮಾದಿತ್ಯಾಖ್ಯಂ ಜ್ಯೋತಿರ್ವಿದಂತ । ಅಲಭಂತ । ತತೋ ಧೀಭಿರ್ಬುದ್ಧಿಭಿಶ್ಚಕೃಪಂತ । ಯಜ್ಞಾನಕಲ್ಪಯನ್ನಕುರ್ವನ್ ॥ ಮರ್ಮೃಜತ । ಮೃಜೂಷ್ ಶುದ್ಧೌ । ಯಙ್ಲುಕಿ ಲಙಿ ವ್ಯತ್ಯಯೇನಾತ್ಮನೇಪದಂ । ನಿಘಾತಃ । ಚಕೃಪಂತ । ಕೃಪೂ ಸಾಮರ್ಥ್ಯೇ । ಣ್ಯಂತಸ್ಯ ಲುಙಿ ಚಙಿ ಸನ್ವದ್ಭಾವಾಭಾವಶ್ಛಾಂದಸಃ ॥

ಪ್ರತಿಪದಾರ್ಥ

ತೇ—ಆ ಅಂಗಿರಸ್ಸುಗಳು । ಅದ್ರಿಂ—ಗೋವುಗಳನ್ನು ತಡೆದಿದ್ದ ಪರ್ವತದ ಶಿಲೆಗಳನ್ನು । ದದೃವಾಂಸಃ—ಸೀಳುತ್ತಾ । ಮರ್ಮೃಜತ—ಅಗ್ನಿಯನ್ನು ಪಚರಿಸಿದರು । ಏಷಾಂ—ಈ ಅಂಗಿರಸ್ಸುಗಳ । ತತ್—ಆ ಮಹತ್ಕರ್ಮವನ್ನು । ಅನ್ಯೇ—ಇತರ ಋಷಿಗಳು । ಅಭಿತಃ—ಸರ್ವತ್ರ । ವಿ ವೋಚನ್—ಅಧಿಕವಾಗಿ ಪ್ರಶಂಸಿದರು । ಪಶ್ವಯಂತ್ರಾಸಃ—ಪಶುನಿರ್ಗಮನಕ್ಕೆ ಬೇಕಾದ ಉಪಾಯವನ್ನು ತಿಳಿದ ಅಂಗಿರಸ್ಸುಗಳು । ಕಾರಂ—ಇಷ್ಟಾರ್ಥಕಾರಕನಾದ ಅಗ್ನಿಯನ್ನು । ಅರ್ಚನ್—ಸ್ತುತಿಸಿದರು (ಅನಂತರ) । ಜ್ಯೋತಿಃ—ಆದಿತ್ಯರೂಪವಾದ ಜ್ಯೋತಿಯನ್ನು । ವಿದಂತ—ಪಡೆದರು । ಧೀಭಿಃ—ತಮ್ಮ ಪ್ರಜ್ಞೆಗಳಿಂದ । ಚಕೃಪಂತ—ಯಜ್ಞಾದಿಗಳನ್ನು ನೆರವೇರಿಸಿದರು.

CC-0. Jangamwadi Math Collection. Digitized by eGangotri

ಭಾವಾರ್ಥ

ಅಂಗಿರಸ್ಸುಗಳು ಗೋವುಗಳನ್ನು ತಡೆದಿದ್ದ ಪರ್ವತದ ಶಿಲೆಗಳನ್ನು ಸೀಳುತ್ತಾ ಅಗ್ನಿಯನ್ನುಪಚರಿಸಿದರು. ಈ ಅಂಗಿರಸ್ಸುಗಳ ಆ ಮಹತ್ಕರ್ಮವನ್ನು ಇತರ ಋಷಿಗಳು ಎಲ್ಲಾ ಕಡೆಗಳಲ್ಲಿಯೂ ಅಧಿಕವಾಗಿ ಪ್ರಶಂಸಿಸಿದರು. ಪಶುನಿರ್ಗಮನಕ್ಕೆ ಬೇಕಾದ ಉಪಾಯವನ್ನು ತಿಳಿದ ಅಂಗಿರಸ್ಸುಗಳು ಇಷ್ಟಾರ್ಥ ಕಾರಕನಾದ ಅಗ್ನಿಯನ್ನು ಸ್ತುತಿಸಿದರು. ಅನಂತರ ಆದಿತ್ಯರೂಪವಾದ ಜ್ಯೋತಿಯನ್ನು ಪಡೆದರು. ತಮ್ಮ ಪ್ರಜ್ಞೆಗಳಿಂದ ಯಜ್ಞಾದಿಕರ್ಮಗಳನ್ನು ನೆರವೇರಿಸಿದರು.

English Translation

Rending the rocks, they worshipped (Agni), and other (sages) taught everywhere their (acts): unprovided with the means of (extricating) the cattle, they glorified the author of success, whence they found the light, and were thus enabled (to worship him) with holy ceremonies:

---

ಸಂಹಿತಾಪಾಠಃ

ತೇ ಗವ್ಯತಾ ಮನಸಾ ದೃಧ್ರಮುಬ್ಧಂ ಗಾ ಯೇಮಾನಂ ಪರಿ ಷಂತಮದ್ರಿಂ।

ದೃಳ್ಹಂ ನರೋ ವಚಸಾ ದೈವ್ಯೇನ ವ್ರಜಂ ಗೋಮಂತಮುಶಿಜೋ ವಿ ವವ್ರುಃ॥೫॥

ಪದಪಾಠಃ

ತೇ । ಗವ್ಯತಾ । ಮನಸಾ । ದೃಧ್ರಂ । ಉಬ್ಧಂ । ಗಾಃ । ಯೇಮಾನಂ । ಪರಿ । ಸಂತಂ । ಅದ್ರಿಂ ।

ದೃಳ್ಹಂ । ನರಃ । ವಚಸಾ । ದೈವ್ಯೇನ । ವ್ರಜಂ । ಗೋಽಮಂತಂ । ಉಶಿಜಃ । ವಿ । ವವ್ರುರಿತಿ ವವ್ರುಃ ॥ ೧೫ ॥

ಸಾಯಣಭಾಷ್ಯಂ

ನರಃ ಕರ್ಮಣಾಂ ನೇತಾರ ಉಶಿಜೋಽಗ್ನಿಂ ಕಾಮಯಮಾನಾಸ್ತೇಽಂಗಿರಸೋ ಗವ್ಯತಾ ಗಾ ಇಚ್ಛತಾ ಮನಸಾ ದೃಧ್ರಂ ಗವಾಂ ನಿರ್ಗಮನದ್ವಾರನಿರೋಧಕಮುಬ್ಧಂ ಸಮುಬ್ಧಂ ಸಂಹತಂ । ಯದ್ವಾ । ಉಭಿಃ ಪೂರಣಾರ್ಥಃ । ಗೋಭಿಃ ಪೂರ್ಣಂ ಗಾ ಯೇಮಾನಂ ನಿಯಚ್ಛಂತಂ ಪರಿ ಸರ್ವತಃ ಸಂತಂ ವರ್ತಮಾನಂ ಧೃಳ್ಹಂ ದೃಢಂ ಗೋಮಂತಂ ಗೋಭಿರ್ಯುಕ್ತಂ ವ್ರಜಂ ಗವಾಂ ನಿವಾಸಸ್ಥಾನಮದ್ರಿಂ ಪರ್ವತಂ ದೈವ್ಯೇನಾಗ್ನಿವಿಷಯೇಣ ವಚಸಾ ವೇದಾತ್ಮಕೇನ ಸ್ತೋತ್ರೇಣ ವಿ ವವ್ರುಃ । ಗೋನಿರ್ಗಮನಾರ್ಥಮು-

CC-0. Jangamwadi Math Collection. Digitized by eGangotri

ದ್ಬಾಟಿತವಂತಃ ‖ ಉಬ್ಧಂ । ಉಭ್ನಾತಿರ್ಹಂತಿನಾ ಸಮಾನಾರ್ಥಃ । ಯದ್ವಾ । ಉಭ ಉನ್ಭ ಪೂರಣೇ । ಕರ್ಮಣಿ ಕ್ತಃ । ಯೇಮಾನಂ । ಯಮೇಃ ಕಾನಚ್ಯೇತ್ವಾಭ್ಯಾಸಲೋಪ್ । ಚಿತ್ತ್ವಾದಂತೋದಾತ್ತಃ । ಪರಿ ಷಂತಮಿತ್ಯತ್ರ ಸಂಹಿತಾಯಾಮುಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್‌ಪರ ಇತಿ ಷತ್ವಂ ‖

ಪ್ರತಿಪದಾರ್ಥ

**ನರಃ**—ಕರ್ಮಗಳಿಗೆ ನೇತೃಗಳೂ । **ಉಶಿಜಃ**—ಅಗ್ನಿಯ ಸಾಹಾಯ್ಯವನ್ನಪೇಕ್ಷಿಸುವವರೂ ಆದ । **ತೇ**—ಅಂಗಿರಸ್ಸುಗಳು । **ಗವ್ಯತಾ ಮನಸಾ**—ಗೋವುಗಳನ್ನು ಪಡೆಯುವ ಮನಸ್ಸಿನಿಂದ । **ದೃಧ್ರಂ**—ತಡೆಯಾಗಿರ ತಕ್ಕದ್ದೂ । **ಉಬ್ಧಂ**—ಒತ್ತಡವಾಗಿರತಕ್ಕದ್ದೂ । **ಗಾ ಯೇಮಾನಂ**—ಗೋವುಗಳನ್ನು ತಡೆದಿರತಕ್ಕದ್ದೂ । **ಪರಿ**—ಸುತ್ತಲೂ । **ಸಂತಂ**—ವ್ಯಾಪಿಸಿರತಕ್ಕದ್ದೂ । **ದೃಳ್ಹಂ**—ಕಠಿಣವಾಗಿರತಕ್ಕದ್ದೂ । **ಗೋಮಂತಂ**—ಗೋವುಗಳಿಂದ ಪೂರ್ಣವಾಗಿರತಕ್ಕದ್ದೂ । **ವ್ರಜಂ**—ಗೋವುಗಳ ನಿವಾಸಸ್ಥಾನವಾಗಿರತಕ್ಕದ್ದೂ ಆದ । **ಅದ್ರಿಂ**—ಪರ್ವತವನ್ನು । **ದೈವ್ಯೇನ**—ಅಗ್ನಿವಿಷಯಕವಾದ । **ವಚಸಾ**—ಸ್ತುತಿಗಳ ಸಹಾಯದಿಂದ । **ವಿ ವವ್ರುಃ**—ಸೀಳಿ ಬಿಡಿಸಿದರು.

ಭಾವಾರ್ಥ

ಕರ್ಮಗಳಿಗೆ ನೇತೃಗಳೂ ಅಗ್ನಿಯ ಸಾಹಾಯ್ಯವನ್ನಪೇಕ್ಷಿಸುವವರೂ ಆದ ಅಂಗಿರಸ್ಸುಗಳು ಗೋವುಗಳನ್ನು ಪಡೆಯುವ ಇಚ್ಛೆಯಿಂದ ಗೋವುಗಳನ್ನು ತಡೆದಿರತಕ್ಕದ್ದೂ, ಒತ್ತಡವಾಗಿರತಕ್ಕದ್ದೂ, ಸುತ್ತಲೂ ವ್ಯಾಪಿಸಿರತಕ್ಕದ್ದೂ, ಕಠಿಣವಾಗಿರತಕ್ಕದ್ದೂ, ಗೋವುಗಳಿಗೆ ಕೊಟ್ಟಿಗೆಯ ರೂಪದಲ್ಲಿರತಕ್ಕದ್ದೂ ಆದ ಪರ್ವತದ ಪ್ರವೇಶಭಾಗವನ್ನು ಅಗ್ನಿ ವಿಷಯಕವಾದ ಸ್ತುತಿಗಳ ಸಹಾಯದಿಂದ ಸೀಳಿ ಬಿಡಿಸಿಕೊಂಡರು.

English Translation

Devoted (to Agni), those leaders (of sacred rites), with minds intent upon (recovering) the cattle, forced open, by (the power) of divine prayer, the obstructing, compact, solid mountain confining the cows, a cow-pen full of cows.

---

ಸಂಹಿತಾಪಾಠಃ

ತೇ ಮನ್ವತ ಪ್ರಥಮಂ ನಾಮ ಧೇನೋಸ್ತ್ರಿಃ ಸಪ್ತ ಮಾತುಃ ಪರಮಾಣಿ ವಿಂದನ್ ।

ತಜ್ಜಾನತೀರಭ್ಯನೂಷತ ವ್ರಾ ಆವಿರ್ಭುವದರುಣೀರ್ಯಶಸಾ ಗೋಃ ‖ ೧೬ ।

CC-0. Jangamwadi Math Collection. Digitized by eGangotri

ಪದಪಾಠಃ

ತೇ । ಮನ್ವತ । ಪ್ರಥಮಂ । ನಾಮ । ಧೇನೋಃ । ತ್ರಿಃ । ಸಪ್ತ । ಮಾತುಃ । ಪರಮಾಣಿ । ವಿಂದನ್ ।

ತತ್ । ಜಾನತೀಃ । ಅಭಿ । ಅನೂಷತ । ವ್ರಾಃ । ಆವಿಃ । ಭುವತ್ । ಅರುಣೀಃ । ಯಶಸಾ । ಗೋಃ ॥ ೧೬॥

ಸಾಯಣಭಾಷ್ಯಂ

ಹೇ ಅಗ್ನೇ ತೇ ಸ್ತೋತ್ರಂ ಕುರ್ವಾಣಾ ಅಂಗಿರಸೋ ಮಾತುರ್ಜನನ್ಯಾ ಧೇನೋರ್ವಾಚಃ ಸಂಬಂಧಿ ನಾಮ ಸ್ತುತಿಸಾಧಕಂ ಶಬ್ದಮಾತ್ರಂ ಪ್ರಥಮಂ ಪೂರ್ವಂ ಮನ್ವತ । ಅಜಾನತ । ಪಶ್ಚಾತ್ತಸ್ಯಾ ವಾಚಃ ಸಂಬಂಧೀನಿ ತ್ರಿಃ ಸಪ್ತೈಕವಿಂಶತಿಸಂಖ್ಯಾಕಾನಿ ಸ್ತುತಿಸಾಧನಾನಿ ಛಂದಾಂಸಿ । ತಾನಿ ಚ ಗಾಯತ್ರ್ಯಾದೀನಿ ಜಗತ್ಯಂತಾನಿ ಸಪ್ತ । ಅತಿಜಗತ್ಯಾದೀನ್ಯತಿಧೃತ್ಯಂತಾನಿ ಸಪ್ತ । ಕೃತಿಪ್ರಭೃತೀನ್ಯುತ್ಕೃತಿಪರ್ಯಂತಾನಿ ಸಪ್ತೇತಿ । ಏವಂ ತ್ರಿಃ ಸಪ್ತ ಛಂದಾಂಸಿ ಪರಮಾಣ್ಯುತ್ತಮಾನಿ ವಿಂದನ್ । ಅಲಭಂತ । ಏವಂವಿಧಚ್ಛಂದೋಯುಕ್ತೈರ್ಮಂತ್ರೈರಗ್ನಿಮಸ್ತುವನ್ನಿತ್ಯರ್ಥಃ । ತತ್ತತೋ ಜಾನತೀಃ ಸರ್ವಂ ಜಾನಾನಾ ವ್ರಾಃ । ವ್ರಾ ಇತ್ಯುಷೋನಾಮ । ಉಷಸೋಽಭ್ಯನೂಷತ । ಅಸ್ತುವನ್ । ತತೋ ಗೋಃ ಸೂರ್ಯಸ್ಯ ಯಶಸಾ ತೇಜಸಾ ಸಹಾರುಣೀರರುಣವರ್ಣೋಷಾ ಆವಿರ್ಭುವತ್ ಆವಿರಭೂತ್ । ಯದ್ವಾ । ತೇಽಂಗಿರಸಃ ಪ್ರಥಮಂ ಪುರಾತನಂ ನಾಮ ಏಹಿ ಸುರಭಿ ಗುಗ್ಗುಲು ಗಂಧಿನೀತಿ ಧೇನೋರ್ನಾಮಧೇಯಂ ಮನ್ವತ। ಉಚ್ಚಾರಯಾಮಾಸುಃ । ಮಾತುರ್ಭೂಮ್ಯಾಃ ಸ್ವಭೂತಾನಿ ಪಣಿಭಿರಪಹೃತಾನಿ ತ್ರಿಃ ಸಪ್ತ ರತ್ನಾನಿ ವಿಂದನ್ । ತತ ಉಚ್ಚರಿತಂ ನಾಮ ಜಾನಂತ್ಯೋ ಗಾವೋಽಭ್ಯನೂಷತ । ಹಂಭಾರವಲಕ್ಷಣಂ ಶಬ್ದಮಕುರ್ವನ್ । ತದಾನೀಮುಷಾಃ ಪ್ರಾದುರಭೂದಿತಿ ॥ ಜಾನತೀಃ । ಏಕಸ್ಮಿನ್ಪಕ್ಷೇ ವಾ ಛಂದಸೀತಿ ಪೂರ್ವಸವರ್ಣದೀರ್ಘಃ । ಉಭಯತ್ರ ಶತುರನುಮೋ ನದ್ಯಜಾದೀತಿ ಙೀಪ ಉದಾತ್ತತ್ವಂ । ಅನೂಷತ । ಣು ಸ್ತುತೌ । ಲುಙಿ ರೂಪಂ । ಕುಟಾದಿತ್ವಾದಗುಣಃ । ಅರುಣೀಃ । ಸೋರಲೋಪಶ್ಛಂದಸೋ ಗೌರೀಮಿರ್ಮಾಯ । ಋಗ್ವೇ. ೧-೧೬೪-೪೧ । ಇತಿವತ್ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ತೇ—ಸ್ತುತಿಕರ್ತರಾದ ಅಂಗಿರಸ್ಸುಗಳು । ಮಾತುಃ—ಜನನೀರೂಪದ । ಧೇನೋಃ-ಸ್ತುತಿರೂಪವಾದ ವಾಕ್ಸಂಬಂಧಿಯಾದ । ನಾಮ—ಶಬ್ದದ ಸ್ವರೂಪವನ್ನು ಮಾತ್ರ । ಪ್ರಥಮಂ—ಮೊದಲು । ಮನ್ವತ—ತಿಳಿದರು (ಅನಂತರ) । ತ್ರಿಃ ಸಪ್ತ—ಏಕವಿಂಶತಿ (ಇಪ್ಪತ್ತೊಂದು) ಸಂಖ್ಯಾಕವಾದವೂ । ಪರಮಾಣಿ-ಉತ್ಕೃಷ್ಟವಾದವೂ ಆದ ಛಂದಸ್ಸುಗಳನ್ನು । ವಿಂದನ್—ಅರಿತರು । ತತ್—ಆ ಮೇಲೆ । ಜಾನತೀಃ—ಸರ್ವಜ್ಞರಾದ । ವ್ರಾಃ—ಉಷಸ್ಸುಗಳನ್ನು । ಅಭ್ಯನೂಷತ—ಸ್ತುತಿಸಿದರು । ಗೋಃ—ಆದಿತ್ಯನ । ಯಶಸಾ—ತೇಜಸ್ಸಿನೊಡನೆ ಕೂಡಿಕೊಂಡು । ಅರುಣೀಃ—ಹೊಂಬಣ್ಣವುಳ್ಳ ಉಷಸ್ಸು । ಆವಿರ್ಭುವತ್—ಆವಿರ್ಭೂತಳಾದಳು.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ಸ್ತುತಿಕರ್ತರಾದ ಅಂಗಿರಸ್ಸುಗಳು ಜನನೀರೂಪದ ಸ್ತುತಿಯ ಶಬ್ದಸ್ವರೂಪವನ್ನು ಮಾತ್ರ ಮೊದಲು ತಿಳಿದರು. ಅನಂತರ ಏಕವಿಂಶತಿಸಂಖ್ಯಾಕವಾದವೂ ಉತ್ಕೃಷ್ಟವಾದವೂ ಆದ ಛಂದಸ್ಸುಗಳನ್ನು ಅರಿತರು. ಆ ಮೇಲೆ ಸರ್ವಜ್ಞರಾದ ಉಷಸ್ಸುಗಳನ್ನು ಸ್ತುತಿಸಿದರು. ಆದಿತ್ಯನ ತೇಜಸ್ಸಿನೊಡನೆ ಕೂಡಿಕೊಂಡು ಹೊಂಬಣ್ಣವುಳ್ಳ ಉಷಸ್ಸು ಆವಿರ್ಭೂತಳಾದಳು.

English Translation

They first have comprehended the name of the cows, knowing the thrice seven excellent (forms) of the maternal (rhythm); then they glorified the conscious dawns, and the purple dawn appeared with the radiance of the sun.

ವಿಶೇಷವಿಷಯಗಳು

ತ್ರಿಃ ಸಪ್ತ ಪರಮಾಣಿ—ಇಪ್ಪತ್ತೊಂದು ಛಂದಸ್ಸುಗಳನ್ನು ಎಂದು ಭಾಷ್ಯಕಾರರು ವಿವರಿಸಿದಾರೆ ಅವುಗಳು ಯಾವವೆಂದರೆ-

I. ಗಾಯತ್ರ್ಯಾದೀನಿ ಜಗತ್ಯಂತಾನಿ ಸಪ್ತ-ಗಾಯತ್ರಿಯೇ ಮೊದಲಾದ ಜಗತೀಛಂದಸ್ಸಿನವರೆಗಿರುವ ಏಳು ಛಂದಸ್ಸುಗಳು. (೧) ಗಾಯತ್ರೀ (೨) ಉಷ್ಣಿಕ್ (೩) ಅನುಷ್ಟುಪ್ (೪) ಬೃಹತೀ (೫) ಪಂಕ್ತಿಃ (೬) ತ್ರಿಷ್ಟುಪ್ (೭) ಜಗತೀ ಎಂಬ ಏಳು ಛಂದಸ್ಸುಗಳು.

II. ಅತಿಜಗತ್ಯಾದೀನ್ಯತಿಧೃತ್ಯಂತಾನಿ ಸಪ್ತ-ಅತಿಜಗತಿಯೇ ನೊದಲಾದ ಅತಿಧೃತಿಯವರೆಗಿರುವ ಏಳುಛಂದಸ್ಸುಗಳು. (೧) ಅತಿಜಗತೀ (೨) ಶಕ್ವರೀ (೩) ಅತಿಶಕ್ವರೀ (೪) ಅಷ್ಟಿಃ (೫) ಅತ್ಯಷ್ಟಿಃ (೬) ಧೃತಿಃ (೭) ಅತಿಧೃತಿಃ ಎಂಬ ಏಳುಛಂದಸ್ಸುಗಳು.

III. ಕೃತಿಪ್ರಭೃತೀನ್ಯುತ್ಕೃತಿಪರ್ಯಂತಾನಿ ಸಪ್ತ—ಕೃತಿ ಎಂಬ ಛಂದಸ್ಸೇ ಮೊದಲಾದ ಉತ್ಕೃತಿಯ ವರೆಗಿರುವ ಏಳು ಛಂದಸ್ಸುಗಳು. (೧) ಕೃತಿಃ (೨) ಪ್ರಕೃತಿಃ (೩) ಆಕೃತಿಃ (೪) ವಿಕೃತಿಃ (೫) ಸಂಕೃತಿಃ (೬) ಅಭಿಕೃತಿಃ (೭) ಉತ್ಕೃತಿಃ ಎಂಬ ಏಳು ಛಂದಸ್ಸುಗಳು ಈ ಮೂರು ಪಂಗಡಗಳಿಂದ ಆಗುವ ಒಟ್ಟು ಇಪ್ಪತ್ತೊಂದು ವಿಧವಾದ ಛಂಸ್ಸುಗಳೆಂದಭಿಭಿಪ್ರಾಯವು.

---

ಸಂಹಿತಾಪಾಠಃ

ನೇಶತ್ತಮೋ ದುಧಿತಂ ರೋಚತ ದ್ಯೌರುದ್ದೇವ್ಯಾ ಉಷಸೋ ಭಾನುರರ್ತ।

ಆ ಸೂರ್ಯೋ ಬೃಹತಸ್ತಿಷ್ಠದಜ್ರಾಂ ಋಜು ಮರ್ತೇಷು ವೃಜಿನಾ ಚ

ಪಶ್ಯನ್ ॥ ೧೭ ॥

CC-0. Jangamwadi Math Collection. Digitized by eGangotri

ಪದಪಾಠಃ

ನೇಶತ್ । ತಮಃ । ದುಧಿತಂ । ರೋಚತ । ದ್ಯೌಃ । ಉತ್ । ದೇವ್ಯಾಃ । ಉಷಸಃ । ಭಾನುಃ । ಅರ್ತ ।

ಆ । ಸೂರ್ಯಃ । ಬೃಹತಃ । ತಿಷ್ಠತ್ । ಅಜ್ರಾನ್ । ಋಜು । ಮರ್ತೇಷು । ವೃಜಿನಾ । ಚ । ಪಶ್ಯನ್ ॥

ಸಾಯಣಭಾಷ್ಯಂ

ತಮೋ ರಾತ್ರಿಕೃತಂ ಧ್ವಾಂತಂ ದುಧಿತಂ । ದುಧಿಃ ಪ್ರೇರಣಕರ್ಮಾ । ಪ್ರಾತರಗ್ನಿವಿಹರಣಕಾಲ ಉಷಸಾ ಪ್ರೇರಿತಂ ಸತ್ ನೇಶತ್ । ಅನಶ್ಯತ । ತತೋ ದ್ಯೌರಂತರಿಕ್ಷಂ ರೋಚತ । ಅದೀಪ್ಯತ । ತತೋ ದೇವ್ಯಾ ದೇವನಶೀಲಾಯಾ ಉಷಸೋ ಭಾನುಃ ಪ್ರಭೋದರ್ತ । ಉದ್ಗಚ್ಛತಿ । ಅಥ ಸೂರ್ಯೋ ಬೃಹತೋ ಮಹತೋಽಜ್ರಾನಜರಾನ್ಪರ್ವತಾನ್ ಗಮನಶೀಲಾನ್ರಶ್ಮೀನ್ವಾ ತಿಷ್ಠತ್ । ಅಧ್ಯತಿಷ್ಠತ್ । ಕಿಂ ಕುರ್ವನ್ ಮರ್ತೇಷು ಮನುಷ್ಯೇಷು ವಿದ್ಯಮಾನಮೃಜು ಸತ್ಕರ್ಮ ವೃಜಿನಾನ್ಯಜೂನ್ಯಸತ್ಕರ್ಮಾಣಿ ಚ ಪಶ್ಯನ್ । ಅಧ್ಯತಿಷ್ಠದಿತಿ ಶೇಷಃ ॥ ನೇಶತ್ । ಣಶ ಅದರ್ಶನೇ । ಲಙಿ ಣಶಿಮನ್ಯೋರಲಿಟ್ಯೇತ್ವಂ ವಕ್ತವ್ಯಮಿ-ತ್ಯೇತ್ವಂ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ರೋಚತ । ರುಚ ದೀಪ್ತೌ । ಲಙಿ ರೂಪಂ । ವಾಕ್ಯಭೇದಾದನಿಘಾತಃ ॥

ಪ್ರತಿಪದಾರ್ಥ

ತಮಃ—ಕಗ್ಗತ್ತಲೆಯು । ದುಧಿತಂ—(ಉಷಸ್ಸಿನಿಂದ) ಓಡಿಸಲ್ಪಟ್ಟ । ನೇಶತ್—ನಾಶವಾಯಿತು । ದ್ಯೌಃ—ಅಂತರಿಕ್ಷವು । ರೋಚತ—ಪ್ರಕಾಶಿಸಿತು । ದೇವ್ಯಾಃ—ಪ್ರಕಾಶಮಾನಳಾದ । ಉಷಸಃ—ಉಷಸ್ಸಿನ । ಭಾನುಃ—ಪ್ರಭೆಯು । ಉತ ಅರ್ತ—ಊರ್ಧ್ವಮುಖವಾಗಿ ಪ್ರಸರಿಸುತ್ತದೆ । ಸೂರ್ಯಃ—ಆದಿತ್ಯನು । ಮರ್ತೇಷು—ಮಾನವರಲ್ಲಿ । ಋಜು—ಸತ್ಯಾತ್ಮಕವಾದ ಕರ್ಮಗಳನ್ನೂ । ವೃಜನಾ ಚ—ಮೋಸಕೃತ್ಯಗಳನ್ನೂ । ಪಶ್ಯನ್—ವೀಕ್ಷಿಸುತ್ತಾ । ಬೃಹತಃ—ಮಹತ್ತಾದವೂ । ಅಜ್ರಾನ್—ಜರಾರಹಿತವಾದವೂ ಆದ ಕಿರಣಗಳನ್ನು । ಆ ತಿಷ್ಠತ್—ಪಡೆದು ಪ್ರಕಾಶಿಸುತ್ತಾನೆ ।

ಭಾವಾರ್ಥ

ಉಷಸ್ಸಿನಿಂದ ಓಡಿಸಲ್ಪಟ್ಟ ಕಗ್ಗತ್ತಲೆಯು ನಾಶವಾಯಿತು. ಅಂತರಿಕ್ಷವು ಪ್ರಕಾಶಿಸಿತು. ಉಷಸ್ಸಿನ ಪ್ರಭೆಯು ಊರ್ಧ್ವಮುಖವಾಗಿ ಪ್ರಸರಿಸುತ್ತದೆ. ಆದಿತ್ಯನು ಮಾನವರಲ್ಲಿ ನಡೆಯುತಕ್ಕ ಸತ್ಯಾತ್ಮಕವಾದ ಕರ್ಮಗಳನ್ನೂ ಮೋಸಕೃತ್ಯಗಳನ್ನೂ ವೀಕ್ಷಿಸುತ್ತ ಮಹತ್ತಾದವೂ ಜರಾರಹಿತವಾದವೂ ಆದ ಕಿರಣಗಳನ್ನು ಪಡೆದು ಪ್ರಕಾಶಿಸುತ್ತಾನೆ.

English Translation

The scattered darkness was destroyed; the firmament glowed with radiance; the lustre of the divine dawn arose: then the sun stood above the *undecaying mountains, beholding all that was right or wrong among mankind.*

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಆದಿತ್ಪಶ್ಚಾ ಬುಬುಧಾನಾ ವ್ಯಖ್ಯನ್ನಾದಿದ್ರತ್ನಂ ಧಾರಯಂತ ದ್ಯುಭಕ್ತಂ ।

ವಿಶ್ವೇ ವಿಶ್ವಾಸು ದುರ್ಯಾಸು ದೇವಾ ಮಿತ್ರ ಧಿಯೇ ವರುಣ ಸತ್ಯಮಸ್ತು ॥

ಪದಪಾಠಃ

ಆತ್ । ಇತ್ । ಪಶ್ಚಾ । ಬುಬುಧಾನಾಃ । ವಿ । ಅಖ್ಯನ್ । ಆತ್ । ಇತ್ । ರತ್ನಂ । ಧಾರಯಂತ ।

ದ್ಯುऽಭಕ್ತಂ ।

ವಿಶ್ವೇ । ವಿಶ್ವಾಸು । ದುರ್ಯಾಸು । ದೇವಾಃ । ಮಿತ್ರ । ಧಿಯೇ । ವರುಣ । ಸತ್ಯಂ । ಅಸ್ತು ॥ ೧೮ ॥

ಸಾಯಣಭಾಷ್ಯಂ

ಆದಿತ್ಸೂರ್ಯೋದಯಾದನಂತರಂ ಬುಬುಧಾನಾಃ ಪಣಿಭಿರಪಹೃತಾ ನಿರೋಧಾನ್ನಿರ್ಗತಾ ಗಾ ಜಾನಾನಾ ಅಂಗಿರಸಃ ಪಶ್ಚಾ ಪೃಷ್ಠ್ಯದೇಶೇಷು ವ್ಯಖ್ಯನ್ । ಅಶೇಷೇಣ ತಾ ಗಾ ಅಪಶ್ಯನ್ । ತಥಾದಿದನಂತರಂ ದ್ಯುಭಕ್ತಂ ದೀಪ್ತಿಯುಕ್ತಂ ದೇವೈಃ ಸಂಭಕ್ತಂ ವಾ ರತ್ನಂ ಪಣಿಭಿರಪಹೃತಂ ಧನಂ ಚ ಧಾರಯಂತ । ಅಧಾರಯನ್ । ಲಬ್ಧಗೋಧನಾನಾಮಂಗಿರಸಾಂ ವಿಶ್ವಾಸು ದುರ್ಯಾಸು ಸರ್ವೇಷು ಗೃಹೇಷು ವಿಶ್ವೇ ಯಜನೀಯಾಃ ಸರ್ವೇ ದೇವಾ ಆಜಗ್ಮುಃ । ಹೇ ಮಿತ್ರ ಮಿತ್ರಭೂತ ಹೇ ವರುಣೋಪದ್ರವಾಣಾಂ ವಾರಕ ಹೇ ಅಗ್ನೇ ಧಿಯೇ ಕರ್ಮಣಾಂ ಕರ್ತ್ರೇ ಸ್ತೋತ್ರೇ ವಾ ಯಜಮಾನಾಯ ಸತ್ಯಮಸ್ತು । ಯದೇತತ್ತ್ವೋಪದ್ರವವಾರಣಸಾಮರ್ಥ್ಯಂ ತದ್ಯಥಾರ್ಥಭೂತಮಸ್ತು ॥ ಪಶ್ಚಾ । ಪಶ್ಚ ಪಶ್ಚಾ ಚ ಛಂದಸೀತಿ ನಿಪಾತಿತಃ । ಬುಬುಧಾನಾಃ । ಬುಧೇರ್ಲಿಟಿ ಕಾನಚಿ ರೂಪಂ । ಚಿತ್ತ್ವಾದಂತೋದಾತ್ತಃ । ದ್ಯುಭಕ್ತಂ । ಭಜ ಸೇವಾಯಾಂ । ಕರ್ಮಣಿ ಕ್ತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರಃ ॥

ಪ್ರತಿಪದಾರ್ಥ

ಆದಿತ್—ಸೂರ್ಯೋದಯಾನಂತರವೇ । ಬುಬುಧಾನಾಃ—ಗೋವುಗಳನ್ನು ತಿಳಿದ ಅಂಗಿರಸ್ಸುಗಳು । ಪಶ್ಚಾ—ತಮ್ಮ ಹಿಂಭಾಗಗಳಲ್ಲಿ । ವ್ಯಖ್ಯನ್—ಗೋವುಗಳನ್ನು ನೋಡಿದರು । ಆದಿತ್—ಒಡನೆಯೇ । ದ್ಯುಭಕ್ತಂ—ಪ್ರಕಾಶಯುಕ್ತವಾದ । ರತ್ನಂ—ಧನವನ್ನು । ಧಾರಯಂತ—ಪಡೆದರು । ವಿಶ್ವಾಸು—ಸಮಸ್ತವಾದ । ದುರ್ಯಾಸು—ಯಜ್ಞಗೃಹಗಳಲ್ಲಿಯೂ । ವಿಶ್ವೇ ದೇವಾಃ—ಸಮಸ್ತದೇವತೆಗಳೂ ಬಂದು ಸೇರಿದರು । ಮಿತ್ರ—ಎಲೈ ಮಿತ್ರನೇ । ವರುಣ—ಹಿಂಸೆಗಳನ್ನು ನಾಶಮಾಡತಕ್ಕ ವರುಣನೇ (ಅಗ್ನಿಯೇ) । ಧಿಯೇ—ಸ್ತುತಿಕರ್ತನಾದ ಯಜಮಾನನಿಗೆ । ಸತ್ಯಂ ಅಸ್ತು—ಸತ್ಯಾತ್ಮಕವಾದ ಜೀವನವಿರಲಿ ।

CC-0. Jangamwadi Math Collection. Digitized by eGangotri

ಭಾವಾರ್ಥ

ಅಂಗಿರಸ್ಸುಗಳು ಸೂರ್ಯೋದಯವಾದನಂತರವೇ ತಮ್ಮ ಗೋವುಗಳನ್ನು ನೋಡಿದರು. ಒಡನೆಯೇ ಪ್ರಕಾಶ ಯುಕ್ತವಾದ ಧನವನ್ನು ಪಡೆದರು. ಸಮಸ್ತವಾದ ಯಜ್ಞಗೃಹಗಳಲ್ಲಿಯೂ ಸಹ ಸಮಸ್ತವಾದ ದೇವತೆಗಳೂ ಬಂದು ಸೇರಿದರು. ಎಲೈ ಮಿತ್ರಾವರುಣರೇ, ನಿಮ್ಮ ಅನುಗ್ರಹದಿಂದ ಸ್ತುತಿಕರ್ತನಾದ ಯಜಮಾನನಿಗೆ ಸತ್ಯಾತ್ಮಕವಾದ ಜೀವನವಿರಲಿ.

English Translation

Thereupon awaking, the (Angirasas) beheld (the cattle set free), and seized upon the precious treasures: the universal gods then came to all (their) dwellings: Mitra and Varuna, may your truth be (kept) to him who worships (you).

———

ಸಂಹಿತಾಪಾಠಃ

ಅಚ್ಛಾ ವೋಚೇಯ ಶುಶುಚಾನಮಗ್ನಿಂ ಹೋತಾರಂ ವಿಶ್ವಭರಸಂ ಯಜಿಷ್ಠಂ ।
ಶುಚ್ಯೂಧೋ ಅತೃಣನ್ನ ಗವಾಮಂಧೋ ನ ಪೂತಂ ಪರಿಷಿಕ್ತಮಂಶೋಃ ॥

ಪದಪಾಠಃ

ಅಚ್ಛ । ವೋಚೇಯ । ಶುಶುಚಾನಂ । ಅಗ್ನಿಂ । ಹೋತಾರಂ । ವಿಶ್ವಽಭರಸಂ । ಯಜಿಷ್ಠಂ ।
ಶುಚಿ । ಊಧಃ । ಅತೃಣತ್ । ನ । ಗವಾಂ । ಅಂಧಃ । ನ । ಪೂತಂ । ಪರಿಽಸಿಕ್ತಂ । ಅಂಶೋಃ ॥ ೧೯ ॥

ಸಾಯಣಭಾಷ್ಯಂ

ಹೇ ಅಗ್ನೇ ಶುಶುಚಾನಂ ಭೃಶಂ ದೀಪ್ಯಮಾನಂ ಹೋತಾರಂ ದೇವಾನಾಮಾಹ್ವಾತಾರಂ ವಿಶ್ವಭರಸಮಾಹುತಿದ್ವಾರಾ ವೃಷ್ಟಿಪ್ರದಾನೇನ ವಿಶ್ವಸ್ಯ ಪೋಷಕಂ ಯಜಿಷ್ಠಂ ಯಷ್ಟೃತಮಮಗ್ನಿಂ ತ್ವಾಮಚ್ಛಾಭಿಲಕ್ಷ್ಯ ವೋಚೇಯ । ಸ್ತವಾನಿ । ಗವಾಮೂಧಃ ಶುಚಿ ಶುದ್ಧಂ ಪಯೋ ನಾತೃಣತ್ । ತನಾಹುತ್ಯರ್ಥಂ ಯಜಮಾನೋ ನ ದೋಗ್ಧಿ । ಅಂಶೋಃ ಸೋಮಲತಾಖಂಡಸ್ಯ ಸಂಬಂಧ್ಯಂಧೋ ರಸಾಖ್ಯಮನ್ನಂ ಪೂತಂ ದಶಾಪವಿತ್ರೇಣ ಶೋಧಿತಂ ಸತ್ ನ ಪರಿಷಿಕ್ತಂ । ಗೃಹೇಷು ನ ಪ್ರಕ್ಷಿಪ್ತಂ । ಕಿಂತ್ವನೇನ.

CC-0. Jangamwadi Math Collection. Digitized by eGangotri

ಯಜಮಾನೇನ ಕೇವಲಂ ಸ್ತುತಿರೇವ ಕ್ರಿಯತೇ ॥ ಪ್ರೋಚೇಯ । ಬ್ರೂಞಾ ಆಶೀರ್ಲಿಙಃ ಬ್ರುವೋ ವಚಿಃ । ಲಿಙ್ಯಾಶಿಷ್ಯಙ್ । ಛಂದಸ್ಯುಭಯಥೇತಿ ಸಾರ್ವಧಾತುಕತ್ವಾತ್ಸೀಯುಟಃ ಸಲೋಪಃ । ಅತೃಣತ್ । ಉತೃದಿರ್ ಹಿಂಸಾನಾದರಯೋಃ । ದೋಹನಮೇವಾತ್ರೋಧೋಹಿಂಸನಂ । ಪರಿಷಿಕ್ತಂ । ಸಿಂಚತೇಃ ಕರ್ಮಣಿ ಕ್ತಃ ಉಪಸರ್ಗಾತ್ಸುನೋತೀತಿ ಸಂಹಿತಾಯಾಂ ಷತ್ವಂ । ಗತಿರನಂತರ ಇತಿ ಗತೇಃ ಸ್ವರಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ಶುಶುಚಾನಂ—ಪ್ರಕಾಶಮಾನನೂ। ಹೋತಾರಂ—ದೇವತೆಗಳನ್ನು ಕರೆಯುವವನೂ। ವಿಶ್ವಭರಸಂ—ವಿಶ್ವಕ್ಕೆಲ್ಲಾ ಪೋಷಕನೂ । ಯಜಿಷ್ಠಂ—ಪೂಜ್ಯತಮನೂ । ಅಗ್ನಿಂ—ಅಗ್ನಿರೂಪನೂ ಆದ ನಿನ್ನನ್ನು । ಅಚ್ಛ—ಉದ್ದೇಶಿಸಿ । ಪ್ರೋಚೇಯ—ಸ್ತುತಿಸುತ್ತೇನೆ । ಗವಾಂ—ಗೋವುಗಳ । ಊಧಃ—ಕೆಚ್ಚಲನ್ನು (ಹಾಲನ್ನು) । ನ ಅತೃಣಂ—ಕರೆಯಲಿಲ್ಲ । ಅಂಶೋಃ—ಸೋಮದ । ಅಂಧಃ—ರಸರೂಪವಾದ ಅನ್ನವು । ಪೂತಂ—ಶುದ್ಧಿಮಾಡಲ್ಪಟ್ಟು । ನ ಪರಿಷಿಕ್ತಂ—ಗೃಹದಲ್ಲಿ ಇಡಲ್ಪಟ್ಟಿಲ್ಲ (ಕೇವಲ ಸ್ತುತಿಯಿಂದ ಮಾತ್ರ ನಿನಗೆ ತೃಪ್ತಿಯುಂಟಾಗಲಿ).

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ವಿಶ್ವಕ್ಕೆಲ್ಲಾ ಪೋಷಕನೂ, ಪೂಜ್ಯತಮನೂ, ಅಗ್ನಿರೂಪನೂ ಆದ ನಿನ್ನನ್ನು ಉದ್ದೇಶಿಸಿ ಸ್ತುತಿಸುತ್ತೇನೆ. ಯಜಮಾನನು ದರಿದ್ರನಾದುದರಿಂದ ಕ್ಷೀರವನ್ನು ಕರೆದು ಅರ್ಪಿಸಲಾಗಲಿಲ್ಲ. ಸೋಮದ ರಸರೂಪವಾದ ಅನ್ನವನ್ನು ಅರ್ಪಿಸಲಾಗಲಿಲ್ಲ. ಕೇವಲ ಸ್ತುತಿಯು ಮಾತ್ರ ಪಠಿತವಾಗಿದೆ.

English Translation

May I glorify the present radiant Agni, the invoker (of the gods), the supporter of the universe, most deserving of adoration, without milking the pure udder (of the cow), without the purified food of the Soma offered in libation.

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಯಜ್ಞಮಾಡುವ ಯಜಮಾನನು ದರಿದ್ರನಾದುದರಿಂದ ಕ್ಷೀರವನ್ನಾಗಲಿ, ಹವಿಸ್ಸನ್ನಾಗಲಿ, ಸೋಮರಸವನ್ನಾಗಲಿ ಅರ್ಪಿಸಲು ಶಕ್ತಿಯಿಲ್ಲದವನಾದ್ದರಿಂದ ಕೇವಲ ಭಕ್ತಿಶ್ರದ್ಧೆಗಳಿಂದ ಸಹಿತವಾದ ಸ್ತುತಿಗಳನ್ನು ಮಾತ್ರ ಅರ್ಪಿಸಿರುವನೆಂದೂ ಅದರಿಂದಲೇ ಅಗ್ನಿಯು ಸಂತುಷ್ಟನಾಗಬೇಕೆಂದೂ ಅಗ್ನಿಯನ್ನು ಪ್ರಾರ್ಥಿಸಲಾಗಿದೆ.

—————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವಿಶ್ವೇಷಾಮದಿತಿರ್ಯಜ್ಞಿಯಾನಾಂ ವಿಶ್ವೇಷಾಮತಿಥಿರ್ಮಾನುಷಾಣಾಂ ।
ಅಗ್ನಿರ್ದೇವಾನಾಮವ ಆವೃಣಾನಃ ಸುಮೃಳೀಕೋ ಭವತು ಜಾತವೇದಾಃ ॥

ಪದಪಾಠಃ

ವಿಶ್ವೇಷಾಂ । ಅದಿತಿಃ । ಯಜ್ಞಿಯಾನಾಂ । ವಿಶ್ವೇಷಾಂ । ಅತಿಥಿಃ । ಮಾನುಷಾಣಾಂ ।
ಅಗ್ನಿಃ । ದೇವಾನಾಂ । ಅವಃ । ಆऽವೃಣಾನಃ । ಸುऽಮೃಳೀಕಃ । ಭವತು । ಜಾತऽವೇದಾಃ ॥ ೨೦ ॥

ಸಾಯಣಭಾಷ್ಯಂ

ಅಯಮಗ್ನಿರ್ವಿಶ್ವೇಷಾಂ ಸರ್ವೇಷಾಂ ಯಜ್ಞಿಯಾನಾಂ ಯಜ್ಞಾರ್ಹಾಣಾಂ ದೇವಾನಾಮದಿತಿಃ ಅದಿತಿರ್ದೇವಮಾತಾ । ತದ್ವದ್ದೇವಾನಾಂ ಪೋಷಕ ಇತ್ಯರ್ಥಃ । ಯದ್ವಾ । ವಿಶ್ವೇಷಾಂ ದೇವಾನಾಮದಿತಿರ್ಭೂಸ್ಥಾನೀಯಃ ಆಧಾರಭೂತ ಇತಿ ಯಾವತ್ । ಅಯಂ ವಾ ಅಗ್ನಿರ್ವೈಶ್ವಾನರ ಇತಿ ಶ್ರುತೇಃ । ತಥಾಯಮಗ್ನಿರ್ವಿಶ್ವೇಷಾಂ ಮಾನುಷಾಣಾಮತಿಥಿರತಿಥಿವತ್ಪೂಜ್ಯೋ ಭವತಿ । ದೇವಾನಾಂ ದೇವನಶೀಲಾನಾಂ ಸ್ತೋತೄಣಾಮವೋऽನ್ನಂ ಹವಿರಾವೃಣಾನಃ ಸಂಭಜನ್ ಜಾತವೇದಾಃ । ಜಾತಂ ಸರ್ವಂ ವೇತ್ತೀತಿ ಜಾತವೇದಾಃ । ಸೋऽಗ್ನಿಸ್ತೇಷಾಂ ಸ್ತೋತೄಣಾಂ ಸುಮೃಳೀಕಃ ಸುಖಕರೋ ಭವತು ॥ ಅತಿಥಿಃ । ಅತ ಸಾತತ್ಯಗಮನೇ । ಋತನ್ಯಂಜೀತ್ಯಾದಿನೇಥಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಮಾನುಷಾಣಾಂ । ಮನೋರಪತ್ಯಾನೀತ್ಯರ್ಥೇ ಮನೋರ್ಜಾತಾವಞ್ಯತೌ ಷುಕ್ಚೇತ್ಯಞ್ಪ್ರತ್ಯಯಃ । ಞಿತ್ತ್ವಾದಾದ್ಯುದಾತ್ತಃ ॥

ಪ್ರತಿಪದಾರ್ಥ

ಅಗ್ನಿಃ—ಅಗ್ನಿಯು । ವಿಶ್ವೇಷಾಂ—ಸಮಸ್ತವಾದ । ಯಜ್ಞಿಯಾನಾಂ—ಯಜ್ಞಾರ್ಹರಾದ ದೇವತೆಗಳಿಗೂ । ಅದಿತಿಃ—ದೇವಮಾತೆಯಾಗಿ (ಪೋಷಕನಾಗಿ) ಇದ್ದಾನೆ । ವಿಶ್ವೇಷಾಂ—ಸಮಸ್ತವಾದ । ಮಾನುಷಾಣಾಂ—ಮಾನವರಿಗೂ । ಅತಿಥಿಃ—ಅತಿಥಿಯಾಗಿದ್ದಾನೆ । ದೇವಾನಾಂ—ಸ್ತೋತೃಗಳ । ಅವಃ—ಹವಿಸ್ಸಿನ ರೂಪದ ಅನ್ನವನ್ನು । ಆವೃಣಾನಃ—ಸ್ವೀಕರಿಸಿ ಸೇವಿಸುತ್ತಾ । ಜಾತವೇದಾಃ—ಸರ್ವಜ್ಞನಾದ ಅಗ್ನಿಯು । ಸುಮೃಳೀಕಃ—ಅವರಿಗೆ ಸುಖಕಾರಕನಾಗಿ । ಭವತು—ಆಗಲಿ ।

ಭಾವಾರ್ಥ

ಅಗ್ನಿಯು ಸಮಸ್ತವಾದ ಯಜ್ಞಾರ್ಹರಾದ ದೇವತೆಗಳಿಗೂ ದೇವಮಾತೆಯಂತೆ ಪೋಷಕನಾಗಿದ್ದಾನೆ. ಸಕಲಮಾನವರಿಗೂ ಅತಿಥಿಯಾಗಿದ್ದಾನೆ. ಸ್ತೋತೃಗಳಿಂದ ಅರ್ಪಿತವಾದ ಹವಿಸ್ಸಿನ ರೂಪದ ಅನ್ನವನ್ನು ಸ್ವೀಕರಿಸಿ ಸೇವಿಸುತ್ತಾ ಸರ್ವಜ್ಞನಾದ ಅಗ್ನಿಯು ಅವರಿಗೆ ಸುಖಕಾರಕನಾಗಿ ಆಗಲಿ.

CC-0. Jangamwadi Math Collection. Digitized by eGangotri

### English Translation

May Agni be the Aditi of all those to whom sacrifice is offered ; may he be the guest of all men : receiving the (sacrificial) food of the devout' may he, to whom all is known, be the bestower of felicity.

———————

## ಎರಡನೆಯ ಸೂಕ್ತವು.

———

ಸಾಯಣಭಾಷ್ಯಂ

ಯೋ ಮರ್ತ್ಯೇಷ್ವಿತಿ ವಿಂಶತ್ಯೃಚಂ ದ್ವಿತೀಯಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭ-ಮಾಗ್ನೇಯಂ । ಯೋ ಮರ್ತ್ಯೇಷ್ವಿತ್ಯನುಕ್ರಮಣಿಕಾ ॥ ಅಸ್ಯ ಸೂಕ್ತಸ್ಯ ಪ್ರಾತರನುವಾಕಾಶ್ವಿನಶಸ್ತ್ರ-ಯೋಃ ಪೂರ್ವಸೂಕ್ತ ಏವ ವಿನಿಯೋಗ ಉಕ್ತಃ ॥

ಅನುವಾದವು—ಯೋ ಮರ್ತ್ಯೇಷು ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಇಪ್ಪತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಯೋ ಮರ್ತ್ಯೇಷು ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದಿನ ಸೂಕ್ತದ ವಿನಿಯೋಗಕ್ರಮದಲ್ಲಿಯೇ ಹೇಳಲಾಗಿದೆ.



॥ ಓಂ ॥

**ಸೂಕ್ತ—೨**

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೨ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೧೬, ೧೭, ೧೮, ೧೯ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೨೦ ॥

ಋಷಿಃ—ವಾಮದೇವಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯೋ ಮರ್ತ್ಯೇಷ್ವಮೃತ ಋತಾವಾ ದೇವೋ ದೇವೇಷ್ವರತಿರ್ನಿಧಾಯಿ ।
ಹೋತಾ ಯಜಿಷ್ಠೋ ಮಹ್ನಾ ಶುಚಧ್ಯೈ ಹವ್ಯೈರಗ್ನಿರ್ಮನುಷ ಈರ-
ಯಧ್ಯೈ ॥ ೧ ॥

ಪದಪಾಠಃ

ಯಃ । ಮರ್ತ್ಯೇಷು । ಅಮೃತಃ । ಋತಾವಾ । ದೇವಃ । ದೇವೇಷು । ಅರತಿಃ । ನಿಧಾಯಿ ।
ಹೋತಾ । ಯಜಿಷ್ಠಃ । ಮಹ್ನಾ । ಶುಚಧ್ಯೈ । ಹವ್ಯೈಃ । ಅಗ್ನಿಃ । ಮನುಷಃ । ಈರಯಧ್ಯೈ ॥ ೧ ॥

ಸಾಯಣಭಾಷ್ಯಂ

ಅಮೃತೋ ಮರಣಧರ್ಮರಹಿತೋ ಯೋಽಗ್ನಿರ್ಮರ್ತ್ಯೇಷು ಮನುಷ್ಯೇಷ್ವೃತಾವಾ ಸತ್ಯ-ವಾನ್ನಿಧಾಯಿ ನಿಹಿತಃ । ಯದ್ವಾ । ಮರ್ತ್ಯೇಷು ಮನುಷ್ಯಸಂಬಂಧಿಷು ವಾಗಾದೀಂದ್ರಿಯೇಷು ನಿಹಿತಃ । ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದಿತಿ ಶ್ರುತೇಃ । ದೇವೋ ದೇವನಶೀಲೋ ಯೋಽಗ್ನಿರಿಂದ್ರಾದಿಷು ದೇವೇಷ್ವರತಿರಭಿಗಂತಾ ಶತ್ರೂಣಾಂ । ಯದ್ವಾ । ದೇವಲೋಕೇ ಗಂತಾ । ನಿಧಾಯಿ ನಿಹಿತಃ । ಸ ಚ ಹೋತಾ ದೇವಾನಾಮಾಹ್ವಾತಾ ಯಜಿಷ್ಠೋ ಯಷ್ಟೃತಮೋಽಗ್ನಿರ್ಮಹ್ನಾ ಸ್ವಕೀಯೇನ ಮಹತಾ ತೇಜಸಾ ಶುಚಧ್ಯೈ ದೀಪಿತುಮುತ್ತರವೇದ್ಯಾಂ ನಿಹಿತಃ । ಕಿಂಚ ಹವ್ಯೈರ್ಹವನೀಯೈರಾಜ್ಯಪುರೋ-ಡಾಶಾದಿಭಿರ್ಹವಿರ್ಭಿರ್ಹೇತುಭಿರ್ಮನುಷೋ ಮನುಷ್ಯಸ್ಯ ಯಜಮಾನಸ್ಯೇರಯಧ್ಯೈ ಸ್ವರ್ಗಂ ಪ್ರತಿ ಪ್ರೇರಣಾಯ ನಿಹಿತಃ ॥ ಅರತಿಃ । ಋ ಗತೌ । ವಹಿವಸ್ಯರ್ತಿಭ್ಯಶ್ಚಿದಿತ್ಯತಿಪ್ರತ್ಯಯಃ । ಚಿತ್ತ್ವಾದಂತೋ-ದಾತ್ತಃ । ನಿಧಾಯಿ । ದಧಾತೇಃ ಕರ್ಮಣಿ ಲುಙಿ ರೂಪಂ । ಪರಾದಿಶ್ಛಂದಸೀತ್ಯುತ್ತರಪದಾದ್ಯು-ದಾತ್ತತ್ವಂ । ಶುಚಧ್ಯೈ । ಶುಚ ದೀಪ್ತೌ । ತುಮರ್ಥೇ ಕಧ್ಯೈಪ್ರತ್ಯಯಃ । ಕಿತ್ತ್ವಾದಗುಣಃ । ಪ್ರತ್ಯಯಸ್ವರಃ । ಈರಯಧ್ಯೈ । ಈರಯತೇಸ್ತುಮರ್ಥೇ ಶಧ್ಯೈಪ್ರತ್ಯಯಃ । ಶಿತ್ತ್ವೇನ ಸಾರ್ವಧಾತು-ಕತ್ವಾಣ್ಣಿಲೋಪಾಭಾವಃ ॥

ಪ್ರತಿಪದಾರ್ಥ

ಅಮೃತಃ—ಮರಣರಹಿತನಾದ । ಯಃ—ಯಾವ ಅಗ್ನಿಯು । ಮರ್ತ್ಯೇಷು—ಮಾನವರಲ್ಲಿ । ಋತಾವಾ—ಸತ್ಯರಕ್ಷಕನಾಗಿ । ನಿಧಾಯಿ—ಇಡಲ್ಪಟ್ಟನೋ ಮತ್ತು । ದೇವಃ—ದೇವತಾತ್ಮನಾದ ಯಾವ ಅಗ್ನಿಯು । ದೇವೇಷು—ಇಂದ್ರಾದಿದೇವತೆಗಳಲ್ಲಿ । ಅರತಿಃ—ಶತ್ರುನಾಶಕನಾಗಿ ಸ್ಥಿತನಾದನೋ । ಅಗ್ನಿಃ—ಅದೇ ಅಗ್ನಿಯು । ಹೋತಾ—ಹೋತೃವಾಗಿಯೂ । ಯಜಿಷ್ಠಃ—ಪೂಜ್ಯತಮನಾಗಿಯೂ । ಮಹ್ನಾ—ತನ್ನ

CC-0. Jangamwadi Math Collection. Digitized by eGangotri

ತೇಜಸ್ಸಿನೊಡನೆ । ಶುಚದ್ಭಿಃ—ಪ್ರಕಾಶಮಾನವಾದ ಉತ್ತರವೇದಿಯಲ್ಲಿ ಸ್ಥಾಪಿತನಾಗಿದ್ದಾನೆ । ಹವ್ಯೈಃ—ಹವಿಸ್ಸುಗಳ ಸಹಾಯದಿಂದ । ಮನುಷಃ—ಮಾನವನಾದ ಯಜಮಾನನ । ಈರಯಧ್ಯೈ—ಔನ್ನತ್ಯಕ್ಕಾಗಿಯೂ ಸ್ಥಾಪಿತನಾಗಿದ್ದಾನೆ ।

ಭಾವಾರ್ಥ

ಮರಣಧರ್ಮರಹಿತನೂ, ದೇವತಾತ್ಮನೂ ಆದ ಯಾವ ಅಗ್ನಿಯು ಮಾನವರಲ್ಲಿ ಸತ್ಯರಕ್ಷಕನಾಗಿಯೂ, ಇಂದ್ರಾದಿದೇವತೆಗಳಲ್ಲಿ ಶತ್ರುನಾಶಕನಾಗಿಯೂ ಸ್ಥಿತನಾಗಿದ್ದಾನೆಯೋ ಅದೇ ಅಗ್ನಿಯು ಹೋತೃರೂಪನಾಗಿಯೂ ಪೂಜ್ಯತಮನಾಗಿಯೂ ತನ್ನ ತೇಜಸ್ಸಿನೊಡನೆ ಪ್ರಕಾಶಮಾನವಾದ ಉತ್ತರವೇದಿಯಲ್ಲಿ ಸ್ಥಾಪಿತನಾಗಿದ್ದಾನೆ. ಹವಿಸ್ಸುಗಳ ಸಹಾಯದಿಂದ ಮಾನವನಾದ ಯಜಮಾನನ ಔನ್ನತ್ಯಕ್ಕಾಗಿಯೂ ಸ್ಥಾಪಿತನಾಗಿದ್ದಾನೆ.

English Translation

He who has been placed immortal among the mortals, the observer of truth, a diety triumphant among gods, the invoker of the gods, the most diligent sacrificer, Agni : he has been placed (upon the altar) to lighten (the ceremony) by his (lustre), and for the elevation of the worshipper, through oblations (in heaven).

---

ಸಂಹಿತಾಪಾಠಃ

ಇಹ ತ್ವಂ ಸೂನೋ ಸಹಸೋ ನೋ ಅದ್ಯ ಜಾತೋ ಜಾತಾँ ಉಭಯಾँ ಅಂತರಗ್ನೇ ।

ದೂತ ಈಯಸೇ ಯುಯುಜಾನ ಋಷ್ವ ಋಜುಮುಷ್ಕಾನ್ವೃಷಣಃ ಶುಕ್ರಾಂಶ್ಚ ॥ ೨ ॥

ಪದಪಾಠಃ

ಇಹ । ತ್ವಂ । ಸೂನೋ ಇತಿ । ಸಹಸಃ । ನಃ । ಅದ್ಯ । ಜಾತಃ । ಜಾತಾನ್ । ಉಭಯಾನ್ । ಅಂತಃ । ಅಗ್ನೇ ॥

ದೂತಃ । ಈಯಸೇ । ಯುಯುಜಾನಃ । ಋಷ್ವ । ಋಜುಮುಷ್ಕಾನ್ । ವೃಷಣಃ । ಶುಕ್ರಾನ್ । ಚ ।

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಸಹಸಃ ಸೂನೋ ಬಲಸ್ಯ ಪುತ್ರಾಗ್ನೇ ಅದ್ಯಾಸ್ಮಿನ್ದಿವಸೇ ನೋಽಸ್ಮದೀಯ ಇಹ ಕರ್ಮಣಿ ಜಾತ ಆಧಾನಪವಮಾನೇಷ್ಟಿಭಿಃ ಸಂಸ್ಕೃತಸ್ತ್ವಂ ಜಾತಾನುತ್ಪನ್ನಾನುಭಯಾನ್ದೇವಮನುಷ್ಯಾನಂತರ್ಮಧ್ಯೇ ದೂತೋ ಹವೀಂಷಿ ದೇವಾನ್ಪ್ರಾಪಯಿತುಮೀಯಸೇ । ಗಚ್ಛಸಿ । ಕಿಂ ಕುರ್ವನ್ । ಹೇ ಋಷ್ವ ದರ್ಶನೀಯಾಗ್ನೇ ಋಜುಮುಷ್ಕಾನ್ । ಮುಷ್ಕಶಬ್ದೇನ ಮಾಂಸಲೋಽಭಿಧೀಯತೇ । ಋಜವಃ ಪ್ರಸಾಧಕಾಃ । ಋಜುವಶ್ಚ ತೇ ಮುಷ್ಕಾಶ್ಚೇತ್ಯೃಜುಮುಷ್ಕಾಃ । ತಾನ್ವೃಷಣಃ ರೇತಃಸೇಚನಸಮರ್ಥಾನ್ ಶುಕ್ರಾನ್ದೀಪ್ಯಮಾನಾನಶ್ವಾಂಶ್ಚ ಯುಯುಜಾನಃ ಸ್ವರಥೇ ಯೋಜಯನ್ನೀಯಸೇ । ಯದ್ವಾ । ಋಷ್ವ ಮಹನ್ನಗ್ನೇ ಯುಯುಜಾನೋ ಹವಿರ್ವಹನೇ ನಿಯುಜ್ಯಮಾನಸ್ತ್ವಂ ವೃಷಣೋ ಹವಿಃಸೇಚನಸಮರ್ಥಾನ್ಯಜಮಾನಾನ್ ದೀಪ್ತಾನ್ದೇವಾಂಶ್ಚೇಯಸೇ ॥ ಸೂನೋ ಸಹಸಃ । ಪರಮಪಿ ಛಂದಸೀತಿ ಸಹಸಃ ಪರಾಂಗವದ್ಭಾವಾತ್ ದ್ವಯೋಃ ಸರ್ವಾನುದಾತ್ತತ್ವಂ । ಈಯಸೇ । ಈಙ್ ಗತೌ । ದಿವಾದಿಃ । ನಿಘಾತಃ । ಯುಯುಜಾನಃ । ಯುಜೇಃ ವರ್ತಮಾನೇ ಲಿಟಃ ಕಾನಚಿ ರೂಪಂ । ಋಷ್ವ । ಸಂಹಿತಾಯಾಮಾಮಂತ್ರಿತಕ ಇತಿ ಪ್ರಕೃತಿಭಾವಃ । ಋಜುಮುಷ್ಕಾನ್ । ಸಮಾಸಸ್ವರಃ ॥

ಪ್ರತಿಪದಾರ್ಥ

**ಸಹಸಃ ಸೂನೋ**—ಶಕ್ತಿಪುತ್ರನಾದ । ಅಗ್ನೇ—ಎಲೈ ಅಗ್ನಿಯೇ । ಅದ್ಯ—ಇಂದು । ನಃ—ನಮ್ಮ । ಇಹ—ಈ ಕರ್ಮಕಾಲದಲ್ಲಿ । **ಜಾತಃ**—ಸುಸಂಸ್ಕೃತನಾದ । **ತ್ವಂ**—ನೀನು । **ಜಾತಾನ್**—ಉತ್ಪನ್ನರಾದ । **ಉಭಯಾನ್**—ದೇವಮಾನವರ । **ಅಂತಃ**—ನಡುವೆ । **ದೂತಃ**—ದೇವದೂತನಾಗಿ । **ಈಯಸೇ**—(ಹವಿಸ್ಸನ್ನು ವಹಿಸಲು) ಉದ್ಯುಕ್ತನಾಗಿದ್ದೀಯೆ । **ಋಷ್ವ**—ದರ್ಶನೀಯನಾದ ಎಲೈ ಅಗ್ನಿಯೇ । **ಋಜುಮುಷ್ಕಾನ್**—ಪುಷ್ಟವಾದವೂ ಅಲಂಕೃತವಾದವೂ । **ವೃಷ್ಣಃ**—ಸೇಚನಸಾಮರ್ಥ್ಯವುಳ್ಳವೂ । **ಶುಕ್ರಾನ್**—ಪ್ರಕಾಶಮಾನವೂ ಆದ ನಿನ್ನ ಅಶ್ವಗಳನ್ನು । **ಯುಯುಜಾನಃ**—ರಥಕ್ಕೆ ಕಟ್ಟಿಕೊಳ್ಳಲು ಉದ್ಯುಕ್ತನಾಗಿದ್ದೀಯೆ ।

ಭಾವಾರ್ಥ

ಶಕ್ತಿಪುತ್ರನಾದ ಎಲೈ ಅಗ್ನಿಯೇ, ಇಂದು ನಮ್ಮ ಈ ಕರ್ಮಕಾಲದಲ್ಲಿ ಸುಸಂಸ್ಕೃತನಾದ ನೀನು ಉತ್ಪನ್ನರಾದ ಸಕಲದೇವಮಾನವರ ನಡುವೆಯೂ ಸಹ ದೇವದೂತನಾಗಿ ಹವಿಸ್ಸನ್ನು ವಹಿಸಲು ಉದ್ಯುಕ್ತನಾಗಿದ್ದೀಯೆ. ದರ್ಶನೀಯನಾದ ಎಲೈ ಅಗ್ನಿಯೇ, ಪುಷ್ಟವಾದವೂ, ಅಲಂಕೃತವಾದವೂ, ಶಕ್ತಿಯುತವಾದವೂ, ಪ್ರಕಾಶಮಾನವಾದವೂ ಆದ ನಿನ್ನ ಅಶ್ವಗಳನ್ನು ರಥಕ್ಕೆ ಕಟ್ಟಿಕೊಂಡು ನೀನು ಸಿದ್ಧನಾಗಿದ್ದೀಯೆ.

## English Translation

Agni, son of strength, generated to-day at this our rite, as intermediate between both (gods and men) you proceed, the invoker (of the gods), harnessiug, graceful Agni, your robust, vigorous, and resplendent steeds.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅತ್ಯಾ ವೃಧಸ್ನೂ ರೋಹಿತಾ ಘೃತಸ್ನೂ ಋತಸ್ಯ ಮನ್ಯೇ ಮನಸಾ ಜವಿಷ್ಠಾ।
ಅಂತರೀಯಸೇ ಅರುಷಾ ಯುಜಾನೋ ಯುಷ್ಮಾಂಶ್ಚ ದೇವಾನ್ವಿಶ ಆ ಚ
ಮರ್ತಾನ್ ॥ ೩ ॥

ಪದಪಾಠಃ

ಅತ್ಯಾ । ವೃಧಸ್ನೂ ಇತಿ ವೃಧsಸ್ನೂ । ರೋಹಿತಾ । ಘೃತಸ್ನೂ ಇತಿ ಘೃತsಸ್ನೂ । ಋತಸ್ಯ । ಮನ್ಯೇ ।
ಮನಸಾ । ಜವಿಷ್ಠಾ ।
ಅಂತಃ । ಈಯಸೇ । ಅರುಷಾ । ಯುಜಾನಃ । ಯುಷ್ಮಾನ್ । ಚ । ದೇವಾನ್ । ವಿಶಃ । ಆ । ಚ ।
ಮರ್ತಾನ್ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ಋತಸ್ಯ ಸತ್ಯಭೂತಸ್ಯ ತವ ಸಂಬಂಧಿನೌ ಮನಸಾ ಮನಸೋಽಪಿ ಜವಿಷ್ಠಾ ವೇಗವತ್ತಮೌ ವೃಧಸ್ನೂ । ವರ್ಧಯತೀತಿ ವೃಧಮನ್ನಂ । ತತ್ಪ್ರಸ್ನುವಂತೌ । ಘೃತಸ್ನೂ । ಘೃತಮುದಕಂ ತತ್ಪ್ರಸ್ರವಂತೌ ರೋಹಿತಾ ರೋಹಿತವರ್ಣಾವತ್ಯಾವಶ್ವೌ ಮನ್ಯೇ । ಸ್ತೌಮಿ । ಅರುಷಾರೋಚಮಾನೌ ತಾವಶ್ವೌ ಯುಜಾನೋ ರಥೇ ಯುಂಜಾನಸ್ತ್ವಂ ಯುಷ್ಮಾನ್ । ದೇವೇಷ್ವಗ್ನೇರಂತರ್ಭಾವಾದ್ಯಜನೀಯರೂಪೇಣ ಕೀರ್ತನಂ । ಯುಷ್ಮಾನ್ಯಷ್ಟವ್ಯಾನ್ದೇವಾನ್ ವಿಶಃ ಪರಿಚಾರಕಾನ್ಮರ್ತಾನ್ಮನುಷ್ಯಾನಂತಃ । ಷಷ್ಠ್ಯರ್ಥೇ ದ್ವಿತೀಯಾ । ತೇಷಾಂ ಮಧ್ಯ ಆ ಸಮಂತಾದೀಯಸೇ । ಹವಿಃ ಸ್ವೀಕರ್ತುಂ ಯಜಮಾನಾನ್ ಗಚ್ಛಸಿ । ತದ್ಧವಿಃ ಪ್ರದಾತುಂ ದೇವಾನ್ ಗಚ್ಛಸಿ ॥ ಮನ್ಯೇ । ಮನ್ಯತಿರರ್ಚತಿಕರ್ಮಾ । ಮನಸಾ । ಸುಪಾಂ ಸುಲುಗಿತಿ ಪಂಚಮ್ಯಾ ಆಕಾರಃ । ಯುಜಾನಃ । ಯುಜಿರ್ ಯೋಗೇ । ಯುಜಿಬುಧಿದೃಶಃ ಕಿಚ್ಚೇತ್ಯಾನಚ್ಪ್ರತ್ಯಯಃ । ಚಿತ್ತ್ವಾದಂತೋದಾತ್ತಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ಋತಸ್ಯ—ಸತ್ಯಾತ್ಮಕನಾದ ನಿನಗೆ ಸೇರಿದವೂ । ಮನಸಾ—ಮನೋವೇಗಕ್ಕಿಂತಲೂ । ಜವಿಷ್ಠಾ—ವೇಗಶಾಲಿಯಾದವೂ । ವೃಧಸ್ನೂ—ಅನ್ನವನ್ನು ಸುರಿಸುವುವೂ । ಘೃತಸ್ನೂ—ಉದಕವನ್ನು ವರ್ಷಿಸುವುವೂ । ರೋಹಿತಾ—ರೋಹಿತವರ್ಣವುಳ್ಳವೂ ಆದ । ಅತ್ಯಾ—ಅಶ್ವಗಳನ್ನು । ಮನ್ಯೇ—ಸ್ತುತಿಸುತ್ತೇನೆ । ಅರುಷಾ—ಕಾಂತಿಯುಕ್ತವಾದ ಆ ಅಶ್ವಗಳನ್ನು । ಯುಜಾನಃ—ರಥಕ್ಕೆ ಯೋಜಿಸಿದ ನೀನು । ಯುಷ್ಮಾನ್—



CC-0. Jangamwadi Math Collection. Digitized by eGangotri

ನಿಮ್ಮಲ್ಲಿ ಪೂಜ್ಯರಾದ । **ದೇವಾನ್**—ದೇವತೆಗಳಿಗೂ । **ವಿಶಃ**—ನಿಮ್ಮನ್ನು ಪೂಜಿಸತಕ್ಕ । **ಮರ್ತಾನ್**—ಮಾನವರಿಗೂ । **ಅಂತಃ**—ನಡುವೆ । **ಆ**—ಸುತ್ತಲೂ । **ಈಯಸೇ**—ಹವಿಸ್ಸನ್ನು ಸ್ವೀಕರಿಸಿ ಹಂಚಲು ಹೋಗುತ್ತೀಯೆ ।

ಭಾವಾರ್ಥ.

ಎಲೈ ಅಗ್ನಿಯೇ, ಸತ್ಯಾತ್ಮಕನಾದ ನಿನಗೆ ಸೇರಿದವೂ, ಮನಸ್ಸಿಗಿಂತಲೂ ವೇಗವಾಗಿ ಸಂಚರಿಸತಕ್ಕವೂ, ಅನ್ನವನ್ನೂ ಉದಕವನ್ನೂ ಸ್ರವಿಸುವುವೂ, ರೋಹಿತವರ್ಣವುಳ್ಳವೂ ಆದ ಅಶ್ವಗಳನ್ನು ಸ್ತುತಿಸುತ್ತೇನೆ. ಕಾಂತಿಯುತವಾದ ಅಶ್ವಗಳನ್ನು ರಥಕ್ಕೆ ಯೋಜಿಸಿದ ನೀನು ನಿಮ್ಮಲ್ಲಿ ಪೂಜ್ಯರಾದ ದೇವತೆಗಳಿಗೂ ನಿಮ್ಮನ್ನು ಪೂಜಿಸತಕ್ಕ ಮಾನವರಿಗೂ ನಡುವೆ ಸುತ್ತಲೂ ಹವಿಸ್ಸನ್ನು ಸ್ವೀಕರಿಸಿ ಹಂಚಲು ಹೋಗುತ್ತೀಯೆ

English Translation

I celebrate the ruddy, food-bestowing, water-shedding, and swifter-than-thought-going, steads of him who is the truth : harnessing the brilliant pair (to your chariot), you pass between the deities and human worshippers.



ಸಂಹಿತಪಾಠಃ

ಅರ್ಯಮಣಂ ವರುಣಂ ಮಿತ್ರಮೇಷಾಮಿಂದ್ರಾವಿಷ್ಣೂ ಮರುತೋ ಅಶ್ವಿನೋತ ।

ಸ್ವಶ್ವೋ ಅಗ್ನೇ ಸುರಥಃ ಸುರಾಧಾ ಏದು ವಹ ಸುಹವಿಷೇ ಜನಾಯ ॥೪॥

ಪದಪಾಠಃ

ಅರ್ಯಮಣಂ । ವರುಣಂ । ಮಿತ್ರಂ । ಏಷಾಂ । ಇಂದ್ರಾವಿಷ್ಣೂ ಇತಿ । ಮರುತಃ । ಅಶ್ವಿನಾ । ಉತ । ಸುऽಅಶ್ವಃ । ಅಗ್ನೇ । ಸುऽರಥಃ । ಸುऽರಾಧಾಃ । ಆ । ಇತ್ । ಊಂ ಇತಿ । ವಹ । ಸುऽಹವಿಷೇ । ಜನಾಯ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ಸ್ವಶ್ವಃ ಶೋಭನಾಶ್ವೋಪೇತಃ ಸುರಥಃ ಶೋಭನರಥಃ ಸುರಾಧಾಃ ಶೋಭನಧನೋಪೇತಸ್ತ್ವಮೇಷಾಂ ಮರ್ತ್ಯಾನಾಂ ಮಧ್ಯೇ ಸುಹವಿಷೇ ಶೋಭನಹವಿಷ್ಕಾಯ ಜನಾಯ ಯಜ-

CC-0. Jangamwadi Math Collection. Digitized by eGangotri

ಮಾನಾಯಾರ್ಯಮಾದೀನುತಾಪಿ ಚಾಶ್ವಿನಾ ಯಷ್ಟವ್ಯಾನ್ದೇವಾನಾ ವಹೇದು । ಆಹ್ವಯೈವ । ಉಃ ಪೂರಣಃ ॥ ಇಂದ್ರಾವಿಷ್ಣೂ । ಋಜ್ರೇಂದ್ರೇತ್ಯಾದಿನಾ ನಿಪಾತನಾದಿಂದ್ರಶಬ್ದ ಆದ್ಯುದಾತ್ತಃ । ದೇವತಾ-ದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ। ಸುಹವಿಷೇ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । **ಸ್ವಶ್ವಃ**—ಶ್ರೇಷ್ಠವಾದ ಅಶ್ವದಿಂದ ಕೂಡಿದವನೂ । **ಸುರಥಃ**—ಶ್ರೇಷ್ಠವಾದ ರಥವುಳ್ಳವನೂ । **ಸುರಾಧಾಃ**—ಉತ್ತಮವಾದ ಸಂಪತ್ತುಳ್ಳವನೂ ಆದನೀನು । **ವಿಷಾಂ**—ಈ ಮಾನವರ ನಡುವೆ । **ಸುಹವಿಷೇ**—ಉತ್ತಮವಾದ ಹವಿಸ್ಸನ್ನು ಹೊಂದಿರುವ । **ಜನಾಯ**—ಯಜಮಾನನಿಗಾಗಿ । **ಅರ್ಯಮಣಂ**—ಅರ್ಯಮದೇವನನ್ನೂ । **ವರುಣಂ**—ವರುಣನನ್ನೂ । **ಮಿತ್ರಂ**—ಮಿತ್ರನನ್ನೂ । **ಇಂದ್ರಾವಿಷ್ಣೂ**—ಇಂದ್ರಾವಿಷ್ಣುಗಳನ್ನೂ । **ಮರುತಃ**—ಮರುತ್ತುಗಳನ್ನೂ । **ಅಶ್ವಿನಾ**—ಅಶ್ವಿನೀ ದೇವತೆಗಳನ್ನೂ । **ಆ ವಹ ಇತ್**—ಖಂಡಿತವಾಗಿಯೂ ಕರೆದುಕೊಂಡು ಬಾ.

ಭಾವಾರ್ಥ

ಎಲೈ ಅಗ್ನಿಯೇ, ಶ್ರೇಷ್ಠವಾದ ಅಶ್ವದಿಂದ ಕೂಡಿದವನೂ, ಶ್ರೇಷ್ಠವಾದ ರಥವುಳ್ಳವನೂ ಉತ್ತಮವಾದ ಸಂಪತ್ತುಳ್ಳವನೂ ಆದ ನೀನು ಈ ಮಾನವರ ನಡುವೆ ಉತ್ತಮವಾದ ಹವಿಸ್ಸನ್ನು ಹೊಂದಿರುವ ಯಜಮಾನನಿಗಾಗಿ ಅರ್ಯಮ, ವರುಣ, ಮಿತ್ರ, ಇಂದ್ರಾವಿಷ್ಣುಗಳು, ಮರುತ್ತುಗಳು ಮತ್ತು ಅಶ್ವಿನೀ ನಾಮಕರಾದ ದೇವತೆಗಳನ್ನು ಕರೆದುಕೊಂಡು ಬಾ.

English Translation

Possessed, Agni, of good steeds, an excellent car, and abundant wealth do you, amidst these (worshippers) bring to the man who offers worthy oblations, Aryaman, Varuna, Mitra, Vishnu, the Maruts, or the Ashwins,

—————

ಸಂಹಿತಾಪಾಠಃ

ಗೋಮಾ಼ಁ ಅಗ್ನೇಽವಿಮಾ಼ಁ ಅಶ್ವೀ ಯಜ್ಞೋ ನೃವತ್ಸಖಾ ಸದಮಿದ ಪ್ರಮೃಷ್ಯಃ ।

ಇಳಾವಾ಼ಁ ಏಷೋ ಅಸುರ ಪ್ರಜಾವಾನ್ದೀರ್ಘೋ ರಯಿಃ ಪೃಥುಬುಧ್ನಃ ಸಭಾವಾನ್ ॥ ೫ ॥

CC-0. Jangamwadi Math Collection. Digitized by eGangotri

ಪದಪಾಠಃ

ಗೋಽವಮಾನ್ । ಅಗ್ನೇ । ಅವಿಽವಮಾನ್ । ಅಶ್ವೀ । ಯಜ್ಞಃ । ನೃವತ್‌ಽಸಖಾ । ಸದಂ । ಇತ್ । ಅಪ್ರಽಮೃಷ್ಯಃ ।

ಇಳಾಽವಾನ್ । ಏಷಃ । ಅಸುರ । ಪ್ರಜಾಽವಾನ್ । ದೀರ್ಘಃ । ರಯಿಃ । ಪೃಥುಽಬುಧ್ನಃ । ಸಭಾಽವಾನ್॥

ಸಾಯಣಭಾಷ್ಯಂ

ಹೇ ಅಸುರ ಬಲವನ್ನೇ ಅಗ್ನೇ ಏಷ ಮದೀಯೋಽಯಂ ಯಜ್ಞೋ ಗೋಮಾನ್ ಗೋಭಿಸ್ತ-ದ್ವಾನವಿಮಾನ್ । ಅವಯೋ ಮೇಷಾ ಅಸ್ಯ ಸಂತಿ ತದ್ವಾನ್ ಅಶ್ವ್ಯಶ್ವೋಽಪೇತಶ್ಚಾಸ್ತು । ನೃವತ್ಸಖಾ । ನರಃ ಕರ್ಮಣಾಂ ನೇತಾರೋಽಧ್ವರ್ಯ್ವಾದಯಸ್ತದ್ವಂತಃ ಸಖಾಯೋಽನುಷ್ಠಾತಾರೋ ಯಜಮಾನಾ ಯಸ್ಯ ಸ ತಥೋಕ್ತಃ । ಸದಮಿತ್ಸದೈವಾಪ್ರಮೃಷ್ಯೋಽಪ್ರಧೃಷ್ಯಶ್ಚಾಸ್ತು । ತಥೇಳಾವಾನ್ । ಇಳಾ ಹವಿರ್ಲಕ್ಷಣಮನ್ನಂ ತದ್ವಾನ್ । ಪ್ರಜಾವಾನ್ಪುತ್ರಪೌತ್ರಾದಿಯುಕ್ತಶ್ಚಾಸ್ತು । ದೀರ್ಘೋಽವಿಚ್ಛಿನ್ನಾ-ನುಷ್ಠಾನೋಪೇತೋ ರಯಿರ್ಧನವಾನ್ । ಲುಪ್ತಮತ್ವರ್ಥೀಯಃ । ಪೃಥುಬುಧ್ನಃ । ಪೃಥೂನಿ ಬಹು-ಲಾನಿ ಬುಧ್ನಾನಿ ಧನಾದೀನಿ ಕಾರಣಾನಿ ಯಸ್ಯ ಸ ತಥೋಕ್ತಃ । ಸಭಾವಾನುಪಪ್ರಷ್ಟ್ರರೂಪಸಭಾಯು-ಕ್ತಶ್ಚಾಸ್ತು ॥ ನೃವತ್ಸಖಾ । ನರೋ ಯೇಷಾಂ ಸಂತೀತಿ ನೃವತ್ । ಮತುಪ್ । ತಸ್ಯ ಛಾಂದಸಂ ವತ್ವಂ। ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಬಹುವ್ರೀಹೌ ಪೂರ್ವಪದಸ್ವರಃ ॥

ಪ್ರತಿಪದಾರ್ಥ

**ಅಸುರ**—ಶಕ್ತಿವಂತನಾದ । **ಅಗ್ನೇ**—ಎಲೈ ಅಗ್ನಿಯೇ । **ಏಷಃ**—ಈಗ ಆಚರಿಸಲ್ಪಡುವ । **ಯಜ್ಞಃ**—ಯಜ್ಞವು । **ಗೋಮಾನ್**—ಗೋವುಗಳಿಂದ ಕೂಡಿದುದೂ । **ಅವಿಮಾನ್**—ಆಡುಗಳಿಂದ ಕೂಡಿದುದೂ । **ಅಶ್ವೀ**—ಅಶ್ವೋಪೇತವಾದುದೂ ಆಗಲಿ । **ನೃಸಖಾ**—ಶ್ರೇಷ್ಠವಾದ ಯಜಮಾನರಿಂದ ಯುಕ್ತವಾದ ಈ ಯಜ್ಞವು । **ಸದಮಿತ್**—ಸರ್ವದಾ । **ಅಪ್ರಮೃಷ್ಯಃ**—ಅಹಿಂಸಿತವಾದುದಾಗಿ ಆಗಲಿ । **ಇಳಾವಾನ್**—ಅನ್ನಯುಕ್ತವಾದುದೂ **ಪ್ರಜಾವಾನ್**—ಪುತ್ರಪೌತ್ರಾದಿಗಳಿಂದ ಕೂಡಿದುದೂ । **ದೀರ್ಘಃ**—ವಿಚ್ಛಿತ್ತಿಯಿಲ್ಲದೆ ಮುಂದುವರೆಯತಕ್ಕದ್ದೂ । **ರಯಿಃ**—ಧನಯುಕ್ತವಾದುದೂ । **ಪೃಥುಬುಧ್ನಃ**—ವಿಸ್ತೃತವಾದ ಮೂಲಸಂಪತ್ತುಳ್ಳದ್ದೂ । **ಸಭಾವಾನ್**—ಉತ್ತಮವಾದ ಸಭಾಯುಕ್ತವಾದದ್ದೂ ಆಗಿರಲಿ.

ಭಾವಾರ್ಥ

ಶಕ್ತಿಯುತನಾದ ಎಲೈ ಅಗ್ನಿಯೇ, ಈಗ ಆಚರಿಸಲ್ಪಡುವ ಯಜ್ಞವು ಗೋವುಗಳಿಂದ ಕೂಡಿದುದೂ, ಆಡುಗಳಿಂದ ಕೂಡಿದುದೂ, ಅಶ್ವೋಪೇತವಾದುದೂ ಆಗಲಿ. ಉತ್ತಮವಾದ ಯಜಮಾನರಿಂದ ಯುಕ್ತವಾದ ಈ ಯಜ್ಞವು ಸರ್ವದಾ ಅಹಿಂಸಿತವಾಗಿಯೂ, ಅನ್ನಯುಕ್ತವಾಗಿಯೂ, ಪುತ್ರಪೌತ್ರಾದಿಗಳಿಂದ ಕೂಡಿಯೂ. ವಿಘ್ನವಿಲ್ಲದೆ ಮುಂದುವರೆಯುವುದಾಗಿಯೂ, ಧನಯುಕ್ತವಾಗಿಯೂ, ವಿಸ್ತೃತವಾದ ಮೂಲಸಂಪತ್ತುಳ್ಳದ್ದಾಗಿಯೂ ಉತ್ತಮವಾದ ಸಭಾಯುಕ್ತವಾಗಿಯೂ ಆಗಿರಲಿ.

CC-0. Jangamwadi Math Collection. Digitized by eGangotri

## English Translation

May the sacrifice, Agni, be productive of cows, of sheep, of horses, and celebrated, by your worshipper, aided by the priests,be ever uninterrupted; may it, mighty Agni, be productive of food and progeny, long continued, affluent, wide based, and held in full assembly.

———:o:———

ಸಂಹಿತಾಪಾಠಃ

ಯಸ್ತ ಇಧ್ಮಂ ಜಭರತ್ಸಿಷ್ವಿದಾನೋ ಮೂರ್ಧಾನಂ ವಾ ತತಪತೇ ತ್ವಾಯಾ।
ಭುವಸ್ತಸ್ಯ ಸ್ವತವಾಁಃ ಪಾಯುರಗ್ನೇ ವಿಶ್ವಸ್ಮಾತ್ಸೀಮಘಾಯತ
ಉರುಷ್ಯ ॥ ೬ ॥

ಪದಪಾಠಃ

ಯಃ । ತೇ । ಇಧ್ಮಂ । ಜಭರತ್ । ಸಿಸ್ವಿದಾನಃ । ಮೂರ್ಧಾನಂ । ವಾ । ತತಪತೇ । ತ್ವಾಽಯಾ ।
ಭುವಃ । ತಸ್ಯ । ಸ್ವಽತವಾನ್ । ಪಾಯುಃ । ಅಗ್ನೇ । ವಿಶ್ವಸ್ಮಾತ್ । ಸೀಮ್ । ಅಘಽಯತಃ । ಉರುಷ್ಯ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತ್ವದರ್ಥಂ ಯಃ ಪುಮಾನ್ ಸಿಷ್ವಿದಾನಃ ಸಿಸ್ವಿದಾನಃ ಸ್ವಿದ್ಯದ್ಗಾತ್ರಃ ಸನ್ ಇಧ್ಮಂ ತ್ವತ್ಸಮಿಂಧನಾರ್ಥಂ ಕಾಷ್ಠಭಾರಂ ಜಭರತ್ । ಆಹರತಿ । ಯೋ ವಾ ತ್ವಾಯಾ ತ್ವತ್ಕಾಮನಯಾ ಮೂರ್ಧಾನಂ ಸ್ವಮಸ್ತಕಂ ತತಪತೇ ಕಾಷ್ಠಭಾರೇಣ ತಾಪಯತಿ ತಸ್ಯ ತಾದೃಶಸ್ಯ ಪುಂಸಃ ಸ್ವತವಾನ್ । ಸ್ವತವಾನ್ಧನವಾನಿತಿ ತಲವಕಾರ ಉಕ್ತಂ । ಧನವಾನ್ ಭುವಃ । ಭವಸಿ । ಪಾಯುಃ ಪಾಲಯಿತಾಸಿ । ಸೀಮೇನಂ ವಿಶ್ವಸ್ಮಾದಘಾಯತೋಽಘಂ ಪಾಪಮಿಚ್ಛತಃ ಪುರುಷಾದುರುಷ್ಯ । ರಕ್ಷ॥ ಜಭರತ್। ಹರತೇರ್ಲೇಟಿ ಚಜು ರೂಪಂ । ಚಜ್ಯನ್ಯತರಸ್ಯಾಮಿತಿ ಚಙ್ಪೂರ್ವಸ್ಯೋದಾತ್ತತ್ವಂ । ಸಿಸ್ವಿದಾನಃ । ಞಿಷ್ವಿದಾ ಗಾತ್ರಪ್ರಕ್ಷರಣೇ । ಕಾನಚಿ ರೂಪಂ । ಸಂಹಿತಾಯಾಮಾದೇಶಪ್ರತ್ಯಯಯೋರಿತಿ ಧಾತುಸಕಾರಸ್ಯ ಷತ್ವಂ । ತ್ವಾಯಾ । ತ್ವಾಮಾತ್ಮನ ಇಚ್ಛತೀತ್ಯರ್ಥೇ ಕ್ಯಚ್ । ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ । ಪಕಾರಸ್ಯ ಛಾಂದಸಮಾತ್ವಂ । ಕ್ಯಜಂತಾದ್ಧಾತೋರ್ಭಾವೇ ಅ ಪ್ರತ್ಯಯಾದಿತ್ಯಕಾರಪ್ರತ್ಯಯಃ । ಸುಪಾಂ ಸುಲುಗಿತಿ ತೃತೀಯಾಯಾ ಆಕಾರಃ । ಏಕಾದೇಶಸ್ವರಃ । ಭುವಃ । ಭವತೇರ್ಲೇಟ್ಯಡಾಗಮೋ ರೂಪಂ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ । ಆಗಮಸ್ಯಾನುದಾತ್ತತ್ವೇ ಧಾತು–

CC-0. Jangamwadi Math Collection. Digitized by eGangotri

ಸ್ವರಃ । ಸ್ವತವಾಁಃ ಪಾಯುರಿತ್ಯತ್ರ ಸಂಹಿತಾಯಾಂ ಸ್ವತವಾನ್ಪಾಯೌ । ಪಾ. ೮-೩-೧೧ । ಇತಿ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವೇತ್ಯಾಕಾರೋಽನುನಾಸಿಕಃ । ರೇಫಸ್ಯ ವಿಸರ್ಜನೀಯಃ । ಕುಪ್ವೋಃ ೪ಕಃ ೪ಪೌ ಚೇತಿಃ ಪ ಇತ್ಯಾದೇಶಃ । ಅಘಾಯತಃ । ಅಘಮಾತ್ಮನ ಇಚ್ಛತೀತ್ಯರ್ಥೇ ಸುಪಃ ಕ್ಯಚ್ । ಅಶ್ವಾಘಸ್ಯಾದಿತ್ಯಾತ್ವಂ । ತದಂತಾಚ್ಛತೃಪ್ರತ್ಯಯಃ ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಉರುಷ್ಯ । ಉರುಶಬ್ದಃ ಕಂಡ್ವಾದಿಃ । ಲೋಟಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

**ಅಗ್ನೇ**—ಎಲೈಅಗ್ನಿಯೇ! **ತೇ**—ನಿನ್ನಪೂಜೆಗಾಗಿ! **ಯಃ**—ಯಾವ ಪುರುಷನು! **ಸಿಷ್ವಿದಾನಃ**—ಬೆವರನ್ನು ಸುರಿಸುತ್ತಾ । **ಇಧ್ಮಂ**—ಸಮಿತ್ತುಗಳನ್ನು । **ಜಭರತ್**—ಹೊತ್ತುತರುತ್ತಾನೋ । **ವಾ**—ಅಥವಾ ಯಾರುತಾನೇ । **ತ್ವಾಯಾ**—ನಿನ್ನ ಅನುಗ್ರಹವನ್ನಪೇಕ್ಷಿಸಿ । **ಮೂರ್ಧಾನಂ**—ತನ್ನ ಮಸ್ತಕವನ್ನು । **ತತಪತೇ**—ಕಾಷ್ಠವನ್ನು ವಹಿಸಿ ಭಾರಮಾಡಿಕೊಳ್ಳುವನೋ । **ತಸ್ಯ**—ಅಂತಹ ಪುರುಷನ ಹಿತಕ್ಕಾಗಿ । **ಸ್ವತವಾನ್**—ಧನವಂತನಾಗಿ । **ಭುವಃ**—ಆಗುವೆ । **ಪಾಯುಃ**—ಅವನಿಗೆ ಪಾಲಕನಾಗುತ್ತೀಯೆ । **ಸೀಂ**—ಆ ಪುರುಷನನ್ನು । **ವಿಶ್ವಸ್ಮಾತ್**—ಸಮಸ್ತವಾದ । **ಅಘಾಯತಃ**—ಪಾಪಿಗಳಿಂದಲೂ । **ಉರುಷ್ಯ**—ರಕ್ಷಿಸು.

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಪೂಜೆಗಾಗಿ ಯಾವ ಪುರುಷನು ಬೆವರನ್ನು ಸುರಿಸುತ್ತಲೂ ತನ್ನ ತಲೆಯನ್ನುಭಾರಕ್ಕೆ ಈಡುಮಾಡುತ್ತಲೂ ಸಮಿತ್ತುಗಳನ್ನು ಹೊತ್ತುತರುತ್ತಾನೆಯೋ, ಅಂತಹ ಪುರುಷನ ಹಿತಕ್ಕಾಗಿ ನೀನು ಧನವಂತನಾಗು. ಅವನಿಗೆ ಪಾಲಕನಾಗಿರುತ್ತಾ ಅವನಿಗೆ ಕೇಡನ್ನು ಬಯಸುವ ಸಕಲ ಪಾಪಿಗಳಿಂದಲೂ ಅವನನ್ನು ರಕ್ಷಿಸು.

English Translation

You are the munificent recompenser of that man who, sweating (with toil), brings you fuel, and for your service causes his head to ache: protcet him, Agni, from every one that seeks to do him evil.

———

ಸಂಹಿತಾಪಾಠಃ

ಯಸ್ತೇ ಭರಾದನ್ನಿಯತೇ ಚಿದನ್ನಂ ನಿಶಿಷನ್ಮಂದ್ರಮತಿಥಿಮುದೀರತ್ ।
ಆ ದೇವಯುರಿನಧತೇ ದುರೋಣೇ ತಸ್ಮಿನ್ರಯಿರ್ಧ್ರುವೋ ಅಸ್ತು ದಾಸ್ವಾನ್ ॥ ೭ ॥

CC-0. Jangamwadi Math Collection. Digitized by eGangotri

## ಪದಪಾಠಃ

ಯಃ । ತೇ । ಭರಾತ್ । ಅನ್ನಿಽಯತೇ । ಚಿತ್ । ಅನ್ನಂ । ನಿಽಶಿಷತ್ । ಮಂದ್ರಂ । ಅತಿಥಿಂ । ಉತ್ಽ-
ಈರತ್ ।

ಆ । ದೇವಽಯುಃ । ಇನಧತೇ । ದುರೋಣೇ । ತಸ್ಮಿನ್ । ರಯಿಃ । ಧ್ರುವಃ । ಅಸ್ತು । ದಾಸ್ವಾನ್ ॥ ೭ ॥

## ಸಾಯಣಭಾಷ್ಯಂ

ಹೇ ಅಗ್ನೇ ಯಃ ಪುಮಾನನ್ನಿಯತೇಽನ್ನಮಿಚ್ಛತೇ ತೇ ತುಭ್ಯಂ ಹವಿರ್ಲಕ್ಷಣಂ ಪುರೋಡಾಶಾ-ದಿಕಮನ್ನಂ ಭರಾತ್ ದಾತುಂ ಬಿಭೃಯಾತ್ । ಚಿದಿತಿ ಚಾರ್ಥೇ । ಯಶ್ಚ ಮಂದ್ರಂ ಮದಕರಂ ಸೋಮಂ ನಿಶಿಷತ್ ನಿತರಾಂ ಪ್ರಯಚ್ಛತಿ । ಯಶ್ಚಾತಿಥಿಮತಿಥಿವತ್ಪೂಜ್ಯಂ ತ್ವಾಮುದೀರತ್ ಉತ್ತರ-ವೇದ್ಯಾಂ ಪ್ರಣಯತಿ । ಆ ಅಪಿ ಚ ಯಶ್ಚ ದೇವಯುರ್ದೇವಂ ತ್ವಾಂ ಕಾಮಯಮಾನೋ ದುರೋಣೇ ಸ್ವಕೀಯೇ ಗೃಹ ಇನಧತೇ ತ್ವಾಂ ಸಮಿದ್ಭಿಃ ಸಮಿಂಧತೇ ತಸ್ಮಿನ್ನೇತಸ್ಮಿನ್ಪುರುಷೇ ರಯಿಃ ಪುತ್ರೋ ಧ್ರುವ ಆಸ್ತಿಕ್ಯಬುದ್ಧ್ಯಾ ವೈದಿಕೇ ಮಾರ್ಗೇ ನಿಶ್ಚಲೋಽಸ್ತು । ತಥಾ ದಾಸ್ವಾನೌದಾರ್ಯೋಪೇತಶ್ಚಾಸ್ತು ॥ ಭರಾತ್। ಡುಭೃಞ್ ಧಾರಣಪೋಷಣಯೋರಿತ್ಯಸ್ಯ ಲೇಟ್ಯಾಡಾಗಮೇ ರೂಪಂ। ಯದ್ವೃತ್ತಯೋಗಾದ-ನಿಘಾತಃ । ಅನ್ನಿಯತೇ । ಅನ್ನಮಾತ್ಮನ ಇಚ್ಛತೇ । ಕ್ಯಚ್ । ಕ್ಯಚಿ ಚೇತೀತ್ವಂ । ಹ್ರಸ್ವಶ್ಛಾಂದಸಃ । ನಿಶಿಷತ್ । ಶಾಸು ಅನುಶಿಷ್ಟೌ । ಲುಙಿ ಸರ್ತಿಶಾಸ್ತ್ಯರ್ತಿಭ್ಯಶ್ಚೇತಿ ಚ್ಲೇರಙಾದೇಶಃ । ಶಾಸ ಇದಙ್-ಹಲೋರಿತೀತ್ವಂ । ಉದೀರತ್ । ಈರ ಗತೌ । ಲೇಟಿ ವ್ಯತ್ಯಯೇನ ಪರಸ್ಮೈಪದಂ । ಅಡಾಗಮಃ । ಆಗಮಸ್ಯಾನುದಾತ್ತತ್ವೇ ಧಾತುಸ್ವರಃ । ತಿಙಿ ಚೋದಾತ್ತವತೀತಿ ಗತೇರ್ನಿಘಾತಃ । ಇನಧತೇ । ಞಿಇಂಧೀ ದೀಪ್ತೌ । ಲಟಿ ವ್ಯತ್ಯಯೇನ ಶಪ್ । ರುಧಾದಿತ್ವಾತ್ ಶ್ನಮ್ । ಶ್ನಾನ್ನಲೋಪ ಇತಿ ಧಾತು-ನಕಾರಲೋಪಃ ಕ್ಙಿತ್ಪರತ್ವಾಭಾವಾತ್ ಶ್ನಸೋರಲ್ಲೋಪಾಭಾವಃ । ಯದ್ವೃತ್ತಯೋಗಾದನಿಘಾತಃ । ಶ್ನಮಃ ಸ್ವರಃ । ದಾಸ್ವಾನ್ । ದಾಸೃ ದಾನೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ತದಸ್ಯಾಸ್ತೀತಿ ಮತುಪ್ । ಮಾದುಪಧಾಯಾ ಇತಿ ವತ್ವಂ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ॥

## ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ) । ಯಃ—ಯಾವ ಯಜಮಾನನು । ಅನ್ನಿಯತೇ—ಹವಿಸ್ಸಿನ ರೂಪದ ಅನ್ನ ವನ್ನು ಇಚ್ಛಿಸುವ । ತೇ—ನಿನಗೆ । ಅನ್ನಂ—ಪುರೋಡಾಶಾದಿಕವಾದ ಅನ್ನವನ್ನು । ಭರಾತ್—ಅರ್ಪಿಸುತ್ತಾನೆಯೋ । ಚಿತ್—ಮತ್ತು । ಮಂದ್ರಂ—ಹಿತಕರವಾದ ಸೋಮವನ್ನು । ನಿಶಿಷತ್-ಅರ್ಪಿಸುತ್ತಾನೆಯೋ (ಯಾವನು) । ಅತಿಥಿಂ—ಪೂಜ್ಯನಾದ ನಿನ್ನನ್ನು । ಉದೀರತ್—ಉತ್ತರವೇದಿಯಲ್ಲಿ ಸ್ಥಾಪಿಸುವನೋ । ಆ—ಮತ್ತು। ದೇವಯುಃ—ದೇವತಾತ್ಮವಾದ ನಿನ್ನ ಅನುಗ್ರಹವನ್ನು ಅಪೇಕ್ಷಿಸಿ । ದುರೋಣೇ—ತನ್ನ ಯಜ್ಞಗೃಹದಲ್ಲಿ । ಇನಧತೇ—ನಿನ್ನನ್ನು ಪ್ರಜ್ವಲಿಸುವಂತೆ ಮಾಡುವನೋ । ತಸ್ಮಿನ್—ಅಂತಹ ಪುರುಷನ । ರಯಿಃ—ಪುತ್ರನು । ಧ್ರುವಃ ಅಸ್ತು—ದೃಢವಾದ ಆಸ್ತಿಕನಾಗಿರಲಿ । ದಾಸ್ವಾನ್—ಉದಾರವಾದ ದಾನಿಯಾಗಿರಲಿ.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ಯಾವ ಯಜಮಾನನು ಹವಿಸ್ಸಿನ ರೂಪದ ಅನ್ನವನ್ನು ಇಚ್ಛಿಸುವ ನಿನಗೆ ಪುರೋಡಾಶಾದಿಕವಾದ ಅನ್ನವನ್ನರ್ಪಿಸುವನೋ, ಮತ್ತು ನಿನ್ನನ್ನು ಉತ್ತರವೇದಿಯಲ್ಲಿ ಸ್ಥಾಪಿಸಿ ಹಿತಕರವಾದ ಸೋಮವನ್ನರ್ಪಿಸುವನೋ ಮತ್ತು ದೇವತಾತ್ಮನಾದ ನಿನ್ನನ್ನು ಯಜ್ಞಗೃಹದಲ್ಲಿ ಪ್ರಜ್ವಲಿಸುವಂತೆ ಮಾಡುವನೋ ಅಂತಹ ಪುರುಷನ ಪುತ್ರನು ದೃಢವಾದ ಆಸ್ತಿಕನಾಗಿರಲಿ. ಮತ್ತು ಉದಾರವಾದ ದಾನಿಯಾಗಿರಲಿ.

English Translation

May a son, firm in (devotion) and liberal (in offerings), be born to him who presents (srcrificial) food to you when needing food, who gives you constantly the exhilarating (Soma juice), who welcomes you as a guest, and devoutly kindles you in his mansion.

———

ಸಂಹಿತಾಪಾಠಃ

ಯಸ್ತ್ವಾ ದೋಷಾ ಯ ಉಷಸಿ ಪ್ರಶಂಸಾತ್ಪ್ರಿಯಂ ವಾ ತ್ವಾ ಕೃಣವತೇ ಹವಿಷ್ಮಾನ್ ।

ಅಶ್ವೋ ನ ಸ್ವೇ ದಮ ಆ ಹೇಮ್ಯಾವಾನ್ತಮಂಹಸಃ ಪೀಪರೋ ದಾಶ್ವಾಂಸಂ ॥ ೮ ॥

ಪದಪಾಠಃ

ಯಃ । ತ್ವಾ । ದೋಷಾ । ಯಃ । ಉಷಸಿ । ಪ್ರಶಂಸಾತ್ । ಪ್ರಿಯಂ । ವಾ । ತ್ವಾ । ಕೃಣವತೇ । ಹವಿಷ್ಮಾನ್ ॥

ಅಶ್ವಃ । ನ । ಸ್ವೇ । ದಮೇ । ಆ । ಹೇಮ್ಯಾಽವಾನ್ । ತಂ । ಅಂಹಸಃ । ಪೀಪರಃ । ದಾಶ್ವಾಂಸಂ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ಯಃ ಪುಮಾನ್ ದೋಷಾ ದೋಷಾಯಾಂ ರಾತ್ರೌ ತ್ವಾಂ ಪ್ರಶಂಸಾತ್ ಸಂಸ್ತುಯಾತ್ । ಯಶ್ಚೋಷಸಿ ಪ್ರಾತಃಕಾಲೇ ತ್ವಾಂ ಪ್ರಶಂಸೇತ್ । ಹವಿಷ್ಮಾನ್ ಸಂಭೃತಹವಿಷ್ಕೋ ಯೋ ವಾ ಯಜ-

CC-0. Jangamwadi Math Collection. Digitized by eGangotri

ಮಾನಸ್ತ್ವಾ ತ್ವಾಂ ಪ್ರಿಯಂ ಹವಿರ್ಭಿಃ ಪ್ರೀತಂ ಕೃಣವತೇ । ಕುರ್ಯಾತ್ । ಅ ಅಥ ದಾಶ್ವಾಂಸಂ ಹವಿರ್ದತ್ತವಂತಂ ತಂ ತಾದೃಶಂ ಯಜಮಾನಂ ಸ್ವೇ ದಮೇ ಸ್ವಕೀಯೇ ಗೃಹೇ ಹೇಮ್ಯಾವಾನ್ ಸುವರ್ಣನಿರ್ಮಿತಕಕ್ಷ್ಯಾವಾನಶ್ವೋ ನ ಅಶ್ವ ಇವ ಸಂಚರಂಸ್ತ್ವಮಂಹಸಃ ಪಾಪರೂಪಾದ್ದಾರಿದ್ರ್ಯಾತ್ಪೀಪರಃ । ಪಾರಂ ನಯ । ತಸ್ಮೈ ಯಜಮಾನಾಯ ಬಹು ಧನಂ ಪ್ರಯಚ್ಛೇತ್ಯರ್ಥಃ ॥ ದೋಷಾ । ಸಪ್ತಮ್ಯಾ ಆಕಾರಃ । ಪ್ರಶಂಸಾತ್ । ಶಂಸು ಸ್ತುತೌ । ಲೇಟ್ಯಾಡಾಗಮೋ ರೂಪಂ । ಕೃಣವತೇ । ಕೃವಿ ಹಿಂಸಾಕರಣಯೋರಿತ್ಯಸ್ಯ ಲೇಟಿ ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ಲೇಟೋಽಡಾಟಾವಿತ್ಯಡಾಗಮಃ । ಯದ್ವೃತ್ತಯೋಗಾದನಿಘಾತಃ । ಪ್ರತ್ಯಯಸ್ವರಃ । ಹೇಮ್ಯಾವಾನ್ । ಹೇಮಾರ್ಹತಿ । ಛಂದಸಿ ಚೇತಿ ಯಃ । ಪೀಪರಃ । ಪೄ ಪಾಲನಪೂರಣಯೋರಿತ್ಯಸ್ಯ ಣ್ಯಂತಸ್ಯ ಲುಙಿ ಚಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ಯಃ—ಯಾವ ಯಜಮಾನನು । ದೋಷಾ—ರಾತ್ರಿಕಾಲದಲ್ಲಿ । ತ್ವಾ—ನಿನ್ನನ್ನು । ಪ್ರಶಂಸಾತ್—ಸ್ತುತಿಸುವನೋ । ಯಃ—ಯಾವನು । ಉಷಸಿ—ಪ್ರಾತಃಕಾಲದಲ್ಲೂ ಸ್ತುತಿಸುವನೋ । ಹವಿಷ್ಮಾನ್ ವಾ—ಹವಿಸ್ಸಿನಿಂದ ಕೂಡಿದ ಯಾವ ಯಜಮಾನನು । ತ್ವಾ—ನಿನ್ನನ್ನು । ಪ್ರಿಯಂ—ಹವಿಸ್ಸುಗಳಿಂದ ಪ್ರೀತನನ್ನಾಗಿ । ಕೃಣವತೇ—ಮಾಡುತ್ತಾನೆಯೋ । ದಾಶ್ವಾಂಸಂ—ಹವಿಸ್ಸನ್ನು ಅರ್ಪಿಸತಕ್ಕ । ತಂ—ಅಂತಹ ಯಜಮಾನನನ್ನು । ಸ್ವೇ ದಮೇ—ಅವನ ಗೃಹದಲ್ಲಿ । ಹೇಮ್ಯಾವಾನ್—ಸುವರ್ಣಾಲಂಕಾರಗಳಿಂದ ಕೂಡಿದ । ಅಶ್ವೋ ನ—ಅಶ್ವದಂತೆ ಸಂಚರಿಸುತ್ತಾ । ಅಂಹಸಃ—ಪಾಪರೂಪದ ದಾರಿದ್ರ್ಯದಿಂದ । ಪೀಪರಃ—ಕೊನೆಗಾಣಿಸು.

ಭಾವಾರ್ಥ

ಎಲೈ ಅಗ್ನಿಯೇ, ಯಾವ ಯಜಮಾನನು ನಿನ್ನನ್ನು ಸಂಧ್ಯಾಕಾಲದಲ್ಲೂ ಪ್ರಾತಃಕಾಲದಲ್ಲೂ ಪ್ರಶಂಸಿಸಿ ಹವಿಸ್ಸನ್ನರ್ಪಿಸುವನೋ, ಅಂತಹ ಯಜಮಾನನ ಗೃಹದಲ್ಲಿ ನೀನು ಸುವರ್ಣಾಲಂಕೃತವಾದ ಅಶ್ವದಂತೆ ಸಂಚರಿಸುತ್ತಾ ಅವನನ್ನು ದಾರಿದ್ರ್ಯರೂಪದಿಂದ ದಾಟಿಸು.

English Translation

Preserve from sin the liberal sacrificer who glorifies you morning and evening, and, presenting oblations, does what is acceptable to you in his own abode, like a horse with golden caparisons.

---

ಸಂಹಿತಾಪಾಠಃ

ಯಸ್ತುಭ್ಯಮಗ್ನೇ ಅಮೃತಾಯ ದಾಶದ್ದುವಸ್ತ್ವೇ ಕೃಣವತೇ ಯತಸ್ರುಕ್।

CC-0. Jangamwadi Math Collection. Digitized by eGangotri

ನ ಸ ರಾಯಾ ಶಶಮಾನೋ ವಿ ಯೋಷನ್ನೈನಮಂಹಃ ಪರಿ ವರದ-
ಘಾಯೋಃ ॥ ೯ ॥

ಪದಪಾಠಃ

ಯಃ । ತುಭ್ಯಂ । ಅಗ್ನೇ । ಅಮೃತಾಯ । ದಾಶತ್ । ದುವಃ । ತ್ವೇ ಇತಿ । ಕೃಣವತೇ । ಯತಸ್ರುಕ್ ।
ನಃ । ಸಃ । ರಾಯಾ । ಶಶಮಾನಃ । ವಿ । ಯೋಷತ್ । ನ । ಏನಂ । ಅಂಹಃ । ಪರಿ । ವರತ್ । ಅಘ-
ಯೋಃ ॥ ೯ ॥

ಸಾಯಣಭಾಷ್ಯಂ

ಹೇ ಅಗ್ನೇ ಯೋ ಯಜಮಾನೋಽಮೃತಾಯ ಮರಣಧರ್ಮರಹಿತಾಯ ತುಭ್ಯಂ ದಾಶತ್ ಹವೀಂಷಿ ಪ್ರಯಚ್ಛೇತ್ । ಯತಸ್ರುಕ್ ಸಂಯತಸ್ರುಕ್ ಯಶ್ಚ ಯಜಮಾನಸ್ತ್ವೇ ತ್ವಯಿ ದುವಃ ಪರಿಚರ್ಯಾಂ ಕೃಣವತೇ ಕರೋತಿ ಶಶಮಾನಃ ಸ್ತೋತ್ರಂ ಕುರ್ವಾಣಃ ಸ ಯಜಮಾನೋ ರಾಯಾ ಧನೇನ ನ ವಿ ಯೋಷತ್ । ನ ಪೃಥಗ್ಭವೇತ್ । ಸದಾ ಧನಯುಕ್ತೋ ಭವೇದಿತ್ಯರ್ಥಃ । ಅಘಾಯೋಃ ಪಾಪಮಿಚ್ಛತೋ ಹಿಂಸಕಸ್ಯ ಸಂಬಂಧ್ಯಂಹ ಆಹನನಂ ಪಾಪಮೇನಂ ಯಜಮಾನಂ ನ ಪರಿ ವರತ್ । ನ ಪರಿವೃಣುಯಾತ್ । ನ ಸ್ಪೃಶೇದಿತ್ಯರ್ಥಃ ॥ ದಾಶತ್ । ದಾಶೃ ದಾನೇ । ಲೇಟ್ಯಡಾಗಮೋ ರೂಪಂ । ತ್ವೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇ ಇತ್ಯಾದೇಶಃ । ಕೃಣವತೇ । ಯದ್ವೃತ್ತಯೋಗಾದನಿಘಾತಃ । ಯೋಷತ್ । ಯು ಮಿಶ್ರಣೇ । ಲೇಟಿ ಸಿಬ್ಬಹುಲಮಿತಿ ಸಿಪ್ । ಅಡಾಗಮಃ । ನಿಘಾತಃ । ವರತ್ । ವೃಞ್ ವರಣೇ । ಲೇಟಿ ರೂಪಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ಯಜಮಾನನು । ಅಮೃತಾಯ—ಮರಣರಹಿತನಾದ । ತುಭ್ಯಂ—ನಿನಗೆ । ದಾಶತ್—ಹವಿಸ್ಸನ್ನರ್ಪಿಸುವನೋ । ಯತಸ್ರುಕ್—ಹವಿಃಪಾತ್ರೆಯನ್ನೆತ್ತಿಹಿಡಿದು । ತ್ವೇ—ನಿನಗೆ । ಶಶಮಾನಃ—ಸ್ತುತಿಯನ್ನು ಪಠಿಸುತ್ತಾ । ದುವಃ—ಪೂಜಾರೂಪವಾದ ಸೇವೆಯನ್ನು । ಕೃಣವತೇ—ಮಾಡುತ್ತಾನೋ । ಸಃ—ಅಂತಹ ಯಜಮಾನನು । ರಾಯಾ—ಧನದಿಂದ । ನ ವಿ ಯೋಷತ್—ಬೇರೆಯಾಗದಿರಲಿ । ಅಘಾಯೋಃ—ಪಾಪಿಷ್ಠನ । ಅಂಹಃ—ಹಿಂಸಾರೂಪವಾದ ಪಾಪವು । ಏನಂ—ಈ ಯಜಮಾನನನ್ನು । ನ ಪರಿ ವರತ್—ಸುತ್ತುವರೆಯದಿರಲಿ.

ಭಾವಾರ್ಥ

ಎಲೈ ಅಗ್ನಿಯೇ, ಯಾವ ಯಜಮಾನನು ಮರಣರಹಿತನಾದ ನಿನಗೆ ಹವಿಸ್ಸನ್ನರ್ಪಿಸುವನೋ ಮತ್ತು ಹವಿಃಪಾತ್ರೆಯನ್ನೆತ್ತಿ ನಿನಗೆ ಸ್ತುತಿರೂಪವಾದ ಸೇವೆಯನ್ನು ಸಲ್ಲಿಸುವನೋ ಅಂತಹ ಯಜಮಾನನಿಗೆ ಧನದ ದಾರಿದ್ರ್ಯವು ಇಲ್ಲದಿರಲಿ. ಶತ್ರುವಿನಿಂದ ಯಾವ ವಿಧವಾದ ಹಿಂಸೆಯೂ ಅವನನ್ನು ಸುತ್ತುವರಿಯದಿರಲಿ.

CC-0. Jangamwadi Math Collection. Digitized by eGangotri

## English Translation

Let not him who makes offerings to you, Agni, who are immortal, who with uplifted ladle pours out oblations repeating your praise, ever want riches, and let not the wickedness of a malevolent (foe) circumvent him.

———————

ಸಂಹಿತಾಪಾಠಃ

ಯಸ್ಯ ತ್ವಮಗ್ನೇ ಅಧ್ವರಂ ಜುಜೋಷೋ ದೇವೋ ಮರ್ತಸ್ಯ ಸುಧಿತಂ ರರಾಣಃ ।
ಪ್ರೀತೇದಸದ್ಧೋತ್ರಾ ಸಾ ಯವಿಷ್ಠಾಸಾಮ ಯಸ್ಯ ವಿಧತೋ ವೃಧಾಸಃ ॥

ಪದಪಾಠಃ

ಯಸ್ಯ । ತ್ವಂ । ಅಗ್ನೇ । ಅಧ್ವರಂ । ಜುಜೋಷಃ । ದೇವಃ । ಮರ್ತಸ್ಯ । ಸುऽಧಿತಂ । ರರಾಣಃ ।
ಪ್ರೀತಾ । ಇತ್ । ಅಸತ್ । ಹೋತ್ರಾ । ಸಾ । ಯವಿಷ್ಠ । ಅಸಾಮ । ಯಸ್ಯ । ವಿಧತಃ । ವೃಧಾಸಃ ॥೧೦॥

ಸಾಯಣಭಾಷ್ಯಂ

ಹೇ ಅಗ್ನೇ ರರಾಣೋ ರಮಮಾಣೋ ದೇವೋ ದೀಪ್ಯಮಾನಸ್ತ್ವಂ ಯಸ್ಯ ಮರ್ತಸ್ಯ ಮನುಷ್ಯಸ್ಯ ಸಂಬಂಧಿ ಸುಧಿತಂ ತ್ವದರ್ಥಂ ಸುಷ್ಠು ನಿಹಿತಮಧ್ವರಮನುಪಹತಂ ಹವಿರ್ಲಕ್ಷಣಮನ್ನಂ ಜುಜೋಷಃ ಸೇವೇಥಾ ಹೇ ಯವಿಷ್ಠ ಯುವತಮ ಸಾ ಹೋತ್ರಾ ಸ ಹೋತಾ ಯಜಮಾನಃ ಪ್ರೀತೇದಸತ್ । ಪ್ರೀತ ಏವ ಭವೇತ್ । ಅಸಾಮ ತಸ್ಯ ಯಜಮಾನಸ್ಯ ಸಂಬಂಧಿನೋ ಭವೇಮ ಯಸ್ಯ ವಿಧತೋऽಗ್ನಿಪರಿಚರ್ಯಾಂ ಕುರ್ವತೋ ಯಜಮಾನಸ್ಯ ಹೋತ್ರಾದಯೋ ವೃಧಾಸೋ ಯಜ್ಞಸ್ಯ ವರ್ಧಯಿತಾರೋ ಭವಂತಿ ॥ ಜುಜೋಷಃ । ಜುಷೀ ಪ್ರೀತಿಸೇವನಯೋರಿತ್ಯಸ್ಯ ಬಹುಲಂ ಛಂದಸೀತಿ ಶ್ಲುಃ । ಅಡಾಗಮಃ । ಅಭ್ಯಸ್ತಸ್ವರಃ । ಸುಧಿತಂ । ದಧಾತೇರ್ನಿಷ್ಠಾಯಾಂ ಸುಧಿತವಸುಧಿತೇತಿ ನಿಪಾತನಾತ್ ಧ್ಯಾದೇಶಃ । ಗತಿರನಂತರ ಇತಿ ಗತೇಃ ಸ್ವರಃ । ಅಸಾಮ । ಅಸ್ತೇರ್ಲೋಟ್ಯಾಡುತ್ತಮಸ್ಯ ಪಿಚ್ಚೇತ್ಯಾಡಾಗಮಃ । ಉತ್ತಮಸ್ಯ ಪಿದ್ವದ್ಭಾವಾದನುದಾತ್ತತ್ವೇ ಧಾತುಸ್ವರಃ । ವಿಧತಃ । ವಿಧ ವಿಧಾನೇ । ತುದಾದಿಃ। ಶತುರನುಮ ಇತಿ ವಿಭಕ್ತೇರುದಾತ್ತತ್ವಂ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಅಗ್ನೇ**— ಎಲೈ ಅಗ್ನಿಯೇ । **ರರಾಣಃ**—ರಮಿಸುತ್ತಾ । **ದೇವಃ**—ಪ್ರಕಾಶಮಾನನಾದ । **ತ್ವಂ**—ನೀನು । **ಯಸ್ಯ ಮರ್ತಸ್ಯ**—ಯಾವ ಮಾನವನ । **ಸುಧಿತಂ**—ವಿಧ್ಯುಕ್ತವಾಗಿ ಅರ್ಪಿತವಾದ । **ಅಧ್ವರಂ**—ಹವಿಸ್ಸಿನ ರೂಪದ ಅನ್ನವನ್ನು । **ಜುಜೋಷಃ**—ಸೇವಿಸುತ್ತೀಯೋ । **ಸಾ ಹೋತ್ರಾ**—ಆ ಯಜಮಾನನು । **ಪ್ರೀತೇದಸತ್**—ಪ್ರೀತನಾಗುತ್ತಾನೆ । **ಯವಿಷ್ಠ**—ಯುವಕನಾದ ಅಗ್ನಿಯೇ । **ಯಸ್ಯ ವಿಧತಃ**—ಯಾವ ಯಜಮಾನನ ಯಜ್ಞಾದಿಗಳಿಗೆ । **ವೃಧಾಸಃ**—(ಹೋತ್ರಾದಿಗಳು) ವೃದ್ಧಿಕಾರಕರಾಗಿರುತ್ತಾರೋ । **ಅಸಾಮ**—(ಆ ಯಜಮಾನನ) ಸಂಬಂಧವನ್ನು ನಾವು ಬೆಳೆಸುವಂತಾಗಲಿ ।

ಭಾವಾರ್ಥ

ಎಲೈ ಅಗ್ನಿಯೇ, ರಮಿಸುತ್ತಾ ಪ್ರಕಾಶಮಾನನಾದ ನೀನು ಯಾವ ಮಾನವನ ವಿಧ್ಯುಕ್ತವಾಗಿ ಅರ್ಪಿತವಾದ ಹವಿಸ್ಸಿನ ರೂಪದ ಅನ್ನವನ್ನು ಸೇವಿಸುತ್ತೀಯೋ, ಆ ಯಜಮಾನನು ಪ್ರೀತನಾಗುತ್ತಾನೆ. ಯುವಕನಾದ ಎಲೈ ಅಗ್ನಿಯೇ, ಯಾವ ಯಜಮಾನನ ಯಜ್ಞಾದಿಗಳಿಗೆ ಹೋತ್ರಾದಿಗಳು ವೃದ್ಧಿಕಾರಕರಾಗುತ್ತಾರೋ ಆ ಯಜಮಾನನ ಸಂಬಂಧವನ್ನು ನಾವು ಬೆಳೆಸುವಂತಾಗಲಿ.

English Translation

May that prayer be agreeable to you, Agni, who are a gracious deity, (which is uttered) by the man with whose well-conducted sacrifice you are well pleased, youngest (of the gods), of whose (rites) when worshipping you may we be the promoters.



ಸಂಹಿತಾಪಾಠಃ

ಚಿತ್ತಿಮಚಿತ್ತಿಂ ಚಿನವದ್ವಿ ವಿದ್ವಾನ್ಪೃಷ್ಠೇವ ವೀತಾ ವೃಜಿನಾ ಚ ಮರ್ತಾನ್ ।

ರಾಯೇ ಚ ನಃ ಸ್ವಪತ್ಯಾಯ ದೇವ ದಿತಿಂ ಚ ರಾಸ್ವಾದಿತಿಮುರುಷ್ಯ ॥೧೧॥

ಪದಪಾಠಃ

ಚಿತ್ತಿಂ । ಅಚಿತ್ತಿಂ । ಚಿನವತ್ । ವಿ । ವಿದ್ವಾನ್ । ಪೃಷ್ಠಾಽಇವ । ವೀತಾ । ವೃಜಿನಾ । ಚ । ಮರ್ತಾನ್ ।

ರಾಯೇ । ಚ । ನಃ । ಸುಽಅಪತ್ಯಾಯ । ದೇವ । ದಿತಿಂ । ಚ । ರಾಸ್ವ । ಅದಿತಿಂ । ಉರುಷ್ಯ ॥ ೧೧ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ವಿದ್ವಾನ್ ಪ್ರಾಣಿನಾಂ ಪುಣ್ಯಪಾಪರೂಪಾಣಿ ಕರ್ಮಾಣಿ ಜಾನಾನಃ ಸೋಽಗ್ನಿಶ್ಚಿತ್ತಿಂ ಜ್ಞಾತವ್ಯಂ ಪುಣ್ಯಮಚಿತ್ತಿಮನುಪಾದೇಯತ್ವೇನಾಚೇತನೀಯಂ ಪಾಪಂ । ಯದ್ವಾ । ಚಿತ್ತಿಂ ಜ್ಞಾನಮಚಿತ್ತಿಮಜ್ಞಾನಂ ವಿ ಚಿನವತ್ । ವಿಚಿನೋತು । ಪೃಥಕ್ಕರೋತು । ತತ್ರ ದೃಷ್ಟಾಂತಃ । ಪೃಷ್ಠೇವ । ಯಥಾಶ್ವಪಾಲೋಽಶ್ವಾನಾಂ ವೀತಾ ಕಾಂತಾನಿ ವೃಜಿನಾ ದುರ್ವಹಾಣಿ ಚ ಪೃಷ್ಠಾ ಪೃಷ್ಠಾನಿ ಜ್ಞೇಯೋಪಾದೇಯತ್ವೇನ ಪೃಥಕ್ಕರೋತಿ ತದ್ವತ್ । ಕಿಂಚ ಮರ್ತಾನ್ಪುಣ್ಯಕೃತೋಽಪುಣ್ಯಕೃತಶ್ಚ ಮನುಷ್ಯಾನ್ ಪೃಥಕ್ಕರೋತು । ಹೇ ದೇವಾಗ್ನೇ ಸ್ವಪತ್ಯಾಯ ಶೋಭನಪುತ್ರೋಪೇತಾಯ ರಾಯೇ ಧನಾಯ ನೋಽಸ್ಮಾನ್ ಕುರು । ದಿತಿಂ ದಾತಾರಂ ಚ ರಾಸ್ವ । ದೇಹಿ । ಅದಿತಿಂ । ಪಂಚಮ್ಯರ್ಥೇ ದ್ವಿತೀಯಾ । ಅದಾತುಃ ಸಕಾಶಾದುರುಷ್ಯ । ರಕ್ಷ ॥ ಚಿತ್ತಿಂ । ಚಿತೀ ಸಂಜ್ಞಾನೇ । ಸ್ತ್ರಿಯಾಂ ಕ್ತಿನ್ । ನಿತ್ತ್ವಾದಾದ್ಯುದಾತ್ತಃ । ಚಿನವತ್ । ಚಿನೋತೇರ್ಲೇಟ್ಯಡಾಗಮಃ । ದಿತಿಂ । ದಾಞ್ ದಾನೇ । ಕರ್ತರಿ ಕ್ತಿನ್ । ರಾಸ್ವ । ರಾ ದಾನೇ । ಲೋಟಿ ವ್ಯತ್ಯಯೇನಾತ್ಮನೇಪದಂ । ಚವಾಯೋಗೇ ಪ್ರಥಮೇತಿ ನ ನಿಘಾತಃ ॥

## ಪ್ರತಿಪದಾರ್ಥ

ವೀತಾ—(ಅಶ್ವದ ಪೃಷ್ಠ ಭಾಗದಲ್ಲಿ) ರಮ್ಯವಾದುದೂ । ವೃಜಿನಾ—ಅಸಹ್ಯವಾದುದೂ ಆದ ಭಾಗಗಳನ್ನು । ಪೃಷ್ಠೇವ—ಅಶ್ವಪಾಲಕನು ಬೇರೆಬೇರೆ ಮಾಡುವಂತೆ । ವಿದ್ವಾನ್—ಸರ್ವಜ್ಞನಾದ ಅಗ್ನಿಯು । ಚಿತ್ತಿಂ—ಪುಣ್ಯವನ್ನೂ । ಅಚಿತ್ತಿಂ—ಪಾಪವನ್ನೂ । ವಿ ಚಿನವತ್—ಬೇರೆಬೇರೆ ಮಾಡಲಿ । ಮರ್ತಾನ್—ಮಾನವರಲ್ಲೂ ಸಹ ಪುಣ್ಯಕರ್ತರನ್ನೂ ಪಾಪಿಷ್ಠರನ್ನೂ ಬೇರೆಬೇರೆ ಮಾಡಲಿ । ದೇವ—ಎಲೈ ಅಗ್ನಿಯೇ । ಸ್ವಪತ್ಯಾಯ—ಉತ್ತಮವಾದ ಪುತ್ರರೊಡಗೂಡಿ । ರಾಯೇ—ಧನಕ್ಕೆಭಾಗಿಗಳನ್ನಾಗಿ ಆಗುವಂತೆ । ನಃ—ನಮ್ಮನ್ನು ಅನುಗ್ರಹಿಸು। ದಿತಿಂ—ದಾತೃವನ್ನು । ರಾಸ್ವ—ಕೊಡು । ಅದಿತಿಂ—ಅದಾತೃವಿನಿಂದ । ಉರುಷ್ಯ—ರಕ್ಷಿಸು.

## ಭಾವಾರ್ಥ

ಅಶ್ವದ ಪೃಷ್ಠಭಾಗದಲ್ಲಿ ರಮ್ಯವಾದುದೂ ಅಸಹ್ಯವಾದುದೂ ಆದ ಭಾಗಗಳನ್ನು ಅಶ್ವಪಾಲನು ಬೇರೆಬೇರೆ ಮಾಡುವಂತೆ ಸರ್ವಜ್ಞನಾದ ಅಗ್ನಿಯು ಪುಣ್ಯವನ್ನೂ ಪಾಪವನ್ನೂ ಬೇರೆಬೇರೆ ಮಾಡಲಿ. ಮಾನವರಲ್ಲೂ ಸಹ ಪುಣ್ಯಕರ್ತರನ್ನೂ ಪಾಪಿಷ್ಠರನ್ನೂ ಬೇರೆಬೇರೆ ಮಾಡಲಿ. ಎಲೈ ಅಗ್ನಿಯೇ, ಉತ್ತಮವಾದ ಪುತ್ರರೊಡಗೂಡಿದ ಧನಕ್ಕೆ ನಮ್ಮನ್ನು ಭಾಗಿಗಳಾಗುವಂತೆ ಮಾಡು. ನಮಗೆ ಉತ್ತಮವಾದ ದಾತೃವನ್ನು [ಕೊಟ್ಟು ಅದಾತೃವಿನಿಂದ ನಮ್ಮನ್ನು ರಕ್ಷಿಸು.

## Euglish Translation

May the wise Agni, discriminate between virtue and vice, between (virtuous and wicked) men, as a (groom distinguishes between (the strong ard weak backs (of horses) : enrich us with wealth accompanied by virtuous offspring : be bountiful to the liberal giver : shun him who gives not.

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಕವಿಂ ಶಶಾಸುಃ ಕವಯೋಽದಬ್ಧಾ ನಿಧಾರಯಂತೋ ದುರ್ಯಾಸ್ವಾಯೋಃ।
ಅತಸ್ತ್ವಂ ದೃಶ್ಯಾಁ ಅಗ್ನ ಏತಾನ್ಪಡ್ಭಿಃ ಪಶ್ಯೇರದ್ಭುತಾಁ ಅರ್ಯ ಏವೈಃ ॥

ಪದಪಾಠಃ

ಕವಿಂ । ಶಶಾಸುಃ । ಕವಯಃ । ಅದಬ್ಧಾಃ । ನಿಽಧಾರಯಂತಃ । ದುರ್ಯಾಸು । ಆಯೋಃ ।
ಅತಃ । ತ್ವಂ । ದೃಶ್ಯಾನ್ । ಅಗ್ನೇ । ಏತಾನ್ । ಪಟ್ಽಭಿಃ । ಪಶ್ಯೇಃ । ಅದ್ಭುತಾನ್ । ಅರ್ಯಃ ।
ಏವೈಃ ॥ ೧೨ ॥

ಸಾಯಣಭಾಷ್ಯಂ

ಹೇ ಅಗ್ನೇ ಆಯೋರ್ಮನುಷ್ಯಸ್ಯ ದುರ್ಯಾಸು ಗೃಹೇಷ್ವದಬ್ಧಾಃ ಕೇನಾಪ್ಯತಿರಸ್ಕೃತಾ ನಿಧಾರಯಂತೋ ನಿವಸಂತಃ ಕವಯಃ ಕ್ರಾಂತದೃಶೋ ದೇವಾಃ ಕವಿಂ ಮೇಧಾವಿನಂ ತ್ವಾಂ ಶಶಾಸುಃ; ಹೋತಾ ಭವೇತಿ ಶಶಂಸುಃ । ಅತಃ ಕಾರಣಾದರ್ಯೋ ಯಜ್ಞಸ್ಯ ಸ್ವಾಮೀ ತ್ವಂ ದೃಶ್ಯಾಂದರ್ಶನೀಯಾನದ್ಭುತಾನಾಶ್ಚರ್ಯರೂಪೋಪೇತಾನಿಂದ್ರಾದೀನೇತಾನ್ದೇವಾನೇವೈರ್ಗಮನಶೀಲೈಃ ಪಡ್ಭಿಃ ಪಾದ್ಯೈಃ ಸ್ವತೇಜೋಭಿಃ ಪಶ್ಯೇಃ । ಜಾನೀಯಾಃ ॥ ದೃಶ್ಯಾನ್ । ದೃಶಿರ್ ಪ್ರೇಕ್ಷಣೇ । ಋದುಪಧಾಚ್ಚಾಕ್ಲೃಪಿಚೃತೇಃ । ಪಾ. ೩-೧-೧೧೦ । ಇತಿ ಕರ್ಮಣಿ ಕ್ಯಪ್ । ಕಿತ್ತ್ವಾದಗುಣಃ । ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಆಯೋಃ—ಮಾನವನ । ದುರ್ಯಾಸು—ಗೃಹಗಳಲ್ಲಿ । ಅದಬ್ಧಾಃ—ತಿರಸ್ಕಾರರಹಿತರಾಗಿ । ನಿಧಾರಯಂತೇ—ವಾಸಮಾಡತಕ್ಕ । ಕವಯಃ—ಕ್ರಾಂತದರ್ಶಿಗಳಾದ ಋಷಿಗಳು । ಕವಿಂ—ಮೇಧಾವಿಯಾದ ನಿನ್ನನ್ನು । ಶಶಾಸುಃ—(ನೀನು ಹೋತೃವಾಗಿರಬೇಕೆಂದು) ಸ್ತುತಿಸಿದರು । ಅತಃ—ಆದುದರಿಂದ। ಅರ್ಯಃ—ಸ್ವಾಮಿಯಾದ । ತ್ವಂ—ನೀನು । ದೃಶ್ಯಾನ್—ಆಕರ್ಷಕವಾದ ರೂಪವುಳ್ಳವರೂ । ಅದ್ಭುತಾನ್—ಆಶ್ಚರ್ಯಕರವಾದ ರೂಪವುಳ್ಳವರೂ ಆದ । ಏತಾನ್—ಇಂದ್ರಾದಿದೇವತೆಗಳನ್ನು। ಏವೈಃ—ಸಂಚಾರಾತ್ಮಕಗಳಾದ । ಪಡ್ಭಿಃ—ನಿನ್ನ ತೇಜಸ್ಸುಗಳಿಂದ। ಪಶ್ಯೇಃ—ವೀಕ್ಷಿಸಿ ತಿಳಿಯುತ್ತೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಯಜಮಾನನ ಗೃಹದಲ್ಲಿ ತಿರಸ್ಕಾರರಹಿತರಾಗಿ ವಾಸಮಾಡತಕ್ಕ ಕ್ರಾಂತಿದರ್ಶಿಗಳಾದ ಋಷಿಗಳು ಮೇಧಾವಿಯಾದ ನಿನ್ನನ್ನು ನೀನು ಹೋತೃವಾಗಿರಬೇಕೆಂದು ಸ್ತುತಿಸಿದರು. ಆದುದರಿಂದ ಸ್ವಾಮಿಯಾದ ನೀನು ಆಕರ್ಷಕವಾದ ರೂಪವುಳ್ಳವರೂ ಆಶ್ಚರ್ಯಕರವಾದ ರೂಪವುಳ್ಳವರೂ ಆದ ಇಂದ್ರಾದಿದೇವತೆಗಳನ್ನು ಸಂಚಾರಾತ್ಮಕಗಳಾದ ನಿನ್ನ ತೇಜಸ್ಸುಗಳಿಂದ ವೀಕ್ಷಿಸಿ ತಿಳಿಯುತ್ತೀಯೆ.

CC-0. Jangamwadi Math Collection. Digitized by eGangotri

English Translation

The unreviled sages obiding in the dwellings of man have glorified the sage (Agni); therefore, lord of sacrifice, you may proceed with swift-moving feet to behold the admirable and marvellous deities.

---

ಸಂಹಿತಾಪಾಠಃ

ತ್ವಮಗ್ನೇ ವಾಘತೇ ಸುಪ್ರಣೀತಿಃ ಸುತಸೋಮಾಯ ವಿಧತೇ ಯವಿಷ್ಠ ।
ರತ್ನಂ ಭರ ಶಶಮಾನಾಯ ಘೃಷ್ವೇ ಪೃಥು ಶ್ಚಂದ್ರಮವಸೇ ಚರ್ಷಣಿಪ್ರಾಃ॥

ಪದಪಾಠಃ

ತ್ವಂ । ಅಗ್ನೇ । ವಾಘತೇ । ಸುಽಪ್ರನೀತಿಃ । ಸುತಽಸೋಮಾಯ । ವಿಧತೇ । ಯವಿಷ್ಠ ।
ರತ್ನಂ । ಭರ । ಶಶಮಾನಾಯ । ಘೃಷ್ವೇ । ಪೃಥು । ಚಂದ್ರಂ । ಅವಸೇ । ಚರ್ಷಣಿಽಪ್ರಾಃ ॥ ೧೩ ॥

ಸಾಯಣಭಾಷ್ಯಂ

ಹೇ ಯವಿಷ್ಠ ಯುವತಮ ಘೃಷ್ವೇ ದೀಪ್ತಿಯುಕ್ತ । ಯದ್ವಾ । ಪರೇಷಾಂ ಘರ್ಷಣಶೀಲ ಹೇ ಅಗ್ನೇ ಚರ್ಷಣಿಪ್ರಾ ಅಪೇಕ್ಷಿತಪ್ರದಾನೇನ ಮನುಷ್ಯಾಣಾಂ ಕಾಮಪೂರಕಃ ಸುಪ್ರಣೀತಿಃ ಸುಷ್ಠೂತ್ತರ-ವೇದ್ಯಾಂ ಪ್ರಣಯನೀಯಸ್ತ್ವಂ ಸುತಸೋಮಾಯ ವಿಧತೇ ತವ ಪರಿಚರಣಂ ಕುರ್ವತೇ ಶಶಮಾನಾಯ ತ್ವಾಂ ಸ್ತುವತೇ ವಾಘತೇ ಯಜ್ಞನಿರ್ವಾಹಕಾಯ ಯಜಮಾನಾಯ ಪೃಥು ಪ್ರಭೂತಂ ಚಂದ್ರಮಾಹ್ಲಾ-ದಕಾರಿ ರತ್ನಮುತ್ತಮಂ ಧನಮವಸೇ ರಕ್ಷಣಾಯ ಭರ । ಆಹರ । ಪ್ರಯಚ್ಛೇತ್ಯರ್ಥಃ ॥ ಸುಪ್ರಣೀತಿಃ । ಣೀಞ್ ಪ್ರಾಪಣೇ । ಕರ್ಮಣಿ ಕ್ತಿನ್ । ತಾದೌ ಚ ನಿತಿ ಕೃತೀತ್ಯನಂತರಪ್ರಶಬ್ದಸ್ಯೋದಾತ್ತತ್ವಂ । ಪೃಥು ಶ್ಚಂದ್ರಮಿತ್ಯತ್ರ ಸಂಹಿತಾಯಾಂ ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಡಾಗಮಃ । ಶ್ಚುತ್ವೇನ ಶಕಾರಃ ॥

ಪ್ರತಿಪದಾರ್ಥ

ಯವಿಷ್ಠ—ಅತ್ಯಂತಯುವಕನಾದವನೂ । ಘೃಷ್ವೇ—ಶತ್ರುನಾಶಕನೂ ಆದ । ಅಗ್ನೇ—ಎಲೈ ಅಗ್ನಿಯೇ । ಚರ್ಷಣಿಪ್ರಾಃ—ಇಷ್ಟಾರ್ಥಪ್ರದನಾಗಿಯೂ । ಸುಪ್ರಣೀತಿಃ—ಉತ್ತರವೇದಿಯಲ್ಲಿ ಉತ್ತಮವಾದ ವಿಧಿಯಿಂದ ಸ್ಥಾಪಿತನಾಗುವವನೂ ಆದ । ತ್ವಂ—ನೀನು । ಸುತಸೋಮಾಯ—ನಿನಗಾಗಿ ಸೋಮವನ್ನು ಹಿಂಡಿರುವವನೂ ।

CC-0. Jangamwadi Math Collection. Digitized by eGangotri

**ವಿಧತೇ**—ನಿನ್ನನ್ನು ಸೇವಿಸುವವನೂ । **ಶಶಮಾನಾಯ**—ನಿನ್ನನ್ನು ಸ್ತುತಿಸುವವನೂ । **ವಾಘತೇ**—ಯಜ್ಞ ನಿರ್ವಾಹಕನೂ ಆದ ಯಜಮಾನನಿಗೆ । **ಪೃಥು**—ಪ್ರಭೂತವಾದುದೂ । **ಚಂದ್ರಂ**—ಆಹ್ಲಾದಕರವಾದುದೂ । **ರತ್ನಂ**—ಉತ್ತಮವಾದುದೂ ಆದ ಧನವನ್ನು । **ಅವಸೇ**—ಅವನ ರಕ್ಷಣೆಗಾಗಿ । **ಭರ**—ಒದಗಿಸು.

ಭಾವಾರ್ಥ

ಅತ್ಯಂತ ಯುವಕನಾದವನೂ, ಶತ್ರುನಾಶಕನೂ ಆದ ಎಲೈ ಅಗ್ನಿಯೇ, ಇಷ್ಟಾರ್ಥಪ್ರದನಾಗಿಯೂ, ಉತ್ತರ ವೇದಿಯಲ್ಲಿ ಉತ್ತಮವಾದ ವಿಧಿಯಿಂದ ಸ್ಥಾಪಿತನಾಗುವವನೂ ಆದ ನೀನು, ನಿನಗಾಗಿ ಸೋಮವನ್ನು ಹಿಂಡಿ ಅರ್ಪಿಸುವವನೂ, ನಿನ್ನನ್ನು ಸ್ತುತಿಸಿ ಸೇವಿಸುವವನೂ, ಯಜ್ಞನಿರ್ವಾಹಕನೂ ಆದ ಯಜಮಾನನಿಗೆ ಪ್ರಭೂತ ವಾದುದೂ ಆಹ್ಲಾದಕರವಾದುದೂ ಉತ್ತಮವಾದುದೂ ಆದ ಧನವನ್ನು ಅವನ ರಕ್ಷಣೆಗಾಗಿ ಒದಗಿಸು.

English Translation

Resplendent Agni, youngest of the gods, the satisfier of (the desires of) men, who are easily to be conducted (to the altar), bestow joy-yielding and abundant wealth for his preservation upon the worshipper who praises and worships you and offers you libations.

———— :o: ————

ಸಂಹಿತಾಪಾಠಃ

ಅಧಾ ಹ ಯದ್ವಯಮಗ್ನೇ ತ್ವಾಯಾ ಪಡ್ಭಿರ್ಹಸ್ತೇಭಿಶ್ಚಕೃಮಾ ತನೂಭಿಃ।
ರಥಂ ನ ಕ್ರಂತೋ ಅಪಸಾ ಭುರಿಜೋರೃತಂ ಯೇಮುಃ ಸುಧ್ಯ
ಆಶುಷಾಣಾಃ ॥ ೧೪ ॥

ಪದಪಾಠಃ

ಅಧ । ಹ । ಯತ್ । ವಯಂ । ಅಗ್ನೇ । ತ್ವಾऽಯಾ । ಪಟ್ऽಭಿಃ । ಹಸ್ತೇಭಿಃ । ಚಕೃಮ । ತನೂಭಿಃ ।
ರಥಂ । ನ । ಕ್ರಂತಃ । ಅಪಸಾ । ಭುರಿಜೋಃ । ಋತಂ । ಯೇಮುಃ । ಸುऽಧ್ಯಃ । ಆಶುಷಾಣಾಃ ॥೧೪॥

ಸಾಯಣಭಾಷ್ಯಂ

ಹೇ ಅಗ್ನೇ ಅಧ ಹ ಅಥ ಖಲು ವಯಂ ತ್ವಾಯಾ ತ್ವತ್ಕಾಮನಯಾ ಪಡ್ಭಿಃ ಪಾದೈರ್ಹಸ್ತೇಭಿರ್ಹಸ್ತೈಸ್ತನೂಭಿರನ್ಯೈಃಶ್ಚಾವಯವೈಶ್ಚಕೃಮ ಯತ್ ಯಸ್ಮಾತ್ಕಾರಣಾತ್ಕರ್ಮಸಿದ್ಧ್ಯರ್ಥಂ ತ್ವಾಮುಪಸಾದಯಾಮಸ್ತಸ್ಮಾತ್ಸುಧ್ಯಃ ಸುಕರ್ಮಾಣಿ ಆಶುಷಾಣಾಃ ಕರ್ಮಾಣಿ ವ್ಯಾಪ್ನುವಂತಸ್ತೇಽಂಗಿರಸ ಋತಂ

CC-0. Jangamwadi Math Collection. Digitized by eGangotri

ಸತ್ಯಭೂತಂ ತ್ವಾಂ ಭುರಿಜೋಃ । ಬಿಭೃತಃ ಕರ್ಮಕರಣಸಾಮರ್ಥ್ಯಂ ಪದಾರ್ಥಾನ್ವೇತಿ ಭುರಿಜೌ ಬಾಹೂ । ತಯೋರಪಸಾ ಮಂಥನಾಖ್ಯೇನ ಕರ್ಮಣಾ ಯೇಮುಃ । ಉದ್ಯಚ್ಛಂತಿ । ತತ್ರ ದೃಷ್ಟಾಂತಃ । ರಥಂ ನ । ಯಥಾ ಕೃಂತಃ ಕಾರವಃ ಶಿಲ್ಪಿನಃ ಕ್ರಾಮಂತೋಽಧ್ವಗಾ ವಾ ಹಸ್ತಯೋರ್ಯಥಾ ರಥಮು-ದ್ಯಚ್ಛಂತಿ ತದ್ವತ್ । ಯದ್ವಾ । ಭುರಿಜೋಃ । ದೇವಾನ್ಮನುಷ್ಯಾಂಶ್ಚ ಬಿಭೃತ ಇತಿ ಭುರಿಜೌ ದ್ಯಾವಾ-ಪೃಥಿವ್ಯೌ । ತಯೋರ್ಮಧ್ಯೇಽಪಸಾ ಪರಿಚರಣಕರ್ಮಣಾ ಸತ್ಯಭೂತಂ ತಮಗ್ನಿಂ ಯೇಮುಃ । ಉದ್ಯ-ಚ್ಛಂತಿ ॥ ಅಧ । ಸಂಹಿತಾಯಾಂ ನಿಪಾತಸ್ಯ ಚೇತಿ ದೀರ್ಘಃ । ಕೃಂತಃ । ಕರೋತೇಃ ಶತರಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಪ್ರತ್ಯಯಸ್ವರಃ । ಭುರಿಜೋಃ । ಡುಭೃಞ್ ಧಾರಣಪೋಷಣಯೋಃ । ಭೃಞ ಉಚ್ಚ । ಉ. ೨-೭೧ । ಇತೀಜಿಪ್ರತ್ಯಯಃ । ಧಾತೋರುಕಾರೋ ರಪರಃ । ಪ್ರತ್ಯಯಸ್ವರಃ ॥

## ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಧ ಹ—ಅನಂತರ । ವಯಂ—ನಾವು । ತ್ವಾಯಾ—ನಿನ್ನ ಅನುಗ್ರಹ ವನ್ನಪೇಕ್ಷಿಸಿ । ಪದ್ಭಿಃ—ಪಾದಗಳಿಂದಲೂ । ಹಸ್ತೇಭಿಃ—ಹಸ್ತಗಳಿಂದಲೂ । ತನೂಭಿಃ—ಇತರ ಉತ್ತಮವಾದ ಅವಯವಗಳಿಂದಲೂ । ಯತ್—ಯಾವ ಅನುಗ್ರಹಕ್ಕಾಗಿ । ಚಕೃಮ—ನಿನ್ನ ಸೇವೆಗಾಗಿ ಸಿದ್ಧಮಾಡಿಕೊಳ್ಳು ತ್ತೇವೆಯೋ (ಆಗ) । ಕೃಂತಃ—ಶಿಲ್ಪಿಗಳು । ರಥಂ ನ—ರಥವನ್ನು ಪರಿಷ್ಕರಿಸಿ ನಿರ್ಮಿಸುವಂತೆ । ಸುಧ್ಯಃ—ಉತ್ತಮವಾದ ಕರ್ಮಕರ್ತರೂ । ಆಶುಷಾಣಾಃ—ಕರ್ಮಗಳಲ್ಲಿ ನಿರತರೂ ಆದ ಅಂಗಿರಸ್ಸುಗಳು । ಋತಂ—ಸತ್ಯಾತ್ಮಕನಾದ ನಿನ್ನನ್ನು । ಭುರಿಜೋಃ—ತಮ್ಮ ತೋಳುಗಳ । ಅಪಸಾ—ಪರಿಶ್ರಮಕರ್ಮಗಳಿಂದ । ಯೇಮುಃ—ಸಿದ್ಧಪಡಿಸುತ್ತಾರೆ.

## ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಅನುಗ್ರಹವನ್ನಪೇಕ್ಷಿಸಿದ ನಾವುಗಳು ನಮ್ಮ ಹಸ್ತಗಳಿಂದಲೂ, ಪಾದಗಳಿಂದಲೂ ಮತ್ತು ಇತರ ಉತ್ತಮವಾದ ಅವಯವಗಳಿಂದಲೂ ನಿನ್ನ ಸೇವೆಗಾಗಿ ಸಿದ್ಧಪಡಿಸಿಕೊಂಡಾಗ, ಉತ್ತಮವಾದ ಕರ್ಮಕರ್ತರೂ ಕರ್ಮಗಳಲ್ಲಿ ನಿರತರೂ ಆದ ಅಂಗಿರಸ್ಸುಗಳು, ಶಿಲ್ಪಿಗಳು ರಥವನ್ನು ಪರಿಷ್ಕರಿಸಿ ನಿರ್ಮಿಸುವಂತೆ ತಮ್ಮ ತೋಳುಗಳ ಪರಿಶ್ರಮದಿಂದ ನಿನ್ನ ಪೂಜೆಯನ್ನು ಸಂಸ್ಕರಿಸುತ್ತಾರೆ

## English Translation

Therefore, Agni, when we labour for you with hands and feet, and all our members, the pious performers of rites, (the Angirasas), exercise their arms in the work (of attrition), as wheelwrights fabricate a car.





CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಧಾ ಮಾತುರುಷಸಃ ಸಪ್ತ ವಿಪ್ರಾ ಜಾಯೇಮಹಿ ಪ್ರಥಮಾ ವೇಧಸೋ ನೄನ್।

ದಿವಸ್ಪುತ್ರಾ ಅಂಗಿರಸೋ ಭವೇಮಾದ್ರಿಂ ರುಜೇಮ ಧನಿನಂ ಶುಚಂತಃ ॥

ಪದಪಾಠಃ

ಅಧ । ಮಾತುಃ । ಉಷಸಃ । ಸಪ್ತ । ವಿಪ್ರಾಃ । ಜಾಯೇಮಹಿ । ಪ್ರಥಮಾಃ । ವೇಧಸಃ । ನೄನ್ ।

ದಿವಃ । ಪುತ್ರಾಃ । ಅಂಗಿರಸಃ । ಭವೇಮ । ಅದ್ರಿಂ । ರುಜೇಮ । ಧನಿನಂ । ಶುಚಂತಃ ॥ ೧೫ ॥

ಸಾಯಣಭಾಷ್ಯಂ

ವಾಮದೇವೋಽನ್ಯೈಃ ಷಡ್ಭಿರಂಗಿರೋಭಿಃ ಸಹ ಬ್ರೂತೇ । ಅಧಾಪಿ ಚ ಮಾತುರುಷಸಃ ಸಕಾಶಾತ್ಸಪ್ತ ಸಪ್ತಸಂಖ್ಯಾಕಾ ವಿಪ್ರಾಃ ಪ್ರಾಜ್ಞಾ ವಯಂ ಸ್ಮಃ । ಪ್ರಥಮಾಃ ಶ್ರೇಷ್ಠಾ ವಯಂ ವೇಧಸೋಽಗ್ನೇಃ ಪರಿಚಾರಕಾನ್ನೄನ್ ವೇಧಸೋ ವಿಧಾತ್ನೄನ್ ರಶ್ಮೀನ್ ವಾ ಜಾಯೇಮಹಿ। ವಯಂ ಜನಯಾಮಃ। ದಿವೋ ದ್ಯೋತಮಾನಸ್ಯಾದಿತ್ಯಸ್ಯ ಪುತ್ರಾ ವಯಮಂಗಿರಸೋ ಭವೇಮ । ಭೂತಿಮಂತಃ ಸ್ಯಾಮ । ಶುಚಂತೋ ದೀಪ್ಯಮಾನಾ ವಯಂ ಧನಿನಮುದಕವಂತಮದ್ರಿಂ ಮೇಘಂ ರುಜೇಮ । ವರ್ಷಾರ್ಥಂ ಭಿಂದ್ಯಾಮ । ಯದ್ವಾ । ಧನಿನಂ ಪಣಿನಾಮಕಾಸುರಾಪಹೃತಗೋಧನಯುಕ್ತಮದ್ರಿಂ ಪರ್ವತಂ ರುಜೇಮ । ಅಂಗಿರಸಾಮಾದಿತ್ಯಪುತ್ರತ್ವಮೇವಮಾಮ್ನಾಯತೇ । ತಸ್ಯ ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದಿತ್ಯುಪಕ್ರಮ್ಯ ಯೇಽಂಗಾರಾ ಆಸಂಸ್ತೇಽಂಗಿರಸೋಽಭವನ್ । ಐ. ಬ್ರಾ- ೩-೩೪ । ಇತಿ ॥ ಜಾಯೇಮಹಿ । ಜನೀ ಪ್ರಾದುರ್ಭಾವೇ । ಲಿಙಿ ಜ್ಞಾಜನೋರ್ಜೇತಿ ಜಾದೇಶಃ । ವೇಧಸಃ । ಡುಧಾಞ್ ಧಾರಣಪೋಷಣಯೋರಿತ್ಯಸ್ಮಾದ್ವಿಧಾಞಾಕೋ ವೇಧ ಚ । ಉ- ೪-೨೨೪ । ಇತ್ಯಸಿಪ್ರತ್ಯಯಃ । ಧಾತೋರ್ವೇಧ ಇತ್ಯಾದೇಶಃ । ದಿವಸ್ಪುತ್ರಾ ಇತ್ಯತ್ರ ಸಂಹಿತಾಯಾಂ ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ । ರುಜೇಮ । ರುಜೋ ಭಂಗೇ । ಅದಾದಿಃ । ಲಿಙಿ ರೂಪಂ ॥

ಪ್ರತಿಪದಾರ್ಥ

ಪ್ರಥಮಾಃ—ಉತ್ತಮರೂ । ಸಪ್ತ—ಸಪ್ತಸಂಖ್ಯಾಕರೂ (ಏಳುಜನರೂ) । ವಿಪ್ರಾಃ—ಮೇಧಾವಿಗಳೂ ಆದ ನಾವು । ಮಾತುಃ—ಜಗಜ್ಜನನೀರೂಪಳಾದ । ಉಷಸಃ—ಉಷಸ್ಸಿನಿಂದ । ವೇಧಸಃ—ಅಗ್ನಿಯ । ನೄನ್-ರಶ್ಮಿಗಳನ್ನು । ಜಾಯೇಮಹಿ—ಉತ್ಪನ್ನಮಾಡುತ್ತೇವೆ । ದಿವಃ—ಪ್ರಕಾಶಮಾನನಾದ ಆದಿತ್ಯನ । ಪುತ್ರಾಃ—ಪುತ್ರರಾದ । ವಯಂ—ಅಂಗಿರಸ್ಸುಗಳೆಂದು ಪ್ರಸಿದ್ಧರಾದ ನಾವು । ಭವೇಮ—ಸಂಪದ್ಯುಕ್ತರಾಗಿ ಆಗೋಣ ।

CC-0. Jangamwadi Math Collection. Digitized by eGangotri

ಶುಚಂತಃ—ಪ್ರಕಾಶಮಾನರಾದ ನಾವು । ಧನಿನಂ—ಉದಕಯುಕ್ತವಾದ । ಅದ್ರಿಂ—ಮೇಘವನ್ನು । ರುಜೇಮ—ಸೀಳೋಣ (ಅಥವಾ ಗೋಸಂಪತ್ತಿನಿಂದ ಕೂಡಿದ ಪರ್ವತವನ್ನು ಬಿಡಿಸೋಣ).

### ಭಾವಾರ್ಥ

ಉತ್ತಮರೂ, ಸಪ್ತಸಂಖ್ಯಾಕರೂ, ಮೇಧಾವಿಗಳೂ ಆದ ನಾವು ಜಗಜ್ಜನನೀರೂಪಳಾದ ಉಷಸ್ಸಿನಿಂದ ಅಗ್ನಿಯ ರಶ್ಮಿಗಳನ್ನು ಉತ್ಪನ್ನಮಾಡುತ್ತೇವೆ. ಪ್ರಕಾಶಮಾನನಾದ ಆದಿತ್ಯನ ಪುತ್ರರೂ, ಅಂಗಿರಸ್ಸುಗಳಿಂದು ಪ್ರಸಿದ್ಧರೂ ಆದ ನಾವು ಸಂಪದ್ಯುಕ್ತರಾಗಿರುವಂತಾಗಲಿ. ಪ್ರಕಾಶಮಾನರಾದ ನಾವು ಗೋಸಂಪತ್ತಿನಿಂದ ಕೂಡಿದ ಪರ್ವತವನ್ನು ಸೀಳಿ ಗೋವುಗಳನ್ನು ಪಡೆಯೋಣ.

### English Translation

May we seven priests first in order engender from the maternal dawn the worshippers of the creator (Agni); may we Angirasas be the sons of heaven, and, radiant, divide the wealth-containing mauntain.

### ವಿಶೇಷವಿಷಯಗಳು

ಅಂಗಿರಸಃ—ಆದಿತ್ಯಸ್ಯ ಪುತ್ರಾಃ ಅಂಗಿರಸಃ । ಅಂಗಿರಸರ ಉತ್ಪತ್ತಿ ವಿಷಯದಲ್ಲಿ ಋ. ಸಂ. ಭಾಗ 3 ಪುಟ 520 ಮತ್ತು ಭಾಗ 10 ಪುಟ 269 ನೋಡಿ ಮತ್ತು ಮೂರನೆಯ ಸೂಕ್ತದ ೧೫ ನೆಯ ಋಕ್ಕಿನ ವಿಶೇಷ ವಿಷಯಗಳನ್ನು ನೋಡಿ.

---

### ಸಂಹಿತಾಪಾಠಃ

ಅಧಾ ಯಥಾ ನಃ ಪಿತರಃ ಪರಾಸಃ ಪ್ರತ್ನಾಸೋ ಅಗ್ನ ಋತಮಾಶುಷಾಣಾಃ।
ಶುಚೀದಯನ್ದೀಧಿತಿಮುಕ್ಥಶಾಸಃ ಕ್ಷಾಮಾ ಭಿಂದಂತೋ ಅರುಣೀರಪ ವ್ರನ್ ॥ ೧೬ ॥

### ಪದಪಾಠಃ

ಅಧ । ಯಥಾ । ನಃ । ಪಿತರಃ । ಪರಾಸಃ । ಪ್ರತ್ನಾಸಃ । ಅಗ್ನೇ । ಋತಂ । ಆಶುಷಾಣಾಃ ।
ಶುಚಿ । ಇತ್ । ಅಯನ್ । ದೀಧಿತಿಂ । ಉಕ್ಥಶಸಃ । ಕ್ಷಾಮ । ಭಿಂದಂತಃ । ಅರುಣೀಃ । ಅಪ । ವ್ರನ್ ॥ ೧೬ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಗ್ನೇ ಅಥಾಪಿ ಚ ಪರಾಸಃ ಶ್ರೇಷ್ಠಾಃ ಪ್ರತ್ನಾಸಃ ಪುರಾಣಾ ಋತಂ ಸತ್ಯಭೂತಂ ಯಜ್ಞಂ ಯಥಾ ಯಥಾವದಾಶುಷಾಣಾ ಅಶ್ನುವಾನಾ ನೋಽಸ್ಮಾಕಂ ಪಿತರೋಽಂಗಿರಸಃ ಶುಚಿ ದೀಪ್ತಂ ಸ್ಥಾನಮಯನ್ । ಅಗಚ್ಛನ್ । ತಥಾ ದೀಧಿತಿಂ ತೇಜಶ್ಚಾಗಚ್ಛನ್ । ಕಿಂಚ ಉಕ್ಥಶಾಸ ಉಕ್ಥಾನಾಂ ಶಸ್ತ್ರಾಣಾಂ ಶಂಸಿತಾರಃ ಕ್ಷಾಮ ಕ್ಷಯಕಾರಣಂ ತಮಃ ಪಾಪಂ ವಾ ಭಿಂದಂತೋ ವಿನಾಶಯಂತೋಽಂಗಿರಸೋಽರುಣೀರರುಣವರ್ಣಾಃ ಪಣಿಭಿರಪಹೃತಾ ಗಾ ಉಷಸೋ ವಾ ಅಪ ವ್ರನ್ । ಅಪಾವೃಣ್ವನ್ । ಪ್ರಕಾಶಿತವಂತ ಇತ್ಯರ್ಥಃ ॥ ಅಯನ್ । ಇಣ್ ಗತೌ । ಲಙೋಣೋ ಯಣ್ಣಿತಿ ಯಣ್ । ವ್ಯತ್ಯಯೇನಾಡಾಗಮಃ । ದೀಧಿತಿಂ । ದೀಧಿಙ್ ದೀಪ್ತಿದೇವನಯೋರಿತ್ಯಸ್ಮಾತ್ ಕ್ತಿನಿ ಹ್ರಸ್ವಶ್ಛಾಂದಸಃ । ನಿತ್ತ್ವಾದಾದ್ಯುದಾತ್ತಃ । ಉಕ್ಥಶಾಸಃ । ಉಕ್ಥಶಬ್ದ ಉಪಪದೇ ಶಸ್ಸು ಸ್ತುತಾವಿತ್ಯಸ್ಮಾನ್ಮಂತ್ರೇ ಶ್ವೇತವಹೋಕ್ಥಶಸ್ಪುರೋಡಾಶೋ ಣ್ವಿನ್ನಿತಿ ಣ್ವಿನ್ ನಕಾರಲೋಪಶ್ಛ ನಿಪಾತನಾದೇವ । ಪದಕಾಲೇ ಹ್ರಸ್ವಶ್ಛಾಂದಸಃ । ಅರುಣೀಃ । ಗೌರಾದಿಙೀಷಂತಃ । ಏಕಾದೇಶಸ್ಸ್ವರಃ । ವ್ರನ್ । ವೃಣೋತೇರ್ಲುಙಿ ಮಂತ್ರೇ ಘಸೇತ್ಯಾದಿನಾ ಚ್ಲೇರ್ಲುಕ್ । ನಿಘಾತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಥ—ಮತ್ತು । ಪರಾಸಃ—ಶ್ರೇಷ್ಠರೂ । ಪ್ರತ್ನಾಸಃ—ಪುರಾತನರೂ ಆದ । ನಃ—ನಮ್ಮ । ಪಿತರಃ—ಪಿತೃಗಳಾದ ಅಂಗಿರಸ್ಸುಗಳು । ಋತಂ—ಸತ್ಯಭೂತವಾದ ಯಜ್ಞವನ್ನು । ಯಥಾ—ವಿಧ್ಯುಕ್ತವಾಗಿ । ಆಶುಷಾಣಾಃ—ನೆರವೇರಿಸಿದವರಾಗಿ । ಶುಚಿ—ಪ್ರಕಾಶಮಾನವಾದ ಸ್ಥಾನವನ್ನು । ಅಯನ್—ಸೇರಿದರು । ದೀಧಿತಿಂ—ತೇಜಸ್ಸನ್ನೂ ಪಡೆದರು । ಉಕ್ಥಶಾಸಃ-ಶಸ್ತ್ರಮಂತ್ರಗಳನ್ನು ಪಠಿಸುತ್ತಲೂ । ಕ್ಷಾಮ—ತಮಸ್ಸನ್ನು । ಭಿಂದಂತಃ—ಸೀಳುತ್ತಲೂ । ಅರುಣೀಃ—ಹೊಂಬಣ್ಣವುಳ್ಳ ಗೋವುಗಳನ್ನು । ಅಪ ವ್ರನ್—ಪ್ರಕಾಶಿಸುವಂತೆ (ಗೋಚರಿಸುವಂತೆ) ಮಾಡಿದರು.

ಭಾವಾರ್ಥ

ಎಲೈ ಅಗ್ನಿಯೇ, ಶ್ರೇಷ್ಠರೂ, ಪುರಾತನರೂ ಆದ ನಮ್ಮ ಪಿತೃಗಳಾದ ಅಂಗಿರಸ್ಸುಗಳು ಸತ್ಯಭೂತವಾದ ಯಜ್ಞವನ್ನು ವಿಧ್ಯುಕ್ತವಾಗಿ ನೆರವೇರಿಸಿ ಪ್ರಕಾಶಮಾನವಾದ ಸ್ಥಾನವನ್ನು ಸೇರಿದರು. ತಾವೂ ಸಹ ತೇಜೋಯುಕ್ತರಾದರು. ಶಸ್ತ್ರಮಂತ್ರಗಳನ್ನು ಪಠಿಸುತ್ತಲೂ, ತಮಸ್ಸನ್ನು ಸೀಳುತ್ತಲೂ ಹೊಂಬಣ್ಣವುಳ್ಳ ಗೋವುಗಳನ್ನು ಪ್ರಕಾಶಿಸುವಂತೆ (ಗೋಚರವಾಗುವಂತೆ) ಮಾಡಿದರು.

## English Translation

Thus, Agni, our excellent and ancient forefathers, celebrators of holy *sacrifice*, proceeded to (the region of) pure light, and, reciting prayers and dispersing gloom, they made manifest the purple (cows).

:o:

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸುಕರ್ಮಾಣಃ ಸುರುಚೋ ದೇವಯಂತೋಽಯೋ ನ ದೇವಾ ಜನಿಮಾ ಧಮಂತಃ ।
ಶುಚಂತೋ ಅಗ್ನಿಂ ವವೃಧಂತ ಇಂದ್ರಮೂರ್ವಂ ಗವ್ಯಂ ಪರಿಷದಂತೋ ಅಗ್ಮನ್ ॥ ೧೭ ॥

ಪದಪಾಠಃ

ಸುಽಕರ್ಮಾಣಃ । ಸುಽರುಚಃ । ದೇವಽಯಂತಃ । ಅಯಃ । ನ । ದೇವಾಃ । ಜನಿಮ । ಧಮಂತಃ ।
ಶುಚಂತಃ । ಅಗ್ನಿಂ । ವವೃಧಂತಃ । ಇಂದ್ರಂ । ಊರ್ವಂ । ಗವ್ಯಂ । ಪರಿಽಸದಂತಃ । ಅಗ್ಮನ್ ॥ ೧೭ ॥

ಸಾಯಣಭಾಷ್ಯಂ

ಆಗ್ರಯಣ ಆಗ್ನೇಂದ್ರಸ್ಯ ಹವಿಷಃ ಸುಕರ್ಮಾಣ ಇತಿ ಯಾಜ್ಯಾ । ಸೂತ್ರಿತಂ ಚ । ಸುಕರ್ಮಾಣಃ ಸುರುಚೋ ದೇವಯಂತೋ ವಿಶ್ವೇ ದೇವಾಸ ಆ ಗತ । ಆ. ೨-೯ । ಇತಿ ॥

ಸುಕರ್ಮಾಣಃ ಸುಷ್ಠ್ವನುಷ್ಠಿತಯಾಗಾದಿಕರ್ಮಾಣಃ ಸುರುಚಃ ಶೋಭನದೀಪ್ತಯೋ ದೇವಯಂತೋ ದೇವಾನ್ ಕಾಮಯಮಾನಾ ದೇವಾ ದೇವನಶೀಲಾಃ ಸ್ತೋತಾರೋ ಜನಿಮ ಸ್ವಕೀಯಂ ಮಾನುಷಂ ಜನ್ಮ ಧಮಂತೋ ಯಾಗಾದಿಲಕ್ಷಣೇನ ಕರ್ಮಣಾ ನಿರ್ಮಲೀಕುರ್ವಂತಃ । ತತ್ರ ದೃಷ್ಟಾಂತಃ । ಅಯೋ ನ । ಯಥಾ ಕರ್ಮಾರಾ ಅಯೋ ಭಸ್ತ್ರೇಣ ಧಮಂತಿ ತದ್ವತ್ । ತಾದೃಶಾ ಅಗ್ನಿಂ ಶುಚಂತೋ ಹವಿರ್ಭಿರ್ದೀಪಯಂತ ಇಂದ್ರಂ ವವೃಧಂತಃ ಸೋಮೇನ ಸ್ತುತ್ಯಾ ವಾ ವರ್ಧಯಂತೋಽಂಗಿರಸಃ ಪರಿಷದಂತಃ ಪರಿತಃ ಸೀದಂತಃ ಸಂತ ಊರ್ವಂ ಮಹಾಂತಂ ಗವ್ಯಂ ಗೋಸಂಘಮಗ್ಮನ್ । ಪ್ರಾಪ್ನುವನ್ ॥ ಸುಕರ್ಮಾಣಃ । ಸೋರ್ಮನಸೀತ್ಯುತ್ತರಪದಾದ್ಯುದಾತ್ತತ್ವಂ । ಧಮಂತಃ । ಧ್ಮಾ ಶಬ್ದಾಗ್ನಿಸಂಯೋಗಯೋಃ । ಶತರಿ ಪಾಘ್ರಾದಿನಾ ಧಮಾದೇಶಃ ಶಪಃ ಪಿತ್ತ್ವಾದನುದಾತ್ತತ್ವೇ ಶತುರ್ಲಸಾರ್ವಧಾತುಕಸ್ವರಃ । ವವೃಧಂತಃ । ವೃಧು ವರ್ಧನೇ । ವ್ಯತ್ಯಯೇನ ಪರಸ್ಮೈಪದಂ । ಶತರಿ ಶಪಃ ಶ್ಲುಃ । ಗವ್ಯಂ । ಗವಾಂ ಸಮೂಹ ಇತ್ಯರ್ಥೇ ಖಲಗೋರಥಾದಿತಿ ಯಃ । ಅಗ್ಮನ್ । ಗಮೇರ್ಲುಙಿ ಚ್ಲೇರ್ಲುಕಿ ರೂಪಂ ॥

ಪ್ರತಿಪದಾರ್ಥ

ಸುಕರ್ಮಾಣಃ—ಶ್ರೇಷ್ಠವಾದ ಕರ್ಮಕರ್ತರೂ । ಸುರುಚಃ—ಉತ್ತಮವಾದ ಕಾಂತಿಯುಳ್ಳವರೂ । ದೇವಯಂತಃ—ದೇವತ್ವವನ್ನು ಅಪೇಕ್ಷಿಸುವವರೂ । ದೇವಾಃ—ದೇವತಾತ್ಮರೂ ಆದ ಅಂಗಿರಸ್ಸುಗಳು । ಅಯೋ

CC-0. Jangamwadi Math Collection. Digitized by eGangotri

**ನ**— ಕರ್ಮ್ಮಾರನು ತನ್ನ ಕುಲುಮೆಯಲ್ಲಿ ಕಬ್ಬಿಣವನ್ನು ಸಂಸ್ಕರಿಸುವಂತೆ । **ಜನಿಮ**— ತಮ್ಮ ಮನುಷ್ಯಜನ್ಮವನ್ನು । **ಧಮಂತಃ**— ಯಾಗಾದಿ ಕರ್ಮಗಳಿಂದ ಸಂಸ್ಕೃತವನ್ನಾಗಿ ಮಾಡಿದರು (ಮತ್ತು) । **ಅಗ್ನಿಂ**— ಅಗ್ನಿಯನ್ನು । **ಶುಚಂತಃ**— ಪ್ರಕಾಶಿಸುವಂತೆ ಮಾಡುತ್ತಲೂ । **ಇಂದ್ರಂ**— ಇಂದ್ರನನ್ನು । **ವವೃಧಂತಃ**— ಸ್ತುತಿಗಳಿಂದ ಪ್ರವೃದ್ಧ ನಾಗುವಂತೆ ಮಾಡುತ್ತಲೂ । **ಪರಿಷದಂತಃ**— ಸುತ್ತಲೂ ಹುಡುಕುತ್ತಲೂ । **ಊರ್ವಂ**— ಮಹತ್ತಾದ । **ಗವ್ಯಂ**— ಗೋಸಂಪತ್ತನ್ನು । **ಅಗ್ಮನ್**— ಹೊಂದಿದರು.

ಭಾವಾರ್ಥ

ಶ್ರೇಷ್ಠರಾದ ಕರ್ಮಕರ್ತರೂ, ಉತ್ತಮವಾದ ಕಾಂತಿಯುಳ್ಳವರೂ, ದೇವತ್ವವನ್ನು ಅಪೇಕ್ಷಿಸುವವರೂ, ದೇವತಾತ್ಮರೂ ಆದ ಅಂಗಿರಸ್ಸುಗಳು ಕರ್ಮ್ಮಾರನು ತನ್ನ ಕುಲುಮೆಯಲ್ಲಿ ಕಬ್ಬಿಣವನ್ನು ಸಂಸ್ಕರಿಸುವಂತೆ ತಮ್ಮ ಮಾನವಜನ್ಮವನ್ನು ಯಾಗಾದಿಕರ್ಮಗಳಿಂದ ಸಂಸ್ಕೃತವನ್ನಾಗಿ ಮಾಡಿಕೊಂಡರು. ಮತ್ತು ಅಗ್ನಿಯನ್ನು ಪ್ರಕಾಶಿಸು ವಂತೆ ಮಾಡುತ್ತಲೂ ಇಂದ್ರನನ್ನು ಸ್ತುತಿಗಳಿಂದ ಪ್ರವೃದ್ಧನಾಗುವಂತೆ ಮಾಡುತ್ತಲೂ, ಸುತ್ತಲೂ ಹುಡುಕುತ್ತಲೂ ಮಹತ್ತಾದ ಗೋಸಂಪತ್ತನ್ನು ಹೊಂದಿದರು.

English Translation

Performers of good-works, brilliant and devout, the praises of the gods have freed their birth from impurity, as (a smith heats) iron : exciting Agni, elevating Indra, and wandering about (in search), they have gone to the vast (hidden) herd of cattle.

ವಿಶೇಷವಿಷಯಗಳು

ಆಗ್ರಯಣೇಷ್ಟಿಯಲ್ಲಿ ಅಗ್ನಿ ಮತ್ತು ಇಂದ್ರ ಎಂಬ ದೇವತೆಗಳನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ **ಸುಕರ್ಮಾಣಃ** ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— **ಸುಕರ್ಮಾಣಃ ಸುರುಚೋ ದೇವಯಂತೋ ವಿಶ್ವೇ ದೇವಾಸ ಆ ಗತ** ಎಂಬ ಸೂತ್ರದಿಂದ (ಆ. ೨-೯) ವಿವೃತವಾಗಿರುವುದು.

---

ಸಂಹಿತಾಪಾಠಃ

ಆ ಯೂಥೇವ ಕ್ಷುಮತಿ ಪಶ್ವೋ ಅಖ್ಯದ್ದೇವಾನಾಂ ಯಜ್ಜನಿಮಾಂತ್ಯುಗ್ರ।

ಮರ್ತಾನಾಂ ಚಿದುರ್ವಶೀರಕೃಪ್ರನ್ವೃಧೇ ಚಿದರ್ಯ ಉಪರಸ್ಯಾಯೋಃ ॥

CC-0. Jangamwadi Math Collection. Digitized by eGangotri

ಪದಪಾಠಃ

ಆ । ಯೂಥಾಽಇವ । ಕ್ಷುಽಮತಿ । ಪಶ್ವಃ । ಅಖ್ಯತ್ । ದೇವಾನಾಂ । ಯತ್ । ಜನಿಮ । ಅಂತಿ । ಉಗ್ರ ।

ಮರ್ತಾನಾಂ । ಚಿತ್ । ಉರ್ವಶೀಃ । ಅಕೃಪ್ರನ್ । ವೃಧೇ । ಚಿತ್ । ಅರ್ಯಃ । ಉಪರಸ್ಯ । ಆಯೋಃ ॥

ಸಾಯಣಭಾಷ್ಯಂ

ಉಗ್ರ ತೇಜಸ್ವಿನ್ಹೇ ಅಗ್ನೇ ದೇವಾನಾಮಂಗಿರಸಾಂ ಸಂಬಂಧಿ ಯಜ್ಜನಿಮ ಯಂ ಗೋಸಂಘಮಂತಿ ಪರ್ವತಸ್ಯ ಸಮೀಪ ಆಖ್ಯತ್ । ಆ ಸಮಂತಾದಿಂದ್ರೋಽಪಶ್ಯತ್ । ತತ್ರ ದೃಷ್ಟಾಂತಃ । ಯೂಥೇವ । ಯಥಾ ಪಶ್ವಃ ಪಶೂನಾಂ ಗವಾಂ ಯೂಥಾನಿ ಕ್ಷುಮತ್ಯನ್ನವತ್ಯಾಢ್ಯಗೃಹೇ ವರ್ತಮಾನಾನಿ ಪಶ್ಯಂತಿ ಜನಾಸ್ತದ್ವತ್ । ಯದ್ವಾ । ಹೇ ಅಗ್ನೇ ತವ ಪರಿಚಾರಕೋಽಂಗಿರೋಗಣೋ ದೇವಾನಾಮಿಂದ್ರಾದೀನಾಂ ಯಜ್ಜನಿಮ ಯೋಽಯಂ ಜನೋಽಂತಿ ಮದಂತಿಕೇ ಪಶ್ವಃ ಪಣಿಭಿರಪಹೃತಾನ್ಪಶೂನಾಖ್ಯತ್ । ಸಮಂತಾತ್ಪಶ್ಯತಿ । ತತ್ರ ದೃಷ್ಟಾಂತಃ । ಯಥಾ ಕ್ಷುಮತಿ ಶಬ್ದಂ ಕುರ್ವಾಣೇ ಗವಾಂ ಯೂಥಾ ಯೂಥೇ ಪಶೂನ್ಪಶ್ಯಂತಿ ತದ್ವತ್ । ಮರ್ತಾನಾಂ ಚಿನ್ಮನುಷ್ಯಾಣಾಮುರ್ವಶೀರೂರುಭ್ಯಾಮಶ್ನುವಾನಾಃ । ಉರ್ವಭ್ಯಶ್ನುತ ಊರುಭ್ಯಾಮಶ್ನುತ ಇತಿ ಯಾಸ್ಕಃ । ನಿ. ೫-೧೩। ಪ್ರಜಾ ಅಕೃಪ್ರನ್ । ತಾಭಿರಾನೀತಾಭಿರ್ಗೋಭಿಃ ಕ್ಲೃಪ್ತಾಃ ಸಮರ್ಥಾ ಅಭವನ್ । ಚಿದಪಿ ಚ ಅರ್ಯಃ ಸ್ವಾಮೀ ಲಬ್ಧಗೋಧನ ಉಪರಸ್ಯೋಽಪ್ತಸ್ಯ ನಿಷಿಕ್ತಸ್ಯಾಪತ್ಯಸ್ಯ ವೃಧೇ ವರ್ಧನಾಯ ಸಮರ್ಥೋ ಭವತಿ । ತಥಾಯೋರ್ಮನುಷ್ಯಸ್ಯ ಭೃತ್ಯಾದೇಶ್ಚ ಪೋಷಣೇ ಸಮರ್ಥೋ ಭವತಿ ॥ ಯೂಥೇವ । ಶಸಃ ಸಪ್ತಮ್ಯಾ ವಾ ಡಾದೇಶಃ । ಕ್ಷುಮತಿ । ಕ್ಷುದಿತ್ಯನ್ನನಾಮ । ಯದ್ವಾ । ಟುಕ್ಷು ಶಬ್ದೇ । ಭಾವೇ ಕ್ವಿಪ್ । ಛಾಂದಸಸ್ತಕಾರಲೋಪಃ । ತದಸ್ಯಾಸ್ತೀತಿ ಮತುಪ್ । ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಂ । ಅಖ್ಯತ್ । ಖ್ಯಾ ಪ್ರಕಥನೇ । ಲುಙಿ ಚಕ್ಷಿಙಸ್ಯತಿವಕ್ತಿಖ್ಯಾತಿಭ್ಯೋಽಙ್ಜ್ಞತ್ಯಙಾದೇಶಃ। ಆತೋ ಲೋಪಃ। ಜನಿಮ । ಜನೀ ಪ್ರಾದುರ್ಭಾವೇ । ಹೃಜನಿಭ್ಯಾಮಿಮನಿನ್ನಿತೀಮನಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ । ಅಕೃಪ್ರನ್ । ಕೃಪೂ ಸಾಮರ್ಥ್ಯೇ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ರುಡಾಗಮಃ ॥

ಪ್ರತಿಪದಾರ್ಥ

ಉಗ್ರ—ತೇಜಸ್ವಿಯಾದ ಎಲೈ ಅಗ್ನಿಯೇ, । ದೇವಾನಾಂ—ಅಂಗಿರಾಋಷಿಗಳ ಸಂಬಂಧವಾದ । ಯತ್ ಜನಿಮ—ಯಾವ ಗೋವುಗಳ ಸಮೂಹವು । ಅಂತಿ—ಪರ್ವತದ ಸಮೀಪದಲ್ಲಿ । ಯೂಥೇವ ಪಶ್ವಃ—ಪಶುಗಳ ಸಮೂಹವನ್ನು ಯಾವ ಪ್ರಕಾರವಾಗಿ । ಕ್ಷುಮತಿ—ಅನ್ನಸಂಪತ್ತಿನಿಂದ ಕೂಡಿದ ಗೃಹದಲ್ಲಿ ಜನರು ನೋಡುವರೋ ಅದರಂತೆ । ಆ ಅಖ್ಯತ್—ಸುತ್ತಲೂ ಇಂದ್ರನು ನೋಡಿದನು । [ಅಥವಾ] ಹೇ ಉಗ್ರ—ಎಲೈ ಅಗ್ನಿಯೇ! (ಅಂಗಿರೋಗಣಃ—ನಿನ್ನನ್ನು ಸೇವಿಸತಕ್ಕ ಅಂಗಿರಾ ಋಷಿಸಮೂಹವು) ದೇವಾನಾಂ—ಇಂದ್ರಾದಿ ದೇವತೆಗಳ ಸಂಬಂಧವಾದ । ಪಶ್ವಃ—ಪಣಿನಾಮಕ ಅಸುರರಿಂದ ಅಪಹೃತವಾದ । ಕ್ಷುಮತಿ—ಕೂಗುತ್ತಿರುವ । ಯೂಥೇವ—ಗೋವು

CC-0. Jangamwadi Math Collection. Digitized by eGangotri

ಗಳ ಸಮೂಹವನ್ನು । ಯಜ್ಜನಿಮ—ಯಾವರೀತಿ ಜನರು । ಅಂತಿ—ಸಮಾಪದಲ್ಲಿ ನೋಡಿದರೋ ಅದರಂತೆ । ಆ ಅಖ್ಯತ್—ಸುತ್ತಲೂ ಇಂದ್ರನು ನೋಡಿದನು । ಮರ್ತಾನಾಂ ಚಿತ್—ಮನುಷ್ಯರದೇ ಆದ । ಉರ್ವಶೀಃ—ಗೋವುಗಳನ್ನು । ಅಕೃಪನ್—ಪಡೆಯಲು ಸಮರ್ಥರಾದರು । ಚಿತ್—ಮತ್ತು । ಅರ್ಯಃ—ಗೋವುಗಳನ್ನು ಪಡೆದ ಸ್ವಾಮಿಯಾದ ಯಜಮಾನನು । ಉಪರಸ್ಯ—ಉತ್ತಮ ಕಾರ್ಯಗಳನ್ನು । ವೃಧೇ—ಅಭಿವೃದ್ಧಿಪಡಿಸಲು ಸಮರ್ಥನಾಗುವನು । (ಮತ್ತು) ಆಯೋಃ—ಮನುಷ್ಯರ ಎಂದರೆ ಭೃತ್ಯಾದಿಗಳನ್ನು ಪೋಷಿಸುವುದರಲ್ಲಿಯೂ ಸಮರ್ಥನಾಗುವನು.

ಭಾವಾರ್ಥ

ಎಲೈ ತೇಜಸ್ವಿಯಾದ ಅಗ್ನಿಯೇ, ಪಣಿಗಳಿಂದ ಅಪಹೃತವಾದ ಅಂಗಿರಾಋಷಿಗಳ ಗೋವುಗಳನ್ನು, ಅನ್ನಸಮೃದ್ಧಿಯಿಂದ ಯುಕ್ತವಾದ ಗೃಹದ ಕೊಟ್ಟಿಗೆಯಲ್ಲಿರುವ ಗೋವುಗಳನ್ನು ನೋಡುವಂತೆ—ಇಂದ್ರನು ಸುತ್ತಲೂ ಇರುವುದನ್ನು ನೋಡಿದನು. ಅಥವಾ ಅನ್ನ ಸಂಪತ್ತಿನಿಂದ ಕೂಡಿದ ಗೃಹದಲ್ಲಿ ಪುಷ್ಟವಾಗಿರುವ ಪಶುಗಳನ್ನು ಜನರು ಯಾವರೀತಿ ನೋಡುವರೋ ಅದರಂತೆ ಇಂದ್ರನು ಪಣಿಗಳಿಂದ ಅಪಹೃತವಾದ ಅಂಗಿರಾಋಷಿಗಳ ಗೋವುಗಳನ್ನು ನೋಡಿದನು. ಗೋಸಮೂಹವನ್ನು ಪಡೆದ ಗೃಹದ ಸ್ವಾಮಿಯು ಉತ್ತಮವಾದ ಕಾರ್ಯಗಳನ್ನುಮಾಡಿ ತನ್ನ ಭೃತ್ಯವರ್ಗದವರನ್ನು ಪುತ್ರಪೌತ್ರಾದಿಗಳನ್ನು ಪೋಷಿಸಲು ಸಮರ್ಥನಾಗುವನು.

English Translation

Fierce (Agni), when (Indra) proclaimed the near presence of the herd of the cows of the divine (Angirasas) as a herd of cattle in a well-stored stall, the progeny of mortals were thereby enabled (to perform pious acts) and the master of the family rendered competent to (provide for) the, increase of posterity and (the support of) dependents

ವಿಶೇಷವಿಷಯಗಳು

ಈ ಋಕ್ಕಿನ ಅಭಿಪ್ರಾಯವು ಸ್ಪಷ್ಟವಾಗಿಲ್ಲ. ಭಾಷ್ಯಕಾರರ ವಿವರಣೆಯೂ ವಿಶದವಾಗಿಲ್ಲ. ಋಷಿಯ ಆಶಯವೇನೆಂಬುದೂ ತಿಳಿಯುವಂತಿಲ್ಲ. ಜನಿಮಶಬ್ದಕ್ಕೆ ಭಾಷ್ಯಕಾರರು ಗೋಸಂಘವೆಂದೂ, ಉರ್ವಶೀಃ ಎಂಬ ಪದಕ್ಕೆ ಪ್ರಜೆಗಳೆಂದೂ ಅರ್ಥವಿವರಣೆಮಾಡಿದಾರೆ. ಆದರೂ ಈ ಋಕ್ಕಿಗೆ ಒಂದು ನಿರ್ದಿಷ್ಟವಾದ ಅರ್ಥವನ್ನು ಹೊಂದಿಸುವುದಕ್ಕೆ ಸಾಧ್ಯವಾಗಿಲ್ಲ. Wilson ಎಂಬ ಪಂಡಿತನು ಈರೀತಿ ವಿವರಿಸಿದ್ದಾನೆ—

ಆ ಯೂಥೇವ ಕ್ಷುಮತಿ ಪಶ್ವಃ ಅಖ್ಯತ್ ದೇವಾನಾಂ ಯತ್ ಜನಿಮ ಅಂತಿ—The expression literally means, like a herd in food-possessing animals; he had said of the gods that which birth is nigh; Sayana interprets ಜನಿಮ as ಗೋಸಂಘಂ and makes out the rest as above, or he proposes an alternative, not more intelligible; the second half of the stanza is equally obscure as the

CC-0. Jangamwadi Math Collection. Digitized by eGangotri

first. ಮರ್ತಾನಾಂ ಚಿತ್ ಉರ್ವಶೀಃ ಅಕೃಪ್ರನ್ ವೃಧೇ ಚಿತ್ ಅರ್ಯಃ ಉಪರಸ್ಯ ಆಯೋಃ, ಉರ್ವಶೀಃ is rendered by Sayana ಪ್ರಜಾ progeny, as if it was the nominativel instead of being the accusative plural; and if so, there is no nominative to ಅಕೃಪ್ರನ್ were made able; the word is remarkable, and is made more so by Sayana's reference to Yaska ನಿರುಕ್ತ. ೫-೧ where the word means, as usual ಅಪ್ಸರಾಃ and the etymology is ಊರುಭ್ಯಾಮಶ್ನುತೇ who pervades or proceeds from the thigh, conformably to the Pauranik legend of her birth from the thigh of Narayana. See also the ವಿಕ್ರಮೋರ್ವಶೀಯ of ಕಾಳಿದಾಸ which shows the legend to be of some antiquity.

———

ಸಂಹಿತಾಪಾಠಃ

ಅಕರ್ಮ ತೇ ಸ್ವಪಸೋ ಅಭೂಮ ಋತಮವಸ್ರನ್ನುಷಸೋ ವಿಭಾತೀಃ ।
ಅನೂನಮಗ್ನಿಂ ಪುರುಧಾ ಸುಶ್ಚಂದ್ರಂ ದೇವಸ್ಯ ಮರ್ಮೃಜತಶ್ಚಾರು ಚಕ್ಷುಃ ॥ ೧೯ ॥

ಪದಪಾಠಃ

ಅಕರ್ಮ । ತೇ । ಸುಽಅಪಸಃ । ಅಭೂಮ । ಋತಂ । ಅವಸ್ರನ್ । ಉಷಸಃ । ವಿಭಾತೀಃ ।
ಅನೂನಂ । ಅಗ್ನಿಂ । ಪುರುಧಾ । ಸುಽಚಂದ್ರಂ । ದೇವಸ್ಯ । ಮರ್ಮೃಜತಃ । ಚಾರು । ಚಕ್ಷುಃ ॥ ೧೯ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತವ ಪರಿಚರಣಮಕರ್ಮ । ಕುರ್ಮಃ । ತೇನ ಕರ್ಮಣಾ ಸ್ವಪಸಃ ಶೋಭನಕರ್ಮಾಣೋಽಭೂಮ । ವಿಭಾತೀರ್ವ್ಯುಚ್ಛಂತ್ಯ ಉಷಸ ಋತಂ ತೇಜೋಽವಸ್ರನ್ । ಆಚ್ಛಾದಯಂತಿ । ಧಾರಯಂತೀತ್ಯರ್ಥಃ । ತಥಾ ತಾ ಉಷಸೋಽನೂನಂ ಸಂಪೂರ್ಣಂ ಪುರುಧಾ ಬಹುಧಾ ಸುಶ್ಚಂದ್ರಂ ಸುಷ್ಠ್ವಾಹ್ಲಾದಕಾರಿಣಂ ಯದ್ವಾ ಸುಹಿರಣ್ಯಮಗ್ನಿಂ ಧಾರಯಂತಿ । ಕಿಂಚ ದೇವಸ್ಯ ದ್ಯೋತಮಾನಸ್ಯ ತವ ಚಾರು ಮನೋಹರಂ ಚಕ್ಷುಸ್ತೇಜೋ ಮರ್ಮೃಜತಃ ಪರಿಚರಂತೋ ವಯಂ ಸ್ವಪಸೋಽಭೂಮೇತಿ ಪೂರ್ವೇಣಾನ್ವಯಃ ॥ ಅಕರ್ಮ । ಕರೋತೇರ್ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಮರ್ಮೃಜತಃ । ಮೃಜೂಷ್ ಶುದ್ಧೌ । ಯಙ್ಲುಕಿ ರುಗ್ರಿಕೌ ಚ ಲುಕೀತ್ಯಭ್ಯಾಸಸ್ಯ ರುಗಾಗಮಃ । ಶತರಿ ನಾಭ್ಯಸ್ತಾಚ್ಛತುರಿತಿ ನುಮಭಾವಃ । ಅಭ್ಯಸ್ತಸ್ವರಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಎಲೈ ಅಗ್ನಿಯೇ) ವಿಭಾತೀಃ—ಪ್ರಕಾಶಮಾನವಾದ । ಉಷಸಃ—ಉಷಸ್ಸಿನ । ಋತಂ—ತೇಜಸ್ಸು । ಅವಸ್ರನ್—ಪ್ರಸರಿಸುತ್ತನೆ (ಮತ್ತು) । ಅನೂನಂ—ನ್ಯೂನವಿಲ್ಲದೇ ಪೂರ್ಣಾತ್ಮಕವಾದುದೂ । ಪುರುಧಾ—ಬಹುಪ್ರಕಾರವಾಗಿ । ಸುಶ್ಚಂದ್ರಂ—ಆಹ್ಲಾದಕಾರಕವಾದುದೂ ಆದ । ಅಗ್ನಿಂ—ಅಗ್ನಿತೇಜಸ್ಸನ್ನು (ಧರಿಸುತ್ತದೆ) । ದೇವಸ್ಯ—ಪ್ರಕಾಶಮಾನನಾದ ನಿನ್ನ । ಚಾರು—ಮನೋಹರವಾದ । ಚಕ್ಷುಃ—ತೇಜಸ್ಸನ್ನು । ಮರ್ಮೃಜತಃ-ಸೇವಿಸುತ್ತಾ । ತೇ—ನಿನ್ನ ಪೂಜೆಯನ್ನು । ಅಕರ್ಮ—ನೆರವೇರಿಸುತ್ತೇವೆ (ಆದುದರಿಂದಲೇ) । ಸ್ವಪಸಃ—ಉತ್ತಮವಾದ ಕರ್ಮವುಳ್ಳವರಾಗಿ । ಅಭೂಮ—ಆಗುತ್ತೇವೆ.

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನವಾದ ಉಷಸ್ಸಿನ ತೇಜಸ್ಸು ಸರ್ವತ್ರ ಪ್ರಸರಿಸುತ್ತದೆ. ಮತ್ತು ಪೂರ್ಣಾತ್ಮಕವಾದುದೂ, ಬಹುಪ್ರಕಾರವಾಗಿ ಆಹ್ಲಾದಕವಾದುದೂ ಆದ ಅಗ್ನಿತೇಜಸ್ಸನ್ನು ಧರಿಸುತ್ತದೆ. ಪ್ರಕಾಶ ಮಾನನಾದ ನಿನ್ನ ಮನೋಹರವಾದ ತೇಜಸ್ಸನ್ನು ಸೇವಿಸುತ್ತಾ ನಾವು ನಿನ್ನ ಪೂಜೆಯನ್ನು ನೆರವೇರಿಸುತ್ತೇವೆ. ಆದುದರಿಂದಲೇ ಉತ್ತಮವಾದ ಕರ್ಮವುಳ್ಳವರಾಗಿ ಆಗುತ್ತೇವೆ.

English Translation

We have worshipped you (Agni), and have thereby become the performers of a good work, adoring the full and variously delighting Agni, the beautiful lustre of the radiant divinity, when the brilliant dawns have arrayed (themselves) in light.

————

ಸಂಹಿತಾಪಾಠಃ

ಏತಾ ತೇ ಅಗ್ನ ಉಚಥಾನಿ ವೇಧೋಽವೋಚಾಮ ಕವಯೇ ತಾ ಜುಷಸ್ವ ।
ಉಚ್ಛೋಚಸ್ವ ಕೃಣುಹಿ ವಸ್ಯಸೋ ನೋ ಮಹೋ ರಾಯಃ ಪುರುವಾರ
ಪ್ರ ಯಂಧಿ ॥ ೨೦ ॥

ಪದಪಾಠಃ

ಏತಾ । ತೇ । ಅಗ್ನೇ । ಉಚಥಾನಿ । ವೇಧಃ । ಅವೋಚಾಮ । ಕವಯೇ । ತಾ । ಜುಷಸ್ವ ।
ಉತ್ । ಶೋಚಸ್ವ । ಕೃಣುಹಿ । ವಸ್ಯಸಃ । ನಃ । ಮಹಃ । ರಾಯಃ । ಪುರುऽವಾರ । ಪ್ರ । ಯಂಧಿ ॥೨೦॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ವೇಧೋ ವಿಧಾತರ್ಹೇಽಗ್ನೇ ಕವಯೇ ಮೇಧಾವಿನೇ ತೇ ತುಭ್ಯಮೇತೈತಾನ್ಯುಚಥಾನ್ಯುಕ್ಥಾನಿ ಶಸ್ತ್ರಾಣ್ಯವೋಚಾಮ । ತ್ವಂ ತಾ ತಾನಿ ಜುಷಸ್ವ । ಸೇವಸ್ವ । ಕಿಂಚ ತ್ವಮುಚ್ಛೋಚಸ್ವ । ಉದ್ದೀಪ್ಯಸ್ವ । ನೋಽಸ್ಮಾನ್ವಸ್ಯಸೋಽತಿಶಯೇನ ಧನಯುಕ್ತಾನ್ ಕೃಣುಹಿ । ಕುರು । ತದೇವೋಚ್ಯತೇ । ಪುರುವಾರ ಪುರುಭಿರ್ಬಹುಭಿರ್ವರಣೀಯ ಮಹೋ ರಾಯೋ ಮಹದ್ಧನಂ ಪ್ರ ಯಂಧಿ । ಅಸ್ಮಭ್ಯಂ ಪ್ರಯಚ್ಛ ॥ ಅವೋಚಾಮ । ವಚ ಪರಿಭಾಷಣೇ । ಲುಙಿ ಚ್ಲೇರಙಾದೇಶಃ । ಪಾದಾದಿತ್ವಾದನಿಘಾತಃ । ಕೃಣುಹಿ । ಕೃವಿ ಹಿಂಸಾಕರಣಯೋರಿತ್ಯಸ್ಯ ಲೋಟಿ ರೂಪಂ । ತಿಙ ಉತ್ತರತ್ವಾದನಿಘಾತಃ । ವಸ್ಯಸಃ । ವಸುಮಚ್ಛಬ್ದಾದೀಯಸುನಿ ವಿಸ್ಮತೋರ್ಲುಗಿತಿ ಮತುಪೋ ಲುಕಿ ಟಿಲೋಪೇ ಚ ಕೃತ ಈಕಾರಲೋಪಶ್ಛಾಂದಸಃ । ಯಂಧಿ । ಯಮೇರ್ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವಾ ಛಂದಸೀತಿ ಹೇರ್ವಿಕಲ್ಪೇನ ಪಿತ್ತ್ವಾದಙಿತಶ್ಚೇತಿ ಧಿರಾದೇಶಃ ॥

ಪ್ರತಿಪದಾರ್ಥ

ವೇಧಃ—ಸೃಷ್ಟಿಕರ್ತನಾದ । ಅಗ್ನೇ—ಅಗ್ನಿಯೇ । ಕವಯೇ—ಮೇಧಾವಿಯಾದ । ತೇ—ನಿನ್ನನ್ನುದ್ದೇಶಿಸಿ । ಏತಾ ಉಕ್ಥಾನಿ—ಈ ಶಸ್ತ್ರಮಂತ್ರಗಳನ್ನು । ಅವೋಚಾಮ—ಪಠಿಸುತ್ತೇವೆ । ತಾ—ಅವನ್ನು । ಜುಷಸ್ವ—ಸೇವಿಸು । ಉಚ್ಛೋಚಸ್ವ—ಉತ್ತಮವಾಗಿ ಪ್ರಕಾಶಿಸು । ನಃ—ನಮ್ಮನ್ನು । ವಸ್ಯಸಃ—ಧನಯುಕ್ತರನ್ನಾಗಿ । ಕೃಣುಹಿ—ಮಾಡು । ಪುರುವಾರ—ಅನೇಕರಿಂದ ಅಪೇಕ್ಷಿತನಾಗುವ ಎಲೈ ಅಗ್ನಿಯೇ । ಮಹಃ—ಪ್ರಭೂತವಾದ । ರಾಯಃ—ಧನವನ್ನು । ಪ್ರ ಯಂಧಿ—ನಮಗೆ ಕೊಡು.

ಭಾವಾರ್ಥ

ಎಲೈ ಸೃಷ್ಟಿಕರ್ತನಾದ ಅಗ್ನಿಯೇ, ಮೇಧಾವಿಯಾದ ನಿನ್ನನ್ನುದ್ದೇಶಿಸಿ ಈ ಶಸ್ತ್ರಮಂತ್ರಗಳನ್ನು ಪಠಿಸುತ್ತೇವೆ ಅವನ್ನು ಸೇವಿಸು. ಉತ್ತಮವಾಗಿ ಪ್ರಕಾಶಿಸು. ನಮ್ಮನ್ನು ಧನಯುಕ್ತರನ್ನಾಗಿ ಮಾಡು. ಅನೇಕರಿಂದ ಅಪೇಕ್ಷಿತನಾಗುವ ಎಲೈ ಅಗ್ನಿಯೇ, ನಮಗೆ ಪ್ರಭೂತವಾದ ಧನವನ್ನು ಕೊಡು.

English Translation

Creator, Agni, we have repeated these your praises to you who are all-wise; do you accept them: blaze aloft; make us opulent: you are worshipped by many; bestow upon us ample wealth.

———

CC-0. Jangamwadi Math Collection. Digitized by eGangotri

# ಮೂರನೆಯ ಸೂಕ್ತವು.

ಸಾಯಣಭಾಷ್ಯಂ

ಆ ವೋ ರಾಜಾನಮಿತಿ ಷೋಡಶರ್ಚಂ ತೃತೀಯಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಆ ವಃ ಷೋಳಶೇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರ್ವಿನಿಯೋಗ ಉಕ್ತಃ ॥

ಅನುವಾದವು— ಆ ವೋ ರಾಜಾನಂ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಅಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ ಆ ವಃ ಷೋಳಶ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಹಿಂದೆಯೇ ಹೇಳಲಾಗಿದೆ.

॥ ಓಂ ॥

ಸೂಕ್ತ—೩

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೩ ॥

ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೨೦, ೨೧, ೨೨ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥

ಋಷಿಃ—ವಾಮದೇವಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಆ ವೋ ರಾಜಾನಮಧ್ವರಸ್ಯ ರುದ್ರಂ ಹೋತಾರಂ ಸತ್ಯಯಜಂ ರೋದಸ್ಯೋಃ ।

ಅಗ್ನಿಂ ಪುರಾ ತನಯಿತ್ನೋರಚಿತ್ತಾದ್ಧಿರಣ್ಯರೂಪಮವಸೇ ಕೃಣುಧ್ವಂ ॥೧॥

CC-0. Jangamwadi Math Collection. Digitized by eGangotri

ಪದಪಾಠಃ

ಆ । ವಃ । ರಾಜಾನಂ । ಅಧ್ವರಸ್ಯ । ರುದ್ರಂ । ಹೋತಾರಂ । ಸತ್ಯಯಜಂ । ರೋದಸ್ಯೋಃ ।

ಅಗ್ನಿಂ । ಪುರಾ । ತನಯಿತ್ನೋಃ । ಅಚಿತ್ತಾತ್ । ಹಿರಣ್ಯರೂಪಂ । ಅವಸೇ । ಕೃಣುಧ್ವಂ ॥ ೧ ॥

ಸಾಯಣಭಾಷ್ಯಂ

ಹೇ ಋತ್ವಿಗ್ಯಜಮಾನಾ ಅಧ್ವರಸ್ಯ ಯಜ್ಞಸ್ಯ ರಾಜಾನಮಧಿಪತಿಂ ಹೋತಾರಂ ದೇವಾನಾ-ಮಾಹ್ವಾತಾರಂ ರುದ್ರಂ ರೋರೂಯಮಾಣಂ ದ್ರವಂತಂ ಶತ್ರೂನ್ರೋದಯಂತಂ ವಾ । ಯದ್ವಾ । ಏಷಾ ವಾ ಅಗ್ನೇಸ್ತನೂರ್ಯದ್ರುದ್ರ ಇತಿ ರುದ್ರಾತ್ಮಕಂ ರೋದಸ್ಯೋರ್ದ್ಯಾವಾಪೃಥಿವ್ಯೋಃ ಸತ್ಯಯಜಂ ಸತ್ಯಸ್ಯಾನ್ನಸ್ಯ ದಾತಾರಂ । ಯದ್ವಾ । ಸತ್ಯಯಜಂ ಸತ್ಯೇನ ಹವಿಷಾ ದೇವಾನ್ಯಜಂತಂ । ಯದ್ವಾ । ರೋದಸ್ಯೋರ್ವ್ಯಾಪ್ಯ ವರ್ತಮಾನಂ ಹಿರಣ್ಯರೂಪಂ ಸುವರ್ಣಪ್ರಭಂ । ಏವಂವಿಧಮಗ್ನಿಂ ವೋ ಯುಷ್ಮಾಕಮವಸೇ ರಕ್ಷಣಾಯ ತನಯಿತ್ನೋಃ । ತನಯಿತ್ನುರಶನಿಃ ಸ ಹ್ಯಾಕಸ್ಮಿಕಃ । ತತ್ಸದೃಶಾದ-ಚಿತ್ತಾತ್ । ನ ವಿದ್ಯತೇ ಚಿತ್ತಂ ಯಸ್ಮಿನ್ ತದಚಿತ್ತಂ । ಚಿತ್ತೋಪಲಕ್ಷಿತಸರ್ವೇಂದ್ರಿಯೋಪಸಂಹಾರೋ ಮರಣಮಿತಿ ಯಾವತ್ । ತಸ್ಮಾನ್ಮರಣಾತ್ಪುರಾ ಪ್ರಾಗೇವಾ ಕೃಣುಧ್ವಂ । ಯೂಯಂ ಸಮಂತಾದ್ಧ-ವಿರ್ಭಿರಗ್ನಿಂ ಭಜಧ್ವಂ ॥ ರುದ್ರಂ । ರೋದಯತೇ ರೋದೇರ್ಣಿಲುಕ್ಚ । ಉ. ೨-೨೨ । ಇತಿ ರಕ್ಪ್ರ-ತ್ಯಯಃ । ತನಯಿತ್ನೋಃ । ತನಿಃ ಶಬ್ದಾರ್ಥಃ । ಚುರಾದಿರದಂತಃ । ಸ್ತನಿಹೃಷಿಪುಷಿಗದಿಮದಿಭ್ಯೋ ಣೇರಿತ್ನುಚ್ । ಉ. ೩-೨೯ । ಇತೀತ್ನುಚ್‌ಪ್ರತ್ಯಯಃ । ಚಿತ್ಸ್ವರೇಣಾಂತೋದಾತ್ತಃ । ಸುಪಾ ಸಹೈಕಾ-ದೇಶ ಏಕಾದೇಶಸ್ವರಃ । ಕೃಣುಧ್ವಂ । ಕೃವಿ ಹಿಂಸಾಕರಣಯೋಃ । ಲೋಟಿ ರೂಪಂ ॥

ಪ್ರತಿಪದಾರ್ಥ

(ಎಲೈ ಋತ್ವಿಗ್ಯಜಮಾನರೇ) ಅಧ್ವರಸ್ಯ—ಯಜ್ಞಕ್ಕೆ । ರಾಜಾನಂ—ಅಧಿಪತಿಯೂ । ಹೋತಾರಂ-ದೇವತೆಗಳನ್ನು ಕರೆಯುವವನೂ । ರುದ್ರಂ—ಶತ್ರುಗಳಿಗೆ ಭಯಂಕರನೂ । ರೋದಸ್ಯೋಃ—ದ್ಯಾವಾಪೃಥಿವಿಗಳೆರಡಕ್ಕೂ । ಸತ್ಯಯಜಂ—ಸತ್ಯಾತ್ಮಕವಾದ ಅನ್ನವನ್ನು ಕೊಡುವವನೂ । ಹಿರಣ್ಯರೂಪಂ—ಹೊಂಬಣ್ಣದ ಪ್ರಭೆಯುಳ್ಳವನೂ ಆದ । ಅಗ್ನಿಂ—ಅಗ್ನಿಯನ್ನು । ವಃ—ನಿಮ್ಮ । ಅವಸೇ—ರಕ್ಷಣೆಗಾಗಿ । ತನಯಿತ್ನೋಃ—ಮಿಂಚಿನಂತೆ ಆಕಸ್ಮಿಕವಾದ । ಅಚಿತ್ತಾತ್—ಮರಣಕ್ಕಿಂತಲೂ । ಪುರಾ—ಮೊದಲೇನೆ । ಆ ಕೃಣುಧ್ವಂ—ಪೂಜಿಸಿ ಸೇವಿಸಿರಿ.

ಭಾವಾರ್ಥ

ಎಲೈ ಋತ್ವಿಗ್ಯಜಮಾನರೇ, ಯಜ್ಞಕ್ಕೆ ಅಧಿಪತಿಯೂ, ದೇವತೆಗಳನ್ನು ಕರೆಯುವವನೂ, ಶತ್ರುಗಳಿಗೆ ಭಯಂಕರನೂ, ದ್ಯಾವಾಪೃಥಿವಿಗಳೆರಡಕ್ಕೂ ಸತ್ಯಾತ್ಮಕವಾದ ಅನ್ನವನ್ನು ಕೊಡುವವನೂ, ಹೊಂಬಣ್ಣದ ಪ್ರಭೆಯುಳ್ಳವನೂ ಆದ ಅಗ್ನಿಯನ್ನು ನಿಮ್ಮ ರಕ್ಷಣೆಗಾಗಿ, ಮಿಂಚಿನಂತೆ ಆಕಸ್ಮಿಕವಾದ ಮರಣಕ್ಕಿಂತಲೂ ಪೂರ್ವಭಾವಿಯಾಗಿಯೇ ಪೂಜಿಸಿ ಸೇವಿಸಿ.

CC-0. Jangamwadi Math Collection. Digitized by eGangotri

## English Translation

Secure Agni, the king of sacrifice, the afflicter (of foes), the invoker (of the gods), the distributor of food through heaven and earth, the golden-formed, for your protection, before (surprised by) sudden death.

---

ಸಂಹಿತಾಪಾಠಃ

ಅಯಂ ಯೋನಿಶ್ಚಕೃಮಾ ಯಂ ವಯಂ ತೇ ಜಾಯೇವ ಪತ್ಯ ಉಶತೀ ಸುವಾಸಾಃ ।

ಅರ್ವಾಚೀನಃ ಪರಿವೀತೋ ನಿ ಷೀದೇಮಾ ಉ ತೇ ಸ್ವಪಾಕ ಪ್ರತೀಚೀಃ ॥

ಪದಪಾಠಃ

ಅಯಂ । ಯೋನಿಃ । ಚಕೃಮ । ಯಂ । ವಯಂ । ತೇ । ಜಾಯಾಽಇವ । ಪತ್ಯೇ । ಉಶತೀ । ಸುಽವಾಸಾಃ ।

ಅರ್ವಾಚೀನಃ । ಪರಿಽವೀತಃ । ನಿ । ಸೀದ । ಇಮಾಃ । ಊಂ ಇತಿ । ತೇ । ಸುಽಅಪಾಕ । ಪ್ರತೀಚೀಃ ॥

ಸಾಯಣಭಾಷ್ಯಂ

ಹೇ ಅಗ್ನೇ ತೇ ತ್ವದರ್ಥಂ ಯಮುತ್ತರವೇದಿಲಕ್ಷಣಂ ಪ್ರದೇಶಂ ವಯಂ ಚಕೃಮ । ಕುರ್ಮಃ । ಅಯಂ ಯೋನಿಸ್ತವ ಸ್ಥಾನಂ ಭವತಿ । ತತ್ರ ದೃಷ್ಟಾಂತಃ । ಜಾಯೇವ । ಯಥಾ ಪತ್ಯ ಉಶತೀ ಪತಿಂ ಕಾಮಯಮಾನಾ ಸುವಾಸಾಃ ಶೋಭನವಸ್ತ್ರೋಪೇತಾ ಜಾಯಾ ಸ್ವಾತ್ಮಸಮೀಪೇ ತಸ್ಯ ಸ್ಥಾನಂ ಕರೋತಿ ತದ್ವತ್ । ಹೇ ಸ್ವಪಾಕ ಸ್ವಪಸ್ಕ ಸುಕರ್ಮನ್ನಗ್ನೇ ತ್ವಂ ಪರಿವೀತೋ ಯಷ್ಟವ್ಯದೇವೈಸ್ತೇಜೋ-ಭಿರ್ವಾ ಪರಿವೀತೋಽರ್ವಾಚೀನೋಽಸ್ಮದಭಿಮುಖಃ ಸನ್ ನಿ ಷೀದ । ಉತ್ತರವೇದ್ಯಾಮುಪವಿಶ । ತತ್ರ ಸ್ಥಿತಸ್ಯ ತೇ ತವೇಮಾ ಜ್ವಾಲಾಃ ಸ್ತುತಯೋ ವಾ ಪ್ರತೀಚೀಸ್ತ್ವದಭಿಮುಖಾಃ ಪ್ರವರ್ತಂತೇ ॥ ಚಕೃಮ । ಕರೋತೇರ್ಲಿಟಿ ರೂಪಂ । ವಾಕ್ಯಭೇದಾನ್ನಿಘಾತಾಭಾವಃ । ಅರ್ವಾಚೀನಃ । ವಿಭಾಷಾಂಚೇ-ರದಿಗಿತಿ ಖಃ । ಪರಿವೀತಃ । ವ್ಯೇಞ್ ಸಂವರಣೇ । ಕರ್ಮಣಿ ನಿಷ್ಠಾ । ಯಜಾದಿತ್ವಾತ್ಸಂಪ್ರಸಾರಣಂ । ಗತಿರನಂತರ ಇತಿ ಗತೇಃ ಸ್ವರಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಎಲೈ ಅಗ್ನಿಯೇ) ಪತ್ಯೇ ಉಶತೀ—ಪತಿಯ ಸಾಮೀಪ್ಯವನ್ನಪೇಕ್ಷಿಸಿದವಳೂ । ಸುವಾಸಾಃ—ಶ್ರೇಷ್ಠವಾದ ವಸ್ತ್ರಾದಿಗಳಿಂದಲಂಕೃತಳೂ ಆದ । ಜಾಯಾ ಇವ—ಪತ್ನಿಯು ತನ್ನ ಸಮೀಪದಲ್ಲಿ ಪತಿಗೆ ಸ್ಥಾನವನ್ನು ಕಲ್ಪಿಸುವಂತೆ । ತೇ—ನಿನಗಾಗಿ । ಯಂ—ಯಾವ ಉತ್ತರವೇದಿಯನ್ನು । ವಯಂ—ನಾವು । ಚಕೃಮ—ನಿರ್ಮಿಸಿದ್ದೇವೆಯೋ । ಅಯಂ ಯೋನಿಃ—ಅದು ನಿನಗೆ ಪವಿತ್ರವಾದ ಸ್ಥಾನವಾಗಿರುತ್ತದೆ । ಸ್ವಪಾಕ—ಶ್ರೇಷ್ಠವಾದ ಕರ್ಮವುಳ್ಳ ಎಲೈ ಅಗ್ನಿಯೇ । ಪರಿವೀತಃ—ತೇಜಸ್ಸುಗಳಿಂದ ಆವೃತನಾಗಿಯೂ। ಅರ್ವಾಚೀನಃ—ನಮ್ಮ ಅಭಿಮುಖನಾಗಿರುವವನಾಗಿಯೂ । ನಿಷೀದ—ಕುಳಿತುಕೊ । ತೇ—ನಿನ್ನನ್ನುದ್ದೇಶಿಸಿದ । ಇಮಾಃ—ಈ ಸ್ತುತಿಗಳು । ಪ್ರತೀಚೀಃ—ನಿನಗಭಿಮುಖವಾಗಿ ಪಠಿತವಾಗುತ್ತವೆ.

ಭಾವಾರ್ಥ

ಎಲೈ ಅಗ್ನಿಯೇ, ಪತಿಯ ಸಾಮೀಪ್ಯವನ್ನಪೇಕ್ಷಿಸಿದವಳೂ, ಶ್ರೇಷ್ಠವಾದ ವಸ್ತ್ರಾದಿಗಳಿಂದಲಂಕೃತಳೂ ಆದ ಪತ್ನಿಯು ತನ್ನ ಸಮೀಪದಲ್ಲಿ ಪತಿಗೆ ಸ್ಥಾನವನ್ನು ಕಲ್ಪಿಸುವಂತೆ, ನಿನಗಾಗಿ ಯಾವ ಉತ್ತರವೇದಿಯನ್ನು ನಾವು ನಿರ್ಮಿಸಿದ್ದೇವೆಯೋ ಅದು ನಿನಗೆ ಪವಿತ್ರವಾದ ಸ್ಥಾನವಾಗಿರುತ್ತದೆ. ಶ್ರೇಷ್ಠವಾದ ಕರ್ಮವುಳ್ಳ ಎಲೈ ಅಗ್ನಿಯೇ, ತೇಜಸ್ಸುಗಳಿಂದ ಆವೃತನಾಗಿಯೂ, ನಮಗೆ ಅಭಿಮುಖನಾಗಿಯೂ ಕುಳಿತುಕೊ. ನಿನ್ನನ್ನುದ್ದೇಶಿಸಿದ ಈ ಸ್ತುತಿಗಳು ನಿನಗಭಿಮುಖವಾಗಿ ಪಠಿತವಾಗುತ್ತವೆ.

English Transiation

This is the altar which we have decorated for you, as a wife attached to her husband puts on elegant garments (to gratify him) : maturer of good works, sit down in our presence invested (with radiance), while your flames incline towards you.

———

ಸಂಹಿತಾಪಾಠಃ

ಆಶೃಣ್ವತೇ ಅದೃಪಿತಾಯ ಮನ್ಮ ನೃಚಕ್ಷಸೇ ಸುಮೃಳೀಕಾಯ ವೇಧಃ ।
ದೇವಾಯ ಶಸ್ತಿಮಮೃತಾಯ ಶಂಸ ಗ್ರಾವೇವ ಸೋತಾ ಮಧುಷುದ್ಯ-
ಮೀಳೇ ॥ ೩ ॥

ಪದಪಾಠಃ

ಆಽಶೃಣ್ವತೇ । ಅದೃಪಿತಾಯ । ಮನ್ಮ । ನೃಽಚಕ್ಷಸೇ । ಸುಽಮೃಳೀಕಾಯ । ವೇಧಃ ।

CC-0. Jangamwadi Math Collection. Digitized by eGangotri

ದೇವಾಯ । ಶಸ್ತಿಂ । ಅಮೃತಾಯ । ಶಂಸ । ಗ್ರಾವಾ᳚ಇವ । ಸೋತಾ । ಮಧುಽಸುತ್ । ಯಂ । ಈಳೇ ॥ ೩ ॥

ಸಾಯಣಭಾಷ್ಯಂ

ವೇಧಃ ಸ್ತೋತ್ರಾಣಾಂ ಕರ್ತರ್ಹೇ ಸ್ತೋತರಾಶೃಣ್ವತೇ ಸ್ತೋತ್ರಾಕರ್ಣನಪರಾಯಾದೃಪಿತಾ-ಯಾದೃಪ್ತಾಯಾಪ್ರಮತ್ತಾಯ ನೃಚಕ್ಷಸೇ ನೃಣಾಂ ದ್ರಷ್ಟ್ರೇ ಸುಮೃಳೀಕಾಯ ಸುಸುಖಾಯಾ-ಮೃತಾಯ ಮರಣಧರ್ಮರಹಿತಾಯ ದೇವಾಯ ತಸ್ಮಾ ಅಗ್ನಯೇ ಮನ್ಮ ಸ್ತೋತ್ರಂ ಶಸ್ತಿಂ ಶಸ್ತ್ರಂ ಚ ಶಂಸ । ಮಧುಷುನ್ಮದಕರಸ್ಯ ಸೋಮಸ್ಯ ಸೋತಾ । ತತ್ರ ದೃಷ್ಟಾಂತಃ । ಗ್ರಾವೇವ । ಯಥಾ ಗ್ರಾವಾ ಸೋಮಸ್ಯ ಸೋತಾ ತದ್ವತ್ । ಸೋಮಾಭಿಷವಂ ಕುರ್ವಾಣೋ ಯಜಮಾನೋ ಯಮಗ್ನಿಮೀಳೇ । ಸ್ತೌತಿ । ತಸ್ಮೈ ಶಂಸೇತಿ ಸಮನ್ವಯಃ । ಯದ್ವಾ । ಮಧುಷುತ್ಸೋಮಸುದ್ಯಜಮಾನೋಽಗ್ನಿಮೀಳೇ । ಸ್ತೌತಿ । ತತ್ರ ದೃಷ್ಟಾಂತಃ । ಯಥಾ ಗ್ರಾವಾ ಸೋಮಸ್ಯ ಸೋತಾ ಶಬ್ದಂ ಕರೋತಿ । ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯಃ । ಋಗ್ವೇ. ೧೦-೯೪-೧ । ಇತ್ಯತ್ರ ಗ್ರಾವ್ಣಾಂ ಕರ್ತೃತ್ವಂ ಶ್ರುತಮಿತಿ ॥ ಆಶೃಣ್ವತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಈಳೇ । ಈಡ ಸ್ತುತೌ । ಲಟಿ ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ಯದ್ವಾ । ಲಿಟಿ ತಶಬ್ದಸ್ಯೈಶಾದೇಶೇ ಕೃತೇ ರೂಪಂ ॥

ಪ್ರತಿಪದಾರ್ಥ

ವೇಧಃ—ಎಲೈ ಸ್ತುತಿಕರ್ತನೇ । ಸೋತಾ—ಸೋಮವನ್ನು ಹಿಂಡತಕ್ಕ । ಗ್ರಾವೇವ—ಕಲ್ಲುಗಳಂತೆ ಶಬ್ದಮಾಡುತ್ತಾ । ಮಧುಷುತ್—ಮಧುರವಾದ ಸೋಮವನ್ನು ಹಿಂಡುವ ಯಜಮಾನನು । ಯಂ—ಯಾವ ಅಗ್ನಿಯನ್ನು । ಈಳೇ—ಸ್ತುತಿಸುತ್ತಾನೆಯೋ ಅಂತಹ । ಆಶೃಣ್ವತೇ—ಸ್ತುತಿಯನ್ನು ಆಲಿಸಿ ಕೇಳುವವನೂ । ಅದೃಪಿತಾಯ—ಅಪ್ರಮತ್ತನೂ । ನೃಚಕ್ಷಸೇ—ನರರನ್ನು ವೀಕ್ಷಿಸತಕ್ಕವನೂ । ಸುಮೃಳೀಕಾಯ—ಸುಖ ಕಾರಕನೂ । ಅಮೃತಾಯ—ಮರಣಧರ್ಮರಹಿತನೂ । ದೇವಾಯ—ದೇವತಾತ್ಮನೂ ಆದ ಅಗ್ನಿಯನ್ನುದ್ದೇಶಿಸಿ । ಮನ್ಮ—ಸ್ತುತಿಯನ್ನೂ । ಶಸ್ತಿಂ—ಶಸ್ತ್ರಮಂತ್ರವನ್ನೂ । ಶಂಸ—ಪಠಿಸು.

ಭಾವಾರ್ಥ

ಎಲೈ ಸ್ತುತಿಕರ್ತನೇ, ಸೋಮವನ್ನು ಹಿಂಡತಕ್ಕ ಕಲ್ಲುಗಳಂತೆ ಶಬ್ದಮಾಡುತ್ತಾ ಮಧುರವಾದ ಸೋಮವನ್ನು ಹಿಂಡುವ ಯಜಮಾನನು ಯಾವ ಅಗ್ನಿಯನ್ನು ಸ್ತುತಿಸುವವನೋ ಅಂತಹ ಸ್ತುತಿಯನ್ನು ಆಲಿಸಿ ಕೇಳುವವನೂ, ಅಪ್ರಮತ್ತನೂ, ನರರನ್ನು ವೀಕ್ಷಿಸಿತಕ್ಕವನೂ, ಸುಖಕಾರಕನೂ, ಮರಣಧರ್ಮರಹಿತನೂ, ದೇವತಾತ್ಮನೂ, ಆದ ಅಗ್ನಿಯನ್ನುದ್ದೇಶಿಸಿ ಸ್ತುತಿಯನ್ನೂ, ಶಸ್ತ್ರಮಂತ್ರವನ್ನೂ ಪಠಿಸು.

English Translation

Repeat, oh priest, the praise, the prayer, to the attentive, the affable Agni, the beholder of man, the giver of felicity, the divine, the immortal; to him whom the effuser of the libation, like the (bruising) stone, adores aloud.

CC-0. Jangamwadi Math Collection. Digitized by eGangotri

### ವಿಶೇಷವಿಷಯಗಳು

ಸೋತಾ ಗ್ರಾವೇವ—ಸೋಮರಸವನ್ನು ಲತೆಗಳಿಂದ ಜಜ್ಜಿ ಹಿಂಡುವ ಕಲ್ಲಿನಂತೆ ಮಧುರವಾಗಿ ಶಬ್ದ ಮಾಡುವುದನ್ನು ಇಲ್ಲಿ ಅಗ್ನಿಯನ್ನು ಸ್ತುತಿಸುವ ಶಬ್ದಕ್ಕೆ ಹೋಲಿಸಿದೆ. ಈ ವಿಷಯದಲ್ಲಿ ಸೋಮರಸವನ್ನು ಹಿಂಡುವ ಗ್ರಾವಾಣಃ ಎಂಬ ಕಲ್ಲುಗಳನ್ನು ಸ್ತುತಿಸುವುದಕ್ಕಾಗಿ—ಪ್ರೈತೇ ವದಂತು ಪ್ರ ವಯಂ ವದಾಮ ಗ್ರಾವಭ್ಯಃ (ಋ. ಸಂ. ೧೦-೯೪) ಎಂಬ ಒಂದು ಸೂಕ್ತವೇ ಇರುವುದನ್ನು ಇಲ್ಲಿ ಭಾಷ್ಯಕಾರರು ಸೂಚಿಸಿದ್ದಾರೆ.

———

### ಸಂಹಿತಾಪಾಠಃ

ತ್ವಂ ಚಿನ್ನಃ ಶಮ್ಯಾ ಅಗ್ನೇ ಅಸ್ಯಾ ಋತಸ್ಯ ಬೋಧ್ಯೃತಚಿತ್ಸ್ವಾಧೀಃ ॥

ಕದಾ ತ ಉಕ್ಥಾ ಸಧಮಾದ್ಯಾನಿ ಕದಾ ಭವಂತಿ ಸಖ್ಯಾ ಗೃಹೇ ತೇ ॥ ೪ ॥

### ಪದಪಾಠಃ

ತ್ವಂ । ಚಿತ್ । ನಃ । ಶಮ್ಯೈ । ಅಗ್ನೇ । ಅಸ್ಯಾಃ । ಋತಸ್ಯ । ಬೋಧಿ । ಋತಽಚಿತ್ । ಸುಽಆಧೀಃ ।

ಕದಾ । ತೇ । ಉಕ್ಥಾ । ಸಧಽಮಾದ್ಯಾನಿ । ಕದಾ । ಭವಂತಿ । ಸಖ್ಯಾ । ಗೃಹೇ । ತೇ ॥ ೪ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಚಿತ್ತ್ವಮೇವ ಶಮ್ಯೈ । ಶಮೀತಿಶಬ್ದಃ ಕರ್ಮನಾಮ । ಅಸ್ಯಾಃ ಶಮ್ಯೈ ನೋಽಸ್ಮತ್ಸಂಬಂಧಿನೋಽಸ್ಯ ಕರ್ಮಣೋ ದೇವತಾ ಭವಸಿ । ಹೇ ಋತಚಿತ್ ಸತ್ಯಜ್ಞ ಹೇ ಅಗ್ನೇ ಸ್ವಾಧೀಃ ಸುಕರ್ಮಾ ಸುಧ್ಯಾನೋ ವಾ ತ್ವಮೃತಸ್ಯ ಬೋಧಿ । ಅಸ್ಮದೀಯಂ ಸ್ತೋತ್ರಂ ಬುಧ್ಯಸ್ವ । ತೇ ತವ ಸಧಮಾದ್ಯಾನಿ ಸಹಮದನಿಮಿತ್ತಾನ್ಯುಕ್ಥಾ ಶಸ್ತ್ರಾಣಿ ಕದಾ ಕಸ್ಮಿನ್ಕಾಲೇ ಭವಂತಿ । ಭವಿಷ್ಯಂತಿ । ತಥಾಸ್ಮದೀಯೇ ಗೃಹೇ ತೇ ತ್ವಯಾ ಸಹ ಸಖ್ಯಾ ಸಖ್ಯಾನಿ ಕದಾ ಭವಿಷ್ಯಂತಿ ॥ ಸಧಮಾದ್ಯಾನಿ । ಮಾದಯತೇರ್ಣ್ಯಂತಸ್ಯಾಚೋ ಯದಿತಿ ಯತ್ । ಸಧ ಮಾದಸ್ಥಯೋರಿತಿ ಸಹಸ್ಯ ಸಧಾದೇಶಃ । ಭವಂತಿ । ವಿಭಾಷಾ ಕದಾಕರ್ಹ್ಯೋಃ । ಪಾ- ೩-೩-೫ । ಇತಿ ಭವಿಷ್ಯದರ್ಥೇ ಲಟ್ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ ಚಿತ್—ನೀನೇ । ನಃ—ನಮ್ಮ । ಅಸ್ಯಾಃ ಶಮ್ಯೈ—ಈ ಕರ್ಮಕ್ಕೆ ಸಂಬಂಧಿಸಿದ ದೇವತೆಯು । ಋತಚಿತ್—ಸತ್ಯಜ್ಞನಾದ ಅಗ್ನಿಯೇ । ಸ್ವಾಧೀಃ—ಉತ್ತಮವಾದ ಕರ್ಮಕರ್ತನಾದ ನೀನು । ತೇ—ನಿನಗಾಗಿ । ಸಧಮಾದ್ಯಾನಿ—ಹರ್ಷಕಾರಕಗಳಾದ । ಉಕ್ಥಾ—ಶಸ್ತ್ರಮಂತ್ರಗಳು । ಕದಾ—



CC-0. Jangamwadi Math Collection. Digitized by eGangotri

ಯಾವಾಗ । ಭವಂತಿ—ನಿರ್ಮಿತವಾಗುತ್ತವೆಯೋ । ಗೃಹೇ—ನಮ್ಮ ಯಜ್ಞಗೃಹದಲ್ಲಿ । ತೇ—ನಿನ್ನೊಡನೆ । ಸಖ್ಯಾ—ಸಖ್ಯವು । ಕದಾ-ಯಾವಾಗ ಉಂಟಾಗುತ್ತದೆಯೋ ಆಗ । ಋತಸ್ಯ-ನಮ್ಮ ಸ್ತುತಿಯನ್ನು । ಬೋಧಿ-ತಿಳಿ

ಭಾವಾರ್ಥ

ಎಲೈ ಅಗ್ನಿಯೇ, ನೀನೇ ನಮ್ಮ ಈ ಕರ್ಮಕ್ಕೆ ಸಂಬಂಧಿಸಿದ ದೇವತೆಯು. ಸತ್ಯಜ್ಞನಾದ ಅಗ್ನಿಯೇ, ಉತ್ತಮವಾದ ಕರ್ಮಕರ್ತನಾದ ನೀನು ನಿನಗಾಗಿ ಹರ್ಷಕಾರಕಗಳಾದ ಶಸ್ತ್ರಗಳು ಯಾವಾಗ ನಿರ್ಮಿತವಾಗುತ್ತವೆಯೋ, ನಮ್ಮ ಯಜ್ಞಗೃಹದಲ್ಲಿ ನಿನ್ನೊಡನೆ ಯಾವಾಗ ಸಖ್ಯವು ಉಂಟಾಗುತ್ತದೆಯೋ ಆಗ ನಮ್ಮ ಸ್ತುತಿಯನ್ನು ತಿಳಿ.

English Translation

You, Agni, preside over this our rite : do you, who are cognizant of truth, and the author of good works, recognize this our adoration, whenever these exhilarating prayers (are addressed) to you, whenever friendly relations with you are (established) in our dwelling.

---

ಸಂಹಿತಾಪಾಠಃ

ಕಥಾ ಹ ತದ್ವರುಣಾಯ ತ್ವಮಗ್ನೇ ಕಥಾ ದಿವೇ ಗರ್ಹಸೇ ಕನ್ನ ಆಗಃ ।
ಕಥಾ ಮಿತ್ರಾಯ ಮೀಳ್ಹುಷೇ ಪೃಥಿವ್ಯೈ ಬ್ರವಃ ಕದರ್ಯಮ್ಣೇ
ಕದ್ಭಗಾಯ ॥ ೫ ॥

ಪದಪಾಠಃ

ಕಥಾ । ಹ । ತತ್ । ವರುಣಾಯ । ತ್ವಂ । ಅಗ್ನೇ । ಕಥಾ । ದಿವೇ । ಗರ್ಹಸೇ । ಕತ್ । ನಃ । ಆಗಃ ।
ಕಥಾ । ಮಿತ್ರಾಯ । ಮೀಳ್ಹುಷೇ । ಪೃಥಿವ್ಯೈ । ಬ್ರವಃ । ಕತ್ । ಅರ್ಯಮ್ಣೇ । ಕತ್ । ಭಗಾಯ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ತದಸ್ಮದೀಯಂ ಪಾಪಂ ವರುಣಾಯ ಕಥಾ ಗರ್ಹಸೇ । ಕೇನ ಹೇತುನಾ ಗರ್ಹಾಪೂರ್ವಮಾವೇದಯೇಃ । ಹೇತಿ ಪೂರಣಃ । ದಿವೇ ದ್ಯುಲೋಕಾಯ ದ್ಯೋತಮಾನಾಯ ಸೂರ್ಯಾಯ ವಾ ಕಥಾ ಕಥಂ ತತ್ಪಾಪಮಾವೇದಯೇಃ । ನೋಽಸ್ಮಾಕಮಾಗಸ್ತತ್ಪಾಪಂ ಕತ್ಕಿಮಸ್ತಿ ।

CC-0. Jangamwadi Math Collection. Digitized by eGangotri

ತ್ವತ್ಪರಿಚರಣಾನ್ನಾಸ್ತೀತ್ಯರ್ಥಃ । ತಥಾ ಮೀಳ್ಹುಷೇಽಭಿಮತಫಲಸೇಕ್ತ್ರೇ ಮಿತ್ರಾಯ ಪೃಥಿವ್ಯೈ ಚ ಕಥಾ ಬ್ರವಃ । ಕಥಮಾಗೋ ಬ್ರೂಯಾಃ । ಅರ್ಯಮ್ಣೇ ದೇವಾಯ ಭಗಾಯೈತನ್ನಾಮಕಾಯ ಚ ದೇವಾಯ ಕತ್ಕಥಂ ಬ್ರೂಯಾಃ ॥ ಕಥಾ । ಕಿಂಶಬ್ದಾತ್ಥಾ ಹೇತೌ ಚ ಛಂದಸೀತಿ ಥಾಪ್ರತ್ಯಯಃ । ಪ್ರಾಗ್ದಿಶೋ ವಿಭಕ್ತಿರಿತಿ ವಿಭಕ್ತಿಸಂಜ್ಞಾಯಾಂ ಕಿಮಃ ಕಃ । ಪಾ. ೭-೨-೧೦೩ । ಇತಿ ಕಾದೇಶಃ । ಮೀಳ್ಹುಷೇ । ಮಿಹ ಸೇಚನೇ ।ಕ್ವಸೌ ದಾಶ್ವಾನ್ ಸಾಹ್ವಾನ್ ಮೀಢ್ವಾಂಶ್ಚೇತಿ ನಿಪಾತಿತಃ । ಬ್ರವಃ । ಬ್ರೂಞ್ ವ್ಯಕ್ತಾಯಾಂ ವಾಚಿ । ಲೇಟಿ ಲೇಟೋಽಡಾಟಾವಿತ್ಯಡಾಗಮಃ । ಪಾದಾದಿತ್ವಾದನಿಘಾತಃ । ಆಗಮಸ್ಯಾನುದಾತ್ತತ್ವಾದ್ಧಾತುಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತ್ವಂ—ನೀನು । ತತ್—ನಮ್ಮ ಪಾಪವನ್ನು । ವರುಣಾಯ—ವರುಣನಿಗೆ । ಕಥಾ—ಏತಕ್ಕಾಗಿ । ಗರ್ಹಸೇ—ತಿಳಿಸಿ ನಮ್ಮನ್ನು ನಿಂದಿಸುತ್ತೀಯೆ । ದಿವೇ—ದ್ಯುಲೋಕಕ್ಕೆ । ಕಥಾ—ಏತಕ್ಕೆ ತಿಳಿಸುವೆ । ನಃ—ನಮ್ಮ । ಆಗಃ—ಪಾಪವು । ಕತ್—ಏನುತಾನೆ ಇದ್ದೀತು । ಮೀಳ್ಹುಷೇ—ಇಷ್ಟಾರ್ಥಪ್ರದನಾದ । ಮಿತ್ರಾಯ—ಮಿತ್ರನಿಗೂ । ಪೃಥಿವ್ಯೈ ಚ—ಪೃಥಿವಿಗೂ । ಕಥಾ—ಏತಕ್ಕಾಗಿ । ಬ್ರವಃ—ಹೇಳುವೆ । ಅರ್ಯಮ್ಣೇ—ಅರ್ಯಮನಿಗೂ । ಭಗಾಯ—ಭಗನಿಗೂ । ಕತ್—ಏತಕ್ಕೆ ತಿಳಿಸುವೆ.

ಭಾವಾರ್ಥ

ಎಲೈ ಅಗ್ನಿಯೇ, ನೀನು ನಮ್ಮ ಪಾಪವನ್ನು ವರುಣನಿಗೆ ಏತಕ್ಕಾಗಿ ತಿಳಿಸಿ ನಮ್ಮನ್ನು ನಿಂದಿಸುತ್ತೀಯೆ ? ನಮ್ಮ ಪಾಪವು ಏನು ತಾನೇ ಇದ್ದೀತು ? ಅದನ್ನು ದ್ಯುಲೋಕಕ್ಕೂ, ಇಷ್ಟಾರ್ಥಪ್ರದನಾದ ಮಿತ್ರನಿಗೂ, ಪೃಥಿವಿಗೂ ಅರ್ಯಮನಿಗೂ, ಭಗನಿಗೂ ಏತಕ್ಕಾಗಿ ತಿಳಿಸುವೆ ?

English Translation

Why, Agni, do you reproach us (for our sin) to Varuna, why to the heaven ? what is our offence ? why repeat it to the bountiful Mitra, to earth, to Aryaman, or to Bhaga ?

---

ಸಂಹಿತಾಪಾಠಃ

ಕದ್ಧಿಷ್ಣ್ಯಾಸು ವೃಧಸಾನೋ ಅಗ್ನೇ ಕದ್ವಾತಾಯ ಪ್ರತವಸೇ ಶುಭಂಯೇ ।
ಪರಿಜ್ಮನೇ ನಾಸತ್ಯಾಯ ಕ್ಷೇ ಬ್ರವಃ ಕದಗ್ನೇ ರುದ್ರಾಯ ನೃಘ್ನೇ ॥ ೬ ॥

ಪದಪಾಠಃ

ಕತ್ । ಧಿಷ್ಣ್ಯಾಸು । ವೃಧಸಾನಃ । ಅಗ್ನೇ । ಕತ್ । ವಾತಾಯ । ಪ್ರಽತವಸೇ । ಶುಭಂಽಯೇ ।

CC-0. Jangamwadi Math Collection. Digitized by eGangotri

ಪರಿಜ್ಮನೇ। ನಾಸತ್ಯಾಯ । ಕ್ಷೇ । ಬ್ರವಃ । ಕತ್ । ಅಗ್ನೇ । ರುದ್ರಾಯ । ನೃಘ್ನೇ ॥ ೬ ॥

ಸಾಯಣಭಾಷ್ಯಂ

ಹೇ ಅಗ್ನೇ ಧಿಷ್ಣ್ಯಸ್ವಾಗ್ನೀಧ್ರೀಯಾದಿಧಿಷ್ಣ್ಯೇಷು ವೃಧಸಾನೋ ಘೃತಾದ್ಯಾಹುತಿಭಿರ್ವರ್ಧಮಾನಸ್ತ್ವಂ ಕತ್ಕಥಂ ಬ್ರೂಯಾಃ। ಪ್ರತವಸೇ ಪ್ರಕೃಷ್ಟಬಲಾಯ ಶುಭಂಯೇ ಶುಭಸ್ಯ ಪ್ರಾಪಯಿತ್ರೇ ಪರಿಜ್ಮನೇ ಪರಿತೋ ಗಂತ್ರೇ ನಾಸತ್ಯಾಯ ಸತ್ಯಸ್ಯ ನೇತ್ರೇ। ಯದ್ವಾ । ನ ವಿದ್ಯತೇಽಸತ್ಯಂ ಯಸ್ಯ ತಸ್ಮೈ ವಾತಾಯ ವಾಯವೇ। ಯದ್ವಾ। ನಾಸತ್ಯಾಯೇತಿ ವಚನವ್ಯತ್ಯಯಃ। ನಾಸತ್ಯಾಭ್ಯಾಮಶ್ವಿಭ್ಯಾಂ। ಕ್ಷೇ। ಕ್ಷೇತಿ ಪೃಥಿವೀನಾಮ। ಕ್ಷಿಯಂತಿ ನಿವಸಂತ್ಯಸ್ಯಾಂ ಪ್ರಾಣಿನ ಇತಿ। ತಸ್ಯೈ ಕ್ಷೇ ಪೃಥಿವ್ಯೈ ಚ ಕತ್ಕಥಂ ಬ್ರೂಯಾಃ। ಹೇ ಅಗ್ನೇ ನೃಘ್ನೇ ನೃಣಾಂ ಪಾಪಕೃತಾಂ ಹಂತ್ರೇ ರುದ್ರಾಯ ದೇವಾಯ ಕತ್ಕಥಮಾಗೋ ಬ್ರವಃ। ಬ್ರೂಯಾಃ॥ ವೃಧಸಾನಃ। ವೃಧು ವರ್ಧನೇ। ಅಸಾನಜಿತ್ಯನುವೃತ್ತಾವೃಂಜಿವೃಧಿಮಂದಿಸಹಿಭ್ಯಃ ಕಿದಿತ್ಯಸಾನಚ್ಪ್ರತ್ಯಯಃ। ಕಿತ್ತ್ವಾನ್ನಗುಣಃ। ಚಿತ್ತ್ವಾದಂತೋದಾತ್ತಃ। ಶುಭಂಯೇ। ಯಾ ಪ್ರಾಪಣೇ। ವಿಚ್। ತತ್ಪುರುಷೇ ಕೃತಿ ಬಹುಲಮಿತಿ ದ್ವಿತೀಯಾಯಾ ಅಪ್ಯಲುಕ್। ಕೃತ್ಸ್ವರಃ। ಕ್ಷೇ। ಕ್ಷಿ ನಿವಾಸಗತ್ಯೋಃ। ಅನ್ಯೇಭ್ಯೋಽಪಿ ದೃಶ್ಯತ ಇತ್ಯಧಿಕರಣೇ ಡಃ। ತತಷ್ಟಾಪ್। ಚತುರ್ಥ್ಯೇಕವಚನ ಆತೋ ಧಾತೋರಿತ್ಯತ್ರಾತ ಇತಿ ಯೋಗವಿಭಾಗಾದಾಕಾರಲೋಪಃ। ನೃಘ್ನೇ। ಹನ ಹಿಂಸಾಗತ್ಯೋಃ। ಬಹುಲಂ ಛಂದಸೀತಿ ಕ್ವಿಪ್॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಧಿಷ್ಣ್ಯೇಸು—ಯಜ್ಞಸ್ಥಾನಗಳಲ್ಲಿ । ವೃಧಸಾನಃ—ವೃದ್ಧಿಯನ್ನು ಹೊಂದುವ ನೀನು । ಪ್ರತವಸೇ—ಉತ್ಕೃಷ್ಟವಾದ ಬಲವುಳ್ಳವನೂ । ಶುಭಂಯೇ—ಶುಭಕಾರಕನೂ । ಪರಿಜ್ಮನೇ—ಸರ್ವತ್ರ ಸಂಚರಿಸುವವನೂ । ನಾಸತ್ಯಾಯ—ಸತ್ಯಸ್ವರೂಪನೂ ಆದ । ವಾತಾಯ—ವಾಯುವಿಗೆ । ಕತ್—ಹೇಗೆ ತಾನೇ ನನ್ನ ಪಾಪವನ್ನು ತಿಳಿಸುವೆ ? । ಕ್ಷೇ—ಪೃಥಿವಿಗೆ । ಕತ್—ಏತಕ್ಕೆ (ಹೇಗೆ) ಹೇಳುತ್ತೀಯೆ । ಅಗ್ನೇ—ಎಲೈ ಅಗ್ನಿಯೇ । ನೃಘ್ನೇ—ಪಾಪಾತ್ಮರಾದ ಮಾನವರನ್ನು ನಾಶಮಾಡುವ । ರುದ್ರಾಯ—ರುದ್ರ ದೇವನಿಗೆ । ಕತ್—ಏತಕ್ಕೆ । ಬ್ರವಃ—ಹೇಳುತ್ತೀಯೆ ?

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞಸ್ಥಾನಗಳಲ್ಲಿ ವೃದ್ಧಿಯನ್ನು ಹೊಂದುವ ನೀನು ಉತ್ಕೃಷ್ಟವಾದ ಬಲವುಳ್ಳವನೂ ಶುಭಕಾರಕನೂ, ಸರ್ವತ್ರ ಸಂಚರಿಸುವವನೂ, ಸತ್ಯಸ್ವರೂಪನೂ ಆದ ವಾಯುವಿಗೂ, ಪೃಥಿವಿಗೂ ಪಾಪಾತ್ಮರಾದ ಮಾನವರನ್ನು ನಾಶಮಾಡುವ ರುದ್ರದೇವನಿಗೂ ಏತಕ್ಕಾಗಿ ನನ್ನ ಪಾಪವನ್ನು ತಿಳಿಸುತ್ತೀಯೆ ?

English Translation

Why repeat it when exalted in holy ceremonies ? why tell it to the mighty, benevolent, circumambient, truthful wind (Vayu) ? why, Agni, to earth, why to man-destroying Rudra ?

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಕಥಾ ಮಹೇ ಪುಷ್ಟಿಂಭರಾಯ ಪೂಷ್ಣೇ ಕದ್ರುದ್ರಾಯ ಸುಮಖಾಯ ಹವಿರ್ದೇ ।

ಕದ್ವಿಷ್ಣವ ಉರುಗಾಯಾಯ ರೇತೋ ಬ್ರವಃ ಕದಗ್ನೇ ಶರವೇ ಬೃಹತ್ಯೈ ॥

ಪದಪಾಠಃ

ಕಥಾ । ಮಹೇ । ಪುಷ್ಟಿಂಽಭರಾಯ । ಪೂಷ್ಣೇ । ಕತ್ । ರುದ್ರಾಯ । ಸುಽಮಖಾಯ । ಹವಿಃಽದೇ ।

ಕತ್ । ವಿಷ್ಣವೇ । ಉರುಽಗಾಯಾಯ । ರೇತಃ । ಬ್ರವಃ । ಕತ್ । ಅಗ್ನೇ । ಶರವೇ । ಬೃಹತ್ಯೈ ॥ ೭ ॥

ಸಾಯಣಭಾಷ್ಯಂ

ಹೇ ಅಗ್ನೇ ಮಹೇ ಮಹತೇ ಪುಷ್ಟಿಂಭರಾಯ ಪುಷ್ಟಿಧಾರಕಾಯ ಪೂಷ್ಣ ಏತನ್ನಾಮಕಾಯ ದೇವಾಯ ಕಥಾ ಕೇನ ಹೇತುನಾ ಪಾಪಂ ಬ್ರವೀಥಾಃ । ಸುಮಖಾಯ ಸುಪೂಜನೀಯಾಯ ಸುಯಜ್ಞಾಯ ವಾ ಹವಿರ್ದೇಽಗ್ನಿರೂಪೇಣ ದೇವಾನಾಂ ಹವಿರ್ದಾತ್ರೇ । ಯದ್ವಾ । ಸ್ವಿಷ್ಟಕೃತ್ತ್ವಾದ್ಧವಿಷೋ ದಾತ್ರೇ । ರುದ್ರಾಯ ಕತ್ಕಥಂ ಬ್ರೂಯಾಃ । ತಥೋರುಗಾಯಾಯೋರುಭಿರ್ಬಹುಭಿರ್ಗಾಯಮಾನಾಯ ಯದ್ವಾ । ಪ್ರಭೂತಕೀರ್ತಯೇ ವಿಷ್ಣವೇ ರೇತಃ ಕ್ಷಯಹೇತು ಪಾಪಂ ಕತ್ಕಥಂ ವದೇಃ । ಶರವೇ । ಶೃಣಾತಿ ಪಕ್ವಾ ಓಷಧೀರಿತಿ ಶರುಃ ಶರತ್ಸಂವತ್ಸರಃ । ಯದ್ವಾ । ಹಿಂಸಿಕಾ ನಿರ್ಋತಿಃ । ಬೃಹತ್ಯೈ ಮಹತ್ಯೈ ಶರವೇ ನಿರ್ಋತ್ಯೈ ವಾ ಕತ್ಕಥಂ ಪಾಪಂ ಬ್ರವಃ । ಬ್ರೂಯಾಃ ॥ ಪುಷ್ಟಿಂಭರಾಯ। ಡುಭೃಞ್ ಧಾರಣಪೋಷಣಯೋಃ । ಸಂಜ್ಞಾಯಾಂ ಭೃತೄವೃಜೀತ್ಯಾದಿನಾ ಖಚ್ । ಅರುರ್ದ್ವಿಷದಜಂತಸ್ಯ ಮುಮಿತಿ ಪೂರ್ವಪದಸ್ಯ ಮುಮಾಗಮಃ। ಚಿತ್ತ್ವಾದಂತೋದಾತ್ತಃ । ಸಮಾಸೇ ಕೃತ್ಸ್ವರಃ । ಹವಿರ್ದೇ ॥ ಅನುದಾತ್ತಸ್ಯ ಚ ಯತ್ರೋದಾತ್ತಲೋಪ ಇತಿ ಸುಪ ಉದಾತ್ತತ್ವಂ । ಶರವೇ । ಶೄ ಹಿಂಸಾಯಾಂ । ಶೄಸ್ವೃಸ್ನಿಹಿತ್ರಪ್ಯಸೀತ್ಯಾದಿನಾ ಉಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । **ಮಹೇ—**ಮಹತ್ಸ್ವರೂಪವುಳ್ಳವನೂ । **ಪುಷ್ಟಿಂಭರಾಯ—**ಲೋಕಕ್ಕೆ ಪೋಷಕನೂ ಆದ । **ಪೂಷ್ಣೇ—**ಪೂಷದೇವನಿಗೆ । **ಕಥಾ—**ಯಾವ ನಿಮಿತ್ತವಾಗಿ (ನನ್ನ ಪಾಪವನ್ನು ತಿಳಿಸುವೆ) । **ಸುಮಖಾಯ—**ಉತ್ತಮವಾದ ಪೂಜೆಗೆ ಅರ್ಹನಾದವನೂ । **ಹವಿರ್ದೇ—**ಅಗ್ನಿರೂಪದಲ್ಲಿ ಹವಿಸ್ಸನ್ನು ಅರ್ಪಿಸುವವನೂ ಆದ । **ರುದ್ರಾಯ—**ರುದ್ರನಿಗೆ । **ಕತ್—**ಏಕೆ ಹೇಳುತ್ತೀಯೆ । **ಶರವೇ—**ಸಂವತ್ಸರಾಧಿದೇವತೆಗೂ । **ಬೃಹತ್ಯೈ—**ನಿರ್ಋತಿಗೂ । **ಕತ್—**ಹೇಗೆ । **ಬ್ರವಃ—**ಹೇಳುತ್ತೀಯೆ । **ಉರುಗಾಯಾಯ—**ಬಹುವಿಧವಾಗಿ

CC-0. Jangamwadi Math Collection. Digitized by eGangotri

ಸ್ತುತನಾಗತಕ್ಕ । ವಿಷ್ಣವೇ— ವಿಷ್ಣುವಿಗೂ । ರೇತಃ—ಕ್ಷಯಹೇತುವಾದ ಪಾಪವಿಚಾರವನ್ನು । ಕತ್—ಏತಕ್ಕೆ ಹೇಳುತ್ತೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಮಹತ್ಸ್ವರೂಪವುಳ್ಳವನೂ, ಲೋಕಕ್ಕೆ ಪೋಷಕನೂ ಆದ ಪೂಷದೇವನಿಗೂ, ಉತ್ತಮವಾದ ಪೂಜೆಗೆ ಅರ್ಹನಾದವನೂ, ಅಗ್ನಿರೂಪದಲ್ಲಿ ದೇವತೆಗಳಿಗೆ ಹವಿಸ್ಸನ್ನರ್ಪಿಸುವವನೂ ಆದ ರುದ್ರನಿಗೂ ಸಂವತ್ಸರಾಧಿದೇವತೆಗೂ, ನಿರ್ಋತಿಗೂ, ಬಹುವಾಗಿ ಸ್ತುತನಾಗತಕ್ಕ ವಿಷ್ಣುವಿಗೂ ಕ್ಷಯಹೇತುವಾದ ನನ್ನ ಪಾಪವಿಚಾರವನ್ನು ಏತಕ್ಕೆ ಹೇಳಬೇಕು ?

English Translatiou

Why to the great and nutriment-conveying Pushan ? why to Rudra, the object of worship, the giver of the oblation (to the gods) ? Why to the many-hymned Vishnu ? Why tell our sin to the extensive year ?

———

ಸಂಹಿತಾಪಾಠಃ

ಕಥಾ ಶರ್ಧಾಯ ಮರುತಾಮೃತಾಯ ಕಥಾ ಸೂರೇ ಬೃಹತೇ ಪೃಚ್ಛ್ಯಮಾನಃ ।
ಪ್ರತಿ ಬ್ರವೋಽದಿತಯೇ ತುರಾಯ ಸಾಧಾ ದಿವೋ ಜಾತವೇದಶ್ಚಿಕಿತ್ವಾನ್॥

ಪದಪಾಠಃ

ಕಥಾ । ಶರ್ಧಾಯ । ಮರುತಾಂ । ಋತಾಯ । ಕಥಾ । ಸೂರೇ । ಬೃಹತೇ । ಪೃಚ್ಛ್ಯಮಾನಃ ।
ಪ್ರತಿ । ಬ್ರವಃ । ಅದಿತಯೇ । ತುರಾಯ । ಸಾಧ । ದಿವಃ । ಜಾತ॰ವೇದಃ । ಚಿಕಿತ್ವಾನ್ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ಋತಾಯ ಗಂತ್ರೇ ಸತ್ಯಭೂತಾಯ ವಾ ಮರುತಾಂ ಶರ್ಧಾಯ ಬಲಭೂತಾಯ ಗಣಾಯ ಕಥಾ ಕೇನ ಹೇತುನಾ ಮದೀಯಮಾಗಃ ಪ್ರತಿಬ್ರೂಯಾಃ । ತೇನ ಪೃಚ್ಛ್ಯಮಾನಃ ಸನ್ ತಸ್ಮೈ ಬೃಹತೇ ಮಹತೇ ಸೂರೇ ಸೂರ್ಯಾಯ ಕಥಾ ಕಥಂ ವದೇಃ । ತಥಾದಿತಯೇ ದೇವ್ಯೈ ತುರಾಯ ತ್ವರಿತಗಮನಾಯ ವಾಯವೇ । ಅದಿತಯೇಽದೀನಾಯ ತುರಾಯ ವಾ । ಪ್ರತಿ ಬ್ರವಃ । ಮದೀಯ-

CC-0. Jangamwadi Math Collection. Digitized by eGangotri

ಮಾಗಃ ಕಥಂ ಪ್ರತಿಬ್ರೂಯಾಃ । ಯಸ್ಮಾದೇವಂ ತಸ್ಮಾತ್ ಹೇ ಜಾತವೇದೋಽಗ್ನೇ ಚಿಕಿತ್ವಾನ್ ತತ್ಸರ್ವಂ ಜಾನಾನಸ್ತ್ವಂ ದಿವೋ ದೀಪ್ತಾನ್ದೇವಾನ್ ಸಾಧ । ಸಾಧಯ । ಗಚ್ಛ । ಯದ್ವಾ । ದಿವೋ ದ್ಯುಲೋಕಸ್ಯ ಯಜ್ಞವಹನಲಕ್ಷಣಂ ಕಾರ್ಯಂ ಸಾಧ । ಕುರು ॥ ಸೂರೇ । ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ ಜಸೀರ್ಯತ್ವಾಭಾವಃ । ಅತೋ ಗುಣ ಇತಿ ಪರರೂಪತ್ವಂ । ಪೃಚ್ಛ್ಯಮಾನಃ । ಪ್ರಚ್ಛ ಜ್ಞೀಪ್ಸಾಯಾಂ । ಕರ್ಮಣಿ ಯಕ್ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಶಾನಚೋ ಲಸಾರ್ವಧಾತುಕಾನುದಾತ್ತತ್ವೇ ಯಕ್ಸ್ವರಃ । ಸಾಧ । ರಾಧ ಸಾಧ ಸಂಸಿದ್ಧೌ । ಅಂತರ್ಭಾವಿತಣ್ಯರ್ಥಸ್ಯ ಲೋಟಿ ವ್ಯತ್ಯಯೇನ ಶಪ್ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ಋತಾಯ—ಸತ್ಯಾತ್ಮಕವಾದ । ಮರುತಾಂ—ಮರುತ್ತುಗಳ । ಶರ್ಧಾಯ—ಸಮೂಹಕ್ಕೆ । ಕಥಾ—ಯಾವ ನಿಮಿತ್ತವಾಗಿ (ನನ್ನ ಪಾಪವನ್ನು ತಿಳಿಸುವೆ) । ಪೃಚ್ಛ್ಯಮಾನಃ—ನೀನು ಒಂದು ವೇಳೆ ಪ್ರಶ್ನಿಸಲ್ಪಟ್ಟರೂ ಸಹ । ಬೃಹತೇ—ಮಹತ್ಸ್ವರೂಪವುಳ್ಳ । ಸೂರೇ—ಸೂರ್ಯನಿಗೆ । ಕಥಾ—ಹೇಗೆ ಹೇಳುವೆ। ಅದಿತಯೇ—ಅದಿತಿದೇವಿಗೂ । ತುರಾಯ—ತ್ವರಿತಗಮನವುಳ್ಳ ವಾಯುವಿಗೂ । ಪ್ರತಿ ಬ್ರವಃ—ಹೇಗೆ ಹೇಳುತ್ತೀಯೆ । ಜಾತವೇದಃ—ಜಾತಪ್ರಜ್ಞನಾದ ಎಲೈ ಅಗ್ನಿಯೇ । ಚಿಕಿತ್ವಾನ್—ಎಲ್ಲರನ್ನೂ ನೀನು ತಿಳಿದವನಾಗಿ । ದಿವಃ—ಪ್ರಕಾಶಮಾನರಾದ ದೇವತೆಗಳಲ್ಲಿಗೆ । ಸಾಧ—ಹೋಗಿಸೇರು.

ಭಾವಾರ್ಥ

ಎಲೈ ಅಗ್ನಿಯೇ, ಸತ್ಯಾತ್ಮಕವಾದ ಮರುತ್ತುಗಳ ಸಮೂಹಕ್ಕೆ ಯಾವ ನಿಮಿತ್ತವಾಗಿ ನನ್ನ ಪಾಪವನ್ನು ತಿಳಿಸುವೆ? ನೀನು ಒಂದುವೇಳೆ ಪ್ರಶ್ನಿಸಲ್ಪಟ್ಟರೂ ಸಹ ಮಹತ್ಸ್ವರೂಪವುಳ್ಳ ಸೂರ್ಯನಿಗೆ ಹೇಗೆ ಹೇಳುವೆ? ಅದಿತಿದೇವಿಗೂ, ತ್ವರಿತಗಮನವುಳ್ಳ ವಾಯುವಿಗೂ ಹೇಗೆ ಹೇಳುವೆ? ಜಾತಪ್ರಜ್ಞನಾದ ಎಲೈ ಅಗ್ನಿಯೇ, ನೀನು ಎಲ್ಲವನ್ನೂ ತಿಳಿದವನಾಗಿ ಪ್ರಕಾಶಮಾನರಾದ ದೇವತೆಗಳಲ್ಲಿಗೆ ಹೋಗಿ ಸೇರು.

English Translation

Why tell it to the veracious company of the Maruts? why, even when asked, to the mighty sun? Why repeat it to Aditi, or to the swift wind? Fulfil, all-knowing Jatavedas, (the worship) of heaven.

---

ಸಂಹಿತಾಪಾಠಃ

ಋತೇನ ಋತಂ ನಿಯತಮೀಳ ಆ ಗೋರಾಮಾ ಸಚಾ ಮಧುಮತ್ಪಕ್ವಮಗ್ನೇ ।
ಕೃಷ್ಣಾ ಸತೀ ರುಶತಾ ಧಾಸಿನೈಷಾ ಜಾಮರ್ಯೇಣ ಪಯಸಾ ಪೀಪಾಯ ॥

CC-0. Jangamwadi Math Collection. Digitized by eGangotri

ಪದಪಾಠಃ

ಋತೇನ । ಋತಂ । ನಿऽಯತಂ । ಈಳೇ । ಆ । ಗೋಃ । ಆಮಾ । ಸಚಾ । ಮಧುऽಮತ್ । ಪಕ್ವಂ । ಅಗ್ನೇ ।

ಕೃಷ್ಣಾ । ಸತೀ । ರುಶತಾ । ಧಾಸಿನಾ । ಏಷಾ । ಜಾಮರ್ಯೇಣ । ಪಯಸಾ । ಪೀಪಾಯ ॥ ೯ ॥

ಸಾಯಣಭಾಷ್ಯಂ

ಹೇ ಅಗ್ನೇ ಋತೇನ ಸತ್ಯಭೂತೇನ ಯಜ್ಞೇನ ನಿಯತಮನುಸ್ಯೂತಮೃತಮುದಕಂ ಗೋ-ರ್ಧೇನೋಃ ಪಯ ಈಳೇ । ಆಯಾಚೇ । ಸಾಂನಾಯ್ಯಾದಿಹವಿರರ್ಥಂ ಗವ್ಯಂ ಪಯಸ್ತ್ವಾಂ ಯಾಚ ಇತ್ಯಭಿಪ್ರಾಯಃ । ಆಮಾಪಕ್ವಾ ಸಾ ಗೌರ್ಮಧುಮನ್ಮಾಧುರ್ಯೋಪೇತಂ ಪಕ್ವಂ ಪಯಃ ಸಚಾ ಸಹ ಧಾರಯತಿ । ಕೃಷ್ಣಾ ಕೃಷ್ಣವರ್ಣಾ ಸತ್ಯೇಷಾ ಗೌ ರುಶತಾ ಶ್ವೇತೇನ ಧಾಸಿನಾ ಪ್ರಾಣಿನಾಂ ಧಾರಕೇಣ ಜಾಮರ್ಯೇಣ । ಜಾಯಂತ ಇತಿ ಜಾಃ ಪ್ರಜಾಃ । ತಾ ಜಾ ಅಮರ್ಯೇಣಾಮರಣನಿಮಿತ್ತೇನ ತೇನ ಪಯಸಾ ಪೀಪಾಯ । ಪ್ರಜಾಃ ಪ್ಯಾಯಯತಿ । ತನ್ಮೈಷ ಮಹಿಮಾ ಯದ್ರಸಾನ್ಪರಿಣಾಮಯನ್ನೇವಂ ಕರೋಷಿ ॥ ಪೀಪಾಯ । ಪ್ಯಾಯತೇರ್ಲಿಟಿ ಲಿಡ್ಯಙೋಶ್ಚೇತಿ ಪೀಭಾವಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಋತೇನ—ಸತ್ಯಭೂತವಾದ ಯಜ್ಞದಿಂದ । ನಿಯತಂ—ಅನುಸ್ಯೂತವಾದ । ಋತಂ—ಉದಕವನ್ನೂ । ಗೋಃ—ಧೇನುವಿನ ಪಯಸ್ಸನ್ನೂ । ಆ ಈಳೇ—ಯಾಚಿಸುತ್ತೇನೆ । ಆಮಾ—ಪರಿಪಕ್ವಾವಸ್ಥೆಯಲ್ಲಿದ್ದರೂ ಸಹ (ಗೋವು) । ಮಧುಮತ್—ಮಧುರಯುಕ್ತವಾದುದೂ । ಪಕ್ವಂ-ಪಕ್ವವಾದುದೂ ಆದ ಪಯಸ್ಸನ್ನು । ಸಚಾ—ತನ್ನಲ್ಲಿ ಧರಿಸಿರುತ್ತದೆ । ಕೃಷ್ಣಾ ಸತೀ—ಕೃಷ್ಣವರ್ಣಾತ್ಮಕವಾದ । ಏಷಾ—ಈ ಗೋವು । ರುಶತಾ—ಶ್ವೇತವರ್ಣವುಳ್ಳದ್ದೂ । ಧಾಸಿನಾ—ಪ್ರಾಣಿಗಳಿಗೆ ಧಾರಕವಾದದ್ದೂ । ಜಾಮರ್ಯೇಣ—ಪ್ರಜೆಗಳಿಗೆ ಮರಣರಾಹಿತ್ಯವನ್ನು ಉಂಟುಮಾಡತಕ್ಕದ್ದೂ ಆದ । ಪಯಸಾ—ಕ್ಷೀರದಿಂದ । ಪೀಪಾಯ—ಪ್ರಜೆಗಳನ್ನು ತೃಪ್ತಿಗೊಳಿಸುತ್ತದೆ.

ಭಾವಾರ್ಥ

ಎಲೈ ಅಗ್ನಿಯೇ, ಸತ್ಯಭೂತವಾದ ಯಜ್ಞದಿಂದ ಅನುಸ್ಯೂತಕವಾದ ಉದಕವನ್ನೂ, ಧೇನುವಿನ ಪಯಸ್ಸನ್ನೂ ಯಾಚಿಸುತ್ತೇನೆ. ಪರಿಪಕ್ವಾವಸ್ಥೆಯಲ್ಲಿಲ್ಲದಿದ್ದರೂ ಸಹ ಈ ಗೋವು ಮಧುರಯುಕ್ತವಾದುದೂ, ಪರಿಪಕ್ವವಾದುದೂ ಆದ ಪಯಸ್ಸನ್ನು ತನ್ನಲ್ಲಿ ಧರಿಸಿರುತ್ತದೆ. ಕೃಷ್ಣವರ್ಣಾತ್ಮಕವಾದ ಈ ಗೋವು ಶ್ವೇತವರ್ಣವುಳ್ಳದ್ದೂ, ಪ್ರಾಣಿಗಳಿಗೆ ಧಾರಕವಾದದ್ದೂ, ಮರಣರಾಹಿತ್ಯವನ್ನುಂಟುಮಾಡತಕ್ಕದ್ದೂ ಆದ ಪಯಸ್ಸಿನಿಂದ ಪ್ರಜೆಗಳನ್ನು ತೃಪ್ತಿಗೊಳಿಸುತ್ತದೆ.

CC-0. Jangamwadi Math Collection. Digitized by eGangotri

## English Translation

I solicit, Agni, the milk of the cow, essential for the sacrifice yet immature, (she possesses) the sweet and ripe (fluid); black though she be, yet with her white nutritious milk she maintains mankind in existence.'

---

### ಸಂಹಿತಾಪಾಠಃ

ಋತೇನ ಹಿ ಷ್ಮಾ ವೃಷಭಶ್ಚಿದಕ್ತಃ ಪುಮಾಁ ಅಗ್ನಿಃ ಪಯಸಾ ಪೃಷ್ಠ್ಯೇನ ।
ಅಸ್ಪಂದಮಾನೋ ಅಚರದ್ವಯೋಧಾ ವೃಷಾ ಶುಕ್ರಂ ದುದುಹೇ
ಪೃಶ್ನಿರೂಧಃ ॥ ೧೦ ॥

### ಪದಪಾಠಃ

ಋತೇನ । ಹಿ । ಸ್ಮ । ವೃಷಭಃ । ಚಿತ್ । ಅಕ್ತಃ । ಪುಮಾನ್ । ಅಗ್ನಿಃ । ಪಯಸಾ । ಪೃಷ್ಠ್ಯೇನ ।
ಅಸ್ಪಂದಮಾನಃ । ಅಚರತ್ । ವಯಃऽಧಾಃ । ವೃಷಾ । ಶುಕ್ರಂ । ದುದುಹೇ । ಪೃಶ್ನಿಃ । ಊಧಃ ॥೧೦॥

### ಸಾಯಣಭಾಷ್ಯಂ

ವೃಷಭೋಽಭಿಮತಫಲವರ್ಷಕಃ ಪುಮಾನ್ ಶ್ರೇಷ್ಠಃ ಸೋಽಗ್ನಿರ್ಋತೇನ ಸತ್ಯಭೂತೇನ ಪೃಷ್ಠ್ಯೇನ ಧಾರಕೇಣ ಪಯಸಾಕ್ತಃ ಸಿಕ್ತೋ ಭವತಿ । ಹಿ ಷ್ಮ ಚಿತ್ ತ್ರಯಃ ಪೂರಣಾಃ । ವಯೋಧಾ ಅನ್ನದಃ ಸೋಽಗ್ನಿರಸ್ಪಂದಮಾನ ಏಕತ್ರಾವಸ್ಥಿತಃ ಸನ್ ಏವಾಚರತ್ । ಸರ್ವತ್ರ ತೇಜಸಾ ಚರತಿ । ತಥಾ ವೃಷಾಪಾಂ ವರ್ಷಕಃ ಪೃಶ್ನಿಃ ಸೂರ್ಯಃ ಶುಕ್ರಂ ಪಯ ಊಧೋಽಂತರಿಕ್ಷಂ ಮೇಘಂ ವಾ ದುದುಹೇ । ದೋಗ್ಧಿ ॥ ಅಕ್ತಃ । ಅಂಜೂ ವ್ಯಕ್ತಿಮ್ರಕ್ಷಣಗತಿಷು । ಕರ್ಮಣಿ ನಿಷ್ಠಾ । ದುದುಹೇ । ದ್ವಿಕರ್ಮಕೋಽಯಂ ಧಾತುಃ । ಊಧಃ । ಅಕಥಿತಂ ಚೇತಿ ಕರ್ಮಸಂಜ್ಞಾ ॥

### ಪ್ರತಿಪದಾರ್ಥ

ವೃಷಭಃ—ಇಷ್ಟಾರ್ಥಪ್ರದನೂ । ಪುಮಾನ್—ಶ್ರೇಷ್ಠನೂ ಆದ । ಅಗ್ನಿಃ—ಅಗ್ನಿಯು । ಋತೇನ—ಸತ್ಯಭೂತವಾದುದೂ । ಪೃಷ್ಠ್ಯೇನ—ಪೋಷಕವಾದುದೂ ಆದ । ಪಯಸಾ—ಹಾಲಿನಿಂದ । ಅಕ್ತಃ—ಸಿಕ್ತನಾಗುತ್ತಾನೆ । ವಯೋಧಾಃ—ಅನ್ನದಾತನಾದ ಅಗ್ನಿಯು । ಅಸ್ಪಂದಮಾನಃ—ಚಲನವಿಲ್ಲದೇ ಸ್ಥಿರನಾಗಿದ್ದರೂ ಸಹ । ಅಚರತ್—ತನ್ನ ತೇಜಸ್ಸಿನಿಂದ ಸರ್ವತ್ರ ವ್ಯಾಪಿಸುತ್ತಾನೆ । ವೃಷಾ—ಉದಕದ ವರ್ಷಕನಾದ । ಪೃಶ್ನಿಃ—ಸೂರ್ಯನು । ಶುಕ್ರಂ—ಜಲಯುಕ್ತವಾದ । ಊಧಃ—ಅಂತರಿಕ್ಷ (ಮೇಘ) ವನ್ನು । ದುದುಹೇ—ಕರೆಯುತ್ತಾನೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಇಷ್ಟಾರ್ಥಪ್ರದನೂ, ಶ್ರೇಷ್ಠನೂ ಆದ ಅಗ್ನಿಯು ಸತ್ಯಭೂತವಾದುದೂ, ಪೋಷಕವಾದುದೂ ಆದ ಪಯಸ್ಸಿನಿಂದ ಸಿಕ್ತನಾಗುತ್ತಾನೆ. ಅನ್ನದಾತನಾದ ಅಗ್ನಿಯು ಚಲನವಿಲ್ಲದೇ ಸ್ಥಿರನಾಗಿದ್ದರೂ ಸಹ ತನ್ನ ತೇಜಸ್ಸಿನಿಂದ ಸರ್ವತ್ರ ವ್ಯಾಪಿಸುತ್ತಾನೆ. ಉದಕವನ್ನು ಸುರಿಸತಕ್ಕ ಸೂರ್ಯನು ಉದಕದಿಂದ ಕೂಡಿದ ಅಂತರಿಕ್ಷವನ್ನು ಕರೆಯುತ್ತಾನೆ.

English Translation

The male Agni, the showerer (of benefits) has been sprinkled by the genuine sustaining milk : the giver of food proceeds unswerving (from his course), and the sun, the shedder of rain, has milked the white (fluid) of the udder (of the firmament).

———

ಸಂಹಿತಾಪಾಠಃ

ಋತೇನಾದ್ರಿಂ ವ್ಯಸನ್ಭಿದಂತಃ ಸಮಂಗಿರಸೋ ನವಂತ ಗೋಭಿಃ ।

ಶುನಂ ನರಃ ಪರಿ ಷದನ್ನುಷಾಸಮಾವಿಃ ಸ್ವರಭವಜ್ಜಾತೇ ಅಗ್ನೌ ॥ ೧೧ ॥

ಪದಪಾಠಃ

ಋತೇನ । ಅದ್ರಿಂ । ವಿ । ಅಸನ್ । ಭಿದಂತಃ । ಸಮ್ । ಅಂಗಿರಸಃ । ನವಂತ । ಗೋಭಿಃ ।

ಶುನಂ । ನರಃ । ಪರಿ । ಸದನ್ । ಉಷಸಂ । ಆವಿಃ । ಸ್ವಃ । ಅಭವತ್ । ಜಾತೇ । ಅಗ್ನೌ ॥ ೧೧ ॥

ಸಾಯಣಭಾಷ್ಯಂ

ಅಂಗಿರಸೋ ಮೇಧಾತಿಥಿಪ್ರಭೃತಯ ಋತೇನ ಯಜ್ಞೇನ ಹೇತುನಾ ಗವಾಂ ನಿರೋಧಕಮದ್ರಿಂ ಪರ್ವತಂ ಭಿದಂತೋ ವಿದಾರಯಂತಃ ಸಂತೋ ವ್ಯಸನ್ । ವ್ಯಕ್ಷಿಪನ್ । ತತಸ್ತೇ ಗೋಭಿಃ ಸಂ ನವಂತ । ಸಮಗಚ್ಛಂತ । ನರಃ ಕರ್ಮಣಾಂ ನೇತಾರಸ್ತೇ ಶುನಂ ಸುಖೇನೋಷಸಂ ಪರಿ ಸದನ್ । ಪರಿತಃ ಪ್ರಾಪ್ನುವನ್ । ತತಃ ಸ್ವಃ ಸೂರ್ಯೋಽಪ್ಯಾವಿರಭವತ್ । ಸರ್ವಮೇತದಗ್ನೌ ತ್ವಯಿ ಜಾತೇ ಮಂಥನೇನ ನಿಷ್ಪಾದಿತೇ ಸತ್ಯಭೂದಿತಿ ॥ ಅಸನ್ । ಅಸ್ಯತೇರ್ಲುಙಿ ಚ್ಲೇರಸ್ಯತಿವಕ್ತೀತ್ಯಾದಿನಾಙಾದೇಶಃ । ಅನಿತ್ಯಮಾಗಮಶಾಸನಮಿತಿ ಥುಗಭಾವಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

(ಎಲೈ ಅಗ್ನಿಯೇ) ಅಗ್ನೌ—ಅಗ್ನಿರೂಪನಾದ ನೀನು । ಜಾತೇ-ಉತ್ಪನ್ನನಾದೊಡನೆಯೇ । ಅಂಗಿರಸಃ–ಅಂಗಿರಸ್ಸುಗಳು । ಋತೇನ—ಯಜ್ಞದ ಸಹಾಯದಿಂದ । ಅದ್ರಿಂ—ಗೋವುಗಳನ್ನು ಮುಚ್ಚಿಟ್ಟಿದ್ದ ಪರ್ವತವನ್ನು । ಭಿದಂತ—ಸೀಳಿ । ವ್ಯಸನ್—ಬಿಡಿಸಿ ದಾರಿಮಾಡಿದರು । ಗೋಭಿಃ—ಗೋವುಗಳೊಡನೆ । ಸಂ ನವಂತ—ಹಿಂತಿರುಗಿದರು । ನರಃ— ಕರ್ಮಕರ್ತರಾದ ಅವರು । ಶುನಂ—ಸುಖವಾಗಿ । ಉಷಸಂ—ಉಷಸ್ಸನ್ನು । ಪರಿ ಸದನ್—ಸುತ್ತಲೂ ಹೊಂದಿದರು । ಸ್ವಃ—ಸೂರ್ಯನೂ ಸಹ । ಆವಿಃ ಅಭವತ್—ಆವಿರ್ಭೂತನಾದನು.

### ಭಾವಾರ್ಥ

ಎಲೈ ಅಗ್ನಿಯೇ, ಅಗ್ನಿರೂಪನಾದ ನೀನು ಉತ್ಪನ್ನನಾದೊಡನೆಯೇ ಅಂಗಿರಸ್ಸುಗಳು ಯಜ್ಞದ ಸಹಾಯದಿಂದ ಗೋವುಗಳನ್ನು ಮುಚ್ಚಿಟ್ಟಿದ್ದ ಪರ್ವತಗಳನ್ನು ಸೀಳಿ ಬಿಡಿಸಿ ದಾರಿಮಾಡಿಕೊಂಡರು. ಮತ್ತು ತಮ್ಮ ಗೋವುಗಳೊಡನೆ ಹಿಂತಿರುಗಿದರು. ಕರ್ಮಕರ್ತರಾದ ಅವರು ಸುತ್ತಲೂ ಉಷಸ್ಸನ್ನು ಪಡೆದರು. ಸೂರ್ಯನೂ ಸಹ ಆವಿರ್ಭೂತನಾದನು. ಇವೆಲ್ಲ ಅಗ್ನಿಯಾದ ನಿನ್ನ ಮಹಿಮೆಯು.

### English Translation

By the sacrifice, the Angirasas, rending the mountain asunder, have thrown it open, and returned with the cows ; the leaders ( of holy rites ) have arrived happily at the dawn, and the sun was manifest as Agni was engendered.

---

### ಸಂಹಿತಾಪಾಠಃ

ಋತೇನ ದೇವೀರಮೃತಾ ಅಮೃಕ್ತಾ ಅರ್ಣೋಭಿರಾಪೋ ಮಧುಮದ್ಭಿರಗ್ನೇ ।
ವಾಜೀ ನ ಸರ್ಗೇಷು ಪ್ರಸ್ತುಭಾನಃ ಪ್ರ ಸದಮಿತ್ಸ್ರವಿತವೇ ದಧನ್ಯುಃ ॥

### ಪದಪಾಠಃ

ಋತೇನ । ದೇವೀಃ । ಅಮೃತಾಃ । ಅಮೃಕ್ತಾಃ । ಅರ್ಣಃऽಭಿಃ । ಆಪಃ । ಮಧುಮತ್ऽಭಿಃ । ಅಗ್ನೇ ॥
ವಾಜೀ । ನ । ಸರ್ಗೇಷು । ಪ್ರऽಸ್ತುಭಾನಃ । ಪ್ರ । ಸದಂ । ಇತ್ । ಸ್ರವಿತವೇ । ದಧನ್ಯುಃ ॥ ೧೨ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಗ್ನೇ ಅಮೃತಾ ಅಮರಣಹೇತವ ಅನ್ಯಕ್ತಾ ರಕ್ಷಃಪ್ರಭೃತಿಭಿರಬಾಧಿತಾ ಮಧುಮದ್ಭಿ-ರ್ಮಾಧುರ್ಯೋಪೇತೈರರ್ಣೋಭಿರುದಕೈರ್ಯುಕ್ತಾ ದೇವೀರ್ದೇವ್ಯೋ ನದ್ಯ ಋತೇನ ಸತ್ಯೇನ ಯಜ್ಞೇನ ವಾ ಹೇತುನಾಪ ಆಪ್ತವ್ಯಾಃ ಸತ್ಯಃ ಸದಮಿತ್ಸದೈವ ಪ್ರವಿತವೇ ಪ್ರವಹಣಾಯ ಪ್ರ ದಧನ್ಯುಃ। ಪ್ರಗಚ್ಛಂತಿ। ತತ್ರ ದೃಷ್ಟಾಂತಃ। ವಾಜೀ ನ। ಯಥಾ ಸರ್ಗೇಷು ಪ್ರೇರಣೇಷು ಪ್ರಸ್ತುಭಾನಃ ಪ್ರೋತ್ಸಾ-ಹ್ಯಮಾನೋಽಶ್ವಃ ಪ್ರಗಚ್ಛತಿ ತದ್ವತ್ ॥ ಆಪಃ। ಆಪ್ಲೃ ವ್ಯಾಪ್ತೌ। ಆಪ್ನೋತೇಃ ಕ್ವಿಪ್ ಹ್ರಸ್ವಶ್ಚೇತಿ ಕರ್ಮಣಿ ಕ್ವಿಪ್। ಅಪ್ತೃನ್ನಿತ್ಯಾದಿನಾ ಜಸಿ ದೀರ್ಘಃ। ಪ್ರಸ್ತುಭಾನಃ। ಸ್ತೋಭತಿರರ್ಚತಿಕರ್ಮಾ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ। ಅಮೃತಾಃ—ಮರಣವಿಲ್ಲದವೂ। ಅನ್ಯಕ್ತಾಃ—ಅಹಿಂಸಿತವಾದವೂ। ಮಧುಮದ್ಭಿಃ—ಮಾಧುರ್ಯದಿಂದ ಕೂಡಿದ। ಊರ್ಣೋಭಿಃ—ಉದಕಗಳಿಂದ ಪೂರ್ಣವಾದವೂ। ದೇವೀಃ—ದೇವತಾತ್ಮವೂ ಆದ ನದಿಗಳು। ಋತೇನ—ಯಜ್ಞದ ಸಹಾಯದಿಂದ। ಆಪಃ—ಶಕ್ತಿಯನ್ನು ಪಡೆದು। ಸದಮಿತ್—ಯಾವಾಗಲೂ। ಪ್ರವಿತವೇ—ಪ್ರವಹಿಸಲು। ಸರ್ಗೇಷು—ಪ್ರಚೋದನವಾದಾಗ। ಪ್ರಸ್ತುಭಾನಃ-ಪ್ರೋತ್ಸಾಹವನ್ನು ಪಡೆದು। ವಾಜೀ ನ—ಅಶ್ವವು ವೇಗವಾಗಿ ಚಲಿಸುವಂತೆ। ಪ್ರ ದಧನ್ಯುಃ—ಚಲಿಸುತ್ತವೆ.

ಭಾವಾರ್ಥ

ಎಲೈ ಅಗ್ನಿಯೇ, ಮರಣವಿಲ್ಲದವೂ, ಅಹಿಂಸಿತವಾದವೂ, ಮಾಧುರ್ಯದಿಂದ ಕೂಡಿದ ಉದಕಗಳಿಂದ ಪೂರ್ಣವಾದವೂ, ದೇವತಾತ್ಮವೂ ಆದ ನದಿಗಳು ಯಜ್ಞದ ಸಹಾಯದಿಂದ ಶಕ್ತಿಯನ್ನು ಪಡೆದು ಯಾವಾಗಲೂ ಪ್ರವಹಿಸಲು ಪ್ರೋತ್ಸಾಹಿತವಾದ ಅಶ್ವದಂತೆ ವೇಗವಾಗಿ ಚಲಿಸುತ್ತವೆ.

English Translation

By sacrifice, Agni, the divine rivers, immortal, unobstructed, continue perpetually to flow with sweet waters, like a horse that is being urged in his speed.

———

ಸಂಹಿತಾಪಾಠಃ

ಮಾ ಕಸ್ಯ ಯಕ್ಷಂ ಸದಮಿದ್ಧುರೋ ಗಾ ಮಾ ವೇಶಸ್ಯ ಪ್ರಮಿನತೋ ಮಾಪೇಃ।

ಮಾ ಭ್ರಾತುರಗ್ನೇ ಅನೃಜೋರ್ಋಣಂ ವೇರ್ಮಾ ಸಖ್ಯುರ್ದಕ್ಷಂ ರಿಪೋರ್ಭುಜೇಮ ॥ ೧೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಮಾ । ಕಸ್ಯ । ಯಕ್ಷಂ । ಸದಂ । ಇತ್ । ಹುರಃ । ಗಾಃ । ಮಾ । ವೇಶಸ್ಯ । ಪ್ರಽಮಿನತಃ । ಮಾ । ಆಪೇಃ ।

ಮಾ । ಭ್ರಾತುಃ । ಅಗ್ನೇ । ಅನೃಜೋಃ । ಋಣಂ । ವೇಃ । ಮಾ । ಸಖ್ಯುಃ । ದಕ್ಷಂ । ರಿಪೋಃ । ಭುಜೇಮ ॥

ಸಾಯಣಭಾಷ್ಯಂ

ಹೇ ಅಗ್ನೇ ಹುರೋಽಸ್ಮಾಕಂ ಹಿಂಸಕಸ್ಯ ಕಸ್ಯ ಕಸ್ಯಚಿದಪಿ ಜಂತೋರ್ಯಕ್ಷಂ ಯಜ್ಞಂ ಸದ-ಮಿತ್ಸದೈವ ಮಾ ಗಾಃ । ಕದಾಚಿದಪಿ ಮಾ ಗಚ್ಛ । ಪ್ರಮಿನತೋ ಹಿಂಸಕಸ್ಯ ವೇಶಸ್ಯ ಪ್ರಾತಿವೇಶ್ಯಸ್ಯ ಯಜ್ಞಂ ಮಾ ಗಾಃ । ತಥಾಪೇರ್ಮದ್ವ್ಯತಿರಿಕ್ತಸ್ಯ ಬಂಧೋರ್ಯಜ್ಞಂ ಮಾ ಗಚ್ಛ । ತಥಾನೃಜೋಃ ಕುಟಿಲಚಿತ್ತಸ್ಯ ಭ್ರಾತುರೃಣವದ್ದೇಯಂ ಹವಿರ್ಮಾ ವೇಃ । ಮಾ ಕಾಮಯೇಥಾಃ । ತಥಾ ವಯಮಪಿ ಸಖ್ಯುರ್ಮಿತ್ರಸ್ಯ ರಿಪೋಃ ಶತ್ರೋರ್ದಕ್ಷಂ ಭೋಗಸಮರ್ಥಂ ಧನಂ ಮಾ ಭುಜೇಮ । ಮಾ ಭುಂಜೀ-ಮಹಿ । ಕಿಂತು ತ್ವಯಾ ದತ್ತಂ ಧನಂ ಭುಂಜೀಮಹಿ ॥ ಹುರಃ । ಹೃ ಪ್ರಸಹ್ಯಕರಣೇ । ಕ್ವಿಪ್ । ಬಹುಲಂ ಛಂದಸೀತ್ಯುತ್ವಂ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಭುಜೇಮ । ಭುಜ ಪಾಲನಾಭ್ಯವಹಾರ-ಯೋಃ । ಆಶೀರ್ಲಿಙಿ ವ್ಯತ್ಯಯೇನ ಪರಸ್ಮೈಪದಂ । ಲಿಙ್ಯಾಶಿಷ್ಯಙ್ ತ್ಯಙ್ ಪ್ರತ್ಯಯಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಹುರಃ—ನಮಗೆ ಹಿಂಸಕನಾದ । ಕಸ್ಯ-ಯಾವ ಯಜಮಾನನ ! ಯಕ್ಷಂ-ಯಜ್ಞಕ್ಕೂ । ಸದಮಿತ್—ಯಾವಾಗಲೂ । ಮಾ ಗಾಃ—ಹೋಗಬೇಡ । ಪ್ರಮಿನತಃ—ಹಿಂಸಕನಾದ । ವೇಶಸ್ಯ—ಪಕ್ಕದ ಮನೆಯ ಯಜಮಾನನ । ಮಾ—ಯಜ್ಞಕ್ಕೂ ಹೋಗಬೇಡ। ಆಪೇಃ—ನನಗೆ ಬಂಧುವಾದರೂ ವಿರೋಧಿಯಾಗಿದ್ದರೆ । ಮಾ—ಅವನಲ್ಲಿಗೂ ಹೋಗಬೇಡ । ಅನೃಜೋಃ—ವಂಚಕನಾದ । ಭ್ರಾತುಃ—ನನ್ನ ಭ್ರಾತೃವಾದರೂ ಅವನ । ಋಣಂ—ಹವಿಸ್ಸನ್ನು । ಮಾ ವೇಃ—ಇಚ್ಛಿಸಬೇಡ । ಸಖ್ಯುಃ—ನನ್ನ ಮಿತ್ರನಿಗೆ । ರಿಪೋಃ—ಶತ್ರುವಾದವನ । ದಕ್ಷಂ—ಭೋಗಸಂಪತ್ತನ್ನು । ಮಾ ಭುಜೇಮ—ನಾವು ಅನುಭವಿಸದಂತಿರಲಿ.

ಭಾವಾರ್ಥ

ಎಲೈ ಅಗ್ನಿಯೇ, ನಮಗೆ ಹಿಂಸಕನಾದರೆ ಆ ಯಜಮಾನನ ಯಜ್ಞಕ್ಕೆ ಯಾವಾಗಲೂ ಹೋಗಬೇಡ. ನಮ್ಮ ಪಕ್ಕದ ಮನೆಯವನಾದರೂ ಸಹ ಅವನು ಹಿಂಸಕನೂ, ವಂಚಕನೂ ಆಗಿದ್ದರೆ ಅಲ್ಲಿಗೂ ಹೋಗಬೇಡ. ಅವನು ನಮ್ಮ ಭ್ರಾತೃವಾದರೂ ಸಹ ಅವನ ಹವಿಸ್ಸಿಗೆ ಆಸೆಪಡಬೇಡ. ನನ್ನ ಮಿತ್ರನಿಗೆ ಶತ್ರುವಾದವನ ಭೋಗ ಸಂಪತ್ತು ನಮಗೆ ಬೇಡ.

## English Translation

Go not ever, Agni, to the sacrifice of any one who injures us; nor to that of a malevolent neighbour; nor to that of an (unnatural) relation; accept

CC-0. Jangamwadi Math Collection. Digitized by eGangotri

not the due (oblation) from an insincere brother ; let us not derive enjoyment from the enemy of a friend.

———

ಸಂಹಿತಾಪಾಠಃ

ರಕ್ಷಾ ಣೋ ಅಗ್ನೇ ತವ ರಕ್ಷಣೇಭೀ ರಾರಕ್ಷಾಣಃ ಸುಮುಖ ಪ್ರೀಣಾನಃ ।
ಪ್ರತಿ ಷ್ಫುರ ವಿ ರುಜ ವೀಡ್ವಂಹೋ ಜಹಿ ರಕ್ಷೋ ಮಹಿ ಚಿದ್ವಾವೃಧಾನಂ ॥

ಪದಪಾಠಃ

ರಕ್ಷ । ನಃ । ಅಗ್ನೇ । ತವ । ರಕ್ಷಣೇಭಿಃ । ರರಕ್ಷಾಣಃ । ಸುಽಮುಖ । ಪ್ರೀಣಾನಃ ।
ಪ್ರತಿ । ಸ್ಫುರ । ವಿ । ರುಜ । ವೀಳು । ಅಂಹಃ । ಜಹಿ । ರಕ್ಷಃ । ಮಹಿ । ಚಿತ್ । ವವೃಧಾನಂ ॥ ೧೪ ॥

ಸಾಯಣಭಾಷ್ಯಂ

ಸುಮುಖ ಸುಯಜ್ಞ ಸುಧನೇತಿ ವಾ ಹೇ ಅಗ್ನೇ ರರಕ್ಷಾಣೋ ಭೃಶಮಸ್ಮಾಕಂ ರಕ್ಷಿತಾ ಪ್ರೀಣಾನೋ ಹವಿರ್ಭಿಃ ಪ್ರೀತಸ್ತ್ವಂ ತವ ರಕ್ಷಣೇಭಿಸ್ತ್ವದೀಯೈರವನೈರ್ನೋಽಸ್ಮಾನ್ರಕ್ಷ । ಪಾಲಯ । ಪ್ರತಿ ಸ್ಫುರ । ಅಸ್ಮಾನ್ಪ್ರತಿದೀಪ್ಯಸ್ವ । ವೀಳು ದೃಢಮಂಹಃ ಪಾಪಂ ವಿ ರುಜ । ವಿಶೇಷೇಣ ನಾಶಯ । ಕಿಂಚ ಮಹಿ ಚಿನ್ಮಹದಪಿ ವಾವೃಧಾನಂ ವರ್ಧಮಾನಂ ವೃದ್ಧಂ ವಾ ಬಾಧಕಂ ರಕ್ಷೋ ಜಹಿ ॥ ಣಃ । ನಶ್ಚ ಧಾತುಸ್ಥೋರುಷುಭ್ಯ ಇತಿ ಸಂಹಿತಾಯಾಂ ಣತ್ವಂ । ರರಕ್ಷಾಣಃ । ರಕ್ಷೇರ್ಯಙ್ಲುಕಿ ಚಾನಶಿ ರೂಪಂ ! ಜಹಿ । ಹನ ಹಿಂಸಾಗತ್ಯೋಃ । ಲೋಟಿ ಹಂತೇರ್ಜ ಇತಿ ಜಾದೇಶಃ । ಆಭಾಚ್ಛಾಸ್ತ್ರೀಯಸ್ಯಾಸಿದ್ಧತ್ವಾದತೋ ಹೇರಿತಿ ಲುಕ್ ನ ಭವತಿ ॥

ಪ್ರತಿಪದಾರ್ಥ

ಸುಮುಖ—ಉತ್ತಮವಾದ ಯಜ್ಞವುಳ್ಳ । ಅಗ್ನೇ—ಎಲೈ ಅಗ್ನಿಯೇ । ರರಕ್ಷಾಣಃ—ನಮ್ಮನ್ನು ರಕ್ಷಿಸುವವನಾಗಿಯೂ । ಪ್ರೀಣಾನಃ—ಹವಿಸ್ಸುಗಳಿಂದ ಪ್ರೀತನಾಗಿಯೂ । ತವ—ನಿನ್ನ । ರಕ್ಷಣೇಭಿಃ—ರಕ್ಷಣೆಗಳಿಂದ । ನಃ—ನಮ್ಮನ್ನು । ರಕ್ಷ—ರಕ್ಷಿಸು । ಪ್ರತಿ ಸ್ಫುರ—ನಮ್ಮ ಪರವಾಗಿ ಪ್ರಕಾಶಿಸು । ವೀಳು—ಸ್ಥಿರವಾದ ಬೇರುಳ್ಳ । ಅಂಹಃ—ಪಾಪವನ್ನು । ವಿ ರುಜ—ನಾಶಮಾಡು । ವಾವೃಧಾನಃ—ಅಧಿಕವಾಗಿ ಹಿಂಸಿಸುವ । ರಕ್ಷಃ—ಶತ್ರುವನ್ನು । ಮಹಿ ಜತ್—ಪ್ರಬಲನಾದಾಗ್ಯೂ । ಜಹಿ—ನಾಶಮಾಡು ।

CC-0. Jangamwadi Math Collection. Digitized by eGangotri

ಭಾವಾರ್ಥ

ಉತ್ತಮವಾದ ಯಜ್ಞವುಳ್ಳ ಎಲೈ ಅಗ್ನಿಯೇ, ನಮ್ಮನ್ನು ರಕ್ಷಿಸುವವನಾಗಿಯೂ, ಹವಿಸ್ಸುಗಳಿಂದ ಪ್ರೀತನಾಗಿಯೂ ನಿನ್ನ ರಕ್ಷಣೆಗಳಿಂದ ನಮ್ಮನ್ನು ಸಲಹು. ನಮ್ಮ ಪರವಾಗಿ ಪ್ರಕಾಶಿಸು. ಸ್ಥಿರವಾಗಿ ಊರಿದ ನಮ್ಮ ಪಾಪವನ್ನು ನಾಶಮಾಡು. ನಮಗೆ ಹಿಂಸಕನಾದ ಶತ್ರುವು ಪ್ರಬಲನಾದರೂ ಸಹ ಅವನನ್ನು ಧ್ವಂಸಮಾಡು.

English Translation

Agni, worthily worshipped, conservator, conciliated (by our offerings), protect us with your protections : enlighten us ; entirely extirpate our sin ; overcome the great and exulting Rakshasas.

---

ಸಂಹಿತಾಪಾಠಃ

ಏಭಿರ್ಭವ ಸುಮನಾ ಅಗ್ನೇ ಅರ್ಕೈರಿಮಾನ್ತ್ಸ್ಪೃಶ ಮನ್ಮಭಿಃ ಶೂರ ವಾಜಾನ್ ।

ಉತ ಬ್ರಹ್ಮಾಣ್ಯಂಗಿರೋ ಜುಷಸ್ವ ಸಂ ತೇ ಶಸ್ತಿರ್ದೇವವಾತಾ ಜರೇತ ॥೧೫॥

ಪದಪಾಠಃ

ಏಭಿಃ । ಭವ । ಸುಮನಾಃ । ಅಗ್ನೇ । ಅರ್ಕೈಃ । ಇಮಾನ್ । ಸ್ಪೃಶ । ಮನ್ಮಭಿಃ । ಶೂರ । ವಾಜಾನ್ ।

ಉತ । ಬ್ರಹ್ಮಾಣಿ । ಅಂಗಿರಃ । ಜುಷಸ್ವ । ಸಮ್ । ತೇ । ಶಸ್ತಿಃ । ದೇವವಾತಾ । ಜರೇತ ॥ ೧೫ ॥

ಸಾಯಣಭಾಷ್ಯಂ

ಹೇ ಅಗ್ನೇ ಏಭಿರ್ಮದೀಯೈರರ್ಕೈರರ್ಚನೀಯೈಃ ಶಸ್ತ್ರೈಃ ಸುಮನಾಃ ಶೋಭನಮನಸ್ಕೋ ಭವ । ಹೇ ಶೂರ ಇಮಾನಸ್ಮದೀಯಾನ್ಹವಿರ್ಲಕ್ಷಣಾನ್ವಾಜಾನ್ಮನ್ಮಭಿಃ ಸ್ತೋತ್ರೈಃ ಸಹ ಸ್ಪೃಶ । ಪ್ರತಿಗೃಹಾಣ । ಉತಾಪಿ ಚ ಅಂಗಿರಃ । ಅಂಗತಿ ಹವೀಂಷಿ ಪ್ರಾಪ್ನೋತೀತ್ಯಂಗಿರಾ ಅಗ್ನಿಃ । ಯದ್ವಾ । ಯೋಽಂಗಾರಾ ಆಸಂಸ್ತೇಽಂಗಿರಸೋಽಭವನ್ । ಐ. ಬ್ರಾ. ೩-೩೪ । ಇತಿ ಬ್ರಾಹ್ಮಣಂ । ತೇಷಾಮಂಗಿರಸಾಂ ಕಾರಣತ್ವಾದಗ್ನೇರಂಗಿರಸ್ತ್ವಂ । ತತ್ಕಾರಣತ್ವೇ ಚ ಮಂತ್ರಃ । ಯೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿ ಜಜ್ಞಿರೇ । ಋಗ್ವೇ. ೧೦-೬೨-೫ । ಇತಿ । ತಾದೃಶ ಹೇ ಅಗ್ನೇ ಬ್ರಹ್ಮಾಣಿ ಮಂತ್ರಾನ್ ಜುಷಸ್ವ । ಸೇವಸ್ವ । ದೇವವಾತಾ । ದೇವಾರ್ಥಂ ಗತಾ ದೇವಾನ್ ಸ್ತೋತುಂ ಪ್ರಾಪ್ತೇತ್ಯರ್ಥಃ । ತಾದೃಶೀ ಶಸ್ತಿಃ

CC-0. Jangamwadi Math Collection. Digitized by eGangotri

ಶಂಸನಂ ತೇ ತ್ವಾಂ ಸಂ ಜರೇತ । ಸಂವರ್ಧಯತು ॥ ಸ್ಪೃಶ । ಸ್ಪೃಶ ಸಂಸ್ಪರ್ಶನೇ । ತುದಾದಿಃ । ದೇವವಾತಾ । ವಾ ಗತಿಗಂಧನಯೋಃ । ಗತ್ಯರ್ಥಾಕರ್ಮಕೇತಿ ಕರ್ತರಿ ಕ್ತಃ । ದೇವಃ । ಪಚಾದ್ಯ-ಜಂತಃ । ಕ್ತೇ ಚೇತಿ ಚತುರ್ಥ್ಯಂತಸ್ಯ ಪದಸ್ಯ ಪ್ರಕೃತಿಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಏಭಿಃ ಅರ್ಕೈಃ—ಪೂಜ್ಯವಾದ ಈ ಶಸ್ತ್ರಮಂತ್ರಗಳಿಂದ । ಸುಮನಾಃ—ಮಂಗಳಾತ್ಮಕವಾದ ಮನಸ್ಸುಳ್ಳವನಾಗಿ। ಭವ—ಆಗು। ಶೂರ—ಎಲೈ ಪರಾಕ್ರಮಿಯೇ। ಇಮಾನ್ ವಾಜಾನ್—ಹವಿಸ್ಸಿನರೂಪದ ಈ ಅನ್ನಗಳನ್ನು। ಮನ್ಮಭಿಃ—ನಮ್ಮ ಸ್ತುತಿಗಳೊಡನೆ । ಸ್ಪೃಶ—ಪ್ರತಿಗ್ರಹಿಸು। ಉತ—ಹುತ್ತು। ಅಂಗಿರಃ—ಎಲೈ ಅಗ್ನಿಯೇ । ಬ್ರಹ್ಮಾಣಿ—ಮಂತ್ರಗಳನ್ನು । ಜುಷಸ್ವ—ಸೇವಿಸು । ದೇವತಾತಾ—ದೇವತೆಗಳನ್ನುದ್ದೇಶಿಸಿದ । ಶಸ್ತಿಃ—ಪ್ರಶಂಸನವು । ತೇ—ನಿನನ್ನು । ಸಂ ಜರೇತ—ಬೆಳೆಸಲಿ.

ಭಾವಾರ್ಥ

ಎಲೈ ಅಗ್ನಿಯೇ, ಪೂಜ್ಯವಾದ ಈ ಶಸ್ತ್ರಮಂತ್ರಗಳಿಂದ ಮಂಗಳಾತ್ಮಕವಾದ ಮನಸ್ಸುಳ್ಳವನಾಗಿ ಆಗು. ಎಲೈ ಪರಾಕ್ರಮಿಯೇ, ಹವಿಸ್ಸಿನ ರೂಪದ ಈ ಅನ್ನಗಳನ್ನು ನಮ್ಮ ಸ್ತುತಿಗಳೊಡನೆ ಪರಿಗ್ರಹಿಸು. ಮತ್ತು ಎಲೈ ಅಂಗಿರಾರೂಪನಾದ ಅಗ್ನಿಯೇ, ನಮ್ಮ ಈ ಮಂತ್ರಗಳನ್ನು ಸೇವಿಸು. ದೇವತೆಗಳನ್ನುದ್ದೇಶಿಸಿದ ಈ ಪ್ರಶಂಸನವು ನಿನ್ನನ್ನು ಪ್ರವೃದ್ಧನಾಗುವಂತೆ ಮಾಡಲಿ.

English Translation

Be propitiated, Agni, by these hymns ; accept, hero, these (sacrificial) viands (presented) with praises ; be pleased, Angiras, by our prayers ; may the adoration addressed to the gods exalt you.

ವಿಶೇಷವಿಷಯಗಳು

ಈ ಸೂಕ್ತದಲ್ಲಿಯೂ ಋಗ್ವೇದದ ಇನ್ನೂ ಅನೇಕ ಇತರ ಋಕ್ಕುಗಳಲ್ಲಿಯೂ ಅಂಗಿರಃ ಎಂಬ ಶಬ್ದವನ್ನು ಅಗ್ನಿಯನ್ನು ಸಂಬೋಧಿಸುವುದಕ್ಕಾಗಿ ಉಪಯೋಗಿಸಿದೆ. ಈ ವಿಚಾರದಲ್ಲಿ ವಿವರಣೆಯು ಅವಶ್ಯಕವಾಗಿರುವುದು. ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್ (ಐ. ಬ್ರಾ. ೩-೩೪) ಅಗ್ನಿಸಂಬಂಧವಾದ ಅಂಗಾರಗಳು (ಕೆಂಡಗಳು) ಅಂಗಿರಸರೆಂದು ಹೆಸರನ್ನು ಪಡೆದವು—ಎಂದು ಐತರೇಯಬ್ರಾಹ್ಮಣದಲ್ಲಿ ಪ್ರಜಾಪತಿದುಹಿತೃಧ್ಯಾನೋಪಾಖ್ಯಾನದಲ್ಲಿ ಹೇಳಿದೆ. ಪೂರ್ವದಲ್ಲಿ ಪ್ರಜಾಪತಿಯು (ಬ್ರಹ್ಮನು) ತನ್ನ ಮಗಳನ್ನು (ಉಷಸ್ಸು ಅಥವಾ ದ್ಯೋರೂಪ) ಕೆಟ್ಟಭಾವನೆಯಿಂದ (ಕಾಮಲಾಲಸೆಯಿಂದ) ಮನಸ್ಸಿನಲ್ಲಿ ಧ್ಯಾನಿಸಿದನು. ಅದು ದೇವತೆಗಳಿಗೆ ಗೊತ್ತಾಗಿ ಈ ಕೆಟ್ಟ ಕೆಲಸವನ್ನು ಮಾಡದಂತೆ ತಡೆಯಬೇಕೆಂದು ಯೋಚಿಸಿದರು. ಆದರೆ ಪ್ರಜಾಪತಿಯನ್ನು ಶಿಕ್ಷಿಸಿ ಈ ಕೆಲಸಮಾಡದಂತೆ ನಿರ್ಬಂಧಪಡಿಸಲು ದೇವತೆಗಳಿಗೆ ಶಕ್ತಿಯಿರಲಿಲ್ಲ. ಆದುದರಿಂದ ದೇವತೆಗಳೆಲ್ಲರೂ ಸೇರಿ ಘೋರವಾದ ತಮ್ಮ ತಮ್ಮ ಸ್ವರೂಪವನ್ನು ಒಟ್ಟಿಗೆ ಒಂದುಗೂಡಿಸಿ ರುದ್ರನೆಂಬ ದೇವನನ್ನು ಉತ್ಪನ್ನಮಾಡಿ, ಈ ಪ್ರಜಾಪತಿಯನ್ನು ಶಿಕ್ಷಿಸೆಂದು ಹೇಳಿದರು. ಇದನ್ನು ತಿಳಿದು ಪ್ರಜಾಪತಿಯು ಭೀತನಾಗಿ ಮೃಗರೂಪವನ್ನು ಧರಿಸಿ ಅಂತರಿಕ್ಷಕ್ಕೆ ನೆಗೆದನು.

CC-0. Jangamwadi Math Collection. Digitized by eGangotri

ಮೃಗನಕ್ಷತ್ರವೆಂಬ ಹೆಸರಿನಿಂದ ಇರುವ ಪ್ರಜಾಪತಿಯನ್ನು ಈಗಲೂ ನೋಡಬಹುದು. ಆಗ ರುದ್ರನು ಆರ್ದ್ರಾನಕ್ಷತ್ರ ರೂಪದಿಂದ ಕಾಣಿಸಿಕೊಂಡು ಪ್ರಜಾಪತಿಯಮೇಲೆ ಬಾಣಪ್ರಯೋಗಮಾಡಿದನು. ಆಗ ಪ್ರಜಾಪತಿಗೆ ವೀರ್ಯಸ್ಖಲನ ವಾಯಿತು. ಆ ವೀರ್ಯವನ್ನು ಮರುತ್ತುಗಳು ನಾನಾ ದೆಸೆಗೆ ಹರಡಿ ಭಸ್ಮಮಾಡಿದವು. ಅದರಿಂದ (ಆ ವೀರ್ಯದಿಂದ) ಮೊದಲು ಆದಿತ್ಯನೂ ಬಳಿಕ ಭೃಗುವಾರುಣಿಯೂ ಹುಟ್ಟಿದರು. ಉಳಿದ ಅಂಗಾರಗಳಿಂದ (ಕೆಂಡಗಳಿಂದ) ಅಂಗಿರಸ ರೆಂಬುವರ ಉತ್ಪತ್ತಿಯಾಯಿತು ಎಂದು ಹೇಳಿದೆ.

ಪುರಾಣಾದಿಗಳಲ್ಲಿ ಅಂಗಿರಾಃ ಎಂಬ ಋಷಿಯು ಬ್ರಹ್ಮನ ಮಾನಸಪುತ್ರರಲ್ಲಿ ಒಬ್ಬನೆಂದು ಹೇಳಿದೆ. ವೇದ ಗಳಲ್ಲಿ ಈ ಅಂಗಿರನೆಂಬುವನು ಬಹುಮುಖ್ಯನಾದ ಒಬ್ಬ ಋಷಿಯು ಮತ್ತು ಅನೇಕ ಪ್ರಸಿದ್ಧರಾದ ಋಷಿಗಳಿಗೆ ಮೂಲ ಪುರುಷನು. ಮಹಾಭಾರತದ ವನಪರ್ವದಲ್ಲಿ ಮಾರ್ಕಂಡೇಯಯುಧಿಷ್ಠಿರಸಂವಾದದಲ್ಲಿ ಈ ವಿಷಯವಿದೆ. ಕಾರಣಾಂತರ ದಿಂದ ಅಗ್ನಿಯು ತನ್ನ ಕರ್ತವ್ಯವನ್ನು ಬಿಟ್ಟು ಪ್ರಚ್ಛನ್ನವೇಷದಿಂದ ವನಕ್ಕೆ ಹೊರಟು ಹೋದನು. ಆಗ ಅಂಗಿರಾ ಎಂಬ ಋಷಿಯು ಅಗ್ನಿಗೆ ಬದಲಾಗಿ ಯಜ್ಞದಲ್ಲಿ ದೇವತೆಗಳಿಗೆ ಹವಿರ್ಭಾಗಗಳನ್ನು ಒಯ್ಯುತ್ತ ಅಗ್ನಿಯ ಕೆಲಸವನ್ನು ಮಾಡುತ್ತಿದ್ದನು. ಮತ್ತು ಅಗ್ನಿಯನ್ನು ಹಿಂದಕ್ಕೆ ಬಂದು ತನ್ನ ಕರ್ತವ್ಯವನ್ನು ನೆರವೇರಿಸಬೇಕೆಂದು ಪ್ರಾರ್ಥಿಸಿದನು. ಅಗ್ನಿಯ ಕರ್ತವ್ಯಗಳನ್ನು ನೆರವೇರಿಸುತ್ತಿದ್ದುದರಿಂದ ಈ ಅಂಗಿರಾಋಷಿಗೆ ಅಗ್ನಿಯ ಪುತ್ರನೆಂದೂ ಈ ಋಷಿಯ ವಂಶೀಕರಿಗೆ ಅಂಗಿರಸ್ಸುಗಳೆಂದೂ ಹೆಸರು ಪ್ರಸಿದ್ಧವಾಯಿತು.

ಇಂತಹ ಇನ್ನೂ ಕೆಲವು ಉಪಾಖ್ಯಾನಗಳು ಪುರಾಣಗಳಲ್ಲಿ ಇರುವುವು. ಇವಲ್ಲದೆ ಋಗ್ವೇದ ಸಂಹಿತೆ ಯಲ್ಲಿಯೇ—

ತೇ ಅಂಗಿರಸಃ ಸೂನವಸ್ತೇ ಅಗ್ನೇಃ ಪರಿಜಜ್ಞಿರೇ ।

(ಋ. ಸಂ. ೧೦-೬೨-೫)

ಎಂದರೆ ಅಂಗಿರಸ್ಸೆಂಬ ಋಷಿಗಳು ಅಗ್ನಿಯ ಪುತ್ರರು ಎಂದು ಸ್ಪಷ್ಟವಾಗಿ ಹೇಳಿದೆ. ಈ ಋಕ್ಕನ್ನು ಭಾಷ್ಯಕಾರರು ಏಕೆ ಉದಹರಿಸಲಿಲ್ಲವೋ ತಿಳಿಯುವುದಿಲ್ಲ.

ಈ ಅಂಗಿರಾ ಎಂಬ ಋಷಿಯು ಬಹು ಪುರಾತನಕಾಲದವನೆಂದೂ ಋಗ್ವೇದದ ಅನೇಕ ಋಷಿಗಳು ಈತನನ್ನು ತಮ್ಮ ವಂಶದ ಮೂಲಪುರುಷನೆಂದು ಅಲ್ಲಲ್ಲಿ ಹೇಳಿಕೊಂಡಿರುವುದೂ ಋಗ್ವೇದದ ಕೆಲವು ಋಕ್ಕುಗಳಿಂದ ವ್ಯಕ್ತ ವಾಗುವುದು.

ಮನುಷ್ವದಗ್ನೇ ಅಂಗಿರಸ್ವದಂಗಿರೋ ಯಯಾತಿವತ್ಸದನೇ ಪೂರ್ವವಚ್ಛುಚೇ ॥

(ಋ. ಸಂ. ೧-೩೧-೧೭)

ಅಂಗಿರಸ್ವನ್ಮಹಿವ್ರತ ಪ್ರಸ್ಕಣ್ವಸ್ಯ ಶ್ರುಧೀ ಹವಂ ॥

(ಋ. ಸಂ. ೧-೪೫-೩)

ದಧ್ಯಙ್ ಹ ಮೇ ಜನುಷಂ ಪೂರ್ವೋ ಅಂಗಿರಾಃ ಪ್ರಿಯಮೇಧಃ ಕಣ್ವೋ ಅತ್ರಿರ್ಮನುರ್ವಿ ದುಸ್ತೇ ಮೇ ಪೂರ್ವೇ ಮನುರ್ವಿದುಃ ॥

(ಋ. ಸಂ. ೧-೧೩೯-೯)



CC-0. Jangamwadi Math Collection. Digitized by eGangotri

ಈ ಋಕ್ಕುಗಳು ಅಂಗಿರಾಋಷಿಯು ಅನೇಕ ಋಷಿಗಳಿಗೆ ಪೂರ್ವಿಕನೆಂದು ತಿಳಿಸುವವು. ಈ ಅಂಗಿರಾಋಷಿಯ ವಂಶದವರಲ್ಲಿ ಅಥರ್ವನ್ ಎಂಬುವನು ಮುಖ್ಯನಾದವನು. ಇವನಿಗೆ ಬೃಹಸ್ಪತಿ, ಗೋತಮ, ವೃಷಣ ಎಂಬ ಮೂವರು ಪುತ್ರರು. ವೃಷಣನೆಂಬುವನು ಈ ಅಥರ್ವಣನಿಗೆ ಪಥ್ಯಾ ಎಂಬ ಪತ್ನಿಯಲ್ಲಿ ಹುಟ್ಟಿದ ಪುತ್ರನು. ಇವನ ವಿಚಾರವು ವೇದದಲ್ಲಿ ಅನೇಕಕಡೆ ಸೂಚಿಸಲ್ಪಟ್ಟಿದೆ. ವೃಷಣನ ಮಗನು ಸುಧನ್ವಾನ್ ಅಂಗಿರಸನೆಂಬುವನು ಈ ಸುಧನ್ವನಿಗೆ ಋಭು, ವಿಭ್ವನ್, ವಾಜ ಎಂಬ ಮೂವರು ಪುತ್ರರು. ಈ ಮೂವರೂ ಋಭುಗಳೆಂದೇ ವೇದದಲ್ಲಿ ಹೇಳಲ್ಪಟ್ಟಿರುವರು. ಇವರು ತ್ವಷ್ಟೃಪ್ರಜಾಪತಿಯ ಶಿಷ್ಯರೆಂದು ಹೇಳಿದೆ. ಈ ಅಂಗಿರಾಋಷಿಯ ವಂಶದಲ್ಲಿ ಬೃಹಸ್ಪತಿ ಎಂಬ ಹೆಸರಿನ ಋಷಿಗಳು ಮೂವರಿದ್ದರು. ಹಿಂದೆ ಹೇಳಿದ ಋಭುಗಳೂ ಬೃಹಸ್ಪತಿಯೂ ದೇವತೆಗಳೆಂದು ಭಾವಿಸಲ್ಪಟ್ಟು ಅವರ ಸ್ತೋತ್ರರೂಪವಾದ ಅನೇಕ ಋಕ್ಕುಗಳು ಋಗ್ವೇದದಲ್ಲಿವೆ. ಈ ಮೂವರು ಬೃಹಸ್ಪತಿಗಳಲ್ಲಿ ಮೊದಲನೆಯವನು ಪಣಿ ಎಂಬ ದಸ್ಯುರಾಜನನ್ನು ಕೊಂದು ಅವನು ಅಪಹರಿಸಿದ್ದ ಗೋವುಗಳನ್ನು ಹಿಂದಕ್ಕೆ ತಂದನೆಂದೂ; ಅಂಶುಮತೀ ಎಂಬ ನದಿಯ ದಡದ ಮೇಲೆ ರಾಜ್ಯವಾಳುತ್ತಿದ್ದ ದಾಸನೆಂಬ ಮತ್ತೊಬ್ಬ ದಸ್ಯುಮುಖಂಡನನ್ನು ತನ್ನ ಹತ್ತುಸಾವಿರ ಅನುಚರರೊಡನೆ ಯುದ್ಧಮಾಡಿ ಸೋಲಿಸಿದನೆಂದೂ ಇತಿಹಾಸವಿದೆ. ಮತ್ತೊಬ್ಬ ಬೃಹಸ್ಪತಿಯ ಮಗನಾದ ಭರದ್ವಾಜನೆಂಬ ಋಷಿಯು ಶಂಬರನೆಂಬ ದೈತ್ಯನನ್ನು ಸಂಹರಿಸಿದ ದಿವೋದಾಸನೆಂಬುವನಿಗೆ ಪುರೋಹಿತನಾಗಿದ್ದನು. ಅಂತೂ ಅಂಗಿರಾಋಷಿಯ ವಂಶವು ಬಹು ದೊಡ್ಡದು. ಮತ್ತು ಅನೇಕ ಪ್ರಸಿದ್ಧಪುರುಷರು ಈ ವಂಶದವರಾಗಿದ್ದರು. ಋಗ್ವೇದದಲ್ಲಿ ಅನೇಕಕಡೆ ಎಂದರೆ ಅಗ್ನಿಶಬ್ದವನ್ನು ಉಪಯೋಗಿಸಬೇಕಾದ ಅನೇಕ ಕಡೆಗಳಲ್ಲಿ ಅಂಗಿರ ಎಂಬ ಶಬ್ದದ ಪ್ರಯೋಗವು ಬಹಳವಾಗಿದೆ.

ಐತರೇಯಬ್ರಾಹ್ಮಣದಲ್ಲಿ (ಐ. ಬ್ರಾ. ೧೩-೩೩,೩೪) ವಿವರಿಸಿರುವ ಉಪಾಖ್ಯಾನವನ್ನು ಅಲ್ಲಿರುವಂತೆಯೇ ವಿವರಿಸಲಾಗಿದೆ—

> ಪ್ರಜಾಪ್ರತಿರ್ವೈ ಸ್ವಾಂ ದುಹಿತರಮಭ್ಯಧ್ಯಾಯದ್ದಿವಮಿತ್ಯನ್ಯ ಆಹುರುಷಸಮಿತ್ಯನ್ಯೇ ತಾಮೃಶ್ಯೋ ಭೂತ್ವಾ ರೋಹಿತಂ ಭೂತಾಮಭ್ಯೈತ್ತಂ ದೇವಾ ಅಪಶ್ಯನ್ನಕೃತಂ ವೈ ಪ್ರಜಾಪತಿಃ ಕರೋ-ತೀತಿ ತೇ ತಮೈಚ್ಛನ್ಯ ಏನಮಾರಿಷ್ಯತ್ಯೇತಮನ್ಯೋಽನ್ಯಸ್ಮಿನ್ನಾವಿಂದಂಸ್ತೇಷಾಂ ಯಾ ಏವ ಘೋರತಮಾಸ್ತನ್ವ ಆಸಂಸ್ತಾ ಏಕಧಾ ಸಮಭರಂಸ್ತಾಃ ಸಂಭೃತಾ ಏಷ ದೇವೋಽಭವತ್ತದ-ಸ್ಯೈತದ್ಭೂತವನ್ನಾಮ ಭವತಿ ವೈ ಸ ಯೋಽಸ್ಯೈತದೇವಂ ನಾಮ ವೇದ ॥
>
> (ಐ. ಬ್ರಾ. ೧೩-೩೩)

ಪೂರ್ವದಲ್ಲಿ ಒಂದಾನೊಂದು ಸಮಯದಲ್ಲಿ ಪ್ರಜಾಪತಿಯು ತನ್ನ ಸ್ವಂತ ಪುತ್ರಿಯನ್ನು ನೋಡಿ ಪತ್ನಿಯನ್ನು ಮೋಹಿಸುವಂತೆ ಮೋಹಗೊಂಡನು. ಅವಳ ರೂಪವನ್ನೇ ಮನಸ್ಸಿನಲ್ಲಿ ಚಿಂತಿಸುತ್ತಿದ್ದನು. ಆ ಪ್ರಜಾಪತಿಯ ಪುತ್ರಿಯು ಯಾರೆಂಬ ವಿಷಯದಲ್ಲಿ ಮಹರ್ಷಿಗಳಲ್ಲಿಯೇ ಮತಭೇದವಿದೆ. ಕೆಲವರು ದ್ಯುಲೋಕದೇವತೆಯೆಂದೂ ಮತ್ತೆ ಕೆಲವರು ಉಷೋದೇವತೆಯೆಂದೂ ಹೇಳುವರು. ಅದು ಹೇಗಾದರೂ ಇರಲಿ. ಆಗ ಪ್ರಜಾಪತಿಯು ಋಶ್ಯವೆಂಬ ಒಂದು ವಿಧವಾದ ಜಿಂಕೆಯ (ಮೃಗದ) ರೂಪವನ್ನು ಧರಿಸಿದನು. ಅವನ ಪುತ್ರಿಯು ರೋಹಿತವೆಂಬ ಕೆಂಪು ಬಣ್ಣದ ಜಿಂಕೆಯ ರೂಪವನ್ನು ಧರಿಸಿದಳು. (ಇಲ್ಲಿ ರೋಹಿತಂ ಪ್ರಾಪ್ತಾ ಎಂಬ ಶಬ್ದಗಳಿಗೆ ಋತುಮತಿಯಾದಳು ಎಂದು ಭಾಷ್ಯಕಾರರ ವಿವರಣೆ ಇದೆ) ರೋಹಿತರೂಪದಲ್ಲಿರುವ ತನ್ನ ಪುತ್ರಿಯನ್ನು ಪ್ರಜಾಪತಿಯು ಸಮೀಪಿಸಿ

CC-0. Jangamwadi Math Collection. Digitized by eGangotri

ಮಿಥುನಕಾರ್ಯಾಸಕ್ತನಾದನು. ಈ ರೀತಿ ತನ್ನ ಪುತ್ರಿಯಲ್ಲೇ ಅನುರಕ್ತನಾಗಿ ಸಂಭೋಗಿಸಲು ಉದ್ಯುಕ್ತನಾಗಿರುವ ಪ್ರಜಾಪತಿಯನ್ನು ನೋಡಿ ದೇವತೆಗಳು ಪರಸ್ಪರವಾಗಿ ಈ ರೀತಿ ಮಾತನಾಡಿಕೊಂಡರು—ಈ ಪ್ರಜಾಪತಿಯು ಯಾರೂ ಯಾವಾಗಲೂ ಮಾಡದಿರುವ ನಿಷಿದ್ಧಕರ್ಮಾಚರಣೆಯಲ್ಲಿ ಆಸಕ್ತನಾಗಿರುವನು. ಈ ಕಾರ್ಯವನ್ನು ನಡೆಯದಂತೆ ತಡೆಗಟ್ಟಲು ಸಮರ್ಥನಾದ ಪುರುಷನಾರು ಎಂದು ಎಲ್ಲಾ ಕಡೆಯಲ್ಲಿಯೂ ಹುಡುಕಿನೋಡಿದರು. ಎಷ್ಟು ಹುಡುಕಿದರೂ ಪ್ರಜಾಪತಿಯನ್ನು ನಿಗ್ರಹಿಸಲು ಶಕ್ತನಾದ ಪುರುಷನು ಸಿಕ್ಕಲಿಲ್ಲ. ನಿನಗೆ ಶಕ್ತಿ ಇದ್ದರೆ ನೀನು ಪ್ರಜಾಪತಿಯನ್ನು ಸಂಹರಿಸು ಎಂದು ದೇವತೆಗಳು ತಮ್ಮ ತಮ್ಮಲ್ಲಿ ಪ್ರತಿಯೊಬ್ಬನನ್ನೂ ಪ್ರಶ್ನಿಸಿ ನೋಡಲು ಅವರಲ್ಲಿ ಯಾರಿಗೂ ಆ ಸಾಮರ್ಥ್ಯವಿದ್ದಂತೆ ಕಂಡುಬರಲಿಲ್ಲ. ಆಗ ದೇವತೆಗಳೆಲ್ಲರೂ ಸೇರಿ ತಮ್ಮ ತಮ್ಮ ಘೋರರೂಪಗಳನ್ನೆಲ್ಲಾ (ದೇವತೆಗಳಿಗೆ ಯಾವ ರೂಪವನ್ನು ಬೇಕಾದರೂ ಧರಿಸಲು ಶಕ್ತಿಯಿರುವುದೆಂದು ಪ್ರಸಿದ್ಧಿಯು. ಆದ್ದರಿಂದ ತಮ್ಮ ಸೌಮ್ಯರೂಪಗಳನ್ನು ಬಿಟ್ಟು ಘೋರವಾದ ಆಕಾರಗಳನ್ನು ಎಂದು ಇಲ್ಲಿ ಹೇಳಿದೆ) ಒಟ್ಟಿಗೆ ಕೇಂದ್ರೀಕರಿಸಿ ಅತ್ಯಂತ ಘೋರಾಕಾರವುಳ್ಳ ಓರ್ವ ಪುರುಷನನ್ನು ಸೃಷ್ಟಿಸಿದರು. ಈ ಪುರುಷನೇ ರುದ್ರನೆಂಬ ಅಭಿದಾನವನು ಪಡೆದನು. ಆದ್ದರಿಂದ ರುದ್ರನಿಗೆ ಭೂತವತ್ ಭೂತಪತಿ ಎಂಬ ಹೆಸರುಗಳು ಲೋಕದಲ್ಲಿ ಪ್ರಸಿದ್ಧವಾಗಿವೆ. ಆದ್ದರಿಂದ ರುದ್ರನ ಈ ರೀತಿಯಾದ ಭೂತವದ್ಭಾವವನ್ನು ತಾಳಿದ ಪುರುಷನು ಭೂತಿಮಂತ (ಐಶ್ವರ್ಯವಂತ) ನಾಗುವನು.

> ತಂ ದೇವಾ ಅಬ್ರುವನ್ನಯಂ ವೈ ಪ್ರಜಾಪತಿರಕೃತಮಕರಿಮಂ ವಿಧ್ಯೇತಿ ಸ ತಥೇತ್ಯಬ್ರವೀತ್ಸ ವೈ ವೋ ವರಂ ವೃಣಾ ಇತಿ ವೃಣೀಷ್ವೇತಿ ಸ ಏತಮೇವ ವರಮವೃಣೀತ ಪಶೂನಾಮಾಧಿ-ಪತ್ಯಂ ತದಸ್ಯೈತತ್ಪಶುಮನ್ನಾಮ ಪಶುಮಾನ್ಭವತಿ ಯೋಽಸ್ಯೈತದೇವಂ ನಾಮ ವೇದ ।
>
> (ಐ. ಬ್ರಾ. ೧೩-೩೩)

ಅನಂತರ ದೇವತೆಗಳು ಆ ಪುರುಷನನನ್ನು (ರುದ್ರನನ್ನು) ಉದ್ದೇಶಿಸಿ—ಎಲೈ ರುದ್ರನೇ, ಪ್ರಜಾಪತಿಯು ನಿಷಿದ್ಧ ಕಾರ್ಯವನ್ನು ಮಾಡಿರುವನು. ಆದುದರಿಂದ ಅವನನ್ನು ಶಿಕ್ಷಿಸುವುದಕ್ಕಾಗಿ ನೀನು ಈ ಬಾಣದಿಂದ ಅವನನ್ನು ಪ್ರಹರಿಸು ಎಂದರು. ರುದ್ರನು ಹಾಗೆಯೇ ಆಗಲೆಂದೊಪ್ಪಿದನು. ಆದರೆ ತಾನು ಪಶುಗಳಿಗೆಲ್ಲಾ ಅಧಿಪತಿಯಾಗುವಂತೆ ವರವನ್ನು ಕೇಳಿದನು. ದೇವತೆಗಳು ಅದರಂತೆ ವರವನ್ನು ಕೊಟ್ಟರು. ಆದ್ದರಿಂದ ರುದ್ರನು ಪಶುಪತಿ ಎಂಬ ಹೆಸರಿನಿಂದ ಪ್ರಸಿದ್ಧನಾದನು. ಈ ವಿಷಯವನ್ನು ತಿಳಿದ ಪುರುಷನು ಪಶುಸಂಪತ್ತನ್ನು ಪಡೆಯುವನು.

> ತಮಭ್ಯಾಯತ್ಯಾವಿಧ್ಯತ್ಸ ವಿದ್ಧ ಊರ್ಧ್ವ ಉದಪ್ರಪತತ್ತಮೇತಂ ಮೃಗ ಇತ್ಯಾಚಕ್ಷತೇ ಯ ಉ ಏವ ಮೃಗವ್ಯಾಧಃ ಸ ಉ ಏವ ಸ ಯಾ ರೋಹಿತ್ಸಾ ರೋಹಿಣೀ ಯೋ ಏವೇಷು-ಸ್ತ್ರಿಕಾಂಡಾ ಸೋ ಏವೇಷುಸ್ತ್ರಿಕಾಂಡಾ ।

ಅನಂತರ ಆ ರುದ್ರನು ಮುಂದೆ ಬಂದು ತನ್ನ ಧನುಸ್ಸಿಗೆ ಹೆದೆಯನ್ನೇರಿಸಿ ಬಾಣವನ್ನು ಹೂಡಿ ಅದನ್ನು ಹಿಂದಕ್ಕೆ ಎಳೆದು ಪ್ರಜಾಪತಿಗೆ ಗುರಿಯಿಟ್ಟು ಹೊಡೆದನು. ಋಶ್ಯರೂಪದಲ್ಲಿದ್ದ ಪ್ರಜಾಪತಿಗೆ ಆ ಬಾಣವು ತಗಲಿ ಅವನು ಊರ್ಧ್ವಾಭಿಮುಖವಾಗಿ ಅಂತರಿಕ್ಷಕ್ಕೆ ನೆಗೆದನು. ಅಂತರಿಕ್ಷದಲ್ಲಿ ಊರ್ಧ್ವಾಭಿಮುಖವಾಗಿ ನೆಗೆಯುತ್ತಿರುವ ಪ್ರಜಾಪತಿಯನ್ನು ಜನರೆಲ್ಲರೂ ಆಕಾಶದಲ್ಲಿ ನೋಡಿ ಅದನ್ನು ಮೃಗವೆಂಬ ನಕ್ಷತ್ರರಾಶಿಯೆಂದು ಕರೆಯುತ್ತಾರೆ. (Stars in the Orion) ಎಂದರೆ, ರೋಹಿಣೀ ಮತ್ತು ಆರ್ದ್ರಾನಕ್ಷತ್ರಗಳ ಮಧ್ಯದಲ್ಲಿರುವ ಮೃಗಶೀರ್ಷನಕ್ಷತ್ರವೆಂದು

CC-0. Jangamwadi Math Collection. Digitized by eGangotri

ಹೇಳುವರು. ಪ್ರಜಾಪತಿಯು ನಕ್ಷತ್ರರೂಪನಾಗಿ ಇರುವನೆಂದಭಿಪ್ರಾಯವು. ಮೃಗರೂಪದಿಂದಿದ್ದ ಪ್ರಜಾಪತಿಯನ್ನು ಬಾಣದಿಂದ ಪ್ರಹರಿಸಿದ ರುದ್ರನು ಮೃಗವ್ಯಾಧನೆಂಬ ಹೆಸರಿನಿಂದ ಆಕಾಶದಲ್ಲಿ ಗೋಚರಿಸುತ್ತಾನೆ. ರೋಹಿತವೆಂಬ ಕೆಂಪುಜಿಂಕೆಯ ರೂಪದಿಂದಿದ್ದ (ಮೃಗೀ) ಪ್ರಜಾಪತಿಯ ಪುತ್ರಿಯು ಆಕಾಶದಲ್ಲಿ ರೋಹಿಣೀನಕ್ಷತ್ರರೂಪದಿಂದ ಗೋಚರಿಸುತ್ತಾಳೆ. ರುದ್ರನಿಂದ ಪ್ರೇರಿತವಾದ ಬಾಣವು ಕಾಂಡ (ಬಾಣದ ಉದ್ದವಾದ ಕಡ್ಡಿ) ಶಲ್ಯ (ಅಲಗು) ತುದಿ (ಹರಿತನಾದ ಮೊನೆ) ಎಂಬ ಮೂರು ಭಾಗಗಳುಳ್ಳದ್ದಾಯಿತು ಆದ್ದರಿಂದ ಬಾಣದಲ್ಲಿ ಈಗಲೂ ಈ ಮೂರು ಭಾಗಗಳಿರುವವು.

ತದ್ವಾ ಇದಂ ಪ್ರಜಾಪತೇ ರೇತಃ ಸಿಕ್ತಮಧಾವತ್ತತ್ಸರೋಽಭವತ್ತೇ ದೇವಾ ಅಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ಯದಬ್ರುವನ್ಮೇದಂ ಪ್ರಜಾಪತೇ ರೇತೋ ದುಷದಿತಿ ತನ್ಮಾದುಷಮಭವತ್ತನ್ಮಾದುಷಸ್ಯ ಮಾದುಷತ್ವಂ ಮಾದುಷಂ ಹ ವೈ ನಾಮೈತದ್ಯನ್ಮಾನುಷಂ ಸನ್ಮಾನುಷಮಿತ್ಯಾಚಕ್ಷತೇ ಪರೋಕ್ಷೇಣ ಪರೋಕ್ಷಪ್ರಿಯಾ ಇವ ಹಿ ದೇವಾಃ ॥

(ಐ. ಬ್ರಾ. ೧೩-೩೩)

ಇನ್ನು ಮೃಗರೂಪದಲ್ಲಿದ್ದ ಪ್ರಜಾಪತಿಯ ರೇತಸ್ಸು (ವೀರ್ಯವು) ಬಹಳವಾಗಿದ್ದುದರಿಂದ ತನ್ನ ಪುತ್ರಿಯಾದ ಮೃಗಿಯಲ್ಲಿ ಸಿಕ್ತವಾಗಿ ಉಳಿದ ಭಾಗವು ಭೂಮಿಯಲ್ಲಿ ಬಿದ್ದು ಪ್ರವಾಹರೂಪದಿಂದ ನದಿಯಂತೆ ಹರಿಯಲುಪಕ್ರಮಿಸಿ ಒಂದು ತಗ್ಗಾದ ಪ್ರದೇಶದಲ್ಲಿ ಸಂಗ್ರಹವಾಗಿ ಮಹಾಸರೋವರವಾಗಿ ಪರಿಣಮಿಸಿತು. ಅದನ್ನು ನೋಡಿ ದೇವತೆಗಳು ಪ್ರಜಾಪತಿಯ ಈ ವೀರ್ಯವು ಅಸ್ಪೃಶ್ಯ (ಮುಟ್ಟಬಾರದೆಂದು) ವೆಂದೂ ಮಾದುಷತ್ ಕೆಟ್ಟದ್ದೆಂದೂ ಜನರು ಭಾವಿಸದಂತಾಗಲಿ ಎಂದು ಅಪೇಕ್ಷಿಸಿದರು. ದೇವತೆಗಳು ಅದನ್ನು ಮಾದುಷತ್ ಎಂದು ಕರೆದದ್ದರಿಂದ ದೋಷರಹಿತವಾದ ಪ್ರಜಾಪತಿಯ ರೇತೋರೂಪವಾದ ಸರೋವರಕ್ಕೆ ಮಾದುಷತ್ ಎಂದೇ ಹೆಸರಾಯಿತು. ಜನರು ಮಾದುಷ ಎಂಬ ಶಬ್ದದ ದಕಾರಸ್ಥಾನದಲ್ಲಿ ನಕಾರವನ್ನು ಸೇರಿಸಿ ಪಠಿಸುವುದರಿಂದ ಬ್ರಾಹ್ಮಣಕ್ಷತ್ರಿಯಾದಿ ಜನರನ್ನು ಮಾನುಷ ಎಂದು ಕರೆಯುತ್ತಾರೆ. ನ್ಯಾಯವಾಗಿ ನೋಡಿದರೆ ಮಾನುಷಶಬ್ದಕ್ಕೆ (ಮಾದುಷ) ದೋಷರಹಿತವಾಗುವುದು ಎಂದೇ ಅರ್ಥವು. ಹೀಗಿರುವಾಗ ಜನರು ತಮ್ಮ ಶರೀರವನ್ನು ಸಾಧಾರಣಾರ್ಥವಿರುವ ಮಾನುಷಶಬ್ದದಿಂದ ವ್ಯವಹರಿಸುವುದಕ್ಕೆ ಬದಲಾಗಿ ಪರೋಕ್ಷಾರ್ಥವಿರುವ (ಎಂದರೆ ಮಾದುಷ ಎಂಬ ಶ್ರೇಷ್ಠಾರ್ಥವಿರುವ) ಶಬ್ದದಿಂದಲೇ ವ್ಯವಹರಿಸುತ್ತಾರೆ; ಆದ್ದರಿಂದ ದೇವತೆಗಳಂತೆ ಯೋಗ್ಯರೂ, ಪೂಜ್ಯರೂ ಆದ ಪುರುಷರು ಲೋಕವ್ಯವಹಾರದಲ್ಲಿ ಪರೋಕ್ಷಪ್ರಿಯರಾಗಿಯೇ (ಪ್ರತ್ಯಕ್ಷವಾಗಿ ತೋರುವ ಅರ್ಥವಲ್ಲದೆ ಗೂಢಾರ್ಥವಿರುವ ಶಬ್ದಗಳಿಂದಲೇ ತೃಪ್ತರಾಗಿ) ಇರುತ್ತಾರೆ. ಹೇಗೆಂದರೆ ತಮಗೆ ಮಾತಾಪಿತೃಗಳು ಇಟ್ಟ ದೇವದತ್ತ ಮೊದಲಾದ ಸಾಮಾನ್ಯನಾಮಗಳಿಗಿಂತ ತಮ್ಮ ಯಶಸ್ಸನ್ನು ಪ್ರಕಾಶಗೊಳಿಸುವ ಉಪಾಧ್ಯಾಯ, ಆಚಾರ್ಯ, ಸ್ವಾಮಿ ಎಂದು ಮೊದಲಾದ ಅನ್ವರ್ಥನಾಮಗಳಿಂದಲೇ ತೃಪ್ತಿಪಡುತ್ತಾರೆ. ದೇವತೆಗಳೂ ಪ್ರತ್ಯಕ್ಷವಾಗಿ ಗೋಚರಿಸದೆ ಪರೋಕ್ಷದಲ್ಲಿದ್ದುಕೊಂಡೇ ಸ್ತುತ್ಯಾದಿಗಳನ್ನು ಸ್ವೀಕರಿಸುತ್ತಾರೆ. ಆದ್ದರಿಂದ ದೇವತೆಗಳು ಪರೋಕ್ಷಪ್ರಿಯರು ಎಂದು ಹೇಳುವರು. ಆದ್ದರಿಂದ ಪರೋಕ್ಷತ್ವವನ್ನು ಪ್ರದರ್ಶಿಸುವುದಕ್ಕಾಗಿ ಮಾದುಷಶಬ್ದದಲ್ಲಿ ದಕಾರಕ್ಕೆ ಬದಲಾಗಿ ನಕಾರವನ್ನು ಸೇರಿಸಿ ಮಾನುಷ ಎಂದು ಉಪಯೋಗಿಸುವರು.

ತದಗ್ನಿನಾ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ನ ಪ್ರಾಚ್ಯಾವಯತ್ತದಗ್ನಿನಾ ವೈಶ್ವಾನರೇಣ ಪರ್ಯಾದಧುಸ್ತನ್ಮರುತೋಽಧೂನ್ವಂಸ್ತದಗ್ನಿರ್ವೈಶ್ವಾನರಃ ಪ್ರಾಚ್ಯಾವಯತ್ತಸ್ಯ

CC-0. Jangamwadi Math Collection. Digitized by eGangotri

ಯದ್ರೇತಸಃ ಪ್ರಥಮಮುದದೀಪ್ಯತ ತದಸಾವಾದಿತ್ಯೋಽಭವದ್ಯದ್ವಿತೀಯಮಾಸೀತ್ತದ್ಭೃ-
ಗುರಭವತ್ತಂ ವರುಣೋ ನ್ಯಗೃಹ್ಣೀತ ತಸ್ಮಾತ್ಸ ಭೃಗುರ್ವಾರುಣಿರಥ ಯತ್ತೃತೀಯಮದೀ-
ದೇದಿವ ತ ಆದಿತ್ಯಾ ಅಭವನ್ಯೇಽಙ್ಗಾರಾ ಆಸಂಸ್ತೇಽಙ್ಗಿರಸೋಽಭವನ್ಯದಂಗಾರಾಃ ಪುನರ-
ವಶಾಂತಾ ಉದದೀಪ್ಯಂತ ತದ್ಬೃಹಸ್ಪತಿರಭವತ್ ।

(ಐ. ಬ್ರಾ ೧೩-೩೪)

ಅನಂತರ ದೇವತೆಗಳು ಪ್ರಜಾಪತಿಯ ಸಂಬಂಧವಾದ ರೇತಸ್ಸನ್ನು ದೋಷರಹಿತವನ್ನಾಗಿ ಮಾಡಿದಮೇಲೆ ಸರೋವರ ರೂಪದಲ್ಲಿ ದ್ರವರೂಪದಿಂದಿರುವ ಆ ರೇತಸ್ಸನ್ನು ದ್ರವರಹಿತವನ್ನಾಗಿ ಮಾಡಬೇಕೆಂದು ಯೋಚಿಸಿ ಆ ಸರೋವರದ ಸುತ್ತಲೂ ಅಗ್ನಿಯನ್ನು ಹೊತ್ತಿಸಿ ಉರಿಸತೊಡಗಿದರು. ಸರೋವರದ ಸುತ್ತಲೂ ಅಗ್ನಿಯು ಪ್ರಜ್ವಲಿತವಾಗಿ ಉರಿಯುತ್ತಿರುವಾಗ ವಾಯುವು ರೇತಸ್ಸಿನಲ್ಲಿ ಸೇರಿರುವ ದ್ರವವನ್ನು ಒಣಗಿಸುವುದಕ್ಕಾಗಿ ರೇತಸ್ಸನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಿತು. ಆದರೂ ಸಹ ಅಗ್ನಿಯು ತನ್ನ ಶಾಖದಿಂದ ರೇತಸ್ಸಿನಲ್ಲಿ ದ್ರವಭಾವವು ವಿಶೇಷವಾಗಿದ್ದುದರಿಂದ ಅದನ್ನು ಪರಿಹರಿಸಿ ಅದನ್ನು ಪಿಂಡಾಕಾರಕ್ಕೆ (ಘನದ್ರವ್ಯ, ಘಟ್ಟಿಯಾದ ಪದಾರ್ಥ) ಪರಿವರ್ತಿಸಲು ಅಗ್ನಿಗೆ ಸಾಧ್ಯವಾಗಲಿಲ್ಲ. ಆದ್ದರಿಂದ ದೇವತೆಗಳು ಅಗ್ನಿಯಿಂದ ಸಾಧ್ಯವಾಗದ ಈ ಕಾರ್ಯವನ್ನು ವೈಶ್ವಾನರನಾಮಕನಾದ ಅಗ್ನಿಯ ರೂಪವಿಶೇಷದಿಂದ ಸಾಧಿಸಲು ಪ್ರಯತ್ನಮಾಡಿದರು. ಈ ವೈಶ್ವಾನರಾಗ್ನಿಯು ಸಮಸ್ತಪ್ರಾಣಿಗಳ ಉದರಗಳಲ್ಲಿ ಜಾಠರಾಗ್ನಿರೂಪದಿಂದ ಪ್ರವೇಶಮಾಡಿ ಅನ್ನಪಾನಾದಿಗಳ ಪಚನಕಾರ್ಯದಲ್ಲಿ ತೊಡಗಿರುವನು.—

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥

ನಾನೇ ವೈಶ್ವಾನರಾಗ್ನಿರೂಪದಿಂದ ಪ್ರಾಣಿಗಳ ದೇಹದಲ್ಲಿದ್ದುಕೊಂಡು ಪ್ರಾಣ ಅಪಾನಗಳೆಂಬ ಪ್ರಾಣವಾಯುಗಳ ಸಹಾಯದಿಂದ ಪ್ರಾಣಿಗಳು ತಿನ್ನುವ ನಾಲ್ಕುವಿಧವಾದ ಅನ್ನಾದ್ಯಾಹಾರಗಳನ್ನು ಪಚನಮಾಡುತ್ತೇನೆ ಎಂದು ಭಗವಂತನೇ ಹೇಳಿದ್ದಾನೆ. ಆದ್ದರಿಂದ ದೇವತೆಗಳು ವೈಶ್ವಾನರಾಗ್ನಿಯು ಸಾಮರ್ಥ್ಯವು ವಿಶೇಷವಾಗಿರುವುದೆಂದು ತಿಳಿದು ಆ ಪ್ರಜಾಪತಿಯ ರೇತಸ್ಸನ್ನು ಶೋಷಿಸಲು (ಒಣಗಿಸಲು) ವೈಶ್ವಾನರಾಗ್ನಿಯನ್ನು ಸರೋವರದ ಸುತ್ತಲೂ ಸ್ಥಾಪಿಸಿದರು. ವಾಯುವೂ ಪೂರ್ವದಂತೆ ಸರೋವರವನ್ನು ಪ್ರವೇಶಿಸಿ ಅದನ್ನು ಅಲ್ಲೋಲಕಲ್ಲೋಲವನ್ನಾಗಿ ಮಾಡಿ ಶೋಷಿಸಲು ಪ್ರಾರಂಭಿಸಿತು. ಹೀಗೆ ವಾಯು ಸಹಾಯದಿಂದ ವೈಶ್ವಾನರಾಗ್ನಿಯು ಪ್ರಜಾಪತಿಯ ರೇತಸ್ಸನ್ನು ದ್ರವೀಭಾವದಿಂದ ಬೇರ್ಪಡಿಸಿ ಪಿಂಡಾಕಾರವಾದ ಘನಪದಾರ್ಥವನ್ನಾಗಿ ಪರಿವರ್ತಿಸಿತು. ಈರೀತಿ ರೇತಸ್ಸು ಅನೇಕಪಿಂಡಗಳಾಗಿ (ಗೋಳಾಕಾರವಾಗಿ) ಪರಿವರ್ತಿಸಲ್ಪಟ್ಟು ಜಾಜ್ವಲ್ಯಮಾನವಾಗಿ ಪ್ರಕಾಶಿಸತೊಡಗಿತು ಇವುಗಳಲ್ಲಿ ಮೊದಲನೆಯ ಪಿಂಡರೂಪವಾದ ತೇಜೋರಾಶಿಯೇ ಸ್ವರ್ಗದಲ್ಲಿ (ಆಕಾಶದಲ್ಲಿ) ಕಾಣುವ ಆದಿತ್ಯನಾಯಿತು. ಎರಡನೆಯ ಪಿಂಡವು ಭೃಗುಋಷಿಯಾಯಿತು. ಈ ಭೃಗುವನ್ನು ವರುಣನು ತನ್ನ ಪುತ್ರನನ್ನಾಗಿ ಸ್ವೀಕರಿಸಿದನು. ಆದ್ದರಿಂದ ಭೃಗುಋಷಿಗೆ ಭೃಗುರ್ವಾರುಣಿಃ ವರುಣಪುತ್ರನಾದ ಭೃಗುಋಷಿ ಎಂದು ಹೆಸರಾಯಿತು. ವರುಣನ ಮಗನಾದ್ದರಿಂದ ವಾರುಣಿಯೆಂದೂ ಹೇಳುವರು. ಇದನ್ನೇ ಗಮನದಲ್ಲಿಟ್ಟುಕೊಂಡು ತೈತ್ತಿರೀಯ ಶಾಖಾಧ್ಯಾಯಿಗಳು—ಭೃಗುರ್ವೈವಾರುಣಿಃ । ವರುಣಂ ಪಿತರಮುಪಸಸಾರ ( ತೈ. ಉ. ೩-೧ ) ಎಂದು ಪಠಿಸುವರು. ಅನಂತರ ಮೂರನೆಯ ಪಿಂಡವು ಅತಿಯಾಗಿ

CC-0. Jangamwadi Math Collection. Digitized by eGangotri

ಪ್ರಕಾಶಿಸುತ್ತಿದ್ದು ಅದಿತಿಪುತ್ರರಾಗಿ ಆದಿತ್ಯರು ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಆದಿತ್ಯ ಎಂದರೆ ಮಂಡಲವರ್ತಿಯಾದ ಸೂರ್ಯನು. ಇಲ್ಲಿ ಆದಿತ್ಯಾಃ ಎಂಬ ಶಬ್ದದಿಂದ ಅದಿತಿಪುತ್ರರಾದ ಇತರ ದೇವತೆಗಳು ಸೂಚಿತರಾಗಿರುವರು ಎಂದು ತಿಳಿಯಬೇಕು. ಅನಂತರ ಮತ್ತೆ ಕೆಲವು ಪಿಂಡಗಳು ಚೆನ್ನಾಗಿ ದಗ್ಧವಾಗಿ (ಉರಿದು) ಕೆಂಡಗಳಾದವು. ಆ ಕೆಂಡಗಳಿಂದ ಅಂಗಿರ ಎಂಬ ಋಷಿಗಳು ಉತ್ಪನ್ನರಾದರು. ಮತ್ತು ಇನ್ನೂ ಉರಿಯುತ್ತಲೇ ಇದ್ದು ಆರಿಹೋಗದಿದ್ದ ಎಂದರೆ, ಮತ್ತೆ ಮತ್ತೆ ಪ್ರಕಾಶಮಾನವಾಗಿ ಉರಿಯತೊಡಗಿದ್ದ ಕೆಂಡಗಳಿಂದ ಬೃಹಸ್ಪತಿಯು ಉತ್ಪನ್ನನಾದನು.

> ಯಾನಿ ಪರಿಕ್ಷಾಣಾನ್ಯಾಸಂಸ್ತೇ ಕೃಷ್ಣಾಃ ಪಶವೋಽಭವನ್ಯಾ ಲೋಹಿನೀ ಮೃತ್ತಿಕಾ ತೇ ರೋಹಿ-
> ತಾ ಅಥ ಯದ್ಭಸ್ಮಾಸೀತ್ತತ್ಪರುಷ್ಯಂ ವ್ಯಸರ್ಪದ್ಗೌರೋ ಗವಯ ಋಶ್ಯ ಉಷ್ಟ್ರೋ
> ಗರ್ದಭ ಇತಿ ಯೇ ಚೈತೇಽರುಣಾಃ ಪಶವಸ್ತೇ ಚ ।
> (ಐ. ಬ್ರಾ. ೧೩-೩೪).

ಅನಂತರ ಕೆಂಡಗಳು ಆರಿಹೋಗಿ ಅಂಗಾರ(ಇಜ್ಜಲು)ಗಳಾದಮೇಲೆ ಅವುಗಳು ಕಪ್ಪುಬಣ್ಣದ ಪಶುಗಳಾದವು. ಅಗ್ನಿಯು ಉರಿದಮೇಲೆ ತಳದಲ್ಲಿ ಇದ್ದ ಕೆಂಪಾದ ಮೃತ್ತಿಕೆಯು (ಮಣ್ಣು) ಕೆಂಪುಬಣ್ಣದ ಪಶುಗಳಾದವು ಬೂದಿಯಿಂದ (ಭಸ್ಮ) ಪರುಷ್ಯಪಶುಗಳು ಎಂದರೆ ಗೌರ, ಗವಯ, ಋಶ್ಯ ಎಂಬ ಅರಣ್ಯಮೃಗಗಳೂ ಒಂಟೆ, ಕತ್ತೆ ಇವುಗಳೂ ಉತ್ಪನ್ನವಾದವು. ಇತ್ಯಾದಿ. ಈ ಉಪಾಖ್ಯಾನದಿಂದ ಅಂಗಿರಾ ಋಷಿಗಳ ಉತ್ಪತ್ತಿವಿಚಾರವೂ ಅಂಗಿರಾ ಋಷಿಗಳಿಗೂ ಅಗ್ನಿಗೂ ಇರುವ ಸಂಬಂಧವೂ, ಅಗ್ನಿಗೆ ಅಂಗಿರ ಎಂದು ಹೆಸರು ಬರಲು ಕಾರಣವೂ ಸಹ ವಿವೃತವಾಗಿರುವುದು.

—— :o: ——

ಸಂಹಿತಾಪಾಠಃ

ಏತಾ ವಿಶ್ವಾ ವಿದುಷೇ ತುಭ್ಯಂ ವೇಧೋ ನೀಥಾನ್ಯಗ್ನೇ ನಿಣ್ಯಾ ವಚಾಂಸಿ ।
ನಿವಚನಾ ಕವಯೇ ಕಾವ್ಯಾನ್ಯಶಂಸಿಷಂ ಮತಿಭಿರ್ವಿಪ್ರ ಉಕ್ಥೈಃ ॥ ೧೬ ॥

ಪದಪಾಠಃ

ಏತಾ । ವಿಶ್ವಾ । ವಿದುಷೇ । ತುಭ್ಯಂ । ವೇಧಃ । ನೀಥಾನಿ । ಅಗ್ನೇ । ನಿಣ್ಯಾ । ವಚಾಂಸಿ ।
ನಿऽವಚನಾ । ಕವಯೇ । ಕಾವ್ಯಾನಿ । ಅಶಂಸಿಷಂ । ಮತಿऽಭಿಃ । ವಿಪ್ರಃ । ಉಕ್ಥೇಃ ॥ ೧೬ ॥

ಸಾಯಣಭಾಷ್ಯಂ

ವೇಧೋ ವಿಧಾತರ್ಹೇ ಅಗ್ನೇ ವಿದುಷೇ ಕರ್ಮವಿಷಯಜ್ಞಾನವತೇ ಕವಯೇ ಕ್ರಾಂತದರ್ಶಿನೇ ತುಭ್ಯಂ ನೀಥಾನಿ ಫಲಪ್ರಾಪಕಾಣಿ ನಿಣ್ಯಾ ನೇಯಾರ್ಥಾನಿ ಗೂಢಾನಿ ನಿವಚನಾ ನಿತರಾಂ ವಕ್ತವ್ಯಾನಿ ಕಾವ್ಯಾನಿ ಕವಿಭಿರ್ಮೇಧಾವಿಭಿಃ ಕೃತಾನ್ಯೇತಾ ವಿಶ್ವೈತಾನಿ ಸರ್ವಾಣಿ ವಚಾಂಸಿ ವಾಕ್ಯಾನಿ ಮತಿಭಿರ್ಮ-

CC-0. Jangamwadi Math Collection. Digitized by eGangotri

ನನೀಯೈಃ ಸ್ತೋತ್ರೈರುಕ್ಥೈಃ ಶಸ್ತ್ರೈಶ್ಚ ಸಹಿತೋಽ ವಿಪ್ರಃ ಪ್ರಾಜ್ಞೋಽಹಮಶಂಸಿಷಂ । ಅವೋಚಂ । ತಾನಿ ಸೇವಸ್ವೇತ್ಯರ್ಥಃ ॥

ಪ್ರತಿಪದಾರ್ಥ

ವೇಧಃ—ಸೃಷ್ಟಿಕರ್ತನಾದ । ಅಗ್ನೇ—ಎಲೈ ಅಗ್ನಿಯೇ । ವಿದುಷೇ—ಕರ್ಮವಿಷಯಕವಾದ ಜ್ಞಾನವುಳ್ಳವನೂ । ಕವಯೇ—ಕ್ರಾಂತದರ್ಶಿಯೂ ಆದ । ತುಭ್ಯಂ—ನಿನ್ನನ್ನುದ್ದೇಶಿಸಿ । ನೀಥಾನಿ—ಫಲಪ್ರಾಪಕವಾದವೂ । ನಿಣ್ಯಾ—ಗೂಢವಾದ ಅರ್ಥವುಳ್ಳವೂ । ನಿವಚನಾ—ಪ್ರಶಂಸಾರ್ಹವಾದವೂ । ಕಾವ್ಯಾನಿ—ಕವಿಗಳಿಂದ ನಿರ್ಮಿತವಾದವೂ ಆದ । ಏತಾ ವಿಶ್ವಾ ವಚಾಂಸಿ—ಈ ಸಮಸ್ತವಾದ ಸ್ತುತಿವಾಕ್ಯಗಳನ್ನೂ ಸಹ । ಮತಿಭಿಃ—ಪೂಜ್ಯವಾದ ಸ್ತೋತ್ರಗಳೊಡನೆಯೂ । ಉಕ್ಥೈಃ—ಶಸ್ತ್ರಮಂತ್ರಗಳೊಡನೆಯೂ । ವಿಪ್ರಃ—ಪ್ರಾಜ್ಞನಾದ ನಾನು । ಅಶಂಸಿಷಂ—ಪಠಿಸುತ್ತೇನೆ.

ಭಾವಾರ್ಥ

ಸೃಷ್ಟಿಕರ್ತನಾದ ಎಲೈ ಅಗ್ನಿಯೇ, ಕರ್ಮವಿಷಯಕವಾದ ಜ್ಞಾನವುಳ್ಳವನೂ, ಕ್ರಾಂತದರ್ಶಿಯೂ ಆದ ನಿನ್ನನ್ನುದ್ದೇಶಿಸಿ ಫಲಪ್ರಾಪಕವಾದವೂ, ಗೂಢವಾದ ಅರ್ಥವುಳ್ಳವೂ, ಪ್ರಶಂಸಾರ್ಹವಾದವೂ, ಕವಿಗಳಿಂದ, ನಿರ್ಮಿತವಾದವೂ ಆದ ಈ ಸಮಸ್ತವಾದ ಸ್ತುತಿವಾಕ್ಯಗಳನ್ನೂ ಸಹ ಪೂಜ್ಯವಾದ ಸ್ತೋತ್ರಗಳೊಡನೆಯೂ ಶಸ್ತ್ರಮಂತ್ರಗಳೊಡನೆಯೂ ಪ್ರಾಜ್ಞನಾದ ನಾನು ಪಠಿಸುತ್ತೇನೆ.

English Translation

Agni, creator, to the who are wise, acquainted with the past, I address oh sage, these soliciting mysterious words, (these) ever-to-be-recited poems, together with praises and prayers.

———

## ನಾಲ್ಕನೆಯ ಸೂಕ್ತವು.

### ಟೀ ಕೆ .

ಈ ಸೂಕ್ತಕ್ಕೆ ಅಗ್ನೀ ರಕ್ಷೋಹಾ ಎಂಬುದು ದೇವತೆಯು. ಎಂದರೆ ಭೂತ ಪಿಶಾಚಾದಿ ಯಜ್ಞವಿಘ್ನಕಾರಿಗಳಾದ ರಕ್ಷೋಗಣವನ್ನು ನಾಶಪಡಿಸುವ ಅಗ್ನಿಯೆಂದರ್ಥವು. ಯಾಸ್ಕರು ರಕ್ಷಃ ಶಬ್ದವನ್ನು ವಿವರಿಸುತ್ತಾ—

ರಕ್ಷೋ ರಕ್ಷಿತವ್ಯಮಸ್ಮಾತ್ । ರಹಸಿ ಕ್ಷಣೋತೀತಿ ವಾ । ರಾತ್ರೌ ನಕ್ಷತ ಇತಿ ವಾ ॥

(ನಿ. ೪-೧೮)

ಎಂದು ನಿರ್ವಚನವನ್ನು ಹೇಳಿರುವರು. ಎಂದರೆ ರಕ್ಷಸ್ಸೆಂಬ ಭೂತಗಣವು ಮನುಷ್ಯರನ್ನು ಭಕ್ಷಿಸುವುದು. ಇದರಿಂದ ನಮ್ಮ ಶರೀರವು ರಕ್ಷಿಸಲ್ಪಡಬೇಕು. ಸಕ್ಷಿಸಲ್ಪಡಬೇಕಾದುದರಿಂದ ಇದಕ್ಕೆ ರಕ್ಷಃ ಎಂದು ಹೆಸರು. ಅಥವಾ ಯಾರೂ ಇಲ್ಲದಿರುವ ನಿರ್ಜನಪ್ರದೇಶದಲ್ಲಿ ಅಥವಾ ಕತ್ತಲಲ್ಲಿ (ಮನುಷ್ಯರನ್ನು) ಹಿಂಸಿಸುವುದರಿಂದ ಇದಕ್ಕೆ ರಕ್ಷಃ ಎಂದು

CC-0. Jangamwadi Math Collection. Digitized by eGangotri

ಹೆಸರು. ಅಥವಾ ರಾತ್ರಿಕಾಲದಲ್ಲಿ ಇದು ಸಂಚರಿಸುವುದರಿಂದ ಇದಕ್ಕೆ ರಕ್ಷಃ ಎಂದು ಹೆಸರು ಎಂದು ಮೂರು ವಿಧವಾದ ಅರ್ಥವನ್ನು ಹೇಳಿದಾರೆ. ರಕ್ಷಃ ಎಂಬ ಶಬ್ದಕ್ಕೂ, ರಾಕ್ಷಸಶಬ್ದಕ್ಕೂ ವ್ಯತ್ಯಾಸವಿದೆ. ರಾಕ್ಷಸರೆಂದರೆ ಮನುಷ್ಯಾಕಾರದ ಅಥವಾ ಕಣ್ಣಿಗೆ ಕಾಣಿಸುವ ಇತರ ಭಯಂಕರಾಕಾರದ ವ್ಯಕ್ತಿವಿಶೇಷಗಳು. ಇವರು ದುಷ್ಟಸ್ವಭಾವದವರಾಗಿ ಯಾವಾಗಲೂ ಸತ್ಪುರುಷರಿಗೆ ಹಿಂಸೆಯನ್ನುಂಟುಮಾಡುವವರು. ಸತ್ಕರ್ಮಗಳಿಗೆ ವಿಘ್ನವನ್ನುಂಟುಮಾಡುವವರು. ರಕ್ಷಃ ಎಂಬ ಶಬ್ದಕ್ಕೆ ಕಣ್ಣಿಗೆ ಕಾಣಿಸದಿರುವ ಭೂತ, ದೈವ, ಪಿಶಾಚಾದಿಗಳು Demons, evil spirits &c : ಮನುಷ್ಯರಿಗೆ ಹಿಂಸೆಯನ್ನುಂಟುಮಾಡುವುದೂ, ಯಜ್ಞಾದಿ ಸತ್ಕರ್ಮಗಳಿಗೆ ವಿಘ್ನವನ್ನುಂಟುಮಾಡುವುದೂ ಇವುಗಳ ಸ್ವಭಾವ. ಇವುಗಳ ಬಾಧೆಯನ್ನು ಪರಿಹರಿಸಿ ಕಾಪಾಡಬೇಕೆಂದು ಅಗ್ನಿಯನ್ನು ಯಜ್ಞಾದಿಗಳಲ್ಲಿಯೂ, ಇತರ ಕರ್ಮಗಳಲ್ಲಿಯೂ ಪ್ರಾರ್ಥಿಸುವುದು ರೂಢಿಯು. ಈ ವಿಧವಾದ ಬಾಧೆಯನ್ನು ಪರಿಹರಿಸುವ ಅಗ್ನಿಯನ್ನು ರಕ್ಷೋಹಾಗ್ನಿ ಎಂದು ಕರೆಯುವರು.

ಭೂಮಿಯಲ್ಲಿರುವ ಪಿಶಾಚಿಗಳು ಅಥವಾ ಭೂತಗಳು—ಮನುಷ್ಯರ ದ್ವೇಷಿಗಳು. ಇವರನ್ನು ಹೇಳುವ ಜಾತಿವಾಚಕವು ರಕ್ಷಃ ಎಂಬುದು. ಈ ಶಬ್ದವು ಐವತ್ತಕ್ಕಿಂತ ಹೆಚ್ಚುಸಲ ಏಕವಚನ ಮತ್ತು ಬಹುವಚನಗಳಲ್ಲಿಬಂದಿದೆ; ಸಾಧಾರಣವಾಗಿ ಯಾವುದಾದರೊಂದು ದೇವತೆಯೊಡನೆ, ರಾಕ್ಷಸನನ್ನು ಧ್ವಂಸಮಾಡೆಂದು ಪ್ರಾರ್ಥನಾರೂಪವಾಗಿ, ಅಥವಾ ರಾಕ್ಷಸನನ್ನು ವಧಿಸಿದೆ ಎಂದು ಸ್ತುತಿರೂಪವಾಗಿಯೇ ಬರುತ್ತದೆ. ೭-೧೦೪ ಮತ್ತು ೧೦-೮೭ನೆಯ ಸೂಕ್ತಗಳಲ್ಲಿ ಇವರ ಪ್ರಸ್ತಾಪವೇ ಇದೆ. ಇಲ್ಲಿ ರಕ್ಷಸಃ, ಯಾತು, ಯಾತುಧಾನ ಮೊದಲಾದ ಪದಗಳು ಇವರನ್ನು ಸೂಚಿಸುತ್ತವೆ. ರಕ್ಷಸಃ ಎಂಬುದು ದುರ್ದೇವತೆಗಳು, ಪಿಶಾಚಿಗಳು ಇವೆಲ್ಲಕ್ಕೂ ಹೆಸರಾದುದರಿಂದ ಅದನ್ನು ಜಾತಿವಾಚಕವೆಂತಲೂ, ಯಾತು ಎಂಬುದನ್ನು ಉಪಜಾತಿವಾಚಕವೆಂತಲೂ ತಿಳಿಯಬಹುದು.

ಈ ಪಿಶಾಚಿಗಳು ಅಥವಾ ಭೂತಗಳಿಗೆ, ನಾಯಿ, ರಣಹದ್ದು, ಗೂಬೆ ಮತ್ತು ಇತರ ಪಕ್ಷಿಗಳ ರೂಪಗಳುಂಟು (೭-೧೦೪-೨೦ರಿಂದ ೨೨). ಪಕ್ಷಿರೂಪರಾಗಿ, ರಾತ್ರಿಯವೇಳೆ ಹಾರಾಡುತ್ತಾರೆ (೭-೧೦೪-೧೮). ಭ್ರಾತೃ, ಭರ್ತೃ ಅಥವಾ ಪ್ರಿಯನ ರೂಪವನ್ನು ಧರಿಸಿ, ಸ್ತ್ರೀಯರನ್ನು ಸಮೀಪಿಸಿ, ಅವರ ಮಕ್ಕಳನ್ನು ನಾಶಪಡಿಸಲು ಇಚ್ಛಿಸುತ್ತಾರೆ (೧೦-೧೬೨-೫). ನಾಯಿ ಅಥವಾ ಕಪಿರೂಪವಾಗಿ ಹೆಂಗಸರ ಮೇಲೆ ಬೀಳಲು ಕಾದಿರುತ್ತಾರೆ. (ಅ. ವೇ. ೪-೩೭-೧೧). ಆದುದರಿಂದ ಗರ್ಭಿಣಿಯರಿಗೆ ಮತ್ತು ಮಕ್ಕಳಿಗೆ ಇವರಿಂದ ತೊಂದರೆಯುಂಟು. (ಅ. ವೇ. ೮-೬), ವಿವಾಹಕಾಲದಲ್ಲಿ, ವಧುವಿನ ಸುತ್ತಲೂ ಓಡಾಡುತ್ತಿರುತ್ತಾರೆ, ಇವರ ಕಣ್ಣುಗಳನ್ನು ಚುಚ್ಚಲೆಂದು, ಸಣ್ಣ ಬಾಣಗಳನ್ನು ಅಂತರಿಕ್ಷದಲ್ಲಿ ಬಿಡುತ್ತಾರೆ (ಮಾ. ಗೃ. ಸೂ. ೧-೧೦). ಅಥರ್ವವೇದದಲ್ಲಿಯೇ ಇವರ ರೂಪ ಮೊದಲಾದವುಗಳ ವರ್ಣನೆಯಿರುವುದು. ಅವರು ವಿಶೇಷವಾಗಿ ಮನುಷ್ಯರಂತೆ ರೂಪವನ್ನು ಧರಿಸಿರುತ್ತಾರೆ. ಅವರ ಶಿರಸ್ಸು, ಕಣ್ಣು, ಹೃದಯ ಮೊದಲಾದ ಅಂಗಾಂಗಗಳ ಪ್ರಸಕ್ತಿಯಿದೆ; ಆದರೆ ಏನಾದರೊಂದು ವೈರೂಪ್ಯವಿದ್ದೇ ಇರುತ್ತದೆ. ಮೂರು ತಲೆ, ಎರಡು ಬಾಯಿ, ನಾಲ್ಕು ಕಣ್ಣು, ಐದು ಪಾದಗಳು, ಬೆರಳುಗಳಿಲ್ಲ, ಪಾದಗಳು ಹಿಂದು ಮುಂದಾಗಿರುವುದು ಅಥವಾ ಕೈಮೇಲೆ ಕೊಂಬುಗಳು, ಇತ್ಯಾದಿ (ಅ. ವೇ. ೮-೬; ಹಿ. ಗೃ. ಸೂ. ೨-೩-೭). ನೀಲಿ, ಹಳದಿ ಅಥವಾ ಹಸುರು ಪಿಶಾಚಿಗಳೂ ಉಕ್ತರಾಗಿದಾರೆ. (ಅ. ವೇ. ೧೯-೨೨-೪, ೫) ಅವರಲ್ಲಿಯೂ ಗಂಡು, ಹೆಣ್ಣುಗಳೂ, ಸಂಸಾರಗಳೂ, ರಾಜರೂ (ಅ. ವೇ ೫-೨೨-೧೨; ಹಿ. ಗೃ. ಸೂ. ೨-೩-೭) ಉಂಟು; ಅವರೂ ಮರಣಶೀಲರು (ಅ ವೇ. ೬-೩೨-೨; ಇತ್ಯಾದಿ)

CC-0. Jangamwadi Math Collection. Digitized by eGangotri

ಯಾತುಧಾನರು ಮನುಷ್ಯರ ಮತ್ತು ಅಶ್ವಗಳ ಮಾಂಸವನ್ನು ತಿನ್ನುತ್ತಾರೆ. ಮತ್ತು ಗೋಕ್ಷೀರವನ್ನು ಪಾನಮಾಡುತ್ತಾರೆ.(೧೦-೮೬-೧೬, ೧೭) ತಮ್ಮ ರಕ್ತ ಮತ್ತು ಮಾಂಸದ ಆಶೆಯನ್ನು ತೀರಿಸಿಕೊಳ್ಳಲು ರಾಕ್ಷಸರು ಮನುಷ್ಯರನ್ನು ಆಕ್ರಮಿಸುತ್ತಾರೆ. ಈ ಆಕ್ರಮಣವು ಸಾಧಾರಣವಾಗಿ ಅವರನ್ನು ಪ್ರವೇಶಮಾಡುವ ಮೂಲಕವೇ. ಆರಾಧಕರನ್ನು ಪ್ರವೇಶಿಸದಂತೆ ರಾಕ್ಷಸರನ್ನು ತಡೆಗಟ್ಟಬೇಕೆಂದು ಅಗ್ನಿಗೆ ಪ್ರಾರ್ಥನೆಇದೆ (೮–೪೮-೨೦) ಅಲ್ಲಿಂದಿಲ್ಲಿ ಹಾರಾಡುತ್ತಿರುವ ರೋಗಾಭಿಮಾನಿಯಾದ ಪಿಶಾಚಿಯೊಂದು ಮನುಷ್ಯರನ್ನು ಪ್ರವೇಶಿಸುತ್ತದೆ. (ಅ. ವೇ. ೭-೭೬-೪) ಈ ಭೂತಪ್ರೇತಗಳು ಸಾಧಾರಣವಾಗಿ ನಾವು ತಿನ್ನುವಾಗ ಅಥವಾ ಕುಡಿಯುವಾಗ ನಮ್ಮ ಬಾಯಿ ಮೂಲಕವೇ ನಮ್ಮನ್ನು ಪ್ರವೇಶಿಸುತ್ತವೆ. (ಅ- ವೇ. ೫-೨೯-೬ ರಿಂದ ೮); ಇತರ ದ್ವಾರಗಳಿಂದಲೂ ಪ್ರವೇಶಿಸುವುದುಂಟು (ಅ- ವೇ. ೮-೬-೩). ಒಳಗೆ ಪ್ರವೇಶಮಾಡುವುದೇ ತಡ, ಮನುಷ್ಯನ ಮಾಂಸವನ್ನು ಕಿತ್ತು ತಿಂದು, ರೋಗವನ್ನುಂಟು ಮಾಡುತ್ತಾರೆ (ಅ. ವೇ. ೫-೨೯-೫, ೧೦). ಹುಚ್ಚುತನವನ್ನುಂಟು ಮಾಡುತ್ತಾರೆ. ಮತ್ತು ವಾಕ್ಪಟುತ್ವವನ್ನು ನಾಶಗೊಳಿಸುತ್ತಾರೆ (ಅ. ವೇ. ೬-೧೧೧-೩ ; ಹಿ. ಗೃ. ಸೂ ೧-೧೫-೫) ಮನುಷ್ಯರ ವಾಸಗೃಹಗಳನ್ನು ಆಕ್ರಮಿಸುತ್ತಾರೆ. (ಕೌ. ಸೂ. ೧೩೫-೯) ಕೆಲವು ಭೂತಗಳು ಸಾಯಂಕಾಲದ ವೇಳೆಯಲ್ಲಿ ಮನೆಗಳ ಸುತ್ತಲೂ ಕುಣಿಯುತ್ತಾ ಕತ್ತೆಗಳಂತೆ ಅರಚುತ್ತಾ, ತಿರುಗುತ್ತಿರುತ್ತವೆ ಅಥವಾ ಕಾಡುಗಳಲ್ಲಿ ತಿರುಗುತ್ತಿರುತ್ತವೆ ಅಥವಾ ಗಟ್ಟಿಯಾಗಿ ನಗುತ್ತಾ ಇಲ್ಲವೇ ಕಪಾಲಗಳಿಂದ ಪಾನ ಮಾಡುತ್ತಾ ಇರುತ್ತವೆ (ಅ. ವೇ. ೮-೬-೧೦), ೧೧, ೧೪ ; ಹಿ. ಗೃ. ಸೂ. ೨-೩-೩).

ಅವರ ಸಂಚಾರಕಾಲವು ರಾತ್ರಿ ಅಥವಾ ಸಾಯಂಕಾಲ (೭-೧೦೪-೮). ಪೂರ್ವದಿಕ್ಕಿನಲ್ಲಿ ಅವರ ಆಟವೇನೂ ನಡೆಯುವುದಿಲ್ಲ ; ಅಲ್ಲಿ ಉದಿಸುವ ಸೂರ್ಯನು ಅವರನ್ನು ಓಡಿಸಿಬಿಡುತ್ತಾನೆ. (ತೈ. ಸಂ. ೨-೬-೬-೩). ಬೀಳುತ್ತಿರುವ ಉಲ್ಕೆಯು ಭೂತದ ರೂಪವೆಂದು ಭಾವನೆ. (ಕೌ. ಸೂ. ೧೨೬-೯) ಅಮಾವಾಸ್ಯೆಯ ಕಗ್ಗತ್ತಲೆಯು ಪ್ರೇತಗಳ ಸಂಚಾರಕ್ಕೆ ಯೋಗ್ಯವಾಗಿರುವಂತೆ ಭೂತಗಳಿಗೂ ಅದೇ ಅನುಕೂಲಕಾಲ. (ಅ ವೇ. ೧-೧೬-೧ ; ೪-೩೬-೩).

ಯಜ್ಞಗಳಿಗೆ ಇವರಿಂದ ಇರುವಷ್ಟು ಆಪತ್ತು ಯಾವುದಕ್ಕೂ ಇಲ್ಲ. ದೇವಯೋಗ್ಯವಾದ ಯಜ್ಞಗಳಲ್ಲಿ ಪಿಶಾಚಿಗಳು, ಲೋಪದೋಷಗಳನ್ನುಂಟುಮಾಡುತ್ತವೆ. ಮತ್ತು ಯಾತುಗಳು ಅರ್ಪಿತವಾದ ಆಹುತಿಗಳನ್ನು ಚಲ್ಲಾಪಿಲ್ಲಿಯಾಗಿ ಎರಚುತ್ತವೆ. (೭-೧೦೪-೧೮, ೨೧) ಸ್ತೋತ್ರವನ್ನು ಕಂಡರೆ ಅವರಿಗಾಗದು. (೧೦-೧೮೭-೩) ಯಜ್ಞಕ್ಕೆ ಶಾಪ ತಗಲದಂತೆ, ಭೂತಾದಿಗಳನ್ನು ದಹಿಸಿಬಿಡೆಂದು ಅಗ್ನಿಗೆ ಪ್ರಾರ್ಥನೆ. (೧-೭೬-೩) ಯಾತುಧಾನರು ಮತ್ತು ರಕ್ಷೋಗಣಗಳ ಮಾಯೆಯಿಂದ ಶತ್ರುವಿನ ಯಾಗವನ್ನು ಊರ್ಜಿತವಾಗದಂತೆ ಮಾಡುವ ಮಂತ್ರವೊಂದಿದೆ. (ಅ. ವೇ. ೭-೭೦-೨) ಮೃತರಿಗೆ ಆಹುತಿಕೊಡುವ ಅನ್ನೋದಕಗಳಿಗೆ ಪ್ರೇತರೂಪದಲ್ಲಿ ಅಡ್ಡಿಯಾಗಿ ಒದಗುತ್ತಾರೆ. (ಅ. ವೇ ೧೮-೨-೨೮ ; ವಾ. ಸಂ. ೨-೨೯ನ್ನು ಹೋಲಿಸಿ). ಪುರಾಣಗಳಲ್ಲಿ ಈ ರಕ್ಷೋಗಣಗಳು (ರಾಕ್ಷಸರೆಂತಲೇ ವ್ಯವಹಾರ) ಯೋಗಿಗಳಿಗೆ ತೊಂದರೆಮಾಡುತ್ತಾರೆ ಎಂಬುದು ಸಾಮಾನ್ಯವಾಗಿದೆ.

ಕತ್ತಲನ್ನು ಹೋಗಲಾಡಿಸುವವನೂ, ಯಾಗಕ್ಕೆ ಯಜಮಾನನೂ ಆದ ಅಗ್ನಿಗೂ ಇವರಿಗೂ ಬದ್ಧ ದ್ವೇಷ. ಇವರನ್ನು ದಹಿಸು, ಓಡಿಸು ಅಥವಾ ನಾಶಮಾಡು ಎಂದು ಅಗ್ನಿಯನ್ನೇ ಪ್ರಾರ್ಥಿಸುವುದು. (೧೦-೮೭-೩-೬ ಇತ್ಯಾದಿ) ಈ ಕಾರ್ಯದಿಂದಲೇ ಅಗ್ನಿ ಮತ್ತು ಇತರ ಕೆಲವು ದೇವತೆಗಳಿಗೆ 'ರಕ್ಷೋಹಾ' ಎಂಬ ಹೆಸರು ಬಂದಿರುವುದು.

CC-0. Jangamwadi Math Collection. Digitized by eGangotri

ಈ ಭೂತಗಳು ಸ್ವಭಾವತಃ ಹಾನಿಕರಗಳು ಮಾತ್ರವಲ್ಲ, ಇತರರಿಂದ ಪ್ರೇರಿತರಾಗಿಯೂ ಹಾನಿಯನ್ನುಂಟುಮಾಡುವುದುಂಟು. ರಕ್ಷೋಯುಜಃ (ರಾಕ್ಷಸರನ್ನು ಪ್ರೇರಿಸುವವರು) ಎಂಬುದು ಕಂಡುಬರುತ್ತದೆ. (೬-೬೨-೯) ಮತ್ತು ಮಂತ್ರಗಾರರ ಭೂತಗಳು ಮತ್ತು ಯಾತುಗಳು ಅಲ್ಲಲ್ಲಿ ಇವೆ. (೭-೧೦೪-೨೩ ; ೮-೬೦-೨೦) ಶತ್ರುವಿನಿಂದ ಪ್ರೇರಿತವಾದ ಭೂತದ ಕಾಟಕ್ಕೆ ಒಳಗಾದವನು- ಯವಿಷ್ಠಾಗ್ನಿಗೆ ಹೋಮಮಾಡಿ ಅವುಗಳನ್ನು ಓಡಿಸಬಹುದು. (ತೈ. ಸಂ. ೨-೨-೩-೨) ಮತ್ತು ಪ್ರೇರಿಸುವವನನ್ನೇ ನುಂಗಿಬಿಡು ಎಂದು ಆ ಭೂತಗಳಿಗೇ ಅಪ್ಪಣೆ ಇದೆ. (ಅ. ವೇ. ೨-೨-೪)

ಭೂತಗಳು ಎಂಬರ್ಥದಲ್ಲಿ ರಕ್ಷಃ ಎಂಬ ಪದವು ಪುಲ್ಲಿಂಗಸ್ತ್ರೀಲಿಂಗಗಳೆರಡರಲ್ಲಿಯೂ ಪ್ರಯೋಗಿಸಲ್ಪಟ್ಟಿದೆ. ನಪುಂಸಕದಲ್ಲಿ ಅಪಾಯ ಎಂತಲೂ ಅರ್ಥವುಂಟು. ರಕ್ಷ್ (ತೊಂದರೆಮಾಡು) ಎಂಬ ಧಾತುವಿನಿಂದ ರಕ್ಷಃ ಎಂದಾಗಿರಬಹುದು (ಋಕ್ಷಾ ಅಪಾಯಕರವಾದ) ; ಆದರೆ ಈ ಪ್ರಯೋಗವು ಬಹಳ ಅಪರೂಪ. ಸಾಧಾರಣವಾದ ರಕ್ಷ್—ಕಾಪಾಡು ಎಂಬುದರಿಂದಲೂ ಆಗಿರಬಹುದು. ಈ ಸಂದರ್ಭದಲ್ಲಿ ರಕ್ಷಃ ಎಂದರೆ ತಪ್ಪಿಸಿಕೊಳ್ಳಬೇಕಾದುದು ಎಂದರ್ಥವಾಗುತ್ತದೆ.

---

ಸಾಯಣಭಾಷ್ಯಂ

ಕೃಣುಷ್ವೇತಿ ಪಂಚದಶರ್ಚಂ ಚತುರ್ಥಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಂ ರಕ್ಷೋಹಾಗ್ನಿದೇವತಾಕಂ । ಕೃಣುಷ್ವ ಪಂಚೋನಾ ರಾಕ್ಷೋಘ್ನಮಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಸೂಕ್ತವಿನಿಯೋಗಃ ॥ ಪ್ರವರ್ಗ್ಯೇಽಭಿಷ್ಟವೇ ಕೃಣುಷ್ವ ಪಾಜ ಇತ್ಯಾದ್ಯಾಃ ಪಂಚರ್ಚೋ ವಿನಿಯುಕ್ತಾಃ । ಸೂತ್ರಿತಂ ಚ । ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಮಿತಿ ಪಂಚ । ಆ. ೪-೬ । ಇತಿ ॥

ಅನುವಾದವು—ಕೃಣುಷ್ವ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ರಕ್ಷೋಹಾಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಕೃಣುಷ್ವ ಪಂಚೋನಾ ರಾಕ್ಷೋಘ್ನಂ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದು. ಪ್ರವರ್ಗ್ಯವೆಂಬ ಯಾಗದಲ್ಲಿಯೂ ಕೃಣುಷ್ವ ಪಾಜಃ ಎಂದು ಮೊದಲಾಗುವ ಐದು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಮಿತಿ ಪಂಚ ಎಂಬ ಸೂತ್ರದಿಂದ (ಆ. ೪-೬) ವಿವೃತವಾಗಿರುವುದು.



CC-0. Jangamwadi Math Collection. Digitized by eGangotri

## ಸೂಕ್ತ—೪

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೪ ॥
ಅಷ್ಟಕ—೩ ॥ ಅಧ್ಯಾಯ—೪ ॥ ವರ್ಗ—೨೩, ೨೪, ೨೫ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷಿಃ—ವಾಮದೇವಃ ॥
ದೇವತಾ—ಅಗ್ನೀ ರಕ್ಷೋಹಾ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಕೃಣುಷ್ವ ಪಾಜಃ ಪ್ರಸಿತಿಂ ನ ಪೃಥ್ವೀಂ ಯಾಹಿ ರಾಜೇವಾಮವಾ
ಇಭೇನ ।
ತೃಷ್ವೀಮನು ಪ್ರಸಿತಿಂ ದ್ರೂಣಾನೋಽಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಃ ॥ ೧ ॥

ಪದಪಾಠಃ

ಕೃಣುಷ್ವ । ಪಾಜಃ । ಪ್ರಸಿತಿಂ । ನ । ಪೃಥ್ವೀಂ । ಯಾಹಿ । ರಾಜಾಽಇವ । ಅಮಽವಾನ್ । ಇಭೇನ ।
ತೃಷ್ವೀಂ । ಅನು । ಪ್ರಽಸಿತಿಂ । ದ್ರೂಣಾನಃ । ಅಸ್ತಾ । ಅಸಿ । ವಿಧ್ಯ । ರಕ್ಷಸಃ । ತಪಿಷ್ಠೈಃ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಪಾಜಸ್ತೇಜಃಸಂಘಂ ಕೃಣುಷ್ವ । ಕುರುಷ್ವ । ವಿಸ್ತಾರಯ । ತತ್ರ ದೃಷ್ಟಾಂತಃ । ಪ್ರಸಿತಿಂ ನ । ಯಥಾ ಮೃಗಯುಃ ಪೃಥ್ವೀಂ ವಿಸ್ತೀರ್ಣಾಂ ಪ್ರಸಿತಿಂ । ಪ್ರಕರ್ಷೇಣ ಸೀಯತೇ ಬಧ್ಯತ ಇತಿ ಪ್ರಸಿತಿರ್ವಾಗುರಾ । ತಾದೃಶೀಂ ಪ್ರಸಿತಿಂ ಪಕ್ಷಿಗ್ರಹಣಾರ್ಥಂ ವನಗಹನೇಷು ಪ್ರಸಾರಯತಿ ತದ್ವತ್ತ್ವಮಪಿ ರಕ್ಷಾಂಸಿ ಹಂತುಂ ಮಹದ್ಬಲಮಗ್ರತಸ್ತನುಷ್ವ । ಇಭೇನ ಗತಭಯೇನ ತೇಜಃಸಂಘೇನ ಯುಕ್ತಸ್ತ್ವಂ ಯಾಹಿ । ರಕ್ಷಾಂಸಿ ಹಂತುಂ ಗಚ್ಛ । ತತ್ರ ದೃಷ್ಟಾಂತಃ । ರಾಜೇವ । ಯಥಾಮವಾನ್ ರಾಜಾ । ಸಹ ವರ್ತತ ಇತ್ಯಮೋಽಮಾತ್ಯಃ ತದ್ವಾನ್ । ಯದ್ವಾ । ಅಮೋಽಮನಂ ರೋಗಃ । ಶತ್ರೂಣಾಂ ಕರ್ತವ್ಯೈ ರೋಗೈಸ್ತದ್ವಾನ್ । ಶತ್ರೂಣಾಂ ರೋಗಭೂತ ಇತ್ಯರ್ಥಃ । ರಾಜೇಃಭೇನ ಗಜೇನ ಯುಕ್ತಃ ಸನ್ ಪರಬಲಂ ಪ್ರತಿಗಚ್ಛತಿ ತದ್ವತ್ । ಕಿಂಚ ತೃಷ್ವೀಂ । ತೃಷ್ವೀತಿ ಕ್ಷಿಪ್ರನಾಮ । ಕ್ಷಿಪ್ರಗಾಮಿನೀಂ ಪ್ರಸಿತಿಂ ಪ್ರಕೃಷ್ಟಾಂ ಸೇನಾಮನು ದ್ರೂಣಾನೋಽನುಗಚ್ಛನ್ । ಯದ್ವಾ । ತೃಷ್ವೀಮಿತಿ ತೃತೀಯಾರ್ಥೇ ದ್ವಿತೀಯಾ । ತೃಷ್ವ್ಯಾ ಕ್ಷಿಪ್ರಯಾ ಪ್ರಸಿತ್ಯಾನುಬದ್ಧಯಾ ಸಂತತಯಾ ಗತ್ಯಾ ದ್ರೂಣಾನಃ ಪರಸೇನಾಂ ಹಿಂಸನ್ ಅಸ್ತಾ ಶತ್ರೂಣಾಂ ಕ್ಷೇಪ್ತಾಸಿ । ತಪಿಷ್ಠೈಸ್ತಪ್ತ್ರತಮೈಸ್ತೇಜೋಭೀ ರಕ್ಷಸೋ ರಾಕ್ಷಸಾನ್ವಿಧ್ಯ । ತಾಡಯ ॥ ಅತ್ರ ನಿರುಕ್ತಂ । ಕುರುಷ್ವ ಪಾಜಃ । ಪಾಜಃ ಪಾಲನಾತ್ । ಪ್ರಸಿತಿಮಿವ ಪೃಥ್ವೀಂ । ಪ್ರಸಿತಿಃ ಪ್ರಸಹನಾತ್ತಂತುರ್ವಾ ಜಾಲಂ ವಾ । ಯಾಹಿ ರಾಜೇವಾಮಾತ್ಯವಾನಭ್ಯಮನವಾ-

CC-0. Jangamwadi Math Collection. Digitized by eGangotri

ಸ್ವಾನ್ಸ್ವಾನ್ಸ್ವೇರಾವತಾ ಗಣೇನ ಗತಭಯೇನ ಹಸ್ತಿನೇತಿ ವಾ । ತೃಷ್ವ್ಯಾನು ಪ್ರಸಿತ್ಯಾ ದ್ರೂಣಾನಃ । ತೃಷ್ವೀತಿ ಕ್ಷಿಪ್ರನಾಮ ತರತೇರ್ವಾ ತ್ವರತೇರ್ವಾ । ಅಸ್ತಾಸಿ ವಿಧ್ಯ ರಕ್ಷಸಸ್ತಪಿಷ್ಠೈಸ್ತಪ್ತತಮೈಸ್ತಪಿಷ್ಠತಮೈರಿತಿ ವಾ । ನಿ. ೬-೧೨ । ಇತಿ ॥ ಕೃಣುಷ್ವ । ಕೃವಿ ಹಿಂಸಾಕರಣಯೋಃ । ಲೋಟಿ ಧಿನ್ವಿಕೃಣ್ವ್ಯೋರ ಚ್ಚೇತ್ಯುಪ್ರತ್ಯಯಃ । ವ್ಯತ್ಯಯೇನಾತ್ಮನೇಪದಂ । ವಿಕರಣಸ್ವರಸ್ತು ಸತಿ ಶಿಷ್ಟೋಽಪಿ ಲಸಾರ್ವಧಾತುಕ ಸ್ವರಂ ನ ಬಾಧತ ಇತಿ ಲಸಾರ್ವಧಾತುಕಸ್ವರಃ । ಮು. ೬-೧-೧೫೮-೧೧ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಪೃಥ್ವೀಂ—ವಿಸ್ತೃತವಾದ । ಪ್ರಸಿತಂ ನ—ಬಲೆಯನ್ನು (ವ್ಯಾಧನು) ಹರಡುವಂತೆ । ಪಾಜಃ—ನಿನ್ನ ತೇಜಃಸಮುದಾಯವನ್ನು । ಕೃಣುಷ್ವ—ವಿಸ್ತರಿಸು । ಇಭೇನ—ಗಜವನ್ನು ಹತ್ತಿ । ಅಮವಾನ್—ಪರಿವಾರದೊಡಗೂಡಿದ । ರಾಜಾ ಇವ—ದೊರೆಯು ದಂಡಯಾತ್ರೆಯನ್ನು ಹೊರಡುವಂತೆ । (ಇಭೇನ—ನಿನ್ನ ತೇಜಸ್ಸುಗಳೊಡಗೂಡಿ) । ಯಾಹಿ—ಶತ್ರುನಾಶಕ್ಕಾಗಿ ಹೊರಡು । ಪ್ರಸಿತಿಂ—ಉತ್ಕೃಷ್ಟವಾದ ಸೇನೆಯನ್ನು । ಅನು ದ್ರೂಣಾನಃ—ಹಿಂಬಾಲಿಸುತ್ತಾ । ಅಸ್ತಾ ಅಸಿ—ಶತ್ರುಗಳನ್ನು ಚದುರಿಸುವವನಾಗಿದ್ದೀಯೆ। ತಪಿಷ್ಠೈಃ—ತಾಪಕಾರಿಗಳಾದ ತೇಜಸ್ಸುಗಳಿಂದ । ರಕ್ಷಸಃ—ರಾಕ್ಷಸರನ್ನು । ವಿಧ್ಯ—ಸದೆಬಡಿ.

ಭಾವಾರ್ಥ

ಎಲೈ ಅಗ್ನಿಯೇ, ವಿಸ್ತೃತವಾದ ಬಲೆಯನ್ನು ವ್ಯಾಧನು ಬೀಸಿ ಹರಡುವಂತೆ ನಿನ್ನ ತೇಜಃಸಮುದಾಯವನ್ನು ವಿಸ್ತರಿಸು. ಗಜವನ್ನು ಹತ್ತಿ ಪರಿವಾರದೊಡಗೂಡಿದ ದೊರೆಯು ದಂಡಯಾತ್ರೆಗಾಗಿ ಹೊರಡುವಂತೆ ನೀನು ನಿನ್ನ ತೇಜಸ್ಸುಗಳೊಡಗೂಡಿ ಶತ್ರುನಾಶಕ್ಕಾಗಿ ಹೊರಡು. ಉತ್ಕೃಷ್ಟವಾದ ಸೇನೆಯನ್ನು ಹಿಂಬಾಲಿಸುತ್ತಾ ನೀನು ಶತ್ರುಗಳನ್ನು ಚದುರಿಸುವವನಾಗಿದ್ದೀಯೆ. ತಾಪಕಾರಿಗಳಾದ ತೇಜಸ್ಸುಗಳಿಂದ ನೀನು ರಾಕ್ಷಸರನ್ನು ಸದೆಬಡಿ.

English Translation

Put forth your strength, Agni, as a fowler spreads a capacious snare : proceed like a king attended by his followers on his elephant : you are the scatterer ( of your foes ); following the swift-moving host consume the Rakshasas with your fierce flames

ವಿಶೇಷವಿಷಯಗಳು

ಅಮವಾನ್—ಈ ಶಬ್ದದ ನಿರ್ವಚನವನ್ನು ಹೇಳುವಾಗ ಯಾಸ್ಕರು ಕೃಣುಷ್ವ ಪಾಜಃ ಎಂಬ ಈ ಋಕ್ಕಿಗೆ ನಿರ್ವಚನವನ್ನು ಹೇಳಿದಾರೆ—

ಕುರುಷ್ವ ಪಾಜಃ । ಪಾಜಃ ಪಾಲನಾತ್ । ಪ್ರಸಿತಿಮಿವ ಪೃಥ್ವೀಂ । ಪ್ರಸಿತಿಃ ಪ್ರಸಯನಾತ್ ತಂತುರ್ವಾ ಜಾಲಂ ವಾ। ಯಾಹಿ ರಾಜೇವಾಮಾತ್ಯವಾನಭ್ಯಮನವಾನ್ ಸ್ವವಾನ್ಸ್ವೇರಾಭೃತಾ ಗಣೇನ ಗತಭಯೇನ ಹಸ್ತಿನೇತಿ ವಾ । ತೃಷ್ವ್ಯಾನು ಪ್ರಸಿತ್ಯಾ ದ್ರೂಣಾನಃ । ತೃಷ್ವೀತಿ ಕ್ಷಿಪ್ರನಾಮ ತರತೇರ್ವಾ ತ್ವರತೇರ್ವಾ । ಅಸಿತಾಸಿ ವಿಧ್ಯರಕ್ಷಸಸ್ತಪಿಷ್ಠೈಸ್ತಪ್ತತಮೈಸ್ತೃಪ್ತತಮೈಃ ಪ್ರಪಿಷ್ಟತಮೈರಿತಿ ವಾ ।

(ನಿ. ೬-೧೨)

CC-0. Jangamwadi Math Collection. Digitized by eGangotri

ಎಲೈ ಅಗ್ನಿಯೇ ನಿನ್ನ ಬಲವನ್ನು ವಿಸ್ತರಿಸು. ಪಾಜಃ ಶಬ್ದವು ಪಾಲನವೆಂಬ ಅರ್ಥವನ್ನು ಸೂಚಿಸುವುದು. ಪ್ರಸಿತಿ ಶಬ್ದವು ಪ್ರ+ಸಿ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಕಟ್ಟು, ಬಂಧಿಸು ಎಂಬರ್ಥವನ್ನು ಕೊಡುವುದು. ಆದ್ದರಿಂದ ಪ್ರಸಿತಿ ಎಂದರೆ ದಾರ ಅಥವಾ ಬಲೆ ಎಂದರ್ಥವು. ಇಲ್ಲಿ ಅಗ್ನಿಯನ್ನು ರಾಜನಂತೆ ಹೋಗು ಎಂದು ಸಂಬೋಧಿಸಿದೆ. ರಾಜನು ಹೋಗುವ ಕ್ರಮವು ಈರೀತಿ ವರ್ಣಿತವಾಗಿದೆ. ಅಮಾತ್ಯ (ಸಚಿವ)ನಿಂದ ಸಹಿತವಾದ ರಾಜನಂತೆ, ಅಥವಾ ತನ್ನ ವೈರಿಗಳಿಗೆ ಭಯಂಕರನಾಗಿ ಹೋಗುವಂತೆ, ಅಥವಾ ತನ್ನ ಅನುಚರರೊಡನೆ ಸಹಿತವಾಗಿ ಹೋಗುವಂತೆ, ಅಥವಾ ಭಯರಹಿತವಾದ ಆನೆಯಮೇಲೆ ಕುಳಿತು ಹೋಗುವಂತೆ ಹೋಗು ಎಂದು ಅಗ್ನಿಯನ್ನು ಸ್ತುತಿಸಲಾಗಿದೆ. ತೃಷ್ವೀ ಎಂದರೆ ಬೇಗ ಎಂದರ್ಥವು. ಈ ಶಬ್ದವು ತರತಿ ಧಾತುವಿನಿಂದಾಗಲಿ, ತ್ವರತಿ ಧಾತುವಿನಿಂದಾಗಲಿ ನಿಷ್ಪನ್ನವಾಗ ಬಹುದು. ಎಲೈ ಅಗ್ನಿಯೇ, ನೀನು ರಾಕ್ಷಸರನ್ನು ಬಾಣಗಳಿಂದ ಪ್ರಹರಿಸು, ಹಿಂಸಿಸು ಮತ್ತು ಸುಡುತ್ತಿರುವ ಅಥವಾ ಉರಿಯುತ್ತಿರುವ ಮೊನಚಾದ ಶಲ್ಯ (ಭರ್ಜಿ)ಗಳಿಂದ ತಿವಿ, ಚೂರ್ಣಮಾಡು, ಧ್ವಂಸಮಾಡು ಎಂದು ಅಗ್ನಿಯನ್ನು ಸ್ತುತಿಸಲಾಗಿದೆ.

ಸಂಹಿತಾಪಾಠಃ

ತವ ಭ್ರಮಾಸ ಆಶುಯಾ ಪತಂತ್ಯನು ಸ್ಪೃಶ ಧೃಷತಾ ಶೋಶುಚಾನಃ ।

ತಪೂಂಷ್ಯಗ್ನೇ ಜುಹ್ವಾ ಪತಂಗಾನಸಂದಿತೋ ವಿ ಸೃಜ ವಿಷ್ವಗುಲ್ಕಾಃ ।೨॥

ಪದಪಾಠಃ

ತವ । ಭ್ರಮಾಸಃ । ಆಶುಯಾ । ಪತಂತಿ । ಅನು । ಸ್ಪೃಶ । ಧೃಷತಾ । ಶೋಶುಚಾನಃ ।

ತಪೂಂಷಿ । ಅಗ್ನೇ । ಜುಹ್ವಾ । ಪತಂಗಾನ್ । ಅಸಂದಿತಃ । ವಿ । ಸೃಜ । ವಿಷ್ವಕ್ । ಉಲ್ಕಾಃ ॥ ೨ ॥

ಸಾಯಣಭಾಷ್ಯಂ

ಹೇ ಅಗ್ನೇ ತವ ಸಂಬಂಧಿನೋ ಭ್ರಮಾಸೋ ಭ್ರಾಮ್ಯಂತ ಆಶುಯಾ ಶೀಘ್ರಗತಯೋ ರಶ್ಮಯಃ ಪತಂತಿ । ಸರ್ವತಃ ಪ್ರಸರಂತಿ । ಶೋಶುಚಾನೋ ಭೃಶಂ ದೀಪ್ಯಮಾನಸ್ತ್ವಂ ಧೃಷತಾಭಿಭವಸಮರ್ಥೇನ ತೇಜಃಸಂಘೇನ ಶತ್ರೂನನು ಕ್ರಮೇಣ ಸ್ಪೃಶ । ದಹ । ದಹನೋಪಾಯಂ ದರ್ಶಯತಿ । ಅಸಂದಿತಃ ಪರ್ರೈರನಿರುದ್ಧಸ್ತ್ವಂ ತಪೂಂಷಿ ತಾಪಕಾನಿ ತೇಜಾಂಸಿ ಪತಂಗಾನ್ ಪತನಶೀಲಾನ್ವಿಸ್ಫುಲಿಂಗಾನುಲ್ಕಾ-ಶ್ಚೇತ್ಯೇತತ್ತ್ರಿತಯಂ ಜುಹ್ವಾ । ಹೂಯಂತೇಽಸ್ಯಾಮಾಹುತಯ ಇತಿ ಜುಹೂರ್ಜ್ವಾಲಾ । ತಯಾ ವಿಷ್ವಕ್ ಸರ್ವತೋ ವಿ ಸೃಜ । ಪ್ರಸಾರಯ ॥ ಆಶುಯಾ । ಆಶುಶಬ್ದಾಜ್ಜಸಃ ಸುಪಾಂ ಸುಲುಗಿತಿ ಯಾಜಾದೇಶಃ। ಚಿತ್ಸ್ವರಃ । ಧೃಷತಾ । ಧೃಷ ಪ್ರಸಹನೇ । ಚುರಾದಿರಾಧೃಷೀಯಃ । ವ್ಯತ್ಯಯೇನ ಶಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಜುಹ್ವಾ । ಜುಹೋತೇರ್ದೀರ್ಘಶ್ಚೇತಿ ಕ್ವಿಪ್ ದ್ವಿರ್ವಚನಂ ದೀರ್ಘತ್ವಂ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಸ್ಯ ನೋಙ್ಧಾತ್ವೋರಿತಿ ಪ್ರತಿಷೇಧ ಉದಾತ್ತ-

CC-0. Jangamwadi Math Collection. Digitized by eGangotri

ಸ್ವರಿತಯೋರ್ಯಣ ಇತಿ ಸ್ವರಿತತ್ವಂ । ಅಸಂದಿತಃ । ದೋ ಅವಖಂಡನೇ । ಕರ್ಮಣಿ ನಿಷ್ಠಾ । ದ್ಯತಿಸ್ಯತೀತೀತ್ವಂ । ನಞಾ ಸಮಾಸೇ ತಸ್ಯ ಸ್ವರಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತವ—ನಿನ್ನ । ಭ್ರಮಾಸಃ—ಸಂಚರಿಸತಕ್ಕವೂ । ಆಶುಯಾ-ಶೀಘ್ರವಾಗಿ। ಚಲಿಸತಕ್ಕವೂ ಆದ ರಶ್ಮಿಗಳು। ಪತಂತಿ—ಸರ್ವತ್ರ ಪ್ರಸರಿಸುತ್ತವೆ। ಶೋಶುಚಾನಃ—ಬಹುವಾಗಿ ಪ್ರಕಾಶಿತನಾದ ನೀನು । ಧೃಷತಾ—ಶತ್ರುನಿರೋಧಕವಾದ ತೇಜಸ್ಸಿನೊಡನೆ । ಅನು—ಕ್ರಮವಾಗಿ । ಸ್ಪೃಶ—(ಶತ್ರುಗಳನ್ನು) ದಹಿಸು । ಅಸಂದಿತಃ—ಶತ್ರುಗಳಿಂದ ತಡೆಯಲ್ಪಡದ ನೀನು । ತಪೂಂಷಿ—ದಾಹಾತ್ಮಕಗಳಾದ ತೇಜಸ್ಸುಗಳನ್ನೂ । ಪತಂಗಾನ್—ಕಿಡಿಗಳನ್ನೂ । ಉಲ್ಕಾಃ—ಪಂಜುಗಳನ್ನೂ । ಜುಹ್ವಾ—ನಿನ್ನ ಜ್ವಾಲೆಯೊಡನೆ । ವಿಷ್ವಕ್—ಸರ್ವತ್ರ । ವಿ ಸೃಜ—ಪ್ರಸರಿಸು.

ಭಾವಾರ್ಥ

ಎಲೈ ಅಗ್ನಿಯೇ, ಸಂಚರಿಸತಕ್ಕವೂ, ಶೀಘ್ರವಾಗಿ ಚಲಿಸತಕ್ಕವೂ ಆದ ನಿನ್ನ ರಶ್ಮಿಗಳು ಸರ್ವತ್ರ ಪ್ರಸರಿಸುತ್ತವೆ. ಬಹುವಾಗಿ ಪ್ರಕಾಶಿತನಾದ ನೀನು ಶತ್ರುನಿರೋಧಕವಾದ ತೇಜಸ್ಸಿನೊಡನೆ ಕ್ರಮವಾಗಿ ಶತ್ರುಗಳನ್ನು ದಹಿಸು. ಶತ್ರುಗಳಿಂದ ತಡೆಯಲ್ಪಡದ ನೀನು ನಿನ್ನ ದಾಹಾತ್ಮಕಗಳಾದ ತೇಜಸ್ಸುಗಳನ್ನೂ ಕಿಡಿಗಳನ್ನೂ ಪಂಜುಗಳನ್ನೂ ನಿನ್ನ ಜ್ವಾಲೆಯೊಡನೆ ಸರ್ವತ್ರ ಪ್ರಸರಿಸು.

English Translation

your swift and errant flames descend (on every side); fierce-shining with vigour consume (the foe); scatter, Agni, with the ladle (of oblation), scorching flames, and sparks, and brands.

---

ಸಂಹಿತಾಪಾಠಃ

ಪ್ರತಿ ಸ್ಪಶೋ ವಿ ಸೃಜ ತೂರ್ಣಿತಮೋ ಭವಾ ಪಾಯುರ್ವಿಶೋ ಅಸ್ಯಾ ಅದಬ್ಧಃ ।
ಯೋ ನೋ ದೂರೇ ಅಘಶಂಸೋ ಯೋ ಅಂತ್ಯಗ್ನೇ ಮಾಕಿಷ್ಟೇ ವ್ಯಥಿರಾ ದಧರ್ಷೀತ್ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಪ್ರತಿ । ಸ್ಪಶಃ । ವಿ । ಸೃಜ । ತೂರ್ಣಿಽತಮಃ । ಭವ । ಪಾಯುಃ । ವಿಶಃ । ಅಸ್ಯಾಃ । ಅದಬ್ಧಃ ।

ಯಃ । ನಃ । ದೂರೇ । ಅಘಽಶಂಸಃ । ಯಃ । ಅಂತಿ । ಅಗ್ನೇ । ಮಾಕಿಃ । ತೇ । ವ್ಯಥಿಃ । ಆ । ದಧರ್ಷೀತ್ ॥ ೩ ॥

ಸಾಯಣಭಾಷ್ಯಂ

ಹೇ ಅಗ್ನೇ ತೂರ್ಣಿತಮಸ್ತ್ವರಿತತಮಸ್ತ್ವಂ ಸ್ಪಶಃ ಪರಬಾಧಕಾನ್ರಶ್ಮೀನ್ ಚಾರಾನ್ವಾ ಸತ್ಯಾನೃತ-ವಿವೇಕಾರ್ಥಂ ವಿ ಸೃಜ । ಶತ್ರೂನ್ಪ್ರತಿ ವಿಶೇಷೇಣ ಪ್ರೇರಯ । ಅದಬ್ಧಃ ಕೇನಾಪ್ಯಹಿಂಸಿತಸ್ತ್ವಮಸ್ಯಾ-ಸ್ತ್ವದೀಯಾಯಾ ವಿಶೋಽಸ್ಮದಾದಿಕಾಯಾಃ ಪ್ರಜಾಯಾಃ ಪಾಯುಃ ಪಾಲಕೋ ಭವ । ಕಸ್ಮಾತ್ತ್ರದ್ರಕ್ಷಣ-ಮಿತ್ಯಪೇಕ್ಷಾಯಾಮಾಹ । ನೋಽಸ್ಮಾಕಂ ದೂರೇ ಯೋಽಘಶಂಸಃ । ಅಘಂ ಪಾಪಾತ್ಮಕಂ ಶಂಸನಮಭಿ-ಲಾಷಃ ಕೀರ್ತನಂ ವಾ ಯಸ್ಯ ಸೋಽಘಶಂಸಃ । ಯಶ್ಚಾಘಶಂಸೋಽಂತ್ಯಸ್ಮಾಕಂ ಸಮೀಪೇ ತಿಷ್ಠತಿ ತಸ್ಮಾದುಭಯವಿಧಾಚ್ಛತ್ರೋಃ ಪಾಲಕೋ ಭವ । ಕಿಂಚ ತೇ ತ್ವತ್ಸಂಬಂಧಿನೋಽಸ್ಮಾನ್ಮಾಕಿರ್ನ ಕಶ್ಚಿದಪಿ ವ್ಯಥಿರ್ಬಾಧಕೋ ರಾಕ್ಷಸ ಆ ದಧರ್ಷೀತ್ । ಆಧರ್ಷಯತು । ಅಸ್ಮಾಕಂ ಕಶ್ಚಿದಪಿ ಪರಿಭವಂ ಮಾ ಕರೋತ್ವಿತ್ಯರ್ಥಃ ॥ ಅಂತಿ । ಅಂತಿಕಸ್ಯ ಕಾದಿಲೋಪ ಆದ್ಯುದಾತ್ತತ್ವಂ ಚ । ಅಗ್ನೇ । ಪಾದಾದಿತ್ವಾತ್ಷಾಷ್ಠಿಕಮಾದ್ಯುದಾತ್ತತ್ವಂ । ಮಾಕಿಷ್ಟ ಇತಿ ಸಂಹಿತಾಯಾಂ ಯುಷ್ಮತ್ತತ್ತತಕ್ಷುಃಷ್ವಂತಃ ಪಾದಮಿತಿ ಷತ್ವಂ । ದಧರ್ಷೀತ್ । ಧೃಷ ಪ್ರಸಹನೇ । ಲಙಿ ಬಹುಲಂ ಛಂದಸೀತಿ ಶಪಃ ಶ್ಲುಃ । ಬಹುಲಂ ಛಂದಸೀತಿ ತಿಪ ಈಡಾಗಮಃ । ನಿಘಾತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತೂರ್ಣಿತಮಃ—ವೇಗವಾದ ಚಲನವುಳ್ಳ ನೀನು । ಸ್ಪಶಃ—ಶತ್ರುಹಿಂಸಕಗಳಾದ ನಿನ್ನ ರಶ್ಮಿಗಳನ್ನು । ಪ್ರತಿ ವಿ ಸೃಜ—ಪ್ರಸರಿಸು ಮತ್ತು ಪ್ರೇರಿಸು । ಅದಬ್ಧಃ—ಯಾರಿಂದಲೂ ಹಿಂಸಿತನಾಗದ ನೀನು । ಅಸ್ಯಾಃ—ನಿನಗೆ ಸಂಬಂಧಿಸಿದ । ವಿಶಃ—ಪ್ರಜೆಗಳಾದ ನಮಗೆ । ಪಾಯುಃ—ಪಾಲಕನಾಗಿ । ಭವ—ಆಗು । ನಃ—ನಮಗೆ । ದೂರೇ—ದೂರದಲ್ಲಿ । ಯಃ—ಯಾವ । ಅಘಶಂಸಃ—ಪಾಪಕಾರಿಯು । ಯಃ—ಯಾವ ಪಾಪೇಚ್ಛುವು । ಅಂತಿ—ಸಮೀಪದಲ್ಲಿದ್ದಾನೋ (ಅವರೆಲ್ಲರಿಂದಲೂ ನಮ್ಮನ್ನು ರಕ್ಷಿಸು) । ತೇ—ನಿನಗೆ ಸೇರಿದ ನಮ್ಮನ್ನು । ಮಾಕಿಃ—ಯಾರೂ ಕೂಡ । ವ್ಯಥಿಃ—ಹಿಂಸಾಕಾರಕನಾಗಿ । ಆ ದಧರ್ಷೀತ್—ಮೇಲೆ ಬೀಳದಿರಲಿ.

ಭಾವಾರ್ಥ

ಎಲೈ ಅಗ್ನಿಯೇ, ವೇಗವಾದ ಚಲನವುಳ್ಳ ನೀನು ಶತ್ರುಹಿಂಸಕಗಳಾದ ನಿನ್ನ ರಶ್ಮಿಗಳನ್ನು ಪ್ರಸರಿಸು. ಯಾರಿಂದಲೂ ಹಿಂಸಿತನಾಗದ ನೀನು ನಿನಗೆ ಸಂಬಂಧಿಸಿದ ಪ್ರಜೆಗಳಾದ ನಮಗೆ ದೂರದಲ್ಲಾಗಲಿ, ಹತ್ತಿರದಲ್ಲಾಗಲಿ ಯಾವ ಪಾಪಕಾರಿಯಿದ್ದಾನೋ ಅವರೆಲ್ಲರಿಂದಲೂ ರಕ್ಷಿಸು. ನಿನಗೆ ಸೇರಿದ ನಮ್ಮನ್ನು ಯಾರೂ ಮೇಲೆ ಬಿದ್ದು ಹಿಂಸಿಸದಿರಲಿ.

CC-0. Jangamwadi Math Collection. Digitized by eGangotri

English Translation

You, who are most rapid, direct your (flames) against opposing (rays), and, unresisted, become the protector of this your people against the calumiator who is remote or who is nigh : let no malevolent (foe) prevail against us (who are) your worshippers.

ಸಂಹಿತಾಪಾಠಃ

ಉದಗ್ನೇ ತಿಷ್ಠ ಪ್ರತ್ಯಾ ತನುಷ್ವ ನ್ಯ೧ಮಿತ್ರಾಁ ಓಷತಾತ್ತಿಗ್ಮಹೇತೇ ।
ಯೋ ನೋ ಅರಾತಿಂ ಸಮಿಧಾನ ಚಕ್ರೇ ನೀಚಾ ತಂ ಧಕ್ಷ್ಯತಸಂ ನ ಶುಷ್ಕಂ ॥ ೪ ॥

ಪದಪಾಠಃ

ಉತ್ । ಅಗ್ನೇ । ತಿಷ್ಠ । ಪ್ರತಿ । ಆ । ತನುಷ್ವ । ನಿ । ಅಮಿತ್ರಾನ್ । ಓಷತಾತ್ । ತಿಗ್ಮಽಹೇತೇ ।
ಯಃ । ನಃ । ಅರಾತಿಂ । ಸಮ್ಽಇಧಾನ । ಚಕ್ರೇ । ನೀಚಾ । ತಮ್ । ಧಕ್ಷಿ । ಅತಸಂ । ನ । ಶುಷ್ಕಂ ॥

ಸಾಯಣಭಾಷ್ಯಂ

ತಿಗ್ಮಹೇತೇ । ತಿಗ್ಮಾಸ್ತೀಕ್ಷ್ಣಾ ಹೇತಯೋ ಜ್ವಾಲಾ ಯಸ್ಯ ಸ ತಥೋಕ್ತಃ । ತಾದೃಶ ಹೇ ಅಗ್ನೇ ಉತ್ತಿಷ್ಠ । ರಕ್ಷೋಹನನಾರ್ಥಮುದ್ಯತೋ ಭವ । ಶತ್ರೂನ್ಪ್ರತ್ಯಾ ತನುಷ್ವ । ಜ್ವಾಲಾಸಂಘಂ ವಿಸ್ತಾರಯ । ತೈಸ್ತೇಜಃಸಂಘೈರಮಿತ್ರಾನ್ ಶತ್ರೂನ್ನ್ಯೋಷತಾತ್ । ನಿತರಾಂ ದಹ । ಹೇ ಸಮಿಧಾನ ಸಮಿದ್ಭಿರ್ದೀಪ್ಯಮಾನಾಗ್ನೇ ಯಃ ಪುಮಾನ್ ನೋಽಸ್ಮಾಕಮರಾತಿಂ । ಭಾವಪ್ರಧಾನನಿರ್ದೇಶಃ । ಅರಾತಿತ್ವಂ । ಶಾತ್ರವಂ ಚಕ್ರೇ । ಕುರುತೇ । ಅರಾತಿಮದಾನಂ ವಾ ಕುರುತೇ । ತಂ ಪುಮಾಂಸಂ ನೀಚಾ ನ್ಯಗ್ಭೂತಂ ಧಕ್ಷಿ । ದಹ । ತತ್ರ ದೃಷ್ಟಾಂತಃ । ಅತಸಂ ನ । ಯಥಾ ಶುಷ್ಕಮನಾರ್ದ್ರಮತಸಂ ಕಾಷ್ಠಂ ದಹಸಿ ತದ್ವತ್ ॥ ಓಷತಾತ್ । ಉಷ ದಾಹೇ । ಲೋಟಿ ಹೇಸ್ತಾತ್ಹ್ಯೋರಿತಿ ತಾತಜಾದೇಶಃ । ಧಕ್ಷಿ । ದಹೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಹೋ ಢ ಇತಿ ಢತ್ವಂ । ಭಷ್ಭಾವಃ । ಷಢೋಃ ಕಃ ಸೀತಿ ಕತ್ವಂ । ನಿಘಾತಃ ॥

ಪ್ರತಿಪದಾರ್ಥ

ತಿಗ್ಮಹೇತೇ—ತೀಕ್ಷ್ಣವಾದ ಜ್ವಾಲೆಗಳುಳ್ಳ । ಅಗ್ನೇ—ಎಲೈಅಗ್ನಿಯೇ । ಉತ್ತಿಷ್ಠ—ಶತ್ರುಹನನಕ್ಕಾಗಿ ಏಳು । ಪತ್ಯಾ ನಿನ್ನ ಜ್ವಾಲಾಸಮುದಾಯವನ್ನು । ಆ ತನುಷ್ವ—ವಿಸ್ತರಿಸು । ಅಮಿತ್ರಾನ್— ಶತ್ರುಗಳನ್ನು

CC-0. Jangamwadi Math Collection. Digitized by eGangotri

ನಿ ಓಷತಾತ್-ಪೂರ್ಣವಾಗಿ ದಹಿಸು । ಸಮಿಧಾನ-ಸಮಿತ್ತುಗಳಿಂದ ಪ್ರಜ್ವಲಿತನಾಗುವ ಎಲೈ ಅಗ್ನಿಯೇ । ಯಃ-ಯಾವ ಪುರುಷನು। ನಃ—ನಮ್ಮ। ಅರಾತಿಂ—ಶತ್ರುತ್ವವನ್ನು। ಚಕ್ರೇ—ಬೆಳೆಸುತ್ತಾನೆಯೋ । ತಂ—ಅವನನ್ನು। ನೀಚಾ—ಕೆಳಕ್ಕೆ ತಳ್ಳಿ । ಶುಷ್ಕಂ—ಒಣಗಿದ । ಅತಸಂ ನ—ಕಾಷ್ಠವನ್ನು ದಹಿಸುವಂತೆ । ಧಕ್ಷಿ—ದಹಿಸು.

ಭಾವಾರ್ಥ

ತೀಕ್ಷ್ಣವಾದ ಜ್ವಾಲೆಗಳುಳ್ಳ ಎಲೈ ಅಗ್ನಿಯೇ, ಶತ್ರುಹನನಕ್ಕಾಗಿ ಸಿದ್ಧಪಡಿಸಿಕೊ. ನಿನ್ನ ಜ್ವಾಲಾಸಮುದಾಯವನ್ನು ವಿಸ್ತರಿಸು. ಶತ್ರುಗಳನ್ನು ಪೂರ್ಣವಾಗಿ ದಹಿಸು. ಸಮಿತ್ತುಗಳಿಂದ ಪ್ರಜ್ವಲಿತನಾಗುವ ಎಲೈ ಅಗ್ನಿಯೆ, ಯಾವ ಪುರುಷನು ನಮ್ಮ ವಿಷಯದಲ್ಲಿ ಶತ್ರುತ್ವವನ್ನು ಬೆಳೆಸುತ್ತಾನೆಯೋ ಅವನನ್ನು ದಹಿಸು.

English Translatiou

Sharp-weaponed Agni, rise up ; spread wide (your flames)against (the Rakshasas) ; entirely consume the foes ; blazing Agni,burn down him who acts as an enemy towards us like a piece of dry timber.

———

ಸಂಹಿತಾಪಾಠಃ

ಊರ್ಧ್ವೋ ಭವ ಪ್ರತಿ ವಿಧ್ಯಾಧ್ಯಸ್ಮದಾವಿಷ್ಕೃಣುಷ್ವ ದೈವ್ಯಾನ್ಯಗ್ನೇ ।
ಅವ ಸ್ಥಿರಾ ತನುಹಿ ಯಾತುಜೂನಾಂ ಜಾಮಿಮಜಾಮಿಂ ಪ್ರ ಮೃಣೀಹಿ ಶತ್ರೂನ್ ॥ ೫ ॥

ಪದಪಾಠಃ

ಊರ್ಧ್ವಃ । ಭವ । ಪ್ರತಿ । ವಿಧ್ಯ । ಅಧಿ । ಅಸ್ಮತ್ । ಆವಿಃ । ಕೃಣುಷ್ವ । ದೈವ್ಯಾನಿ । ಅಗ್ನೇ ।
ಅವ । ಸ್ಥಿರಾ । ತನುಹಿ । ಯಾತುಽಜೂನಾಂ । ಜಾಮಿಂ । ಅಜಾಮಿಂ । ಪ್ರ । ಮೃಣೀಹಿ । ಶತ್ರೂನ್ ॥

ಸಾಯಣಭಾಷ್ಯಂ

ಹೇ ಅಗ್ನೇ ಊರ್ಧ್ವೋ ಭವ । ರಕ್ಷೋಹನನಾರ್ಥಮುದ್ಯುಕ್ತೋ ಭವ । ಅಸ್ಮದಸ್ಮತ್ತೋಽಧಿ ಅಧಿಕಾನ್ರಾಕ್ಷಸಾನ್ ಪ್ರತಿ ವಿಧ್ಯ । ಪ್ರತ್ಯೇಕಂ ತಾಡಯ । ದೈವ್ಯಾನಿ ತೇಜಾಂಸಿ ಚಾವಿಷ್ಕೃಣುಷ್ವ । ಆವಿಷ್ಕುರು । ಏತತ್ತ್ರಯಂ ವಿಧಾಯ ಯಾತುಜೂನಾಂ ಯಾತಯಿತುಂ ಪ್ರಾಣಿನಃ ಕ್ಲೇಶಯಿತುಂ ಯೇ ಜವಂ ಕುರ್ವಂತಿ ತೇಷಾಂ ಯಾತುಧಾನಾನಾಂ ಸ್ಥಿರಾ ದೃಢಾನಿ ಧನೂಂಷ್ಯವ ತನುಹಿ । ಅವಗತಜ್ಯಾನಿ



CC-0. Jangamwadi Math Collection. Digitized by eGangotri

ಕುರು । ಕಿಂಚ ಜಾಮಿಮಜಾಮಿಂ ಬಂಧುಮಬಂಧುಂ ಶತ್ರೂನ್ಸ್ವ್ ವೃಣೀಹಿ । ಪ್ರಜಹಿ । ಯದ್ವಾ । ಜಾಮಿಂ ಯಃ ಪೂರ್ವಂ ಪ್ರಹೃತಸ್ತಂ । ಅಜಾಮಿಂ ಪೂರ್ವಮಪ್ರಹೃತಂ । ಏವಂಭೂತಾನ್ ಶತ್ರೂನ್ ಜಹಿ । ಪ್ರಹೃತೋಽಯಮಿತ್ಯಪೇಕ್ಷಾಂ ಮಾ ಕೃಥಾಃ ॥ ಆವಿಷ್ಕೃಣುಷ್ವೇತ್ಯತ್ರ ಸಂಹಿತಾಯಾಮಿದುದು-ಪಧಸ್ಯ ಚಾಪ್ರತ್ಯಯಸ್ಯೇತಿ ಷತ್ವಂ । ತನುಹಿ । ತನೋತೇರ್ಲೋಟ್ಯುತಶ್ಚ ಪ್ರತ್ಯಯಾಚ್ಛಂದಸಿ ವಾವಚನ-ಮಿತಿ ಹೇರ್ಲುಗಭಾವಃ । ಯಾತುಜೂನಾಂ । ಜು ಗತೌ । ಕ್ವಿಬ್ವಚೀತ್ಯಾದಿನಾ ಕ್ವಿಪ್ । ದೀರ್ಘಃ । ಆಮಿ ಛಾಂದಸೋ ನುಮ್ । ವೃಣೀಹಿ । ವೃಙ್ ಪ್ರಾಣತ್ಯಾಗೇ । ಅಂತರ್ಭಾವಿತಣ್ಯರ್ಥಸ್ಯ ಲೋಟಿ ಬಹುಲಂ ಛಂದಸೀತಿ ವಿಕರಣಸ್ಯ ಶ್ನಾ । ನಿಘಾತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । ಊರ್ಧ್ವೋ ಭವ—ಶತ್ರುಜಯಕ್ಕಾಗಿ ಮೇಲಕ್ಕೆದ್ದು ನಿಲ್ಲು । ಅಸ್ಮತ್—ನಮಗಿಂತಲೂ । ಅಧಿ—ಅಧಿಕ ಸಂಖ್ಯೆಯಲ್ಲಿರುವ ಶತ್ರುಗಳನ್ನು । ಪ್ರತಿ ವಿಧ್ಯ—ಪ್ರತ್ಯೇಕವಾಗಿ ಸದೆಬಡಿ । ದೈವ್ಯಾನಿ—ನಿನ್ನ ದಿವ್ಯತೇಜಸ್ಸುಗಳನ್ನು । ಆವಿಷ್ಕೃಣುಷ್ವ—ಪ್ರಕಾಶಪಡಿಸು । ಯಾತುಜೂನಾಂ—ರಾಕ್ಷಸರ । ಸ್ಥಿರಾ—ದೃಢವಾದ ಧನುಸ್ಸುಗಳನ್ನು । ಅವ ತನುಹಿ—ಜ್ಯಾ (ಹೆದೆ) ರಹಿತವನ್ನಾಗಿ ಮಾಡು । ಜಾಮಿಂ—ಬಂಧುವಾಗಲಿ । ಅಜಾಮಿಂ—ಬಂಧುವಲ್ಲದಿರಲಿ । ಶತ್ರೂನ್—ನಮಗೆ ಕೇಡನ್ನು ಕೋರುವವರನ್ನು । ವೃಣೀಹಿ—ಜಯಿಸಿ ವಶಪಡಿಸಿಕೊ.

ಭಾವಾರ್ಥ

ಎಲೈ ಅಗ್ನಿಯೇ, ನೀನು ಶತ್ರುಜಯಕ್ಕಾಗಿ ಉದ್ಯುಕ್ತನಾಗು. ನಮಗಿಂತಲೂ ಅಧಿಕಸಂಖ್ಯೆಯಲ್ಲಿರುವ ಶತೃಗಳನ್ನು ಪ್ರತ್ಯೇಕವಾಗಿ ನಾಶಮಾಡು. ನಿನ್ನ ದಿವ್ಯತೇಜಸ್ಸುಗಳನ್ನು ಪ್ರಕಾಶಪಡಿಸು. ರಾಕ್ಷಸರ ದೃಢವಾದ ಧನುಸ್ಸುಗಳ ಹೆದೆಯುನ್ನು ಕಿತ್ತುಹಾಕು. ನಮಗೆ ಬಂಧುವಾಗಿರಲಿ ಇಲ್ಲದಿರಲಿ, ನಮಗೆ ಕೇಡನ್ನು ಬಯಸುವವರನ್ನು ಜಯಿಸಿ ವಶಪಡಿಸಿಕೊ.

English Translation

Rise up, Agni. chastise those who overpower us ; manifest your divine energies; slacken the strong (bow strings) of the malignant kings ; destroy those (who are hostile), whether kindred or unallied.

———

ಸಂಹಿತಾಪಾಠಃ

ಸ ತೇ ಜಾನಾತಿ ಸುಮತಿಂ ಯವಿಷ್ಠ ಯ ಈವತೇ ಬ್ರಹ್ಮಣೇ ಗಾತುಮೈರತ್ ।
ವಿಶ್ವಾನ್ಯಸ್ಮೈ ಸುದಿನಾನಿ ರಾಯೋ ದ್ಯುಮ್ನಾನ್ಯರ್ಯೋ ವಿ ದುರೋ ಅಭಿ ದ್ಯೌತ್ ॥ ೬ ॥

CC-0. Jangamwadi Math Collection. Digitized by eGangotri

ಪದಪಾಠಃ

ಸಃ । ತೇ । ಜಾನಾತಿ । ಸುಽಮತಿಂ । ಯವಿಷ್ಠ । ಯಃ । ಈವತೇ । ಬ್ರಹ್ಮಣೇ । ಗಾತುಂ । ಐರತ್ ।
ವಿಶ್ವಾನಿ । ಅಸ್ಮೈ । ಸುಽದಿನಾನಿ । ರಾಯಃ । ದ್ಯುಮ್ನಾನಿ । ಅರ್ಯಃ । ವಿ । ದುರಃ । ಅಭಿ । ದ್ಯೌತ್ ॥

ಸಾಯಣಭಾಷ್ಯಂ

ಯವಿಷ್ಠ ಯುವತಮ । ಯದ್ವಾ । ದೇವಾನಾಂ ಹವೀಂಷಿ ಮಿಶ್ರಯಿತೃತಮ ಹೇ ಅಗ್ನೇ ಯಃ ಪುಮಾನೀವತೇ ಗಮನವತೇ ಕಲ್ಯಾಣಹೇತುಭೂತಾಗಮನಾಯ ಬ್ರಹ್ಮಣೇ ಪರಿವೃಢಾಯ ತುಭ್ಯಂ ಗಾತುಂ । ಗೀಯತ ಉಚ್ಚಾರ್ಯತ ಇತಿ ಗಾತುಃ ಸ್ತೋತ್ರಂ । ತದೈರತ್ । ಪ್ರೇರಯತಿ । ಸ ಪುಮಾನ್ ತೇ ತವ ಸುಮತಿಂ ಕಲ್ಯಾಣಕರೀಮನುಗ್ರಹಾತ್ಮಿಕಾಂ ಬುದ್ಧಿಂ ಜಾನಾತಿ । ಲಭತ ಇತ್ಯರ್ಥಃ । ಅಸ್ಮೈ ಸ್ತೋತ್ರಂ ಕೃತವತೇ ಯಜಮಾನಾಯ ತದರ್ಥಂ ವಿಶ್ವಾನಿ ಸುದಿನಾನಿ ಶೋಭನಾನಿ ದಿನಾನಿ ರಾಯೋ ಧನಾನಿ ದ್ಯುಮ್ನಾನಿ ದ್ಯುತಿಮಂತಿ ರತ್ನಕನಕಾದೀನಿ ದುರೋ ಗೃಹಾನಭಿ ಅಭಿಲಕ್ಷ್ಯಾರ್ಯೋ ಯಜ್ಞಾನಾಂ ಸ್ವಾಮೀ ತ್ವಂ ವಿ ದ್ಯೌತ್ । ವಿಶೇಷೇಣ ದ್ಯೋತಸ್ವ । ಕೇಚಿದತ್ರ ವಾಕ್ಯಭೇದಮಂಗೀಕುರ್ವತೇ । ಸ್ತೋತ್ರಂ ಕೃತವತೇ ಯಜಮಾನಾಯ ವಿಶ್ವಾನಿ ಸುದಿನಾನ್ಯಭ್ಯುದಯಕಾರೀಣಿ ಭವಂತಿ । ರಾಯಃ । ರಾಂತಿ ಕ್ಷೀರಾದೀನೀತಿ ರಾಯೋ ಗೋಧನಾನಿ । ದ್ಯುಮ್ನಾನಿ ದ್ಯೋತಮಾನಾನಿ ಕನಕಾದೀನಿ ಚಾಸ್ಮೈ ಭವಂತಿ। ಅರ್ಯಃ ಕರ್ಮಣಾಮನುಷ್ಠಾತಾ ಸ ಯಜಮಾನೋ ದುರೋ ಗೃಹಾನಭಿ ವಿ ದ್ಯೌತ್ । ವಿಶೇಷೇಣ ದ್ಯೋತತೇ ॥ ಈವತೇ । ಈ ಗತೌ । ಕ್ವಿಪ್ । ತದಸ್ಯಾಸ್ತೀತಿ ಮತುಪ್ । ಛಂದಸೀರ ಇತಿ ಮತುಪೋ ವತ್ವಂ । ಐರತ್ । ಈರ ಗತೌ । ಯದ್ವೃತ್ತಯೋಗಾದನಿಘಾತಃ । ಅರ್ಯಃ । ಋ ಗತೌ । ಅರ್ಯಃ ಸ್ವಾಮಿವೈಶ್ಯಯೋರಿತಿ ಯತ್ಪ್ರತ್ಯಯಾಂತೋ ನಿಪಾತಿತಃ । ಸ್ವಾಮಿನ್ಯಂತೋದಾತ್ತತ್ವಂ । ದ್ಯೌತ್ । ದ್ಯುತ ದೀಪ್ತೌ । ಛಾಂದಸೇ ಲುಙಿ ದ್ಯುದ್ಭ್ಯೋ ಲುಙೀತಿ ಪರಸ್ಮೈಪದಂ । ಬಹುಲಂ ಛಂದಸೀತ್ಯಡಭಾವಃ ॥

ಪ್ರತಿಪದಾರ್ಥ

ಯವಿಷ್ಠ— ಯುವಕನಾದ ಎಲೈ ಅಗ್ನಿಯೇ । ಯಃ—ಯಾವ ಪುರುಷನು । ಈವತೇ—ಯಜ್ಞಕ್ಕೆ ಆಗಮಿಸುವವನೂ । ಬ್ರಹ್ಮಣೇ—ಬ್ರಹ್ಮಭೂತಾತ್ಮನೂ ಆದ ನಿನ್ನನ್ನುದ್ದೇಶಿಸಿ । ಗಾತುಂ—ಸ್ತೋತ್ರವನ್ನು। ಐರತ್—ಪಠಿಸುವನೋ । ಸಃ—ಅವನು । ತೇ—ನಿನ್ನ । ಸುಮತಿಂ—ಅನುಗ್ರಹಾತ್ಮಕವಾದ ಬುದ್ಧಿಯನ್ನು । ಜಾನಾತಿ—ಹೊಂದುತ್ತಾನೆ । ಅಸ್ಮೈ—ಇಂತಹ ಯಜಮಾನನಿಗೆ । ವಿಶ್ವಾನಿ—ಸಮಸ್ತವಾದ । ಸುದಿನಾನಿ—ಸುಖಕರವಾದ ದಿನಗಳನ್ನೂ । ರಾಯಃ—ಧನಗಳನ್ನೂ । ದ್ಯುಮ್ನಾನಿ—ರತ್ನಾದಿಸಂಪತ್ತುಗಳನ್ನೂ । ದುರಃ ಅಭಿ—ಅವನ ಮನೆಯಲ್ಲಿ । ಅರ್ಯಃ—ಸ್ವಾಮಿಯಾದ ನೀನು । ವಿ ದ್ಯೌತ್—ಪ್ರಕಾಶಿಸುವಂತೆ ಮಾಡು.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಯುವಕನಾದ ಅಗ್ನಿಯೇ, ಯಾವ ಪುರುಷನು ಯಜ್ಞಕ್ಕೆ ಆಗಮಿಸುವವನೂ, ಬ್ರಹ್ಮಭೂತನೂ ಆದ ನಿನ್ನನ್ನುದ್ದೇಶಿಸಿ ಸ್ತೋತ್ರವನ್ನು ಪಠಿಸುವನೋ ಅವನು ನಿನ್ನ ಅನುಗ್ರಹಾತ್ಮಕವಾದ ಬುದ್ಧಿಯನ್ನು ಹೊಂದುತ್ತಾನೆ. ಇಂತಹ ಯಜಮಾನನಿಗಾಗಿ ಸಮಸ್ತ ಧನಕನಕಾದಿ ಸಂಪತ್ತುಗಳನ್ನೂ ಸ್ವಾಮಿಯಾದ ನೀನು ಅವನ ಮನೆಯಲ್ಲಿ ಪ್ರಕಾಶಿಸುವಂತೆ ಮಾಡು.

English Translation

He experiences your good favour, youngest (of the gods), who offers praise to you, a Brahman, coming quickly (to bestow felicity) ; to him are all prosperous days and wealth (of cattle) and treasures ; you, as the lord of sacrifice, shine upon his dewelling.

---

ಸಂಹಿತಾಪಾಠಃ

ಸೇದಗ್ನೇ ಅಸ್ತು ಸುಭಗಃ ಸುದಾನುರ್ಯಸ್ತ್ವಾ ನಿತ್ಯೇನ ಹವಿಷಾ ಯ ಉಕ್ಥೈಃ ।

ಪಿಪ್ರೀಷತಿ ಸ್ವ ಆಯುಷಿ ದುರೋಣೇ ವಿಶ್ವೇದಸ್ಮೈ ಸುದಿನಾ ಸಾಸದಿಷ್ಟಿಃ ॥೭॥

ಪದಪಾಠಃ

ಸಃ । ಇತ್ । ಅಗ್ನೇ । ಅಸ್ತು । ಸುಭಗಃ । ಸುದಾನುಃ । ಯಃ । ತ್ವಾ । ನಿತ್ಯೇನ । ಹವಿಷಾ । ಯಃ । ಉಕ್ಥೈಃ ।

ಪಿಪ್ರೀಷತಿ । ಸ್ವೇ । ಆಯುಷಿ । ದುರೋಣೇ । ವಿಶ್ವಾ । ಇತ್ । ಅಸ್ಮೈ । ಸುದಿನಾ । ಸಾ । ಅಸತ್ । ಇಷ್ಟಿಃ ॥ ೭ ॥

ಸಾಯಣಭಾಷ್ಯಂ

ಹೇ ಅಗ್ನೇ ಯಃ ಪುಮಾನ್ ನಿತ್ಯೇನ ಯಾವಜ್ಜೀವಂ ಸಂಕಲ್ಪಿತೇನಾಗ್ನಿಹೋತ್ರಾದಿಸಾಧನ-ಭೂತೇನ ಹವಿಷಾ ತ್ವಾ ತ್ವಾಂ ಪಿಪ್ರೀಷತಿ । ಪ್ರೀಣಯಿತುಮಿಚ್ಛತಿ । ಯಶ್ಚೋಕ್ಥೈಃ ಶಸ್ತ್ರೈಃ ಪ್ರೀಣಯಿತುಮಿಚ್ಛತಿ ಸೇತ್ ಸ ಏವ ಪುಮಾನ್ ಸುಭಗಃ ಶೋಭನಧನಃ ಸೌಭಾಗ್ಯವಾನ್ವಾ ಸುದಾನುಃ-

CC-0. Jangamwadi Math Collection. Digitized by eGangotri

ಶೋಭನದಾನೋಪೇತಶ್ಚಾಸ್ತು ಕಿಂಚ ದುರೋಣೇ ದುರವನೇ ಕೃಚ್ಛ್ರಲಭ್ಯೇ ಸ್ವೇ ಸ್ವಕೀಯ ಆಯುಷಿ ಶತವರ್ಷಾಖ್ಯೇ ಜೀವನೇ ತಿಷ್ಠತು । ಅಸ್ಮೈ ಯಜಮಾನಾಯ ವಿಶ್ವಾ ಸರ್ವಾಣಿ ಸುದಿನಾ ಶೋಭನಾನಿ ದಿನಾನಿ ಭವಂತು । ಅಸ್ಯ ಸೇಷ್ಟಿಃ ಸ ಯಜ್ಞೋsಸತ್ । ಫಲಸಾಧನಸಮರ್ಥೋ ಭವತು ॥ ಪಿಪ್ರೀಷತಿ । ಪ್ರೀಞ್ ತರ್ಪಣೇ । ಧಾತೋಃ ಕರ್ಮಣ ಇತಿ ಸನ್ । ಅಸತ್ । ಅಸ್ತೇರ್ಲೇಟ್ಯಡಾಗಮಃ । ಇಷ್ಟಿಃ । ಮಂತ್ರೇ ವೃಷೇತ್ಯಾದಿನಾ ಕ್ತಿನ್ನುದಾತ್ತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । ಯಃ—ಯಾವ ಪುರುಷನು । ನಿತ್ಯೇನ—ಶಾಶ್ವತವಾದ । ಹವಿಷಾ—ಹವಿಸ್ಸಿನಿಂದ । ತ್ವಾ—ನಿನ್ನನ್ನು । ಪಿಪ್ರೀಷತಿ—ತೃಪ್ತಿಪಡಿಸಲಿಚ್ಛಿಸುವನೋ,। ಯಃ—ಯಾವನು । ಉಕ್ಥೈಃ—ಶಸ್ತ್ರಮಂತ್ರಗಳಿಂದ ಸಂತೋಷಗೊಳಿಸುವನೋ । ಸಃ ಇತ್—ಆ ಪುರುಷನೇ । ಸುಭಗಃ—ಉತ್ತಮವಾದ ಧನವುಳ್ಳವನಾಗಿಯೂ । ಸುದಾನುಃ—ಉತ್ತಮವಾದ ದಾತೃವಾಗಿಯೂ। ಅಸ್ತು—ಆಗಿರಲಿ । ದುರೋಣೇ—ಶ್ರಮಸಾಧ್ಯವಾದ। ಸ್ವೇ—ತನ್ನ। ಆಯುಷಿ—ನೂರುವರ್ಷಗಳ ಆಯಸ್ಸನ್ನು ಪಡೆಯಲಿ। ಅಸ್ಮೈ—ಈ ಯಜಮಾನನಿಗೆ। ವಿಶ್ವಾ—ಸಮಸ್ತವಾದ । ಸುದಿನಾ—ದಿನಗಳೂ ಮಂಗಳಕರವಾಗಿರಲಿ । ಸಾ ಇಷ್ಟಿಃ—ಇವನ ಯಜ್ಞವು । ಅಸತ್—ಸತ್ಫಲದಾಯಕವಾಗಿರಲಿ.

ಭಾವಾರ್ಥ

ಎಲೈ ಅಗ್ನಿಯೇ, ಯಾವ ಪುರುಷನು ನಿನ್ನನ್ನು ಹವಿಸ್ಸಿನಿಂದ ಶಾಶ್ವತವಾಗಿ ತೃಪ್ತಿಪಡಿಸಲಿಚ್ಛಿಸುವನೋ, ಯಾವನು ಸದಾ ನಿನ್ನನ್ನು ಶಸ್ತ್ರಮಂತ್ರ ಗಳಿಂದ ಸಂತೋಷಗೊಳಿಸುವನೋ ಆದೇ ಪುರುಷನು ಉತ್ತಮವಾದ ಧನವುಳ್ಳವನಾಗಿಯೂ, ಉತ್ತಮವಾದ ದಾತೃವಾಗಿಯೂ ಇರಲಿ ಶ್ರಮಸಾಧ್ಯವಾದ ತನ್ನ ನೂರು ವರ್ಷಗಳ ಆಯುಸ್ಸನ್ನು ಪಡೆಯಲಿ. ಈ ಯಜಮಾನನಿಗೆ ಸಮಸ್ತದಿನಗಳೂ ಮಂಗಳಕರವಾಗಿರಲಿ. ಇವನ ಯಜ್ಞವು ಸಫಲದಾಯಕವಾಗಿರಲಿ.

English Translation

May the liberal man ever be prosperous who propitiates you with constant oblations and praises : may all the days in his arduous life be prosperous, and may this (his) sacrifice be productive of reward).

———

ಸಂಹಿತಾಪಾಠಃ

ಅರ್ಚಾಮಿ ತೇ ಸುಮತಿಂ ಘೋಷ್ಯರ್ವಾಕ್ಸಂ ತೇ ವಾವಾತಾ ಜರತಾಮಿಯಂ ಗೀಃ ।

CC-0. Jangamwadi Math Collection. Digitized by eGangotri

ಸ್ವಶ್ವಾಸ್ತ್ವಾ ಸುರಥಾ ಮರ್ಜಯೇಮಾಸ್ಮೇ ಕ್ಷತ್ರಾಣಿ ಧಾರಯೇರನು
ದ್ಯೂನ್ ॥ ೮ ॥

ಪದಪಾಠಃ

ಅರ್ಚಾಮಿ । ತೇ । ಸುಽಮತಿಂ । ಘೋಷಿ । ಅರ್ವಾಕ್ । ಸಂ । ತೇ । ವವಾತಾ । ಜರತಾಂ । ಇಯಂ । ಗೀಃ ।
ಸುಽಅಶ್ವಾಃ । ತ್ವಾ । ಸುಽರಥಾಃ । ಮರ್ಜಯೇಮ । ಅಸ್ಮೇ ಇತಿ । ಕ್ಷತ್ರಾಣಿ । ಧಾರಯೇಃ । ಅನು ।
ದ್ಯೂನ್ ॥ ೮ ॥

ಸಾಯಣಭಾಷ್ಯಂ

ಉಖಾಸಂಭರಣೀಯೇಷ್ಟಾವಗ್ನೇಃ ಕ್ಷತ್ರಭೃತೋಽರ್ಚಾಮಿ ತ ಇತಿ ಯಾಜ್ಯಾ । ಸೂತ್ರಿತಂ ಚ । ಅರ್ಚಾಮಿ ತೇ ಸುಮತಿಂ ಘೋಷ್ಯರ್ವಾಗಿತೀದಂಪ್ರಭೃತಿಕರ್ಮಣಾಂ । ಆ. ೪-೧ । ಇತಿ ॥

ಹೆ ಅಗ್ನೇ ತೇ ತವ ಸುಮತಿಮನುಗ್ರಹಕರಾಂ ಶೋಭನಾಂ ಬುದ್ಧಿಮರ್ಚಾಮಿ । ಪೂಜಯಾಮಿ । ವವಾತಾ ಪುನಃಪುನಸ್ತ್ವಾಮಭಿಗಚ್ಛಂತೀಯಮುಚ್ಯಮಾನಾ ಗೀರ್ವಾಗ್ಘೋಷಿ ಘೋಷಯುಕ್ತಂ ಯಥಾ ಭವತಿ ತಥಾರ್ವಾಕ್ ತ್ವದಭಿಮುಖಂ ತೇ ತ್ವಾಂ ಸಂ ಜರತಾಂ । ಸ್ತೌತು । ವಯಮಪಿ ಸ್ವಶ್ವಾಃ ಶೋಭನಾಶ್ವೋಪೇತಾಃ ಸುರಥಾಶ್ಚ । ಉಪಲಕ್ಷಣಮೇತತ್ । ಪುತ್ರಪೌತ್ರಾದಿಭಿಃ ಸಹಿತಾಃ ಸಂತಸ್ತ್ವಾಂ ಮರ್ಜಯೇಮ । ಅಲಂಕುರ್ಯಾಮ । ಪರಿಚರೇಮೇತಿ ಯಾವತ್ । ತ್ವಂ ತು ಅನು ದ್ಯೂನನ್ವಹಮಸ್ಮೇ ಅಸ್ಮಾಸು ಕ್ಷತ್ರಾಣಿ ಧನಾನಿ ಧಾರಯೇಃ । ನಿಧೇಹಿ ॥ ಘೋಷಿ । ಘುಷ ಶಬ್ದನೇ । ಔಣಾದಿಕ ಇನ್ । ನಿತ್ತ್ವಾದಾದ್ಯುದಾತ್ತಃ । ವಾವಾತಾ । ವಾ ಗತಿಗಂಧನಯೋರಿತ್ಯಸ್ಯ ಯಙ್‌ಲುಗಂತಸ್ಯ ನಿಷ್ಠಾಯಾಂ ರೂಪಂ । ಮರ್ಜಯೇಮ । ಮೃಜೂ ಶೌಚಾಲಂಕಾರಯೋಃ । ಣ್ಯಂತಸ್ಯ ಲಿಙಿ ರೂಪಂ । ವೃದ್ಧ್ಯಭಾವಶ್ಛಾಂದಸಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ತೇ—ನಿನ್ನ । ಸುಮತಿಂ—ಅನುಗ್ರಾಹಕವಾದ ಬುದ್ಧಿಯನ್ನು । ಅರ್ಚಾಮಿ—ಪೂಜಿಸುತ್ತೇನೆ । ವವಾತಾ—ಪುನಃ ಪುನಃ ನಿನ್ನನ್ನು ಸ್ತುತಿಸಿ ಪರಿತವಾಗುವ । ಇಯಂ ಗೀಃ—ಈ ವಾಕ್ಕು । ಘೋಷಿ—ಶಬ್ದಮಾಡುತ್ತಾ । ಅರ್ವಾಕ್—ನಿನಗೆ ಅಭಿಮುಖವಾಗಿ । ತೇ—ನಿನ್ನನ್ನು । ಸಂ ಜರತಾಃ—ಸ್ತುತಿಸಲಿ । ಸ್ವಶ್ವಾಃ—ಉತ್ತಮವಾದ ಅಶ್ವದಿಂದ ಕೂಡಿದವರೂ । ಸುರಥಾಃ—ಪುತ್ರಪೌತ್ರಾದಿಗಳಿಂದ ಕೂಡಿದವರೂ ಆಗಿ । ತ್ವಾ ಮರ್ಜಯೇಮ—ನಿನ್ನನ್ನು ಅಲಂಕರಿಸುತ್ತೇವೆ । ಅನು ದ್ಯೂನ್—ಪ್ರತಿದಿನವೂ । ಅಸ್ಮೇ—ನಮ್ಮಲ್ಲಿ । ಕ್ಷೆತ್ರಾಣಿ—ಧನಗಳನ್ನು । ಧಾರಯೇಃ—ಇರಿಸು.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಅನುಗ್ರಾಹಕವಾದ ಬುದ್ಧಿಯನ್ನು ನಾನು ಪೂಜಿಸುತ್ತೇನೆ. ಪುನಃಪುನಃ ನಿನ್ನನ್ನು ಸ್ತುತಿಸಿ ಪಠಿತವಾಗುವ ಈ ವಾಕ್ಕು ಘೋಷವಮಾಡುತ್ತಾ ನಿನಗೆ ಅಭಿಮುಖವಾಗಿದ್ದು ನಿನ್ನನ್ನು ಸ್ತುತಿಸಲಿ. ಉತ್ತಮವಾದ ಅಶ್ವದಿಂದ ಕೂಡಿದವರೂ, ಪುತ್ರ ಪೌತ್ರಾದಿಗಳಿಂದ ಕೂಡಿದವರೂ ಆಗಿ ನಿನ್ನನ್ನು ಅಲಂಕರಿಸುತ್ತೇವೆ. ಪ್ರತಿದಿನವೂ ನಮ್ಮಲ್ಲಿ ಧನಸಂಪತ್ತಿರುವಂತೆ ಅನುಗ್ರಹಿಸು.

English Translation

I reverence your good favour, Agni; may this reiterated and resounding hymn convey due praise to your presence: may we be possessed of good horses and good cars, that we may pay you homage; and daily bestow upon us riches.

ವಿಶೇಷವಿಷಯಗಳು

ಉಖಾಸಂಭರಣವೆಂಬ ಇಷ್ಟಿಯಲ್ಲಿ ಕ್ಷತ್ರಭೃತ್ ಹೋಮದಲ್ಲಿ ಅರ್ಚಾಮಿ ತೇ ಎಂಬ ಈ ಋಕ್ಕನ್ನು ಯಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಅರ್ಚಾಮಿ ತೇ ಸುಮತಿಂ ಘೋಷ್ಯರ್ವಾಗಿತೀದಂಪ್ರಭೃತಿಕರ್ಮಣಾಂ ಎಂಬ ಸೂತ್ರದಿಂದ (ಅ. ೪-೧) ವಿವೃತವಾಗಿರುವುದು.

———

ಸಂಹಿತಾಪಾಠಃ

ಇಹ ತ್ವಾ ಭೂರ್ಯಾ ಚರೇದುಪ ತ್ಮನ್ದೋಷಾವಸ್ತರ್ದೀದಿವಾಂಸಮನು ದ್ಯೂನ್ ।
ಕ್ರೀಳಂತಸ್ತ್ವಾ ಸುಮನಸಃ ಸಪೇಮಾಭಿ ದ್ಯುಮ್ನಾ ತಸ್ಥಿವಾಂಸೋ ಜನಾನಾಂ॥

ಪದಪಾಠಃ

ಇಹ । ತ್ವಾ । ಭೂರಿ । ಆ । ಚರೇತ್ । ಉಪ । ತ್ಮನ್ । ದೋಷಾಽವಸ್ತಃ । ದೀದಿಽವಾಂಸಂ । ಅನು । ದ್ಯೂನ್ ।
ಕ್ರೀಳಂತಃ । ತ್ವಾ । ಸುಽಮನಸಃ । ಸಪೇಮ । ಅಭಿ । ದ್ಯುಮ್ನಾ । ತಸ್ಥಿಽವಾಂಸಃ । ಜನಾನಾಂ ॥ ೯ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಗ್ನೇ ಇಹ ರಕ್ಷೋಹನನಾಖ್ಯೇ ಕರ್ಮಣಿ ಯದ್ವಾಸ್ಮಿಲ್ಲೋಕೇ ಯಃ ಪುರುಷೋ ದೋಷಾವಸ್ತಾ ರಾತ್ರಾವಹನಿ ಚ ದೀದಿವಾಂಸಂ ದೀಪ್ಯಮಾನಂ ತ್ವಾಮನು ದ್ಯೂನನ್ವಹಂ ತ್ಮನ್ ಆತ್ಮನಾ ಸ್ವಯಮೇವೋಪ ಸಮೀಪೇ ಭೂರಿ ಭೂಯಿಷ್ಠಂ ಯಥಾ ಭವತಿ ತಥಾ ಚರೇತ್ । ಪರಿಚರತಿ । ತಸ್ಮಾದ್ವಯಮಪಿ ಜನಾನಾಂ ಶತ್ರೂಣಾಂ ದ್ಯುಮ್ನಾ ದ್ಯುಮ್ನಾನಿ ಧನಾನ್ಯಭಿ ತಸ್ಥಿವಾಂಸಸ್ತ್ವತ್ಪ್ರಸಾದಾದಾತ್ಮಸಾತ್ಕುರ್ವಂತೋಽತ ಏವ ಕ್ರೀಳಂತಃ ಸ್ವೇ ಸ್ವೇ ಗೃಹೇ ಪುತ್ರಪೌತ್ರಾದಿಭಿಃ ಸಹ ಸಂಕ್ರೀಡಮಾನಾಸ್ತಥಾ ಸುಮನಸಃ ಶೋಭನಮನಸ್ಕಾಃ ಸಂತಸ್ತ್ವಾಂ ಸಪೇಮ । ಪರಿಚರೇಮ । ಯದ್ವಾ । ದೋಷಾವಸ್ತರಿತಿ ಸಂಬುದ್ಧಿಃ । ದೋಷಾಯಾ ರಾತ್ರಿಕೃತಸ್ಯ ತಮಸೋ ವಸ್ತರಾಚ್ಛಾದಯಿತರ್ನಿವಾರಯಿತಃ ॥ ತ್ಮನ್ । ಆತ್ಮನ್ಶಬ್ದಸ್ಯ ತೃತೀಯಾಯಾಃ ಸುಪಾಂ ಸುಲುಗಿತಿ ಲುಕ್ । ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ । ದೋಷಾವಸ್ತಃ । ದ್ವಂದ್ವಪಕ್ಷೇ ಕಾರ್ತಕೌಜಪಾದಯಶ್ಚೇತಿ ಪೂರ್ವಪದಪ್ರಕೃತಿಸ್ವರಃ । ಸಂಬುದ್ಧಿಪಕ್ಷ ಆಮಂತ್ರಿತಸ್ಯ ಪಾದಾದಿತ್ವಾತ್ ಷಾಷ್ಠಿಕಮಾದ್ಯುದಾತ್ತತ್ವಂ । ಸಪೇಮ । ಷಪ ಸಮವಾಯೇ । ಲಿಙಿ ರೂಪಂ । ನಿಘಾತಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ಇಹ—ಈ ಲೋಕದಲ್ಲಿ । ದೋಷಾವಸ್ತಃ—ರಾತ್ರಿಹಗಲೂ । ದೀದಿವಾಂಸಂ—ಪ್ರಕಾಶಿಸುವ । ತ್ವಾ—ನಿನ್ನನ್ನು । ಅನು ದ್ಯೂನ್—ಪ್ರತಿದಿನವೂ । ತ್ಮನ್—ಪ್ರತಿಯೊಬ್ಬನೂ ಆತ್ಮಪ್ರೇರಣೆಯಿಂದಲೇ । ಉಪ—ನಿನ್ನ ಸಮೀಪದಲ್ಲಿ । ಭೂರಿ—ಅತ್ಯಧಿಕವಾಗಿ । ಆ ಚರೇತ್-ಉಪಚರಿಸಲಿ । ಜನಾನಾಂ-ಶತ್ರುಜನರ । ದ್ಯುಮ್ನಾ—ಧನಗಳನ್ನೂ । ಅಭಿ ತಸ್ಥಿವಾಂಸಃ—ನಮ್ಮ ಸ್ವಂತವನ್ನಾಗಿ ಮಾಡಿಕೊಳ್ಳುವವರೂ । ಕ್ರೀಳಂತಃ—ಪುತ್ರಪೌತ್ರಾದಿಗಳೊಡನೆ ನಲಿಯುವವರೂ । ಸುಮನಸಃ—ಭಕ್ತಿಯುತವಾದ ಮನಸ್ಸುಳ್ಳವರೂ ಆಗಿ। ತ್ವಾ ಸಪೇಮ—ನಿನ್ನನ್ನುಪಚರಿಸುತ್ತೇವೆ.

ಭಾವಾರ್ಥ

ಎಲೈ ಅಗ್ನಿಯೇ, ಈ ಲೋಕದಲ್ಲಿ ರಾತ್ರಿಹಗಲೂ ಪ್ರಕಾಶಿಸುವ ನಿನ್ನನ್ನು ಪ್ರತಿದಿನವೂ, ಪ್ರತಿಯೊಬ್ಬನೂ ಆತ್ಮಪ್ರೇರಣೆಯಿಂದಲೇ ಪೂಜಿಸಿ ಉಪಚರಿಸಲಿ. ಶತ್ರುಜನರ ಧನಗಳನ್ನು ನಿನ್ನ ಅನುಗ್ರಹದಿಂದ ಸ್ವಂತಕ್ಕೆ ಮಾಡಿಕೊಳ್ಳುವವರೂ, ಪುತ್ರಪೌತ್ರಾದಿಗಳೊಡನೆ ನಲಿಯುವವರೂ ಭಕ್ತಿಯುತವಾದ ಮನಸ್ಸುಳ್ಳವರೂ ಆಗಿ ನಿನ್ನನ್ನುಪಚರಿಸುತ್ತೇವೆ.

English Translation

May every one of his own accord diligently worship you, shining in the (hall) morning and evening, every day : thus, sporting in our dwellings, (enjoying) the wealth of (hostile) man, may we with happy hearts worship you.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯಸ್ತ್ವಾ ಸ್ವಶ್ವಃ ಸುಹಿರಣ್ಯೋ ಅಗ್ನ ಉಪಯಾತಿ ವಸುಮತಾ ರಥೇನ ।
ತಸ್ಯ ತ್ರಾತಾ ಭವಸಿ ತಸ್ಯ ಸಖಾ ಯಸ್ತ ಆತಿಥ್ಯಮಾನುಷಗ್ಜುಜೋಷತ್ ॥

ಪದಪಾಠಃ

ಯಃ । ತ್ವಾ । ಸುऽಅಶ್ವಃ । ಸುಽಹಿರಣ್ಯಃ । ಅಗ್ನೇ । ಉಪऽಯಾತಿ । ವಸುऽಮತಾ । ರಥೇನ ।

ತಸ್ಯ । ತ್ರಾತಾ । ಭವಸಿ । ತಸ್ಯ । ಸಖಾ । ಯಃ । ತೇ । ಆತಿಥ್ಯಂ । ಆನುಷಕ್ । ಜುಜೋಷತ್ ॥ ೧೦ ॥

ಸಾಯಣಭಾಷ್ಯಂ

ಹೇ ಅಗ್ನೇ ಯಃ ಪುಮಾನ್ ಸ್ವಶ್ವಃ ಶೋಭನಾಶ್ವೋಪೇತಃ ಸುಹಿರಣ್ಯೋ ಯಾಗಯೋಗ್ಯಧನೋಪೇತೋ ವಸುಮತಾ ವ್ರೀಹ್ಯಾದಿಧನಯುಕ್ತೇನ ರಥೇನ ಸಹಿತಃ ಸನ್ ತ್ವಾಮುಪಯಾತಿ । ಪರಿಚರಣಾರ್ಥಂ ತವ ಸಮೀಪಂ ಗಚ್ಛತಿ । ತಸ್ಯ ಪುಂಸಸ್ತ್ರಾತಾ ಸರ್ವದುರಿತೇಭ್ಯೋ ರಕ್ಷಕೋ ಭವಸಿ । ಯಶ್ಚ ಪುಮಾನ್ ತೇ ತವಾತಿಥ್ಯಮತಿಥಿಯೋಗ್ಯಾಂ ಪೂಜಾಮಾನುಷಗನುಕ್ರಮೇಣ ಜುಜೋಷತ್ ಪ್ರಾಪಯತಿ ತಸ್ಯಃ ಪುಂಸಃ ಸಖಾ ತದುಚಿತಫಲಪ್ರದಾನೇನೋಪಕರ್ತಾ ಭವಸಿ ॥ ಉಪಯಾತಿ । ಸಹ ಸುಪೇತ್ಯತ್ರ ಸಹೇತಿ ಯೋಗವಿಭಾಗಾತ್ಸಮಾಸಃ । ತಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ತಿಙು ಚೋದಾತ್ತವತೀತಿ ಗತೇರ್ನಿಘಾತಃ । ಆತಿಥ್ಯಂ। ಅತಿಥಿಶಬ್ದಾತ್ತಾದರ್ಥ್ಯೇ ಅತಿಥೇರ್ಞ್ಯ ಇತಿ ಞ್ಯಪ್ರತ್ಯಯಃ । ಪ್ರತ್ಯಯಸ್ವರಃ । ಜುಜೋಷತ್ । ಜೋಷಯತೇರ್ಲಙು ಬಹುಲಂ ಛಂದಸೀತಿ ಶಪಃ ಶ್ಲುಃ । ಅಡಾಗಮಃ । ಛಂದಸ್ಯುಭಯಥೇತಿ ತಿಪ ಆರ್ಧಧಾತುಕತ್ವಾಣ್ಣಿಲೋಪಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ಪುರುಷನು । ಸ್ವಶ್ವಃ—ಶ್ರೇಷ್ಠವಾದ ಅಶ್ವವುಳ್ಳವನೂ । ಸುಹಿರಣ್ಯಃ—ಯಾಗಸಾಧನವಾದ ಧನವುಳ್ಳವನೂ ಆಗಿ । ವಸುಮತಾ—ಧನಯುಕ್ತವಾದ । ರಥೇನ—ರಥದೊಡನೆ ಕೂಡಿಕೊಂಡು । ತ್ವಾ—ನಿನ್ನನ್ನು । ಉಪಯಾತಿ—ಸಮೀಪಿಸಿ ಪೂಜಿಸುವನೋ । ತಸ್ಯ—ಆ ಪುರುಷನ। ತ್ರಾತಾ—ರಕ್ಷಕನಾಗಿ । ಭವಸಿ—ಆಗುತ್ತೀಯೆ ।ಯಃ—ಯಾವ ಪುರುಷನು । ತೇ—ನಿನ್ನ । ಆತಿಥ್ಯಂ—ಅತಿಥಿಯೋಗ್ಯವಾದ ಪೂಜೆಯನ್ನು । ಆನುಷಕ್—ವಿಧ್ಯುಕ್ತವಾಗಿ । ಜುಜೋಷತ್—ಅರ್ಪಿಸುವನೋ । ತಸ್ಯ—ಆ ಪುರುಷನ । ಸಖಾ—ಸ್ನೇಹಿತನಾಗಿರುತ್ತೀಯೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ಯಾವ ಪುರುಷನು ಶ್ರೇಷ್ಠವಾದ ಅಶ್ವವುಳ್ಳವನೂ, ಯಾಗಸಾಧನವಾದ ಧನವುಳ್ಳವನೂ, ಆಗಿ ಧನಯುಕ್ತವಾದ ರಥದೊಡನೆ ಕೂಡಿಕೊಂಡು ನಿನ್ನನ್ನು ಸಮೀಪಿಸಿ ಪೂಜಿಸುವನೋ ನೀನು ಆ ಪುರುಷನ ರಕ್ಷಕ ನಾಗಿರುತ್ತೀಯೆ. ಯಾವನು ಅತಿಥಿಯೋಗ್ಯವಾದ ನಿನ್ನ ಪೂಜೆಯನ್ನು ವಿಧ್ಯುಕ್ತವಾಗಿ ಅರ್ಪಿಸ.ವನೋ ಆ ಪುರುಷ ನಿಗೆ ಸ್ನೇಹಿತನಾಗಿರುತ್ತೀಯೆ.

English Translation

You, Agni, are the protector of him who, possessed of good horses and a golden car, approches you with a chariot laden with wealth : you are the friend of him who gratifies you by the due performance of hospitality to you.

———

ಸಂಹಿತಾಪಾಠಃ

ಮಹೋ ರುಜಾಮಿ ಬಂಧುತಾ ವಚೋಭಿಸ್ತನ್ಮಾ ಪಿತುರ್ಗೋತಮಾದನ್ವಿ-
ಯಾಯ ।
ತ್ವಂ ನೋ ಅಸ್ಯ ವಚಸಶ್ಚಿಕಿದ್ಧಿ ಹೋತರ್ಯವಿಷ್ಠ ಸುಕ್ರತೋ ದಮೂನಾಃ॥

ಪದಪಾಠಃ

ಮಹಃ । ರುಜಾಮಿ । ಬಂಧುತಾ । ವಚಃಽಭಿಃ । ತತ್ । ಮಾ । ಪಿತುಃ । ಗೋತಮಾತ್ । ಅನು । ಇಯಾಯ ।

ತ್ವಂ । ನಃ । ಅಸ್ಯ । ವಚಸಃ । ಚಿಕಿದ್ಧಿ । ಹೋತಃ । ಯವಿಷ್ಠ । ಸುಕ್ರತೋ ಇತಿ ಸುಽಕ್ರತೋ ದಮೂನಾಃ ॥ ೧೧ ॥

ಸಾಯಣಭಾಷ್ಯಂ

ಹೇ ಹೋತರ್ದೇವಾನಾಮಾಹ್ವಾತರ್ಯವಿಷ್ಠ ಯುವತಮ ಸುಕ್ರತೋ ಶೋಭನಪ್ರಜ್ಞ ಹೇ ಅಗ್ನೇ ವಚೋಭಿಸ್ತ್ವದುದ್ದೇಶೇನ ಕೃತೈಃ ಸ್ತೋತ್ರೈಃ ಸಮುಪಜಾತಾ ಯೇಯಂ ಬಂಧುತಾ ಬಂಧು-ಭಾವಸ್ತಯಾ ಬಂಧುತಯಾ ಮಹೋ ಮಹತೋ ರಾಕ್ಷಸಾನ್ರುಜಾಮಿ । ಭನಜ್ಮಿ । ತತ್ತಾದೃಶಂ ಸ್ತೋ-ತ್ರಾತ್ಮಕಂ ವಚಃ ಪಿತುರುತ್ಪಾದಯಿತುರ್ಗೋತಮಾದೃಷೇಃ ಸಕಾಶಾನ್ಮಾ ವಾಮದೇವಂ ಮಾಮನ್ವಿ-

CC-0. Jangamwadi Math Collection. Digitized by eGangotri

ಯಾಯ । ದಮೂನಾ ದಾಂತಮನಾ ದಾನಮನಾ ವಾ ಶತ್ರೂಣಾಮುಪಕ್ಷಪಯಿತಾ ವಾ ತಾದೃಶಸ್ತ್ವಂ ನೋಽಸ್ಮದೀಯಸ್ಯಾಸ್ಯ ವಚಸಃ ಸ್ತೋತ್ರಾತ್ಮಕಮೇತದ್ವಾಕ್ಯಂ ಚಿಕಿದ್ಧಿ । ಜಾನೀಹಿ ॥ ಚಿಕಿದ್ಧಿ । ಕಿತ ಜ್ಞಾನೇ । ಜೌಹೋತ್ಯಾದಿಕಃ । ಲೋಟಿ ರೂಪಂ । ಹೋತಃ । ಪಾದಾದಿತ್ವಾತ್ ಷಾಷ್ಠಿಕಮಾದ್ಯುದಾತ್ತತ್ವಂ । ಇತರಯೋಸ್ತು ನಾಮಂತ್ರಿತೇ ಸಮಾನಾಧಿಕರಣ ಇತಿ ಪ್ರಥಮಸ್ಯಾವಿದ್ಯಮಾನವದ್ಭಾವನಿಷೇಧಾದಪಾದಾದಿತ್ವೇನ ನಿಘಾತಃ ॥

ಪ್ರತಿಪದಾರ್ಥ

ಹೋತಃ—ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ । ಯವಿಷ್ಠ—ಅತ್ಯಂತ ಯುವಕನೂ । ಸುಕ್ರತೋ—ಉತ್ತಮವಾದ ಪ್ರಜ್ಞೆಯುಳ್ಳವನೂ ಆದ ಅಗ್ನಿಯೇ । ವಚೋಭಿಃ—ನಿನ್ನನ್ನುದ್ದೇಶಿಸಿದ ಸ್ತೋತ್ರಗಳಿಂದ ಉತ್ಪನ್ನವಾದ । ಬಂಧುತಾ—ಬಂಧುಭಾವದಿಂದ । ಮಹಃ—ಮಹಚ್ಛಕ್ತಿಯುಳ್ಳ ರಾಕ್ಷಸರನ್ನೂ ಸಹ । ರುಜಾಮಿ—ನಾಶಪಡಿಸಬಲ್ಲೆನು । ತತ್—ಇಂತಹ ಸ್ತುತಿವಾಕ್ಕು । ಪಿತುಃ—ನಮ್ಮ ತಂದೆಯಾದ । ಗೋತಮಾತ್—ಗೋತಮಋಷಿಯಿಂದ । ಮಾ—ನನಗೆ । ಅನ್ವಿಯಾಯ—ಪ್ರಾಪ್ತವಾಯಿತು । ದಮೂನಾಃ-ಶತ್ರುಗಳನ್ನು ನಾಶಮಾಡುವ ಶಕ್ತಿಯುಳ್ಳ । ತ್ವಂ—ನೀನು । ನಃ—ನಮ್ಮ । ಅಸ್ಯ ವಚಸಃ—ಈ ಸ್ತುತಿವಾಕ್ಕಿನ । ಸ್ವರೂಪವನ್ನು । ಚಿಕಿದ್ಧಿ—ತಿಳಿ.

ಭಾವಾರ್ಥ

ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಅತ್ಯಂತ ಯುವಕನೂ, ಉತ್ತಮವಾದ ಪ್ರಜ್ಞೆಯುಳ್ಳವನೂ ಆದ ಅಗ್ನಿಯೇ, ನಿನ್ನನ್ನುದ್ದೇಶಿಸಿದ ಸ್ತೋತ್ರಗಳಿಂದ ಉತ್ಪನ್ನವಾದ ಬಂಧುಭಾವದ ಪ್ರಭಾವದಿಂದ ಮಹಚ್ಛಕ್ತಿಯುಳ್ಳ ರಾಕ್ಷಸರನ್ನೂ ಸಹ ನಾಶಪಡಿಸಬಲ್ಲೆನು. ಇಂತಹ ಸ್ತುತಿವಾಕ್ಕು ನಮ್ಮ ತಂದೆಯಾದ ಗೋತಮಋಷಿಯಿಂದ ನನಗೆ ಪ್ರಾಪ್ತವಾಯಿತು. ಶತ್ರುಗಳನ್ನು ನಾಶಮಾಡುವ ಶಕ್ತಿಯುಳ್ಳ ನೀನು ನಮ್ಮ ಈ ಸ್ತುತಿವಾಕ್ಕಿನ ಸ್ವರೂಪವನ್ನು ತಿಳಿ.

English Translation

Invoker (of the gods), youngest (of the deities); possessed of excellent wisdom, through the alliance (with you produced) by holy texts, which came to me from my father Gotama, I demolish the powerful (demons): you are the humbler (of foes); be cognizant of our praises,

---

ಸಂಹಿತಾಪಾಠಃ

ಸ್ವಪ್ನಜಸ್ತರಣಯಃ ಸುಶೇವಾ ಅತಂದ್ರಾಸೋಽವೃಕಾ ಅಶ್ರಮಿಷ್ಠಾಃ ।
ತೇ ಪಾಯವಃ ಸಧ್ರ್ಯಂಚೋ ನಿಷದ್ಯಾಗ್ನೇ ತವ ನಃ ಪಾಂತ್ವಮೂರ ॥೧೨॥

CC-0. Jangamwadi Math Collection. Digitized by eGangotri

ಪದಪಾಠಃ

ಅಸ್ವಪ್ನಜಃ । ತರಣಯಃ । ಸುಽಶೇವಾಃ । ಅತಂದ್ರಾಸಃ । ಅವೃಕಾಃ । ಅಶ್ರಮಿಷ್ಠಾಃ ।

ತೇ । ಪಾಯವಃ । ಸಧ್ರ್ಯಂಚಃ । ನಿಽಸದ್ಯ । ಅಗ್ನೇ । ತವ । ನಃ । ಪಾಂತು । ಅಮೂರ ॥ ೧೨ ॥

ಸಾಯಣಭಾಷ್ಯಂ

ಅಮೂರ ಅಮೂಢ ಸರ್ವಜ್ಞ । ಯದ್ವಾ । ಅಮೂರ ಅಪ್ರತಿಹತಗತೇ ಹೇ ಅಗ್ನೇ ಅಸ್ವಪ್ನಜೋಽಸ್ವಪಂತಃ । ಜಾಗರೂಕಾ ಇತಿ ಯಾವತ್ । ತರಣಯಃ ಸತತಗಮನಸ್ವಭಾವಾ ಆಪದ್ಭ್ಯಸ್ತಾರಕಾ ವಾ ಸುಶೇವಾಃ ಸುಸುಖಾ ಅತಂದ್ರಾಸೋಽತಂದ್ರಾ ಅನಲಸಾಃ ಸರ್ವದೋದ್ಯುಕ್ತಾ ಅವೃಕಾ ಅಹಿಂಸಕಾ ಅಶ್ರಮಿಷ್ಠಾ ಅಶ್ರಾಂತತಮಾಃ ಸಧ್ರ್ಯಂಚಃ ಪರಸ್ಪರಂ ಸಂಗತಾಃ ಪಾಯವೋ ರಕ್ಷಕಾಸ್ತೇ ತಾದೃಶಾಸ್ತವ ರಶ್ಮಯೋ ನಿಷದ್ಯಾಸ್ಮದ್ಯಜ್ಞೇ ನಿಷಣ್ಣಾ ಭೂತ್ವಾ ನೋಽಸ್ಮಾನ್ಪಾಂತು। ರಕ್ಷಂತು ॥ ಅಸ್ವಪ್ನಜಃ । ಸ್ವಪಿತೃಷೋರ್ನಜಿಙ್ಪ್ರತ್ಯಯಃ । ಮಧ್ಯೇಽವಗ್ರಹಶ್ಛಾಂದಸಃ । ಸಧ್ರ್ಯಂಚಃ । ಸಹಪೂರ್ವಾದಂಚತೇಃ ಕ್ವಿನ್ । ಸಹಸ್ಯ ಸಧ್ರಿರಿತಿ ಸಹಸ್ಯ ಸಧ್ರ್ಯಾದೇಶಃ । ಸಧ್ರ್ಯಾದೇಶಸ್ಯಾಂತೋದಾತ್ತತ್ವನಿಪಾತನಾದ್ಯಣಾದೇಶ ಉದಾತ್ತಸ್ವರಿತಯೋರಿತಿ ಸ್ವರಿತತ್ವಂ । ಅಮೂರ । ಮುಹ ವೈಚಿತ್ಯೇ । ನಿಷ್ಠಾಯಾಂ ಢಕಾರಸ್ಯ ರೇಫಶ್ಛಾಂದಸಃ । ಯದ್ವಾ । ಮೂಙ್ ಬಂಧನೇ । ಔಣಾದಿಕೋ ರಕ್ ॥

ಪ್ರತಿಪದಾರ್ಥ

ಅಮೂರ—ಸರ್ವಜ್ಞನಾದ । ಅಗ್ನೇ—ಅಗ್ನಿಯೇ । ಅಸ್ವಪ್ನಜಃ-ಜಾಗರೂಕವಾದವೂ । ತರಣಯಃ-ಸತತವಾದ ಚಲನವುಳ್ಳವೂ । ಸುಶೇವಾಃ—ಸುಖದಾಯಕವಾದವೂ । ಅತಂದ್ರಾಸಃ—ಆಲಸ್ಯವಿಲ್ಲದವೂ। ಅವೃಕಾಃ—ಹಿಂಸಾರಹಿತವಾದವೂ । ಅಶ್ರಮಿಷ್ಠಾಃ—ಶ್ರಮರಹಿತವಾದವೂ । ಸಧ್ರ್ಯಂಚಃ— ಪರಸ್ಪರ ಸಂಗತವಾದವೂ । ಪಾಯವಃ—ರಕ್ಷಕವಾದವೂ ಆದ । ತೇ ತವ—ನಿನ್ನ ಆ ರಶ್ಮಿಗಳು । ನಿಷದ್ಯ—ನಮ್ಮ ಈ ಯಜ್ಞಸ್ಥಾನವನ್ನಾಕ್ರಮಿಸಿ । ನಃ—ನಮ್ಮನ್ನು । ಪಾಂತು—ರಕ್ಷಿಸಲಿ.

ಭಾವಾರ್ಥ

ಸರ್ವಜ್ಞನಾದ ಅಗ್ನಿಯೇ, ಜಾಗರೂಕವಾದವೂ, ಸತತವಾದ ಚಲನವುಳ್ಳವೂ, ಸುಖದಾಯಕವೂ, ಆಲಸ್ಯವಿಲ್ಲದವೂ, ಹಿಂಸಾರಹಿತವಾದವೂ, ಶ್ರಮರಹಿತವಾದವೂ, ಪರಸ್ಪರಸಂಗತವಾದವೂ ಆದ ನಿನ್ನ ಪ್ರಸಿದ್ಧವಾದ ರಶ್ಮಿಗಳು ನಮ್ಮ ಈ ಯಜ್ಞಸ್ಥಾನವನ್ನಾಕ್ರಮಿಸಿ ನಮ್ಮನ್ನು ರಕ್ಷಿಸಲಿ.

English Translation

All-wise Agni, may your protecting (rays), unslumbering, alert, propitious, unslothful, benignant, unwearied co-operating, having taken their place (at this sacrifice), preserve us.

—————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯೇ ಪಾಯವೋ ಮಾಮತೇಯಂ ತೇ ಅಗ್ನೇ ಪಶ್ಯಂತೋ ಅಂಧಂ ದುರಿತಾದರಕ್ಷನ್ ।

ರರಕ್ಷ ತಾನ್ತ್ಸುಕೃತೋ ವಿಶ್ವವೇದಾ ದಿಪ್ಸಂತ ಇದ್ರಿಪವೋ ನಾಹ ದೇಭುಃ॥

ಪದಪಾಠಃ

ಯೇ । ಪಾಯವಃ । ಮಾಮತೇಯಂ । ತೇ । ಅಗ್ನೇ । ಪಶ್ಯಂತಃ । ಅಂಧಂ । ದುಃಽಇತಾತ್ । ಅರಕ್ಷನ್।

ರರಕ್ಷ । ತಾನ್ । ಸುಽಕೃತಃ । ವಿಶ್ವಽವೇದಾಃ । ದಿಪ್ಸಂತಃ । ಇತ್ । ರಿಪವಃ । ನ । ಅಹ । ದೇಭುಃ॥೧೩॥

ಸಾಯಣಭಾಷ್ಯಂ

ಅತ್ರೇಯಮೈತಿಹಾಸಿಕೀ ಕಥಾ । ಉಚಥ್ಯಸ್ಯ ಗರ್ಭಿಣೀಂ ಮಮತಾನಾಮಧೇಯಾಂ ಭಾರ್ಯಾಂ ತದನುಜೋ ಬೃಹಸ್ಪತಿರಚಕಮತ । ತಸ್ಯಾಂ ರೇತ ಅಧಿತ್ಸುಂ ತಂ ಬೃಹಸ್ಪತಿಂ ಗರ್ಭಸ್ಥಂ ರೇತೋಽಬ್ರವೀತ್ । ರೇತೋಽತ್ರ ಮಾ ಸ್ರಾಕ್ಷೀರಹಮತ್ರ ವಸಾಮೀತಿ। ಏವಮುಕ್ತೋ ಬೃಹಸ್ಪತಿರ್ನಿರುದ್ಧರೇತಸ್ಕಃ ಸನ್ ರೇತೋರೂಪಂ ಗರ್ಭಂ ಶಶಾಪ । ಜಾತ್ಯಂಧತ್ವರೂಪಂ ದೀರ್ಘಂ ತಮಃ ಪ್ರಾಪ್ನುಹೀತಿ । ತತಸ್ತಸ್ಯಾಂ ದೀರ್ಘತಮಾ ಅಜನಿಷ್ಟ । ಸ ಚಾಂಧ್ಯಪರಿಹಾರಾಯಾಗ್ನಿಂ ಸ್ತುತ್ವಾ ಚಕ್ಷುರಲಭತೇತಿ। ತದಿದಾನೀಮಾಹ । ಹೇ ಅಗ್ನೇ ಪಾಯವೋ ರಕ್ಷಕಾಃ ಪಶ್ಯಂತೋಽಂಧೋಽಯಮಿತಿ ಕೃಪಾದೃಷ್ಟ್ಯಾ ಪಶ್ಯಂತಸ್ತೇ ತವ ಯೇ ರಶ್ಮಯೋ ಮಾಮತೇಯಂ ಮಮತಾಯಾಃ ಪುತ್ರಮಂಧಂ ಚಕ್ಷುರ್ಹೀನಂ ದೀರ್ಘತಮಸಂ ದುರಿತಾದಾಂಧ್ಯಲಕ್ಷಣಾಚ್ಛಾಪಾದರಕ್ಷನ್ ಚಕ್ಷುಷ್ಪ್ರದಾನೇನಾಪಾಲಯನ್ । ವಿಶ್ವದೇವಾ ವಿಶ್ವಪ್ರಜ್ಞೋ ಭವಾನ್ ಸುಕೃತಃ ಶೋಭನಂ ಚಕ್ಷುಷ್ಪ್ರದಾನಾದಿಕರ್ಮ ಕೃತವತಸ್ತಾನ್ರಶ್ಮೀನ್ರರಕ್ಷ । ಆದರೇಣ ಪರಿಗೃಹ್ಯ ಪಾಲಯತಿ । ತೇಷಾಂ ಪರಿಗ್ರಹಸಿದ್ಧಿರಭಿಧೀಯತೇ । ದಿಪ್ಸಂತ ಇತ್ ದಂಭಿತುಂ ಪರಿಭವಿತುಮಿಚ್ಛಂತ ಏವ ರಿಪವಃ ಶತ್ರವ ಏನಂ ದೀರ್ಘತಮಸಂ ನಾಹ ದೇಭುಃ ॥ ನೈವ ಪರಿಭವಂತಿ ಖಲು ॥ ಮಾಮತೇಯಂ । ಮಮತಾಯಾ ಅಪತ್ಯಮಿತ್ಯರ್ಥೇ ಸ್ತ್ರೀಭ್ಯೋ ಢಕ್ । ದಿಪ್ಸಂತಃ । ದಮ್ಭು ದಂಭೇ । ಸನೀವಂತರ್ಧೇತ್ಯಾದಿನಾ ಇಡಭಾವಃ । ದಂಭ ಇಚ್ಚೇತೀಕಾರಃ । ದೇಭುಃ । ಶ್ರಂಥಿಗ್ರಂಥಿದಂಭಿಷ್ವಂಜೀನಾಮುಪಸಂಖ್ಯಾನಮಿತಿ ಲಿಟಃ ಕಿತ್ತ್ವಾದುಪಧಾಲೋಪಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಪಾಯವಃ—ರಕ್ಷಕವಾದವೂ । ಪಶ್ಯಂತಃ – ಕೃಪಾದೃಷ್ಟಿಯಿಂದ ನೋಡತಕ್ಕವೂ ಆದ । ತೇ—ನಿನ್ನ । ಯೇ—ಯಾವ ಆದೇ ರಶ್ಮಿಗಳು । ಮಾಮತೇಯಂ—ಮಮತೆಯ ಪುತ್ರನೂ ।

CC-0. Jangamwadi Math Collection. Digitized by eGangotri

**ಅಂಧಂ**—ಕುರುಡನೂ ಆದ ದೀರ್ಘತಮಸ್ಸನ್ನು । **ದುರಿತಾತ್**—ಶಾಪರೂಪವಾದ ಪಾಪದಿಂದ । ಅರಕ್ಷನ್—ರಕ್ಷಿಸಿದವು । **ವಿಶ್ವವೇದಾಃ**—ಸರ್ವಜ್ಞನಾದ ನೀನು । **ಸುಕೃತಃ**—ಶ್ರೇಷ್ಠವಾದ ಕರ್ಮವುಳ್ಳ । **ತಾನ್**—ಆ ರಶ್ಮಿಗಳನ್ನು । **ರರಕ್ಷ**—ರಕ್ಷಿಸು । **ದಿಪ್ಸಂತ ಇತ್**—ನಾಶದಲ್ಲಿ ಉದ್ದಿಶ್ಯವಿದ್ದರೂ ಸಹ । **ರಿಪವಃ**—ಶತ್ರುಗಳು । **ನಾಹ ದೇಭುಃ**—ಹಿಂಸಿಸಲಾಗಲಿಲ್ಲ.

ಭಾವಾರ್ಥ

ಎಲೈ ಅಗ್ನಿಯೇ, ರಕ್ಷಕವಾದವೂ, ಕೃಪಾದೃಷ್ಟಿಯಿಂದ ನೋಡತಕ್ಕವೂ ಆದ ನಿನ್ನ ಯಾವ ಅದೇ ರಶ್ಮಿಗಳು ಮಮತೆಯ ಪುತ್ರನೂ ಅಂಧನೂ ಆದ ದೀರ್ಘತಮಸ್ಸನ್ನು ಶಾಪರೂಪವಾದ ಪಾಪದಿಂದ ರಕ್ಷಿಸಿದವು. ಸರ್ವಜ್ಞನಾದ ನೀನು ಶ್ರೇಷ್ಠವಾದ ಕರ್ಮವುಳ್ಳ ಆ ರಶ್ಮಿಗಳನ್ನು ರಕ್ಷಿಸು. ನಾಶದಲ್ಲಿ ಉದ್ದಿಶ್ಯವಿದ್ದರೂ ಸಹ ಶತ್ರುಗಳು ಅವನನ್ನು ಹಿಂಸಿಸಲಾಗಲಿಲ್ಲ.

## English Translation

Those your protecting ( rays ), Agni, which, beholding (what had chanced), preserved the blind son of Mamata from misfortune: he, knowing all things, cherished those benevolent ( rays ), and his enemies, intending to destroy him, wrought him no harm.

ವಿಶೇಷವಿಷಯಗಳು

**ಮಾಮತೇಯಂ**—ಮಮತೆ ಎಂಬ ಸ್ತ್ರೀಯ ಪುತ್ರನನ್ನು ರಕ್ಷಿಸಿದ ವಿಷಯದಲ್ಲಿ ಭಾಷ್ಯಕಾರರು ಒಂದು ಐತಿಹಾಸಿಕಕಥೆಯನ್ನು ಹೇಳಿರುವರು—ಉಚಥ್ಯನೆಂಬ ಋಷಿಯ ಪತ್ನಿಯಾದ ಮಮತಾ ಎಂಬ ಸ್ತ್ರೀಯು ಗರ್ಭಿಣಿಯಾಗಿದ್ದಳು. ಆಗ ಉಚಥ್ಯನ ತಮ್ಮನಾದ ಬೃಹಸ್ಪತಿಯು ಆ ಸ್ತ್ರೀಯನ್ನು ಕಂಡು ಮೋಹಗೊಂಡು ಅವಳಲ್ಲಿ ಅನುರಕ್ತನಾಗಿ ಸಂಭೋಗಮಾಡಿದನು. ವೀರ್ಯಸೇಚನಕಾಲದಲ್ಲಿ ಗರ್ಭದಲ್ಲಿದ್ದ ಶಿಶುವು ಬೃಹಸ್ಪತಿಯನ್ನು ಕುರಿತು—ಎಲೈ ಬೃಹಸ್ಪತಿಯೇ, ನಾನು ಈಗ ಗರ್ಭದಲ್ಲಿರುವೆನು. ಆದ್ದರಿಂದ ನೀನು ಈ ಸ್ತ್ರೀಯ ಯೋನಿಯಲ್ಲಿ ರೇತಸ್ಸನ್ನು ವಿಸರ್ಜಿಸಬೇಡ ಎಂದು ಹೇಳಿತು. ಅದನ್ನು ಕೇಳಿ ರೇತಸ್ಸನ್ನು ಬಿಡುವ ಸಮಯದಲ್ಲಿ ಅಡ್ಡಿಮಾಡಿದ ಆ ಗರ್ಭಸ್ಥ ಶಿಶುವಿನಮೇಲೆ ಕೋಪಗೊಂಡು ಬೃಹಸ್ಪತಿಯು ಆ ಗರ್ಭಸ್ಥ ಶಿಶುವು ಕುರುಡಾಗಿ ಹುಟ್ಟಲೆಂದು ಶಾಪವನ್ನು ಕೊಟ್ಟನು. ಆದ್ದರಿಂದ ಆ ಸ್ತ್ರೀಯಲ್ಲಿ ಜನಿಸಿದ ಮಗುವು ಕುರುಡಾಗಿ ಹುಟ್ಟಿ ದೀರ್ಘತಮಾಃ ( ದೀರ್ಘಂ ತಮಃ ಕಣ್ಣು ಕಾಣಿಸದಿರುವುದರಿಂದ ಯಾವಾಗಲೂ ಕತ್ತಲೆಯಾಗಿರುವಂತೆಯೇ ತೋರುವುದು ) ಎಂಬ ಹೆಸರಿನಿಂದ ಪ್ರಸಿದ್ಧನಾದ ಋಷಿಯಾಯಿತು. ಆ ದೀರ್ಘತಮಾಃ ಎಂಬ ಋಷಿಯು ಅಗ್ನಿಯನ್ನು ಸ್ತೋತ್ರಮಾಡಿ ಕಣ್ಣನ್ನು (ದೃಷ್ಟಿಯನ್ನು) ಪಡೆದನು ಎಂಬ ಉಪಾಖ್ಯಾನವಿದೆ. ಅದನ್ನೇ ಇಲ್ಲಿ ಮಾಮತೇಯಂ ದುರಿತಾತ್ ಅರಕ್ಷನ್ ಎಂಬ ವಾಕ್ಯದಿಂದ ವಿವರಿಸಲಾಗಿದೆ.

———— :o: ————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ತ್ವಯಾ ವಯಂ ಸಧನ್ಯ೧ ಸ್ತ್ವೋತಾಸ್ತವ ಪ್ರಣೀತ್ಯಶ್ಯಾಮ ವಾಜಾನ್ ।
ಉಭಾ ಶಂಸಾ ಸೂದಯ ಸತ್ಯತಾತೇಽನುಷ್ಠುಯಾ ಕೃಣುಹ್ಯಹ್ರಯಾಣ ॥

ಪದಪಾಠಃ

ತ್ವಯಾ । ವಯಂ । ಸಽಧನ್ಯಃ । ತ್ವಾಽಊತಾಃ । ತವ । ಪ್ರಽನೀತೀ । ಅಶ್ಯಾಮ । ವಾಜಾನ್ ।
ಉಭಾ । ಶಂಸಾ । ಸೂದಯ । ಸತ್ಯಽತಾತೇ । ಅನುಽಸ್ಥುಯಾ । ಕೃಣುಹಿ । ಅಹ್ರಯಾಣ ॥ ೧೪ ॥

ಸಾಯಣಭಾಷ್ಯಂ

ಅಹ್ರಯಾಣ ಅಲಜ್ಜಿತಗಮನ । ಅಹ್ರಯಾಣೋಽಹ್ರೀತಯಾನ ಇತಿ ಯಾಸ್ಕಃ । ತಾದೃಶ ಹೇ ಅಗ್ನೇ ವಯಂ ಸ್ತೋತಾರಸ್ತ್ವಯಾ ಸಧನ್ಯಸ್ತ್ವತ್ಪ್ರಸಾದಾತ್ಸಮಾನಧನಾಸ್ತ್ವೋತಾಸ್ತ್ವಯಾ ರಕ್ಷಿತಾ ವಯಂ ತವ ಪ್ರಣೀತೀ ಪ್ರಣೀತ್ಯಾ ತವ ಪ್ರೇರಣೇನಾನುಜ್ಞಯಾ ವಾಜಾನನ್ನಾನ್ಯಶ್ಯಾಮ । ಪ್ರಾಪ್ನುಯಾಮ । ಹೇ ಸತ್ಯತಾತೇ । ಸತ್ಯಂ ತನೋತೀತಿ ವಾ ಸತ್ಯಂ ತಾಯತೇ ಯಸ್ಮಿನ್ನಿತಿ ವಾ ಸತ್ಯತಾತಿಃ । ಹೇ ಸತ್ಯತಾತೇ ಶಂಸಾ ಪಾಪಾನಾಂ ಶಂಸಿತಾರಾವುಭಾವಾಸನ್ನವಿಪ್ರಕೃಷ್ಟೌ ಶತ್ರೂ ಸೂದಯ । ಜಹಿ । ಅನುಷ್ಠುಯಾನುಕ್ರಮೇಣ ಕೃಣುಹಿ । ಅಸ್ಮಿನ್ಸೂಕ್ತೇ ಪ್ರತಿಪಾದಿತಮರ್ಥಂ ಕುರು ॥ ಸಧನ್ಯಃ । ಧನಮೇಷಾಮಸ್ತೀತಿ ಛಂದಸೀವನಪಾವಿತೀಪ್ರತ್ಯಯಃ । ಏರನೇಕಾಚ ಇತಿ ಯಣ್ । ಉದಾತ್ತಸ್ವರಿತಯೋರಿತಿ ಸ್ವರಿತತ್ವಂ । ಅನುಷ್ಠುಯಾ । ಅಪದುಃಸುಷು । ಸ್ಥ ಇತಿ ವಿಧೀಯಮಾನಃ ಕುಪ್ರತ್ಯಯೋ ಬಹುಲವಚನಾದನುಪೂರ್ವಸ್ಯಾಪಿ ಭವತಿ । ಸುಪಾಂ ಸುಲುಗಿತಿ ತೃತೀಯಾಯಾ ಯಾಜಾದೇಶಃ। ಅಹ್ರಯಾಣ । ಹ್ರೀ ಲಜ್ಜಾಯಾಂ । ಬಹುಲಂ ಛಂದಸೀತಿ ಶಪಃ ಶ್ಲುಭಾವಾಭಾವಃ । ಅನಿತ್ಯಮಾಗಮಶಾಸನಮಿತಿ ಮುಗಭಾವಃ ॥

ಪ್ರತಿಪದಾರ್ಥ

ಅಹ್ರಯಾಣ—ಸಂಕೋಚವಿಲ್ಲದ ಗಮನವುಳ್ಳ ಎಲೈ ಅಗ್ನಿಯೇ । ವಯಂ—ಸ್ತೋತೃಗಳಾದ ನಾವು । ತ್ವಯಾ—ನಿನ್ನ ಅನುಗ್ರಹದಿಂದ । ಸಧನ್ಯಃ—ಉತ್ತಮವಾದ ಧನವುಳ್ಳವರಾಗಿಯೂ । ತ್ವೋತಾಃ—ನಿನ್ನಿಂದ ರಕ್ಷಿತರಾಗಿಯೂ ಇದ್ದು । ತವ—ನಿನ್ನ । ಪ್ರಣೀತೀ—ಅನುಗ್ರಹದಿಂದ । ವಾಜಾನ್—ಅಶ್ವಗಳನ್ನು । ಅಶ್ಯಾಮ—ಹೊಂದುತ್ತೇವೆ । ಸತ್ಯತಾತೇ—ಸತ್ಯವನ್ನು ವೃದ್ಧಿಗೊಳಿಸುವ ಅಗ್ನಿಯೇ । ಶಂಸಾ—ಪಾಪವನ್ನಿಚ್ಛಿಸುವ। ಉಭಾ—ದೂರದವರೂ ಸಮೀಪಸ್ಥರೂ ಆದ ಎರಡು ವಿಧವಾದ ಶತ್ರುಗಳನ್ನೂ । ಸೂದಯ—ನಾಶಮಾಡು । ಅನುಷ್ಠುಯಾ—ಕ್ರಮವಾಗಿ । ಕೃಣುಹಿ—ನಮ್ಮ ಪ್ರಾರ್ಥನೆಯ ಉದ್ದಿಶ್ಯವನ್ನು ನೆರವೇರಿಸು.

CC-0. Jangamwadi Math Collection. Digitized by eGangotri

### ಭಾವಾರ್ಥ

ಸಂಕೋಚವಿಲ್ಲದ ಗಮನವುಳ್ಳ ಅಗ್ನಿಯೇ, ಸ್ತೋತೃಗಳಾದ ನಾವು ನಿನ್ನ ಅನುಗ್ರಹದಿಂದ ಉತ್ತಮವಾದ ಧನವುಳ್ಳವರಾಗಿಯೂ ನಿನ್ನಿಂದ ರಕ್ಷಿತರಾಗಿಯೂ ಇದ್ದು ನಿನ್ನ ಅನುಗ್ರಹದಿಂದ ಅಶ್ವಗಳನ್ನು ಹೊಂದುತ್ತೇವೆ. ಸತ್ಯವನ್ನು ವೃದ್ಧಿಗೊಳಿಸುವ ಅಗ್ನಿಯೇ, ನಮಗೆ ದ್ರೋಹವನ್ನಿಚ್ಛಿಸುವ ಶತ್ರುಗಳು ದೂರದಲ್ಲಿರಲಿ ಅಥವಾ ಹತ್ತಿರ ದಲ್ಲಿರಲಿ ಅವರನ್ನು ನಾಶಮಾಡು. ಮತ್ತು ನಮ್ಮ ಪ್ರಾರ್ಥನೆಯ ಉದ್ದಿಶ್ಯವನ್ನು ನೆರವೇರಿಸು.

### English Translation

Agni, you are freed from shame, by you we are made opulent; by you we are protected; may we, through your guidance, attain abundant food: cherisher of truth, destroy both ( sorts of calumniators ), those who are nigh, those who are far off, and in due course fulfil (our desires).

---

### ಸಂಹಿತಾಪಾಠಃ

ಅಯಾ ತೇ ಅಗ್ನೇ ಸಮಿಧಾ ವಿಧೇಮ ಪ್ರತಿ ಸ್ತೋಮಂ ಶಸ್ಯಮಾನಂ ಗೃಭಾಯ ।

ದಹಾಶಸೋ ರಕ್ಷಸಃ ಪಾಹ್ಯಸ್ಮಾನ್ದ್ರುಹೋ ನಿದೋ ಮಿತ್ರಮಹೋ ಅವದ್ಯಾತ್ ॥ ೧೫ ॥

### ಪದಪಾಠಃ

ಅಯಾ । ತೇ । ಅಗ್ನೇ । ಸಂಽಇಧಾ । ವಿಧೇಮ । ಪ್ರತಿ । ಸ್ತೋಮಂ । ಶಸ್ಯಮಾನಂ । ಗೃಭಾಯ ।

ದಹ । ಅಶಸಃ । ರಕ್ಷಸಃ । ಪಾಹಿ । ಅಸ್ಮಾನ್ । ದ್ರುಹಃ । ನಿದಃ । ಮಿತ್ರಽಮಹಃ । ಅವದ್ಯಾತ್ ॥೧೫॥

### ಸಾಯಣಭಾಷ್ಯಂ

ಹೇ ಅಗ್ನೇ ಅಯಾನಯಾ ಸಮಿಧಾ ದೀಪ್ತ್ಯಾ ಸ್ತುತ್ಯಾ ತೇ ತ್ವಾಂ ವಿಧೇಮ । ಪರಿಚರೇಮ । ಅಸ್ಮಾಭಿಃ ಶಸ್ಯಮಾನಮಿಮಂ ಸ್ತೋಮಂ ಸ್ತೋತ್ರಂ ಪ್ರತಿ ಗೃಭಾಯ । ಪ್ರತಿಗೃಹಾಣ । ಅಶಸಃ । ಶಂಸಂತಿ ಸ್ತುವಂತೀತಿ ಶಸಃ ಸ್ತೋತಾರಃ । ತೇ ನ ಭವಂತೀತ್ಯಶಸೋ ನೃಶಂಸಾಃ । ತಾನ್ರಕ್ಷಸೋ ದಹ ।

CC-0. Jangamwadi Math Collection. Digitized by eGangotri

ಭಸ್ಮಸಾತ್ಕುರು । ಹೇ ಮಿತ್ರಮಹೋ ಮಿತ್ರೈಃ ಪೂಜನೀಯ ಹೇ ಅಗ್ನೇ ದ್ರುಹೋ ದ್ರೋಗ್ಧುರ್ನಿದೋ ನಿಂದಕಾದವದ್ಯಾತ್ಪರಿವಾದಾಚ್ಚಾಸ್ಮಾನ್ ಪಾಹಿ । ರಕ್ಷ ॥ ಗೃಭಾಯ । ಗ್ರಹೇರ್ಲೋಟಿ ಛಂದಸಿ ಶಾಯ-ಜಪೀತಿ ಶ್ನಃ ಶಾಯಚ್ । ಹೃಗ್ರಹೋರ್ಭಃ । ಪಾಹಿ । ವಾಕ್ಯಭೇದಾದನಿಘಾತಃ । ನಿದಃ । ಣಿದಿ ಕುತ್ಸಾ-ಯಾಂ । ಕ್ವಿಪ್ । ಆಗಮಶಾಸನಸ್ಯಾನಿತ್ಯತ್ವಾನ್ನುಮಭಾವಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಅವದ್ಯಾತ್ । ಅವದ್ಯಪಣ್ಯೇತಿ ಯತ್ । ಯಯತೋಶ್ಚಾತದರ್ಥೇ । ಪಾ, ೬-೨-೧೫೬ । ಇತ್ಯಂತೋ-ದಾತ್ತತ್ವಂ । ಮಿತ್ರಮಹೋ ಅವದ್ಯಾದಿತ್ಯತ್ರ ಸಂಹಿತಾಯಾಮವ್ಯಾದವದ್ಯಾದಿತ್ಯೇಜಃ ಪ್ರಕೃತಿಭಾವಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಯಾ ಸಮಿಧಾ—ಪ್ರಕಾಶಮಾನವಾದ ಈ ಸ್ತುತಿಯಿಂದ । ತೇ—ನಿನ್ನನ್ನು । ವಿಧೇಮ—ಸೇವಿಸುತ್ತೇವೆ । ಶಸ್ಯಮಾನಂ—ನಮ್ಮಿಂದ ಪಠಿತವಾದ । ಇಮಂ ಸ್ತೋಮಂ—ಈ ಸ್ತೋತ್ರವನ್ನು । ಪ್ರತಿ ಗೃಭಾಯ—ಸ್ವೀಕರಿಸು । ಅಶಸಃ—ನಿನ್ನನ್ನು ಸ್ತುತಿಸದಿರುವ । ರಕ್ಷಸಃ—ರಾಕ್ಷಸರನ್ನು । ದಹ—ದಹಿಸು । ಮಿತ್ರಮಹಃ—ಮಿತ್ರರಿಗೆ ಪೂಜ್ಯನಾದ ಎಲೈ ಅಗ್ನಿಯೇ । ದ್ರುಹಃ—ದ್ರೋಹಿಯಾದವನ । ನಿದಃ—ನಿಂದಕವಾದ । ಅವದ್ಯಾತ್—ದೂಷಣೆಯಿಂದ । ಅಸ್ಮಾನ್—ನಮ್ಮನ್ನು । ಪಾಹಿ—ರಕ್ಷಿಸು.

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನವಾದ ಈ ಸ್ತುತಿಯಿಂದ ನಿನ್ನನ್ನು ನಾವು ಸೇವಿಸುತ್ತೇವೆ. ನಮ್ಮಿಂದ ಪಠಿತವಾದ ಈ ಸ್ತೋತ್ರವನ್ನು ಸ್ವೀಕರಿಸು. ನಿನ್ನನ್ನು ಸ್ತುತಿಸದಿರುವ ರಾಕ್ಷಸರನ್ನು ದಹಿಸು. ಮಿತ್ರರಿಗೆ ಪೂಜ್ಯನಾದ ಎಲೈ ಅಗ್ನಿಯೇ, ದ್ರೋಹಿಯಾದವನ ನಿಂದಕವಾದ ದೂಷಣೆಯಿಂದ ನಮ್ಮನ್ನು ರಕ್ಷಿಸು.

English Translation

May we propitiate you, Agni, by this fuel : accept the praise that is recited by us : consume the unadoring Rakshasas ; you who are to be honoured by (your) friends, preserve us from the reproach of the oppressor and the reviler.

ವಿಶೇಷವಿಷಯಗಳು

ಅಯಾ-ಅನಯಾ. ಛಂದಸ್ಸಿನ ಅನುಕೂಲಕ್ಕಾಗಿ ಅನಯಾ ಎಂಬ ಶಬ್ದದ ಮಧ್ಯಾಕ್ಷರವಾದ ನಕಾರವು ಲೋಪವಾಗಿ ಅಯಾ ಎಂದಾಗಿದೆ. ಅಥವಾ ಆಗಿನ ಕಾಲದಲ್ಲಿ ಅನಯಾ ಎಂಬ ಶಬ್ದವೂ ಅಯಾ ಎಂಬ ಶಬ್ದವೂ ಎರಡೂ ರೂಢಿಯಲ್ಲಿದ್ದಂತೆ ಕಂಡು ಬರುತ್ತದೆ. ಏಕೆಂದರೆ, ಅನಯಾ ಎಂಬ ಶಬ್ದದ ಬದಲಾಗಿ ಅಯಾ ಎಂಬ ಶಬ್ದದ ಪ್ರಯೋಗವು ಋಗ್ವೇದದಲ್ಲಿ ಬಹಳವಾಗಿದೆ. ಉದಾಹರಣೆಗೆ—

ಚೋದಃ ಕುವಿತ್ತುತುಜ್ಯಾತ್ಸಾತಯೇ ಧಿಯಃ ಶುಚಿಪ್ರತೀಕಂ ತಮಯಾ ಧಿಯಾ ಗೃಣೇ ॥

(ಋ. ಸಂ. ೧-೧೪೩-೬)



CC-0. Jangamwadi Math Collection. Digitized by eGangotri

ಅಯಾ ಧಿಯಾ ಮನವೇ ಶ್ರುಷ್ಟಿಮಾವ್ಯಾ ಸಾಕಂ ನರೋ ದಂಸನೈರಾ ಚಿಕಿತ್ರಿರೇ ।

(ಋ. ಸಂ. ೧-೧೬೬-೧೩)

ಅಯಾ ತೇ ಅಗ್ನೇ ವಿಧೇಮೋರ್ಜೋ ನಪಾದಶ್ವಮಿಷ್ಟೇ । ಏನಾ ಸೂಕ್ತೇನ ಸುಜಾತ ॥

(ಋ. ಸಂ. ೨-೬-೨)

ಈ ಋಕ್ಕುಗಳಲ್ಲಿರುವ ಅಯಾ ಎಂಬ ಶಬ್ದದಲ್ಲಿ ನಕಾರವು ಲೋಪವಾಗಿದೆ. ಇದರಂತೆ ಆತ್ಮನಾ ಎಂಬ ಶಬ್ದದ ಆ ಎಂಬ ಅಕ್ಷರವನ್ನು ಲೋಪಮಾಡಿ ತ್ಮನಾ ಎಂದು ಉಪಯೋಗಿಸುವುದೂ ಋಗ್ವೇದದಲ್ಲಿ ರೂಢಿಯಾಗಿದೆ.

**ಸಮಿಧಾ**—ಸಮಿತ್‌ಶಬ್ದಕ್ಕೆ ಸಾಧಾರಣವಾಗಿ ಚೆನ್ನಾಗಿ ಪ್ರಜ್ವಲಿಸುವ, ಉರಿಯುತ್ತಿರುವ ಎಂದರ್ಥವಿರುವುದು. ಈ ಅರ್ಥದಲ್ಲಿಯೇ ಹೋಮಾರ್ಥವಾಗಿ ಉಪಯೋಗಿಸಲ್ಪಡುವ ಕೆಲವು ವೃಕ್ಷಗಳ ಒಣಗಿದ ಕಾಷ್ಠಗಳು ಎಂದು ಈ ಶಬ್ದದ ಪ್ರಯೋಗವೂ ಇರುವುದು. ಆದರೆ ಇಲ್ಲಿ ಭಾಷ್ಯಕಾರರು ಅಗ್ನಿಯ ಗುಣಗಳನ್ನು ಪ್ರಕಾಶಗೊಳಿಸುವ ಸ್ತುತಿಯಿಂದ ಎಂಬರ್ಥವನ್ನು ಹೇಳಿರುವರು. ಈ ಋಕ್ಕಿನಲ್ಲಿ ಕಾಷ್ಠ ಮತ್ತು ಸ್ತುತಿ ಎಂಬ ಎರಡರ್ಥಗಳಿಗೂ ಅವಕಾಶವಿದೆ.

**ಅಶಸಃ**—ಶಂಸಂತಿ ಸ್ತುವಂತೀತಿ ಶಸಃ ಸ್ತೋತಾರಃ । ತೇ ನ ಭವಂತೀತ್ಯಶಸೋ ನೃಶಂಸಾಃ । ದೇವತೆಗಳನ್ನು ಸ್ತೋತ್ರಮಾಡುವ ಜನರಿಗೆ ಶಸಃ ಎಂದೂ ಸ್ತೋತ್ರಮಾಡದಿರುವ ದುಷ್ಟಜನರಿಗೆ ಅಶಸಃ ಎಂದೂ ಹೆಸರು ಎಂದು ಭಾಷ್ಯಕಾರರ ವಿವರಣೆಯು.

---

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀವೀರಬುಕ್ಕಭೂಪಾಲಸಾಮ್ರಾಜ್ಯ-
ಧುರಂಧರೇಣ, ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ ವೇದಾರ್ಥಪ್ರಕಾಶೇ
ಋಕ್ಸಂಹಿತಾಭಾಷ್ಯೇ ತೃತೀಯಾಷ್ಟಕೇ ಚತುರ್ಥೋಽಧ್ಯಾಯಃ
ಸಮಾಪ್ತಃ
॥ ಓಂ ತತ್ಸತ್ ॥

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ತೃತೀಯಾಷ್ಟಕದಲ್ಲಿ
ನಾಲ್ಕನೆಯ ಅಧ್ಯಾಯವು ಸಮಾಪ್ತವಾದುದು.

---

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥
। ಶುಭಂ ಶುಭಯಾತ್ ।

। ಮಂಗಳಂ ।

CC-0. Jangamwadi Math Collection. Digitized by eGangotri



॥ ಶ್ರೀ ॥

॥ ಶ್ರೀ ಮಹಾಗಣಾಧಿಪತಯೇ ನಮಃ ॥

ವಾಗೀಶಾದ್ಯಾ ಸುಮನಸಃ ಸರ್ವಾರ್ಥಾನಾಮುಪಕ್ರಮೇ
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ತೃತೀಯಾಷ್ಟಕಮಧ್ಯಸ್ಥ ಚತುರ್ಥೋಽಧ್ಯಾಯ ಆದರಾತ್ ।
ವ್ಯಾಖ್ಯಾತಃ ಸಾಯಣಾರ್ಯೇಣ ಪಂಚಮೋ ವ್ಯಾಕರಿಷ್ಯತೇ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

## ಸಾಯಣಭಾಷ್ಯಸಹಿತಾ

# ಋಗ್ವೇದ ಸಂಹಿತಾ

॥ ಮೂರನೆಯ ಅಷ್ಟಕದಲ್ಲಿ ಐದನೆಯ ಅಧ್ಯಾಯವು ॥

**ಚತುರ್ಥ ಮಂಡಲದ ಸೂಕ್ತಗಳು—೫-೧೮**

### ಐದನೆಯ ಸೂಕ್ತವು

### ಪೀ ಠಿ ಕೆ .

ಈ ಸೂಕ್ತದಲ್ಲಿ ವೈಶ್ವಾನರಾಗ್ನಿಯನ್ನು ಸ್ತುತಿಸಲಾಗಿದೆ. ವೈಶ್ವಾನರಾಗ್ನಿಯ ವಿಷಯವಾಗಿ ನಾವು ಹಿಂದೆ ಅನೇಕಾವರ್ತಿ ವಿಸ್ತಾರವಾದ ವಿವರಣೆಗಳನ್ನು ಕೊಟ್ಟಿದ್ದರೂ ಯಾಸ್ಕರು ನಿರುಕ್ತದಲ್ಲಿ ವಿಸ್ತಾರವಾಗಿ ಹೇಳಿರುವ ವಿಷಯಗಳನ್ನೂ ಇತರ ಋಷಿಗಳ ಭಿನ್ನಾಭಿಪ್ರಾಯಗಳನ್ನೂ ಯಾಸ್ಕರು ಹೇಳಿರುವಂತೆಯೇ ಇಲ್ಲಿ ವಿವರಿಸಿದೇವೆ—

CC-0. Jangamwadi Math Collection. Digitized by eGangotri

ವೈಶ್ವಾನರಃ। ಇತಿ ತ್ರೀಣಿ ಪದಾನಿ । ವೈಶ್ವಾನರಃ ಕಸ್ಮಾದ್ವಿಶ್ವಾನ್ನರಾನ್ನಯತಿ । ವಿಶ್ವ ಏನಂ ನರಾ ನಯಂತೀತಿ ವಾ । ಅಪಿ ವಾ ವಿಶ್ವಾನರ ಏವ ಸ್ಯಾತ್ ಪ್ರತ್ಯೃತಃ ಸರ್ವಾಣಿ ಭೂತಾನಿ ತಸ್ಯ ವೈಶ್ವಾನರಃ ॥ ( ನಿ. ೭-೨೧ ).

ಈಗ ವೈಶ್ವಾನರಶಬ್ದ ವಿವರಣೆಯನ್ನು ಮಾಡುವೆವು. ಈ ವೈಶ್ವಾನರಶಬ್ದವು ವಿಶ್ವಾನ್ ನರಾನ್ ನಯತಿ ಎಂಬ ಮೂರು ಪದಗಳ ಅರ್ಥವನ್ನೊಳಗೊಂಡಿರುವ ದೇವತೆಯನ್ನು ಸೂಚಿಸುವ ಶಬ್ದವಾಗಿದೆ. ವೈಶ್ವಾನರನಿಗೆ ಈ ಹೆಸರು ಏತಕ್ಕೆ ಬಂತು ಎಂದರೆ—ಈ ದೇವನು ವಿಶ್ವಾನ್ **ನರಾನ್ ನಯತಿ**—ಸಮಸ್ತ ಜನರನ್ನೂ ಸನ್ಮಾರ್ಗದಲ್ಲಿ ಒಯ್ಯುತ್ತಾನೆ ಎಂದರೆ ಸಮಸ್ತ ಜನರಿಗೂ ಸನ್ಮಾರ್ಗಪ್ರವರ್ತಕನು ಆದ್ದರಿಂದ ಈ ದೇವನಿಗೆ ವೈಶ್ವಾನರನೆಂದು ಹೆಸರು. ಅಥವಾ— **ವಿಶ್ವ ಏನಂ ನರಾ ನಯಂತೀತಿ ವಾ**—ಅಥವಾ ಸರ್ವರೂ ಈ ದೇವನನ್ನು ತಾವು ಮಾಡುವ ಯಜ್ಞಾದಿಗಳಲ್ಲಿ ಉತ್ತರವೇದಿಗೆ ಒಯ್ಯುವರು ಎಂದರೆ ಯಜ್ಞಗಳಲ್ಲಿ ಅಗ್ನಿಪ್ರಣಯನವೆಂಬ ಕಾರ್ಯವನ್ನು ಮಾಡುವಾಗ ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದ ಸ್ಥಾನದಿಂದ ವಿಧ್ಯುಕ್ತವಾಗಿ ಉತ್ತರವೇದಿಯ ಬಳಿಗೆ ತೆಗೆದುಕೊಂಡು ಹೋಗಿ ಅಲ್ಲಿ ಸ್ಥಾಪಿಸುವರು. ಅಥವಾ ಸರ್ವರೂ ತಮ್ಮ ತಮ್ಮ ಗೃಹಗಳಲ್ಲಿ ಅಗ್ನಿಯನ್ನು ತೆಗೆದುಕೊಂಡು ಹೋಗಿ ಪಚನಕಾರ್ಯಕ್ಕಾಗಿ ಮಹಾನಸ ಮೊದಲಾದ ಸ್ಥಳಗಳಲ್ಲಿ ಸ್ಥಾಪಿಸುವರು ಆದುದರಿಂದ ಈ ಅಗ್ನಿಗೆ ವೈಶ್ವಾನರನೆಂದು ಹೆಸರು. ಅಥವಾ ವಿಶ್ವಾನರನೇ ವೈಶ್ವಾನರನು. ಈ ವಿಶ್ವಾನರನು ಸಮಸ್ತ ಪ್ರಾಣಿಗಳ ಶರೀರದಲ್ಲಿ ವ್ಯಾಪಿಸಿ ಜಾಠರಾಗ್ನಿ ರೂಪದಿಂದ ಇದ್ದು ಪ್ರಾಣಿಗಳು ಭುಜಿಸುವ ಆಹಾರಾದಿಗಳನ್ನು ಪಚನಮಾಡುವನು. ಆದುದರಿಂದ ಸರ್ವಪ್ರಾಣಿಗಳ ಶರೀರದಲ್ಲಿರುವ ವಿಶ್ವಾನರನೇ ವೈಶ್ವಾನರಾಗ್ನಿಯು.

ವೈಶ್ವಾನರಸ್ಯ ಸುಮತೌ ಸ್ಯಾಮ ರಾಜಾ ಹಿಕಂ ಭುವನಾನಾಮಭಿ ಶ್ರೀಃ ।
ಇತೋ ಜಾತೋ ವಿಶ್ವಮಿದಂ ವಿಚಷ್ಟೇ ವೈಶ್ವಾನರೋ ಯತತೇ ಸೂರ್ಯೇಣ ॥

( ಋ. ಸಂ. ೧-೯೮-೧).

ಎಂಬ ಈ ಋಕ್ಕು ವೈಶ್ವಾನರಾಗ್ನಿಯನ್ನು ಸ್ತುತಿಸುವುದು. ನಾವು ವೈಶ್ವಾನರಾಗ್ನಿಯ ಅನುಗ್ರಹಾತ್ಮಕವಾದ ಬುದ್ಧಿಗೆ ಪಾತ್ರರಾಗೋಣ. ಏಕೆಂದರೆ ಈ ವೈಶ್ವಾನರಾಗ್ನಿಯು ರಾಜನು. ರಾಜನು ಸಕಲಲೋಕಗಳಿಗೂ ಆಶ್ರಯಭೂತನು. ಈ ಪ್ರಪಂಚದಲ್ಲಿ ಉತ್ಪನ್ನನಾಗಿ ಸಮಸ್ತ ವಿಶ್ವವನ್ನೂ ವೀಕ್ಷಿಸುತ್ತಿರುವನು. ಸೂರ್ಯನಿಂದ ಸಹಿತನಾಗಿ ಎಲ್ಲವನ್ನೂ ವ್ಯಾಪಿಸಿರುವನು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

## ವೈಶ್ವನರಾಗ್ನಿಯು ಯಾರು ? ಇವನು ಮಧ್ಯಮಸ್ಥಾನದೇವತೆಯೋ ?

ಇತೋ ಜಾತಃ ಸರ್ವಮಿದಮಭಿವಿಪಶ್ಯತಿ ವೈಶ್ವಾನರಃ ಸಂಯತತೇ ಸೂರ್ಯೇಣ ರಾಜಾ ಯಃ ಸರ್ವೇಷಾಂ ಭೂತಾನಾಮಭಿಶ್ರಯಣೀಯಸ್ತಸ್ಯ ವಯಂ ವೈಶ್ವಾನರಸ್ಯ ಕಲ್ಯಾಣ್ಯಾಂ ಮತೌ ಸ್ಯಾಮೇತಿ । ತತ್ಕೋ ವೈಶ್ವಾನರಃ । ಮಧ್ಯಮ ಇತ್ಯಾಚಾರ್ಯಾಃ ॥ ( ನಿ. ೭-೨೨ ).

ಎಂದು ಈ ಋಕ್ಕಿನ ನಿರ್ವಚನವು. ಈ ವೈಶ್ವಾನರಾಗ್ನಿಯು ಈ ಲೋಕದಲ್ಲಿಯೇ ಜನಿಸಿ ವಿಶ್ವವೆಲ್ಲವನ್ನೂ ನೋಡಲು ಸಮರ್ಥನಾಗಿರುವನು. ಸೂರ್ಯನಿಂದ ಸಹಿತನಾಗಿ ವಿಶ್ವವೆಲ್ಲವನ್ನೂ ವ್ಯಾಪಿಸಿರುವನು. ಇಂತಹ ವೈಶ್ವಾನರಾಗ್ನಿಯ ಉತ್ತಮವಾದ ಬುದ್ಧಿ ಎಂದರೆ ಅನುಗ್ರಹಕ್ಕೆ ಪಾತ್ರರಾಗೋಣ. ಇವನೇ ರಾಜನು ಮತ್ತು ಸೃಷ್ಟಿಸಲ್ಪಟ್ಟ ಸಮಸ್ತ

CC-0. Jangamwadi Math Collection. Digitized by eGangotri

ಪ್ರಾಣಿವರ್ಗಗಳಿಗೂ ಆಶ್ರಯಭೂತನು. ಆದರೆ ಈ ವೈಶ್ವಾನರನು ಯಾರು ? ಇವನ ಸ್ವರೂಪವೇನು ? ಎಂದರೆ, ಕೆಲವು ಆಚಾರ್ಯರು ಈ ವೈಶ್ವಾನರನು ಮಧ್ಯಮಸ್ಥಾನದಲ್ಲಿ(ಅಂತರಿಕ್ಷದಲ್ಲಿ) ನೆಲಸಿರುವ ದೇವತೆಯೆಂದು ಹೇಳುವರು. ಏಕೆಂದರೆ ಈ ವೈಶ್ವಾನರನೇ ವೃಷ್ಟಿಗೆ (ಮಳೆಗೆ) ಕಾರಣಭೂತನಾಗಿರುವನು ಎಂದು ಅವರ ಅಭಿಪ್ರಾಯವಿರುವುದು. ಆದುದರಿಂದ ವೃಷ್ಟಿಕರ್ಮವಿಷಯದಲ್ಲಿ ಈ ವೈಶ್ವಾನರನ ಪಾತ್ರವನ್ನು ವಿವರಿಸುವ ಋಕ್ಕನ್ನು ಇಲ್ಲಿ ಉದಾಹರಿಸ ಲಾಗಿದೆ—

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ ಸಚಂತೇ ।
ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾँ ಅಧೂನೋತ್ಕಾಷ್ಠಾ ಅವ ಶಂಬರಂ ಭೇತ್ ॥

( ಋ. ಸಂ. ೧-೫೯-೬ ).

ಇಷ್ಟಾರ್ಥಪ್ರದನಾದ ಈ ವೈಶ್ವಾನರಾಗ್ನಿಯ ಮಹಿಮೆಯನ್ನು ನಾನು ವಿಶೇಷವಾಗಿ ವರ್ಣಿಸುವೆನು. ವೃತ್ರಹಂತಕನಾದ ಈ ವೈಶ್ವಾನರಾಗ್ನಿಯನ್ನು ಅನೇಕ ಜನರು ಭಕ್ತಿಯಿಂದ ಸೇವಿಸುವರು. ಈ ವೈಶ್ವಾನರಾಗ್ನಿಯು ದಸ್ಯುವಾದ ವೃತ್ರ ನನ್ನು ಸಂಹಾರಮಾಡಿದನು. ಶಂಬರಾಸುರನನ್ನು (ಮೇಘನನ್ನು) ಸೀಳಿ (ಕೊಂದು) ಮೇಘಗಳಲ್ಲಿ ಸಂಗೃಹೀತವಾಗಿದ್ದ ಉದಕಗಳನ್ನು ಭೂಮಿಯಮೇಲೆ ವೃಷ್ಟಿರೂಪದಿಂದ ಉದುರಿ ಬೀಳುವಂತೆ ಮಾಡಿದನು. ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು.

ಈ ಋಕ್ಕಿನ ನಿರ್ವಚನವು—

ಪ್ರಬ್ರವೀಮಿ ತನ್ಮಹಿತ್ವಂ ಮಾಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ ಪೂರಯಿ ತವ್ಯಾ ಮನುಷ್ಯಾ ವೃತ್ರಹಣಂ ಮೇಘಹನಂ ಸಚಂತೇ ಸೇವಂತೇ ವರ್ಷಕಾಮಾಃ । ದಸ್ಯು- ರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ರಸಾ ಉಪದಾಸಯತಿ ಕರ್ಮಾಣಿ ತಮಗ್ನಿರ್ವೈಶ್ವಾ ನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿನಚ್ಛಂಬರಂ ಮೇಘಂ ॥ ( ನಿ. ೭-೨೩ ).

ಎಂದು ಇರುವುದು. ಉದಕ ವೃಷ್ಟಿಯನ್ನು ಸುರಿಸುವ ಈ ವೈಶ್ವಾನರಾಗ್ನಿಯ ಮಹಾಮಹಿಮೆಯನ್ನು (ಸಾಮರ್ಥ್ಯಾತಿ ಶಯವನ್ನು) ನಾನು ವಿಶೇಷರೀತಿಯಿಂದ ವರ್ಣಿಸುವೆನು. ಇಷ್ಟಾರ್ಥಗಳನ್ನು ಬಯಸುವವರೂ, ವೃಷ್ಟಿಯನ್ನು ಅಪೇಕ್ಷಿಸುವವರೂ ಆದ ಜನರು ಪೂಜ್ಯಭಾವದಿಂದ ವೃತ್ರಾಸುರನನ್ನು (ಮೇಘನನ್ನು) ಧ್ವಂಸಮಾಡುವ ಈ ವೈಶ್ವಾನರಾ ಗ್ನಿಯನ್ನು ಸ್ತುತ್ಯಾದಿಗಳಿಂದ ಸೇವಿಸುವರು. ದಸ್ಯುಶಬ್ದವು ದಸ್ ನಾಶಮಾಡು ಎಂಬ ಧಾತುವಿನಿಂದ ನಿಷ್ಪನ್ನವಾಗಿ ಉದಕವನ್ನು ಭೂಮಿಯಮೇಲೆ ಬೀಳದಂತೆ ತಡೆದು ನಾಶಗೊಳಿಸುವ ದುಷ್ಟನು ಎಂಬರ್ಥವನ್ನು ಸೂಚಿಸುವುದು. ವೈಶ್ವಾನರಾಗ್ನಿಯು ಇಂತಹ ದಸ್ಯುವಾದ ಶಂಬರನನ್ನು (ಮೇಘನನ್ನು—ಶಂಬರಶಬ್ದವು ಮೇಘನಾಮಗಳಲ್ಲಿ ಪಠಿತವಾ ಗಿದೆ) ಪ್ರಹರಿಸಿ ಮೇಘದಲ್ಲಿ ಶೇಖರವಾಗಿದ್ದ ಉದಕಗಳನ್ನು ಚದುರಿಸಿ ಭೂಮಿಯಮೇಲೆ ವೃಷ್ಟಿರೂಪದಿಂದ ಬೀಳುವಂತೆ ಮಾಡಿದನು ಎಂದು ಮುಖ್ಯಾಭಿಪ್ರಾಯವು.

## ವೈಶ್ವಾನರನೇ ಆದಿತ್ಯನು ಎಂದು ಪೂರ್ವದ ಯಾಜ್ಞಿಕರ ಮತವು

(ಈ ವಿಷಯದಲ್ಲಿ ಆಕ್ಷೇಪಸಮಾಧಾನಗಳು)

ಅಥಾಸಾವಾದಿತ್ಯ ಇತಿ ಪೂರ್ವೇ ಯಾಜ್ಞಿಕಾಃ । ಏಷಾಂ ಲೋಕಾನಾಂ ರೋಹೇಣ ಸವನಾನಾಂ ರೋಹ ಆಮ್ನಾತೋ ರೋಹಾತ್ ಪ್ರತ್ಯವರೋಹಶ್ಚಿಕೀರ್ಷಿತಸ್ತಾಮನುಕೃತಿಂ ಹೋತಾಗ್ನಿ-

CC-0. Jangamwadi Math Collection. Digitized by eGangotri

ಮಾರುತೇ ಶಸ್ತ್ರೇ ವೈಶ್ವಾನರೀಯೇಣ ಸೂಕ್ತೇನ ಪ್ರತಿಪದ್ಯತೇ ಸೋಽಪಿ ನ ಸ್ತೋತ್ರಿಯಮಾದ್ರಿಯೇತಾಗ್ನೇಯೋ ಹಿ ಭವತಿ । ತತ ಆಗಚ್ಛತಿ ಮಧ್ಯಸ್ಥಾನಾ ದೇವತಾ ರುದ್ರಂ ಚ ಮರುತಶ್ಚ ತತೋಽಗ್ನಿಮಿಹಸ್ಥಾನಮತ್ರೈವ ಸ್ತೋತ್ರಿಯಂ ಶಂಸತಿ.

( ನಿ. ೭-೨೩ ).

ಯಜ್ಞಾನುಷ್ಠಾನಕರ್ಮಗಳಲ್ಲಿ ಕುಶಲರಾದ ಕೆಲವು ಪೂರ್ವಕಾಲದ ಆಚಾರ್ಯರುಗಳು-ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಈ ಆದಿತ್ಯನೇ ವೈಶ್ವಾನರನು ಎಂದು ಹೇಳುವರು. ಇದಕ್ಕೆ ಕಾರಣವನ್ನು ಇವರು ಈರೀತಿ ಹೇಳುವರು. ಯಜ್ಞಕರ್ಮಗಳಾದ ಪ್ರಾತಃಸವನಾದಿಗಳಲ್ಲಿ ರೋಹ, ಅವರೋಹ ಎಂದರೆ ಆರೋಹಣ ಪ್ರತ್ಯವರೋಹಣ ಎಂಬ ಕ್ರಮವಿರುವುದು. ಲೋಕಗಳಲ್ಲಿಯೂ ಈರೀತಿ ಇರುವುದು. ಎಂದರೆ ಪೃಥಿವೀ (ಕೆಳಗಿನಸ್ಥಾನ) ಅಂತರಿಕ್ಷಂ (ಮಧ್ಯಸ್ಥಾನ) ದ್ಯೌಃ (ಸ್ವರ್ಗಸ್ಥಾನ) ಅದರಂತೆ ಸವನಗಳಲ್ಲಿಯೂ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನ ಎಂಬ ಮೂರು ಸವನಗಳಿರುವವು. ಯಜ್ಞಾದಿಗಳಲ್ಲಿ ಹೋತೃವು ಪ್ರಾತಃಸ್ಸವನಕಾಲದಲ್ಲಿ ಪೃಥಿವೀಸ್ಥಾನ ದೇವತೆಗಳನ್ನು ಮಾಧ್ಯಂದಿನಸವನದಲ್ಲಿ ಮಧ್ಯಸ್ಥಾನದೇವತೆಗಳನ್ನೂ, ತೃತೀಯಸವನದಲ್ಲಿ ದ್ಯುಸ್ಥಾನ (ಸ್ವರ್ಗ) ದೇವತೆಗಳನ್ನೂ ಆಹ್ವಾನಿಸಿ ಸ್ತುತಿಸುವನು. ಇದು ಆರೋಹಣಕ್ರಮವು. ಆರೋಹಣವಾದನಂತರ ಪ್ರತ್ಯವರೋಹಣ ಕ್ರಮವು ಇರುವುದು. ಎಂದರೆ, ಮೊದಲು ದ್ಯುಸ್ಥಾನದೇವತೆಗಳು, ಅನಂತರ ಮಧ್ಯಮಸ್ಥಾನ ದೇವತೆಗಳು, ಅನಂತರ ಪೃಥಿವೀ ಸ್ಥಾನ ದೇವತೆಗಳು ಕ್ರಮವಾಗಿ ಸ್ತುತಿಸಲ್ಪಡುವರು. ಇದು ಪ್ರತ್ಯವರೋಹಣ ಕ್ರಮವು. ಪ್ರತ್ಯವರೋಹಣಕ್ರಮದಲ್ಲಿ ಮೊದಲು ವೈಶ್ವಾನರಾಗ್ನಿಯನ್ನು-**ವೈಶ್ವಾನರಾಯ ಪೃಥುಪಾಜಸೇ** (ಋ. ಸಂ. ೩-೩-೧) ಎಂಬ ಸೂಕ್ತದಿಂದಲೂ, ಅನಂತರ ಮಧ್ಯಸ್ಥಾನದೇವತೆಗಳಾದ ರುದ್ರ ಮತ್ತು ಮರುತ್ತುಗಳನ್ನು **ಆತೇ ಪಿತರ್ಮರುತಾಂ** (ಋ.ಸಂ. ೨-೩೩-೧) ಎಂಬ ಸೂಕ್ತದಿಂದಲೂ ಅನಂತರ ಪೃಥಿವೀಸ್ಥಾನ ದೇವತೆಯಾದ ಅಗ್ನಿಯನ್ನು—**ಯಜ್ಞಾಯಜ್ಞಾ ವೋ ಅಗ್ನಯೇ** (ಋ. ಸಂ. ೬-೪೮-೧) ಎಂಬ ಸೂಕ್ತದಿಂದಲೂ ಸ್ತುತಿಸುವರು. ಅವರೋಹಣಕ್ರಮದಲ್ಲಿ ಮೊದಲು ವೈಶ್ವಾನರಾಗ್ನಿಯ ಸ್ತುತಿ ಇರುವುದರಿಂದ ಈ ಆದಿತ್ಯನು ದ್ಯುಸ್ಥಾನದೇವತೆಯಾಗಿರುವುದರಿಂದಲೂ ಈ ವೈಶ್ವಾನರಾಗ್ನಿಯೇ ಆದಿತ್ಯನು ಎಂದು ಇವರ ವಾದಸರಣಿಯು.

ಅಥಾಪಿ ವೈಶ್ವಾನರೀಯೋ ದ್ವಾದಶಕಪಾಲೋ ಭವತ್ಯೇತಸ್ಯ ಹಿ ದ್ವಾದಶವಿಧಂ ಕರ್ಮ ।

ಇದಲ್ಲದೆ ವೈಶ್ವಾನರಾಗ್ನಿಗೆ ಯಾವಾಗಲೂ ದ್ವಾದಶಕಪಾಲಗಳ ಹವಿಸ್ಸನ್ನು ಹೋಮಮಾಡುವರು. ಆದಿತ್ಯಂ ದ್ವಾದಶಕಪಾಲಂ ಎಂದು ಆದಿತ್ಯನಿಗೂ ದ್ವಾದಶಕಪಾಲಗಳ ಹೋಮವು ಉಕ್ತವಾಗಿದೆ. ದ್ವಾದಶಮಾಸಗಳನ್ನು ಸೂಚಿಸುವ ದ್ವಾದಶ ವಿಭಾಗಗಳ ಹೋಮವು ಆದಿತ್ಯನಿಗೆ ಉಕ್ತವಾಗಿರುವಂತೆಯೇ ವೈಶ್ವಾನರಾಗ್ನಿಗೂ ಉಕ್ತವಾಗಿರುವುದು. ಆದುದರಿಂದ ಈ ವೈಶ್ವಾನರಾಗ್ನಿಯೇ ಆದಿತ್ಯನು.

ಅಥಾಪಿ ಬ್ರಾಹ್ಮಣಂ ಭವತ್ಯಸೌ ವಾ ಆದಿತ್ಯೋಽಗ್ನಿರ್ವೈಶ್ವಾನರಃ ॥

ಇದಲ್ಲದೆ—ಈ ಆದಿತ್ಯನೇ ವೈಶ್ವಾನರಾಗ್ನಿಯು ಎಂದು ಬ್ರಾಹ್ಮಣವಾಕ್ಯವೂ ಇರುವುದು.

ಅಥಾಪಿ ನಿವಿತ್ ಸೌರ್ಯವೈಶ್ವಾನರೀ ಭವತ್ಯಾ ಯೋ ದ್ಯಾಂ ಭಾತ್ಯಾ ಪೃಥಿವೀಮಿತ್ಯೇಷ ಹಿ ದ್ಯಾವಾಪೃಥಿವ್ಯಾವಾಭಾಸಯತಿ ।

CC-0. Jangamwadi Math Collection. Digitized by eGangotri

ನಿವಿನ್ಮಂತ್ರವೆಂದರೆ ಒಂದು ದೇವತೆಯನ್ನು ಸ್ತುತಿಸುವ, ಶಸ್ತ್ರಮಂತ್ರಗಳ ಮಧ್ಯದಲ್ಲಿ ಆ ದೇವತೆಯ ವೈಶಿಷ್ಟ್ಯತೆಯನ್ನು ಸ್ತುತಿಸುವ ಒಂದು ನಿರ್ದಿಷ್ಟವಾದ ಮಂತ್ರವು. ಇದು ಶಸ್ತ್ರಮಂತ್ರಗಳ ಮಧ್ಯದಲ್ಲಿ ಸೇರಿಸಿ ಪಠಿಸುವ ಪ್ರತ್ಯೇಕ ಮಂತ್ರವು. ಇಲ್ಲಿ ಆದಿತ್ಯಪರವಾದ ನಿವಿನ್ಮಂತ್ರಗಳನ್ನು ಪಠಿಸುವಾಗ ಸೌರ್ಯವೈಶ್ವಾನರೀಯಮಂತ್ರವನ್ನು ಪಠಿಸುವರು. ಎಂದರೆ ಆ ನಿವಿನ್ಮಂತ್ರವು ಸೂರ್ಯನನ್ನೂ, ವೈಶ್ವಾನರಾಗ್ನಿಯನ್ನೂ ಸ್ತುತಿಸುವುದು. (ಆ ದೇವತೆಗಳ ಗುಣಗಾನ ಮಾಡುವುದು). ಆ ಮಂತ್ರವು—ಆ ಯೋ ದ್ಯಾಂ ಭಾತ್ಯಾ ಪ್ರಥಿವೀಂ ಎಂದು ಪ್ರಾರಂಭವಾಗಿ ಅದರಲ್ಲಿ ದ್ಯಾವಾಪೃಥಿವಿಗಳನ್ನು ತನ್ನ ಸ್ವಪ್ರಕಾಶದಿಂದ ಬೆಳಗುವ ಎಂದರ್ಥವಿರುವುದು. ದ್ಯಾವಾಪೃಥಿವಿಗಳನ್ನು ಸ್ವಪ್ರಕಾಶದಿಂದ ಬೆಳಗುವವನು ಆದಿತ್ಯನೇ ಆದ್ದರಿಂದ ಈ ಮಂತ್ರಪ್ರತಿಪಾದಿತನಾದ ವೈಶ್ವಾನರಾಗ್ನಿಯೂ ಆದಿತ್ಯನೇ ಎಂದಾಯಿತು.

> ಅಥಾಪಿ ಛಾಂದೋಮಿಕಂ ಸೂಕ್ತಂ ಸೌರ್ಯವೈಶ್ವಾನರಂ ಭವತಿ ದಿವಿ ಪೃಷ್ಠೋ ಅರೋಚತ ಇತ್ಯೇಷ ಹಿ ದಿವಿ ಪೃಷ್ಠೋ ಅರೋಚತೇತಿ।

ಮತ್ತು ಛಾಂದೋಮಿಕಸೂಕ್ತವಾದ ದಿವಿ ಪೃಷ್ಠೋ ಅರೋಚತ (ವಾ. ಸಂ. ೩೩-೯೨) ಎಂಬ ಸೂಕ್ತವೂ ಸೌರ್ಯವೈಶ್ವಾನರದೇವತಾಕವಾದುದು. ಇದರಲ್ಲಿ ಸ್ವರ್ಗದ ಪೃಷ್ಠಭಾಗದಲ್ಲಿ (ಕೆಳಭಾಗದಲ್ಲಿ) ಪ್ರಕಾಶಿಸುತ್ತಿರುವನು ಎಂದಿರುವುದು. ಸ್ವರ್ಗದಲ್ಲಿ ಪ್ರಕಾಶಿಸುತ್ತಿರುವವನು ಎಂದರೆ ಆದಿತ್ಯನೇ. ಈ ಸೂಕ್ತದಿಂದಲೇ ವೈಶ್ವಾನರನನ್ನು ಸ್ತುತಿಸಿರುವುದರಿಂದ ಈ ವೈಶ್ವಾನರಾಗ್ನಿಯೇ ಆದಿತ್ಯನು ಎಂದಾಯಿತು.

> ಅಥಾಪಿ ಹವಿಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ ಭವತಿ।

ಮತ್ತು ಹವಿಷ್ಪಾಂತಮಜರಂ (ಋ. ಸಂ. ೧೦-೮೮-೧) ಎಂಬ ಹವಿಷ್ಪಾಂತೀಯಸೂಕ್ತಕ್ಕೆ (ಹವಿಸ್ಸನ್ನು ಪಾನ ಮಾಡುವ ಕಾಲದಲ್ಲಿ ಪಠಿಸುವ ಸೂಕ್ತ) ಸೂರ್ಯ ಮತ್ತು ವೈಶ್ವಾನರಾಗ್ನಿಗಳು ದೇವತೆಯು ಎಂದರೆ ಈ ಸೂಕ್ತವು ಸೌರ್ಯವೈಶ್ವಾನರಾಗ್ನಿದೇವತಾಕವು. ಈ ಸೂಕ್ತದ—

> ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್ ।
> (ಋ. ಸಂ. ೧೦-೮೮-೨)

ಎಂಬ ಋಕ್ಕಿನಲ್ಲಿ—ದೇವತೆಗಳು—ಸಮಸ್ತ ಲೋಕಕ್ಕೂ ಬೆಳಕನ್ನುಂಟುಮಾಡುವುದಕ್ಕೋಸ್ಕರ ಈ ವೈಶ್ವಾನರಾಗ್ನಿಯನ್ನು ಅಹಸ್ಸುಗಳನ್ನು (ದಿನಗಳನ್ನು, ಹಗಲುಗಳನ್ನು) ಕಲ್ಪಿಸುವಂತೆ ನಿಯಮಿಸಿದರು ಎಂದಿದೆ. ಅಹಸ್ಸುಗಳನ್ನುಂಟುಮಾಡುವವನು ಸೂರ್ಯನೇ ಆದ್ದರಿಂದಲೂ ಈ ವೈಶ್ವಾನರಾಗ್ನಿಯೂ ಅಹಸ್ಸುಗಳನ್ನುಂಟುಮಾಡುವ ಸಾಮರ್ಥ್ಯವುಳ್ಳವನಾದ್ದರಿಂದಲೂ ಈ ವೈಶ್ವಾನರಾಗ್ನಿಯೂ ಆದಿತ್ಯನೂ ಒಂದೇ ವ್ಯಕ್ತಿಯು ಎಂದರೆ ಈ ವೈಶ್ವಾನರಾಗ್ನಿಯೇ ಆದಿತ್ಯನು. ಇವೆಲ್ಲವೂ ಪೂರ್ವಾಚಾರ್ಯರಾದ ಯಾಜ್ಞಿಕರ ಮತವು.

## ವೈಶ್ವಾನರನೇ ಪಾರ್ಥಿವಾಗ್ನಿಯು (ಆದಿತ್ಯನಲ್ಲ) ಎಂಬ ಶಾಕಪೂಣಿಯವರ ಮತವು.

(ಈ ವಿಷಯದಲ್ಲಿ ಆಕ್ಷೇಪಸಮಧಾನಗಳು)

> ಅಯಮೇವಾಗ್ನಿರ್ವೈಶ್ವಾನರ ಇತಿ ಶಾಕಪೂಣಿಃ। ವಿಶ್ವಾನರಾವೇತೇ ಉತ್ತರೇ ಜ್ಯೋತಿಷೀ ವೈಶ್ವಾನರೋಽಯಂ ಯತ್ತಾಭ್ಯಾಂ ಜಾಯತೇ। ಕಥಂ ನ್ವಯಮೇತಾಭ್ಯಾಂ ಜಾಯತ ಇತಿ ಯತ್ರ ವೈದ್ಯುತಃ ಶರಣಮಭಿಹಂತಿ ಯಾವದನುಪಾತ್ತೋ ಭವತಿ ಮಧ್ಯಮಧರ್ಮೈವ ತಾವದ್ಭವತ್ಯುದಕೇಂಧನಃ ಶರೀರೋಪಶಮನ ಉಪಾದೀಯಮಾನ ಏವಾಯಂ ಸಂಪದ್ಯತ ಉದಕೋಪಶಮನಃ ಶರೀರದೀಪ್ತಿಃ॥

CC-0. Jangamwadi Math Collection. Digitized by eGangotri

ಈ ಪಾರ್ಥಿವಾಗ್ನಿಯೇ ವೈಶ್ವಾನರಾಗ್ನಿಯೆಂದು ಶಾಕಪೂಣಿ ಎಂಬ ಆಚಾರ್ಯರ ಮತವು. ಏಕೆಂದರೆ, ದ್ಯುಸ್ಥಾನದಲ್ಲಿರುವ ಆದಿತ್ಯಪ್ರಕಾಶ, ಮಧ್ಯಮಸ್ಥಾನದಲ್ಲಿರುವ ವೈದ್ಯುತಪ್ರಕಾಶ ಎಂಬ ಎರಡು ಪ್ರಕಾಶಗಳಿಂದ (ವಿಶ್ವಾನರಾಗ್ನಿಗಳಿಂದ) ಪಾರ್ಥಿವಾಗ್ನಿಯು ಉತ್ಪನ್ನವಾಗುವುದು. ಆದುದರಿಂದ ವಿಶ್ವಾನರಾಗ್ನಿಗಳಿಂದ ಉತ್ಪನ್ನವಾದ ಅಗ್ನಿಗೆ ವೈಶ್ವಾನರಾಗ್ನಿಯೆಂದು ಹೆಸರು. ಎಂದರೆ ಪಾರ್ಥಿವಾಗ್ನಿಯೇ ವೈಶ್ವಾನರಾಗ್ನಿಯು. ಆದಿತ್ಯಪ್ರಕಾಶ, ವೈದ್ಯುತ ಪ್ರಕಾಶಗಳೆಂಬ ಎರಡು ಜ್ಯೋತಿಗಳಿಂದ ಪಾರ್ಥಿವಾಗ್ನಿಯು ಹೇಗೆ ಉತ್ಪನ್ನವಾಗುವುದು ಎಂದರೆ ಅದನ್ನು ವಿವರಿಸುವರು. ಸ್ಥಾನವಲ್ಲಿಯೂ, ಸ್ವಭಾವದಲ್ಲಿಯೂ ವ್ಯತ್ಯಾಸವನ್ನು ಹೊಂದದೆ ಇರುವ ಆದಿತ್ಯನ ಜ್ಯೋತಿಯು ಪ್ರಥಮ ಧರ್ಮವೆನಿಸುವುದು ಎಂದರೆ ಈ ಆದಿತ್ಯಜ್ಯೋತಿಯು ಇದ್ದಲ್ಲಿಯೇ ಇದ್ದು ತನ್ನ ರಶ್ಮಿಗಳ ಮೂಲಕ ಸಮುದ್ರಾದಿ ಜಲಾಶಯಗಳ ಉದಕಗಳನ್ನು ಹೀರಿ ಆ ಉದಕಗಳನ್ನು ಮೇಘಗಳನ್ನಾಗಿ ಪರಿವರ್ತಿಸುವುದು. ಇದು ಮೊದಲನೇ ಜ್ಯೋತಿಯ ಕಾರ್ಯವು. ಇನ್ನು ವೈದ್ಯುತಾಗ್ನಿಯು ಎರಡನೆಯದೆಂದು ಹೇಳಲ್ಪಡುವುದು. ಈ ವೈದ್ಯುತಾಗ್ನಿಯ ಸ್ವಭಾವವು ಮಧ್ಯಮಧರ್ಮ ಎಂದರೆ ಬೇರೆಯಾಗಿರುವುದು. ಈ ವೈದ್ಯುತಾಗ್ನಿಯು ಉದಕಗಳ (ಮೇಘಗಳ) ಮಧ್ಯದಲ್ಲಿ ಸಂಚರಿಸುವ ಸ್ವಭಾವವುಳ್ಳದ್ದೂ ಮತ್ತು ಜನರಿಗೆ ಆಶ್ರಯಭೂತವಾದ ವೃಕ್ಷ, ಗೃಹ ಮೊದಲಾದುವನ್ನು ಹೊಡೆದು ನಾಶಪಡಿಸುವ ಸ್ವಭಾವವೂ ಉಳ್ಳದ್ದು ಎಂದರೆ, ಈ ವೈದ್ಯುತಾಗ್ನಿಯು ಉದಕಗಳಲ್ಲಿ ಸಂಚರಿಸಲು ಸಾಮರ್ಥ್ಯವುಳ್ಳದ್ದಾಗಿರುವುದರಿಂದ (ಸಾಧಾರಣಾಗ್ನಿಯನ್ನು ಆರಿಸುವಂತೆ) ಉದಕದಿಂದ ಇದನ್ನು ಶಮನಗೊಳಿಸಲು (ಆರಿಸಲು) ಸಾಧ್ಯವಿಲ್ಲ. ಮತ್ತು ಸಾಧಾರಣಾಗ್ನಿಯು ವೃಕ್ಷ, ಮರ ಮೊದಲಾದ ವಸ್ತುಗಳಿಂದ ಉದ್ದೀಪ್ತವಾಗಿ ಉರಿಯತೊಡಗುವುದು. ಆದರೆ ವೈದ್ಯುತಾಗ್ನಿಯು ವೃಕ್ಷಾದಿಗಳಿಗೆ ಸ್ಪರ್ಶವಾದರೆ ಅದು ಅಲ್ಲಿಯೇ ಶಮನವಾಗುವುದು ಎಂದರೆ ಅದರ ಶಕ್ತಿಯು ಅಲ್ಲಿಗೇ ಸಮಾಪ್ತಿಯಾಗುವುದು. ವೃಕ್ಷಾದಿಗಳಿಂದ ಅಭಿವೃದ್ಧಿಯಾಗುವುದಿಲ್ಲ. ಮತ್ತು ಈ ವೈದ್ಯುತಾಗ್ನಿಯನ್ನು ಹಸ್ತಾದಿಗಳಿಂದ ಹಿಡಿದುಕೊಳ್ಳುವುದಕ್ಕಾಗುವುದಿಲ್ಲ. ಇದು ವೈದ್ಯುತಾಗ್ನಿಯ ಸ್ವಭಾವವು. ಆದರೆ ಪಾರ್ಥಿವಾಗ್ನಿಯ (ಸಾಧಾರಣಾಗ್ನಿಯ) ಸ್ವಭಾವವು ಇದಕ್ಕೆ ತೀರಾ ವಿರುದ್ಧವಾಗಿದೆ. ಪಾರ್ಥಿವಾಗ್ನಿಯನ್ನು ಕಾಷ್ಠಾದಿಗಳಿಂದ ವೃದ್ಧಿಪಡಿಸಬಹುದು. ಉದಕಗಳಿಂದ ಶಮನಗೊಳಿಸಬಹುದು. ಹಸ್ತಾದಿಗಳಿಂದ ಧರಿಸಬಹುದು. ಇವು ಪಾರ್ಥಿವಾಗ್ನಿಯ ಸ್ವಭಾವಗುಣಗಳು. ದ್ಯುಸ್ಥಾನಜ್ಯೋತಿ ಮತ್ತು ಮಧ್ಯಸ್ಥಾನಜ್ಯೋತಿ ಎಂಬ ಎರಡು ಜ್ಯೋತಿಗಳಿಂದ ಪಾರ್ಥಿವಾಗ್ನಿಯ ಉತ್ಪತ್ತಿಯಾಗಿದೆಯೆಂಬ ವಿಷಯದಲ್ಲಿ ವಿವರಣೆಯು ಆವಶ್ಯಕವು. ದ್ಯುಸ್ಥಾನಜ್ಯೋತಿಯಾದ ಆದಿತ್ಯನು ತನ್ನ ರಶ್ಮಿಗಳ ಮೂಲಕ ಸಮುದ್ರಾದಿ ಜಲಾಶಯಗಳ ಉದಕಗಳನ್ನು ಆಕರ್ಷಿಸಿ ಮೇಘಗಳಾಗಿ ಪರಿವರ್ತಿಸುವನು ಆ ಮೇಘಗಳಲ್ಲಿ ಗೋಚರಿಸುವ ವೈದ್ಯುತಾಗ್ನಿಯು ವೃಕ್ಷಾದಿಗಳಿಗೆ ಸ್ಪರ್ಶಿಸುವಾಗ ಪಾರ್ಥಿವಾಗ್ನಿಯು ಉತ್ಪನ್ನವಾಗಿ ಉರಿಯುವುದೆಂಬ ವಿಷಯವು ಲೋಕಪ್ರಸಿದ್ಧವಾಗಿದೆ. ಆದುದರಿಂದ ದ್ಯುಸ್ಥಾನಜ್ಯೋತಿ ಮತ್ತು ಮಧ್ಯಮಸ್ಥಾನ ಜ್ಯೋತಿಗಳೆರಡರಿಂದಲೂ ಪಾರ್ಥಿವಾಗ್ನಿಯು ಉತ್ಪತ್ತಿಯಾಗುವುದೆಂದು ಇಲ್ಲಿ ವಿವರಿಸಿದೆ. ಆದ್ದರಿಂದ ವಿಶ್ವಾನರಾಗ್ನಿಗಳಾದ ಎರಡು ಜ್ಯೋತಿಗಳಿಂದ ಉತ್ಪನ್ನವಾದ ಪಾರ್ಥಿವಾಗ್ನಿಗೆ ವೈಶ್ವಾನರಾಗ್ನಿಯೆಂದು ಹೆಸರು.

ಅಥಾದಿತ್ಯಾದುದೀಚೀಪ್ರಥಮಸಮಾವೃತ್ತ ಆದಿತ್ಯೇ ಕಂಸಂ ವಾ ಮಣಿಂ ವಾ ಪರಿಮೃಜ್ಯ ಪ್ರತಿಸ್ವರೇ ಯತ್ರ ಶುಷ್ಕಗೋಮಯಮಸಂಸ್ಪರ್ಶಯನ್ ಧಾರಯತಿ ಯತ್ ಪ್ರದೀಪ್ಯತೇ ಸೋಽಯಮೇವ ಸಂಪದ್ಯತೇ ।

CC-0. Jangamwadi Math Collection. Digitized by eGangotri

ಆದಿತ್ಯನಿಂದ ಪಾರ್ಥಿವಾಗ್ನಿಯು ಉತ್ಪತ್ತಿಯಾಗುವ ವಿಷಯದಲ್ಲಿ ಇನ್ನೊಂದುದಾಹರಣೆಯನ್ನು ಕೊಡುವರು ಸೂರ್ಯನು ಅಂತರಿಕ್ಷದಲ್ಲಿ ಉತ್ತರದಿಕ್ಕಿಗಭಿಮುಖವಾಗಿ ಬಂದಾಗ ಎಂದರೆ ಮಧ್ಯಾಹ್ನಸಮಯದಲ್ಲಿ ಬಹಳ ತಾಪ ಯುಕ್ತನಾಗಿರುವಾಗ ಚೆನ್ನಾಗಿ ಥಳಥಳಿಸುವ ತಾಮ್ರದ ತಗಡನ್ನಾಗಲಿ, ಕನ್ನಡಿಯನ್ನಾಗಲಿ ಸೂರ್ಯನಿಗೆ ಎದುರಾಗಿ ಹಿಡಿದು ಅದರ ರಶ್ಮಿಗಳು ಕೇಂದ್ರೀಕೃತವಾಗಿ (ಒಟ್ಟುಗೂಡಿ) ನೆಲದ ಮೇಲೆ ಇಟ್ಟಿರುವ ಒಣಗಿದ ಬೆರಣಿಯ ಪುಡಿಯ ಮೇಲೆ ಬೀಳುವಂತೆ ಮಾಡಿದರೆ ತಕ್ಷಣವೇ ಅಗ್ನಿಯು ಹೊತ್ತಿಕೊಳ್ಳುವುದು. ಎಂದರೆ ಆದಿತ್ಯನಿಂದ ಪಾರ್ಥಿವಾಗ್ನಿಯ ಉತ್ಪತ್ತಿಯಾಗುವುದು ಎಂಬುದಕ್ಕೆ ಇದೂ ಒಂದು ಉದಾಹರಣೆಯು.

> ಅಥಾಪ್ಯಾಹ—ವೈಶ್ವಾನರೋ ಯತತೇ ಸೂರ್ಯೇಣ—ನ ಚ ಪುನರಾತ್ಮನಾತ್ಮಾ ಸಂಯತತೇಽನ್ಯೇನೈವಾನ್ಯಃ ಸಂಯತೇತ ಇತಿ ಇಮಮಾದಧಾತ್ಯಮುತೋಽಮುಷ್ಯ ರಶ್ಮಯಃ ಪ್ರಾದುರ್ಭವಂತೀತೋಽಸ್ಯಾರ್ಚಿಷಸ್ತಯೋರ್ಭಾಸೋಃ ಸಂಸಂಗಂ ದೃಷ್ಟ್ವೈವಮವಕ್ಷ್ಯತ್ ।

ಹಿಂದೆ ಹೇಳಿದ ಉದಾಹರಣೆಯಲ್ಲಿ—ವೈಶ್ವಾನರೋ ಯತತೇ ಸೂರ್ಯೇಣ । ಎಂಬ ವಾಕ್ಯದಲ್ಲಿ ವೈಶ್ವಾನರಾಗ್ನಿಯು ಸೂರ್ಯನೊಡನೆ ಸೇರಿ ವಿಸ್ತೃತನಾಗುವನು ಎಂದರೆ ಎಲ್ಲವನ್ನೂ ವ್ಯಾಪಿಸುವನು ಎಂಬರ್ಥವನ್ನು ಮಂತ್ರದ್ರಷ್ಟೃವಾದ ಋಷಿಯು ಹೇಳಿದಾನೆ. ಸೂರ್ಯನ ಸ್ಥಾನವು ವ್ಯತ್ಯಸ್ಥವಾಗುವುದಿಲ್ಲವಾದ್ದರಿಂದ ಸೂರ್ಯನು ತನ್ನ ಸ್ಥಾನದಿಂದ ಮುಂದಕ್ಕೆ ವೈಶ್ವಾನರಾಗ್ನಿಯೊಡನೆ ಹೋಗಿ ವ್ಯಾಪಿಸುವನು ಎಂಬುದು ಅಸಂಭವವು- ಒಂದು ವಸ್ತುವು ಒಂದೇಕಾಲದಲ್ಲಿ ಒಂದು ಸ್ಥಾನದಲ್ಲಿರಬಹುದೇ ಹೊರತು ಅಲ್ಲಿಯೂ ಇದ್ದು ಮುಂದಕ್ಕೂ ಹೋಗಲು ಸಾಧ್ಯವಿಲ್ಲ. ಅದರ ಜತೆಗೆ ಬೇರೆ ವಸ್ತುವು ಸೇರಿದರೆ ಮಾತ್ರ ಬೇರೆ ಸ್ಥಳವನ್ನು ವ್ಯಾಪಿಸಬಲ್ಲುದು. ಆದ್ದರಿಂದ ಇಲ್ಲಿ ಸೂರ್ಯನೇ ಬೇರೆ, ವೈಶ್ವಾನರಾಗ್ನಿಯೇ ಬೇರೆ. ಇಬ್ಬರೂ ಸೇರಿ ಎಲ್ಲವನ್ನೂ ವ್ಯಾಪಿಸಲು ಸಮರ್ಥರು. ಇಲ್ಲಿ ಪಾರ್ಥಿವಾಗ್ನಿಯನ್ನು ಇಲ್ಲಿಯೇ (ಭೂಮಿಯಲ್ಲಿಯೇ) ಹೊತ್ತಿಸುವರು. ಆದಿತ್ಯನ ಪ್ರಕಾಶವು ದ್ಯುಲೋಕದಿಂದ ರಶ್ಮಿಗಳ ಮೂಲಕ ಹೊರಟು ಭೂಮಿಯಲ್ಲಿರುವ ಪಾರ್ಥಿವಾಗ್ನಿಯನ್ನು ಸಂಧಿಸುವುದು. ಎಂದರೆ ಸೂರ್ಯನ ಪ್ರಕಾಶವೂ, ಅಗ್ನಿಯ ಪ್ರಕಾಶವೂ ಒಂದಾಗಿ ಸೇರಿ ಆ ಪ್ರಕಾಶವು ರಶ್ಮಿಗಳ ಮೂಲಕ ಎಲ್ಲೆಲ್ಲಿಯೂ ಹರಡುವುದು ಎಂಬ ಅಭಿಪ್ರಾಯವನ್ನೇ ಮಂತ್ರದ್ರಷ್ಟೃವಾದ ಋಷಿಯು ಮನಸ್ಸಿನಲ್ಲಿಟ್ಟುಕೊಂಡು ವೈಶ್ವಾನರೋ ಯತತೇ ಸೂರ್ಯೇಣ ಎಂಬ ವಾಕ್ಯವನ್ನು ಹೇಳಿರುವನು.

> ಅಥ ಯಾನ್ಯೇತಾನ್ಯೌತ್ತಮಿಕಾನಿ ಸೂಕ್ತಾನಿ ಭಾಗಾನಿ ವಾ ಸಾವಿತ್ರಾಣಿ ವಾ ಸೌರ್ಯಾಣಿ ವಾ ಪೌಷ್ಣಾನಿ ವಾ ವೈಷ್ಣವಾನಿ ವಾ ವೈಶ್ವದೇವ್ಯಾನಿ ವಾ ತೇಷು ವೈಶ್ವಾನರೀಯಾಃ ಪ್ರವಾದಾ ಅಭವಿಷ್ಯನ್ನಾದಿತ್ಯಕರ್ಮಣಾ ಚೈನಮಸ್ತೋಷ್ಯನ್ನಿತ್ಯುದೇಷೀತ್ಯಸ್ತಮೇಷೀತಿ ವಿಪರ್ಯೇಷೀತಿ ॥ ಆಗ್ನೇಯೇಷ್ವೇವ ಹಿ ಸೂಕ್ತೇಷು ವೈಶ್ವಾನರೀಯಾಃ ಪ್ರವಾದಾ ಭವಂತಿ । ಅಗ್ನಿಕರ್ಮಣಾ ಚೈನಂ ಸ್ತೌತೀತಿ ವಹಸೀತಿ ಪಚಸೀತಿ ದಹಸೀತಿ ॥

ಒಂದುವೇಳೆ ವೈಶ್ವಾನರನೇ ಆದಿತ್ಯನಾಗಿದ್ದಪಕ್ಷದಲ್ಲಿ ಆದಿತ್ಯ ಅಥವಾ ಸವಿತೃಸಂಬಂಧವಾದ ಸೂಕ್ತಗಳಲ್ಲಿಯೂ ಅಥವಾ ಋಕ್ಕುಗಳಲ್ಲಿಯೂ ಅಥವಾ ಸೂರ್ಯ, ಪೂಷಾ, ವಿಷ್ಣು, ವಿಶ್ವೇದೇವತೆಗಳು ಪ್ರತಿಪಾದಿತರಾಗಿರುವ ಸೂಕ್ತಗಳಲ್ಲಿಯೂ ವೈಶ್ವಾನರಾಗ್ನಿಗೆ ಆದಿತ್ಯಪರವಾದ ಗುಣಗಳು, ವೈಶಿಷ್ಟ್ಯಗಳು ಎಂದರೆ (ಸೂರ್ಯನ ವಿಷಯದಲ್ಲಿ ಹೇಳುವಂತೆ) ನೀನ. ಉದಯಿಸುತ್ತೀಯೆ, ಮುಳುಗುತ್ತೀಯೆ, ಅಂತರಿಕ್ಷದಲ್ಲಿ ಸಂಚರಿಸುತ್ತೀಯೆ ಎಂದು ಮೊದಲಾದ ಅರ್ಥ

CC-0. Jangamwadi Math Collection. Digitized by eGangotri

ಬೋಧಕಗಳಾದ ವಾಕ್ಯಾದಿಗಳಿಂದ ಸ್ತುತಿಸಲ್ಪಡಬೇಕಾಗಿದ್ದಿತು. ಆದರೆ ಹಾಗಿಲ್ಲ. ಅಗ್ನಿಸಂಬಂಧವಾದ ಸೂಕ್ತಗಳಲ್ಲಿ ಮಾತ್ರ ಅಗ್ನಿಯ ಗುಣಗಳಾದ ಹವಿರ್ವಹನ, ಪಾಚನ, ದಹನ ಮೊದಲಾದ ಕ್ರಿಯೆಗಳನ್ನು ವರ್ಣಿಸುವ ವಾಕ್ಯಗಳೇ ವೈಶ್ವಾನರಾಗ್ನಿಗೂ ಅನ್ವಯಿಸುವಂತೆ ಹೇಳಲ್ಪಟ್ಟಿದೆ. ಎಂದರೆ ಅಗ್ನಿಯ ಗುಣಗಳನ್ನೇ ವೈಶ್ವಾನರಾಗ್ನಿಗೂ ಅನ್ವಯಿಸಿ ವರ್ಣಿಸಿದೆ. ಆದ್ದರಿಂದ ವೈಶ್ವಾನರಾಗ್ನಿಯು ಪಾರ್ಥಿವಾಗ್ನಿಯೇ ಹೊರತು ಆದಿತ್ಯನಲ್ಲ

ಯಥೋ ಏತದ್ವರ್ಷಕರ್ಮಣಾ ಹ್ಯೇನಂ ಸ್ತೌತೀತ್ಯಸ್ಮಿನ್ನಪ್ಯೇತದುಪಪದ್ಯತೇ ।

ಸಮಾನಮೇತದುದಕಮುಚ್ಚೈತ್ಯವ ಚಾಹಭಿಃ ।
ಭೂಮಿಂ ಪರ್ಜನ್ಯಾ ಜಿನ್ವಂತಿ ದಿವಂ ಜಿನ್ವಂತ್ಯಗ್ನಯಃ ॥

(ಋ ಸಂ. ೧-೧೬೪-೫೧)

ಇತಿ ಸಾ ನಿಗದವ್ಯಾಖ್ಯಾತಾ ॥

(ನಿ. ೭-೨೩)

ಈ ವೈಶ್ವಾನರಾಗ್ನಿಯನ್ನು ವೃಷ್ಟಿಕರ್ಮಕ್ಕೆ ಪ್ರೇರಕನನ್ನಾಗಿ ಸ್ತುತಿಸುವ ಮಂತ್ರಗಳಿರುವವು. ಆದುದರಿಂದ ವೃಷ್ಟಿಕರ್ಮಕ್ಕೆ ಆದಿತ್ಯನು ಪ್ರೇರಕನಾದುದರಿಂದ ವೈಶ್ವಾನರಾಗ್ನಿಗೂ ಆದಿತ್ಯಗುಣಗಳಿದ್ದಂತಾಯಿ. ಆದುದರಿಂದ ವೈಶ್ವಾನರಾಗ್ನಿಯೇ ಆದಿತ್ಯನು ಎಂದು ಹೇಳಬಹುದಲ್ಲವೇ ? ಎಂದರೆ, ಹಾಗಲ್ಲ. ಹಗಲುಗಳು ರಾತ್ರಿಕಳೆದನಂತರ ಮತ್ತೆಮತ್ತೆ ಪ್ರಾಪ್ತವಾಗುವಂತೆ ಉದಕಗಳು ಭೂಮಿಯಿಂದ ಮೇಲಕ್ಕೂ (ಅಂತರಿಕ್ಷಕ್ಕೂ) ಅಂತರಿಕ್ಷದಿಂದ ಭೂಮಿಗೂ ಮತ್ತೆ ಮತ್ತೆ ಬರುತ್ತಿರುವವು. ಆದುದರಿಂದ ಉದಕಗಳಿಗೂ, ಹಗಲುಗಳಿಗೂ ಸಮಾನಧರ್ಮವಿದ್ದಂತಾಯಿತು. ಆದ್ದರಿಂದ ಭೂಮಿಯನ್ನು ವೃಷ್ಟ್ಯುದಕದಿಂದ ಪರ್ಜನ್ಯದೇವತೆಯು ತೃಪ್ತಿಪಡಿಸುವನು. ಸ್ವರ್ಗವನ್ನು ಅಗ್ನಿಗಳು ತೃಪ್ತಿಪಡಿಸುವವು. ಅಗ್ನಿಯು ಸ್ವರ್ಗವನ್ನು ತೃಪ್ತಿಪಡಿಸುವುದು ಹೇಗೆಂದರೆ—ಯಜ್ಞದಲ್ಲಿ ಯಜಮಾನರು ಅಗ್ನಿಯಲ್ಲಿ ಹೋಮಮಾಡುವ ಹವಿರಾದಿಗಳು ಸೂಕ್ಷ್ಮರೂಪದಿಂದ ಎಂದರೆ ಧೂಮಾಕಾರದಿಂದ ದೇವಯೋಗ್ಯವಾದ ರೂಪವನ್ನು ಹೊಂದಿ ದೇವತೆಗಳಿಗೆ ತೃಪ್ತಿಯನ್ನುಂಟುಮಾಡುವವು. ದೇವತೆಗಳು ಪ್ರೀತರಾಗಿ ಭೂಲೋಕನಿವಾಸಿಗಳಿಗೆ ವೃಷ್ಟಿಯ ಮೂಲಕ ತೃಪ್ತಿಯನ್ನುಂಟುಮಾಡುವರು. ಇದಲ್ಲದೆ— ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ ಎಂಬ ವಾಕ್ಯಾನುಸಾರವಾಗಿ ಅಗ್ನಿಯಲ್ಲಿ ಅರ್ಪಿಸಿದ ಆಹುತಿಯು ಸ್ವರ್ಗದಲ್ಲಿರುವ ಆದಿತ್ಯನನ್ನು ಸಂತೋಷಗೊಳಿಸುತ್ತದೆ ಎಂದಿರುವುದರಿಂದ ಅಗ್ನಿಯು ಸ್ವರ್ಗ ಅಥವಾ ಆದಿತ್ಯನನ್ನು ತೃಪ್ತಿಪಡಿಸಿದಂತಾಯಿತು. ವೃಷ್ಟಿಯು ಭೂಲೋಕದಿಂದ ಸ್ವರ್ಗಕ್ಕೂ, ಸ್ವರ್ಗದಿಂದ ಭೂಮಿಗೂ ಪರಸ್ಪರ ಸಹಾಯಮಾಡುವ ಸಾಧನವಾಯಿತು. ಈ ಕಾರಣಗಳಿಂದ ಅಗ್ನಿಯನ್ನು ಅಥವಾ ವೈಶ್ವಾನರಾಗ್ನಿಯನ್ನು ವೃಷ್ಟಿಕರ್ಮಕ್ಕೆ ಕಾರಣನೆಂದು ಸ್ತುತಿಸಿರುವುದೇ ಹೊರತು ವೈಶ್ವಾನರನೇ ಆದಿತ್ಯನೆಂದು ಇದರಿಂದ ಸ್ಪಷ್ಟಪಡುವುದಿಲ್ಲ. ಈ ಋಕ್ಕಿನ ಅಭಿಪ್ರಾಯವು ಸ್ಪಷ್ಟವಾಗಿರುವುದರಿಂದ ಹೆಚ್ಚು ವಿವರಣೆಯ ಅವಶ್ಯಕತೆಯಿಲ್ಲ.

ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ ।
ತ ಆವವೃತ್ರನ್ತ್ಸದನಾದೃತಸ್ಯಾದಿದ್ಘೃತೇನ ಪೃಥಿವೀ ವ್ಯುದ್ಯತೇ ॥

(ಋ. ಸಂ. ೧-೧೬೪-೪೭)

CC-0. Jangamwadi Math Collection. Digitized by eGangotri

ಕೃಷ್ಣಂ ನಿರಯಣಂ ರಾತ್ರಿರಾದಿತ್ಯಸ್ಯ ಹರಯಃ ಸುಪರ್ಣಾ ಹರಣಾ ಆದಿತ್ಯರಶ್ಮಯಸ್ತೇ ಯದಾ-
ಮುತೋಽರ್ವಾಂಚಃ ಪರ್ಯಾವರ್ತಂತೇ ಸಹಸ್ಥಾನಾದುದಕಸ್ಯಾದಿತ್ಯಾದಥ ಘೃತೇನೋದ-
ಕೇನ ಪೃಥಿವೀ ವ್ಯುದ್ಯತೇ ಘೃತಮಿತ್ಯುದಕನಾಮ ಜಿಘರ್ತೇಃ ಸಿಂಚತಿಕರ್ಮಣಃ ॥

(ನಿ. ೭-೨೪)

ಉದಕವನ್ನು ವಹಿಸಿರತಕ್ಕವೂ, ಶ್ರೇಷ್ಠವಾದ ಸಂಚಾರವುಳ್ಳವೂ ಆದ ರಶ್ಮಿಗಳು ಕಪ್ಪುಬಣ್ಣವುಳ್ಳದ್ದೂ, ನಿಯತವಾದ ಗತಿಯುಳ್ಳದ್ದೂ ಆದ ಮೇಘವನ್ನು (ಅಥವಾ ರಾತ್ರೆಯನ್ನು) ಉದಕದಿಂದ ಆಚ್ಛಾದಿತವಾಗುವಂತೆ ಮಾಡಿ ಎಂದರೆ ಉದಕದಿಂದ ಕೂಡಿ ದ್ಯುಲೋಕಾಭಿಮುಖವಾಗಿ ಮೇಲಕ್ಕೆ ಪ್ರಸರಿಸುತ್ತವೆ. ಪುನಃ ಅವು ಉದಕದ ಸ್ಥಾನವಾದ ಆದಿತ್ಯನಿಂದ ಹಿಂತಿರುಗುತ್ತವೆ. ಒಡನೆಯೇ ಪೃಥ್ವಿಯು ಉದಕದಿಂದ ತೋಯಲ್ಪಡುತ್ತದೆ (ನೆನೆಸಲ್ಪಡುತ್ತದೆ).

ನಿರಯಣವೆಂದರೆ ಇಲ್ಲಿ ಸಂಚಾರಮಾರ್ಗವೆಂದು ಹೇಳಬಹುದು. ನಿರ್ಗಮನಮಾರ್ಗವೆಂದು ಈ ಶಬ್ದಕ್ಕೆ ಸಾಧಾರಣವಾದ ಅರ್ಥವಿರುತ್ತದೆ. ಆದಿತ್ಯನ ಸಂಚಾರಮಾರ್ಗಗಳೆರಡು. ಒಂದು ಕೃಷ್ಣವರ್ಣದ್ದು, ಇನ್ನೊಂದು ಶುಕ್ಲವರ್ಣದ್ದು. ಕೃಷ್ಣವರ್ಗದ ಸಂಚಾರಮಾರ್ಗಕ್ಕೆ ರಾತ್ರಿಯೆಂದಾಗಲಿ, ದಕ್ಷಿಣಾಯನವೆಂದಾಗಲಿ ಅರ್ಥಮಾಡ ಬಹುದು. ಅಥವಾ ದಕ್ಷಿಣಾಯನ ಸಂಚಾರವನ್ನೇ ಆದಿತ್ಯನ ರಾತ್ರಿಸಂಚಾರವೆಂದು ಹೇಳಬಹುದು. ದುರ್ಗಾಚಾ ರ್ಯರು ಮೇಲಿನ ನಿರುಕ್ತವಾಕ್ಯಕ್ಕೆ ಈರೀತಿ ವ್ಯಾಖ್ಯಾನವನ್ನು ಬರೆದಿರುತ್ತಾರೆ—

ನಿಯಾನಂ ನಿರಯಣಂ ನಿರ್ಗತಿಃ (ನಿರ್ಯಾತಿ) ನಿರ್ಗಚ್ಛಂತ್ಯೇತದಿತಿ ನಿಯಾನಂ ವರ್ತ್ಮ ಪಂಥಾಃ। ತಚ್ಚ ಪುನರೇತತ್ । ರಾತ್ರಿಃ ಆದಿತ್ಯಸ್ಯ । ದ್ವೇ ಹ್ಯಸ್ಯಾಯನೇ ಶುಕ್ಲಂ ಚೋತ್ತರಂ ಕೃಷ್ಣಂ ಚ ದಕ್ಷಿಣಂ । ಸಾ ಹಿ ದೈವೀರಾತ್ರಿರಭಿಪ್ರೇತಾ । ತತೋ ಬ್ರವೀತಿ ರಾತ್ರಿರಾದಿತ್ಯಸ್ಯ ಜ್ಯೋತಿಷಃ । ಸ ಏಷ ಭಗವಾನಾದಿತ್ಯೋ ಯದಾ ಜಗದನುಗ್ರಹಾಯ ಗರ್ಭಮುದಕಮಾತ್ಮನ್ಯಾಧಿತ್ಸುರುತ್ತ ರಾಯಣಂ ಪ್ರತಿಪದ್ಯತೇ ತದೈತೇ ಹರಯಃ ರಸಹರಣಾಃ ಸುಪರ್ಣಾಸ್ತಸ್ಯ ರಶ್ಮಯಃ ಸರ್ವ-ಸ್ಮಾದಸ್ಮಾಲ್ಲೋಕಾದಪೋವಸಾನಾಃ ಆತ್ಮನ್ಯಾಚ್ಛಾದಯಂತಃ ಆದದಾನಾಃ ದಿವಂ ದ್ಯೋತ-ನವಂತಮೇತಮಾದಿತ್ಯಂ ಪ್ರತ್ಯುತ್ಪತಂತಿ ।

(ನಿರುಕ್ತವ್ಯಾಖ್ಯಾ ೭-೨೪).

ಆದಿತ್ಯನ ಗತಿಯು ಎರಡು ವಿಧವಾಗಿರುತ್ತದೆ. ಒಂದು ಉತ್ತರಾಯಣಕ್ಕೂ ಮತ್ತೊಂದು ದಕ್ಷಿಣಾಯನಕ್ಕೂ ಸಂಬಂಧಿಸಿದುದು. ಒಂದನ್ನು ಶುಕ್ಲವೆಂದೂ ಇನ್ನೊಂದನ್ನು ಕೃಷ್ಣವೆಂದೂ ಕರೆದಿದೆ. ಇಲ್ಲಿ ರಾತ್ರಿಯೆಂಬುದು ಕೃಷ್ಣಾಯನಕ್ಕೆ ಪರ್ಯಾಯವಾದ ಪದವಾಗಿದೆ.—ಕೃಷ್ಣಂ ನಿಯಾನಂ ನಿಯಮನಂ ರಾತ್ರಿಃ । ದೇವಾನಾಂ ಹಿ ರಾತ್ರಿರ್ದಕ್ಷಿಣಾಯನಂ । ತತ್ಪ್ರತಿ ತಸ್ಮಿನ್ವರ್ಷಾಕಾಲೇ ಇತ್ಯರ್ಥಃ । ದೇವತೆಗಳ ರಾತ್ರಿಕಾಲಕ್ಕೆ ದಕ್ಷಿಣಾಯನವೆಂದು ಹೆಸರು. ಆದಿತ್ಯನು ಉತ್ತರಾಯಣದ ಗತಿಯನ್ನನುಸರಿಸುತ್ತಿದ್ದಾಗ ಅವನ ರಶ್ಮಿಗಳೆಲ್ಲವೂ ಪ್ರಪಂಚದಲ್ಲಿ ಪ್ರಸರಿಸಿ ಎಲ್ಲಾ ಪ್ರದೇಶಗಳಿಂದಲೂ ಉದಕವನ್ನು ಸಂಗ್ರಹಿಸಿ ಈ ರಾತ್ರಿಕಾಲಕ್ಕೆ ಸರಿಯಾಗಿ ಪುನಃ ಆದಿತ್ಯನನ್ನು ಸೇರುವವು. ಇದೇ ವರ್ಷಾಕಾಲವು. ಈ ಕಾಲದಲ್ಲಿ ವೃಷ್ಟಿಯು ಬಹಳವಾಗಿ ಸುರಿಯುವುದು ಘೃತವೆಂಬಶಿ ಉದಕಕ್ಕೆ ಹೆಸರು. ಜಿಘರ್ತಿ-ಸಿಂಪಡಿಸು ಎಂಬ ಧಾತುವಿನಿಂದ ಘೃತಶಬ್ದವು ನಿಷ್ಪನ್ನವಾಗಿದೆ.

ಅಥಾಪಿ ಬ್ರಾಹ್ಮಣಂ ಭವತ್ಯಗ್ನಿರ್ವಾ ಇತೋ ವೃಷ್ಟಿಂ ಸಮೀರಯತಿ ಧಾಮಚ್ಛದಿತಿ ಖಲು ಭೂತ್ವಾ ವರ್ಷತಿ ಮರುತಃ ಸೃಷ್ಟಾಂ ವೃಷ್ಟಿಂ ನಯಂತಿ ।

ಯದಾ ಖಲು ವಾಸಾವಾದಿತ್ಯೋಽಗ್ನಿಂ ರಶ್ಮಿಭಿಃ ಪರ್ಯಾವರ್ತತೇಽಥ ವರ್ಷತೀತಿ ।

CC-0. Jangamwadi Math Collection. Digitized by eGangotri

ಯಥೋ ಏತದ್ರೋಹಾತ್ ಪ್ರತ್ಯವರೋಹಶ್ಚಿಕೀರ್ಷಿತ ಇತ್ಯಾಮ್ನಾಯವಚನಾದೇತದ್ಭವತಿ ।
ಯಥೋ ಏತದ್ವೈಶ್ವಾನರೀಯೋ ದ್ವಾದಶಕಪಾಲೋ ಭವತೀತ್ಯನಿರ್ವಚನಂ ಕಪಾಲಾನಿ ಭವಂ-
ತ್ಯಸ್ತಿ ಹಿ ಸೌರ್ಯ ಏಕಕಪಾಲಃ ಪಂಚಕಪಾಲಶ್ಚ ।

ಯಥೋ ಏತದ್ಬ್ರಾಹ್ಮಣಂ ಭವತೀತಿ–ಬಹುಭಕ್ತಿವಾದೀನಿ ಹಿ ಬ್ರಾಹ್ಮಣಾನಿ ಭವಂತಿ–ಪೃಥಿವೀ
ವೈಶ್ವಾನರಃ ಸಂವತ್ಸರೋ ವೈಶ್ವಾನರೋ ಬ್ರಾಹ್ಮಣೋ ವೈಶ್ವಾನರ ಇತಿ ॥

ಇದಲ್ಲದೆ ಅನೇಕ ಬ್ರಾಹ್ಮಣವಾಕ್ಯಗಳೂ ಈ ಅರ್ಥವನ್ನು ಸಮರ್ಥಿಸುವವು. ಹೇಗೆಂದರೆ ' ಅಗ್ನಿಯು ಈ ಲೋಕದಿಂದ ಮಳೆಯನ್ನು ಸುರಿಸುತ್ತಾನೆ' ಎಂಬ ಬ್ರಾಹ್ಮಣವಾಕ್ಯವಿದೆ—ಅಗ್ನೇರ್ವೈ ಧೂಮೋ ಜಾಯತೇ, ಧೂಮಾದಭ್ರಂ, ಅಭ್ರಾತ್ ವೃಷ್ಟಿರಿತಿ ಹ ವಿಜ್ಞಾಯತೇ—ಅಗ್ನಿಯಿಂದ ಧೂಮವು (ಹೊಗೆಯು) ಉತ್ಪನ್ನವಾಗುವುದು. ಧೂಮದಿಂದ ಮೇಘವೂ ಮೇಘದಿಂದ ವೃಷ್ಟಿಯೂ ಉಂಟಾಗುವುದು ಎಂದು ತಿಳಿಯಬೇಕು ಎಂದರ್ಥವು. ಅಥವಾ ಈ ಆದಿತ್ಯನು ಅಗ್ನಿಯನ್ನು ತನ್ನ ರಶ್ಮಿಗಳಿಂದ ಹಿಂತಿರುಗುವಂತೆ ಮಾಡಿದಾಗ ಮಳೆ ಬರುತ್ತದೆ. ಅಥವಾ ರೋಹಪ್ರತ್ಯವರೋಹಕ್ರಮದಿಂದ ಎಂದರೆ ಅಗ್ನಿಯಲ್ಲಿ ಅರ್ಪಿಸಿದ ಆಹುತಿಯು ಸೂಕ್ಷ್ಮರೂಪದಿಂದ ಧೂಮವಾಗಿ ಸ್ವರ್ಗದಲ್ಲಿರುವ ದೇವತೆಗಳಿಗೆ ಸೇರಿ ಅವರು ತೃಪ್ತಿಗೊಂಡು ಅದರಿಂದ ವೃಷ್ಟಿಕರ್ಮವುಂಟಾಗುವುದು ಎಂದು ಹೇಳುವುದಕ್ಕೆ ಬ್ರಾಹ್ಮಣವಾಕ್ಯ ಹೊರತು ಮತ್ಯಾವ ಆಧಾರವೂ ಇಲ್ಲ. ವೈಶ್ವಾನರಾಗ್ನಿಗೆ ದ್ವಾದಶಕಪಾಲವೆಂದೂ ಸೂರ್ಯನಿಗೆ ಏಕ (ಒಂದು) ಕಪಾಲ ಅಥವಾ ಐದು ಕಪಾಲಗಳ ಹವಿಸ್ಸೆಂದು ಹೇಳಿರುವುದು ಈ ವಿಷಯಕ್ಕೆ ಸಂಬಂಧಪಟ್ಟಿದ್ದಲ್ಲ. ಅದು ಯಜ್ಞಾಂಗಗಳಾದ ಕಾರ್ಯಗಳಿಗೆ ಮಾತ್ರ ಸಂಬಂಧಪಟ್ಟಿರುವುದು. ಇನ್ನು ಕೆಲವು ಬ್ರಾಹ್ಮಣವಾಕ್ಯಗಳಲ್ಲಿ—ಪೃಥಿವೀ, ವೈಶ್ವಾನರಃ ಇತ್ಯಾದಿ ವಾಕ್ಯಗಳಲ್ಲಿ—ಪೃಥಿವಿಯು ವೈಶ್ವಾನರನು, ಸಂವತ್ಸರವೂ ವೈಶ್ವಾನರನು, ಬ್ರಾಹ್ಮಣನೂ ವೈಶ್ವಾನರನು, ಎಂದು ಹೇಳಿರುವುದು ಸರಿಯಷ್ಟೆ. ಈ ಸಂದರ್ಭದಲ್ಲಿ ಪೃಥಿವೀ ಮೊದಲಾದ ದೇವತೆಗಳೇ ವೈಶ್ವಾನರಾಗ್ನಿಯೆಂದಲ್ಲ. ವೈಶ್ವಾನರನು ಪೃಥಿವೀ ಮೊದಲಾದ ದೇವತೆಗಳ ಗುಣಗಳನ್ನು ಹೊಂದಿರುವನೆಂದು ವೈಶ್ವಾನರನ ಗುಣವರ್ಣನೆ ಮಾಡುವುದಕ್ಕಾಗಿ ಹೇಳಿರುವ ಸ್ತುತಿವಾಕ್ಯಗಳು ಎಂದು ತಿಳಿಯಬೇಕು.

ಯಥೋ ಏತನ್ನಿವಿತ್ಸೌರ್ಯವೈಶ್ವಾನರೀ ಭವತೀತ್ಯಸ್ಯೈವ ಸಾ ಭವತಿ—ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇತ್–ಇತ್ಯೇಷ ಹಿ ವಿಡ್ಭ್ಯೋ ಮಾನುಷೀಭ್ಯೋ ದೀಪ್ಯತೇ।
ಯಥೋ ಏತಚ್ಛಾಂದೋಮಿಕಂ ಸೂಕ್ತಂ ಸೌರ್ಯವೈಶ್ವಾನರಂ ಭವತೀತ್ಯಸ್ಯೈವೈತದ್ಭವತಿ ಜಮದಗ್ನಿಭಿರಾಹುತ ಇತಿ। ಜಮದಗ್ನಯಃ ಪ್ರಜಮಿತಾಗ್ನಯೋ ವಾ ಪ್ರಜ್ವಲಿತಾಗ್ನಯೋ ವಾ ತೈರಭಿಹುತೋ ಭವತಿ ॥

(ನಿ. ೭-೨೪)

ಸೂರ್ಯನನ್ನೂ, ವೈಶ್ವಾನರನನ್ನೂ ಸ್ತುತಿಸತಕ್ಕ ಒಂದು ನಿವಿತ್ಸೂಕ್ತವಿದೆ. ಈ ಸೂಕ್ತವನ್ನು ಆಗ್ನಿಮಾರುಶಸ್ತ್ರದಲ್ಲಿ ಪಠಿಸುವರು.

ಅಗ್ನಿರ್ವೈಶ್ವಾನರಃ ಸೋಮಸ್ಯ ಮತ್ಸತ್ । ವಿಶ್ವೇಷಾಂ ದೇವಾನಾಂ ಸಮಿತ್ । ಅಜಸ್ರಂ ದೈವ್ಯಂ ಜ್ಯೋತಿಃ । ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇತ್ । ದ್ಯುಷು ಪೂರ್ವಾಸು ದಿದ್ಯು-ತಾನಃ । ಅಜರ ಉಷಸಾಮನೀಕೇ । ಆ ಯೋ ದ್ಯಾಂ ಭಾತ್ಯಾ ಪೃಥಿವೀಂ । ಓರ್ವಂತ-

CC-0. Jangamwadi Math Collection. Digitized by eGangotri

ರಿಕ್ಷಂ । ಜ್ಯೋತಿಷಾ ಯಜ್ಞಾಯ ಶರ್ಮ ಸಂಯತ್ । ಅಗ್ನಿರ್ವೈಶ್ವಾನರ ಇಹ ಶ್ರವದಿಹ ಸೋಮಸ್ಯ ಮತ್ಸತ್ । ಪ್ರೇಮಾಂ ದೇವೋ ದೇವಹೂತಿಮವತು ದೇವ್ಯಾ ಧಿಯಾ । ಪ್ರೇದಂ ಬ್ರಹ್ಮ ಪ್ರೇದಂ ಕ್ಷತ್ರಂ । ಪ್ರೇಮಂ ಸುಸ್ವಂತಂ ಯಜಮಾನಮವತು । ಚಿತ್ರಶ್ಚಿತ್ರಾಭಿರೂತಿಭಿಃ। ಶ್ರವದ್ಬ್ರಹ್ಮಣ್ಯವಸಾಗಮತ್ ॥

ಎಂಬ ಈ ಸೂಕ್ತವೇ ಅಗ್ನಿಮಾರುತಶಸ್ತ್ರದಲ್ಲಿ ವೈಶ್ವಾನರಾಗ್ನಿಯನ್ನುದ್ದೇಶಿಸಿ ಪಠಿಸಲ್ಪಡುವುದು. ಈ ಮಂತ್ರದ ಮಧ್ಯದಲ್ಲಿ—ಯೋ ವಿಡ್ಭ್ಯೋ ಮಾನುಷೀಭ್ಯೋ ದೀದೇತ್—ಎಂಬ ವಾಕ್ಯವಿದೆ. ಇದಕ್ಕೆ-ಈ ದೇವನು ಮಾನವರಾದ ಪ್ರಜೆಗಳ ಉಪಕಾರಾರ್ಥವಾಗಿ ಪ್ರಕಾಶಿಸುವವನು ಸೂರ್ಯನೇ ಆದ್ದರಿಂದ ಇಲ್ಲಿ ಸೂರ್ಯನನ್ನೇ ವೈಶ್ವಾನರ ಎಂಬ ಶಬ್ದದಿಂದ ಸಂಬೋಧಿಸಿದೆ. ಆದ್ದರಿಂದ ಸೂರ್ಯನಿಗೂ, ವೈಶ್ವಾನರಾಗ್ನಿಗೂ ವ್ಯತ್ಯಾಸವಿಲ್ಲ. ಎಂದರೆ, ಹಾಗಲ್ಲ. ಈ ಮಂತ್ರವು ಅಗ್ನಿಯನ್ನೇ ಉದ್ದೇಶಿಸಿ ಪಠಿತವಾಗಿದೆ. ಯಜ್ಞವೇದಿಯಲ್ಲಿ ಪಾರ್ಥಿವಾಗ್ನಿಯೇ ಯಜ್ಞಮಾಡುವ ಯಜಮಾನರು ಮೊದಲಾದ ಪ್ರಜೆಗಳ ಉಪಕಾರಕ್ಕಾಗಿ ಪ್ರಕಾಶಿಸುತ್ತಿರುವನು ಎಂಬ ಅರ್ಥವೂ ಈ ಮಂತ್ರಕ್ಕೆ ಅನ್ವಯಿಸುವುದು. ಆದ್ದರಿಂದ ವೈಶ್ವಾನರಾಗ್ನಿಯು ಸೂರ್ಯನಲ್ಲ, ಪಾರ್ಥಿವಾಗ್ನಿಯೇ ಆಗಿರುವನು ಎಂದು ಹೇಳಬೇಕು. ಇದಲ್ಲದೆ ದಶರಾತ್ರವೆಂಬ ಛಾಂದೋಮಿಕ ಯಜ್ಞದಲ್ಲಿ ಜಮದಗ್ನಿಭಿರಾಹುತಃ ಎಂಬ ಸೌರ್ಯ ವೈಶ್ವಾನರಸೂಕ್ತವನ್ನು ಪಠಿಸುವರು. ಈ ಸೂಕ್ತವೂ ಸಹ ಸೂರ್ಯನಿಗೆ ಸಂಬಂಧಪಡುವುದಿಲ್ಲ. ಅಗ್ನಿಗೇ ಅನ್ವಯಿಸುವುದು. ಏಕೆಂದರೆ, ಜಮದಗ್ನಿಶಬ್ದಕ್ಕೆ ಚೆನ್ನಾಗಿ ಹೊತ್ತಿಸಲ್ಪಟ್ಟು ಧಗಧಗನೆ ಉರಿಯುತ್ತಿರುವ ಅಗ್ನಿಯೆಂದರ್ಥವು. ಯಜ್ಞಾದಿಗಳಲ್ಲಿ ಅಗ್ನಿಯಲ್ಲಿ ಹೋಮಮಾಡುವಾಗ ಅಗ್ನಿಯನ್ನು ಸಮಿದಾಜ್ಯಾದಿದ್ರವ್ಯಗಳಿಂದ ಪ್ರಜ್ವಲಿತನಾಗಿ ಮಾಡಿ ಚೆನ್ನಾಗಿ ಉರಿಯುತ್ತಿರುವ ಆ ಅಗ್ನಿಯಲ್ಲಿಯೇ ಹೋಮಾದಿಗಳನ್ನು ಮಾಡುವುದು ರೂಢಿಯು. ಆದ್ದರಿಂದ ಇದು ಆದಿತ್ಯ (ಅಥವಾ ಸೂರ್ಯ) ನನ್ನು ನಿರ್ದೇಶಿಸದೆ ಪಾರ್ಥಿವಾಗ್ನಿಯನ್ನೇ ನಿರ್ದೇಶಿಸುವುದೆಂದಭಿಪ್ರಾಯವು.

ಯಥೋ ಏತದ್ಧವಿಷ್ಪಾಂತೀಯಂ ಸೂಕ್ತಂ ಸೌರ್ಯವೈಶ್ವಾನರಂ ಭವತೀತ್ಯಸ್ಯೈವ ತದ್ಭವತಿ ।
ಹವಿಷ್ಪಾಂತಮಜರಂ ಸ್ವರ್ವಿದಿ ದಿವಿಸ್ಪೃಶ್ಯಾಹುತಂ ಜುಷ್ಟಮಗ್ನೌ ।
ತಸ್ಯ ಭರ್ಮಣೇ ಭುವನಾಯ ದೇವಾ ಧರ್ಮಣೇ ಕಂ ಸ್ವಧಯಾ ಪಪ್ರಥಂತ ॥

(ಋ. ಸಂ. ೧೦-೮೮-೧)

ಹವಿರ್ಯತ್ಪಾನೀಯಮಜರಂ ಸೂರ್ಯವಿದಿ ದಿವಿಸ್ಪೃಶ್ಯಭಿಹುತಂ ಜುಷ್ಟಮಗ್ನೌ ತಸ್ಯ ಭರಣಾಯ ಚ ಭಾವನಾಯ ಚ ಧಾರಣಾಯ ಚ ಜೈತೇಭ್ಯಃ ಸರ್ವೇಭ್ಯಃ ಕರ್ಮಭ್ಯ ಇಮಮಗ್ನಿಮನ್ನೇನಾಪಪ್ರಥಂತೇತಿ.

( ನಿ. ೭-೨೫ ).

ಇದಲ್ಲದೆ ಹವಿಷ್ಪಾಂತಮಜರಂ ಎಂಬ ಸೂಕ್ತವು ಸೌರ್ಯವೈಶ್ವಾನರಾಗ್ನಿದೇವತಾಕವು. ಈ ಸೂಕ್ತದಲ್ಲಿ ಸ್ತುತಿಸಲಾಗಿರುವ ವೈಶ್ವಾನರನೇ ಆದಿತ್ಯನು ಎಂದು ಹೇಳುವುದಾದರೆ, ಅದು ಸರಿಯಲ್ಲ. ಅಲ್ಲಿ ಹೇಳಿರುವ ವೈಶ್ವಾನರಾಗ್ನಿಯೇ ಪಾರ್ಥಿವಾಗ್ನಿಯು. ಇದರ ಅರ್ಥವನ್ನು ಪರಿಶೀಲಿಸಿದರೆ ಈ ವಿಷಯವು ಸ್ಪಷ್ಟವಾಗುವುದು-ಜರಾರಹಿತವಾದುದೂ

CC-0. Jangamwadi Math Collection. Digitized by eGangotri

ಎಂದರೆ ನಾಶರಹಿತವಾದುದೂ, ಆಹ್ಲಾದಕರವಾದುದೂ ಆದ ಹವಿಸ್ಸನ್ನು ಪಾನಮಾಡುವುದಕ್ಕೆ ಪೂರ್ವದಲ್ಲಿ ತನ್ನ ಪ್ರಕಾಶದಿಂದ ಸ್ವರ್ಗವನ್ನು ಮುಟ್ಟುತ್ತಿರುವ ಮತ್ತು ಸೂರ್ಯನನ್ನು ಚೆನ್ನಾಗಿ ತಿಳಿದಿರುವ ಈ ಅಗ್ನಿಯಲ್ಲಿ ಈ ಹವಿಸ್ಸು ಹೋಮಮಾಡಲ್ಪಡುವುದು. ದೇವತೆಗಳು ಆ ಹವಿಸ್ಸಿನ ಭರಣ, ಧಾರಣ, ಭಾವನಾದಿಕರ್ಮಗಳಿಗಾಗಿ ಅದನ್ನು ಅನ್ನದೊಡನೆ ಸೇರಿಸಿ ವೃದ್ಧಿಪಡಿಸುವರು ಎಂದು ಈ ಋಕ್ಕಿನ ಮುಖ್ಯಾಭಿಪ್ರಾಯವು. ಈ ಸೂಕ್ತದಲ್ಲಿ ಅಥವಾ ಋಕ್ಕಿನಲ್ಲಿ ಉಕ್ತವಾಗಿರುವ ಹವಿಸ್ಸನ್ನು ಪಾನಮಾಡುವುದಕ್ಕೆ ಪೂರ್ವಭಾವಿಯಾಗಿ ಅಗ್ನಿಯಲ್ಲಿ ಹೋಮಮಾಡುವರು. ಈ ಹವಿಸು ನಾಶರಹಿತವಾಗಿಯೂ ಮನಸ್ಸಿಗೆ (ಪಾನಮಾಡಲು) ಆಹ್ಲಾದಕರವಾಗಿಯೂ ಇರುವುದು. ಇದನ್ನು ತನ್ನ ಜ್ವಾಲೆಗಳಿಂದ ಆಕಾಶವನ್ನು (ಸ್ವರ್ಗ) ಮುಟ್ಟುತ್ತಿರುವ ಎಂದರೆ ಚೆನ್ನಾಗಿ ಪ್ರಜ್ವಲಿತವಾದ ಮತ್ತು ಸೂರ್ಯನ ವಿಷಯದಲ್ಲಿ ಪ್ರಜ್ಞೆಯುಳ್ಳ ಯಜ್ಞಾಗ್ನಿಯಲ್ಲಿ ಹೋಮಮಾಡುವರು. ಈ ಹವಿಸ್ಸು ಧಾರಣ, ಪೋಷಣ, ಭರಣ, ಭಾವನಾ, ಮೊದಲಾದ ಶಕ್ತಿಸಾಮರ್ಥ್ಯಗಳುಳ್ಳದ್ದನ್ನಾಗಿ ಮಾಡುವುದಕ್ಕಾಗಿ ದೇವತೆಗಳು ಇದರ ಜೊತೆಗೆ ಅನ್ನವನ್ನು ಸೇರಿಸಿ ವೃದ್ಧಿಯಾಗುವಂತೆ ಮಾಡುವರು. ಇಲ್ಲಿ ಹವಿಸ್ಸನ್ನು ಹೋಮಮಾಡುವ ವಿಷಯವು ಉಕ್ತವಾಗಿರುವುದರಿಂದ ಹೋಮವು ಅಗ್ನಿಗೇ ಎಂದರೆ ಪಾರ್ಥಿವಾಗ್ನಿಗೇ ಸಂಬಂಧಪಟ್ಟುದು, ಸೂರ್ಯನಿಗೆ ಸಂಬಂಧಪಟ್ಟುದಲ್ಲ. ಅಗ್ನಿಯಲ್ಲಿ ಹೋಮಮಾಡುವರೇ ಹೊರತು ಸೂರ್ಯನಲ್ಲಲ್ಲ. ಆದುದರಿಂದ ಈಸೂಕ್ತದಲ್ಲಿ ಪ್ರತಿಪಾದಿತನಾದ ವೈಶ್ವಾನರದೇವತೆಯು ಆದಿತ್ಯ ಅಥವಾ ಸೂರ್ಯನಲ್ಲ, ಪಾರ್ಥಿವಾಗ್ನಿಯೆಂದೇ ಹೇಳಬೇಕು.

ಅಥಾಪ್ಯಾಹ—

ಅಪಾಮುಪಸ್ಥೇ ಮಹಿಷಾ ಅಗೃಭ್ಣತ ವಿಶೋ ರಾಜಾನಮುಪ ತಸ್ಥುರ್ಋಗ್ಮಿಯಂ ।
ಆ ದೂತೋ ಅಗ್ನಿರಭರದ್ವಿವಸ್ವತೋ ವೈಶ್ವಾನರಂ ಮಾತರಿಶ್ವಾ ಪರಾವತಃ ॥

(ಋ. ಸಂ. ೬-೮-೪)

ಅಪಾಮುಪಸ್ಥ ಉಪಸ್ಥಾನೇ ಮಹತ್ಯಂತರಿಕ್ಷಲೋಕ ಆಸೀನಾ ಮಹಾಂತ ಇತಿ ವಾಗೃಹ್ಣತ ಮಾಧ್ಯಮಿಕಾ ದೇವಗಣಾ ವಿಶ ಇವ ರಾಜಾನಮುಪತಸ್ಥುರ್ಋಗ್ಮಿಯಮೃಗ್ಮಂತಮಿತಿ ವಾರ್ಚನೀಯಮಿತಿ ವಾ ಪೂಜನೀಯಮಿತಿ ವಾಹರದ್ಯಂ ದೂತೋ ದೇವಾನಾಂ ವಿವಸ್ವತ ಆದಿತ್ಯಾದ್ವಿವಸ್ವಾದ್ವಿವಾಸನವಾನ್ ಪ್ರೇರಿತವತಃ ಪರಾಗತಾದ್ವಾಪಿ ವಾಸ್ಯಾಗ್ನೇರ್ವೈಶ್ವಾನರಸ್ಯ ಮಾತರಿಶ್ವಾನಮಾಹರ್ತಾರಮಾಹ ॥

ಮಾತರಿಶ್ವಾ ವಾಯುರ್ಮಾತರ್ಯಂತರಿಕ್ಷೇ ಶ್ವಸಿತಿ ಮಾತರ್ಯಾಶ್ವನಿತೀತಿ ವಾ ॥

(ನಿ. ೭-೨೬)

ಮತ್ತು ಈ ವಿಷಯದಲ್ಲಿ ಇನ್ನೊಂದು ಋಕ್ಕಿನ ಉದಾಹರಣೆಯನ್ನು ಹೇಳಿರುವರು. ಉದಕಗಳ ಅಂಕಪ್ರದೇಶದ ಸಮೀಪದಲ್ಲಿ ಎಂದರೆ ವಿಸ್ತಾರವಾದ ಅಂತರಿಕ್ಷಲೋಕದಲ್ಲಿ ಇರುವ ಮಹಾಮಹಿಮರಾದ ಮಾಧ್ಯಮಿಕ (ಅಂತರಿಕ್ಷಸ್ಥ) ದೇವತೆಗಳು ಈ ಅಗ್ನಿಯನ್ನು ಸ್ವಾಗತಿಸಿದರು. ಹೇಗೆಂದರೆ ಪ್ರಜೆಗಳು ತಮ್ಮ ರಾಜನನ್ನು ಯಾವರೀತಿ ಆದರಾತಿಶಯಗಳಿಂದ ಬರಮಾಡಿಕೊಳ್ಳುವರೋ ಅದರಂತೆ ದೇವತೆಗಳು ಮಂತ್ರಪ್ರತಿಪಾದ್ಯನೂ, ಪೂಜ್ಯನೂ, ಗೌರವಾರ್ಹನೂ ಆದ ಈ ಅಗ್ನಿಯನ್ನು ಸ್ವಾಗತಿಸಿ ಸತ್ಕರಿಸಿದರು. ಅಂತರಿಕ್ಷದಲ್ಲಿ ವಾಸಿಸುವ ಮಾತರಿಶ್ವನು(ವಾಯುವು)ಮೊದಲು ದೇವತೆಗಳಿಂದ ಪ್ರೇರಿತನಾಗಿ ಬಹುದೂರಪ್ರದೇಶದಲ್ಲಿರುವ ಆದಿತ್ಯನಿಂದ ವೈಶ್ವಾನರಾಗ್ನಿಯನ್ನು ತಂದನು. ವೈಶ್ವಾನರಾಗ್ನಿಯು ಮೊದಲು ಅಂತರಿಕ್ಷದಲ್ಲಿ ಮಾತರಿಶ್ವನಿಗೇ ಗೋಚರಿಸಿದನು. ಆ ಮಾತರಿಶ್ವನು ಬಹುದೂರ ಪ್ರದೇಶದಲ್ಲಿರುವಲ್ಲಿದ್ದ

CC-0. Jangamwadi Math Collection. Digitized by eGangotri

ಆದಿತ್ಯನ ಸಮೀಪದಿಂದ ವೈಶ್ವಾನರಾಗ್ನಿಯನ್ನು ತಂದನು. ಮಾತರಿಶ್ವನೆಂದರೆ ವಾಯುವು. ಈ ವಾಯುವು ಅಂತರಿಕ್ಷದಲ್ಲಿ ವಾಸಮಾಡುವುದರಿಂದಾಗಲಿ, ಅಂತರಿಕ್ಷದಲ್ಲಿ ವೇಗವಾಗಿ ಸಂಚಾರಮಾಡುವುದರಿಂದಾಗಲಿ ವಾಯುವಿಗೆ ಮಾತರಿಶ್ವಾ ಎಂಬ ಹೆಸರು ಬಂದಿರುವುದು. ಇಲ್ಲಿ ಗಮನಿಸಬೇಕಾದ ವಿಷಯವೇನೆಂದರೆ–ಅಂತರಿಕ್ಷಸ್ಥ ದೇವತೆಗಳು ಅಗ್ನಿಯನ್ನು ಸೂರ್ಯನಿರುವ ಪ್ರದೇಶದಿಂದ ತಂದರು ಎಂದು ಹೇಳಿದೆ. ಸೂರ್ಯನನ್ನು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ತರಲು ಯಾರಿಂದಲೂ ಸಾಧ್ಯವಿಲ್ಲ. ಅಗ್ನಿಯನ್ನು ಮಾತ್ರ ತರಬಹುದು. ಆದುದರಿಂದ ಇಲ್ಲಿ ವೈಶ್ವಾನರನೆಂದರೆ ಪಾರ್ಥಿವಾಗ್ನಿಯೇ ಉಕ್ತವಾಗಿರುವುದೆಂದು ತಿಳಿಯಬೇಕು. ಇದಲ್ಲದೆ ಅನೇಕ ಮಂತ್ರಗಳಲ್ಲಿ ಸೂರ್ಯನ (ಆದಿತ್ಯನ) ಗುಣಗಳು ವೈಶ್ವಾನರಾಗ್ನಿಗೆ ಉಕ್ತವಾಗಿವೆ—ಹವಿಷ್ಪಾಂತಸೂಕ್ತದ ೧೨ನೆಯ ಋಕ್ಕಾದ ವಿಶ್ವಸ್ಮಾ ಅಗ್ನಿಂ ಭುವನಾಯ ದೇವಾ ವೈಶ್ವಾನರಂ ಕೇತುಮಹ್ನಾಮಕೃಣ್ವನ್ ಎಂಬ ಮಂತ್ರದಲ್ಲಿ ದೇವತೆಗಳು ವೈಶ್ವಾನರಾಗ್ನಿಯನ್ನು ಅಹಸ್ಸುಗಳಿಗೆ (ಹಗಲುಗಳಿಗೆ, ದಿನಗಳಿಗೆ) ಕರ್ತನನ್ನಾಗಿ ಮಾಡಿದರು ಎಂದು ಹೇಳಿದೆ. ದಿನಗಳಿಗೆ ಕರ್ತನೆಂಬ ಗುಣವು ಸೂರ್ಯನಿಗೆ ಸಲ್ಲತಕ್ಕದ್ದಾದರೂ ಇಲ್ಲಿ ವೈಶ್ವಾನರಾಗ್ನಿಗೆ ಈ ಗುಣವು ಉಕ್ತವಾಗಿದೆ. ಏಕೆಂದರೆ ಈ ಅಗ್ನಿಯು—ಅಗ್ನಿಃ ಸರ್ವಾ ದೇವತಾಃ (ಐ. ಬ್ರಾ. ೨–೧–೨), ಇಂದ್ರಂ ಮಿತ್ರಂ ವರುಣಮಗ್ನಿಮಾಹುಃ (೧–೧೬೪–೪೬). ಇತ್ಯಾದಿ ಮಂತ್ರಗಳಲ್ಲಿ ಈ ಅಗ್ನಿಯೇ ಸರ್ವದೇವತಾತ್ಮಕನೆಂದು ಹೇಳಿರುವುದರಿಂದ ಸೂರ್ಯನೇ ಮೊದಲಾದ ಇತರ ದೇವತೆಗಳ ಗುಣಗಳನ್ನು ಅಗ್ನಿಯಲ್ಲಿ ಆರೋಪಿಸುವುದು ಸಾಮಾನ್ಯವಾಗಿದೆ. ಆದುದರಿಂದ ವೈಶ್ವಾನರಾಗ್ನಿಯೇ ಪಾರ್ಥಿವಾಗ್ನಿಯು, ಆದಿತ್ಯನಲ್ಲ.

ಅಥೈನಮೇತಾಭ್ಯಾಂ ಸರ್ವಾಣಿ ಸ್ಥಾನಾನ್ಯಭ್ಯಾಪಾದಂ ಸ್ತೌತಿ ।
ಮೂರ್ಧಾ ಭುವೋ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ।
ಮಾಯಾಮೂ ತು ಯಜ್ಞಿಯಾನಾಮೇತಾಮಪೋ ಯತ್ತೂರ್ಣಿಶ್ಚರತಿ ಪ್ರಜಾನನ್ ॥

(ಋ. ಸಂ. ೧೦–೮೮–೬).

ಮೂರ್ಧಾ ಮೂರ್ತಮಸ್ಮಿನ್ಧೀಯತೇ ಮೂರ್ಧಾ ಯಃ ಸರ್ವೇಷಾಂ ಭೂತಾನಾಂ ಭವತಿ ನಕ್ತಮಗ್ನಿಸ್ತತಃ ಸೂರ್ಯೋ ಜಾಯತೇ ಪ್ರಾತರುದ್ಯನ್ ಸ ಏವ ಪ್ರಜ್ಞಾಂ ತ್ವೇತಾಂ ಮನ್ಯಂತೇ ಯಜ್ಞಿಯಾನಾಂ ದೇವಾನಾಂ ಯಜ್ಞಸಂಪಾದಿನಾಮಪೋ ಯತ್ಕರ್ಮ ಚರತಿ ಪ್ರಜಾನನ್ ಸರ್ವಾಣಿ ಸ್ಥಾನಾನ್ಯನು ಸಂಚರತೇ ತ್ವರಮಾಣಃ ॥

( ನಿ. ೭–೨೭ )

ಪಾರ್ಥಿವಾಗ್ನಿಯು ಅನೇಕ ಸನ್ನಿವೇಶಗಳಲ್ಲಿ ಸೂರ್ಯ ಮೊದಲಾದ ಇತರ ದೇವತಾ ವಿಶೇಷಗಳ ಗುಣವೈಶಿಷ್ಟ್ಯವನ್ನೊಳಗೊಂಡಿರುವಂತೆ ಸ್ತುತಿಸಲ್ಪಟ್ಟಿರುವುದು. ಈ ವಿಷಯದಲ್ಲಿ ನಿರುಕ್ತಕಾರರು ಎರಡು ಋಕ್ಕುಗಳನ್ನು ಉದಾಹರಣೆಯಾಗಿ ಕೊಟ್ಟಿರುವರು—ಸರ್ವಪ್ರಾಣಿವರ್ಗಕ್ಕೂ ಅಗ್ನಿಯು ಜೀವಿಸಲು ಅತ್ಯವಶ್ಯಕವಾಗಿರುವುದು. ಅಗ್ನಿಯಿಲ್ಲದಿದ್ದರೆ (ಶರೀರದಲ್ಲಿರುವ ಶಾಖ, ಇದನ್ನು ವೈಶ್ವಾನರಾಗ್ನಿಯೆಂದು ಕರೆಯುವರು) ಜೀವಿಸುವುದು ಸಾಧ್ಯವಿಲ್ಲ. ಇಂತಹ ಅಗ್ನಿಯು ಸೂರ್ಯರೂಪದಲ್ಲಿರುವ ಅಗ್ನಿಯು) ರಾತ್ರಿಕಾಲದಲ್ಲಿ ಸಮಸ್ತ ಪ್ರಾಣಿಗಳನ್ನು ಒಳಗೊಂಡ ಪ್ರಪಂಚಕ್ಕೆ ಅಧಿಪತಿಯಾಗಿ ಬೆಳಗುವನು. ಪ್ರಾತಃಕಾಲದಲ್ಲಿ ಅದೇ ಅಗ್ನಿಯು ಸೂರ್ಯರೂಪದಿಂದ ಉದಯಿಸುವನು. ಇಂತಹ ಅಗ್ನಿಯ ಅಸಾಧಾರಣವಾದ ಶಕ್ತಿಸಾಮರ್ಥ್ಯವನ್ನು ಎಂದರೆ ಹಗಲಿನಲ್ಲಿ ಸೂರ್ಯರೂಪದಿಂದಲೂ ರಾತ್ರಿಯಲ್ಲಿ ಅಗ್ನಿರೂಪದಿಂದಲೂ ಇದ್ದು ತನ್ನ ಕರ್ತವ್ಯಕರ್ಮವನ್ನು ನೆರವೇರಿಸುತ್ತಿರುವುದನ್ನು ದೇವತೆಗಳು ತಿಳಿಯಬಲ್ಲರು.

CC-0. Jangamwadi Math Collection. Digitized by eGangotri

ಇಲ್ಲಿ ಅಗ್ನಿಯು ರಾತ್ರಿಗೆ ಅಧಿಪತಿಯೆಂದು ಹೇಳಿದೆ. ಅಧಿಪತಿಯೆಂಬ ಅರ್ಥವನ್ನು ಸೂಚಿಸುವುದಕ್ಕಾಗಿ ಈ ಋಕ್ಕಿನಲ್ಲಿ ಮೂರ್ಧಾ ಎಂಬ ಶಬ್ದದ ಪ್ರಯೋಗವಿದೆ. ಈ ಶಬ್ದಕ್ಕೆ ಅಧಿಪತಿಯೆಂಬ ಅರ್ಥವು ಹೇಗಾಯಿತೆಂದರೆ ಶರೀರದ ನಾನಾ ಅವಯವಗಳಲ್ಲಿ ಮೂರ್ಧಾ ಅಥವಾ ಶಿರಸ್ಸೇ ಮುಖ್ಯವಾದುದು. ಸರ್ವಸ್ಯ ಗಾತ್ರಸ್ಯ ಶಿರಃ ಪ್ರಧಾನಂ ಎಂಬ ಉಕ್ತಿಯಿರುವುದು. ಆದ್ದರಿಂದ ಇಲ್ಲಿ ಮೂರ್ಧಾಶಬ್ದಪ್ರಯೋಗವು ಅಧಿಪತಿಯೆಂಬರ್ಥವನ್ನು ಸೂಚಿಸುವುದು. ಈ ಅಗ್ನಿಯು ರಾತ್ರಿಕಾಲದಲ್ಲಿ ಸಮಸ್ತಪ್ರಾಣಿಗಳಿಗೂ ಅಧಿಪತಿಯಾಗಿರುವನು ಎಂದರೆ ಸೂರ್ಯನ ಶಾಖವಿಲ್ಲದಿರುವ ರಾತ್ರಿಕಾಲದಲ್ಲಿ ಅಗ್ನಿಯೇ ಪ್ರಾಣಿಗಳಿಗೆ ಶಾಖವನ್ನೂ ಪ್ರಕಾಶವನ್ನೂ ಒದಗಿಸಿಕೊಟ್ಟು ಸೂರ್ಯನ ಕರ್ತವ್ಯವನ್ನು ನಿರ್ವಹಿಸುವನು ಎಂದಭಿಪ್ರಾಯವು. ಪ್ರಾತಃಕಾಲದಲ್ಲಿ ಈ ಅಗ್ನಿಯೇ ಸೂರ್ಯನಾಗಿ ಉದಯಿಸಿ ಪ್ರಾಣಿಗಳನ್ನು ರಕ್ಷಿಸುವನು. ದೇವತೆಗಳ ಈ ವಿಧವಾದ ಶಕ್ತಿಸಾಮರ್ಥ್ಯಗಳನ್ನು ಯಜ್ಞಮಾಡುವ ಋಷಿಗಳೇ ಮೊದಲಾದವರು ತಿಳಿಯಬಲ್ಲರು. ಅಗ್ನಿಗೆ ಈ ಕರ್ತವ್ಯವನ್ನು ಮಾಡುವುದಕ್ಕಾಗಿ ಎಂದರೆ ಸಮಸ್ತ ಪ್ರದೇಶದಲ್ಲಿಯೂ ವೇಗವಾಗಿ ಸಂಚರಿಸಲು ಶಕ್ತಿಯಿರುವುದೆಂದಭಿಪ್ರಾಯವು- ಈ ಋಕ್ಕಿನಲ್ಲಿ ಸೂರ್ಯನ ಕರ್ತವ್ಯವನ್ನು ಅಗ್ನಿಯು ನೆರವೇರಿಸುವನೆಂದು ಹೇಳಿರುವುದು ಅಗ್ನಿಯ ಅಸಾಧಾರಣಗುಣದ ಪ್ರಸಂಶಯಾಗಿದೆಯೇ ಹೊರತು ಅಗ್ನಿಯೇ ಆದಿತ್ಯನಲ್ಲ. ಅಥವಾ ಅಗ್ನಿಗೆ ಇತರ ದೇವತೆಗಳ ಶಕ್ತಿಸಾಮರ್ಥ್ಯಗಳಿರುವವು ಎಂಬ ವಿಷಯವು ಈ ಋಕ್ಕಿನಲ್ಲಿ ಸೂಚಿತವಾಗಿದೆ ಎಂದು ತಿಳಿಯಬೇಕು.

ತಸ್ಯೋತ್ತರಾ ಭೂಯಸೇ ನಿರ್ವಚನಾಯ ।
ಸ್ತೋಮೇನ ಹಿ ದಿವಿ ದೇವಾಸೋ ಅಗ್ನಿಮಜೀಜನಞ್ಛಕ್ತಿಭೀ ರೋದಸಿಪ್ರಾಂ ।
ತನೂ ಅಕೃಣ್ವನ್ತ್ರೇಧಾ ಭುವೇ ಕಂ ಸ ಓಷಧೀಃ ಪಚತಿ ವಿಶ್ವರೂಪಾಃ ॥

(ಋ. ಸಂ. ೧೦-೮೮-೧೦)

ಸ್ತೋಮೇನ ಹಿ ಯಂ ದಿವಿ ದೇವಾ ಅಗ್ನಿಮಜನಯಞ್ಛಕ್ತಿಭಿಃ ಕರ್ಮಭಿರ್ದ್ಯಾವಾಪೃಥಿವ್ಯೋಃ ಪೂರಣಂ ತಮಕುರ್ವಂಸ್ತ್ರೇಧಾಭಾವಾಯ ಪೃಥಿವ್ಯಾಮಂತರಿಕ್ಷೇ ದಿವೀತಿ ಶಾಕಪೂಣಿಃ ಯದಸ್ಯ ದಿವಿ ತೃತೀಯಂ ತದಸಾವಾದಿತ್ಯ ಇತಿ ಹಿ ಬ್ರಾಹ್ಮಣಂ ತದಂಗೀಕೃತ್ಯ ಸ್ತೌತಿ.

( ನಿ. ೭-೨೮ ).

ದೇವತೆಗಳು ಸ್ತೋತ್ರದಿಂದ ಅಗ್ನಿಯನ್ನು ಸ್ವರ್ಗದಲ್ಲಿ ಉತ್ಪತ್ತಿಮಾಡಿದರು. ಆ ಅಗ್ನಿಯು ತನ್ನ ಶಕ್ತಿಸಾಮರ್ಥ್ಯಗಳಿಂದ ದ್ಯಾವಾಪೃಥಿವಿಗಳನ್ನು (ಸ್ವರ್ಗ ಮತ್ತು ಭೂಮಿಗಳನ್ನು) ತುಂಬಿ ಪ್ರಕಾಶಿಸಿದನು. ಮತ್ತೆ ಆ ದೇವತೆಗಳು ಆ ಅಗ್ನಿಯನ್ನು ಮೂರು ರೂಪಗಳುಳ್ಳವನನ್ನಾಗಿ ಮಾಡಿದರು. ಆ ಅಗ್ನಿಯು ಎಲ್ಲಾ ಸಸ್ಯವರ್ಗವನ್ನೂ (ಓಷಧಿಗಳನ್ನೂ) ಪಕ್ವಮಾಡುತ್ತಾನೆ ಎಂದರೆ ಬೆಳೆಸಿ ಅಭಿವೃದ್ಧಿಮಾಡುತ್ತಾನೆ.

ದೇವತೆಗಳು ಯಾವ ಅಗ್ನಿಯನ್ನು ಸ್ತೋಮದಿಂದ ( ಸ್ತೋತ್ರದಿಂದ ) ಸ್ವರ್ಗದಲ್ಲಿ ಉತ್ಪತ್ತಿಮಾಡಿ ಸ್ಥಾಪಿಸಿದರೋ ಆ ಅಗ್ನಿಯು ತನ್ನ ಶಕ್ತಿಸಾಮರ್ಥ್ಯಗಳಿಂದ ಸ್ವರ್ಗವನ್ನೂ ಭೂಮಿಯನ್ನೂ ವ್ಯಾಪಿಸಿದನು. ಎಂದರೆ ಪೃಥಿವೀ, ಅಂತರಿಕ್ಷ, ಸ್ವರ್ಗ ಎಂಬ ಮೂರು ಸ್ಥಾನಗಳಲ್ಲಿರುವುದಕ್ಕಾಗಿ ದೇವತೆಗಳು ಅಗ್ನಿಯನ್ನು ಉತ್ಪತ್ತಿಮಾಡಿದರು ಎಂದು ಶಾಕಪೂಣಿ ಎಂಬ ಆಚಾರ್ಯರು ಹೇಳುವರು. ಈ ವಿಷಯದಲ್ಲಿ ಯದಸ್ಯ ದಿವಿ ತೃತೀಯಂ ತದಸಾವಾ-

CC-0. Jangamwadi Math Collection. Digitized by eGangotri

ದಿತ್ಯಃ—ಅಗ್ನಿಯು ಯಾವ ಮೂರನೆಯ ರೂಪವು ಸ್ವರ್ಗದಲ್ಲಿ ಪ್ರಕಾಶಿಸುತ್ತಿರುವುದೋ ಅದೇ ನಮ್ಮ ಕಣ್ಣಿಗೆ ಕಾಣಿಸುತ್ತಿರುವ ಆದಿತ್ಯನು ಎಂದು ಬ್ರಾಹ್ಮಣವಾಕ್ಯವೂ ಇರುವುದು. ಈ ಅಭಿಪ್ರಾಯವನ್ನೇ ಸ್ವೀಕರಿಸಿ ಋಷಿಯು ಅಗ್ನಿಯನ್ನು ಮುಂದಿನ ಋಕ್ಕಿನಲ್ಲಿ ಸ್ತುತಿಸುವನು.

ಅಥೈನಮೇತಯಾದಿತ್ಯೀಕೃತ್ಯ ಸ್ತೌತಿ ।
ಯದೇದೇನಮದಧುರ್ಯಜ್ಞಿಯಾಸೋ ದಿವಿ ದೇವಾಃ ಸೂರ್ಯಮಾದಿತೇಯಂ ।
ಯದಾ ಚರಿಷ್ಣೂ ಮಿಥುನಾವಭೂತಾಮಾದಿತ ಪ್ರಾಪಶ್ಯನ್ ಭುವನಾನಿ ವಿಶ್ವಾ ॥
(ಋ. ಸಂ. ೧೦-೮೮-೧೧).

ಯದೈನಮದಧುರ್ಯಜ್ಞಿಯಾಃ ಸರ್ವೇ ದಿವಿ ದೇವಾಃ ಸೂರ್ಯಮಾದಿತೇಯಮದಿತೇಃ ಪುತ್ರಂ ಯದಾ ಚರಿಷ್ಣೂ ಮಿಥುನೌ ಪ್ರಾದುರಭೂತಾಂ ಸರ್ವದಾ ಸಹಚಾರಿಣಾವುಷಾಶ್ಚಾದಿತ್ಯಶ್ಚ । ಮಿಥುನೌ ಕಸ್ಮಾನ್ಮಿನೋತಿಃ ಶ್ರಯತಿಕರ್ಮಾ, ಥು ಇತಿ ನಾಮಕರಣಸ್ಥಕಾರೋ ವಾ ನಯತಿಃ ಪರೋ, ವನಿರ್ವಾ, ಸಮಾಶ್ರಿತಾವನ್ಯೋನ್ಯಂ ನಯತೋ, ವನುತೋ ವಾ, ಮನುಷ್ಯಮಿಥುನಾವಪ್ಯೇತಸ್ಮಾದೇವ, ಮೇಥಂತಾವನ್ಯೋನ್ಯಂ ವನುತ ಇತಿ ವಾ.
( ನಿ. ೭-೨೯ ).

ಈ ಅಗ್ನಿಯೇ ಆದಿತ್ಯನೆಂಬ ಅಭಿಪ್ರಾಯವನ್ನಂಗೀಕರಿಸಿ ಋಷಿಯು ಈ ಋಕ್ಕಿನಿಂದ ಸ್ತೋತ್ರಮಾಡುವನು. ಯಜ್ಞಾರ್ಹರಾದ ದೇವತೆಗಳು ಅದಿತಿಯ ಪುತ್ರನಾದ ಸೂರ್ಯನನ್ನು ಸ್ವರ್ಗದಲ್ಲಿ ಯಾವಾಗ ಸ್ಥಾಪಿಸಿದರೋ ಮತ್ತು ಯಾವಾಗ ಈ ಮಿಥುನ ದೇವತೆಗಳು( ಉಷಸ್ಸು ಮತ್ತು ಆದಿತ್ಯ) ಸೃಷ್ಟಿಸಲ್ಪಟ್ಟು ಜತೆಯಲ್ಲಿಯೇ ಸಂಚರಿಸಲು ಪ್ರಾರಂಭಿಸಿದರೋ ಆಗ ಅವರು ಲೋಕದ ಸಮಸ್ತ ಪ್ರಾಣಿಗಳನ್ನೂ ನೋಡಿದರು.

ಯಜ್ಞಾರ್ಹರಾದ ಎಂದರೆ ಯಜ್ಞಾದಿಗಳಲ್ಲಿ ಸ್ತುತರಾದ ದೇವತೆಗಳು ಅದಿತಿಪುತ್ರನಾದ ಆದಿತ್ಯನನ್ನು (ಸೂರ್ಯನನ್ನು) ಸ್ವರ್ಗದಲ್ಲಿ ಸ್ಥಾಪಿಸಿದರೋ ಮತ್ತು ಮಿಥುನಭೂತರಾದ ಎಂದರೆ ಯಾವಾಗಲೂ ಜತೆಯಲ್ಲಿಯೆ ಇರುವ ಇಬ್ಬರ (ಉಷಾಃ ಮತ್ತು ಆದಿತ್ಯ ಎಂಬ ಇಬ್ಬರ) ಸೃಷ್ಟಿಯಾಯಿತೋ ಆಗಿನಿಂದಲೂ ಈ ಉಷಸ್ಸು ಮತ್ತು ಆದಿತ್ಯ ಎಂಬ ದೇವತೆಗಳೀರ್ವರೂ ಯಾವಾಗಲೂ ಜತೆಯಲ್ಲಿಯೇ ಸಂಚರಿಸುತ್ತಾ ಪ್ರಪಂಚದಲ್ಲಿರುವ ಸಮಸ್ತ ಪ್ರಾಣಿವರ್ಗವನ್ನು ನೋಡಲು ಶಕ್ತರಾದರು.

ಇಲ್ಲಿ ಮಿಥುನಶಬ್ದದ ನಿರ್ವಚನವನ್ನು ಹೇಳಿದಾರೆ. ಶ್ರಯತಿಕರ್ಮಾರ್ಥವನ್ನು (ಆಶ್ರಯಿಸುವುದು ಎಂಬರ್ಥವನ್ನು) ಸೂಚಿಸುವ ಮಿನೋತಿಧಾತುವಿನಿಂದ ಮಿಥುನಶಬ್ದವು ನಿಷ್ಪನ್ನವಾಗಿದೆ. ಹೇಗೆಂದರೆ–ಮಿಥುನ ಶಬ್ದದಲ್ಲಿರುವ ಮಿ ಎಂಬ ಧಾತುವಿಗೆ ಆಶ್ರಯಿಸು ಎಂಬರ್ಥವಿರುವುದು. ಥು ಅಥವಾ ಥಕಾರವು ಪ್ರತ್ಯಯವು. ಕೊನೆಯ ಅಕ್ಷರವಾದ ನ ಎಂಬ ಅಕ್ಷರವು ನಯತಿಧಾತುವಿನಿಂದ (ನಯತಿಃ ಪರಃ) ನಿಷ್ಪನ್ನವಾಗಿ ಮತ್ತೊಬ್ಬರನ್ನು ನಯತಿ ಎಂದರೆ ಒಯ್ಯುವುದು ಎಂಬರ್ಥವನ್ನು ಸೂಚಿಸುವುದು ಎಂದರೆ ಮಿಥುನ ಶಬ್ದಕ್ಕೆ ಒಬ್ಬರು ಮತ್ತೊಬ್ಬರನ್ನು ಪರಸ್ಪರ ಆಶ್ರಯಿಸಿ ಜತೆಯಲ್ಲಿರುವುದು ಎಂದರ್ಥವಾಗುವುದು ಸಮಾಶ್ರಿತೌ ಅನ್ಯೋನ್ಯಂ ಪ್ರತಿ ಆತ್ಮಾನಂ ನಯತಃ ಕಾಲಂ ವಾ ಸಮಾಶ್ರಿತೌ ಭವತಃ ಪರಸ್ಪರಂ ಸಂಭಕ್ತೌ—ಎಂದರೆ ಮಿಥುನೌ ಎಂಬ ಶಬ್ದವು ಒಬ್ಬರನ್ನೊಬ್ಬರು ಪರಸ್ಪರ ಆಶ್ರಯಿಸಿರುವುದು ಅಥವಾ ಕಾಲವಿಷಯದಲ್ಲಿ ಒಂದು ಕಾಲವಾದನಂತರ ಮತ್ತೊಂದು ಕಾಲವು ಬರುವುದು



CC-0. Jangamwadi Math Collection. Digitized by eGangotri

(ರಾತ್ರೆ, ಹಗಲು ಇತ್ಯಾದಿ) ಎಂಬರ್ಥವನ್ನು ಸೂಚಿಸುವುದು. ಮನುಷ್ಯರ ವಿಷಯದಲ್ಲಿಯೂ ಮಿಥುನ ಶಬ್ದಕ್ಕೆ ಪರಸ್ಪರ ಆಶ್ರಯಿಸಿರುವ ಅಥವಾ ಅನ್ಯೋನ್ಯವಾಗಿ ಜತೆಯಲ್ಲಿಯೇ ಕಾಲಕಳೆಯುವ ಇಬ್ಬರು ವ್ಯಕ್ತಿಗಳು ಎಂಬರ್ಥ ವಿರುವುದು.

ಅಥೈನಮೇತಯಾಗ್ನೀಕೃತ್ಯ ಸ್ತೌತಿ ।
ಯತ್ರಾ ವದೇತೇ ಅವರಃ ಪರಶ್ಚ ಯಜ್ಞನ್ಯೋಃ ಕತರೋ ನೌ ವಿ ವೇದ ।
ಆ ಶೇಕುರಿತ್ಸಧಮಾದಂ ಸಖಾಯೋ ನಕ್ಷಂತ ಯಜ್ಞಂ ಕ ಇದಂ ವಿ ವೋಚತ್ ॥

(ಋ. ಸಂ. ೧೦-೮೮-೧೭).

ಯತ್ರ ವಿವದೇತೇ ದೈವ್ಯಾ ಹೋತಾರಾವಯಂ ಚಾಗ್ನಿರಸೌ ಚ ಮಧ್ಯಮಃ ಕತರೋ ನೌ ಯಜ್ಞೇ ಭೂಯೋ ವೇದೇತ್ಯಾಶಕ್ನುವಂತಿ ಸತ್ಸಹಮದನಂ ಸಮಾನಖ್ಯಾನಾ ಋತ್ವಿಜಸ್ತೇ-ಷಾಂ ಯಜ್ಞಂ ಸಮಶ್ನುವಾನಾನಾಂ ಕೋ ನ ಇದಂ ವಿವಕ್ಷ್ಯತೀತಿ ॥

( ನಿ. ೭-೩೦ ).

ಈ ವೈಶ್ವಾನರಾಗ್ನಿಯನ್ನು ಪಾರ್ಥಿವಾಗ್ನಿಯೆಂದೇ ಸ್ವೀಕರಿಸಿ ಈ ಋಕ್ಕಿನಿಂದ ಋಷಿಯು ಸ್ತುತಿಸಿರುವನು. ಯಜ್ಞ ವಿಷಯವನ್ನು ತಿಳಿದಿರುವ ಕೆಳಗಿನ ಮತ್ತು ಮೇಲಿನ ಅಗ್ನಿಗಳಲ್ಲಿ ಯಾರು ಹೆಚ್ಚಾಗಿ ತಿಳಿದಿರುವರು ? ಈ ವಿಷಯವನ್ನು ನಿರ್ಧರಿಸಲು ಯಾರು ಸಮರ್ಥರು ? ಯಜ್ಞದಲ್ಲಿ ಸಮಾನಭಾಗಗಳನ್ನು ವಹಿಸುವ ಋತ್ವಿಜರೇ ಮೊದಲಾದವರು ಇದನ್ನು ನಿಶ್ಚಯಿಸಲು ಸಮರ್ಥರು.

ದೈವ್ಯಾ ಹೋತಾರೌ—ಎಂದರೆ ದೇವತಾಸ್ವರೂಪರಾದ ಹೋತೃಗಳು, ದೇವತೆಗಳನ್ನು ಯಜ್ಞದಲ್ಲಿ ಆಹ್ವಾನಮಾಡುವ ಹೋತೃನಾಮಕನಾದ ಅಗ್ನಿಯು. ಇಲ್ಲಿ ಹೋತಾರೌ ಎಂದು ದ್ವಿವಚನಾಂತಶಬ್ದ ವಿರುವುದರಿಂದ ಪೃಥಿವಿಯಲ್ಲಿ ಸ್ಥಾಪಿತನಾಗಿರುವ ಪಾರ್ಥಿವನಾಗಿ (ಯಜ್ಞಾಗ್ನಿ) ಮತ್ತು ಮಧ್ಯಮಸ್ಥಾನದಲ್ಲಿರುವ ವಾಯು ಅಥವಾ ವಿದ್ಯುದಗ್ನಿಯೆಂಬ ಇಬ್ಬರು ದೇವತೆಗಳು. ಈ ಇಬ್ಬರೂ ಅಗ್ನಿಯ ರೂಪಾಂತರಗಳೇ ಆಗಿರುವುದರಿಂದ ಇವರನ್ನು ಹೋತಾರೌ ಎಂಬ ದ್ವಿವಚನಾಂತ ಶಬ್ದದಿಂದ ಸಂಬೋಧಿಸಲಾಗಿದೆ. ಅವರಃ ಪರಶ್ಚ ಎಂದರೆ—ಕೆಳಗಿನ ಮತ್ತು ಮೇಲಿನ ಎಂದರ್ಥವು. ಕೆಳಗೆ ಎಂದರೆ ಪೃಥಿವೀಸ್ಥಾನದಲ್ಲಿರುವ ಪಾರ್ಥಿವಾಗ್ನಿಯೆಂದೂ ಪರಃ ಎಂದರೆ ಮಧ್ಯಮ ಸ್ಥಾನದಲ್ಲಿರುವ ಅಗ್ನಿ (ವಿದ್ಯುತ್) ಎಂದೂ ತಿಳಿಯಬೇಕು. ಈ ಇಬ್ಬರಲ್ಲಿ ಯಾರಿಗೆ ಹೆಚ್ಚಾಗಿ ತಿಳುವಳಿಕೆ ಇದೆ ? ಯಜ್ಞಾದಿ ಕರ್ಮಗಳಲ್ಲಿ ಸಮಾನಭಾಗಗಳನ್ನು ಎಂದರೆ ಮುಖ್ಯಪಾತ್ರಗಳನ್ನು ವಹಿಸಿ ಯಜ್ಞವಿಷಯವನ್ನು ಚೆನ್ನಾಗಿ ತಿಳಿದಿರುವ ಋತ್ವಿಜರಲ್ಲಿ ಯಾವ ಋತ್ವಿಜನು ಈ ವಿಷಯವನ್ನು ನಿರ್ಧರಿಸಲು ಸಮರ್ಥನು ?

ತಸ್ಯೋತ್ತರಾ ಭೂಯಸೇ ನಿರ್ವಚನಾಯ ।
ಯಾವನ್ಮಾತ್ರಮುಷಸೋ ನ ಪ್ರತೀಕಂ ಸುಪರ್ಣ್ಯೋ೩ ವಸತೇ ಮಾತರಿಶ್ವಃ ।
ತಾವದ್ದಧಾತ್ಯುಪ ಯಜ್ಞಮಾಯನ್ಬ್ರಾಹ್ಮಣೋ ಹೋತುರವರೋ ನಿಷೀದನ್ ॥

(ಋ. ಸಂ. ೧೦-೮೮-೧೯)

ಯಾವನ್ಮಾತ್ರಮುಷಸಃ ಪ್ರತ್ಯಕ್ತಂ ಭವತಿ ಪ್ರತಿದರ್ಶನಮಿತಿ ವಾಸ್ತ್ಯುಪಮಾಸಸ್ಯ ಸಂಪ್ರತ್ಯ-ರ್ಥೇ ಪ್ರಯೋಗ ಇಹೇವ ನಿಧೇಹೀತಿ ಯಥಾ ಸುಪರ್ಣ್ಯಃ ಸುಪತನಾ ಏತಾ ರಾತ್ರ್ಯೋ

CC-0. Jangamwadi Math Collection. Digitized by eGangotri

ವಸತೇ ಮಾತರಿಶ್ವನ್ ಜ್ಯೋತಿರ್ವರ್ಣಸ್ಯ ತಾವದುಪದದಾತಿ ಯೆಜ್ಞಮಾಗಚ್ಛನ್ ಬ್ರಾಹ್ಮ-
ಣೋ ಹೋತಾಸ್ಯಾಗ್ನೇರ್ಹೋತುರವರೋ ನಿಷೀದನ್ ॥
(ನಿ. ೭-೩೧)

ಈ ವಿಷಯದಲ್ಲಿ ಇನ್ನೂ ಒಂದು ಋಕ್ಕನ್ನು ಉದಾಹರಣೆಯಾಗಿ ಕೊಟ್ಟಿದ್ದಾರೆ. ಹಿಂದಿನ ಋಕ್ಕಿನಲ್ಲಿ ಅಗ್ನಿ ಮತ್ತು ವಾಯುಗಳನ್ನು ಸ್ತುತಿಸಿದೆ. ಈ ಋಕ್ಕಿನಲ್ಲಿ ಕೇವಲ ಅಗ್ನಿಯನ್ನೇ ಸ್ತುತಿಸಲಾಗಿದೆ. ಮಾತರಿಶ್ವನು (ವಾಯುವು) ಒಬ್ಬ ಪುರುಷನನ್ನು ಕುರಿತು—ದೇವತೆಗಳ ಹೋತೃವಾದ ಅಗ್ನಿಗೆ ಇರುವ ವಿಜ್ಞಾನವನ್ನು (ಯಜ್ಞಾನುಷ್ಠಾನಕರ್ಮ ದಲ್ಲಿರುವ ತಿಳುವಳಿಕೆಯನ್ನು), ಯಜ್ಞದಲ್ಲಿ ಭಾಗವಹಿಸುವ ಮನುಷ್ಯಹೋತೃವಾದ ಬ್ರಾಹ್ಮಣನು ಧರಿಸಬಲ್ಲನೇ ಎಂದರೆ ತಿಳಿಯಬಲ್ಲನೇ ಎಂದು ಕೇಳಲಾಗಿ ಅದಕ್ಕೆ ಆ ಪುರುಷನು ಈರೀತಿ ಪ್ರತ್ಯುತ್ತರವನ್ನು ಹೇಳಿರುವನು.

ಎಲೈ ಮಾತರಿಶ್ವನೇ, ಉತ್ತಮವಾದ ರೆಕ್ಕೆಗಳುಳ್ಳ ಪಕ್ಷಿಗಳು ಎಲ್ಲಿಯವರೆಗೆ (ಎಷ್ಟುಹೊತ್ತಿನವರೆಗೆ) ಉಷಸ್ಸನ್ನು ಧರಿಸಿರುವವೋ ಅಲ್ಲಿಯವರೆಗೆ ಯಜ್ಞವೇದಿಯಲ್ಲಿ ಯಜ್ಞಾಗ್ನಿಯ ಸಮೀಪದಲ್ಲಿ ಅಗ್ನಿಗಿಂತ ನೀಚಸ್ಥಾನದಲ್ಲಿ ಕುಳಿತಿರುವ ಮನುಷ್ಯಹೋತೃವಾದ ಬ್ರಾಹ್ಮಣನು ಅದನ್ನು ಧರಿಸುವನು (ಎಂದರೆ ಅಗ್ನಿಯ ಅನುಗ್ರಹದಿಂದ ಸ್ವಲ್ಪ ಮಟ್ಟಿಗೆ ತಿಳಿಯುವನು).

ಈ ಋಕ್ಕಿನಲ್ಲಿರುವ ನ ಎಂಬ ಶಬ್ದಕ್ಕೆ ಉಪಮಾರ್ಥವಿರುವುದಿಲ್ಲ. ಸಂಪ್ರತ್ಯರ್ಥ (ಈಗ ಎಂಬ ಅರ್ಥ) ವಿರುವುದು. ಹೇಗೆಂದರೆ ಇಹ ಎಂಬ ಶಬ್ದಕ್ಕೆ ಇಲ್ಲಿ ಎಂಬರ್ಥವಿದ್ದರೂ ಇಹೈವ ನಿಧೇಹಿ ಎಂಬ ವಾಕ್ಯಕ್ಕೆ ಈಗಲೇ ಇಡು ಎಂಬರ್ಥವಿರುವಂತೆ ಎಂದು ತಿಳಿಯಬೇಕು. ಆದ್ದರಿಂದ ಯಾವನ್ಮಾತ್ರಮುಷಸೋ ನ ಪ್ರತೀಕಂ ಎಂಬ ವಾಕ್ಯಕ್ಕೆ ರಾತ್ರಿಯ ಕೊನೆಯಲ್ಲಿರುವ ಉಷಃಕಾಲವು ಎಲ್ಲಿಯವರೆಗೆ ಎಂದರೆ ಎಷ್ಟುಕಾಲದವರೆಗೆ (ಸ್ವಲ್ಪಕಾಲ ಮಾತ್ರ) ವ್ಯಾಪಿಸಿರುವುದೋ ಅಷ್ಟುಕಾಲಮಾತ್ರ ಎಂದರ್ಥವು. ಸುಪರ್ಣ್ಯಃ ಸುಪತನಾ ಏತಾ ರಾತ್ರಯೋ ವಸತೇ ಮಾತ-ರಿಶ್ವನ್ ಎಂಬ ವಾಕ್ಯಕ್ಕೆ ಎಲೈ ಮಾತರಿಶ್ವನೇ, ಉತ್ತಮವಾದ ರೆಕ್ಕೆಗಳುಳ್ಳಪಕ್ಷಿಗಳು ಹಾರುಡುತ್ತಾಉಷಃಕಾಲವನ್ನು ಧರಿಸಿರುವವು ಎಂದರ್ಥವು. ಎಂದರೆ ಇಲ್ಲಿ ಪಕ್ಷಿಗಳು ಎಂದರೆ ರಾತ್ರಿಗಳು ಎಂದರ್ಥ. ಇದನ್ನುಸೂಚಿಸುವ ಸುಪರ್ಣ್ಯ ಶಬ್ದಕ್ಕೆ ನಾನಾವಿಧ ರೆಕ್ಕೆಗಳು ಎಂಬರ್ಥವು ಉಷಃಕಾಲದ ನಾನಾವಿಧ (ಉತ್ತಮವಾದ) ಬಣ್ಣಗಳು ಎಂಬರ್ಥ ವನ್ನು ಸೂಚಿಸುವುದು. ಆದ್ದರಿಂದ ಸುಪರ್ಣ್ಯಃ ಎಂದರೆ ರಾತ್ರಿಯ ಅಂತ್ಯ ಭಾಗದಲ್ಲಿ ಉಷಸ್ಸು ಉದಯಿಸುವಾಗ ಆ ಉಷಸ್ಸು ನಾನಾವಿಧ ಅಥವಾ ರಮಣೀಯವಾದ ಬಣ್ಣಗಳುಳ್ಳದ್ದಾಗಿರುವುದು ಎಂದಭಿಪ್ರಾಯವು. ಈ ಉಷಃಕಾಲದ ಪ್ರಮಾಣವು ಅತ್ಯಲ್ಪವಾಗಿರುವುದು. ಉಷಃಕಾಲಾನಂತರ ಅತಿಶೀಘ್ರವಾಗಿ ಸೂರ್ಯೋದಯವಾಗುವುದರಿಂದ ಉಷಃ ಕಾಲವು ಪ್ರಮಾಣದಲ್ಲಿ ಅತ್ಯಲ್ಪವಾಗಿರುವುದು. ಬಹುಸ್ವಲ್ಪ ಕಾಲದವರೆಗೆ ಮಾತ್ರ ಎಂದಭಿಪ್ರಾಯವು. ಮನುಷ್ಯ ಹೋತೃವು ದೇವಹೋತೃವಾದ ಅಗ್ನಿಗಿಂತ ಅನಿಷ್ಠನು ಆದುದರಿಂದ ಮನುಷ್ಯಹೋತೃವಾದ ಬ್ರಾಹ್ಮಣನು ಯಜ್ಞ ವೇದಿಯಲ್ಲಿ ಪ್ರತಿಷ್ಠಾಪಿತನಾಗಿರುವ ಅಗ್ನಿಗಿಂತ ನೀಚಸ್ಥಾನದಲ್ಲಿ ಕುಳಿತು ಅತ್ಯಲ್ಪಕಾಲದವರೆಗೆ ಮಾತ್ರ ವಿಶೇಷಪ್ರಾಜ್ಞ ನಾದ ಅಗ್ನಿಯ ಅನುಗ್ರಹದಿಂದ ಹೋತೃಕರ್ಮವನ್ನು ನೆರವೇರಿಸುವನು ಎಂದು ಮುಖ್ಯಾಭಿಪ್ರಾಯವು. ಇದರಿಂದ ಮನುಷ್ಯನ ಅಲ್ಪತ್ವವೂ ಅಗ್ನಿಯ ಮಹತ್ತ್ವವೂ ವ್ಯಕ್ತಪಡುವುದು. ಈ ಋಕ್ಕಿನಲ್ಲಿ ಮನುಷ್ಯಹೋತೃವಾದ ಬ್ರಾಹ್ಮಣನು ಯಜ್ಞವೇದಿಯಲ್ಲಿ ಕುಳಿತು ದೇವಹೋತೃವಾದ ಅಗ್ನಿಯನ್ನು ಸ್ತುತಿಸುತ್ತಾ ಹೋತೃಕರ್ಮವನ್ನು ನೆರವೇರಿಸುವನು ಎಂದು ಹೇಳಿರುವುದರಿಂದ ಇಲ್ಲಿ ವೈಶ್ವಾನರಾಗ್ನಿಯೆಂದರೆ ಪಾರ್ಥಿವಾಗ್ನಿಯನ್ನೇ ಸ್ತುತಿಸಲಾಗಿದೆ. ಆದಿತ್ಯನನ್ನಲ್ಲ ಎಂದು ಸ್ಪಷ್ಟವಾಗಿ ವ್ಯಕ್ತವಾಗಿರುವುದು.

CC-0. Jangamwadi Math Collection. Digitized by eGangotri

ಹೋತೃಜಪಸ್ತ್ವನಗ್ನಿರ್ವೈಶ್ವಾನರೀಯೋ ಭವತಿ ದೇವ ಸವಿತರೇತಂ ತ್ವಾ ವೃಣತೇಽಗ್ನಿಂ ಹೋತ್ರಾಯ ಸಹ ಪಿತ್ರಾ ವೈಶ್ವಾನರೇಣೇತೀಮಮೇವಾಗ್ನಿಂ ಸವಿತಾರಮಾಹ ಸರ್ವಸ್ಯ ಪ್ರಸವಿತಾರಂ ಮಧ್ಯಮಂ ವೋತ್ತಮಂ ವಾ ಪಿತರಂ ।

ಯಸ್ತು ಸೂಕ್ತಂ ಭಜತೇ ಯಸ್ಮೈ ಹವಿರ್ನಿರುಪ್ಯತೇಽಯಮೇವ ಸೋಽಗ್ನಿರ್ವೈಶ್ವಾನರಃ ।
ನಿಪಾತಮೇವೈತೇ ಉತ್ತರೇ ಜ್ಯೋತಿಷೀ ಏತೇನ ನಾಮಧೇಯೇನ ಭಜೇತೇ ಭಜೇತೇ ॥

( ನಿ. ೭-೩೧ ).

ಯಜ್ಞದಲ್ಲಿ ಹೋತೃವು ಪಠಿಸುವ ಜಪಮಂತ್ರಾದಿಗಳು ವೈಶ್ವಾನರನನ್ನೇ ಸಂಬೋಧಿಸಿ ಸ್ತುತಿಸುತ್ತವೆ. ಅಗ್ನಿಯನ್ನಲ್ಲ. ಮಂತ್ರಜಪವು—ದೇವಸವಿತರೇತಂ ತ್ವಾ ವೃಣತೇಽಗ್ನಿಂ ಹೋತ್ರಾಯ ಸಹ ಪಿತ್ರಾ ವೈಶ್ವಾನರೇಣ ಎಂದಿರುವುದು. ಎಲೈ ಪ್ರಕಾಶಮಾನನಾದ ಸವಿತೃದೇವನೇ, ಸ್ತೋತ್ರಮಾಡುವುದಕ್ಕಾಗಿ ಹೋತೃವು ನಿನ್ನನ್ನೇ ಎಂದರೆ ಅಗ್ನಿಯನ್ನೇ ನಿನ್ನ ತಂದೆಯಾದ ವೈಶ್ವಾನರನೊಡನೆ ಆರಿಸಿಕೊಂಡಿರುವನು ಎಂಬ ವಾಕ್ಯಕ್ಕೆ ವಿವರಣೆಯು ಆವಶ್ಯಕವು. ಇಲ್ಲಿ ಋಷಿಯು ಅಗ್ನಿಯನ್ನು ಸವಿತೃವೆಂದೇ ಕರೆದಿರುವನು. ಇಲ್ಲಿ ಸವಿತೃವೆಂದರೆ (ಸವಿತೃಶಬ್ದಕ್ಕೆ) ಸಮಸ್ತವಸ್ತುಜಾತ (ಅಥವಾ ಪ್ರಾಣಿಗಳ) ಉತ್ಪತ್ತಿಕಾರಕನು ಎಂದರ್ಥವು. ಈ ಅರ್ಥದಲ್ಲಿಯೇ ಇಲ್ಲಿ ಈ ಶಬ್ದ ಪ್ರಯೋಗವಿರುವುದು. ಮಧ್ಯಮಸ್ಥಾನೀಯವಾದ ವಾಯುವನ್ನು ಅಥವಾ ಉತ್ತಮ (ಸ್ವರ್ಗ) ಸ್ಥಾನೀಯನಾದ ಆದಿತ್ಯನನ್ನು ತಂದೆಯೆಂದು ಸಂಬೋಧಿಸಿರುವನು.

ಸೂಕ್ತದಲ್ಲಿ ಯಾವ ದೇವನನ್ನು ಸ್ತುತಿಸಲಾಗಿದೆಯೋ, ಯಾವ ದೇವನಿಗಾಗಿ (ಯಾವ ದೇವತೆಯನ್ನು ದ್ದೇಶಿಸಿ) ಹವಿಸ್ಸು ಹೋಮ ಮಾಡಲ್ಪಡುವುದೋ ಆ ವೈಶ್ವಾನರನೇ ಈ ಪಾರ್ಥಿವಾಗ್ನಿಯು.

ಸೂರ್ಯೋ ವೈಶ್ವಾನರಃ । ಅಗ್ನಿರ್ವೈಶ್ವಾನರಃ । ಎಂದು ಮೊದಲಾದ ವಾಕ್ಯಗಳಲ್ಲಿ ಹೇಳಿರುವಂತೆ, ಮಧ್ಯಮಸ್ಥಾನದಲ್ಲಿರುವ ವಿದ್ಯುದ್ರೂಪವಾದ ಜ್ಯೋತಿಯೂ ಸ್ವರ್ಗಸ್ಥಾನದಲ್ಲಿರುವ ಆದಿತ್ಯರೂಪವಾದ ಜ್ಯೋತಿಯೂ ಇವೆರಡು ಜ್ಯೋತಿಗಳೂ ವೈಶ್ವಾನರ ಎಂಬ ಒಂದೇ ಹೆಸರಿನಿಂದ ವ್ಯವಹರಿಸಲ್ಪಡುವವು. ಎಂದರೆ ವೈಶ್ವಾನರ ಶಬ್ದದಿಂದ ವ್ಯವಹರಿಸಲ್ಪಡುವ ಪಾರ್ಥಿವಾಗ್ನಿಯು ಸ್ವರ್ಗದಲ್ಲಿ ಆದಿತ್ಯರೂಪದಿಂದಲೂ, ಅಂತರಿಕ್ಷದಲ್ಲಿ ವೈದ್ಯುತರೂಪದಿಂದಲೂ, ಪೃಥ್ವಿಯಲ್ಲಿ ಪಾರ್ಥಿವಾಗ್ನಿರೂಪದಿಂದಲೂ ಮೂರು ರೂಪಗಳಿಂದ ಪ್ರಕಾಶಿಸುತ್ತಿರುವನು ಎಂದು ಮುಖ್ಯಾಭಿಪ್ರಾಯವು.

---

## ಐದನೆಯ ಸೂಕ್ತವು.

---

### ಸಾಯಣಭಾಷ್ಯಂ

ಚತುರ್ಥೇ ಮಂಡಲೇ ಪ್ರಥಮೇಽನುವಾಕೇ ದಶ ಸೂಕ್ತಾನಿ । ವೈಶ್ವಾನರಾಯೇತಿ ಪಂಚದಶರ್ಚಂ ಪಂಚಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಂ ವೈಶ್ವಾನರಾಗ್ನಿದೇವತಾಕಂ । ಅತ್ರಾನುಕ್ರಮಣಿಕಾ । ವೈಶ್ವಾನರಾಯ ವೈಶ್ವಾನರೀಯಮಿತಿ ॥ ವಿನಿಯೋಗೋ ಲೈಂಗಿಕಃ ॥

CC-0. Jangamwadi Math Collection. Digitized by eGangotri

ಅನುವಾದವು—ನಾಲ್ಕನೆಯ ಮಂಡಲದ ಮೊದಲನೆಯ ಅನುವಾಕದಲ್ಲಿ ಹತ್ತು ಸೂಕ್ತಗಳಿರುವವು. ಅವುಗಳಲ್ಲಿ ವೈಶ್ವಾನರಾಯ ಎಂಬ ಈ ಸೂಕ್ತವು ಐದನೆಯದು. ಇದರಲ್ಲಿ ಹದಿನೈದು ಋಕ್ಕುಗಳಿರುವವು ಈ ಸೂಕ್ತಕ್ಕೆ ವಾಮದೇವನು ಋಷಿಯು; ವೈಶ್ವಾನರಾಗ್ನಿಯು ದೇವತೆಯು; ತ್ರಿಷ್ಟುಪ್ ಛಂದಸ್ಸು ಅನುಕ್ರಮಣಿಕೆಯಲ್ಲಿ—ವೈಶ್ವಾನರಾಯ ವೈಶ್ವಾನರಾಯಂ ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.

---

## ಸೂಕ್ತ—೫

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೫ ॥
ಅಷ್ಟಕ—೩॥ ಅಧ್ಯಾಯ—೫ ॥ ವರ್ಗ—೧, ೨, ೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷಿಃ—ವಾಮದೇವಃ ॥
ದೇವತಾ—ವೈಶ್ವಾನರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ವೈಶ್ವಾನರಾಯ ಮೀಳ್ಹುಷೇ ಸಜೋಷಾಃ ಕಥಾ ದಾಶೇಮಾಗ್ನಯೇ ಬೃಹದ್ಭಾಃ ।
ಅನೂನೇನ ಬೃಹತಾ ವಕ್ಷಥೇನೋಪ ಸ್ತಭಾಯದುಪಮಿನ್ನ ರೋಧಃ ॥೧॥

ಪದಪಾಠಃ

ವೈಶ್ವಾನರಾಯ । ಮೀಳ್ಹುಷೇ । ಸಃಜೋಷಾಃ । ಕಥಾ । ದಾಶೇಮ । ಅಗ್ನಯೇ । ಬೃಹತ್ । ಭಾಃ ।
ಅನೂನೇನ । ಬೃಹತಾ । ವಕ್ಷಥೇನ । ಉಪ । ಸ್ತಭಾಯತ್ । ಉಪ್ಽಮಿತ್ । ನ । ರೋಧಃ ॥ ೧ ॥

ಸಾಯಣಭಾಷ್ಯಂ

ಸಜೋಷಾಃ ಸಜೋಷಸಃ ಸಮಾನಪ್ರೀತಿಯುಕ್ತಾ ವಯಮೃತ್ವಿಗ್ಯಜಮಾನಾ ವೈಶ್ವಾನರಾಯ ವಿಶ್ವಾನರಸಂಬಂಧಿನ ಏತನ್ನಾಮಕಾಯ ಮೀಳ್ಹುಷೇಽಭಿಮತವೃಷ್ಟ್ಯಾದಿಸೇಕ್ತ್ರೇ ಬೃಹದ್ಬೃಹತೇ ಮಹತೇ ಭಾ ಭಾಸಮಾನಾಯಾಗ್ನಯೇ ದೇವಾಯ ಕಥಾ ಕಥಂ ಕೇನ ಪ್ರಕಾರೇಣ ದಾಶೇಮ ದದ್ಯಾಮ। ಸಾಮು-

CC-0. Jangamwadi Math Collection. Digitized by eGangotri

ರ್ಥ್ಯಾದ್ಧವಿರಿತಿ ಗಮ್ಯತೇ । ಅಥವಾ ಬೃಹದ್ಭಾ ಇತ್ಯುತ್ತರತ್ರ ಯೋಜ್ಯಂ । ಕಥಾ ದಾಶೇಮೇತ್ಯುಕ್ತಂ । ಕಿಂ ತತ್ರಾಧಿಕ್ಯಮಿತಿ ತದುಚ್ಯತೇ । ಯೋಽಗ್ನಿರ್ಬೃಹನ್ಮಹಾನ್ಭಾ ಭಾಸಮಾನಶ್ಚ ಸನ್ ಅನೂನೇನಾವಿಕಲೇನ ಸಂಪೂರ್ಣೇನ ಅತ ಏವ ಬೃಹತಾ ಪ್ರಭೂತೇನ ವಕ್ಷಥೇನ ವೋಢವ್ಯೇನ ಸ್ವಶರೀರೇಣೋಪಸ್ತಭಾಯತ್ । ಉಪಸ್ತಭ್ನಾತಿ । ಸಾಮರ್ಥ್ಯಾದ್ದ್ಯಾಮಿತಿ ಶೇಷಃ । ದ್ಯುಲೋಕಂ ಪ್ರಾಪ್ನೋತೀತ್ಯರ್ಥಃ । ತತ್ರ ದೃಷ್ಟಾಂತಃ । ಉಪಮಿನ್ನ ರೋಧಃ । ಉಪ ಸಮೀಪೇ ಮೀಯತೇ ಕ್ಷಿಪ್ಯತ ಇತ್ಯುಪಮಿತ್ ಸ್ಥೂಣಾ। ಸಾ ಯಥಾ ತೃಣಾಚ್ಛಾದನಾದಿನಿರೋಧಕಂ ವಂಶಾದಿಕಮುಪಸ್ತಭ್ನಾತಿ ತದ್ವತ್ । ಯದ್ವಾ । ವಕ್ಷಥೇನೋಕ್ಥಲಕ್ಷಣೇನ ಫಲಾದಿವಾಹಕೇನ ಸ್ತೋತ್ರೇಣ ಸಹ ದ್ಯುಲೋಕಮುಪಸ್ತಭಾಯತ್ । ಸ್ತಭಾಯತ್। ಸ್ತನ್ಭುಃ ಸೌತ್ರೋ ಧಾತುಃ । ಲಙಿ ಛಂದಸಿ ಶಾಯಜಪೀತಿ ವ್ಯತ್ಯಯೇನಾಹಾವಪಿ ಶಾಯಜಾದೇಶಃ । ಬಹುಲಂ ಛಂದಸೀತ್ಯಡಾಗಮಾಭಾವಃ । ಕಿಮಿವ । ಉಪಮಿನ್ನ ರೋಧಃ । ಉಪ ಸಮೀಪೇ ಮೀಯತ ಇತ್ಯುಪಮಿದುದಕಂ । ಕೂಲಮಿವ ॥

ಪ್ರತಿಪದಾರ್ಥ

ವೈಶ್ವಾನರಾಯ—ವೈಶ್ವಾನರನೆಂಬ ಹೆಸರಿನಿಂದ ಪ್ರಸಿದ್ಧನೂ । ಮೀಳ್ಹುಷೇ—ಇಷ್ಟಾರ್ಥಪ್ರದನೂ । ಬೃಹತ್—ಮಹದಾಕಾರವುಳ್ಳವನೂ । ಭಾಃ—ಪ್ರಕಾಶಮಾನನೂ ಆದ । ಅಗ್ನಯೇ—ಅಗ್ನಿಯನ್ನುದ್ದೇಶಿಸಿ । ಸಜೋಷಾಃ—ಋತ್ವಿಗಾದಿಗಳಾದ ನಾವು । ಕಥಾ—ಯಾವ ಪ್ರಕಾರವಾಗಿ ತಾನೇ । ದಾಶೇಮ—ಹವಿಸ್ಸನ್ನು ಅರ್ಪಿಸೋಣ । (ಅದೇ ಅಗ್ನಿಯು) । ಅನೂನೇನ—ನ್ಯೂನತೆಯಿಲ್ಲದೇ ಪೂರ್ಣವಾಗಿರುವುದೂ । ಬೃಹತಾ—ಬೃಹದಾಕಾರವುಳ್ಳದೂ ಆದ । ವಕ್ಷಥೇನ—ತನ್ನ ಶರೀರದಿಂದ । ರೋಧಃ—ಅಂತರಿಕ್ಷವನ್ನು । ಉಪಮಿನ್ನ—ಸ್ತಂಭವು ತೊಲೆಯನ್ನು ತಡೆದೆತ್ತಿನಿಲ್ಲಿಸಿರುವಂತೆ । ಉಪಸ್ತಭಾಯತ್—ಎತ್ತಿ ಹಿಡಿದಿದ್ದಾನೆ.

ಭಾವಾರ್ಥ

ವೈಶ್ವಾನರವೆಂಬ ಹೆಸರಿನಿಂದ ಪ್ರಸಿದ್ಧನೂ, ಇಷ್ಟಾರ್ಥಪ್ರದನೂ, ಮಹದಾಕಾರವುಳ್ಳವನೂ, ಪ್ರಕಾಶಮಾನನೂ ಆದ ಅಗ್ನಿಯನ್ನುದ್ದೇಶಿಸಿ ಋತ್ವಿಕ್ಕುಗಳೂ, ಯಜಮಾನರೂ ಆದ ನಾವು ಒಟ್ಟಿಗೆ ಸೇರಿ ಯಾವ ಪ್ರಕಾರದಲ್ಲಿ ಹವಿಸ್ಸನ್ನರ್ಪಿಸೋಣ ? ಅದೇ ವೈಶ್ವಾನರಾಗ್ನಿಯು ಪೂರ್ಣವಾದುದೂ, ಬೃಹದಾಕಾರವುಳ್ಳದೂ ಆದ ತನ್ನ ಶರೀರದಿಂದ ಸ್ತಂಭವು ತೊಲೆಯನ್ನು ಎತ್ತಿ ಹಿಡಿದಿರುವಂತೆ ಅಂತರಿಕ್ಷವನ್ನು ಎತ್ತಿ ಹಿಡಿದಿದ್ದಾನೆ.

English Translation

How may we present rejoicing ( fit offerings ) to Agni, the showerer (of benefits) ; to Vaishwanara, he, who, bright with great lustre, sustains the heaven, with his entire vast and insupportable ( bulk ), as a pillar (sustains a roof).

———— :o: ————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಮಾ ನಿಂದತ ಯ ಇಮಾಂ ಮಹ್ಯಂ ರಾತಿಂ ದೇವೋ ದದೌ ಮರ್ತ್ಯಾಯ ಸ್ವಧಾವಾನ್ ।
ಪಾಕಾಯ ಗೃತ್ಸೋ ಅಮೃತೋ ವಿಚೇತಾ ವೈಶ್ವಾನರೋ ನೃತಮೋ ಯಹ್ವೋ ಅಗ್ನಿಃ ॥ ೨ ॥

ಪದಪಾಠಃ

ಮಾ । ನಿಂದತ । ಯಃ । ಇಮಾಂ । ಮಹ್ಯಂ । ರಾತಿಂ । ದೇವಃ । ದದೌ । ಮರ್ತ್ಯಾಯ । ಸ್ವಧಾಽವಾನ್ ।
ಪಾಕಾಯ । ಗೃತ್ಸಃ । ಅಮೃತಃ । ವಿಽಚೇತಾಃ । ವೈಶ್ವಾನರಃ । ನೃಽತಮಃ । ಯಹ್ವಃ । ಅಗ್ನಿಃ ॥ ೨ ॥

ಸಾಯಣಭಾಷ್ಯಂ

ಹೇ ಹೋತ್ರಾದಯೋಽಮುಂ ವೈಶ್ವಾನರಮಗ್ನಿಂ ಮಾ ನಿಂದತ । ನಿಂದಾಂ ಮಾ ಕುರುತ । ಸ್ತುತೇತ್ಯರ್ಥಃ । ಯೋ ದೇವೋ ದೀಪ್ಯಮಾನೋಽಗ್ನಿಃ ಸ್ವಧಾವಾನಸ್ಮದ್ದತ್ತೇನ ಹವಿರ್ಲಕ್ಷಣೇನಾನ್ನೇನ ತದ್ವಾನ್ ಸನ್ ಮರ್ತ್ಯಾಯ ಮರಣಧರ್ಮಾಯ ಪಾಕಾಯ ಪರಿಪಕ್ವಪ್ರಜ್ಞಾಯ ಮಹ್ಯಂ ಯಜಮಾನಾಯೇಮಾಮಿದಾನೀಂ ದೀಯಮಾನಪ್ರಕಾರಾಂ ರಾತಿಂ ಧನಂ ದದೌ । ದತ್ತವಾನ್ । ಸ ವಿಶೇಷ್ಯತೇ । ಗೃತ್ಸೋ ಮೇಧಾವೀ । ಮೇಧಾವಿನಾಮೈತತ್ । ಅಮೃತೋಽಮರಣಸ್ವಭಾವೋ ವಿಚೇತಾ ವಿಶಿಷ್ಟಪ್ರಜ್ಞೋ ವೈಶ್ವಾನರೋ ವಿಶ್ವೈರ್ನರೈರಾಹವನೀಯಾದಿರೂಪೇಣ ನೀಯಮಾನೋ ನೃತಮೋ ನೇತೃತಮಃ ಫಲಾದೀನಾಂ ಯಹ್ವೋ ಮಹಾನ್ । ಮಹನ್ನಾಮೈತತ್ । ಅಗ್ನಿರಂಗನಾದಿಗುಣವಿಶಿಷ್ಟಃ । ತಾದೃಶಮಗ್ನಿಂ ಸ್ತುತೇತಿ ಭಾವಃ ॥

ಪ್ರತಿಪದಾರ್ಥ

ಯಃ—ಯಾವ । ದೇವಃ—ದೀಪ್ಯಮಾನನಾಗಿಯೂ । ಸ್ವಧಾವಾನ್—ಹವಿಸ್ಸಿನರೂಪದ ಅನ್ನವುಳ್ಳವನಾಗಿಯೂ ಆಗಿ । ಮರ್ತ್ಯಾಯ—ಮಾನವನೂ । ಪಾಕಾಯ-ಪರಿಪಕ್ವವಾದ ಜ್ಞಾನವುಳ್ಳವನೂ ಆದ । ಮಹ್ಯಂ-ನನಗೆ । ಇಮಾಂ ರಾತಿಂ—ಈ ಧನವನ್ನು । ದದೌ—ಕೊಟ್ಟನೋ (ಅಂತಹ ಅಗ್ನಿಯನ್ನು) । ಮಾ ನಿಂದತ—ದೂಷಿಸಬೇಡಿ (ಅಂತಹ ಅಗ್ನಿಯು) । ಗೃತ್ಸಃ—ಮೇಧಾವಿಯೂ । ಅಮೃತಃ—ಮರಣಧರ್ಮರಹಿತನೂ । ವಿಚೇತಾಃ—ವಿಶಿಷ್ಟವಾದ ಪ್ರಜ್ಞೆಯುಳ್ಳವನೂ । ವೈಶ್ವಾನರಃ—ಸಕಲರಿಂದಲೂ ಒಯ್ಯಲ್ಪಡುವವನೂ । ನೃತಮಃ—ನೇತೃಗಳಲ್ಲಿ ಶ್ರೇಷ್ಠನೂ । ಯಹ್ವಃ—ಮಹಾತ್ಮನೂ । ಅಗ್ನಿಃ—ಪೂಜ್ಯನೂ (ಆಗಿದ್ದಾನೆ).

CC-0. Jangamwadi Math Collection. Digitized by eGangotri

ಭಾವಾರ್ಥ

ಯಾವ ಅಗ್ನಿಯು ಪ್ರಕಾಶಮಾನನಾಗಿಯೂ, ಹವಿಸ್ಸಿನ ರೂಪದ ಅನ್ನವುಳ್ಳವನಾಗಿಯೂ ಆಗಿ ಮಾನವನೂ ಪರಿಪಕ್ವವಾದ ಜ್ಞಾನವುಳ್ಳವನೂ ಆದ ನನಗೆ ಈ ಧನವನ್ನು ಕೊಟ್ಟನೋ ಅಂತಹ ಅಗ್ನಿಯನ್ನು ದೂಷಿಸಬೇಡಿ. ಆದೇ ಅಗ್ನಿಯು ಮೇಧಾವಿಯೂ, ಮರಣಧರ್ಮರಹಿತನೂ, ವಿಶಿಷ್ಟವಾದ ಪ್ರಜ್ಞೆಯುಳ್ಳವನೂ, ಸಕಲರಿಂದಲೂ ಒಯ್ಯಲ್ಪಡುವವನೂ, ನೇತೃಗಳಲ್ಲಿ ಶ್ರೇಷ್ಠನೂ, ಮಹಾತ್ಮನೂ ಮತ್ತು ಪೂಜ್ಯನೂ ಆಗಿದ್ದಾನೆ.

English Translation

Reproach not the divine (Agni), who, accepting the oblation, has given the wealth to me, his mortal (worshipper) of mature (intellect); Agni, who is wise, immortal, discriminating, (who is) Vaishwanara, chief conductor (of rites), the mighty.

---

ಸಂಹಿತಾಪಾಠಃ

ಸಾಮ ದ್ವಿಬರ್ಹಾ ಮಹಿ ತಿಗ್ಮಭೃಷ್ಟಿಃ ಸಹಸ್ರರೇತಾ ವೃಷಭಸ್ತುವಿಷ್ಮಾನ್ ।
ಪದಂ ನ ಗೋರಪಗೂಳ್ಹಂ ವಿವಿದ್ವಾನಗ್ನಿರ್ಮಹ್ಯಂ ಪ್ರೇದು ವೋಚನ್ಮ-
ನೀಷಾಂ ॥ ೩ ॥

ಪದಪಾಠಃ

ಸಾಮ । ದ್ವಿಃಬರ್ಹಾಃ । ಮಹಿ । ತಿಗ್ಮಃಭೃಷ್ಟಿಃ । ಸಹಸ್ರಃರೇತಾಃ । ವೃಷಭಃ । ತುವಿಷ್ಮಾನ್ ।
ಪದಂ । ನ । ಗೋಃ । ಅಪಃಗೂಳ್ಹಂ । ವಿವಿದ್ವಾನ್ । ಅಗ್ನಿಃ । ಮಹ್ಯಂ । ಪ್ರ । ಇತ್ । ಊಂ ಇತಿ । ವೋಚತ್ । ಮನೀಷಾಂ ॥ ೩ ॥

ಸಾಯಣಭಾಷ್ಯಂ

ದ್ವಿಬರ್ಹಾ ದ್ವಯೋರ್ಮಧ್ಯಮೋತ್ತಮಯೋಃ ಸ್ಥಾನಯೋಃ ಪರಿವೃಢಸ್ತಿಗ್ಮಭೃಷ್ಟಿಸ್ತೀಕ್ಷ್ಣ-ತೇಜಾಃ ಸಹಸ್ರರೇತಾ ಬಹುವಿಧಹಿರಣ್ಯರೇತಸ್ಕಃ ರೇತಃಶಬ್ದಃ ಸಾರವಾಚೀ । ಪ್ರಭೂತಸಾರೋ ವಾ । ವೃಷಭೋ ವರ್ಷಿತಾ ಕಾಮಾನಾಂ ತುವಿಷ್ಮಾನ್ಬಹುಧನ ಈದೃಶೋಽಯಮಗ್ನಿರತ್ಯಂತಗೋಪಿತಂ ಗೋಃ ಪದಂ ನ ನಷ್ಟಾಯಾ ಗೋಃ ಪದಮಿವಾಪಗೂಳ್ಹಮತ್ಯಂತರಹಸ್ಯಂ । ಮನೀಷಾಶಬ್ದೋ ಜ್ಞಾನವಾಚೀ ಸನ್ನತ್ರ ಜ್ಞಾತವ್ಯೇ ವರ್ತತೇ । ಮನೀಷಾಂ ಜ್ಞಾತವ್ಯಂ ಮಹಿ ಮಹತ್ಪೂಜ್ಯಂ ಸಾಮಾಸ್ಮದಭಿಮತಂ ಸ್ತೋತ್ರಂ ವಿವಿದ್ವಾನ್ ವಿಶೇಷೇಣ ಜಾನನ್ ಪ್ರೇದು ವೋಚತ್ । ಪ್ರೈವ ಬ್ರವೀತು ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ದ್ವಿಬರ್ಹಾಃ—ಮಧ್ಯಮ ಮತ್ತು ಉತ್ತಮ ಸ್ಥಾನಗಳೆರಡನ್ನೂ ಆಕ್ರಮಿಸಿರುವವನೂ । ತಿಗ್ಮಭೃಷ್ಟಿಃ—ತೀಕ್ಷ್ಣವಾದ ತೇಜಸ್ಸುಳ್ಳವನೂ । ಸಹಸ್ರರೇತಾಃ—ಪ್ರಭೂತವಾದ ಸಾರವುಳ್ಳವನೂ । ವೃಷಭಃ—ಕಾಮವರ್ಷಕನೂ । ತುವಿಷ್ಮಾನ್—ಅತಿಶಯವಾದ ಧನವುಳ್ಳವನೂ ಆದ । ಅಗ್ನಿಃ—ಅಗ್ನಿಯು । ಗೋ ಪದಂ ನ—ತಪ್ಪಿಸಿಕೊಂಡುಹೋಗಿರುವ ಗೋವುಗಳ ಹೆಜ್ಜೆಯ ಗುರುತಿನಂತೆ । ಅಪಗೂಹ್ಯಂ—ಅತ್ಯಂತ ರಹಸ್ಯವಾದುದೂ । ಮನೀಷಾಂ—ತಿಳಿಯಲ್ಪಡತಕ್ಕದ್ದೂ । ಮಹಿ—ಪೂಜ್ಯವಾದುದೂ । ಸಾಮ—ಸ್ತುತಿರೂಪವುಳ್ಳದ್ದೂ ಆದ ಸಾಮವನ್ನು, ವಿವಿದ್ವಾನ್—ವಿಶೇಷರೀತಿಯಿಂದ ತಿಳಿದವನಾಗಿ । ಮಹ್ಯಂ—ನನಗೆ । ಪ್ರೇದು ವೋಚತ್—ತಿಳಿಯುವಂತೆ ಹೇಳಿಕೊಡಲಿ.

ಭಾವಾರ್ಥ

ಮಧ್ಯಮ ಮತ್ತು ಉತ್ತಮಸ್ಥಾನಗಳೆರಡನ್ನೂ ಆಕ್ರಮಿಸಿರುವವನೂ, ತೀಕ್ಷ್ಣವಾದ ತೇಜಸ್ಸುಳ್ಳವನೂ। ಪ್ರಭೂತವಾದ ಸಾರವುಳ್ಳವನೂ ಕಾಮವರ್ಷಕನೂ, ಅತಿಶಯವಾದ ಧನವುಳ್ಳವನೂ ಆದ ಅಗ್ನಿಯು ಗುಪ್ತವಾಗಿರುವ ಗೋವುಗಳ ಹೆಜ್ಜೆಯ ಗುರುತಿನಂತೆ ಅತ್ಯಂತ ರಹಸ್ಯವಾದುದೂ, ಮಾನವರಿಂದ ಅವಶ್ಯವಾಗಿ ತಿಳಿಯಲ್ಪಡತಕ್ಕದ್ದೂ ಪೂಜ್ಯವಾದುದೂ ಸ್ತುತಿರೂಪವುಳ್ಳದ್ದೂ ಆದ ಸಾಮವನ್ನು ವಿಶೇಷರೀತಿಯಿಂದ ತಿಳಿದವನಾಗಿ ನನಗೆ ತಿಳಿಯುವಂತೆ ಹೇಳಿಕೊಡಲಿ.

English Translation

May Agni, filling both (the middling and most excellent condition), bright shining, of manifold vigour, the showerer of (benefits) the possessor of affiuence, (who comprehends) by (his) wisdom the mysterious sacred hymn, as (they track) the footsteps of a (missing) cow, reveal (the sense) to me.

———

ಸಂಹಿತಾಪಾಠಃ

ಪ್ರ ತಾँ ಅಗ್ನಿರ್ಬಭಸತ್ತಿಗ್ಮಜಂಭಸ್ತಪಿಷ್ಠೇನ ಶೋಚಿಷಾ ಯಃ ಸುರಾಧಾಃ ।
ಪ್ರ ಯೇ ಮಿನಂತಿ ವರುಣಸ್ಯ ಧಾಮ ಪ್ರಿಯಾ ಮಿತ್ರಸ್ಯ ಚೇತತೋ ಧ್ರುವಾಣಿ ॥ ೪ ॥

ಪದಪಾಠಃ

ಪ್ರ । ತಾನ್ । ಅಗ್ನಿಃ । ಬಭಸತ್ । ತಿಗ್ಮऽಜಂಭಃ । ತಪಿಷ್ಠೇನ । ಶೋಚಿಷಾ । ಯಃ । ಸುऽರಾಧಾಃ ।

CC-0. Jangamwadi Math Collection. Digitized by eGangotri

ಪ್ರ । ಯೇ । ಮಿನಂತಿ । ವರುಣಸ್ಯ । ಧಾಮ । ಪ್ರಿಯಾ । ಮಿತ್ರಸ್ಯ । ಚೇತತಃ । ಧ್ರುವಾಣಿ ॥ ೪ ॥

ಸಾಯಣಭಾಷ್ಯಂ

ಯೋಽಗ್ನಿಃ ಸುರಾಧಾಃ ಶೋಭನಧನಃ ಸ ತಿಗ್ಮಜಂಭಸ್ತೀಕ್ಷ್ಣದಂಷ್ಟ್ರಃ ಸನ್ ತಪಿಷ್ಠೇನ ಶೋಚಿಷಾತಿಶಯೇನ ಶತ್ರೂಣಾಂ ತಾಪಕೇನ ತೇಜಸಾ ತಾನ್ಸಕ್ಷ್ಯಮಾಣಾನ್ ದ್ವೇಷ್ಟ್ರಾನ್ಪ್ರ ಬಭಸತ್ । ಪ್ರಕರ್ಷೇಣ ಭರ್ತ್ಸಯತು । ದಹತ್ವಿತ್ಯರ್ಥಃ ॥ ಭಸ ಭರ್ತ್ಸನದೀಪ್ತ್ಯೋಃ । ಲೇಟೀತಶ್ಚ ಲೋಪ ಇತೀಕಾರಲೋಪಃ । ಲೇಟೋಽಡಾಟಾವಿತ್ಯಡಾಗಮಃ ॥ ತಾನಿತ್ಯುಕ್ತಂ ಕಾನಿತ್ಯಾಹ । ಯೇ ದ್ವೇಷ್ಟಾರಶ್ಚೇತತೋ ಜಾನತಃ । ಏತದುಭಯವಿಶೇಷಣಂ । ಮಿತ್ರಸ್ಯ ವರುಣಸ್ಯ ಚ ಪ್ರಿಯಾ ಪ್ರಿಯಾಣಿ ಧ್ರುವಾಣಿ ಸ್ಥಿರಾಣಿ ಧಾಮ ಧಾಮಾನಿ ತೇಜಃಸ್ಥಾನಾನಿ ಕರ್ಮಾಣಿ ವಾ ಪ್ರ ಮಿನಂತಿ । ಪ್ರಕರ್ಷೇಣ ಹಿಂಸಂತಿ । ಮೀಞ್ ಹಿಂಸಾಯಾಂ । ಮೀನಾತೇರ್ನಿಗಮ ಇತಿ ಹ್ರಸ್ವತ್ವಂ । ವಿಕರಣಸ್ವರಃ ॥

ಪ್ರತಿಪದಾರ್ಥ

ಯೇ—ಯಾವ ಶತ್ರುಗಳು । ಚೇತತಃ—ಪ್ರಜ್ಞಾವಂತರಾದ । ಮಿತ್ರಸ್ಯ ವರುಣಸ್ಯ—ಮಿತ್ರಾವರುಣರ । ಪ್ರಿಯಾ—ಪ್ರೀತಿಕಾರಕವಾದವೂ । ಧ್ರುವಾಣಿ—ಸ್ಥಿರವಾದವೂ ಆದ । ಧಾಮ—ತೇಜಃಸ್ಥಾನಗಳನ್ನು । ಪ್ರ ಮಿನಂತಿ—ಹಿಂಸಿಸುತ್ತಾರೆಯೋ ಅಂತಹ । ತಾನ್—ಆ ಶತ್ರುಗಳನ್ನು । ಸುರಾಧಾಃ—ಶ್ರೇಷ್ಠವಾದ ಧನವುಳ್ಳವನೂ । ತಿಗ್ಮಜಂಭಃ—ತೀಕ್ಷ್ಣವಾದ ಆಯುಧವುಳ್ಳವನೂ ಆದ । ಅಗ್ನಿಃ—ಅಗ್ನಿಯು । ತಪಿಷ್ಠೇನ—(ಶತ್ರುಗಳನ್ನು) ದಹಿಸತಕ್ಕ । ಶೋಚಿಷಾ—ತೇಜಸ್ಸಿನಿಂದ । ಪ್ರ ಬಭಸತ್—ನಾಶಮಾಡಲಿ.

ಭಾವಾರ್ಥ

ಯಾವ ಶತ್ರುಗಳು ಪ್ರಜ್ಞಾವಂತರಾದ ಮಿತ್ರಾವರುಣರ ಪ್ರೀತಿಕಾರಕವೂ, ಸ್ಥಿರವಾದವೂ ಆದ ತೇಜಃಸ್ಥಾನಗಳನ್ನು ಹಿಂಸಿಸುತ್ತಾರೆಯೋ ಅಂತಹ ಆ ಶತ್ರುಗಳನ್ನು ಶ್ರೇಷ್ಠವಾದ ಧನವುಳ್ಳವನೂ, ತೀಕ್ಷ್ಣವಾದ ಆಯುಧವುಳ್ಳವನೂ ಆದ ಅಗ್ನಿಯು ಶತ್ರುದಾಹಕವಾದ ತನ್ನ ತೇಜಸ್ಸಿನಿಂದ ನಾಶಮಾಡಲಿ.

English Translatiou

May the sharp-toothed Agni, possessed of excellent wealth, consume with his fierce radiance those (adversaries) who injure the firm and valued glories of the sapient Varuna and Mitra.

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಭ್ರಾತರೋ ನ ಯೋಷಣೋ ವ್ಯಂತಃ ಪತಿರಿಪೋ ನ ಜನಯೋ ದುರೇವಾಃ।
ಪಾಪಾಸಃ ಸಂತೋ ಅನೃತಾ ಅಸತ್ಯಾ ಇದಂ ಪದಮಜನತಾ ಗಭೀರಂ ॥೫॥

ಪದಪಾಠಃ

ಅಭ್ರಾತರಃ । ನ । ಯೋಷಣಃ । ವ್ಯಂತಃ । ಪತಿऽರಿಪಃ । ನ । ಜನಯಃ । ದುಃऽಏವಾಃ ।
ಪಾಪಾಸಃ । ಸಂತಃ । ಅನೃತಾಃ । ಅಸತ್ಯಾಃ । ಇದಂ । ಪದಂ । ಅಜನತ । ಗಭೀರಂ ॥ ೫ ॥

ಸಾಯಣಭಾಷ್ಯಂ

ಅಭ್ರಾತರೋ ಭ್ರಾತ್ರಾದಿಬಂಧುರಹಿತಾ ಯೋಷಣೋ ನ ಗತಭರ್ತೃಕಾ ಯೋಷಿತ ಇವ ॥ ವಾಷಪೂರ್ವಸ್ಯ ನಿಗಮ ಇತಿ ವಿಕಲ್ಪನಾದ್ದೀರ್ಘಾಭಾವಃ ॥ ತಾ ಯಥಾ ಭರ್ತೃಗೃಹಾತ್ಪಿತೃಗೃಹಂ ಪ್ರತ್ಯಾಯಂತಿ ತದ್ವದ್ವ್ಯಂತೋ ಗಚ್ಛಂತಃ । ಯಜ್ಞಾದೀನಪಹಾಯಾಮಾರ್ಗೇ ವರ್ತಮಾನಾ ಇತ್ಯರ್ಥಃ । ತಥಾ ಪತಿರಿಪೋ ನ ಜನಯಃ ಪತಿದ್ವೇಷಿಣ್ಯಃ ಸ್ತ್ರಿಯ ಇವ ದುರೇವಾ ದುಷ್ಟಗತಯೋ ದುರಾಚಾರಾ ಅತ ಏವ ಪಾಪಾಸಃ ಪಾಪಾಃ ಸಂತೋಽನೃತಾ ಮಾನಸಸತ್ಯರಹಿತಾ ಅಸತ್ಯಾ ವಾಚಿಕಸತ್ಯರಹಿತಾ ಮನಸಾ ವಾಚಾಗ್ನಿಮಭಜಮಾನಾ ಇದಂ ಪಾಪಿಭಿರನುಭೂಯಮಾನತಯಾ ಪ್ರಸಿದ್ಧಂ ಗಭೀರಮಗಾಧಂ ಪದಂ ನರಕಸ್ಥಾನಮಜನತ । ಅಜನಯಂತ । ಉತ್ಪಾದಯಂತಿ ॥ ಲಙಃ ಜನೇರಂತರ್ಭಾವಿತಣ್ಯರ್ಥಾದ್ವ್ಯತ್ಯಯೇನೈಕವಚನಂ ॥

ಪ್ರತಿಪದಾರ್ಥ

ಅಭ್ರಾತರಃ ಯೋಷಣಃ ನ—ಸಹೋದರರಾಗಲೀ, ಗಂಡನಾಗಲೀ ಇಲ್ಲದಿರುವ ಸ್ತ್ರೀಯರು। ವ್ಯಂತಃ—ತಮ್ಮ ರಕ್ಷಣೆಗಾಗಿ ತಂದೆಯ ಮನೆಗೆ ಹೋಗುವಂತೆಯೂ । ಪತಿರಿಪಃ—ಪತಿಯನ್ನು ದ್ವೇಷಿಸತಕ್ಕ। ಜನಯಃ ನ—ಸ್ತ್ರೀಯಂತೆಯೂ ಇರುವ । ದುರೇವಾಃ-ದುಷ್ಟಾಚಾರವುಳ್ಳವರೂ । ಪಾಪಾಸಃ ಸಂತಃ-ಪಾಪಾತ್ಮರಾಗಿರುವವರೂ । ಅನೃತಾಃ—ಅಸತ್ಯಾತ್ಮಕವಾದ ಯೋಚನೆಯುಳ್ಳವರೂ। ಅಸತ್ಯಾಃ—ಅಸತ್ಯಾತ್ಮಕವಾದ ವ್ಯವಹಾರವುಳ್ಳವರೂ ಆದ ದುಷ್ಟರು । ಇದಂ-ಪಾಪಿಗಳು ಅನುಭವಿಸಲು ಯೋಗ್ಯವಾದುದೂ। ಗಭೀರಂ—ಅಗಾಧವಾದುದೂ ಆದ । ಪದಂ—ನರಕಸ್ಥಾನವನ್ನು । ಅಜನತ ಉತ್ಪನ್ನಮಾಡುತ್ತಾರೆ.

ಭಾವಾರ್ಥ

ಪಿತೃಗೃಹದ ರಕ್ಷಣೆಯನ್ನಪೇಕ್ಷಿಸಿ ಹೋಗತಕ್ಕ ಭ್ರಾತೃಭರ್ತೃರಹಿತೆಯಾದ ಸ್ತ್ರೀಯಂತೆಯೂ, ಪತಿಯನ್ನು ದ್ವೇಷಿಸತಕ್ಕ ಸ್ತ್ರೀಯಂತೆಯೂ ಇರುವ ದುಷ್ಟಾಚಾರವುಳ್ಳವರೂ, ಪಾಪಾತ್ಮರಾಗಿರುವವರೂ, ಅಸತ್ಯಾತ್ಮಕವಾದ ಯೋಚನೆಯುಳ್ಳವರೂ, ಅಸತ್ಯಾತ್ಮಕವಾದ ವ್ಯವಹಾರವುಳ್ಳವರೂ ಆದ ದುಷ್ಟರು, ಪಾಪಿಗಳು ಅನುಭವಿಸಲು ಯೋಗ್ಯವಾದುದೂ, ಅಗಾಧವಾದುದೂ ಆದ ನರಕಸ್ಥಾನವನ್ನು ಉತ್ಪನ್ನಮಾಡುತ್ತಾರೆ.

CC-0. Jangamwadi Math Collection. Digitized by eGangotri

## English Translation

Like women who have no brethren, going (about from their own to their father's house), women adverse to their lords going astray, so the wicked, false (in thought), false (in speech), they give birth to this deep abyss (of hell).

---

### ಸಂಹಿತಾಪಾಠಃ

ಇದಂ ಮೇ ಅಗ್ನೇ ಕಿಯತೇ ಪಾವಕಾಮಿನತೇ ಗುರುಂ ಭಾರಂ ನ ಮನ್ಮ।

ಬೃಹದ್ದಧಾಥ ಧೃಷತಾ ಗಭೀರಂ ಯುಹ್ವಂ ಪೃಷ್ಠಂ ಪ್ರಯಸಾ ಸಪ್ತಧಾತು॥

### ಪದಪಾಠಃ

ಇದಂ । ಮೇ । ಅಗ್ನೇ । ಕಿಯತೇ । ಪಾವಕ । ಅಮಿನತೇ । ಗುರುಂ । ಭಾರಂ । ನ । ಮನ್ಮ ।

ಬೃಹತ್ । ದಧಾಥ । ಧೃಷತಾ । ಗಭೀರಂ । ಯಹ್ವಂ । ಪೃಷ್ಠಂ । ಪ್ರಯಸಾ । ಸಪ್ತಽಧಾತು ॥ ೬ ॥

### ಸಾಯಣಭಾಷ್ಯಂ

ಹೇ ಪಾವಕ ಶೋಧಕಾಗ್ನೇ ಕಿಯತೇಽತ್ಯಲ್ಪಾಯ ಗುರಂ ಭಾರಂ ನ ವೋಢುಮಶಕ್ಯಂ ಭಾರಮಿವ । ತಂ ಯಥಾ ಧರ್ತುಮಸಹಮಾನಃ ಪಾತಯತಿ ತದ್ವತ್ತ್ವದೀಯಂ ಕರ್ಮಾಮಿನತೇಽಹಿಂಸತೇಽತ್ಯಜತೇ ಮೇ ಮಹ್ಯಮಿದಂ ಜ್ಞಾತವ್ಯತ್ವೇನ ಪ್ರಸಿದ್ಧಂ ಬೃಹತ್ಪ್ರಭೂತಂ ಮನ್ಮ ಮನನೀಯಂ ಧನಂ ದಧಾಥ । ದೇಹಿ । ತದೇವ ವಿಶೇಷ್ಯತೇ । ಧೃಷತಾ ಶತ್ರೂಣಾಂ ಧರ್ಷಕೇಣ ಪ್ರಯಸಾ । ಅನ್ನನಾನ್ಯೇತತ್ । ಅನ್ನೇನ ಯುಕ್ತಂ ಗಭೀರಮನ್ಯೈರನವಗಾಹ್ಯಂ ಯಹ್ವಂ ಮಹತ್ಪೃಷ್ಠಂ ಸ್ಪ್ರಷ್ಟವ್ಯಂ ಯೋಗ್ಯಂ ಸಪ್ತಧಾತು ಗ್ರಾಮ್ಯಾರಣ್ಯಭೇದೇನ ಸಪ್ತಪ್ರಕಾರಂ । ಸಪ್ತ ಗ್ರಾಮ್ಯಾಃ ಪಶವಃ ಸಪ್ತಾರಣ್ಯಾಃ । ತೈ. ಸಂ. ೭-೨-೨ ಇತಿ ಶ್ರುತೇಃ । ಈದೃಗ್ಧನಂ ದೇಹೀತ್ಯರ್ಥಃ । ಗುರುಂ ಭಾರಂ ನ ಅನ್ಯದೀಯಂ ಭಾರಂ ಯಥಾನ್ಯಸ್ಮೈ ದದಾತಿ ತದ್ವದಸ್ಮಾಕಂ ದಾತವ್ಯಂ ಧನಂ ದೇಹೀತಿ ವಾ ಯೋಜ್ಯಂ ॥

### ಪ್ರತಿಪದಾರ್ಥ

ಪಾವಕ—ಶುದ್ಧಿಕಾರಕನಾದ । ಅಗ್ನೇ—ಅಗ್ನಿಯೇ । ಗುರುಂ ಭಾರಂ—ಅತ್ಯಧಿಕವಾದ ಭಾರವನ್ನು ವಹಿಸಿರುವ । ಕಿಯತೇ ನ—ಅಶಕ್ತನೂ, ಅಲ್ಪನೂ ಆದ ಪುರುಷನಂತಿರುವವನೂ । ಅಮಿನತೇ—ನಿನ್ನನ್ನುದ್ದೇಶಿಸಿದ ಕರ್ಮವನ್ನು ತ್ಯಜಿಸದಿರುವವನೂ ಆದ । ಮೇ—ನನಗೆ । ಇದಂ—ಪ್ರಸಿದ್ಧವಾದುದೂ । ಬೃಹತ್—ಪ್ರಭೂತ

CC-0. Jangamwadi Math Collection. Digitized by eGangotri

ವಾದುದೂ । ಮನ್ಮ—ಪೂಜ್ಯವಾದುದೂ । ಧೃಷತಾ—ಶತ್ರುಧರ್ಷಕವಾದ । ಪಯಸಾ—ಅನ್ನದೊಡನೆ ಕೂಡಿದುದೂ । ಗಭೀರಂ—ಅತಿ ಗಹನವಾದುದೂ । ಯಹ್ವಂ—ಮಹತ್ತಾದುದೂ । ಸ್ಪಾರ್ಹಂ—ಸ್ಪರ್ಶಕ್ಕೆ ಹಿತಕರವಾದುದೂ । ಸಪ್ತಧಾತು—ಏಳು ಧಾತುಗಳಿಂದ ಕೂಡಿದುದೂ ಆದ ಧನವನ್ನು । ದಧಾಥ—ಕೊಡುವವನಾಗು.

ಭಾವಾರ್ಥ

ಎಲೈ ಶುದ್ಧಿಕಾರಕನಾದ ಅಗ್ನಿಯೇ, ಅಲ್ಪನೂ, ಅಶಕ್ತನೂ ಆಗಿ ಅತ್ಯಧಿಕವಾದ ಭಾರವನ್ನು ವಹಿಸಿರುವ ಪುರುಷನಂತಿರುವವನೂ, ನಿನ್ನನ್ನುದ್ದೇಶಿಸಿದ ಕರ್ಮವನ್ನು ತ್ಯಜಿಸದಿರುವವನೂ ಆದ ನನಗೆ ಪ್ರಸಿದ್ಧವಾದುದೂ, ಪ್ರಭೂತವಾದುದೂ, ಪೂಜ್ಯವಾದುದೂ, ಶತ್ರುಧರ್ಷಕವಾದ ಅನ್ನದೊಡನೆ ಕೂಡಿದುದೂ, ಅತಿಗಹನವಾದುದೂ, ಮಹತ್ತಾದುದೂ, ಸ್ಪರ್ಶಕ್ಕೆ ಹಿತಕರವಾದುದೂ, ಸಪ್ತಧಾತುಗಳಿಂದ ಕೂಡಿದುದೂ ಆದ ಧನವನ್ನು ಕೊಡು.

English Translation

Purifier, Agni, bestow on me, not neglecting your worship, this acceptable and vast (wealth), like a hevy load on a feeble (bearer), together with invigorating food; (wealth), secure, abundant, tangible, and consisting of the seven elements.

ಸಂಹಿತಾಪಾಠಃ

ತಮಿನ್ನ್ವೇ೩ವ ಸಮನಾ ಸಮಾನಮಭಿ ಕ್ರತ್ವಾ ಪುನತೀ ಧೀತಿರಶ್ಯಾಃ ।
ಸಸಸ್ಯ ಚರ್ಮನ್ನಧಿ ಚಾರು ಪೃಶ್ನೇರಗ್ರೇ ರುಪ ಆರುಪಿತಂ ಜಬಾರು ॥ ೭ ॥

ಪದಪಾಠಃ

ತಂ । ಇತ್ । ನು । ಏವ । ಸಮನಾ । ಸಮಾನಂ । ಅಭಿ । ಕ್ರತ್ವಾ । ಪುನತೀ । ಧೀತಿಃ । ಅಶ್ಯಾಃ ।
ಸಸಸ್ಯ । ಚರ್ಮನ್ । ಅಧಿ । ಚಾರು । ಪೃಶ್ನೇಃ । ಅಗ್ರೇ । ರುಪಃ । ಆರುಪಿತಂ । ಜಬಾರು ॥ ೭ ॥

ಸಾಯಣಭಾಷ್ಯಂ

ಅಗ್ನಿವಿದ್ಯುದಾದಿತ್ಯಾಸ್ತ್ರಯೋಽಪಿ ಮತಭೇದೇನ ವೈಶ್ವಾನರಶಬ್ದಾಭಿಧೇಯಾ ಇತಿ । ನಿ. ೭-೨೩ । ಯಸ್ಕೇನೋಕ್ತತ್ವಾದತ್ರಾದಿತ್ಯಾತ್ಮನಾ ವೈಶ್ವಾನರಃ ಸ್ತೂಯತೇ। ತಮಿತ್ತನೋವ ವೈಶ್ವಾನರಂ ದ್ಯುಸ್ಥಾನಂ ಸಮಾನಂ· ಸರ್ವೇಷಾಮೇಕರೂಪಂ ಸಮನಾ ಸದೃಶೀ ತದ್ಯೋಗ್ಯಾ ಪುನತ್ಯಸ್ಮಾನ್ ಶೋಧಯಿತ್ರೀ ಧೀತಿರ್ಮತಿರಸ್ಮದೀಯಾ ಸ್ತುತಿಃ ಕ್ರತ್ವಾ ತದುಚಿತೇನ ಕರ್ಮಣಾ ನ್ವೇವ ಕ್ಷಿಪ್ರಮೇವಾಶ್ಯಾಃ ಅಭಿಪ್ರಾಪ್ನುಯಾತ್ । ಭಜೇದಿತ್ಯರ್ಥಃ ಅಶ್ನೋತೇರ್ಲಿಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವ್ಯತ್ಯ-

CC-0. Jangamwadi Math Collection. Digitized by eGangotri

ಯೇನ ಪರಸ್ಮೈಪದಂ ಮಧ್ಯಮಪುರುಷತ್ವಂ ಚ ॥ ಪೂರ್ವತ್ರ ತಚ್ಛಬ್ದಶ್ರುತೇರ್ಯಚ್ಛಬ್ದೋಽಧ್ಯಾಹಾರ್ಯಃ । ಯಸ್ಯ ದ್ಯುಸ್ಥಾನಸ್ಯ ವೈಶ್ವಾನರಸ್ಯ ಜಬಾರು ಜವಮಾನರೋಹಿ ಜರಮಾಣರೋಹಿ ವಾ ಚಾರು ದೀಪ್ತಂ ಮಂಡಲಂ । ಜಬಾರು ಜರಮಾಣರೋಹೀತಿ ವಾ ಜವಮಾನರೋಹೀತಿ ವೇತಿ ಯಾಸ್ಕಃ । ನಿ. ೬.೧೭ । ಅಗ್ರೇ ಪುರಸ್ತಾತ್ಪೂರ್ವಸ್ಯಾಂ ದಿಶಿ ರೂಪಃ । ಆರೋಪಯತಿ ಸ್ವಾತ್ಮನಿ ಸಸ್ಯಾದೀನಿ ರುಬಿತಿ ಭೂಮಿರುಚ್ಯತೇ । ತಸ್ಯಾಃ ಸಕಾಶಾತ್ಸಸಸ್ಯ । ಲುಪ್ತೋಪಮಮೇತತ್ । ಸ್ವಪತ ಇವ ನಿಶ್ಚಲಸ್ಯ ಪೃಶ್ನೇಃ । ದ್ಯುನಾಮೈತತ್ ಸ್ವಃ ಪೃಶ್ನಿರಿತಿ ದ್ಯುಲೋಕಾದಿತ್ಯಯೋಃ ಸಾಧಾರಣನಾಮಸು ಪಾಠಾತ್ । ಜ್ಯೋತಿರಾದಿಭಿಃ ಸ್ಪೃಶ್ಯಮಾನಸ್ಯ ದ್ಯುಲೋಕಸ್ಯಾಧಿ ಉಪರಿ ಚರ್ಮಣ್ ಚರ್ಮಣೇ ಚರಣಾಯ ॥ ಚರೇರೌಣಾದಿಕೋ ಮನಿನ್ । ಸುಪಾಂ ಸುಲುಗಿತಿ ಚತುರ್ಥ್ಯಾ ಲುಕ್ ॥ ಆರುಪಿತಮಾರೋಪಿತಂ ದೇವೈಃ । ತಮಶ್ಯಾ ಇತಿ ಪೂರ್ವತ್ರಾನ್ವಯಃ ॥

ಪ್ರತಿಪದಾರ್ಥ

(ಯಸ್ಯ—ಯಾವ ವೈಶ್ವಾನರನ) ಜಬಾರು—ವೇಗವಾಗಿ ಆರೋಹಿಸುವುದೂ । ಚಾರು—ಕಾಂತಿಯುತವಾದುದೂ ಆದ ಮಂಡಲವು । ಅಗ್ರೇ—ಯಜ್ಞಾಗ್ನಿಯ ಮುಂಭಾಗದಲ್ಲಿದ್ದು । ಸಸಸ್ಯ—ನಿಶ್ಚಲವಾದ । ಪೃಶ್ನೇಃ—ದ್ಯುಲೋಕದ । ಅಧಿ—ಮೇಲು ಭಾಗದಲ್ಲಿ । ಚರ್ಮಣ್—ಸಂಚರಿಸಲು । ರುಪಃ—ಪೃಥ್ವಿಯಿಂದ । ಆರುಪಿತಂ—ಎತ್ತಿ (ದ್ಯುಲೋಕದಲ್ಲಿಡಲ್ಪಟ್ಟತೋ) ! ತಮಿತ್—ಅದೇ ವೈಶ್ವಾನರನನ್ನು । ಸಮಾನಂ—ದೇವಮಾನವಾದಿಗಳಿಗೆಲ್ಲಾ ಸಮಾನವಾಗಿರುವುದರಿಂದ । ಸಮನಾ—ಅವನಿಗೆ ಅರ್ಪಿಸಲು ಯೋಗ್ಯವಾದುದೂ । ಪುನತೀ—ಎಲ್ಲರನ್ನೂ ಪವಿತ್ರಗೊಳಿಸುವುದೂ ಆದ । ಧೀತಿಃ—(ನಮ್ಮ) ಸ್ತುತಿಯು । ಕ್ರತ್ವಾ—ತದ್ಯೋಗ್ಯವಾದ ಕರ್ಮದೊಡನೆ ಕೂಡಿ । ನ್ವೇವ—ಕ್ಷಿಪ್ರವಾಗಿಯೇ । ಅಶ್ಯಾಃ—ವ್ಯಾಪಿಸಲಿ.

ಭಾವಾರ್ಥ

ಯಾವ ವೈಶ್ವಾನರನ ವೇಗವಾಗಿ ಆರೋಹಿಸುವುದೂ, ಕಾಂತಿಯುತವಾದುದೂ ಆದ ಮಂಡಲವು ಯಜ್ಞಾಗ್ನಿಯ ಮುಂಭಾಗದಲ್ಲಿದ್ದು ನಿಶ್ಚಲವಾದ ದ್ಯುಲೋಕದಲ್ಲಿ ಸಂಚರಿಸಲು ಪೃಥ್ವಿಯಿಂದ ಮೇಲಕ್ಕೆತ್ತಿಡಲ್ಪಟ್ಟಿತೋ, ಅದೇ ವೈಶ್ವಾನರನನ್ನು ಅವನು ದೇವಮಾನವಾದಿಗಳಿಗೆಲ್ಲಾ ಸಮಾನವಾಗಿರುವುದರಿಂದ ಅವನಿಗೆ ಅರ್ಪಿಸಲು ಯೋಗ್ಯವಾದುದೂ, ಎಲ್ಲರನ್ನೂ ಪವಿತ್ರಗೊಳಿಸುವುದೂ ಆದ ನಮ್ಮ ಸ್ತುತಿಯು ಅದಕ್ಕೆ ಯೋಗ್ಯವಾದ ಕರ್ಮದೊಡನೆ ಕೂಡಿ ಕ್ಷಿಪ್ರವಾಗಿ ವ್ಯಾಪಿಸಲಿ.

English Translation

May our (self)-purifying praise, suited to his glory, and accompained by worship, quickly attain to that omniform (Vaishwanara) whose swift-ascending brilliant (orb) is stationed on the east of the earth, to mount, like the sun, above the immoveable heaven.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಪ್ರವಾಚ್ಯಂ ವಚಸಃ ಕಿಂ ಮೇ ಅಸ್ಯ ಗುಹಾ ಹಿತಮುಪ ನಿಣಿಗ್ವದಂತಿ ।
ಯದುಸ್ರಿಯಾಣಾಮುಪ ವಾರಿವ ವ್ರನ್ಪಾತಿ ಪ್ರಿಯಂ ರುಪೋ ಅಗ್ರಂ ಪದಂ ವೇಃ ॥ ೮ ॥

ಪದಪಾಠಃ

ಪ್ರऽವಾಚ್ಯಂ । ವಚಸಃ । ಕಿಂ । ಮೇ । ಅಸ್ಯ । ಗುಹಾ । ಹಿತಂ । ಉಪ । ನಿಣಿಕ್ । ವದಂತಿ ।
ಯತ್ । ಉಸ್ರಿಯಾಣಾಂ । ಅಪ । ವಾಃऽಇವ । ವ್ರನ್ । ಪಾತಿ । ಪ್ರಿಯಂ । ರುಪಃ । ಅಗ್ರಂ । ಪದಂ । ವೇರಿತಿವೇಃ ॥ ೮ ॥

ಸಾಯಣಭಾಷ್ಯಂ

ಮೇ ಮದೀಯಾಸ್ಯಾಸ್ಯ ವಕ್ಷ್ಯಮಾಣಸ್ಯ ವಚಸೋ ವಾಕ್ಯಸ್ಯ ಕಿಂ ಪ್ರವಾಚ್ಯಮಸ್ತಿ । ತಥ್ಯಮೇ- ವೋಚ್ಯತ ಇತ್ಯರ್ಥಃ । ಕಿಂ ತದ್ವಚ ಇತ್ಯುಚ್ಯತೇ । ಉಸ್ರಿಯಾಣಾಂ । ಗೋನಾಮೈತತ್ । ಕ್ಷೀರಾದ್ಯು- ತ್ಸ್ರಾವಿಣೀನಾಂ ಗವಾಂ ಸಂಬಂಧಿ ಯತ್ಕ್ಷೀರಂ ವಾರಿವೋದಕಮಿವ ತದ್ಯಥಾ ಸೇಕೇನಾವಿಷ್ಕುರ್ವಂತಿ ತಥಾಪ ವ್ರನ್ । ಅಪವೃಣ್ವಂತಿ । ದೋಗ್ಧಾರೋ ನಿಣಿಕ್ । ನಿತರಾಂ ನೇನೇಕ್ತಿ ಶೋಧಯತೀತಿ ನಿಣಿಕ್ ಕ್ಷೀರಮುಚ್ಯತೇ । ತಾದೃಕ್ ಕ್ಷೀರಮನೇನ ವೈಶ್ವಾನರೇಣ ಗುಹಾ ಗುಹಾಯಾಮುಪ ಹಿತಮುಪನಿಹಿತಂ ವದಂತಿ ವೇತ್ತಾರಃ । ಕಿಂಚಾಯಂ ವೇರ್ವ್ಯಾಪ್ತಾಯಾ ರುಪೋ ಭೂಮ್ಯಾಃ ಪ್ರಿಯಂ ಸರ್ವೇಷಾಮಾಧಾರ- ತ್ವೇನ ಪ್ರಿಯಭೂತಮಗ್ರಂ ಶ್ರೇಷ್ಠಂ ಪದಂ ಸ್ಥಾನಂ ಪಾತಿ । ರಕ್ಷತಿ ॥

ಪ್ರತಿಪದಾರ್ಥ

ಉಸ್ರಿಯಾಣಾಂ—ಗೋವುಗಳ । ಯತ್—ಯಾವ ಕ್ಷೀರವನ್ನು (ದೋಗ್ಧೃಗಳೂ) । ವಾರಿವ—ಉದಕ ದಂತೆ । ಅಪ ವ್ರನ್—ಪಡೆದರೋ । ನಿಣಿಕ್—ಅದೇ ಕ್ಷೀರವನ್ನು । ಗುಹಾ—ಗುಹೆಯಲ್ಲಿ । ಉಪ ಹಿತಂ— ಇಡಲ್ಪಟ್ಟದ್ದನ್ನಾಗಿ । ವದಂತಿ—ಪ್ರಾಜ್ಞರು ಹೇಳುತ್ತಾರೆ (ಅಲ್ಲದೆ ಅದೇ ಕ್ಷೀರವು) । ವೇಃ—ವ್ಯಾಪಿಸಿರುವ । ರುಪಃ—ಭೂಮಿಗೆ । ಪ್ರಿಯಂ—ಪ್ರೀತಿಕಾರಕವಾದುದೂ । ಅಗ್ರಂ—ಶ್ರೇಷ್ಠವಾದುದೂ ಆದ । ಪದಂ—ಸ್ಥಾನ ವನ್ನು । ಪಾತಿ—ರಕ್ಷಿಸುತ್ತದೆ (ಎಂಬುದಾಗಿ ಹೇಳುವ) । ಮೇ—ನನ್ನ । ಅಸ್ಯ ವಚಸಃ—ಈ ತತ್ತ್ವವನ್ನು ಹೇಳುವ ಮಾತಿನಲ್ಲಿ । ಕಿಂ ಪ್ರವಾಚ್ಯಂ—ದೋಷವೇನಿದೆ ?.

ಭಾವಾರ್ಥ

ಗೋವುಗಳ ಯಾವ ಕ್ಷೀರವನ್ನು ದೋಗ್ಧೃಗಳು ಉದಕದಂತೆ ಪಡೆದರೋ, ಅದೇ ಕ್ಷೀರವನ್ನು ವೈಶ್ವಾನರನ್ನು ಗುಹೆಯಲ್ಲಿಟ್ಟಿದ್ದಾನೆ ಎಂಬುದಾಗಿ ತಿಳಿದವರು ಹೇಳುತ್ತಾರೆ ಮತ್ತು ಅದೇ ಕ್ಷೀರವು ಸರ್ವತ್ರ ವ್ಯಾಪಕವಾದ ಭೂಮಿಗೆ

CC-0. Jangamwadi Math Collection. Digitized by eGangotri

ಪ್ರಿಯವಾದುದೂ, ಉತ್ತಮವಾದುದೂ ಆದ ಸ್ಥಾನವನ್ನು ರಕ್ಷಿಸುತ್ತದೆ ಎಂದು ಹೇಳುವ ತತ್ವಾರ್ಥದ್ಯೋತಕವಾದ ನನ್ನ ಈ ಮಾತಿನಲ್ಲಿ ದೋಷವೇನಿದೆ ?

English Translation

What objection (can be offered) to this my assertion, that they affirm that the milk of the cows, which (the milkers) obtain like water, is placed in concealment (by Vaishwanara), and cherishes the excellent and valued expanse of the wide earth.

———

ಸಂಹಿತಾಪಾಠಃ

ಇದಮು ತ್ಯನ್ಮಹಿ ಮಹಾಮನೀಕಂ ಯದುಸ್ರಿಯಾ ಸಚತ ಪೂರ್ವ್ಯಂ ಗೌಃ।
ಋತಸ್ಯ ಪದೇ ಅಧಿ ದೀದ್ಯಾನಂ ಗುಹಾ ರಘುಷ್ಯದ್ರಘುಯದ್ವಿವೇದ ॥ ೯ ॥

ಪದಪಾಠಃ

ಇದಂ । ಊಂ ಇತಿ। ತ್ಯತ್ । ಮಹಿ । ಮಹಾಂ । ಅನೀಕಂ । ಯತ್ । ಉಸ್ರಿಯಾ । ಸಚತ । ಪೂರ್ವ್ಯಂ। ಗೌಃ ।
ಋತಸ್ಯ । ಪದೇ । ಅಧಿ । ದೀದ್ಯಾನಂ । ಗುಹಾ । ರಘುಽಸ್ಯತ್ । ರಘುಽಯತ್ । ವಿವೇದ । ೯ ॥

ಸಾಯಣಭಾಷ್ಯಂ

ಇದಮು ಇದಮೇವ ತ್ಯತ್ಪ್ರಸಿದ್ಧಂ ಮಹಿ ಮಹತ್ಪೂಜ್ಯಂ ಮಹಾಂ ಮಹತಾಂ ದೇವಾನಾಮನೀಕಂ ಸಮೂಹರೂಪಂ ಸೂರ್ಯಮಂಡಲಂ ವೈಶ್ವಾನರ ಏವೇತಿ ಶೇಷಃ । ಪೂರ್ವ್ಯಂ ಪೂರ್ವಕಾಲೀನಂ ಪೂರಕಂ ವಾ ಯನ್ಮಂಡಲಮುಸ್ರಿಯಾ ಕ್ಷೀರಾದ್ಯುತ್ಸ್ರಾವಿಣೀ ಗೌರಗ್ನಿಹೋತ್ರಾದ್ಯರ್ಥಂ ಸಚತ । ಸೇವತೇ । ಋತಸ್ಯೋದಕಸ್ಯ ಪದೇ ಸ್ಥಾನೇಽಂತರಿಕ್ಷೇಽಧ್ಯಧಿಕಂ । ಯದ್ವಾ । ಅಧೀತಿ ಸಪ್ತಮ್ಯರ್ಥಾನುವಾದಃ । ದೀದ್ಯಾನಂ ದ್ಯೋತಮಾನಂ ಗುಹಾ ಗುಹಾಯಾಂ ರಘುಷ್ಯತ್ ಶೀಘ್ರಂ ಸ್ಯಂದಮಾನಂ ರಘುಯತ್ ಶೀಘ್ರಂ ಗಚ್ಛತ್ಸೂರ್ಯಮಂಡಲಂ ವಿವೇದ । ವೈಶ್ವಾನರಮೇವೇತಿ ಜ್ಞಾತವಾನಸ್ಮಿ ॥

ಪ್ರತಿಪದಾರ್ಥ

**ಪೂರ್ವ್ಯಂ**—ಪ್ರಾಚೀನವಾದ । **ಯತ್**—ಯಾವ ಆದಿತ್ಯಮಂಡಲವನ್ನು । **ಉಸ್ರಿಯಾ**—ಕ್ಷೀರವನ್ನು ಕರೆಯತಕ್ಕ । **ಗೌಃ**—ಗೋವುಗಳು । **ಸಚತ**—ಸೇವಿಸುತ್ತವೆಯೋ, ಮತ್ತು । **ಋತಸ್ಯ**—ಉದಕದ । **ಪದೇ**—

CC-0. Jangamwadi Math Collection. Digitized by eGangotri

ಸ್ಥಾನವಾದ ಅಂತರಿಕ್ಷದಲ್ಲಿ । ಅಧಿ—ಅತ್ಯಧಿಕವಾಗಿ । ದೀದ್ಯಾನಂ—ಪ್ರಕಾಶಿಸುವುದೂ । ಗುಹಾ—ಗುಹೆಯಲ್ಲಡಗಿದ್ದು । ರಘುಷ್ಯತ್—ಶೀಘ್ರವಾಗಿ ಪ್ರಸರಿಸುತ್ತಾ । ರಘುಯತ್—ವೇಗವಾಗಿ ಸಂಚರಿಸುವುದೂ ಆದ ಸೂರ್ಯಮಂಡಲವನ್ನು । ವಿವೇದ—ನಾನು ತಿಳಿದಿದ್ದೇನೆ (ಅದಾವುದೆಂದರೆ) । ತ್ಯತ್—ಪ್ರಸಿದ್ಧವಾದುದೂ । ಮಹಿ—ಮಹತ್ತಾದುದೂ । ಮಹಾಂ ಅನೀಕಂ—ಮಹಾತ್ಮರಾದ ದೇವತೆಗಳ ಸಮೂಹರೂಪವಾದುದೂ ಆದ ಸೂರ್ಯಮಂಡಲವೇ । ಇದಮು—ಈ ವೈಶ್ವಾನರಾಗ್ನಿಯು.

ಭಾವಾರ್ಥ

ಪ್ರಾಚೀನವಾದ ಯಾವ ಆದಿತ್ಯಮಂಡಲವನ್ನು ಕ್ಷೀರಸ್ರಾವಿಗಳಾದ ಗೋವುಗಳು ಸೇವಿಸುತ್ತವೆಯೋ ಮತ್ತು ಉದಕದ ಸ್ಥಾನವಾದ ಅಂತರಿಕ್ಷದಲ್ಲಿ ಅತ್ಯಧಿಕವಾಗಿ ಪ್ರಕಾಶಿಸುವುದೂ, ಗುಹೆಯಲ್ಲಡಗಿದ್ದು ಶೀಘ್ರವಾಗಿ ಪ್ರಸರಿಸುತ್ತಾ ವೇಗವಾಗಿ ಸಂಚರಿಸುವುದೂ ಆದ ಸೂರ್ಯಮಂಡಲವನ್ನು ನಾನು ತಿಳಿದಿದ್ದೇನೆ. ಅದಾವುದೆಂದರೆ, ಪ್ರಸಿದ್ಧವಾದುದೂ ಮಹತ್ತಾದುದೂ, ಮಹಾತ್ಮರಾದ ದೇವತೆಗಳ ಸಮೂಹರೂಪವಾದುದೂ ಆದ ಆದಿತ್ಯಮಂಡಲವೇ ಈ ವೈಶ್ವಾನರಾಗ್ನಿಯಾಗಿದೆ.

English Translation

I recognize this adorable assemblage of the great (deities), which from of old the milk-shedding cow affects, shining above the region of the water, (the firmament), in secret; swift-gliding, swift-moving.

———

ಸಂಹಿತಾಪಾಠಃ

ಅಧ ದ್ಯುತಾನಃ ಪಿತ್ರೋಃ ಸಚಾಸಾಮನುತ ಗುಹ್ಯಂ ಚಾರು ಪೃಶ್ನೇಃ ।
ಮಾತುಷ್ಪದೇ ಪರಮೇ ಅಂತಿ ಷದ್ಗೋರ್ವೃಷ್ಣಃ ಶೋಚಿಷಃ ಪ್ರಯತಸ್ಯ ಜಿಹ್ವಾ ॥ ೧೦ ॥

ಪದಪಾಠಃ

ಅಧ । ದ್ಯುತಾನಃ । ಪಿತ್ರೋಃ । ಸಚಾ । ಆಸಾ । ಅಮನುತ । ಗುಹ್ಯಂ । ಚಾರು । ಪೃಶ್ನೇಃ ।
ಮಾತುಃ । ಪದೇ । ಪರಮೇ । ಅಂತಿ । ಸತ್ । ಗೋಃ । ವೃಷ್ಣಃ । ಶೋಚಿಷಃ । ಪ್ರಯತಸ್ಯ । ಜಿಹ್ವಾ ॥

ಸಾಯಣಭಾಷ್ಯಂ

ಅಧ ಅಥ ದ್ಯುತಾನೋ ದೀಪ್ಯಮಾನಃ ಪಿತ್ರೋರ್ದ್ಯಾವಾಪೃಥಿವ್ಯೋಃ ಸಚಾ ಸಹ ಮಧ್ಯೇ ವ್ಯಾಪ್ತಃ ಸನ್ ಪೃಶ್ನೇರ್ಗೋಃ ಸಂಬಂಧಿ ಚಾರು ರಮಣೀಯಂ ಗುಹ್ಯಮೂಧಸಿ ನಿಗೂಢಂ ಪಯ ಆಸಾ



CC-0. Jangamwadi Math Collection. Digitized by eGangotri

ಸ್ವಕೀಯೇನಾಸ್ಯೇನಾಮುನುತ । ಪಾನಾಯಾಬುಧ್ಯತ । ಉಕ್ತಮೇವಾರ್ಥಂ ವಿವೃಣೋತಿ । ಮಾತುಃ ಕ್ಷೀರಾದಿನಿರ್ಮಾತ್ರ್ಯಾ ಗೋಃ ಪರಮೇ ಪದ ಉತ್ಕೃಷ್ಟೇ ಸ್ಥಾನ ಊಧೋಲಕ್ಷಣೇಽಂತಿ ಸತ್ ಸಮೀಪೇ ವಿದ್ಯಮಾನಂ ಕ್ಷೀರಂ ವೃಷ್ಣಃ ಫಲಾನಾಂ ವರ್ಷಿತುಃ ಶೋಚಿಷೋ ದೀಪ್ತಸ್ಯ ಪ್ರಯತಸ್ಯಾಹವನೀಯಾದಿ-ರೂಪೇಣ ನಿಯತಸ್ಯ ವೈಶ್ವಾನರಸ್ಯ ಜಿಹ್ವಾ ಪಾತುಮಿಚ್ಛತೀತಿ ಶೇಷಃ ॥

ಪ್ರತಿಪದಾರ್ಥ

ಅಥ—ಅನಂತರದಲ್ಲಿ । ದ್ಯುತಾನಃ—ಪ್ರಕಾಶಮಾನನೂ । ಪಿತ್ರೋಃ ಸಚಾ—ದ್ಯಾವಾಪೃಥಿವಿಗಳೊಡನೆ ಕೂಡಿಕೊಂಡಿರುವವನೂ ಆದ ವೈಶ್ವಾನರನು । ಪೃಶ್ನೇಃ—ಗೋವಿನ । ಚಾರು-ರಮಣೀಯವಾದುದೂ । ಗುಹ್ಯಂ-ಕೆಚ್ಚಲಿನಲ್ಲಿ ಗುಪ್ತವಾಗಿರುವುದೂ ಆದ ಕ್ಷೀರವನ್ನು । ಆಸಾ—ತನ್ನ ಮುಖದಿಂದ । ಅಮುನುತ—ಪಾನಮಾಡ ಬೇಕೆಂದಿಚ್ಛಿಸಿದನು । ಮಾತುಃ—ಕ್ಷೀರದಾತ್ರಿಯಾದ । ಗೋಃ—ಗೋವಿನ । ಪರಮೇ ಪದೇ—ಉತ್ಕೃಷ್ಟವಾದ ಕೆಚ್ಚಲಿನಲ್ಲಿ । ಅಂತಿ ಸತ್—ಅಡಗಿರತಕ್ಕ ಕ್ಷೀರವನ್ನು । ವೃಷ್ಣಃ—ಕಾಮವರ್ಷಕನಾದವನೂ । ಶೋಚಿಷಃ—ಪ್ರಕಾಶಮಾನನಾದವನೂ । ಪ್ರಯತಸ್ಯ—ಆಹವನೀಯಾದಿ ರೂಪಗಳಲ್ಲಿ ನಿಯಮಿತನಾದವನೂ ಆದ ವೈಶ್ವಾನರನ । ಜಿಹ್ವಾ—ಜಿಹ್ವೆಯು (ಪಾನಮಾಡಲಿಚ್ಛಿಸುತ್ತದೆ).

ಭಾವಾರ್ಥ

ಪ್ರಕಾಶಮಾನನೂ, ದ್ಯಾವಾಪೃಥಿವಿಗಳೊಡನೆ ಕೂಡಿಕೊಂಡಿರುವವನೂ ಆದ ವೈಶ್ವಾನರನು ಗೋವಿನ ರಮಣೀಯವಾದುದೂ, ಕೆಚ್ಚಲಿನಲ್ಲಿ ಗುಪ್ತವಾಗಿರುವುದೂ ಆದ ಕ್ಷೀರವನ್ನು ತನ್ನ ಮುಖದಿಂದ ಪಾನಮಾಡಲಿಚ್ಛಿಸಿ ದನು. ಕ್ಷೀರದಾತ್ರಿಯಾದ ಗೋವಿನ ಉತ್ಕೃಷ್ಟವಾದ ಕೆಚ್ಚಲಿನಲ್ಲಿ ಅಡಗಿರತಕ್ಕ ಕ್ಷೀರವನ್ನು ಕಾಮವರ್ಷಕನಾದ ವನೂ, ಪ್ರಕಾಶಮಾನನಾದವನೂ, ಆಹವನೀಯಾದಿ ರೂಪಗಳಲ್ಲಿ ನಿಯಮಿತನಾದವನೂ ಆದ ವೈಶ್ವಾನರಾಗ್ನಿಯ ಜಿಹ್ವೆಯು ಪಾನಮಾಡಲಿಚ್ಛಿಸುತ್ತದೆ.

English Translation

Then, radiant in association with the parents, (heaven and earth), he isa wakened (to drink) the agreeable secretion of the cow, and the tongue of the assiduous (performer of holy rites), the resplendent showerer (of benefits,) approaching the excellent station of the maternal ( cow ), seeks to drink the milk.

---

ಸಂಹಿತಾಪಾಠಃ

ಋತಂ ವೋಚೇ ನಮಸಾ ಪೃಚ್ಛ್ಯಮಾನಸ್ತವಾಶಸಾ ಜಾತವೇದೋ ಯದೀದಂ ।

CC-0. Jangamwadi Math Collection. Digitized by eGangotri

ತ್ವಮ॒ಸ್ಯ ಕ್ಷ॒ಯಸಿ ಯದ್ಧ॒ ವಿಶ್ವಂ॑ ದಿ॒ವಿ ಯದು॒ ದ್ರವಿ॑ಣಂ॒ ಯತ್ಪೃ॑ಥಿ॒ವ್ಯಾಂ॥

ಪದಪಾಠಃ

ಋ॒ತಂ । ವೋ॒ಚೇ॒ । ನಮ॑ಸಾ । ಪೃ॒ಚ್ಛ್ಯಮಾ॑ನಃ । ತವ॑ । ಆ॒ಶಸಾ॑ । ಜಾ॒ತ॒ವೇ॒ದಃ॒ । ಯದಿ॑ । ಇ॒ದಂ ।

ತ್ವಂ । ಅ॒ಸ್ಯ । ಕ್ಷ॒ಯಸಿ॒ । ಯತ್ । ಹ॒ । ವಿಶ್ವಂ॑ । ದಿ॒ವಿ । ಯತ್ । ಊ॒ಂ ಇತಿ॑ । ದ್ರವಿ॑ಣಂ । ಯತ್ ।
ಪೃ॒ಥಿ॒ವ್ಯಾಂ ॥ ೧೧ ॥

ಸಾಯಣಭಾಷ್ಯಂ

ಅಹಂ ಯಜಮಾನೋ ನಮಸಾ ನಮಸ್ಕಾರೇಣ ಸಹ ಪೃಚ್ಛ್ಯಮಾನೋಽನ್ಯೈರನುಯುಜ್ಯಮಾನಃ ಸನ್ ಋತಂ ವೋಚೇ । ಸತ್ಯಂ ಬ್ರವೀಮಿ । ಕಿಂ ತದಿತ್ಯುಚ್ಯತೇ । ಹೇ ಜಾತವೇದೋ ಜಾತಾನಾಂ ವೇದಿತರ್ಜಾತಪ್ರಜ್ಞ ವಾಗ್ನೇ ತವಾಶಸಾ ತ್ವತ್ಸ್ತುತ್ಯಾ ಸಾಧನೇನ ಯದೀದಂ ಧನಂ ಲಬ್ಧಮಸ್ಮಾಭಿಃ ಸ್ಯಾತ್ ಅಸ್ಯ ಧನಸ್ಯ ತ್ವಂ ಕ್ಷಯಸಿ । ತ್ವಮೇವೇಶ್ವರೋ ಭವಸಿ । ತಸ್ಯ ಧನಸ್ಯ ಯಜ್ಞಾದಿದ್ವಾರಾಗ್ನ್ಯರ್ಥತ್ವಾದಿತಿ ಭಾವಃ । ಅತ್ಯಲ್ಪಮಿದಮುಕ್ತಂ । ಯದ್ಧ ವಿಶ್ವಂ ಯತ್ಖಲು ಕೃತ್ಸ್ನಂ ಧನಮಸ್ತಿ ತಸ್ಯಾಪೀಶಿಷೇ । ವಿಶ್ವಮಿತಿ ಸಾಮಾನ್ಯೇನ ಯದುಕ್ತಂ ತದೇವ ವಿಶದಯತಿ । ದಿವಿ ದ್ಯುಲೋಕೇ ಯದು ದ್ರವಿಣಂ ಯದೇವ ಧನಂ ಯಚ್ಚ ಪೃಥಿವ್ಯಾಂ ಧನಂ ತಸ್ಯ ಸರ್ವಸ್ಯ ತ್ವಮೀಶ್ವರೋ ಭವಸಿ । ಯಜ್ಞಾರ್ಥಂ ದ್ರವ್ಯಮುತ್ಪನ್ನಮಿತಿ ಸ್ಮರಣಾತ್ । ಅಗ್ನಿವ್ಯತಿರೇಕೇಣ ಯಜ್ಞಾಸಂಭವಾದಿತಿ ಭಾವಃ ॥

ಪ್ರತಿಪದಾರ್ಥ

ನಮಸಾ—ನಮಸ್ಕಾರಪೂರ್ವಕವಾಗಿ । ಪೃಚ್ಛ್ಯಮಾನಃ—ಪ್ರಶ್ನಿಸಲ್ಪಟ್ಟ ನಾನು (ಯಜಮಾನನು) । ಋತಂ ವೋಚೇ—ಸತ್ಯಾತ್ಮಕವಾದ ಈ ಉತ್ತರವನ್ನು ಹೇಳುತ್ತೇನೆ (ಅದೇನೆಂದರೆ) । ಜಾತವೇದಃ—ಎಲೈ ಜಾತವೇದಸ್ಸೇ । ತವ ಆಶಸಾ—ನಿನ್ನ ಸ್ತುತಿರೂಪವಾದ ಸಾಧನದಿಂದ ಪಡೆದ । ಯದಿ ಇದಂ—ಯಾವ ಈ ಧನವಿದೆಯೋ । ಅಸ್ಯ—ಅದಕ್ಕೆ । ತ್ವಂ—ನೀನು । ಕ್ಷಯಸಿ—ಈಶ್ವರನಾಗಿದ್ದೀಯೆ । ಯತ್ ಹ ವಿಶ್ವಂ—ವಿಶ್ವದಲ್ಲೆಲ್ಲಾ । ದಿವಿ—ದ್ಯುಲೋಕದಲ್ಲಿ । ಯತ್ ಉ ದ್ರವಿಣಂ—ಯಾವ ಧನವಿದೆಯೋ । ಯತ್ ಪೃಥಿವ್ಯಾಂ—ಪೃಥ್ವಿಯಲ್ಲಿ ಯಾವ ಧನವಿದೆಯೋ (ಅದಕ್ಕೆಲ್ಲಾ ನೀನೇ ಪ್ರಭುವು).

ಭಾವಾರ್ಥ

ನಮಸ್ಕಾರಪೂರ್ವಕವಾಗಿ ಪ್ರಶ್ನಿಸಲ್ಪಟ್ಟವನೂ, ಯಜಮಾನನೂ ಆದ ನಾನು ಸತ್ಯಾತ್ಮಕವಾದ ಈ ಉತ್ತರವನ್ನು ಹೇಳುತ್ತೇನೆ. ಅದೇನೆಂದರೆ, ಎಲೈ ಜಾತವೇದಸ್ಸೇ, ನಿನ್ನ ಸ್ತುತಿರೂಪವಾದ ಸಾಧನದಿಂದ ಪಡೆದ ಈ ಧನಕ್ಕೂ ದ್ಯುಲೋಕ ಮತ್ತು ಪೃಥಿವೀಲೋಕಗಳಲ್ಲೆಲ್ಲಾ ಹರಡಿರುವ ಸಮಸ್ತವಾದ ಧನಕ್ಕೂ ಸಹ ನೀನೇ ಪ್ರಭುವಾಗಿದ್ದೀಯೆ.

CC-0. Jangamwadi Math Collection. Digitized by eGangotri

## English Translation

Interrogated with respect, I declare the truth, that this (wealth is acquired), Jatavedas, by the praise of you: you rule over it, (over) all that (it may be), the wealth that is in heaven or on earth.

———

ಸಂಹಿತಾಪಾಠಃ

ಕಿಂ ನೋ ಅಸ್ಯ ದ್ರವಿಣಂ ಕದ್ಧ ರತ್ನಂ ವಿ ನೋ ವೋಚೋ ಜಾತ-
ವೇದಶ್ಚಿಕಿತ್ವಾನ್ ।
ಗುಹಾಧ್ವನಃ ಪರಮಂ ಯನ್ನೋ ಅಸ್ಯ ರೇಕು ಪದಂ ನ ನಿದಾನಾ ಅಗನ್ಮ ॥

ಪದಪಾಠಃ

ಕಿಂ । ನಃ । ಅಸ್ಯ । ದ್ರವಿಣಂ । ಕತ್ । ಹ । ರತ್ನಂ । ವಿ । ನಃ । ವೋಚಃ । ಜಾತऽವೇದಃ । ಚಿಕಿತ್ವಾನ್ ।
ಗುಹಾ । ಅಧ್ವನಃ । ಪರಮಂ । ಯತ್ । ನಃ । ಅಸ್ಯ । ರೇಕು । ಪದಂ । ನ । ನಿದಾನಾಃ ।
ಅಗನ್ಮ ॥ ೧೨ ॥

ಸಾಯಣಭಾಷ್ಯಂ

ಪೂರ್ವಮಂತ್ರೇಣ ಯಸ್ಯ ಧನಸ್ಯಾಗ್ನಿಸ್ವಾಮಿತ್ವಮುಕ್ತಮಸ್ಯ ಧನಸ್ಯ ಕಿಂ ದ್ರವಿಣಂ ಕಿಂ ಸಾಧನ-ಭೂತಂ ನೋಽಸ್ಮಭ್ಯಂ ದಾತವ್ಯಂ ಧನಮಸ್ತಿ । ಕದ್ಧ ರತ್ನಂ ಕಿಂಚ ರಮಣೀಯಂ ಹಿತಕರಂ ಧನಮಸ್ತಿ । ತದ್ಧನಂ ಹೇ ಜಾತವೇದೋ ಜಾತಧನಾಗ್ನೇ ಚಿಕಿತ್ವಾಂಶ್ಚೇತನಾವಾನಭಿಜ್ಞಸ್ತ್ವಂ ನೋಽಸ್ಮಭ್ಯಂ ವಿ ವೋಚಃ । ವಿಬ್ರೂಹಿ । ಯದ್ವಾ । ಕಿಂ ದಾತವ್ಯಂ ದ್ರವಿಣಮಸ್ತಿ । ಅಸ್ಯ ದ್ರವಿಣರಾಶೇಃ ಕದ್ಧ ರತ್ನಮಿತಿ ಯೋಜ್ಯಂ । ಅಸ್ಯಾಧ್ವನೋ ಧನಪ್ರಾಪ್ತಿಮಾರ್ಗಸ್ಯ ಯದ್ಗುಹಾ ಗುಹಾಯಾಂ ನಿಹಿತಂ ಗೂಢಂ ಪರಮ-ಮುತ್ಕೃಷ್ಟಂ ಪ್ರಾಪ್ತವ್ಯಮಸ್ತಿ ತದಪಿ ನೋಽಸ್ಮಭ್ಯಂ ವಿವೋಚಃ । ವಯಂ ರೇಕು ರಿಕ್ತಂ ಪದಂ ಗಂತವ್ಯಂ ಸ್ಥಾನಂ ಗೃಹಾದಿಕಂ ನಿದಾನಾ ಅನ್ಯೈರ್ನಿಂದ್ಯಮಾನಾಃ ॥ ಕರ್ಮಣಿ ಕರ್ತೃಪ್ರತ್ಯಯಃ ॥ ನಾಗನ್ಮ । ನ ಪ್ರಾಪ್ನುಮಃ ॥

ಪ್ರತಿಪದಾರ್ಥ

ಅಸ್ಯ—(ಯಾವ ಧನಕ್ಕೆ ಅಗ್ನಿಯೇ ಪ್ರಭುವಾಗಿದ್ದಾನೆಯೋ) ಆ ಧನಕ್ಕೆ । ಕಿಂ ದ್ರವಿಣಂ—ಬೆಲೆ ಯೇನು ? । ನಃ—ನಮ್ಮ ಈ ಧನಕ್ಕೆ । ಕದ್ಧ ರತ್ನಂ—ಮುಖ್ಯ ಪ್ರಯೋಜನವೇನು ? (ಅದು ಹಿತಕರವಾಗಿರುವ

CC-0. Jangamwadi Math Collection. Digitized by eGangotri

ಬಗೆಯೇನು ? ) ಜಾತವೇದಃ—ಸರ್ವಜ್ಞನಾದ ಎಲೈ ಅಗ್ನಿಯೇ । ಚಿಕಿತ್ವಾನ್—ಎಲ್ಲವನ್ನೂ ತಿಳಿದಿರುವ ನೀನು । ನಃ—ನಮಗೆ । ವಿ ವೋಚಃ—ವಿಶದವಾಗಿ ತಿಳಿಸು । ಅಸ್ಯ ಅಧ್ವನಃ—ಧನಪ್ರಾಪ್ತಿಮಾರ್ಗದ । ಯತ್ ಗುಹಾ—ಗುಪ್ತವಾದುದೂ । ಪರಮಂ—ಅತ್ಯುತ್ಕೃಷ್ಟವಾದುದೂ ಆದ ಸ್ಥಾನವನ್ನು । ನಃ—ನಮಗೆ (ತಿಳಿಸು) । ರೇಕು—ರಿಕ್ತವಾದ । ಪದಂ—ಸ್ಥಾನವನ್ನು । ನಿದಾನಾಃ—(ಇತರರಿಂದ) ದೂಷಿಸಲ್ಪಟ್ಟವರಾಗಿ । ನ ಅಗನ್ಮ—ನಾವು ಸೇರದಿರುವಂತಾಗಲಿ.

ಭಾವಾರ್ಥ

ಯಾವ ಧನಕ್ಕೆ ಅಗ್ನಿಯೇ ಪ್ರಭುವಾಗಿದ್ದಾನೆಯೋ, ಅಂತಹ ಧನದ ಬೆಲೆಯೇನು ? ಈ ಧನವು ಹಿತಕರವಾಗಿರುವ ಬಗೆಯಾವುದು ? ಸರ್ವಜ್ಞನಾದ ಎಲೈ ಅಗ್ನಿಯೇ, ಎಲ್ಲವನ್ನೂ ತಿಳಿದಿರುವ ನೀನು ನಮಗೆ ವಿಶದವಾಗಿ ತಿಳಿಸು. ಧನಪ್ರಾಪ್ತಿಮಾರ್ಗದ ಗುಪ್ತವಾದುದೂ, ಅತ್ಯುತ್ಕೃಷ್ಟವಾದುದೂ ಆದ ಸ್ಥಾನವನ್ನು ನಮಗೆ ತಿಳಿಸು. ಮತ್ತು ಇತರರಿಂದ ದೂಷಿಸಲ್ಪಟ್ಟವರಾಗಿ ರಿಕ್ತವಾದ ಸ್ಥಾನವನ್ನು ನಾವು ಸೇರದಿರುವಂತಾಗಲಿ.

English Translation

What is the value of this (wealth) to us? what is its advantage? Inform us, Jatavedas, for you know; (tell us) what is the best (course) for us on this secret path, so that we may follow unreproached the direct road.

---

ಸಂಹಿತಾಪಾಠಃ

ಕಾ ಮರ್ಯಾದಾ ವಯುನಾ ಕದ್ಧ ವಾಮಮಚ್ಛಾ ಗಮೇಮ ರಘವೋ ನ ವಾಜಂ।
ಕದಾ ನೋ ದೇವೀರಮೃತಸ್ಯ ಪತ್ನೀಃ ಸೂರೋ ವರ್ಣೇನ ತತನನ್ನುಷಾಸಃ॥

ಪದಪಾಠಃ

ಕಾ । ಮರ್ಯಾದಾ । ವಯುನಾ । ಕತ್ । ಹ । ವಾಮಂ । ಅಚ್ಛ । ಗಮೇಮ । ರಘವಃ । ನ । ವಾಜಂ।
ಕದಾ । ನಃ । ದೇವೀಃ । ಅಮೃತಸ್ಯ । ಪತ್ನೀಃ । ಸೂರಃ । ವರ್ಣೇನ । ತತನನ್ । ಉಷಸಃ ॥ ೧೩ ॥

ಸಾಯಣಭಾಷ್ಯಂ

ಕಾ ಮರ್ಯಾದಾ ಕಾ ಪ್ರೀತ್ಯಾದಿವ್ಯವಸ್ಥಾ ಕಾ ಚ ವಯುನಾ ಪ್ರಜ್ಞಾನಂ ಪದಾರ್ಥವಿಷಯಂ ಕದ್ಧ ಕಿಂ ಚ ವಾಮಂ ವನನೀಯಂ ಪದಾರ್ಥಜಾತಂ । ಏತತ್ಸರ್ವಮಚ್ಛ ಗಮೇಮ । ಅಭಿಗಚ್ಛೇಮ ।

CC-0. Jangamwadi Math Collection. Digitized by eGangotri

ತತ್ರ ದೃಷ್ಟಾಂತಃ । ರಘುವೋ ನ ವಾಜಂ । ಶೀಘ್ರಗಾಮಿನೋಽಶ್ವಾದಯಃ ಸಂಗ್ರಾಮಮಿವ ತದ್ವತ್ । ಕದಾ ಕಸ್ಮಿನ್ಕಾಲೇ ನೋಽಸ್ಮಾಕಂ ವ್ಯವಹಾರಾಯ ದೇವೀರ್ದೇವ್ಯೋ ದ್ಯೋತಮಾನಾ ಅಮೃತಸ್ಯಾ- ಮರಣಧರ್ಮಸ್ಯಾದಿತ್ಯಸ್ಯ ಪತ್ನೀಃ ಪತ್ನ್ಯಃ ಪಾಲಯಿತ್ರ್ಯಃ ಸೂರಃ ಪ್ರಸವಿತ್ರ್ಯ ಉಷಾಸೋ ವರ್ಣೇನ ಪ್ರಕಾಶೇನ ತತನನ್ । ವಿಸ್ತಾರಯೇಯುಃ । ಏವಂ ಸೂರ್ಯಸಂಬಂಧಿನ ಉಷಸಃ ಸ್ತುತ್ಯಾ ಸರ್ವಾ- ತ್ಮನೋ ವೈಶ್ವಾನರಸ್ಯ ಸ್ತುತಿರವಗಂತವ್ಯಾ ॥ ತನೋತೇರ್ಲೇಟಿ ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ದ್ವಿರ್ಭಾವಹಲಾದಿಶೇಷೌ ॥

ಪ್ರತಿಪದಾರ್ಥ

ವಾಜಂ—ಯುದ್ಧಾರ್ಥವಾಗಿ ಓಡತಕ್ಕ । ರಘುವೋ ನ—ವೇಗಗಾಮಿಗಳಾದ ಅಶ್ವಗಳಂತೆ । ಅಚ್ಛ— (ನಮ್ಮ) ಅಪೇಕ್ಷಿತವಾದ ಪ್ರದೇಶದ ಅಭಿಮುಖವಾಗಿ । ಗಮೇಮ—(ನಾವು) ಹೋಗುವ ಪ್ರದೇಶವಾವುದಿದೆಯೋ (ಅದರ) । ಮರ್ಯಾದಾ—ಅಂತವು । ಕಾ—ಯಾವುದು ? । ವಯುನಾ—ಅಲ್ಲಿ ನಮ್ಮ ಜ್ಞಾನಕ್ಕೆ ಗೋಚರವಾಗುವ ವಸ್ತುವು । ಕದ್ಧ—ಯಾವುದು ತಾನೇ ಇದೆ । ವಾಮಂ—ಅದರ ಪ್ರಯೋಜನವೇನು ? । ಕದಾ—ಯಾವಾಗ । ನಃ—ನಮ್ಮ ವ್ಯವಹಾರಕ್ಕಾಗಿ । ದೇವೀಃ—ಪ್ರಕಾಶಮಾನರೂ । ಅಮೃತಸ್ಯ—ಮರಣರಹಿತನಾದ ಆದಿತ್ಯನ । ಪತ್ನೀಃ—ಪತ್ನೀಯರೂ । ಸೂರಃ—ಜಗತ್ತನ್ನು ಪ್ರಸವಿಸುವವರೂ ಆದ । ಉಷಾಸಃ—ಉಷೋದೇವತೆಯರು । ವರ್ಣೇನ—ತಮ್ಮ ಪ್ರಭೆಗಳಿಂದ । ತತನನ್—ಲೋಕವನ್ನು ಬೆಳಗಿಸುವರು.

ಭಾವಾರ್ಥ

ಯುದ್ಧಾರ್ಥವಾಗಿ ಓಡತಕ್ಕ ವೇಗಗಾಮಿಗಳಾದ ಅಶ್ವಗಳಂತೆ ನಮ್ಮ ಅಪೇಕ್ಷಿತವಾದ ಪ್ರದೇಶದ ಅಭಿಮುಖ ವಾಗಿ ನಾವು ಹೋಗುವ ಪ್ರದೇಶದ ಅಂತವಾವುದು ? ಅಲ್ಲಿ ನಮ್ಮ ಜ್ಞಾನಕ್ಕೆ ಗೋಚರವಾಗುವ ವಸ್ತುವು ಯಾವುದು ತಾನೇ ಇದೆ ? ಅದರ ಪ್ರಯೋಜನವೇನು ? ನಮ್ಮ ವ್ಯವಹಾರಕ್ಕಾಗಿ ಪ್ರಕಾಶಮಾನರೂ, ಮರಣರಹಿತ ನಾದ ಆದಿತ್ಯನ ಪತ್ನಿಯರೂ, ಜಗತ್ತನ್ನು ಪ್ರಸವಿಸುವವರೂ ಆದ ಉಷೋದೇವತೆಯರು ತಮ್ಮ ಪ್ರಭೆಗಳಿಂದ ಲೋಕ ವನ್ನು ಯಾವಾಗ ಬೆಳಗಿಸುತ್ತಾರೆ ?

English Translation

What is the limit, what are the objects, which is the desirable (end) to which we rush like swift (chargers) to the battle? when for us will the divine dawns, the brides of the immortal (sun), overspread (the world) with light.

———

ಸಂಹಿತಾಪಾಠಃ

ಅನಿರೇಣ ವಚಸಾ ಫಲ್ಗ್ವೇನ ಪ್ರತೀತ್ಯೇನ ಕೃಧುನಾತೃಪಾಸಃ ।
ಅಧಾ ತೇ ಅಗ್ನೇ ಕಿಮಿಹಾ ವದಂತ್ಯನಾಯುಧಾಸ ಆಸತಾ ಸಚಂತಾಂ ॥

CC-0. Jangamwadi Math Collection. Digitized by eGangotri

ಪದಪಾಠಃ

ಅನಿರೇಣ । ವಚಸಾ । ಫಲ್ಗ್ವೇನ । ಪ್ರತೀತ್ಯೇನ । ಕೃಧುನಾ । ಅತೃಪಾಸಃ ।

ಅಧ । ತೇ । ಅಗ್ನೇ । ಕಿಂ । ಇಹ । ವದಂತಿ । ಅನಾಯುಧಾಸಃ । ಅಸತಾ ಸಚಂತಾಂ ॥ ೧೪ ॥

ಸಾಯಣಭಾಷ್ಯಂ

ಅನಿರೇಣ । ಇರಾನ್ನಂ । ತದ್ರಹಿತೇನ ಫಲ್ಗ್ವೇನೋಕ್ಥೇನ ಪ್ರತೀತ್ಯೇನ ಪ್ರತಿಗಂತವ್ಯೇನ । ಆರೋಹ್ಯೇಣೇತ್ಯರ್ಥಃ । ಕೃಧುನಾ ಹ್ರಸ್ವೇನ । ಕೃಧ್ವಿತಿ ಹ್ರಸ್ವನಾಮ ಕೃಧುಕೋ ವಮ್ರಕ ಇತಿ ತನ್ನಾಮಸೂಕ್ತತ್ವಾತ್ । ಏವಂವಿಧೇನ ವಚಸಾತೃಪಾಸೋಽತೃಪ್ತಾ ಜನಾಃ । ಅಥ ಅಧುನೇಹಾಸ್ಮಿನ್ ಲೋಕೇ ಹೇ ಅಗ್ನೇ ತೇ ತ್ವಾಂ ಕಿಂ ವದಂತಿ । ನಿರ್ಹವಿಷ್ಕೇಣ ವಚಸಾ ನ ಕಿಂಚಿಲ್ಲಭ್ಯತ ಇತ್ಯರ್ಥಃ। ಕಿಂತ್ವನಾಯುಧಾಸಃ। ಆಯುಧಶಬ್ದಃ ಸಾಧನಂ ಲಕ್ಷಯತಿ। ಹವಿರಾದಿಸಾಧನರಹಿತಾಸ್ತೇಽಸತಾ ದುಃಖೇನ ಸಚಂತಾಂ। ಸಂಗಚ್ಛಂತಾಂ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅನಿರೇಣ—ಅನ್ನರಹಿತವಾದುದೂ । ಫಲ್ಗ್ವೇನ—ತುಚ್ಛವಾದುದೂ । ಪ್ರತೀತ್ಯೇನ—ನಿರ್ದಿಷ್ಟರಹಿತವಾದುದೂ । ಕೃಧುನಾ—ಅತಿಹ್ರಸ್ವವಾದುದೂ ಆದ । ವಚಸಾ—ವಾಕ್ಕಿನಿಂದ । ಅತೃಪಾಸಃ—ತೃಪ್ತಿರಹಿತವಾಗಿ । ಅಧ—ಈಗ । ಇಹ—ಈ ಯಜ್ಞಸ್ಥಾನದಲ್ಲಿ । ತೇ—ನಿನ್ನನ್ನುದ್ದೇಶಿಸಿ । ಕಿಂ ವದಂತಿ—ಏನನ್ನು ತಾನೆ ಹೇಳಬಲ್ಲರು ? । ಅನಾಯುಧಾಸಃ—ಹವಿಸ್ಸಿನ ರೂಪವಾದ ಸಾಧನರಹಿತರಾದ ಅವರು। ಅಸತಾ—ದುಃಖದೊಡನೆ । ಸಚಂತಾಂ—ಸೇರಿಕೊಳ್ಳಲಿ.

ಭಾವಾರ್ಥ

ಎಲೈ ಅಗ್ನಿಯೇ, ಅನ್ನರಹಿತವಾದುದೂ, ತುಚ್ಛವಾದುದೂ, ನಿರ್ದಿಷ್ಟರಹಿತವಾದುದೂ, ಅತಿಹ್ರಸ್ವವಾದುದೂ ಆದ ವಾಕ್ಕಿನಿಂದ ತೃಪ್ತಿರಹಿತರಾಗಿ ಈಗ ಈ ಯಜ್ಞಸ್ಥಾನದಲ್ಲಿ ನಿನ್ನನ್ನುದ್ದೇಶಿಸಿ ಏನನ್ನು ತಾನೇ ಹೇಳಬಲ್ಲರು ? ಹವಿಸ್ಸಿನ ರೂಪವಾದ ಸಾಧನರಹಿತರಾದ ಅವರು ದುಃಖಪೂರಿತರಾಗಲಿ.

## English Translation

(Men are) not satisfied by unproductive, frivolous, inconclusive, scanty speech; then what, Agni, do they here say to you? devoid of the implements (of worship), let them suffer from distress

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಸ್ಯ ಶ್ರಿಯೇ ಸಮಿಧಾನಸ್ಯ ವೃಷ್ಣೋ ವಸೋರನೀಕಂ ದಮ ಆ ರುರೋಚ।
ರುಶದ್ವಸಾನಃ ಸುದೃಶೀಕರೂಪಃ ಕ್ಷಿತಿರ್ನ ರಾಯಾ ಪುರುವಾರೋ ಅದ್ಯೌತ್॥

ಪದಪಾಠಃ

ಅಸ್ಯ । ಶ್ರಿಯೇ । ಸಂऽಇಧಾನಸ್ಯ । ವೃಷ್ಣಃ । ವಸೋಃ। ಅನೀಕಂ । ದಮೇ । ಆ । ರುರೋಚ ।
ರುಶತ್ । ವಸಾನಃ । ಸುದೃಶೀಕऽರೂಪಃ । ಕ್ಷಿತಿಃ । ನ । ರಾಯಾ । ಪುರುऽವಾರಃ । ಅದ್ಯೌತ್ ॥ ೧೫ ॥

ಸಾಯಣಭಾಷ್ಯಂ

ಸಮಿಧಾನಸ್ಯ ಸಮಿಧ್ಯಮಾನಸ್ಯ ॥ ಕರ್ಮಣಿ ಕರ್ತೃಪ್ರತ್ಯಯಃ ॥ ವೃಷ್ಣೋ ವರ್ಷಿತುಃ ಫಲಸ್ಯ ವಸೋರ್ವಾಸಯಿತುರಸ್ಯಾಗ್ನೇರನೀಕಂ ತೇಜಃಸಂಘೋ ದಮೇ ಯಾಗಗೃಹ ಆ ರುರೋಚ । ಸರ್ವತೋ ದೀಪ್ಯತೇ । ಕಿಮರ್ಥಂ । ಶ್ರಿಯೇ ಶ್ರೇಯಸೇ ಯಜಮಾನಾನಾಂ । ಸೋಽಗ್ನೀ ರುಶತ್ । ವರ್ಣನಾಮೈತತ್ । ದೀಪ್ತಂ ತೇಜೋ ವಸಾನ ಆಚ್ಛಾದಯನ್ ಅತ ಏವ ಸುದೃಶೀಕರೂಪಃ ಸುಷ್ಠು ದರ್ಶನೀಯರೂಪಃ ಪುರುವಾರೋ ಬಹುಭಿರ್ಋತ್ವಿಗ್ಭಿರ್ಯಜಮಾನೈರ್ವರಣೀಯಃ ಸನ್ನದ್ಯೌತ್ । ದ್ಯೋತತೇ । ಕಿಮಿವ । ರಾಯಾಶ್ವಾದಿಧನೇನ ಕ್ಷಿತಿರ್ನ ರಾಜಾದಿರಿವ । ಕ್ಷಿತಿರಿತಿ ಮನುಷ್ಯನಾಮ ॥

ಪ್ರತಿಪದಾರ್ಥ

**ಸಮಿಧಾನಸ್ಯ**—ಸಮಿತ್ತುಗಳಿಂದ ಪ್ರಜ್ವಲಿತನೂ । **ವೃಷ್ಣಃ**—ಕಾಮವರ್ಷಕನೂ । **ವಸೋಃ**—ವಾಸಸ್ಥಾನಗಳನ್ನು ಕಲ್ಪಿಸುವವನೂ ಆದ । **ಅಸ್ಯ**—ಅಗ್ನಿಯ । **ಅನೀಕಂ**—ತೇಜಸ್ಸುಗಳ ಸಮುದಾಯವು । **ದಮೇ**—ಈ ಯಾಗಗೃಹದಲ್ಲಿ । **ಶ್ರಿಯೇ**—(ಯಜಮಾನನ) ಶ್ರೇಯಸ್ಸಿಗಾಗಿ । **ಆ ರುರೋಚ**—ಸುತ್ತಲೂ ಪ್ರಕಾಶಿಸುತ್ತಿದೆ। **ರುಶತ್**—ಕಾಂತಿಯುತವಾದ ತೇಜಸ್ಸನ್ನು । **ವಸಾನಃ**—ಧರಿಸಿರುವವನೂ । **ಸುದೃಶೀಕರೂಪಃ**—ಸುಂದರವಾದ ರೂಪವುಳ್ಳವನೂ। **ಪುರುವಾರಃ**—ಅನೇಕರಿಂದ ಪೂಜಿತನಾದವನೂ ಆಗಿ। **ರಾಯಾ**—ಐಶ್ವರ್ಯದೊದನೆ ಪ್ರಕಾಶಿಸುವ। **ಕ್ಷಿತಿರ್ನ**—ದೊರೆಯಂತೆ । **ಅದ್ಯೌತ್**—ಪ್ರಕಾಶಿಸುತ್ತಿದ್ದಾನೆ.

ಭಾವಾರ್ಥ

ಸಮಿತ್ತುಗಳಿಂದ ಪ್ರಜ್ವಲಿತನೂ, ಕಾಮವರ್ಷಕನೂ, ವಾಸಸ್ಥಾನಗಳನ್ನು ಕಲ್ಪಿಸುವವನೂ ಆದ ಅಗ್ನಿಯ ತೇಜಸ್ಸುಗಳ ಸಮುದಾಯವು ಈ ಯಾಗಗೃಹದಲ್ಲಿ ಯಜಮಾನನ ಶ್ರೇಯಸ್ಸಿಗಾಗಿ ಸುತ್ತಲೂ ಪ್ರಕಾಶಿಸುತ್ತಿದೆ. ಕಾಂತಿಯುತವಾದ ತೇಜಸ್ಸನ್ನು ಧರಿಸಿರುವವನೂ, ಸುಂದರವಾದ ರೂಪವುಳ್ಳವನೂ, ಅನೇಕರಿಂದ ಪೂಜಿತನಾದವನೂ ಆದ ಅಗ್ನಿಯು ಐಶ್ವರ್ಯದೊಂದಿಗೆ ಪ್ರಕಾಶಿಸುವ ದೊರೆಯಂತೆ ಪ್ರಕಾಶಿಸುತ್ತಿದ್ದಾನೆ.

CC-0. Jangamwadi Math Collection. Digitized by eGangotri

English Translation

For the prosperity of this ( institutor of the rite ), the host (of the flames) of the kindled (Agni), the showerer (of benefits), the giver of dwellings, has blazed in the hall (of sacrifice); clothed in radiance, beatiful in semblance, and glorified by many, he shines like a man with opulence.

———

## ಆರನೆಯ ಸೂಕ್ತವು

———

ಸಾಯಣಭಾಷ್ಯಂ

ಊರ್ಧ್ವ ಊ ಷು ಣ ಇತ್ಯೇಕಾದಶರ್ಚಂ ಷಷ್ಠಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ । ಊರ್ಧ್ವ ಊ ಷ್ವೇಕಾದಶೇತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸೀದಂ । ಸೂತ್ರಿತಂ ಚ । ಊರ್ಧ್ವ ಊ ಷು ಣಃ ಸಸಸ್ಯ ಯದ್ವಿಯುತೇತಿ ಪಂಚ । ಆ. ೪-೧೩ । ಇತಿ ॥

ಅನುವಾದವು—ಊರ್ಧ್ವ ಊ ಷು ಣ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಊರ್ಧ್ವ ಊ ಷು ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಅಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ಆಗ್ನೇಯಕ್ರತು ಸಂಬಂಧವಾದ ಮಂತ್ರಗಳಲ್ಲಿ ತ್ರಿಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂಕ್ತದ—ಊರ್ಧ್ವ ಊ ಷು ಣಃ ಸಸಸ್ಯ ಯದ್ವಿಯುತೇತಿ ಪಂಚ ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

———

### ಸೂಕ್ತ—೬

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೬ ॥
ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೪, ೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿ—ವಾಮದೇವಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಊರ್ಧ್ವ ಊ ಷು ಣೋ ಅಧ್ವರಸ್ಯ ಹೋತರಗ್ನೇ ತಿಷ್ಠ ದೇವತಾತಾ ಯಜೀಯಾನ್ ।

ತ್ವಂ ಹಿ ವಿಶ್ವಮಭ್ಯಸಿ ಮನ್ಮ ಪ್ರ ವೇಧಸಶ್ಚಿತ್ತಿರಸಿ ಮನೀಷಾಂ ॥ ೧ ॥

ಪದಪಾಠಃ

ಊರ್ಧ್ವಃ। ಊಂ ಇತಿ । ಸು । ನಃ । ಅಧ್ವರಸ್ಯ । ಹೋತಃ । ಅಗ್ನೇ । ತಿಷ್ಠ । ದೇವಽತಾತಾ । ಯಜೀ-ಯಾನ್ ॥

ತ್ವಂ । ಹಿ । ವಿಶ್ವಂ । ಅಭಿ । ಅಸಿ । ಮನ್ಮ । ಪ್ರ । ವೇಧಸಃ । ಚಿತ್ । ತಿರಸಿ । ಮನೀಷಾಂ ॥ ೧ ॥

ಸಾಯಣಭಾಷ್ಯಂ

ಹೇ ಅಧ್ವರಸ್ಯ ಹೋತರ್ಯಾಗಸಂಬಂಧಿನಾಂ ದೇವಾನಾಮಾಹ್ವಾತಃ । ಯದ್ವಾ । ಹೋತರಿತ್ಯತ್ರ ಪ್ರಕೃತ್ಯಂಶೋಽನುವಾದಃ । ಹೇ ಹೋಮನಿಷ್ಪಾದಕಾಗ್ನೇ ಯಜೀಯಾನ್ಯಷ್ಟೃತಮಸ್ತ್ವಂ ನೋಽಸ್ಮಾ-ಕಮೂರ್ಧ್ವ ಊ ಷು ತಿಷ್ಠ । ಉನ್ನತ ಏವ ತಿಷ್ಠ । ನಿತ್ಯಮುನ್ನತೋ ಭವೇತ್ಯರ್ಥಃ । ಕುತ್ರೇತಿ ತದು-ಚ್ಯತೇ । ದೇವತಾತಾ ದೇವತಾತೌ । ದೇವಾಸ್ತಾಯಂತೇ ವಿಸ್ತೀರ್ಯಂತೇಽತ್ರೇತಿ ದೇವತಾತಿರ್ಯಜ್ಞಃ । ತಸ್ಮಿನ್ । ತ್ವಂ ಹಿ ತ್ವಂ ಖಲು ವಿಶ್ವಂ ಸರ್ವಂ ಮನ್ಮ ಮನನೀಯಂ ಶತ್ರೂಣಾಂ ಧನಮಭ್ಯಸಿ । ಅಭಿಭವಸಿ। ಕಿಂಚ ವೇಧಸಶ್ಚಿತ್ । ಚಿತ್ಪೂಜಾಯಾಂ । ಸ್ತೋತುರ್ಯಜಮಾನಾದೇರ್ಮನೀಷಾಂ ಮತಿಂ ಸ್ತುತಿಂ ಪ್ರ ತಿರಸಿ । ಪ್ರವರ್ಧಯಸಿ । ಪ್ರಪೂರ್ವಸ್ತಿರತಿರ್ವರ್ಧನಾರ್ಥಃ ॥

ಪ್ರತಿಪದಾರ್ಥ

ಅಧ್ವರಸ್ಯ—ಯಜ್ಞಕ್ಕೆ । ಹೋತಃ—ಹೋತೃರೂಪನಾದ । ಅಗ್ನೇ—ಅಗ್ನಿಯೇ । ಯಜೀಯಾನ್—ಅತ್ಯಂತ ಪೂಜ್ಯನಾದ ನೀನು । ನಃ—ನಮ್ಮ । ಊರ್ಧ್ವಃ—ಊರ್ಧ್ವಭಾಗದಲ್ಲಿದ್ದು । ಊ ಷು ತಿಷ್ಠ—ಉನ್ನತ ಸ್ಥಾನವನ್ನು ಆಕ್ರಮಿಸಿರು । ದೇವತಾತಾ—ದೇವತೆಗಳನ್ನು ಆರಾಧಿಸುವ ಈ ಯಜ್ಞದಲ್ಲಿ । ತ್ವಂ ಹಿ—ನೀನೊಬ್ಬನೇ ವಿಶ್ವಂ—ಸಮಸ್ತವಾದುದೂ । ಮನ್ಮ—ಮನನೀಯವಾದುದೂ ಆದ ಧನವನ್ನು । ಅಭಿ ಅಸಿ—ಸಂಪಾದಿಸಿ ಕೊಡ ಬಲ್ಲೆ । ವೇಧಸಃ ಚಿತ್—ಯಜಮಾನನು ಪ್ರಾಜ್ಞನಾಗಿದ್ದರೂ ಸಹ । ಮನೀಷಾಂ—ಅವನ ಸ್ತುತಿಯನ್ನೂ । ಪ್ರ ತಿರಸಿ—ಅಧಿಕವಾಗಿ ವೃದ್ಧಿಯಾಗುವಂತೆ ಮಾಡುತ್ತೀಯೆ.

ಭಾವಾರ್ಥ

ಯಜ್ಞಕ್ಕೆ ಹೋತೃರೂಪನಾದ ಎಲೈ ಅಗ್ನಿಯೇ, ಅತ್ಯಂತ ಪೂಜ್ಯನಾದ ನೀನು ನಮ್ಮ ಊರ್ಧ್ವಭಾಗ ದಲ್ಲಿದ್ದು ಉನ್ನತವಾದ ಸ್ಥಾನವನ್ನು ಆಕ್ರಮಿಸು ದೇವತೆಗಳನ್ನು ಆರಾಧಿಸಲು ಯಜ್ಞದಲ್ಲಿ ನೀನೊಬ್ಬನೇ ಸಮಸ್ತ

CC-0. Jangamwadi Math Collection. Digitized by eGangotri

ವಾದುದೂ, ಮನನೀಯವಾದುದೂ ಆದ ಧನವನ್ನು ಸಂಪಾದಿಸಿಕೊಡಬಲ್ಲೆ. ಪ್ರಾಜ್ಞನಾಗಿರುವ ಯಜಮಾನನ ಸ್ತುತಿಯನ್ನೂ ಸಹ ವೃದ್ಧಿಯಾಗುವಂತೆ ನೀನು ಮಾಡಬಲ್ಲೆ.

English Translation

Agni, ministrant of the sacrifice, you are entitled to worship; be above us in this offering to the gods; for you prevail over all that is desirable; you inspire the praise of the worshipper.

---

ಸಂಹಿತಾಪಾಠಃ

ಅಮೂರೋ ಹೋತಾ ನ್ಯಸಾದಿ ವಿಕ್ಷ್ವ೧ಗ್ನಿರ್ಮಂದ್ರೋ ವಿದಥೇಷು ಪ್ರಚೇತಾಃ ।
ಊರ್ಧ್ವಂ ಭಾನುಂ ಸವಿತೇವಾಶ್ರೇನ್ಮೇತೇವ ಧೂಮಂ ಸ್ತಭಾಯದುಪ ದ್ಯಾಂ ॥ ೨ ॥

ಪದಪಾಠಃ

ಅಮೂರಃ । ಹೋತಾ । ನಿ । ಅಸಾದಿ । ವಿಕ್ಷು । ಅಗ್ನಿಃ । ಮಂದ್ರಃ । ವಿದಥೇಷು । ಪ್ರಚೇತಾಃ ॥
ಊರ್ಧ್ವಂ । ಭಾನುಂ । ಸವಿತಾಽಇವ । ಅಶ್ರೇತ್ । ಮೇತಾಽಇವ । ಧೂಮಂ । ಸ್ತಭಾಯತ್ । ಉಪ । ದ್ಯಾಂ ॥ ೨ ॥

ಸಾಯಣಭಾಷ್ಯಂ

ಅಮೂರೋಽಮೂಢಃ । ಪ್ರಗಲ್ಭ ಇತ್ಯರ್ಥಃ । ಹೋತಾ ಹೋಮನಿಷ್ಪಾದಕೋ ಮಂದ್ರೋ ಮದನೀಯೋ ಮಾದಯಿತಾ ವಾ ಪ್ರಚೇತಾಃ ಪ್ರಕೃಷ್ಟಜ್ಞಾನೋಽಗ್ನಿರ್ದೇವೋ ವಿಕ್ಷ್ವೃತ್ವಿಗ್ರೂಪಾಸು ಪ್ರಜಾಸು ಮಧ್ಯೇ ವಿದಥೇಷು ಯಾಗೇಷು ನಿಮಿತ್ತಭೂತೇಷು ನ್ಯಸಾದಿ । ನಿತರಾಂ ಸ್ಥಾಪಿತಃ । ಅಥ ತಥಾಭೂತೋಽಗ್ನಿರ್ಭಾನುಂ ದೀಪ್ತಿಂ ಸವಿತೇವೋದಿತಃ ಸೂರ್ಯ ಇವೋರ್ಧ್ವಮಶ್ರೇತ್ । ಊರ್ಧ್ವಮುಖಮಾಶ್ರಯತಿ । ಕಿಂಚ ಮೇತೇವ ಸ್ಥೂಣೇವ । ಸಾ ಯಥಾ ಸ್ವಾಧಿಷ್ಠಿತಂ ವಂಶಾದಿಕಂ ಸ್ತಭ್ನಾತಿ ತದ್ವದಯಮಗ್ನಿರ್ಧೂಮಂ ಸ್ವೋತ್ಥಿತಂ ದ್ಯಾಮುಪ ದ್ಯುಲೋಕಸ್ಯೋಪರಿ ಸ್ತಭಾಯತ್ । ಸ್ತಭ್ನಾತಿ ॥

ಪ್ರತಿಪದಾರ್ಥ

ಅಮೂರಃ—ವಿವೇಕಿಯೂ । ಹೋತಾ—ಹೋಮಸಂಪಾದಕನೂ । ಮಂದ್ರಃ—ಆಕರ್ಷಕನೂ । ಪ್ರಚೇತಾಃ— ಉತ್ತಮವಾದ ಜ್ಞಾನವುಳ್ಳವನೂ ಆದ । ಅಗ್ನಿಃ—ಅಗ್ನಿಯು । ವಿಕ್ಷು—ಋತ್ವಿಕ್ಕುಗಳೆಂದ ನಮ್ಮ

CC-0. Jangamwadi Math Collection. Digitized by eGangotri

ನಡುವೆ। ವಿದಥೇಷು—ಯಜ್ಞಗೃಹದಲ್ಲಿ (ಯಜ್ಞನಿಮಿತ್ತವಾಗಿ) । ನ್ಯಸಾದಿ—ಸ್ಥಾಪಿತನಾಗಿದ್ದಾನೆ । ಭಾನುಂ—ತನ್ನ ಪ್ರಕಾಶವನ್ನು । ಸವಿತೇವ—ಉದಿತನಾದ ಸೂರ್ಯನಂತೆ । ಊರ್ಧ್ವಂ—ಊರ್ಧ್ವಮುಖವಾಗಿ । ಅಶ್ರೇತ್—ಪ್ರಸರಿಸುವಂತೆ ಮಾಡಿದ್ದಾನೆ। ಮೇತೇವ (ಮೇತಾ ಇವ)—ಸ್ತಂಭದಂತೆ । ಧೂಮಂ—ತನ್ನ ಧೂಮಸ್ತೋಮವನ್ನು । ದ್ಯಾಂ ಉಪ—ಅಂತರಿಕ್ಷದ ಮೇಲ್ಭಾಗದಲ್ಲಿ । ಸ್ತಭಾಯತ್—ನಿಲ್ಲಿಸಿದ್ದಾನೆ.

ಭಾವಾರ್ಥ

ವಿವೇಕಿಯೂ, ಹೋಮಸಂಪಾದಕನೂ, ಆಕರ್ಷಕನೂ, ಉತ್ತಮವಾದ ಜ್ಞಾನವುಳ್ಳವನೂ ಆದ ಅಗ್ನಿಯು ಋತ್ವಿಕ್ಕುಗಳಾದ ನಮ್ಮ ನಡುವೆ ಯಜ್ಞಗೃಹದಲ್ಲಿ ಯಜ್ಞನಿಮಿತ್ತವಾಗಿ ಸ್ಥಾಪಿತನಾಗಿದ್ದಾನೆ. ತನ್ನ ಪ್ರಕಾಶವನ್ನು ಉದಿತನಾದ ಸೂರ್ಯನಂತೆ ಊರ್ಧ್ವಮುಖವಾಗಿ ಪ್ರಸರಿಸುವಂತೆ ಮಾಡಿದ್ದಾನೆ. ತನ್ನ ಧೂಮಸ್ತೋಮವನ್ನು ಅಂತರಿಕ್ಷದ ಊರ್ಧ್ವಭಾಗದಲ್ಲಿ ಸ್ತಂಭದಂತೆ ನಿಲ್ಲಿಸಿದ್ದಾನೆ.

English Translation

The unperplexed, the sagacious, exhilarating Agni, the ministrant priest, has been placed amongst men for ( the celebration of ) sacrifices : like the sun, he spreads light above, and props the smoke above the sky like a pillar.

---

ಸಂಹಿತಾಪಾಠಃ

ಯತಾ ಸುಜೂರ್ಣೀ ರಾತಿನೀ ಘೃತಾಚೀ ಪ್ರದಕ್ಷಿಣಿದ್ದೇವತಾತಿಮುರಾಣಃ।

ಉದು ಸ್ವರುರ್ನವಜಾ ನಾಕ್ರಃ ಪಶ್ವೋ ಅನಕ್ತಿ ಸುಧಿತಃ ಸುಮೇಕಃ ॥ ೩ ॥

ಪದಪಾಠಃ

ಯತಾ । ಸುಽಜೂರ್ಣಿಃ । ರಾತಿನೀ । ಘೃತಾಚೀ । ಪ್ರಽದಕ್ಷಿಣಿತ್ । ದೇವಽತಾತಿಂ । ಉರಾಣಃ ॥

ಉತ್ । ಊಂ ಇತಿ । ಸ್ವರುಃ । ನವಽಜಾಃ । ನ । ಅಕ್ರಃ । ಪಶ್ವಃ । ಅನಕ್ತಿ । ಸುಽಧಿತಃ । ಸುಽಮೇಕಃ ॥

ಸಾಯಣಭಾಷ್ಯಂ

ಯತಾ ಸಂಯತಾ ಸುಜೂರ್ಣಿಃ ಶೋಭನಜವಾ ಸುಷ್ಠು ಜೀರ್ಣಾ ಪುರಾಣೀ ವಾ । ಘೃತಾಚೀ। ಘೃತಮಂಚತೀತಿ ಘೃತಾಚೀ ಜುಹೂಃ। ರಾತಿನೀ। ರಾತಿರ್ಧನಂ । ಹವಿರ್ಲಕ್ಷಣಧನವತೀ । ಆಜ್ಯಪೂರ್ಣಾ ಭವತೀತ್ಯರ್ಥಃ । ದೇವತಾತಿಂ ಯಜ್ಞಂ ತಥೋರಾಣ ಉರು ಕುರ್ವಾಣೋಽಧ್ವರ್ಯುರಗ್ನಿರ್ವಾ ಪ್ರದ-

CC-0. Jangamwadi Math Collection. Digitized by eGangotri

ಕ್ಷಿಣಿತ್ । ಪ್ರದಕ್ಷಿಣಮೇತೀತಿ ಪ್ರದಕ್ಷಿಣಿತ್ । ಪ್ರದಕ್ಷಿಣಗಮನೋ ಭವತಿ ॥ ಅಕಾರಲೋಪಶ್ಛಾಂದಸಃ॥ ನವಜಾ ನವಜಾತಸ್ತದಾನೀಮೇವೋತ್ಪಾದಿತಃ ಸ್ವರುರ್ನ । ಯೂಪಶಕಲವಾಚೀ ಸ್ವರುರತ್ರ ಯೂಪಂ ಲಕ್ಷಯತಿ । ಚಷಾಲವಂತಃ ಸ್ವರವಃ ಪೃಥಿವ್ಯಾಂ । ಋಗ್ವೇ. ೩-೮-೧೦ । ಇತ್ಯಾದಿಷು ಸ್ವರುಶಬ್ದೇನ ಯೂಪಾಭಿಧಾನಾಚ್ಚ । ನಕಾರಃ ಸಮುಚ್ಚಯೇ । ಯೂಪೋಽಪ್ಯುದು ಉಪಸರ್ಗಶ್ರುತೇರ್ಯೋಗ್ಯ-ಕ್ರಿಯಾಧ್ಯಾಹಾರಃ । ಉನ್ನತೋ ಭವತಿ । ಕಿಂಚ ಅಕ್ರ ಆಕ್ರಮಿತಾ । ಸುಮೇಕಃ ಸುದೀಪ್ತಃ ಸುಧಿತಃ ಸ್ವಧಿತಿರಿತ್ಯರ್ಥಃ । ಸೋಽಪಿ ಪಶ್ವಃ ಪಶೂನನಕ್ತಿ । ಗಚ್ಛತಿ । ಯದ್ವಾ । ಸುಧಿತಃ ಸ್ವರುರೇವೋದು ಉತ್ಕೃಷ್ಟಃ ಪಶ್ವಃ ಪಶೂನನಕ್ತಿ । ಸ್ವರುಣಾ ಪಶುಮನಕ್ತೀತಿ ಶ್ರುತೇಃ ॥

ಪ್ರತಿಪದಾರ್ಥ

ಯತಾ—ಸಂಸ್ಕೃತವಾದುದೂ। ಸುಜೂರ್ಣಿಃ—ಅತ್ಯಂತ ಪುರಾತನವಾದುದೂ ಆದ। ಘೃತಾಚೀ—ಜುಹೂ ಪಾತ್ರೆಯು । ರಾತಿನೀ—ಹವಿಸ್ಸಿನ ರೂಪದ ಧನವನ್ನು ತುಂಬಿದೆ । ದೇವತಾತಿಂ—ದೇವಪೂಜಕವಾದ ಯಜ್ಞವನ್ನು। ಉರಾಣಃ—ನೆರವೇರಿಸುವ ಅಧ್ವರ್ಯುಗಳು । ಪ್ರದಕ್ಷಿಣಿತ್—ಪ್ರದಕ್ಷಿಣಪೂರ್ವಕವಾಗಿ ನಮಸ್ಕಾರವನ್ನು ಅರ್ಪಿಸುತ್ತಿದ್ದಾರೆ । ನವಜಾಃ—ನೂತನವಾಗಿ ಉತ್ಪನ್ನವಾದ । ಸ್ವರುಃ ನ—ಯೂಪವೂ ಕೂಡ । ಉದು—ಉನ್ನತವಾಗಿ ನಿಂತಿದೆ । ಅಕ್ರಃ—ಪಶುವನ್ನು ಆಕ್ರಮಿಸತಕ್ಕದ್ದೂ । ಸುಮೇಕಃ—ಪ್ರಕಾಶಮಾನವಾದುದೂ । ಸುಧಿತಃ—ವಧಸಾಧನವಾದುದೂ ಆದ ಆಯುಧವು । ಪಶ್ವಃ—ಪಶುಗಳನ್ನು । ಅನಕ್ತಿ—ಸಮೀಪಿಸುತ್ತಿದೆ.

ಭಾವಾರ್ಥ

ಸುಸಂಸ್ಕೃತವಾದುದೂ, ಅತ್ಯಂತ ಪುರಾತನವಾದುದೂ ಆದ ಜುಹೂಪಾತ್ರೆಯು ಹವಿಸ್ಸಿನ ರೂಪದ ಧನ್ನದಿಂದ ತುಂಬಿದೆ. ದೇವಪೂಜಿತವಾದ ಯಜ್ಞವನ್ನು ನೆರವೇರಿಸುವ ಅಧ್ವರ್ಯುಗಳು ಪ್ರದಕ್ಷಿಣಪೂರ್ವಕವಾಗಿ ನಮಸ್ಕಾರವನ್ನು ಅರ್ಪಿಸುತ್ತಿದ್ದಾರೆ. ನೂತನವಾಗಿ ಉತ್ಪನ್ನವಾದ ಯೂಪವೂ ಕೂಡ ಉನ್ನತವಾಗಿ ನಿಂತಿದೆ. ಪಶುವನು ಆಕ್ರಮಿಸತಕ್ಕದ್ದೂ, ಪ್ರಕಾಶಮಾನವಾದುದೂ, ವಧಸಾಧನವಾದುದೂ ಆದ ಆಯುಧವು ಪಶುಗಳನ್ನು ಸಮೀಪಿಸುತ್ತದೆ.

English Translation

The ladle filled (with butter) is prepared : prompt (in act), opulent (with the oblation), the multiplying (priest), conducting (the worship) of the gods, circumambulates (the fire): the newly-trimmed post is set up, the impending shining axe falls upon the victims

---

ಸಂಹಿತಾಪಾಠಃ

ಸ್ತೀರ್ಣೇ ಬರ್ಹಿಷಿ ಸಮಿಧಾನೇ ಅಗ್ನಾ ಊರ್ಧ್ವೋ ಅಧ್ವರ್ಯುರ್ಜುಜುಷಾಣೋ ಅಸ್ಥಾತ್ ।

CC-0. Jangamwadi Math Collection. Digitized by eGangotri

ಪರ್ಯ್ರ್ಗ್ನಿಃ ಪಶುಪಾ ನ ಹೋತಾ ತ್ರಿವಿಷ್ಟ್ಯೇತಿ ಪ್ರದಿವ ಉರಾಣಃ ॥ ೪ ॥

ಪದಪಾಠಃ

ಸ್ತೀರ್ಣೇ । ಬರ್ಹಿಷಿ । ಸಂಽಇಧಾನೇ । ಅಗ್ನೌ । ಊರ್ಧ್ವಃ । ಅಧ್ವರ್ಯುಃ । ಜುಜುಷಾಣಃ । ಅಸ್ಥಾತ್ । ಪರಿ । ಅಗ್ನಿಃ । ಪಶುಽಪಾಃ । ನ । ಹೋತಾ । ತ್ರಿಽವಿಷ್ಟಿ । ಏತಿ । ಪ್ರಽದಿವಃ । ಉರಾಣಃ ॥ ೪ ॥

ಸಾಯಣಭಾಷ್ಯಂ

ಬರ್ಹಿಷಿ ವೇದ್ಯಾಂ ಸ್ತೀರ್ಣೇ ಆಸ್ತೃತೇ ಸತ್ಯಗ್ನಾವಾಹವನೀಯಾದಿಕೇ ಸಮಿಧಾನೇ ಸಮ್ಯಗಿಧ್ಯಮಾನೇ ಚ ಸತ್ಯಧ್ವರ್ಯುರಧ್ವರಸ್ಯ ನೇತಾ ಜುಜುಷಾಣೋ ದೇವಾನ್ಪ್ರೀಣಯನ್ನೂರ್ಧ್ವೋಽಸ್ಥಾತ್ । ತಿಷ್ಠತಿ । ಹೋತಾ ಹೋಮನಿಷ್ಪಾದಕಃ ಪ್ರದಿವಃ । ಪುರಾಣನಾಮೈತತ್ । ಪುರಾತನ ಉರಾಣಃ ಸ್ವಲ್ಪಮಪಿ ಹವಿರ್ದೇವಯೋಗ್ಯತ್ವಸಂಪಾದನೇನೋರು ಕುರ್ವಾಣಃ । ಉರಾಣ ಉರು ಕುರ್ವಾಣ ಇತಿ ನಿರುಕ್ತಂ । ಯದ್ವೈ ದೇವೈರ್ಜೋಷ್ಯತೇ ಹವಿಸ್ತದ್ಗಿರಿಮಾತ್ರಂ ವರ್ಧತ ಇತಿ ಶ್ರುತೇರಗ್ನೇರುರುಕರಣಮುಚಿತಂ । ಈದೃಶೋಽಗ್ನಿಃ ಪಶುಪಾ ನ ಪಶೂನಾಂ ಪಾಲಕ ಇವ ಪಶೂನ್ ತ್ರಿವಿಷ್ಟಿ ತ್ರಿರಾವೃತ್ಯ ಪರ್ಯೇತಿ ತ್ರಿರ್ಹಿ ಪರ್ಯಗ್ನಿಃ ಕ್ರಿಯತೇ ॥

ಪ್ರತಿಪದಾರ್ಥ

ಬರ್ಹಿಷಿ—ದರ್ಭಾಸನಗಳು । ಸ್ತೀರ್ಣೇ—ಹರಡಲ್ಪಟ್ಟು । ಅಗ್ನೌ—ಆಹವನೀಯರೂಪನಾದ ಅಗ್ನಿಯು । ಸಮಿಧಾನೇ— ಪ್ರಜ್ವಲಿತನಾಗಲು । ಅಧ್ವರ್ಯುಃ—ಯಜ್ಞಕ್ಕೆ ನೇತೃವಾದವನೂ । ಜುಜುಷಾಣಃ—ದೇವತೆಗಳನ್ನು ತೃಪ್ತಿಗೊಳಿಸುವವನೂ ಆದ ಅಧ್ವರ್ಯುವು (ಅಥವಾ ಅಗ್ನಿಯು) । ಊರ್ಧ್ವಃ—ಊರ್ಧ್ವಮುಖನಾಗಿ । ಅಸ್ಥಾತ್—ಎದ್ದು ನಿಲ್ಲುತ್ತಾನೆ । ಹೋತಾ—ಹೋಮಸಂಪಾದಕನೂ । ಪ್ರದಿವಃ—ಪುರಾತನನೂ । ಉರಾಣಃ—ಯಜ್ಞದ ವೃದ್ಧಿಕಾರಕನೂ ಆದ । ಅಗ್ನಿಃ—ಅಗ್ನಿಯು । ಪಶುಪಾ ನ—ಪಶುಗಳ ಪಾಲಕನಂತೆ । ತ್ರಿವಿಷ್ಟಿ—ಮೂರು ಸಲ । ಪರಿ ಏತಿ—ಸುತ್ತುತ್ತಾನೆ.

ಭಾವಾರ್ಥ

ಯಜ್ಞವೇದಿಕೆಯಲ್ಲಿ ದರ್ಭಾಸನಗಳು ಹರಡಲ್ಪಟ್ಟು ಆಹವನೀಯರೂಪನಾದ ಅಗ್ನಿಯು ಪ್ರಜ್ವಲಿತನಾಗಲು ಯಜ್ಞಕ್ಕೆ ನೇತೃವಾದವನೂ, ದೇವತೆಗಳನ್ನು ತೃಪ್ತಿಗೊಳಿಸುವವನೂ ಆದ ಅಧ್ವರ್ಯುವು ಊರ್ಧ್ವಮುಖನಾಗಿ ಎದ್ದು ನಿಲ್ಲುತ್ತಾನೆ. ಹೋಮದ ಸಂಪಾದಕನೂ, ಪುರಾತನನೂ, ಯಜ್ಞದ ವೃದ್ಧಿಕಾರಕನೂ ಆದ ಅಗ್ನಿಯು ಪಶುಗಳ ಪಾಲಕನಂತೆ ಮೂರು ಸಲ ಸುತ್ತುತ್ತಾನೆ.

CC-0. Jangamwadi Math Collection. Digitized by eGangotri

English Translation

When the sacred grass is strewn and the fire is kindled, the Adhwaryu rises, propitiating (the gods), and Agni, the offerer of the oblation, ancient and multiplying (the offering), thrice circumambulates (the victim) like a keeper of cattle.

—— :o: ——

ಸಂಹಿತಾಪಾಠಃ

ಪರಿ ತ್ಮನಾ ಮಿತದ್ರುರೇತಿ ಹೋತಾಗ್ನಿರ್ಮಂದ್ರೋ ಮಧುವಚಾ ಋತಾವಾ।
ದ್ರವಂತ್ಯಸ್ಯ ವಾಜಿನೋ ನ ಶೋಕಾ ಭಯಂತೇ ವಿಶ್ವಾ ಭುವನಾ
ಯದಭ್ರಾಟ್ ॥ ೫ ॥

ಪದಪಾಠಃ

ಪರಿ । ತ್ಮನಾ । ಮಿತಽದ್ರುಃ । ಏತಿ । ಹೋತಾ । ಅಗ್ನಿಃ । ಮಂದ್ರಃ । ಮಧುಽವಚಾಃ । ಋತಽವಾ ।
ದ್ರವಂತಿ । ಅಸ್ಯ । ವಾಜಿನಃ । ನ । ಶೋಕಾಃ । ಭಯಂತೇ । ವಿಶ್ವಾ । ಭುವನಾ । ಯತ್ । ಅಭ್ರಾಟ್ ॥

ಸಾಯಣಭಾಷ್ಯಂ

ಉಕ್ತಮೇವಾರ್ಥಂ ಸ್ಪಷ್ಟಯತಿ । ಅಯಂ ಹೋತಾ ಹೋಮನಿಷ್ಪಾದಕೋಽಗ್ನಿಸ್ತ್ಮನಾತ್ಮನಾ ಸ್ವರೂಪೇಣೈವ ಮಿತದ್ರುಃ ಪರಿಮಿತಗತಿಃ ಸನ್ ಪರ್ಯೇತಿ । ಪರಿತೋ ಗಚ್ಛತಿ ಪಶುಂ । ಕೀದೃಶೋಽಯಂ । ಮಂದ್ರೋ ಮಾದನೀಯೋ ಮೋದಯಿತಾ ವಾ ಮಧುವಚಾ ಮಧುರವಚನ ಋತಾವಾ ಯಜ್ಞವಾನ್ । ವಾಜಿನೋ ಹವಿಷ್ಮತೋಽಸ್ಯಾಗ್ನೇಃ ಶೋಕಾ ನ ದೀಪ್ತಯೋಽಪಿ । ನಶಬ್ದೋಽಪ್ಯರ್ಥೇ । ದ್ರವಂತಿ । ಗಚ್ಛಂತಿ ಪರಿತಃ । ಯದ್ವಾ । ನಕಾರ ಉಪಮಾರ್ಥೀಯಃ । ವಾಜಿನೋ ನ ಅಶ್ವಾ ಇವ ದ್ರವಂತೀತಿ ಯೋಜ್ಯಂ । ಯದ್ಯಸ್ಮಾದಯಮಭ್ರಾಟ್ । ಭ್ರಾಜತೇ । ತಸ್ಮಾದ್ವಿಶ್ವಾ ಭುವನಾ ಸರ್ವಾಣಿ ಭೂತಜಾತಾನಿ ಭಯಂತೇ । ಭೀತಾನಿ ಭವಂತಿ ॥

ಪ್ರತಿಪ್ರಧಾರ್ಥ

ಹೋತಾ—ಹೋಮಸಂಪಾದಕನೂ । ಮಂದ್ರಃ—ಹರ್ಷಕಾರಕನೂ । ಮಧುವಚಾಃ—ಮಧುರವಾದ ವಾಕ್ಕುಳ್ಳವನೂ । ಋತಾವಾ—ಯಜ್ಞವಂತನೂ ಆದ । ಅಗ್ನಿಃ—ಅಗ್ನಿಯು । ತ್ಮನಾ—ತನ್ನ ಸ್ವೇಚ್ಛಾಪ್ರವೃತ್ತಿ

CC-0. Jangamwadi Math Collection. Digitized by eGangotri

ಯಿಂದ । ಮಿತದ್ರುಃ—ಪರಿಮಿತವಾದ ಗತಿಯುಳ್ಳವನಾಗಿ । ಪರಿ ಏತಿ—ಸುತ್ತಲೂ ಸುತ್ತುತ್ತಾನೆ । ವಾಜಿನಃ—ಹವಿಷ್ಮಂತನಾದ । ಅಸ್ಯ—ಈ ಅಗ್ನಿಯ । ಶೋಕಾಃ ನ—ಪ್ರಭೆಗಳೂ ಸಹ । ದ್ರವಂತಿ—ಸುತ್ತಲೂ ಸುತ್ತುತ್ತವೆ । ಯತ್—ಯಾವ ಮಹಾತ್ಮ್ಯದಿಂದ । ಅಭ್ರಾಟ್—ಈ ಅಗ್ನಿಯು ಪ್ರಕಾಶಿಸುತ್ತಾನೆಯೋ (ಆ ಕಾರಣದಿಂದ) । ವಿಶ್ವಾ ಭುವನಾ – ಸಮಸ್ತ ಭೂತಜಾತಗಳೂ ಸಹ । ಭಯಂತೇ—ಭೀತಿಗೊಳ್ಳುತ್ತವೆ.

ಭಾವಾರ್ಥ

ಹೋಮಸಂಪಾದಕನೂ, ಹರ್ಷಕಾರಕನೂ, ಮಧುರವಾದ ವಾಕ್ಕುಳ್ಳವನೂ ಯಜ್ಞವಂತನೂ ಆದ ಅಗ್ನಿಯು ತನ್ನ ಸ್ವೇಚ್ಛಾಪ್ರವೃತ್ತಿಯಿಂದ ಪರಿಮಿತವಾದ ಗತಿಯುಳ್ಳವನಾಗಿ ಸುತ್ತಲೂ ಸುತ್ತುತ್ತಾನೆ. ಹವಿಷ್ಮಂತನಾದ ಈ ಅಗ್ನಿಯ ಪ್ರಭೆಗಳೂ ಸಹ ಸುತ್ತಲೂ ಸುತ್ತುತ್ತವೆ. ಯಾವ ಮಾಹಾತ್ಮ್ಯದಿಂದ ಈ ಅಗ್ನಿಯು ಪ್ರಕಾಶಿಸುತ್ತಾನೆಯೋ ಆ ಕಾರಣದಿಂದ ಸಮಸ್ತ ಭೂತಜಾತಗಳೂ ಸಹ ಭೀತಿಗೊಳ್ಳುತ್ತವೆ.

English Translation

Agni, the sacrificer, the exhilarator, the sweet-spoken, the object of sacrifice, moving measuredly, circumambulates ( the victim ) of his own (accord); the bright (rays) of him (fed) with (sacrificial) food, spread around; all the regions are alarmed when he blazes.

———

ಸಂಹಿತಾಪಾಠಃ

ಭದ್ರಾ ತೇ ಅಗ್ನೇ ಸ್ವನೀಕ ಸಂದೃಗ್ಘೋರಸ್ಯ ಸತೋ ವಿಷುಣಸ್ಯ ಚಾರುಃ ।
ನ ಯತ್ತೇ ಶೋಚಿಸ್ತಮಸಾ ವರಂತ ನ ಧ್ವಸ್ಮಾನಸ್ತನ್ವೀ೩ ರೇಪ ಆ ಧುಃ ॥

ಪದಪಾಠಃ

ಭದ್ರಾ । ತೇ । ಅಗ್ನೇ । ಸುಽಅನೀಕ । ಸಂಽದೃಕ್ । ಘೋರಸ್ಯ । ಸತಃ । ವಿಷುಣಸ್ಯ । ಚಾರುಃ ।
ನ । ಯತ್ । ತೇ । ಶೋಚಿಃ । ತಮಸಾ । ವರಂತ । ನ । ಧ್ವಸ್ಮಾನಃ । ತನ್ವಿ । ರೇಪಃ । ಆ । ಧುರಿತಿಧುಃ ॥ ೬ ॥

ಸಾಯಣಭಾಷ್ಯಂ

ಹೇ ಸ್ವನೀಕ ಶೋಭನಜ್ವಾಲಾಗ್ನೇ ಘೋರಸ್ಯ ಭೀತಜನಕಸ್ಯಾಪಿ ಸತೋ ವಿಷುಣಸ್ಯ ವಿಷ್ವಕ್ ಸರ್ವತೋ ವ್ಯಾಪ್ತಸ್ಯ ತೇ ತವ ಚಾರೂ ರಮಣೀಯಾ ಭದ್ರಾ ಸ್ತುತ್ಯಾ ಕಲ್ಯಾಣೀ ವಾ ಮೂರ್ತಿಃ

CC-0. Jangamwadi Math Collection. Digitized by eGangotri

ಸಂದೃಕ್ ಸಂದೃಷ್ಟಿಃ । ಸಮ್ಯಕ್ ದೃಶ್ಯಾ ಭವತೀತ್ಯರ್ಥಃ। ಯದ್ಯಸ್ಮಾತ್ತೇ ಶೋಚಿರ್ದೀಪ್ತಿಂ ತಮಸಾಂಧ-ಕಾರೇಣ ನ ವರಂತ । ವಾರಯಂತಿ ನಿಶಾಃ । ಯಸ್ಮಾಚ್ಚ ಧ್ವಸ್ಮಾನೋ ಧ್ವಂಸಕಾ ರಾಕ್ಷಸಾದಯಸ್ತೇ ತನ್ವಿ ತವ ಶರೀರೇ ರೇಪಃ ಪಾಪಂ ಧ್ವಂಸನಾದಿರೂಪಂ ನಾ ಧುಃ । ನ ದಧತಿ । ನ ಕುರ್ವಂತಿ । ಅತಃ ಸಂದೃ-ಗಿತಿ ಸಂಬಂಧಃ ॥

ಪ್ರತಿಪದಾರ್ಥ

ಸ್ವನೀಕ—ಮಂಗಳಕರವಾದ ಜ್ವಾಲೆಯುಳ್ಳ । ಅಗ್ನೇ—ಅಗ್ನಿಯೇ । ಯತ್—ಯಾವ ನಿನ್ನ ಮಹಾತ್ಮ್ಯೆದಿಂದ । ತೇ—ನಿನ್ನ । ಶೋಚಿಃ—ಕಾಂತಿಯನ್ನು । (ನಿಶಾ—ರಾತ್ರಿಯು) । ತಮಸಾ—ಅಂಧಕಾರದಿಂದ । ನ ವರಂತ—ಮುಚ್ಚಲಾಗುವುದಿಲ್ಲವೋ । ಧ್ವಸ್ಮಾನಃ—ನಾಶಕಾರಕರಾದ ರಾಕ್ಷಸರು । ತನ್ವಿ—ನಿನ್ನ ಶರೀರದಲ್ಲಿ । ರೇಪಃ—ನಾಶಕರವಾದ ಹಿಂಸಾಕೃತ್ಯವನ್ನು । ನ ಆಧುಃ—ಮಾಡಲಾಗುವುದಿಲ್ಲವೋ (ಆ ಕಾರಣದಿಂದ) । ಘೋ-ರಸ್ಯ ಸತಃ—ಭೀತಿಜನಕವಾಗಿರುವುದೂ । ವಿಷುಣಸ್ಯ—ಸರ್ವತ್ರ ವ್ಯಾಪ್ತವಾಗಿರುವುದೂ ಆದ । ತೇ—ನಿನ್ನ । ಸಂದೃಕ್—ದರ್ಶನವು । ಚಾರುಃ—ರಮಣೀಯವಾದುದೂ । ಭದ್ರಾ—ಕಲ್ಯಾಣಾತ್ಮಕವಾದುದೂ ಆಗಿರುತ್ತದೆ.

ಭಾವಾರ್ಥ

ಮಂಗಳಕರವಾದ ಜ್ವಾಲೆಯುಳ್ಳ ಅಗ್ನಿಯೇ, ಯಾವ ನಿನ್ನ ಮಾಹಾತ್ಮ್ಯದಿಂದ ನಿನ್ನ ಕಾಂತಿಯನ್ನು ನಿಶಿಯು ಅಂಧಕಾರದಿಂದ ಮುಚ್ಚಲಾಗುವುದಿಲ್ಲವೋ, ನಾಶಕಾರಕರಾದ ರಾಕ್ಷಸರು ನಿನ್ನ ನಾಶಕರವಾದ ಹಿಂಸಾಕೃತ್ಯವನ್ನು ಮಾಡಲಾಗುವುದಿಲ್ಲವೋ ಆದುದರಿಂದಲೇ ಭೀತಿಜನಕವಾಗಿರುವುದೂ, ಸರ್ವತ್ರವ್ಯಾಪ್ತವಾಗಿರುವುದೂ ಆದ ನಿನ್ನ ದರ್ಶನವು ರಮಣೀಯವೂ ಕಲ್ಯಾಣಾತ್ಮಕವೂ ಆಗಿರುತ್ತದೆ.

English Translation

Bright-shining Agni, beautiful and auspicious is the semblance of you, who are terrible and wide-spreading, for (the nights) hide not your splendour with darkness, nor do the malignant (spirits) inflict any injury on your person.

———

ಸಂಹಿತಾಪಾಠಃ

ನ ಯಸ್ಯ ಸಾತುರ್ಜನಿತೋರವಾರಿ ನ ಮಾತರಾಪಿತರಾ ನೂ ಚಿದಿಷ್ಟೌ ।
ಅಧಾ ಮಿತ್ರೋ ನ ಸುಧಿತಃ ಪಾವಕೋಽಗ್ನಿರ್ದೀದಾಯ ಮಾನುಷೀಷು ವಿಕ್ಷು ॥ ೭ ॥



CC-0. Jangamwadi Math Collection. Digitized by eGangotri

ಪದಪಾಠಃ

ನ । ಯಸ್ಯ । ಸಾತುಃ । ಜನಿತೋಃ । ಅವಾರಿ । ನ । ಮಾತರಾ । ಪಿತರಾ । ನು । ಚಿತ್ । ಇಷ್ಟೌ ।

ಅಧ । ಮಿತ್ರಃ । ನ । ಸುಽಧಿತಃ । ಪಾವಕಃ । ಅಗ್ನಿಃ । ದೀದಾಯ । ಮಾನುಷೀಷು । ವಿಕ್ಷು ॥ ೭ ॥

ಸಾಯಣಭಾಷ್ಯಂ

ಜನಿತೋರ್ಜನಯಿತುರ್ವೃಷ್ಟ್ಯುತ್ಪಾದಕಸ್ಯ ಯಸ್ಯ ವೈಶ್ವಾನರಸ್ಯ ಸಾತುಃ ಸನಿಃ ಪಶ್ವಾದಿಲಕ್ಷಣಂ ದಾನಂ ದೀಪ್ತಿರ್ವಾ ನಾವಾರಿ । ಕೇನಾಪಿ ನ ವಾರ್ಯತೇ । ಕಿಂಚ ಮಾತರಾ ಪಿತರಾ ಮಾತಾಪಿತರೌ ದ್ಯಾವಾಪೃಥಿವ್ಯೌ ಯಸ್ಯೇಷ್ಟೌ ಪ್ರೇಷಣೇ ನೂ ಚಿತ್ ಕ್ಷಿಪ್ರಮೇವ ನ ಪ್ರಭವತಃ । ಅಧಾಪಿ ಚ ಮಿತ್ರೋ ನ ಸಖೇವ ಸುಧಿತಃ ಸುತೃಪ್ತಃ ಪಾವಕಃ ಶೋಧಕೋಽಗ್ನಿರ್ಮಾನುಷೀಷು ಮನೋಃ ಸಂಬಂಧಿನೀಷು ವಿಕ್ಷು ಪ್ರಜಾಸು ದೀದಾಯ । ದೀಪ್ಯತೇ ॥ ದೀಪೀ ದೀಪ್ತೌ । ಪಕಾರಲೋಪಶ್ಛಾಂದಸಃ । ವ್ಯತ್ಯಯೇನ ಪರಸ್ಮೈಪದಂ । ಲಿಟ್ಯಭ್ಯಾಸಸ್ಯ ಹ್ರಸ್ವೇ ಕೃತೇ ತುಜಾದಿತ್ವಾದ್ದೀರ್ಘತ್ವಂ ॥

ಪ್ರತಿಪದಾರ್ಥ

ಜನಿತೋಃ—ವೃಷ್ಟ್ಯುತ್ಪಾದಕನಾದ । ಯಸ್ಯ—ಯಾವ (ಅದೇ) ವೈಶ್ವಾನರನ । ಸಾತುಃ—ದಾನವು (ಅಥವಾ ಪ್ರಭೆಯು) । ನ ಅವಾರಿ-ಯಾರಿಂದಲೂ ತಡೆಯಲ್ಪಡಲಾರದು । ಮಾತಾರಾ ಪಿತರಾ-ಜಗತ್ತಿಗೆ ಮಾತಾ ಪಿತೃಗಳಾದ ದ್ಯಾವಾಪೃಥಿವಿಗಳು । ಇಷ್ಟೌ—ಅಗ್ನಿ ಪ್ರೇಷಣಕಾರ್ಯದಲ್ಲಿ । ನೂ ಚಿತ್—ಶೀಘ್ರವಾಗಿ । ನ—ಶಕ್ತರಾಗುವುದಿಲ್ಲ । ಅಧ—ಮತ್ತು । ಮಿತ್ರಃ ನ—ಸ್ನೇಹಿತನಂತೆ । ಸುಧಿತಃ—ತೃಪ್ತನಾದವನೂ । ಪಾವಕಃ—ಶುದ್ಧಿ ಕಾರಕನೂ ಆದ । ಅಗ್ನಿಃ—ಅಗ್ನಿಯು । ಮಾನುಷೀಷು—ಮನುಷ್ಯರೂಪರಾದ । ವಿಕ್ಷು—ಪ್ರಜೆಗಳ ನಡುವೆ। ದೀದಾಯ—ಪ್ರಕಾಶಿಸುತ್ತಾನೆ.

ಭಾವಾರ್ಥ

ವೃಷ್ಟ್ಯುತ್ಪಾದಕನಾದ ವೈಶ್ವಾನರನ ಪ್ರಭೆಯು ಯಾರಿಂದಲೂ ತಡೆಯಲ್ಪಡಲಾರದು. ಜಗತ್ತಿಗೆ ಮಾತಾ ಪಿತೃಗಳಾದ ದ್ಯಾವಾಪೃಥಿವಿಗಳೂ ಸಹ ಅಗ್ನಿಪ್ರೇಷಣಕಾರ್ಯದಲ್ಲಿ ಶೀಘ್ರವಾಗಿ ಶಕ್ತರಾಗುವುದಿಲ್ಲ. ಸ್ನೇಹಿತನಂತೆ ತೃಪ್ತನಾದವನೂ ಶುದ್ಧಿಕಾರಕನೂ ಆದ ಅಗ್ನಿಯು ಮನುಷ್ಯರೂಪವಾದ ಪ್ರಜೆಗಳ ನಡುವೆ ಪ್ರಕಾಶಿಸುತ್ತಾನೆ.

## English Translation

Of whom, progenitor (of mankind), the benevolence is never checked; whose parents need not urge him to exertion; so that the well-satisfied, purifying Agni shines like a friend amongst men, the descendants of Manu

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ದ್ವಿರ್ಯಂ ಪಂಚ ಜೀಜನಂತ್ಸಂವಸಾನಾಃ ಸ್ವಸಾರೋ ಅಗ್ನಿಂ ಮಾನುಷೀಷು ವಿಕ್ಷು ।
ಉಷರ್ಬುಧಮಥರ್ಯೋ೩ನ ದಂತಂ ಶುಕ್ರಂ ಸ್ವಾಸಂ ಪರಶುಂ ನ ತಿಗ್ಮಂ॥

ಪದಪಾಠಃ

ದ್ವಿಃ । ಯಂ । ಪಂಚ । ಜೀಜನನ್ । ಸಂ್ಽವಸಾನಾಃ । ಸ್ವಸಾರಃ । ಅಗ್ನಿಂ । ಮಾನುಷೀಷು । ವಿಕ್ಷು ।
ಉಷಃಽಬುಧಂ । ಅಥರ್ಯಃ । ನ । ದಂತಂ । ಶುಕ್ರಂ । ಸು್ಽಆಸಂ । ಪರಶುಂ । ನ । ತಿಗ್ಮಂ ॥ ೮ ॥

ಸಾಯಣಭಾಷ್ಯಂ

ಮಾನುಷೀಷು ಮನೋಃ ಸಂಬಂಧಿನೀಷು ವಿಕ್ಷು ಪ್ರಜಾಸು ಸಂವಸಾನಾಃ ಸಂಗಚ್ಛಮಾನಾ ದ್ವಿಃ ಪಂಚ ದಶ ಸ್ವಸಾರೋಽಂಗುಲಯೋ ಯಮಗ್ನಿಂ ಜೀಜನನ್ । ಮಂಥನೇನೋದಪಾದಯನ್ ॥ ಜನೀ ಪ್ರಾದುರ್ಭಾವೇ । ಲುಙಿ ಛಾಂದಸತ್ವಾದಡಭಾವಃ ॥ ಈದೃಶ್ಯ ಅಂಗುಲಯಃ । ಅಥರ್ಯೋ ನ ಸ್ತ್ರಿಯ ಇವ । ಈದೃಶಮಗ್ನಿಂ । ಉಷರ್ಬುಧಮುಷಸಿ ಬುಧ್ಯಮಾನಂ ದಂತಂ ಹವಿಷಾಂ ಭಕ್ಷಕಂ ಶುಕ್ರಂ ರಶ್ಮಿಭಿರ್ದೀಪ್ಯಮಾನಂ ಸ್ವಾಸಂ ಶೋಭನಾಸ್ಯಂ ತಿಗ್ಮಂ ತೀಕ್ಷ್ಣಂ ಪರಶುಂ ನ ಪರಶುಮಿವ ರಕ್ಷಸಾಂ ಹಂತಾರಮಿತಿ ಶೇಷಃ ॥

ಪ್ರತಿಪದಾರ್ಥ

ಮಾನುಷೀಷು—ಮನುವಿಗೆ ಸಂಬಂಧಿಗಳಾದ । ವಿಕ್ಷು—ಪ್ರಜೆಗಳ ನಡುವೆ । ಸಂ ವಸಾನಾಃ—ಸೇರಿಕೊಂಡಿರುವುವೂ । ದ್ವಿಃ ಪಂಚ—ದಶಸಂಖ್ಯಾಕವಾದವೂ । ಅಥರ್ಯಃ ನ—ಸ್ತ್ರೀಯರಂತಿರುವುವೂ ಆದ । ಸ್ವಸಾರಃ—ಅಂಗುಲಿಗಳು । ಉಷರ್ಬುಧಂ—ಉಷಃಕಾಲದಲ್ಲಿ ಗೋಚರನಾಗುವವನೂ । ದಂತಂ—ಹವಿಸ್ಸನ್ನು ಭಕ್ಷಿಸುವವನೂ । ಶುಕ್ರಂ—ಪ್ರಕಾಶಮಾನನೂ । ಸ್ವಾಸಂ—ಕಾಂತಿಯುತವಾದ ಮುಖವುಳ್ಳವನೂ । ತಿಗ್ಮಂ—ತೀಕ್ಷ್ಣವಾದ । ಪರಶುಂ ನ—ಪರಶುವಿನಂತೆ ರಾಕ್ಷಸರನ್ನು ನಾಶಮಾಡುವವನೂ ಆದ । ಯಂ—ಯಾವ ಅದೇ ಅಗ್ನಿಯನ್ನು । ಜೀಜನನ್—ಉತ್ಪಾದನೆಮಾಡಿದರು.

ಭಾವಾರ್ಥ

ಮನುವಿಗೆ ಸಂಬಂಧಿಗಳಾದ ಪ್ರಜೆಗಳ ನಡುವೆ ಸೇರಿಕೊಂಡಿರುವುವೂ, ದಶಸಂಖ್ಯಾತವಾದವೂ, ಸ್ತ್ರೀಯರಂತಿರುವುವೂ ಆದ ಅಂಗುಲಿಗಳು ಉಷಃಕಾಲದಲ್ಲಿ ಗೋಚರನಾಗುವವನೂ ಹವಿಸ್ಸನ್ನು ಭಕ್ಷಿಸುವವನೂ ಪ್ರಕಾಶಮಾನನೂ, ಕಾಂತಿಯುತವಾದ ಮುಖವುಳ್ಳವನೂ, ತೀಕ್ಷ್ಣವಾದ ಕೊಡಲಿಯಂತೆ ರಾಕ್ಷಸರನ್ನು ನಾಶಮಾಡುವವನೂ ಆದ ಅಗ್ನಿಯನ್ನು ಉತ್ಪಾದನೆಮಾಡಿದರು.

CC-0. Jangamwadi Math Collection. Digitized by eGangotri

## English Translatiou

Agni, whom the twice five sisters dwelling amongst men, the descendants of Manu, have engendered, like females, (awaking) him at dawn, feeding on oblations, brilliant, of goodly aspect, and sharp as an axe.

---

### ಸಂಹಿತಾಪಾಠಃ

ತವ ತ್ಯೇ ಅಗ್ನೇ ಹರಿತೋ ಘೃತಸ್ನಾ ರೋಹಿತಾಸ ಋಜ್ವಂಚಃ ಸ್ವಂಚಃ ।

ಅರುಷಾಸೋ ವೃಷಣ ಋಜುಮುಷ್ಕಾ ಆ ದೇವತಾತಿಮಹ್ವಂತ ದಸ್ಮಾಃ ॥

### ಪದಪಾಠಃ

ತವ । ತ್ಯೇ । ಅಗ್ನೇ । ಹರಿತಃ । ಘೃತ್ಽಸ್ನಾಃ । ರೋಹಿತಾಸಃ । ಋಜುಽಅಂಚಃ । ಸುಽಅಂಚಃ ।

ಅರುಷಾಸಃ । ವೃಷಣಃ । ಋಜುಽಮುಷ್ಕಾಃ । ಆ । ದೇವಽತಾತಿಂ । ಅಹ್ವಂತ । ದಸ್ಮಾಃ ॥ ೯ ॥

### ಸಾಯಣಭಾಷ್ಯಂ

ಹೇ ಅಗ್ನೇ ತ್ಯೇ ತೇ ಪ್ರಸಿದ್ಧಾಸ್ತವ ಹರಿತಸ್ತ್ವತ್ಸಂಬಂಧಿನೋಽಶ್ವಾ ದೇವತಾತಿಮಸ್ಮದೀಯಂ ಯಾಗಂ ಪ್ರತ್ಯಾಹ್ವಂತ । ಋತ್ವಿಗ್ಭಿರಾಹೂಯಂತೇ ॥ ಲುಙಃ ಲಿಪಿಸಿಚಿಹ್ವಶ್ಚೇತ್ಯಙಾದೇಶಃ ॥ ಕೀದೃಶಾಃ । ಘೃತಸ್ನಾ ಘೃತಸ್ನುವೋ ಬಲಾತಿಶಯಾನ್ನಾಸಾಪುಟಾದಿಸ್ಥಾನೇಭ್ಯ ಉದಕಂ ಕ್ಷರಂತೋ ರೋಹಿತಾಸೋ ರೋಹಿತಾ ಲೋಹಿತವರ್ಣಾ ಋಜ್ವಂಚಃ । ಋಜ್ವಕುಟಿಲಮಂಚಂತಿ ಗಚ್ಛಂತೀತ್ಯೃಜ್ವಂಚಃ । ಸ್ವಂಚಃ ಸುಷ್ಠು ಗಚ್ಛಂತಃ । ಅರುಷಾಸ ಆರೋಚಮಾನಾ ವೃಷಣೋ ಯುವಾನೋ ವರ್ಷಿತಾರೋ ವಾ ॥ ನಾಷಪೂರ್ವಸ್ಯ ನಿಗಮ ಇತಿ ವಿಕಲ್ಪೇನ ದೀರ್ಘವಿಧಾನಾದತ್ರ ದೀರ್ಘಾಭಾವಃ ॥ ಋಜುಮುಷ್ಕಾಃ ಸಾಧನಮುಷ್ಕಾ ದಸ್ಮಾ ದರ್ಶನೀಯಾಃ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ತವ—ನಿನ್ನ । ತ್ಯೇ—ಪ್ರಸಿದ್ಧವಾದವೂ । ಘೃತಸ್ನಾಃ—ನೊರೆಯನ್ನು ಸುರಿಸುವುವೂ । ರೋಹಿತಾಸಃ—ಹೊಂಬಣ್ಣವುಳ್ಳವೂ । ಋಜ್ವಂಚಃ—ನೇರವಾದ ನಡಗೆಯುಳ್ಳವೂ । ಸ್ವಂಚಃ—ಶ್ರೇಷ್ಠವಾಗಿ ಸಂಚರಿಸುವುವೂ । ಅರುಷಾಸಃ—ಹೊಂಬಣ್ಣವುಳ್ಳವೂ । ವೃಷಣಃ—ಪ್ರಾಯದಿಂದ ಕೂಡಿದವೂ । ಋಜುಮುಷ್ಕಾಃ—ಶ್ರೇಷ್ಠವಾದ ಅಂಗವುಳ್ಳವೂ । ದಸ್ಮಾಃ—ಆಕರ್ಷಕವಾದ ನೋಟವುಳ್ಳವೂ ಆದ । ಹರಿತಃ—ಅಶ್ವಗಳು । ದೇವತಾತಿಂ—ದೇವಪೂಜಕವಾದ ಯಜ್ಞಕ್ಕೆ । ಆ ಅಹ್ವಂತ—ಕರೆಯಲ್ಪಡುತ್ತವೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಪ್ರಸಿದ್ಧವಾದವೂ, ನೊರೆಯನ್ನು ಸುರಿಸುವುವೂ, ಹೊಂಬಣ್ಣವುಳ್ಳವೂ, ನೇರವಾದ ನಡಗೆಯುಳ್ಳವೂ ಶ್ರೇಷ್ಠವಾಗಿ ಸಂಚರಿಸುವುವೂ, ಹೊಂಬಣ್ಣವುಳ್ಳವೂ, ಪ್ರಾಯದಿಂದ ಕೂಡಿದವೂ, ಶ್ರೇಷ್ಠವಾದ ಅಂಗವುಳ್ಳವೂ, ಆಕರ್ಷಕವಾದ ನೋಟವುಳ್ಳವೂ ಆದ ಅಶ್ವಗಳು ದೇವಪೂಜಕವಾದ ಯಜ್ಞಕ್ಕೆ ಕರೆಯಲ್ಪಡುತ್ತವೆ.

English Translation

Your horses, Agni, breathing foam, red-coloured, straight-going, well-paced, bright-shining, vigorous, well-membered, and of graceful form, are summoned to the worship of the gods.

———

ಸಂಹಿತಾಪಾಠಃ

ಯೇ ಹ ತ್ಯೇ ತೇ ಸಹಮಾನಾ ಅಯಾಸಸ್ತ್ವೇಷಾಸೋ ಅಗ್ನೇ ಅರ್ಚಯ-
ಶ್ಚರಂತಿ ।
ಶ್ಯೇನಾಸೋ ನ ದುವಸನಾಸೋ ಅರ್ಥಂ ತುವಿಷ್ವಣಸೋ ಮಾರುತಂ ನ
ಶರ್ಧಃ ॥ ೧೦ ॥

ಪದಪಾಠಃ

ಯೇ । ಹ । ತ್ಯೇ । ತೇ । ಸಹಮಾನಾಃ । ಅಯಾಸಃ । ತ್ವೇಷಾಸಃ । ಅಗ್ನೇ । ಅರ್ಚಯಃ । ಚರಂತಿ ।
ಶ್ಯೇನಾಸಃ । ನ । ದುವಸನಾಸಃ । ಅರ್ಥಂ । ತುವಿಽಸ್ವನಸಃ । ಮಾರುತಂ । ನ । ಶರ್ಧಃ ॥ ೧೦ ॥

ಸಾಯಣಭಾಷ್ಯಂ

ಹೇ ಅಗ್ನೇ ಯೇ ಹ ಖಲು ತ್ಯೇ ತೇ ಪ್ರಸಿದ್ಧಾಃ ಸಹಮಾನಾಃ ಶತ್ರೂನಭಿಭವಂತೋಽಯಾಸೋ ಗಮನಶೀಲಾಸ್ತ್ವೇಷಾಸೋ ದೀಪ್ತಾ ದುವಸನಾಸಃ ಪರಿಚರಣೀಯಾಸ್ತೇ ತ್ವದೀಯಾ ಅರ್ಚಯೋ ರಶ್ಮಯಃ ಶ್ಯೇನಾಸೋ ನ ಅಶ್ವಾ ಇವಾರ್ಥಂ ಗಂತವ್ಯಂ ಚರಂತಿ । ಗಚ್ಛಂತಿ । ಕೀದೃಶಾಃ । ಮಾರುತಂ ಶರ್ಧೋ ನ ಮರುತ್ಸಂಬಂಧೀ ಗಣ ಇವ ತುವಿಷ್ವಣಸಸ್ತುವಿಸ್ವನಾ ಅಧಿಕಧ್ವನಯೋ ಭವಂತಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯೇ ಹ—ಯಾವ ನಿನ್ನ । ತ್ಯೇ—ಪ್ರಸಿದ್ಧವಾದವೂ । ಸಹಮಾನಾಃ—ಶತ್ರುಗಳಿಂದ ಸೋಲಿಸಲ್ಪಡದಿರುವುವೂ । ಅಯಾಸಃ—ಸಂಚರಿಸುವ ಸ್ವಭಾವವುಳ್ಳವೂ । ತ್ವೇಷಾಸಃ—ಪ್ರಕಾಶ

CC-0. Jangamwadi Math Collection. Digitized by eGangotri

ಮಾನವಾದವೂ । ದುವಸನಾಸಃ—ಪರಿಚರ್ಯಾಕ್ರಿಯೆಯುಳ್ಳವೂ ಆಗಿರುವುವೋ । ತೇ—ಅಂತಹ । ಅರ್ಚಯಃ—ರಶ್ಮಿಗಳು । ಶ್ಯೇನಾಸಃ ನ—ಅಶ್ವಗಳಂತೆಯೂ । ಮಾರುತಂ ಶರ್ಧಃ ನ—ಮರುತ್ತುಗಳ ಗಣದಂತೆ । ತುವಿಷ್ವಣಸಃ—ಅಧಿಕವಾದ ಶಬ್ದಮಾಡುತ್ತಲೂ । ಅರ್ಥಂ—ಗಂತವ್ಯ ಪ್ರದೇಶವನ್ನು । ಚರಂತಿ—ಹೋಗಿ ಸೇರುತ್ತವೆ.

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಪ್ರಸಿದ್ಧವಾದವೂ, ಶತ್ರುಗಳಿಂದ ಸೋಲಿಸಲ್ಪಡದಿರುವುವೂ ಸಂಚರಿಸುವ ಸ್ವಭಾವವುಳ್ಳವೂ ಪ್ರಕಾಶಮಾನವಾದವೂ ಪರಿಚರ್ಯಾಕ್ರಿಯೆಯುಳ್ಳವೂ ಆದ ರಶ್ಮಿಗಳು ಅಶ್ವಗಳಂತೆಯೂ ಮರುತ್ತುಗಳ ಗಣದಂತೆ ಅಧಿಕವಾದ ಶಬ್ದಮಾಡುವುವಾಗಿಯೂ ಆಗಿ ತಮ್ಮ ಗಂತವ್ಯ ಪ್ರದೇಶವನ್ನು ಹೋಗಿ ಸೇರುತ್ತವೆ.

English Translation

Those, your rays, Agni, triumphant, wide-spreading, radiant, adorable, go like hawk-faced horses ( to their goal ), loud-sounding like the company of the Maruts.

ಸಂಹಿತಾಪಾಠಃ

ಅಕಾರಿ ಬ್ರಹ್ಮ ಸಮಿಧಾನ ತುಭ್ಯಂ ಶಂಸಾತ್ಯುಕ್ಥಂ ಯಜತೇ ವ್ಯೂ ಧಾಃ ।
ಹೋತಾರಮಗ್ನಿಂ ಮನುಷೋ ನಿ ಷೇದುರ್ನಮಸ್ಯಂತ ಉಶಿಜಃ ಶಂಸಮಾಯೋಃ ॥ ೧೧ ॥

ಪದಪಾಠಃ

ಅಕಾರಿ । ಬ್ರಹ್ಮ । ಸಂಽಇಧಾನ । ತುಭ್ಯಂ । ಶಂಸಾತಿ । ಉಕ್ಥಂ । ಯಜತೇ । ವಿ । ಊಂ ಇತಿ । ಧಾಃ ।
ಹೋತಾರಂ । ಅಗ್ನಿಂ । ಮನುಷಃ । ನಿ । ಸೇದುಃ । ನಮಸ್ಯಂತಃ । ಉಶಿಜಃ । ಶಂಸಂ । ಆಯೋಃ ॥೧೧॥

ಸಾಯಣಭಾಷ್ಯಂ

ಹೇ ಸಮಿಧಾನ ಸಮಿಧ್ಯಮಾನಾಗ್ನೇ ತುಭ್ಯಂ ತ್ವದರ್ಥಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕೃತಂ । ಹೋತೋಕ್ಥಂ ಶಸ್ತ್ರರೂಪಂ ಸ್ತೋತ್ರಂ ಶಂಸಾತಿ । ಶಂಸತಿ ॥ ಶನ್ಸು ಸ್ತುತೌ । ಲೇಟೋಽಡಾಟಾವಿತ್ಯಾಡಾಗಮಃ ॥ ತ್ವಾಂ ಯಜಮಾನೋ ಯಜತೇ । ಅತಃ ಕಾರಣಾದಸ್ಮಭ್ಯಂ ಧನಂ ವಿ ಧಾಃ । ವಿಧೇಹಿ ॥ ದಧಾತೇಶ್ಛಂದಸೇ ಲುಙಿ ಬಹುಲಂ ಛಂದಸೀತ್ಯಡಭಾವಃ । ಉ ಇತಿ ಪಾದಪೂರಣಃ ॥ ಕಿಂಚ

CC-0. Jangamwadi Math Collection. Digitized by eGangotri

ಆಯೋರ್ಮನುಷ್ಯಸ್ಯ ಶಂಸಂ ಶಂಸನೀಯಂ ಹೋತಾರಂ ದೇವಾನಾಮಾಹ್ವಾತಾರಮಗ್ನಿಂ ತ್ವಾಂ ನಮಸ್ಯಂತಃ ಪೂಜಯಂತ ಉಶಿಜಃ ಪಶ್ವಾದಿಲಕ್ಷಣಂ ಧನಂ ಕಾಮಯಮಾನಾ ಮನುಷೋ ಮನುಷ್ಯಾ ಋತ್ವಿಜೋ ನಿ ಷೇದುಃ । ಉಪಾವಿಶನ್ । ಸೇವಂತ ಇತ್ಯರ್ಥಃ ॥

ಪ್ರತಿಪದಾರ್ಥ

ಸಮಿಧಾನ—ಪ್ರಜ್ವಲಿತನಾದ ಅಗ್ನಿಯೇ । ತುಭ್ಯಂ—ನಿನ್ನನ್ನುದ್ದೇಶಿಸಿ। ಬ್ರಹ್ಮ—ಸ್ತುತಿಯು। ಅಕಾರಿ—ನಿರ್ಮಿತವಾಗಿದೆ । ಉಕ್ಥಂ—ಶಸ್ತ್ರಮಂತ್ರವನ್ನು । ಶಂಸತಿ—(ಹೋತೃವು) ಪಠಿಸುತ್ತಾನೆ । ಯಜತೇ—(ಯಜಮಾನನು) ಪೂಜಿಸುತ್ತಾನೆ, (ಆದುದರಿಂದ) । ವಿ ಧಾಃ—ಧನವನ್ನು ಒದಗಿಸಿಕೊಡು । ಆಯೋಃ—ಮಾನವನಿಗೆ । ಶಂಸಂ—ಪೂಜ್ಯನೂ । ಹೋತಾರಂ—ದೇವತೆಗಳನ್ನು ಕರೆಯುವವನೂ । ಅಗ್ನಿಂ—ಪೂಜ್ಯನೂ ಆದ ನಿನ್ನನ್ನು । ನಮಸ್ಯಂತಃ—ಪೂಜಿಸುತ್ತಾ । ಉಶಿಜಃ—ಪಶ್ವಾದಿಧನವನ್ನು ಅಪೇಕ್ಷಿಸುವ । ಮನುಷಃ—ಋತ್ವಿಕ್ಕುಗಳು । ನಿ ಷೇದುಃ—(ನಿನ್ನನ್ನು) ಸೇವಿಸುತ್ತಿದ್ದಾರೆ.

ಭಾವಾರ್ಥ

ಎಲೈ ಪ್ರಜ್ವಲಿತನಾದ ಅಗ್ನಿಯೇ, ನಿನ್ನನ್ನುದ್ದೇಶಿಸಿದ ಸ್ತುತಿಯು ನಿರ್ಮಿತವಾಗಿದೆ, ಶಸ್ತ್ರರೂಪವಾದ ಸ್ತುತಿಯನ್ನು ಹೋತೃವು ಪಠಿಸುತ್ತಿದ್ದಾನೆ. ಆದುದರಿಂದ ಧನವನ್ನು ಒದಗಿಸು. ಮಾನವನಿಗೆ ಪೂಜ್ಯನೂ ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಪೂಜ್ಯನೂ ಆದ ನಿನ್ನನ್ನು ಪೂಜಿಸುತ್ತಾ ಪಶ್ವಾದಿಧನವನ್ನು ಅಪೇಕ್ಷಿಸುವ ಋತ್ವಿಕ್ಕುಗಳು ನಿನ್ನನ್ನು ಸೇವಿಸುತ್ತಿದ್ದಾರೆ.

English Translation

Well-kindled Agni, for you the prayer has been composed: may (the priest) propitiate (you) by (his) praise: the (sacrificer) offers worship: bestow upon us manifold (wealth): desiring (riches), men sit down adoring Agni, the invoker of the gods, the glorifier of mankind.



## ಏಳನೆಯ ಸೂಕ್ತವು.

ಸಾಯಣಭಾಷ್ಯಂ

ಅಯಮಿಹೇತ್ಯೇಕಾದಶರ್ಚಂ ಸಪ್ತಮಂ ಸೂಕ್ತಂ ವಾಮದೇವಸ್ಯಾರ್ಷಮಾಗ್ನೇಯಂ । ಆದ್ಯಾ ಜಗತೀ ದ್ವಿತೀಯಾದ್ಯಾಃ ಪಂಚಾನುಷ್ಟುಭಃ ಶಿಷ್ಟಾಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ಅಯಮಿಹಾದಾ ಜಗತೀ ಪಂಚಾನುಷ್ಟುಭ ಇತಿ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಅಗ್ನಿಪ್ರಣಯನೇಽಯಮಿಹೇತಿ ವೈಶ್ಯಸ್ಯ ಪ್ರತಿಪತ್ । ತಥಾ ಚ ಸೂತ್ರಿತಂ । ಅಯಮಿಹ ಪ್ರಥಮೋ ಧಾಯಿ ಧಾತೃಭಿರಿತಿ ತು ರಾಜನ್ಯವೈಶ್ಯಯೋರಾದ್ಯೇ । ಆ. ೨-೧೭ । ಇತಿ ॥

CC-0. Jangamwadi Math Collection. Digitized by eGangotri

ಅನುವಾದವು—**ಅಯಮಿಹ** ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಅಗ್ನಿಯು ದೇವತೆಯು ಈ ಸೂಕ್ತದ ಮೊದಲನೆಯ ಋಕ್ಕು ಜಗತೀಛಂದಸ್ಕವು. ಎರಡನೆಯ ಋಕ್ಕಿನಿಂದ ಆರನೆಯ ಋಕ್ಕಿನವರೆಗೆ ಅನುಷ್ಟುಪ್ ಛಂದಸ್ಸು, ಉಳಿದ ಋಕ್ಕುಗಳು ತ್ರಿಷ್ಟುಪ್‌ಛಂದಸ್ಕವು. ಅನುಕ್ರಮಣಿಕೆಯಲ್ಲಿ—**ಅಯಮಿಹಾದೌ ಜಗತೀ ಪಂಚಾನುಷ್ಟುಭಃ** ಎಂದು ಹೇಳಿರುವುದು. ಸೂಕ್ತವಿನಿಯೋಗವು ಲೈಂಗಿಕವು. ಅಗ್ನಿಪ್ರಣಯನವೆಂಬ ಕರ್ಮದಲ್ಲಿ (ಯಜ್ಞದಲ್ಲಿ ಅಗ್ನಿಯನ್ನು ಮಥನಮಾಡಿ ಉತ್ಪತ್ತಿಮಾಡಿದ ಸ್ಥಳದಿಂದ ಉತ್ತರವೇದಿಗೆ ಒಯ್ಯುವ ಕರ್ಮಕ್ಕೆ ಅಗ್ನಿಪ್ರಣಯನವೆಂದು ಹೆಸರು). **ಅಯಮಿಹ** ಎಂಬ ಈ ಋಕ್ಕನ್ನು ವೈಶ್ಯಯಜಮಾನನು ಪ್ರತಿಪತ್ ಎಂಬ ಋಕ್ಕನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—**ಅಯಮಿಹ ಪ್ರಥಮೋ ಧಾಯಿ ಧಾತೃಭಿರಿತಿ ತು ರಾಜನ್ಯವೈಶ್ಯಯೋರಾದ್ಯೇ** ಎಂಬ ಸೂತ್ರದಿಂದ (ಆ. ೨-೧೭) ವಿವೃತವಾಗಿರುವುದು.

---

## ಸೂಕ್ತ—೭

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೭ ॥

ಅಷ್ಟಕ—೩॥ ಅಧ್ಯಾಯ—೫ ॥ ವರ್ಗ—೬, ೭ ॥

॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

ಋಷಿಃ—ವಾಮದೇವಃ ॥

ದೇವತಾ—ಅಗ್ನಿಃ ॥

ಛಂದಃ—೧ ಜಗತೀ ; ೨-೬. ಅನುಷ್ಟುಪ್ । ೭-೧೧. ಜಗತೀ ॥



ಸಂಹಿತಾಪಾಠಃ

ಅ॒ಯಮಿ॒ಹ ಪ್ರ॑ಥ॒ಮೋ ಧಾ॑ಯಿ ಧಾ॒ತೃಭಿ॒ರ್ಹೋತಾ॒ ಯಜಿ॑ಷ್ಠೋ ಅಧ್ವ॒ರೇ-

ಷ್ವೀಡ್ಯಃ॑ ।

ಯಮಪ್ನ॑ವಾನೋ॒ ಭೃಗ॑ವೋ ವಿರುರು॒ಚುರ್ವನೇ॑ಷು ಚಿ॒ತ್ರಂ ವಿ॒ಭ್ವಂ॑

ವಿ॒ಶೇವಿ॑ಶೇ ॥ ೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಅಯಂ । ಇಹ । ಪ್ರಥಮಃ । ಧಾಯಿ । ಧಾತೃಽಭಿಃ । ಹೋತಾ । ಯಜಿಷ್ಠಃ । ಅಧ್ವರೇಷು । ಈಡ್ಯಃ ।

ಯಂ । ಅಪ್ನವಾನಃ । ಭೃಗವಃ । ವಿಽರುರುಚುಃ । ವನೇಷು । ಚಿತ್ರಂ । ವಿಽಭ್ವಂ । ವಿಶೇಽವಿಶೇ ॥ ೧ ॥

ಸಾಯಣಭಾಷ್ಯಂ

ಧಾತೃಭಿರ್ಯಜ್ಞಾರ್ಥಂ ಕರ್ಮ ಕುರ್ವದ್ಭಿರಧ್ವರ್ಯುಭಿರಿಹಾಸ್ಮಿನ್ಯಜ್ಞೇ ಹೋತಾ ದೇವಾನಾ-ಮಾಹ್ವಾತಾ ಯಜಿಷ್ಠೋಽತಿಶಯೇನ ಯಷ್ಟಾಧ್ವರೇಷು ಯಾಗೇಷ್ವೀಡ್ಯ ಋತ್ವಿಗ್ಭಿಃ ಸ್ತೂಯಮಾನಃ ಪ್ರಥಮಃ ಸರ್ವೇಷಾಂ ದೇವಾನಾಂ ಮುಖ್ಯೋಽಯಮಾಹವನೀಯಾದಿಸ್ಥಾನೇಷು ಪ್ರತ್ಯಕ್ಷೇಣೋಪಲ-ಭ್ಯಮಾನೋಽಗ್ನಿರ್ಧಾಯಿ । ಅಧಾಯಿ । ನಿಹಿತಃ ॥ ದಧಾತೇಃ ಕರ್ಮಣಿ ಲುಙ್ । ಬಹುಲಂ ಛಂದಸ್ಯ-ಮಾಙ್ಯೋಗೇಽಪೀತ್ಯಡಭಾವಃ । ತಿಙ್ಙತಿಙ ಇತಿ ನಿಘಾತಃ ॥ ಅಯಮಗ್ನಿರಿತ್ಯುಕ್ತಂ । ಕೋಽಸಾವಗ್ನಿ-ರಿತ್ಯತ ಆಹ । ಅಪ್ನವಾನೋ ಭೃಗುಸಂಬಂಧೀ ಕಶ್ಚಿದೃಷಿಃ ಸ ಚಾನ್ಯೇ ಭೃಗವಶ್ಚ ವನೇಷ್ವರಣ್ಯೇಷು ಚಿತ್ರಂ ದಾವಾಗ್ನಿರೂಪೇಣ ಬಹುಧಾ ದರ್ಶನೀಯಂ ವಿಶೇ ವಿಶೇ । ವೀಪ್ಸಯಾ ಸರ್ವಜನವ್ಯಾಪ್ತಿ-ರ್ಗೃಹ್ಯತೇ । ಸರ್ವಸ್ಯೈ ವಿಶಃ ಪ್ರಜಾಯಾ ವಿಭ್ವಂ ವಿಭುಮೀಶ್ವರಂ ಯಂ ದೇವಾನಾಂ ಹವಿರ್ವಾಹಕತ್ವೇನ ಪ್ರಸಿದ್ಧಮಗ್ನಿಂ ವಿರುರುಚುಃ । ದೀಪ್ತಿಯುಕ್ತಂ ಕುರ್ವಂತಿ ಸ್ಮ । ಯಮಿತಿ ಯಚ್ಛಬ್ದಸ್ಯಾಯಮಿತೀ-ದಂಶಬ್ದೇನ ಸಂಬಂಧಃ ॥

ಪ್ರತಿಪದಾರ್ಥ

ಅಪ್ನವಾನಃ—ಅಪ್ನವಾನನೆಂಬ ಋಷಿಯೂ । ಭೃಗವಃ—ಭೃಗುವಂಶೋತ್ಪನ್ನರಾದ ಇತರ ಋಷಿಗಳೂ । ವನೇಷು—ಅರಣ್ಯಗಳಲ್ಲಿ । ಚಿತ್ರಂ— ದಾವಾಗ್ನಿರೂಪದಲ್ಲಿ ದರ್ಶನೀಯನಾದವನೂ । ವಿಶೇ ವಿಶೇ—ಸಕಲ ಪ್ರಜೆಗಳಿಗೂ । ವಿಭ್ವಂ—ಈಶ್ವರನೂ ಆದ । ಯಂ—ಯಾವ ಅಗ್ನಿಯನ್ನು । ವಿರುರುಚುಃ—ಪ್ರಜ್ವಲಿತನನ್ನಾಗಿ ಮಾಡಿದರೋ ಅಂತಹ। ಹೋತಾ—ಹೋತೃರೂಪನೂ । ಯಜಿಷ್ಠಃ—ಅತ್ಯಂತ ಪೂಜ್ಯತಮನೂ। ಅಧ್ವರೇಷು—ಯಾಗಗಳಲ್ಲಿ । ಈಡ್ಯಃ—ಸ್ತುತಿಸಲ್ಪಡುವವನೂ । ಪ್ರಥಮಃ—ದೇವತೆಗಳಿಗೆಲ್ಲಾ ಪ್ರಥಮನೂ ಆದ । ಅಯಂ—ಈ ಅಗ್ನಿಯು । ಧಾತೃಭಿಃ—ಯಜ್ಞಕರ್ತರಾದ ಅಧ್ವರ್ಯುಗಳಿಂದ । ಇಹ—ಈ ಯಜ್ಞದಲ್ಲಿ । ಧಾಯಿ—ಸ್ಥಾಪಿತನಾಗಿದ್ದಾನೆ.

ಭಾವಾರ್ಥ

ಅಪ್ನವಾನನೆಂಬ ಋಷಿಯೂ ಭೃಗುವಂಶೋತ್ಪನ್ನರಾದ ಇತರ ಋಷಿಗಳೂ ಅರಣ್ಯಗಳಲ್ಲಿ ದಾವಾಗ್ನಿರೂಪದಲ್ಲಿ ದರ್ಶನೀಯನಾದವನೂ ಸಕಲ ಪ್ರಜೆಗಳಿಗೂ ಈಶ್ವರನೂ ಆದ ಯಾವ ಅಗ್ನಿಯನ್ನು ಪ್ರಜ್ವಲಿತನನ್ನಾಗಿ ಮಾಡಿದರೋ ಅಂತಹ ಹೋತೃರೂಪನೂ ಅತ್ಯಂತ ಪೂಜ್ಯತಮನೂ ಯಾಗಗಳಲ್ಲಿ ಸ್ತುತಿಸಲ್ಪಡುವವನೂ ದೇವತೆಗಳಿಗೆಲ್ಲಾ ಪ್ರಥಮನೂ ಆದ ಈ ಅಗ್ನಿಯು ಯಜ್ಞಕರ್ತರಾದ ಅಧ್ವರ್ಯುಗಳಿಂದ ಈ ಯಜ್ಞದಲ್ಲಿ ಸ್ಥಾಪಿತನಾಗಿದ್ದಾನೆ.

CC-0. Jangamwadi Math Collection. Digitized by eGangotri

## English Translation

This invoker of the gods and minister of frequent worship, who is to be glorified at sacrifices, has been placed first (of the gods) by the performers of the rite: Agni whom Apnavana and other Bhrigus lighted in the woods for the sake of all men, marvellous (in his acts), and sovereign (over all).

### ವಿಶೇಷವಿಷಯಗಳು

ಅಪ್ನವಾನಃ—ಅಪ್ನವಾನ ಎಂಬ ಋಷಿಯು ಭೃಗುವಂಶೋತ್ಪನ್ನನೆಂಬ ಒಬ್ಬ ಋಷಿಯೆಂದು ಭಾಷ್ಯಕಾರರು ಹೇಳಿದಾರೆ. ಈ ಋಷಿಯ ಹೆಸರು ಋಗ್ವೇದದಲ್ಲಿ ಪ್ರಕೃತ ಋಕ್ಕಿನಲ್ಲಿಯೂ,

ಔರ್ವಭೃಗುವಚ್ಛುಚಿಮಪ್ನವಾನವದಾ ಹುವೇ । ಅಗ್ನಿಂ ಸಮುದ್ರವಾಸಸಂ ॥

( ಋ. ಸಂ. ೮-೧೦೨-೪ ).

ಎಂಬ ಋಕ್ಕಿನಲ್ಲಿಯೂ ಪಠಿತವಾಗಿರುವುದು. ತೈತ್ತಿರೀಯ ಸಂಹಿತೆಯಲ್ಲಿಯೂ ಇದೇ ಮಂತ್ರವು ಉಕ್ತವಾಗಿರುವುದು. ಭೃಗುವಂಶೋತ್ಪನ್ನನಾದ ಅಪ್ನವಾನ ಎಂಬ ಋಷಿಯು ಅಗ್ನಿಯನ್ನು ಆಹ್ವಾನಮಾಡಿದಂತೆ ಆಹ್ವಾನಮಾಡುವೆನು ಎಂದು ಅದೇ ವಂಶದ ಪ್ರಯೋಗ ಎಂಬ ಋಷಿಯು ಇಲ್ಲಿ ಹೇಳಿರುವನು. ಈ ಋಷಿಯು ಪ್ರಸಿದ್ಧವಾದ ಋಷಿಯಾಗಿದ್ದರೂ ಇವನ ವಿಷಯವಾಗಿ ಹೆಚ್ಚು ವಿವರಣೆಯು ತಿಳಿಯಲವಕಾಶವಿಲ್ಲ.

---

### ಸಂಹಿತಾಪಾಠಃ

ಅಗ್ನೇ ಕದಾ ತ ಆನುಷಗ್ಭುವದ್ದೇವಸ್ಯ ಚೇತನಂ ।

ಅಧಾ ಹಿ ತ್ವಾ ಜಗೃಭ್ರಿರೇ ಮರ್ತಾಸೋ ವಿಕ್ಷ್ವೀಡ್ಯಂ ॥ ೨ ॥

### ಪದಪಾಠಃ

ಅಗ್ನೇ । ಕದಾ । ತೇ । ಆನುಷಕ್ । ಭುವತ್ । ದೇವಸ್ಯ । ಚೇತನಂ ।

ಅಧ । ಹಿ । ತ್ವಾ । ಜಗೃಭ್ರಿರೇ । ಮರ್ತಾಸಃ । ವಿಕ್ಷು । ಈಡ್ಯಂ ॥ ೨ ॥

### ಸಾಯಣಭಾಷ್ಯಂ

ಅಗ್ನೇ ಕದಾ ತ ಇತಿ। ಪ್ರಾತರನುವಾಕಾಶ್ವಿನಶಸ್ತ್ರಯೋರಾಗ್ನೇಯೇ ಕ್ರತಾವಾನುಷ್ಟುಭೇ ಛಂದಸ್ಯಗ್ನೇ ಕದಾ ತ ಇತ್ಯಾದ್ಯಾಃ ಪಂಚರ್ಚಃ । ಸೂತ್ರಿತಂ ಚ । ಅಗ್ನೇ ಕದಾ ತ ಇತಿ ಪಂಚ । ಆ. ೪. ೧೩ । ಇತಿ ॥

CC-0. Jangamwadi Math Collection. Digitized by eGangotri

ಹೇ ಅಗ್ನೇ ಅಥಾತಃ ಕಾರಣಾದ್ದೇವಸ್ಯ ದ್ಯೋತಮಾನಸ್ಯ ತೇ ತವ ಸಂಬಂಧಿ ಚೇತನಂ ತೇಜಃ ಕದಾನುಷಕ್ ಅನುಷಕ್ತಂ ಭುವತ್ । ಭವೇತ್ ॥ ಲೇಟ್ಯಡಾಗಮಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ ॥ ಅತಃ ಕಾರಣಾದಿತ್ಯುಕ್ತಂ । ಕಸ್ಮಾದ್ಧೇತೋರಿತ್ಯುಚ್ಯ-ತೇ । ಹಿ ಯಸ್ಮಾತ್ಕಾರಣಾನ್ಮರ್ತಾಸೋ ಮನುಷ್ಯಾ ವಿಕ್ಷು ವಿಡ್ಭಿಃ ಪ್ರಜಾಭಿರೀಡ್ಯಂ ಸ್ತುತ್ಯಂ ತ್ವಾ ತ್ವಾಂ ಜಗೃಭ್ರಿರೇ । ಜಗೃಹಿರೇ । ಗೃಹ್ಣಂತಿ ॥ ಗೃಹೇರ್ಧಾತೋರ್ಲಿಟಿ ಹೃಗ್ರಹೋರ್ಭ ಇತಿ ಭತ್ವಂ । ಬಹುಲಂ ಛಂದಸೀತಿ ರುಡಾಗಮಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ, । ಹಿ—ಯಾವ ನಿನ್ನ ಮಾಹಾತ್ಮ್ಯೆಯಿಂದ । ಮರ್ತಾಸಃ—ಮಾನವರು । ವಿಕ್ಷು—ಪ್ರಜೆಗಳ ನಡುವೆಯಲ್ಲಿ । ಈಡ್ಯಂ—ಸ್ತುತ್ಯನಾದ। ತ್ವಾ—ನಿನ್ನನ್ನು । ಜಗೃಭ್ರಿರೇ—ಆರಿಸಿವಹಿಸಿದ್ದಾರೋ। ಅಥ—ಆ ಕಾರಣದಿಂದ । ದೇವಸ್ಯ—ಪ್ರಕಾಶಮಾನನಾದ । ತೇ—ನಿನ್ನ । ಚೇತನಂ—ತೇಜಸ್ಸು । ಕದಾ—ಯಾವಾಗ । ಅನುಷಕ್—ಪ್ರಕಟಿತವಾಗಿ । ಭುವತ್—ಆಗುತ್ತದೆ.

ಭಾವಾರ್ಥ

ಎಲೈ ಅಗ್ನಿಯೇ, ಯಾವ ನಿನ್ನ ಮಾಹಾತ್ಮ್ಯೆಯಿಂದ ಮಾನವರು ಪ್ರಜೆಗಳ ನಡುವೆಯಲ್ಲಿ ಸ್ತುತ್ಯನಾದ ನಿನ್ನನ್ನು ವಹಿಸಿದ್ದಾರೋ ಆ ಕಾರಣದಿಂದ ಪ್ರಕಾಶಮಾನನಾದ ನಿನ್ನ ತೇಜಸ್ಸು ಯಾವಾಗ ಪ್ರಕಟಿತವಾಗುತ್ತದೆ?

English Translation

When, Agni, is the light of you, bright-shining, to be manifested? for therefore have mortals accepted you as to be worshipped amongst mankind.

ವಿಶೇಷವಿಷಯಗಳು

ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಮಾಡುವಾಗ ಆಗ್ನೇಯಕ್ರತು ಸಂಬಂಧವಾದ ಅನುಷ್ಟುಪ್ ಛಂದಸ್ಸಿನ ಋಕ್ಕುಗಳಿಗಾಗಿ ಅಗ್ನೇ ಕದಾ ತೇ ಎಂದು ಮೊದಲಾಗುವ ಈ ಸೂಕ್ತದ ಐದು ಋಕ್ಕುಗಳ ವಿನಿಯೋಗ ವಿರುವುದೆಂದು ಆಶ್ವಲಾಯನಸ್ರೌತಸೂತ್ರದ—ಅಗ್ನೇ ಕದಾ ತ ಇತಿ ಪಂಚ ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

———

ಸಂಹಿತಾಪಾಠಃ

ಋತಾವಾನಂ ವಿಚೇತಸಂ ಪಶ್ಯಂತೋ ದ್ಯಾಮಿವ ಸ್ತೃಭಿಃ ।

ವಿಶ್ವೇಷಾಮಧ್ವರಾಣಾಂ ಹಸ್ಕರ್ತಾರಂ ದಮೇದಮೇ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಋತಽವಾನಂ । ವಿಽಚೇತಸಂ । ಪಶ್ಯಂತಃ । ದ್ಯಾಂಽಇವ । ಸ್ತೃಽಭಿಃ ।

ವಿಶ್ವೇಷಾಂ । ಅಧ್ವರಾಣಾಂ । ಹಸ್ಕರ್ತಾರಂ । ದಮೇಽದಮೇ ॥ ೩ ॥

ಸಾಯಣಭಾಷ್ಯಂ

ಋತಾವಾನಮುಮಾಯಿನಂ ವಿಚೇತಸಂ ವಿಶಿಷ್ಟಜ್ಞಾನಂ ಸ್ತೃಭಿರ್ನಕ್ಷತ್ರೈಃ ಪರಿವೃತಂ ದ್ಯಾಮಿವ। ವಿಸ್ಫುಲಿಂಗೈಃ ಸಮೇತಂ ವಿಶ್ವೇಷಾಂ ಸರ್ವೇಷಾಮುಧ್ವರಾಣಾಂ ಯಜ್ಞಾನಾಂ ಹಸ್ಕರ್ತಾರಂ ಪ್ರಭಾಸಕಂ ವೃದ್ಧೇಃ ಕರ್ತಾರಂ ವಾಗ್ನಿಂ ಪಶ್ಯಂತೆ ಋತ್ವಿಗಾದಯೋ ದಮೇ ದಮೇ ಸರ್ವಸ್ಮಿನ್ಯಜ್ಞಗೃಹೇ ಜಗೃಭ್ರಿರ ಇತಿ ಪೂರ್ವೇಣ ಸಂಬಂಧಃ ॥

ಪ್ರತಿಪದಾರ್ಥ

ಋತಾವಾನಂ—ಸತ್ಯವಂತನೂ । ವಿಚೇತಸಂ—ವಿಶಿಷ್ಟವಾದ ಪ್ರಜ್ಞೆಯುಳ್ಳವನೂ । ಸ್ತೃಭಿಃ—ನಕ್ಷತ್ರಗಳಿಂದ ಕೂಡಿದ । ದ್ಯಾಮಿವ—ಅಂತರಿಕ್ಷದಂತೆ । ವಿಶ್ವೇಷಾಂ—ಸಮಸ್ತವಾದ। ಅಧ್ವರಾಣಾಂ—ಯಜ್ಞಗಳಿಗೂ। ಹಸ್ಕರ್ತಾರಂ—ಪ್ರಕಾಶವನ್ನುಂಟುಮಾಡುವವನೂ ಆದ ಅಗ್ನಿಯನ್ನು । ಪಶ್ಯಂತಃ—ವೀಕ್ಷಿಸುತ್ತಾ । ದಮೇ ದಮೇ—ಪ್ರತಿಯೊಂದು ಯಜ್ಞಗೃಹದಲ್ಲಿಯೂ. (ಋತ್ವಿಗಾದಿಗಳು ವಹಿಸುತ್ತಾರೆ).

ಭಾವಾರ್ಥ

ಸತ್ಯವಂತನೂ ವಿಶಿಷ್ಟವಾದ ಪ್ರಜ್ಞೆಯುಳ್ಳವನ್ನೂ, ನಕ್ಷತ್ರಗಳಿಂದ ಕೂಡಿದ ಅಂತರಿಕ್ಷದಂತೆ ಸಮಸ್ತವಾದ ಯಜ್ಞಗಳಿಗೂ ಪ್ರಕಾಶವನ್ನುಂಟುಮಾಡುವವನೂ ಆದ ಅಗ್ನಿಯನ್ನು ಋತ್ವಿಗಾದಿಗಳು ವೀಕ್ಷಿಸುತ್ತಾ ಪ್ರತಿಯೊಂದು ಯಜ್ಞಗೃಹದಲ್ಲಿಯೂ ವಹಿಸುತ್ತಾರೆ.

English Translation

Contemplating you in every dwelling, truthful, intelligent, (brilliant with sparks) like the sky with stars, the perfecter of all sacrifices.

———

ಸಂಹಿತಾಪಾಠಃ

ಆಶುಂ ದೂತಂ ವಿವಸ್ವತೋ ವಿಶ್ವಾ ಯಶ್ಚರ್ಷಣೀರಭಿ ।

ಆ ಜಭ್ರುಃ ಕೇತುಮಾಯವೋ ಭೃಗವಾಣಂ ವಿಶೇವಿಶೇ ॥ ೪ ॥

CC-0. Jangamwadi Math Collection. Digitized by eGangotri

### ಪದಪಾಠಃ

ಆಶುಂ । ದೂತಂ । ವಿವಸ್ವತಃ । ವಿಶ್ವಾಃ । ಯಃ । ಚರ್ಷಣೀಃ । ಅಭಿ ।

ಆ । ಜಭ್ರುಃ । ಕೇತುಂ । ಆಯವಃ । ಭೃಗವಾಣಂ । ವಿಶೇऽವಿಶೇ ॥ ೪ ॥

### ಸಾಯಣಭಾಷ್ಯಂ

ಯೋऽಗ್ನಿರ್ವಿಶ್ವಾಶ್ಚರ್ಷಣೀಃ ಸರ್ವಾಃ ಪ್ರಜಾ ಅಭಿ ಭವತಿ ಆಯವೋ ಮನುಷ್ಯಾಃ । ಆಯವ ಇತಿ ಮನುಷ್ಯನಾಮ ಆಯವೋ ಯದವ ಇತಿ ಮನುಷ್ಯನಾಮಸು ಪಾಠಾತ್ । ಆಶುಂ ಕ್ಷಿಪ್ರಗಾಮಿನಂ ವಿವಸ್ವತೋ ಮನುಷ್ಯಸ್ಯ ಯಜಮಾನಸ್ಯ ದೂತಂ । ವಿವಸ್ವತ ಇತಿ ಮನುಷ್ಯನಾಮೇದಂ । ಕೇತುಂ ಪ್ರಜ್ಞಾಪಕಂ ಭೃಗವಾಣಂ ಭೃಗುವದಾಚರಂತಂ । ದೀಪ್ಯಮಾನಮಿತ್ಯರ್ಥಃ ॥ ಸರ್ವಪ್ರಾತಿಪದಿಕೇಭ್ಯಃ ಕ್ವಿಬ್ವಕ್ತವ್ಯ ಇತಿ ಕ್ವಿಪ್ । ತದಂತಾಲ್ಲಟೋ ವ್ಯತ್ಯಯೇನ ಶಾನಚ್ । ಅದುಪದೇಶಾಲ್ಲಸಾರ್ವಧಾತು-ಕಾನುದಾತ್ತತ್ವೇ ಪ್ರಾಪ್ತೇ ವೃಷಾದೇರಾಕೃತಿಗಣತ್ವಾದಾದ್ಯುದಾತ್ತತ್ವಂ ॥ ತಮಗ್ನಿಂ ವಿಶೇ ವಿಶೇ ಸರ್ವಸ್ಯೈ ಪ್ರಜಾಯಾ ಆ ಜಭ್ರುಃ । ಆಜಹ್ರುಃ ॥ ಹೃಗ್ರಹೋರ್ಭ ಇತಿ ಭತ್ವಂ ॥

### ಪ್ರತಿಪದಾರ್ಥ

ಯಃ—ಯಾವ ಅದೇ ಅಗ್ನಿಯು । ವಿಶ್ವಾಃ—ಸಮಸ್ತವಾದ । ಚರ್ಷಣೀಃ—ಪ್ರಜೆಗಳಿಗೂ । ಅಭಿ—ಪ್ರಭುವಾಗಿದ್ದಾನೆಯೋ (ಅಂತಹ)। ಆಶುಂ—ಕ್ಷಿಪ್ರಗಾಮಿಯಾದವನೂ। ವಿವಸ್ವತಃ—ಯಜಮಾನನಿಗೆ। ದೂತಂ-(ದೇವತೆಗಳನ್ನು ಕರೆಯುವ) ದೂತನೂ । ಕೇತುಂ—ಜ್ಞಾನದಾಯಕನೂ । ಭೃಗವಾಣಂ—ಪ್ರಕಾಶಮಾನನೂ ಆದ ಅಗ್ನಿಯನ್ನು । ವಿಶೇವಿಶೇ—ಪ್ರತಿಯೊಂದು ಯಜ್ಞಗೃಹದಲ್ಲಿಯೂ । ಆಯವಃ—ಯಜ್ಞಕರ್ತರಾದ ಮಾನವರು । ಆ ಜಭ್ರುಃ—ಕರೆತಂದಿದ್ದಾರೆ.

### ಭಾವಾರ್ಥ

ಅಗ್ನಿಯು ಸಮಸ್ತವಾದ ಪ್ರಜೆಗಳಿಗೂ ಪ್ರಭುವಾಗಿದ್ದಾನೆ. ಅಂತಹ ಪ್ರಭುವಾದವನೂ, ಕ್ಷಿಪ್ರಗಾಮಿಯಾದವನೂ, ಯಜಮಾನನಿಗೆ ದೇವತೆಗಳನ್ನು ಕರೆಯುವ ದೂತನೂ, ಜ್ಞಾನದಾಯಕನೂ, ಪ್ರಕಾಶಮಾನನೂ ಆದ ಅಗ್ನಿಯನ್ನು ಪ್ರತಿಯೊಂದು ಯಜ್ಞಗೃಹದಲ್ಲಿಯೂ ಯಜ್ಞಕರ್ತರಾದ ಮಾನವರು ಕರೆತಂದಿದ್ದಾರೆ.

### English Translation

Men have brought, for the sake of all people, the swift messenger of the worshipper (to the gods), who (rules) over all mankind, the manifester, the resplendent.

——— :o: ———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ತಮೀಂ ಹೋತಾರಮಾನುಷಕ್ ಚಿಕಿತ್ವಾಂಸಂ ನ ಷೇದಿರೇ ।
ರಣ್ವಂ ಪಾವಕಶೋಚಿಷಂ ಯಜಿಷ್ಠಂ ಸಪ್ತ ಧಾಮಭಿಃ ॥ ೫ ॥

ಪದಪಾಠಃ

ತಂ । ಈಂ । ಹೋತಾರಂ । ಆನುಷಕ್ । ಚಿಕಿತ್ವಾಂಸಂ । ನಿ । ಸೇದಿರೇ ।
ರಣ್ವಂ । ಪಾವಕಽಶೋಚಿಷಂ । ಯಜಿಷ್ಠಂ । ಸಪ್ತ । ಧಾಮಽಭಿಃ ॥ ೫ ॥

ಸಾಯಣಭಾಷ್ಯಂ

ಋತ್ವಿಗಾದಯೋ ಮನುಷ್ಯಾ ಆನುಷಕ್. ಆನುಪೂರ್ವ್ಯೇಣ ಹೋತಾರಂ ದೇವಾನಾಮಾಹ್ವಾತಾರಂ ಚಿಕಿತ್ವಾಂಸಂ ಜಾನಂತಂ ॥ ಕಿತ ಜ್ಞಾನೇ । ಲಿಟಃ ಕ್ವಸುಃ । ದ್ವಿರ್ಭಾವಹಲಾದಿಶೇಷಚುತ್ವದೀರ್ಘಾಃ । ಪ್ರತ್ಯಯಸ್ವರಃ ॥ ತಮೀಂ ತಮಿಮಮಗ್ನಿಂ ನಿ ಷೇದಿರೇ । ನಿಷಾದಯಂತಿ ಸ್ಮ । ಕೀದೃಶಂ । ರಣ್ವಂ ರಮಣೀಯಂ ಪಾವಕಶೋಚಿಷಂ ಶೋಧಕದೀಪ್ತಿಂ ಯಜಿಷ್ಠಂ ಯಷ್ಟೃತಮಂ ಸಪ್ತ ಸಪ್ತಭಿರ್ಧಾಮಭಿಸ್ತೇಜೋಭಿರ್ಯುಕ್ತಂ ॥

ಪ್ರತಿಪ್ರಧಾರ್ಥ

ಹೋತಾರಂ—ದೇವತೆಗಳನ್ನು (ಯಜ್ಞಕ್ಕೆ) ಕರೆಯುವವನೂ । ಚಿಕಿತ್ವಾಂಸಂ—ಪ್ರಾಜ್ಞನಾದವನೂ । ರಣ್ವಂ—ರಮಣೀಯವಾದ ಆಕಾರವುಳ್ಳವನೂ । ಪಾವಕಶೋಚಿಷಂ—ಶುದ್ಧಿಕಾರಕವಾದ ಪ್ರಕಾಶವುಳ್ಳವನೂ । ಯಜಿಷ್ಠಂ—ಪೂಜ್ಯತಮನೂ (ಅನೇಕ ಯಜ್ಞಕರ್ತನೂ) । ಸಪ್ತ ಧಾಮಭಿಃ—ಸಪ್ತಸಂಖ್ಯಾಕವಾದ ತೇಜಸ್ಸುಗಳೊಡನೆ ಕೂಡಿದವನೂ ಆದ । ತಮೀಂ—ಆದೇ ಅಗ್ನಿಯನ್ನು । ಆನುಷಕ್—ಅವನ ಸ್ಥಾನ ಕ್ರಮವನ್ನನುಸರಿಸಿ। ನಿ ಷೇದಿರೇ—(ಋತ್ವಿಕ್ಕುಗಳು) ಸ್ಥಾಪಿಸುತ್ತಾರೆ.

ಭಾವಾರ್ಥ

ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ, ಪ್ರಾಜ್ಞನೂ ರಮಣೀಯವಾದ ಆಕಾರವುಳ್ಳವನೂ, ಶುದ್ಧಿಕಾರಕವಾದ ಪ್ರಕಾಶವುಳ್ಳವನೂ, ಪೂಜ್ಯತಮನೂ, ಸಪ್ತಸಂಖ್ಯಾಕವಾದ ತೇಜಸ್ಸುಗಳೊಡನೆ ಕೂಡಿದವನೂ ಆದ ಅದೇ ಅಗ್ನಿಯನ್ನು ಅವನ ಸ್ಥಾನಕ್ರಮವನ್ನನುಸರಿಸಿ ಋತ್ವಿಕ್ಕುಗಳು ಸ್ಥಾಪಿಸುತ್ತಾರೆ.

## English Translation

They (the worshippers) have seated him in his due order, the invoker (of the gods) the intelligent, the agreeable, the purifyingly-radiant, the performer of frequent sacrifice, (brilliant) with seven flames.

CC-0. Jangamwadi Math Collection. Digitized by eGangotri

### ವಿಶೇಷವಿಷಯಗಳು

ಸಪ್ತ ಧಾಮಭಿಃ—ಅಗ್ನಿಗೆ ಕಾಳೀ ಕರಾಳೀ ಎಂದು ಪ್ರಸಿದ್ಧವಾದ ಏಳು ಜ್ವಾಲೆಗಳಿವೆ. ಅಂತಹ ಜ್ವಾಲೆಗಳಿಂದ ಎಂದಭಿಪ್ರಾಯವು.

---

### ಸಂಹಿತಾಪಾಠಃ

ತಂ ಶಶ್ವತೀಷು ಮಾತೃಷು ವನ ಆ ವೀತಮಶ್ರಿತಂ ।

ಚಿತ್ರಂ ಸಂತಂ ಗುಹಾ ಹಿತಂ ಸುವೇದಂ ಕೂಚಿದರ್ಥಿನಂ ॥ ೬ ॥

### ಪದಪಾಠಃ

ತಂ । ಶಶ್ವತೀಷು । ಮಾತೃಷು । ವನೇ । ಆ । ವೀತಂ । ಅಶ್ರಿತಂ ।

ಚಿತ್ರಂ । ಸಂತಂ । ಗುಹಾ । ಹಿತಂ । ಸುऽವೇದಂ । ಕೂಚಿತ್ऽಅರ್ಥಿನಂ ॥ ೬ ॥

### ಸಾಯಣಭಾಷ್ಯಂ

ಶಶ್ವತೀಷು ಬಹ್ವೀಷು ಮಾತೃಷ್ವಪ್ಸು । ತಾಃ ಸಸ್ಯಾದಿನಿರ್ಮಾತೃಕತ್ವಾನ್ಮಾತರ ಇತ್ಯುಚ್ಯಂತೇ । ವನ ಆ ವೃಕ್ಷಸಮೂಹೇ ಚ । ಆಕಾರಶ್ಚಾರ್ಥೇ । ಸಂತಂ ವಿದ್ಯಮಾನಂ ವೀತಂ ಕಾಂತಮಶ್ರಿತಂ ಪ್ರಾಣಿಭಿರ್ದಾಹಭಯಾದಸೇವಿತಂ । ದುರಾಸದಮಿತ್ಯರ್ಥಃ । ಚಿತ್ರಂ ಚಾಯನೀಯಂ ಗುಹಾ ಗುಹಾಯಾಂ ಹಿತಂ ನಿಹಿತಂ ಸುವೇದಂ ಸುವಿಜ್ಞಾನಂ ಸುಧನಂ ವಾ ಕೂಚಿದರ್ಥಿನಂ ಕ್ವಾಪಿ ಹವಿಷ್ಯರ್ಥಿನಂ ಸಮಿದಾಜ್ಯಪುರೋಡಾಶಾದಿ ಹವಿಃ ಸ್ವೀಕುರ್ವಂತಂ ॥ ಕ್ವೇತ್ಯತ್ರ ವಕಾರಸ್ಯ ಛಾಂದಸೇ ಸಂಪ್ರಸಾರಣೇ ಪರಪೂರ್ವತ್ವೇ ಚ ಹಲ ಇತಿ ದೀರ್ಘತ್ವಂ ॥ ಏವಂಭೂತಮಗ್ನಿಂ ನಿಷೇದಿರ ಇತಿ ಪೂರ್ವೇಣ ಸಂಬಂಧಃ ॥

### ಪ್ರತಿಪದಾರ್ಥ

ಶಶ್ವತೀಷು—ಬಹುಪ್ರಕಾರವಾದ । ಮಾತೃಷು—ಮಾತೃರೂಪವಾದ ಉದಕಗಳಲ್ಲಿಯೂ । ವನೇ ಆ—ವೃಕ್ಷಸಮೂಹಗಳಲ್ಲಿಯೂ । ಸಂತಂ—ಅಡಗಿರತಕ್ಕವನೂ । ವೀತಂ—ಆಕರ್ಷಕನಾದವನೂ । ಅಶ್ರಿತಂ—(ಎಲ್ಲರಿಂದಲೂ) ಸೇವಿಸಲ್ಪಡುವವನೂ (ಅಥವಾ ಸಮೀಪಿಸಲು ಸಾಧ್ಯವಿಲ್ಲದವನೂ) । ಚಿತ್ರಂ—ರಮ್ಯವಾದ ರೂಪವುಳ್ಳವನೂ। ಗುಹಾ—ಗುಹೆಯಲ್ಲಿ । ಹಿತಂ—ನಿಹಿತನಾದವನೂ । ಸುವೇದಂ—ಶ್ರೇಷ್ಠವಾದ ಧನವುಳ್ಳವನೂ । ಕೂಚಿದರ್ಥಿನಂ—ಹವಿಸ್ಸನ್ನು ಸ್ವೀಕರಿಸುವವನೂ ಆದ ಅಗ್ನಿಯನ್ನು (ಋತ್ವಿಗಾದಿಗಳು ಸ್ಥಾಪಿಸಿದ್ದಾರೆ).

CC-0. Jangamwadi Math Collection. Digitized by eGangotri

ಭಾವಾರ್ಥ

ಮಾತೃಸ್ಥಾನೀಯವಾದ ಉದಕಗಳಲ್ಲಿಯೂ, ವೃಕ್ಷಗಳಲ್ಲಿಯೂ ಅಡಗಿರತಕ್ಕವನೂ, ಆಕರ್ಷಕನಾದವನೂ, ಎಲ್ಲರಿಂದಲೂ ಸೇವಿಸಲ್ಪಡುವವನೂ ರಮ್ಯವಾದ ರೂಪವುಳ್ಳವನೂ, ಗುಹೆಯಲ್ಲಿ ನಿಹಿತನಾದವನೂ, ಶ್ರೇಷ್ಠವಾದ ಧನವುಳ್ಳವನೂ, ಹವಿಸ್ಸನ್ನು ಸ್ವೀಕರಿಸುವವನೂ ಆದ ಅಗ್ನಿಯನ್ನು ಋತ್ವಿಗಾದಿಗಳು ಸ್ಥಾಪಿಸಿದ್ದಾರೆ.

English Translation

Him, abiding in the maternal (water) and in the woods, loved, yet unapproached, wonderful, hidden in a cave, endowed with knowledge, seeking (oblations) from any quarter.

---

ಸಂಹಿತಾಪಾಠಃ

ಸಸಸ್ಯ ಯದ್ವಿಯುತಾ ಸಸ್ಮಿನ್ನೂಧನ್ನೃತಸ್ಯ ಧಾಮನ್ರಣಯಂತ ದೇವಾಃ ।
ಮಹಾँ ಅಗ್ನಿರ್ನಮಸಾ ರಾತಹವ್ಯೋ ವೇರಧ್ವರಾಯ ಸದಮಿದೃತಾವಾ ॥

ಪದಪಾಠಃ

ಸಸಸ್ಯ । ಯತ್ । ವಿಽಯುತಾ । ಸಸ್ಮಿನ್ । ಊಧನ್ । ಋತಸ್ಯ । ಧಾಮನ್ । ರಣಯಂತ । ದೇವಾಃ ।
ಮಹಾನ್ । ಅಗ್ನಿಃ । ನಮಸಾ । ರಾತಽಹವ್ಯಃ । ವೇಃ । ಅಧ್ವರಾಯ । ಸದಂ । ಇತ್ । ಋತಽವಾ ॥೭॥

ಸಾಯಣಭಾಷ್ಯಂ

ಪ್ರಾತರನುವಾಕಾಶ್ವಿನಶಸ್ತ್ರಯೋಸ್ತ್ರೈಷ್ಟುಭೇ ಛಂದಸಿ ಸಸಸ್ಯ ಯದ್ವಿಯುತೇತ್ಯಾದ್ಯಾಃ ಪಂಚರ್ಚಃ। ಸೂತ್ರಿತಂ ಚ । ಸಸಸ್ಯ ಯದ್ವಿಯುತೇತಿ ಪಂಚ । ಆ. ೪-೧೩ । ಇತಿ ॥

ಯದ್ಯಮಗ್ನಿಂ ದೇವಾಃ ಸ್ತೋತಾರಃ ಸಸಸ್ಯ ಸ್ವಪ್ನಸ್ಯ ವಿಯುತಾ ವಿಯುತೇ ವಿಯೋಗೇ । ಉಷಸೀತ್ಯರ್ಥಃ। ಋತಸ್ಯೋದಕಸ್ಯ ಧಾಮನ್ ಧಾಮನಿ ಸ್ಥಾನೇ ಸಸ್ಮಿನ್ ಸರ್ವಸ್ಮಿನ್ನೂಧನ್ನೂಧನಿ ಯಜ್ಞೇ ರಣಯಂತ । ರಮಯಂತಿ । ಸ್ತೋತ್ರೈರಿತಿ ಶೇಷಃ । ಮಹಾನ್ಪ್ರಭೂತೋ ನಮಸಾ ನಮಸ್ಕಾರೇಣ ರಾತಹವ್ಯೋ ದತ್ತಹವಿಷ್ಕ ಋತಾವಾ ಸತ್ಯವಾನ್ ಸೋಽಗ್ನಿಃ ಸದಮಿತ್ಸದೈವಾಧ್ವರಾಯಾಧ್ವರಂ ಯಜಮಾನೈಃ ಕೃತಂ ಯಜ್ಞಂ ॥ ಸುಪಾಂ ಸುಪೋ ಭವಂತೀತಿ ವ್ಯಕ್ತವ್ಯಂ । ಮ. ೭-೧-೩೯ । ಇತಿ ವಚನಾದತ್ರ ದ್ವಿತೀಯಾರ್ಥೇ ಚತುರ್ಥೀ ॥ ವೇಃ । ವೇತ್ತಿ । ಜಾನಾತಿ । ಯದ್ವಾ । ದೇವಾ ಇಂದ್ರಾದಯಃ

CC-0. Jangamwadi Math Collection. Digitized by eGangotri

ಸಸಸ್ಯ ಋತ್ವಿಗ್ಭಿಃ ಸೇವ್ಯಸ್ಯ ಯದ್ಯಸ್ಯಾಗ್ನೇರ್ವಿಯುತಾ ವಿಶಿಷ್ಟೇ ಸಸ್ಮಿನ್ ಭಜನೀಯ ಋತಸ್ಯ ಸತ್ಯಸ್ಯ ಧಾಮನ್ ಧಾಮನಿ ಯೋನಾವೂಧನ್ನೂಧನಿ ಯಜ್ಞೇ ರಣಯಂತ । ರಮಯಂತೇ । ಮಹಾನ್ಪ್ರ-ಭೂತೋ ನಮಸಾ ಹವಿಷಾ ರಾತಹವ್ಯೋ ದತ್ತಹವಿಷ್ಕ ಋತಾವಾ ಸತ್ಯವಾನ್ ಸೋಽಗ್ನಿರಧ್ವರಾಯ ಯಜ್ಞಾರ್ಥಂ ಸದಮಿತ್ಯದೈವ ವೇಃ । ಗಂತಾ ಭವತಿ । ಅಧ್ವರಾಯ ಯಜ್ಞಂ ವೇಃ ಕಾಮಯತೇ ವಾ ॥

### ಪ್ರತಿಪದಾರ್ಥ

ಯಂ— ಯಾವ ಅಗ್ನಿಯನ್ನು । ದೇವಾಃ—ಸ್ತೋತೃಗಳು । ಸಸಸ್ಯ—ಸ್ವಪ್ನದ (ನಿದ್ರಾವಸ್ಥೆಯ) । ವಿಯುತಾ—ನಾಶಕಾಲದಲ್ಲಿ (ಉಷಃಕಾಲದಲ್ಲಿ) । ಋತಸ್ಯ—ಉದಕದ । ಧಾಮನ್—ಸಮೀಪದಲ್ಲಿ । ಸಸ್ಮಿನ್ ಊಧನ್—ಸಮಸ್ತ ಯಜ್ಞಕಾಲದಲ್ಲಿಯೂ । ರಣಯಂತೆ—ಆರಾಧಿಸುತ್ತಾರೋ ಅಂತಹವನೂ । ಮಹಾನ್—ಬೃಹದಾಕಾರವುಳ್ಳವನೂ । ನಮಸಾ—ಸ್ತುತಿಪೂರ್ವಕವಾಗಿ । ರಾತಹವ್ಯಃ—ಹವಿಸ್ಸನ್ನು ಅರ್ಪಿಸಲ್ಪಡತಕ್ಕವನೂ । ಋತಾವಾ—ಸತ್ಯವಂತನೂ ಆದ । ಅಗ್ನಿಃ—ಅಗ್ನಿಯು । ಸದಮಿತ್—ಯಾವಾಗಲೂ । ಅಧ್ವರಸ್ಯ—ಯಜ್ಞವನ್ನು । ವೇಃ—ಅರಿಯುತ್ತಾನೆ.

### ಭಾವಾರ್ಥ

ಯಾವ ಅಗ್ನಿಯನ್ನು ಸ್ತೋತೃಗಳು ಉಷಃಕಾಲದಲ್ಲಿ ಉದಕದ ಸಮೀಪದಲ್ಲಿ ಸಮಸ್ತ ಯಜ್ಞಕಾಲದಲ್ಲೂ ಆರಾಧಿಸುತ್ತಾರೆಯೋ ಅಂತಹವನೂ, ಬೃಹದಾಕಾರವುಳ್ಳವನೂ, ಸ್ತುತಿಪೂರ್ವಕವಾಗಿ ಹವಿಸ್ಸನ್ನು ಅರ್ಪಿಸಲ್ಪಡತಕ್ಕವನೂ ಸತ್ಯವಂತನೂ ಆದ ಅಗ್ನಿಯು ಯಾವಾಗಲೂ ಯಜ್ಞವನ್ನು ಅರಿಯುತ್ತಾನೆ.

### English Translation

Whom, when they desist from slumber, the devout propitiate in the abode of water at every sacrifice : the mighty Agni, to whom oblations are to be offered with reverence, who, truthful always, accepts the sacrifice.

### ವಿಶೇಷವಿಷಯಗಳು

ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಿಗಾಗಿ ಈ ಸೂಕ್ತದ—ಸಸಸ್ಯ ಯದ್ವಿಯುತಾ ಎಂದು ಮೊದಲಾಗುವ ಐದು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಸಸಸ್ಯ ಯದ್ವಿಯುತೇತಿ ಪಂಚ ಎಂಬ ಸೂತ್ರದಿಂದ (ಆ. ೮-೧೩) ವಿವೃತವಾಗಿರುವುದು.

ಈ ಋಕ್ಕಿಗೆ ಸಾಯಣರು ಇನ್ನೊಂದು ವಿಧವಾಗಿಯೂ ಅರ್ಥ ವಿವರಣೆಮಾಡಿದಾರೆ—ಇಂದ್ರಾದಿದೇವತೆಗಳು ಋತ್ವಿಕ್ಕುಗಳಿಂದ ನೆರವೇರಿಸಲ್ಪಡುವುದೂ, ಅಗ್ನಿಯು ಮುಖ್ಯಪಾತ್ರವಿರುವುದೂ ಆದ ಯಜ್ಞದಲ್ಲಿ ರಮಿಸುತ್ತಾರೆ. ಆ ಯಜ್ಞದಲ್ಲಿ ಮಹಾಮಹಿಮನಾದ ಅಗ್ನಿಯು ಯಜಮಾನನಿಂದ ಕೊಡಲ್ಪಟ್ಟ ಹವಿಸ್ಸನ್ನು ಸ್ವೀಕರಿಸುವುದಕ್ಕಾಗಿ ಯಜ್ಞಭೂಮಿಗೆ ಯಾವಾಗಲೂ ಬರುವನು ಮತ್ತು ಯಜ್ಞವನ್ನೂ ಸಹ ಅಪೇಕ್ಷಿಸುವನು.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವೇರಧ್ವರಸ್ಯ ದೂತ್ಯಾನಿ ವಿದ್ವಾನುಭೇ ಅಂತಾ ರೋದಸೀ ಸಂಚಿಕಿತ್ವಾನ್ ।
ದೂತ ಈಯಸೇ ಪ್ರದಿವ ಉರಾಣೋ ವಿದುಷ್ಟರೋ ದಿವ ಆರೋಧನಾನಿ ॥

ಪದಪಾಠಃ

ವೇಃ । ಅಧ್ವರಸ್ಯ । ದೂತ್ಯಾನಿ । ವಿದ್ವಾನ್ । ಉಭೇ ಇತಿ । ಅಂತರಿತಿ । ರೋದಸೀ ಇತಿ । ಸಂಽಚಿಕಿತ್ವಾನ್ ।

ದೂತಃ । ಈಯಸೇ । ಪ್ರಽದಿವಃ । ಉರಾಣಃ । ವಿದುಃಽತರಃ । ದಿವಃ । ಆಽರೋಧನಾನಿ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ವಿದ್ವಾನ್ ಸರ್ವಂ ಜಾನಾನಸ್ತ್ವಮಧ್ವರಸ್ಯ ಯಜ್ಞಸ್ಯ ಸಂಬಂಧೀನಿ ದೂತ್ಯಾನಿ ದೂತಕರ್ಮಾಣಿ ವೇಃ । ವೇತ್ಸಿ ಕಾಮಯಸೇ ವಾ । ಯದ್ವಾ । ವೇರಿತಿ ಯಜ್ಞವಿಶೇಷಣಂ । ವೇರ್ಯಜಮಾನಸ್ಯಾಭೀಷ್ಟಫಲಜನಕಸ್ಯಾಧ್ವರಸ್ಯ ಯಾಗಸ್ಯ ಸಂಬಂಧೀನಿ ದೂತ್ಯಾನಿ ದೂತಕರ್ಮಾಣಿ ವಿದ್ವಾನ್ ಜಾನನ್ ಉಭೇ ರೋದಸೀ ಉಭಯೋ ರೋದಸ್ಯೋರ್ದ್ಯಾವಾಪೃಥಿವ್ಯೋರಂತರ್ಮಧ್ಯೇ ಸ್ಥಿತಮಂತರಿಕ್ಷಂ ಸಂಚಿಕಿತ್ವಾನ್ ಸಮ್ಯಕ್ ಜಾನನ್ ಪ್ರದಿವಃ ಪುರಾಣಃ । ಪುರಾಣಾನಾಮೇದಂ ಪ್ರತ್ನಂ ಪ್ರದಿವ ಇತಿ ಪುರಾಣನಾಮಸು ಪಾಠಾತ್ । ಉರಾಣೋಽಲ್ಪಮಪಿ ಹವಿರುರು ಬಹುಕುರ್ವಾಣಃ । ಉರಾಣ ಉರು ಕುರ್ವಾಣ ಇತಿ ಯಾಸ್ಕೇನೋಕ್ತತ್ವಾತ್ । ವಿದುಷ್ಟರೋ ವಿದ್ವತ್ತರೋ ದೇವಾನಾಂ ದೂತಸ್ತ್ವಂ ದಿವಃ ಸ್ವರ್ಗಸ್ಯಾರೋಧನಾನ್ಯಾರೋಹಣಾನಿ । ಆರೋಹಣಾರ್ಹಾಣಿ ಸ್ಥಾನಾನೀತ್ಯರ್ಥಃ । ದೇವಾನಾಂ ಹವೀಂಷ್ಯರ್ಪಯಿತುಮೀಯಸೇ । ಗಚ್ಛಸಿ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ವಿದ್ವಾನ್—ಸರ್ವಜ್ಞನೂ । ಅಧ್ವರಸ್ಯ—ಯಜ್ಞಸಂಬಂಧವಾದ । ದೂತ್ಯಾನಿ—ದೂತಕರ್ಮಗಳನ್ನು । ವೇಃ—ತಿಳಿದವನಾಗಿಯೂ । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಅಂತಃ—ಅವುಗಳ ನಡುವೆ ಇರುವ ಅಂತರಿಕ್ಷವನ್ನೂ । ಸಂಚಿಕಿತ್ವಾನ್—ಪೂರ್ಣವಾಗಿ ಅರಿತವನಾಗಿಯೂ । ಪ್ರದಿವಃ—ಪ್ರಾಚೀನವಾಗಿದ್ದು । ಉರಾಣಃ—(ಸ್ವಲ್ಪವಾದ ಹವಿಸ್ಸನ್ನೂ) ಪ್ರಭೂತವಾಗಿರುವಂತೆ ತಿಳಿದವನಾಗಿಯೂ । ವಿದುಷ್ಟರಃ—ಅಧಿಕವಾದ ಜ್ಞಾನವುಳ್ಳವನಾಗಿಯೂ । ದೂತಃ—ದೇವದೂತನಾಗಿಯೂ ಇರುವ ನೀನು । ದಿವಃ—ದೇವಲೋಕದ । ಆರೋಧನಾನಿ—ಆರೋಹಣಸ್ಥಾನಗಳನ್ನು । ಈಯಸೇ—ಹತ್ತಿ ಸಂಚರಿಸುತ್ತೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಸರ್ವಜ್ಞನೂ, ಯಜ್ಞಸಂಬಂಧವಾದ ದೂತಕರ್ಮಗಳನ್ನು ತಿಳಿದವನೂ, ದ್ಯಾವಾಪೃಥಿವಿಗಳನ್ನೂ ಅವುಗಳ ನಡುವೆ ಇರುವ ಅಂತರಿಕ್ಷವನ್ನೂ ಪೂರ್ಣವಾಗಿ ಅರಿತವನೂ, ಅತ್ಯಂತ ಪ್ರಾಚೀನನಾಗಿದ್ದು ಸ್ವಲ್ಪ

CC-0. Jangamwadi Math Collection. Digitized by eGangotri

ವಾದ ಹವಿಸ್ಸನ್ನೂ ಪ್ರಭೂತವಾಗಿರುವಂತೆ ಅರಿತವನೂ, ಅಧಿಕವಾದ ಜ್ಞಾನವುಳ್ಳವನೂ, ದೇವದೂತನೂ ಆದ ನೀನು ದೇವಲೋಕದ ಆರೋಹಣಸ್ಥಾನಗಳನ್ನು ಹತ್ತಿ ಸಂಚರಿಸುತ್ತೀಯೆ.

English Translation

You who are all-knowing understand the functions of a messenger (of the gods) at the sacrifice: well informed of both heaven and earth, and the intermediate (firmament), and a most intelligent, ancient, and amplifying envoy, you go up the ascents of heaven.

---

ಸಂಹಿತಾಪಾಠಃ

ಕೃಷ್ಣಂ ತ ಏಮ ರುಶತಃ ಪುರೋ ಭಾಶ್ಚರಿಷ್ಣ್ವರ್ಚಿರ್ವಪುಷಾಮಿದೇಕಂ ।
ಯದಪ್ರವೀತಾ ದಧತೇ ಹ ಗರ್ಭಂ ಸದ್ಯಶ್ಚಿಜ್ಜಾತೋ ಭವಸೀದು ದೂತಃ ॥

ಪದಪಾಠಃ

ಕೃಷ್ಣಂ । ತೇ । ಏಮ । ರುಶತಃ । ಪುರಃ । ಭಾಃ । ಚರಿಷ್ಣು । ಅರ್ಚಿಃ । ವಪುಷಾಂ । ಇತ್ । ಏಕಂ ।
ಯತ್ । ಅಪ್ರವೀತಾ । ದಧತೇ । ಹ । ಗರ್ಭಂ । ಸದ್ಯಃ । ಚಿತ್ । ಜಾತಃ । ಭವಸಿ । ಇತ್ । ಊಂ ಇತಿ । ದೂತಃ ॥ ೯ ॥

ಸಾಯಣಭಾಷ್ಯಂ

ಹೇ ಅಗ್ನೇ ರುಶತೋ ರೋಚಮಾನಸ್ಯ ತೇ ತವ ಸಂಬಂಧ್ಯತ್ರೈಮ । ಏಮ ಇಣ್ ಶಬ್ದೇನ ಗಮನಮಾರ್ಗ ಉಚ್ಯತೇ । ಏಮ ವರ್ತ್ಮ ಕೃಷ್ಣಂ ಕೃಷ್ಣವರ್ಣಂ ಭವತಿ । ಭಾಸ್ತವ ಸಂಬಂಧಿನೀ ದೀಪ್ತಿಃ ಪುರಃ ಪುರಸ್ತಾದ್ಭವತಿ । ಚರಿಷ್ಣು ಸಂಚರಣಶೀಲಮರ್ಚಿಸ್ತ್ವದೀಯಂ ತೇಜೋ ವಪುಷಾಂ ವಪುಷ್ಮತಾಂ ರೂಪವತಾಂ । ತೇಜಸ್ವಿನಾಮಿತ್ಯರ್ಥಃ । ಏಕಮಿನ್ಮುಖ್ಯಮೇವ ಭವತಿ । ಯದ್ಯಂ ತ್ವಾಮಪ್ರವೀತಾ ಅನುಪಗತಾ ಯಜಮಾನಾ ಗರ್ಭಂ ತ್ವಜ್ಜನನಹೇತುಮರಣಿಂ ದಧತೇ ಹ । ಧಾರಯಂತಿ ಖಲು । ಸ ತ್ವಂ ಸದ್ಯಶ್ಚಿತ್ಸದ್ಯ ಏವ ಜಾತ ಉತ್ಪನ್ನಃ ಸನ್ ದೂತೋ ಭವಸೀದು । ಯಜಮಾನಸ್ಯ ದೂತೋ ಭವಸ್ಯೇವ ॥

ಪ್ರತಿಪದಾರ್ಥ

(ಅಗ್ನೇ-ಎಲೈ ಅಗ್ನಿಯೇ) ರುಶತಃ—ಪ್ರಕಾಶಮಾನನಾದ । ತೇ—ನಿನ್ನ । ಏಮ—ಮಾರ್ಗವು । ಕೃಷ್ಣಂ—ಕೃಷ್ಣವರ್ಣದ್ದಾಗಿರುತ್ತದೆ । ಭಾಃ—ನಿನ್ನ ತೇಜಸ್ಸು । ಪುರಃ—ನಿನ್ನ ಮುಂದೆ ಪ್ರಸಿದ್ಧವಾಗಿದೆ ।

CC-0. Jangamwadi Math Collection. Digitized by eGangotri

**ಚರಿಷ್ಣು**—ಸಂಚಾರಸ್ವಭಾವವುಳ್ಳ । **ಅರ್ಚಿಃ**—ನಿನ್ನ ಪ್ರಭೆಯು । **ವಪುಷಾಂ**—ಪ್ರಕಾಶಾತ್ಮಕವಾದ ರೂಪವುಳ್ಳವ ರಲ್ಲಿಯೇ । **ಏಕಂ ಇತ್**—ವೈಯಕ್ತಿಕವಾದ ಕಾಂತಿಯನ್ನು ಹೊಂದಿದೆ । **ಯತ್**—ಯಾವಾಗ । **ಅಪ್ರವೀತಾಃ**—ಶ್ರದ್ಧಾಯುಕ್ತರಾದ ಯಜಮಾನರು । **ಗರ್ಭಂ**—ನಿನಗೆ ಜನಕಗಳಾದ ಅರಣಿಗಳನ್ನು । **ದಧತೇ ಹ**—ಹಿಡಿಯುತ್ತಾರೆ ಯೋ । **ಸದ್ಯಶ್ಚಿತ್**—ಆ ಒಡನೆಯೇ । **ಜಾತಃ**—ಉತ್ಪನ್ನನಾದ ನೀನು । **ದೂತಃ ಭವಸಿ**—ದೇವದೂತನಾಗು ತ್ತೀಯೆ.

ಭಾವಾರ್ಥ

ಎಲೈ ಅಗ್ನಿಯೇ, ಪ್ರಕಾಶಮಾನನಾದ ನಿನ್ನ ಮಾರ್ಗವು ಕೃಷ್ಣವರ್ಣದ್ದಾಗಿರುತ್ತದೆ. ನಿನ್ನ ತೇಜಸ್ಸು ನಿನ್ನ ಮುಂದೆ ಪ್ರಸಿದ್ಧವಾಗಿದೆ. ಸಂಚಾರಸ್ವಭಾವವುಳ್ಳ ನಿನ್ನ ಪ್ರಭೆಯು ಪ್ರಕಾಶಾತ್ಮಕವಾದ ರೂಪವುಳ್ಳವರೆಲ್ಲರ ನಡುವೆ ಯೂ ವೈಯಕ್ತಿಕವಾದ ಕಾಂತಿಯನ್ನು ಹೊಂದಿದೆ. ಯಾವಾಗ ಶ್ರದ್ಧಾಯುಕ್ತರಾದ ಯಜಮಾನರು ನಿನಗೆ ಜನಕ ಗಳಾದ ಅರಣಿಗಳನ್ನು ಹಿಡಿಯುತ್ತಾರೆಯೋ ಆ ಒಡನೆಯೇ ಉತ್ಪನ್ನನಾದ ನೀನು ದೇವದೂತನಾಗುತ್ತೀಯೆ.

English Translation

Dark is the path of you who are bright; the light is before you; your moving radiance is the chief of (all luminous) bodies: when the present (worshippers) take up the germ (in the sticks of attrition) you are speedily generated, and become indeed the messenger (of the sacrifice.)

---

ಸಂಹಿತಾಪಾಠಃ

ಸದ್ಯೋ ಜಾತಸ್ಯ ದದೃಶಾನಮೋಜೋ ಯದಸ್ಯ ವಾತೋ ಅನುವಾತಿ ಶೋಚಿಃ ।

ವೃಣಕ್ತಿ ತಿಗ್ಮಾಮತಸೇಷು ಜಿಹ್ವಾಂ ಸ್ಥಿರಾ ಚಿದನ್ನಾ ದಯತೇ ವಿ ಜಂಭೈಃ॥

ಪದಪಾಠಃ

ಸದ್ಯಃ । ಜಾತಸ್ಯ । ದದೃಶಾನಂ । ಓಜಃ । ಯತ್ । ಅಸ್ಯ । ವಾತಃ । ಅನುವಾತಿ । ಶೋಚಿಃ ।

ವೃಣಕ್ತಿ । ತಿಗ್ಮಾಂ । ಅತಸೇಷು । ಜಿಹ್ವಾಂ । ಸ್ಥಿರಾ । ಚಿತ್ । ಅನ್ನಾ । ದಯತೇ । ವಿ । ಜಂಭೈಃ ॥ ೧೦॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಸದ್ಯೋ ಜಾತಸ್ಯಾರಣಿನಿರ್ಮಂಥನಾದನಂತರಮೇವೋತ್ಪನ್ನಸ್ಯಾಗ್ನೇರೋಜಸ್ತೇಜೋ ದದೃಶಾನಂ । ಋತ್ವಿಗಾದಿಭಿರ್ದೃಶ್ಯಮಾನಂ ಭವತೀತಿ ಶೇಷಃ । ವಾತೋ ವಾಯುರ್ಯದ್ಯದಾಸ್ಯಾಗ್ನೇಃ ಶೋಚಿರ್ದೀಪ್ತಿಮನು ಲಕ್ಷೀಕೃತ್ಯ ವಾತಿ ಗಚ್ಛತಿ ತದಾ ಸೋಽಯಮಗ್ನಿರತಸೇಷು ವೃಕ್ಷಸಂಘೇಷು ತಿಗ್ಮಾಂ ತೀಕ್ಷ್ಣಾಂ ಜಿಹ್ವಾಂ ಜ್ವಾಲಾಂ ವೃಣಕ್ತಿ । ಸಂಯೋಜಯತಿ । ಸ್ಥಿರಾ ಚಿತ್ ಸ್ಥಿರಾಣ್ಯಪ್ಯನ್ನಾನ್ನರೂಪಾಣಿ ಕಾಷ್ಠಾದೀನಿ ಜಂಭೈಸ್ತೇಜೋಭಿರ್ವಿ ದಯತೇ । ವಿಖಂಡಯತಿ । ಭಕ್ಷಯತೀತ್ಯರ್ಥಃ ॥

ಪ್ರತಿಪದಾರ್ಥ

ಸದ್ಯೋ ಜಾತಸ್ಯ—ಮಥನಕ್ರಿಯೆ ಮಾಡೊಡನೆಯೇ ಉತ್ಪನ್ನನಾದ ಅಗ್ನಿಯ । ಓಜಃ—ತೇಜಸ್ಸು । ದದೃಶಾನಂ—ಋತ್ವಿಗಾದಿಗಳ ಗೋಚರಕ್ಕೆ ಬೀಳುತ್ತದೆ । ವಾತಃ—ವಾಯುವು । ಯತ್—ಯಾವಾಗ । ಅಸ್ಯ—ಈ ಅಗ್ನಿಯ । ಶೋಚಿಃ—ತೇಜಸ್ಸನ್ನು । ಅನು—ಅನುಸರಿಸಿ । ವಾತಿ—ಬೀಸುತ್ತದೆಯೋ (ಆಗ) । ಅತಸೇಷು—ವೃಕ್ಷಸಮೂಹಗಳಲ್ಲಿ । ತಿಗ್ಮಾಂ—ತೀಕ್ಷ್ಣವಾದ । ಜಿಹ್ವಾಂ—ಜ್ವಾಲೆಯನ್ನು । ವೃಣಕ್ತಿ—ಸೇರಿಸುತ್ತದೆ । ಸ್ಥಿರಾ-ಚಿತ್—ಅತ್ಯಂತ ಘನರೂಪವುಳ್ಳದ್ದಾದರೂ ಸಹ । ಅನ್ನಾ—ಅನ್ನರೂಪವಾದ ಕಾಷ್ಠಾದಿಗಳನ್ನು । ಜಂಭೈಃ—ತನ್ನ ತೇಜಸ್ಸುಗಳಿಂದ । ವಿ ದಯತೇ—(ಅಗ್ನಿಯು) ದಹಿಸುತ್ತಾನೆ.

ಭಾವಾರ್ಥ

ಮಥನಕ್ರಿಯೆ ಮಾಡೊಡನೆಯೇ ಉತ್ಪನ್ನನಾದ ಅಗ್ನಿಯ ತೇಜಸ್ಸು ಋತ್ವಿಗಾದಿಗಳಿಗೆ ಕಾಣಿಸಿಕೊಳ್ಳುತ್ತದೆ. ಯಾವಾಗ ವಾಯುವು ಈ ಅಗ್ನಿಯ ತೇಜಸ್ಸನ್ನು ಅನುಸರಿಸಿ ಬೀಸುತ್ತದೆಯೋ ಆಗ ವೃಕ್ಷ ಸಮೂಹಗಳಲ್ಲಿ ತೀಕ್ಷ್ಣವಾದ ಜ್ವಾಲೆಯನ್ನು ಸೇರಿಸುತ್ತದೆ. ಅತ್ಯಂತ ಘನರೂಪವುಳ್ಳದ್ದಾದರೂ ಸಹ ಅನ್ನರೂಪವಾದ ಕಾಷ್ಠಾದಿಗಳನ್ನು ತನ್ನ ತೇಜಸ್ಸುಗಳಿಂದ ಅಗ್ನಿಯು ದಹಿಸುತ್ತಾನೆ.

English Translation

The light of the speedily-generated is visible, and when the wind fans the flame, he (Agni) spreads his blazing tongue amongst the trees, and with his (glowing) teeth consumes the standing (fuel his) food.

—————

ಸಂಹಿತಾಪಾಠಃ

ತೃಷು ಯದನ್ನಾ ತೃಷುಣಾ ವವಕ್ಷ ತೃಷುಂ ದೂತಂ ಕೃಣುತೇ ಯಹ್ವೋ ಅಗ್ನಿಃ ।

CC-0. Jangamwadi Math Collection. Digitized by eGangotri

ವಾತಸ್ಯ ಮೇಳಿಂ ಸಚತೇ ನಿಜೂರ್ವನ್ನಾಶುಂ ನ ವಾಜಯತೇ ಹಿನ್ವೇ

ಅರ್ವಾ ॥ ೧೧ ॥

ಪದಪಾಠಃ

ತೃಷು । ಯತ್ । ಅನ್ನಾ । ತೃಷುಣಾ । ವವಕ್ಷ । ತೃಷುಂ । ದೂತಂ । ಕೃಣುತೇ । ಯಹ್ವಃ । ಅಗ್ನಿಃ ।

ವಾತಸ್ಯ । ಮೇಳಿಂ । ಸಚತೇ । ನಿऽಜೂರ್ವನ್ । ಆಶುಂ । ನ । ವಾಜಯತೇ । ಹಿನ್ವೇ । ಅರ್ವಾ ॥೧೧॥

ಸಾಯಣಭಾಷ್ಯಂ

ಯದ್ಯೋಽಗ್ನಿಸ್ತ್ರಿಷು ಕ್ಷಿಪ್ರಮೇವಾನ್ನಾನ್ನಾನಿ ಕಾಷ್ಠಾದೀನಿ ತೃಷುಣಾ ಕ್ಷಿಪ್ರೇಣ ರಶ್ಮಿಸಮೂಹೇನ ವವಕ್ಷ। ವಹತಿ। ದಹತೀತ್ಯರ್ಥಃ । ಯಹ್ವೋ ಮಹಾನ್ ಸೋಽಗ್ನಿಸ್ತೃಷುಮಾತ್ಮಾನಂ ದೂತಂ ಕೃಣುತೇ । ಯಜಮಾನದೂತಂ ಕರೋತಿ । ನಿಜೂರ್ವನ್ ಕಾಷ್ಠಾನಿ ನಿಃಶೇಷೇಣ ದಹನ್ನಗ್ನಿರ್ವಾತಸ್ಯ ವಾಯೋರ್ಮೇಳಿಂ ಬಲಂ ಸಚತೇ । ಸೇವತೇ । ಆಶುಂ ನ । ಅಶ್ವಸಾದೀ ಯಥಾಶ್ವಂ ತಥಾರ್ವಾ ಗಮನಶೀಲೋಽಗ್ನಿಃ ಸ್ವರಶ್ಮಿಂ ವಾಜಯತೇ । ವಾಜಿನಂ ಬಲವಂತಂ ಕರೋತಿ। ಹಿನ್ವೇ। ಪ್ರೇರಯತಿ ಚ ॥

ಪ್ರತಿಪದಾರ್ಥ

ಯತ್—ಯಾವ ಅಗ್ನಿಯು । ತೃಷು—ಶೀಘ್ರವಾಗಿ । ಅನ್ನಾ—ಕಾಷ್ಠಾದಿಗಳನ್ನು । ತೃಷುಣಾ—ಬೇಗನೆ ವ್ಯಾಪಿಸುವ ರಶ್ಮಿ ಸಮೂಹದಿಂದ (ಜ್ವಾಲೆಯಿಂದ) । ವವಕ್ಷ—ದಹಿಸುವನೋ । ಯಹ್ವಃ—ಮಹಾಮಹಿಮನಾದ ಆ ಅಗ್ನಿಯು । ತೃಷುಂ—ತನ್ನನ್ನು । ದೂತಂ—ಯಜ್ಞಮಾಡುವ ಯಜಮಾನನ ಪರವಾದ ದೂತನನ್ನಾಗಿ । ಕೃಣುತೇ—ಮಾಡಿಕೊಳ್ಳುತ್ತಾನೆ । ನಿಜೂರ್ವನ್—ಕಾಷ್ಠಗಳನ್ನು ನಿಶ್ಶೇಷವಾಗಿ ದಹಿಸುವ ಅಗ್ನಿಯು। ವಾತಸ್ಯ—ವಾಯುವಿನ । ಮೇಳಿಂ—ಬಲವನ್ನು (ಸಹಾಯವನ್ನು) । ಸಚತೇ—ಸೇವಿಸುತ್ತಾನೆ (ಅಪೇಕ್ಷಿಸುತ್ತಾನೆ) । ಆಶುಂ ನ—ಅಶ್ವದ ಮೇಲೆ ಕುಳಿತಿರುವ ಸಾರಥಿಯು ಅಶ್ವವನ್ನು ವೇಗವಾಗಿ ಹೋಗುವುದಕ್ಕಾಗಿ ಪ್ರೇರಿಸುವಂತೆ । ಅರ್ವಾ—ಗಮನಶೀಲನಾದ (ವ್ಯಾಪಿಸುವ) ಅಗ್ನಿಯು ತನ್ನ ರಶ್ಮಿಯನ್ನು (ಜ್ವಾಲೆಯನ್ನು) । ವಾಜಿನಂ—ಬಲಯುಕ್ತವಾದುದನ್ನಾಗಿ ಮಾಡುತ್ತಾನೆ ಮತ್ತು । ಹಿನ್ವೇ—ಪ್ರೇರಿಸುತ್ತಾನೆ.

ಭಾವಾರ್ಥ

ಕಾಷ್ಠಾದಿಗಳನ್ನು ಬೇಗನೆ ದಹಿಸುವ ಅಗ್ನಿಯು ಬೇಗನೆ ವ್ಯಾಪಿಸುವ ತನ್ನ ಜ್ವಾಲೆಯಿಂದ ಸಮಸ್ತವನ್ನು ದಹಿಸುತ್ತಾ ಯಜ್ಞಮಾಡುವ ಯಜಮಾನನ ಪರವಾಗಿ ದೂತತ್ವನನ್ನು ವಹಿಸುತ್ತಾನೆ. ಕಾಷ್ಠಗಳನ್ನು ದಹಿಸುವಾಗ ಈ ಅಗ್ನಿಯು ವಾಯುವಿನ (ಗಾಳಿಯ) ಸಹಾಯವನ್ನು ಅಪೇಕ್ಷಿಸುತ್ತಾನೆ. ಕುದುರೆಯಮೇಲೆ ಕುಳಿತಿರುವ ಸವಾರನು ತನ್ನ ಕುದುರೆಯನ್ನು ವೇಗವಾಗಿ ಹೋಗಲು ಪ್ರೇರಿಸುವಂತೆ ಈ ಅಗ್ನಿಯು ತನ್ನ ಜ್ವಾಲೆಯನ್ನು ಬೇಗನೆ ವ್ಯಾಪಿಸುವಂತೆ ಮಾಡುತ್ತಾನೆ.

CC-0. Jangamwadi Math Collection. Digitized by eGangotri

## English Translation

When quickly, with rapid (radiance) he has carried off his food, the mighty Agni makes ( himself ) the fleet messenger ( of the worshipper ); consuming (the fuel), he allies himself with the force of the wind, and as (a horseman) urges his fast steed, so the rapid-going Agni invigorates and urges (his flames).

---

# ಎಂಟನೆಯ ಸೂಕ್ತವು

---

### ಸಾಯಣಭಾಷ್ಯಂ

ದೂತಂ ವ ಇತ್ಯಷ್ಟರ್ಚಮಷ್ಟಮಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರೀಛಂದಸ್ಕಮಗ್ನಿದೇವತಾಕಂ । ತಥಾ ಚಾನುಕ್ರಮ್ಯತೇ । ದೂತಂ ವೋಽಷ್ಟೌ ಗಾಯತ್ರಂ ತ್ವಿತಿ ॥ ವ್ಯೂಳ್ಹೇ ದಶರಾತ್ರೇ ಪ್ರಥಮೇ ಛಂದೋಮ ಇದಂ ಸೂಕ್ತಂ ಜಾತವೇದಸ್ಯನಿವಿದ್ಧಾನೀಯಂ । ತಥಾ ಚ ಸೂತ್ರಿತಂ । ದೂತಂ ವ ಇತ್ಯಾಗ್ನಿಮಾರುತಂ । ಆ. ೮-೯ । ಇತಿ ॥ ಇದಮಾದಿಕೇ ದ್ವೇ ಸೂಕ್ತೇ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ಗಾಯತ್ರೇ ಛಂದಸಿ ವಿನಿಯುಕ್ತೇ । ಸೂತ್ರಿತಂ ಚ । ಅಗ್ನೇ ಪಾವಕ ದೂತಂ ವ ಇತಿ ಸೂಕ್ತೇ । ಆ. ೪-೧೩ । ಇತಿ ॥

ಅನುವಾದವು—ದೂತಂ ವಃ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು; ಅಗ್ನಿಯು ದೇವತೆಯು; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—ದೂತಂ ವೋಽಷ್ಟೌ ಗಾಯತ್ರಂ ತು ಎಂದು ಹೇಳಿರುವುದು. ವ್ಯೂಳ್ಹವೆಂಬ ದಶರಾತ್ರಯಾಗದಲ್ಲಿ ಪ್ರಥಮ ಛಂದೋಮದಲ್ಲಿ ಈ ಸೂಕ್ತವನ್ನು ಜಾತವೇದಸ ಸಂಬಂಧವಾದ ನಿವಿತ್ಸೂಕ್ತವನ್ನಾಗಿ ಪಠಿಸಬೇಕಂದು ಆಶ್ವಲಾಯನಶ್ರೌತಸೂತ್ರದ ದೂತಂ ವ ಇತ್ಯಾಗ್ನಿಮಾರುತಂ ಎಂಬ ಸೂತ್ರದಿಂದ (ಆ. ೮-೯) ವಿವೃತವಾಗಿರುವುದು. ಮತ್ತು ಈ ಸೂಕ್ತವೂ ಮುಂದಿನ ಸೂಕ್ತವೂ ಪ್ರಾತರನುವಾಕಮಂತ್ರಗಳ ಪಠನದಲ್ಲಿ ಆಗ್ನೇಯ ಕ್ರತು ಸಂಬಂಧವಾದ ಗಾಯತ್ರೀ ಛಂದಸ್ಸಿನ ಋಕ್ಕುಗಳಿಗಾಗಿ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಅಗ್ನೇ ಪಾವಕ ದೂತಂ ವ ಇತಿ ಸೂಕ್ತೇ ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

---

CC-0. Jangamwadi Math Collection. Digitized by eGangotri

## ಸೂಕ್ತ—೮

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೮ ॥
ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿ—ವಾಮದೇವಃ ॥
ದೇವತಾ—ಅಗ್ನಿಃ ॥
ಛಂದಃ—ಗಾಯತ್ರೀ ॥

---

ಸಂಹಿತಾಪಾಠಃ

ದೂತಂ ವೋ ವಿಶ್ವವೇದಸಂ ಹವ್ಯವಾಹಮಮರ್ತ್ಯಂ ।

ಯಜಿಷ್ಠಮೃಂಜಸೇ ಗಿರಾ ॥ ೧ ॥

ಪದಪಾಠಃ

ದೂತಂ । ವಃ । ವಿಶ್ವಽವೇದಸಂ । ಹವ್ಯಽವಾಹಂ । ಅಮರ್ತ್ಯಂ ।

ಯಜಿಷ್ಠಂ । ಋಂಜಸೇ । ಗಿರಾ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ವಿಶ್ವವೇದಸಂ । ವಿಶ್ವಂ ಸಮಸ್ತಂ ವೇದೋ ಧನಂ ಯಸ್ಯಾಸೌ ವಿಶ್ವವೇದಾಃ । ತಂ ಸರ್ವವಿದಂ ವಾ ಹವ್ಯವಾಹಂ ದೇವೇಭ್ಯೋ ಹವಿಷಾಂ ವೋಢಾರಮಮರ್ತ್ಯಮಮರಣಧರ್ಮಾಣಂ ಯಜಿಷ್ಠಮತಿಶಯೇನ ಯಷ್ಟಾರಂ ದೂತಂ ದೇವಾನಾಂ ವಸ್ತ್ವಾಂ ಗಿರಾ ಸ್ತುತಿರೂಪಯಾ ವಾಚಾ ಋಂಜಸೇ । ಯಜಮಾನೋಽಹಂ ಪ್ರಸಾಧಯಾಮಿ । ವರ್ಧಯಾಮೀತ್ಯರ್ಥಃ । ಋಂಜತಿಃ ಪ್ರಸಾಧನ-ಕರ್ಮೇತಿ ಯಾಸ್ಕಃ ॥

ಪ್ರತಿಪದಾರ್ಥ

(ಎಲೈ ಅಗ್ನಿಯೇ) ವಿಶ್ವವೇದಸಂ—ಸಕಲ ಸಂಪತ್ತುಗಳುಳ್ಳವನೂ । ಹವ್ಯವಾಹಂ—ಹವಿಸ್ಸನ್ನು ವಹಿಸುವವನೂ । ಅಮರ್ತ್ಯಂ—ಮರಣಧರ್ಮರಹಿತನೂ । ಯಜಿಷ್ಠಂ—ಪೂಜ್ಯತಮನೂ । ದೂತಂ—ದೇವತೆಗಳಿಗೆ ದೂತನೂ ಆದ । ವಃ—ನಿನ್ನನ್ನು । ಗಿರಾ—ಸ್ತುತಿರೂಪವಾದ ವಾಕ್ಕಿನಿಂದ । ಋಂಜಸೇ—ಪೂಜಿಸಿ ಅಲಂಕರಿಸುತ್ತೇನೆ

CC-0. Jangamwadi Math Collection. Digitized by eGangotri

### ಭಾವಾರ್ಥ

ಎಲೈ ಅಗ್ನಿಯೇ, ಸಕಲಸಂಪತ್ತುಗಳುಳ್ಳವನೂ, ಹವಿಸ್ಸನ್ನು ವಹಿಸುವವನೂ, ಮರಣಧರ್ಮರಹಿತನೂ, ಪೂಜ್ಯತಮನೂ, ದೇವತೆಗಳಿಗೆ ದೂತನೂ ಆದ ನಿನ್ನನ್ನು ಸ್ತುತಿರೂಪವಾದ ವಾಕ್ಕಿನಿಂದ ಪೂಜಿಸಿ ಅಲಂಕರಿಸುತ್ತೇನೆ.

### English Translation

I propitiate you with praise, the messenger (of the gods), the omniscient, the bearer of oblations, the immortal, the chief sacrificer

---

### ಸಂಹಿತಾಪಾಠಃ

ಸ ಹಿ ವೇದಾ ವಸುಧಿತಿಂ ಮಹಾँ ಆರೋಧನಂ ದಿವಃ ।

ಸ ದೇವಾँ ಏಹ ವಕ್ಷತಿ ॥ ೨ ॥

### ಪದಪಾಠಃ

ಸಃ । ಹಿ । ವೇದ । ವಸುಽಧಿತಿಂ । ಮಹಾನ್ । ಆಽರೋಧನಂ । ದಿವಃ ।

ಸಃ । ದೇವಾನ್ । ಆ । ಇಹ । ವಕ್ಷತಿ ॥ ೨ ॥

### ಸಾಯಣಭಾಷ್ಯಂ

ಸ ಹಿ ಪ್ರಸಿದ್ಧ ಏವಾಗ್ನಿರ್ವಸುಧಿತಿಂ ಯಜಮಾನಾಭೀಷ್ಟಫಲರೂಪಧನಸ್ಯ ದಾನಂ ವೇದ । ವೇತ್ತಿ । ಮಹಾನ್ ಪ್ರಭೂತೋಽಗ್ನಿರ್ದಿವ ಆರೋಧನಮಾರೋಹಣಂ ದೇವಾನಾಂ ಸ್ಥಾನಂ ವೇತ್ತಿ । ಸೋಽಗ್ನಿರಿಹಾಸ್ಮಿನ್ಯಜ್ಞೇ ದೇವಾನಿಂದ್ರಾದೀನಾ ವಕ್ಷತಿ । ಆವಹತು ॥ ವಹೇರ್ಧಾತೋರ್ಲಿಙರ್ಥೇ ಲೇಟಿತಿ ಲೇಟ್ । ತಸ್ಯ ತಿಪ್ । ಸಿಬ್ಬಹುಲಂ ಲೇಟೀತಿ ಸಿಪ್ । ಲೇಟೋಽಡಾಟಾವಿತ್ಯಡಾಗಮುಶ್ಚ । ಹೋ ಢ ಇತಿ ಢತ್ವಂ । ಷಢೋಃ ಕಃ ಸೀತಿ ಕತ್ವಷತ್ವಾನಿ । ತಿಙ್ಙತಿಙ ಇತಿ ನಿಘಾತಃ ॥

### ಪ್ರತಿಪದಾರ್ಥ

ಸ ಹಿ—ಪ್ರಸಿದ್ಧನಾದ ಅಗ್ನಿಯು । ವಸುಧಿತಿಂ—ಯಜಮಾನನಿಂದ ಅಪೇಕ್ಷಿತವಾದ ಧನವೇನೆಂಬುದನ್ನು । ವೇದ—ತಿಳಿಯುತ್ತಾನೆ । ಮಹಾನ್—ಮಹತ್ಸ್ವರೂಪವುಳ್ಳ ಅವನು । ದಿವಃ—ಅಂತರಿಕ್ಷದಲ್ಲಿ । ಆರೋಧನಂ-ದೇವತೆಗಳ ಆರೋಹಣಸ್ಥಾನವನ್ನು ತಿಳಿಯುತ್ತಾನೆ । ಸಃ—ಅದೇ ಅಗ್ನಿಯು । ಇಹ—ನಮ್ಮ ಈ ಯಜ್ಞಪ್ರದೇಶಕ್ಕೆ। ದೇವಾನ್—ದೇವತೆಗಳನ್ನು । ಆ ವಕ್ಷತಿ—ಕರೆದುಕೊಂಡು ಬರಲಿ.

CC-0. Jangamwadi Math Collection. Digitized by eGangotri

ಭಾವಾರ್ಥ

ಪ್ರಸಿದ್ಧನಾದ ಅಗ್ನಿಯು ಯಜಮಾನನಿಂದ ಅಪೇಕ್ಷಿತವಾದ ಧನವೇನೆಂಬುದನ್ನು ತಿಳಿಯುತ್ತಾನೆ. ಮಹತ್ಸ್ವರೂಪವುಳ್ಳ ಅವನು ಅಂತರಿಕ್ಷದಲ್ಲಿ ದೇವತೆಗಳ ಆರೋಹಣಸ್ಥಾನವನ್ನು ತಿಳಿಯುತ್ತಾನೆ. ಅದೇ ಅಗ್ನಿಯು ದೇವತೆಗಳನ್ನು ನಮ್ಮ ಈ ಯಜ್ಞಪ್ರದೇಶಕ್ಕೆ ಕರೆದುಕೊಂಡು ಬರಲಿ.

English Translation

The mighty one knows how to bestow the (desired) wealth (upon the worshipper); he knows the ascents of heaven : may he bring the gods hither.

———

ಸಂಹಿತಾಪಾಠಃ

ಸ ವೇದ ದೇವ ಆನಮಂ ದೇವಾँ ಋತಾಯತೇ ದಮೇ ।

ದಾತಿ ಪ್ರಿಯಾಣಿ ಚಿದ್ವಸು ॥ ೩ ॥

ಪದಪಾಠಃ

ಸಃ । ವೇದ । ದೇವಃ । ಆऽನಮಂ । ದೇವಾನ್ । ಋತ್ऽಯತೇ । ದಮೇ ।

ದಾತಿ । ಪ್ರಿಯಾಣಿ । ಚಿತ್ । ವಸು ॥ ೩ ॥

ಸಾಯಣಭಾಷ್ಯಂ

ದೇವೋ ದ್ಯೋತಮಾನಃ ಸೋऽಗ್ನಿರಾನಮಂ ಯಜಮಾನಾದೀನಾನಮಯಿತುಂ ನಮಸ್ಕಾರ- ತುಂ ದೇವಾನಿಂದ್ರಾದೀನ್ವೇದ । ಕ್ರಮೇಣ ವೇತ್ತಿ । ದಮೇ ಯಜ್ಞಗೃಹ ಋತಾಯತ ಋತಂ ಯಜ್ಞ- ಮಿಚ್ಛತೇ ಯಜಮಾನಾಯ ಪ್ರಿಯಾಣಿ ಚಿದಭೀಷ್ಟಾನ್ಯಪಿ ವಸು ವಸೂನಿ ಪಶ್ವಾದೀನಿ ಧನಾನಿ ದಾತಿ । ದದಾತಿ । ಪ್ರಯಚ್ಛತಿ ॥

ಪ್ರತಿಪದಾರ್ಥ

ದೇವಃ—ಪ್ರಕಾಶಮಾನನಾದ । ಸಃ—ಅಗ್ನಿಯು । ಆನಮಂ—ಯಜಮಾನರ ನಮಸ್ಕಾರಕ್ಕೆ ಅರ್ಹ ರಾದ । ದೇವಾನ್—ಇಂದ್ರಾದಿ ದೇವತೆಗಳ ಮಹತ್ತ್ವವನ್ನು । ವೇದ—ಅರಿತಿದ್ದಾನೆ । ದಮೇ—ಯಜ್ಞಗೃಹದಲ್ಲಿ । ಋತಾಯತೇ—ಯಜ್ಞಕಾರ್ಯದಲ್ಲಿ ನಿರತನಾದ ಯಜಮಾನನಿಗೆ । ಪ್ರಿಯಾಣಿ ಚಿತ್—ಅತ್ಯಂತಪ್ರಿಯವಾದ । ವಸು—ಧನವನ್ನು । ದಾತಿ—ಕೊಡುತ್ತಾನೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಪ್ರಕಾಶಮಾನನಾದ ಅಗ್ನಿಯು ಯಜಮಾನರ ನಮಸ್ಕಾರಕ್ಕೆ ಅರ್ಹರಾದ ಇಂದ್ರಾದಿದೇವತೆಗಳ ಮಹತ್ತ್ವವನ್ನರಿತಿದ್ದಾನೆ. ಯಜ್ಞಗೃಹದಲ್ಲಿ ಯಜ್ಞಕಾರ್ಯದಲ್ಲಿ ನಿರತನಾದ ಯಜಮಾನನಿಗೆ ಅತ್ಯಂತಪ್ರಿಯವಾದ ಧನವನ್ನು ಕೊಡುತ್ತಾನೆ.

English Translation

He, the divine (Agni), knows how the gods are to be reverenced: to the sincere (worshipper) in his dwelling he gives the wealth that is desired.

---

ಸಂಹಿತಾಪಾಠಃ

ಸ ಹೋತಾ ಸೇದು ದೂತ್ಯಂ ಚಿಕಿತ್ವಾँ ಅಂತರೀಯತೇ ।
ವಿದ್ವಾँ ಆರೋಧನಂ ದಿವಃ ॥ ೪ ॥

ಪದಪಾಠಃ

ಸಃ । ಹೋತಾ । ಸಃ । ಇತ್ । ಊಂ ಇತಿ । ದೂತ್ಯಂ । ಚಿಕಿತ್ವಾನ್ । ಅಂತಃ । ಈಯತೇ ।
ವಿದ್ವಾನ್ । ಆऽರೋಧನಂ । ದಿವಃ ॥ ೪ ॥

ಸಾಯಣಭಾಷ್ಯಂ

ಸೋಽಗ್ನಿರ್ಹೋತಾ ದೇವಾನಾಮಾಹ್ವಾತಾ ಭವತಿ । ಸೇದು ಸ ಏವಾಗ್ನಿರ್ದೂತ್ಯಂ ದೇವಾನಾಂ ದೂತಕರ್ಮ ಚಿಕಿತ್ವಾನ್ ಜಾನನ್ ದಿವಃ ಸ್ವರ್ಗಸ್ಯಾರೋಧನಮಾರೋಹಣಮಾರೋಹಣಾರ್ಹಂ ದೇವಾನಾಂ ಸ್ಥಾನಂ ಚ ವಿದ್ವಾನ್ ಜಾನನ್ ಅಂತರ್ದ್ಯಾವಾಪೃಥಿವ್ಯೋರ್ಮಧ್ಯ ಈಯತೇ । ಗಚ್ಛತಿ ॥ ಈಙ್ ಗತೌ । ದಿವಾದಿಭ್ಯಃ ಶ್ಯನ್ । ತಿಙ್ಙತಿಙ ಇತಿ ನಿಘಾತಃ ॥

ಪ್ರತಿಪದಾರ್ಥ

ಸಃ—ಅಗ್ನಿಯು । ಹೋತಾ—ದೇವತೆಗಳನ್ನು ಯಜ್ಞಕ್ಕೆ ಕರೆಯುವ ಹೋತೃವಾಗಿದ್ದಾನೆ । ಸೇದು—ಅದೇ ಅಗ್ನಿಯು । ದೂತ್ಯಂ—ದೇವದೂತತ್ವವನ್ನು । ಚಿಕಿತ್ವಾನ್—ತಿಳಿದವನಾಗಿಯೂ । ದಿವಃ—ಅಂತರಿಕ್ಷದ । ಆರೋಧನಂ—ಆರೋಹಣಸ್ಥಾನವನ್ನು । ವಿದ್ವಾನ್—ಅರಿತವನಾಗಿಯೂ । ಅಂತಃ—ದ್ಯಾವಾಪೃಥಿವಿಗಳ ಮಧ್ಯ ಪ್ರದೇಶದಲ್ಲಿ । ಈಯತೇ—ಸಂಚರಿಸುತ್ತಾನೆ.

CC-0. Jangamwadi Math Collection. Digitized by eGangotri

### ಭಾವಾರ್ಥ

ಅಗ್ನಿಯು ದೇವತೆಗಳನ್ನು ಯಜ್ಞಕ್ಕೆ ಕರೆಯುವ ಹೋತೃವಾಗಿದ್ದಾನೆ. ಅದೇ ಅಗ್ನಿಯು ತನ್ನ ದೇವ ದೂತತ್ವವನ್ನು ತಿಳಿದವನಾಗಿಯೂ, ಅಂತರಿಕ್ಷದ ಆರೋಹಣಸ್ಥಾನವನ್ನು ಅರಿತವನಾಗಿಯೂ ದ್ಯಾವಾಪೃಥಿವಿಗಳ ಮಧ್ಯಪ್ರದೇಶದಲ್ಲಿ ಸಂಚರಿಸುತ್ತಾನೆ.

### English Translation

He is the invoker ( of the gods ), comprehending the deity of ( their ) messenger ; and, knowing the ascent of the sky, he travels between earth and heaven.

---

### ಸಂಹಿತಾಪಾಠಃ

ತೇ ಸ್ಯಾಮ ಯೇ ಅಗ್ನಯೇ ದದಾಶುರ್ಹವ್ಯದಾತಿಭಿಃ ।

ಯ ಈಂ ಪುಷ್ಯಂತ ಇಂಧತೇ ॥ ೫ ॥

### ಪದಪಾಠಃ

ತೇ । ಸ್ಯಾಮ । ಯೇ । ಅಗ್ನಯೇ । ದದಾಶುಃ । ಹವ್ಯದಾತಿಽಭಿಃ ।

ಯೇ । ಈಂ । ಪುಷ್ಯಂತಃ । ಇಂಧತೇ ॥ ೫ ॥

### ಸಾಯಣಭಾಷ್ಯಂ

ತೇ ತವ ಯಜಮಾನಾಃ ಸ್ಯಾಮ । ಭೂಯಾಮ । ತ ಇತ್ಯುಕ್ತಂ । ಕ ಇತ್ಯುಚ್ಯತೇ । ಯೇ ಯಜಮಾನಾ ಅಗ್ನಯೇ ಹವ್ಯದಾತಿಭಿರ್ಹವಿರ್ದಾನೈರ್ದದಾಶುಃ । ಪ್ರೀತಿಂ ಕುರ್ವಂತಿ । ಈಮೇನಮಗ್ನಿಂ ಪುಷ್ಯಂತೋ ವರ್ಧಯಂತೋ ಯೇ ಯಜಮಾನಾ ಇಂಧತೇ । ಸಮಿದ್ಭಿರ್ದೀಪ್ತಿಯುಕ್ತಂ ಕುರ್ವಂತಿ ॥

### ಪ್ರತಿಪದಾರ್ಥ

ಯೇ—ಯಾರು । ಅಗ್ನಯೇ—ಅಗ್ನಿಯನ್ನುದ್ದೇಶಿಸಿ । ಹವ್ಯದಾತಿಭಿಃ—ಹವಿರ್ದಾನಗಳಿಂದ । ದದಾಶುಃ—ಅಗ್ನಿಗೆ ತೃಪ್ತಿಯನ್ನುಂಟುಮಾಡುವರೋ । (ಮತ್ತು) ಈ—ಈ ಅಗ್ನಿಯನ್ನು । ಪುಷ್ಯಂತಃ—ವೃದ್ಧಿ ಪಡಿಸುವವರಾಗಿ । ಯೇ—ಯಾರು । ಇಂಧತೇ—(ಸಮಿತ್ತುಗಳಿಂದ) ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವರೋ। ತೇ—ಅಂತಹ ಪೂಜಕರಾಗಿ । ಸ್ಯಾಮ— ನಾವೂ ಆಗುವೆವು.

CC-0. Jangamwadi Math Collection. Digitized by eGangotri

ಭಾವಾರ್ಥ

ನಾವೂ ಸಹ ಅಗ್ನಿಯನ್ನುದ್ದೇಶಿಸಿದ ಹವಿರ್ದಾನಗಳಿಂದ ಅಗ್ನಿಗೆ ತೃಪ್ತಿಯನ್ನುಂಟುಮಾಡುವವರಾಗಿಯೂ, ಮತ್ತು ಸಮಿತ್ತುಗಳಿಂದ ಅಗ್ನಿಯನ್ನು ಪ್ರಜ್ವಲಿಸುವಂತೆ ಮಾಡುವವರಾಗಿಯೂ ಆಗೋಣ.

English Translation

May we be they who propitiate Agni with gifts of oblations, and who, cherishing him, feed him with fuel.

ಸಂಹಿತಾಪಾಠಃ

ತೇ ರಾಯಾ ತೇ ಸುವೀರ್ಯ್ಯೈಃ ಸಸವಾಂಸೋ ವಿ ಶೃಣ್ವಿರೇ ।

ಯೇ ಅಗ್ನಾ ದಧಿರೇ ದುವಃ ॥ ೬ ॥

ಪದಪಾಠಃ

ತೇ । ರಾಯಾ । ತೇ । ಸುಽವೀರ್ಯ್ಯೈಃ । ಸಸ್ಽವಾಂಸಃ । ವಿ । ಶೃಣ್ವಿರೇ ।

ಯೇ । ಅಗ್ನಾ । ದಧಿರೇ । ದುವಃ ॥ ೬ ॥

ಸಾಯಣಭಾಷ್ಯಂ

ಯೇ ಯಜಮಾನಾ ಅಗ್ನಾಗ್ನೌ ॥ ಸುಪಾಂ ಸುಲುಗಿತ್ಯಾಕಾರಃ ॥ ದುವಃ ಪರಿಚರ್ಯಾಂ ದಧಿರೇ । ಧಾರಯಂತಿ । ಕುರ್ವಂತೀತ್ಯರ್ಥಃ । ತೇ ಸಸವಾಂಸೋಽಗ್ನಿಂ ಸಂಭಜಮಾನಾ ರಾಯಾ ಪಶ್ವಾದಿಲಕ್ಷಣೇನ ಧನೇನ ವಿ ಶೃಣ್ವಿರೇ । ವಿಶ್ರೂಯಂತೇ । ಪ್ರಖ್ಯಾಯಂತೇ । ತೇ ಸುವೀರ್ಯೈಃ ಶೋಭನವೀರ್ಯೋಪೇತೈಃ ಪುತ್ರಾದಿಭಿಶ್ಚ ವಿಶ್ರೂಯಂತೇ ॥

ಪ್ರತಿಪದಾರ್ಥ

ಯೇ—ಯಾವ ಯಜಮಾನರು । ಅಗ್ನಾ—ಅಗ್ನಿಗೆ । ದುವಃ—ಪೂಜಾದಿಗಳನ್ನು । ದಧಿರೇ—ಅರ್ಪಿಸುವರೋ । ತೇ ಸಸವಾಂಸಃ—ಅಗ್ನಿಪೂಜಕರಾದ ಆ ಯಜಮಾನರು । ರಾಯಾ—ಪಶ್ವಾದಿಧನಯುಕ್ತರಾಗಿ । ವಿ ಶೃಣ್ವಿರೇ—ಪ್ರಖ್ಯಾತರಾಗುತ್ತಾರೆ । ತೇ—ಅವರು । ಸುವೀರ್ಯೈಃ—ವೀರ್ಯವಂತರಾದ ಪುತ್ರಯುಕ್ತರಾಗುತ್ತಾರೆ.

ಭಾವಾರ್ಥ

ಯಾವ ಯಜಮಾನರು ಅಗ್ನಿಗೆ ಪೂಜಾದಿಗಳನ್ನರ್ಪಿಸುವರೋ, ಅಗ್ನಿಪೂಜಕರಾದ ಆ ಯಜಮಾನರು ಪಶ್ವಾದಿಧನಯುಕ್ತರಾಗಿ ಪ್ರಖ್ಯಾತರಾಗುತ್ತಾರೆ ಅವರು ವೀರ್ಯವಂತರಾದ ಪುತ್ರಯುಕ್ತರಾಗುತ್ತಾರೆ.

CC-0. Jangamwadi Math Collection. Digitized by eGangotri

## English Translation

They are renowned for riches and for progeny, who, venerating Agni, offer him oblations.

---

ಸಂಹಿತಾಪಾಠಃ

ಅಸ್ಮೇ ರಾಯೋ ದಿವೇದಿವೇ ಸಂ ಚರಂತು ಪುರುಸ್ಪೃಹಃ ।
ಅಸ್ಮೇ ವಾಜಾಸ ಈರತಾಂ ॥ ೭ ॥

ಪದಪಾಠಃ

ಅಸ್ಮೇ ಇತಿ । ರಾಯಃ । ದಿವೇऽದಿವೇ । ಸಂ । ಚರಂತು । ಪುರುऽಸ್ಪೃಹಃ ।
ಅಸ್ಮೇ ಇತಿ । ವಾಜಾಸಃ । ಈರತಾಂ ॥ ೭ ॥

ಸಾಯಣಭಾಷ್ಯಂ

ಪುರುಸ್ಪೃಹ ಋತ್ವಿಗಾದಿಭಿರಭಿಲಷ್ಯಮಾಣಾ ರಾಯಃ ಪಶ್ವಾದಿಧನಾನ್ಯಸ್ಮೇ ಅಸ್ಮಾಸು ಯಜಮಾನೇಷು ದಿವೇ ದಿವೇ ಪ್ರತಿದಿನಂ ಸಂ ಚರಂತು । ಪ್ರಚರಂತ್ಯೋ ಭವಂತು ॥ ದಿವ್ಯಬ್ದಾದುತ್ತರಸ್ಯಾಃ ಸಪ್ತಮ್ಯಾಃ ಸುಪಾಂ ಸುಲುಗಿತ್ಯಾದಿನಾ ಶೇಆದೇಶ ಊಡಿದಮಿತ್ಯಾದಿನಾ ಚ ತಸ್ಯೋದಾತ್ತತ್ವಂ । ನಿತ್ಯವೀಪ್ಸಯೋರಿತಿ ದ್ವಿರ್ಭಾವೇ ಸತ್ಯುತ್ತರಭಾಗಸ್ಯಾನುದಾತ್ತಂ ಚೇತ್ಯನುದಾತ್ತತ್ವಂ ॥ ವಾಜಾಸೋऽನ್ನಾನಿ ಚಾಸ್ಮೇ ಅಸ್ಮಾನೀರತಾಂ । ಯಜ್ಞಾರ್ಥಂ ಪ್ರೇರಯಂತು ॥

ಪ್ರತಿಪದಾರ್ಥ

ಪುರುಸ್ಪೃಹಃ—ಅನೇಕರಿಂದ ಆಪೇಕ್ಷಿತಗಳಾದ । ರಾಯಃ—ಪಶ್ವಾದಿ ಧನಗಳು । ಅಸ್ಮೇ—ನಮ್ಮಲ್ಲಿ ದಿವೇದಿವೇ—ಪ್ರತಿದಿನವೂ । ಸಂ ಚರಂತು—ಬಂದು ತುಂಬಲಿ । ವಾಜಾಸಃ—ಅನ್ನಗಳು । ಅಸ್ಮೇ-ನಮ್ಮನ್ನು । ಈರತಾಂ—ಉತ್ಸಾಹಯುಕ್ತರನ್ನಾಗಿ ಮಾಡಲಿ.

ಭಾವಾರ್ಥ

ಅನೇಕರಿಂದ ಆಪೇಕ್ಷಿತಗಳಾದ ಪಶ್ವಾದಿಧನಗಳು ನಮ್ಮಲ್ಲಿ ಪ್ರತಿದಿನವೂ ಬಂದು ತುಂಬಲಿ. ನಮ್ಮನ್ನು ಅನ್ನಸಂಪತ್ತುಗಳು ಪ್ರೇರಿಸಿ ಉತ್ಸಾಹಯುಕ್ತರನ್ನಾಗಿ ಮಾಡಲಿ.

## English Translation

May riches, envied by many, devolve upon us day dy day, and (abundant) food await us.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸ ವಿಪ್ರಶ್ಚರ್ಷಣೀನಾಂ ಶವಸಾ ಮಾನುಷಾಣಾಂ ।

ಅತಿ ಕ್ಷಿಪ್ರೇವ ವಿಧ್ಯತಿ ॥ ೮ ॥

ಪದಪಾಠಃ

ಸಃ । ವಿಪ್ರಃ । ಚರ್ಷಣೀನಾಂ । ಶವಸಾ । ಮಾನುಷಾಣಾಂ ।

ಅತಿ । ಕ್ಷಿಪ್ರಾऽಇವ । ವಿಧ್ಯತಿ ॥ ೮ ॥

ಸಾಯಣಭಾಷ್ಯಂ

ವಿಪ್ರೋ ಮೇಧಾವೀ । ವಿಪ್ರ ಇತಿ ಮೇಧಾವಿನಾಮ ವಿಪ್ರೋ ಧೀರ ಇತಿ ತನ್ನಾಮಸು ಪಾಠಾತ್ । ಸೋಽಗ್ನಿಃ ಶವಸಾ ಬಲೇನ । ಶವ ಇತಿ ಬಲನಾಮ ಪಾಜಃ ಶವ ಇತಿ ತನ್ನಾಮಸು ಪಾಠಾತ್ । ಮಾನುಷಾಣಾಂ ಮನುಸಂಬಂಧಿನಾಂ ಚರ್ಷಣೀನಾಂ ಪ್ರಜಾನಾಂ ಕ್ಷಿಪ್ರೇವ ಕ್ಷೇಪ್ಯಾನ್ಯೇವ ವಿನಾಶಯಿತುಮರ್ಹಾಣಿ । ದುರಿತಾನೀತಿ ಶೇಷಃ । ಅತಿ ವಿಧ್ಯತಿ । ಅತಿ ವಿಧ್ಯತು । ಅತಿಶಯೇನ ನಾಶಯತು ॥

ಪ್ರತಿಪದಾರ್ಥ

ವಿಪ್ರಃ—ಮೇಧಾವಿಯಾದ । ಸಃ—ಅಗ್ನಿಯು । ಶವಸಾ—ತನ್ನ ಬಲದಿಂದ । ಮಾನುಷಾಣಾಂ—ಮನುವಿನಸಂಬಂಧಿಗಳಾದ । ಚರ್ಷಣೀನಾಂ – ಪ್ರಜೆಗಳ । ಕ್ಷಿಪ್ರೇವ – ನಾಶಾರ್ಹವಾದ ಪಾಪಗಳನ್ನು । ಅತಿ ವಿಧ್ಯತಿ— ಪೂರ್ಣವಾಗಿ ನಾಶಮಾಡಲಿ.

ಭಾವಾರ್ಥ

ಮೇಧಾವಿಯಾದ ಅಗ್ನಿಯು ತನ್ನ ಬಲದಿಂದ ಮನುಷ್ಯರೂಪಿಗಳಾದ ಪ್ರಜೆಗಳ ನಾಶಾರ್ಹವಾದ ಪಾಪಗಳನ್ನು ಪೂರ್ಣವಾಗಿ ನಾಶಮಾಡಲಿ.

English Translation

May the wise Agni entirely obviate by his power the removable (ills) of men, the descendants of Manu.

———

CC-0. Jangamwadi Math Collection. Digitized by eGangotri

# ಒಂಭತ್ತನೆಯ ಸೂಕ್ತವು

ಸಾಯಣಭಾಷ್ಯಂ

ಅಗ್ನೇ ಮೃಳೇತ್ಯಷ್ಟರ್ಚಂ ನವಮಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರೀಛಂದಸ್ಕಮಗ್ನಿದೇವತಾಕಂ । ಅನುಕ್ರಾಂತಂ ಚ । ಅಗ್ನೇ ಮೃಳೇತಿ ॥ ದ್ವಿತೀಯೇ ಛಂದೋಮ ಇದಂ ಸೂಕ್ತಂ ಜಾತವೇದಸ್ಯನಿವಿದ್ಧಾನೀಯಂ । ಸೂತ್ರಿತಂ ಚ । ಕ್ರೀಳಂ ವಃ ಶರ್ಧೋಽಗ್ನೇ ಮೃಳೇತ್ಯಾಗ್ನಿಮಾರುತಂ । ಆ. ೮-೧೦ । ಇತಿ ॥

ಅನುವಾದವು—ಅಗ್ನೇ ಮೃಳ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಒಂಭತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ಗಾಯತ್ರೀ ಛಂದಸ್ಸು. ಅನುಕ್ರಮಣಿಕೆಯಲ್ಲಿ—ಅಗ್ನೇ ಮೃಳ ಎಂದು ಹೇಳಿರುವುದು. ದ್ವಿತೀಯ ಛಂದೋಮದಲ್ಲಿ ಈ ಸೂಕ್ತವನ್ನು ಜಾತವೇದಸ್ಸಂಬಂಧವಾದ ನಿವಿತ್ಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಕ್ರೀಳಂ ವಃ ಶರ್ಧೋಽಗ್ನೇ ಮೃಳೇತ್ಯಾಗ್ನಿಮಾರುತಂ ಎಂಬ ಸೂತ್ರದಿಂದ (ಆ. ೮-೧೦) ವಿವೃತವಾಗಿರುವುದು.

## ಸೂಕ್ತ—೯

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೯
ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೯ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೮
ಋಷಿಃ—ವಾಮದೇವಃ
ದೇವತಾ—ಅಗ್ನಿಃ
ಛಂದಃ—ಗಾಯತ್ರೀ ॥

:o:

ಸಂಹಿತಾಪಾಠಃ

ಅಗ್ನೇ ಮೃಳ ಮಹಾಁ ಅಸಿ ಯ ಈಮಾ ದೇವಯುಂ ಜನಂ ।
ಇಯೇಥ ಬರ್ಹಿರಾಸದಂ ॥ ೧ ॥

CC-0. Jangamwadi Math Collection. Digitized by eGangotri

ಪದಪಾಠಃ

ಅಗ್ನೇ । ಮೃಳ । ಮಹಾನ್ । ಅಸಿ । ಯಃ । ಈಂ । ಆ । ದೇವಽಯುಂ । ಜನಂ ।

ಇಯೇಥ । ಬರ್ಹಿಃ । ಆಽಸದಂ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಮೃಳ । ಅಸ್ಮಾನ್ ಸುಖಯ । ಸ ತ್ವಂ ಮಹಾನಸಿ । ಪ್ರಭೂತೋ ಭವಸಿ । ಯಸ್ತ್ವಮೀಮಿಮಂ ದೇವಯುಂ ದೇವಾನಾಂ ಕಾಮಯಿತಾರಂ ಜನಂ ಯಜಮಾನಂ ಬರ್ಹಿರ್ದರ್ಭಮಾಸದಂ ಯಜ್ಞ ಆಸತ್ತುಮಾ ಇಯೇಥ । ಆಗಚ್ಛಸಿ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ಮಹತ್ತ್ವವುಳ್ಳ ನೀನು । ದೇವಯುಂ—ದೇವತೆಗಳ ಸಾನ್ನಿಧ್ಯವನ್ನು ಯಜ್ಞಾರ್ಥವಾಗಿ ಅಪೇಕ್ಷಿಸುವ । ಈಂ ಜನಂ—ಈ ಯಜಮಾನನ ಅಭಿಮುಖವಾಗಿ । ಬರ್ಹಿಃ—ದರ್ಭಾಸನದ ಮೇಲೆ । ಆಸದಂ—ಕುಳಿತುಕೊಳ್ಳಲು । ಆ ಇಯೇಥ—ಬರುತ್ತೀಯೋ । (ತ್ವಂ—ಅಂತಹ ನೀನು)। ಮಹಾನ್ ಅಸಿ—ಮಹತ್ತ್ವವುಳ್ಳವನಾಗಿದ್ದೀಯೆ (ಆದುದರಿಂದ) । ಮೃಳ—ನಮ್ಮನ್ನು ಸುಖಪಡಿಸು.

ಭಾವಾರ್ಥ

ಎಲೈ ಅಗ್ನಿಯೇ, ಯಾವ ಮಹತ್ತ್ವವುಳ್ಳ ನೀನು ದೇವತೆಗಳ ಸಾನ್ನಿಧ್ಯವನ್ನು ಯಜ್ಞಾರ್ಥವಾಗಿ ಅಪೇಕ್ಷಿಸುವ ಈ ಯಜಮಾನನ ಅಭಿಮುಖವಾಗಿ ದರ್ಭಾಸನದ ಮೇಲೆ ಕುಳಿತುಕೊಳ್ಳಲು ಬರುವೆಯೋ ಅಂತಹ ನೀನು ಮಹತ್ತ್ವವುಳ್ಳವನಾಗಿದ್ದೀಯೆ. ನಮ್ಮನ್ನು ಸುಖಪಡಿಸು.

English Translation

Agni, make us happy, for you are mighty, (you) who come to this devout man to sit down on the sacred grass.

———

ಸಂಹಿತಾಪಾಠಃ

ಸ ಮಾನುಷೀಷು ದೂಳಭೋ ವಿಕ್ಷು ಪ್ರಾವೀರಮರ್ತ್ಯಃ ॥

ದೂತೋ ವಿಶ್ವೇಷಾಂ ಭುವತ್ ॥ ೨ ॥



CC-0. Jangamwadi Math Collection. Digitized by eGangotri

ಪದಪಾಠಃ

ಸಃ । ಮಾನುಷೀಷು । ದುಃಽದಭಃ । ವಿಕ್ಷು । ಪ್ರಽಅವೀಃ । ಅಮರ್ತ್ಯಃ ।

ದೂತಃ । ವಿಶ್ವೇಷಾಂ । ಭುವತ್ ॥ ೨ ॥

ಸಾಯಣಭಾಷ್ಯಂ

ದೂಳಭೋ ದುರ್ದಭೋ ರಾಕ್ಷಸಾದಿನಾ ಪುರ್ಹಿಂಸೋ ಮಾನುಷೀಷು ಮನುಸಂಬಂಧಿನೀಷು ವಿಕ್ಷು ಪ್ರಜಾಸು ಪ್ರಾವೀಃ ಪ್ರಕರ್ಷೇಣ ಗಂತಾಮರ್ತ್ಯೋಽಮರಣಧರ್ಮಾ ಸೋಽಗ್ನಿರ್ವಿಶ್ವೇಷಾಂ ಸರ್ವೇಷಾಂ ದೇವಾನಾಂ ದೂತೋ ಭುವತ್ । ಭವತು ॥

ಪ್ರತಿಪದಾರ್ಥ

ದೂಳಭಃ—ಅಸುರರಿಂದಲೂ ಪ್ರತಿಭಟಿಸಲು ಸಾಧ್ಯವಲ್ಲದವನೂ । ಮಾನುಷೀಷು—ಮನುಸಂಬಂಧಿಗಳಾದ । ವಿಕ್ಷು—ಪ್ರಜೆಗಳ ನಡುವೆ । ಪ್ರಾವೀಃ—ಪ್ರಧಾನನಾಗಿ ಸಂಚರಿಸುವವನೂ । ಅಮರ್ತ್ಯಃ—ಮರಣಧರ್ಮರಹಿತನೂ ಆದ । ಸಃ—ಅದೇ ಅಗ್ನಿಯು । ವಿಶ್ವೇಷಾಂ—ಸಮಸ್ತ ದೇವತೆಗಳಿಗೂ । ದೂತಃ—ದೂತನಾಗಿ । ಭುವತ್—ಆಗಿರಲಿ.

ಭಾವಾರ್ಥ

ಅಸುರರಿಂದಲೂ ಪ್ರತಿಭಟಿಸಲು ಸಾಧ್ಯವಿಲ್ಲದವನೂ, ಮನುಸಂಬಂಧಿಗಳಾದ ಪ್ರಜೆಗಳ ನಡುವೆ ಪ್ರಧಾನನಾಗಿ ಸಂಚರಿಸುವವನೂ ಮರಣಧರ್ಮರಹಿತನೂ ಆದ ಅದೇ ಅಗ್ನಿಯು ಸಮಸ್ತದೇವತೆಗಳಿಗೂ ದೂತನಾಗಿರಲಿ.

English Translation

May that Agni, who is difficult to overcome, who is immortal, who is pre-eminent among men the descendants of Manu, become the messenger of all the gods..

———

ಸಂಹಿತಾಪಾಠಃ

ಸ ಸದ್ಮ ಪರಿ ಣೀಯತೇ ಹೋತಾ ಮಂದ್ರೋ ದಿವಿಷ್ಟಿಷು ।

ಉತ ಪೋತಾ ನಿ ಷೀದತಿ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಸಃ । ಸದ್ಮ । ಪರಿ । ನೀಯತೇ । ಹೋತಾ । ಮಂದ್ರಃ । ದಿವಿಷ್ಟಿಷು ।

ಉತ । ಪೋತಾ । ನಿ । ಸೀದತಿ ॥ ೩ ॥

ಸಾಯಣಭಾಷ್ಯಂ

ಸೋಽಗ್ನಿಃ ಸದ್ಮ ಯಜ್ಞಗೃಹಂ ಪರಿ ಣೀಯತೇ । ಋತ್ವಿಗ್ಭಿಃ ಪರಿತೋ ನೀಯತೇ । ನೀಯ-ಮಾನಃ ಸನ್ ದಿವಿಷ್ಟಿಷು ಯಾಗೇಷು ಮಂದ್ರೋ ಮದನೀಯಃ ಸ್ತುತ್ಯಃ ಸೋಽಗ್ನಿರ್ಹೋತಾ ಚ ಭವತಿ । ಉತಾಪಿ ಚ ಪೋತಾ ಸನ್ನಿ ಷೀದತಿ । ಯಜ್ಞಗೃಹ ಉಪವಿಶತಿ ॥

ಪ್ರತಿಪದಾರ್ಥ

ಸಃ—ಅದೇ ಅಗ್ನಿಯು । ಸದ್ಮ—ಯಜ್ಞಗೃಹದಲ್ಲಿ । ಪರಿಣೀಯತೇ—(ಋತ್ವಿಕ್ಕುಗಳಿಂದ) ಸುತ್ತಲೂ ಸೇರಿ ಒಯ್ಯಲ್ಪಡುತ್ತಾನೆ । ಮಂದ್ರಃ—ಆಕರ್ಷಕನೂ ಪೂಜ್ಯನೂ ಆದ ಅಗ್ನಿಯು । ದಿವಿಷ್ಟಿಷು—ಯಜ್ಞಗಳಲ್ಲಿ । ಹೋತಾ—ಹೋತೃವಾಗಿರುತ್ತಾನೆ । ಉತ—ಮತ್ತು । ಪೋತಾ—ಪೋತೃವಾಗಿಯೂ । ನಿಷೀದತಿ—ಯಜ್ಞ ಗೃಹದಲ್ಲಿ ಕುಳಿತುಕೊಳ್ಳುತ್ತಾನೆ.

ಭಾವಾರ್ಥ

ಮಹಾತ್ಮನಾದ ಅಗ್ನಿಯು ಯಜ್ಞಗೃಹದಲ್ಲಿ ಋತ್ವಿಕ್ಕುಗಳಿಂದ ಸುತ್ತಲೂ ಸೇರಿ ಒಯ್ಯಲ್ಪಡುತ್ತಾನೆ. ಆಕರ್ಷಕನೂ ಪೂಜ್ಯನೂ ಆದ ಅದೇ ಅಗ್ನಿಯು ಹೋತೃವಾಗಿಯೂ ಪೋತೃಸ್ವರೂಪನಾಗಿಯೂ ಇದ್ದಾನೆ.

English Translation

He is conveyed into the sacrificial hall as the Hotri to be adored at sacrifices, or as the Potri he sits down (on the sacred grass).

---

ಸಂಹಿತಾಪಾಠಃ

ಉತ ಗ್ನಾ ಅಗ್ನಿರಧ್ವರ ಉತೋ ಗೃಹಪತಿರ್ದಮೇ ।

ಉತ ಬ್ರಹ್ಮಾ ನಿಷೀದತಿ ॥ ೪ ॥

CC-0. Jangamwadi Math Collection. Digitized by eGangotri

ಪದಪಾಠಃ

ಉತ । ಗ್ನಾಃ । ಅಗ್ನಿಃ । ಅಧ್ವರೇ । ಉತೋ ಇತಿ । ಗೃಹಃಪತಿಃ । ದಮೇ ।
ಉತ । ಬ್ರಹ್ಮಾ । ನಿ । ಸೀದತಿ ॥ ೪ ॥

ಸಾಯಣಭಾಷ್ಯಂ

ಉತಾಪಿ ಚಾಗ್ನಿರಧ್ವರೇ ಯಾಗೇ ಗ್ನಾ ದೇವಪತ್ನೀರ್ಯಜತಿ । ಯಷ್ಟಾ ಭವತೀತ್ಯರ್ಥಃ । ಯದ್ವಾ । ಗ್ನಾ ಗಚ್ಛನ್ನಧ್ವರ್ಯುರ್ಭವತಿ । ಉತೋ ಅಪಿ ಚ ಸೋಽಗ್ನಿರ್ದಮೇ ಯಜ್ಞಗೃಹೇ ಗೃಹಪತಿರ್ಯಜಮಾನಶ್ಚ ಭವತಿ । ಉತಾಪಿ ಚ ಬ್ರಹ್ಮಾ ಬ್ರಾಹ್ಮಣಾಚ್ಛಂಸೀ ಸನ್ನಿ ಷೀದತಿ । ಉಪವಿಶತಿ ॥

ಪ್ರತಿಪದಾರ್ಥ

ಉತ—ಮತ್ತು । ಅಗ್ನಿಃ—ಅಗ್ನಿಯು । ಅಧ್ವರೇ—ಯಾಗದಲ್ಲಿ । ಗ್ನಾಃ—ಅಧ್ವರ್ಯುವಾಗಿರುತ್ತಾನೆ । ಉತೆ—ಮತ್ತು । ದಮೇ—ಯಜ್ಞಗೃಹದಲ್ಲಿ । ಗೃಹಪತಿಃ—ಯಜಮಾನನಾಗಿಯೂ ಇದ್ದಾನೆ । ಉತ—ಮತ್ತು ಬ್ರಹ್ಮಾ—ಬ್ರಾಹ್ಮಣಾಚ್ಛಂಸಿಯಾಗಿಯೂ । ನಿ ಷೀದತಿ—ಕುಳಿತುಕೊಳ್ಳುತ್ತಾನೆ.

ಭಾವಾರ್ಥ

ಅದೇ ಮಹಾತ್ಮನಾದ ಅಗ್ನಿಯು ಯಜ್ಞದಲ್ಲಿ ಅಧ್ವರ್ಯುವಾಗಿಯೂ (ಅಥವಾ ದೇವಪತ್ನಿಯರನ್ನು ಪೂಜಿಸುವವನಾಗಿಯೂ) ಯಜ್ಞಗೃಹದಲ್ಲಿ ಯಜಮಾನನಾಗಿಯೂ ಮತ್ತು ಬ್ರಾಹ್ಮಣಾಚ್ಛಂಸಿಯಾಗಿಯೂ ಕುಳಿತುಕೊಳ್ಳುತ್ತಾನೆ.

English Translation

Agni may be the officiating priest at the sacrifice, or the master of the house in the sacrificial chamber, or he sits down as the Brahman.

---

ಸಂಹಿತಾಪಾಠಃ

ವೇಷಿ ಹ್ಯಧ್ವರೀಯತಾಮುಪವಕ್ತಾ ಜನಾನಾಂ ।
ಹವ್ಯಾ ಚ ಮಾನುಷಾಣಾಂ ॥ ೫ ॥

ಪದಪಾಠಃ

ವೇಷಿ । ಹಿ । ಅಧ್ವರಿಽಯತಾಂ । ಉಪಃವಕ್ತಾ । ಜನಾನಾಂ ।
ಹವ್ಯಾ । ಚ । ಮಾನುಷಾಣಾಂ ॥ ೫ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಅಧ್ವರೀಯತಾಂ ಯಜ್ಞಮಿಚ್ಛತಾಂ ಮಾನುಷಾಣಾಂ ಮನುಸಂಬಂಧಿನಾಂ ಜನಾನಾಂ ಹವ್ಯಾ ಚ ಹವ್ಯಾನಿ ಹವೀಂಷಿ ಹೇ ಅಗ್ನೇ ವೇಷಿ ಹಿ । ಕಾಮಯಸೇ ಖಲು । ಉಪವಕ್ತಾಧ್ವರ್ಯುಪ್ರಭೃತೀನಾಂ ಸರ್ವೇಷಾಂ ಕರ್ಮಣಾಮನುಜ್ಞಾರ್ಥಂ ಮಾಂ ಪ್ರಣಯೇತ್ಯಾದಿರೂಪಸ್ಯ ವಾಕ್ಯಸ್ಯ ವಕ್ತಾ ಸನ್ ಬ್ರಹ್ಮಾ ಚಾಸಿ । ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ । ಋಗ್ವೇ. ೧೦-೭೧-೧೧ । ಇತಿ ಶ್ರುತೇಃ । ಉಪವಕ್ತಾ ಸರ್ವೇಷಾಂ ಕರ್ಮಣಾಮನುವೈಕಲ್ಯಾರ್ಥಮುಪದ್ರಷ್ಟಾ ವಾ ಸದಸ್ಯೋಽಸಿ । ಸ ಹಿ ಸಪ್ತದಶಃ ಕರ್ಮಣಾಮುಪದ್ರಷ್ಟಾ ಭವತೀತ್ಯಾಪಸ್ತಂಬೇನೋಕ್ತತ್ವಾತ್ ॥

## ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ) । ಅಧ್ವರೀಯತಾಂ—ಯಜ್ಞವನ್ನು ನೆರವೇರಿಸಲಿಚ್ಛಿಸುವವರೂ । ಮಾನುಷಾಣಾಂ—ಮನುಸಂಬಂಧಿಗಳಾದವರೂ ಆದ । ಜನಾನಾಂ—ಯಜಮಾನರ । ಹವ್ಯಾ ಚ—ಹವಿಸ್ಸುಗಳನ್ನೂ ಕೂಡ । ವೇಷಿ ಹಿ—ನೀನು ಅಪೇಕ್ಷಿಸುತ್ತೀಯಲ್ಲವೆ. (ಆದುದರಿಂದಲೇ) । ಉಪವಕ್ತಾ—(ಯಜಮಾನರಿಗೂ ಋತ್ವಿಕ್ಕುಗಳಿಗೂ ಸಕಾಲದಲ್ಲಿ ಅನುಜ್ಞೆಯನ್ನು ಕೊಡತಕ್ಕ) ಉಪವಕ್ತೃವಾಗಿಯೂ ಇದ್ದೀಯೆ.

## ಭಾವಾರ್ಥ

ಎಲೈ ಅಗ್ನಿಯೇ, ಯಜ್ಞವನ್ನು ನೆರವೇರಿಸಲಿಚ್ಛಿಸುವವರೂ, ಮನುಸಂಬಂಧಿಗಳಾದವರೂ ಆದ ಯಜಮಾನರ ಹವಿಸ್ಸುಗಳನ್ನು ಕೂಡ ನೀನು ಅಪೇಕ್ಷಿಸುತ್ತಿಯಲ್ಲವೇ ? ಆದುದರಿಂದಲೇ, ಯಜಮಾನರಿಗೂ, ಋತ್ವಿಕ್ಕುಗಳಿಗೂ ಸಕಾಲದಲ್ಲಿ ಅನುಜ್ಞೆಯನ್ನು ಕೊಡತಕ್ಕ ಉಪವಕ್ತೃವಾಗಿಯೂ ಇದ್ದೀಯೆ .

## English Translation

You, who are the director (of the ceremonial), accept the oblations of devoutly-worshipping men the descendants of Manu.

———

## ಸಂಹಿತಾಪಾಠಃ

ವೇಷೀದ್ವಸ್ಯ ದೂತ್ಯಂ೧ ಯಸ್ಯ ಜುಜೋಷೋ ಅಧ್ವರಂ ।
ಹವ್ಯಂ ಮರ್ತಸ್ಯ ವೋಳ್ಹವೇ ॥ ೩ ॥

## ಪದಪಾಠಃ

ವೇಷಿ । ಇತ್ । ಊಂ ಇತಿ । ಅಸ್ಯ । ದೂತ್ಯಂ । ಯಸ್ಯ । ಜುಜೋಷಃ । ಅಧ್ವರಂ ।
ಹವ್ಯಂ । ಮರ್ತಸ್ಯ । ವೋಳ್ಹವೇ ॥ ೩ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಮರ್ತಸ್ಯ ಮನುಷ್ಯಸ್ಯ ಯಸ್ಯ ಯಜಮಾನಸ್ಯಾಧ್ವರಂ ಯಾಗಂ ಹವ್ಯಂ ಹವಿರ್ವೋಳ್ಹವೇ ವೋಢುಂ ॥ ವಹೇರ್ಥಾತೋಸ್ತುಮರ್ಥೇ ಸೇಸೇನಸ ಇತಿ ತವೇನ್ಪ್ರತ್ಯಯಃ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ ॥ ಜುಜೋಷಃ ಸೇವೇಥಾಃ ॥ ಜುಷೀ ಪ್ರೀತಿಸೇವನಯೋಃ । ಲೇಟ್ । ಬಹುಲಂ ಛಂದಸೀತಿ ಶಪಃ ಶ್ಲುರ್ದ್ವಿರ್ಭಾವಶ್ಚ । ಲೇಟೋಽಡಾಟಾವಿತ್ಯಡಾಗಮಃ ॥ ಅಸ್ಯ ಯಜಮಾನಸ್ಯ ದೂತ್ಯಂ ದೂತಕರ್ಮ ವೇಷೀದು । ಕಾಮಯಸ ಏವ ॥

ಪ್ರತಿಪದಾರ್ಥ

ಮರ್ತಸ್ಯ—(ಎಲೈ ಅಗ್ನಿಯೇ) ಮಾನವನಾದ । ಯಸ್ಯ—ಯಾವ ಯಜಮಾನನ । ಅಧ್ವರಂ—ಯಜ್ಞ ಸಂಬಂಧಿಯಾದ । ಹವ್ಯಂ—ಹವಿಸ್ಸನ್ನು । ವೋಳ್ಹವೇ—ವಹಿಸಲು । ಜುಜೋಷಃ—ಅಪೇಕ್ಷಿಸುತ್ತೀಯೆ. ( ಆ ಕಾರಣದಿಂದಲೇ) । ಅಸ್ಯ—ಈ ಯಜಮಾನನ । ದೂತ್ಯಂ—ದೂತಕರ್ಮವನ್ನೂ । ವೇಷೀದು—ಇಚ್ಛಿಸುತ್ತೀಯಲ್ಲವೇ ?

ಭಾವಾರ್ಥ

ಎಲೈ ಅಗ್ನಿಯೇ, ಮಾನವನಾದ ಯಾವ ಯಜಮಾನನ ಯಜ್ಞಸಂಬಂಧಿಯಾದ ಹವಿಸ್ಸನ್ನು ನೀನು ವಹಿಸಲು ಅಪೇಕ್ಷಿಸುತ್ತಿಯೋ ಅದೇ ಕಾರಣದಿಂದ ಅದೇ ಯಜಮಾನನ ದೂತ್ಯಕರ್ಮವನ್ನೂ ಇಚ್ಛಿಸುತ್ತೀಯಲ್ಲವೇ.

English Translation

You are willing (to fulfil) the office of messenger for the mortal whose oblations at the sacrifice you are pleased to convey.



ಸಂಹಿತಾಪಾಠಃ

ಅಸ್ಮಾಕಂ ಜೋಷ್ಯಧ್ವರಮಸ್ಮಾಕಂ ಯಜ್ಞಮಂಗಿರಃ ।
ಅಸ್ಮಾಕಂ ಶೃಣುಧೀ ಹವಂ ॥ ೭ ॥

ಪದಪಾಠಃ

ಅಸ್ಮಾಕಂ । ಜೋಷಿ । ಅಧ್ವರಂ । ಅಸ್ಮಾಕಂ । ಯಜ್ಞಂ । ಅಂಗಿರಃ ।
ಅಸ್ಮಾಕಂ । ಶೃಣುಧಿ । ಹವಂ ॥ ೭ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಂಗಿರೋಽಗ್ನೇ ತ್ವಮಸ್ಮಾಕಮಧ್ವರಮಸ್ಮದೀಯಂ ಯಾಗಂ ಜೋಷಿ । ಜುಷಸ್ವ । ಸೇವಸ್ವ । ಅಸ್ಮಾಕಮಸ್ಮದೀಯಂ ಯಜ್ಞಂ ಯಜನಸಾಧನಂ ಹವಿಶ್ಚ ಜುಷಸ್ವ । ಅಸ್ಮಾಕಮಸ್ಮದೀಯಂ ಹವಮಾಹ್ವಾನರೂಪಂ ಸ್ತೋತ್ರಂ ಚ ಶೃಣುಧಿ । ಶೃಣು ॥ ಶೃಣೋತೇರ್ಲೋಣ್ಮಧ್ಯಮೈಕವಚನೇ ಸಿಪ್ । ತಸ್ಯ ಹಿರಾದೇಶೇ ಶ್ರುವಃ ಶೃ ಚೇತಿ ಧಾತೋಃ ಶ್ನುಪ್ರತ್ಯಯಃ ಶೃಭಾವಶ್ಚ । ಶ್ರುಶೃಣುಪೃಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ ॥

ಪ್ರತಿಪ್ರಧಾರ್ಥ

ಅಂಗಿರಃ—ಎಲೈ ಅಗ್ನಿಯೇ । (ತ್ವಂ—ನೀನು) । ಅಸ್ಮಾಕಂ—ನಮ್ಮ । ಅಧ್ವರಂ—ಯಾಗವನ್ನು । ಜೋಷಿ—ಸೇವಿಸು । ಅಸ್ಮಾಕಂ—ನಮ್ಮ । ಯಜ್ಞಂ—ಯಜ್ಞಸಾಧನವಾದ ಹವಿಸ್ಸನ್ನು (ಸೇವಿಸು) । ಅಸ್ಮಾಕಂ—ನಮ್ಮ । ಹವಂ—ಆಹ್ವಾನರೂಪವಾದ ಸ್ತೋತ್ರವನ್ನು । ಶೃಣುಧಿ—ಆಲಿಸಿ ಕೇಳು.

ಭಾವಾರ್ಥ

ಎಲೈ ಅಗ್ನಿಯೇ, ನಮ್ಮ ಯಾಗವನ್ನು ಸೇವಿಸು. ಯಜ್ಞಸಾಧನವಾದ ನಮ್ಮ ಹವಿಸ್ಸನ್ನು ಸೇವಿಸು. ಆಹ್ವಾನರೂಪವಾದ ನಮ್ಮ ಸ್ತೋತ್ರವನ್ನು ಕೇಳು.

English Translation

Be pleased by our sacrifice; (be pleased) Angiras, by our offering : hear our invocation.

---

ಸಂಹಿತಾಪಾಠಃ

ಪರಿ ತೇ ದೂಳಭೋ ರಥೋಽಸ್ಮಾँ ಅಶ್ನೋತು ವಿಶ್ವತಃ ।
ಯೇನ ರಕ್ಷಸಿ ದಾಶುಷಃ ॥ ೮ ॥

ಪದಪಾಠಃ

ಪರಿ । ತೇ । ದುಃಽದಭಃ । ರಥಃ । ಅಸ್ಮಾನ್ । ಅಶ್ನೋತು । ವಿಶ್ವತಃ ।
ಯೇನ । ರಕ್ಷಸಿ । ದಾಶುಷಃ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ತ್ವಂ ಯೇನ ರಥೇನ ವಿಶ್ವತೋ ವಿಶ್ವಾಸು ಸರ್ವಾಸು ದಿಕ್ಷು ಗಚ್ಛನ್ ದಾಶುಷೋ ಹವಿಷ್ಪ್ರದಾತ್ರ್ಯಾನ್ಯಜಮಾನಾನ್ರಕ್ಷಸಿ । ವಿಘ್ನೇಭ್ಯಃ ಪಾಲಯಸಿ । ತ್ವದೀಯೋ ದೂಳಭೋ ದುರ್ದಭೋ

CC-0. Jangamwadi Math Collection. Digitized by eGangotri

ದುರ್ಹಿಂಸಃ ಸ ರಥೋಽಸ್ಮಾನ್ಯಜಮಾನಾನ್ ಪರಿ ಪರಿತಃ ಸರ್ವತೋಽಶ್ನೋತು । ವ್ಯಾಪ್ನೋತು ॥ ಅಶ್ನೋತೇರ್ವ್ಯತ್ಯಯೇನ ಪರಸ್ಮೈಪದಂ ॥

ಪ್ರತಿಪದಾರ್ಥ

(ಅಗ್ನೇ—ಎಲೈ ಅಗ್ನಿಯೇ) । ಯೇನ—ಯಾವ ರಥದೊಡನೆ । ವಿಶ್ವತಃ—ಸಮಸ್ತ ದಿಕ್ಕುಗಳಲ್ಲಿಯೂ ಸಂಚರಿಸುತ್ತಾ । ದಾಶುಷಃ—ಹವಿರ್ದಾತರಾದ ಯಜಮಾನರನ್ನು । ರಕ್ಷಸಿ—ಪಾಲಿಸುತ್ತೀಯೋ । ತೇ—ನಿನ್ನ ಸಂಬಂಧಿಯಾದುದೂ । ದೂಳಭಃ—ಶತ್ರುಗಳಿಂದ ಪ್ರತಿಭಟಿಸಲು ಸಾಧ್ಯವಿಲ್ಲದಿರುವುದೂ ಆದ । ರಥಃ—ಆ ರಥವು ಅಸ್ಮಾನ್—ಯಜಮಾನರಾದ ನಮ್ಮನ್ನು । ಪರಿ—ಸುತ್ತಲೂ । ಅಶ್ನೋತು—ವ್ಯಾಪಿಸಿ ನಮ್ಮ ರಕ್ಷಕವಾಗಿರಲಿ.

ಭಾವಾರ್ಥ

ಎಲೈ ಅಗ್ನಿಯೆ, ಯಾವ ರಥದೊಡನೆ ಸಮಸ್ತ ದಿಕ್ಕುಗಳಲ್ಲಿಯೂ ಸಂಚರಿಸುತ್ತಾ ಹವಿರ್ದಾತರಾದ ಯಜಮಾನರನ್ನು ಪಾಲಿಸುತ್ತೀಯೋ ನಿನ್ನ ಸಂಬಂಧಿಯಾದುದೂ, ಶತ್ರುಗಳಿಂದ ಪ್ರತಿಭಟಿಸಲು ಸಾಧ್ಯವಿಲ್ಲದಿರುವುದೂ ಆದ ಆ ರಥವು ಯಜಮಾನರಾದ ನಮ್ಮ ಸುತ್ತಲೂ ಇದ್ದು ನಮ್ಮ ರಕ್ಷಕವಾಗಿರಲಿ.

English Translation

May your inviolable car, whereby you defend the donors of oblations, be everywhere around us.

---

## ಹತ್ತನೆಯ ಸೂಕ್ತವು.

---

ಸಾಯಣಭಾಷ್ಯಂ

ಅಗ್ನೇ ತಮದ್ಯೇತ್ಯಷ್ಟರ್ಚಂ ದಶಮಂ ಸೂಕ್ತಂ ವಾಮದೇವಸ್ಯಾರ್ಷಮಾಗ್ನೇಯಂ । ತಥಾ ಚಾನುಕ್ರಮಣಿಕಾ । ಅಗ್ನೇ ತಮದ್ಯ ಪದಪಾಂಕ್ತಂ ಪಂಚಮೀ ಮಹಾಪದಪಂಕ್ತಿರಂತ್ಯೋಷ್ಣಿಕ್ ಚತುರ್ಥೀ ಷಷ್ಠ್ಯೌಪಾಂತ್ಯಾ ವಾ ಸಪ್ತಮ್ಯಾಃ ಪಂಚಕೌ ಮುಖ್ಯೌ ತೃತೀಯಃ ಸಪ್ತಕೋ ನವಕಶ್ಚಾಷ್ಟಮ್ಯಾಃ ಪಂಚಕಃ ಪಾದಶ್ಚತುಷ್ಕಃ ಸಪ್ತಕಸ್ತ್ರೈಷ್ಟುಭಶ್ಚೇತಿ । ಇದಂ ಕೃತ್ಸ್ನಮಪಿ ಸೂಕ್ತಂ ಪದಪಂಕ್ತಿಛಂದಸ್ಕಂ ಪಂಚಕಾಶ್ಚತ್ವಾರಃ ಷಟ್ಕಶ್ಚೈಕಶ್ಚತುರ್ಥಶ್ಚತುಷ್ಕೋ ವಾ ಪದಪಂಕ್ತಿರಿತ್ಯುಕ್ತಲಕ್ಷಣೋಪೇತತ್ವಾತ್ । ಪಂಚಮೀ ತವ ಸ್ವಾದಿಷ್ಠೇತ್ಯೇಷಾ ಮಹಾಪದಪಂಕ್ತಿಃ ಪಂಚ ಪಂಚಕಾಃ ಷಟ್ಕಶ್ಚೈಕ ಇತಿ ಲಕ್ಷಣಸದ್ಭಾವಾತ್ । ಅಂತ್ಯಾ ಶಿವಾ ನಃ ಸಖ್ಯೇತ್ಯೇಷೋಷ್ಣಿಕ್ಛಂದಸ್ಕಾ । ಚತುರ್ಥೀಷಷ್ಠೀಸಪ್ತಮ್ಯ ಆಭಿಷ್ಟೇ ಅದ್ಯ ಘೃತಂ ನ ಪೂತಂ ಕೃತಂ ಚಿದ್ಧಿ ಷ್ಮೇತ್ಯೇತಾಸ್ತಿಸ್ರ ಉಷ್ಣಿಹಃ ಪದಪಂಕ್ತ್ಯೋ ವಾ । ಅತ್ರ ಸಪ್ತಮ್ಯಷ್ಟಮ್ಯೋಃ ಪದಪಂಕ್ತ್ಯುಷ್ಣಿಹೋಃ ಪರಿಭಾಷೋಕ್ತಪಾದವಿಚ್ಛೇದಾಪವಾದಾಯ ಪ್ರಕಾರಾಂತರೇಣ ವಿಚ್ಛೇದಃ ಕೃತಃ ॥ ದಶಮೇಽಹನೀದಂ ಸೂಕ್ತಮಾಜ್ಯಶಸ್ತ್ರಂ । ಸೂತ್ರಿತಂ ಚ । ಅಗ್ನೇ ತಮದ್ಯಾ-

CC-0. Jangamwadi Math Collection. Digitized by eGangotri

ಶ್ವಂ ನ ಸ್ತೋಮೈರಿತ್ಯಾಜ್ಯಂ । ಆ. ೮-೧೨ । ಇತಿ ॥ ಪಿಂಡಪಿತೃಯಜ್ಞೇಽಗ್ನೇ ತಮುದ್ಯೇತ್ಯನಯಾಗ್ನಿಂ ಪ್ರತ್ಯಾಗಚ್ಛೇತ್ । ಸೂತ್ರಿತಂ ಚ । ಅಗ್ನಿಂ ಪ್ರತ್ಯೇಯಾದಗ್ನೇ ತಮದ್ಯಾಶ್ವಂ ನ ಸ್ತೋಮೈರಿತಿ । ಆ. ೨-೭ ಇತಿ ॥ ಪೌನರಾಧೇಯಿಕ್ಯಾಂ ಸ್ವಿಷ್ಟಕೃತ್ಯೇಷೈವ ಯಾಜ್ಯಾ । ಸೂತ್ರಿತಂ ಚ । ಅಗ್ನೇ ತಮದ್ಯಾಶ್ವಂ ನ ಸ್ತೋಮೈರಿತಿ ಸಂಯಾಜ್ಯೇ । ಆ. ೨ ೮ । ಇತಿ ॥

ಅನುವಾದವು— ಅಗ್ನೇ ತಮದ್ಯ ಎಂಬ ಈ ಸೂಕ್ತವು ಮೊದಲನೆಯ ಅನುವಾಕದಲ್ಲಿ ಹತ್ತನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ಅನುಕ್ರಮಣಿಕೆಯಲ್ಲಿ— ಅಗ್ನೇ ತಮದ್ಯ ಪದಪಾಂಕ್ತಂ ಪಂಚಮೀ ಮಹಾಪದಪಂಕ್ತಿರಂತ್ಯೋಷ್ಣಿಕ್ ಚತುರ್ಥೀ ಷಷ್ಠ್ಯೌ ಪಾಂತ್ಯಾ ವಾ ಸಪ್ತಮ್ಯಾಃ ಪಂಚಕೌ ಮುಖ್ಯಾ ತೃತೀಯಃ ಸಪ್ತಕೋ ನವಕಶ್ಚಾಷ್ಟಮ್ಯಾಃ ಪಂಚಕಃ ಪಾದಶ್ಚತುಷ್ಕಃ ಸಪ್ತಕಸ್ತ್ರ್ಯೃಷ್ಟುಭಶ್ಚ ಎಂದು ಹೇಳಿರುವುದು. ಈ ಸೂಕ್ತದ ಋಕ್ಕುಗಳೆಲ್ಲವೂ ಪದಪಂಕ್ತಿಶ್ಛಂದಸ್ಕವು. ಪಂಚಕಾಶ್ಚತ್ವಾರಃ ಷಟ್ಕಶ್ಚೈಕಶ್ಚತುರ್ಥಶ್ಚತುಷ್ಕೋ ವಾ ಪದಪಂಕ್ತಿಃ ಎಂದರೆ, ಐದೈದು ಅಕ್ಷರಗಳ ನಾಲ್ಕು ಪಾದಗಳೂ ಆರುಅಕ್ಷರಗಳ ಒಂದು ಪಾದವೂ ಇರುವ ಋಕ್ಕಿಗೆ ಪದಪಂಕ್ತಿಶ್ಛಂದಸ್ಸೆಂದು ಹೆಸರು ; ಅಥವಾ ಐದೈದು ಅಕ್ಷರಗಳ ಮೂರು ಪಾದಗಳೂ ನಾಲ್ಕು ಅಕ್ಷರಗಳ ಒಂದು ಪಾದವೂ, ಆರು ಅಕ್ಷರಗಳ ಒಂದು ಪಾದವೂ ಇರುವ ಛಂದಸ್ಸಿಗೂ ಪದಪಂಕ್ತಿಶ್ಛಂದಸ್ಸೆಂದು ಹೆಸರು. ಈ ಸೂಕ್ತದ ತವ ಸ್ವಾದಿಷ್ಠಾ ಎಂಬ ಐದನೆಯ ಋಕ್ಕು ಮಹಾಪದಪಂಕ್ತಿಶ್ಛಂದಸ್ಕವು. ಪಂಚ ಪಂಚಕಾಃ ಷಟ್ಕಶ್ಚೈಕಃ ಎಂದು ಇದರ ಲಕ್ಷಣವು. ಎಂದರೆ, ಐದೈದು ಅಕ್ಷರಗಳ ಐದು ಪಾದಗಳೂ, ಆರು ಅಕ್ಷರಗಳ ಒಂದು ಪಾದವೂ ಇದರಲ್ಲಿರುವವು. ಈ ಸೂಕ್ತದ ಶಿವಾ ನಃ ಸಖ್ಯಾ ಎಂಬ ಕೊನೆಯ ಋಕ್ಕು ಉಷ್ಣಿಕ್‌ಛಂದಸ್ಕವು. ಮತ್ತು ಅಧಿಷ್ಟೋ ಅದ್ಯ, ಘೃತಂ ನ ಪೂತಂ, ಕೃತಂ ಚಿದ್ಧಿ ಎಂಬ ೪, ೬, ೭ ನೆಯ ಋಕ್ಕುಗಳು ಉಷ್ಣಿಕ್ ಅಥವಾ ಪದಪಂಕ್ತಿ ಎಂಬ ಛಂದಸ್ಸಿನವು. ಇಲ್ಲಿ ಪದಪಂಕ್ತಿಶ್ಛಂದಸ್ಕವಾದ ಏಳನೆಯ ಋಕ್ಕಿಗೂ ಉಷ್ಣಿಕ್‌ಛಂದಸ್ಕವಾದ ಎಂಟನೆಯ ಋಕ್ಕಿಗೂ ಪಾದವಿಚ್ಛೇದವು ಪರಿಭಾಷೆಯಲ್ಲಿ (ಛಂದಸ್ ಶಾಸ್ತ್ರದಲ್ಲಿ) ಹೇಳಿರುವಂತೆ ಇಲ್ಲದೆ ಅಪವಾದವಾಗಿ ಪ್ರಕಾರಾಂತರದಿಂದ ಪಾದವಿಚ್ಛೇದಮಾಡಲಾಗಿದೆ. ಯಜ್ಞದ ಹತ್ತನೆಯ ದಿವಸದಲ್ಲಿ ಈ ಸೂಕ್ತವನ್ನು ಆಜ್ಯಶಸ್ತ್ರಮಂತ್ರಪಠನಕ್ಕಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅಗ್ನೇ ತಮದ್ಯಾಶ್ವಂ ನ ಸ್ತೋಮೈರಿತ್ಯಾಜ್ಯಂ ಎಂಬ ಸೂತ್ರದಿಂದ (ಆ. ೮-೧೨) ವಿವೃತವಾಗಿರುವುದು. ಪಿಂಡಪಿತೃಯಜ್ಞದಲ್ಲಿ— ಅಗ್ನೇ ತಮದ್ಯ ಎಂಬ ಋಕ್ಕನ್ನು ಅಗ್ನಿಯ ಅಭಿಮುಖವಾಗಿ ನಿಂತು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅಗ್ನಿಂ ಪ್ರತ್ಯೇಯಾದಗ್ನೇ ತಮದ್ಯಾಶ್ವಂ ನ ಸ್ತೋಮೈಃ ಎಂಬ ಸೂತ್ರದಿಂದ (ಆ. ೨-೭) ವಿವೃತವಾಗಿರುವುದು. ಮತ್ತು ಪುನರಾಧೇಯವೆಂಬ ಇಷ್ಟಿಯ ಸ್ವಿಷ್ಟಕೃದ್ಧೋಮದಲ್ಲಿ ಅಗ್ನೇ ತಮದ್ಯ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅಗ್ನೇ ತಮದ್ಯಾಶ್ವಂ ನ ಸ್ತೋಮೈರಿತಿ ಸಂಯಾಜ್ಯೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೨-೮).

———

CC-0. Jangamwadi Math Collection. Digitized by eGangotri

## ಸೂಕ್ತ—೧೦

ಮಂಡಲ—೪ ॥ ಅನುವಾಕ—೧ ॥ ಸೂಕ್ತ—೧೦ ॥
ಅಷ್ಟಕ—೩॥ ಅಧ್ಯಾಯ—೫ ॥ ವರ್ಗ—೧೦ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೮ ॥
ಋಷಿಃ—ವಾಮದೇವಃ ॥
ದೇವತಾ—ಅಗ್ನಿಃ ॥
ಛಂದಃ—೧-೩, ಪದಪಂಕ್ತಿಃ । ೪, ೬, ೭, ಉಷ್ಣಿಕ್ ಪದಪಂಕ್ತಿರ್ವಾ ।
೫. ಮಹಾಪದಪಂಕ್ತಿಃ । ೮. ಉಷ್ಣಿಕ್ ॥

---

ಸಂಹಿತಾಪಾಠಃ

ಅಗ್ನೇ ತಮದ್ಯಾಶ್ವಂ ನ ಸ್ತೋಮೈಃ ಕ್ರತುಂ ನ ಭದ್ರಂ ಹೃದಿಸ್ಪೃಶಂ।
ಋಧ್ಯಾಮಾ ತ ಓಹೈಃ ॥ ೧ ॥

ಪದಪಾಠಃ

ಅಗ್ನೇ । ತಂ । ಅದ್ಯ । ಅಶ್ವಂ । ನ । ಸ್ತೋಮೈಃ । ಕ್ರತುಂ । ನ । ಭದ್ರಂ । ಹೃದಿಽಸ್ಪೃಶಂ ।
ಋಧ್ಯಾಮ । ತೇ । ಓಹೈಃ ॥ ೧ ॥

ಸಾಯಣಭಾಷ್ಯಂ

ಹೇ ಅಗ್ನೇ ಅದ್ಯಾಸ್ಮಿನ್ನಹನಿ ವಯಮೃತ್ವಿಗಾದಯ ಓಹೈರಿಂದ್ರಾದಿಪ್ರಾಪಕೈಃ ಸ್ತೋಮೈಃ ಸ್ತೋತ್ರಸಮೂಹೈಸ್ತಂ ಪ್ರಸಿದ್ಧಂ ತ್ವಾಮೃಧ್ಯಾಮ । ಸಮರ್ಧಯಾಮಃ । ಕೀದೃಶಂ ತ್ವಾಂ । ಅಶ್ವಂ ನ ವೋಢಾರಮಶ್ವಮಿವ ತಥಾ ಹವಿಷೋ ವಾಹಕಂ ಕ್ರತುಂ ನ ಕರ್ತಾರಮಿವ । ಉಪಕರ್ತಾರಮಿತ್ಯರ್ಥಃ । ತಥಾ ಭದ್ರಂ ಭಜನೀಯಂ ಹೃದಿಸ್ಪೃಶಂ ಹೃದಯಂಗಮಂ । ಅತಿಶಯೇನ ಪ್ರಿಯಮಿತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಶ್ವಂ ನ—(ನಮ್ಮ ಹವಿಸ್ಸುಗಳನ್ನು ವಹಿಸುವುದರಲ್ಲಿ) ಅಶ್ವದಂತಿರುವವನೂ। ಕ್ರತುಂ ನ—ಉಪಕಾರಕನಂತಿರುವವನೂ । ಭದ್ರಂ ನ—ಮಂಗಳಕಾರಕನೂ । ಹೃದಿಸ್ಪೃಶಂ—ಹೃದಯಕ್ಕೆ ಪ್ರಿಯತಮನೂ । ತಂ—ಪ್ರಸಿದ್ಧನೂ ಆದ । ತೇ—ನಿನ್ನನ್ನು । ಓಹೈಃ—(ಇಂದ್ರಾದಿಗಳಿಗೆ ನಮ್ಮ ಅಭೀಷ್ಟಗಳನ್ನು) ತಲಪಿಸತಕ್ಕ । ಸ್ತೋಮೈಃ—ಸ್ತೋತ್ರಸಮೂಹಗಳಿಂದ । ಋಧ್ಯಾಮ —ಪ್ರವೃದ್ಧನಾಗುವಂತೆ ಮಾಡುತ್ತೇವೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಅಗ್ನಿಯೇ, ನಮ್ಮ ಹವಿಸ್ಸುಗಳನ್ನು ವಹಿಸುವುದರಲ್ಲಿ ಅಶ್ವದಂತಿರುವವನೂ, ಉಪಕಾರಕನಂತಿರುವವನೂ ಮಂಗಳಕಾರಕನೂ ಹೃದಯಕ್ಕೆ ಪ್ರಿಯತಮನೂ, ಪ್ರಸಿದ್ಧನೂ ಆದ ನಿನ್ನನ್ನು ಇಂದ್ರಾದಿಗಳಿಗೆ ನಮ್ಮ ಅಭೀಷ್ಟವನ್ನು ತಲಪಿಸತಕ್ಕ ಸ್ತೋತ್ರಸಮೂಹಗಳಿಂದ ಪ್ರವೃದ್ಧನಾಗುವಂತೆ ಮಾಡುತ್ತೇವೆ.

English Translation

We celebrate you to day, Agni, who are like a horse (in conveying our burdens) with your praises, conveying (our wishes to the gods), and (who are) like a benefactor, propitious and affectionate.

---

ಸಂಹಿತಾಪಾಠಃ

ಅಧಾ ಹ್ಯಗ್ನೇ ಕ್ರತೋರ್ಭದ್ರಸ್ಯ ದಕ್ಷಸ್ಯ ಸಾಧೋಃ ।

ರಥೀರ್ಋತಸ್ಯ ಬೃಹತೋ ಬಭೂಥ ॥ ೨ ॥

ಪದಪಾಠಃ

ಅಧ । ಹಿ । ಅಗ್ನೇ । ಕ್ರತೋಃ । ಭದ್ರಸ್ಯ । ದಕ್ಷಸ್ಯ । ಸಾಧೋಃ ।

ರಥೀಃ । ಋತಸ್ಯ । ಬೃಹತಃ । ಬಭೂಥ ॥ ೨ ॥

ಸಾಯಣಭಾಷ್ಯಂ

ಪೌನರಾಧೇಯಿಕ್ಯಾಮಿಷ್ಟೌ ಪ್ರಧಾನಸ್ಯಾಧಾ ಹ್ಯಗ್ನ ಇತ್ಯೇಷಾನುವಾಕ್ಯಾ । ಏಭಿರ್ನೋ ಅರ್ಕೈರಿತಿ ತಸ್ಯಾಂ ಸ್ವಿಷ್ಟಕೃತೋಽನುವಾಕ್ಯಾ । ಅಭಿಷ್ಟೇ ಅದ್ಯೇತಿ ಪ್ರಧಾನಸ್ಯ ಯಾಜ್ಯಾ । ಸೂತ್ರಿತಂ ಚ । ಅಧಾ ಹ್ಯಗ್ನೇ ಕ್ರತೋರ್ಭದ್ರಸ್ಯಾಭಿಷ್ಟೇ ಅದ್ಯ ಗೀರ್ಭಿರ್ಗೃಣಂತ ಏಭಿರ್ನೋ ಅರ್ಕೈಃ । ಆ. ೨-೮ । ಇತಿ ॥

ಅಧಾ ಹಿ ಇದಾನೀಮೇವ ಹೇ ಅಗ್ನೇ ತ್ವಂ ಕ್ರತೋರಸ್ಮದೀಯಸ್ಯ ಯಾಗಸ್ಯ ರಥೀರ್ನೇತಾ ಬಭೂಥ । ಭವಸಿ ॥ ಛಂದಸಿ ಲುಙ್ಲಙ್ಲಿಟ ಇತಿ ಭವತೇರ್ವರ್ತಮಾನೇಽರ್ಥೇ ಲಿಟಿ ಸಿಪಸ್ಥಲ್ । ಆರ್ಧಧಾತುಕಸ್ಯೇಡ್ವಲಾದೇರಿತೀಡಾಗಮೇ ಪ್ರಾಪ್ತೇ ಬಭೂಥಾತತಂಥೇತಿ ನಿಪಾತನಾದಿಡಭಾವಃ ॥ ಕೀದೃಶಸ್ಯ ಯಾಗಸ್ಯ । ಭದ್ರಸ್ಯ ಭಜನೀಯಸ್ಯ ದಕ್ಷಸ್ಯ ಪ್ರವೃದ್ಧಸ್ಯ ಸಾಧೋರಭೀಷ್ಟಫಲಾನಾಂ ಸಾಧಕಸ್ಯ ಋತಸ್ಯ ಸತ್ಯಭೂತಸ್ಯ ಬೃಹತೋ ಮಹತಃ ॥

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅಧಾ ಹಿ—ಈ ಒಡನೆಯೇ । ಭದ್ರಸ್ಯ—ಮಂಗಳಾತ್ಮಕವಾದುದೂ । ದಕ್ಷಸ್ಯ—ಪ್ರವೃದ್ಧವಾದುದೂ । ಸಾಧೋಃ—ನಮ್ಮ ಇಷ್ಟಾರ್ಥಗಳನ್ನು ಸಾಧಿಸತಕ್ಕದ್ದೂ । ಬೃಹತಃ—ಮಹತ್ತ್ವವುಳ್ಳದ್ದೂ । ಋತಸ್ಯ—ಸತ್ಯಾತ್ಮಕವಾದದ್ದೂ ಆದ । ಕ್ರತೋಃ—ಯಾಗದ । ರಥೀಃ—ನೇತೃವಾಗಿ । ಬಭೂಥ-ಆಗಿರುವವನಾಗು.

### ಭಾವಾರ್ಥ

ಎಲೈ ಅಗ್ನಿಯೇ, ನೀನು ಈ ಒಡನೆಯೇ, ನಮ್ಮಿಂದ ನೆರವೇರಿಸಲ್ಪಡುವ ಮಂಗಳಾತ್ಮಕವಾದುದೂ, ಪ್ರವೃದ್ಧವಾದುದೂ, ನಮ್ಮ ಇಷ್ಟಾರ್ಥಗಳನ್ನು ಸಾಧಿಸತಕ್ಕದ್ದೂ, ಮಹತ್ತ್ವವುಳ್ಳದ್ದೂ, ಸತ್ಯಾತ್ಮಕವಾದದ್ದೂ ಆದ ಯಾಗದ ನೇತೃವಾಗಿರು.

### English Translation

Be now the conveyer, Agni, of our auspicious, powerful, efficacious, truthful, and great sacrifice.

### ವಿಶೇಷವಿಷಯಗಳು

ಪುನರಾಧೇಯೇಷ್ಟಿಯ ಪ್ರಧಾನಹೋಮದಲ್ಲಿ— ಅಧಾ ಹ್ಯಗ್ನೇ ಎಂಬ ಈ ಋಕ್ಕನ್ನು ಪುರೋನುವಾಕ್ಯಾಮಂತ್ರವನ್ನಾಗಿಯೂ, ಅದೇ ಇಷ್ಟಿಯಲ್ಲಿ ಏಭಿರ್ನೋ ಅರ್ಕೈಃ (ಮೂರನೆಯ ಋಕ್ಕು) ಎಂಬ ಋಕ್ಕನ್ನು ಸ್ವಿಷ್ಟಕೃದ್ಧೋಮದಲ್ಲಿ ಅನುವಾಕ್ಯಾಮಂತ್ರವನ್ನಾಗಿಯೂ, ಅಭಿಷ್ಟೇ ಅದ್ಯ (ನಾಲ್ಕನೆಯ ಋಕ್ಕು) ಯಾಜ್ಯಾಮಂತ್ರವನ್ನಾಗಿಯೂ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅಧಾ ಹ್ಯಗ್ನೇ ಕ್ರತೋರ್ಭದ್ರಸ್ಯಾಭಿಷ್ಟೇ ಅದ್ಯ ಗೀರ್ಭಿರ್ಗೃಣಂತ ಏಭಿರ್ನೋ ಅರ್ಕೈಃ ಎಂಬ ಸೂತ್ರದಿಂದ (ಆ. ೨-೮) ವಿವೃತವಾಗಿರುವುದು.

---

### ಸಂಹಿತಾಪಾಠಃ

ಏಭಿರ್ನೋ ಅರ್ಕೈರ್ಭವಾ ನೋ ಅರ್ವಾಙ್ ಸ್ವರ್ಣ ಜ್ಯೋತಿಃ ।
ಅಗ್ನೇ ವಿಶ್ವೇಭಿಃ ಸುಮನಾ ಅನೀಕೈಃ ॥ ೩ ॥

### ಪದಪಾಠಃ

ಏಭಿಃ । ನಃ । ಅರ್ಕೈಃ । ಭವ । ನಃ । ಅರ್ವಾಙ್ । ಸ್ವಃ । ನ । ಜ್ಯೋತಿಃ ।
ಅಗ್ನೇ । ವಿಶ್ವೇಭಿಃ । ಸುಮನಾಃ । ಅನೀಕೈಃ ॥ ೩ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಹೇ ಅಗ್ನೇ ಜ್ಯೋತಿರ್ಜ್ಯೋತಿಷ್ಮಾನ್ ಸ್ವರ್ಣ ಸೂರ್ಯ ಇವ ತಥಾ ವಿಶ್ವೇಭಿರ್ವಿಶ್ವೈಃ ಸಮಸ್ತೈರನೀಕೈಸ್ತೇಜೋಭಿಃ ಸುಮನಾಃ ಶೋಭನಮನಸ್ಕಸ್ತ್ವಂ ನೋಽಸ್ಮದೀಯೈರೇಭಿರೇತೈರರ್ಕೈರರ್ಚನೀಯೈಃ ಸ್ತೋತ್ರೈರ್ನೋಽಸ್ಮಾಕಮರ್ವಾಙಭಿಮುಖೋ ಭವ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಸ್ವಃ ನ—ಆದಿತ್ಯನಂತೆ । ಜ್ಯೋತಿಃ—ಜ್ಯೋತೀರೂಪನಾದ ನೀನು । ನಃ—ನಮ್ಮ । ಏಭಿಃ ಅರ್ಕೈಃ—ಪೂಜಾಸಾಧನವಾದ ಈ ಸ್ತುತಿಗಳಿಂದ । ಸುಮನಾಃ—ಶೋಭನಾತ್ಮಕವಾದ ಮನಸ್ಸುಳ್ಳವನಾಗಿ । ವಿಶ್ವೇಭಿಃ—ಸಮಸ್ತವಾದ । ಅನೀಕೈಃ—ತೇಜಸ್ಸುಗಳಿಂದಲೂ ಕೂಡಿ । ನಃ—ನಮ್ಮ । ಅರ್ವಾಙ್-ಅಭಿಮುಖನಾಗಿ । ಭವ—ಆಗಿರು.

ಭಾವಾರ್ಥ

ಎಲೈ ಅಗ್ನಿಯೇ, ಆದಿತ್ಯನಂತೆ ಜ್ಯೋತೀರೂಪನಾದ ನೀನು ನಮ್ಮ ಪೂಜಾಸಾಧನವಾದ ಈ ಸ್ತುತಿಗಳಿಂದ ಶೋಭನಾತ್ಮಕಗಳಾದ ಮನಸ್ಸುಳ್ಳವನಾಗಿಯೂ, ಸಮಸ್ತವಾದ ತೇಜಸ್ಸುಗಳಿಂದ ಕೂಡಿಯೂ ನಮ್ಮ ಅಭಿಮುಖನಾಗಿರು.

English Translation

Agni, who like the sun are light, propitiated by these our hymns, come to our presence with all your hosts (of radiance).

———

ಸಂಹಿತಾಪಾಠಃ

ಆಭಿಷ್ಟೇ ಅದ್ಯ ಗೀರ್ಭಿರ್ಗೃಣಂತೋಽಗ್ನೇ ದಾಶೇಮ ।
ಪ್ರ ತೇ ದಿವೋ ನ ಸ್ತನಯಂತಿ ಶುಷ್ಮಾಃ ॥ ೪ ॥

ಪದಪಾಠಃ

ಆಭಿಃ । ತೇ । ಅದ್ಯ । ಗೀಃಽಭಿಃ । ಗೃಣಂತಃ । ಅಗ್ನೇ । ದಾಶೇಮ ।
ಪ್ರ । ತೇ । ದಿವಃ । ನ । ಸ್ತನಯಂತಿ । ಶುಷ್ಮಾಃ ॥ ೪ ॥

ಸಾಯಣಭಾಷ್ಯಂ

ಅದ್ಯಾಸ್ಮಿನ್ದಿವಸೇ ಹೇ ಅಗ್ನೇ ಆಭಿರ್ಗೀರ್ಭಿಃ ಸ್ತುತಿರೂಪಾಭಿರ್ವಾಗ್ಭಿರ್ಗೃಣಂತಸ್ತ್ವಾಂ ಸ್ತುವಂತೋ ವಯಮೃತ್ವಿಗಾದಯಸ್ತೇ ತುಭ್ಯಂ ದಾಶೇಮ । ಹವೀಂಷಿ ದದ್ಯಾಮ । ದಿವೋ ನ

CC-0. Jangamwadi Math Collection. Digitized by eGangotri

ಸೂರ್ಯಸ್ಯ ರಶ್ಮಯ ಇವ ತೇ ತ್ವದೀಯಾಃ ಶುಷ್ಮಾಃ ಶೋಧಕಾ ಜ್ವಾಲಾಃ ಪ್ರ ಸ್ತನಯಂತಿ । ಪ್ರಕರ್ಷೇಣ ಶಬ್ದಾಯಂತೇ । ಯದ್ವಾ । ದಿವೋ ನ ಮೇಘಾ ಇವ ತ್ವದೀಯಾ ಜ್ವಾಲಾಃ ಶಬ್ದಾಯಂತೇ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಅದ್ಯ—ಈ ದಿವಸ । ಅಭಿಃ ಗೀರ್ಭಿಃ—ಸ್ತುತಿರೂಪಗಳಾದ ಈ ವಾಕ್ಕುಗಳಿಂದ । ಗೃಣಂತಃ—ನಿನ್ನನ್ನು ಸ್ತುತಿಸುವವರಾಗಿ । ತೇ—ನಿನ್ನನ್ನುದ್ದೇಶಿಸಿ । ದಾಶೇಮ—ಹವಿಸ್ಸನ್ನರ್ಪಿಸುತ್ತೇವೆ । ದಿವೋ ನ—ಸೂರ್ಯನ ರಶ್ಮಿಗಳಂತೆ ಪ್ರಕಾಶಮಾನಗಳಾದ । ತೇ—ನಿನ್ನ । ಶುಷ್ಮಾಃ—ಶುದ್ಧಿಕಾರಕಗಳಾದ ಜ್ವಾಲೆಗಳು । ಪ್ರ ಸ್ತನಯಂತಿ—ಅತಿಶಯವಾಗಿ ಶಬ್ದಮಾಡುತ್ತವೆ.

ಭಾವಾರ್ಥ

ಎಲೈ ಅಗ್ನಿಯೇ, ಸ್ತುತಿರೂಪವಾದ ವಾಕ್ಕುಗಳಿಂದ ನಿನ್ನನ್ನು ಈ ದಿನ ಸ್ತುತಿಸುತ್ತಾ ನಿನ್ನನ್ನುದ್ದೇಶಿಸಿ ಹವಿಸ್ಸನ್ನರ್ಪಿಸುತ್ತೇವೆ. ಸೂರ್ಯನ ರಶ್ಮಿಗಳಂತೆ ಪ್ರಕಾಶಮಾನಗಳಾದವೂ, ಶುದ್ಧಿಕಾರಕಗಳೂ ಆದ ನಿನ್ನ ಜ್ವಾಲೆಗಳು ಅತಿಶಯವಾಗಿ ಶಬ್ದಮಾಡುತ್ತವೆ.

English Translatiou

Glorifying you, Agni, to-day, with these our praises, may we offer you (oblations): your (flames), bright as those of the sun, roar aloud.

———

ಸಂಹಿತಾಪಾಠಃ

ತವ ಸ್ವಾದಿಷ್ಠಾಗ್ನೇ ಸಂದೃಷ್ಟಿರಿದಾ ಚಿದಹ್ನ ಇದಾ ಚಿದಕ್ತೋಃ ।

ಶ್ರಿಯೇ ರುಕ್ಮೋ ನ ರೋಚತ ಉಪಾಕೇ ॥ ೫ ॥

ಪದಪಾಠಃ

ತವ । ಸ್ವಾದಿಷ್ಠಾ । ಅಗ್ನೇ । ಸಂಽದೃಷ್ಟಿಃ । ಇದಾ । ಚಿತ್ । ಅಹ್ನಃ । ಇದಾ । ಚಿತ್ । ಅಕ್ತೋಃ । ಶ್ರಿಯೇ । ರುಕ್ಮಃ । ನ । ರೋಚತೇ । ಉಪಾಕೇ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ಸ್ವಾದಿಷ್ಠಾ ಸ್ವಾದುತಮಾ ಪ್ರಿಯತಮಾ ತವ ತ್ವದೀಯಾ ಸಂದೃಷ್ಟಿರ್ದೀಪ್ತಿರಹ್ನ ಇದಾ ಚಿತ್ ದಿವಸಸ್ಯೇದಾನೀಂ ಚಾಕ್ತೋರಿದಾ ಚಿತ್ । ಅಕ್ತುರಿತಿ ರಾತ್ರಿನಾಮ ಶರ್ವರ್ಯಕ್ತುರೂರ್ಮ್ಯೇತಿ ರಾತ್ರಿನಾಮಸು ಪಾಠಾತ್ । ರಾತ್ರೇರಿದಾನೀಂ ಚ । ಅಹೋರಾತ್ರ ಇತ್ಯರ್ಥಃ ॥ ಅಞ್ಜೂ ವ್ಯಕ್ತಿಮ್ರಕ್ಷಣಕಾಂತಿಗತಿಷ್ವಿತ್ಯಸ್ಮಾದ್ಧಾತೋಃ ಕಿಚ್ಚೇತ್ಯೌಣಾದಿಕಸೂತ್ರೇಣ ತುಪ್ರತ್ಯಯಃ ತಸ್ಯ ಕಿದ್ವ-

CC-0. Jangamwadi Math Collection. Digitized by eGangotri

ದ್ಭಾವಶ್ಚ। ತಿಶುತ್ರೇತೀಟ್ಪ್ರತಿಷೇಧಃ। ಅನಿದಿತಾಮಿತ್ಯುಪಧಾನಕಾರಲೋಪಃ। ಚೋಃ ಕುರಿತಿ ಕುತ್ವಂ॥ ರುಕ್ಮೋ ನಾಲಂಕಾರ ಇವ ಶ್ರಿಯೇ ಪದಾರ್ಥಮಾಶ್ರಯಿತುಮುಪಾಕೇಽಂತಿಕೇ। ಉಪಾಕ ಇತ್ಯಂತಿಕ ನಾಮ ಆಕ ಉಪಾಕ ಇತಿ ತನ್ನಾಮಸು ಪಾಠಾತ್। ರೋಚತೇ। ರಾಜತೇ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ। ಸ್ವಾದಿಷ್ಠಾ—ಪ್ರಿಯತಮವಾದ। ತವ—ನಿನ್ನ। ಸಂದೃಷ್ಟಿಃ—ತೇಜಸ್ಸು। ಅಹ್ನಃ ಇದಾ ಚಿತ್—ಅಹಸ್ಸಿನ ಸರ್ವಕಾಲದಲ್ಲೂ। ಅಕ್ತೋಃ ಇದಾ ಚಿತ್—ರಾತ್ರಿಯ. ಸರ್ವಕಾಲದಲ್ಲೂ। ರುಕ್ಮೋ ನ—ಸುವರ್ಣರೂಪದ ಆಭರಣದಂತೆ। ಉಪಾಕೇ—ಸಮೀಪದಲ್ಲಿಯೇ। ಶ್ರಿಯೇ—ಸಕಲವಸ್ತುಗಳಿಗೂ ಅಲಂಕಾರಕವಾಗಿರಲು। ರೋಚತೇ—ಪ್ರಕಾಶಿಸುತ್ತದೆ.

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ತೇಜಸ್ಸು ಅಹಸ್ಸಿನ ಸರ್ವಕಾಲದಲ್ಲೂ, ರಾತ್ರಿಯ ಸರ್ವಕಾಲದಲ್ಲೂ ಸುವರ್ಣ ರೂಪದ ಆಭರಣದಂತೆ ಸಕಲವಸ್ತುಗಳಿಗೂ ಅಲಂಕಾರಕವಾಗಿರಲು ಸಮೀಪದಲ್ಲಿಯೇ ಪ್ರಕಾಶಿಸುತ್ತದೆ.

English Translation

Your lovely radiance, Agni, whether by day or by night, shines upon (all objects) like an ornament (to give them) beauty.

---

ಸಂಹಿತಾಪಾಠಃ

ಘೃತಂ ನ ಪೂತಂ ತನೂರರೇಪಾಃ ಶುಚಿ ಹಿರಣ್ಯಂ।
ತತ್ತೇ ರುಕ್ಮೋ ನ ರೋಚತ ಸ್ವಧಾವಃ ॥ ೬ ॥

ಪದಪಾಠಃ

ಘೃತಂ। ನ। ಪೂತಂ। ತನೂಃ। ಅರೇಪಾಃ। ಶುಚಿ। ಹಿರಣ್ಯಂ।
ತತ್। ತೇ। ರುಕ್ಮಃ। ನ। ರೋಚತ। ಸ್ವಧಾಽವಃ ॥ ೬ ॥

ಸಾಯಣಭಾಷ್ಯಂ

ಹೇ ಸ್ವಧಾವಃ। ಸ್ವಧಾಶಬ್ದೋಽನ್ನವಾಚೀ। ಅನ್ನವನ್ನಗ್ನೇ ಪೂತಂ ಶೋಧಿತಂ ಘೃತಂ ನಾಜ್ಯಮಿವ ತನೂಸ್ತ್ವದೀಯಾ ಮೂರ್ತಿರರೇಪಾಃ ಪಾಪರಹಿತಾ ಭವತಿ। ಶುಚಿ ಶುದ್ಧಂ ಹಿರಣ್ಯಂ ಹಿತರಮಣೀಯಂ ತೇ ತ್ವದೀಯಂ ತತ್ಪ್ರಸಿದ್ಧಂ ತೇಜೋ ರುಕ್ಮೋ ನ ಭೂಷಣಮಿವ ರೋಚತ। ರೋಚತೇ। ಭಾಸತೇ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

**ಸ್ವಧಾವಃ**—ಅನ್ನವಂತನೂ ಅನ್ನದಾತನೂ ಆದ ಎಲೈ ಅಗ್ನಿಯೇ । **ಪೂತಂ**—ಪರಿಶುದ್ಧವಾದ । **ಘೃತಂ ನ**—ಘೃತದಂತಿರುವ । **ತನೂಃ**—ನಿನ್ನ ತೇಜೋರೂಪವಾದ ಮೂರ್ತಿಯು । **ಅರೇಪಾಃ**—ಪಾಪರಹಿತವಾಗಿದೆ । **ಶುಚಿ**—ಶುದ್ಧವಾದುದೂ । **ಹಿರಣ್ಯಂ**—ಹಿತಕರವೂ ರಮಣೀಯವೂ ಆದ । **ತೇ**—ನಿನ್ನ । **ತತ್**—ಪ್ರಸಿದ್ಧವಾದ ತೇಜಸ್ಸು । **ರುಕ್ಮೋ ನ**—ಸುವರ್ಣಾತ್ಮಕವಾದ ಆಭರಣದಂತೆ । **ರೋಚತೇ**—ಪ್ರಕಾಶಿಸುತ್ತದೆ.

ಭಾವಾರ್ಥ

ಅನ್ನವಂತನೂ ಅನ್ನದಾತನೂ ಆದ ಎಲೈ ಅಗ್ನಿಯೇ, ಪರಿಶುದ್ಧವಾದ ಘೃತದಂತಿರುವ ನಿನ್ನ ತೇಜೋರೂಪವಾದ ಮೂರ್ತಿಯು ಪಾಪರಹಿತವಾಗಿದೆ. ಶುದ್ಧವಾದುದೂ, ಹಿತಕರವೂ, ರಮಣೀಯವೂ ಆದ ನಿನ್ನ ಪ್ರಸಿದ್ಧವಾದ ತೇಜಸ್ಸು ಸುವರ್ಣಾತ್ಮಕವಾದ ಆಭರಣದಂತೆ ಪ್ರಕಾಶಿಸುತ್ತದೆ.

English Translation

Giver of sustenance, (Agni), your favour is free from fault, like clarified butter : your pure and golden lustre shines like an ornament.

———

ಸಂಹಿತಾಪಾಠಃ

**ಕೃತಂ ಚಿದ್ಧಿ ಷ್ಮಾ ಸನೇಮಿ ದ್ವೇಷೋಽಗ್ನ ಇನೋಷಿ ಮರ್ತಾತ್ ।**

**ಇತ್ಥಾ ಯಜಮಾನಾದೃತಾವಃ ॥ ೭ ॥**

ಪದಪಾಠಃ

**ಕೃತಂ । ಚಿತ್ । ಹಿ । ಸ್ಮ । ಸನೇಮಿ । ದ್ವೇಷಃ । ಅಗ್ನೇ । ಇನೋಷಿ । ಮರ್ತಾತ್ ।**

**ಇತ್ಥಾ । ಯಜಮಾನಾತ್ । ಋತ್ಽವಃ ॥ ೭ ॥**

ಸಾಯಣಭಾಷ್ಯಂ

ಹೇ ಋತಾವಃ ಸತ್ಯವನ್ನಗ್ನೇ ಕೃತಂ ಚಿತ್ ಯಜಮಾನೇನ ಕೃತಮಪಿ ಸನೇಮಿ ಚಿರಂತನಂ । ಸನೇಮೀತಿ ಪುರಾಣನಾಮ ಸನೇಮಿ ಪೂರ್ವ್ಯಮಿತಿ ಪುರಾಣನಾಮಸು ಪಾಠಾತ್ । ದ್ವೇಷಃ ಪಾಪಂ ಮರ್ತಾನ್ಮನುಷ್ಯಾದ್ಯಜಮಾನಾದಿತ್ಥಾ ಸತ್ಯಂ । ಇತ್ಥೇತಿ ಸತ್ಯನಾಮೈತತ್ ಅದ್ಧೇತ್ಥೇತಿ ತನ್ನಾಮಸು ಪಾಠಾತ್ । ಇನೋಷಿ ಹಿ ಸ್ಮ । ಪ್ರೇರಯಸ್ಯೇವ ಖಲು ನಾಶಯಸೀತ್ಯರ್ಥಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ಋತಾವಃ—ಸತ್ಯವಂತನಾದ । ಅಗ್ನೇ—ಎಲೈ ಅಗ್ನಿಯೇ । ಕೃತಂ—ಯಜಮಾನನಿಂದ ಮಾಡಲ್ಪಟ್ಟ । ದ್ವೇಷಃ—ಪಾಪವನ್ನು । ಸನೇಮಿ ಚಿತ್—ಅತ್ಯಂತ ಪ್ರಾಚೀನವಾಗಿದ್ದರೂ ಸಹ । ಮರ್ತಾತ್ ಯಜಮಾನಾತ್—ಅದೇ ಮಾನವನಾದ ಯಜಮಾನನಿಂದ । ಇತ್ಥಾ—ಖಂಡಿತವಾಗಿಯೂ । ಇನೋಷಿ ಹಿ ಸ್ಮ—ನಾಶಮಾಡಿಯೇ ತೀರುತ್ತೀಯೆ.

ಭಾವಾರ್ಥ

ಸತ್ಯವಂತನಾದ ಎಲೈ ಅಗ್ನಿಯೇ, ಯಜಮಾನನಿಂದ ಮಾಡಲ್ಪಟ್ಟ ಪಾಪವನ್ನು ನೀನು ಅದು ಅತ್ಯಂತ ಪ್ರಾಚೀನವಾಗಿದ್ದರೂ ಸಹ ಅನುಗ್ರಹಿಸಿ ಅದೇ ಮಾನವನಾದ ಯಜಮಾನನಿಂದ ಖಂಡಿತವಾಗಿಯೂ ನಾಶ ಮಾಡಿಯೇತೀರುತ್ತೀಯೆ.

English Translation

Truthful Agni, verily you remove from the mortal who institutes (your) worship, whatever sin has been committed (by him) of old-

---

ಸಂಹಿತಾಪಾಠಃ

ಶಿವಾ ನಃ ಸಖ್ಯಾ ಸಂತು ಭ್ರಾತ್ರಾಗ್ನೇ ದೇವೇಷು ಯುಷ್ಮೇ ।
ಸಾ ನೋ ನಾಭಿಃ ಸದನೇ ಸಸ್ಮಿನ್ನೂಧನ್ ॥ ೮ ॥

ಪದಪಾಠಃ

ಶಿವಾ । ನಃ । ಸಖ್ಯಾ । ಸಂತು । ಭ್ರಾತ್ರಾ । ಅಗ್ನೇ । ದೇವೇಷು । ಯುಷ್ಮೇ ಇತಿ ।
ಸಾ । ನಃ । ನಾಭಿಃ । ಸದನೇ । ಸಸ್ಮಿನ್ । ಊಧನ್ ॥ ೮ ॥

ಸಾಯಣಭಾಷ್ಯಂ

ಹೇ ಅಗ್ನೇ ನೋಽಸ್ಮದೀಯಾನಿ ಸಖ್ಯಾ ಸಖ್ಯಾನಿ ಸಖಿತ್ವಾನಿ ಭ್ರಾತ್ರಾ ಭ್ರಾತ್ರಾಣಿ ಭ್ರಾತೃಸಂಬಂಧೀನಿ ಕರ್ಮಾಣಿ ದೇವೇಷು ದ್ಯೋತಮಾನೇಷು ಯುಷ್ಮೇ ಯುಷ್ಮಾಸು ॥ ಸುಪಾಂ ಸುಲುಗಿತಿ ಸಪ್ತಮೀಬಹುವಚನಸ್ಯ ಶೇಆದೇಶಃ ॥ ಶಿವಾ ಶಿವಾನಿ ಸಂತು । ಮಂಗಲಾನಿ ಭವಂತು । ಸಾ ಸಖಿತ್ವಭ್ರಾತೃಕರ್ಮಸಂತತಿಃ ಸದನೇ ದೇವಾನಾಂ ಸ್ಥಾನೇ ಸಸ್ಮಿನ್ನೂಧನಿ ಸರ್ವಸ್ಮಿನ್ಯಜ್ಞೇ ನೋಽಸ್ಮಾಕಂ ನಾಭಿರ್ಬಂಧನಂ ಭವತಿ ॥



CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ನಃ—ನಮ್ಮಿಂದ ಕೃತವಾದ । ಸಖ್ಯಾ—ಸುಹೃದಾತ್ಮಕವಾದುದೂ । ಭ್ರಾತ್ರಾ—ಸಹೋದರಪ್ರೇಮವುಳ್ಳದ್ದೂ ಆದ ಕರ್ಮಗಳು । ದೇವೇಷು—ಪ್ರಕಾಶಮಾನರಾದ । ಯುಷ್ಮೇ—ನಿಮ್ಮಗಳನ್ನು ಸೇರಿ । ಶಿವಾ—ಮಂಗಳಾತ್ಮಕಗಳಾಗಿ । ಸಂತು—ಆಗಿರಲಿ । ಸಾ—ಅದೇ ಸೌಹಾರ್ದಭಾವವು । ಸದನೇ—ದೇವತೆಗಳ ನಿವಾಸಸ್ಥಾನವಾದ । ಸಸ್ಮಿನ್ನೂಧನ್—ಸಕಲ ಯಜ್ಞಗಳಲ್ಲೂ । ನಃ—ನಮ್ಮ । ನಾಭಿಃ—ಸಂಬಂಧಕಾರಕಗಳಾಗಲಿ.

ಭಾವಾರ್ಥ

ಎಲೈ ಅಗ್ನಿಯೇ, ನಮ್ಮಿಂದ ಕೃತವಾದ ಸುಹೃದಾತ್ಮಕವಾದುದೂ, ಸಹೋದರಪ್ರೇಮವುಳ್ಳದ್ದೂ ಆದ ಕರ್ಮಗಳು ಪ್ರಕಾಶಮಾನರಾದ ನಿಮ್ಮಗಳನ್ನು ಸೇರಿ ಮಂಗಳಾತ್ಮಕಗಳಾಗಿ ಆಗಿರಲಿ. ಅದೇ ಸೌಹಾರ್ದಭಾವವು ದೇವತೆಗಳ ನಿವಾಸಸ್ಥಾನವಾದ ಸಕಲ ಯಜ್ಞಗಳಲ್ಲೂ ನಮ್ಮ ಸಂಬಂಧಕಾರಕಗಳಾಗಲಿ.

English Translation

May our friendly and fraternal attentions to you deities prove fortunate ; for such (attentions shewn) in every sacrifice (form) our security in the spehre (of the gods).

---

## ಹನ್ನೊಂದನೆಯ ಸೂಕ್ತವು.

---

ಸಾಯಣಭಾಷ್ಯಂ

ದ್ವಿತೀಯೇಽನುವಾಕ ಏಕಾದಶ ಸೂಕ್ತಾನಿ । ತತ್ರ ಭದ್ರಂ ತೆ ಇತಿ ಷಡೃಚಂ ಪ್ರಥಮಂ ಸೂಕ್ತಂ ವಾಮದೇವಸ್ಯಾರ್ಷಂ ತ್ರಿಷ್ಟುಪ್ಛಂದಸ್ಕಮಗ್ನಿದೇವತಾಕಂ । ಭದ್ರಂ ಷಡಿತ್ಯನುಕ್ರಮಣಿಕಾ ॥ ಪ್ರಾತರನುವಾಕಾಶ್ವಿನಶಸ್ತ್ರಯೋರಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸೀದಮಾದಿಕೇ ದ್ವೇ ಸೂಕ್ತೇ ವಿನಿಯುಕ್ತೇ। ತಥಾ ಚ ಸೂತ್ರಿತಂ । ಭದ್ರಂ ತೇ ಅಗ್ನ ಇತಿ ಸೂಕ್ತೇ । ಆ. ೪-೧೩ । ಇತಿ ॥

ಅನುವಾದವು—ನಾಲ್ಕನೆಯ ಮಂಡಲದ ಎರಡನೆಯ ಅನುವಾಕದಲ್ಲಿ ಹನ್ನೊಂದು ಸೂಕ್ತಗಳಿರುವವು. ಅವುಗಳಲ್ಲಿ ಭದ್ರಂ ತೇ ಎಂಬ ಈ ಸೂಕ್ತವು ಮೊದಲನೆಯದು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ--ಭದ್ರಂ ಷಟ್ ಎಂದು ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಗಳ ಪಠನಕಾಲದಲ್ಲಿ ಆಗ್ನೇಯಕ್ರತು ಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತ ಮತ್ತು ಮುಂದಿನ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ--ಭದ್ರಂ ತೇ ಅಗ್ನೇ ಇತಿ ಸೂಕ್ತೇ ಎಂಬ ಸೂತ್ರದಿಂದ (ಆ ೪-೧೩) ವಿವೃತವಾಗಿರುವುದು.

CC-0. Jangamwadi Math Collection. Digitized by eGangotri

## ಸೂಕ್ತ—೧೧

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೧ ॥
ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೧೧ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ವಾಮದೇವಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ॥

———

ಸಂಹಿತಾಪಾಠಃ

ಭದ್ರಂ ತೇ ಅಗ್ನೇ ಸಹಸಿನ್ನನೀಕಮುಪಾಕ ಆ ರೋಚತೇ ಸೂರ್ಯಸ್ಯ ।
ರುಶದ್ದೃಶೇ ದದೃಶೇ ನಕ್ತಯಾ ಚಿದರೂಕ್ಷಿತಂ ದೃಶ ಆ ರೂಪೇ ಅನ್ನಂ ॥

ಪದಪಾಠಃ

ಭದ್ರಂ । ತೇ । ಅಗ್ನೇ । ಸಹಸಿನ್ । ಅನೀಕಂ । ಉಪಾಕೇ । ಆ । ರೋಚತೇ । ಸೂರ್ಯಸ್ಯ ।
ರುಶತ್ । ದೃಶೇ । ದದೃಶೇ । ನಕ್ತಯಾ । ಚಿತ್ । ಅರೂಕ್ಷಿತಂ । ದೃಶೇ । ಆ । ರೂಪೇ । ಅನ್ನಂ ॥ ೧ ॥

ಸಾಯಣಭಾಷ್ಯಂ

ಹೇ ಸಹಸಿನ್ ಬಲವನ್ನಗ್ನೇ ತೇ ತ್ವದೀಯಂ ಭದ್ರಂ ಭಜನೀಯಮನೀಕಂ ತೇಜಃ ಸೂರ್ಯಸ್ಯೋಪಾಕೇ ಸಮೀಪಭೂತೇ । ದಿವಸ ಇತ್ಯರ್ಥಃ । ಆ ರೋಚತೇ । ಸಮಂತಾದ್ದೀಪ್ಯತೇ । ರುಶದ್ರೋಚಮಾನಂ ದೃಶೇ ದರ್ಶನೀಯಂ ತೇಜೋ ನಕ್ತಯಾ ಚಿದ್ರಾತ್ರ್ಯಾಮಪಿ ದದೃಶೇ । ದೃಶ್ಯತೇ । ಆ ಇತ್ಯಯಂ ಶಬ್ದಶ್ಚೇತ್ಯರ್ಥೇ ವರ್ತತೇ । ಆ ಕಿಂಚ ಅರೂಕ್ಷಿತಂ ಸ್ನಿಗ್ಧಂ ದೃಶೇ ದರ್ಶನೀಯಮನ್ನಂ ಪುರೋಡಾಶಾದಿರೂಪಂ ಹವಿಃ ರೂಪೇ ರೂಪವತಿ ತ್ವಯ್ಯೃತ್ವಿಗಾದಿಭಿರ್ಹುತಂ ಭವತಿ ॥

ಪ್ರತಿಪದಾರ್ಥ

ಸಹಸಿನ್—ಶಕ್ತಿವಂತನಾದ । ಅಗ್ನೇ—ಎಲೈ ಅಗ್ನಿಯೇ । ತೇ—ನಿನ್ನ । ಭದ್ರಂ—ಮಂಗಳಾತ್ಮಕವಾದ । ಅನೀಕಂ—ತೇಜಸ್ಸು । ಸೂರ್ಯಸ್ಯ—ಸೂರ್ಯನ । ಉಪಾಕೇ—ಸಮೀಪದಲ್ಲಿ । ಆ ರೋಚತ್—(ಹಗಲಿನಲ್ಲಿ ಪೂರ್ಣವಾಗಿ ಪ್ರಕಾಶಿಸುತ್ತದೆ । ರುಶತ್—ಪ್ರಕಾಶಮಾನವಾದುದೂ । ದೃಶೇ—ಆಕರ್ಷಕವಾದುದೂ ಆದ ಆ

CC-0. Jangamwadi Math Collection. Digitized by eGangotri

ತೇಜಸ್ಸು । ನಕ್ತಯಾಚಿತ್—ರಾತ್ರಿಕಾಲಗಳಲ್ಲಿಯೂ। ದದೃಶೇ—ಕಾಣಿಸಿಕೊಳ್ಳುತ್ತದೆ। ಆ—ಮತ್ತು । ಅರೂಕ್ಷಿತಂ—ಹಿತಕರವಾದುದೂ । ದೃಶೇ—ಆಕರ್ಷಕವಾದುದೂ ಆದ । ಅನ್ನಂ—ಪುರೋಡಾಶಾದಿ ರೂಪವಾದ ಅನ್ನವು । ರೂಪೇ—ಸುಂದರರೂಪವುಳ್ಳ ನಿನ್ನಲ್ಲಿ (ಅರ್ಪಿತವಾಗುತ್ತದೆ).

ಭಾವಾರ್ಥ

ಶಕ್ತಿಯುತನಾದ ಎಲೈ ಅಗ್ನಿಯೇ, ಮಂಗಳಾತ್ಮಕವಾದ ನಿನ್ನ ತೇಜಸ್ಸು ಹಗಲು ಕಾಲದಲ್ಲಿ ಸೂರ್ಯನ ಸುತ್ತಲೂ ಪೂರ್ಣವಾಗಿ ಪ್ರಕಾಶಿಸುತ್ತದೆ. ಪ್ರಕಾಶಮಾನವಾದುದೂ, ಆಕರ್ಷಕವಾದುದೂ ಆದ ಆ ತೇಜಸ್ಸು ರಾತ್ರಿ ಕಾಲಗಳಲ್ಲಿಯೂ ಕಾಣಿಸಿಕೊಳ್ಳುತ್ತದೆ. ಹಿತಕರವಾದುದೂ, ಆಕರ್ಷಕವಾದುದೂ, ಆದ ಪುರೋಡಾಶಾದಿರೂಪವುಳ್ಳ ಅನ್ನವು ಸುಂದರಾಕಾರನಾದ ನಿನ್ನಲ್ಲಿ ಅರ್ಪಿತವಾಗುತ್ತದೆ.

English Translation

Powerful Agni, your auspicious radiance shines upon the proximity of the sun (by day); your bright and visible (lustre) is conspicuous by night, as the bland and pleasing food (of sacrifice, the oblation) becomes manifest in your form.

———

ಸಂಹಿತಾಪಾಠಃ

ವಿ ಷಾಹ್ಯಗ್ನೇ ಗೃಣತೇ ಮನೀಷಾಂ ಖಂ ವೇಪಸಾ ತುವಿಜಾತ ಸ್ತವಾನಃ ।
ವಿಶ್ವೇಭಿರ್ಯದ್ವಾವನಃ ಶುಕ್ರ ದೇವೈಸ್ತನ್ನೋ ರಾಸ್ವ ಸುಮಹೋ ಭೂರಿ ಮನ್ಮ ॥ ೨ ॥

ಪದಪಾಠಃ

ವಿ । ಸಾಹಿ । ಅಗ್ನೇ । ಗೃಣತೇ । ಮನೀಷಾಂ । ಖಂ । ವೇಪಸಾ । ತುವಿಽಜಾತ । ಸ್ತವಾನಃ ।
ವಿಶ್ವೇಭಿಃ । ಯತ್ । ವವನಃ । ಶುಕ್ರ । ದೇವೈಃ । ತತ್ । ನಃ । ರಾಸ್ವ । ಸುಽಮಹಃ । ಭೂರಿ । ಮನ್ಮ ॥

ಸಾಯಣಭಾಷ್ಯಂ

ಹೇ ತುವಿಜಾತ ಮಥನೇನಾರಣಿದ್ವಾರಾ ಯಜ್ಞಾದಿಕರ್ಮಸು ಬಹುಜನ್ಮನ್ನಗ್ನೇ ಸ್ತವಾನ ಋತ್ವಿಗಾದಿಭಿಃ ಸ್ತೂಯಮಾನಸ್ತ್ವಂ ವೇಪಸಾ ಯಜ್ಞಾದಿಕರ್ಮಣಾ। ವೇಪ ಇತಿ ಕರ್ಮನಾಮ ವೇಷೋ ವೇಪೋ ವಿಷ್ಟೀತಿ ಕರ್ಮನಾಮಸು ಪಾಠಾತ್ । ಮನೀಷಾಂ ಸ್ತುತಿಂ ಗೃಣತೇ ಕುರ್ವತೇ

CC-0. Jangamwadi Math Collection. Digitized by eGangotri

ಯಜಮಾನಾಯ ಖಂ ಯಜಮಾನಪ್ರಾಪ್ಯಸ್ಯ ಪುಣ್ಯಲೋಕಸ್ಯ ದ್ವಾರಂ ವಿ ಷಾಹಿ । ವಿಷ್ಯ । ವಿಮುಂಚೇ-ತ್ಯರ್ಥಃ ॥ ಷೋಽಂತಕರ್ಮಣೀತ್ಯಸ್ಮಾದ್ಧಾತೋರ್ಲೋಣ್ಮಧ್ಯಮಪುರುಷೈಕವಚನಂ । ಸಿಪ್ । ದಿವಾ-ದಿಭ್ಯಃ ಶ್ಯನ್ । ತಸ್ಯ ಬಹುಲಂ ಛಂದಸೀತಿ ಲುಕ್ । ಆದೇಚ ಉಪದೇಶೇಽಶಿತೀತ್ಯಾತ್ವಂ । ಸೇರ್ಹಿರಾ-ದೇಶಃ । ತಿಜ್ಞತಿಜ ಇತಿ ನಿಘಾತಃ ॥ ಹೇ ಶುಕ್ರ ದೀಪ್ಯಮಾನಾಗ್ನೇ ತ್ವಂ ವಿಶ್ವೇಭಿರ್ವಿಶ್ವೈಃ ಸರ್ವೈಃ ॥ ಬಹುಲಂ ಛಂದಸೀತಿ ಭಿಸ ಐಸಭಾವಃ ॥ ದೇವೈರಿಂದ್ರಾದಿಭಿಃ ಸಹ ಯತ್ಪಶ್ವಾದಿಧನಂ ವವನಃ । ಯಜ-ಮಾನೇಭ್ಯಃ ಪ್ರಯಚ್ಛೇಃ ॥ ವನತೇರ್ಲೇಟ್ । ತಸ್ಯ ಸಿಪ ಇತಶ್ಚ ಲೋಪ ಇತೀಕಾರಲೋಪಃ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಶ್ಲಾಪಿತಿ ದ್ವಿರ್ವಚನಂ । ಹಲಾದಿಶೇಷಃ । ಲೇಟೋಽಡಾಟಾವಿತ್ಯಡಾಗಮಃ। ಯದ್ವೃತ್ತಾನ್ನಿತ್ಯಮಿತಿ ನಿಘಾತಾಭಾವಃ ॥ ಹೇ ಸುಮಹಃ ಶೋಭನತೇಜಸ್ಕಾಗ್ನೇ ಭೂರಿ ಪ್ರಭೂತಂ ಮನ್ಮ ಮನನೀಯಂ ತದ್ಧನಂ ನೋಽಸ್ಮಭ್ಯಂ ರಾಸ್ವ । ದೇಹಿ ॥

ಪ್ರತಿಪದಾರ್ಥ

ತುವಿಜಾತ—ಅನೇಕ ಪ್ರಕಾರಗಳಾದ ಯಜ್ಞಗಳಲ್ಲಿ ಬಹುರೂಪನಾಗಿ ಉತ್ಪನ್ನನಾಗುವ । ಅಗ್ನೇ—ಅಗ್ನಿಯೇ । ಸ್ತವಾನಃ—ಋತ್ವಿಗಾದಿಗಳಿಂದ ಸ್ತುತನಾಗುವ ನೀನು । ವೇಪಸಾ—ಯಜ್ಞಾದಿಕರ್ಮದಿಂದ (ತನ್ಮೂಲಕ) । ಮನೀಷಾಂ—ಸ್ತುತಿಯನ್ನು । ಗೃಣತೇ—ಅರ್ಪಿಸುವ ಯಜಮಾನನಿಗೆ । ಖಂ—ಸ್ವರ್ಗಮಾರ್ಗವನ್ನು । ವಿ ಷಾಹಿ—ತೆರೆಸುವವನಾಗು । ಸುಮಹಃ—ಶ್ರೇಷ್ಠವಾದ ತೇಜಸ್ಸುಳ್ಳವನೂ । ಶುಕ್ರ—ಪ್ರಕಾಶಮಾನನಾದ ಎಲೈ ಅಗ್ನಿಯೇ । ವಿಶ್ವೇಭಿಃ—ಸಮಸ್ತವಾದ । ದೇವೈಃ—ಇಂದ್ರಾದಿ ದೇವತೆಗಳೊಡನೆ । ಯತ್—ಯಾವ ಪಶ್ವಾದಿ ಧನಗಳನ್ನು । ವವನಃ—(ಯಜ್ಞಕರ್ತರಿಗೆ) ಕೊಡಿಸಿ ಅನುಗ್ರಹಿಸಿರುತ್ತೀಯೋ । ಭೂರಿ—ಪ್ರಭೂತವಾದುದೂ । ಮನ್ಮ—ಪೂಜ್ಯವಾದುದೂ ಆದ । ತತ್—ಅದೇ ಧನವನ್ನು । ನಃ—ನಮಗೂ । ರಾಸ್ವ—ದಯಪಾಲಿಸು.

ಭಾವಾರ್ಥ

ಅನೇಕವಿಧವಾದ ಯಜ್ಞಗಳಲ್ಲಿ, ಬಹುರೂಪನಾಗಿ ಉತ್ಪನ್ನನಾಗುವ ಎಲೈ ಅಗ್ನಿಯೇ, ಋತ್ವಿಗಾದಿಗಳಿಂದ ಸ್ತುತನಾಗುವ ನೀನು, ಯಜ್ಞಾದಿಕರ್ಮಗಳ ಮೂಲಕ ನಿನಗೆ ಸ್ತುತಿಯನ್ನರ್ಪಿಸುವ ಯಜಮಾನನಿಗೆ ಸ್ವರ್ಗಮಾರ್ಗವನ್ನು ತೆರೆಸುವವನಾಗು. ಶ್ರೇಷ್ಠವಾದ ತೇಜಸ್ಸುಳ್ಳವನೂ, ಪ್ರಕಾಶಮಾನನೂ ಆದ ಎಲೈ ಅಗ್ನಿಯೇ, ಸಮಸ್ತವಾದ ಇಂದ್ರಾದಿ ದೇವತೆಗಳೊಡನೆ ಯಾವ ಪಶ್ವಾದಿ ಧನಗಳನ್ನು ಯಜ್ಞಕರ್ತರಿಗೆ ಕೊಡಿಸಿ ಅನುಗ್ರಹಿಸಿರುತ್ತೀಯೋ, ಪ್ರಭೂತವಾದುದೂ ಪೂಜ್ಯವಾದುದೂ ಆದ ಅದೇ ಧನವನ್ನು ನಮಗೂ ಕೊಡಿಸು.

## English Translation

Agni, who are engendered repeatedly, and glorified by sacrifice, set open heaven to him who offers you adoration; resplendent (Agni), bestow upon us that ample and acceptable (wealth), which, radiant (deity), you, with all the gods have given (to other worshippers).

————

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ತ್ವದ॑ಗ್ನೇ ಕಾವ್ಯಾ॒ ತ್ವನ್ಮ॑ನೀ॒ಷಾಸ್ತ್ವ॑ದು॒ಕ್ಥಾ ಜಾ॑ಯಂತೇ॒ ರಾಧ್ಯಾ॑ನಿ ।

ತ್ವದೇ॑ತಿ॒ ದ್ರವಿ॑ಣಂ ವೀ॒ರಪೇ॑ಶಾ ಇ॒ತ್ಥಾಧಿ॑ಯೇ ದಾ॒ಶುಷೇ॑ ಮರ್ತ್ಯಾ॑ಯ ॥೩॥

ಪದಪಾಠಃ

ತ್ವತ್ । ಅ॒ಗ್ನೇ॒ । ಕಾವ್ಯಾ॑ । ತ್ವತ್ । ಮ॒ನೀ॒ಷಾಃ । ತ್ವತ್ । ಉ॒ಕ್ಥಾ । ಜಾ॒ಯ॒ಂತೇ॒ । ರಾಧ್ಯಾ॑ನಿ ।

ತ್ವತ್ । ಏ॒ತಿ॒ । ದ್ರವಿ॑ಣಂ । ವೀ॒ರಽಪೇ॑ಶಾಃ । ಇ॒ತ್ಥಾಽಧಿ॑ಯೇ । ದಾ॒ಶುಷೇ॑ । ಮರ್ತ್ಯಾ॑ಯ ॥ ೩ ॥

ಸಾಯಣಭಾಷ್ಯಂ

ಮಹಾಪಿತೃಯಜ್ಞೇ ಸ್ವಿಷ್ಟಕೃದಗ್ನಿಃ ಕವ್ಯವಾಹನೋ ಯಷ್ಟವ್ಯಃ । ತಸ್ಯ ದ್ವೇ ಅನುವಾಕ್ಯೇ । ತತ್ರ ತ್ವದಗ್ನೇ ಕಾವ್ಯೇತಿ ದ್ವಿತೀಯಾನುವಾಕ್ಯಾ । ತಥಾ ಚ ಸೂತ್ರಿತಂ । ತ್ವದಗ್ನೇ ಕಾವ್ಯಾ ತ್ವನ್ಮನೀಷಾಃ ಸ ಪ್ರತ್ನಥಾ ಸಹಸಾ ಜಾಯಮಾನಃ । ಆ. ೨-೧೯ । ಇತಿ ॥

ಹೇ ಅಗ್ನೇ ಕಾವ್ಯಾ ಕಾವ್ಯಾನಿ ಹವಿರ್ವಹನದೇವತಾನಯನಾದೀನ್ಯಗ್ನಿಸಂಬಂಧೀನಿ ಕರ್ಮಾಣ್ಯಾಧ್ವರ್ಯವಾಣಿ ಕರ್ಮಾಣಿ ವಾ ತ್ವದ್ಭವತೋ ಜಾಯಂತೇ । ಉತ್ಪದ್ಯಂತೇ । ಮನೀಷಾಃ ಸ್ತುತಿರೂಪಾ ವಾಚಸ್ತ್ವದೇವ ಜಾಯಂತೇ । ರಾಧ್ಯಾನಿ ರಾದ್ಧುಂ ಯೋಗ್ಯಾನ್ಯುಕ್ಥೋಕ್ಥಾನಿ ಶಸ್ತ್ರಾಣಿ ತ್ವತ್ತ್ವತ್ತೋ ಜಾಯಂತೇ । ಇತ್ಥಾಧಿಯೇ । ಧೀರಿತಿ ಕರ್ಮನಾಮ । ಇತ್ಥೇತಿ ಸತ್ಯನಾಮಸು ಪಾಠಾತ್ ಸತ್ಯಕರ್ಮಣೇ ದಾಶುಷೇ ಹವೀಂಷಿ ದತ್ತವತೇ ಮರ್ತ್ಯಾಯ ಮನುಷ್ಯಾಯ ಯಜಮಾನಾಯ ವೀರಪೇಶಾಃ। ಪೇಶ ಇತಿ ರೂಪನಾಮ । ಇದಂ ವಿಕ್ರಾಂತಂ ರೂಪಂ । ಅತ್ರ ಲಿಂಗವ್ಯತ್ಯಯೇನ ವೀರಪೇಶಾ ಇತಿ ರೂಪಂ । ದ್ರವಿಣಂ ಪಶ್ವಾದಿಧನಂ ತ್ವತ್ತ್ವತ್ತ ಏತಿ । ನಿರ್ಗಚ್ಛತಿ । ಉತ್ಪದ್ಯತ ಇತ್ಯರ್ಥಃ ॥

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಕಾವ್ಯಾ—ಯಜ್ಞಸಂಬಂಧಿಯಾದ ಸಕಲ ಕರ್ಮಗಳೂ । ತ್ವತ್—ನಿನ್ನಿಂದ। ಜಾಯಂತೇ—ಉತ್ಪನ್ನವಾಗುತ್ತವೆ । ಮನೀಷಾಃ—ಸ್ತುತಿರೂಪವಾದ ವಾಕ್ಕುಗಳೂ ಸಹ । ತ್ವತ್—ನಿನ್ನಿಂದಲೇ ನಿರ್ಮಿತವಾಗುತ್ತವೆ । ರಾಧ್ಯಾನಿ—ವಹಿಸಲು ಯೋಗ್ಯವಾದ । ಉಕ್ಥಾ—ಉಕ್ಥರೂಪವಾದ ಸ್ತೋತ್ರಗಳೂ । ತ್ವತ್—ನಿನ್ನಿಂದಲೇ ಉತ್ಪನ್ನವಾಗುತ್ತವೆ । ಇತ್ಥಾಧಿಯೇ—ಸತ್ಯಾತ್ಮಕವಾದ ಕರ್ಮವುಳ್ಳವನೂ । ದಾಶುಷೇ—ಹವಿಸ್ಸನ್ನರ್ಪಿಸುವವನೂ । ಮರ್ತ್ಯಾಯ—ಮಾನವನೂ ಆದ ಯಜಮಾನನಿಗೆ । ವೀರಪೇಶಾಃ—ಪರಾಕ್ರಮವನ್ನು ಪ್ರಕಟಿಸುವ ಸ್ವರೂಪವೂ । ದ್ರವಿಣಂ—ಪಶ್ವಾದಿ ಧನವೂ । ತ್ವತ್—ನಿನ್ನಿಂದಲೇ । ಏತಿ—ಪ್ರವಹಿಸುತ್ತವೆ.

ಭಾವಾರ್ಥ

ಎಲೈ ಅಗ್ನಿಯೇ, ಯಜ್ಞಸಂಬಂಧಿಯಾದ ಸಕಲ ಕರ್ಮಗಳೂ ನಿನ್ನಿಂದ ಉತ್ಪನ್ನವಾಗುತ್ತವೆ. ಸ್ತುತಿರೂಪವಾದ ವಾಕ್ಕುಗಳೂ, ಉಕ್ಥರೂಪವಾದ ಸ್ತೋತ್ರಗಳೂ ನಿನ್ನಿಂದಲೇ ಉತ್ಪನ್ನವಾಗುತ್ತವೆ. ಸತ್ಯಾತ್ಮಕವಾದ ಕರ್ಮ

CC-0. Jangamwadi Math Collection. Digitized by eGangotri

ವುಳ್ಳವನೂ ಹವಿಸ್ಸನ್ನರ್ಪಿಸುವವನೂ, ಮಾನವನೂ ಆದ ಯಜಮಾನನಿಗೆ ಪರಾಕ್ರಮವನ್ನು ಪ್ರಕಟಿಸುವ ಸ್ವರೂಪವೂ ಪಶ್ವಾದಿಧನವೂ ನಿನ್ನಿಂದಲೇ ಪ್ರವಹಿಸುತ್ತವೆ.

English Translation

The offerings (to the gods) are engendered, Agni, of you; from you (proceed) praises; from you effective prayers; from you come a vigorous frame and wealth to the man who worships with sincerity and offers oblations

ವಿಶೇಷವಿಷಯಗಳು

ಮಹಾಪಿತೃಯಜ್ಞವೆಂಬ ಇಷ್ಟಿಯಲ್ಲಿ ಸ್ವಿಷ್ಟಕೃದ್ಧೋಮಮಾಡುವಾಗ ಅಗ್ನಿಃ ಕವ್ಯವಾಹನಃ ಎಂಬ ದೇವತೆಯನ್ನು ಉದ್ದೇಶಿಸಿ ಹೋಮಮಾಡಬೇಕು. ಆ ಹೋಮದಲ್ಲಿ ಎರಡು ಪುರೋನುವಾಕ್ಯಾಮಂತ್ರಗಳಿರುವವು. ಅವುಗಳಲ್ಲಿ ತ್ವದಗ್ನೇ ಕಾವ್ಯಾ ಎಂಬ ಈ ಋಕ್ಕನ್ನು ಎರಡನೆಯ ಅನುವಾಕ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ತ್ವದಗ್ನೇ ಕಾವ್ಯಾ ತ್ವನ್ಮನೀಷಾಃ ಸ ಪ್ರತ್ನಥಾ ಸಹಸಾ ಜಾಯಮಾನಃ ಎಂಬ ಸೂತ್ರದಿಂದ (ಆ. ೨-೧೯) ವಿವೃತವಾಗಿರುವುದು.

———

ಸಂಹಿತಾಪಾಠಃ

ತ್ವದ್ವಾಜೀ ವಾಜಂಭರೋ ವಿಹಾಯಾ ಅಭಿಷ್ಟಿಕೃಜ್ಜಾಯತೇ ಸತ್ಯಶುಷ್ಮಃ ।
ತ್ವದ್ರಯಿರ್ದೇವಜೂತೋ ಮಯೋಭುಸ್ತ್ವದಾಶುರ್ಜೂಜುವಾँ ಅಗ್ನೇ
ಅರ್ವಾ ॥ ೪ ॥

ಪದಪಾಠಃ

ತ್ವತ್ । ವಾಜೀ । ವಾಜಂऽಭರಃ । ವಿऽಹಾಯಾಃ । ಅಭಿಷ್ಟಿऽಕೃತ್ । ಜಾಯತೇ । ಸತ್ಯऽಶುಷ್ಮಃ ।
ತ್ವತ್ । ರಯಿಃ । ದೇವऽಜೂತಃ । ಮಯಃऽಭುಃ । ತ್ವತ್ । ಆಶುಃ । ಜೂಜುऽವಾನ್ । ಅಗ್ನೇ ।
ಅರ್ವಾ ॥ ೪ ॥

ಸಾಯಣಭಾಷ್ಯಂ

ಹೇ ಅಗ್ನೇ ವಾಜೀ ಬಲವಾನ್ವಾಜಂಭರೋ ಹವಿರ್ಲಕ್ಷಣಾನ್ನಸ್ಯ ವಾಹಕಃ ॥ ಅಗ್ನೇರ್ವಾಜಂಭರ ಇತ್ಯೇಷಾ ವೈದಿಕೀ ಸಂಜ್ಞಾ । ಸಂಜ್ಞಾಯಾಂ ಭೃತೄವೃಜೀತಿ ವಾಜಶಬ್ದೇ ಕರ್ಮಣ್ಯುಪಪದೇ ಖಚ್-

CC-0. Jangamwadi Math Collection. Digitized by eGangotri

ಪ್ರತ್ಯಯಃ । ಅರುರ್ದ್ವಿಷದಜಂತಸ್ಯೇತಿ ಮುಮಾಗಮಃ । ಚಿತ ಇತ್ಯಂತೋದಾತ್ತತ್ವಂ ॥ ವಿಹಾಯಾ ಮಹಾನಭಿಷ್ಟಿಕೃದ್ಯಜ್ಞಕೃತ್ ಅಭ್ಯೇಷಣಕೃದ್ವಾ । ಸತ್ಯಶುಷ್ಮಃ ಸತ್ಯಬಲಃ ಪುತ್ರಸ್ತ್ವತ್ತ್ವತ್ತೋ ಜಾಯತೇ । ಉತ್ಪದ್ಯತೇ । ದೇವಜೂತೋ ದೇವೈಃ ಪ್ರೇರಿತೋ ಮಯೋಭುಃ ಸುಖಪ್ರದಃ । ಮಯ ಇತಿ ಸುಖನಾಮೈತತ್ । ರಯಿರ್ಧನಂ ತ್ವಜ್ಜಾಯತೇ । ಆಶುಃ ಶೀಘ್ರಗಾಮಿ । ಅಪ್ರತಿಹತಗಮನ ಇತ್ಯರ್ಥಃ। ಜೂಜುವಾನ್ವೇಗೇನ ಗಚ್ಛನ್ನರ್ವಾಶ್ವಸ್ತ್ವದ್ಭವತೋ ಜಾಯತೇ ॥

ಪ್ರತಿಪದಾರ್ಥ

ಅಗ್ನೆ—ಎಲೈ ಅಗ್ನಿಯೇ । ವಾಜೀ—ಬಲವಂತನೂ । ವಾಜಂಭರಃ—ಹವಿಸ್ಸಿನ ರೂಪದ ಅನ್ನವನ್ನು ವಹಿಸುವವನೂ । ವಿಹಾಯಾಃ—ಮಹದ್ಗುಣಗಳುಳ್ಳವನೂ । ಅಭಿಷ್ಟಿಕೃತ್—ಯಜ್ಞಕರ್ತನೂ । ಸತ್ಯಶುಷ್ಮಃ—ಸತ್ಯಾತ್ಮಕವಾದ ಬಲವುಳ್ಳವನೂ ಆದ ಪುತ್ರನು । ತ್ವತ್—ನಿನ್ನಿಂದ । ಜಾಯತೇ—ಉತ್ಪನ್ನನಾಗುತ್ತಾನೆ। ದೇವಜೂತಃ—ದೇವತೆಗಳಿಂದ ಅಂಗೀಕೃತವಾದುದೂ । ಮಯೋಭುಃ—ಸುಖಸಂಪಾದಕವಾದುದೂ ಆದ । ರಯಿಃ—ಧನವು । ತ್ವತ್—ನಿನ್ನಿಂದಲೇ ಉತ್ಪನ್ನವಾಗುತ್ತದೆ । ಆಶುಃ—ಶೀಘ್ರಗಾಮಿಯಾದುದೂ । ಜೂಜುವಾನ್—ತಡೆಯಿಲ್ಲದ ಸಂಚಾರವುಳ್ಳದ್ದೂ ಆದ । ಅರ್ವಾ—ಅಶ್ವವೂ । ತ್ವತ್—ನಿನ್ನಿಂದಲೇ ಉತ್ಪನ್ನವಾಗುತ್ತದೆ.

ಭಾವಾರ್ಥ

ಎಲೈ ಅಗ್ನಿಯೇ, ಬಲವಂತನೂ, ಹವಿಸ್ಸಿನ ರೂಪದ ಅನ್ನವನ್ನು ವಹಿಸುವವನೂ, ಮಹದ್ಗುಣಗಳುಳ್ಳವನೂ, ಯಜ್ಞಕರ್ತನೂ, ಸತ್ಯಾತ್ಮಕವಾದ ಬಲವುಳ್ಳವನೂ ಆದ ಪುತ್ರನು ನಿನ್ನಿಂದಲೇ ಉತ್ಪನ್ನನಾಗುತ್ತಾನೆ. ದೇವತೆಗಳಿಂದ ಅಂಗೀಕೃತವಾದುದೂ, ಸುಖಸಂಪಾದಕವಾದುದೂ ಆದ ಧನವು ನಿನ್ನಿಂದಲೇ ಉತ್ಪನ್ನವಾಗುತ್ತದೆ. ಶೀಘ್ರಗಾಮಿಯಾದುದೂ, ತಡೆಯಿಲ್ಲದ ಸಂಚಾರವುಳ್ಳದ್ದೂ ಆದ ಅಶ್ವವೂ ನಿನ್ನಿಂದಲೇ ಉತ್ಪನ್ನವಾಗುತ್ತದೆ.

English Translation

From you, who are vigorous, the conveyer of oblations, the vast, the granter of what is desired, is born (a son) of real strength; from you comes wealth approved of by the gods, the source of happiness; from you, Agni, (is obtained) a swift unarrested horse.

ಸಂಹಿತಾಪಾಠಃ

ತ್ವಾಮಗ್ನೇ ಪ್ರಥಮಂ ದೇವಯಂತೋ ದೇವಂ ಮರ್ತಾ ಅಮೃತ ಮಂದ್ರಜಿಹ್ವಂ ।

CC-0. Jangamwadi Math Collection. Digitized by eGangotri

ದ್ವೇಷೋಯುತಮಾ ವಿವಾಸಂತಿ ಧೀಭಿರ್ದಮೂನಸಂ ಗೃಹಪತಿಮ-
ಮೂರಂ ॥ ೫ ॥

ಪದಪಾಠಃ

ತ್ವಾಂ । ಅಗ್ನೇ । ಪ್ರಥಮಂ । ದೇವಽಯಂತಃ । ದೇವಂ । ಮರ್ತಾಃ । ಅಮೃತ । ಮಂದ್ರಽಜಿಹ್ವಂ ।
ದ್ವೇಷಃಽಯುತಂ । ಆ । ವಿವಾಸಂತಿ । ಧೀಭಿಃ । ದಮೂನಸಂ । ಗೃಹಽಪತಿಂ । ಅಮೂರಂ ॥ ೫ ॥

ಸಾಯಣಭಾಷ್ಯಂ

ಹೇ ಅಮೃತ ಅಮರಣಶೀಲಾಗ್ನೇ ದೇವಯಂತೋ ದೇವಾನಿಚ್ಛಂತೋ ಮರ್ತಾ ಮನುಷ್ಯಾ ಯಜಮಾನಾಸ್ತ್ವಾಂ ಧೀಭಿಃ ಸ್ತುತಿಭಿಃ ಕರ್ಮಭಿರ್ವಾ ಆ ವಿವಾಸಂತಿ । ಸಮಂತಾತ್ಪರಿಚರಂತಿ। ಕೀದೃಶಂ ತ್ವಾಂ । ಪ್ರಥಮಂ ದೇವಾನಾಮಾದ್ಯಂ ದೇವಂ ದ್ಯೋತಮಾನಂ ಮಂದ್ರಜಿಹ್ವಂ । ದೇವಾನಾಂ ಮಾದಯಿತ್ರೀ ಜಿಹ್ವಾ ಯಸ್ಯ ತಂ । ದ್ವೇಷೋಯುತಂ ದ್ವೇಷಸಾಂ ಪಾಪಾನಾಂ ಪೃಥಕ್ಕರ್ತಾರಂ ದಮೂನಸಂ ರಕ್ಷಸಾಂ ದಮನಕರೇಣ ಮನಸೋಪೇತಂ । ದಮೂನಃಶಬ್ದಸ್ಯ ಕಥಮಯಮರ್ಥ ಇತಿ ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವಾಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾದಿತಿ ಯಾಸ್ಕೇನೋಕ್ತತ್ವಾದಿತಿ ॥ ದಮು ಉಪಶಮನೇ । ದಮೇರೂನಸಿರಿತ್ಯೌಣಾದಿಕ ಊನಸಿಪ್ರತ್ಯಯಃ ॥ ಗೃಹಪತಿಂ ಗೃಹಾಣಾಂ ಪಾಲಯಿತಾರಮಮೂರಮಮೂಢಂ । ಪ್ರಗಲ್ಭಮಿತ್ಯರ್ಥಃ ॥

ಪ್ರತಿಪದಾರ್ಥ

ಅಮೃತ—ಮರಣಧರ್ಮರಹಿತನಾದ । ಅಗ್ನೇ—ಎಲೈ ಅಗ್ನಿಯೇ । ದೇವಯಂತಃ—ದೈವಭಕ್ತರೂ । ಮರ್ತಾಃ—ಮಾನವರೂ ಆದ ಯಜಮಾನರು । ಪ್ರಥಮಂ—ದೇವತೆಗಳಲ್ಲಿ ಮುಖ್ಯನೂ । ದೇವಂ—ಪ್ರಕಾಶಮಾನನೂ । ಮಂದ್ರಜಿಹ್ವಂ—(ದೇವತೆಗಳನ್ನು) ತೃಪ್ತಿಗೊಳಿಸುವ ಜಿಹ್ವೆಯುಳ್ಳವನೂ । ದ್ವೇಷೋಯುತಂ—ಪಾಪಿಗಳನ್ನು ಬೇರೆಮಾಡುವವನೂ । ದಮೂನಸಂ—ರಾಕ್ಷಸರನ್ನು ನಾಶಮಾಡುವವನೂ । ಗೃಹಪತಿಂ—ಗೃಹಗಳನ್ನು ಪಾಲಿಸುವವನೂ । ಅಮೂರಂ—ಪ್ರಾಜ್ಞನೂ ಆದ । ತ್ವಾಂ—ನಿನ್ನನ್ನು । ಧೀಭಿಃ—ಸ್ತುತಿಪೂರ್ವಕವಾದ ಕರ್ಮಗಳಿಂದ । ಆ ವಿವಾಸಂತಿ—ಸುತ್ತಲೂ ಉಪಚರಿಸುತ್ತಾರೆ.

ಭಾವಾರ್ಥ

ಮರಣ ಧರ್ಮರಹಿತನಾದ ಎಲೈ ಅಗ್ನಿಯೇ, ದೈವಭಕ್ತರೂ, ಮಾನವರೂ ಆದ ಯಜಮಾನರು ದೇವತೆಗಳಲ್ಲಿ ಮುಖ್ಯನೂ, ಪ್ರಕಾಶಮಾನನೂ ದೇವತೆಗಳನ್ನು ತೃಪ್ತಿಗೊಳಿಸುವ ಜಿಹ್ವೆಯುಳ್ಳವನೂ, ಪಾಪಿಗಳನ್ನು ಬೇರೆ ಮಾಡುವವನೂ, ರಾಕ್ಷಸರನ್ನು ನಾಶಮಾಡುವವನೂ, ಗೃಹಗಳನ್ನು ಪಾಲಿಸುವವನೂ, ಪ್ರಾಜ್ಞನೂ ಆದ ನಿನ್ನನ್ನು ಸ್ತುತಿಪೂರ್ವಕವಾದ ಕರ್ಮಗಳಿಂದ ಸುತ್ತಲೂ ಉಪಚರಿಸುತ್ತಾರೆ.

CC-0. Jangamwadi Math Collection. Digitized by eGangotri

## English Translation

Immortal Agni, devout mortals worship with holy rites you the first deity (of the gods), whose tongue exhilarates (them), the dissipator of sin, the humiliator (of the demons), the lord of the mansion, the unperplexed.

---

ಸಂಹಿತಾಪಾಠಃ

ಆರೇ ಅಸ್ಮದಮತಿಮಾರೇ ಅಂಹ ಆರೇ ವಿಶ್ವಾಂ ದುರ್ಮತಿಂ ಯನ್ನಿಪಾಸಿ ।

ದೋಷಾ ಶಿವಃ ಸಹಸಃ ಸೂನೋ ಅಗ್ನೇ ಯಂ ದೇವ ಆ ಚಿತ್ಸಚಸೇ ಸ್ವಸ್ತಿ ॥

ಪದಪಾಠಃ

ಆರೇ । ಅಸ್ಮತ್ । ಅಮತಿಂ । ಆರೇ । ಅಂಹಃ । ಆರೇ । ವಿಶ್ವಾಂ । ದುಃऽಮತಿಂ । ಯತ್ । ನಿऽಪಾಸಿ ।

ದೋಷಾ । ಶಿವಃ । ಸಹಸಃ । ಸೂನೋऽಇತಿ । ಅಗ್ನೇ । ಯಂ । ದೇವಃ । ಆ । ಚಿತ್ । ಸಚಸೇ । ಸ್ವಸ್ತಿ ॥

ಸಾಯಣಭಾಷ್ಯಂ

ಸ್ವಸ್ತ್ಯಯನ್ಯಾಮಾರೇ ಅಸ್ಮದಿತಿ ಸ್ವಸ್ತಿಮತೋಽಗ್ನೇರ್ಯಾಜ್ಯಾ । ಸೂತ್ರಿತಂ ಚ । ಆರೇ ಅಸ್ಮದಮತಿಮಾರೇ ಅಂಹಃ । ಆ. ೨-೮೦ । ಇತಿ ॥

ಹೇ ಸಹಸಃ ಸೂನೋ ಬಲಸ್ಯ ಪುತ್ರ । ಮಥ್ಯಮಾನೋಽಗ್ನಿರ್ಮಥನಕಾರಿಣಾಂ ಹಿ ಬಲೇನ ಜಾಯೇತ ಇತ್ಯಗ್ನೇರ್ಬಲಪುತ್ರತ್ವಂ । ಹೇ ಅಗ್ನೇ ದೋಷಾ ರಾತ್ರೌ ಶಿವಃ ಶಿವಕರೋ ದೇವೋ ದ್ಯೋತಮಾನಸ್ತ್ವಂ ಯಂ ಯಾನಸ್ಮಾನ್ ಸ್ವಸ್ತ್ಯವಿನಾಶಾಯ ಆ ಸಚಸೇ । ಪರಿತಃ ಸೇವಸೇ। ಚಿದಿತಿ ಪೂರಣಃ। ಯದ್ಯಸ್ಮಾತ್ಕಾರಣಾನ್ನಿಪಾಸಿ । ಯಜಮಾನಾನ್ನಿತರಾಂ ಪಾಲಯಸಿ । ತೇಭ್ಯೋಽಸ್ಮದಸ್ಮತ್ತೋಽಮತಿಂ ಪಾಪರೂಪಾಮಶನೇಚ್ಛಾಮಾರೇ ದೂರೇ ಕುರು । ಅಶನಾಯಾ ವೈ ಪಾಪ್ಮಾಮತಿಃ । ಐ. ಬ್ರಾ. ೨-೨ । ಇತಿ ಬ್ರಾಹ್ಮಣಂ । ಆರೇ ದೂರೇಽಸ್ಮತ್ತೋಽಂಹಃ ಪಾಪಂ ಕುರು । ಆರೇ ಇತಿ ದೂರನಾಮೈತತ್ । ಅಸ್ಮತ್ತ ಆರೇ ದೂರೇ ದುರ್ಮತಿಂ ದುರ್ಮನಸ್ತ್ವಂ ಕುರು ॥

ಪ್ರತಿಪದಾರ್ಥ

**ಸಹಸಃ ಸೂನೋ**—ಶಕ್ತಿಪುತ್ರನಾದ । **ಅಗ್ನೇ**—ಅಗ್ನಿಯೇ । **ದೋಷಾ**—ರಾತ್ರಿಕಾಲಗಳಲ್ಲಿ । **ಶಿವಃ**—ಮಂಗಳಕರನೂ । **ದೇವಃ**—ಪ್ರಕಾಶಮಾನನೂ ಆದ ನೀನು । **ಯತ್**—ಯಾವ ಅನುಗ್ರಹಬುದ್ಧಿಯಿಂದ । **ಸ್ವಸ್ತಿ**-

CC-0. Jangamwadi Math Collection. Digitized by eGangotri

ನಾಶರಹಿತವಾದ ಕಲ್ಯಾಣಕ್ಕಾಗಿ । **ಯಂ**—ಯಾವ ಯಜಮಾನರಾದ ನಮ್ಮನ್ನು । **ಆ ಸಚಸೇ ಚಿತ್**—ಸುತ್ತಲೂ ಸೇವಿಸುತ್ತೀಯೋ (ಮತ್ತು) । **ನಿಪಾಸಿ**—ಯಜಮಾನರಾದ ನಮ್ಮನ್ನು ರಕ್ಷಿಸುತ್ತೀಯೋ । **ಅಸ್ಮತ್**—(ಅದೇ ಯಜಮಾನರಾದ) ನಮ್ಮಿಂದ । **ಅಮತಿಂ**—ದುಷ್ಟಬುದ್ಧಿಯನ್ನು । **ಆರೇ**—ದೂರದಲ್ಲಿಡು । **ಅಂಹಃ**—ಪಾಪವನ್ನು । **ಆರೇ**—ದೂರದಲ್ಲಿರುವಂತೆ ಮಾಡು । **ವಿಶ್ವಾ**—ಸಮಸ್ತವಾದ । **ದುರ್ಮತಿಂ**—ಪಾಪಾಲೋಚನೆಯನ್ನೂ ಸಹ । **ಆರೇ**—ನಮ್ಮಿಂದ ದೂರವಾಗಿರುವಂತೆ ಮಾಡು.

### ಭಾವಾರ್ಥ

ಶಕ್ತಿಪುತ್ರನಾದ ಎಲೈ ಅಗ್ನಿಯೇ, ರಾತ್ರಿಕಾಲಗಳಲ್ಲಿ ಮಂಗಳಕರನೂ, ಪ್ರಕಾಶಮಾನನೂ ಆದ ನೀನು ಯಾವ ಅನುಗ್ರಹಬುದ್ಧಿಯಿಂದ ನಾಶರಹಿತವಾದ ಕಲ್ಯಾಣಕ್ಕಾಗಿ ಯಾವ ಯಜಮಾನರಾದ ನಮ್ಮನ್ನು ಸುತ್ತಲೂ ಸೇವಿಸುತ್ತಿವೆಯೋ, ಅದೇ ಯಜಮಾನರಾದ ನಮ್ಮಿಂದ ದುಷ್ಟಬುದ್ಧಿಯನ್ನೂ, ದಾರಿದ್ರ್ಯಕೃತವಾದ ಪಾಪವನ್ನೂ ಸಮಸ್ತವಾದ ಪಾಪಾಲೋಚನೆಯನ್ನೂ ದೂರವಾಗಿರುವಂತೆ ಮಾಡು.

### English Translation

Agni, son of strength, since you protect (your worshippers), far (remove) from us all iniquity; far ( remove from us ) sin; far (from us) all evil thoughts; for prosperous is he of whom you, who are radiant by night, promote the well-being.

### ವಿಶೇಷವಿಷಯಗಳು

ಸ್ವಸ್ತ್ಯಯನಿಯೆಂಬ ಇಷ್ಟಿಯಲ್ಲಿ ಆರೇ ಅಸ್ಮತ್ ಎಂಬ ಈ ಋಕ್ಕನ್ನು ಸ್ವಸ್ತಿಮಾನಗ್ನಿಃ ಎಂಬ ಅಗ್ನಿಯನ್ನುದ್ದೇಶಿಸಿ ಹೋಮಮಾಡುವಾಗ ಯಾಜ್ಯಾಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಆರೇ ಅಸ್ಮದಮತಿಮಾರೇ ಅಂಹಃ ಎಂಬ ಸೂತ್ರದಿಂದ (ಆ. ೨-೧೦) ವಿವೃತವಾಗಿರುವುದು.

ಅಶನಾಯಾ ವೈ ಪಾಪ್ಮಾಮತಿಃ (ಐ. ಬ್ರಾ. ೨-೨) ಎಂಬ ಐತರೇಯಬ್ರಾಹ್ಮಣದ ವಾಕ್ಯವನ್ನು ಭಾಷ್ಯಕಾರರು ಉದಾಹರಿಸಿದಾರೆ. ಈ ವಿಷಯವನ್ನು ನಾವು ಋ. ಸಂ ೩-೮-೨ ನೇ ಋಕ್ಕನ್ನು (ಋ. ಸಂ. ಭಾಗ 15 ಪೇಜು 82-83) ವಿವರಿಸುವಾಗ ಸ್ಪಷ್ಟವಾಗಿ ತಿಳಿಸಲಾಗಿದೆ.

---

## ಹನ್ನೆರಡನೆಯ ಸೂಕ್ತವು.

### ಸಾಯಣಭಾಷ್ಯಂ

ಯಸ್ತ್ವಾಮಗ್ನ ಇತಿ ಷಡೃಚಂ ದ್ವಿತೀಯಂ ಸೂಕ್ತಂ । ವಾಮದೇವ ಋಷಿಃ । ತ್ರೈಷ್ಟುಭಂ ಛಂದಃ । ಅಗ್ನಿರ್ದೇವತಾ । ಯಸ್ತ್ವಾಮಿತ್ಯನುಕ್ರಾಂತಂ ॥ ಪ್ರಾತರನುವಾಕಾಶ್ವಿನಶಸ್ತ್ರಯೋಃ ಪೂರ್ವಸೂಕ್ತೇನ ಸಹೋಕ್ತೋ ವಿನಿಯೋಗಃ ॥

CC-0. Jangamwadi Math Collection. Digitized by eGangotri

ಅನುವಾದವು—**ಯಸ್ತ್ವಾಮಗ್ನೇ** ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಅನುಕ್ರಮಣಿಕೆಯಲ್ಲಿ—**ಯಸ್ತ್ವಾಂ** ಎಂದು ಮೊದಲಾಗಿ ಹೇಳಿರುವುದು. ಪ್ರಾತರನುವಾಕ ಮತ್ತು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿ ಹಿಂದಿನ ಸೂಕ್ತದೊಡನೆ ಈ ಸೂಕ್ತದ ವಿನಿಯೋಗವೂ ಇರುವುದು.

---

## ಸೂಕ್ತ—೧೨

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೨

ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೧೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬

ಋಷಿಃ—ವಾಮದೇವಃ

ದೇವತಾ—ಅಗ್ನಿಃ

ಛಂದಃ—ತ್ರಿಷ್ಟುಪ್ ॥

:o:

ಸಂಹಿತಾಪಾಠಃ

ಯಸ್ತ್ವಾಮಗ್ನ ಇನಧತೇ ಯತಸ್ರುಕ್ತ್ರಿಸ್ತೇ ಅನ್ನಂ ಕೃಣವತ್ಸಸ್ಮಿನ್ನಹನ್ ।

ಸ ಸು ದ್ಯುಮ್ನೈರಭ್ಯಸ್ತು ಪ್ರಸಕ್ಷತ್ತವ ಕ್ರತ್ವಾ ಜಾತವೇದಶ್ಚಿಕಿತ್ವಾನ್ ॥೧॥

ಪದಪಾಠಃ

ಯಃ । ತ್ವಾಂ । ಅಗ್ನೇ । ಇನಧತೇ । ಯತಸ್ರುಕ್ । ತ್ರಿಃ । ತೇ । ಅನ್ನಂ । ಕೃಣವತ್ । ಸಸ್ಮಿನ್ । ಅಹನ್ ।

ಸಃ । ಸು । ದ್ಯುಮ್ನೈಃ । ಅಭಿ । ಅಸ್ತು । ಪ್ರಸಕ್ಷತ್ । ತವ । ಕ್ರತ್ವಾ । ಜಾತವೇದಃ । ಚಿಕಿತ್ವಾನ್ ॥೧॥

ಸಾಯಣಭಾಷ್ಯಂ

ಹೇ ಅಗ್ನೇ ಯತಸ್ರುಕ್ ಸ್ರುಚಾ ಸಂಬದ್ಧೋ ಯೋ ಯಜಮಾನಸ್ತ್ವಾಮಿನಧತೇ । ದೀಪ್ತಿಯುಕ್ತಂ ಕುರ್ಯಾತ್ । ಯಃ ಸಸ್ಮಿನ್ನಹನ್ ಸರ್ವಸ್ಮಿನ್ನಹನಿ ತೇ ತುಭ್ಯಂ ತ್ರಿಸ್ತ್ರಿವಾರಂ ಸವನತ್ರಯೇಽನ್ನಂ ಹವಿರ್ಲಕ್ಷಣಮನ್ನಂ ಕೃಣವತ್ । ಕುರ್ಯಾತ್ । ಹೇ ಜಾತವೇದೋ ಜಾತಾನಾಂ ವೇದಿತರಗ್ನೇ

CC-0. Jangamwadi Math Collection. Digitized by eGangotri

ತವ ತೋಷಕೇಣ ಕೃತ್ವೇಂಧನಾದಿಹೇತುನಾ ಕರ್ಮಣಾ ಪ್ರಸಕ್ಷತ್ ಪ್ರಸಹಮಾನಂ ತ್ವದೀಯಂ ತೇಜಶ್ಚಿ-ಕಿತ್ವಾನ್ ಜಾನನ್ ಸ ಯಜಮಾನೋ ದ್ಯುಮ್ನೈರ್ಧನೈರ್ಯಶೋಭಿರ್ವಾ ಸು ಅತ್ಯಂತಮಭ್ಯಸ್ತು । ಶತ್ರೂನಭಿಭವತು ॥

ಪ್ರತಿಪದಾರ್ಥ

ಜಾತವೇದಃ—ಜಾತಪ್ರಜ್ಞನಾದ । ಅಗ್ನೇ—ಎಲೈ ಅಗ್ನಿಯೇ । ಯತಸ್ರುಕ್—ಸ್ರುಕ್ಪಾತ್ರೆಯನ್ನು ಎತ್ತಿಹಿಡಿದು । ಯಃ—ಯಾವ ಯಜಮಾನನು । ತ್ವಾ—ನಿನ್ನನ್ನು । ಇನಧತೇ—ಪ್ರಕಾಶಮಾನನನ್ನಾಗಿ ಮಾಡುತ್ತಾನೆಯೋ। (ಯಃ—ಯಾವ ಯಜಮಾನನು)। ಸಸ್ಮಿನ್ನಹನ್—ಸಕಲ ದಿನಗಳಲ್ಲಿಯೂ । ತೇ—ನಿನ್ನನ್ನುದ್ದೇಶಿಸಿ । ತ್ರಿಃ—ಸವನತ್ರಯಕಾಲಗಳಲ್ಲಿಯೂ । ಅನ್ನಂ—ಹವಿಸ್ಸಿನ ರೂಪದ ಅನ್ನವನ್ನು । ಕೃಣವತ್—ಅರ್ಪಿಸುವನೋ । ಸಃ—ಆ ಯಜಮಾನನು । ತವ—ನಿನಗೆ ತೃಪ್ತಿಕಾರಕವಾದ । ಕೃತ್ವಾ—ಕರ್ಮಗಳಿಂದ । ಪ್ರಸಕ್ಷತ್—ಅಪ್ರತಿಹತವಾದ ನಿನ್ನ ತೇಜಸ್ಸನ್ನು । ಚಿಕಿತ್ವಾನ್—ಅರಿತವನಾಗಿ । ದ್ಯುಮ್ನೈಃ—ಧನಗಳಿಂದಲೂ ಯಶಸ್ಸಿನಿಂದಲೂ ಸಹ । ಸು—ಅತ್ಯಧಿಕವಾಗಿ । ಅಭ್ಯಸ್ತು—ತನ್ನ ಶತ್ರುಗಳನ್ನು ಸೋಲಿಸಲಿ.

ಭಾವಾರ್ಥ

ಜಾತಪ್ರಜ್ಞನಾದ ಎಲೈ ಅಗ್ನಿಯೇ, ಸ್ರುಕ್‌ಪಾತ್ರೆಯನ್ನು ಎತ್ತಿಹಿಡಿದು ಯಾವ ಯಜಮಾನನು ನಿನ್ನನ್ನು ಪ್ರಕಾಶಿಸುವಂತೆ ಮಾಡುತ್ತಾನೆಯೋ, ಯಾವ ಯಜಮಾನನು ಸಕಲ ದಿನಗಳಲ್ಲಿಯೂ ನಿನ್ನನ್ನುದ್ದೇಶಿಸಿ ಸವನತ್ರಯ ಕಾಲಗಳಲ್ಲೂ ಹವಿಸ್ಸಿನರೂಪದ ಅನ್ನವನ್ನು ಅರ್ಪಿಸುವನೋ, ಆ ಯಜಮಾನನು ನಿನಗೆ ತೃಪ್ತಿಕಾರಕವಾದ ಕರ್ಮಗಳಿಂದ ಅಪ್ರತಿಹತವಾದ ನಿನ್ನ ತೇಜಸ್ಸನ್ನರಿತವನಾಗಿ ಧನಗಳಿಂದಲೂ ಯಶಸ್ಸಿನಿಂದಲೂ ಅತ್ಯಧಿಕವಾಗಿ ತನ್ನ ಶತ್ರುಗಳನ್ನು ಪರಾಭವಗೊಳಿಸಲಿ.

## English Translation

May he who with uplifted ladle kindles you, and thrice every day presents to you the (sacrificial) food, knowing your glory, Jatavedas, to be invigorated by the act, surpass (all others) in riches.

---

ಸಂಹಿತಾಪಾಠಃ

ಇಧ್ಮಂ ಯಸ್ತೇ ಜಭರಚ್ಛಶ್ರಮಾಣೋ ಮಹೋ ಅಗ್ನೇ ಅನೀಕಮಾ ಸಪರ್ಯನ್ ।

ಸ ಇಧಾನಃ ಪ್ರತಿ ದೋಷಾಮುಷಾಸಂ ಪುಷ್ಯನ್ರಯಿಂ ಸಚತೇ ಘ್ನನ್ನಮಿತ್ರಾನ್ ॥ ೨ ॥

CC-0. Jangamwadi Math Collection. Digitized by eGangotri

### ಪದಪಾಠಃ

ಇಧ್ಮಂ । ಯಃ । ತೇ । ಜಭರತ್ । ಶಶ್ರಮಾಣಃ । ಮಹಃ । ಅಗ್ನೇ । ಅನೀಕಂ । ಆ । ಸಪರ್ಯನ್ ।

ಸಃ । ಇಧಾನಃ । ಪ್ರತಿ । ದೋಷಾಂ । ಉಷಸಂ । ಪುಷ್ಯನ್ । ರಯಿಂ । ಸಚತೇ । ಘ್ನನ್ । ಅಮಿತ್ರಾನ್॥

### ಸಾಯಣಭಾಷ್ಯಂ

ಹೇ ಅಗ್ನೇ ಯೋ ಯಜಮಾನಸ್ತೇ ತುಭ್ಯಮಿಧ್ಮಂ ಹೋಮಸಾಧನಂ ಸಮಿಜ್ಜಾತಂ ಜಭರತ್ । ಆಹರೇತ್ ॥ ಹೃಞ್ ಹರಣೇ । ಲಿಙರ್ಥೇ ಲೇಟ್ । ತಸ್ಯ ತಿಪ ಇತಶ್ಚ ಲೋಪ ಇತೀಕಾರಲೋಪಃ । ಬಹುಲಂ ಛಂದಸೀತಿ ಶಪಃ ಶ್ಲುಃ । ದ್ವಿರ್ವಚನಾದಿಕಾರ್ಯಂ । ಲೇಟೋಽಡಾಟಾವಿತ್ಯಡಾಗಮಃ । ಹೃಗ್ರಹೋರ್ಭ ಇತಿ ಭತ್ವಂ ॥ ಶಶ್ರಮಾಣ ಇಧ್ಮಾದ್ಯಾಹರಣೇ ಶ್ರಾಮ್ಯನ್ಮಹೋ ಮಹತಸ್ತವಾನೀಕಂ । ಆಕಾರಶ್ಚಾರ್ಥೇ । ತೇಜಶ್ಚ ಸಪರ್ಯನ್ಪರಿಚರನ್ ಯೋ ಯಜಮಾನೋ ದೋಷಾಂ ಪ್ರತಿ ರಾತ್ರಿಂ ಲಕ್ಷೀಕೃತ್ಯೋಷಸಂ ಪ್ರತ್ಯುಷಃಕಾಲಂ ಚ ಲಕ್ಷೀಕೃತ್ಯ । ಕಾಲದ್ವಯೇಽಪೀತ್ಯರ್ಥಃ । ಇಧಾನ ಇಂಧಾನಸ್ತ್ವಾಂ ದೀಪ್ತಿಯುಕ್ತಂ ಕರೋತಿ ಪುಷ್ಯನ್ ಪ್ರಜಾಭಿಃ ಪಶುಭಿಶ್ಚ ಪುಷ್ಟಃ ಸನ್ ಸ ಯಜಮಾನೋಽಮಿತ್ರಾನ್ ಶತ್ರೂನ್ ಘ್ನನ್ಹಿಂಸನ್ರಯಿಂ ಧನಂ ಸಚತೇ । ಸೇವತೇ । ಸರ್ವದಾ ಪಶ್ವಾದಿಧನಸಮೃದ್ಧೋ ಭವತೀತ್ಯರ್ಥಃ ॥

### ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ಯಃ—ಯಾವ ಯಜಮಾನನು । ತೇ—ನಿನ್ನನ್ನುದ್ದೇಶಿಸಿ । ಇಧ್ಮಂ—ಹೋಮಾಂಗವಾದ ಸಮಿತ್ತುಗಳನ್ನು । ಜಭರತ್—ಹಾಕುತ್ತಾನೆಯೋ । ಶಶ್ರಮಾಣಃ—ಇಧ್ಮಾಹರಣಕಾಲದಲ್ಲಿ ಶ್ರಮವನ್ನು ವಹಿಸಿ । ಮಹಃ—ಮಹತ್ಸ್ವರೂಪವುಳ್ಳ ನಿನ್ನ । ಆ ಅನೀಕಂ—ತೇಜಸ್ಸನ್ನು । ಸಪರ್ಯನ್—ಪೂಜಿಸುತ್ತಾ । ದೋಷಾಂ ಪ್ರತಿ—ರಾತ್ರಿಕಾಲದಲ್ಲೂ । ಉಷಸಂ—ಉಷಃಕಾಲದಲ್ಲೂ । ಇಧಾನಃ—ನಿನ್ನನ್ನು ಪ್ರಜ್ವಲಿಸುವಂತೆ ಮಾಡುವನೋ । ಸಃ—ಆ ಯಜಮಾನನು । ಪುಷ್ಯನ್—ಪ್ರಜಾವೃದ್ಧಿಯನ್ನು ಹೊಂದಿ । ಅಮಿತ್ರಾನ್—ಶತ್ರುಗಳನ್ನು । ಘ್ನನ್—ಹಿಂಸಿಸುತ್ತಾ । ರಯಿಂ—ಪಶ್ವಾದಿ ಧನವನ್ನು । ಸಚತೇ—ಸೇವಿಸುತ್ತಾನೆ.

### ಭಾವಾರ್ಥ

ಎಲೈ ಅಗ್ನಿಯೇ, ಯಾವ ಯಜಮಾನನು ನಿನ್ನನ್ನುದ್ದೇಶಿಸಿ ಹೋಮಾಂಗವಾದ ಸಮಿತ್ತುಗಳನ್ನು ಆಹರಿಸುತ್ತಾನೆಯೋ, ಇಧ್ಮಾಹರಣಕಾಲದಲ್ಲಿ ಶ್ರಮವನ್ನು ವಹಿಸಿ ಮಹತ್ಸ್ವರೂಪವುಳ್ಳ ನಿನ್ನ ತೇಜಸ್ಸನ್ನು ಪೂಜಿಸುತ್ತಾ ರಾತ್ರಿಕಾಲದಲ್ಲೂ ಉಷಃಕಾಲದಲ್ಲೂ ನಿನ್ನನ್ನು ಪ್ರಜ್ವಲಿಸುವಂತೆ ಮಾಡುವನೋ ಆ ಯಜಮಾನನು ಪ್ರಜಾವೃದ್ಧಿಯನ್ನು ಹೊಂದಿ ಶತ್ರುಗಳನ್ನು ನಾಶಪಡಿಸಿ ಪಶ್ವಾದಿಧನವನ್ನು ಪಡೆಯುತ್ತಾನೆ.

### English Translation

He who, labouring diligently, brings you fuel, honouring Agni, your great glory ; he who kindles you in the evening and at dawn ; he, prosperous and destroying his enemies, acquires riches.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಗ್ನಿರೀಶೇ ಬೃಹತಃ ಕ್ಷತ್ರಿಯಸ್ಯಾಗ್ನಿರ್ವಾಜಸ್ಯ ಪರಮಸ್ಯ ರಾಯಃ ।
ದಧಾತಿ ರತ್ನಂ ವಿಧತೇ ಯವಿಷ್ಠೋ ವ್ಯಾನುಷಙ್ಮರ್ತ್ಯಾಯ ಸ್ವಧಾವಾನ್॥

ಪದಪಾಠಃ

ಅಗ್ನಿಃ । ಈಶೇ । ಬೃಹತಃ । ಕ್ಷತ್ರಿಯಸ್ಯ । ಅಗ್ನಿಃ । ವಾಜಸ್ಯ । ಪರಮಸ್ಯ । ರಾಯಃ ।
ದಧಾತಿ । ರತ್ನಂ । ವಿಧತೇ । ಯವಿಷ್ಠಃ । ವಿ । ಆನುಷಕ್ । ಮರ್ತ್ಯಾಯ । ಸ್ವಧಾಽವಾನ್ ॥ ೩ ॥

ಸಾಯಣಭಾಷ್ಯಂ

ಉಖಾಸಂಭರಣೀಯೇಷ್ಟಾವಗ್ನೇಃ ಕ್ಷತ್ರಭೃತೋಽನುವಾಕ್ಯಾ । ತಥಾ ಚ ಸೂತ್ರಿತಂ । ಅಗ್ನಿರೀಶೇ ಬೃಹತಃ ಕ್ಷತ್ರಿಯಸ್ಯಾರ್ಚಾಮಿ ತೇ ಸುಮತಿಂ ಘೋಷ್ಯರ್ವಾಕ್ । ಆ. ೪-೧ । ಇತಿ ॥

ಅಗ್ನಿರ್ಬೃಹತೋ ಮಹತಃ ಕ್ಷತ್ರಿಯಸ್ಯ ಬಲಸ್ಯೇಶೇ । ಈಶ್ವರೋ ಭವತಿ ॥ ವರ್ತಮಾನಾರ್ಥೇ ಲಿಟ್ ॥ ಕಿಂಚ ಅಗ್ನಿಃ ಪರಮಸ್ಯೋತ್ಕೃಷ್ಟಸ್ಯ ವಾಜಸ್ಯಾನ್ನಸ್ಯ ರಾಯಃ ಪಶ್ವಾದೇರ್ಧನಸ್ಯ ಚೇಶೇ । ಯವಿಷ್ಠೋ ಯುವತಮಃ ಸ್ವಧಾವಾನನ್ನವಾನ್ ತೇಜಸ್ವೀ ವಾಗ್ನಿರ್ವಿಧತೇ । ಪರಿಚರತೇ । ವಿಧತಿಃ ಪರಿಚರಣಕರ್ಮೇತಿ ಯಾಸ್ಕಃ । ಮರ್ತ್ಯಾಯ ಮನುಷ್ಯಾಯ ಯಜಮಾನಾಯ ರತ್ನಂ ರಮಣೀಯಂ ಧನಮಾನುಷಕ್ ಅನುಷಕ್ತಂ ವಿ ದಧಾತಿ । ಕರೋತಿ ॥

ಪ್ರತಿಪದಾರ್ಥ

ಅಗ್ನಿಃ—ಅಗ್ನಿಯು। ಬೃಹತಃ—ಅತ್ಯಧಿಕವಾದ। ಕ್ಷತ್ರಿಯಸ್ಯ—ಬಲಕ್ಕೆ। ಈಶೇ—ಒಡೆಯನಾಗಿದ್ದಾನೆ। ಅಗ್ನಿಃ—ಅದೇ ಮಹತ್ತ್ವವುಳ್ಳ ಅಗ್ನಿಯು। ಪರಮಸ್ಯ—ಅತ್ಯುತ್ಕೃಷ್ಟವಾದ। ವಾಜಸ್ಯ—ಅನ್ನಕ್ಕೂ। ರಾಯಃ—ಪಶ್ವಾದಿ ಧನಕ್ಕೂ ಒಡೆಯನಾಗಿದ್ದಾನೆ। ಯವಿಷ್ಠಃ—ಅತ್ಯಂತ ಯುವಕನೂ। ಸ್ವಧಾವಾನ್—ತೇಜಸ್ವಿಯೂ ಆದ ಅಗ್ನಿಯು। ವಿಧತೇ—(ಯಜಮಾನನನ್ನು) ಸೇವಿಸುತ್ತಾನೆ। ಮರ್ತ್ಯಾಯ—ಮಾನವನಾದ ಯಜಮಾನನಿಗೆ। ರತ್ನಂ—ರಮಣೀಯವಾದ ಧನವನ್ನು। ಆನುಷಕ್—ಅವನವನ ಕರ್ಮಕ್ಕನುಗುಣವಾಗಿ। ವಿ ದಧಾತಿ—ಒದಗಿಸಿ ಕೊಡುತ್ತಾನೆ.

ಭಾವಾರ್ಥ

ಅಗ್ನಿಯು ಮಹತ್ತಾದ ಶಕ್ತಿಗೆ ಒಡೆಯನಾಗಿದ್ದಾನೆ. ಅದೇ ಮಹತ್ತ್ವವುಳ್ಳ ಅಗ್ನಿಯು ಅತ್ಯುತ್ಕೃಷ್ಟವಾದ ಅನ್ನಕ್ಕೂ ಪಶ್ವಾದಿ ಧನಕ್ಕೂ ಒಡೆಯನಾಗಿದ್ದಾನೆ. ಅತ್ಯಂತ ಯುವಕನೂ, ತೇಜಸ್ವಿಯೂ ಆದ ಅಗ್ನಿಯು ಯಜಮಾನನನ್ನು ಸೇವಿಸುತ್ತಾನೆ. ಮಾನವನಾದ ಯಜಮಾನನಿಗೆ ರಮಣೀಯವಾದ ಧನವನ್ನು ಅವನವನ ಕರ್ಮಕ್ಕನುಗುಣವಾಗಿ ಒದಗಿಸಿಕೊಡುತ್ತಾನೆ.

CC-0. Jangamwadi Math Collection. Digitized by eGangotri

## English Translation

Agni is the possessor of great strength, of excellent food, of riches, the youngest ( of the gods ): abounding in sustenance, he gives to the mortal who worships him precious (wealth) according to (his devotion)

### ವಿಶೇಷವಿಷಯಗಳು

ಉಖಾಸಂಭರಣೇಷ್ಟಿಯಲ್ಲಿ ಅಗ್ನಿಯನ್ನುದ್ದೇಶಿಸಿ ಕ್ಷತ್ರಿಯನು ಹೋಮಮಾಡುವಾಗ ಅಗ್ನಿರೀಶೇ ಬೃಹತಃ ಎಂಬ ಈ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—ಅಗ್ನಿ-ಶರೀರೇ ಬೃಹತಃ ಕ್ಷತ್ರಿಯಸ್ಯಾಚರ್ಾಮಿ ತೇ ಸುಮತಿಂ ಘೋಷ್ಯನರ್ಾಕ್ ಎಂಬ ಸೂತ್ರದಿಂದ ( ಆ. ೪-೧ ) ವಿವೃತವಾಗಿರುವುದು.

---

### ಸಂಹಿತಾಪಾಠಃ

ಯಚ್ಚಿದ್ಧಿ ತೇ ಪುರುಷತ್ರಾ ಯವಿಷ್ಠಾಚಿತ್ತಿಭಿಶ್ಚಕೃಮಾ ಕಚ್ಚಿದಾಗಃ ।
ಕೃಧೀ ಷ್ವ೧ಸ್ಮಾँ ಅದಿತೇರನಾಗಾನ್ವ್ಯೇನಾಂಸಿ ಶಿಶ್ರಥೋ ವಿಷ್ವಗಗ್ನೇ ॥ ೪ ॥

### ಪದಪಾಠಃ

ಯತ್ । ಚಿತ್ । ಹಿ । ತೇ । ಪುರುಷऽತ್ರಾ । ಯವಿಷ್ಠ । ಅಚಿತ್ತಿऽಭಿಃ । ಚಕೃಮ । ಕತ್ । ಚಿತ್ । ಆಗಃ।
ಕೃಧಿ । ಸು । ಅಸ್ಮಾನ್ । ಅದಿತೇಃ । ಅನಾಗಾನ್ । ವಿ । ಏನಾಂಸಿ । ಶಿಶ್ರಥಃ । ವಿಷ್ವಕ್ । ಅಗ್ನೇ ॥ ೪ ॥

### ಸಾಯಣಭಾಷ್ಯಂ

ಹೇ ಯವಿಷ್ಠ ಯುವತಮಾಗ್ನೇ ಯಚ್ಚಿದ್ಧಿ ಯದ್ಯಪಿ ಖಲು ತೇ ತ್ವದೀಯೇಷು ಪುರುಷತ್ರಾ ಪರಿಚಾರಕೇಷು ಪುರುಷೇಷ್ವಚಿತ್ತಿಭಿರಜ್ಞಾನೈಃ ಕಚ್ಚಿದಾಗಃ ಕಿಂಚಿದಪಿ ಪಾಪಂ ವಯಂ ಚಕೃಮ ತಥಾಪಿ ಹೇ ಅಗ್ನೇ ಅಸ್ಮಾನದಿತೇರ್ಭೂಮೇರನಾಗಾನನಾಗಸಃ ಪಾಪರಹಿತಾನ್ ಸು ಅತ್ಯಂತಂ ಕೃಧಿ । ಕುರು । ಹೇ ಅಗ್ನೇ ವಿಷ್ವಕ್ ಸರ್ವತೋ ವಿದ್ಯಮಾನಾನ್ಯೇನಾಂಸ್ಯಸ್ಮಾಭಿಃ ಕೃತಾನಿ ಪಾಪಾನಿ ವಿ ಶಿಶ್ರಥಃ । ವಿಶ್ಲಥಯ । ಶಿಥಿಲೀ ಕುರು ॥

### ಪ್ರತಿಪದಾರ್ಥ

ಯವಿಷ್ಠ—ಅತ್ಯಂತ ಯುವಕನಾದ । ಅಗ್ನೇ—ಎಲೈ ಅಗ್ನಿಯೇ। ಯಚ್ಚಿದ್ಧಿ—ಯಾವುದಾದರೂ ಕಾರಣದಿಂದ (ಆಕಸ್ಮಾತ್ತಾಗಿ) । ತೇ—ನಿನ್ನ ವಿಷಯದಲ್ಲಿ । ಪುರುಷತ್ರಾ—ಮಾನವನಿಗೆ ಸಾಧಾರಣವಾದ। ಅಚಿತ್ತಿಭಿಃ—ಅಜ್ಞಾನಗಳಿಂದ । ಕಚ್ಚಿದಾಗಃ—ಏನಾದರೂ ಪಾಪವನ್ನು । ಚಕೃಮ—ಮಾಡಿದ್ದರೆ । ಅಸ್ಮಾನ್—ನಮ್ಮನ್ನು ।

CC-0. Jangamwadi Math Collection. Digitized by eGangotri

ಅದಿತೇಃ—ಪಾರ್ಥಿವವಾದ । ಅನಾಗಾನ್—ಪಾಪರಹಿತರನ್ನಾಗಿ । ಸು—ಅತಿಶಯವಾಗಿ । ಕೃಧಿ—ಮಾಡು । ವಿಷ್ವಕ್—ಸರ್ವತ್ರವ್ಯಾಪ್ತವಾದ । ಏನಾಂಸಿ—ಪಾಪಗಳನ್ನು । ವಿ ಶಿಶ್ರಥಃ—ನಾಶಪಡಿಸು.

ಭಾವಾರ್ಥ

ಅತ್ಯಂತ ಯುವಕನಾದ ಎಲೈ ಅಗ್ನಿಯೇ, ನಿನ್ನ ವಿಷಯದಲ್ಲಿ ನಾವು ಅಕಸ್ಮಾತ್ತಾಗಿ ಮಾನವನಿಗೆ ಸಹಜವಾದ ಅಜ್ಞಾನಗಳಿಂದ ಏನಾದರೂ ಪಾಪವನ್ನು ಮಾಡಿದ್ದರೆ, ನಮ್ಮನ್ನು ಆ ಪಾರ್ಥಿವವಾದ ಪಾಪದಿಂದ ಮುಕ್ತರನ್ನಾಗಿ ಮಾಡು. ಸರ್ವತ್ರ ವ್ಯಾಪ್ತವಾದ ನಮ್ಮ ಆ ಪಾಪಗಳನ್ನು ನಾಶಪಡಿಸು.

English Translation

If, youngest (of the gods), with the inconsiderateness common to men, we have ever committed any offence against you, make us free from the defects of earth ; efface entirely, Agni, our offences.

————

ಸಂಹಿತಾಪಾಠಃ

ಮಹಶ್ಚಿದಗ್ನ ಏನಸೋ ಅಭೀಕ ಊರ್ವಾದ್ದೇವಾನಾಮುತ ಮರ್ತ್ಯಾನಾಂ।
ಮಾ ತೇ ಸಖಾಯಃ ಸದಮಿದ್ರಿಷಾಮ ಯಚ್ಛಾ ತೋಕಾಯ ತನಯಾಯ ಶಂ ಯೋಃ ॥ ೫ ॥

ಪದಪಾಠಃ

ಮಹಃ । ಚಿತ್ । ಅಗ್ನೇ । ಏನಸಃ । ಅಭೀಕೇ । ಊರ್ವಾತ್ । ದೇವಾನಾಂ । ಉತ । ಮರ್ತ್ಯಾನಾಂ । ಮಾ । ತೇ । ಸಖಾಯಃ । ಸದಂ । ಇತ್ । ರಿಷಾಮ । ಯಚ್ಛ । ತೋಕಾಯ । ತನಯಾಯ । ಶಂ । ಯೋಃ ॥ ೫ ॥

ಸಾಯಣಭಾಷ್ಯಂ

ಹೇ ಅಗ್ನೇ ದೇವಾನಾಮಿಂದ್ರಾದೀನಾಮುತ ಅಪಿ ಚ ಮರ್ತ್ಯಾನಾಂ ಮನುಷ್ಯಾಣಾಮಭೀಕೇಽಂತಿಕೇ । ಅಭೀಕ ಇತ್ಯಂತಿಕನಾಮೈತತ್ । ಅಸ್ಮಾಭಿರ್ಯತ್ಪಾಪಂ ಕೃತಂ ಮಹಶ್ಚಿನ್ಮಹತೋಽಪ್ಯೂರ್ವಾದ್ವಿಸ್ತೃತಾದಸ್ಮಾದೇನಸಃ ಪಾಪಾತ್ತೇ ತ್ವದೀಯಾಃ ಸಖಾಯೋ ಮಿತ್ರಭೂತಾಃ ಸ್ತೋತಾರೋ ವಯಂ ಸದಮಿತ್ಸರ್ವದೈವ ಮಾ ರಿಷಾಮ । ಮಾ ಹಿಂಸಿತಾ ಭೂಮ । ಹೇ ಅಗ್ನೇ ತ್ವಂ ತೋಕಾಯ ಪುತ್ರಾಯ ತನಯಾಯ ಪೌತ್ರಾಯ ಶಂ ಪಾಪರೂಪೋಪದ್ರವಾಣಾಂ ಶಾಂತಿಂ ಯೋಃ ಸುಕೃತೋತ್ಪಾದಿತಂ ಸುಖಂ ಚ ಯಚ್ಛ । ದೇಹಿ ॥



CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ಅಗ್ನೇ—ಎಲೈ ಅಗ್ನಿಯೇ । ದೇವಾನಾಂ—ದೇವತೆಗಳ ವಿಷಯದಲ್ಲಾಗಲಿ । ಉತ—ಮತ್ತು । ಮರ್ತ್ಯಾನಾಂ—ಮಾನವರ । ಅಭೀಕೇ—ಸಮೀಪದಲ್ಲಾಗಲಿ । ತೇ—ನಿನ್ನ । ಸಖಾಯಃ—ಮಿತ್ರಭೂತರಾದ ನಾವು । ಮಹಶ್ಚಿತ್—ಅತ್ಯಧಿಕವಾದುದೂ । ಊರ್ವಾತ್—ವಿಸ್ತೃತವಾದುದೂ ಆದ । ಏನಸಃ—ಪಾಪದಿಂದ ಉತ್ಪನ್ನವಾದ ಫಲದಿಂದ । ಸದಮಿತ್—ಯಾವಾಗಲೂ । ಮಾ ರಿಷಾಮ—ಹಿಂಸಿತರಾಗದೇ ಇರೋಣ । (ಅಗ್ನೇ—ಎಲೈ ಅಗ್ನಿಯೇ) । ತೋಕಾಯ—ನಮ್ಮ ಪುತ್ರರಿಗೂ । ತನಯಾಯ—ಪೌತ್ರರಿಗೂ । ಶಂ—ಪಾಪರಹಿತವಾದ ಶಾಂತಿಯನ್ನೂ । ಯೋಃ—ಸುಖವನ್ನೂ । ಯಚ್ಛ—ಕೊಡು.

ಭಾವಾರ್ಥ

ಎಲೈ ಅಗ್ನಿಯೇ, ನಿನ್ನ ಮಿತ್ರಭೂತರಾದ ನಾವು ಅಜ್ಞಾನದಿಂದ ಪಾಪವನ್ನಾಚರಿಸಿದಾಗ ದೇವತೆಗಳಿಂದಾಗಲಿ, ಮಾನವರಿಂದಾಗಲಿ ಯಾವ ವಿಧವಾದ ಹಿಂಸೆಯನ್ನೂ ಪಡೆಯದಿರುವಂತೆ ಅನುಗ್ರಹಿಸು. ನಮ್ಮ ಪಾಪವು ಅತ್ಯಧಿಕವಾಗಿದ್ದರೂ ಸಹ ಅದರ ಫಲವು ನಮ್ಮನ್ನು ಹಿಂಸಿಸದೇ ಇರಲಿ. ಎಲೈ ಅಗ್ನಿಯೇ, ನಮ್ಮ ಪುತ್ರರಿಗೂ, ಪೌತ್ರರಿಗೂ ಸಹ ಪಾಪರಹಿತವಾದ ಶಾಂತಿಯನ್ನೂ ಸುಖವನ್ನೂ ಕೊಡು.

English Translation

Let not us, Agni, who are your friends, ever suffer harm from any great or comprehensive offence against either gods or men: bestow forgiveness upon our sons and grandsons, the reward of what has been well done.

---

ಸಂಹಿತಾಪಾಠಃ

ಯಥಾ ಹ ತ್ಯದ್ವಸವೋ ಗೌರ್ಯಂ ಚಿತ್ಪದಿ ಷಿತಾಮಮುಂಚತಾ ಯಜತ್ರಾಃ ।
ಏವೋ ಷ್ವ೧ಸ್ಮನ್ಮುಂಚತಾ ವ್ಯಂಹಃ ಪ್ರ ತಾರ್ಯಗ್ನೇ ಪ್ರತರಂ ನ ಆಯುಃ ॥

ಪದಪಾಠಃ

ಯಥಾ । ಹ । ತ್ಯತ್ । ವಸವಃ । ಗೌರ್ಯಂ । ಚಿತ್ । ಪದಿ । ಸಿತಾಂ । ಅಮುಂಚತ । ಯಜತ್ರಾಃ । ಏವೋ ಇತಿ । ಸು । ಅಸ್ಮತ್ । ಮುಂಚತ । ವಿ । ಅಂಹಃ । ಪ್ರ । ತಾರಿ । ಅಗ್ನೇ । ಪ್ರತರಂ । ನಃ । ಆಯುಃ ॥ ೭ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಯಜತ್ರಾ ಯಜನೀಯಾಃ ಪೂಜಾರ್ಹಾ ಹೇ ವಸವೋ ನಿವಾಸಯಿತಾರೋಽಗ್ನಯೋ ಯೂಯಂ ಯಥಾ ಹ ಯಥೈವ ತ್ಯತ್ತ್ಯಂ ತಾಂ ಪದಿ ಪಾದೇ ಸಿತಾಂ ಬದ್ಧಾಂ ಗೌರ್ಯಂ ಚಿತ್ ಗೌರೀಂ ಗಾಮುಪ್ಯಮುಂಚತ । ತ್ಯಕ್ತವಂತೋ ಭೂಯಾಸ್ತ । ಏವೋ ಏವಮೇವಾಸ್ಮದಸ್ಮತ್ತೋಽಂಹಃ ಪಾಪಂ ಸು ಅತ್ಯಂತಂ ವಿ ಮುಂಚತ । ವಿಮುಕ್ತಂ ಕುರುತ । ಬಹುವಚನಂ ಪೂಜಾರ್ಥಂ । ಹೇ ಅಗ್ನೇ ತ್ವಯಾ ಪ್ರತರಂ ಪ್ರವೃದ್ಧಂ ನೋಽಸ್ಮದೀಯಮಾಯುಃ ಪ್ರ ತಾರಿ । ಪ್ರವೃದ್ಧಂ ಕ್ರಿಯತಾಂ ॥

### ಪ್ರತಿಪದಾರ್ಥ

**ಯಜತ್ರಾಃ**—ಪೂಜಾರ್ಹರಾದವರೂ । **ವಸವಃ**—ನಿವಾಸದಾಯಕರೂ ಆದ ಅಗ್ನಿಗಳೇ । **ಯಥಾ ಹ**—ಯಾವ ರೀತಿಯಲ್ಲಿ । **ತ್ಯತ್**—ಪ್ರಸಿದ್ಧವಾದುದೂ । **ಪದಿ**—ಪಾದದಲ್ಲಿ । **ಸಿತಾಂ**—ಬದ್ಧವಾದುದೂ ಆದ । **ಗೌರ್ಯಂ ಚಿತ್**—ಗೋವನ್ನು ಸಹ । **ಅಮುಂಚತ**—ಮುಕ್ತವಾಗುವಂತೆ ಮಾಡಿದಿರೋ । **ಏವೋ**—ಅದೇ ರೀತಿಯಲ್ಲಿ । **ಅಸ್ಮತ್**—ನಮ್ಮಿಂದ । **ಅಂಹಃ**—ಪಾಪವನ್ನು । **ಸು**—ಪೂರ್ಣವಾಗಿ । **ವಿ ಮುಂಚತ**—ಬಿಡಿಸಿ ನಾಶಮಾಡಿ । **ಅಗ್ನೇ**—ಎಲೈ ಅಗ್ನಿಯೇ । **ಪ್ರತರಂ**—ಅತಿಪ್ರಿಯವಾದ । **ನಃ**— ನಮ್ಮ । **ಆಯುಃ**—ಆಯುಸ್ಸು । **ಪ್ರ ತಾರಿ**—ವೃದ್ಧಿಯಾಗುವಂತೆ ಅನುಗ್ರಹಿಸು.

### ಭಾವಾರ್ಥ

ಪೂಜಾರ್ಹರೂ, ನಿವಾಸದಾಯಕರೂ ಆದ ಅಗ್ನಿಗಳೇ, ಯಾವ ರೀತಿಯಲ್ಲಿ ಪ್ರಸಿದ್ಧವಾದುದೂ, ಪಾದದಲ್ಲಿ ಬದ್ಧವಾದುದೂ ಆದ ಗೋವನ್ನೂ ಸಹ ಮುಕ್ತವಾಗುವಂತೆ ಮಾಡಿದರೋ, ಅದೇ ರೀತಿಯಲ್ಲಿ ನಮ್ಮಿಂದಲೂ ಸಹ ಪಾಪವನ್ನು ಬಿಡಿಸಿ ಪೂರ್ಣವಾಗಿ ನಾಶಮಾಡಿರಿ. ನಿಮ್ಮ ಅನುಗ್ರಹದಿಂದ ನಮ್ಮ ಪ್ರಿಯವಾದ ಆಯುಸ್ಸು ವೃದ್ಧಿಯನ್ನು ಹೊಂದಲಿ

### English Translation

Adorable Vasus, in like manner as you have liberated the cow bound by the foot, so set us free entirely from sin; and may our existence, be prolonged.

———

## ಹದಿಮೂರನೆಯ ಸೂಕ್ತವು

———

### ಸಾಯಣಭಾಷ್ಯಂ

ಪ್ರತ್ಯಗ್ನಿರಿತಿ ಪಂಚರ್ಚಂ ತೃತೀಯಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ ತತ್ರ ನ್ಮಂತ್ರವರ್ಣಾಭಿಧೇಯೋಷಃಪ್ರಭೃತಿದೈವತಂ ವಾ । ತಥಾ ಚಾನುಕ್ರಾಂತಂ । ಪ್ರತ್ಯಗ್ನಿಃ ಪಂಚ ಲಿಂಗೋಕ್ತದೈವತಂ ತ್ವೇಕ ಇತಿ ॥ ಲೈಂಗಿಕೋ ವಿನಿಯೋಗಃ ॥

CC-0. Jangamwadi Math Collection. Digitized by eGangotri

ಅನುವಾದವು—ಪ್ರತ್ಯಗ್ನಿಃ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ತ್ರಿಷ್ಟುಪ್ ಛಂದಸ್ಸು. ಈ ಸೂಕ್ತದಲ್ಲಿ ಆಯಾ ಋಕ್ಕುಗಳಲ್ಲಿ ಸ್ತುತಿಸಲಾಗಿರುವ ಅಗ್ನಿಯ ಜೊತೆಗೆ ಸವಿತೃ ದೇವತೆಯೇ ಮೊದಲಾದವರೂ ಆಯಾ ಋಕ್ಕುಗಳಿಗೆ ದೇವತೆಗಳು. ಅನುಕ್ರಮಣಿಕೆಯಲ್ಲಿ—ಪ್ರತ್ಯಗ್ನಿಃ ಪಂಚ ಲಿಂಗೋಕ್ತ-ದೈವತಂ ತ್ವೇಕೇ ಎಂದು ಹೇಳಿರುವುದು. ವಿನಿಯೋಗವು ಲೈಂಗಿಕವು.



## ಸೂಕ್ತ—೧೩

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೩ ॥
ಅಷ್ಟಕ—೩॥ ಅಧ್ಯಾಯ—೫ ॥ ವರ್ಗ—೧೩ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೫ ॥
ಋಷಿಃ—ವಾಮದೇವಃ ॥
ದೇವತಾ—ಅಗ್ನಿಃ ॥
ಛಂದಃ—ತ್ರಿಷ್ಟುಪ್ ।

---

ಸಂಹಿತಾಪಾಠಃ

ಪ್ರತ್ಯಗ್ನಿರುಷಸಾಮಗ್ರಮಖ್ಯದ್ವಿಭಾತೀನಾಂ ಸುಮನಾ ರತ್ನಧೇಯಂ ।
ಯಾತಮಶ್ವಿನಾ ಸುಕೃತೋ ದುರೋಣಮುತ್ಸೂರ್ಯೋ ಜ್ಯೋತಿಷಾ ದೇವ ಏತಿ ॥ ೧ ॥

ಪದಪಾಠಃ

ಪ್ರತಿ । ಅಗ್ನಿಃ । ಉಷಸಾಂ । ಅಗ್ರಂ । ಅಖ್ಯತ್ । ವಿಽಭಾತೀನಾಂ । ಸುಽಮನಾಃ । ರತ್ನಽಧೇಯಂ ।
ಯಾತಂ । ಅಶ್ವಿನಾ । ಸುಽಕೃತಃ । ದುರೋಣಂ । ಉತ್ । ಸೂರ್ಯಃ । ಜ್ಯೋತಿಷಾ । ದೇವಃ । ಏತಿ ॥

ಸಾಯಣಭಾಷ್ಯಂ

ಸುಮನಾಃ ಶೋಭನಮನಸ್ಕೋಽಗ್ನಿರ್ವಿಭಾತೀನಾಂ ವ್ಯುಚ್ಛಂತೀನಾಮುಷಸಾಮುಷೋದೇವ-ತಾನಾಂ ರತ್ನಧೇಯಂ ರತ್ನಧಾನಂ । ಧನಪ್ರಕಾಶಕಮಿತ್ಯರ್ಥಃ । ಅಗ್ರಂ ಪ್ರತಿ ಪೂರ್ವಕಾಲಂ ಲಕ್ಷೀಕೃ-

CC-0. Jangamwadi Math Collection. Digitized by eGangotri

ತ್ಯಾಖ್ಯತ್। ಪ್ರವೃದ್ಧೋ ಭವತಿ। ಹೇ ಅಶ್ವಿನಾಶ್ವಿನೌ ಯುವಾಂ ಸುಕೃತೋ ಯಜಮಾನಸ್ಯ ದುರೋಣಂ ಗೃಹಂ। ದುರೋಣ ಇತಿ ಗೃಹನಾಮ ದುರೋಣೇ ದುರ್ಯಾ ಇತಿ ಗೃಹನಾಮಸು ಪಾಠಾತ್। ಯಾತಂ। ಗಚ್ಛತಂ। ಸೂರ್ಯ ಋತ್ವಿಗಾದೀನಾಂ ಪ್ರೇರಕೋ ದೇವೋ ಜ್ಯೋತಿಷಾ ಸ್ವೇನ ತೇಜಸೋದೇತಿ। ಉಷಃಕಾಲೇ ಪ್ರಾದುರ್ಭವತೀತ್ಯರ್ಥಃ॥

ಪ್ರತಿಪದಾರ್ಥ

ಸುಮನಾಃ—ಶ್ರೇಷ್ಠಮನಸ್ಕನಾದ। ಅಗ್ನಿಃ—ಅಗ್ನಿಯು। ವಿಭಾತೀನಾಂ—ವಿಸ್ತೃತವಾಗಿ ಪ್ರಕಾಶಿಸುವ ಉಷಸಾಂ—ಉಷೋದೇವತೆಗಳ। ರತ್ನಧೇಯಂ—ಧನಪ್ರಕಾಶಕವಾದುದೂ। ಅಗ್ರಂ ಪ್ರತಿ—ಪ್ರಭಾಯುತವಾದುದೂ ಆದ ಅಗ್ರಭಾಗವನ್ನು ಲಕ್ಷಿಸಿ। ಅಖ್ಯತ್—ಪ್ರವೃದ್ಧನಾಗಿ ಬೆಳಗಿದ್ದಾನೆ। ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ। ಸುಕೃತಃ—ಸತ್ಕರ್ಮಕಾರಿಯಾದ ಯಜಮಾನನ। ದುರೋಣಂ—ಗೃಹವನ್ನು। ಯಾತಂ—ಬಂದು ಸೇರಿರಿ। ದೇವಃ—ದೇವತಾತ್ಮನೂ। ಸೂರ್ಯಃ—ಋತ್ವಿಗಾದಿಗಳ ಪ್ರೇರಕನೂ ಆದ ಸೂರ್ಯನು। ಜ್ಯೋತಿಷಾ—ತನ್ನ ಕಾಂತಿಯಿಂದ। ಉದೇತಿ—ಪ್ರಾದುರ್ಭೂತನಾಗಿದ್ದಾನೆ.

ಭಾವಾರ್ಥ

ಶ್ರೇಷ್ಠಮನಸ್ಕನಾದ ಅಗ್ನಿಯು ವಿಸ್ತೃತವಾಗಿ ಕಾಂತಿಯನ್ನು ಬೀರುವ ಉಷೋದೇವತೆಗಳ ಧನಪ್ರಕಾಶಕವಾದುದೂ, ಪ್ರಭಾಯುತವಾದುದೂ ಆದ ಅಗ್ರಭಾಗವನ್ನು ಲಕ್ಷಿಸಿ ಪ್ರವೃದ್ಧನಾಗಿ ಬೆಳಗಿದ್ದಾನೆ. ಎಲೈ ಅಶ್ವಿನೀ ದೇವತೆಗಳೇ, ಸತ್ಕರ್ಮಕಾರಿಯಾದ ಯಜಮಾನನ ಗೃಹವನ್ನು ಬಂದು ಸೇರಿರಿ. ಋತ್ವಿಗಾದಿಗಳ ಪ್ರೇರಕನೂ, ದೇವತಾತ್ಮನೂ ಆದ ಸೂರ್ಯನು ತನ್ನ ಕಾಂತಿಯಿಂದ ಪ್ರಾದುರ್ಭೂತನಾಗಿದ್ದಾನೆ.

English Translation

Favourably-minded, Agni has manifested (his might) in regard to the wealth-bestowing procession of the resplendent dawns: proceed, Ashwins, to the dwelling of the pious (worshipper): the divine sun rises with splendour.

---

ಸಂಹಿತಾಪಾಠಃ

ಊರ್ಧ್ವಂ ಭಾನುಂ ಸವಿತಾ ದೇವೋ ಅಶ್ರೇದ್ದ್ರಪ್ಸಂ ದವಿಧ್ವದ್ಗವಿಷೋ ನ ಸತ್ವಾ।

ಅನು ವ್ರತಂ ವರುಣೋ ಯಂತಿ ಮಿತ್ರೋ ಯತ್ಸೂರ್ಯಂ ದಿವ್ಯಾರೋಹ-ಯಂತಿ ॥ ೨ ॥

CC-0. Jangamwadi Math Collection. Digitized by eGangotri

ಪದಪಾಠಃ

ಊರ್ಧ್ವಂ । ಭಾನುಂ । ಸವಿತಾ । ದೇವಃ । ಅಶ್ರೇತ್ । ದ್ರಪ್ಸಂ । ದವಿಧ್ವತ್ । ಗೋಃಇಷಃ । ನ । ಸತ್ವಾ ।

ಅನು । ವ್ರತಂ । ವರುಣಃ । ಯಂತಿ । ಮಿತ್ರಃ । ಯತ್ । ಸೂರ್ಯಂ । ದಿವಿ । ಆऽರೋಹಯಂತಿ ॥೨॥

ಸಾಯಣಭಾಷ್ಯಂ

ಸವಿತಾ ಪ್ರೇರಕೋ ದೇವ ಊರ್ಧ್ವಮುನ್ಮುಖಂ ಭಾನುಮಶ್ರೇತ್ । ಆಶ್ರಯತಿ । ಯದ್ಯದಾ ರಶ್ಮಯಃ ಸೂರ್ಯಂ ದಿವಿ ದ್ಯುಲೋಕ ಆರೋಹಯಂತಿ । ಆರೋಹಣಂ ಕಾರಯಂತಿ । ತದಾ ವರುಣೋ ರಾತ್ರ್ಯಭಿಮಾನೀ ದೇವೋ ಮಿತ್ರೋಽಹರಭಿಮಾನ್ಯನ್ಯೇ ದೇವಾಶ್ಚ ವ್ರತಂ ತತ್ಸಂಬಂಧಿ ಕರ್ಮಾನು ಯಂತಿ । ಅನುಗಚ್ಛಂತಿ । ಅನುಗಮನೇ ದೃಷ್ಟಾಂತ ಉಚ್ಯತೇ । ದ್ರಪ್ಸಂ ಪಾರ್ಥಿವಂ ರಜೋ ದವಿಧ್ವದ್ಧ್ವನ್ವನ್ । ವಿಕಿರನ್ನಿತ್ಯರ್ಥಃ । ಗವಿಷೋ ಗಾ ಇಚ್ಛನ್ ಸತ್ವಾ ನ ವೃಷಭ ಇವ ತದ್ವತ್ ॥

ಪ್ರತಿಪದಾರ್ಥ

ದೇವಃ—ದೇವತಾತ್ಮನಾದ । ಸವಿತಾ—ಸವಿತೃವು । ಊರ್ಧ್ವಂ—ಉನ್ಮುಖನಾಗಿ । ಭಾನುಂ—ಭಾನುವನ್ನು (ಸ್ವತೇಜಸ್ಸನ್ನು) । ಅಶ್ರೇತ್—ಆಶ್ರಯಿಸುತ್ತಾನೆ. (ಪಡೆಯುತ್ತಾನೆ) । ಯತ್—ಯಾವಾಗ । ಸೂರ್ಯಂ—ಸೂರ್ಯನನ್ನು । ದಿವಿ—ದ್ಯುಲೋಕದಲ್ಲಿ । ಆರೋಹಯಂತಿ—(ರಶ್ಮಿಗಳು) ಹತ್ತುವಂತೆ ಮಾಡುತ್ತವೆಯೋ (ಆಗ) । ವರುಣಃ—ವರುಣನೂ । ಮಿತ್ರಃ—ಮಿತ್ರನೂ ಸಹ (ಇತರ ದೇವತೆಗಳೂ) । ದ್ರಪ್ಸಂ—ಪಾರ್ಥಿವವಾದ ಧೂಳನ್ನು । ದಧಿಧ್ವತ್—ಕೆದಕಿ ಸುತ್ತಲೂ ಹರಡುವುದೂ । ಗವಿಷಃ—ಗೋವನ್ನು ಸೇರಲು ಇಚ್ಛಿಸುವುದೂ ಆದ । ಸತ್ವಾ ನ—ವೃಷಭದಂತೆ ( ಆತುರರಾಗಿ ) । ವ್ರತಂ—ತಮ್ಮ ತಮ್ಮ ಕರ್ಮಗಳನ್ನು । ಅನು ಯಂತಿ—ಅನುಸರಿಸಿ ಪಾಲಿಸುತ್ತಾರೆ.

ಭಾವಾರ್ಥ

ದೇವತಾತ್ಮನಾದ ಸವಿತೃವು ಉನ್ಮುಖನಾಗಿ ಉದಯಿಸುತ್ತಾ ಸ್ವತೇಜಸ್ಸನ್ನು ಪಡೆಯುತ್ತಾನೆ. ರಶ್ಮಿಗಳು ಯಾವಾಗ ಸೂರ್ಯನನ್ನು ದ್ಯುಲೋಕದಲ್ಲಿ ಹತ್ತುವಂತೆ ಮಾಡುವುವೋ, ಎಂದರೆ, ಯಾವಾಗ ಸೂರ್ಯನು ರಶ್ಮಿಯುಕ್ತನಾಗಿ ದ್ಯುಲೋಕದ ಆರೋಹಣವನ್ನು ಮಾಡುತ್ತಾನೆಯೋ, ಆಗ ವರುಣನೂ, ಮಿತ್ರನೂ, ಇತರ ದೇವತೆಗಳೂ ಸಹ, ಗೋವನ್ನು ಅರಸುತ್ತಾ ಇರುವ ವೃಷಭವು ನೆಲದಮೇಲಿರುವ ಧೂಳನ್ನು ಕೆದಕಿ ಸುತ್ತಲೂ ಹರಡುತ್ತಾ ಗೋವನ್ನೇ ಅನುಸರಿಸುವಂತೆ ಆತುರರಾಗಿ, ತಮ್ಮ ಕರ್ಮ ಕರ್ತವ್ಯವನ್ನು ಅನುಸರಿಸಿ ಪಾಲಿಸುತ್ತಾರೆ.

## English Translation

The divine Savitri diffuses his light on high, dispersing the dew, and like a vigorous (bull) ardent for the cow : then Varuna, and Mitra, and other (divinities), hasten to (fulfil) their offices when they elevate the sun in the sky.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯಂ ಸೀಮಕೃಣ್ವನ್ತಮಸೇ ವಿಪೃಚೇ ಧ್ರುವಕ್ಷೇಮಾ ಅನವಸ್ಯಂತೋ ಅರ್ಥಂ ।

ತಂ ಸೂರ್ಯಂ ಹರಿತಃ ಸಪ್ತ ಯಹ್ವೀಃ ಸ್ಪಶಂ ವಿಶ್ವಸ್ಯ ಜಗತೋ ವಹಂತಿ॥

ಪದಪಾಠಃ

ಯಂ । ಸೀಂ । ಅಕೃಣ್ವನ್ । ತಮಸೇ । ವಿऽಪೃಚೇ । ಧ್ರುವऽಕ್ಷೇಮಾಃ । ಅನವऽಸ್ಯಂತಃ । ಅರ್ಥಂ ।

ತಂ । ಸೂರ್ಯಂ । ಹರಿತಃ । ಸಪ್ತ । ಯಹ್ವೀಃ । ಸ್ಪಶಂ । ವಿಶ್ವಸ್ಯ । ಜಗತಃ । ವಹಂತಿ ॥ ೩ ॥

ಸಾಯಣಭಾಷ್ಯಂ

ಧ್ರುವಕ್ಷೇಮಾಃ ಸ್ಥಿರನಿವಾಸಾಃ ಸೃಷ್ಟಿಕರ್ತಾರೋ ದೇವಾಃ ಸೀಂ ಸರ್ವತಸ್ತಮಸೇ ತಮಸೋ ವಿಪೃಚೇ ಪೃಥಕ್ಕರಣಾಯಾರ್ಥಂ ಜಗಲ್ಲಕ್ಷಣಂ ಕಾರ್ಯಮನವಸ್ಯಂತೋಽವಿಮುಂಚಂತಃ ಕುರ್ವಂತ ಏವ ಯಂ ಸೂರ್ಯಮಕೃಣ್ವನ್ । ಅಸೃಜನ್ನಿತ್ಯರ್ಥಃ । ಯಹ್ವೀರ್ಮಹತ್ಯಃ ಸಪ್ತ ಸಪ್ತಸಂಖ್ಯಾಕಾ ಹರಿತೋಽಶ್ವಾ ವಿಶ್ವಸ್ಯ ಸಮಸ್ತಸ್ಯ ಜಗತಃ ಪ್ರಾಣಿಸಮೂಹಸ್ಯ ಸ್ಪಶಂ ಪ್ರೇರಕತ್ವೇನ ಜ್ಞಾತಾರಂ ತಂ ಸೂರ್ಯಂ ವಹಂತಿ । ಧಾರಯಂತಿ ॥

ಪ್ರತಿಪದಾರ್ಥ

ಧ್ರುವಕ್ಷೇಮಾಃ—ಸ್ಥಿರವಾದ ನಿವಾಸವುಳ್ಳ ದೇವತೆಗಳು । ಸೀಂ—ಸುತ್ತಲೂ । ತಮಸೇ—ಅಂಧಕಾರದ । ವಿಪೃಚೇ—ಪ್ರತ್ಯೇಕತೆಗಾಗಿ । ಅರ್ಥಂ—ಜಗದ್ರೂಪವಾದ ಕಾರ್ಯವನ್ನು । ಅನವಸ್ಯಂತಃ—ನಿರಂತರವಾಗಿ ಮಾಡುತ್ತಾ । ಯಂ—ಯಾವ ಸೂರ್ಯನನ್ನು । ಅಕೃಣ್ವನ್—ಸೃಷ್ಟಿಸಿದರೋ । ತಂ—ಅಂತಹವನೂ । ವಿಶ್ವಸ್ಯ—ಸಮಸ್ತವಾದ । ಜಗತಃ—ಪ್ರಾಣಿಸಮೂಹಕ್ಕೆಲ್ಲಾ । ಸ್ಪಶಂ—ಪ್ರೇರಕನೆಂದು ತಿಳಿದಿರುವವನೂ ಆದ । ಸೂರ್ಯಂ—ಸೂರ್ಯನನ್ನು । ಯಹ್ವೀಃ—ಮಹತ್ತ್ವವುಳ್ಳವೂ । ಸಪ್ತ—ಸಪ್ತಸಂಖ್ಯಾಕವಾದವೂ ಆದ । ಹರಿತಃ—ಅಶ್ವಗಳು । ವಹಂತಿ—ಧರಿಸುತ್ತವೆ.

ಭಾವಾರ್ಥ

ಸ್ಥಿರವಾದ ನಿವಾಸವುಳ್ಳ ದೇವತೆಗಳು, ಅಂಧಕಾರವನ್ನು ನಾಶಪಡಿಸಲು ಜಗದ್ರೂಪವಾದ ಕಾರ್ಯವನ್ನು ನಿರಂತರವಾಗಿ ಮಾಡುತ್ತಾ ಯಾವ ಸೂರ್ಯನನ್ನು ಸೃಷ್ಟಿಸಿದರೋ, ಅಂತಹವನೂ, ಸಮಸ್ತವಾದ ಪ್ರಾಣಿಸಮೂಹಕ್ಕೆಲ್ಲಾ ಪ್ರೇರಕನೆಂದು ತಿಳಿದಿರುವವನೂ ಆದ ಸೂರ್ಯನನ್ನು ಮಹತ್ತ್ವವುಳ್ಳವೂ, ಸಪ್ತಸಂಖ್ಯಾಕವೂ ಆದ ಅಶ್ವಗಳು ವಹಿಸುತ್ತವೆ.

CC-0. Jangamwadi Math Collection. Digitized by eGangotri

## English Translation

Seven great coursers convey that sun, whom the (deities), occupants of enduring mansions, and not heedless (of their offices), have formed for the driving away of darkness, (and who is) the animator of the whole world.

---

ಸಂಹಿತಾಪಾಠಃ

ವಹಿಷ್ಠೇಭಿರ್ವಿಹರನ್ಯಾಸಿ ತಂತುಮವವ್ಯಯನ್ನಸಿತಂ ದೇವ ವಸ್ಮ ।
ದವಿಧ್ವತೋ ರಶ್ಮಯಃ ಸೂರ್ಯಸ್ಯ ಚರ್ಮೇವಾವಾಧುಸ್ತಮೋ ಅಪ್ಸ್ವಂತಃ ॥ ೪ ॥

ಪದಪಾಠಃ

ವಹಿಷ್ಠೇಭಿಃ । ವಿಽಹರನ್ । ಯಾಸಿ । ತಂತುಂ । ಅವಽವ್ಯಯನ್ । ಅಸಿತಂ । ದೇವ । ವಸ್ಮ । ದವಿಧ್ವತಃ । ರಶ್ಮಯಃ । ಸೂರ್ಯಸ್ಯ । ಚರ್ಮಽಇವ । ಅವ । ಅಧುಃ । ತಮಃ । ಅಪ್ಽಸು । ಅಂತರಿತಿ ॥ ೪ ॥

ಸಾಯಣಭಾಷ್ಯಂ

ಹೇ ದೇವ ದ್ಯೋತಮಾನ ಸೂರ್ಯ ತ್ವಂ ಜಗನ್ನಿರ್ವಾಹಾತ್ಮಕಸ್ಯ ರಸಸ್ಯಾದಾನಾರ್ಥಂ ತಂತುಂ ರಶ್ಮಿಸಮೂಹಂ ವಿಹರನ್ವಿಸ್ತಾರಯನ್ ಅಸಿತಂ ಕೃಷ್ಣವರ್ಣಂ ವಸ್ಮ ನಕ್ತಂಚರಾಣಾಂ ನಿವಾಸಭೂತಾಂ ರಾತ್ರಿಮವವ್ಯಯನ್ ಅವಾಚೀನಂ ಯಥಾ ಭವತಿ ತಥಾ ಸಂವೃಣ್ವನ್ । ತಿರಸ್ಕುರ್ವನ್ನಿತ್ಯರ್ಥಃ । ವಹಿಷ್ಠೇಭಿರ್ವೋಢೃಮತ್ಯಂತಂ ಶಕ್ತೈರಶ್ವೈರ್ಯಾಸಿ । ಗಮನಮಾರ್ಗಂ ಗಚ್ಛಸಿ । ಅಸ್ಯಾಮೃಚಿ ಪೂರ್ವಾರ್ಧೇ ಸೂರ್ಯಸ್ಯಪ್ರತ್ಯಕ್ಷಮರ್ಥಂ ಪ್ರತಿಪಾದ್ಯೋತ್ತರಾರ್ಧೇ ಪರೋಕ್ಷಮರ್ಥಂ ಪ್ರತಿಪಾದಯಿತುಮಾಹ। ದವಿಧ್ವತೋ ಧುನ್ವಾನಾಃ ಸೂಯಸ್ಯ ಸಂಬಂಧಿನೋ ರಶ್ಮಯಃ ಕಿರಣಾ ಅಪ್ಸ್ವಂತರಿಕ್ಷೇ । ಆಪ ಇತ್ಯಂತರಿಕ್ಷನಾಮ ಆಕಾಶಮಾಪಃ ಪೃಥಿವೀತಿ ತನ್ನಾಮಸು ಪಾಠಾತ್ । ಅಂತರ್ಮಧ್ಯೇ ಚರ್ಮೇವ ಚರ್ಮವತ್ಸ್ಥಿತಂ ತಮೋಽಂಧಕಾರಮವಾಧುಃ । ಅವಾಚೀನಮದಧುಃ । ತಿರಸ್ಕುರ್ವಂತೀತ್ಯರ್ಥಃ ॥

ಪ್ರತಿಪದಾರ್ಥ

ದೇವ—ಪ್ರಕಾಶಮಾನನಾದ ಸೂರ್ಯನೇ । ತಂತುಂ—(ನಿನ್ನ) ರಶ್ಮಿಸಮೂಹವನ್ನು । ವಿಹರನ್—(ರಸಾದಾನಕ್ಕಾಗಿ) ವಿಸ್ತರಿಸುತ್ತಾ । ಅಸಿತಂ—ಕೃಷ್ಣವರ್ಣಾತ್ಮಕವಾದುದೂ । ವಸ್ಮ—ರಾಕ್ಷಸರ ನಿವಾಸಭೂತವೂ ಆದ

CC-0. Jangamwadi Math Collection. Digitized by eGangotri

ರಾತ್ರಿಯನ್ನು । ಅವವ್ಯಯೆನ್—ಕೊನೆಗಾಣಿಸುತ್ತಾ । ವಹಿಷ್ಠೇಭಿಃ—ವಹನಸಾಮರ್ಥ್ಯವುಳ್ಳ. ಅಶ್ವಗಳೊಡನೆ । ಯಾಸಿ—ಸಂಚರಿಸುತ್ತೀಯೆ । ಸೂರ್ಯಸ್ಯ—ಸೂರ್ಯನ । ದವಿಧ್ವತಃ—ಕಂಪಿಸತಕ್ಕ । ರಶ್ಮಯಃ—ಕಿರಣಗಳು । ಅಪ್ಸು—ಅಂತರಿಕ್ಷದ । ಅಂತಃ—ಮಧ್ಯಪ್ರದೇಶದಲ್ಲಿ । ಚರ್ಮೇವ—ಚರ್ಮದಂತೆ ಹರಡಿರುವ । ತಮಃ—ಅಂಧಕಾರವನ್ನು । ಅವಾಧುಃ—ನಾಶಪಡಿಸುತ್ತವೆ

ಭಾವಾರ್ಥ

ಪ್ರಕಾಶಮಾನನಾದ ಎಲೈ ಸೂರ್ಯನೇ, ನಿನ್ನ ರಶ್ಮಿಸಮೂಹವನ್ನು ರಸಾಕರ್ಷಣಕ್ಕಾಗಿ ವಿಸ್ತರಿಸುತ್ತಾ, ಕೃಷ್ಣವರ್ಣಾತ್ಮಕವಾದುದೂ, ರಾಕ್ಷಸರ ನಿವಾಸಭೂತವಾದುದೂ ಆದ ರಾತ್ರಿಯನ್ನು ಕೊನೆಗಾಣಿಸುತ್ತಾ ವಹನ ಸಾಮರ್ಥ್ಯವುಳ್ಳ ಅಶ್ವಗಳೊಡನೆ ಸಂಚರಿಸುತ್ತೀಯೆ. ಸೂರ್ಯನ ಕಂಪನಾತ್ಮಕವಾದ ಕಿರಣಗಳು ಅಂತರಿಕ್ಷದ ಮಧ್ಯ ಪ್ರದೇಶದಲ್ಲಿ ಚರ್ಮದಂತೆ ಹರಡಿರುವ ಅಂಧಕಾರವನ್ನು ನಾಶಪಡಿಸುತ್ತವೆ.

English Translation

Divine (sun), you proceed with most powerful (horses), spreading your web (of rays), and cutting down the black abode (of night); the tremulous rays of the sun throw off the darkness which is spread like a skin over the firmament.

———

ಸಂಹಿತಾಪಾಠಃ

ಅನಾಯತೋ ಅನಿಬದ್ಧಃ ಕಥಾಯಂ ನ್ಯಙ್ಙುತ್ತಾನೋಽವ ಪದ್ಯತೇ ನ ।
ಕಯಾ ಯಾತಿ ಸ್ವಧಯಾ ಕೋ ದದರ್ಶ ದಿವಃ ಸ್ಕಂಭಃ ಸಮೃತಃ ಪಾತಿ
ನಾಕಂ ॥ ೫ ॥

ಪದಪಾಠಃ

ಅನಾಯತಃ । ಅನಿಃಬದ್ಧಃ । ಕಥಾ । ಅಯಂ । ನ್ಯಙ್ । ಉತ್ತಾನಃ । ಅವ । ಪದ್ಯತೇ । ನ ।
ಕಯಾ । ಯಾತಿ । ಸ್ವಧಯಾ । ಕಃ । ದದರ್ಶ । ದಿವಃ । ಸ್ಕಂಭಃ । ಸಂಋತಃ । ಪಾತಿ । ನಾಕಂ ॥ ೫ ॥

ಸಾಯಣಭಾಷ್ಯಂ

ಆಯತಶಬ್ದೋ ದೂರವಾಚೀ । ತದ್ವಿಪರಿತೋಽನಾಯತ ಆಸೀನಃ ಸನ್ನಯಂ ಪ್ರತ್ಯಕ್ಷೇಣೋಪಲಭ್ಯಮಾನೋ ಮಂಡಲಾಭಿಮಾನೀ ಸೂರ್ಯೋಽನಿಬದ್ಧಃ । ಕೇನಾಪಿ ಬದ್ಧೋ ನ ಕ್ರಿಯತೇ । ಅಪಿ

CC-0. Jangamwadi Math Collection. Digitized by eGangotri

ಚಾಯಂ ಸೂರ್ಯೋ ನ್ಯಙ್ಙರ್ವಾಙ್ಮುಖಃ ಸನ್ ಕೇನಚಿತ್ಕಥಾ ಕಥಂ ನಾವ ಪದ್ಯತೇ । ನ ಹಿಂಸ್ಯತೇ । ಕಿಂಚಾಯಮುತ್ತಾನ ಊರ್ಧ್ವಮುಖತ್ವೇನ ತಿಷ್ಠನ್ ಕಯಾ ಸ್ವಧಯಾ ಕೇನ ಬಲೇನ ಯಾತಿ । ಗಚ್ಛತಿ । ಸ್ವಧಾಶಬ್ದೋಽನ್ನವಾಚ್ಯತ್ರ ತತ್ಕಾರ್ಯಂ ಬಲಂ ಲಕ್ಷಯತಿ । ಅಪಿ ಚ ದಿವೋ ದ್ಯುಲೋಕಸ್ಯ ಸ್ಕಂಭಃ ಸ್ತಂಭಃ ಸನ್ಯುತೋ ನಾಕೇನ ಸಮವೇತಃ ಸೂರ್ಯೋ ನಾಕಂ ಸ್ವರ್ಗಂ ಪಾತಿ । ಪಾಲಯತಿ । ಕೋ ದದರ್ಶ । ತತ್ತ್ವತಃ ಕಃ ಪಶ್ಯತಿ । ನ ಕೋಽಪಿ ಜಾನಾತೀತ್ಯರ್ಥಃ ॥

ಪ್ರತಿಪದಾರ್ಥ

**ಅನಾಯತಃ**—ಸಮೀಪಸಂಚಾರಿಯಾದವನೂ । **ಅಯಂ**—ಮಂಡಲಾಕಾರನೂ ಆದ ಸೂರ್ಯನು । **ಅನಿಬದ್ಧಃ**—ಯಾರಿಂದಲೂ ತಡೆಯಲ್ಪಡದಿರುವ ಗತಿಯುಳ್ಳವನಾಗಿರುತ್ತಾನೆ । **ನ್ಯಙ್ಙ**—ಅವಾಙ್ಮುಖನಾಗಿ ಸಂಚರಿಸುತ್ತಿದ್ದರೂ ಸಹ । **ಕಥಾ**—ಹೇಗೆ ತಾನೇ । **ನ ಅವ ಪದ್ಯತೇ**—ಯಾರಿಂದಲೂ ಹಿಂಸಿತನಾಗುವುದಿಲ್ಲ । **ಉತ್ತಾನಃ**—ಊರ್ಧ್ವಮುಖನಾಗಿದ್ದುಕೊಂಡು । **ಕಯಾ ಸ್ವಧಯಾ**—ಯಾವ ಬಲದೊಡನೆ । **ಯಾತಿ**—ಸಂಚರಿಸುತ್ತಾನೆ । **ದಿವಃ**—ದ್ಯುಲೋಕದ । **ಸ್ಕಂಭಃ**—ಸ್ತಂಭಪ್ರಾಯನೂ । **ಸನ್ಯುತಃ**—ಅಂತರಿಕ್ಷಸ್ಥನೂ ಆದ ಸೂರ್ಯನು । **ನಾಕಂ**—ಸ್ವರ್ಗವನ್ನು । **ಪಾತಿ**—ರಕ್ಷಿಸುತ್ತಾನೆ ಎಂಬ ವಿಷಯವನ್ನು । **ಕೋ ದದರ್ಶ**—ತತ್ತ್ವತಃ ಯಾವನು ತಾನೇ ನೋಡಿರಬಲ್ಲನು.

ಭಾವಾರ್ಥ

ಸಮೀಪಸಂಚಾರಿಯಾದವನೂ, ಮಂಡಲಾಕಾರನೂ ಆದ ಸೂರ್ಯನು ಯಾರಿಂದಲೂ ತಡೆಯಲ್ಪಡದಿರುವ ಗತಿಯುಳ್ಳವನಾಗಿರುತ್ತಾನೆ. ಅವಾಙ್ಮುಖನಾಗಿ ಸಂಚರಿಸುತ್ತಿದ್ದರೂ ಸಹ ಅವನು ಹೇಗೆತಾನೇ, ಯಾರಿಂದಲೂ ಹಿಂಸಿತನಾಗುವುದಿಲ್ಲ ? ಊರ್ಧ್ವಮುಖನಾಗಿದ್ದುಕೊಂಡು ಯಾವ ಬಲದೊಡನೆ ಅವನು ಸಂಚರಿಸುತ್ತಾನೆ ? ದ್ಯುಲೋಕದ ಸ್ತಂಭಪ್ರಾಯನೂ, ಅಂತರಿಕ್ಷಸ್ಥನೂ ಆದ ಸೂರ್ಯನು ಸ್ವರ್ಗವನ್ನು ರಕ್ಷಿಸುತ್ತಾನೆ. ಇಂತಹ ಮಹತ್ಕಾರ್ಯಗಳುಳ್ಳ ಸೂರ್ಯನನ್ನು ತತ್ತ್ವತಃ ಯಾವನು ತಾನೇ ಅರಿಯಬಲ್ಲನು ?

## English Translation

This sun, not far removed, and unobstructed, whether (looking) downwards or looking upwards, is harmed by no one: what is the power by which he travels ? who has (truly) beheld him who, as the collective pillar of heaven, sustains the sky ?

———

CC-0. Jangamwadi Math Collection. Digitized by eGangotri

## ಹದಿನಾಲ್ಕನೆಯ ಸೂಕ್ತವು



ಪ್ರತ್ಯಗ್ನಿರುಷಸ ಇತಿ ಪಂಚರ್ಚಂ ಚತುರ್ಥಂ ಸೂಕ್ತಂ ವಾಮದೇವಸ್ಯಾರ್ಷಂ ತ್ರೈಷ್ಟುಭಮಾಗ್ನೇಯಂ ಮಾಂತ್ರವರ್ಣಿಕದೈವತಂ ವಾ । ತಥಾ ಚಾನುಕ್ರಾಂತಂ । ಪ್ರತ್ಯಗ್ನಿರಿತಿ । ಲಿಂಗೋಕ್ತದೈವತಂ ತ್ವಿತಿ ತುಶಬ್ದಾದಸ್ಯಾಪಿ ಸೂಕ್ತಸ್ಯ ಲಿಂಗೋಕ್ತದೈವತತ್ವಂ ॥ ವಿನಿಯೋಗೋ ಲೈಂಗಿಕಃ ॥

ಅನುವಾದವು—ಪ್ರತ್ಯಗ್ನಿರುಷಸಃ ಎಂಬ ಈ ಸೂಕ್ತವು ಎಡನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಅಗ್ನಿಯು ದೇವತೆಯು ; ಅಥವಾ ಮಂತ್ರಗಳಲ್ಲಿ ಹೇಳಿರುವ ಇತರರೂ ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಪ್ರತ್ಯಗ್ನಿಃ ಎಂದು ಮೊದಲಾಗಿ ಹೇಳಿರುವುದು. ಲಿಂಗೋಕ್ತದೈವತಂ ತು ಎಂದು ಹೇಳಿರುವಾಗ ತು ಶಬ್ದ ಪ್ರಯೋಗವಿರುವುದರಿಂದ ಈ ಸೂಕ್ತಕ್ಕೆ ಆಯಾ ಮಂತ್ರಗಳಲ್ಲಿ ಸ್ತುತರಾಗಿರುವವರೇ ದೇವತೆಗಳು. ವಿನಿಯೋಗವು ಲೈಂಗಿಕವು.

---

### ಸೂಕ್ತ—೧೪

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೪

ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೧೪ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೫

ಋಷಿಃ—ವಾಮದೇವಃ ॥

ದೇವತಾ—ಅಗ್ನಿರ್ಲಿಂಗೋಕ್ತದೇವತಾ ವಾ ॥

ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

**ಪ್ರತ್ಯಗ್ನಿರುಷಸೋ ಜಾತವೇದಾ ಅಖ್ಯದ್ದೇವೋ ರೋಚಮಾನಾ ಮಹೋಭಿಃ।**

**ಆ ನಾಸತ್ಯೋರುಗಾಯಾ ರಥೇನೇಮಂ ಯಜ್ಞಮುಪ ನೋ ಯಾತಮಚ್ಛ॥**

ಪದಪಾಠಃ

ಪ್ರತಿ । ಅಗ್ನಿಃ । ಉಷಸಃ । ಜಾತಽವೇದಾಃ । ಅಖ್ಯತ್ । ದೇವಃ । ರೋಚಮಾನಾಃ । ಮಹಃಽಭಿಃ ।

ಆ । ನಾಸತ್ಯಾ । ಉರುಽಗಾಯಾ । ರಥೇನ । ಇಮಂ । ಯಜ್ಞಂ । ಉಪ । ನಃ । ಯಾತಂ । ಅಚ್ಛ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ದೇವೋ ದ್ಯೋತಮಾನೋ ಜಾತವೇದಾ ಜಾತಧನೋಽಗ್ನಿರ್ಮಹೋಭಿಸ್ತೇಜೋಭೀ ರೋಚಮಾನಾ ದೀಪ್ಯಮಾನಾ ಉಷಸಃ ಪ್ರತ್ಯುಷಸೋ ಲಕ್ಷೀಕೃತ್ಯಾಖ್ಯತ್ । ಪ್ರವೃದ್ಧೋ ಭವತಿ । ಉರುಗಾಯಾ ಪ್ರಭೂತಗಮನಾ ಹೇ ನಾಸತ್ಯಾಶ್ವಿನಾ ರಥೇನ ನೋಽಸ್ಮದೀಯಮಿಮಂ ಯಜ್ಞಮಚ್ಛಾಭಿಮುಖಮುಪ ಯಾತಂ । ಉಪಗಚ್ಛತಂ ॥

ಪ್ರತಿಪದಾರ್ಥ

ದೇವಃ—ಪ್ರಕಾಶಮಾನನೂ । ಜಾತವೇದಾಃ—ಜಾತಪ್ರಜ್ಞನೂ ಆದ । ಅಗ್ನಿಃ—ಅಗ್ನಿಯು । ಮಹೋಭಿಃ—ತೇಜಸ್ಸುಗಳೊಡನೆ । ರೋಚಮಾನಾಃ—ಪ್ರಕಾಶಿಸುತ್ತಿರುವ । ಉಷಸಃ ಪ್ರತಿ—ಉಷಸ್ಸುಗಳನ್ನುದ್ದೇಶಿಸಿ । ಅಖ್ಯತ್—ಪ್ರವೃದ್ಧನಾಗುತ್ತಾನೆ । ಉರುಗಾಯಾ—ಪ್ರಭೂತವಾಗಿ ಸ್ತುತರಾಗತಕ್ಕ । ನಾಸತ್ಯಾ—ಎಲೈಅಶ್ವಿನೀದೇವತೆಗಳೇ । ರಥೇನ—ರಥದೊಡನೆ । ನಃ—ನಮ್ಮ । ಇಮಂ ಯಜ್ಞಂ—ಈ ಯಜ್ಞದ । ಅಚ್ಛ—ಅಭಿಮುಖವಾಗಿ । ಉಪ ಆ ಯಾತಂ—ದಯವಿಟ್ಟು ಬನ್ನಿರಿ.

ಭಾವಾರ್ಥ

ಪ್ರಕಾಶಮಾನನೂ, ಜಾತಪ್ರಜ್ಞನೂ, ಜಾತಧನನೂ ಆದ ಅಗ್ನಿಯು ತೇಜೋಯುತವಾಗಿ ಪ್ರಕಾಶಿಸುವ ಉಷಸ್ಸುಗಳಿಗಾಗಿ ಪ್ರವೃದ್ಧನಾಗುತ್ತಾನೆ. ಪ್ರಭೂತವಾಗಿ ಸ್ತುತರಾಗತಕ್ಕ ಎಲೈ ಅಶ್ವಿನೀದೇವತೆಗಳೇ, ರಥದೊಡನೆ ನಮ್ಮ ಈ ಯಜ್ಞಕ್ಕಭಿಮುಖರಾಗಿ ಬನ್ನಿರಿ.

English Translation

The resplendent Agni, by whom all is known, has manifested (his might) in regard to the dawns radiant with lustre : far-going Nasatyas, come with your car to this our sacrifice.

---

ಸಂಹಿತಾಪಾಠಃ

ಊರ್ಧ್ವಂ ಕೇತುಂ ಸವಿತಾ ದೇವೋ ಅಶ್ರೇಜ್ಜ್ಯೋತಿರ್ವಿಶ್ವಸ್ಮೈ ಭುವನಾಯ ಕೃಣ್ವನ್ ।

ಆಪ್ರಾ ದ್ಯಾವಾಪೃಥಿವೀ ಅಂತರಿಕ್ಷಂ ವಿ ಸೂರ್ಯೋ ರಶ್ಮಿಭಿಶ್ಚೇಕಿತಾನಃ ॥

ಪದಪಾಠಃ

ಊರ್ಧ್ವಂ । ಕೇತುಂ । ಸವಿತಾ । ದೇವಃ । ಅಶ್ರೇತ್ । ಜ್ಯೋತಿಃ । ವಿಶ್ವಸ್ಮೈ । ಭುವನಾಯ । ಕೃಣ್ವನ್ ।

ಆ । ಅಪ್ರಾಃ । ದ್ಯಾವಾಪೃಥಿವೀ ಇತಿ । ಅಂತರಿಕ್ಷಂ । ವಿ । ಸೂರ್ಯಃ । ರಶ್ಮಿಽಭಿಃ । ಚೇಕಿತಾನಃ ॥ ೨ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ವಿಶ್ವಸ್ಮೈ ಸರ್ವಸ್ಮೈ ಭುವನಾಯ ಲೋಕಾಯ ಜ್ಯೋತಿಸ್ತೇಜಃ ಕೃಣ್ವನ್ ಕುರ್ವನ್ ಸವಿತಾ ಪ್ರೇರಕೋ ದೇವ ಊರ್ಧ್ವಮುನ್ಮುಖಂ ಕೇತುಂ ಪ್ರಕಾಶಕಂ ಭಾನುಮಶ್ರೇತ್ । ಆಶ್ರಯತಿ । ವಿ ಚೇಕಿತಾನಃ ಸರ್ವಂ ವಿಶೇಷೇಣ ಪಶ್ಯನ್ ಸೂರ್ಯೋ ರಶ್ಮಿಭಿಃ ಸ್ವಕೀಯೈಃ ಕಿರಣೈರ್ದ್ಯಾವಾಪೃಥಿವೀ ದ್ಯುಲೋಕಭೂಲೋಕೌ ಚಾಂತರಿಕ್ಷಂ ಚಾಪ್ರಾಃ । ಸಮಂತಾದಪೂರಯತ್ ॥

ಪ್ರತಿಪದಾರ್ಥ

ವಿಶ್ವಸ್ಮೈ—ಸಮಸ್ತವಾದ । ಭುವನಾಯ—ಲೋಕಕ್ಕೂ । ಜ್ಯೋತಿಃ—ತೇಜಸ್ಸನ್ನು । ಕೃಣ್ವನ್—ಉಂಟುಮಾಡುತ್ತಾ । ಸವಿತಾ—ಲೋಕಕ್ಕೆಲ್ಲಾ ಪ್ರೇರಕನಾದ । ದೇವಃ—ಸವಿತೃದೇವನು । ಊರ್ಧ್ವಂ—ಉನ್ಮುಖನಾಗಿ । ಕೇತುಂ—ಧ್ವಜದಂತೆ ಪ್ರಕಾಶಿಸುವ ಭಾನುವನ್ನು । ಅಶ್ರೇತ್—ಆಶ್ರಯಿಸುತ್ತಾನೆ । ವಿ ಚಿಕಿತಾನಃ—ಸಕಲವನ್ನೂ ವಿಶೇಷರೀತಿಯಿಂದ ನೋಡತಕ್ಕ । ಸೂರ್ಯಃ—ಸೂರ್ಯನು । ರಶ್ಮಿಭಿಃ—ತನ್ನ ಕಿರಣಗಳಿಂದ । ದ್ಯಾವಾಪೃಥಿವೀ—ದ್ಯಾವಾಪೃಥಿವಿಗಳನ್ನೂ । ಅಂತರಿಕ್ಷಂ—ಅಂತರಿಕ್ಷವನ್ನೂ । ಆ ಪ್ರಾಃ—ಪೂರ್ಣವಾಗಿ ತುಂಬಿದ್ದಾನೆ.

ಭಾವಾರ್ಥ

ಸಮಸ್ತವಾದ ಲೋಕಕ್ಕೂ ತೇಜಸ್ಸನ್ನುಂಟುಮಾಡುತ್ತಾ ಲೋಕಕ್ಕೆಲ್ಲಾ ಪ್ರೇರಕನಾದ ಸವಿತೃದೇವನು ಉನ್ಮುಖನಾಗಿ ಧ್ವಜದಂತೆ ಪ್ರಕಾಶಿಸುವ ಭಾನುವನ್ನು ಆಶ್ರಯಿಸುತ್ತಾನೆ. ಸಕಲ ಲೋಕವನ್ನೂ ವಿಶೇಷರೀತಿಯಿಂದ ನೋಡತಕ್ಕ ಸೂರ್ಯನು ತನ್ನ ಕಿರಣಗಳಿಂದ ದ್ಯಾವಾಪೃಥಿವಿಗಳನ್ನೂ, ಅಂತರಿಕ್ಷವನ್ನೂ ಪೂರ್ಣವಾಗಿ ತುಂಬಿದ್ದಾನೆ.

English Translation

The divine Savitri displays his banner on high, diffusing light through all worlds : contemplating (all things) the sun has filled heaven earth and the firmament with his rays.

---

ಸಂಹಿತಾಪಾಠಃ

ಆವಹಂತ್ಯರುಣೀರ್ಜ್ಯೋತಿಷಾಗಾನ್ಮಹೀ ಚಿತ್ರಾ ರಶ್ಮಿಭಿಶ್ಚೇಕಿತಾನಾ ।
ಪ್ರಬೋಧಯಂತೀ ಸುವಿತಾಯ ದೇವ್ಯುಗಿಷಾ ಈಯತೇ ಸುಯುಜಾ ರಥೇನ ॥ ೩ ॥

CC-0. Jangamwadi Math Collection. Digitized by eGangotri

ಪದಪಾಠಃ

ಆ॒ಽವಹಂ॑ತೀ । ಅ॒ರು॒ಣೀಃ । ಜ್ಯೋತಿ॑ಷಾ । ಆ । ಅ॒ಗಾ॒ತ್ । ಮ॒ಹೀ । ಚಿ॒ತ್ರಾ । ರ॒ಶ್ಮಿಽಭಿಃ॑ । ಚೇಕಿ॑ತಾನಾ ॥

ಪ್ರ॒ಽಬೋ॒ಧಯಂ॑ತೀ । ಸು॒ವಿ॒ತಾಯ॑ । ದೇ॒ವೀ । ಉ॒ಷಾಃ । ಈ॒ಯ॒ತೇ॒ । ಸು॒ಽಯುಜಾ॑ । ರಥೇ॑ನ ॥ ೩ ॥

ಸಾಯಣಭಾಷ್ಯಂ

ಆವಹಂತೀ ಧನಾನಿ ಧಾರಯಂತ್ಯರುಣೀರರುಣವರ್ಣಾಃ ॥ ಪ್ರಥಮೈಕವಚನೇ ದ್ವಿತೀಯಾ-ಬಹುವಚನಂ ಛಾಂದಸಂ ॥ ಜ್ಯೋತಿಷಾ ತೇಜಸಾ ಯುಕ್ತಾ ಮಹೀ ಮಹತೀ ರಶ್ಮಿಭಿಃ ಕಿರಣೈಶ್ಚಿತ್ರಾ ದರ್ಶನೀಯಾ ಚೇಕಿತಾನಾ ಜಾನತ್ಯುಷಾ ಆಗಾತ್ । ಆಗಚ್ಛತ್ । ಕಿಂಚ ಪ್ರಬೋಧಯಂತೀ ಸುಪ್ತಾನ್ ಪ್ರಬುದ್ಧಾನ್ ಕುರ್ವತೀ ದೇವೀ ದ್ಯೋತಮಾನೋಷಾಃ ಸುಯುಜಾ ಶೋಭನಯುಕ್ತೇನ ರಥೇನ ಸುವಿತಾಯ ಸುಖಪ್ರಾಪ್ತಯ ಈಯತೇ । ಗಚ್ಛತಿ ॥

ಪ್ರತಿಪದಾರ್ಥ

ಆವಹಂತೀ—ಧನವನ್ನು ವಹಿಸಿರುವವಳೂ । ಅರುಣೀಃ—ಕೆಂಪುವರ್ಣವುಳ್ಳವಳೂ । ಜ್ಯೋತಿಷಾ—ಕಾಂತಿಯುತಳೂ । ಮಹೀ—ಮಹತ್ಸ್ವರೂಪವುಳ್ಳವಳೂ । ರಶ್ಮಿಭಿಃ—ಕಿರಣಗಳಿಂದ । ಚಿತ್ರಾ—ಆಕರ್ಷಕವಾದ ರೂಪವುಳ್ಳವಳೂ । ಚೇಕಿತಾನಾ—ಸಮಸ್ತ ವ್ಯವಹಾರಗಳನ್ನೂ ಅರಿಯುವವಳೂ ಆದ ಉಷಸ್ಸು । ಆಗಾತ್—ಉದಯಿಸಿ ಬರುತ್ತಾಳೆ । ಪ್ರಬೋಧಯಂತೀ—ಮಲಗಿರುವವರನ್ನು ಎಬ್ಬಿಸುತ್ತಾ । ದೇವೀ—ಪ್ರಕಾಶಮಾನಳಾದ। ಉಷಾಃ—ಉಷಸ್ಸು । ಸುಯುಜಾ—ಶ್ರೇಷ್ಠವಾದ ಅಶ್ವದಿಂದ ಕೂಡಿದ । ರಥೇನ—ರಥದೊಡನೆ । ಸುವಿತಾಯ—ಮಂಗಳವನ್ನುಂಟುಮಾಡಲು । ಈಯತೇ—ಬರುತ್ತಾಳೆ.

ಭಾವಾರ್ಥ

ಸಂಪದ್ಯುಕ್ತಳೂ, ಹೊಂಬಣ್ಣದ ರೂಪವುಳ್ಳವಳೂ, ಕಾಂತಿಯುತಳೂ, ಮಹತ್ಸ್ವರೂಪವುಳ್ಳವಳೂ, ಕಿರಣಗಳಿಂದ ಆಕರ್ಷಕವಾದ ರೂಪವುಳ್ಳವಳೂ, ಸಮಸ್ತ ವ್ಯವಹಾರಗಳನ್ನೂ ಅರಿಯುವವಳೂ ಆದ ಉಷಸ್ಸು ಉದಯಿಸಿ ಬರುತ್ತಾಳೆ. ಮಲಗಿರುವವರನ್ನು ಎಬ್ಬಿಸುತ್ತಾ ಪ್ರಕಾಶಮಾನಗಳಾದ ಉಷಸ್ಸು ಶ್ರೇಷ್ಠವಾದ ಅಶ್ವದಿಂದ ಕೂಡಿದ ರಥದೊಡನೆ ಮಂಗಳವನ್ನುಂಟುಮಾಡಲು ಬರುತ್ತಾಳೆ.

English Translation

The great and intelligent dawn, variegated with (many-coloured) rays of purple tint, bringing opulence, has come with (her) lustre. the divine Ushas, arousing (the sleepers) proceeds with her well-harnessed car (to distribute) felicity.

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಆ ವಾಂ ವಹಿಷ್ಠಾ ಇಹ ತೇ ವಹಂತು ರಥಾ ಅಶ್ವಾಸ ಉಷಸೋ ವ್ಯುಷ್ಟೌ ।
ಇಮೇ ಹಿ ವಾಂ ಮಧುಪೇಯಾಯ ಸೋಮಾ ಅಸ್ಮಿನ್ಯಜ್ಞೇ ವೃಷಣಾ
ಮಾದಯೇಥಾಂ ॥ ೪ ॥

ಪದಪಾಠಃ

ಆ । ವಾಂ । ವಹಿಷ್ಠಾಃ । ಇಹ । ತೇ । ವಹಂತು । ರಥಾಃ । ಅಶ್ವಾಸಃ । ಉಷಸಃ । ವಿಽಉಷ್ಟೌ ।
ಇಮೇ । ಹಿ । ವಾಂ । ಮಧುಽಪೇಯಾಯ । ಸೋಮಾಃ । ಅಸ್ಮಿನ್ । ಯಜ್ಞೇ । ವೃಷಣಾ । ಮಾದಯೇಥಾಂ

ಸಾಯಣಭಾಷ್ಯಂ

ಹೇ ಅಶ್ವಿನಾವಿಹ ಯಜ್ಞೇ ವಹಿಷ್ಠಾ ವೋಢೃತಮಾಸ್ತೇ ಪ್ರಸಿದ್ಧಾ ರಥಾ ರಂಹಣಾ ಗಂತಾರೋಽ-ಶ್ವಾಸೋಽಶ್ವಾ ವಾಂ ಯುವಾಮುಷಸ ಉಷೋದೇವತಾಯಾ ವ್ಯುಷ್ಟೌ ವ್ಯುಚ್ಛನಕಾಲ ಆ ವಹಂತು । ಸಮಂತಾನ್ನಯಂತು । ಹಿ ಯಸ್ಮಾತ್ಕಾರಣಾತ್ ಹೇ ವೃಷಣಾ ವೃಷಣೌ ಕಾಮಾನಾಂ ವರ್ಷಿತಾರೌ ಹೇ ಅಶ್ವಿನಾವಿಮೇ ಸೋಮಾ ವಾಂ ಯುವಾಂ ಮಧುಪೇಯಾಯ ಮಧೋಃ ಸೋಮಸ್ಯ ಪಾನಾಯಾಸ್ಮಿ-ನ್ಯಜ್ಞೇ ಮಾದಯೇಥಾಂ । ಹರ್ಷಯೇಥಾಂ ॥

ಪ್ರತಿಪದಾರ್ಥ

ವೃಷಣಾ—ಕಾಮವರ್ಷಕರಾದ ಅಶ್ವಿನೀದೇವತೆಗಳೇ । ಇಹ—ಈ ಯಜ್ಞಕ್ಕೆ । ವಹಿಷ್ಠಾಃ—ನಿಮ್ಮನ್ನು ಅತಿಶಯವಾಗಿ ಕರೆತರುವುವೂ । ತೇ—ಪ್ರಸಿದ್ಧವಾದವೂ । ರಥಾಃ—ಶೀಘ್ರಗಾಮಿಗಳೂ ಆದ । ಅಶ್ವಾಸಃ—ಅಶ್ವಗಳು । ವಾಂ—ನಿಮ್ಮನ್ನು । ಉಷಸಃ—ಉಷಸ್ಸಿನ । ವ್ಯುಷ್ಟೌ—ಉದಯಕಾಲದಲ್ಲಿ । ಆ ವಹಂತು—ಕರೆತರಲಿ । ಇಮೇ ಸೋಮಾಃ—ಈ ಸೋಮರಸಗಳು । ವಾಂ—ನಿಮ್ಮನ್ನು । ಮಧುಪೇಯಾಯ—ಮಧು ಪಾನಕ್ಕಾಗಿ । ಅಸ್ಮಿನ್ ಯಜ್ಞೇ—ಈ ಯಜ್ಞದಲ್ಲಿ । ಮಾದಯೇಥಾಂ—ಹರ್ಷಗೊಳಿಸಲಿ.

ಭಾವಾರ್ಥ

ಕಾಮವರ್ಷಕರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ವಹಿಸಿ ಈ ಯಜ್ಞಕ್ಕೆ ಕರೆತರುವುವೂ, ಪ್ರಸಿದ್ಧ ವಾದವೂ, ಶೀಘ್ರಗಾಮಿಗಳೂ ಆದ ಅಶ್ವಗಳು ನಿಮ್ಮನ್ನು ಉಷಸ್ಸಿನ ಉದಯಕಾಲದಲ್ಲಿ ಕರೆತರಲಿ. ಈ ಸೋಮರಸ ಗಳು ನಿಮ್ಮನ್ನು ಮಧುಪಾನಕ್ಕಾಗಿ ಈ ಯಜ್ಞದಲ್ಲಿ ಹರ್ಷಗೊಳಿಸಲಿ.

CC-0. Jangamwadi Math Collection. Digitized by eGangotri

## English Translation

May those robust and active horses bring you, (Ashwins) hither at the breaking of the dawn, and may these Soma juices prepared, showerers (of benefits), for your drinking, exhilarate you at this (our sacrifice).

---

ಸಂಹಿತಾಪಾಠಃ

ಅನಾಯತೋ ಅನಿಬದ್ಧಃ ಕಥಾಯಂ ನ್ಯಙ್ಙುತ್ತಾನೋಽವ ಪದ್ಯತೇ ನ ।
ಕಯಾ ಯಾತಿ ಸ್ವಧಯಾ ಕೋ ದದರ್ಶ ದಿವಃ ಸ್ಕಂಭಃ ಸಮೃತಃ ಪಾತಿ
ನಾಕಂ ॥ ೫ ॥

ಪದಪಾಠಃ

ಅನಾಯತಃ । ಅನಿಽಬದ್ಧಃ । ಕಥಾ । ಅಯಂ । ನ್ಯಙ್ । ಉತ್ತಾನಃ । ಅವ । ಪದ್ಯತೇ । ನ ।
ಕಯಾ । ಯಾತಿ । ಸ್ವಧಯಾ । ಕಃ । ದದರ್ಶ । ದಿವಃ । ಸ್ಕಂಭಃ । ಸಮ್ಽಋತಃ । ಪಾತಿ । ನಾಕಂ ॥ ೫ ॥

ಸಾಯಣಭಾಷ್ಯಂ

ಆಯತಶಬ್ದೋ ದೂರವಾಚೀ । ತದ್ವಿಪರೀತೋಽನಾಯತ ಆಸೀನಃ ಸನ್ನಯಂ ಪ್ರತ್ಯಕ್ಷೇಣೋ-ಪಲಭ್ಯಮಾನೋ ಮಂಡಲಾಭಿಮಾನೀ ಸೂರ್ಯೋ ನಿಬದ್ಧಃ । ಕೇನಾಪಿ ಬದ್ಧೋ ನ ಕ್ರಿಯತೇ । ಅಪಿ ಚಾಯಂ ಸೂರ್ಯೋ ನ್ಯಙ್ಙರ್ವಾಙ್ಮುಖಃ ಸನ್ ಕೇನಚಿತ್ಕಥಾ ಕಥಂ ನಾವ ಪದ್ಯತೇ । ನ ಹಿಂಸ್ಯತೇ । ಕಿಂಚಾಯಮುತ್ತಾನ ಊರ್ಧ್ವಮುಖತ್ವೇನ ತಿಷ್ಠನ್ ಕಯಾ ಸ್ವಧಯಾ ಕೇನ ಬಲೇನ ಯಾತಿ । ಗಚ್ಛತಿ । ಸ್ವಧಾಶಬ್ದೋಽನ್ನವಾಚ್ಯತ್ರ ತತ್ಕಾರ್ಯಂ ಬಲಂ ಲಕ್ಷಯತಿ । ಅಪಿ ಚ ದಿವೋ ದ್ಯುಲೋಕಸ್ಯ ಸ್ಕಂಭಃ ಸ್ತಂಭಃ ಸಮೃತೋ ನಾಕೇನ ಸಮವೇತಃ ಸೂರ್ಯೋ ನಾಕಂ ಸ್ವರ್ಗಂ ಪಾತಿ । ಪಾಲಯತಿ । ಕೋ ದದರ್ಶ । ತತ್ತ್ವತಃ ಕಃ ಪಶ್ಯತಿ । ನ ಕೋಽಪಿ ಜಾನಾತೀತ್ಯರ್ಥಃ ॥

ಪ್ರತಿಪದಾರ್ಥ

ಅನಾಯತಃ—ಸಮೀಪಸಂಚಾರಿಯಾದವನೂ । ಅಯಂ—ಮಂಡಲಾಕಾರನೂ ಆದ ಸೂರ್ಯನು । ಅನಿಬದ್ಧಃ—ಯಾರಿಂದಲೂ ತಡೆಯಲ್ಪಡದಿರುವ ಗತಿಯುಳ್ಳವನಾಗಿರುತ್ತಾನೆ । ನ್ಯಙ್—ಅವಾಙ್ಮುಖನಾಗಿ ಸಂಚರಿಸುತ್ತಿದ್ದರೂ ಸಹ । ಕಥಾ—ಹೇಗೆ ತಾನೇ । ನ ಅವ ಪದ್ಯತೇ—ಯಾರಿಂದಲೂ ಹಿಂಸಿತನಾಗುವುದಿಲ್ಲ ।

CC-0. Jangamwadi Math Collection. Digitized by eGangotri

ಉತ್ತಾನಃ—ಊರ್ಧ್ವಮುಖನಾಗಿದ್ದುಕೊಂಡು । ಕಯಾ ಸ್ವಧಯಾ—ಯಾವ ಬಲದೊಡನೆ । ಯಾತಿ—ಸಂಚರಿಸುತ್ತಾನೆ । ದಿವಃ—ದ್ಯುಲೋಕದ । ಸ್ಕಂಭಃ—ಸ್ತಂಭಪ್ರಾಯನೂ । ಸಮೃತಃ—ಅಂತರಿಕ್ಷಸ್ಥನೂ ಆದ ಸೂರ್ಯನು । ನಾಕಂ—ಸ್ವರ್ಗವನ್ನು । ಪಾತಿ—ರಕ್ಷಿಸುತ್ತಾನೆ ಎಂಬ ಈ ವಿಷಯವನ್ನು । ಕೋ ದದರ್ಶ—ತತ್ತ್ವತಃ ಯಾವನು ತಾನೇ ನೋಡಬಲ್ಲನು ?

ಭಾವಾರ್ಥ

ಸಮೀಪಸಂಚಾರಿಯಾದವನೂ, ಮಂಡಲಾಕಾರನೂ ಆದ ಸೂರ್ಯನು ಯಾರಿಂದಲೂ ತಡೆಯಲ್ಪಡದಿರುವ ಗತಿಯುಳ್ಳವನಾಗಿರುತ್ತಾನೆ. ಅವಾಙ್ಮುಖನಾಗಿ ಸಂಚರಿಸುತ್ತಿದ್ದರೂ ಸಹ ಯಾರಿಂದಲೂ ಹಿಂಸಿತನಾಗದಿರುವುದೇ ಆಶ್ಚರ್ಯ. ಊರ್ಧ್ವಮುಖನಾಗಿದ್ದುಕೊಂಡು ಯಾವ ಬಲದೊಡನೆ ಸಂಚರಿಸುತ್ತಾನೆಂಬುದೂ, ಮತ್ತು ದ್ಯುಲೋಕದ ಸ್ತಂಭಪ್ರಾಯನಾಗಿಯೂ, ಅಂತರಿಕ್ಷಸ್ಥನಾಗಿಯೂ ಯಾವ ರೀತಿ ಸ್ವರ್ಗವನ್ನು ರಕ್ಷಿಸುತ್ತಾನೆ ಎಂಬುದರ ರಹಸ್ಯವನ್ನೂ ಸಹ ಯಾವನು ತಾನೇ ತಿಳಿದಿದ್ದಾನೆ ?

English Translation

This sun, not far removed and unobstructed, whether looking downwards or upwards, is harmed by no one: what is the power by which he travels ? who has (truly)beheld him who, as the collective pillar of heaven. sustains the sky.

---

## ಹದಿನೈದನೆಯ ಸೂಕ್ತವು.

---

### ಪೀಠಿಕೆ.

#### ಪರ್ಯಗ್ನಿಕರಣವೆಂಬ ಕರ್ಮದ ವಿವರಣೆಯು.

ಈ ಸೂಕ್ತದ ಮೊದಲನೆಯ ೩ ಋಕ್ಕುಗಳಲ್ಲಿ ಪರ್ಯಗ್ನಿಕರಣವೆಂಬ ಯಜ್ಞದಲ್ಲಿ ನೆರವೇರಿಸಲ್ಪಡುವ ಒಂದು ಕರ್ಮಾಂಗವು ಹೇಳಲ್ಪಟ್ಟಿರುವುದು. ಪರ್ಯಗ್ನಿಕರಣವೆಂದರೆ ಅಗ್ನಿಯಲ್ಲಿ ಹೋಮಮಾಡುವ ಪಶು, ದ್ರವ್ಯ, ಹವಿಸ್ಸು ಚರು, ಆಜ್ಯ ಮುಂತಾದ ದ್ರವ್ಯಗಳು ಶುದ್ಧವಾಗಿ ಯಜ್ಞದಲ್ಲಿ ದೇವತೆಗಳು ಸ್ವೀಕರಿಸುವುದಕ್ಕೆ ಯೋಗ್ಯವಾಗುವಂತೆ ಮಾಡುವುದಕ್ಕಾಗಿ ನಡೆಸಬೇಕಾದ ಒಂದು ಕರ್ಮವು. ಪಶುವನ್ನು ಹೋಮಮಾಡುವಾಗ ಮೊದಲು ಅದನ್ನು ಯಜ್ಞವೇದಿಯಲ್ಲಿರುವ ಯೂಪಸ್ತಂಭಕ್ಕೆ ಕಟ್ಟಿಹಾಕಿರುವರು. ಅದನ್ನು ಆಜ್ಯಾದಿಗಳಿಂದ ಸಂಸ್ಕರಿಸಿದ ಮೇಲೆ ಆಗ್ನೀಧ್ರನೆಂಬ ಋತ್ವಿಜನು ಆಹವನೀಯಾಗ್ನಿಯಿಂದ ಉರಿಯುತ್ತಿರುವ ಒಂದು ಕೊಳ್ಳಿಯನ್ನು ತೆಗೆದುಕೊಂಡು ಪಶುವಿನ ಸುತ್ತಲೂ ಪ್ರದಕ್ಷಿಣಾಕಾರವಾಗಿ ಮೂರು ಸುತ್ತನ್ನು ಸುತ್ತುವನು. ಈ ಕರ್ಮವನ್ನು ಯಜ್ಞದಲ್ಲಿ ಮಾತ್ರವೇ ಅಲ್ಲ. ಗೃಹ್ಯಕರ್ಮಗಳಲ್ಲಿಯೂ ಎಂದರೆ ಮನೆಗಳಲ್ಲಿ ಮಾಡುವ ಮದುವೆ ಮೊದಲಾದ ಕರ್ಮಗಳಲ್ಲಿ ನಡೆಸುವ ಹೋಮಗಳಲ್ಲಿಯೂ ಸಹ ಹೋಮಮಾಡಲ್ಪಡುವ ಚರು (ಅನ್ನ) ಆಜ್ಯ ಮೊದಲಾದ ಹೋಮದ್ರವ್ಯಗಳನ್ನು ಶುದ್ಧ



CC-0. Jangamwadi Math Collection. Digitized by eGangotri

ಮಾಡುವುದಕ್ಕಾಗಿ ದರ್ಭೆಯ ತುಂಡುಗಳಿಂದ ಬೆಂಕಿಯನ್ನು ಹತ್ತಿಸಿಕೊಂಡು ಹೋಮದ್ರವ್ಯದ ಸುತ್ತಲೂ ಮೂರಾವರ್ತಿ ಸುತ್ತಿಸಿ ಅಗ್ನಿಯಲ್ಲಿ ಹಾಕುವರು. ಇದು ಈಗಲೂ ಎಲ್ಲಾ ಕರ್ಮಗಳಲ್ಲಿಯೂ ನಡೆಸಲ್ಪಡುತ್ತಿದೆ. ಅಶ್ವಮೇಧ ಯಜ್ಞದಲ್ಲಿ ಈ ವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದೆ. ಪಶುವಿನ ಸುತ್ತಲೂ ಅಗ್ನಿಯನ್ನು ತರುವುದಕ್ಕೆ ಬದಲಾಗಿ ಪಶುವನ್ನೇ ಅಗ್ನಿಯ ಸುತ್ತಲೂ ಪ್ರದಕ್ಷಿಣೆಮಾಡಿಸುವರು.

ಏಷಃ ಛಾಗಃ ಪುರೋ ಅಶ್ವೇನ ವಾಜಿನಾ ಪೂಷ್ಣೋ ಭಾಗೋ ನೀಯತೇ ವಿಶ್ವದೇವ್ಯಃ ॥

(ಋ. ಸಂ. ೧-೧೬೨-೩)

ಎಂಬ ಋಕ್ಕಿನಲ್ಲಿ ಹೇಳಿರುವಂತೆ ಅಶ್ವಮೇಧ ಯಜ್ಞದಲ್ಲಿ ಅಶ್ವವೂ ಆಡೂ ಪಶುಗಳು. ಇವುಗಳಲ್ಲಿ ಆಡನ್ನು ಮುಂಭಾಗದಲ್ಲಿಯೂ ಅದರ ಹಿಂದೆ ಅಶ್ವವನ್ನು ಅಗ್ನಿಯ ಸುತ್ತಲೂ ಸುತ್ತಿಸುವರು. ಈ ಪರ್ಯಗ್ನಿಕರಣ ವಿಧಾನವನ್ನು ವಿವರಿಸುವ ಈ ಸೂಕ್ತದ ಮೊದಲನೆಯ ಮೂರು ಋಕ್ಕುಗಳಿಗೆ ಐತರೇಯ ಬ್ರಾಹ್ಮಣದಲ್ಲಿ ವಿವರಿಸಿರುವ ಅರ್ಥವನ್ನೇ ಇಲ್ಲಿ ಹೇಳಲಾಗಿದೆ—

ಪರ್ಯಗ್ನಯೇ ಕ್ರಿಯಮಾಣಾಯಾನುಬ್ರೂಹೀತ್ಯಾಹಾಧ್ವರ್ಯುಃ ।

(ಐ. ಬ್ರಾ. ೬-೫)

ಯಜ್ಞದಲ್ಲಿ ಪರ್ಯಗ್ನಿಕರಣವೆಂಬ ಕರ್ಮವನ್ನು ಮಾಡುವಾಗ ಆಗ್ನೀಧ್ರನೆಂಬ ಋತ್ವಿಜನು ಆಹವನೀಯಾಗ್ನಿಯಿಂದ ಉರಿಯುತ್ತಿರುವ ಒಂದು ಕೊಳ್ಳಿಯನ್ನು ತೆಗೆದುಕೊಂಡು **ಪರಿವಾಜಪತಿಃ** (ಋ. ಸಂ. ೪-೧ -೩) ಎಂಬ ಋಕ್ಕನ್ನು ಪಠಿಸುತ್ತಾ ಪಶುವಿನ ಸುತ್ತಲೂ ಮೂರಾವರ್ತಿ ಪ್ರದಕ್ಷಿಣಾಕಾರವಾಗಿ ಸುತ್ತುವನು. ಈ ಕರ್ಮಮಾಡುವುದಕ್ಕಾಗಿ ಅಧ್ವರ್ಯುವು ಹೋತೃವನ್ನು (ಅಥವಾ ಹೋತೃವರ್ಗದ ಋತ್ವಿಜರನ್ನು) ಉದ್ದೇಶಿಸಿ **ಪರ್ಯಗ್ನಯೇ ಕ್ರಿಯಮಾಣಾಯಾನುಬ್ರೂಹಿ**—ಪರ್ಯಗ್ನಿಕ್ರಿಯೆಗಾಗಿ ಪಠಿಸಲ್ಪಡಬೇಕಾದ ಮಂತ್ರಗಳನ್ನು ಪಠಿಸು ಎಂದು ಪ್ರೈಷಮಂತ್ರದಿಂದ ನಿರ್ದೇಶಿಸುವನು. ಅನಂತರ ಅದಕ್ಕನುಸಾರವಾಗಿ ಮೈತ್ರಾವರುಣನೆಂಬ ಋತ್ವಿಜನು ಅಗ್ನಿರ್ಹೋತಾ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸುವನು. ಇಲ್ಲಿ ಒಂದು ವಿಶೇಷ ಸಂಗತಿ ಇರುವುದು. ಈ ಮಂತ್ರಗಳನ್ನು ಹೋತೃವು ಪಠಿಸಬೇಕೆಂದು ಅಧ್ವರ್ಯುವು ನಿರ್ದೇಶಿಸಿದ್ದರೂ ಹೋತೃವಿನ ಅನುಮತಿಯಂತೆ ಮೈತ್ರಾವರುಣನು ಪಠಿಸುವನು. ಈ ರೀತಿ ಪಠಿಸುವುದಕ್ಕೆ ಉಪಪ್ರೈಷಮಂತ್ರವೆಂದು ಹೆಸರು. ಸೋಮವೇ ಮೊದಲಾದ ಕೆಲವು ಯಜ್ಞಗಳಲ್ಲಿ ಯಾಜ್ಯಾಮಂತ್ರಗಳನ್ನು ಪಠಿಸುವುದಕ್ಕಾಗಿ ಮೈತ್ರಾವರುಣನೇ ಪ್ರೈಷಮಂತ್ರವನ್ನು ನಿರ್ದೇಶಿಸುವನು. ಈ ಕಾರ್ಯವನ್ನು ವಿಧಿಸುವ ಅಧಿಕಾರದ ಚಿಹ್ನೆಗಾಗಿ ಮೈತ್ರಾವರುಣನಿಗೆ ಒಂದು ದಂಡ (ಕೋಲು) ವಿರುವುದು. ಆ ದಂಡವನ್ನು ಹಿಡಿದುಕೊಂಡು ಮೈತ್ರಾವರುಣನು ನಾನಾಋತ್ವಿಕ್ಕುಗಳಿಗೆ ಅವರವರು ಮಾಡಬೇಕಾದ ಕರ್ಮಗಳನ್ನು ನಿರ್ದೇಶಿಸುತ್ತಾ ತನ್ನ ಅಧಿಕಾರವನ್ನು ಚಲಾಯಿಸುವನು. ಈ ವಿಷಯವು—

ಕ್ರೀತೇ ಸೋಮೇ ಮೈತ್ರಾವರುಣಾಯ ದಂಡಂ ಪ್ರಯಚ್ಛತಿ ಮೈತ್ರಾವರುಣೋ ಹಿ ಪುರಸ್ತಾದೃತ್ವಿಗ್ಭ್ಯೋ ವಾಚಂ ವಿಭಜತಿ ।

(ತೈ. ಸಂ. ೬-೧-೪-೨)

CC-0. Jangamwadi Math Collection. Digitized by eGangotri

ಎಂಬ ಯಜುರ್ವೇದವಾಕ್ಯವಿರುವುದು. ಮೈತ್ರಾವರುಣನು ಪಠಿಸುವ ಆ ಮೂರು ಋಕ್ಕುಗಳನ್ನು ವಿವರಿಸುವರು—

ಅಗ್ನಿರ್ಹೋತಾ ನೋ ಅಧ್ವರ ಇತಿ ತೃಚಮಾಗ್ನೇಯಂ ಗಾಯತ್ರಮನ್ವಾಹ ಪರ್ಯಗ್ನಿ-
ಕ್ರಿಯಮಾಣೇ ಸ್ವಯೈವೈನಂ ತದ್ದೇವತಯಾ ಸ್ವೇನ ಛಂದಸಾ ಸಮರ್ಧಯತಿ ।

ಪಶುವಿನಸುತ್ತಲೂ ಅಗ್ನಿಯನ್ನು ಒಯ್ಯುವುದರಿಂದ ಈ ಕರ್ಮಕ್ಕೆ ಪರ್ಯಗ್ನಿ ಎಂದು ಹೆಸರು. ಈ ಕರ್ಮದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಅಗ್ನಿರ್ಹೋತಾ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಪಠಿಸಬೇಕೆಂದು ಆಶ್ವಲಾಯನ ಮಹರ್ಷಿಯು ಶ್ರೌತಸೂತ್ರದಲ್ಲಿ—ಪ್ರೇಷಿತೋ ಮೈತ್ರಾವರುಣೋಽಗ್ನಿರ್ಹೋತಾ ನ ಇತಿ ತೃಚಂ ಪರ್ಯಗ್ನಯೇಽನ್ವಾಹ ಎಂಬ ಸೂತ್ರದಿಂದ ವಿವರಿಸಿರುವರು. ಈ ಮೂರು ಋಕ್ಕುಗಳ ಪ್ರಾರಂಭದಲ್ಲಿ ಅಗ್ನಿಯ ಹೆಸರಿರುವುದರಿಂದ ಈ ಮಂತ್ರಗಳಿಗೆ ಅಗ್ನಿಯು ದೇವತೆಯಾಗಿರುವುದಲ್ಲದೆ ಅಗ್ನಿಯ ಛಂದಸ್ಸಾದ ಗಾಯತ್ರಿಯೇ ಈ ಮೂರು ಋಕ್ಕುಗಳಿಗೂ ಛಂದಸ್ಸಾಗಿರುವುದು. ಈ ರೀತಿಯಾಗಿ ಮಂತ್ರಗಳಿಗೆ ಅಗ್ನಿಯು ದೇವತೆಯಾಗಿಯೂ, ಛಂದಸ್ಸು ಸಹ ಅಗ್ನಿದೇವತೆಗೆ ಪ್ರಿಯವಾದ ಗಾಯತ್ರಿಯೇ ಆಗಿರುವುದರಿಂದಲೂ ಈ ಕರ್ಮಕ್ಕೆ ಸಮಯೋಚಿತವಾದ ದೇವತೆ ಮತ್ತು ಛಂದಸ್ಸುಗಳಿಂದ ಸಹಿತವಾದ ಮಂತ್ರಗಳನ್ನು ಪಠಿಸಿ ದೇವತೆಯ ಪ್ರಾಶಸ್ತ್ಯವನ್ನು ಅಭಿವೃದ್ಧಿಪಡಿಸಿ ದಂತಾಯಿತು.

ವಾಜೀ ಸನ್ಪರಿಣೀಯತ ಇತಿ ವಾಜಿನಮಿವ ಹ್ಯೇನಂ ಸಂತಂ ಪರಿಣಯಂತಿ ॥

ವಾಜೀ ಎಂಬ ಶಬ್ದಕ್ಕೆ ಅನ್ನವುಳ್ಳವನು ಅಥವಾ ಗಮನವುಳ್ಳವನು ಎಂದರ್ಥವಿರುವುದು. ಆದುದರಿಂದ ಇಲ್ಲಿ ಋತ್ವಿಕ್ಕುಗಳು ಅಗ್ನಿಯನ್ನು ವಾಜಿಶಬ್ದದಿಂದ ಸ್ತುತಿಸಿ ಪಶುವಿನ ಸುತ್ತಲೂ ಸುತ್ತಿಸುವರು. ಇಲ್ಲಿ ದೇವತೆಗಳಿಗೆ ಅರ್ಪಿಸುವ ಪಶುವೇ ಅನ್ನವು (ಹವಿಸ್ಸು). ಮೂರಾವರ್ತಿ ಸುತ್ತಿಸುವುದೇ ಅಗ್ನಿಯ ಗಮನವು. ಆದುದರಿಂದ ವಾಜಿ ಶಬ್ದದ ಅರ್ಥಗಳಾದ ಅನ್ನವುಳ್ಳವನು ಮತ್ತು ಗಮನವುಳ್ಳವನು ಎಂಬ ಗುಣಗಳು ಅಗ್ನಿಯಲ್ಲಿದ್ದಂತಾಯಿತು.

ಪರಿತ್ರಿವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರಿವೇತ್ಯೇಷ ಹಿ ರಥೀರಿವಾಧ್ವರಂ ಪರಿಯಾತಿ । ಪರಿ
ವಾಜಪತಿಃ ಕವಿರಿತ್ಯೇಷ ಹಿ ವಾಜಾನಾಂ ಪತಿಃ ॥

(ಐ. ಬ್ರಾ ೬-೫)

ಮಂತ್ರದಲ್ಲಿರುವ—ಪರಿತ್ರಿವಿಷ್ಟ್ಯಧ್ವರಂ ಪರಿಯಾತ್ಯಗ್ನೀ ರಥೀರಿವ ಎಂಬ ವಾಕ್ಯಕ್ಕೆ ಈ ಯಜ್ಞದಲ್ಲಿ ಅಗ್ನಿಯು, ರಥದಲ್ಲಿ ಕುಳಿತಿರುವ ರಥಿಕನು ವೇಗವಾಗಿ ಸಂಚರಿಸುವಂತೆ (ಪಶುವಿನ ಸುತ್ತಲೂ) ವೇಗವಾಗಿ ಸುತ್ತುವನು ಎಂದರ್ಥವು. ಪರಿವಾಜಪತಿಃ ಕವಿಃ ಎಂಬ ವಾಕ್ಯಕ್ಕೆ ಕ್ರಾಂತದರ್ಶಿಯಾದ (ಸಮಸ್ತವನ್ನು ತಿಳಿದ) ಈ ಅಗ್ನಿಯು ಅನ್ನಕ್ಕೆ ಅಧಿಪತಿಯು ಅಥವಾ ಇಂದ್ರಾದಿದೇವತೆಗಳಿಗೆ ಅನುರೂಪವಾದ ಹವಿಸ್ಸನ್ನು ಒಯ್ಯುವವನು ಎಂದಭಿಪ್ರಾಯವು.

ಪರ್ಯಗ್ನಿಕರಣವೆಂಬ ಕರ್ಮಾಂಗದ ವಿವರಣೆಯು ಸಮಾಪ್ತವು.

———

CC-0. Jangamwadi Math Collection. Digitized by eGangotri

# ಹದಿನೈದನೆಯ ಸೂಕ್ತವು



ಸಾಯಣಭಾಷ್ಯಂ

ಅಗ್ನಿರ್ಹೋತೇತಿ ದಶರ್ಚಂ ಪಂಚಮಂ ಸೂಕ್ತಂ ವಾಮದೇವಸ್ಯಾರ್ಷಂ ಗಾಯತ್ರಂ । ಅತ್ರೇಯ-ಮನುಕ್ರಮಣಿಕಾ । ಅಗ್ನಿರ್ಹೋತಾ ದಶ ಗಾಯತ್ರಮ್ನ್ಯೃಷಿರ್ಬೋಧದಿತ್ಯಾಭ್ಯಾಂ ಸೋಮಕಂ ಸಾಹ-ದೇವ್ಯಮಭ್ಯನದತ್ಪರಾಭ್ಯಾಮಸ್ಯಾಶ್ವಿನಾವಾಯುರಯಾಚತೇತಿ । ಬೋಧದ್ಯದಿತಿ ದ್ವ್ಯೃಚೇನ ಸೋಮಕ-ರಾಜಾ ಸ್ತೂಯತ ಏಷ ವಾಮಿತಿ ದ್ವ್ಯೃಚೇನಾಶ್ವಿನೌ ಶಿಷ್ಟಾಭಿಃ ಷಡ್ಭಿರಗ್ನಿಃ ಸ್ತೂಯತೇ । ಅತಸ್ತಾ ಏವ ಕ್ರಮೇಣ ದೇವತಾಃ ॥ ಸೂಕ್ತವಿನಿಯೋಗೋ ಲೈಂಗಿಕಃ ॥ ಪಶೋಃ ಪರ್ಯಗ್ನಿಕರಣೇಽಗ್ನಿರ್ಹೋತಾ ನ ಇತ್ಯಾದ್ಯಸ್ತ್ರ್ಯೃಚೋಽನುವಚನೀಯಃ । ತಥಾ ಚ ಸೂತ್ರಿತಂ । ಅಗ್ನಿರ್ಹೋತಾ ನ ಇತಿ ತೃಚಂ ಪರ್ಯ-ಗ್ನಯೇಽನ್ವಾಹ । ಆ. ೩-೨ । ಇತಿ ॥ ಪ್ರಾತರನುವಾಕೇಽಪ್ಯಾಗ್ನೇಯೇ ಕ್ರತೌ ಗಾಯತ್ರೇ ಛಂದಸ್ಯಾಶ್ವಿನ-ಶಸ್ತ್ರೇ ಚಾಯಂ ತೃಚೋ ವಿನಿಯುಕ್ತಃ । ತಥಾ ಚ ಸೂತ್ರಿತಂ। ಅಗ್ನಿರ್ಹೋತಾ ನೋ ಅಧ್ವರ ಇತಿ ತಿಸ್ರಃ ಆ. ೪-೧೩ । ಇತಿ ॥

ಅನುವಾದವು— ಅಗ್ನಿರ್ಹೋತಾ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಗಾಯತ್ರೀಛಂದಸ್ಸು. ಅನುಕ್ರಮ ಣಿಕೆಯಲ್ಲಿ— ಅಗ್ನಿರ್ಹೋತಾ ದಶ ಗಾಯತ್ರಮ್ನ್ಯೃಷಿರ್ಬೋಧತ್ ಇತ್ಯಾಭ್ಯಾಂ ಸೋಮಕಂ ಸಾಹದೇವ್ಯ-ಮಭ್ಯನದತ್ಪರಾಭ್ಯಾಮಸ್ಯಾಶ್ವಿನಾವಾಯುರಯಾಚತ ಎಂದು ಹೇಳಿರುವುದು. ಬೋಧದ್ಯತ್ ಎಂದು ಮೊದ ಲಾಗುವ ಎರಡು ಋಕ್ಕುಗಳಲ್ಲಿ (೭, ೮ ನೇ ಋಕ್ಕುಗಳು) ಸೋಮಕರಾಜನ ಪ್ರಶಂಸೆ ಇರುವುದು ಏಷ ವಾಂ ಎಂದು ಮೊದಲಾಗುವ ಎರಡು ಋಕ್ಕುಗಳಲ್ಲಿ (೯, ೧೦ ನೇ ಋಕ್ಕುಗಳು) ಅಶ್ವಿನೀದೇವತೆಗಳ ಸ್ತುತಿಯೂ, ಉಳಿದ ಋಕ್ಕುಗಳಲ್ಲಿ ಅಗ್ನಿಯ ಸ್ತುತಿಯೂ ಇರುವುದು. ಆದುದರಿಂದ ಆಯಾ ಋಕ್ಕುಗಳಿಗೆ ಅವುಗಳಲ್ಲಿ ಸ್ತುತಿಸಲಾಗಿರುವ ವರೇ ಕ್ರಮವಾಗಿ ದೇವತೆಗಳು. ಸೂಕ್ತವಿನಿಯೋಗವು ಲೈಂಗಿಕವು. ಮತ್ತು ಪರ್ಯಗ್ನಿಕರಣವೆಂಬ ಪಶುವಿನ ಸುತ್ತಲೂ ಅಗ್ನಿಯನ್ನು ಪ್ರೆಯ್ಯುವ ಕರ್ಮದಲ್ಲಿ ಅಗ್ನಿರ್ಹೋತಾ ನಃ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ಅನುವಚನೀಯಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ— ಅಗ್ನಿರ್ಹೋತಾ ನ ಇತಿ ತೃಚಂ ಪರ್ಯಗ್ನಯೇಽನ್ವಾಹ ಎಂಬ ಸೂತ್ರದಿಂದ (ಆ. ೩-೨) ವಿವೃತವಾಗಿರುವುದು. ಮತ್ತು ಪ್ರಾತರನುವಾಕಮಂತ್ರ ಪಠನಕಾಲದಲ್ಲಿ ಆಗ್ನೇಯಕ್ರತು ಸಂಬಂಧವಾದ ಗಾಯತ್ರಿಛಂದಸ್ಸಿನ ಮಂತ್ರಗಳಿಗಾಗಿಯೂ ಆಶ್ವಿನಶಸ್ತ್ರಮಂತ್ರ ಪಠನಕ್ಕಾಗಿಯೂ ಅಗ್ನಿರ್ಹೋತಾ ನಃ ಎಂದು ಮೊದಲಾಗುವ ಮೂರು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ— ಅಗ್ನಿರ್ಹೋತಾ ನೋ ಅಧ್ವರ ಇತಿ ತಿಸ್ರಃ ಎಂಬ ಸೂತ್ರದಿಂದ (ಆ. ೪-೧೩) ವಿವೃತವಾಗಿರುವುದು.

———

CC-0. Jangamwadi Math Collection. Digitized by eGangotri

## ಸೂಕ್ತ—೧೫

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೫ ॥

ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೧೫, ೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೦ ॥

ಋಷಿಃ—ವಾಮದೇವಃ ॥

ದೇವತಾ—೧-೬, ಅಗ್ನಿಃ । ೭, ೮. ಸೋಮಕಃ ಸಾಹದೇವ್ಯಃ. ೯-೧೦,. ಅಶ್ವಿನೌ ॥

ಛಂದಃ—ಗಾಯತ್ರೀ ॥

———

ಸಂಹಿತಾಪಾಠಃ

ಅಗ್ನಿರ್ಹೋತಾ ನೋ ಅಧ್ವರೇ ವಾಜೀ ಸನ್ಪರಿಣೀಯತೇ ॥

ದೇವೋ ದೇವೇಷು ಯಜ್ಞಿಯಃ ॥ ೧ ॥

ಪದಪಾಠಃ

ಅಗ್ನಿಃ । ಹೋತಾ । ನಃ । ಅಧ್ವರೇ । ವಾಜೀ । ಸನ್ । ಪರಿ । ನೀಯತೇ ।

ದೇವಃ । ದೇವೇಷು । ಯಜ್ಞಿಯಃ ॥ ೧ ॥

ಸಾಯಣಭಾಷ್ಯಂ

ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾಗ್ನಿರ್ನೋಽಸ್ಮದೀಯೋಽಧ್ವರೇ ಯಾಗೇ । ವಾಜೀತ್ಯೇತಲ್ಲುಪ್ತೋಪಮಾಕಂ । ವಾಜೀ ಶೀಘ್ರಗಾಮೀ ವೋಢಾಶ್ವ ಇವ ತಥಾ ದೇವೇಭ್ಯೋ ಹವಿರ್ವಾಹಕಃ ಸನ್ ಪರಿ ಣೀಯತೇ । ಪರಿತಃ ಸಮಂತಾತ್ಪ್ರಾಪ್ಯತೇ । ತಥಾ ಬ್ರಾಹ್ಮಣಂ ಚ ಭವತಿ । ವಾಜೀ ಸನ್ಪರಿ ಣೀಯತ ಇತಿ ವಾಜಿನಮಿವ ಹ್ಯೇನಂ ಸಂತಂ ಪರಿಣಯಂತಿ । ಐ. ಬ್ರಾ. ೨-೫ । ಇತಿ । ಕೀದೃಶೋಽಗ್ನಿಃ। ದೇವೇಷು ದ್ಯೋತಮಾನೇಷ್ವಿಂದ್ರಾದಿಷು ಮಧ್ಯೇ ದೇವೋ ದ್ಯೋತಮಾನೋ ಯಜ್ಞಿಯೋ ಯಜ್ಞಾರ್ಹಃ ।

CC-0. Jangamwadi Math Collection. Digitized by eGangotri

### ಪ್ರತಿಪದಾರ್ಥ

**ಹೋತಾ**—ಹೋಮಸಂಪಾದಕನೂ । **ದೇವೇಷು**—ಇಂದ್ರಾದಿದೇವತೆಗಳ ನಡುವೆ । **ದೇವಃ**—ಪ್ರಕಾಶಮಾನನೂ । **ಯಜ್ಞಿಯಃ**—ಯಜ್ಞಾರ್ಹನೂ ಆದ । **ಅಗ್ನಿಃ**—ಅಗ್ನಿಯು । **ನಃ**—ನಮ್ಮ । **ಅಧ್ವರೇ**—ಯಾಗದಲ್ಲಿ । **ವಾಜೀ ಸನ್**—ಶೀಘ್ರಗಾಮಿಯಾದ ಅಶ್ವದಂತೆ ಹವಿಸ್ಸನ್ನು ವಹಿಸುವವನಾಗಿ । **ಪರಿಣೀಯತೇ**—ಸುತ್ತಲೂ ಕರೆತರಲ್ಪಡುತ್ತಾನೆ.

### ಭಾವಾರ್ಥ

ಹೋಮಸಂಪಾದಕನೂ, ಇಂದ್ರಾದಿ ದೇವತೆಗಳ ನಡುವೆ ಪ್ರಕಾಶಮಾನನೂ, ಯಜ್ಞಾರ್ಹನೂ ಆದ ಅಗ್ನಿಯು ನಮ್ಮ ಯಾಗದಲ್ಲಿ ಶೀಘ್ರಗಾಮಿಯಾದ ಅಶ್ವದಂತೆ ದೇವತೆಗಳಿಗೆ ಹವಿಸ್ಸನ್ನು ವಹಿಸುವವನಾಗಿ ಸುತ್ತಲೂ ಕರೆತರಲ್ಪಡುತ್ತಾನೆ.

### English Translation

Agni, the invoker (of the gods), like a horse (that bears a burden), is brought to our sacrifice; a deity adorable amongst deities.

---

### ಸಂಹಿತಾಪಾಠಃ

ಪರಿ ತ್ರಿವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರಿವ ।

ಆ ದೇವೇಷು ಪ್ರಯೋ ದಧತ್ ॥ ೨ ॥

### ಪದಪಾಠಃ

ಪರಿ । ತ್ರಿಽವಿಷ್ಟಿ । ಅಧ್ವರಂ । ಯಾತಿ । ಅಗ್ನಿಃ । ರಥೀಃ ಇವ ।

ಆ । ದೇವೇಷು । ಪ್ರಯಃ । ದಧತ್ ॥ ೨ ॥

### ಸಾಯಣಭಾಷ್ಯಂ

ದೇವೇಷು ದ್ಯೋತಮಾನೇಷ್ವಿಂದ್ರಾದಿಷು । ಪ್ರಯ ಇತ್ಯನ್ನನಾಮೇದಂ । ಪ್ರಯೋ ಯಜಮಾನೈರ್ದತ್ತಂ ಹವೀರೂಪಮನ್ನಮಾ ದಧತ್ ಆ ಸಮಂತಾದ್ಧಾರಯನ್ನಗ್ನಿರಂಗನಾದಿಗುಣವಿಶಿಷ್ಟೋಽಗ್ನಿಸ್ತ್ರಿವಿಷ್ಟಿ ತ್ರಿವಾರಂ । ಸವನತ್ರಯೇಽಪೀತ್ಯರ್ಥಃ । ಪರಿ ಪರಿತಃ ಸಮಂತಾದಧ್ವರಂ ಯಜಮಾನೈಃ ಕೃತಂ ಯಾಗಂ ಯಾತಿ । ಗಚ್ಛತಿ । ಪರಿಗಮನೇ ದೃಷ್ಟಾಂತಃ । ರಥೀರಿವ । ರಥವಾನ್ಪುರುಷೋ ಯಥಾ ಶೀಘ್ರಂ ಯಾತಿ ತದ್ವತ್ । ತಥಾ ಚ ಬ್ರಾಹ್ಮಣಂ । ಪರಿ ತ್ರಿವಿಷ್ಟ್ಯಧ್ವರಂ ಯಾತ್ಯಗ್ನೀ ರಥೀರಿವೇತ್ಯೇಷ ಹಿ ರಥೀರಿವಾಧ್ವರಂ ಪರ್ಯೇತಿ । ಐ. ಬ್ರಾ. ೨-೫ ಇತಿ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ದೇವೇಷು—ಇಂದ್ರಾದಿ ದೇವತೆಗಳಲ್ಲಿ (ಅವರಿಗಾಗಿ) । ಪ್ರಯಃ—ಹವಿಸ್ಸುಗಳನ್ನು । ಆ ದಧತ್—ಪೂರ್ಣವಾಗಿ ವಹಿಸಿಕೊಂಡು । ಅಗ್ನಿಃ—ಅಗ್ನಿಯು । ತ್ರಿವಿಷ್ಟಿ—ಯಜ್ಞದ ಮೂರು ಕಾಲಗಳಲ್ಲೂ । ಪರಿ—ಸುತ್ತಲೂ । ಅಧ್ವರಂ—ಯಾಗವನ್ನು । ರಥೀಃ ಇವ—ರಥಿಕನು ವೇಗವಾಗಿ ಬರುವಂತೆ । ಯಾತಿ—ಸಮೀಪಿಸುತ್ತಾನೆ.

ಭಾವಾರ್ಥ

ಇಂದ್ರಾದಿದೇವತೆಗಳಿಗೆ ಹವಿಸ್ಸುಗಳನ್ನು ವಹಿಸಿರುವ ಅಗ್ನಿಯು ಯಜ್ಞದ ಮೂರು ಕಾಲಗಳಲ್ಲೂ ಸಹ ರಥಿಕನು ವೇಗವಾಗಿ ಬರುವಂತೆ ವೇಗವಾಗಿ ಬಂದು ಯಾಗದಲ್ಲಿ ಸಿದ್ಧನಾಗಿರುತ್ತಾನೆ.

English Translation

Agni, thrice (a day), comes to our sacrifice like a charioteer, bearing the sacrificial food to the gods.

---

ಸಂಹಿತಾಪಾಠಃ

ಪರಿ ವಾಜಪತಿಃ ಕವಿರಗ್ನಿರ್ಹವ್ಯಾನ್ಯಕ್ರಮೀತ್ ।
ದಧದ್ರತ್ನಾನಿ ದಾಶುಷೇ ॥ ೩ ॥

ಪದಪಾಠಃ

ಪರಿ । ವಾಜಽಪತಿಃ । ಕವಿಃ । ಅಗ್ನಿಃ । ಹವ್ಯಾನಿ । ಅಕ್ರಮೀತ್ ।
ದಧತ್ । ರತ್ನಾನಿ । ದಾಶುಷೇ ॥ ೩ ॥

ಸಾಯಣಭಾಷ್ಯಂ

ವಾಜಪತಿರ್ವಾಜಾನಾಮನ್ನಾನಾಂ ಪತಿಃ ಪಾಲಕಃ । ಪರಿ ವಾಜಪತಿಃ ಕವಿರಿತ್ಯೇಷ ಹಿ ವಾಜಾನಾಂ ಪತಿಃ । ಐ. ಬ್ರಾ. ೨-೫ । ಇತಿ ಬ್ರಾಹ್ಮಣಂ । ಕವಿಃ ಕ್ರಾಂತದರ್ಶೀ ಮೇಧಾವೀ ವಾ ದಾಶುಷೇ ಹವಿರ್ದತ್ತವತೇ ಯಜಮಾನಾಯ ರತ್ನಾನಿ ರಮಣೀಯಾನಿ ಧನಾನಿ ದಧತ್ ಪ್ರಯಚ್ಛನ್ನಗ್ನಿರ್ಹವ್ಯಾನಿ ಹವೀಂಷಿ ಪರ್ಯಕ್ರಮೀತ್ । ಪರಿತಃ ಕ್ರಾಮತಿ । ವ್ಯಾಪ್ನೋತಿ ॥

ಪ್ರತಿಪದಾರ್ಥ

ವಾಜಪತಿಃ—ಅನ್ನಪಾಲಕನೂ । ಕವಿಃ—ಕ್ರಾಂತದರ್ಶಿಯೂ । ದಾಶುಷೇ—ಹವಿಸ್ಸನ್ನು ಅರ್ಪಿಸುವವನಿಗೆ । ರತ್ನಾನಿ—ರಮಣೀಯಗಳಾದ ಧನಗಳನ್ನು । ದಧತ್—ಕೊಡುವವನೂ ಆದ । ಅಗ್ನಿಃ—ಅಗ್ನಿಯು । ಹವ್ಯಾನಿ—ಹವಿಸ್ಸುಗಳನ್ನು । ಪರಿ ಅಕ್ರಮೀತ್—ಸುತ್ತುವರೆದು ವ್ಯಾಪಿಸಿ ನಿಂತಿದ್ದಾನೆ.

CC-0. Jangamwadi Math Collection. Digitized by eGangotri

### ಭಾವಾರ್ಥ

ಅನ್ನಗಳಿಗೆ ಪ್ರಭುವೂ, ಪಾಲಕನೂ, ಮೇಧಾವಿಯೂ, ಹವಿಸ್ಸನ್ನು ಅರ್ಪಿಸುವ ಯಜಮಾನನಿಗೆ ರಮಣೀಯ ಗಳಾದ ಧನಗಳನ್ನು ಕೊಡುವವನೂ ಆದ ಅಗ್ನಿಯು ಹವಿಸ್ಸುಗಳನ್ನು ಸುತ್ತುವರೆದು ವ್ಯಾಪಿಸಿ ನಿಂತಿದ್ದಾನೆ.

### English Translation

The sage, Agni, the lord of food, has encompassed the oblation, giving precious things to the donor.

---

### ಸಂಹಿತಾಪಾಠಃ

ಅಯಂ ಯಃ ಸೃಂಜಯೇ ಪುರೋ ದೈವವಾತೇ ಸಮಿಧ್ಯತೇ ।
ದ್ಯುಮಾँ ಅಮಿತ್ರದಂಭನಃ ॥ ೪ ॥

### ಪದಪಾಠಃ

ಅಯಂ । ಯಃ । ಸೃಂಜಯೇ । ಪುರಃ । ದೈವऽವಾತೇ । ಸಂऽಇಧ್ಯತೇ ।
ದ್ಯುऽಮಾನ್ । ಅಮಿತ್ರऽದಂಭನಃ ॥ ೪ ॥

### ಸಾಯಣಭಾಷ್ಯಂ

ಯಃ ಪ್ರಸಿದ್ಧೋಽಯಂ ಪ್ರತ್ಯಕ್ಷೇಣೋಪಲಭ್ಯಮಾನೋಽಗ್ನಿರ್ದೈವವಾತೇ ದೇವವಾತಸ್ಯ ಪುತ್ರೇ ಸೃಂಜಯೇ । ಸೃಂಜಯೋ ನಾಮ ಕಶ್ಚಿತ್ಸೋಮಯಾಜೀ । ತಸ್ಮಿನ್ನಿಮಿತ್ತಭೂತೇ ಸತಿ ತದ್ಯಾಗಾರ್ಥಮಿತ್ಯರ್ಥಃ । ಸೃಂಜಯಸ್ಯ ಯಷ್ಟೃತ್ವಂ ತೈತ್ತಿರೀಯಾ ಆಮನಂತಿ । ವಾಸಿಷ್ಠೋ ಹ ಸಾತ್ಯಹವ್ಯೋ ದೇವಭಾಗಂ ಪಪ್ರಚ್ಛ ಯತ್ಸೃಂಜಯಾನ್ಬಹುಯಾಜಿನೋಽಯೀಯಜಃ । ತೈ. ಸ. ೬-೬-೨-೨। ಇತಿ । ಪುರಃ ಪೂರ್ವಸ್ಯಾಂ ದಿಶಿ ಸ್ಥಿತಾಯಾಮುತ್ತರವೇದ್ಯಾಂ ಸಮಿಧ್ಯತೇ । ಸಮ್ಯಗ್ದೀಪ್ಯತೇ । ಅಮಿತ್ರದಂಭನಃ ಶತ್ರೂಣಾಂ ಹಿಂಸಕಃ ಸೋಽಗ್ನಿರ್ದ್ಯುಮಾನ್ ದೀಪ್ತಿಮಾನ್ ಭವತೀತಿ ಶೇಷಃ ॥

### ಪ್ರತಿಪದಾರ್ಥ

ಯಃ—ಪ್ರಸಿದ್ಧನಾದವನೂ । ಅಯಂ—ಪ್ರತ್ಯಕ್ಷನಾಗಿರುವವನೂ ಆದ ಅಗ್ನಿಯು । ದೈವವಾತೇ—ದೇವವಾತನ ಪುತ್ರನಾದ । ಸೃಂಜಯೇ—ಸೃಂಜಯನೆಂಬುವವನ ಯಜ್ಞಾರ್ಥವಾಗಿ ಹಿಂದೆ ಪ್ರತ್ಯಕ್ಷನಾದಂತೆ । ಪುರಃ—ಮುಂಭಾಗದ ಉತ್ತರವೇದಿಯಲ್ಲಿ । ಸಮಿಧ್ಯತೇ—ಪ್ರಜ್ವಲಿತನಾಗುತ್ತಾನೆ । ಅಮಿತ್ರದಂಭನಃ—ಶತ್ರುನಾಶಕನಾದ ಅದೇ ಅಗ್ನಿಯು । ದ್ಯುಮಾನ್—ಕಾಂತಿಯುಕ್ತನಾಗಿ ಬೆಳಗುತ್ತಾನೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಪ್ರಸಿದ್ಧನಾದವನೂ, ಪ್ರತ್ಯಕ್ಷನಾಗಿರುವವನೂ ಆದ ಅಗ್ನಿಯು ದೇವವಾತನ ಪುತ್ರನಾದ ಸೃಂಜಯನೆಂಬುವನ ಯಜ್ಞಾರ್ಥವಾಗಿ ಹಿಂದೆ ಪ್ರತ್ಯಕ್ಷನಾದಂತೆ ಮುಂಭಾಗದ ಉತ್ತರವೇದಿಯಲ್ಲಿ ಪ್ರಜ್ವಲಿತನಾಗುತ್ತಾನೆ. ಮತ್ತು ಶತ್ರುನಾಶಕನಾದ ಅದೇ ಅಗ್ನಿಯು ಕಾಂತಿಯುಕ್ತನಾಗಿ ಬೆಳಗುತ್ತಾನೆ.

English Translation

Radiant in this Agni, the subduer of foes, who is kindled on the (altar) of the east as (he was kindled) for Srinjaya, the son of Devavata.

ವಿಶೇಷವಿಷಯಗಳು

ಸೃಂಜಯೇ—ಭಾಷ್ಯಕಾರರು—ಸೃಂಜಯ ಎಂಬುವನು ಒಬ್ಬ ಸೋಮಯಾಜಿಯು. ಇವನು ದೇವವಾತನ ಮಗನು. ಇವನು ಮಾಡಿದ ಯಜ್ಞದಲ್ಲಿ ಅಗ್ನಿಯು ಚೆನ್ನಾಗಿ ಪ್ರಜ್ವಲಿಸಿದನು ಎಂಬ ವಿಷಯವನ್ನು ಹೇಳಿದಾರೆ. ಈ ಸೃಂಜಯನ ಹೆಸರು ಈ ಋಕ್ಕಿನಲ್ಲಿಯೂ ಮತ್ತು—

ಸ ಸೃಂಜಯಾಯ ತುರ್ವಶಂ ಪರಾದಾದ್ವೃಚೀವತೋ ದೈವವಾತಾಯ ಶಿಕ್ಷನ್ ।
(ಋ. ಸಂ. ೬-೨೭-೭)

ಎಂಬ ಋಕ್ಕಿನಲ್ಲಿಯೂ ಉಕ್ತವಾಗಿರುವುದು. ಇಲ್ಲಿ ಇಂದ್ರನು ದೇವವಾತನ ಪುತ್ರನಾದ ಸೃಂಜಯ ಎಂಬ ರಾಜನಿಗೆ ತುರ್ವಶ ಎಂಬ ರಾಜನನ್ನು ವಶಮಾಡಿದನು ಎಂದು ಹೇಳಿದೆ. ಸೃಂಜಯನು ಆ ಹೆಸರಿನ (ಸೃಂಜಯರೆಂಬ) ಜನಾಂಗದ ರಾಜನೆಂದು ತಿಳಿಯಬರುವುದು. ಈ ಸೃಂಜಯರು ಯುದ್ಧದಲ್ಲಿ ಪರಾಭವ ಹೊಂದಿದ ವಿಷಯವು ಯಜುರ್ವೇದದಲ್ಲಿ ಉಲ್ಲೇಖಿತವಾಗಿದೆ—

ವಾಸಿಷ್ಠೋ ಹ ಸಾತ್ಯಹವ್ಯೋ ದೇವಭಾಗಂ ಪಪ್ರಚ್ಛ ಯತ್ಸಂಜಯಾನ್ಬಹುಯಾಜಿನೋಽಯೀ-
ಯಜೋ ಯಜ್ಞೇ ಯಜ್ಞಂ ಪ್ರತ್ಯತಿಷ್ಠಿಪಾ ಯಜ್ಞಪತಾವಿತಿ ಸಹೋವಾಚ ಯಜ್ಞಪತಾವಿತಿ
ಸತ್ಯಾದ್ವೈ ಸಂಜಯಾಃ ಪರಾಬಭೂವುರಿತಿ ಹೋವಾಚ ॥
(ತೈ. ಸಂ. ೬-೬-೨-೨, ೩)

ಈ ಸೃಂಜಯರ ವಿಷಯವನ್ನು ೬ನೇ ಮಂಡಲದಲ್ಲಿ ವಿವರಿಸಲಾಗುವುದು. ಇದೇ ವಂಶದ ಸೋಮಕ ಎಂಬ ರಾಜನ ವಿಷಯವು ಇದೇ ಸೂಕ್ತದ ೭ನೇ ಋಕ್ಕಿನಲ್ಲಿ ವಿವರಿಸಿರುವುದನ್ನು ನೋಡಿ.

---

ಸಂಹಿತಾಪಾಠಃ

ಅಸ್ಯ ಘಾ ವೀರ ಈವತೋಽಗ್ನೇರೀಶೀತ ಮರ್ತ್ಯಃ ।
ತಿಗ್ಮಜಂಭಸ್ಯ ಮೀಳ್ಹುಷಃ ॥ ೫ ॥

CC-0. Jangamwadi Math Collection. Digitized by eGangotri

ಪದಪಾಠಃ

ಅಸ್ಯ । ಘ । ವೀರಃ । ಈವತಃ । ಅಗ್ನೇಃ । ಈಶೀತ । ಮರ್ತ್ಯಃ ।

ತಿಗ್ಮಽಜಂಭಸ್ಯ । ಮೀಳ್ಹುಷಃ ॥ ೫ ॥

ಸಾಯಣಭಾಷ್ಯಂ

ವೀರಃ ಸ್ತುತೌ ವಿಕ್ರಾಂತೋ ಮರ್ತ್ಯೋ ಮರಣಧರ್ಮಾ ಯಜಮಾನಸ್ತಿಗ್ಮಜಂಭಸ್ಯ ತೀಕ್ಷ್ಣ-ತೇಜಸೋ ಮೀಳ್ಹುಷೋಽಭಿಲಷಿತಫಲಾನಾಂ ಸೇಕ್ತುರೀವತೋ ಗಮನವತೋಽಸ್ಯಾಗ್ನೇರೀಶೀತ । ಈಶ್ವರೋ ಭವೇತ್ । ಘೇತಿ ಪಾದಪೂರಣಃ । ಏತೇನ ಯಜಮಾನ ಆತ್ಮಾಭೀಪ್ಸ್ಟಫಲಂ ಕಾರಯಿತುಂ ಸಮರ್ಥೋ ಭವತೀತ್ಯರ್ಥಃ ॥

ಪ್ರತಿಪದಾರ್ಥ

ವೀರಃ—ಸ್ತುತಿಯಲ್ಲಿ ಶಕ್ತಿಯನ್ನು ಹೊಂದಿರುವವನೂ । ಮರ್ತ್ಯಃ—ಮಾನವನೂ ಆದ ಯಜಮಾನನು । ತಿಗ್ಮಜಂಭಸ್ಯ—ತೀಕ್ಷ್ಣವಾದ ತೇಜಸ್ಸುಳ್ಳವನೂ । ಮೀಳ್ಹುಷಃ—ಅಭಿಮತವಾದ ಫಲದಾಯಕನೂ । ಈವತಃ—ಚಲನಾತ್ಮಕನೂ ಆದ । ಅಸ್ಯ ಅಗ್ನೇಃ—ಇದೇ ಅಗ್ನಿಯ । ಈಶೀತ—ಯಜಮಾನನಾಗಿರಲಿ.

ಭಾವಾರ್ಥ

ಸ್ತುತಿಯಲ್ಲಿ ಅಸಾಧಾರಣವಾದ ಸಾಮರ್ಥ್ಯವನ್ನು ಹೊಂದಿರುವವನೂ, ಮಾನವನೂ ಆದ ಯಜಮಾನನು, ತೀಕ್ಷ್ಣವಾದ ತೇಜಸ್ಸುಳ್ಳವನೂ, ಅಭಿಮತವಾದ ಫಲದಾಯಕನೂ, ಚಲನಾತ್ಮನೂ ಆದ ಇದೇ ಅಗ್ನಿಯ ಯಜಮಾನನಾಗಿರಲಿ.

English Translation

May the mortal who is strenuous (in worship) acquire authority over this Agni, the sharp-rayed, the showerer (of benefits).

---

ಸಂಹಿತಾಪಾಠಃ

ತಮರ್ವಂತಂ ನ ಸಾನಸಿಮರುಷಂ ನ ದಿವಃ ಶಿಶುಂ ।

ಮರ್ಮೃಜ್ಯಂತೇ ದಿವೇದಿವೇ ॥ ೬ ॥

CC-0. Jangamwadi Math Collection. Digitized by eGangotri

ಪದಪಾಠಃ

ತಂ । ಅರ್ವಂತಂ । ನ । ಸಾನಸಿಂ । ಅರುಷಂ । ನ । ದಿವಃ । ಶಿಶುಂ ।

ಮರ್ಮೃಜ್ಯಂತೇ । ದಿವೇಽದಿವೇ ॥ ೬ ॥

ಸಾಯಣಭಾಷ್ಯಂ

ಯಜಮಾನಾ ಅರ್ವಂತಂ ನ ಶೀಘ್ರಗಾಮಿನಮಶ್ವಮಿವ ಸಾನಸಿಂ ಸಂಭಜನೀಯಂ ದಿವಃ ಶಿಶುಂ ನ ದ್ಯುಲೋಕಸ್ಯ ಪುತ್ರಭೂತಂ ಸೂರ್ಯಮಿವಾರುಷಮಾರೋಚಮಾನಂ ತಮಗ್ನಿಂ ದಿವೇ ದಿವೇ ಪ್ರತಿದಿನಂ ಮರ್ಮೃಜ್ಯಂತೇ । ಭೃಶಂ ಪರಿಚರಣಂ ಕುರ್ವಂತಿ ॥

ಪ್ರತಿಪದಾರ್ಥ

ಅರ್ವಂತಂ ನ—ಶೀಘ್ರಗಾಮಿಯಾದ ಅಶ್ವದಂತಿರುವವನೂ । ಸಾನಸಿಂ—ಪೂಜ್ಯನೂ । ದಿವಃ—ಅಂತರಿಕ್ಷದ । ಶಿಶುಂ ನ—ಪುತ್ರನಾದ ಸೂರ್ಯನಂತೆ । ಅರುಷಂ—ಆಕರ್ಷಕವಾದ ವರ್ಣವುಳ್ಳವನೂ ಆದ । ತಂ—ಅಗ್ನಿಯನ್ನು । ದಿವೇ ದಿವೇ—ಪ್ರತಿದಿನವೂ । ಮರ್ಮೃಜ್ಯಂತೇ—(ಋತ್ವಿಗಾದಿಗಳು) ಅತಿಶಯವಾಗಿ ಉಪಚರಿಸುತ್ತಾರೆ.

ಭಾವಾರ್ಥ

ಶೀಘ್ರಗಾಮಿಯಾದ ಅಶ್ವದಂತಿರುವವನೂ, ಪೂಜ್ಯನೂ, ಅಂತರಿಕ್ಷದ ಪುತ್ರನಾದ ಸೂರ್ಯನಂತೆ ಆಕರ್ಷಕವಾದ ವರ್ಣವುಳ್ಳವನೂ, ಆದ ಅಗ್ನಿಯನ್ನು ಪ್ರತಿದಿನವೂ ಋತ್ವಿಗಾದಿಗಳು ಅತಿಶಯವಾಗಿ ಉಪಚರಿಸುತ್ತಾರೆ.

English Translation

They diligently worship him daily who is like a horse (to convey oblations), who is liberal and resplendent as the son of heaven, (the sun).

---

ಸಂಹಿತಾಪಾಠಃ

ಬೋಧದ್ಯನ್ಮಾ ಹರಿಭ್ಯಾಂ ಕುಮಾರಃ ಸಾಹದೇವ್ಯಃ ।

ಅಚ್ಛಾ ನ ಹೂತ ಉದರಂ ॥ ೭ ॥

ಪದಪಾಠಃ

ಬೋಧತ್ । ಯತ್ । ಮಾ । ಹರಿಽಭ್ಯಾಂ । ಕುಮಾರಃ । ಸಾಹಽದೇವ್ಯಃ ।

ಅಚ್ಛ । ನ । ಹೂತಃ । ಉತ್ । ಅರಂ ॥ ೭ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಸಾಹದೇವ್ಯಃ ಸಹದೇವನಾಮ್ನೋ ರಾಜ್ಞಃ ಪುತ್ರಃ ಕುಮಾರಃ ಸೋಮಕಾಭಿಧೋ ರಾಜಾ ಹರಿಭ್ಯಾಮಶ್ವಾಭ್ಯಾಮಶ್ವೌ ದಾತುಂ ಮಾ ಮಾಂ ಯದ್ಯದಾ ಬೋಧತ್ । ಬೋಧಯಾಮಾಸೇಮೌ ತವಾಶ್ವಾವಿತಿ । ತದಾಹಮಚ್ಛಾಭಿಮುಖ್ಯೇನ ಕುಮಾರೇಣ ಹೂತಃ ಸನ್ ನೋದರಂ । ತಾವಶ್ವಾವಲಬ್ಧ್ವಾ ನ ನಿರ್ಗತವಾನಸ್ಮಿ ॥

ಪ್ರತಿಪ್ರಧಾರ್ಥ

ಸಾಹದೇವ್ಯಃ—ಸಹದೇವನೆಂಬ ದೊರೆಯ ಪುತ್ರನೂ । ಕುಮಾರಃ—ಸೋಮಕನೆಂಬ ಹೆಸರುಳ್ಳವನೂ ಆದ ರಾಜಪುತ್ರನು। ಹರಿಭ್ಯಾಂ—ಎರಡು ಅಶ್ವಗಳೊಡನೆ ಕೂಡಿಬಂದು । ಮಾ—ನನ್ನನ್ನು। ಯತ್—ಯಾವಾಗ। ಬೋಧತ್—(ಇವು ನಿನಗೆ ಸೇರಿದವು ಎಂದು) ನಿರ್ದೇಶಿಸಿ ಹೇಳಿದನೋ ಆಗ । ಅಚ್ಛ—ಅವನ ಅಭಿಮುಖವಾಗಿ । ಹೂತಃ—ಕರೆಯಲ್ಪಟ್ಟವನಾಗಿ । ನ ಉತ್ ಅರಂ—ಅವನ್ನು ಪಡೆಯದೆ ಹಿಂತಿರುಗಲಿಲ್ಲ.

ಭಾವಾರ್ಥ

ಸಹದೇವನೆಂಬ ದೊರೆಯ ಪುತ್ರನೂ, ಸೋಮಕನೆಂಬ ಹೆಸರುಳ್ಳವನೂ ಆದ ರಾಜಪುತ್ರನು ಎರಡು ಅಶ್ವಗಳೊಡನೆ ಕೂಡಿಬಂದು ನನ್ನನ್ನು ಕರೆದು "ಇವೆರಡೂ ನಿನ್ನವು" ಎಂದು ಹೇಳಿ ನನ್ನನ್ನು ನಿರ್ದೇಶಿಸಿದಾಗ ನಾನು ಅವನ್ನು ಪಡೆಯದೆ ಹಿಂತಿರುಗಲಿಲ್ಲ.

English Translation

When the prince, the son of Sahadeva, promised (to present) me with two horses, I withdrew not when called before him.

ವಿಶೇಷವಿಷಯಗಳು

ಸಾಹದೇವ್ಯಃ ಕುಮಾರಃ—ಸಹದೇವನೆಂಬುವನ ಪುತ್ರನಾದ ಸೋಮಕನೆಂಬ ರಾಜನು. ಇವನು ಸೃಂಜಯರೆಂಬ ಜನಾಂಗದ ರಾಜನೆಂದು ತಿಳಿಯಬರುವುದು. ಇವನಿಗೆ ಪರ್ವತ, ನಾರದ ಎಂಬಿಬ್ಬರು ಋಷಿಗಳು ಪುರೋಹಿತರಾಗಿದ್ದರೆಂದು ಐತರೇಯಬ್ರಾಹ್ಮಣದಲ್ಲಿ ಹೇಳಿದೆ—

> ಏತಮು ಹೈವ ಪ್ರೋವಾಚ ತುರಃ ಕಾಷವೇಯೋ ಜನಮೇಜಯಾಯ ಪಾರಿಕ್ಷಿತಾಯೈತಮು ಹೈವ ಪ್ರೋಚತುಃ ಪರ್ವತನಾರದೌ ಸಾಋಂಜಯಾಯ ಬಭ್ರವೇ ದೈವಾವೃಧಾಯ ಭೀಮಾಯ ವೈದರ್ಭಾಯ ನಗ್ನಜಿತೇ ಗಾಂಧಾರಾಯೈತಮು ಹೈವ ಪ್ರೋವಾಚಾಗ್ನಿಃ ಸನಶ್ರುತಾಯಾರಿಂದಮಾಯ ಕ್ರತುವಿದೇ ಜಾನಕಾಯ ಏತಮು ಹೈವ ಪ್ರೋವಾಚ ವಸಿಷ್ಠಃ ಸುದಾಸೇ ಪೈಜವನಾಯ ತೇ ಹ ತೇ ಸರ್ವ ಏವ ಮಹಜ್ಜಗ್ಮುರೇತಂ ಭಕ್ಷಂ ಭಕ್ಷಯಿತ್ವಾ ಸರ್ವೇ ಹೈವ ಮಹಾರಾಜಾ ಆಸುರಾದಿತ್ಯ ಇವ ಸ್ಮ ಶ್ರಿಯಾಂ ಪ್ರತಿಷ್ಠಿತಾಸ್ತಪಂತಿ ಸರ್ವಾಭ್ಯೋ ದಿಗ್ಭ್ಯೋ ಬಲಿಮಾವಹಂತಃ ।

(ಐ. ಬ್ರಾ. ೩೫-೩೪)

CC-0. Jangamwadi Math Collection. Digitized by eGangotri

ಯಜ್ಞದಲ್ಲಿ ರಾಜರು ಸೋಮಪಾನಮಾಡುವ ವಿಷಯದಲ್ಲಿ ಕೆಲವು ವಿಶೇಷ ಸಂಗತಿಗಳಿರುವುದನ್ನು (ಪರಂಪರಾಗತವಾಗಿ ಬಂದ ಸಂಪ್ರದಾಯಗಳು) ಹೇಳುವ ಸಂದರ್ಭದಲ್ಲಿ ಕೆಲವು ರಾಜರುಗಳ ಹೆಸರುಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಅವುಗಳಲ್ಲಿ ಸೋಮಕರಾಜನ ಹೆಸರೂ ಅವನ ಪುರೋಹಿತರಾದ ಪರ್ವತನಾರದರ ಹೆಸರೂ ಉಕ್ತವಾಗಿದೆ. ಹೇಗೆಂದರೆ–ಸೋಮಭಕ್ಷದ ವಿಷಯವಾಗಿ ಕವಷ ಎಂಬುವನ ಪುತ್ರನಾದ ತುರ ಎಂಬ ಮಹರ್ಷಿಯು ಪರಿಕ್ಷಿತ್ಪುತ್ರನಾದ ಜನಮೇಜಯನೆಂಬುವನಿಗೆ ಹೇಳಿದನು. ಇದು ಒಂದು ಸಂಪ್ರದಾಯವು; ಈ ಸಂಗತಿಯನ್ನು ಪರ್ವತ ನಾರದರೆಂಬ ಇಬ್ಬರು ಋಷಿಗಳು ಸಹದೇವನ ಪುತ್ರನಾದ ಸೋಮಕನೆಂಬ ರಾಜನಿಗೆ ಹೇಳಿದರು. ಆ ಸೋಮಕನು ಸೃಂಜಯ ವಂಶಸ್ಥನಾದ ಸಹದೇವನೆಂಬ ಇನ್ನೊಬ್ಬನಿಗೂ, ಆ ಸಹದೇವನು ಅದೇ ವಂಶದ ಬಭ್ರುವೆಂಬುವನಿಗೂ, ಬಭ್ರುವು ದೈವಾವೃಧನೆಂಬುವನಿಗೂ, ದೈವಾವೃಧನು ಭೀಮನೆಂಬುವನಿಗೂ, ಭೀಮನು ವೈದರ್ಭನೆಂಬುವನಿಗೂ, ವೈದರ್ಭನು ನಗ್ನಜಿತ್ ಎಂಬುವನಿಗೂ, ನಗ್ನಜಿತ್ ಗಾಂಧಾರನಿಗೂ ಹೇಳಿದನು. ಇದು ಎರಡನೆಯ ಸಂಪ್ರದಾಯವು. ಅದರಂತೆಯೇ ಅಗ್ನಿಯೆಂಬ ಮಹರ್ಷಿಯು ಸನಶ್ರುತನೆಂಬುವನಿಗೂ, ಸನಶ್ರುತನು ಅರಿಂದಮನಿಗೂ, ಅರಿಂದಮನು ಕ್ರತುವಿದನಿಗೂ, ಕ್ರತುವಿದನು ಜಾನಕನಿಗೂ ಹೇಳಿದನು. ಇದು ಮೂರನೆಯ ಸಂಪ್ರದಾಯವು. ಹಾಗೆಯೇ ವಸಿಷ್ಠಮಹರ್ಷಿಯು ಸುದಾಸನಿಗೂ, ಸುದಾಸನು ಪೈಜವನನಿಗೂ ಹೇಳಿದನು. ತುರನೇ ಮೊದಲಾಗಿ ಪೈಜವನನ ವರೆಗಿರುವ ಪುರುಷರೆಲ್ಲರೂ ಈ ಸಂಪ್ರದಾಯವನ್ನನುಸರಿಸಿ ಮಹತ್ಪದವಿಯನ್ನು ಪಡೆದರು ಎಂದು ಇಲ್ಲಿ ಹೇಳಿದೆ.

---

ಸಂಹಿತಾಪಾಠಃ

ಉತ ತ್ಯಾ ಯಜತಾ ಹರೀ ಕುಮಾರಾತ್ಸಾಹದೇವ್ಯಾತ್ ।

ಪ್ರಯತಾ ಸದ್ಯ ಆ ದದೇ ॥ ೮ ॥

ಪದಪಾಠಃ

ಉತ । ತ್ಯಾ । ಯಜತಾ । ಹರೀ ಇತಿ । ಕುಮಾರಾತ್ । ಸಾಹಃದೇವ್ಯಾತ್ ।

ಪ್ರಃಯತಾ । ಸದ್ಯಃ । ಆ । ದದೇ ॥ ೮ ॥

ಸಾಯಣಭಾಷ್ಯಂ

ಉತಾಪಿ ಚ ಸಾಹದೇವ್ಯಾತ್ಸಹದೇವಸ್ಯ ಪುತ್ರಾತ್ಕುಮಾರಾತ್ಸೋಮಕಾದ್ರಾಜ್ಞೋ ಯಜತಾ ಪೂಜನೀಯೌ ಪ್ರಯತಾ ಪ್ರಯತೌ ತ್ಯಾ ತ್ಯೌ ತೌ ಪ್ರಸಿದ್ಧೌ ಹರೀ ಅಶ್ವೌ ಸದ್ಯೋ ಯಸ್ಮಿನ್ದಿನೇ ತೇನಾ- ಹೂತಸ್ತಸ್ಮಿನ್ನೇವ ದಿನ ಆ ದದೇ । ಆದತ್ತವಾನಸ್ಮಿ । ಮಂತ್ರದ್ರಷ್ಟಾ ಋಷಿರ್ವಾಮದೇವ ಇತ್ಯೃಗ್ಯಿಯೇನ ಕುಮಾರಮುಕ್ತೇಪ್ಸಯಾಭ್ಯುಪಗಮ್ಯಾಶ್ವಾವೇತಸ್ಮಾಲ್ಲಬ್ಧ್ವಾ ಪ್ರೀತೋಽಭವದಿತ್ಯರ್ಥಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

ಉತ—ಮತ್ತು । ಸಾಹದೇವ್ಯಾತ್—ಸಹದೇವನ ಪುತ್ರನೂ । ಕುಮಾರಾತ್—ಸೋಮಕನೆಂಬುವನೂ ಆದ ರಾಜಪುತ್ರನಿಂದ । ಯಜತಾ—ಪೂಜ್ಯವಾದವೂ । ಪ್ರಯತಾ—ಪಳಗಿಸಲ್ಪಟ್ಟವೂ । ತ್ಯಾ—ಪ್ರಸಿದ್ಧವಾದವೂ ಆದ । ಹರೀ—ಎರಡು ಅಶ್ವಗಳನ್ನು । ಸದ್ಯಃ—ನನ್ನನ್ನು ಬರಮಾಡಿಕೊಂಡ ದಿನವೇ । ಆ ದದೇ—ಸ್ವೀಕರಿಸಿದೆನು.

ಭಾವಾರ್ಥ

ಸಹದೇವಪುತ್ರನೂ ಸೋಮಕನೆಂಬುವನೂ ಆದ ರಾಜಪುತ್ರನಿಂದ ಪೂಜ್ಯವಾದವೂ ಪಳಗಿಸಲ್ಪಟ್ಟವೂ ಪ್ರಸಿದ್ಧವಾದವೂ ಆದ ಎರಡು ಅಶ್ವಗಳನ್ನು, ನನ್ನನ್ನು ಅವನು ಬರಮಾಡಿಕೊಂಡ ದಿನವೇ ಪಡೆದೆನು.

English Translation

But immediately accepted those two excellent and well-trained horses from the prince, the son of Sahadeva.

---

ಸಂಹಿತಾಪಾಠಃ

ಏಷ ವಾಂ ದೇವಾವಶ್ವಿನಾ ಕುಮಾರಃ ಸಾಹದೇವ್ಯಃ ।

ದೀರ್ಘಾಯುರಸ್ತು ಸೋಮಕಃ ॥ ೯ ॥

ಪದಪಾಠಃ

ಏಷಃ । ವಾಂ । ದೇವೌ । ಅಶ್ವಿನಾ । ಕುಮಾರಃ । ಸಾಹಃದೇವ್ಯಃ ।

ದೀರ್ಘಽಆಯುಃ । ಅಸ್ತು । ಸೋಮಕಃ ॥ ೯ ॥

ಸಾಯಣಭಾಷ್ಯಂ

ದೇವೌ ದ್ಯೋತಮಾನೌ ಹೇ ಅಶ್ವಿನೌ ವಾಂ ಯುವಾಂ ತರ್ಪಕಃ ಸಾಹದೇವ್ಯಃ ಸಹದೇವಸ್ಯ ಪುತ್ರಃ ಕುಮಾರಃ ಸೋಮಕಃ ಸೋಮಕಾಭಿಧಾನ ಏಷ ರಾಜಾ ದೀರ್ಘಾಯುರಸ್ತು । ಶತಾಯುಷ್ಕೋ ಭವತು । ಏತಮು ಹೈವ ಪ್ರೋಚತುಃ ಪರ್ವತನಾರದೌ ಸೋಮಕಾಯೇತ್ಯಾದಿನಾ ಸರ್ವೇ ಹೈವ ಮಹಾರಾಜಾ ಆಸುಃ। ಐ. ಬ್ರಾ. ೭-೩೪। ಇತ್ಯನೇನ ಬ್ರಾಹ್ಮಣೇನ ಸೋಮಕಸ್ಯರಾಜತ್ವಂ ಸ್ಪಷ್ಟೀಕೃತಂ॥

ಪ್ರತಿಪದಾರ್ಥ

ದೇವೌ—ಪ್ರಕಾಶಮಾನರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮ್ಮನ್ನು ತೃಪ್ತಿಗೊಳಿಸುವವನೂ । ಸಾಹದೇವ್ಯಃ—ಸಹದೇವಪುತ್ರನೂ । ಕುಮಾರಃ—ರಾಜಪುತ್ರನೂ । ಸೋಮಕಃ—

CC-0. Jangamwadi Math Collection. Digitized by eGangotri

ಸೋಮಕನೆಂಬ ಹೆಸರುಳ್ಳವನೂ ಆದ । ಏಷಃ— ಈ ದೊರೆಯು । ದೀರ್ಘಾಯುಃ—ಪೂರ್ಣಾಯುಸ್ಸುಳ್ಳವನಾಗಿ ಅಸ್ತು—ಆಗಿರಲಿ.

### ಭಾವಾರ್ಥ

ಪ್ರಕಾಶಮಾನರಾದ ಎಲೈ ಅಶ್ವಿನೀದೇವತೆಗಳೇ, ನಿಮ್ಮನ್ನು ತೃಪ್ತಿಗೊಳಿಸುವವನೂ, ಸಹದೇವಪುತ್ರನೂ, ರಾಜಕುಮಾರನೂ, ಸೋಮಕನೆಂಬ ಹೆಸರುಳ್ಳವನೂ ಆದ ಈ ದೊರೆಯು ಪೂರ್ಣಾಯುಸ್ಸುಳ್ಳವನಾಗಿ ಆಗಿರಲಿ.

### English Translation

Divine Ashwins, may this prince, Somaka, the son of Sahadeva, your (worshipper), enjoy long life.

### ವಿಶೇಷವಿಷಯಗಳು

ಸೋಮಕ— ಈ ಸೂಕ್ತದ ೮, ೯, ೧೦ನೆಯ ಋಕ್ಕುಗಳಲ್ಲಿ ಪ್ರಸ್ತಾಪಿಸಿರುವ ಸಹದೇವಪುತ್ರನಾದ ಸೋಮಕನೆಂಬ ರಾಜನ ವಿಷಯವನ್ನು ಈ ಸೂಕ್ತದ ೭ನೆಯ ಋಕ್ಕಿನಲ್ಲಿ ವಿವರಿಸಲಾಗಿದೆ. ಅದನ್ನು ಅಲ್ಲಿ ನೋಡಿ ತಿಳಿಯಬಹುದು.

---

### ಸಂಹಿತಾಪಾಠಃ

ತಂ ಯುವಂ ದೇವಾವಶ್ವಿನಾ ಕುಮಾರಂ ಸಾಹದೇವ್ಯಂ ।
ದೀರ್ಘಾಯುಷಂ ಕೃಣೋತನ ॥ ೧೦ ॥

### ಪದಪಾಠಃ

ತಂ । ಯುವಂ । ದೇವಾ । ಅಶ್ವಿನಾ । ಕುಮಾರಂ । ಸಾಹಽದೇವ್ಯಂ ।
ದೀರ್ಘಃಆಯುಷಂ । ಕೃಣೋತನ ॥ ೧೦ ॥

### ಸಾಯಣಭಾಷ್ಯಂ

ಹೇ ದೇವಾವಶ್ವಿನಾ ದ್ಯೋತಮಾನಾವಶ್ವಿನಾ ಯುವಂ ಯುವಾಂ ಸಾಹದೇವ್ಯಂ ಸಹದೇವಸ್ಯ ಪುತ್ರಂ ಕುಮಾರಂ ಸೋಮಕಾಖ್ಯಂ ರಾಜಾನಂ ದೀರ್ಘಾಯುಷಂ ಶತಾಯುಷ್ಕಂ ಕೃಣೋತನ । ಕುರುತಂ । ಅನೇನ ದ್ವ್ಯೃಚೇನಾಸ್ಯ ಕುಮಾರಸ್ಯ ದೀರ್ಘಮಾಯುರಶ್ವಿನಾವೃಷಿರಯಾಚತೇತ್ಯರ್ಥಃ ॥

### ಪ್ರತಿಪದಾರ್ಥ

ದೇವಾ—ಪ್ರಕಾಶಮಾನರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಯುವಂ—ನೀವು । ತಂ— ಪ್ರಸಿದ್ಧನೂ । ಸಾಹದೇವ್ಯಂ—ಸಹದೇವಪುತ್ರನೂ । ಕುಮಾರಂ—ಸೋಮಕನೆಂಬ ಹೆಸರುಳ್ಳವನೂ ಆದ ರಾಜಪುತ್ರನನ್ನು । ದೀರ್ಘಾಯುಷಂ—ಪೂರ್ಣಾಯುಸ್ಸುಳ್ಳವನನ್ನಾಗಿ । ಕೃಣೋತನ—ಮಾಡಿರಿ.

CC-0. Jangamwadi Math Collection. Digitized by eGangotri

### ಭಾವಾರ್ಥ

ಪ್ರಕಾಶಮಾನರಾದ ಎಲೈ ಅಶ್ವಿನೀದೇವತೆಗಳೇ, ಪ್ರಸಿದ್ಧನೂ, ಸಹದೇವಪುತ್ರನೂ, ಸೋಮಕನೆಂಬ ಹೆಸರುಳ್ಳವನೂ ಆದ ರಾಜಪುತ್ರನನ್ನು ಪೂರ್ಣಾಯುಸ್ಸುಳ್ಳವನನ್ನಾಗಿ ಮಾಡಿರಿ.

### English Translation

Divine Ashvins, do you two make the prince, the son of Sahadeva. long-lived.

———

## ಹದಿನಾರನೆಯ ಸೂಕ್ತವು.

———

### ಸಾಯಣಭಾಷ್ಯಂ

ಆ ಸತ್ಯೋ ಯಾತ್ವಿತ್ಯೇಕವಿಂಶತ್ಯೃಚಂ ಷಷ್ಠಂ ಸೂಕ್ತಂ ತ್ರೈಷ್ಟುಭಮೈಂದ್ರಂ । ಅತ್ರೇಯಮನುಕ್ರಮಣಿಕಾ । ಆ ಸತ್ಯಃ ಸೈಕೈಂದ್ರಮಿತಿ । ತತ್ರೈಂದ್ರಮಿತ್ಯುಕ್ತತ್ವಾದಗ್ನ್ಯಧಿಕಾರೋ ನಿವೃತ್ತ ಇತ್ಯವಗಮ್ಯತೇ॥ ಚತುರ್ವಿಂಶೇಽಹನಿ ಮಾಧ್ಯಂದಿನಸವನೇ ಮೈತ್ರಾವರುಣಶಸ್ತ್ರ ಇದಂ ದ್ವಿತೀಯಮಹೀನಸೂಕ್ತಂ। ತಥಾ ಚ ಸೂತ್ರಿತಂ । ಆ ಸತ್ಯೋ ಯಾತ್ವಿತ್ಯಹೀನಸೂಕ್ತಂ ದ್ವಿತೀಯಂ ಮೈತ್ರಾವರುಣಃ । ಆ. ೭-೪ । ಇತಿ ॥ ಸಮೂಳ್ಹೇ ದಶರಾತ್ರೇ ನವಮೇಽಹನಿ ನಿಷ್ಕೇವಲ್ಯಶಸ್ತ್ರ ಇದಂ ಸೂಕ್ತಂ । ತಥಾ ಚ ಸೂತ್ರಿತಂ । ಆ ಸತ್ಯೋ ಯಾತ್ವಹಂ ಭುವಂ ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ । ಆ. ೮-೭ । ಇತಿ ॥

ಅನುವಾದವು—ಆ ಸತ್ಯೋ ಯಾತು ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು ; ಇಂದ್ರನು ದೇವತೆಯು ; ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ—ಆ ಸತ್ಯಃ ಸೈಕೈಂದ್ರಂ ಎಂದು ಹೇಳಿರುವುದು. ಇಲ್ಲಿ ಐಂದ್ರಂ ಎಂದು ಹೇಳಿರುವುದರಿಂದ ಅಗ್ನಿದೇವತಾಕವಾದ ಸೂಕ್ತಗಳು ಮುಗಿದಿರುವವು ಎಂಬುದು ವ್ಯಕ್ತವಾಗುವುದು. ಯಜ್ಞದ ಇಪ್ಪತ್ತನಾಲ್ಕನೆಯ ದಿನದ ಮಾಧ್ಯಂದಿನ ಸವನಕಾಲದಲ್ಲಿ ಮೈತ್ರಾವರುಣನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಈ ಸೂಕ್ತವನ್ನು ಎರಡನೆಯ ಅಹೀನಸೂಕ್ತವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತ ಸೂತ್ರದ—ಆ ಸತ್ಯೋ ಯಾತ್ವಿತ್ಯಹೀನಸೂಕ್ತಂ ದ್ವಿತೀಯಂ ಮೈತ್ರಾವರುಣಃ ಎಂಬ ಸೂತ್ರದಿಂದ (ಆ. ೭-೪) ವಿವೃತವಾಗಿರುವುದು. ಮತ್ತು ಸಮೂಳ್ಹವೆಂಬ ದಶರಾತ್ರಯಾಗದಲ್ಲಿ ಒಂಭತ್ತನೆಯ ದಿವಸ ನಿಷ್ಕೇವಲ್ಯಶಸ್ತ್ರಮಂತ್ರ ಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ—ಆ ಸತ್ಯೋ ಯಾತ್ವಹಂ ಭುವಂ ತತ್ತ ಇಂದ್ರಿಯಮಿತಿ ನಿಷ್ಕೇವಲ್ಯಂ ಎಂಬ ಸೂತ್ರದಿಂದ (ಆ. ೮-೭) ವಿವೃತವಾಗಿರುವುದು.

CC-0. Jangamwadi Math Collection. Digitized by eGangotri

## ಸೂಕ್ತ—೧೬

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೬
ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೧೭, ೧೮, ೧೯, ೨೦ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧ ॥
ಋಷಿಃ—ವಾಮದೇವಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

———— :o: ————

ಸಂಹಿತಾಪಾಠಃ

ಆ ಸತ್ಯೋ ಯಾತು ಮಘವಾँ ಋಜೀಷೀ ದ್ರವಂತ್ವಸ್ಯ ಹರಯ ಉಪ ನಃ।
ತಸ್ಮಾ ಇದಂಧಃ ಸುಷುಮಾ ಸುದಕ್ಷಮಿಹಾಭಿಪಿತ್ವಂ ಕರತೇ ಗೃಣಾನಃ ॥೧॥

ಪದಪಾಠಃ

ಆ । ಸತ್ಯಃ । ಯಾತು । ಮಘऽವಾನ್ । ಋಜೀಷೀ । ದ್ರವಂತು । ಅಸ್ಯ । ಹರಯಃ । ಉಪ । ನಃ ।
ತಸ್ಮೈ । ಇತ್ । ಅಂಧಃ । ಸುಸುಮ । ಸುऽದಕ್ಷಂ । ಇಹ । ಅಭಿऽಪಿತ್ವಂ । ಕರತೇ । ಗೃಣಾನಃ ॥ ೧ ॥

ಸಾಯಣಭಾಷ್ಯಂ

ಋಜೀಷೀ । ಋಜೀಷಶಬ್ದೇನ ನಿಷ್ಪಿಷ್ಟೋ ವಿಗತಸಾರಃ ಸೋಮೋಽಭಿಧೀಯತೇ । ತದ್ವಾನ್ ಸತ್ಯಃ ಸತ್ಯವಾನ್ಮಘವಾನ್ಧನವಾನಿಂದ್ರೋ ನೋಽಸ್ಮಾಕಮುಪ ಸಮೀಪ ಆ ಯಾತು । ಆಗಚ್ಛತು । ಕಿಂಚ ಅಸ್ಯೇಂದ್ರಸ್ಯ ಹರಯೋಽಶ್ವಾ ನೋಽಸ್ಮಾಕಮುಪ ಸಮೀಪೇ ದ್ರವಂತು । ಆಗಚ್ಛಂತು । ವಯಂ ಯಜಮಾನಾ ಇಹಾಸ್ಮಿನ್ಯಜ್ಞೇ ತಸ್ಮಾ ಇಂದ್ರಾಯ ಸುದಕ್ಷಂ ಶೋಭನಬಲಂ । ಸಾರೋಪೇತಮಿತ್ಯರ್ಥಃ । ಇದಿದಂ ಪ್ರತ್ಯಕ್ಷೇಣೋಪಲಭ್ಯಮಾನಮಂಧೋಽನ್ನರೂಪಂ ಸೋಮಂ ಸುಷುಮ। ಅಭಿಷುತಂ ಕುರ್ಯಾಮ । ಗೃಣಾನೋಽಸ್ಮಾಭಿಃ ಸ್ತೂಯಮಾನ ಇಂದ್ರೋಽಭಿಪಿತ್ವಮಸ್ಮದಭಿಮತಪ್ರಾಪ್ತಿಂ ಕರತೇ ಕರೋತು॥

ಪ್ರತಿಪದಾರ್ಥ

ಋಜೀಷೀ—ಋಜೀಷಾತ್ಮಕವಾದ ಸೋಮವುಳ್ಳವನೂ । ಸತ್ಯಃ—ಸತ್ಯವಂತನೂ । ಮಘವಾನ್—ಧನವಂತನೂ ಆದ ಇಂದ್ರನು । ನಃ—ನಮ್ಮ । ಉಪ—ಸಮೀಪದಲ್ಲಿ । ಆ ಯಾತು—ಬಂದು ಸೇರಲಿ । ಅಸ್ಯ—



CC-0. Jangamwadi Math Collection. Digitized by eGangotri

ಈ ಇಂದ್ರನ । **ಹರಯಃ**—ಅಶ್ವಗಳು । **ದ್ರವಂತು**—ನಮ್ಮ ಸಮೀಪಕ್ಕೆ (ಅವನನ್ನು ಕರೆದುಕೊಂಡು) ಓಡಿಬರಲಿ । **ಇಹ**—ಈ ಯಜ್ಞದಲ್ಲಿ । **ತಸ್ಮೈ**—ಆ ಇಂದ್ರನನ್ನುದ್ದೇಶಿಸಿ । **ಸುದಕ್ಷಂ**—ಶ್ರೇಷ್ಠವಾದ ವೀರ್ಯವುಳ್ಳದ್ದೂ । **ಇತ್**—ಇಲ್ಲಿ ಸಿದ್ಧವಾಗಿರುವುದೂ ಆದ । **ಅಂಧಃ**—ಸೋಮರೂಪವಾದ ಅನ್ನವನ್ನು । **ಸುಷುಮ**—ಹಿಂಡಿ ಸಿದ್ಧಪಡಿಸೋಣ । **ಗೃಣಾನಃ**—ನಮ್ಮಿಂದ ಸ್ತುತನಾದ ಇಂದ್ರನು । **ಅಭಿಪಿತ್ವಂ**—ನಮ್ಮ ಇಷ್ಟಾರ್ಥಪ್ರಾಪ್ತಿಯನ್ನು । **ಕರತೇ**—ಉಂಟುಮಾಡಲಿ.

ಭಾವಾರ್ಥ

ಋಜೀಷಾತ್ಮಕವಾದ ಸೋಮವುಳ್ಳವನೂ, ಸತ್ಯವಂತನೂ, ಧನವಂತನೂ ಆದ ಇಂದ್ರನು ನಮ್ಮ ಸಮೀಪದಲ್ಲಿ ಬಂದು ಸೇರಲಿ. ಈ ಇಂದ್ರನ ಅಶ್ವಗಳು ಅವನನ್ನು ನಮ್ಮ ಸಮೀಪಕ್ಕೆ ಕರೆದುಕೊಂಡು ಬರಲಿ. ಈ ಯಜ್ಞದಲ್ಲಿ ಇಂದ್ರನನ್ನೇ ಉದ್ದೇಶಿಸಿದುದೂ, ಶ್ರೇಷ್ಠವಾದ ವೀರ್ಯವುಳ್ಳದ್ದೂ, ಇಲ್ಲಿ ಸಿದ್ಧವಾಗಿರುವುದೂ ಆದ ಸೋಮರೂಪದ ಅನ್ನವನ್ನು ಹಿಂಡಿ ಸಿದ್ಧಪಡಿಸೋಣ. ನಮ್ಮಿಂದ ಸ್ತುತನಾದ ಇಂದ್ರನು ನಮಗೆ ಇಷ್ಟಾರ್ಥವು ಕೈಗೂಡುವಂತೆ ಮಾಡಲಿ.

English Translation

May the truthful Maghavan, the accepter of the spiritless Soma, come to us; may his horses hasten to us: to him we offer this sacrifice, the very potent beverage: may he grant the fulfilment of our desires.

ವಿಶೇಷವಿಷಯಗಳು

— **ಋಜೀಷೀ—ಋಜೀಷಶಬ್ದೇನ ನಿಷ್ಪಿಷ್ಟೋಽ ವಿಗತಸಾರಃ ಸೋಮೋಽಭಿಧೀಯತೇ । ತದ್ವಾನ್ ಇಂದ್ರಃ ॥** ಋಜೀಷವೆಂದರೆ ಕಲ್ಲುಗಳಿಂದ ಜಜ್ಜಿ ರಸವನ್ನು ತೆಗೆದು ಮಿಕ್ಕ ಸೋಮಲತೆಯ ಸಿಪ್ಪೆಗಳು. ಕಬ್ಬಿನ ರಸವನ್ನು ತೆಗೆದಮೇಲೆ ಉಳಿದಿರುವ ಸಿಪ್ಪೆಯಂತಿರುವುದು. ಯಜ್ಞದಲ್ಲಿ ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನವೆಂಬ ಪ್ರಾತಃಕಾಲ, ಮಧ್ಯಾಹ್ನಕಾಲ, ಸಾಯಂಕಾಲಗಳಲ್ಲಿ ಸೋಮಲತೆಗಳಿಂದ ರಸವನ್ನು ತೆಗೆದು ಸಂಸ್ಕರಿಸುವ ಕರ್ಮಾಂಗಳಿರುವವು. ಇವುಗಳಲ್ಲಿ ಪ್ರಾತಃಸವನ, ಮಾಧ್ಯಂದಿನಸವನಗಳಲ್ಲಿ ಹೊಸದಾಗಿ ತಂದ ಸೋಮಲತೆಗಳನ್ನು ಜಜ್ಜಿ ರಸವನ್ನು ತೆಗೆಯುವರು. ತೃತೀಯಸವನದಲ್ಲಿ ಎಂದರೆ ಸಾಯಂಕಾಲದಲ್ಲಿ ಹೊಸ ಸೋಮಲತೆಗಳನ್ನು ಉಪಯೋಗಿಸುವುದಿಲ್ಲ. ಪ್ರಾತಃಕಾಲ, ಮಧ್ಯಾಹ್ನಕಾಲಗಳಲ್ಲಿ ಹಿಂಡಿ ಉಳಿದಿರುವ ಸಿಪ್ಪೆಗಳನ್ನು ನೀರಿನಲ್ಲಿ ನೆನೆಯಿಸಿ ಮತ್ತೊಂದಾವರ್ತಿ ಚೆನ್ನಾಗಿ ಹಿಂಡಿ ಬರುವ ಅಲ್ಪಸ್ವಲ್ಪ ರಸದೊಂದಿಗೆ, ಹಾಲು, ಮೊಸರು, ಹಿಟ್ಟು ಎಂದು ಮೂರು ವಿಧವಾದ ಆಶಿರದ್ರವ್ಯಗಳನ್ನು ಬೆರಸಿ ಪಾನಮಾಡುವರು. ಪ್ರಕೃತಋಕ್ಕಿನಲ್ಲಿ ತೃತೀಯಸವನಕಾಲದಲ್ಲಿ ಆಶಿರದ್ರವಮಿಶ್ರಿತವಾದ ಸೋಮವನ್ನು ಇಂದ್ರನಿಗೆ ಅರ್ಪಿಸುವುದರಿಂದಲೂ ಆ ಸೋಮರಸವನ್ನು ಋಜೀಷವೆಂಬ ರಸವನ್ನು ತೆಗೆದ ಸೋಮಲತೆಗಳಿಂದ ಹಿಂಡಿ ತೆಗೆಯುವುದರಿಂದಲೂ ಇಂದ್ರನನ್ನು ಋಜೀಷೀ ಎಂಬ ಶಬ್ದದಿಂದ ವರ್ಣಿಸಲಾಗಿದೆ.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅವ ಸ್ಯ ಶೂರಾಧ್ವನೋ ನಾಂತೇಽಸ್ಮಿನ್ನೋ ಅದ್ಯ ಸವನೇ ಮಂದಧ್ಯೈ ।

ಶಂಸಾತ್ಯುಕ್ಥಮುಶನೇವ ವೇಧಾಶ್ಚಿಕಿತುಷೇ ಅಸುರ್ಯಾಯ ಮನ್ಮ ॥ ೨ ॥

ಪದಪಾಠಃ

ಅವ । ಸ್ಯ । ಶೂರ । ಅಧ್ವನಃ । ನ । ಅಂತೇ । ಅಸ್ಮಿನ್ । ನಃ । ಅದ್ಯ । ಸವನೇ । ಮಂದಧ್ಯೈ ।

ಶಂಸಾತಿ । ಉಕ್ಥಂ । ಉಶನಾಃಇವ । ವೇಧಾಃ । ಚಿಕಿತುಷೇ । ಅಸುರ್ಯಾಯ । ಮನ್ಮ ॥ ೨ ॥

ಸಾಯಣಭಾಷ್ಯಂ

ಹೇ ಶೂರ ಶತ್ರೂಣಾಮಭಿಭವಸಮರ್ಥೇಂದ್ರ ಅದ್ಯೇದಾನೀಮಸ್ಮಿನ್ ಸವನೇ ಮಾಧ್ಯಂದಿನಾಖ್ಯೇ ಮಂದಧ್ಯೈ ತ್ವಾಂ ಮಾದಯಿತುಂ ನೋಽಸ್ಮಾನವ ಸ್ಯ । ವಿಮುಂಚ । ತತ್ರ ದೃಷ್ಟಾಂತಃ । ಅಧ್ವನೋ ಗಂತವ್ಯಸ್ಯ ಮಾರ್ಗಸ್ಯಾಂತೇ ಸಮೀಪೇ ನಾಶ್ವಾನ್ಮನುಷ್ಯಾ ಯಥಾ ಮುಂಚಂತಿ ತದ್ವತ್ । ಉಶನೇವ ಕಾವ್ಯ ಇವ ವೇಧಾಃ ಶಂಸಿತಾ ಯಜಮಾನೋ ಹೇ ಇಂದ್ರ ಚಿಕಿತುಷೇ ಸರ್ವಂ ಜಾನತೇಽಸುರ್ಯಾಯಾ- ಸುರಾಣಾಂ ಹಿಂಸಕಾಯ ತುಭ್ಯಂ ಮನ್ಮ ಮನನೀಯಮುಕ್ಥಂ ಶಸ್ತ್ರರೂಪಂ ಸ್ತೋತ್ರಂ ಶಂಸಾತಿ ಶಂಸನಂ ಕರೋತಿ ॥

ಪ್ರತಿಪದಾರ್ಥ

ಶೂರ—ಪರಾಕ್ರಮಿಯಾದ ಎಲೈ ಇಂದ್ರನೇ । ಅದ್ಯ—ಇಂದು । ಅಸ್ಮಿನ್ ಸವನೇ—ಈ ಮಾಧ್ಯಂದಿನಸವನ ಕಾಲದಲ್ಲಿ । ಮಂದಧ್ಯೈ—ನಿನ್ನನ್ನು ತೃಪ್ತಿಗೊಳಿಸಲು । ನಃ—ನಮ್ಮನ್ನು । ಅಧ್ವನಃ—ಸಂಚಾರಸಾಧನವಾದ ಮಾರ್ಗದ । ಅಂತೇ ನ—ಸಮೀಪದಲ್ಲಿ ಅಶ್ವಗಳನ್ನು ಸ್ವತಂತ್ರವಾಗಿ ಮಾನವರು ಬಿಡುವಂತೆ । ಅವ ಸ್ಯ—ಸ್ವತಂತ್ರ ರನ್ನಾಗಿ ಬಿಟ್ಟುಬಿಡು । ಉಶನೇವ—ಉಶನಸ್ಸಿನಂತೆ । ವೇಧಾಃ—(ನಿನ್ನನ್ನು) ಸ್ತುತಿಸುವ ಯಜಮಾನನು । ಚಿಕಿತುಷೇ—ಸರ್ವಜ್ಞನೂ । ಅಸುರ್ಯಾಯ—ಶತ್ರುಹಿಂಸಕನೂ ಆದ ನಿನಗೆ ಅರ್ಪಿಸಲು । ಮನ್ಮ— ಪೂಜ್ಯವಾದ। ಉಕ್ಥಂ—ಶಸ್ತ್ರರೂಪವಾದ ಸ್ತೋತ್ರವನ್ನು । ಶಂಸತಿ—ಪಠಿಸುತ್ತಾನೆ.

ಭಾವಾರ್ಥ

ಪರಾಕ್ರಮಿಯಾದ ಎಲೈ ಇಂದ್ರನೇ, ಇಂದು ಈ ಮಾಧ್ಯಂದಿನಸವನಕಾಲದಲ್ಲಿ ನಿನ್ನನ್ನು ತೃಪ್ತಿಗೊಳಿಸಲು ಸಂಚಾರಸಾಧನವಾದ ಮಾರ್ಗದಲ್ಲಿ ಅಶ್ವವನ್ನು ಬಂಧಿಸದೇ ಸ್ವತಂತ್ರವಾಗಿ ಬಿಡುವಂತೆ ನಮ್ಮನ್ನೂ ಬಂಧಿತರನ್ನಾಗಿ ಮಾಡದೇ ಸ್ವತಂತ್ರರನ್ನಾಗಿ ಬಿಟ್ಟುಬಿಡು. ಉಶನಸ್ ಎಂಬ ಋಷಿಯಂತೆ ಅತಿಶಯವಾಗಿ ನಿನ್ನನ್ನು ಸ್ತುತಿಸುವ ಯಜಮಾನನು ಸರ್ವಜ್ಞನೂ, ಶತ್ರುಹಿಂಸಕನೂ ಆದ ನಿನಗೆ ಅರ್ಪಿಸಲು ಪೂಜ್ಯವಾದುದೂ, ಶಸ್ತ್ರರೂಪವಾದುದೂ ಆದ ಸ್ತೋತ್ರವನ್ನು ಪಠಿಸುತ್ತಾನೆ.

CC-0. Jangamwadi Math Collection. Digitized by eGangotri

## English Translation

Hero, Indra, set us free to-day to give you exhilaration at this sacrifice, as (they let loose a horse) at the end of the road: may the worshipper, like Ushanas, repeat an acceptable prayer to you, the knower (of all things), the destroyer of the Asuras.

---

ಸಂಹಿತಾಪಾಠಃ

ಕವಿರ್ನ ನಿಣ್ಯಂ ವಿದಥಾನಿ ಸಾಧನ್ವೃಷಾ ಯತ್ಸೇಕಂ ವಿಪಿಪಾನೋ ಅರ್ಚಾತ್ ।

ದಿವ ಇತ್ಥಾ ಜೀಜನತ್ಸಪ್ತ ಕಾರೂನಹ್ನಾ ಚಿಚ್ಚಕ್ರುರ್ವಯುನಾ ಗೃಣಂತಃ ॥

ಪದಪಾಠಃ

ಕವಿಃ । ನ । ನಿಣ್ಯಂ । ವಿದಥಾನಿ । ಸಾಧನ್ । ವೃಷಾ । ಯತ್ । ಸೇಕಂ । ವಿಽಪಿಪಾನಃ । ಅರ್ಚಾತ್ ।

ದಿವಃ । ಇತ್ಥಾ । ಜೀಜನತ್ । ಸಪ್ತ । ಕಾರೂನ್ । ಅಹ್ನಾ । ಚಿತ್ । ಚಕ್ರುಃ । ವಯುನಾ । ಗೃಣಂತಃ ॥

ಸಾಯಣಭಾಷ್ಯಂ

ಕವಿರ್ಮೇಧಾವೀ ನಿಣ್ಯಂ ನ । ನಿಣ್ಯಮಿತ್ಯಂತರ್ಹಿತನಾಮೈತತ್ । ಅಂತರ್ಹಿತಂ ಗೂಢಮರ್ಥಮಿವ ವಿದಥಾನಿ ವೇದನೀಯಾನಿ ಕಾರ್ಯಜಾತಾನಿ ಸಾಧನ್ ಸಾಧಯನ್ ವೃಷಾ ಕಾಮಾನಾಂ ವರ್ಷಿತೇಂದ್ರೋ ಯದ್ಯದಾ ಸೇಕಂ ಸೇಚನೀಯಂ ಸೋಮಂ ವಿಪಿಪಾನೋಽತ್ಯರ್ಥಂ ಪಿಬನ್ ಅರ್ಚಾತ್ ವಿಶೇಷೇಣಾರ್ಚತಿ । ಸೋಮಪಾನೇ ಶ್ರದ್ಧಾಂ ಕರೋತೀತ್ಯರ್ಥಃ । ತದಾನೀಂ ದಿವೋಽಮುಷ್ಮಾಲ್ಲೋಕಾದಿತ್ಥಾ ಸತ್ಯಮೇವ ಸಪ್ತ ಸಪ್ತಸಂಖ್ಯಾಕಾನ್ ಕಾರೂನ್ರಶ್ಮೀನ್ ಜೀಜನತ್ । ಅಜೀಜನತ್ । ಜನಯತಿ । ಗೃಣಂತಃ ಸ್ತೂಯಮಾನಾ ರಶ್ಮಯೋ ವಯುನಾ ವಯುನಾನಿ ಮನುಷ್ಯಾಣಾಂ ಜ್ಞಾನಾನ್ಯಹ್ನಾ ಚಿತ್ ದಿವಸೇನಾಪಿ ಚಕ್ರುಃ । ಕೃತವಂತಃ ॥

ಪ್ರತಿಪದಾರ್ಥ

ಕವಿಃ—ಕ್ರಾಂತಪ್ರಜ್ಞನಾದ ಕವಿಯು । ನಿಣ್ಯಂ ನ—ಗೂಢವಾಗಿರುವ ರಹಸ್ಯ ತತ್ತ್ವವನ್ನು ಅರಿಯುವಂತೆ। ವಿದಥಾನಿ—ನೆರವೇರಿಸಬೇಕಾದ ಕರ್ತವ್ಯಗಳನ್ನು । ಸಾಧಯನ್—ಸಾಧಿಸತಕ್ಕವನೂ । ವೃಷಾ—ಇಷ್ಟಾರ್ಥ

CC-0. Jangamwadi Math Collection. Digitized by eGangotri

ಪ್ರದನೂ ಆದ ಇಂದ್ರನು । ಯತ್—ಯಾವಾಗ । ಸೇಕಂ—ಹಿಂಡಿದ ಸೋಮವನ್ನು । ವಿಪಿಪಾನಃ—ಪ್ರಭೂತವಾಗಿ ಕುಡಿಯುತ್ತಾ । ಅರ್ಚಾತ್—ಸೋಮಪಾನದಲ್ಲಿ ಶ್ರದ್ಧೆಯನ್ನು ತೋರಿಸುವನೋ (ಆಗ) । ದಿವಃ—ದ್ಯುಲೋಕದಿಂದ । ಇತ್ಥಾ—ಸತ್ಯನಾಗಿಯೂ । ಸಪ್ತ ಕಾರೂನ್—ಸಪ್ತರಶ್ಮಿಗಳನ್ನು । ಜೀಜನತ್—ಸೃಷ್ಟಿಸುತ್ತಾನೆ । ಗೃಣಂತಃ—ಇಂದ್ರನ ಪ್ರಭಾವವನ್ನು ಪ್ರಶಂಸಿಸುವ ರಶ್ಮಿಗಳು ಅಥವಾ ಪ್ರಶಸ್ಯವಾದ ರಶ್ಮಿಗಳು । ವಯುನಾ—ಮಾನವನ ಜ್ಞಾನಕ್ಕೆ ವಿಷಯಗಳನ್ನು । ಅಹ್ನಾ ಚಿತ್—ಹಗಲಿನಲ್ಲಿ । ಚಕ್ರುಃ—ಉಂಟುಮಾಡುತ್ತವೆ. (ಸಕಲ ವಿಷಯಗಳನ್ನೂ ಮಾನವನ ತಿಳಿವಳಿಕೆಗೆ ತರುತ್ತವೆ).

### ಭಾವಾರ್ಥ

ಕ್ರಾಂತಪ್ರಜ್ಞನಾದ ಕವಿಯು ಗೂಢವಾಗಿರುವ ರಹಸ್ಯತತ್ತ್ವವನ್ನರಿಯುವಂತೆ ನೆರವೇರಿಸಬೇಕಾದ ಕರ್ತವ್ಯಗಳನ್ನು ಸಾಧಿಸತಕ್ಕವನೂ, ಇಷ್ಟಾರ್ಥಪ್ರದನೂ ಆದ ಇಂದ್ರನು ಹಿಂಡಿದ ಸೋಮವನ್ನು ಪ್ರಭೂತವಾಗಿ ಪಾನಮಾಡುತ್ತಾ ಸೋಮಪಾನದಲ್ಲಿ ಅತಿಶಯವಾದ ಶ್ರದ್ಧೆಯನ್ನು ತೋರಿಸಿದಾಗಲೇ, ದ್ಯುಲೋಕದಿಂದ ಸತ್ಯಾತ್ಮಕವಾದ ಸಪ್ತರಶ್ಮಿಗಳನ್ನು ಸೃಷ್ಟಿಸುತ್ತಾನೆ. ಅತಿ ಪ್ರಶಸ್ಯವಾದ ಈ ರಶ್ಮಿಗಳು ಹಗಲಿನಲ್ಲಿ ಸಕಲ ವಿಷಯಗಳನ್ನೂ ಮಾನವನ ಜ್ಞಾನಕ್ಕೆ ಗೋಚರವಾಗುವಂತೆ ಮಾಡುತ್ತವೆ.

### English Translation

Like a sage (knowing) what is hidden, and fulfilling sacred rites, so the showerer (of benefits), quaffing copiously the effused (libation), exults (in the draught), and this generates the seven efficient (rays) from heaven, which, being glorified, have made (manifest) the objects of (human) perception by day,

---

### ಸಂಹಿತಾಪಾಠಃ

ಸ್ವರ್ಯದ್ವೇದಿ ಸುದೃಶೀಕಮರ್ಕೈರ್ಮಹಿ ಜ್ಯೋತೀ ರುರುಚುರ್ಯದ್ಧ ವಸ್ತೋಃ ।

ಅಂಧಾ ತಮಾಂಸಿ ದುಧಿತಾ ವಿಚಕ್ಷೇ ನೃಭ್ಯಶ್ಚಕಾರ ನೃತಮೋ ಅಭಿಷ್ಟೌ ॥

### ಪದಪಾಠಃ

ಸ್ವಃ । ಯತ್ । ವೇದಿ । ಸುಽದೃಶೀಕಂ । ಅರ್ಕೈಃ । ಮಹಿ । ಜ್ಯೋತಿಃ । ರುರುಚುಃ । ಯತ್ । ಹ । ವಸ್ತೋಃ ।

ಅಂಧಾ । ತಮಾಂಸಿ । ದುಧಿತಾ । ವಿಽಚಕ್ಷೇ । ನೃಽಭ್ಯಃ । ಚಕಾರ । ನೃಽತಮಃ । ಅಭಿಷ್ಟೌ ॥ ೪ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಯದ್ಧ ಯದಾ ಖಲು ಮಹಿ ಮಹತ್ಪ್ರಭೂತಂ ಜ್ಯೋತಿಸ್ತೇಜೋರೂಪಂ ಯತ್ಸ್ವರ್ಯೋಃ ದ್ಯುಲೋಕೋಽರ್ಕೈ ರಶ್ಮಿಭಿಃ ಸುದೃಶೀಕಂ ಸುಷ್ಠು ದರ್ಶನೀಯಂ ವೇದಿ । ಅವೇದಿ । ಜ್ಞಾಯತೇ । ತದಾನೀಂ ದೇವಾಸ್ತಸ್ಮಿನ್ ಸ್ವರ್ಗೇ ವಸ್ತೋರ್ನಿವಾಸಾರ್ಥಂ ರುರುಚುಃ । ದೀಪ್ತಿಯುಕ್ತಾ ಬಭೂವುಃ । ನೃತಮೋ ನೇತೃತಮಃ ಸೂರ್ಯೋಽಭಿಷ್ಟಾವಭ್ಯಾಗಮನೇ ನೃಭ್ಯೋ ನ್ಯಣಾಂ ವಿಚಕ್ಷೇ ವಿಶೇಷೇಣ ದರ್ಶನಾಯಾಂಧಾಂಧಕಾರರೂಪಾಣಿ ನಿವಿಡಾನಿ ತಮಾಂಸಿ ದುಧಿತಾ ದುಧಿತಾನಿ ನಾಶಿತಾನಿ ಚಕಾರ । ಕೃತವಾನ್ ॥

ಪ್ರತಿಪದಾರ್ಥ

ಯದ್ಧ—ಯಾವಾಗ । ಮಹಿ—ಪ್ರಭೂತವಾದುದೂ । ಜ್ಯೋತಿಃ—ತೇಜೋರೂಪಾತ್ಮಕವಾದುದೂ ಆದ । ಯತ್ ಸ್ವಃ—ಯಾವ ದ್ಯುಲೋಕವು । ಅರ್ಕೈಃ—ರಶ್ಮಿಗಳಿಂದ । ಸುದೃಶೀಕಂ—ಸುಪ್ರಕಾಶಿತವಾಗಿ । ವೇದಿ—ತಿಳಿಯಲ್ಪಡುವುದೋ (ಆಗ ದೇವತೆಗಳೆಲ್ಲರೂ ಸಹ) । ವಸ್ತೋಃ—ತಮ್ಮ ತಮ್ಮ ದ್ಯುಲೋಕವಾಸಕ್ಕನು ಗುಣವಾಗಿ । ರುರುಚುಃ—ಪ್ರಕಾಶಿತರಾದರು । ನೃತಮಃ—ಸಕಲರಿಗೂ ಮಾರ್ಗದರ್ಶಕನಾದ ಸೂರ್ಯನು । ಅಭಿಷ್ಟೌ—ತನ್ನ ಆಗಮನಕಾಲದಲ್ಲಿ । ನೃಭ್ಯಃ—ಮಾನವರಿಗೆ । ವಿಚಕ್ಷೇ—ಸ್ಪಷ್ಟವಾದ ದರ್ಶನಕ್ಕಾಗಿ । ಅಂಧಾ ತಮಾಂಸಿ—ನಿಬಿಡವಾದ ಅಂಧಕಾರವನ್ನು । ದುಧಿತಾ—ನಿರ್ಮೂಲವಾಗುವಂತೆ । ಚಕಾರ—ಮಾಡಿದನು.

ಭಾವಾರ್ಥ

ಪ್ರಭೂತವಾದ ಆಕಾರವುಳ್ಳದ್ದೂ, ತೇಜೋರೂಪಾತ್ಮಕವಾದುದೂ ಆದ ದ್ಯುಲೋಕವು ಯಾವಾಗ ರಶ್ಮಿಗಳಿಂದ ಸುಪ್ರಕಾಶಿತವಾಗಿ ತಿಳಿಯಲ್ಪಡುವುದೋ ಆಗ ಸ್ವರ್ಗಸ್ಥರಾದ ದೇವತೆಗಳೆಲ್ಲರೂ ಸಹ ತಮ್ಮ ತಮ್ಮ ಸ್ವರ್ಗವಾಸಕ್ಕನುಗುಣವಾಗಿ ಪ್ರಭಾಯುತರಾದರು. ಸಕಲರಿಗೂ ನೇತೃವಾದ ಸೂರ್ಯನು ತನ್ನ ಆಗಮನಕಾಲದಲ್ಲಿ ಮಾನವರಿಗೆ ಸ್ಪಷ್ಟವಾದ ದರ್ಶನಕ್ಕಾಗಿ ನಿಬಿಡವಾದ ಅಂಧಕಾರವನ್ನು ನಿರ್ಮೂಲವಾಗುವಂತೆ ಮಾಡಿದನು.

## English Translation

When the vast luminous heaven manifested by the rays (of light) is displayed, then are (the deities) resplendent according to (their heavenly) abode: the chief of leaders, (Indra), in his approach has scattered the thick glooms so that men may see.

---

ಸಂಹಿತಾಪಾಠಃ

ವವಕ್ಷ ಇಂದ್ರೋ ಅಮಿತಮೃಜೀಷ್ಯುಭೇ ಆ ಪಪ್ರೌ ರೋದಸೀ ಮಹಿತ್ವಾ ।
ಅತಶ್ಚಿದಸ್ಯ ಮಹಿಮಾ ವಿ ರೇಚ್ಯಭಿ ಯೋ ವಿಶ್ವಾ ಭುವನಾ ಬಭೂವ ॥ ೫ ॥

CC-0. Jangamwadi Math Collection. Digitized by eGangotri

### ಪದಪಾಠಃ

ವವಕ್ಷೇ । ಇಂದ್ರಃ । ಅಮಿತಂ । ಋಜೀಷೀ । ಉಭೇ ಇತಿ । ಆ । ಪಪ್ರೌ । ರೋದಸೀ ಇತಿ । ಮಹಿತ್ವಾ ।

ಅತಃ । ಚಿತ್ । ಅಸ್ಯ । ಮಹಿಮಾ । ವಿ । ರೇಚಿ । ಅಭಿ । ಯಃ । ವಿಶ್ವಾ । ಭುವನಾ । ಬಭೂವ ॥ ೫ ॥

### ಸಾಯಣಭಾಷ್ಯಂ

ಋಜೀಷೀ । ಋಜೀಷಶಬ್ದೇನ ನಿಷ್ಪಿಷ್ಟೋ ವಿಗತಸಾರಃ ಸೋಮೋಽಭಿಧೀಯತೇ । ತದ್ವಾನಿಂದ್ರಃ ಪರಮೈಶ್ವರ್ಯಯುಕ್ತೋಽಮಿತಮಿಯತ್ತಾರಹಿತಂ ಮಹಿಮಾನಂ ವವಕ್ಷೇ । ಉವಾಹ । ಕಿಂಚ ಮಹಿತ್ವಾ ಮಹತ್ತ್ವೇನ ಸ್ವೇನ ಮಹಿಮ್ನೋಭೇ ರೋದಸೀ ಉಭೇ ದ್ಯಾವಾಪೃಥಿವ್ಯಾವಾ ಪಪ್ರೌ । ಸಮಂತಾದಪೂರಯತ್ । ಯ ಇಂದ್ರೋ ವಿಶ್ವಾ ಭುವನಾ ಸರ್ವಾಣಿ ಭುವನಾನ್ಯಭಿ ಬಭೂವ । ತಿರಶ್ಚಕಾರ । ಅತಶ್ಚಿದೇಭ್ಯೋಽಪಿ ವಿಶ್ವೇಭ್ಯೋ ಭುವನೇಭ್ಯೋಽಸ್ಯೇಂದ್ರಸ್ಯ ಮಹಿಮಾ ವಿ ರೇಚಿ । ಅತಿರಿರಿಚೇ । ಅಧಿಕೋ ಬಭೂವೇತ್ಯರ್ಥಃ ॥

### ಪ್ರತಿಪದಾರ್ಥ

ಋಜೀಷೀ—ಋಜೀಷಾತ್ಮಕವಾದ ಸೋಮಪಾನವನ್ನು ಮಾಡಿದ । ಇಂದ್ರಃ—ಪ್ರಭುವಾದ ಇಂದ್ರನು । ಅಮಿತಂ—ಅಳತೆಗೆ ಮೀರಿದ ಮಹತ್ತ್ವವನ್ನು । ವವಕ್ಷೇ—ಪಡೆದನು । ಮಹಿತ್ವಾ—ತನ್ನ ಮಾಹಾತ್ಮ್ಯದಿಂದ । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ಆ ಪಪ್ರೌ—ಪೂರ್ಣವಾಗಿ ವ್ಯಾಪಿಸಿದನು । ಯಃ—ಯಾವ ಆದೇ ಇಂದ್ರನು । ವಿಶ್ವಾ ಭುವನಾ—ಸಮಸ್ತವಾದ ಪ್ರಪಂಚಗಳನ್ನೂ । ಅಭಿ ಬಭೂವ—ತನ್ನಧೀನದಲ್ಲಿರಿಸಿ ಕೊಂಡನು । ಅತಶ್ಚಿತ್—ಸಕಲ ಭುವನಗಳಿಗಿಂತಲೂ । ಅಸ್ಯ—ಇಂದ್ರನ । ಮಹಿಮಾ—ಮಹತ್ವವು । ವಿ ರೇಚಿ—ಅಧಿಕವಾಗಿ ಬೆಳೆಯಿತು.

### ಭಾವಾರ್ಥ

ಋಜೀಷಾತ್ಮಕವಾದ ಸೋಮಪಾನವನ್ನು ಮಾಡಿದವನೂ, ಪ್ರಭುವಾದವನೂ ಆದ ಇಂದ್ರನು ಅಳತೆಗೆ ಮೀರಿದ ಮಹತ್ವವನ್ನು ಪಡೆದನು. ತನ್ನ ಮಾಹಾತ್ಮ್ಯದಿಂದ ದ್ಯಾವಾಪೃಥಿವಿಗಳೆರಡನ್ನೂ ಪೂರ್ಣವಾಗಿ ವ್ಯಾಪಿಸಿದನು. ಯಾವ ಆದೇ ಇಂದ್ರನು ಸಮಸ್ತವಾದ ಪ್ರಪಂಚಗಳನ್ನೂ ತನ್ನಧೀನದಲ್ಲಿರಿಸಿಕೊಂಡನು. ಸಕಲ ಭುವನಗಳಿಗಿಂತಲೂ ಇಂದ್ರನ ಮಹತ್ವವು ಅಧಿಕವಾಗಿ ಬೆಳೆಯಿತು.

### English Translation

Indra, the accepter of the stale Soma, sustains infinite greatness, and has filled both heaven and earth by his magnitude : therefore has the vastnes of him who has surpassed all the regions, exceeded (the world).

---

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ವಿಶ್ವಾನಿ ಶಕ್ರೋ ನರ್ಯಾಣಿ ವಿದ್ವಾನಪೋ ರಿರೇಚ ಸಖಿಭಿರ್ನಿಕಾಮೈಃ ।
ಅಶ್ಮಾನಂ ಚಿದ್ಯೇ ಬಿಭಿದುರ್ವಚೋಭಿರ್ವ್ರಜಂ ಗೋಮಂತಮುಶಿಜೋ ವಿ
ವವ್ರುಃ ॥ ೬ ॥

ಪದಪಾಠಃ

ವಿಶ್ವಾನಿ । ಶಕ್ರಃ । ನರ್ಯಾಣಿ । ವಿದ್ವಾನ್ । ಅಪಃ । ರಿರೇಚ । ಸಖಿಽಭಿಃ । ನಿಽಕಾಮೈಃ ।
ಅಶ್ಮಾನಂ । ಚಿತ್ । ಯೇ । ಬಿಭಿದುಃ । ವಚಃಽಭಿಃ । ವ್ರಜಂ । ಗೋಽಮಂತಂ । ಉಶಿಜಃ । ವಿ ।
ವವ್ರುರಿತಿ ವವ್ರುಃ ॥ ೬ ॥

ಸಾಯಣಭಾಷ್ಯಂ

ವಿಶ್ವಾನಿ ಸಮಸ್ತಾನಿ ನರ್ಯಾಣಿ ಮನುಷ್ಯಾಣಾಂ ಹಿತಾನಿ ವೃಷ್ಟ್ಯಾದೀನಿ ಕಾರ್ಯಾಣಿ ವಿದ್ವಾನ್ ಜಾನನ್ ಶಕ್ರಃ ಸಮರ್ಥ ಇಂದ್ರೋ ನಿಕಾಮೈರ್ನಿಕಾಮಯಮಾನೇಭ್ಯಃ ಸಖಿಭಿರ್ಮಿತ್ರಭೂತೇಭ್ಯೋ ಮರುದ್ಭ್ಯಃ ॥ ವ್ಯತ್ಯಯೇನ ಚತುರ್ಥ್ಯರ್ಥೇ ತೃತೀಯಾ ॥ ಅಪೋ ವೃಷ್ಟಿಲಕ್ಷಣಾನ್ಯುದಕಾನಿ ರಿರೇಚ । ರಿಕ್ತೀಚಕಾರ । ಇಂದ್ರಃ ಸಸ್ಯಾದಿಫಲಸಿದ್ಧ್ಯರ್ಥಂ ಮೇಘಸ್ಥಾನ್ಯುದಕಾನಿ ಮರುದ್ಭ್ಯೋ ದತ್ತವಾನಿತ್ಯರ್ಥಃ । ಯದ್ವಾ । ನಿಕಾಮೈರ್ನಿಕಾಮಯಮಾನೈಃ ಸಖಿಭಿರ್ಮರುದ್ಭಿಃ ಸಹಿತಃ ಸನ್ ಅಪೋ ನಭಸಃ ಸಕಾಶಾತ್ । ಆಪ ಇತ್ಯಂತರಿಕ್ಷನಾಮೈತತ್ ॥ ಅತ್ರ ವಿಭಕ್ತಿವ್ಯತ್ಯಯಃ ॥ ರಿರೇಚ । ವ್ಯತಿರಿಕ್ತೋ ಬಭೂವ । ಯೇ ಮರುತೋ ವಚೋಭಿರ್ವಾಗ್ರೂಪೈರ್ಧ್ವನಿಭಿರಶ್ಮಾನಂ ಚಿತ್ ಪರ್ವತಮಪಿ ಮೇಘಂ ವಾ । ಅಶ್ಮೇತಿ ಮೇಘನಾಮೈತತ್ । ಬಿಭಿದುಃ । ಅಭೈತ್ಸುಃ । ಉಶಿಜಃ ಕಾಮಯಮಾನಾಸ್ತೇ ಮರುತೋ ಗೋಮಂತಂ ಗೋಭಿರುಪೇತಂ ವ್ರಜಮಂಗಿರಸಾಂ ಸಂಬಂಧಿ ಗೋಸ್ಥಾನಂ ವಿ ವವ್ರುಃ । ಆಚ್ಛಾದಯಾಮಾಸುಃ ॥

ಪ್ರತಿಪದಾರ್ಥ

ವಿಶ್ವಾನಿ—ಸಮಸ್ತವಾದ । ನರ್ಯಾಣಿ—ಮಾನವರಿಗೆ ಹಿತಕರವಾದ ವೃಷ್ಟಿಸೇಚನಾದಿ ಕಾರ್ಯಗಳನ್ನು । ವಿದ್ವಾನ್—ತಿಳಿದವನೂ । ಶಕ್ರಃ—ಸಮರ್ಥನೂ ಆದ ಇಂದ್ರನು । ನಿಕಾಮೈಃ—ಪ್ರಿಯವಾದ ಮನಸ್ಸುಳ್ಳವರೂ । **ಸಖಿಭಿಃ**—ಸುಹೃತ್ತುಗಳೂ ಆದ ಮರುತ್ತುಗಳಿಗೆ । ಅಪಃ—ವೃಷ್ಟಿರೂಪವಾದ ಉದಕಗಳನ್ನು । ರಿರೇಚ—ಅರ್ಪಿಸಿದನು । **ಯೇ**—ಯಾವ ಮರುತ್ತುಗಳು । ವಚೋಭಿಃ—ವಾಗ್ರೂಪವಾದ ಧ್ವನಿಗಳಿಂದ । ಅಶ್ಮಾನಂ ಚಿತ್—ಪರ್ವತಗಳಂತಿರುವ ಮೇಘಗಳನ್ನು । ಬಿಭಿದುಃ—ಸೀಳಿದರು । ಉಶಿಜಃ—ತಮ್ಮ ಕರ್ತವ್ಯವನ್ನು ನೆರವೇರಿಸಲು ಇಚ್ಛಿಸಿದ ಮರುತ್ತುಗಳು । **ಗೋಮಂತಂ**—ಗೋವುಗಳಿಂದ ಕೂಡಿದ । ವ್ರಜಂ—ಗೋಸ್ಥಾನವನ್ನು । ವಿ ವವ್ರುಃ—ತೆರೆಯುವಂತೆ ಮಾಡಿದರು.

CC-0. Jangamwadi Math Collection. Digitized by eGangotri

ಭಾವಾರ್ಥ

ಮಾನವರಿಗೆ ಹಿತಕರವಾದ ವೃಷ್ಟಿಸೇಚನಾದಿ ಸಮಸ್ತ ಕಾರ್ಯಗಳನ್ನೂ ತಿಳಿದವನೂ ಪ್ರಭುವೂ ಆದ ಇಂದ್ರನು ತನ್ನೊಂದಿಗೆ ಪ್ರಿಯವಾದ ಮನಸ್ಸುಳ್ಳವರೂ, ಸುಹೃತ್ತುಗಳೂ ಆದ ಮರುತ್ತುಗಳಿಗೆ ವೃಷ್ಟಿರೂಪವಾದ ಉದಕಗಳನ್ನು ಅರ್ಪಿಸಿದನು. ಯಾವ ಅದೇ ಮರುತ್ತುಗಳು ವಾಗ್ರೂಪಗಳಾದ ಧ್ವನಿಗಳಿಂದ ಪರ್ವತಗಳಂತಿರುವ ಮೇಘಗಳನ್ನೂ ಸಹ ಸೀಳಿದರು. ತಮ್ಮ ಕರ್ತವ್ಯಗಳನ್ನು ನೆರವೇರಿಸಲು ಇಚ್ಛಿಸಿದ ಮರುತ್ತುಗಳು ಗೋವುಗಳಿಂದ ಕೂಡಿದ ಗೋಸ್ಥಾನವು ಅಂಗಿರಸ್ಸುಗಳಿಗೆ ತೆರೆಯುವಂತೆ ಮಾಡಿದರು.

English Translation

Knowing all things profitable for men, Sakra has, with his willing friends (the Maruts), sent forth the waters, for they, with (loud) shouts, divided the clouds, and, desiring (to fulfil) their office, set open the pasturage of the cows (of the Angirasas).

---

ಸಂಹಿತಾಪಾಠಃ

ಅಪೋ ವೃತ್ರಂ ವವ್ರಿವಾಂಸಂ ಪರಾಹನ್ಪ್ರಾವತ್ತೇ ವಜ್ರಂ ಪೃಥಿವೀ ಸಚೇತಾಃ ।
ಪ್ರಾರ್ಣಾಂಸಿ ಸಮುದ್ರಿಯಾಣ್ಯೈನೋಃ ಪತಿರ್ಭವಞ್ಛವಸಾ ಶೂರ ಧೃಷ್ಣೋ ॥

ಪದಪಾಠಃ

ಅಪಃ । ವೃತ್ರಂ । ವವ್ರಿವಾಂಸಂ । ಪರಾ । ಅಹನ್ । ಪ್ರ । ಆವತ್ । ತೇ । ವಜ್ರಂ । ಪೃಥಿವೀ । ಸಃಚೇತಾಃ ।
ಪ್ರ । ಅರ್ಣಾಂಸಿ । ಸಮುದ್ರಿಯಾಣಿ । ಐನೋಃ । ಪತಿಃ । ಭವನ್ । ಶವಸಾ । ಶೂರ । ಧೃಷ್ಣೋ ಇತಿ ॥

ಸಾಯಣಭಾಷ್ಯಂ

ಹೇ ಇಂದ್ರ ಪ್ರಾವತ್ ರಾಕ್ಷಸಾದಿಭ್ಯಃ ಪ್ರಕರ್ಷೇಣ ಲೋಕಾನ್ ಪಾಲಯಿತೃ ತೇ ತ್ವದೀಯಂ ವಜ್ರಮಪೋ ವೃಷ್ಟಿಲಕ್ಷಣಾನ್ಯುದಕಾನಿ ವವ್ರಿವಾಂಸಮಾವರಕಂ ವೃತ್ರಂ ಮೇಘಂ ಪರಾಹನ್ । ಪ್ರಕರ್ಷೇಣ ಪ್ರೇರಯತಿ ಸ್ಮ । ಪೃಥಿವೀ ಭೂಮಿಃ ಸಚೇತಾಶ್ಚೇತನಾವತೀ । ತ್ವಯಾ ಸಂಗತಾ ಬಭೂವ ।

CC-0. Jangamwadi Math Collection. Digitized by eGangotri

ಧೃಷ್ಣೋ ಧರ್ಷಣಶೀಲ ಹೇ ಶೂರ ವಿಕ್ರಾಂತೇಂದ್ರ ತ್ವಂ ಶವಸಾ ಬಲೇನ ಪತಿರ್ಭವನ್ ಲೋಕಾನಾಂ ಪಾಲಕಃ ಸನ್ ಸಮುದ್ರಿಯಾಣಿ ಸಮುದ್ರಸಂಬಂಧೀನ್ಯರ್ಣಾಂಸಿ ನಭಸಿ ಸ್ಥಿತಾನ್ಯುದಕಾನಿ ಪ್ರೈಣೋಃ । ಪ್ರೇರಕೋಽಭೂಃ ॥

ಪ್ರತಿಪದಾರ್ಥ

ಪ್ರಾವತ್—ರಾಕ್ಷಸಾದಿಗಳ ಹಿಂಸೆಯಿಂದ ರಕ್ಷಿಸುವ ಎಲೈ ಇಂದ್ರನೇ । ತೇ—ನಿನ್ನ । ವಜ್ರಂ—ವಜ್ರವು । ಅಪಃ—ವೃಷ್ಟ್ಯುದಕಗಳನ್ನು । ವವ್ರಿವಾಂಸಂ—ಮುಚ್ಚಿಡತಕ್ಕ । ವೃತ್ರಂ—ಮೇಘವನ್ನು । ಪರಾಹನ್—ಸೀಳುತ್ತದೆ (ಅನಂತರ) । ಪೃಥಿವೀ—ಪೃಥಿವಿಯು । ಸಚೇತಾಃ—ಚೇತನಯುಕ್ತಳಾಗಿ (ನಿನ್ನೊಂದಿಗೆ ಸೇರಿಕೊಳ್ಳುತ್ತಾಳೆ) । ಧೃಷ್ಣೋ—ಶತ್ರುನಾಶಕನೂ । ಶೂರ—ಪರಾಕ್ರಮಿಯೂ ಆದ ಇಂದ್ರನೇ । ಶವಸಾ—ನಿನ್ನ ಬಲದೊಂದಿಗೆ । ಪತಿಃ—ಲೋಕಪಾಲಕನಾಗಿ । ಭವನ್—ಆಗಿರುತ್ತಾ । ಸಮುದ್ರಿಯಾಣಿ—ಅಂತರಿಕ್ಷಸಂಬಂಧವಾದ । ಅರ್ಣಾಂಸಿ—ಉದಕಗಳನ್ನು । ಪ್ರ ಐಣೋಃ—ಸುರಿಯುವಂತೆ ಪ್ರೇರಿಸು.

ಭಾವಾರ್ಥ

ರಾಕ್ಷಸಾದಿಗಳ ಹಿಂಸೆಯನ್ನು ತಪ್ಪಿಸಿ ರಕ್ಷಿಸತಕ್ಕ ಇಂದ್ರನೇ, ವೃಷ್ಟ್ಯುದಕಗಳನ್ನು ಮುಚ್ಚಿಡತಕ್ಕ ಮೇಘವನ್ನು ನಿನ್ನ ವಜ್ರವು ಸೀಳುತ್ತದೆ. ಅನಂತರ ಪೃಥಿವಿಯು ಚೈತನ್ಯಯುಕ್ತಳಾಗಿ ನಿನ್ನೊಂದಿಗೆ ಸೇರಿಕೊಳ್ಳುತ್ತಾಳೆ. ಶತ್ರುನಾಶಕನೂ, ಪರಾಕ್ರಮಿಯೂ ಆದ ಇಂದ್ರನೇ, ನಿನ್ನ ಬಲದೊಂದಿಗೆ ಕೂಡಿಕೊಂಡು ನೀನು ಲೋಕಪಾಲಕನಾಗಿರುತ್ತಾ ಅಂತರಿಕ್ಷಸಂಬಂಧವಾದ ಉದಕಗಳನ್ನು ಸುರಿಯುವಂತೆ ಮಾಡು.

English Translation

Your protecting thunderbolt has slain Vritra, obstructing the (issue of the waters), the conscious earth (co-operating) with (you): valiant hero, preserver (of the regions), send down by your strength the waters of the firmament.

---

ಸಂಹಿತಾಪಾಠಃ

ಅಪೋ ಯದದ್ರಿಂ ಪುರುಹೂತ ದರ್ದರಾವಿರ್ಭುವತ್ಸರಮಾ ಪೂರ್ವ್ಯಂ ತೇ।

ಸ ನೋ ನೇತಾ ವಾಜಮಾ ದರ್ಷಿ ಭೂರಿಂ ಗೋತ್ರಾ ರುಜನ್ನಂಗಿರೋಭಿರ್ಗೃಣಾನಃ ॥ ೮ ॥

CC-0. Jangamwadi Math Collection. Digitized by eGangotri

ಪದಪಾಠಃ

ಅಪಃ । ಯತ್ । ಅದ್ರಿಂ । ಪುರುऽಹೂತ । ದರ್ದಃ । ಆವಿಃ । ಭುವತ್ । ಸರಮಾ । ಪೂರ್ವ್ಯಂ । ತೇ ।

ಸಃ । ನಃ । ನೇತಾ । ವಾಜಂ । ಆ । ದರ್ಷಿ । ಭೂರಿಂ । ಗೋತ್ರಾ । ರುಜನ್ । ಅಂಗಿರಃऽಭಿಃ । ಗೃಣಾನಃ ॥

ಸಾಯಣಭಾಷ್ಯಂ

ಹೇ ಪುರುಹೂತ ಬಹುಭಿರಾಹೂತೇಂದ್ರ ಯದ್ಯದಾಪಃ ಪ್ರತಿ ವೃಷ್ಟಿಲಕ್ಷಣಾನ್ಯುದಕಾನಿ ಲಕ್ಷೀಕೃತ್ಯಾದ್ರಿಂ ಮೇಘಂ ದರ್ದಃ । ವಿದಾರಿತವಾನಸಿ । ಸರಮಾ ದೇವಶುನೀ ಪೂರ್ವ್ಯಂ ಪುರಾ ತೇ ತುಭ್ಯಂ ಪಣಿಭಿರಪಹೃತಂ ಗೋಧನಮಾವಿರ್ಭುವತ್ । ಪ್ರಕಾಶಯಾಮಾಸ । ಅಂಗಿರೋಭಿರ್ಋಷಿಭಿರ್ಗೃಣಾನಃ ಸ್ತೂಯಮಾನಃ ಸನ್ ಗೋತ್ರಾ ಗೋತ್ರಾಣ್ಯಭ್ರಾಣಿ ರುಜನ್ ನೋऽಸ್ಮಾನ್ ಭೂರಿಂ ಪ್ರಭೂತಂ ವಾಜಮನ್ನಂ ನೇತಾ ಪ್ರಾಪಯಿತಾ ಸ ತ್ವಮಾ ದರ್ಷಿ । ಆದರಂ ಕೃತವಾನಸಿ ॥

ಪ್ರತಿಪದಾರ್ಥ

ಪುರುಹೂತ—ಅನೇಕರಿಂದ ಆಹೂತನಾಗತಕ್ಕ ಇಂದ್ರನೇ । ಯತ್—ಯಾವಾಗ । ಅಪಃ—ವೃಷ್ಟ್ಯುದಕದ ಸೇಚನಾರ್ಥವಾಗಿ । ಅದ್ರಿಂ—ಮೇಘವನ್ನು । ದರ್ದಃ—ನೀನು ಸೀಳಿದೆಯೋ (ಆಗ) । ಸರಮಾ—ಸರಮೆಯು । ಪೂರ್ವ್ಯಂ—ನಿನ್ನ ಮುಂದುಗಡೆ ನಿಂತು । ತೇ—ನಿನಗೆ । ಆವಿರ್ಭುವತ್—ಗೋವುಗಳನ್ನು ಪ್ರಕಾಶಪಡಿಸಿದಳು । ಅಂಗಿರೋಭಿಃ—ಅಂಗಿರಾ ಋಷಿಗಳಿಂದ । ಗೃಣಾನಃ—ಸ್ತುತನಾಗತಕ್ಕವನಾಗಿ । ಗೋತ್ರಾ—ಮೇಘಗಳನ್ನು । ರುಜನ್—ಸೀಳುತ್ತಾ । ನಃ—ನಮ್ಮನ್ನು । ಭೂರಿ—ಪ್ರಭೂತವಾದ । ವಾಜಂ—ಅನ್ನದ ಸಮೀಪಕ್ಕೆ । ನೇತಾ—ಸೇರಿಸುವವನಾಗಿರುವ । ಸಃ—ನೀನು । ಆ ದರ್ಷಿ—ನಮ್ಮಲ್ಲಿ ಆದರವನ್ನು ತೋರಿಸಿದ್ದೀಯೆ.

ಭಾವಾರ್ಥ

ಅನೇಕರಿಂದ ಆಹೂತನಾಗತಕ್ಕ ಎಲೈ ಇಂದ್ರನೇ, ನೀನು ವೃಷ್ಟ್ಯುದಕದ ಸೇಚನಾರ್ಥವಾಗಿ ಯಾವಾಗ ಮೇಘವನ್ನು ಸೀಳಿದೆಯೋ ಆಗ ಸರಮೆಯು (ದೇವಶುನಿಯು) ನಿನ್ನ ಮುಂದುಗಡೆ ನಿಂತು ನಿನಗೆ ಗೋವುಗಳನ್ನು ಪ್ರಕಾಶಪಡಿಸಿದಳು. ಅಂಗಿರಾಋಷಿಗಳಿಂದ ಸ್ತುತನಾಗತಕ್ಕವನಾಗಿ ಮೇಘಗಳನ್ನು ಸೀಳುತ್ತಾ ನಮ್ಮನ್ನು ಪ್ರಭೂತವಾದ ಅನ್ನದ ಸಮೀಪಕ್ಕೆ ಸೇರಿಸುವವನಾಗಿರುವ ನೀನು ನಮ್ಮಲ್ಲಿ ಅತ್ಯಾದರವನ್ನು ತೋರಿಸಿದ್ದೀಯೆ.

## English Translation

Invoked of many, when you had divided the cloud for (the escape of) the waters, Sarama appeared before you; and you, the bringer of abundant food, havs shewn us favour, divlding the clouds and glorified by the Angirasas.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಚ್ಛಾ ಕವಿಂ ನೃಮಣೋ ಗಾ ಅಭಿಷ್ಟೌ ಸ್ವರ್ಷಾತಾ ಮಘವನ್ನಾಧಮಾನಂ।
ಊತಿಭಿಸ್ತಮಿಷಣೋ ದ್ಯುಮ್ನಹೂತೌ ನಿ ಮಾಯಾವಾನಬ್ರಹ್ಮಾ ದಸ್ಯು-
ರರ್ತ ॥ ೯ ॥

ಪದಪಾಠಃ

ಅಚ್ಛ । ಕವಿಂ । ನೃಽಮನಃ । ಗಾಃ । ಅಭಿಷ್ಟೌ । ಸ್ವಃಽಸಾತಾ । ಮಘ್ಽವನ್ । ನಾಧಮಾನಂ ।
ಊತಿಽಭಿಃ । ತಂ । ಇಷಣಃ । ದ್ಯುಮ್ನಽಹೂತೌ । ನಿ । ಮಾಯಾಽವಾನ್ । ಅಬ್ರಹ್ಮಾ । ದಸ್ಯುಃ । ಅರ್ತ॥

ಸಾಯಣಭಾಷ್ಯಂ

ಹೇ ಮಘವನ್ಧನವನ್ನಿಂದ್ರ ನೃಮಣಃ । ನೃಭಿರ್ಮನುಷ್ಯೈರ್ಮನ್ಯತ ಇತಿ ನೃಮಣಃ । ತ್ವಂ ಕವಿಂ ಮೇಧಾವಿನಂ ಕುತ್ಸಮಚ್ಛ ಗಾಃ । ಅಭ್ಯಗಾಃ । ಕಿಂಚ ಸ್ವರ್ಷಾತಾ । ಸ್ವರ್ಧನಂ । ತಸ್ಯ ಸಾತೌ ದಾನೇ ನಿಮಿತ್ತೇಽಭಿಷ್ಟೌ ಕವೇರಭಿಗಮೇ ಸತಿ ನಾಧಮಾನಂ ಯುದ್ಧಾರ್ಥಂ ತ್ವಾಂ ಯಾಚಮಾನಂ ಕುತ್ಸಮೂತಿಭಿಃ ಶತ್ರುಕೃತೋಪದ್ರವಪರಿಹಾರರೂಪೈ ರಕ್ಷಣೈರಿಷಣಃ । ಪ್ರೇರಿತವಾನಸಿ । ಮಾಯಾವಾನ್ ಕಪಟವಾನಬ್ರಹ್ಮಾ । ಋತ್ವಿಗ್ಭಿಃ ಕ್ರಿಯಮಾಣಂ ಸರ್ವಂ ಕರ್ಮಜಾತಮನುಜ್ಞಾರೂಪೇಣ ಜಾನನ್ ಋತ್ವಿಗ್ವಿಶೇಷೋ ಬ್ರಹ್ಮಶಬ್ದೇನೋಚ್ಯತೇ । ಸ ನ ವಿದ್ಯತೇ ಯಸ್ಯ ಸೋಽಬ್ರಹ್ಮಾ । ವೇದೋಕ್ತಕರ್ಮಸ್ವಾಸ್ತಿಕ್ಯರಹಿತ ಇತ್ಯರ್ಥಃ । ದಸ್ಯುಃ ಕುತ್ಸಸ್ಯ ಶತ್ರುರ್ದ್ಯುಮ್ನಹೂತೌ ದ್ಯುಮ್ನಂ ಧನಂ ಹೂತಿರಾಹ್ವಾನಂ ಯಸ್ಯಾಂ ಯುಧಿ ತಸ್ಯಾಂ ನ್ಯರ್ತ । ವಿನಷ್ಟೋ ಬಭೂವ । ಇಂದ್ರಃ ಕುತ್ಸೇನಾಹೂತಃ ಸನ್ ತಸ್ಯ ಶತ್ರುಂ ಹತವಾನಿತ್ಯರ್ಥಃ ॥

ಪ್ರತಿಪದಾರ್ಥ

ಮಘವನ್—ಧನವಂತನಾದ ಇಂದ್ರನೇ । ನೃಮಣಃ—ಮಾನವರಿಂದ ಪೂಜಿತನಾದ ನೀನು । ಕವಿಂ—ಮೇಧಾವಿಯಾದ ಕುತ್ಸನ । ಅಚ್ಛ—ಅಭಿಮುಖವಾಗಿ । ಗಾಃ—(ರಕ್ಷಣಾರ್ಥವಾಗಿ) ಹೋದೆ । ಸ್ವರ್ಷಾತಾ—ಧನವನ್ನು ಅವನಿಗೆ ದಾನಮಾಡಲು । ಅಭಿಷ್ಟೌ—ಅವನಲ್ಲಿಗೆ ಹೋದಾಗ । ತಂ ನಾಧಮಾನಂ - ನಿನ್ನನ್ನು (ಯುದ್ಧದಲ್ಲಿ ಸಹಾಯಕ್ಕಾಗಿ) ಪ್ರಾರ್ಥಿಸಿ ಕರೆಯುತ್ತಿದ್ದ ಕುತ್ಸನನ್ನು । ಊತಿಭಿಃ—ರಕ್ಷಣೆಗಳಿಂದ । ಇಷಣಃ—ಹುರಿದುಂಬಿಸಿ ಪ್ರೇರಿಸಿದೆ । ಮಾಯಾವಾನ್—ವಂಚಕನೂ । ಅಬ್ರಹ್ಮಾ—ವೈದಿಕವಾದ ಕರ್ಮರಹಿತನೂ ಆದ । ದಸ್ಯುಃ—(ಕುತ್ಸನ) ಶತ್ರುವು । ದ್ಯುಮ್ನಹೂತೌ—ಧನಾರ್ಥವಾಗಿ ಬೆಳೆದ ಯುದ್ಧದಲ್ಲಿ । ನಿ ಅರ್ತ—ನಷ್ಟನಾದನು.

ಭಾವಾರ್ಥ

ಧನವಂತನಾದ ಇಂದ್ರನೇ, ಮಾನವರಿಂದ ಪೂಜಿತನಾದ ನೀನು ಮೇಧಾವಿಯಾದ ಕುತ್ಸನ ಅಭಿಮುಖವಾಗಿ ಅವನ ರಕ್ಷಣೆಗಾಗಿ ಹೋದೆ. ಅವನಿಗೆ ಧನವನ್ನು ದಾನಮಾಡಲು ಹೋದಾಗ ಯುದ್ಧದಲ್ಲಿ ಸಹಾಯಮಾಡಲು

CC-0. Jangamwadi Math Collection. Digitized by eGangotri

ಪ್ರಾರ್ಥಿಸಿ ನಿನ್ನನ್ನು ಕರೆದ ಕುತ್ಸನನ್ನು ರಕ್ಷಣೆಗಳಿಂದ ಹುರಿದುಂಬಿಸಿ ಪ್ರೇರಿಸಿದೆ. ವಂಚಕನೂ, ವೈದಿಕವಾದ ಕರ್ಮರಹಿತನೂ ಆದ ಶತ್ರುವು ಧನಾರ್ಥವಾಗಿ ಕುತ್ಸನೊಂದಿಗೆ ಯುದ್ಧಮಾಡುತ್ತಿದ್ದಾಗ ನಿನ್ನಿಂದ ಹತನಾದನು.

English Translation

Maghavan, you are honoured by men; you have repaired to the presence of the sage for (the sake of) bestowing (upon him) wealth, and when soliciting (you) in his need (for aid): defending (him) with your protection, the guileful, impious Dasyu has been destroyed in the contest for the spoil.

---

ಸಂಹಿತಾಪಾಠಃ

ಆ ದಸ್ಯುಘ್ನಾ ಮನಸಾ ಯಾಹ್ಯಸ್ತಂ ಭುವತ್ತೇ ಕುತ್ಸಃ ಸಖ್ಯೇ ನಿಕಾಮಃ ।
ಸ್ವೇ ಯೋನೌ ನಿ ಷದತಂ ಸರೂಪಾ ವಿ ವಾಂ ಚಿಕಿತ್ಸದೃತಚಿದ್ಧ ನಾರೀ ॥

ಪದಪಾಠಃ

ಆ । ದಸ್ಯುಽಘ್ನಾ । ಮನಸಾ । ಯಾಹಿ । ಅಸ್ತಂ । ಭುವತ್ । ತೇ । ಕುತ್ಸಃ । ಸಖ್ಯೇ । ನಿಽಕಾಮಃ ।
ಸ್ವೇ । ಯೋನೌ । ನಿ । ಸದತಂ । ಸಽರೂಪಾ । ವಿ । ವಾಂ । ಚಿಕಿತ್ಸತ್ । ಋತಽಚಿತ್ । ಹ । ನಾರೀ ॥

ಸಾಯಣಭಾಷ್ಯಂ

ಅತ್ರ ಕಾಚಿದಾಖ್ಯಾಯಿಕಾ ಶ್ರೂಯತೇ । ಕಥಂ । ರುರುನಾಮಕಃ ಕಶ್ಚಿದ್ರಾಜರ್ಷಿಃ । ತಸ್ಯ ಪುತ್ರಃ ಕುತ್ಸಾಖ್ಯೋ ರಾಜರ್ಷಿರಾಸೀತ್ । ಸ ಚ ಕದಾಚಿಚ್ಛತ್ರುಭಿಃ ಸಹ ಯುಯುತ್ಸುಃ ಸಂಗ್ರಾಮೇ ಸ್ವಯಮಶಕ್ತಃ ಸನ್ ಶತ್ರೂಣಾಂ ಹನನಾರ್ಥಮಿಂದ್ರಸ್ಯಾಹ್ವಾನಂ ಚಕಾರ । ಸ ಚೇಂದ್ರಃ ಕುತ್ಸಸ್ಯ ಗೃಹಮಾಗತ್ಯ ತಸ್ಯ ಶತ್ರೂನ್ ಜಘಾನ । ತದನಂತರಮತಿಪ್ರೀತ್ಯಾ ತಯೋಃ ಸಖ್ಯಮಭವತ್ । ಸಖ್ಯಾನಂತರಮಿಂದ್ರ ಏನಮಪಿ ಸ್ವಕೀಯಂ ಗೃಹಂ ಪ್ರಾಪಯಾಮಾಸ । ತತ್ರ ಶಚೀಂದ್ರಂ ಪ್ರಾಪ್ತುಮಾಗತಾ ಸತೀ ತೌ ಸಮಾನರೂಪೌ ದೃಷ್ಟ್ವಾಯಮಿಂದ್ರೋಽಯಂ ಕುತ್ಸ ಇತಿ ವಿವೇಕಾಭಾವೇನ ಸಂಶಯಂ ಚಕಾರೇತಿ । ಅನಯಾಖ್ಯಾಯಿಕಯಾ ಪ್ರತೀಯಮಾನೋಽರ್ಥೋಽತ್ರ ಪ್ರತಿಪಾದ್ಯತೇ । ಹೇ ಇಂದ್ರ ದಸ್ಯುಘ್ನಾ ದಸ್ಯೂನಾಂ ಶತ್ರೂಣಾಂ ಹಂತ್ರಾ ಮನಸಾ ಯುಕ್ತಸ್ತ್ವಮಸ್ತಂ ಕುತ್ಸಸ್ಯ ಗೃಹಂ । ಅಸ್ತಮಿತಿ ಗೃಹನಾಮೈತತ್ । ಆ ಯಾಹಿ । ಆಗಾಃ ॥ ಲುಙರ್ಥೇ ಲೋಟ್ ॥ ಕುತ್ಸಶ್ಚ ತೇ ತವ ಸಂಬಂಧಿನಿ ಸಖ್ಯೇ ನಿಕಾಮೋ ನಿತರಾಂ ಕಾಮಯಮಾನೋ ಭುವತ್ । ಅಭವತ್ । ತತಸ್ತೌ ಯುವಾಂ ಸ್ವೇ ಯೋನೌ

CC-0. Jangamwadi Math Collection. Digitized by eGangotri

ಸ್ವಕೀಯೇ ಸ್ಥಾನೇ ನಿ ಷದತಂ । ನ್ಯಸೀದತಂ । ಉಪವಿಷ್ಟಾವಭೂತಂ । ಋತಚಿತ್ಸತ್ಯದರ್ಶಿನೀ ನಾರೀಂ-ದ್ರಸ್ಯ ಭಾರ್ಯಾ ಶಚೀ ಸರೂಪಾ ಸಮಾನರೂಪೌ ವಾಂ ಯುವಾಂ ವಿ ಚಿಕಿತ್ಸತ್ । ಸಂಶಯಂ ಚಕಾರ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ದಸ್ಯುಘ್ನಾ—ದಸ್ಯುವನ್ನು ಕೊಲ್ಲತಕ್ಕ । ಮನಸಾ—ಮನಸ್ಸಿನಿಂದ ಕೂಡಿದ ನೀನು । ಅಸ್ತಂ—(ಕುತ್ಸನ) ಮನೆಗೆ । ಆ ಯಾಹಿ—ದಯಮಾಡು । ಕುತ್ಸಃ—ಕುತ್ಸನೂ ಕೂಡ । ತೇ ಸಖ್ಯೇ—ನಿನ್ನ ಸ್ನೇಹವನ್ನು ಸಂಪಾದಿಸುವುದರಲ್ಲಿ । ನಿಕಾಮಃ—ಅತ್ಯಂತ ಆಸೆಯುಳ್ಳವನಾಗಿ । ಭುವತ್—ಆಗಿದ್ದಾನೆ (ಅನಂತರ ನೀವಿಬ್ಬರೂ) । ಸ್ವೇ ಯೋನೌ—ನಿನ್ನ ಗೃಹದಲ್ಲಿ । ನಿ ಷದತಂ—ಕುಳಿತುಕೊಳ್ಳಿ । ಋತಚಿತ್—ಸತ್ಯವನ್ನು ನೋಡಲು ಸಮರ್ಥಳಾದ । ನಾರೀ—ಇಂದ್ರಭಾರ್ಯೆಯು । ಸರೂಪಾ—ಸಮಾನವಾದ ರೂಪವುಳ್ಳ । ವಾಂ—ನಿಮ್ಮಿಬ್ಬರನ್ನೂ ನೋಡಿ । ವಿ ಚಿಕಿತ್ಸತ್—ಸಂಶಯಗೊಂಡಳು.

ಭಾವಾರ್ಥ

ಎಲೈ ಇಂದ್ರನೇ, ದಸ್ಯುವನ್ನು ಕೊಲ್ಲತಕ್ಕಮನಸ್ಸಿನಿಂದ ಕೂಡಿದ ನೀನು ಕುತ್ಸನ ಮನೆಗೆ ದಯಮಾಡು. ಕುತ್ಸನೂಕೂಡ ನಿನ್ನ ಸಖಿತ್ವವನ್ನು ಸಂಪಾದಿಸುವುದರಲ್ಲಿ ಆಸೆಯುಳ್ಳವನಾಗಿದ್ದಾನೆ. ಅನಂತರ ನೀವಿಬ್ಬರೂ ನಿನ್ನ ಗೃಹಕ್ಕೆ ತೆರಳಿ ಒಟ್ಟಿಗೆ ಕುಳಿತುಕೊಳ್ಳಿ. ಸತ್ಯವನ್ನು ನೋಡಲು ಸಮರ್ಥಳಾದ ಇಂದ್ರಭಾರ್ಯೆಯು ಸಮಾನವಾದ ರೂಪವುಳ್ಳ ನಿಮ್ಮಿಬ್ಬರನ್ನೂ ನೋಡಿ ಸಂಶಯಗೊಂಡಳು.

English Translation

With a mind resolved on killing the Dasyu, you came (to his dwelling), and Kutsa was eager for your friendship : now have you two alighted in his, (Indra's), habitation, and, being entirely similar in form, the truthful woman has been perplexed (to discriminate between you).

ವಿಶೇಷವಿಷಯಗಳು

ಈ ಋಕ್ಕಿನಲ್ಲಿ ಹೇಳಿರುವ ವಿಷಯವಾಗಿ ಭಾಷ್ಯಕಾರರು ಒಂದು ಆಖ್ಯಾಯಿಕೆ (ಕಥೆ) ಯನ್ನು ಹೇಳಿರುವರು-

ರುರುನಾಮಕಃ ಕಶ್ಚಿದ್ರಾಜರ್ಷಿಃ । ತಸ್ಯ ಪುತ್ರಃ ಕುತ್ಸಾಖ್ಯೋ ರಾಜರ್ಷಿರಾಸೀತ್ । ಸ ಚ ಕದಾಚಿತ್ ಶತ್ರುಭಿಃ ಸಹ ಯುಯುತ್ಸುಃ ಸಂಗ್ರಾಮೇ ಸ್ವಯಮಶಕ್ತಃ ಸನ್ ಶತ್ರೂಣಾಂ ಹನನಾರ್ಥಮಿಂದ್ರಸ್ಯ ಆಹ್ವಾನಂ ಚಕಾರ । ಸ ಚೇಂದ್ರಃ ಕುತ್ಸಸ್ಯ ಗೃಹಮಾಗತ್ಯ ತಸ್ಯ ಶತ್ರೂನ್ ಜಘಾನ । ತದನಂತರಮತಿಪ್ರೀತ್ಯಾ ತಯೋಃ ಸಖ್ಯಮಭವತ್ । ಸಖ್ಯಾನಂತರ-ಮಿಂದ್ರ ಏನಮಪಿ ಸ್ವಕೀಯಂ ಗೃಹಂ ಪ್ರಾಪಯಾಮಾಸ । ತತ್ರ ಶಚೀ ಇಂದ್ರಂ ಪ್ರಾಪ್ತು-ಮಾಗತಾ ಸತೀ ತೌ ಸಮಾನರೂಪೌ ದೃಷ್ಟ್ವಾ ಅಯಮಿಂದ್ರೋಽಯಂ ಕುತ್ಸ ಇತಿ ವಿವೇಕಾಭಾವೇನ ಸಂಶಯಂ ಚಕಾರ । ಅನಯಾಖ್ಯಾಯಿಕಯಾ ಪ್ರತೀಯಮಾನೋಽ-ರ್ಥೋಽತ್ರ ಪ್ರತಿಪಾದ್ಯತೇ ॥

(ಸಾ. ಭಾ. ೪-೧೬ ೧೦)

CC-0. Jangamwadi Math Collection. Digitized by eGangotri

ಪೂರ್ವದಲ್ಲಿ ರುರು ಎಂಬ ಒಬ್ಬ ರಾಜರ್ಷಿಯಿದ್ದನು. ಅವನಿಗೆ ಕುತ್ಸನೆಂಬ ಪುತ್ರನಿದ್ದನು. ಅವನು ಒಂದಾನೊಂದು ಕಾಲದಲ್ಲಿ ಶತ್ರುಗಳೊಡನೆ ಯುದ್ಧ ಮಾಡಬೇಕಾಗಿ ಬಂತು. ಶತ್ರುಗಳು ಬಹಳ ಬಲಿಷ್ಠರಾಗಿದ್ದುದರಿಂದ ತಾನೊಬ್ಬನೇ ಅವರನ್ನು ಎದುರಿಸಿ ಗೆಲ್ಲಲಾಗದೆ ಇಂದ್ರನ ಸಹಾಯವನ್ನಪೇಕ್ಷಿಸಿ ಅವನನ್ನು ಆಹ್ವಾನಿಸಿದನು. ಆಗ ಇಂದ್ರನು ಕುತ್ಸನ ಮನೆಗೆ ಬಂದು ಅವನ ಶತ್ರುಗಳನ್ನು ಸಂಹರಿಸಿದನು. ಇದರಿಂದ ಕುತ್ಸನಿಗೂ ಇಂದ್ರನಿಗೂ ಪರಸ್ಪರ ಸ್ನೇಹ ವುಂಟಾಯಿತು. ಅನಂತರ ಇಂದ್ರನು ಕುತ್ಸನನ್ನು ತನ್ನ ಮನೆಗೆ ಕರೆದುಕೊಂಡು ಹೋದನು. ಮನೆಯ ಬಾಗಿಲಿನಲ್ಲಿ ಇಂದ್ರಪತ್ನಿಯಾದ ಶಚೀದೇವಿಯು ಇಂದ್ರನನ್ನು ಸ್ವಾಗತಿಸುವುದಕ್ಕಾಗಿ ಬಂದು ನೋಡುವಲ್ಲಿ ಇಂದ್ರನಂತೆಯೇ ಸಮಾನರೂಪವುಳ್ಳ ಈರ್ವರು ಪುರುಷರಿರುವುದನ್ನು ಕಂಡು ಇವರಲ್ಲಿ ಇಂದ್ರನು ಯಾರು, ಕುತ್ಸನು ಯಾರು ಎಂದು ಗುರುತಿಸಲು ತಿಳಿಯದೆ ಸಂಶಯವನ್ನು ವ್ಯಕ್ತಪಡಿಸಿದಳು. ಈ ವಿಷಯವನ್ನೇ ಈ ಋಕ್ಕಿನಲ್ಲಿ ಸೂಚಿಸಲಾಗಿದೆ.

---

ಸಂಹಿತಾಪಾಠಃ

ಯಾಸಿ ಕುತ್ಸೇನ ಸರಥಮವಸ್ಯುಸ್ತೋದೋ ವಾತಸ್ಯ ಹರ್ಯೋರೀಶಾನಃ ।
ಋಜ್ರಾ ವಾಜಂ ನ ಗಧ್ಯಂ ಯುಯೂಷನ್ಕವಿರ್ಯದಹನ್ಪಾರ್ಯಾಯ
ಭೂಷಾತ್ ॥ ೧೧ ॥

ಪದಪಾಠಃ

ಯಾಸಿ । ಕುತ್ಸೇನ । ಸ್ವರಥಂ । ಅವಸ್ಯುಃ । ತೋದಃ । ವಾತಸ್ಯ । ಹರ್ಯೋಃ । ಈಶಾನಃ ।
ಋಜ್ರಾ । ವಾಜಂ । ನ । ಗಧ್ಯಂ । ಯುಯೂಷನ್ । ಕವಿಃ । ಯತ್ । ಅಹನ್ । ಪಾರ್ಯಾಯ ।
ಭೂಷಾತ್ ॥ ೧೧ ॥

ಸಾಯಣಭಾಷ್ಯಂ

ಹೇ ಇಂದ್ರ ಅವಸ್ಯುಃ ಕುತ್ಸಸ್ಯ ರಕ್ಷಣಮಿಚ್ಛನ್ ॥ ಛಂದಸಿ ಕ್ಯಚ್ ಪರೇಚ್ಛಾಯಾಮಪಿ ದೃಶ್ಯತೇ ॥ ತೋದಸ್ತೋದಕಃ ಶತ್ರೂಣಾಂ ಹಿಂಸಕೋ ವಾತಸ್ಯ ವಾಯುಸದೃಶಯೋರ್ವೇಗವತೋರ್ಹರ್ಯೋರಶ್ವಯೋರೀಶಾನ ಈಶ್ವರಸ್ತ್ವಂ ಕುತ್ಸೇನ ಕುತ್ಸಾಖ್ಯೇನ ರಾಜರ್ಷಿಣಾ ಸರಥಂ ಸಮಾನರಥಂ ಯಾಸಿ । ಗಚ್ಛಸಿ । ಗಧ್ಯಂ ಗ್ರಾಹ್ಯಂ । ಗಧ್ಯಂ ಗೃಹ್ಣಾತೇಃ । ಋಜ್ರಾ ವಾಜಂ ನ ಗಧ್ಯಂ ಯುಯೂಷನ್ನಿತ್ಯಪಿ ನಿಗಮೋ ಭವತೀತಿ ನಿರುಕ್ತಂ । ೫-೧೫ । ವಾಜಂ ನಾನ್ನಮಿವ ಋಜ್ರಾ ಋಜುಗಾಮಿನಾವಶ್ವೌ ಯುಯೂಷನ್ ಸ್ವಕೀಯೇ ರಥೇ ಯೋಜಯನ್ ಕವಿಃ ಪ್ರಾಜ್ಞಃ ಕುತ್ಸೋ ಯದ್ಯಸ್ಮಿನ್ನಹನ್ನಹನಿ ದಿವಸೇ ಪಾರ್ಯಾಯ ಪಾರಣಾಯ ಆಪನ್ನಿಸ್ತರಣಾಯ ಭೂಷಾತ್ । ಪ್ರಭವತೇ । ತಸ್ಮಿನ್ನೇವ ದಿನೇ ಕುತ್ಸೇನ ಸರಥಂ ಯಾಸೀತಿ ಪೂರ್ವೇಣ ಸಂಬಂಧಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಎಲೈ ಇಂದ್ರನೇ) **ಅವಸ್ಯುಃ**—ಕುತ್ಸನನ್ನು ರಕ್ಷಿಸಬೇಕೆಂದಿಚ್ಛಿಸಿ । **ತೋದಃ**—ಶತ್ರುಹಿಂಸಕನೂ । **ವಾತಸ್ಯ**—ವಾಯುವಿನ ಗತಿಗೆ ಸಮಾನವಾದ ವೇಗವುಳ್ಳ । **ಹರ್ಯೋಃ**—ಅಶ್ವಗಳಿಗೆ । **ಈಶಾನಃ**—ಒಡೆಯನೂ ಆದ ನೀನು । **ಕುತ್ಸೇನ**—ಕುತ್ಸನೊಡನೆ । **ಸರಥಂ**—ಒಂದೇ ರಥದಲ್ಲಿ ಕುಳಿತುಕೊಂಡು । **ಯಾಸಿ**—ಹೋಗುತ್ತೀಯೆ । **ಯತ್ ಅಹನ್**—ಯಾವ ಅದೇ ದಿವಸ । **ಕವಿಃ**—ಪ್ರಾಜ್ಞನಾದ ಕುತ್ಸನು । **ಗಧ್ಯಂ**—ಗ್ರಾಹ್ಯವಾದ । **ವಾಜಂ ನ**—ಅನ್ನವನ್ನು ಪಡೆಯಲು ಹೋಗುವಂತೆ ಓಡುವುವೂ । **ಋಜ್ರಾ**—ಋಜುಗಾಮಿಗಳೂ ಆದ ಅಶ್ವಗಳನ್ನು । **ಯುಯೂಷನ್**—ತನ್ನ ರಥಕ್ಕೆ ಯೋಜಿಸಿ । **ಪಾರ್ಯಾಯ**—ಆಳವಾದ ನೀರನ್ನು ದಾಟಲು । **ಭೂಷಾತ್**—ಶಕ್ತನಾಗುತ್ತಾನೆ.

ಭಾವಾರ್ಥ

ಎಲೈ ಇಂದ್ರನೇ, ಕುತ್ಸನನ್ನು ರಕ್ಷಿಸಬೇಕೆಂದಿಚ್ಛಿಸಿ ಶತ್ರುಹಿಂಸಕನೂ, ವಾಯುವಿನ ಗತಿಗೆ ಸಮಾನವಾದ ವೇಗವುಳ್ಳ ಅಶ್ವಗಳಿಗೆ ಒಡೆಯನೂ ಆದ ನೀನು ಕುತ್ಸನೊಡನೆ ಒಂದೇ ರಥದಲ್ಲಿ ಕುಳಿತುಕೊಂಡು ಯಾವ ದಿನ ಹೋಗುತ್ತೀಯೋ, ಅದೇ ದಿನ ಕುತ್ಸನೂ ಸಹ ಗ್ರಾಹ್ಯವಾದ ಅನ್ನವನ್ನು ಪಡೆಯಲು ವೇಗವಾಗಿ ಹೋಗುವಂತೆ ಓಡುವುವೂ, ಋಜುಗಾಮಿಗಳೂ ಆದ ಅಶ್ವಗಳನ್ನು ತನ್ನ ರಥಕ್ಕೆ ಯೋಜಿಸಿ ಆಳವಾದ ನೀರನ್ನು ದಾಟಲು ಶಕ್ತನಾಗುತ್ತಾನೆ.

English Translation

You went with Kutsa, in the same chariot, determined to defend him; (you who are) the tormentor (of foes), the lord of horses (of the speed) of the wind : on the same day wherein, yoking (to the car) the straight-going steeds, as if to receive food, the sage (Kutsa) has been enabled to cross over (the sea) of calamity.

ಸಂಹಿತಾಪಾಠಃ

ಕುತ್ಸಾಯ ಶುಷ್ಣಮಶುಷಂ ನಿ ಬರ್ಹೀಃ ಪ್ರಪಿತ್ವೇ ಅಹ್ನಃ ಕುಯವಂ ಸಹಸ್ರಾ ।

ಸದ್ಯೋ ದಸ್ಯೂನ್ಪ್ರ ಮೃಣ ಕುತ್ಸ್ಯೇನ ಪ್ರ ಸೂರಶ್ಚಕ್ರಂ ವೃಹತಾದಭೀಕೇ ॥

CC-0. Jangamwadi Math Collection. Digitized by eGangotri

ಪದಪಾಠಃ

ಕುತ್ಸಾಯ । ಶುಷ್ಣಂ । ಅಶುಷಂ । ನಿ । ಬರ್ಹೀಃ । ಪ್ರಪಿತ್ವೇ । ಅಹ್ನಃ । ಕುಯವಂ । ಸಹಸ್ರಾ ।

ಸದ್ಯಃ । ದಸ್ಯೂನ್ । ಪ್ರ । ಮೃಣ । ಕುತ್ಸ್ಯೇನ । ಪ್ರ । ಸೂರಃ । ಚಕ್ರಂ । ವೃಹತಾತ್ । ಅಭೀಕೇ ॥

ಸಾಯಣಭಾಷ್ಯಂ

ಶುಷ್ಣಂ ಪಿಪ್ರುಮಿತ್ಯಸ್ಯಾಮೃಚಿ । ಋಗ್ವೇ. ೧-೧೦೩-೮ । ಪ್ರತಿಪಾದಿತೋಽರ್ಥಃ ಕುತ್ಸಾಯೇತ್ಯನೇನ ಋಗ್ಭಾಗೇನ ಸ್ಪಷ್ಟೀಕ್ರಿಯತೇ । ಹೇ ಇಂದ್ರ ತ್ವಂ ಕುತ್ಸಾಯ ಕುತ್ಸಾರ್ಥಮಶುಷಂ । ಶೂಷಮಿತಿ ಸುಖನಾಮೈತತ್ । ತದ್ರಹಿತಂ । ಅತ್ರ ದೀರ್ಘಾಭಾವಃ । ಶುಷ್ಣಂ ಶುಷ್ಣನಾಮಾನಮಸುರಂ ನಿ ಬರ್ಹೀಃ । ನ್ಯಬರ್ಹೀಃ। ಅವಧೀಃ । ತಥಾಹ್ನೋ ದಿವಸಸ್ಯ ಪ್ರಪಿತ್ವೇ ಪ್ರಕ್ರಮೇ ಪೂರ್ವಾಹ್ಣೇ ಕುಯವಂ ಕುಯವನಾಮಾನಮಸುರಂ ಚ ಹತವಾನಸಿ । ತಥಾ ಸ ತ್ವಂ ಸಹಸ್ರಾ ಸಹಸ್ರೇಣ ಬಹುಭಿಃ ಪರಿಜನೈಃ ಸಹ ಸದ್ಯೋ ಯಸ್ಮಿನ್ ಕಾಲೇ ಕುಯವಮವಧೀಸ್ತಸ್ಮಿನ್ ಕಾಲ ಏವ ಕುತ್ಸ್ಯೇನ । ಕುತ್ಸ ಇತಿ ವಜ್ರನಾಮೈತತ್ । ಕುತ್ಸ ಏವ ಕುತ್ಸ್ಯಂ ವಜ್ರಂ । ತೇನ ದಸ್ಯೂನ್ ಶತ್ರೂನ್ಪ್ರ ಮೃಣ । ಜಹಿ ॥ ಭೂತಾರ್ಥೇ ಲೋಟ್ ॥ ಹತವಾನಸಿ । ತಥಾ ಸೂರಃ ಪ್ರೇರಕಸ್ಯ ಸೂರ್ಯಸ್ಯ ಚಕ್ರಮಾಯುಧಮಭೀಕೇ ಸಮೀಪೇ ಸಂಗ್ರಾಮೇ ವಾ ಪ್ರ ವೃಹತಾತ್ । ಪ್ರಕರ್ಷೇಣ ಛಿನ್ನವಾನಸಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಕುತ್ಸಾಯ—ಕುತ್ಸನಿಗಾಗಿ । ಅಶುಷಂ—ಸುಖರಹಿತನಾದ । ಶುಷ್ಣಂ—ಶುಷ್ಣನೆಂಬ ಅಸುರನನ್ನು । ನಿ ಬರ್ಹೀಃ—ಕೊಂದಿರುವೆ । ಅಹ್ನಃ—ದಿವಸದ । ಪ್ರಪಿತ್ವೇ—ಪ್ರಾರಂಭವಾದ ಪೂರ್ವಾಹ್ಣ ಕಾಲದಲ್ಲಿ । ಸಹಸ್ರಾ—ಸಾವಿರಾರು ಅನುಯಾಯಿಗಳೊಡನೆ । ಕುಯವಂ—ಕುಯವನೆಂಬ ಅಸುರನನ್ನೂ ನಾಶಪಡಿಸಿದೆ । ಸದ್ಯಃ—ಒಡನೆಯೇ । ಕುತ್ಸ್ಯೇನ—ವಜ್ರಾಯುಧದಿಂದ । ದಸ್ಯೂನ್—ಶತ್ರುಗಳನ್ನು । ಪ್ರ ಮೃಣ-ನಾಶಪಡಿಸಿದ್ದೀಯೆ । ಸೂರಃ—ಆದಿತ್ಯನ । ಚಕ್ರಂ—ಚಕ್ರವನ್ನು । ಅಭೀಕೇ—ಸಂಗ್ರಾಮದಲ್ಲಿ । ಪ್ರ ವೃಹತಾತ್—ಕತ್ತರಿಸಿರುವೆ.

ಭಾವಾರ್ಥ

ಎಲೈ ಇಂದ್ರನೇ, ಕುತ್ಸನಿಗೆ ಸಹಾಯಮಾಡಲು ಸುಖರಹಿತನಾದ ಶುಷ್ಣನೆಂಬ ಅಸುರನನ್ನು ಕೊಂದಿರುವೆ. ದಿವಸದ ಪ್ರಾರಂಭವಾದ ಪೂರ್ವಾಹ್ಣಕಾಲದಲ್ಲಿ ಸಾವಿರಾರು ಅನುಯಾಯಿಗಳೊಡನೆ ಕುಯವನೆಂಬ ಅಸುರನನ್ನೂ ನಾಶಪಡಿಸಿದೆ. ಒಡನೆಯೇ, ವಜ್ರಾಯುಧದಿಂದ ಶತ್ರುಗಳನ್ನೂ ನಾಶಪಡಿಸಿದೆ. ಸಂಗ್ರಾಮದಲ್ಲಿ ಆದಿತ್ಯನ ಚಕ್ರವನ್ನು ಕತ್ತರಿಸಿದೆ.

English Translation

For Kutsa, you have slain the unhappy Shushna, and, in the forepart of the day, attended by thousands, (you have slain) Kuyava with the thunderbolt: you have swiftly destroyed the Dasyus, and you have cut them to pieces in the battle, with the wheel (of the chariot of) the sun.



CC-0. Jangamwadi Math Collection. Digitized by eGangotri

ವಿಶೇಷವಿಷಯಗಳು

ಈ ಋಕ್ಕಿನಲ್ಲಿಯೂ, ಮುಂದಿನ ಋಕ್ಕಿನಲ್ಲಿಯೂ ಹೇಳಿರುವ ವಿಷಯವನ್ನು ಋ. ಸಂ. ೧-೧೦೩-ಆನೇ ಋಕ್ಕಿನಲ್ಲಿಯೂ ವಿವರಿಸಲಾಗಿದೆ. ಶುಷ್ಣ, ಪಿಪ್ರು ಎಂಬುವರ ವಿಷಯವನ್ನು ನಾವು ಋ. ಸಂ. ಭಾಗ ೧೦ ಪೇಜು 550, 551 ಮೊದಲಾದ ಸ್ಥಳಗಳಲ್ಲಿ ವಿವರಿಸಿದೇವೆ-

———

ಸಂಹಿತಾಪಾಠಃ

ತ್ವಂ ಪಿಪ್ರುಂ ಮೃಗಯಂ ಶೂಶುವಾಂಸಮೃಜಿಶ್ವನೇ ವೈದಥಿನಾಯ ರಂಧೀಃ।
ಪಂಚಾಶತ್ಕೃಷ್ಣಾ ನಿ ವಪಃ ಸಹಸ್ರಾತ್ಕಂ ನ ಪುರೋ ಜರಿಮಾ ವಿ ದರ್ದಃ ॥

ಪದಪಾಠಃ

ತ್ವಂ । ಪಿಪ್ರುಂ । ಮೃಗಯಂ । ಶೂಶುವಾಂಸಂ । ಋಜಿಶ್ವನೇ । ವೈದಥಿನಾಯ । ರಂಧೀಃ ।
ಪಂಚಾಶತ್ । ಕೃಷ್ಣಾ । ನಿ । ವಪಃ । ಸಹಸ್ರಾ । ಅತ್ಕಂ । ನ । ಪುರಃ । ಜರಿಮಾ । ವಿ । ದರ್ದರಿತಿ ದರ್ದಃ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಪಿಪ್ರುಂ ಪಿಪ್ರುನಾಮಾನಮಸುರಂ ಶೂಶುವಾಂಸಂ ಪ್ರವೃದ್ಧಂ ಮೃಗಯಂ ಮೃಗಯನಾಮಾನಮಸುರಂ ಚ ಹತವಾನಸಿ । ಕಿಂಚ ಸ ತ್ವಂ ವೈದಥಿನಾಯ ವಿದಥಿನಃ ಪುತ್ರಾಯ ಋಜಿಶ್ವಿನೇ ಋಜಿಶ್ವನಾಮ್ನೇ ರಾಜ್ಞೇ ರಂಧೀಃ । ವಶಮನಯಃ । ಪಂಚಾಶತ್ಪಂಚಾಶತ್ಸಂಖ್ಯಾಕಾನಿ ಸಹಸ್ರಾ ಸಹಸ್ರಾಣಿ ಕೃಷ್ಣಾ ಕೃಷ್ಣವರ್ಣಾನಿ ರಕ್ಷಾಂಸಿ ನ ವಪಃ । ನ್ಯವಪಃ । ಅವಧೀಃ । ತಥಾ ಸ ತ್ವಂ ಜರಿಮಾ ಜರಾತ್ಕಂ ನ ವಯೋವಿಶೇಷಂ ರೂಪಮಿವ ಪುರಃ ಶಂಬರಸ್ಯ ನಗರಾಣಿ ವಿ ದರ್ದಃ । ವಿದಾರಿತ-ವಾನಸಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ತ್ವಂ—ನೀನು । ಪಿಪ್ರುಂ—ಪಿಪ್ರುವೆಂಬ ಅಸುರನನ್ನೂ । ಶೂಶುವಾಂಸಂ—ಪ್ರವೃದ್ಧನಾದ । ಮೃಗಯಂ—ಮೃಗಯನೆಂಬ ಅಸುರನನ್ನೂ । ವೈದಥಿನಾಯ—ವಿದಥಿಪುತ್ರನಾದ । ಋಜಿಶ್ವನೇ—ಋಜಿಶ್ವನೆಂಬ ರಾಜನಿಗಾಗಿ । ರಂಧೀಃ—ನಿನ್ನ ವಶಮಾಡಿಕೊಂಡೆ । ಪಂಚಾಶತ್ ಸಹಸ್ರಾ—ಐವತ್ತುಸಾವಿರಸಂಖ್ಯೆಯುಳ್ಳವರೂ । ಕೃಷ್ಣಾ—ಕೃಷ್ಣವರ್ಣವುಳ್ಳವರೂ ಆದ ಅಸುರರನ್ನು । ನಿ ವಪಃ—ನಾಶಪಡಿಸಿದೆ । ಜರಿಮಾ—ಮುಪ್ಪು । ಅತ್ಕಂ ನ—ಮಾನವನ ರೂಪವನ್ನು ನಾಶಪಡಿಸುವಂತೆ । ಪುರಃ—(ಶಂಬರನ) ಪಟ್ಟಣಗಳನ್ನು । ವಿ ದರ್ದಃ—ನಾಶಪಡಿಸಿರುವೆ.

CC-0. Jangamwadi Math Collection. Digitized by eGangotri

### ಭಾವಾರ್ಥ

ಎಲೈ ಇಂದ್ರನೇ, ನೀನು ಪಿಪ್ರುವೆಂಬ ಅಸುರನನ್ನೂ, ಪ್ರವೃದ್ಧನಾದ ಮೃಗಯನೆಂಬ ಅಸುರನನ್ನೂ, ವಿದಥಿಪುತ್ರನಾದ ಋಜ್ರಶ್ವನೆಂಬ ರಾಜನಿಗೆ ಸಹಾಯಮಾಡಲು ನಿನ್ನ ವಶಮಾಡಿಕೊಂಡೆ. ಐವತ್ತುಸಹಸ್ರ ಸಂಖ್ಯೆಯುಳ್ಳವರೂ, ಕೃಷ್ಣವರ್ಣವುಳ್ಳವರೂ ಆದ ಅಸುರರನ್ನು (ದಸ್ಯುಗಳನ್ನು) ನಾಶಪಡಿಸಿದೆ. ಮಾನವನ ರೂಪವನ್ನು ಮುಪ್ಪು ನಾಶಪಡಿಸುವಂತೆ ನೀನು ಶಂಬರನ ಪಟ್ಟಣಗಳನ್ನು ನಾಶಪಡಿಸಿದೆ.

### English Translation

You have subjugated Pipru and the mighty Mrigaya for the sake of Rijishwan, the son of Vidathin; you have slain the fifty thousand Krishnas; and, as old age (destroys) life, you hast demolished the cities (of Shambara).

---

### ಸಂಹಿತಾಪಾಠಃ

ಸೂರ ಉಪಾಕೇ ತನ್ವಂ೧ ದಧಾನೋ ವಿ ಯತ್ತೇ ಚೇತ್ಯಮೃತಸ್ಯ ವರ್ಪಃ ।
ಮೃಗೋ ನ ಹಸ್ತೀ ತವಿಷೀಮುಷಾಣಃ ಸಿಂಹೋ ನ ಭೀಮ ಆಯುಧಾನಿ
ಬಿಭ್ರತ್ ॥ ೧೪ ॥

### ಪದಪಾಠಃ

ಸೂರಃ । ಉಪಾಕೇ । ತನ್ವಂ । ದಧಾನಃ । ವಿ । ಯತ್ । ತೇ । ಚೇತಿ । ಅಮೃತಸ್ಯ । ವರ್ಪಃ ।
ಮೃಗಃ । ನ । ಹಸ್ತೀ । ತವಿಷೀಂ । ಉಷಾಣಃ । ಸಿಂಹಃ । ನ । ಭೀಮಃ । ಆಯುಧಾನಿ । ಬಿಭ್ರತ್ ॥೧೪॥

### ಸಾಯಣಭಾಷ್ಯಂ

ಹೇ ಇಂದ್ರ ಸೂರಃ ಪ್ರೇರಕಸ್ಯ ಸೂರ್ಯಸ್ಯೋಪಾಕೇ ಸಮೀಪೇ ತನ್ವಂ ತ್ವದೀಯಂ ಶರೀರಂ ಯದ್ಯದಾ ದಧಾನೋ ಧಾರಕೋಽಭವಃ ತದಾಮೃತಸ್ಯ ಮರಣರಹಿತಸ್ಯ ತೇ ತ್ವದೀಯಂ ವರ್ಪೋ ರೂಪಂ ವಿ ಚೇತಿ । ವ್ಯಚೇತಿ । ಹೇ ಇಂದ್ರ ಜ್ಞಾತೃಭಿರ್ವಿಶೇಷೇಣಾಜ್ಞಾಯತ । ಸೂರ್ಯಸ್ಯ ಸಮೀಪೇ ಸರ್ವಾಣಿ ರೂಪಾಣಿ ಮಲಿನೀಭವಂತಿ ನ ತಥೇಂದ್ರಸ್ಯ ರೂಪಂ ಕಿಂತು ಸೂರ್ಯಸ್ಯ ಸಮೀಪ ಇಂದ್ರಸ್ಯ ರೂಪಂ ವಿಶೇಷೇಣ ಭಾಸಮಾನಂ ಬಭೂವೇತ್ಯರ್ಥಃ । ಅಪಿ ಚ ಹೇ ಇಂದ್ರ ಹಸ್ತೀ ಮೃಗೋ ನ ಗಜವಿಶೇಷೋ ಮೃಗ ಇವ ತವಿಷೀಂ ಪರೇಷಾಂ ಬಲಮುಷಾಣೋ ದಹನ್ ಆಯುಧಾನಿ ವಜ್ರಾದೀನಿ ಶಸ್ತ್ರಾಣಿ ಬಿಭ್ರದ್ಬಿಭ್ರಾಣಸ್ತ್ವಂ ಸಿಂಹೋ ನ ಸಿಂಹ ಇವ ಭೀಮೋ ಭಯಂಕರೋಽಭೂಃ ॥

CC-0. Jangamwadi Math Collection. Digitized by eGangotri

ಪ್ರತಿಪದಾರ್ಥ

(ಎಲೈ ಇಂದ್ರನೇ) ಸೂರಃ—ಸರ್ವಪ್ರೇರಕನಾದ ಸೂರ್ಯನ ! ಉಪಾಕೇ—ಸಮೀಪದಲ್ಲಿ । ತನ್ವಂ— ನಿನ್ನ ಶರೀರವನ್ನು । ಯತ್—ಯಾವಾಗ । ದಧಾನಃ—ಧರಿಸಿ ನಿಂತಿರುವೆಯೋ (ಆಗ) । ಅಮೃತಸ್ಯ— ಮರಣರಹಿತನಾದ । ತೇ—ನಿನ್ನ । ವರ್ಪಃ—ರೂಪವು । ವಿ ಚೇತಿ—ಅಧಿಕವಾಗಿ ಪ್ರಕಾಶಿಸುತ್ತದೆ । ಹಸ್ತೀ ಮೃಗೋ ನ—ವನಗಜದಂತೆ । ತವಿಷೀಂ—ಶತ್ರುಗಳ ಬಲವನ್ನು । ಉಷಾಣಃ—ಕುಗ್ಗಿಸುತ್ತಾ । ಆಯುಧಾನಿ- ವಜ್ರಾದ್ಯಾಯುಧಗಳನ್ನು । ಬಿಭ್ರತ್—ಧರಿಸಿರುವ ನೀನು । ಸಿಂಹೋ ನ—ಸಿಂಹದಂತೆ । ಭೀಮಃ—ಭಯಂಕರ ನಾಗಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ಸರ್ವಪ್ರೇರಕನಾದ ಸೂರ್ಯನ ಮುಂದೆ ಇತರ ಎಲ್ಲಾ ಪ್ರಭೆಗಳೂ ಕುಂದಿಹೋಗುವುವು. ಆದರೆ, ನೀನು ನಿನ್ನ ಪ್ರಭಾಯುತವಾದ ಶರೀರವನ್ನು ಧರಿಸಿ ನಿಂತರೆ, ಮರಣರಹಿತನಾದ ನಿನ್ನ ರೂಪವು ಇನ್ನೂ ಅಧಿಕವಾಗಿ ಪ್ರಕಾಶಿಸುತ್ತದೆ. ವನಗಜನಂತೆ ಶತ್ರುಗಳ ಬಲವನ್ನು ಕುಗ್ಗಿಸುತ್ತಾ ವಜ್ರಾದ್ಯಾಯುಧಗಳನ್ನು ಹಿಡಿದಿರುವ ನೀನು ಸಿಂಹದಂತೆ ಭಯಂಕರನಾಗಿದ್ದೀಯೆ.

English Translation

While having (your) person in the proximity of the sun, your form becomes redolent of ambrosia, and you are like the cervine elephant, consuming the strength (of the strong), and are like a terrible lion when wielding your weapons.

———

ಸಂಹಿತಾಪಾಠಃ

ಇಂದ್ರಂ ಕಾಮಾ ವಸೂಯಂತೋ ಅಗ್ಮನ್ತ್ಸ್ವರ್ಮೀಳ್ಹೇ ನ ಸವನೇ ಚಕಾನಾಃ ।

ಶ್ರವಸ್ಯವಃ ಶಶಮಾನಾಸ ಉಕ್ಥೈರೋಕೋ ನ ರಣ್ವಾ ಸುದೃಶೀವ ಪುಷ್ಟಿಃ॥

ಪದಪಾಠಃ

ಇಂದ್ರಂ । ಕಾಮಾಃ । ವಸುಽಯಂತಃ । ಅಗ್ಮನ್ । ಸ್ವಃಽಮೀಳ್ಹೇ । ನ । ಸವನೇ । ಚಕಾನಾಃ ।

ಶ್ರವಸ್ಯವಃ । ಶಶಮಾನಾಸಃ । ಉಕ್ಥೈಃ । ಓಕಃ । ನ । ರಣ್ವಾ । ಸುದೃಶೀಽಇವ । ಪುಷ್ಟಿಃ ॥ ೧೫ ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಕಾಮಾ ರಾಕ್ಷಸಾದಿಭಯನಿವಾರಣಾರ್ಥಮಿಂದ್ರಂ ಕಾಮಯಮಾನಾ ವಸೂಯಂತಃ ಪಶ್ವಾದಿ-ಧನಮಿಚ್ಛಂತಃ ಸ್ತೋತಾರ ಇಂದ್ರಂ ಪರಮೈಶ್ವರ್ಯಯುಕ್ತಮುಗ್ಮನ್ । ಗಚ್ಛಂತಿ ॥ ವರ್ತಮಾನಾರ್ಥೇ ಛಾಂದಸೋ ಲುಙ್ ॥ ಕೀದೃಶಾಃ ಸ್ತೋತಾರಃ । ಸ್ವರ್ಮೀಳ್ಹೇ ನ ಯುದ್ಧ ಇವ ಸವನೇ ಯಜ್ಞೇ ಚಕಾನಾ ಯಾಚಮಾನಾಃ ಶ್ರವಸ್ಯವೋಽನ್ನಕಾಮಾ ಉಕ್ಥೈಃ ಸ್ತೋತ್ರೈಃ ಶಶಮಾನಾಸಃ ಶಂಸಮಾನಾಃ ಸ್ತುವಂತಃ । ತದಾ ಸೋಽಯಮಿಂದ್ರ ಓಕೋ ನ ಸ್ತೋತೄಣಾಮಾವಾಸ ಇವ ಭವತಿ । ರಣ್ವಾ ರಮ-ಣೀಯಾ ಸುದೃಶೀವ ಪುಷ್ಟಿಃ ಶೋಭನದರ್ಶನಾ ಲಕ್ಷ್ಮೀರಿವ ಭವತಿ ॥

## ಪ್ರತಿಪದಾರ್ಥ

ಸ್ವರ್ಮೀಳ್ಹೇ ನ—ಯುದ್ಧದಲ್ಲಿ (ಇಂದ್ರನನ್ನು) ನಂಬಿರುವಂತೆಯೇ । ಸವನೇ—ಯಜ್ಞಗಳಲ್ಲಿಯೂ । ಚಕಾನಾಃ—ಅವನನ್ನಾಶ್ರಯಿಸಿರುವವರೂ । ಶ್ರವಸ್ಯವಃ—ಅನ್ನಾಪೇಕ್ಷಿಗಳೂ । ಕಾಮಾಃ—ರಕ್ಷಣೆಗಾಗಿ ಅವನನ್ನ ಪೇಕ್ಷಿಸುವವರೂ । ವಸೂಯಂತಃ—ಧನವನ್ನಪೇಕ್ಷಿಸುವವರೂ ಆದ ಸ್ತೋತೃಗಳು । ಉಕ್ಥೈಃ—ಸ್ತೋತ್ರಗಳಿಂದ । ಶಶಮಾನಾಸಃ—ಪ್ರಶಂಸಿಸುತ್ತಾ । ಇಂದ್ರಂ—ಪ್ರಭುವಾದ ಇಂದ್ರನನ್ನು । ಅಗ್ಮನ್—ಸಮೀಪಿಸುತ್ತಾರೆ (ಆಗ ಇಂದ್ರನು) । ಓಕೋ ನ—ಯಜಮಾನನಿಗೆ ನಿವಾಸಸ್ಥಾನದಂತೆ । ರಣ್ವಾ—ರಮಣೀಯಳಾದವಳೂ । ಸುದೃಶೀವ—ಶೋಭನಾತ್ಮಕಳೂ ಆದ ಲಕ್ಷ್ಮಿಯಂತೆ । ಪುಷ್ಟಿಃ—ಪುಷ್ಟಿದಾಯಕನಾಗುತ್ತಾನೆ.

## ಭಾವಾರ್ಥ

ಯುದ್ಧದಲ್ಲಿ ಇಂದ್ರನನ್ನು ನಂಬಿರುವಂತೆಯೇ, ಯಜ್ಞಗಳಲ್ಲಿಯೂ ಅವನನ್ನಾಶ್ರಯಿಸಿರುವವರೂ, ಅನ್ನಾಪೇಕ್ಷಿಗಳೂ, ರಕ್ಷಣೆಗಾಗಿ ಅವನನ್ನಪೇಕ್ಷಿಸುವವರೂ, ಧನವನ್ನಪೇಕ್ಷಿಸುವವರೂ ಆದ ಸ್ತೋತೃಗಳು ಸ್ತೋತ್ರಗಳಿಂದ ಅವನನ್ನು ಪ್ರಶಂಸಿಸುತ್ತಾ ಪ್ರಭುವಾದ ಇಂದ್ರನನ್ನು ಸಮೀಪಿಸುತ್ತಾರೆ. ಆಗ ಇಂದ್ರನು ಯಜಮಾನನಿಗೆ ನಿವಾಸ ಸ್ಥಾನದಂತೆ ರಕ್ಷಕನಾಗುತ್ತಾನೆ. ರಮಣೀಯಳಾದವಳೂ, ಶೋಭನಾತ್ಮಕಳೂ ಆದ ಲಕ್ಷ್ಮಿಯಂತೆ ಪುಷ್ಟಿದಾಯಕ ನಾಗುತ್ತಾನೆ.

## English Translation

Relying (upon Indra) for protection, and desirous of riches, (pious men) repair to him soliciting his presence in the sacrifice, as if in the battle; asking for food, celebrating his praise with hymns, for he is the refuge (of his worshippers), and resembles the grateful and lovely (goddess) of nutrition.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ತಮಿದ್ವ ಇಂದ್ರಂ ಸುಹವಂ ಹುವೇಮ ಯಸ್ತಾ ಚಕಾರ ನರ್ಯಾ ಪುರೂಣಿ।

ಯೋ ಮಾವತೇ ಜರಿತ್ರೇ ಗಧ್ಯಂ ಚಿನ್ಮಕ್ಷೂ ವಾಜಂ ಭರತಿ ಸ್ಪಾರ್ಹರಾಧಾಃ॥

ಪದಪಾಠಃ

ತಂ । ಇತ್ । ವಃ । ಇಂದ್ರಂ । ಸುಽಹವಂ । ಹುವೇಮ । ಯಃ । ತಾ । ಚಕಾರ । ನರ್ಯಾ । ಪುರೂಣಿ ।

ಯಃ । ಮಾಽವತೇ । ಜರಿತ್ರೇ । ಗಧ್ಯಂ । ಚಿತ್ । ಮಕ್ಷು । ವಾಜಂ । ಭರತಿ । ಸ್ಪಾರ್ಹಽರಾಧಾಃ ॥ ೧೬ ॥

ಸಾಯಣಭಾಷ್ಯಂ

ಯ ಇಂದ್ರೋ ನರ್ಯಾ ನರ್ಯಾಣಿ ಮನುಷ್ಯಹಿತಾನಿ ಪುರೂಣಿ ಬಹೂನಿ ತಾ ತಾನಿ ಪ್ರಸಿದ್ಧಾನಿ ಕರ್ಮಾಣಿ ಚಕಾರ । ಅಕರೋತ್ । ಕಿಂಚ ಸ್ಪಾರ್ಹರಾಧಾಃ ಸ್ಪೃಹಣೀಯಧನೋ ಯ ಇಂದ್ರೋ ಮಾವತೇ ಮತ್ಸದೃಶಾಯ ಜರಿತ್ರೇ ಸ್ತೋತ್ರೇ ಗಧ್ಯಂ ಚಿತ್ ಗ್ರಾಹ್ಯಂ ಸಂಯೋಜನೀಯಮಪಿ ವಾಜಮನ್ನಂ ಮಕ್ಷು ಶೀಘ್ರಂ ಭರತಿ । ಆಹರತಿ । ವಯಂ ಸ್ತೋತಾರೋ ಹೇ ಯಜಮಾನಾ ವೋ ಯುಷ್ಮಭ್ಯಂ ತಮಿತ್ತಮೇವೇಂದ್ರಂ ಸುಹವಂ ಶೋಭನಮಾಹ್ವಾನಂ ಯಥಾ ಭವತಿ ತಥಾ ಹುವೇಮ । ಆಹ್ವಯಾಮಃ ॥

ಪ್ರತಿಪದಾರ್ಥ

(ಎಲೈ ಯಜಮಾನರೇ) ಯಃ—ಯಾವ ಇಂದ್ರನು । ನರ್ಯಾ—ಮಾನವರಿಗೆ ಹಿತಕಾರಿಗಳಾದವೂ । ಪುರೂಣಿ—ಬಹುವಿಧವಾದವೂ । ತಾ—ಪ್ರಸಿದ್ಧವಾದವೂ ಆದ ಕರ್ಮಗಳನ್ನು । ಚಕಾರ—ಮಾಡಿದನೋ । ಸ್ಪಾರ್ಹರಾಧಾಃ—ಅಪೇಕ್ಷಿತವಾದ ಧನಗಳುಳ್ಳ । ಯಃ—ಯಾವ ಇಂದ್ರನು । ಮಾವತೇ—ನನ್ನಂತಹ । ಜರಿತ್ರೇ—ಸ್ತೋತೃವಿಗೆ । ಗಧ್ಯಂ ಚಿತ್—ಅತ್ಯಂತ ಗ್ರಾಹ್ಯವಾದ । ವಾಜಂ—ಅನ್ನವನ್ನು । ಮಕ್ಷು—ಶೀಘ್ರವಾಗಿ । ಭರತಿ—ತಂದುಕೊಡುವನೋ । ತಮಿತ್ ಇಂದ್ರಂ—ಅದೇ ಇಂದ್ರನನ್ನೇ । ಸುಹವಂ—ಶ್ರೇಷ್ಠವಾದ ಆಹ್ವಾನಪೂರ್ವಕವಾಗಿ । ಹುವೇಮ—ಪ್ರಾರ್ಥಿಸಿ ಕರೆಯುತ್ತೇವೆ.

ಭಾವಾರ್ಥ

ಎಲೈ ಯಜಮಾನರೇ, ಯಾವ ಇಂದ್ರನು ಮಾನವರಿಗೆ ಹಿತಕಾರಿಗಳಾದವೂ, ಬಹುಪ್ರಸಿದ್ಧವಾದವೂ, ನಾನಾವಿಧವುಳ್ಳವೂ ಆದ ಕರ್ಮಗಳನ್ನು ಮಾಡಿದನೋ ಮತ್ತು ಅಪೇಕ್ಷಿತವಾದ ಧನಗಳುಳ್ಳ ಯಾವ ಇಂದ್ರನು ನನ್ನಂತಹ ಸ್ತೋತೃವಿಗೆ ಅತ್ಯಂತ ಗ್ರಾಹ್ಯವಾದ ಅನ್ನವನ್ನು ಶೀಘ್ರವಾಗಿ ತಂದೊದಗಿಸುವನೋ, ಅದೇ ಇಂದ್ರನನ್ನೇ ಶ್ರೇಷ್ಠವಾದ ಆಹ್ವಾನಪೂರ್ವಕವಾಗಿ ಪ್ರಾರ್ಥಿಸಿ ಕರೆಯುತ್ತೇವೆ.

CC-0. Jangamwadi Math Collection. Digitized by eGangotri

## English Translation

Let us invoke that gracious Indra who has made so many things good for man; who, bestowing enviable opulence, quickly brings acceptable food to a worshipper like me.

———

### ಸಂಹಿತಾಪಾಠಃ

ತಿಗ್ಮಾ ಯದಂತರಶನಿಃ ಪತಾತಿ ಕಸ್ಮಿಞ್ಚಿಚ್ಛೂರ ಮುಹುಕೇ ಜನಾನಾಂ ।
ಘೋರಾ ಯದರ್ಯ ಸಮೃತಿರ್ಭವಾತ್ಯಧ ಸ್ಮಾ ನಸ್ತನ್ವೋ ಬೋಧಿ ಗೋಪಾಃ ॥ ೧೭ ॥

### ಪದಪಾಠಃ

ತಿಗ್ಮಾ । ಯತ್ । ಅಂತಃ । ಅಶನಿಃ । ಪತಾತಿ । ಕಸ್ಮಿನ್ । ಚಿತ್ । ಶೂರ । ಮುಹುಕೇ । ಜನಾನಾಂ ।
ಘೋರಾ । ಯತ್ । ಅರ್ಯ । ಸಂಽಋತಿಃ । ಭವಾತಿ । ಅಧ । ಸ್ಮ । ನಃ । ತನ್ವಃ । ಬೋಧಿ । ಗೋಪಾಃ ॥

### ಸಾಯಣಭಾಷ್ಯಂ

ಹೇ ಶೂರ ವಿಕ್ರಾಂತೇಂದ್ರ ಯದ್ಯದಾ ಕಸ್ಮಿಂಶ್ಚಿತ್ಸರ್ವಸ್ಮಿನ್ನಪಿ ಜನಾನಾಂ ಮನುಷ್ಯಾಣಾಂ ಮುಹುಕೇ ಮೋಹಕೇ ಯುದ್ಧೇಽಂತರಸ್ಮಾಕಂ ಮಧ್ಯೇ ತಿಗ್ಮಾ ತೀಕ್ಷ್ಣಾಽಶನಿಃ ಪತಾತಿ । ಪತೇತ್ । ಹೇ ಅರ್ಯ ಸ್ವಾಮಿನ್ನಿಂದ್ರ ಯದ್ಯದಾಸ್ಮಾಕಂ ಶತ್ರುಭಿಃ ಸಹ ಘೋರಾ ಭೀಮರೂಪಾ ಸಮೃತಿರ್ಯುದ್ಧಂ ಭವಾತಿ । ಭವೇತ್ । ಅಧ ತದಾನೀಂ ನೋಽಸ್ಮದೀಯಸ್ಯ ತನ್ವಃ ಶರೀರಸ್ಯ ಗೋಪಾ ರಕ್ಷಕೋ ಬೋಧಿ ಸ್ಮ । ಅಬೋಧಿ । ಶತ್ರುಭ್ಯಃ ಸಕಾಶಾದಸ್ಮಾನ್ರಕ್ಷಕತ್ವೇನ ಬುದ್ಧವಾನಸಿ ಖಲು ॥

### ಪ್ರತಿಪ್ರದಾರ್ಥ

ಶೂರ—ಪರಾಕ್ರಮಿಯೂ। ಅರ್ಯ—ಸ್ವಾಮಿಯೂ ಆದ ಇಂದ್ರನೇ। ಯತ್—ಯಾವಾಗ। ಜನಾನಾಂ—ಮಾನವರಲ್ಲಿ ಸಂಭವಿಸಿದ । ಕಸ್ಮಿಂಶ್ಚಿತ್ ಮುಹುಕೇ—ಯಾವ ಯುದ್ಧದಲ್ಲಿಯಾದರೂ । ಅಂತಃ—ಯುದ್ಧ ಮಾಡುವ ನಮ್ಮ ನಡುವೆ । ತಿಗ್ಮಾ—ತೀಕ್ಷ್ಣವಾದ । ಅಶನಿಃ—ನಿನ್ನ ವಜ್ರಾಯುಧವು । ಪತಾತಿ—ಬಿದ್ದದ್ದೇ ಆದರೆ । ಅಧ—ಆ ಕಾಲದಲ್ಲಿ । ನಃ—ನಮ್ಮ। ತನ್ವಃ—ಶರೀರಗಳ । ಗೋಪಾಃ—ರಕ್ಷಕನೆಂದು । ಬೋಧಿ ಸ್ಮ—ತಿಳಿಯುವವನಾಗಿದ್ದೀಯಲ್ಲವೇ ?

CC-0. Jangamwadi Math Collection. Digitized by eGangotri

ಭಾವಾರ್ಥ

ಪರಾಕ್ರಮಿಯೂ, ಸ್ವಾಮಿಯು ಆದ ಇಂದ್ರನೇ, ಮಾನವರಾದ ನಮ್ಮೊಳಗೇ ಸಂಭವಿಸಿದ ಯಾವ ಯುದ್ಧ ದಲ್ಲಿಯಾಗಲಿ, ಯೋಧ್ಧೃಗಳಾದ ನಮ್ಮ ನಡುವೆ ತೀಕ್ಷ್ಣವಾದ ನಿನ್ನ ವಜ್ರಾಯುಧವು ಬಿದ್ದದ್ದೇ ಆದರೆ, ಆ ಕಾಲದಲ್ಲಿ ನಿನ್ನ ಆಯುಧವು ನಮ್ಮ ಮೇಲೆ ಬೀಳದಿರುವಂತೆ ಮಾಡಲು ನೀನು ನಮ್ಮ ಶರೀರಗಳ ರಕ್ಷಕನೆಂದು ತಿಳಿಯುವವನಾ ಗಿದ್ದೀಯಲ್ಲವೇ ?

English Translation

Hero, Indra, when in any conflict of men the sharp thunderbolt falls in the midst (of them), and when, lord, there is a terrible battle, then the defender of our persons is made known.

---

ಸಂಹಿತಾಪಾಠಃ

ಭುವೋಽವಿತಾ ವಾಮದೇವಸ್ಯ ಧೀನಾಂ ಭುವಃ ಸಖಾವೃಕೋ ವಾಜಸಾತೌ

ತ್ವಾಮನು ಪ್ರಮತಿಮಾ ಜಗನ್ಮೋರುಶಂಸೋ ಜರಿತ್ರೇ ವಿಶ್ವಧ ಸ್ಯಾಃ ॥೧೮॥

ಪದಪಾಠಃ

ಭುವಃ । ಅವಿತಾ । ವಾಮಽದೇವಸ್ಯ । ಧೀನಾಂ । ಭುವಃ । ಸಖಾ । ಅವೃಕಃ । ವಾಜಽಸಾತೌ ।

ತ್ವಾಂ । ಅನು । ಪ್ರಽಮತಿಂ । ಆ । ಜಗನ್ಮ । ಉರುಽಶಂಸಃ । ಜರಿತ್ರೇ । ವಿಶ್ವಧ । ಸ್ಯಾಃ ॥ ೧೮ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ವಾಮದೇವಸ್ಯ ವಾಮದೇವಾಖ್ಯಸ್ಯ ಮಂತ್ರದ್ರಷ್ಟುರ್ಮಮ ಸಂಬಂಧಿನೀನಾಂ ಧೀನಾಂ ಕರ್ಮಣಾಮವಿತಾ ರಕ್ಷಿತಾ ಭುವಃ । ಭವ । ಅವೃಕೋ ಹಿಂಸಾರಹಿತಸ್ತ್ವಂ ವಾಜಸಾತೌ ಯುದ್ಧೇ ಸಖಾ ಮಮ ಸುಹೃದ್ಭುವಃ । ಭವ । ಹೇ ಇಂದ್ರ ವಯಂ ಪ್ರಮತಿಂ ಪ್ರಕೃಷ್ಟಜ್ಞಾನಂ ತ್ವಾಮನು ಲಕ್ಷೀಕೃತ್ಯಾ ಜಗನ್ಮ । ಆಗಚ್ಛಾಮ । ಸ ತ್ವಂ ವಿಶ್ವಧ ಸರ್ವದಾ ಜರಿತ್ರೇ ಸ್ತೋತ್ರ ಉರುಶಂಸೋ ಮಹತಾ ಶಂಸನೇನ ಯುಕ್ತಃ ಸ್ಯಾಃ । ಭವೇಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ವಾಮದೇವಸ್ಯ—ವಾಮದೇವನಾದ ನನ್ನ । ಧೀನಾಂ—ಕರ್ಮಗಳಿಗೆ । ಅವಿತಾ— ರಕ್ಷಕನಾಗಿ । ಭುವಃ—ಆಗಿರು । ಅವೃಕಃ—ಹಿಂಸಾರಹಿತನಾದ ನೀನು । ವಾಜಸಾತೌ—ಯುದ್ಧದಲ್ಲಿ । ಸಖಾ—

CC-0. Jangamwadi Math Collection. Digitized by eGangotri

ನನಗೆ ಸಖನಾಗಿ । ಭುವಃ—ಆಗಿರು । ಪ್ರಮತಿಂ—ಉತ್ಕೃಷ್ಟಜ್ಞಾನವುಳ್ಳ । ತ್ವಾಂ ಅನು—ನಿನ್ನನ್ನು ಲಕ್ಷಿಸಿ । ಆ ಜಗನ್ಮ—ನಿನ್ನ ಸಮೀಪಕ್ಕೆ ಬರುತ್ತೇವೆ । (ತ್ವಂ—ನೀನು) । ವಿಶ್ವಧ—ಸರ್ವದಾ । ಜರಿತ್ರೇ—ಸ್ತೋತೃವಾದ ನನಗೆ । ಉರುಶಂಸಃ—ಪ್ರಶಂಸಾತ್ಮಕವಾದ ಅನುಗ್ರಹಯುಕ್ತನಾಗಿ । ಸ್ಯಾಃ—ಆಗಿರು.

ಭಾವಾರ್ಥ

ಎಲೈ ಇಂದ್ರನೇ, ವಾಮದೇವನಾದ ನನ್ನ ಕರ್ಮಗಳಿಗೆ ರಕ್ಷಕನಾಗಿರು. ಹಿಂಸಾರಹಿತವಾದ ನೀನು ನನಗೆ ಸಖನಾಗಿರು. ಉತ್ಕೃಷ್ಟಜ್ಞಾನವುಳ್ಳ ನಿನ್ನನ್ನು ಲಕ್ಷಿಸಿ ನಿನ್ನ ಸಮೀಪಕ್ಕೆ ಬರುತ್ತೇವೆ. ಸ್ತೋತೃವಾದ ನನಗೆ ನೀನು ಸರ್ವದಾ ಪ್ರಶಂಸಾತ್ಮಕವಾದ ಅನುಗ್ರಹಯುಕ್ತನಾಗಿರು.

English Translation

Be the protector of the pious acts of Vamadeva; be in battle an unfailing friend: we come to you, eminent in wisdom; may you be ever benignant to your praiser.

---

ಸಂಹಿತಾಪಾಠಃ

ಏಭಿರ್ನೃಭಿರಿಂದ್ರ ತ್ವಾಯುಭಿಷ್ಟ್ವಾ ಮಘವದ್ಭಿರ್ಮಘವನ್ವಿಶ್ವ ಆಜೌ ।
ದ್ಯಾವೋ ನ ದ್ಯುಮ್ನೈರಭಿ ಸಂತೋ ಅರ್ಯಃ ಕ್ಷಪೋ ಮದೇಮ ಶರದಶ್ಚ ಪೂರ್ವೀಃ ॥ ೧೯ ॥

ಪದಪಾಠಃ

ಏಭಿಃ । ನೃಽಭಿಃ । ಇಂದ್ರ । ತ್ವಾಯುಽಭಿಃ । ತ್ವಾ । ಮಘವತ್ಽಭಿಃ । ಮಘಽವನ್ । ವಿಶ್ವೇ । ಆಜೌ ।
ದ್ಯಾವಃ । ನ । ದ್ಯುಮ್ನೈಃ । ಅಭಿ । ಸಂತಃ । ಅರ್ಯಃ । ಕ್ಷಪಃ । ಮದೇಮ । ಶರದಃ । ಚ । ಪೂರ್ವೀಃ ।

ಸಾಯಣಭಾಷ್ಯಂ

ಹೇ ಮಘವನ್ಧನವನ್ನಿಂದ್ರ ವಿಶ್ವೇ ವಿಶ್ವಸ್ಮಿನ್ನಾಜೌ ಸಂಗ್ರಾಮೇ ತ್ವಾಯುಭಿಃ ಶತ್ರುಜಯಾರ್ಥಂ ತ್ವಾಂ ಕಾಮಯಮಾನೈರ್ಮಘವದ್ಭಿಸ್ತ್ವದರ್ಥಂ ದೀಯಮಾನಹವಿರ್ಲಕ್ಷಣೈರ್ಧನೈರುಪೇತೈರೇಭಿಃ ಪ್ರತ್ಯಕ್ಷೇಣೋಪಲಭ್ಯಮಾನೈರ್ನೃಭಿಃ ಪುತ್ರಪೌತ್ರಾದ್ಯೈಃ ಪರಿಜನೈಃ ಸಹಿತಾ ವಯಂ ಯಜಮಾನಾ ದ್ಯುಮ್ನೈರ್ಧನೈರ್ದ್ಯಾವೋ ನ ದ್ಯೋತಮಾನಾಃ ಪ್ರಕಾಶಮಾನಾ ಧನಿನೋ ಯಥಾ ತಥಾರ್ಯೋಽರೀನ್ ಶತ್ರೂ-

CC-0. Jangamwadi Math Collection. Digitized by eGangotri

ನಭಿ ಸಂತೋಽಭಿಭವಂತಃ ಕ್ಷಪಃ ಸರ್ವಾ ರಾತ್ರೀಃ ಪೂರ್ವೀರ್ಬಹ್ವೀಃ ಶರದಶ್ಚ ಸಂವತ್ಸರಾಂಶ್ಚ ಮದೇಮ। ಸ್ತವಾಮ । ಯಜಮಾನಾಃ ಸರ್ವೇಷು ಕಾಲೇಷು ಸ್ತೋತ್ರೈರಿಂದ್ರಂ ಹರ್ಷಯಂತೀತ್ಯರ್ಥಃ ॥

ಪ್ರತಿಪದಾರ್ಥ

**ಮಘವನ್**—ಧನವಂತನಾದ । **ಇಂದ್ರ**—ಇಂದ್ರನೇ । **ವಿಶ್ವೇ**—ಸಮಸ್ತವಾದ । **ಆಜೌ**—ಸಂಗ್ರಾಮದಲ್ಲಿ । **ತ್ವಾಯುಭಿಃ**—(ಶತ್ರುಜಯಕ್ಕೆ) ನಿನ್ನನ್ನು ಆಪೇಕ್ಷಿಸುವವರೂ । **ಮಘವದ್ಭಿಃ**—ಹವಿಸ್ಸಿನ ರೂಪದ ಧನದಿಂದ ಕೂಡಿದವರೂ ಆದ । **ಏಭಿಃ ನೃಭಿಃ**—ಈ ಪುತ್ರಪೌತ್ರಾದಿ ಪರಿಜನರೊಡನೆ । **ದ್ಯುಮ್ನೈಃ**—ಧನಸಂಪತ್ತಿನಿಂದ ಕೂಡಿದವರೂ । **ದ್ಯಾವೋ ನ**—ಪ್ರಕಾಶಮಾನರೂ ಆದ ಧನಿಕರಂತೆ । **ಅರ್ಯಃ**—ಶತ್ರುಗಳನ್ನು । **ಅಭಿ ಸಂತಃ**—ಪೂರ್ಣವಾಗಿ ಸೋಲಿಸುತ್ತಾ । **ಕ್ಷಪಃ**—ಸಕಲರಾತ್ರಿಗಳಲ್ಲೂ । **ಪೂರ್ವೀಃ**—ಅನೇಕವಾದ । **ಶರದಶ್ಚ**—ಸಂವತ್ಸರಗಳಲ್ಲಿಯೂ । **ತ್ವಾ**—ನಿನ್ನನ್ನು । **ಮದೇಮ**—ಸ್ತುತಿಸುವಂತಾಗಲಿ.

ಭಾವಾರ್ಥ

ಧನವಂತನಾದ ಎಲೈ ಇಂದ್ರನೇ, ಸಮಸ್ತ ಸಂಗ್ರಾಮದಲ್ಲಿಯೂ ಸಹ ಶತ್ರುಜಯಕ್ಕಾಗಿ ನಿನ್ನನ್ನುಆಪೇಕ್ಷಿಸುವವರೂ, ಹವಿಸ್ಸಿನ ರೂಪದ ಧನದಿಂದ ಕೂಡಿದವರೂ ಆದ ಈ ಪುತ್ರಪೌತ್ರಾದಿ ಪರಿಜನರೊಡನೆಯೂ, ಧನಸಂಪತ್ತಿನಿಂದ ಕೂಡಿದವರೂ, ಪ್ರಕಾಶಮಾನರೂ ಆದ ಧನಿಕರಂತೆ ಶತ್ರುಗಳನ್ನು ಪೂರ್ಣವಾಗಿ ಸೋಲಿಸುತ್ತಾ ಅನೇಕ ಸಂವತ್ಸರಗಳ ಪರ್ಯಂತ ಅಹೋರಾತ್ರವೂ ನಿನ್ನನ್ನು ಸ್ತುತಿಸುವಂತಾಗಲಿ.

English Translation

In every battle, Maghavan, may we, along with those men who trust in you and offer rich gifts, like those who are resplendent with riches, triumphing over their foes, glorify you many nights and years.

———

ಸಂಹಿತಾಪಾಠಃ

ಏವೇದಿಂದ್ರಾಯ ವೃಷಭಾಯ ವೃಷ್ಣೇ ಬ್ರಹ್ಮಾಕರ್ಮ ಭೃಗವೋ ನ ರಥಂ।
ನೂ ಚಿದ್ಯಥಾ ನಃ ಸಖ್ಯಾ ವಿಯೋಷದಸನ್ನ ಉಗ್ರೋಽವಿತಾ ತನೂಪಾಃ ॥

ಪದಪಾಠಃ

ಏವ । ಇತ್ । ಇಂದ್ರಾಯ । ವೃಷಭಾಯ । ವೃಷ್ಣೇ । ಬ್ರಹ್ಮ । ಅಕರ್ಮ । ಭೃಗವಃ । ನ । ರಥಂ ।
ನು । ಚಿತ್ । ಯಥಾ । ನಃ । ಸಖ್ಯಾ । ವಿಯೋಷತ್ । ಅಸತ್ । ನಃ । ಉಗ್ರಃ । ಅವಿತಾ। ತನೂಽಪಾಃ॥

CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಯಥೇಂದ್ರೋ ನೋಽಸ್ಮದೀಯಾನಿ ಸಖ್ಯಾ ಸಖ್ಯಾನಿ ಕರ್ಮಾಣಿ ನೂ ಚಿತ್ ವಿಯೋಷತ್ ನ ಪೃಥಕ್ಕುರ್ಯಾತ್ । ಉಗ್ರಸ್ತೇಜಸ್ವೀ ತನೂಪಾಃ ಶರೀರಾಣಾಂ ಪಾಲಕ ಇಂದ್ರೋ ಯಥಾ ನೋಽಸ್ಮಾನವಿತಾ ರಕ್ಷಿತಾಸತ್ । ಸ್ಯಾತ್ । ತಥಾ ವಯಂ ಯಜಮಾನಾ ಏವೇದೇವಮೇವೋಕ್ತಪ್ರಕಾರೇಣೇಂದ್ರಾಯ ವೃಷಭಾಯ ಕಾಮಾನಾಂ ವರ್ಷಿತ್ರೇ ವೃಷ್ಣೇ ನಿತ್ಯತರುಣಾಯ ಬ್ರಹ್ಮ ಸ್ತೋತ್ರಮಕರ್ಮ । ಅಕುರ್ಮ । ತತ್ರ ದೃಷ್ಟಾಂತಃ । ಭೃಗವೋ ದೀಪ್ತಾಸ್ತಕ್ಷಾಣೋ ರಥಂ ನ ರಥಮಿವ ತದ್ವತ್ । ಯಜಮಾನೇಭ್ಯೋ ಯಥೇಂದ್ರೋಽಭೀಪ್ಸಿತಫಲಪ್ರದೋ ಭವತಿ ತಥೇಂದ್ರಂ ಯಜಮಾನಾಃ ಸ್ತುವಂತೀತ್ಯರ್ಥಃ ॥

## ಪ್ರತಿಪದಾರ್ಥ

ಯಥಾ—ಯಾವ ರೀತಿಯಲ್ಲಿ (ಯಾವ ಕಾರಣದಿಂದ) । (ಇಂದ್ರಃ—ಇಂದ್ರನು) । ನಃ—ನಮ್ಮೊಂದಿಗಿರುವ । ಸಖ್ಯಾ—ಸ್ನೇಹವನ್ನು । ನೂ ಚಿತ್—ಒಡನೆಯೇ । ವಿಯೋಷತ್—ಬಿಡದಿರುವಂತಾಗುವುದೋ (ಮತ್ತು) । (ಯಥಾ—ಯಾವ ಕಾರಣದಿಂದ) । ಉಗ್ರಃ—ತೇಜಸ್ವಿಯೂ । ತನೂಪಾಃ—ನಮ್ಮ ಶರೀರಗಳ ಪಾಲಕನೂ ಆದ ಇಂದ್ರನು । ನಃ—ನಮಗೆ । ಅವಿತಾ—ರಕ್ಷಕನಾಗಿ । ಅಸತ್—ಆಗುವನೋ (ಆ ಉದ್ದಿಶ್ಯದಿಂದಲೇ) । ಏವೇತ್—ಮೇಲೆ ಸಂಕಲ್ಪಿಸಿದಂತೆಯೇ । ವೃಷಭಾಯ—ಕಾಮವರ್ಷಕನೂ । ವೃಷ್ಣೇ—ತರುಣನೂ ಆದ । ಇಂದ್ರಾಯ—ಇಂದ್ರನನ್ನುದ್ದೇಶಿಸಿ । ಭೃಗವಃ—ಪ್ರಕಾಶಮಾನರಾದ ಭೃಗುಗಳು (ಕಮ್ಮಾರರು) । ರಥಂ ನ—ರಥವನ್ನು ನಿರ್ಮಿಸುವಂತೆ । ಬ್ರಹ್ಮ—ಸ್ತೋತ್ರವನ್ನು । ಅಕರ್ಮ—ನಿರ್ಮಿಸುತ್ತೇವೆ

## ಭಾವಾರ್ಥ.

ಇಂದ್ರನು ನಮ್ಮೊಂದಿಗಿರುವ ಸತ್ಯವನ್ನು ಒಡನೆಯೇ ಬಿಡದಿರುವಂತೆ ಆಗಲೆಂದೂ, ತೇಜಸ್ವಿಯೂ ನಮ್ಮ ಶರೀರಗಳನ್ನು ರಕ್ಷಿಸುವವನೂ ಆದ ಇಂದ್ರನು ನಮಗೆ ಪೂರ್ಣವಾದ ರಕ್ಷಕನಾಗಿರಲಿ ಎಂಬ ಪ್ರಾರ್ಥನೆಯಿಂದಲೂ ಸಹ, ಕಾಮವರ್ಷಕನೂ, ನಿತ್ಯತರುಣನೂ ಆದ ಇಂದ್ರನನ್ನುದ್ದೇಶಿಸಿ, ಪ್ರಕಾಶಮಾನರಾದ ಕಮ್ಮಾರರು ಉತ್ತಮವಾದ ರಥವನ್ನು ನಿರ್ಮಿಸುವಂತೆ ನಾವೂ ಸಹ ಮೇಲೆ ಸಂಕಲ್ಪಿಸಿದಂತೆಯೇ ಸ್ತೋತ್ರವನ್ನು ನಿರ್ಮಿಸುತ್ತೇವೆ.

## English Translation

Therefore we offer to the vigorous Indra, the showerer ( of benefits ), holy adoration, that he may never withdraw his friendly (actions) from us, and that he may be our powerful protector, the defender of (our) persons, as the Bhrigus (fabricate) a car (for use).

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।
ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೨೧॥

ಪದಪಾಠಃ

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।
ಅಕಾರಿ । ತೇ । ಹರಿಽವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥ ೨೧ ॥

ಸಾಯಣಭಾಷ್ಯಂ

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರೃಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಶ್ಚ ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನ ಅದ್ಭಿರ್ನದೀರಿವ ಪೀಪೇಃ । ಪ್ಯಾಯಯ । ಪ್ರವೃದ್ಧಂ ಕುರು । ಹೇ ಇಂದ್ರ ಹರಿವೋ ಹರಿವನ್ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀ-ರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ನು—ಶೀಘ್ರವಾಗಿ (ನಿನ್ನನ್ನು ಪೂಜಿಸುವ ಆತುರದಿಂದ) । ಸ್ತುತಃ—ಪೂರ್ವ ಕಾಲದ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧಾರೂಪವಾದ ಆತುರದಿಂದ । ಗೃಣಾನಃ—ನಮ್ಮಿಂದ ಸ್ತುತಿಸಲ್ಪಡುವವನೂ ಆಗಿ । ಜರಿತ್ರೇ—ಸ್ತೋತೃವಾದ ನನಗೆ । ನದ್ಯೋ ನ—ನದಿಗಳು ಪ್ರವಾಹದಿಂದ ತುಂಬು ವಂತೆ । ಇಷಂ—ಅನ್ನವನ್ನು । ಪೀಪೇಃ—ತುಂಬಿಕೊಡು । ಹರಿವಃ—ಹರಿನಾಮಕವಾದ ಅಶ್ವಗಳುಳ್ಳ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನವ್ಯಂ—ನೂತನವಾದ । ಬ್ರಹ್ಮ—ಸ್ತೋತ್ರವು । ಅಕಾರಿ—ನಮ್ಮಿಂದ ನಿರ್ಮಿತವಾಗು ತ್ತದೆ । ರಥ್ಯಃ—ರಥವನ್ನು ಹೊಂದಿರುವ ನಾವು । ಧಿಯಾ—ನಮ್ಮ ಪ್ರಜ್ಞಾರೂಪವಾದ ಸ್ತುತಿಯಿಂದ । ಸದಾ-ಸಾಃ—ನಿನಗೆ ಹವಿರಾದಿಗಳನ್ನರ್ಪಿಸುವವರಾಗಿ । ಸ್ಯಾಮ—ಆಗಿರುವಂತೆ ಅನುಗ್ರಹಿಸು.

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನೇ ಪೂಜಿಸುವ ಆತುರದಿಂದಿದ್ದ ಹಿಂದಿನ ಕಾಲದ ಋಷಿಗಳಿಂದ ಸ್ತುತನಾದವನೂ, ಅದೇ ಶ್ರದ್ಧಾರೂಪವಾದ ಆತುರದಿಂದ ನಮ್ಮಿಂದಲೂ ಸ್ತುತಿಸಲ್ಪಡುವವನಾಗಿ ಸ್ತೋತೃವಾದ ನನಗೆ ನದಿಗಳು ಪ್ರವಾಹ ದಿಂದ ತುಂಬುವಂತೆ ಅನ್ನವನ್ನು ತುಂಬಿಕೊಡು. ಹರಿನಾಮಕವಾದ ಅಶ್ವಗಳುಳ್ಳ ಇಂದ್ರನೇ, ನಿನ್ನನ್ನುದ್ದೇಶಿಸಿ

CC-0. Jangamwadi Math Collection. Digitized by eGangotri

ನೂತನವಾದ ಸ್ತುತಿಯನ್ನು ನಾವು ನಿರ್ಮಿಸುತ್ತೇವೆ. ಉತ್ತಮವಾದ ರಥವನ್ನು ಹೊಂದಿರುವ ನಾವು ನಮ್ಮ ಪ್ರಜ್ಞಾ ರೂಪವಾದ ಸ್ತುತಿಯಿಂದ ನಿನಗೆ ಹವಿರಾದಿಗಳನ್ನರ್ಪಿಸುವವರಾಗಿರುವಂತೆ ಅನುಗ್ರಹಿಸು.

English Translation

Glorified ( in the past ), glorified, Indra, at present, satisfy your worshipper with food, as rivers (are filled with water): Lord of horses, a new hymn has been made for you : may we, possessed of chariots, be ever delight- in (your) praise.

---

## ಹದಿನೇಳನೆಯ ಸೂಕ್ತವು

---

ಸಾಯಣಭಾಷ್ಯಂ

ತ್ವಂ ಮಹಾँ ಇಂದ್ರ ತುಭ್ಯಮಿತ್ಯೇಕವಿಂಶತ್ಯೃಚಂ ಸಪ್ತಮಂ ಸೂಕ್ತಂ । ಅತ್ರೇಯಮನುಕ್ರಮಣಿಕಾ । ತ್ವಂ ಮಹಾँ ಅಸಿಕ್ನ್ಯೋ‌ಽಮೋಕಪದೇತಿ । ಅಸಿಕ್ನ್ಯಾಂ ಯಜಮಾನೋ ನ ಹೋತೇತ್ಯೇಕಪದಾ ವಿರಾಟ್ ಶಿಷ್ಟಾ ವಿಂಶತಿಸ್ತ್ರಿಷ್ಟುಭಃ । ಇಂದ್ರೋ ದೇವತಾ ॥ ಸಮೂಳ್ಹೇ ದಶರಾತ್ರೇಽಷ್ಟಮೇಽಹನಿ ನಿಷ್ಕೇವಲ್ಯ ಇದಂ ಸೂಕ್ತಂ ವಿನಿಯುಕ್ತಂ । ತಥಾ ಚ ಸೂತ್ರಿತಂ । ತ್ವಂ ಮಹಾँ ಇಂದ್ರ ತುಭ್ಯಮಿತಿ ನಿಷ್ಕೇವಲ್ಯಂ । ಆ. ೮-೭ । ಇತಿ ॥ ಇಂದ್ರಸ್ಯ ವೃತ್ರಘ್ನಸ್ತ್ವಂ ಮಹಾँ ಇತಿ ಪಶುಪುರೋಡಾಶಸ್ಯಾನುವಾಕ್ಯಾ । ಸೂತ್ರಿತಂ ಚ । ತ್ವಂ ಮಹಾँ ಇಂದ್ರ ತುಭ್ಯಂ ಹ ಕ್ಷಾಃ ಸತ್ರಾಹಣಂ । ಆ. ೩-೮ । ಇತಿ ॥

ಅನುವಾದವು—ತ್ವಂ ಮಹಾँ ಇಂದ್ರ ತುಭ್ಯಂ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಇಪ್ಪತ್ತೊಂದು ಋಕ್ಕುಗಳಿರುವವು. ಈ ಸೂಕ್ತಕ್ಕೆ ವಾಮದೇವನು ಋಷಿಯು. ಅನುಕ್ರಮಣಿಕೆಯಲ್ಲಿ—ತ್ವಂ ಮಹಾँ ಅಸಿಕ್ನ್ಯಾಮೋಕಪದಾ ಎಂದು ಹೇಳಿರುವುದು. ಈ ಸೂಕ್ತದ ಹದಿನೈದನೆಯ ಋಕ್ಕಾದ—ಅಸಿಕ್ನ್ಯಾಂ ಯಜಮಾನೋ ನ ಹೋತಾ ಎಂಬ ಋಕ್ಕು ಏಕಪದಾ ವಿರಾಟ್ ಎಂಬ ಛಂದಸ್ಸಿನದು. ಉಳಿದ ಇಪ್ಪತ್ತು ಋಕ್ಕುಗಳೂ ತ್ರಿಷ್ಟುಪ್‌ಛಂದಸ್ಕವು. ಇಂದ್ರನು ದೇವತೆಯು. ಸಮೂಳ್ಹವೆಂಬ ದಶರಾತ್ರಯಾಗದ ಎಂಟನೆಯ ದಿವಸ ನಿಷ್ಕೇವಲ್ಯಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತ ಸೂತ್ರದ—ತ್ವಂ ಮಹಾँ ಇಂದ್ರ ತುಭ್ಯಮಿತಿ ನಿಷ್ಕೇವಲ್ಯಂ ಎಂಬ ಸೂತ್ರದಿಂದ (ಆ. ೮-೭) ವಿವೃತವಾಗಿರುವುದು. ಪಶುಯಾಗದಲ್ಲಿ ವೃತ್ರಘ್ನ ಇಂದ್ರನನ್ನುದ್ದೇಶಿಸಿ ಪುರೋಡಾಶಹೋಮಮಾಡುವಾಗ—ತ್ವಂ ಮಹಾँ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ತ್ವಂ ಮಹಾँ ಇಂದ್ರ ತುಭ್ಯಂ ಹ ಕ್ಷಾಃ ಸತ್ರಾಹಣಂ ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

---

CC-0. Jangamwadi Math Collection. Digitized by eGangotri

## ಸೂಕ್ತ—೧೭

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೭ ॥
ಅಷ್ಟಕ—೩ ॥ ಅಧ್ಯಾಯ—೫ ॥ ವರ್ಗ—೨೧, ೨೨, ೨೩, ೨೪ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೨೧ ॥
ಋಷಿಃ—ವಾಮದೇವಃ ॥
ದೇವತಾ—ಇಂದ್ರಃ ॥
ಛಂದಃ—೧-೧೪, ೧೬-೨೧. ತ್ರಿಷ್ಟುಪ್ । ೧೫. ಏಕಪದಾ ॥

———

ಸಂಹಿತಾಪಾಠಃ

ತ್ವಂ ಮಹಾಁ ಇಂದ್ರ ತುಭ್ಯಂ ಹ ಕ್ಷಾ ಅನು ಕ್ಷತ್ರಂ ಮಂಹನಾ ಮನ್ಯತ ದ್ಯೌಃ ।
ತ್ವಂ ವೃತ್ರಂ ಶವಸಾ ಜಘನ್ವಾನ್ತ್ಸೃಜಃ ಸಿಂಧೂಁರಹಿನಾ ಜಗ್ರಸಾನಾನ್ ॥

ಪದಪಾಠಃ

ತ್ವಂ । ಮಹಾನ್ । ಇಂದ್ರ । ತುಭ್ಯಂ । ಹ । ಕ್ಷಾಃ । ಅನು । ಕ್ಷತ್ರಂ । ಮಂಹನಾ । ಮನ್ಯತ । ದ್ಯೌಃ ।
ತ್ವಂ । ವೃತ್ರಂ । ಶವಸಾ । ಜಘನ್ವಾನ್ । ಸೃಜಃ । ಸಿಂಧೂನ್ । ಅಹಿನಾ । ಜಗ್ರಸಾನಾನ್ । ೧ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಮಹಾನ್ಪ್ರಭೂತೋ ಭವಸಿ । ಕ್ಷಾಃ ಪೃಥಿವೀ । ಕ್ಷಾ ಇತಿ ಪೃಥಿವೀನಾಮೈತತ್ । ಮಂಹನಾ ಮಹತ್ತ್ವೇನ ಯುಕ್ತಾ ಸತೀ ತುಭ್ಯಂ ಹ ತ್ವದರ್ಥಮೇವ ಕ್ಷತ್ರಂ ತ್ವದೀಯಂ ಬಲಮನು ಮನ್ಯತ । ಅನ್ವಮನ್ಯತ । ಅನುಮತೀಚಕಾರ । ದ್ಯೌಶ್ಚ ತ್ವದರ್ಥಂ ಬಲಮನ್ವಮನ್ಯತ । ಹೇ ಇಂದ್ರ ತ್ವಂ ಶವಸಾ ತ್ವದೀಯೇನ ಬಲೇನ ವೃತ್ರಂ ಲೋಕಾನಾಮಾವರಕಂ ವೃತ್ರನಾಮಕಮಸುರಂ ಜಘನ್ವಾನ್ । ಹತವಾನ್। ಕಿಂಚ ಅಹಿನಾ ವೃತ್ರೇಣ ಜಗ್ರಸಾನಾನ್ ಜಗ್ರಹಾಣಾನ್ ಗ್ರಸ್ತಾನ್॥ ಗ್ರಸತೇರ್ಲಿಟಿ ಕಾನಜಾದೇಶಃ ॥ ಸಿಂಧೂನ್ ಅಪಃ ಸೃಜಃ । ಅಸೃಜಃ । ಸೃಷ್ಟವಾನಸಿ ॥

ಪ್ರತಿಪದಾರ್ಥ

ಇಂದ್ರ—ಇಂದ್ರನೇ । ತ್ವಂ—ನೀನು। ಮಹಾನ್—ಮಹತ್ತ್ವವುಳ್ಳವನಾಗಿದ್ದೀಯೆ। ಕ್ಷಾಃ—ಪೃಥಿವಿಯು। ಮಂಹನಾ—ಮಾಹಾತ್ಮ್ಯದಿಂದ ಕೂಡಿದ್ದರೂ ಸಹ। ತುಭ್ಯಂ ಹ—ನಿನಗೆ (ನಿನ್ನಮುಂದೆ)। ಕ್ಷತ್ರಂ-ನಿನ್ನಬಲವನ್ನು।

CC-0. Jangamwadi Math Collection. Digitized by eGangotri

ಅನುಮನ್ಯತೆ—ಒಪ್ಪಿಕೊಂಡಿದೆ । ದ್ಯಾಃ—ದ್ಯುಲೋಕವೂ ಸಹ (ಒಪ್ಪಿಕೊಂಡಿದೆ) । ತ್ವಂ—ನೀನು । ಶವಸಾ—ನಿನ್ನ ಬಲದಿಂದ । ವೃತ್ರಂ—ಲೋಕವನ್ನೆಲ್ಲಾ ಆವರಿಸಿದ ಅಸುರನನ್ನು । ಜಘನ್ವಾನ್—ಕೊಂದಿರುವೆ । ಅಹಿನಾ—ಆದೇ ವೃತ್ರಾಸುರನಿಂದ । ಜಗ್ರಸಾನಾನ್—ಪ್ರತಿಹತವಾದಂತಹ । ಸಿಂಧೂನ್—ಉದಕಗಳನ್ನು । ಸೃಜಃ—ಬಿಡಿಸಿ ಪ್ರವಹಿಸುವಂತೆ ಮಾಡಿದೆ.

ಭಾವಾರ್ಥ

ಎಲೈ ಇಂದ್ರನೇ, ನೀನು ಅತ್ಯಧಿಕವಾದ ಮಹತ್ತ್ವವುಳ್ಳವನಾಗಿದ್ದೀಯೆ. ಅತ್ಯಂತ ಮಾಹಾತ್ಮ್ಯದಿಂದ ಕೂಡಿದ ಪೃಥ್ವಿಯೂ ದ್ಯುಲೋಕವೂ ಸಹ ನೀನೇ ಅವುಗಳಿಗಿಂತಲೂ ಅಧಿಕನಾದವನು ಎಂದು ನಿನ್ನ ಮುಂದೆ ನಿನ್ನ ಬಲವನ್ನು ಒಪ್ಪಿಕೊಂಡಿವೆ. ನೀನು ನಿನ್ನ ಶಕ್ತಿಯಿಂದ ಲೋಕವನ್ನೆಲ್ಲಾ ಆವರಿಸಿದ ಅಸುರನನ್ನು ಕೊಂದಿರುವೆ. ವೃತ್ರಾಸುರನಿಂದ ಪ್ರತಿಹತವಾದ ಉದಕಗಳನ್ನು ಬಿಡಿಸಿ ಪ್ರವಹಿಸುವಂತೆ ಮಾಡಿದೆ.

English Translation

You, Indra, are mighty; the vast earth confesses to you (your) strength, as do the heaven: you have slain Vritra by your vigour, you have set free the rivers arrested by Ahi.

---

ಸಂಹಿತಾಪಾಠಃ

ತವ ತ್ವಿಷೋ ಜನಿಮನ್ರೇಜತ ದ್ಯೌ ರೇಜದ್ಭೂಮಿರ್ಭಿಯಸಾ ಸ್ವಸ್ಯ ಮನ್ಯೋಃ ।
ಋಘಾಯಂತ ಸುಭ್ವಃ ಪರ್ವತಾಸ ಆರ್ದನ್ಧನ್ವಾನಿ ಸರಯಂತ ಆಪಃ ॥

ಪದಪಾಠಃ

ತವ । ತ್ವಿಷಃ । ಜನಿಮನ್ । ರೇಜತ । ದ್ಯೌಃ । ರೇಜತ್ । ಭೂಮಿಃ । ಭಿಯಸಾ । ಸ್ವಸ್ಯ । ಮನ್ಯೋಃ ।
ಋಘಾಯಂತ । ಸುಽಭ್ವಃ । ಪರ್ವತಾಸಃ । ಆರ್ದನ್ । ಧನ್ವಾನಿ । ಸರಯಂತೇ । ಆಪಃ ॥ ೨ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಿಷೋ ದೀಪ್ಯಮಾನಸ್ಯ ತವ ತ್ವದೀಯೇ ಜನಿಮನ್ ಜನ್ಮನಿ ಸತಿ ದ್ಯೌರಂತರಿಕ್ಷಂ ಸ್ವಸ್ಯ ತ್ವದೀಯಾನ್ಮನ್ಯೋಃ ಕೋಪಾತ್ । ಪಂಚಮ್ಯರ್ಥೇ ಷಷ್ಠೀ । ಭಿಯಸಾ ಜಾತಭಯೇನ ರೇಜತ । ಅರೇಜತ್ । ಅಕಂಪತ । ಭೂಮಿಶ್ಚ ರೇಜತ್ । ಕಂಪಮಾನಾ ಬಭೂವ । ಸುಭ್ವೋ ಮಹಾಂತಃ

CC-0. Jangamwadi Math Collection. Digitized by eGangotri

ಪರ್ವತಾಸಃ। ಪರ್ವತಾ ಮೇಘಾಃ। ಋಘಾಯಂತ। ಸಸ್ಯಾದೀನಾಂ ವೃಷ್ಟಿಪ್ರದಾನಾರ್ಥಂ ನಿಯಾಮಕೇನ ತ್ವಯಾಬಾಧ್ಯಂತ । ತಥಾ ಮೇಘಾ ಆರ್ದನ್ । ಪ್ರಾಣಿನಾಂ ಪಿಪಾಸಾರೂಪಾಂ ಪೀಡಾಮಹಿಂಸನ್ । ತಥಾ ಮೇಘಾ ಧನ್ವಾನ್ಯುದಕರಹಿತಾನ್ದೇಶಾನಾಪೋಽಪಃ ಸರಯಂತೇ । ಗಮಯಂತಿ ॥

ಪ್ರತಿಪದಾರ್ಥ

(ಎಲೈ ಇಂದ್ರನೇ), ತ್ವಿಷಃ—ಪ್ರಭಾಯುತನಾದ । ತವ—ನಿನ್ನ । ಜನಿಮನ್—ಉತ್ಪತ್ತಿ ಕಾಲದಲ್ಲಿ । ದ್ಯೌಃ—ಅಂತರಿಕ್ಷವು । ಸ್ವಸ್ಯ—ನಿನ್ನ। ಮನ್ಯೋಃ—ಕೋಪದಿಂದ (ಉತ್ಪನ್ನವಾದ) । ಭಿಯಸಾ—ಭೀತಿಯಿಂದ । ರೇಜತ—ಕಂಪಿಸಿತು । ಭೂಮಿಃ—ಭೂಮಿಯೂ ಕೂಡ । ರೇಜತ್—ಕಂಪಿಸಿತು । ಸುಭ್ವಃ—ಮಹತ್ಸ್ವರೂಪವುಳ್ಳ । ಪರ್ವತಾಸಃ—ಮೇಘಗಳು । ಋಘಾಯಂತ—ನಿನ್ನ ನಿಯಮನಕ್ಕೆ ಒಳಪಟ್ಟವಾದವು. (ಆದುದರಿಂದ) । ಆರ್ದನ್—(ದಗ್ಧವಾದ ಪ್ರದೇಶಗಳನ್ನು) ತಂಪಾಗಿ ಮಾಡುತ್ತಾ । ಧನ್ವಾನಿ—ಉದಕರಹಿತವಾದ ಬಂಜರು ಭೂಮಿಯಲ್ಲೂ ಸಹ । ಆಪಃ—ವೃಷ್ಟಿರೂಪವಾದ ಉದಕಗಳನ್ನು । ಸರಯಂತೇ—ಸುರಿಸುತ್ತವೆ.

ಭಾವಾರ್ಥ

ಎಲೈ ಇಂದ್ರನೇ, ಪ್ರಭಾವಯುತನಾದ ನಿನ್ನ ಉತ್ಪತ್ತಿ ಕಾಲದಲ್ಲಿ ಅಂತರಿಕ್ಷವು ನಿನ್ನ ಕೋಪದಿಂದ ಜನಿತವಾದ ಭೀತಿಯಿಂದ ಕಂಪಿಸಿತು. ಭೂಮಿಯೂ ಸಹ ನಡುಗಿತು. ಮಹತ್ಸ್ವರೂಪವುಳ್ಳ ಮೇಘಗಳು ನಿನ್ನ ನಿಯಮನಕ್ಕೆ ಒಳಪಟ್ಟವಾಗಿ, ಪ್ರಾಣಿಗಳ ದಾಹವನ್ನು ಆರಿಸುತ್ತಲೂ, ದಗ್ಧವಾದ ಪ್ರದೇಶಗಳನ್ನು ತಂಪುಮಾಡುತ್ತಲೂ ಸಹ ಉದಕರಹಿತವಾದ ಬಂಜರು ಭೂಮಿಯಲ್ಲೂ ವೃಷ್ಟಿರೂಪವಾದ ಉದಕಗಳನ್ನು ಸುರಿಸುತ್ತವೆ.

English Translation

At the birth of you who are resplendent, trembled the heaven ( and ) trembled the earth through fear of your wrath; the mighty clouds were confined; they destroyed (the distress of drought), spreading the waters over the dry places.

---

ಸಂಹಿತಾಪಾಠಃ

ಭಿನದ್ಗಿರಿಂ ಶವಸಾ ವಜ್ರಮಿಷ್ಣನ್ನಾವಿಷ್ಕೃಣ್ವಾನಃ ಸಹಸಾನ ಓಜಃ ।
ವಧೀದ್ವೃತ್ರಂ ವಜ್ರೇಣ ಮಂದಸಾನಃ ಸರನ್ನಾಪೋ ಜವಸಾ ಹತವೃಷ್ಣೀಃ॥

ಪದಪಾಠಃ

ಭಿನತ್ । ಗಿರಿಂ । ಶವಸಾ । ವಜ್ರಂ । ಇಷ್ಣನ್ । ಆವಿಃऽಕೃಣ್ವಾನಃ । ಸಹಸಾನಃ । ಓಜಃ ।

ವಧೀತ್ । ವೃತ್ರಂ । ವಜ್ರೇಣ । ಮಂದಸಾನಃ । ಸರನ್ । ಆಪಃ । ಜವಸಾ । ಹತಽವೃಷ್ಣೀಃ ॥ ೩ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಸಹಸಾನಃ ಶತ್ರೂಣಾಮಭಿಭವನ್ನೋಜಸ್ತೇಜ ಆವಿಷ್ಕೃಣ್ವಾನ ಆವಿಷ್ಕುರ್ವನ್ನಿಂದ್ರೋ ವಜ್ರಮಿಷ್ಣನ್ ವಜ್ರಂ ಪ್ರೇರಯನ್ ಶವಸಾ ಬಲೇನ ಗಿರಿಂ ಪರ್ವತಜಾತಂ ಭಿನತ್ । ಅಭಿನತ್ । ಬಿಭೇದ । ಕಿಂಚ ಮಂದಸಾನಃ ಸೋಮೇನ ಮೋದಮಾನ ಇಂದ್ರೋ ವಜ್ರೇಣ ವೃತ್ರಂ ವೃತ್ರನಾಮಾನಮಸುರಂ ವಧೀತ್ । ಅವಧೀತ್ । ಜಘಾನ । ತತ ಆಪೋ ವೃತ್ರೇಣಾವೃತಾನ್ಯುದಕಾನಿ ಹತವೃಷ್ಣೀಃ । ಹತೋ ವೃಷಾ ವೃತ್ರೋ ಯಾಸಾಂ ತಾ ಹತವೃಷ್ಣ್ಯಃ । ತಾ ವೃತ್ರವಧಾನಂತರಂ ನಿವಾರಣರಹಿತಾಃ ಸತ್ಯೋ ಜವಸಾ ವೇಗೇನ ಸರನ್ । ಅಸರನ್ । ಅಗಚ್ಛನ್ ॥

ಪ್ರತಿಪದಾರ್ಥ

ಸಹಸಾನಃ—ಶತ್ರುಧರ್ಷಕನಾದ ಇಂದ್ರನು । ಓಜಃ—ತನ್ನ ತೇಜಸ್ಸನ್ನು । ಆವಿಷ್ಕೃಣ್ವಾನಃ—ಪ್ರಕಟಪಡಿಸುತ್ತಾ । ವಜ್ರಂ—ವಜ್ರಾಯುಧವನ್ನು । ಇಷ್ಣನ್—ಪ್ರಯೋಗಿಸಿ । ಶವಸಾ—ತನ್ನ ಬಲದಿಂದ । ಗಿರಿಂ—ಬೆಟ್ಟವನ್ನು । ಭಿನತ್—ಸೀಳಿದನು । ಮಂದಸಾನಃ—ಸೋಮಪಾನದಿಂದ ತೃಪ್ತನಾದ ಇಂದ್ರನು । ವಜ್ರೇಣ—ವಜ್ರಾಯುಧದಿಂದ । ವೃತ್ರಂ—ವೃತ್ರನೆಂಬ ಅಸುರನನ್ನು । ವಧೀತ್—ಕೊಂದನು (ಅನಂತರ) । ಆಪಃ—ಉದಕಗಳು । ಹತವೃಷ್ಣೀಃ—ಪ್ರತಿಬಂಧಕರಹಿತವಾಗಿ । ಜವಸಾ—ವೇಗದಿಂದ । ಸರನ್—ಪ್ರವಹಿಸಿದವು.

ಭಾವಾರ್ಥ

ಶತ್ರುದರ್ಷಕನಾದ ಇಂದ್ರನು ತನ್ನ ತೇಜಸ್ಸನ್ನು ಪ್ರಕಟಪಡಿಸುತ್ತಾ ವಜ್ರಾಯುಧವನ್ನು ಪ್ರಯೋಗಿಸಿ ತನ್ನ ಬಲದಿಂದ ಬೆಟ್ಟವನ್ನು ಸೀಳಿದನು. ಸೋಮಪಾನದಿಂದ ತೃಪ್ತನಾದ ಇಂದ್ರನು ವಜ್ರಾಯುಧದಿಂದ ವೃತ್ರನನ್ನು ಕೊಂದನು. ತದನಂತರ ಉದಕಗಳು ಪ್ರತಿಬಂಧಕರಹಿತವಾಗಿ ವೇಗದಿಂದ ಪ್ರವಹಿಸಿದವು.

English Translation

The subduer of foes, manifesting his energy and hurling his thunderbolt, shattered the mountain by his strength: he slew Vritra with the thunderbolt, exulting, and the waters whose obstructor was destroyed rushed forth with rapidity.

---

ಸಂಹಿತಾಪಾಠಃ

ಸುವೀರಸ್ತೇ ಜನಿತಾ ಮನ್ಯತ ದ್ಯೌರಿಂದ್ರಸ್ಯ ಕರ್ತಾ ಸ್ವಪಸ್ತಮೋ ಭೂತ್ ।
ಯ ಈಂ ಜಜಾನ ಸ್ವರ್ಯಂ ಸುವಜ್ರಮನಪಚ್ಯುತಂ ಸದಸೋ ನ ಭೂಮ ॥



CC-0. Jangamwadi Math Collection. Digitized by eGangotri

ಪದಪಾಠಃ

ಸುಽವೀರಃ । ತೇ । ಜನಿತಾ । ಮನ್ಯತ । ದ್ಯೌಃ । ಇಂದ್ರಸ್ಯ । ಕರ್ತಾ । ಸ್ವಪಃಽತಮಃ । ಭೂತ್ ।

ಯಃ । ಈಂ । ಜಜಾನ । ಸ್ವರ್ಯಂ । ಸುಽವಜ್ರಂ । ಅನಪಽಚ್ಯುತಂ । ಸದಸಃ । ನ । ಭೂಮ ॥ ೪ ॥

ಸಾಯಣಭಾಷ್ಯಂ

ಹೇ ಇಂದ್ರ ಯಃ ಪ್ರಜಾಪತಿಃ ಸ್ವರ್ಯಮೃತ್ವಿಗಾದಿಭಿಃ ಸ್ತುತ್ಯಂ ಸುವಜ್ರಂ ಶೋಭನವಜ್ರೋಪೇತಂ ಸದಸಃ ಸ್ವಕೀಯಾತ್ಸ್ವರ್ಗಾಖ್ಯಾತ್ಸ್ಥಾನಾದನಪಚ್ಯುತಂ ವಿನಾಶರಹಿತಂ ಚ । ನೇತಿ ಸಮುಚ್ಚಯಾರ್ಥೇ । ಭೂಮ ಭೂಮ್ನಾ ಮಹತ್ತ್ವೇನ ಯುಕ್ತಮೀಮೇನಂ ತ್ವಾಂ ಜಜಾನ । ಅಜೀಜನತ್ ॥ ಜನ ಜನನ ಇತಿ ಧಾತುಃ ॥ ದ್ಯೌರ್ದ್ಯೋತಮಾನಸ್ತೇ ತವ ಜನಿತಾ ಜನಯಿತಾ ಸ ಪ್ರಜಾಪತಿಃ ಸುವೀರಃ ಶೋಭನಪುತ್ರವಾನಹಮಸ್ಮೀತಿ ಮನ್ಯತ । ಅಮನ್ಯತ । ಕಿಂಚ ಇಂದ್ರಸ್ಯ ಕರ್ತೇಂದ್ರಸ್ಯ ಜನಯಿತಾ ಪ್ರಜಾಪತಿಃ ಸ್ವಪಸ್ತಮೋಽತ್ಯಂತಂ ಶೋಭನಕರ್ಮಾಭೂತ್ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಯಃ—ಯಾವ ಪ್ರಜಾಪತಿಯು । ಸ್ವರ್ಯಂ—ಋತ್ವಿಕ್ಕುಗಳಿಂದ ಸ್ತುತಿಸಲ್ಪಡುವವನೂ । ಸುವಜ್ರಂ—ಶ್ರೇಷ್ಠವಾದ ವಜ್ರಾಯುಧದಿಂದ ಕೂಡಿದವನೂ । ಸದಸಃ—ತನ್ನ ಸ್ಥಾನವಾದ ಸ್ವರ್ಗದಿಂದ । ಅನಪಚ್ಯುತಂ—ಚ್ಯುತಿಯಿಲ್ಲದಿರುವವನೂ । ಭೂಮ—ಮಹತ್ತ್ವದಿಂದ ಕೂಡಿದವನೂ ಆದ। ಈಂ—ಇಂದ್ರನಾದ ನಿನ್ನನ್ನು । ಜಜಾನ—ಸೃಷ್ಟಿಸಿದನೋ ಅಂತಹವನೂ । ದ್ಯೌಃ—ಪ್ರಕಾಶಮಾನನೂ । ತೇ ಜನಿತಾ—ನಿನ್ನ ಉತ್ಪಾದಕನೂ ಆದ ಪ್ರಜಾಪತಿಯು । ಸುವೀರಃ—ಉತ್ತಮನಾದ ಪುತ್ರನನ್ನು ಪಡೆದೆನೆಂದು । ಮನ್ಯತ—ತಿಳಿದುಕೊಂಡನು । ಇಂದ್ರಸ್ಯ—ಇಂದ್ರನ । ಕರ್ತಾ—ಉತ್ಪಾದಕನಾದ ಪ್ರಜಾಪತಿಯು । ಸ್ವಪಸ್ತಮಃ—ಉತ್ತಮವಾದ ಕರ್ಮದ ಕರ್ತನಾಗಿ । ಭೂತ್—ಆದನು.

ಭಾವಾರ್ಥ

ಎಲೈ ಇಂದ್ರನೇ, ಯಾವ ಪ್ರಜಾಪತಿಯು ಋತ್ವಿಕ್ಕುಗಳಿಂದ ಸ್ತುತಿಸಲ್ಪಡುವವನೂ, ಶ್ರೇಷ್ಠವಾದ ವಜ್ರಾಯುಧದಿಂದ ಕೂಡಿದವನೂ, ತನ್ನ ಸ್ಥಾನವಾದ ಸ್ವರ್ಗದಿಂದ ಚ್ಯುತಿಯಿಲ್ಲದಿರುವವನೂ, ಮಹತ್ತ್ವದಿಂದ ಕೂಡಿದವನೂ ಆದ ಇಂದ್ರನಾದ ನಿನ್ನನ್ನು ಸೃಷ್ಟಿಸಿದನೋ ಅಂತಹವನೂ, ಪ್ರಕಾಶಮಾನನೂ, ನಿನ್ನ ಉತ್ಪಾದಕನೂ ಆದ ಪ್ರಜಾಪತಿಯು ಉತ್ತಮನಾದ ಪುತ್ರನನ್ನು ಪಡೆದೆನೆಂದು ತಿಳಿದುಕೊಂಡನು. ಇಂದ್ರನ ಉತ್ಪಾದಕನಾದ ಪ್ರಜಾಪತಿಯು ಉತ್ತಮನಾದ ಕರ್ಮಕರ್ತನಾದನು.

English Translation

Heaven, your progenitor, conceived (I have obtained) a worthy son; the maker of Indra was the accomplisher of a most excellent work; he who begot the adorable (Indra), armed with the thunderbolt, irremovable from his station, and endowed with greatness.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯ ಏಕ ಇಚ್ಚ್ಯಾವಯತಿ ಪ್ರ ಭೂಮಾ ರಾಜಾ ಕೃಷ್ಟೀನಾಂ ಪುರುಹೂತ ಇಂದ್ರಃ ।

ಸತ್ಯಮೇನಮನು ವಿಶ್ವೇ ಮದಂತಿ ರಾತಿಂ ದೇವಸ್ಯ ಗೃಣತೋ ಮಘೋನಃ॥

ಪದಪಾಠಃ

ಯಃ । ಏಕಃ । ಇತ್ । ಚ್ಯವಯತಿ । ಪ್ರ । ಭೂಮ । ರಾಜಾ । ಕೃಷ್ಟೀನಾಂ । ಪುರುಃಹೂತಃ । ಇಂದ್ರಃ ।

ಸತ್ಯಂ । ಏನಂ । ಅನು । ವಿಶ್ವೇ । ಮದಂತಿ । ರಾತಿಂ । ದೇವಸ್ಯ । ಗೃಣತಃ । ಮಘೋನಃ ॥ ೫ ॥

ಸಾಯಣಭಾಷ್ಯಂ

ಕೃಷ್ಟೀನಾಂ ಸರ್ವಾಸಾಂ ಪ್ರಜಾನಾಂ ರಾಜಾ ಪ್ರಭುಃ ಪುರುಹೂತೋ ಬಹುಭಿರಾಹೂತ ಏಕ ಇದ್ದೇವಾನಾಂ ಮಧ್ಯೇ ಮುಖ್ಯ ಏವ ಯ ಇಂದ್ರೋ ಭೂಮ ಭೂತಂ ನಿಷ್ಪನ್ನಂ ಶತ್ರುಭ್ಯೋ ಭಯಂ ಪ್ರ ಚ್ಯಾವಯತಿ । ಪ್ರಕರ್ಷೇಣ ನಾಶಯತಿ । ವಿಶ್ವೇ ಸರ್ವೇ ಯಜಮಾನಾ ಮಘೋನೋ ಮಘವತಃ । ಹವಿರ್ಲಕ್ಷಣಧನವತ ಇತ್ಯರ್ಥಃ । ದೇವಸ್ಯೇಂದ್ರಸಮಾಶ್ರಯಾತ್ ದ್ಯೋತಮಾನಸ್ಯ ಗೃಣತೇಃ ಸ್ತುವತೋ ರಾತಿಂ ಬಂಧುಮೇನಮಿಂದ್ರಮನು ಲಕ್ಷೀಕೃತ್ಯ ಸತ್ಯಮೇವ ಮದಂತಿ । ಸ್ತುವಂತಿ ॥

ಪ್ರತಿಪದಾರ್ಥ

ಕೃಷ್ಟೀನಾಂ—ಸಕಲ ಪ್ರಜೆಗಳಿಗೂ । ರಾಜಾ—ಪ್ರಭುವೂ । ಪುರುಹೂತಃ—ಅನೇಕರಿಂದ ಆಹ್ವಾನಿಸಲ್ಪಡುವವನೂ । ಏಕ ಇತ್—ದೇವಮಾನವಾದಿಗಳಿಗೆಲ್ಲಾ ಮುಖ್ಯನೂ ಆದ । ಯಃ ಇಂದ್ರಃ-ಯಾವ ಇಂದ್ರನು। ಭೂಮ—ಶತ್ರುಗಳಿಂದ ನಿಷ್ಪನ್ನವಾದ ಭಯವನ್ನು । ಪ್ರ ಚ್ಯಾವಯತಿ—ನಾಶಮಾಡುವನೋ ಅಂತಹವನೂ । ಮಘೋನಃ—ಹವಿಸ್ಸಿನರೂಪದ ಧನವುಳ್ಳವನೂ । ದೇವಸ್ಯ—ಪ್ರಕಾಶಮಾನನೂ ಆದ । ಗೃಣತಃ—ಸ್ತುತಿಕರ್ತನಿಗೆ । ರಾತಿಂ—ಬಂಧುವೂ ಆದ । ಏನಂ ಅನು—ಈ ಇಂದ್ರನನ್ನುದ್ದೇಶಿಸಿ । ಸತ್ಯಂ—ಸತ್ಯರೂಪದಲ್ಲಿ । ವಿಶ್ವೇ—ಸಮಸ್ತ ಯಜಮಾನರೂ ಸಹ । ಮದಂತಿ—ಸ್ತುತಿಸುತ್ತಾರೆ.

ಭಾವಾರ್ಥ

ಸಕಲಪ್ರಜೆಗಳಿಗೂ ಪ್ರಭುವೂ, ಅನೇಕರಿಂದ ಆಹ್ವಾನಿಸಲ್ಪಡುವವನೂ, ದೇವಮಾನವಾದಿಗಳಿಗೆಲ್ಲಾ ಮುಖ್ಯನೂ ಆದ ಯಾವ ಇಂದ್ರನು ಶತ್ರುಗಳಿಂದ ನಿಷ್ಪನ್ನವಾದ ಭಯವನ್ನು ನಾಶಮಾಡುವನೋ ಅಂತಹವನೂ, ಪ್ರಕಾಶಮಾನನೂ, ಹವಿಸ್ಸಿನರೂಪದ ಧನವುಳ್ಳವನೂ ಆದ ಸ್ತುತಿಕರ್ತನಿಗೆ ಬಂಧುವೂ ಆದ ಈ ಇಂದ್ರನನ್ನುದ್ದೇಶಿಸಿ ಸಮಸ್ತ ಯಜಮಾನರೂ ಸತ್ಯರೂಪದಲ್ಲಿ ಸ್ತುತಿಸುತ್ತಾರೆ.

CC-0. Jangamwadi Math Collection. Digitized by eGangotri

## English Translation

All men, praising the munificence of the divine Maghavan, verily glorify him who alone casts down many, Indra, the king of men, the adored of many.



ಸಂಹಿತಾಪಾಠಃ

ಸತ್ರಾ ಸೋಮಾ ಅಭವನ್ನಸ್ಯ ವಿಶ್ವೇ ಸತ್ರಾ ಮದಾಸೋ ಬೃಹತೋ ಮದಿಷ್ಠಾಃ ।
ಸತ್ರಾಭವೋ ವಸುಪತಿರ್ವಸೂನಾಂ ದತ್ರೇ ವಿಶ್ವಾ ಅಧಿಥಾ ಇಂದ್ರ ಕೃಷ್ಟೀಃ ॥

ಪದಪಾಠಃ

ಸತ್ರಾ । ಸೋಮಾಃ । ಅಭವನ್ । ಅಸ್ಯ । ವಿಶ್ವೇ । ಸತ್ರಾ । ಮದಾಸಃ । ಬೃಹತಃ । ಮದಿಷ್ಠಾಃ ।
ಸತ್ರಾ । ಅಭವಃ । ವಸುऽಪತಿಃ । ವಸೂನಾಂ । ದತ್ರೇ । ವಿಶ್ವಾಃ । ಅಧಿಥಾಃ । ಇಂದ್ರ । ಕೃಷ್ಟೀಃ ॥ ೬ ॥

ಸಾಯಣಭಾಷ್ಯಂ

ವಿಶ್ವೇ ಸರ್ವೇ ಸೋಮಾ ಅಸ್ಯೇಂದ್ರಸ್ಯ ಸತ್ರಾ । ಸತ್ರೇತಿ ಸತ್ಯನಾಮೈತತ್ । ಸತ್ಯಮೇವ ಪ್ರಭೂತಾ ಅಭವನ್ । ಕಿಂಚ ಮದಾಸೋ ಮದಾ ಮದಕರಾಃ ಸೋಮಾ ಬೃಹತೋ ಮಹತೋऽಸ್ಯೇಂದ್ರಸ್ಯ ಮದಿಷ್ಠಾ ಮಾದಯಿತೃತಮಾಃ ಸತ್ರಾ ಸತ್ಯಮೇವಾಭವನ್ । ಹೇ ಇಂದ್ರ ತ್ವಂ ವಸುಪತಿರ್ಧನಪತಿಃ । ನ ಕೇವಲಂ ಧನಪತಿಃ ಕಿಂತು ವಸೂನಾಂ ಸರ್ವೇಷಾಂ ಪಶ್ವಾದೀನಾಂ ಧನಾನಾಂ ಪತಿಃ ಸತ್ರಾ ಸತ್ಯಮೇವಾಭವಃ । ಭವಸಿ । ಹೇ ಇಂದ್ರ ತ್ವಂ ದತ್ರೇ ಧನೇ ನಿಮಿತ್ತಭೂತೇ ಸತಿ ವಿಶ್ವಾಃ ಸರ್ವಾಃ ಕೃಷ್ಟೀಃ ಸ್ತೋತ್ರೀಃ ಪ್ರಜಾ ಅಧಿಥಾಃ । ಧಾರಯಸಿ ॥

ಪ್ರತಿಪದಾರ್ಥ

ವಿಶ್ವೇ—ಸಮಸ್ತವಾದ । ಸೋಮಾಃ—ಸೋಮಗಳೂ । ಸತ್ರಾ—ಸತ್ಯವಾಗಿಯೂ । ಅಸ್ಯ—ಇಂದ್ರನಿಗೇ ಸೇರಿದವಾಗಿ । ಅಭವನ್—ಆದವು । ಮದಾಸಃ—ಮದಕಾರಕಗಳಾದ ಸೋಮಗಳು । ಬೃಹತಃ—ಮಹತ್ತ್ವರೂಪವುಳ್ಳ ಇಂದ್ರನಿಗೆ । ಮದಿಷ್ಠಾಃ—ತೃಪ್ತಿಕಾರಕಗಳಾಗಿ । ಸತ್ರಾ—ಸತ್ಯವಾಗಿಯೂ ಆದವು । ಇಂದ್ರ—ಎಲೈ ಇಂದ್ರನೇ । (ತ್ವಂ—ನೀನು) । ವಸುಪತಿಃ—ಧನಪತಿಯಾಗಿಯೂ । ವಸೂನಾಂ—ಸಕಲಪಶ್ವಾದಿರೂಪವಾದ ಧನಗಳಿಗೂ ಪತಿಯಾಗಿ । ಸತ್ರಾ—ಸತ್ಯವಾಗಿಯೂ । ಅಭವಃ—ಆಗಿರುವೆ । ದತ್ರೇ—ಧನನಿಮಿತ್ತವಾಗಿ (ದಾನದಿಂದ) । ವಿಶ್ವಾಃ ಕೃಷ್ಟೀಃ—ಸಮಸ್ತ ಪ್ರಜೆಗಳನ್ನು । ಅಧಿಥಾಃ—ಎತ್ತಿ ಹಿಡಿದಿದ್ದೀಯೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಸಮಸ್ತ ಸೋಮಗಳೂ ಸತ್ಯವಾಗಿಯೂ ಇಂದ್ರನಿಗೇ ಸೇರಿದವಾದವು. ಮದಕಾರಕಗಳಾದ ಸೋಮಗಳು ಮಹತ್ತ್ವರೂಪವುಳ್ಳ ಇಂದ್ರನಿಗೆ ಸತ್ಯವಾಗಿಯೂ ತೃಪ್ತಿಕಾರಕಗಳಾಗಿ ಆದವು. ಎಲೈ ಇಂದ್ರನೇ, ನೀನು ಧನಪತಿಯಾಗಿಯೂ, ಸಕಲ ಪಶ್ವಾದಿರೂಪವಾದ ಧನದ ಪತಿಯಾಗಿಯೂ ಆಗಿದ್ದೀಯೆ. ಧನದ ದಾನದ ನಿಮಿತ್ತವಾಗಿ ಸಕಲ ಪ್ರಜೆಗಳನ್ನೂ ಎತ್ತಿ ಹಿಡಿದಿದ್ದೀಯೆ (ಪೋಷಿಸುತ್ತೀಯೆ).

English Translation

Truly are all libations his; the inebriating draughts are truly most exhilarating to the mighty Indra: truly are you the lord of wealth, of (all sorts of) treasures: you, Indra, support all people by the gift (of riches).

---

ಸಂಹಿತಾಪಾಠಃ

ತ್ವಮಧ ಪ್ರಥಮಂ ಜಾಯಮಾನೋಽಮೇ ವಿಶ್ವಾ ಅಧಿಥಾ ಇಂದ್ರ ಕೃಷ್ಟೀಃ।
ತ್ವಂ ಪ್ರತಿ ಪ್ರವತ ಆಶಯಾನಮಹಿಂ ವಜ್ರೇಣ ಮಘವನ್ವಿ ವೃಶ್ಚಃ ॥ ೭ ॥

ಪದಪಾಠಃ

ತ್ವಂ । ಅಧ । ಪ್ರಥಮಂ । ಜಾಯಮಾನಃ । ಅಮೇ । ವಿಶ್ವಾಃ । ಅಧಿಥಾಃ । ಇಂದ್ರ । ಕೃಷ್ಟೀಃ ।
ತ್ವಂ । ಪ್ರತಿ । ಪ್ರಽವತಃ । ಆಽಶಯಾನಂ । ಅಹಿಂ । ವಜ್ರೇಣ । ಮಘಽವನ್ । ವಿ । ವೃಶ್ಚಃ ॥ ೭ ॥

ಸಾಯಣಭಾಷ್ಯಂ

ಅಧ ಅಪಿ ಚ ಪ್ರಥಮಮೇವ ಜಾಯಮಾನಸ್ತ್ವಮಮೇ ವೃತ್ರನಿಮಿತ್ತೇ ಭಯೇ ಸತಿ ವಿಶ್ವಾಃ ಸರ್ವಾಃ ಕೃಷ್ಟೀಃ ಪ್ರಜಾ ಅಧಿಥಾಃ । ರಕ್ಷಕತ್ವೇನ ಧಾರಯಸಿ । ಹೇ ಮಘವನ್ಧನವನ್ನಿಂದ್ರ ತ್ವಂ ಪ್ರತಿ ಪ್ರವತಃ ಪ್ರತಿ ಪ್ರವಣಾನುದಕವತೋ ದೇಶಾನ್ ಲಕ್ಷೀಕೃತ್ಯಾಶಯಾನಮಪಾಂ ನಿರೋಧಕಮಹಿಂ ವೃತ್ರನಾಮಾನಮಸುರಂ ವಜ್ರೇಣ ವಿ ವೃಶ್ಚಃ । ವ್ಯವೃಶ್ಚಃ ॥ ಛಿನ್ನವಾನಸಿ ॥

ಪ್ರತಿಪದಾರ್ಥ

ಅಧ—ಮತ್ತು । ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಜಾಯಮಾನಃ—ಉತ್ಪನ್ನನಾಗಿ । ಪ್ರಥಮಂ—ಪ್ರಾರಂಭದಲ್ಲಿಯೇ । ಅಮೇ—ವೃತ್ರನಿಮಿತ್ತವಾದ ಭಯವುಂಟಾದಾಗ । ವಿಶ್ವಾಃ—ಸಮಸ್ತವಾದ

CC-0. Jangamwadi Math Collection. Digitized by eGangotri

ಕೃಷ್ಟೀಃ—ಪ್ರಜೆಗಳನ್ನು । ಅಧಿಥಾಃ—ರಕ್ಷಣೆಗಾಗಿ ಧರಿಸಿದ್ದೀಯೆ । ಮಘವನ್—ಧನವಂತನಾದ ಇಂದ್ರನೇ । ತ್ವಂ—ನೀನು । ಪ್ರತಿ ಪ್ರವತಃ—ಪ್ರವಹಿಸುವ ಉದಕಪ್ರದೇಶಗಳಿಗೆ ಅಡ್ಡಲಾಗಿ । ಆಶಯಾನಂ—ತಡೆಗಟ್ಟಿ ಬಿದ್ದಿದ್ದ । ಅಹಿಂ—ವೃತ್ರನನ್ನು । ವಜ್ರೇಣ—ವಜ್ರಾಯುಧದಿಂದ । ವಿವೃಶ್ಚಃ—ಕತ್ತರಿಸಿದ್ದೀಯೆ.

ಭಾವಾರ್ಥ

ಎಲೈ ಇಂದ್ರನೇ, ನೀನು ಉತ್ಪನ್ನನಾದೊಡನೆಯೇ, ವೃತ್ರನಿಮಿತ್ತವಾದ ಭಯದಿಂದ ಕಾತರರಾಗಿದ್ದ ಪ್ರಜೆಗಳೆಲ್ಲರನ್ನೂ ನೀನು ರಕ್ಷಣೆಗಾಗಿ ಧರಿಸಿದೆ. ಧನವಂತನಾದ ಎಲೈ ಇಂದ್ರನೇ. ಪ್ರವಹಿಸುವ ಉದಕಪ್ರದೇಶಗಳಿಗೆ ಅಡ್ಡಲಾಗಿ ತಡೆಗಟ್ಟಿ ಬಿದ್ದಿದ್ದ ವೃತ್ರನನ್ನು ನೀನು ವಜ್ರಾಯುಧದಿಂದ ಕತ್ತರಿಸಿದ್ದೀಯೆ.

English Translation

Indra, as soon as you were born, you took the progency who were afraid of Vritra under your protection. O Maghavan, you smote with your thunderbolt, Ahi, who was obstruct'ng the flow of waters.

---

ಸಂಹಿತಾಪಾಠಃ

ಸತ್ರಾಹಣಂ ದಾಧೃಷಿಂ ತುಮ್ರಮಿಂದ್ರಂ ಮಹಾಮಪಾರಂ ವೃಷಭಂ ಸುವಜ್ರಂ ।
ಹಂತಾ ಯೋ ವೃತ್ರಂ ಸನಿತೋತ ವಾಜಂ ದಾತಾ ಮಘಾನಿ ಮಘವಾ ಸುರಾಧಾಃ ॥ ೮ ॥

ಪದಪಾಠಃ

ಸತ್ರಾऽಹನಂ । ದಧೃಷಿಂ । ತುಮ್ರಂ । ಇಂದ್ರಂ । ಮಹಾಂ । ಅಪಾರಂ । ವೃಷಭಂ । ಸುಽವಜ್ರಂ ।
ಹಂತಾ । ಯಃ । ವೃತ್ರಂ । ಸನಿತಾ । ಉತ । ವಾಜಂ । ದಾತಾ । ಮಘಾನಿ । ಮಘಽವಾ । ಸುಽರಾಧಾಃ॥

ಸಾಯಣಭಾಷ್ಯಂ

ಇಂದ್ರಸ್ಯ ವೃತ್ರಘ್ನಃ ಪಶೌ ಸತ್ರಾಹಣಮಿತಿ ಹವಿಷೋऽನುವಾಕ್ಯಾ । ಸೂತ್ರಿತಂ ಚ । ಸತ್ರಾಹಣಂ ದಾಧೃಷಿಂ ತುಮ್ರಮಿಂದ್ರಂ ಸಹದಾನುಂ ಪುರುಹೂತ ಕ್ಷಿಯಂತಂ । ಆ. ೩.೮ । ಇತಿ ॥

CC-0. Jangamwadi Math Collection. Digitized by eGangotri

ಸತ್ರಾಹಣಂ ಬಹೂನಾಂ ಶತ್ರೂಣಾಂ ಹಂತಾರಂ ದಾಧೃಷಿಮತ್ಯಂತಂ ಧರ್ಷಕಂ ತುವ್ರಂ। ತುವಿಃ ಪ್ರೇರಣಕರ್ಮಾ। ಶತ್ರೂಣಾಂ ಪ್ರೇರಕಂ ಮಹಾಂ ಮಹಾಂತಮಪಾರಮಪರಿಮಾಣಂ। ವಿನಾಶರಹಿತಮಿತ್ಯರ್ಥಃ। ವೃಷಭಂ ಕಾಮಾನಾಂ ವರ್ಷಿತಾರಂ ಸುವಜ್ರಂ ಶೋಭನೇನ ವಜ್ರೇಣೋಪೇತಮಿಂದ್ರಂ। ವಯಂ ಸ್ತೋತಾರಃ ಸ್ತುಮೇತಿ ಶೇಷಃ। ಯ ಇಂದ್ರೋ ವೃತ್ರಂ ವೃತ್ರನಾಮಾನಮಸುರಂ ಹಂತಾ ಹಿಂಸಿತಾ ಭವತಿ। ಉತಾಪಿ ಚ ಯ ಇಂದ್ರೋ ವಾಜಮನ್ನಂ ಸನಿತಾ ದಾತಾ ಭವತಿ। ಸುರಾಧಾಃ ಶೋಭನಧನಯುಕ್ತೋ ಯೋ ಮಘವೇಂದ್ರೋ ಮಘಾನಿ ಧನಾನಿ ದಾತಾ ಭವತಿ। ತಮಿಂದ್ರಂ ಸ್ತುಮೇತಿ ಪೂರ್ವೇಣಾನ್ವಯಃ॥ ಅತ್ರ ಸರ್ವತ್ರ ತೃನಂತತ್ವಾನ್ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧೇ ಸತಿ ದ್ವಿತೀಯೈವ ಭವತಿ॥

ಪ್ರತಿಪದಾರ್ಥ

ಸತ್ರಾಹಣಂ—ಅನೇಕ ಶತ್ರುಗಳನ್ನು ನಾಶಮಾಡಿದವನೂ। ದಾಧೃಷಿಂ—ಶತ್ರುಧರ್ಷಕನೂ। ತುವ್ರಂ—ಶತ್ರುಹಿಂಸಕನೂ। ಮಹಾಂ—ಮಹಾತ್ಮನೂ। ಅಪಾರಂ—ಪರಿಮಿತಿಯಿಲ್ಲದವನೂ। ವೃಷಭಂ—ಕಾಮವರ್ಷಕನೂ। ಸುವಜ್ರಂ—ಶ್ರೇಷ್ಠವಾದ ವಜ್ರಾಯುಧೋಪೇತನೂ (ಮತ್ತು)। ಯಃ—ಯಾರು। ವೃತ್ರಂ—ವೃತ್ರನನ್ನು। ಹಂತಾ—ನಾಶಮಾಡಿದ್ದಾನೋ। ಉತ—ಮತ್ತು। (ಯಃ—ಯಾರು)। ವಾಜಂ—ಅನ್ನಕ್ಕೆ। ಸನಿತಾ—ದಾತನಾಗಿದ್ದಾನೋ ಅಂತಹವನೂ। ಸುರಾಧಾಃ—ಶ್ರೇಷ್ಠವಾದ ಧನಯುಕ್ತನೂ ಆದ। (ಯಃ) ಮಘವಾ—(ಯಾವ) ಇಂದ್ರನು। ಮಘಾನಿ—ಧನಗಳನ್ನು। ದಾತಾ—ದಾನಮಾಡುವನೋ ಅಂತಹವನೂ ಆದ। ಇಂದ್ರಂ—ಇಂದ್ರನನ್ನು (ನಾವು ಸ್ತುತಿಸುವೆವು).

ಭಾವಾರ್ಥ

ಅನೇಕ ಶತ್ರುಗಳನ್ನು ನಾಶಮಾಡಿದವನೂ, ಶತ್ರುಧರ್ಷಕನೂ, ಶತ್ರುಹಿಂಸಕನೂ, ಪರಿಮಿತಿಯಿಲ್ಲದವನೂ, ಕಾಮವರ್ಷಕನೂ, ಶ್ರೇಷ್ಠವಾದ ವಜ್ರೋಪೇತನೂ, ವೃತ್ರನಾಶಕನೂ, ಅನ್ನದಾತನೂ, ಶ್ರೇಷ್ಠವಾದ ಧನಯುಕ್ತನಾದುದರಿಂದ ಧನದಾತನೂ ಆದ ಇಂದ್ರನನ್ನು ಸ್ತುತಿಸುವೆವು.

English Translation

(We praise) the slayer of many foes, the courageous, the discomfiter (of enemies), the great, the unbounded, the showerer (of benefits), the wielder of the bright thunderbolt, him who is the destroyer of Vritra, the bestower of food, the giver of wealth, Maghavan the possessor of riches.

ವಿಶೇಷವಿಷಯಗಳು

ವೃತ್ರಘ್ನನಾದ ಇಂದ್ರನನ್ನುದ್ದೇಶಿಸಿಮಾಡುವ ಪಶುಯಾಗದಲ್ಲಿ ಹವಿಸ್ಸನ್ನು ಹೋಮಮಾಡುವಾಗ ಸತ್ರಾಹಣಂ ಎಂಬ ಈ ಋಕ್ಕನ್ನು ಅನುವಾಕ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಸತ್ರಾಹಣಂ ದಾಧೃಷಿಂ ತುವ್ರಮಿಂದ್ರಂ ಸಹದಾನುಂ ಪುರುಹೂತ ಕ್ಷಿಯಂತಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೩-೮).

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಯಂ ವೃತಶ್ಚಾತಯತೇ ಸಮೀಚೀರ್ಯ ಆಜಿಷು ಮಘವಾ ಶೃಣ್ವ ಏಕಃ।
ಅಯಂ ವಾಜಂ ಭರತಿ ಯಂ ಸನೋತ್ಯಸ್ಯ ಪ್ರಿಯಾಸಃ ಸಖ್ಯೇ ಸ್ಯಾಮ ॥೯॥

ಪದಪಾಠಃ

ಅಯಂ । ವೃತಃ । ಚಾತಯತೇ । ಸಂಽಈಚೀಃ। ಯಃ । ಆಜಿಷು । ಮಘಽವಾ । ಶೃಣ್ವೇ । ಏಕಃ ।
ಅಯಂ । ವಾಜಂ । ಭರತಿ । ಯಂ । ಸನೋತಿ । ಅಸ್ಯ । ಪ್ರಿಯಾಸಃ । ಸಖ್ಯೇ । ಸ್ಯಾಮ ॥ ೯ ॥

ಸಾಯಣಭಾಷ್ಯಂ

ಮಘವಾ ಧನವಾನ್ಯ ಇಂದ್ರಆಜಿಷು ಸಂಗ್ರಾಮೇಷ್ವೇಕೋ ಮುಖ್ಯ ಏವ ಶೃಣ್ವೇ । ಶ್ರೂಯತೇ। ಅಯಮಿಂದ್ರಃ ಸಮೀಚೀಃ ಸಂಗತಾ ವೃತಃ । ವೃಣ್ವಂತ್ಯಾಚ್ಛಾದಯಂತಿ ಲೋಕಾನಿತಿ ವೃತಃ ಶತ್ರುಸೇನಾಃ । ತಾಶ್ಚಾತಯತೇ । ನಾಶಯತಿ । ಅಯಮಿಂದ್ರೋ ಯಂ ವಾಜಂ ಯದನ್ನಂ ಸನೋತಿ । ಯಜಮಾನಾಯ ದದಾತಿ । ತಂ ವಾಜಂ ಭರತಿ । ಯಜಮಾನಸ್ಯ ತದನ್ನಂ ದಾತುಂ ಬಿಭರ್ತಿ । ಸ್ತೋತಾರೋ ವಯಮಸ್ಯೈವಂಭೂತಸ್ಯೇಂದ್ರಸ್ಯ ಸಖ್ಯೇ ಸಖಿತ್ವೇ ಪ್ರಿಯಾಸಃ ಪ್ರಿಯಾಃ ಸ್ಯಾಮ । ಭವೇಮ ॥

ಪ್ರತಿಪದಾರ್ಥ

ಮಘವಾ—ಧನವಂತನಾದ । ಯಃ—ಯಾವ ಇಂದ್ರನು । ಆಜಿಷು—ಯುದ್ಧಗಳಲ್ಲಿ । ಏಕಃ—ಒಬ್ಬನೇ ಪ್ರಧಾನನಾಯಕನಾಗಿ । ಶೃಣ್ವೇ—ಪ್ರಸಿದ್ಧನಾಗಿದ್ದಾನೆಯೋ । ಅಯಂ—ಅದೇ ಇಂದ್ರನು । ಸಮೀಚೀಃ—ಒಟ್ಟಿಗೆ ಸೇರಿಕೊಂಡಿರತಕ್ಕ । ವೃತಃ—ಶತ್ರುಸೇನೆಗಳನ್ನು । ಚಾತಯತೇ—ನಾಶಪಡಿಸುತ್ತಾನೆ । ಅಯಂ—ಇದೇ ಇಂದ್ರನು । ಯಂ ವಾಜಂ—ಯಾವ ಅನ್ನವನ್ನು । ಸನೋತಿ—ಯಜಮಾನನಿಗೆ ಕೊಡುವನೋ। ಭರತಿ—(ಅದನ್ನು) ದಾನಮಾಡಲು ಹೊಂದಿದ್ದಾನೆ । ಅಸ್ಯ—ಈ ಇಂದ್ರನ । ಸಖ್ಯೇ—ಸ್ನೇಹದ ನಿಮಿತ್ತವಾಗಿ । ಪ್ರಿಯಾಸಃ—ಅವನಿಗೆ ಪ್ರೀತಿಪಾತ್ರರಾಗಿ । ಸ್ಯಾಮ—ನಾವು ಇರೋಣ.

ಭಾವಾರ್ಥ

ಧನವಂತನಾದ ಯಾವ ಇಂದ್ರನು ಸಂಗ್ರಾಮಗಳಲ್ಲಿ ಒಬ್ಬನೇ ಪ್ರಧಾನ ನಾಯಕನಾಗಿ ಪ್ರಸಿದ್ಧನಾಗಿದ್ದಾನೆಯೋ, ಅದೇ ಈ ಇಂದ್ರನು ಒಟ್ಟಿಗೆ ಸೇರಿಕೊಂಡಿರತಕ್ಕ ಶತ್ರುಸೇನೆಗಳನ್ನು ನಾಶಪಡಿಸುತ್ತಾನೆ. ಇದೇ ಇಂದ್ರನು ಯಾವ ಅನ್ನವನ್ನು ಯಜಮಾನನಿಗೆ ಕೊಡುವನೋ ಅದನ್ನೇ ಅವನಿಗೆ ದಾನಮಾಡಲು ಹೊಂದಿದ್ದಾನೆ. ಈ ಇಂದ್ರನ ಸಖಿತ್ವದ ನಿಮಿತ್ತವಾಗಿ ನಾವು ಅವನಿಗೆ ಪ್ರೀತಿಪಾತ್ರರಾಗಿರೋಣ.

CC-0. Jangamwadi Math Collection. Digitized by eGangotri

## English Translation

This Maghavan, who destroys assembled hosts, is he who is renowned as chief in battles: he brings the food which he bestows (upon the worshipper): may we be held dear in his friendship.

### ಸಂಹಿತಾಪಾಠಃ

ಅಯಂ ಶೃಣ್ವೇ ಅಧ ಜಯನ್ನುತ ಘ್ನನ್ನಯಮುತ ಪ್ರ ಕೃಣುತೇ ಯುಧಾ ಗಾಃ ।
ಯದಾ ಸತ್ಯಂ ಕೃಣುತೇ ಮನ್ಯುಮಿಂದ್ರೋ ವಿಶ್ವಂ ದೃಳ್ಹಂ ಭಯತ ಏಜದಸ್ಮಾತ್॥ ೧೦ ॥

### ಪದಪಾಠಃ

ಅಯಂ । ಶೃಣ್ವೇ । ಅಧ । ಜಯನ್ । ಉತ । ಘ್ನನ್ । ಅಯಂ । ಉತ । ಪ್ರ । ಕೃಣುತೇ । ಯುಧಾ। ಗಾಃ ।
ಯದಾ । ಸತ್ಯಂ । ಕೃಣುತೇ । ಮನ್ಯುಂ । ಇಂದ್ರಃ । ವಿಶ್ವಂ । ದೃಳ್ಹಂ । ಭಯತೇ । ಏಜತ್ । ಅಸ್ಮಾತ್॥

### ಸಾಯಣಭಾಷ್ಯಂ

ಅಥಾಪಿ ಚ ಅಯಮಿಂದ್ರೋ ಜಯನ್ ಶತ್ರೂನ್ನಿಜಯನ್ ಶೃಣ್ವೇ । ಶ್ರೂಯತೇ । ಸರ್ವತ್ರ ಪ್ರಖ್ಯಾತೋ ಭವತಿ । ಉತಾಪಿ ಚ ಘ್ನನ್ ಶತ್ರೂನ್ಹಿಂಸನ್ ಸರ್ವತ್ರ ಶ್ರೂಯತೇ । ಉತಾಪಿ ಚಾಯಮಿಂದ್ರೋ ಯುಧಾ ಯುದ್ಧೇನ ಗಾಃ ಪಶೂನ್ಪ್ರ ಕೃಣುತೇ । ಶತ್ರುಸಕಾಶಾದಾಹರತಿ । ಕಿಂಚ ಇಂದ್ರೋ ಯದಾ ಮನ್ಯುಂ ಕೋಪಂ ಸತ್ಯಮೇವ ಕೃಣುತೇ । ದ್ವಿಷದರ್ಥಂ ಕರೋತಿ । ತದಾನೀಂ ದೃಢಂ ಸ್ಥಿರಂ ಸ್ಥಾವರರೂಪಮೇಜತ್ಕಂಪಮಾನಂ ಜಂಗಮರೂಪಂ ಚ ವಿಶ್ವಂ ಸಮಸ್ತಂ ಜಗದಸ್ಮಾದಿಂದ್ರಾದ್ಭಯತೇ । ಬಿಭೇತಿ ॥

### ಪ್ರತಿಪದಾರ್ಥ

ಅಧ—ಮತ್ತು । ಅಯಂ—ಈ ಇಂದ್ರನು । ಜಯನ್—ಶತ್ರುವನ್ನು ಜಯಿಸುವಾಗ (ಜಯಶಾಲಿಯೆಂದು) ।ಶೃಣ್ವೇ—ಪ್ರಸಿದ್ಧನಾಗಿದ್ದಾನೆ । ಉತ—ಮತ್ತು । ಘ್ನನ್—ಶತ್ರುನಾಶಕನೆಂದೂ ಪ್ರಸಿದ್ಧನಾಗಿದ್ದಾನೆ । ಉತ—ಮತ್ತು । ಅಯಂ—ಈ ಇಂದ್ರನು । ಯುಧಾ—ಯುದ್ಧದಿಂದ। ಗಾಃ—ಗೋವುಗಳನ್ನು। ಪ್ರ ಕೃಣುತೇ—

CC-0. Jangamwadi Math Collection. Digitized by eGangotri

ಶತ್ರುಗಳಿಂದ ಅಪಹರಿಸುತ್ತಾನೆ । ಇಂದ್ರಃ—ಇಂದ್ರನು । ಯದಾ—ಯಾವಾಗ । ಮನ್ಯುಂ—ಕೋಪವನ್ನು । ಸತ್ಯಂ ಕೃಣುತೇ—ಸತ್ಯವಾಗಿಯೂ ಪ್ರಕಟಿಸುವನೋ (ಆಗ) । ದೃಳ್ಹಂ—ಅಚಲವಾಗಿ ಸ್ಥಿರವಾದುದೂ । ಏಜತ್—ಚಲಿಸುವ ಸ್ವಭಾವವುಳ್ಳದ್ದೂ ಆದ । ವಿಶ್ವಂ—ಸಮಸ್ತ ಸ್ಥಾವರಜಂಗಮಾತ್ಮಕವಾದ ಜಗತ್ತೂ । ಅಸ್ಮಾತ್—ಈ ಇಂದ್ರನಿಂದ । ಭಯತೇ—ಭಯಗೊಳ್ಳುತ್ತದೆ.

ಭಾವಾರ್ಥ

ಈ ಇಂದ್ರನು ಯುದ್ಧಕಾಲದಲ್ಲಿ ಶತ್ರುವನ್ನು ಜಯಿಸುವನೆಂದೂ, ಶತ್ರುನಾಶಕನೆಂದೂ ಪ್ರಸಿದ್ಧನಾಗಿದ್ದಾನೆ. ಮತ್ತು ಇಂದ್ರನು ಯುದ್ಧಮಾಡಿ ಶತ್ರುಗಳಿಂದ ಗೋವುಗಳನ್ನು ಅಪಹರಿಸಿಕೊಂಡು ಬರುತ್ತಾನೆ. ಯಾವಾಗ ಈ ಇಂದ್ರನು ಸತ್ಯವಾಗಿಯೂ ತನ್ನ ಕೋಪವನ್ನು ಪ್ರಕಟಿಸುವನೋ ಆಗ ಅಚಲವಾಗಿ ಸ್ಥಿರವಾದುದೂ, ಚಲಿಸುವ ಸ್ವಭಾವವುಳ್ಳದ್ದೂ ಆದ ಸಮಸ್ತ ಜಗತ್ತೂ ಈ ಇಂದ್ರನಿಂದ ಭೀತಿಗೊಳ್ಳುತ್ತದೆ.

English Translation

This (Indra), is renowned, whether conquering or slaying (his foes), or whether in conflict he recovers the cattle : when Indra truly entertains anger, all that is stationary or moveable is in fear of him.



ಸಂಹಿತಾಪಾಠಃ

ಸಮಿಂದ್ರೋ ಗಾ ಅಜಯತ್ಸಂ ಹಿರಣ್ಯಾ ಸಮಶ್ವಿಯಾ ಮಘವಾ ಯೋ ಹ ಪೂರ್ವೀಃ ।

ಏಭಿರ್ನೃಭಿರ್ನೃತಮೋ ಅಸ್ಯ ಶಾಕೈ ರಾಯೋ ವಿಭಕ್ತಾ ಸಂಭರಶ್ಚ ವಸ್ವಃ ॥

ಪದಪಾಠಃ

ಸಂ । ಇಂದ್ರಃ । ಗಾಃ । ಅಜಯತ್ । ಸಂ । ಹಿರಣ್ಯಾ । ಸಂ । ಅಶ್ವಿಯಾ । ಮಘऽವಾ । ಯಃ । ಹ । ಪೂರ್ವೀಃ ।

ಏಭಿಃ । ನೃऽಭಿಃ । ನೃऽತಮಃ । ಅಸ್ಯ । ಶಾಕೈಃ । ರಾಯಃ । ವಿऽಭಕ್ತಾ । ಸಂऽಭರಃ । ಚ । ವಸ್ವಃ ॥೧೧॥

ಸಾಯಣಭಾಷ್ಯಂ

ಯೋ ಹ ಯಃ ಖಲು ಮಘವಾ ಧನವಾನಿಂದ್ರೋ ಗಾ ಅಸುರಾಣಾಂ ಸಮಜಯತ್ । ಸಮ್ಯಕ್ ಜಿತವಾನ್ ಭವತಿ । ಕಿಂಚ ಹಿರಣ್ಯಾ ಹಿರಣ್ಯಾನಿ ಹಿತರಮಣೀಯಾನಿ ಶತ್ರುಸಂಬಂಧೀನಿ ಧನಾನಿ ಸಮ-

CC-0. Jangamwadi Math Collection. Digitized by eGangotri

ಯತ್ । ತಥಾ ಅಶ್ವಿಯಾಶ್ವಿಯಾನಿ ಶತ್ರುಸಂಬಂಧಿನೋಽಶ್ವಸಮೂಹಾನ್ ಸಮ್ಯಕ್ ಜಯತಿ ಸ್ಮ । ತಥಾ ಪೂರ್ವೀರ್ಬಹ್ವೀಃ ಶತ್ರುಸೇನಾಃ ಸಮಜಯತ್ । ಇಂದ್ರಃ ಸರ್ವಾನ್ ಶತ್ರೂನ್ ಜಿತ್ವಾ ಸಕಲಮಪಿ ಪಶ್ವಾದಿಧನಮಪಹೃತವಾನಿತ್ಯರ್ಥಃ । ಶಾಕ್ಯೈಃ ಸಾಮರ್ಥ್ಯೈರ್ನೃತಮೋ ನೇತೃತಮಃ ಪಶ್ವಾದೀನಾಮತಿಶಯೇನ ನಿರ್ವಾಹಕಃ ಸ ಇಂದ್ರ ಏಭಿರ್ನೃಭಿರ್ನೇತೃಭಿಃ ಸ್ತೋತೃಭಿಃ ಸ್ತುತಃ ಸನ್ ಅಸ್ಯ ರಾಯಃ ಪಶ್ವಾದಿರೂಪಸ್ಯ ಧನಸ್ಯ ವಿಭಕ್ತಾ ಸ್ತೋತೃಭ್ಯೋ ವಿಭಾಗಸ್ಯ ಕರ್ತಾ । ದಾತಾ ಭವತೀತ್ಯರ್ಥಃ । ಕಿಂಚ ವಸ್ವೋ ವಸುನೋ ಧನಸ್ಯ ಸಂಭರಶ್ಚ ಸಂಭರ್ತಾ ಧಾರಕಶ್ಚ ಭವತಿ ॥

ಪ್ರತಿಪದಾರ್ಥ

ಯಃ—ಯಾವ । ಮಘವಾ—ಧನವಂತನಾದ । ಇಂದ್ರಃ—ಇಂದ್ರನು । ಗಾಃ—ಅಸುರರ ಗೋವುಗಳನ್ನು । ಸಂ ಅಜಯತ್—ಪೂರ್ಣವಾಗಿ ಜಯಿಸಿದನೋ । ಹಿರಣ್ಯಾ—ಅವರ ಧನಗಳನ್ನು । ಸಂ (ಅಜಯತ್)—ಪೂರ್ಣವಾಗಿ ಅಪಹರಿಸಿದನೋ । ಅಶ್ವಿಯಾ-ಅವರ ಅಶ್ವಗಳನ್ನೆಲ್ಲಾ ಪೂರ್ಣವಾಗಿ ಕಸಿದುಕೊಂಡನೋ (ಮತ್ತು) । ಪೂರ್ವೀಃ—ಅಪಾರವಾದ ಅವರ ಸೇನೆಗಳನ್ನು ಜಯಿಸಿದನೋ ಆ ಇಂದ್ರನು । ಶಾಕ್ಯೈಃ—ಸಾಮರ್ಥ್ಯಗಳಿಂದ ಕೂಡಿಯೂ । ನೃತಮಃ—ನೇತೃವಾಗಿಯೂ ಇದ್ದು । ಏಭಿಃ ನೃಭಿಃ—ಮಾನವರಾದ ಈ ಸ್ತುತಿಕರ್ತರಿಂದ (ಸ್ತುತನಾಗಿ) । ಅಸ್ಯ ರಾಯಃ—ಈ ಧನಕ್ಕೆ । ವಿಭಕ್ತಾ—ವಿಭಾಗಕರ್ತನಾಗುತ್ತಾನೆ । ವಸ್ವಃ—ಇದೇ ಧನಕ್ಕೆ । ಸಂಭರಶ್ಚ—ಧಾರಕನೂ ಆಗುತ್ತಾನೆ.

ಭಾವಾರ್ಥ

ಯಾವ ಧನವಂತನಾದ ಇಂದ್ರನು ಅಪಾರವಾದ ಶತ್ರುಸೇನೆಗಳನ್ನೆಲ್ಲಾ ಪೂರ್ಣವಾಗಿ ಜಯಿಸಿ ಅಸುರರ ಗೋವುಗಳನ್ನೂ ಅಶ್ವಗಳನ್ನೂ ಅಪಹರಿಸಿ ಅವರ ಧನಗಳನ್ನೆಲ್ಲಾ ಪೂರ್ಣವಾಗಿ ಕಸಿದುಕೊಂಡನೋ ಅದೇ ಇಂದ್ರನು ಸಾಮರ್ಥ್ಯಗಳಿಂದ ಕೂಡಿಯೂ, ನೇತೃವಾಗಿಯೂ ಇದ್ದು ಮಾನವರಾದ ಈ ಸ್ತುತಿಕರ್ತರಿಂದ ಸ್ತುತನಾಗಿ ಯಜಮಾನರಿಗೆ ಆ ಧನದ ದಾತೃವಾಗುತ್ತಾನೆ. ಮತ್ತು ಧನದ ಧಾರಕನೂ ಆಗುತ್ತಾನೆ.

English Translation

Indra, the lord of opulence, who has overcome many (enemies) has completely won (their) cattle, (their) gold, (their) horses : chief leader by his energies, praised by these his worshippers, he is the distributor of riches, the bestower of wealth.

———

ಸಂಹಿತಾಪಾಠಃ

ಕಿಯತ್ಸ್ವಿದಿಂದ್ರೋ ಅಧ್ಯೇತಿ ಮಾತುಃ ಕಿಯತ್ಪಿತುರ್ಜನಿತುರ್ಯೋ ಜಜಾನ ।

CC-0. Jangamwadi Math Collection. Digitized by eGangotri

ಯೋ ಅಸ್ಯ ಶುಷ್ಮಂ ಮುಹುಕೈರಿಯರ್ತಿ ವಾತೋ ನ ಜೂತಃ ಸ್ತನಯದ್ಭಿ-
ರಭ್ರೈಃ ॥ ೧೨ ॥

ಪದಪಾಠಃ

ಕಿಯತ್ । ಸ್ವಿತ್ । ಇಂದ್ರಃ । ಅಧಿ । ಏತಿ । ಮಾತುಃ । ಕಿಯತ್ । ಪಿತುಃ । ಜನಿತುಃ । ಯಃ । ಜಜಾನ ।
ಯಃ । ಅಸ್ಯ । ಶುಷ್ಮಂ । ಮುಹುಕೈಃ । ಇಯರ್ತಿ । ವಾತಃ । ನ । ಜೂತಃ । ಸ್ತನಯತ್ಽಭಿಃ ।
ಅಭ್ರೈಃ ॥ ೧೨ ॥

ಸಾಯಣಭಾಷ್ಯಂ

ಯ ಇಂದ್ರೋ ಮಾತುರ್ಜನನ್ಯಾಃ ಸಕಾಶಾತ್ಕಿಯತ್ಸ್ವಿದ್ಯಾವದ್ಬಲಮಧ್ಯೇತಿ । ಅಧಿಗಚ್ಛತಿ । ಪಿತುಃ ಸಕಾಶಾತ್ಕಿಯದ್ಯಾವದ್ಬಲಮಧಿಗಚ್ಛತಿ । ಯ ಇಂದ್ರೋ ಜನಿತುರ್ಜಯಿತುರ್ಯಸ್ಮಾತ್ಪ್ರಜಾಪತೇಃ ಸಕಾಶಾದಿದಂ ದೃಶ್ಯಮಾನಂ ಜಗಜ್ಜಜಾನ । ಅಜನಯತ್ । ಯ ಇಂದ್ರಸ್ತಸ್ಮಾತ್ಪ್ರಜಾಪತೇಃ ಸಕಾಶಾದಸ್ಯ ಜಗತಃ ಶುಷ್ಮಂ ಯಾವದ್ಬಲಂ ಮುಹುಕೈರ್ಮುಹುರ್ಮುಹುರಿಯರ್ತಿ । ಪ್ರೇರಯತಿ । ಸ್ತನಯದ್ಭಿರ್ಗರ್ಜದ್ಭಿರಭ್ರೈರ್ಮೇಘೈರ್ಜೂತಃ ಪ್ರೇರಿತೋ ವಾತೋ ನ ವಾಯುರಿವ ತಥಾ ಸ ಇಂದ್ರಃ ಸ್ತೋತೃಭಿರ್ಜೂತಃ ಪ್ರೇರಿತೋ ಹವಿಷ್ಪ್ರದಾನಾರ್ಥಮಾಹೂತೋ ಭವತಿ ॥

ಪ್ರತಿಪದಾರ್ಥ

ಯಃ—ಯಾವ ಇಂದ್ರನು । ಜನಿತುಃ—ಜಗಜ್ಜನಕನಾದ ಪ್ರಜಾಪತಿಯ ಸಹಾಯದಿಂದ । ಜಜಾನ—ಈ ಜಗತ್ತನ್ನು ಸೃಷ್ಟಿಸಿದನೋ । ಯಃ—ಯಾವ ಇಂದ್ರನು । ಸ್ತನಯದ್ಭಿಃ—ಗರ್ಜಿಸುತ್ತಿರುವ । ಅಭ್ರೈಃ—ಮೇಘಗಳಿಂದ । ಜೂತಃ—ಪ್ರೇರಿತನಾದ । ವಾತೋ ನ—ವಾಯುವಿನಂತೆ । ಅಸ್ಯ—ಈ ಜಗತ್ತಿನ । ಶುಷ್ಮಂ—ಬಲವನ್ನು । ಮುಹುಕೈಃ—ಪದೇ ಪದೇ । ಇಯರ್ತಿ—ಪ್ರೇರಿಸುತ್ತಾನೆಯೋ । (ಸಃ) ಇಂದ್ರಃ—ಅದೇ ಇಂದ್ರನು ಮಾತುಃ—ತನ್ನ ಜನನಿಯಿಂದ । ಕಿಯತ್ ಸ್ವಿತ್—ಕೊಂಚ ಬಲವನ್ನು । ಅಧ್ಯೇತಿ-ಪಡೆಯುತ್ತಾನೆ । ಕಿಯತ್-ಕೊಂಚ ಬಲವನ್ನು । ಪಿತುಃ—ತಂದೆಯಿಂದ ಪಡೆಯುತ್ತಾನೆ.

ಭಾವಾರ್ಥ

ಯಾವ ಇಂದ್ರನು ಜಗಜ್ಜನಕನಾದ ಪ್ರಜಾಪತಿಯ ಸಹಾಯದಿಂದ ಈ ಜಗತ್ತನ್ನು ಸೃಷ್ಟಿಸಿದನೋ, ಯಾವ ಇಂದ್ರನು ಗರ್ಜಿಸುತ್ತಿರುವ ಮೇಘಗಳಿಂದ ಪ್ರೇರಿತನಾದ ವಾಯುವಿನಂತೆ ಈ ಜಗತ್ತಿನ ಬಲವನ್ನು ಪದೇ ಪದೇ ಪ್ರೇರಿಸುವನೋ ಅದೇ ಇಂದ್ರನು ತನ್ನ ಜನನಿಯಿಂದ ಕೊಂಚ ಬಲವನ್ನು ಪಡೆಯುತ್ತಾನೆ. ಮತ್ತು ತಂದೆಯಿಂದಲೂ ಕೊಂಚ ಬಲವನ್ನು ಪಡೆಯುತ್ತಾನೆ.

English Translation

Some portion (of his strength) Indra derives from his mother, some portion from his father : he who, through his progenitor, has begotten (the

CC-0. Jangamwadi Math Collection. Digitized by eGangotri

world), and animates its vigour repeatedly, as the wind is driven by thundering clouds.

---

ಸಂಹಿತಾಪಾಠಃ

ಕ್ಷಿಯಂತಂ ತ್ವಮಕ್ಷಿಯಂತಂ ಕೃಣೋತೀಯರ್ತಿ ರೇಣುಂ ಮಘವಾ ಸಮೋಹಂ ।

ವಿಭಂಜನುರಶನಿಮಾಁಇವ ದ್ಯೌರುತ ಸ್ತೋತಾರಂ ಮಘವಾ ವಸೌ ಧಾತ್॥

ಪದಪಾಠಃ

ಕ್ಷಿಯಂತಂ । ತ್ವಂ । ಅಕ್ಷಿಯಂತಂ । ಕೃಣೋತಿ । ಇಯರ್ತಿ । ರೇಣುಂ । ಮಘಽವಾ । ಸಂಽಓಹಂ । ವಿಽಭಂಜನುಃ । ಅಶನಿಮಾನ್ಽಇವ । ದ್ಯೌಃ । ಉತ । ಸ್ತೋತಾರಂ । ಮಘಽವಾ । ವಸೌ । ಧಾತ್ ॥

ಸಾಯಣಭಾಷ್ಯಂ

ಮಘವಾ ಧನವಾನಿಂದ್ರಃ ಕ್ಷಿಯಂತಂ ಧನರಾಹಿತ್ಯೇನ ಕ್ಷೀಯಮಾಣಂ ತ್ವಮೇಕಂ ಜನಮಕ್ಷಿ-ಯಂತಂ ಧನೇನಾಕ್ಷೀಯಮಾಣಂ ಕೃಣೋತಿ । ಕರೋತಿ । ಅಕಿಂಚನಃ ಕಶ್ಚಿತ್ಪುರುಷ ಇಂದ್ರಂ ಸ್ತುತ್ವಾ ಧನಸಮೃದ್ಧೋಽಭವದಿತ್ಯರ್ಥಃ । ಅಶನಿಮಾನಶನಿನಾ ಯುಕ್ತೋ ದ್ಯೌರಿವಾಂತರಿಕ್ಷಮಿವ ವಿಭಂಜನುಃ ಶತ್ರೂಣಾಂ ವಿಶೇಷೇಣ ಭಂಜಕೋ ಮಘವೇಂದ್ರಃ ಸಮೋಹಂ ಸಮೂಢಂ ರೇಣುಂ ಪಾಪಮಿಯರ್ತಿ । ಸ್ತೋತುಃ ಸಕಾಶಾತ್ಪ್ರೇರಯತಿ । ಉತಾಪಿ ಚ ಮಘವಾ ಧನವಾನಿಂದ್ರಃ ಸ್ತೋತಾರಂ ವಸೌ ಧನೇ ಧಾತ್ । ಅಧಾತ್ । ನಿದಧಾತಿ ॥

ಪ್ರತಿಪದಾರ್ಥ

ಮಘವಾ—(ಎಲೈ ಇಂದ್ರನೇ) ಧನವಂತನಾದ ನೀನು । ತ್ವಂ—ನೀನು । ಕ್ಷಿಯಂತಂ—ಧನಾಭಾವದಿಂದ ನಶಿಸುತ್ತಿರುವ ಪುರುಷನನ್ನು । ಅಕ್ಷಿಯಂತಂ—ನಶಿಸದೇ ಪುಷ್ಟನಾಗುವಂತೆ । ಕೃಣೋತಿ—ಮಾಡುತ್ತೀಯೆ । ಅಶನಿಮಾನ್—ಶಿಡಿಲಿನಿಂದ ಕೂಡಿದ । ದ್ಯೌಃ (ಇವ)—ಅಂತರಿಕ್ಷದಂತೆ । ವಿಭಂಜನುಃ—ಶತ್ರುನಾಶಕನಾದ । ಮಘವಾ—ಇಂದ್ರನು । ಸಮೋಹಂ—ಒಟ್ಟಿಗೆ ಶೇಖರಿಸಲ್ಪಟ್ಟ । ರೇಣುಂ—ಪಾಪವನ್ನು । ಇಯರ್ತಿ—ಹೋಗಲಾಡಿಸುತ್ತಾನೆ । ಉತ—ಮತ್ತು । ಮಘವಾ—ಧನವಂತನಾದ ಇಂದ್ರನು । ಸ್ತೋತಾರಂ—ಸ್ತೋತೃವನ್ನು । ವಸೌ—ಧನದ ಮಧ್ಯದಲ್ಲಿ । ಧಾತ್—ಇಡುತ್ತಾನೆ.

CC-0. Jangamwadi Math Collection. Digitized by eGangotri

ಭಾವಾರ್ಥ

ಎಲೈ ಇಂದ್ರನೇ, ಧನವಂತನಾದ ನೀನು ಧನಾಭಾವದಿಂದ ನಶಿಸುತ್ತಿರುವ ಪುರುಷನನ್ನು ನಶಿಸದೇ ಪುಷ್ಟನಾಗಿರುವಂತೆ ಮಾಡುತ್ತೀಯೆ. ಸಿಡಿಲಿನಿಂದ ಕೂಡಿದ ಅಂತರಿಕ್ಷದಂತೆ ಶತ್ರುನಾಶಕನಾದ ಇಂದ್ರನು ಒಟ್ಟಿಗೆ ಶೇಖರಿಸಲ್ಪಟ್ಟ ಪಾಪವನ್ನು ಹೋಗಲಾಡಿಸುತ್ತಾನೆ, ಮತ್ತು ಧನವಂತನಾದ ಇಂದ್ರನು ಸ್ತೋತೃವನ್ನು ಸಂಪತ್ತಿನ ಮಧ್ಯದಲ್ಲಿ ಇಡುತ್ತಾನೆ.

English Translation

You are the Maghavan who makes one man destitute, another prosperous, who (scatters from his worshipper) the accumulated dust (of sin,) the destroyer ( of foes ), like the heaven with the thunderbolt, Maghavan conducts his worshipper to wealth.

---

ಸಂಹಿತಾಪಾಠಃ

ಅಯಂ ಚಕ್ರಮಿಷಣತ್ಸೂರ್ಯಸ್ಯ ನ್ಯೇತಶಂ ರೀರಮತ್ಸಸೃಮಾಣಂ ।
ಆ ಕೃಷ್ಣ ಈಂ ಜುಹುರಾಣೋ ಜಿಘರ್ತಿ ತ್ವಚೋ ಬುಧ್ನೇ ರಜಸೋ ಅಸ್ಯ ಯೋನೌ ॥ ೧೪ ॥

ಪದಪಾಠಃ

ಅಯಂ । ಚಕ್ರಂ । ಇಷಣತ್ । ಸೂರ್ಯಸ್ಯ । ನಿ । ಏತಶಂ । ರೀರಮತ್ । ಸಸೃಮಾಣಂ ।
ಆ । ಕೃಷ್ಣಃ । ಈಂ । ಜುಹುರಾಣಃ । ಜಿಘರ್ತಿ । ತ್ವಚಃ । ಬುಧ್ನೇ । ರಜಸಃ । ಅಸ್ಯ । ಯೋನೌ ॥ ೧೪ ॥

ಸಾಯಣಭಾಷ್ಯಂ

ಪ್ರೈತಶಂ ಸೂರ್ಯಃ ಪಸ್ಪೃಧ್ಯಾನಮಿತ್ಯರ್ಥರ್ಚೇ । ಋಗ್ವೇ. ೧-೬೧-೧೫ । ಪೂರ್ವಂ ಕಾಚಿದಾಖ್ಯಾಯಿಕಾ ಸೂಚಿತಾ । ಅತ್ರಾಪ್ಯಯಂ ಚಕ್ರಮಿತಿ ಪೂರ್ವಾರ್ಧೇ ಸಾ ಸೂಚ್ಯತೇ । ಸ್ವಶ್ವನಾಮಾ ಕಶ್ಚಿದ್ರಾಜಾ । ಸ ಚ ಪುತ್ರಾರ್ಥಂ ಸೂರ್ಯಮುಪಾಸ್ತೇ । ಸ ಚ ಸೂರ್ಯಃ ಪುತ್ರರೂಪೇಣ ಸ್ವಯಮೇವ ತಸ್ಯೋತ್ಪನ್ನಃ ಸನ್ ಏತಶಾಖ್ಯೇನ ಮಹರ್ಷಿಣಾ ಸಾರ್ಧಂ ಯುದ್ಧಂ ಚಕಾರ । ತದಾನೀಂ ಸ ಋಷಿರ್ಯುದ್ಧೇ ಜಯಾರ್ಥಮಿಂದ್ರಂ ತುಷ್ಟಾವ । ಸ ಇಂದ್ರಸ್ತೇನ ಸ್ತೂಯಮಾನಃ ಸನ್ ಸ್ವಶ್ವಪುತ್ರಸ್ಯ ಸೂರ್ಯಸ್ಯ ಸಂಬಂಧಿನಃ ಸಂಗ್ರಾಮಾದೇನಮಪಾಲಯದಿತಿ । ಅಯಮಿಂದ್ರಃ ಸೂರ್ಯಸ್ಯ ಚಕ್ರನಾಮಾಯುಧಮಿಷಣತ್ । ಪ್ರೈರಯತ್ । ಸಸೃಮಾಣಂ ಯುದ್ಧಾರ್ಥಂ ಸರಂತಂ ಗಚ್ಛಂತಮೇತಶನಾ-

CC-0. Jangamwadi Math Collection. Digitized by eGangotri

ಮಾನಮೃಷಿಂ ನಿ ರೀರಮುತ್ । ನ್ಯರೀರಮತ್ । ನಿವಾರಿತವಾನ್ । ಜುಹುರಾಣಃ ಕುಟಿಲಂ ಯಥಾ ಭವತಿ ತಥಾ ಸಂಚರನ್ ಕೃಷ್ಣಃ ಕೃಷ್ಣವರ್ಣೋ ಮೇಘಸ್ತ್ವಚಸ್ತೇಜಸೋ ಬುಧ್ನೇ ಮೂಲಭೂತೇ ರಜಸೋಽಸ್ಯೋದಕಸ್ಯ ಯೋನೌ ಸ್ಥಾನೇಽಂತರಿಕ್ಷೇ ಸ್ಥಿತಮಿಮಮೇನಮಿಂದ್ರಮಾ ಜಿಘರ್ತಿ। ಆಸಿಂಚತಿ । ಶತ್ರೂಣಾಂ ಪ್ರೇರಿತಾಚ್ಚಕ್ರಾದೇಸ್ತ್ರಸ್ತಂ ರರಕ್ಷೇತ್ಯರ್ಥಃ ॥

ಪ್ರತಿಪದಾರ್ಥ

ಅಯಂ— ಈ ಇಂದ್ರನು । ಸೂರ್ಯಸ್ಯ—ಸೂರ್ಯನ । ಚಕ್ರಂ—ಚಕ್ರಾಖ್ಯವಾದ ಆಯುಧವನ್ನು । ಇಷಣತ್—ಪ್ರೇರಿಸಿದನು । ಸಸ್ರಮಾಣಂ—ಯುದ್ಧಕ್ಕಾಗಿ ಹೊರಟಿದ್ದ । ಏತಶಂ—ಎತಶನೆಂಬ ಋಷಿಯನ್ನು । ನಿ ರೀರಮತ್—ತಡೆದನು । ಜುಹುರಾಣಃ—ವಕ್ರವಾಗಿ ಸಂಚರಿಸುವ । ಕೃಷ್ಣಃ—ಕೃಷ್ಣವರ್ಣವುಳ್ಳ ಮೇಘವು । ತ್ವಚಃ—ತೇಜಸ್ಸಿಗೆ । ಬುಧ್ನೇ—ಮೂಲಭೂತವಾದುದೂ । ಅಸ್ಯ ರಜಸಃ—ಉದಕದ । ಯೋನೌ—ಉತ್ಪತ್ತಿಸ್ಥಾನವಾದುದೂ ಆದ ಅಂತರಿಕ್ಷದಲ್ಲಿ ಇದ್ದು । ಈಂ—ಇಂದ್ರನಮೇಲೆ । ಆ ಜಿಘರ್ತಿ—ವೃಷ್ಟಿಯನ್ನು ಸುರಿಸಿ ತಂಪುಮಾಡುತ್ತದೆ.

ಭಾವಾರ್ಥ

ಇಂದ್ರನು ಸೂರ್ಯನ ಚಕ್ರಾಖ್ಯವಾದ ಆಯುಧವನ್ನು ಪ್ರೇರಿಸಿದನು. ಮತ್ತು ಯುದ್ಧಕ್ಕಾಗಿ ಹೊರಟಿದ್ದ ಏತಶನೆಂಬ ಋಷಿಯನ್ನು ತಡೆದನು. ವಕ್ರವಾಗಿ ಸಂಚರಿಸುವ ಕೃಷ್ಣವರ್ಣವುಳ್ಳ ಮೇಘವು ತೇಜಸ್ಸಿಗೆ ಮೂಲಭೂತವಾದುದೂ, ಉದಕದ ಉತ್ಪತ್ತಿಸ್ಥಾನವಾದುದೂ ಆದ ಅಂತರಿಕ್ಷದಲ್ಲಿದ್ದು ಇಂದ್ರನ ಮೇಲೆ ವೃಷ್ಟಿಯನ್ನು ಸುರಿಸಿ ಅವನಿಗೆ ತಂಪನ್ನುಂಟುಮಾಡುತ್ತದೆ.

English Translation

He has hurled the wheel ( of the chariot ) of the sun, and has stopped Etasa going forth to (battle): the dark undulating cloud bedews him, (staying) at the root of radiance in the regions of its waters ;

ವಿಶೇಷವಿಷಯಗಳು

ಪ್ರೈತಶಂ ಸೂರ್ಯೇ ಪಸ್ಪೃಧಾನಂ (ಋ. ಸಂ. ೧-೬೧-೧೫) ಎಂಬ ಋಕ್ಕಿನ ಭಾಷ್ಯದಲ್ಲಿ ಒಂದು ಪೂರ್ವೇತಿಹಾಸವಿರುವುದೆಂದು ಭಾಷ್ಯಕಾರರು ಸೂಚಿಸಿ ಅದನ್ನು ಮತ್ತೆ ಇಲ್ಲಿ ವಿವರಿಸಿದಾರೆ--

ಸ್ವಶ್ವನಾಮಾ ಕಶ್ಚಿದ್ರಾಜಾ । ಸ ಚ ಪುತ್ರಾರ್ಥಂ ಸೂರ್ಯಮುಪಾಸ್ತೇ। ಸ ಚ ಸೂರ್ಯಃ ಪುತ್ರರೂಪೇಣ ಸ್ವಯಮೇವ ತತ್ರೋತ್ಪನ್ನಃ ಸನ್ ಏತಶಾಖ್ಯೇನ ಮಹರ್ಷಿಣಾ ಸಾರ್ಧಂ ಯುದ್ಧಂ ಚಕಾರ। ತದಾನೀಂ ಸ ಋಷಿಃ ಯುದ್ಧೇ ಜಯಾರ್ಥಮಿಂದ್ರಂ ತುಷ್ಟಾವ । ಸ ಇಂದ್ರಃ ತೇನ ಸ್ತೂಯಮಾನಃ ಸನ್ ಸ್ವಶ್ವಪುತ್ರಸ್ಯ ಸೂರ್ಯಸ್ಯ ಸಂಬಂಧಿನಃ ಸಂಗ್ರಾಮಾತ್ ಏನಮುಪಾಲಯದಿತಿ ।

( ಸಾ. ಭಾ. ).

ಪೂರ್ವದಲ್ಲಿ ಸ್ವಶ್ವನೆಂಬ ಹೆಸರಿನ ಒಬ್ಬ ರಾಜನಿದ್ದನು. ಅವನು ತನಗೆ ಪುತ್ರನಾಗಬೇಕೆಂದು ಸೂರ್ಯನನ್ನು ಉಪಾಸನೆಮಾಡಿದನು. ಆಗ ಸೂರ್ಯನು ತಾನೇ ಅವನಿಗೆ ಪುತ್ರನಾಗಿ ಹುಟ್ಟಿದನು. ಈ ಪುತ್ರನು ಏತಶ ಎಂಬ

CC-0. Jangamwadi Math Collection. Digitized by eGangotri

ಋಷಿಯೊಡನೆ ಯುದ್ಧವನ್ನು ಮಾಡುತ್ತಿದ್ದಾಗ ಆ ಏತಶನೆಂಬ ಋಷಿಯು ಯುದ್ಧದಲ್ಲಿ ತನಗೆ ಜಯವು ಲಭಿಸುವುದಕ್ಕಾಗಿ ಇಂದ್ರನನ್ನು ಸ್ತುತಿಸಿದನು. ಆಗ ಇಂದ್ರನು ಅವನ ಸ್ತುತಿಗೆ ಸಂತೋಷಪಟ್ಟು ಸ್ವಶ್ವಪುತ್ರನ ಸಂಬಂಧವಾದ ಯುದ್ಧದಲ್ಲಿ ಏತಶ ಋಷಿಯನ್ನು ಸಂರಕ್ಷಿಸಿದನು ಎಂಬ ವಿಷಯವು ಈ ಋಕ್ಕಿನಲ್ಲಿ ಸೂಚಿತವಾಗಿದೆ.

---

ಸಂಹಿತಾಪಾಠಃ

ಅಸಿಕ್ನ್ಯಾಂ ಯಜಮಾನೋ ನ ಹೋತಾ ॥ ೧೫ ॥

ಪದಪಾಠಃ

ಅಸಿಕ್ನ್ಯಾಂ । ಯಜಮಾನಃ । ನ । ಹೋತಾ ॥ ೧೫ ॥

ಸಾಯಣಭಾಷ್ಯಂ

ಏಕಪದೇಯಮೃಕ್ ಪೂರ್ವರ್ಚಾ ಸಹ ದೃಷ್ಟಾಂತತ್ವೇನ ಸಂಬಧ್ಯತೇ । ಅಸಿಕ್ನ್ಯಾಂ ರಾತ್ರೌ ಯಜಮಾನೋ ನ ಯಜಮಾನ ಇವ ಹೋತಾ ಹೋತಾರಮಾಹ್ವಾತಾರಮಗ್ನಿಂ । ದ್ವಿತೀಯಾರ್ಥೇ ಪ್ರಥಮಾ । ಸೋಮೇನಾಸಿಂಚತಿ ತದ್ವನ್ಮೇಘಃ ಇಂದ್ರಮಾಸಿಂಚತೀತ್ಯರ್ಥಃ ॥

ಪ್ರತಿಪದಾರ್ಥ

ಅಸಿಕ್ನ್ಯಾಂ—ರಾತ್ರಿಯಲ್ಲಿ। ಯಜಮಾನೋ ಹೋತಾ ನ—ಯಜ್ಞಕರ್ತನು ಹೋತೃವಾದ ಅಗ್ನಿಯಲ್ಲಿ ಆಜ್ಯಾದಿಗಳನ್ನು ಸುರಿಯುವಂತೆ.

ಭಾವಾರ್ಥ

ರಾತ್ರಿಯಕಾಲಗಳಲ್ಲಿ ಯಜ್ಞಕರ್ತನು ಹೋತೃವಾದ ಅಗ್ನಿಯಲ್ಲಿ ಆಜ್ಯಾದಿಗಳನ್ನು ಸುರಿದು ಅಗ್ನಿಯ ಸಂತೃಪ್ತಿಗೆ ಕಾರಣನಾಗುವಂತೆ ಮೇಘವು ವೃಷ್ಟಿಯನ್ನು ಸುರಿಸಿ ಇಂದ್ರನ ಸಂತೃಪ್ತಿಗೆ ಕಾರಣವಾಯಿತು.

English Translation

As the sacrificer (pours the oblation) at night upon the fire.

---

ಸಂಹಿತಾಪಾಠಃ

ಗವ್ಯಂತ ಇಂದ್ರಂ ಸಖ್ಯಾಯ ವಿಪ್ರಾ ಅಶ್ವಾಯಂತೋ ವೃಷಣಂ ವಾಜಯಂತಃ ।

CC-0. Jangamwadi Math Collection. Digitized by eGangotri

ಜನೀಯಂತೋ ಜನಿದಾಮಕ್ಷಿತೋತಿಮಾ ಚ್ಯಾವಯಾಮೋಽವತೇ ನ ಕೋಶಂ ॥ ೧೬ ॥

ಪದಪಾಠಃ

ಗವ್ಯಂತಃ । ಇಂದ್ರಂ । ಸಖ್ಯಾಯ । ವಿಪ್ರಾಃ । ಅಶ್ವಯಂತಃ । ವೃಷಣಂ । ವಾಜಯಂತಃ ।

ಜನಿಽಯಂತಃ । ಜನಿಽದಾಂ । ಅಕ್ಷಿತಽಊತಿಂ । ಆ । ಚ್ಯವಯಾಮಃ । ಅವತೇ । ನ । ಕೋಶಂ ॥ ೧೬ ॥

ಸಾಯಣಭಾಷ್ಯಂ

ಗವ್ಯಂತೋ ಗಾ ಇಚ್ಛಂತೋಽಶ್ವಾಯಂತೋಽಶ್ವಾನಿಚ್ಛಂತೋ ವಾಜಯಂತೋ ವಾಜಮನ್ನಮಿಚ್ಛಂತೋ ಜನೀಯಂತೋ ಜಾಯಾಶ್ಚೇಚ್ಛಂತೋ ವಿಪ್ರಾ ಮೇಧಾವಿನಃ ಸ್ತೋತಾರೋ ವಯಂ ಸಖ್ಯಾಯೇಂದ್ರಸಂಬಂಧಿನೇ ಸಖಿತ್ವಾಯ ವೃಷಣಂ ಕಾಮಾನಾಂ ವರ್ಷಿತಾರಂ ಜನಿದಾಂ ಜಾಯಾಪ್ರದಮಕ್ಷಿತೋತಿಮಕ್ಷೀಣರಕ್ಷಂ । ಸರ್ವದಾ ರಕ್ಷಾಕರಮಿತ್ಯರ್ಥಃ । ಏವಂಭೂತಮಿಂದ್ರಮಾ ಚ್ಯಾವಯಾಮಃ । ಆಗಮಯಾಮಃ । ತತ್ರ ದೃಷ್ಟಾಂತಃ । ಅವತೇ ಕೂಪೇ । ಅವತ ಇತಿ ಕೂಪನಾಮ ಅವತೋಽವಟಃ ಕ್ರಿವಿರಿತಿ ಕೂಪನಾಮಸು ಪಾಠಾತ್ । ಕೋಶಂ ನ ಜಲೋದ್ಧರಣಪಾತ್ರಮಿವ । ಪುರುಷಾ ಜಲೋದ್ಧರಣಪಾತ್ರಂ ಜಲೇನ ಪೂರಯಿತುಂ ಕೂಪೇ ಯಥಾಚ್ಯಾವಯಂತಿ ತಥಾ ವಯಮಾಚ್ಯಾವಯಾಮ ಇತ್ಯರ್ಥಃ ॥

ಪ್ರತಿಪದಾರ್ಥ

ಗವ್ಯಂತಃ—ಗೋವುಗಳನ್ನು ಇಚ್ಛಿಸುವವರೂ । ಅಶ್ವಾಯಂತಃ—ಅಶ್ವಗಳನ್ನು ಇಚ್ಛಿಸುವವರೂ । ವಾಜಯಂತಃ—ಅನ್ನಾಪೇಕ್ಷಿಗಳೂ । ಜನೀಯಂತಃ—ಪತ್ನಿಯರನ್ನು ಪಡೆಯಲು ಕಾತುರರೂ । ವಿಪ್ರಾಃ—ಮೇಧಾವಿಗಳೂ ಆದ ನಾವು (ಸ್ತೋತೃಗಳು) । ಸಖ್ಯಾಯ—ಸ್ನೇಹವನ್ನು ಸಂಪಾದಿಸಲು । ವೃಷಣಂ—ಕಾಮವರ್ಷಕನೂ । ಜನಿದಾಂ—ಪತ್ನೀಪ್ರದನೂ । ಅಕ್ಷಿತೋತಿಂ—ಶಾಶ್ವತವಾದ ರಕ್ಷಣೆಯನ್ನು ಕೊಡುವವನೂ ಆದ । ಇಂದ್ರಂ—ಇಂದ್ರನನ್ನು । ಅವತೇ—ಬಾವಿಯೊಳಕ್ಕೆ । ಕೋಶಂ ನ—ಜಲಪಾತ್ರೆಯನ್ನಿಳಿಸುವಂತೆ । ಆ ಚ್ಯಾವಯಾಮಃ—ನಮ್ಮಲ್ಲಿಗೆ ಇಳಿದುಬರುವಹಾಗೆ ಪ್ರೇರಿಸುತ್ತೇವೆ.

ಭಾವಾರ್ಥ

ಗೋವುಗಳನ್ನಿಚ್ಛಿಸುವವರೂ, ಅಶ್ವಗಳನ್ನಿಚ್ಛಿಸುವವರೂ, ಅನ್ನಾಪೇಕ್ಷಿಗಳೂ, ಪತ್ನಿಯರನ್ನು ಪಡೆಯಲು ಕಾತುರರೂ, ಮೇಧಾವಿಗಳೂ ಆದ ನಾವು (ಸ್ತೋತೃಗಳು) ಇಂದ್ರನೊಡನೆ ಸಖಿತ್ವವನ್ನು ಸಂಪಾದಿಸು, ಬಾವಿಯೊಳಕ್ಕೆ ಜಲಪಾತ್ರೆಯನ್ನಿಳಿಸುವಂತೆ ಕಾಮವರ್ಷಕನೂ, ಪತ್ನೀಪ್ರದನೂ ಶಾಶ್ವತವಾದ ರಕ್ಷಣೆಯನ್ನು ಕೊಡುವವನೂ ಆದ ಇಂದ್ರನನ್ನು ನಮ್ಮಲ್ಲಿಗೆ ಇಳಿದು ಬರುವಂತೆ ಪ್ರೇರಿಸುತ್ತೇವೆ.



CC-0. Jangamwadi Math Collection. Digitized by eGangotri

## English Translation

May we (who are) wishing for cattle, for horses, for food, for wives, through his friendship induce Indra, the showerer ( of benefits ) the giver of wives, the unwearied granter (of protection) to come down, as a bucket (is lowered) into a well.

---

### ಸಂಹಿತಾಪಾಠಃ

ತ್ರಾತಾ ನೋ ಬೋಧಿ ದದೃಶಾನ ಆಪಿರಭಿಖ್ಯಾತಾ ಮರ್ಡಿತಾ ಸೋಮ್ಯಾ-
ನಾಂ ।

ಸಖಾ ಪಿತಾ ಪಿತೃತಮಃ ಪಿತೃಣಾಂ ಕರ್ತೇಮು ಲೋಕಮುಶತೇ ವಯೋ-
ಧಾಃ॥ ೧೭ ॥

### ಪದಪಾಠಃ

ತ್ರಾತಾ । ನಃ । ಬೋಧಿ । ದದೃಶಾನಃ । ಆಪಿಃ । ಅಭಿಽಖ್ಯಾತಾ । ಮರ್ಡಿತಾ । ಸೋಮ್ಯಾನಾಂ ।

ಸಖಾ । ಪಿತಾ । ಪಿತೃಽತಮಃ । ಪಿತೃಣಾಂ । ಕರ್ತಾ । ಈಂ । ಊಂ ಇತಿ । ಲೋಕಂ । ಉಶತೇ ।
ವಯಃಽಧಾಃ ॥ ೧೭ ॥

### ಸಾಯಣಭಾಷ್ಯಂ

ಹೇ ಇಂದ್ರ ಆಪಿರಾಪ್ತೋ ದದೃಶಾನಃ ಸರ್ವಂ ಪಾಲಕತ್ವೇನ ಪಶ್ಯಂಸ್ತ್ವಂ ನೋಽಸ್ಮಾಕಂ ತ್ರಾತಾ ರಕ್ಷಕೋ ಬೋಧಿ । ಭವ । ಕಿಂಚ । ಅಭಿಖ್ಯಾತಾಭಿದ್ರಷ್ಟಾ ಮರ್ಡಿತಾ ಸುಖಯಿತಾ ಸೋಮ್ಯಾನಾಂ ಸೋಮಾರ್ಹಾಣಾಂ ಯಜಮಾನಾದೀನಾಂ ಸಖಾ ಪ್ರಜಾಪತಿನಾ ಸಮಾನಖ್ಯಾತಿಃ ಪಿತಾ ಪಾಲಕಃ । ಕೇವಲಂ ಪಾಲಕೋ ನ ಕಿಂತು ಪಿತೃಣಾಂ ಪಾಲಕಾನಾಂ ಮಧ್ಯೇ ಪಿತೃತಮೋಽತಿಶಯೇನ ಪಾಲಕಃ ಕರ್ತೇಮು ಪಿತೃಣಾಂ ಸ್ರಷ್ಟಾ ಚ ತ್ವಂ ಲೋಕಂ ಸ್ವರ್ಗಾದಿಲೋಕಮುಶತೇ ಕಾಮಯಮಾನಾಯ ಸ್ತೋತ್ರೇ ವಯೋಧಾಃ । ವಯ ಇತ್ಯನ್ನನಾಮೈತತ್ । ಅನ್ನಪ್ರದೋ ಭವ ॥

### ಪ್ರತಿಪದಾರ್ಥ

(ಎಲೈ ಇಂದ್ರನೇ) ಆಪಿಃ—ನಮಗೆ ಆಪ್ತನೂ । ದದೃಶಾನಃ—ಎಲ್ಲರನ್ನೂ ದಯೆಯಿಂದ ನೋಡುವವನೂ ಆದ ನೀನು । ನಃ—ನಮಗೆ । ತಾತ್ರಾ—ರಕ್ಷಕನಾಗಿರಬೇಕೆಂಬುದನ್ನು । ಭೋಧಿ—ತಿಳಿ. (ರಕ್ಷಕನಾಗಿರು) ।

CC-0. Jangamwadi Math Collection. Digitized by eGangotri

ಅಭಿಖ್ಯಾತಾ—ನಮ್ಮೆಲ್ಲರನ್ನೂ ಮೇಲ್ವಿಚಾರಕನಂತೆ ನೋಡಿಕೊಳ್ಳುವವನೂ । ಮರ್ಡಿತಾ—ಸುಖಕಾರಕನೂ । ಸೋಮ್ಯಾನಾಂ—ಸೋಮಾರ್ಪಣಕ್ಕೆ ಅರ್ಹರಾದ ಯಜಮಾನರಿಗೆ । ಸಖಾ—ಸ್ನೇಹಿತನೂ । ಪಿತಾ—ಪಾಲಕನೂ। ಪಿತೄಣಾಂ—ಪಾಲಕರ ನಡುವೆ । ಪಿತೃತಮಃ—ಉತ್ತಮನಾದ ಪಾಲಕನೂ । ಕರ್ತಾ ಈಂ ಉ—ಸಕಲರಿಗೂ ಸೃಷ್ಟಿಕರ್ತನೂ ಆದ ನೀನು । ಲೋಕಂ—ಸ್ವರ್ಗಾದಿ ಲೋಕವನ್ನು । ಉಶತೇ—ಅಪೇಕ್ಷಿಸುವ ಸ್ತೋತೃವಿಗೆ । ವಯೋಧಾಃ—ಅನ್ನದಾತನಾಗಿರು.

ಭಾವಾರ್ಥ

ಎಲೈ ಇಂದ್ರನೇ, ನಮಗೆ ಆಪ್ತನೂ, ಎಲ್ಲರನ್ನೂ ದಯೆಯಿಂದ ನೋಡುವವನೂ ಆದ ನೀನು ನಮಗೆ ರಕ್ಷಕನಾಗಿರು. ನಮ್ಮೆಲ್ಲರನ್ನೂ ಮೇಲ್ವಿಚಾರಕನಂತೆ ನೋಡಿಕೊಳ್ಳುವವನೂ, ಸುಖಕಾರಕನೂ, ಸೋಮಾರ್ಪಣಕ್ಕೆ ಅರ್ಹರಾದ ಯಜಮಾನರಿಗೆ ಸಖನೂ, ಪಾಲಕನೂ, ಪಾಲಕರ ನಡುವೆಯಲ್ಲೆಲ್ಲಾ ಉತ್ತಮನಾದ ಪಾಲಕನೂ, ಸಕಲರಿಗೂ ಸೃಷ್ಟಿಕರ್ತನೂ ಆದ ನೀನು ಸ್ವರ್ಗಾದಿಲೋಕವನ್ನು ಅಪೇಕ್ಷಿಸುವ ಸ್ತೋತೃವಿಗೆ ಅನ್ನದಾತನಾಗಿರು.

English Translation

Be our preserver, you who are looking (benevolently upon) all; a kinsman (to us); a supervisor (of all things), a bestower of felicity on those who are worthy (to offer) libations; a friend, a protector, a defender in the highest degree among defenders, a creater : (be you, who bestow) the world of heaven upon him who desires it, the giver to us of food.

———— :o: ————

ಸಂಹಿತಾಪಾಠಃ

ಸಖೀಯತಾಮವಿತಾ ಬೋಧಿ ಸಖಾ ಗೃಣಾನ ಇಂದ್ರ ಸ್ತುವತೇ ವಯೋಧಾಃ ।

ವಯಂ ಹ್ಯಾ ತೇ ಚಕೃಮಾ ಸಬಾಧ ಆಭಿಃ ಶಮೀಭಿರ್ಮಹಯಂತ ಇಂದ್ರ॥

ಪದಪಾಠಃ

ಸಖಿಽಯತಾಂ । ಅವಿತಾ । ಬೋಧಿ । ಸಖಾ । ಗೃಣಾನಃ । ಇಂದ್ರ । ಸ್ತುವತೇ । ವಯಃ । ಧಾಃ ।

ವಯಂ । ಹಿ । ಆ । ತೇ । ಚಕೃಮ । ಸಽಬಾಧಃ । ಆಭಿಃ । ಶಮೀಭಿಃ । ಮಹಯಂತಃ । ಇಂದ್ರ॥ ೧೪ ॥

ಸಾಯಣಭಾಷ್ಯಂ

ಹೇ ಇಂದ್ರ ತ್ವಂ ಸಖೀಯತಾಂ ಸಖಿತ್ವಮಿಚ್ಛತಾಮಸ್ಮಾಕಮವಿತಾ ರಕ್ಷಿತಾ ಬೋಧಿ। ಭವ। ತಥಾ ಗೃಣಾನಃ ಃ ಸ್ತೂಯಮಾನಸ್ತ್ವಂ ಸಖಾ ಭವ । ಹೇ ಇಂದ್ರ ಸ್ತುವತೇ ಸ್ತುತಿಂ ಕುರ್ವತೇ ಮಹ್ಯಂ ವಯೋಽನ್ನಂ ಧಾಃ । ಅಧಾಃ । ಧೇಹಿ । ಹೇ ಇಂದ್ರ ಸಬಾಧೋ ಬಾಧಾಸಹಿತಾ ವಯಂ ಹಿ ವಯಂ

CC-0. Jangamwadi Math Collection. Digitized by eGangotri

ಖಲು ತೇ ತ್ವಾಮಾ ಚಕೃಮ । ಆಹ್ವಯಾವಃ । ಕಿಂ ಕುರ್ವಂತಃ । ಆಭಿಃ ಪ್ರತ್ಯಕ್ಷೇಣೋಪಲಭ್ಯ-ಮಾನೈಃ ಶಮೀಭಿಃ ಸ್ತುತಿರೂಪೈಃ ಕರ್ಮಭಿರ್ಮಹಯಂತಸ್ತ್ವಾಂ ಪೂಜಯಂತಃ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ಸಖೀಯತಾಂ—ನಿನ್ನ ಸ್ನೇಹವನ್ನಿಚ್ಛಿಸುವ ನಮಗೆ । ಅವಿತಾ—ರಕ್ಷಕನಾಗಿರುವಂತೆ। ಬೋಧಿ—ತಿಳಿ । ಗೃಣಾನಃ—ಸ್ತುತಿಸಲ್ಪಡುವ ನೀನು। ಸಖಾ—ನಮ್ಮ ಸ್ನೇಹಿತನಾಗು । ಸ್ತುವತೇ—ನಿನ್ನನ್ನು ಸ್ತುತಿಸುವ ನನಗೆ । ವಯಃ—ಅನ್ನವನ್ನು । ಧಾಃ—ಕೊಡು । ಇಂದ್ರ—ಎಲೈ ಇಂದ್ರನೇ । ಸಬಾಧಃ-ಕ್ಲೇಶವನ್ನನುಭವಿಸುವವರಾಗಿ । ವಯಂ—ನಾವು । ಆಭಿಃ ಶಮೀಭಿಃ—ಸ್ತುತಿರೂಪವಾದ ಈ ಕರ್ಮಗಳಿಂದ । ಮಹಯಂತಃ—ನಿನ್ನನ್ನು ಪೂಜಿಸುತ್ತಾ । ತೇ—ನಿನ್ನನ್ನು । ಆ ಚಕೃಮ—ಪ್ರಾರ್ಥಿಸಿ ಕರೆಯುತ್ತೇವೆ.

ಭಾವಾರ್ಥ

ಎಲೈ ಇಂದ್ರನೇ, ನಿನ್ನ ಸಖಿತ್ವವನ್ನಿಚ್ಛಿಸುವ ನಮಗೆ ನೀನು ರಕ್ಷಕನಾಗಿರಬೇಕೆಂದು ತಿಳಿ. ಸ್ತುತಿಸಲ್ಪಡತಕ್ಕ ನೀನು ನಮ್ಮ ಸ್ನೇಹಿತನಾಗಿರು. ನಿನ್ನನ್ನು ಸ್ತುತಿಸುವ ನನಗೆ ಅನ್ನವನ್ನು ಕೊಡು. ಎಲೈ ಇಂದ್ರನೇ, ನಾವು ತಪಃಕ್ಲೇಶವನ್ನನುಭವಿಸುತ್ತಾ ಸ್ತುತಿರೂಪವಾದ ಈ ಕರ್ಮಗಳಿಂದ ನಿನ್ನನ್ನು ಪೂಜಿಸುತ್ತಾ ನಿನ್ನನ್ನು ಪ್ರಾರ್ಥಿಸಿ ಕರೆಯುತ್ತೇವೆ.

English Translation

Regard yourself as a protector of those who desire your friendship ; be a friend deserving of commendation : grant, Indra, food to him who praises (you) : suffering difficulties, we make our supplications to you, worshipping you with these holy rites.

ವಿಶೇಷವಿಷಯಗಳು

ವೃತ್ರಘ್ನ ಇಂದ್ರನನ್ನು ಉದ್ದೇಶಿಸಿ ಮಾಡುವ ಯಾಗದಲ್ಲಿ ಪುರೋಡಾಶಹೋಮಮಾಡುವಾಗ ಸ್ತುತ ಇಂದ್ರಃ ಎಂಬ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಸುತ ಇಂದ್ರೋ ಮಘವಾ ಯದ್ಧ ವೃತ್ರೈನಾ ವಸ್ವ ಇಂದ್ರಃ ಸತ್ಯಃ ಸಮ್ರಾಟ್ ಎಂಬ ಸೂತ್ರದಿಂದ (ಆ. ೩-೮) ವಿವೃತವಾಗಿರುವುದು.

———

ಸಂಹಿತಾಪಾಠಃ

ಸ್ತುತ ಇಂದ್ರೋ ಮಘವಾ ಯದ್ಧ ವೃತ್ರಾ ಭೂರೀಣ್ಯೇಕೋ ಅಪ್ರತೀನಿ ಹಂತಿ ।

CC-0. Jangamwadi Math Collection. Digitized by eGangotri

ಅಸ್ಯ ಪ್ರಿಯೋ ಜರಿತಾ ಯಸ್ಯ ಶರ್ಮನ್ನಕಿರ್ದೇವಾ ವಾರಯಂತೇ ನ

ಮರ್ತಾಃ ॥೧೯ ॥

ಪದಪಾಠಃ

ಸ್ತುತಃ । ಇಂದ್ರಃ । ಮಘವಾ । ಯತ್ । ಹ । ವೃತ್ರಾ । ಭೂರೀಣಿ । ಏಕಃ । ಅಪ್ರತೀನಿ । ಹಂತಿ ।

ಅಸ್ಯ । ಪ್ರಿಯಃ । ಜರಿತಾ । ಯಸ್ಯ । ಶರ್ಮನ್ । ನಕಿಃ । ದೇವಾಃ । ವಾರಯಂತೇ । ನ । ಮರ್ತಾಃ ॥

ಸಾಯಣಭಾಷ್ಯಂ

ಇಂದ್ರಸ್ಯ ವೃತ್ರಘ್ನಃ ಪುರೋಡಾಶಸ್ಯ ಸ್ತುತ ಇಂದ್ರ ಇತಿ ಯಾಜ್ಯಾ । ಸೂತ್ರಿತಂ ಚ । ಸ್ತುತ ಇಂದ್ರೋ ಮಘವಾ ಯದ್ಧ ವೃತ್ರೈವಾ ವಸ್ವ ಇಂದ್ರಃ ಸತ್ಯಃ ಸಮ್ರಾಟ್ । ಆ. ೩-೮ । ಇತಿ ॥

ಯದ್ಧ ಯದಾ ಖಲು ಮಘವಾ ಧನವಾನಿಂದ್ರಃ ಸ್ತುತೋಽಸ್ಮಾಭಿಃ ಸ್ತುತೋ ಭವತಿ ತದೇಂದ್ರ ಏಕೋಽಸಹಾಯ ಏವ ಭೂರೀಣಿ ಬಹೂನ್ಯಪ್ರತೀನ್ಯಪ್ರತಿಗಮನಾನಿ । ಅಭಿಗಮನಯುಕ್ತಾನೀತ್ಯರ್ಥಃ । ವೃತ್ರಾ ವೃತ್ರಾಣಿ ಶತ್ರೂನ್ಹಂತಿ । ಹಿನಸ್ತಿ । ಯಸ್ಯೇಂದ್ರಸ್ಯ ಶರ್ಮನ್ ಶರ್ಮಣ್ಯಾಶ್ರಯೇ ವರ್ತಮಾನಂ ಸ್ತೋತಾರಂ ದೇವಾ ನಕಿರ್ವಾರಯಂತೇ । ನಿವಾರಣಂ ನ ಕುರ್ವಂತಿ । ಮರ್ತಾಶ್ಚ ನ ನಿವಾರಯಂತೇ ಅಸ್ಯೇಂದ್ರಸ್ಯ ಜರಿತಾ ಸ್ತೋತಾ ಪ್ರಿಯೋ ಭವತಿ ॥

ಪ್ರತಿಪದಾರ್ಥ

ಯದ್ಧ—ಯಾವಾಗ । ಮಘವಾ—ಧನವಂತನಾದ । ಇಂದ್ರಃ—ಇಂದ್ರನು । ಸ್ತುತಃ—ಪ್ರಶಂಸಿತ ನಾಗುವನೋ (ಆಗ) । ಏಕಃ—ಅವನೊಬ್ಬನೇ । ಭೂರೀಣಿ—ಬಹುಸಂಖ್ಯಾಕರೂ । ಅಪ್ರತೀನಿ—(ಇತರರಿಗೆ) ಜಗ್ಗದವರೂ ಆದ । ವೃತ್ರಾ—ಶತ್ರುಗಳನ್ನೆಲ್ಲಾ । ಹಂತಿ—ನಾಶಮಾಡುತ್ತಾನೆ । ಯಸ್ಯ—ಯಾವ ಅದೇ ಇಂದ್ರನ। ಶರ್ಮನ್—ರಕ್ಷಣೆಯಲ್ಲಿರುವ ಸ್ತೋತೃವನ್ನು । ದೇವಾಃ—ದೇವತೆಗಳು । ನಕಿಃ ವಾರಯಂತೇ—ವಿರೋಧಿಸ ಲಾರರು । ಮರ್ತಾಃ— ಮಾನವರೂ ಸಹ । ನ (ವಾರಯಂತೇ)—ವಿರೋಧಿಸಲಾರರು । ಅಸ್ಯ—ಈ ಇಂದ್ರನಿಗೆ। ಜರಿತಾ—ಸ್ತೋತೃವು । ಪ್ರಿಯಃ—ಪ್ರೀತಿಪಾತ್ರನಾಗುತ್ತಾನೆ.

ಭಾವಾರ್ಥ

ಧನವಂತನಾದ ಇಂದ್ರನು ಪ್ರಶಂಸಿತನಾದೊಡನೆಯೇ, ಅವನು ಇತರರ ಸಹಾಯವಿಲ್ಲದೇ ತಾನೊಬ್ಬನೇ ಬಹುಸಂಖ್ಯಾಕರೂ, ಇತರರಿಗೆ ಜಗ್ಗದವರೂ ಆದ ಶತ್ರುಗಳನ್ನೆಲ್ಲಾ ನಾಶಮಾಡುತ್ತಾನೆ. ಇಂದ್ರನ ರಕ್ಷಣೆಯಲ್ಲಿರುವ ಸ್ತೋತೃವನ್ನು ದೇವತೆಗಳಾಗಲಿ, ಮಾನವರಾಗಲಿ ವಿರೋಧಿಸಲಾರರು. ಈ ಇಂದ್ರನಿಗೆ ಸ್ತೋತೃವು ಪ್ರೀತಿಪಾತ್ರ ನಾಗುತ್ತಾನೆ.

CC-0. Jangamwadi Math Collection. Digitized by eGangotri

## English Translation

When Indra, the posssessor of opulence, is glorified, he singly destroys many unyielding foes: the worshipper is dear to him (who relies) on his protection, and neither gods nor men molest him

---

### ಸಂಹಿತಾಪಾಠಃ

ಏವಾ ನ ಇಂದ್ರೋ ಮಘವಾ ವಿರಪ್ಶೀ ಕರತ್ಸತ್ಯಾ ಚರ್ಷಣೀಧೃದನರ್ವಾ।
ತ್ವಂ ರಾಜಾ ಜನುಷಾಂ ಧೇಹ್ಯಸ್ಮೇ ಅಧಿ ಶ್ರವೋ ಮಾಹಿನಂ ಯಜ್ಜರಿತ್ರೇ॥

### ಪದಪಾಠಃ

ಏವ । ನಃ । ಇಂದ್ರಃ । ಮಘಽವಾ । ವಿಽರಪ್ಶೀ । ಕರತ್ । ಸತ್ಯಾ । ಚರ್ಷಣಿಽಧೃತ್ । ಅನರ್ವಾ ।
ತ್ವಂ । ರಾಜಾ । ಜನುಷಾಂ । ಧೇಹಿ । ಅಸ್ಮೇ ಇತಿ । ಅಧಿ । ಶ್ರವಃ । ಮಾಹಿನಂ । ಯತ್ । ಜರಿತ್ರೇ ॥೨೦॥

### ಸಾಯಣಭಾಷ್ಯಂ

ಆಗ್ನಿಮಾರುತಶಸ್ತ್ರ ಏವಾ ನ ಇಂದ್ರ ಇತಿ ಪರಿಧಾನೀಯಾ। ಸೂತ್ರಿತಂ ಚ। ಏವಾ ನ ಇಂದ್ರೋ ಮಘವಾ ವಿರಪ್ಶೀತಿ ಪರಿದಧ್ಯಾತ್। ಆ. ೫-೨೦। ಇತಿ॥

ವಿರಪ್ಶೀ ಬಹುವಿಧಶಬ್ದವಾನ್ ಚರ್ಷಣೀಧೃತ್ ಸರ್ವಾಸಾಂ ಪ್ರಜಾನಾಂ ಧಾರಯಿತಾನರ್ವಾ-ಪ್ರತ್ಯೃತಃ। ಕೇನಾಪಿ ಪ್ರತಿಕೂಲೇನ ನ ಪ್ರಾಪ್ತ ಇತ್ಯರ್ಥಃ। ಮಘವಾ ಧನವಾನಿಂದ್ರ ಏವ್ಮೈವಮಸ್ಮಾಭಿಃ ಸ್ತುತಃ ಸನ್ ನೋಽಸ್ಮಾಕಂ ಸತ್ಯಾ ಸತ್ಯರೂಪಾಣ್ಯಭಿಮತಾನಿ ಫಲಾನಿ ಕರತ್। ಕರೋತು। ಹೇ ಇಂದ್ರ ಜನುಷಾಂ ಜನ್ಮವತಾಂ ಸರ್ವೇಷಾಂ ರಾಜಾ ಪ್ರಭುಸ್ತ್ವಂ ಮಾಹಿನಂ ಮಹಿಮ್ನೋಪೇತಂ ಯಚ್ಛ್ರವೋ ಯದ್ಯಶೋ ಜರಿತ್ರೇ ಸ್ತೋತ್ರೇ ದೇಯಂ ತದ್ಯಶೋಽಸ್ಮೇ ಅಸ್ಮಾಸ್ವಧಿ ಅಧಿಕತ್ವೇನ ಧೇಹಿ॥ ಏವಾ ನ ಇಂದ್ರೋ ಮಘವಾ ವಿರಪ್ಶೀತ್ಯುತ್ತಮಯಾ ಪರಿದಧಾತೀಯಂ ವಾ ಇಂದ್ರೋ ಮಘವಾ ವಿರಪ್ಶೀತ್ಯಾದಿ ಬ್ರಾಹ್ಮಣಂ। ಐ. ಬ್ರಾ. ೩-೩೮॥

### ಪ್ರತಿಪದಾರ್ಥ

ವಿರಪ್ಶೀ—ನಾನಾವಿಧವಾದ ಶಬ್ದಾತ್ಮಕನೂ। ಚರ್ಷಣೀಧೃತ್—ಸಕಲ ಪ್ರಜೆಗಳನ್ನೂ ಧರಿಸಿರುವವನೂ। ಅನರ್ವಾ—ಅಪ್ರತಿಹತನೂ। ಮಘವಾ—ಧನವಂತನೂ ಆದ। ಇಂದ್ರಃ—ಇಂದ್ರನು। ಏವಾ—ನಮ್ಮಿಂದ ಈ

CC-0. Jangamwadi Math Collection. Digitized by eGangotri

ಪ್ರಕಾರವಾಗಿ ಸ್ತುತನಾಗಿ । ನಃ—ನಮಗೆ । ಸತ್ಯಾ—ಸತ್ಯಾತ್ಮಕವಾದ ಫಲಗಳನ್ನು । ಕರತ್—ಉಂಟುಮಾಡಲಿ (ಎಲೈ ಇಂದ್ರನೇ) । ಜನುಷಾಂ—ಜನ್ಮವನ್ನು ಪಡೆಯುವ ಸಕಲ ಪ್ರಾಣಿಗಳಿಗೂ । ರಾಜಾ—ಪ್ರಭುವಾದ । ತ್ವಂ—ನೀನು । ಮಾಹಿನಂ—ಮಹಿಮೆಯಿಂದ ಕೂಡಿದ । ಯತ್ ಶ್ರವಃ—ಯಾವ ಕೀರ್ತಿಯುಂಟೋ ಅದನ್ನು । ಜರಿತ್ರೇ—ಸ್ತುತಿಕರ್ತರಾದ । ಅಸ್ಮೇ—ನಮ್ಮಲ್ಲಿ । ಅಧಿ ಧೇಹಿ—ಅಧಿಕವಾಗಿ ಇರುವಂತೆ ಮಾಡು.

ಭಾವಾರ್ಥ

ನಾನಾವಿಧವಾದ ಶಬ್ದಾತ್ಮಕನೂ, ಸಕಲ ಪ್ರಜೆಗಳನ್ನೂ ಧರಿಸಿರುವವನೂ, ಅಪ್ರತಿಹತನೂ, ಧನವಂತನೂ ಆದ ಇಂದ್ರನು ನಮ್ಮಿಂದ ಅನೇಕ ವಿಧದಲ್ಲಿ ಸ್ತುತನಾಗಿ ನಮಗೆ ಸತ್ಯಾತ್ಮಕವಾದ ಫಲಗಳನ್ನುಂಟುಮಾಡಲಿ. ಎಲೈ ಇಂದ್ರನೇ, ಜನ್ಮವನ್ನು ಪಡೆಯುವ ಸಕಲ ಪ್ರಾಣಿಗಳಿಗೂ ಪ್ರಭುವಾದ ನೀನು ಮಹಿಮೆಯಿಂದ ಕೂಡಿದ ಕೀರ್ತಿಯನ್ನು ಸ್ತುತಿಕರ್ತರಾದ ನಮಗೆ ಅಧಿಕವಾಗಿ ಉಂಟಾಗುವಂತೆ ಮಾಡು.

English Translation

The many-voiced Indra, the possessor of opulence, the supporter of men, the irresistible, bestows upon us, when praised by us, assured (rewards): you, (Indra), are the king of men : grant to us abundantly that great fame which (is due) to (your) worshipper.

ವಿಶೇಷವಿಷಯಗಳು

ಆಗ್ನಿಮಾರುತಶಸ್ತ್ರಮಂತ್ರಪಠನದಲ್ಲಿ—ಏವಾನ ಇಂದ್ರಃ ಎಂಬ ಈ ಋಕ್ಕನ್ನು ಪರಿಧಾನೀಯ (ಕೊನೆಯ) ಮಂತ್ರವನ್ನಾಗಿ ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ—ಏವಾ ನ ಇಂದ್ರೋ ಮಘವಾ ವಿರಪ್ಶೀತಿ ಪರಿದಧ್ಯಾತ್ ಎಂಬ ಸೂತ್ರದಿಂದ (ಅ. ೫-೨೦) ವಿವೃತವಾಗಿರುವುದು.

ಈ ಋಕ್ಕನ್ನು ಆಗ್ನಿಮಾರುತಶಸ್ತ್ರಮಂತ್ರಗಳಲ್ಲಿ ಪರಿಧಾನೀಯ (ಕೊನೆಯ) ಮಂತ್ರವನ್ನಾಗಿ ಪಠಿಸಬೇಕೆಂದು ಐತರೇಯಬ್ರಾಹ್ಮಣದಲ್ಲಿಯೂ ಹೇಳಿದೆ. (ಐ. ಬ್ರಾ. ೧೩-೩೪) ಅಲ್ಲಿರುವ ವಿಷಯವನ್ನೇ ಇಲ್ಲಿ ವಿವರಿಸಿದೆ—

> ಏವಾ ನ ಇಂದ್ರೋ ಮಘವಾ ವಿರಪ್ಶೀತ್ಯುತ್ತಮಯಾ ಪರಿದಧಾತೀಯಂ ವಾ ಇಂದ್ರೋ ಮಘವಾ ವಿರಪ್ಶೀ ಕರತ್ಸತ್ಯಾ ಚರ್ಷಣೀಧೃದನರ್ವೇತೀಯಂ ವೈ ಸತ್ಯಾ ಚರ್ಷಣೀಧೃದನರ್ವಾ ।
>
> (ಐ. ಬ್ರಾ. ೧೩-೩೪)

ಈ ಇಂದ್ರನು ಧನವುಳ್ಳವನು, ಯಾವಾಗಲೂ ಕಾರ್ಯನಿರತನಾಗಿರುವವನು. [ ವಿರಪ್ಶೀ ಎಂಬ ಶಬ್ದವು ರಭ ರಾಭಸ್ಯೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ಸೋಮಾರಿಯಾಗಿರದೆ ಯಾವಾಗಲೂ ಯಾವುದಾದರೊಂದು ಕಾರ್ಯದಲ್ಲಿ ನಿರತನಾಗಿರುವವನು ಎಂಬರ್ಥವನ್ನು ಸೂಚಿಸುವುದು ]. ಇಂದ್ರನ ಪರವಾಗಿ ಈ ಅರ್ಥಗಳನ್ನು ಸೂಚಿಸುವ ಈ ಋಕ್ಕಿನಿಂದ ಈ ಆಗ್ನಿಮಾರುತಶಸ್ತ್ರಮಂತ್ರಗಳನ್ನು ಪರಿಸಮಾಪ್ತಿಗೊಳಿಸಬೇಕು. ಈ ಋಕ್ಕಿನಲ್ಲಿರುವ ಇಂದ್ರಾದಿಶಬ್ದ

CC-0. Jangamwadi Math Collection. Digitized by eGangotri

ಗಳು ಭೂಮಿಪರವಾಗಿಯೂ ಅರ್ಥವನ್ನು ಸೂಚಿಸುವವು. ಚರ್ಷಣೀಶಬ್ದವು ಮನುಷ್ಯರೆಂಬ ಅರ್ಥವನ್ನು ಸೂಚಿಸುವುದು. ಮನುಷ್ಯರನ್ನು ಧರಿಸುವ ಅಥವಾ ಪೋಷಿಸುವವನಾದ್ದರಿಂದ ಇಂದ್ರನಿಗೆ ಚರ್ಷಣೀಧೃತ್ ಎಂದು ಹೆಸರಿರುವುದು. ಇಂತಹ ಇಂದ್ರನು ತನ್ನ ವಾಹನವಾದ ಕುದುರೆಯಿಂದ ಇಳಿದು ನಮ್ಮ ಈ ಯಜ್ಞಭೂಮಿಯಲ್ಲಿ ಬಂದು ಕುಳಿತು ಸತ್ಯಾತ್ಮಕವಾದ ಯಜ್ಞಕರ್ಮವನ್ನು ವಿಘ್ನಾದಿಗಳಿಂದ ರಕ್ಷಿಸಿ ಸಫಲಗೊಳಿಸಲಿ ಎಂಬ ಅಭಿಪ್ರಾಯವು ಇಲ್ಲಿ ವ್ಯಕ್ತವಾಗಿದೆ. ಈ ಮಂತ್ರವನ್ನು ಪಠಿಸುತ್ತಾ ಭೂಮಿಸ್ಪರ್ಶನಮಾಡುವುದರಿಂದ ಭೂಮಿಯನ್ನು ಪ್ರಾರ್ಥಿಸಿದಂತಾಯಿತು ಎಂದು ಇಲ್ಲಿ ಹೇಳಿದೆ.

> ತ್ವಂ ರಾಜಾ ಜನುಷಾಂ ಧೇಹ್ಯಸ್ಮೇ ಇತೀಯಂ ವೈ ರಾಜಾ ಜನುಷಾಂ ಅಧಿ ಶ್ರವೋ ಮಾಹಿನಂ ಯಜ್ಜರಿತ್ರ ಇತೀಯಂ ವೈ ಮಾಹಿನಂ ಯಜ್ಞಶ್ರವೋ ಯಜಮಾನೋ ಜರಿತಾ ಯಜಮಾನಾಯೈವೈತಾಮಾಶಿಷಮಾಶಾಸ್ತೇ ॥

(ಐ. ಬ್ರಾ. ೧೩–೩೮)

ಎಲೈ ಇಂದ್ರನೇ (ಅಥವಾ ಭೂಮಿಯೇ) ನೀನು ಉತ್ಪನ್ನರಾದ ನಮ್ಮಗಳೆಲ್ಲರಿಗೂ ಎಂದರೆ ಋತ್ವಿಗ್ಯಜಮಾನರಾದಿಯಾಗಿ ಸಕಲರಿಗೂ ರಾಜನಾಗಿರುವೆ. ಮತ್ತು ನಮ್ಮ ಅಭೀಷ್ಟಗಳನ್ನೆಲ್ಲಾ ಒದಗಿಸಿಕೊಡುವೆ. ಸ್ತೋತ್ರಮಾಡುತ್ತಿರುವ ಯಜಮಾನನಿಗೆ ಮಹತ್ಕೀರ್ತಿಯನ್ನೂ, ಅನ್ನವನ್ನೂ ಸಂಪಾದಿಸಿಕೊಡು. ಈ ಯಜ್ಞದಲ್ಲಿ ಯಜಮಾನನು ನಿನ್ನನ್ನು ಬಹುವಾಗಿ ಸ್ತೋತ್ರಮಾಡುತ್ತಿರುವನು. ಇಂತಹ ಯಜಮಾನನಿಗಾಗಿ ಅವನು ಮಾಡುತ್ತಿರುವ ಯಜ್ಞವನ್ನು ಸಾಫಲ್ಯಗೊಳಿಸಿ ಮಹತ್ಕೀರ್ತಿಯನ್ನು ಅನುಗ್ರಹಿಸು ಎಂದು ಋತ್ವಿಗ್ಜನರು ಪ್ರಾರ್ಥಿಸುತ್ತಿರುವರು ಎಂದು ಮುಖ್ಯಾಭಿಪ್ರಾಯವು.

---

ಸಂಹಿತಾಪಾಠಃ

ನೂ ಷ್ಟುತ ಇಂದ್ರ ನೂ ಗೃಣಾನ ಇಷಂ ಜರಿತ್ರೇ ನದ್ಯೋ೩ ನ ಪೀಪೇಃ ।
ಅಕಾರಿ ತೇ ಹರಿವೋ ಬ್ರಹ್ಮ ನವ್ಯಂ ಧಿಯಾ ಸ್ಯಾಮ ರಥ್ಯಃ ಸದಾಸಾಃ ॥೨೧॥

ಪದಪಾಠಃ

ನು । ಸ್ತುತಃ । ಇಂದ್ರ । ನು । ಗೃಣಾನಃ । ಇಷಂ । ಜರಿತ್ರೇ । ನದ್ಯಃ । ನ । ಪೀಪೇರಿತಿ ಪೀಪೇಃ ।
ಅಕಾರಿ । ತೇ । ಹರಿಽವಃ । ಬ್ರಹ್ಮ । ನವ್ಯಂ । ಧಿಯಾ । ಸ್ಯಾಮ । ರಥ್ಯಃ । ಸದಾಽಸಾಃ ॥ ೨೧ ॥

ಸಾಯಣಭಾಷ್ಯಂ

ಹೇ ಇಂದ್ರ ನು ಕ್ಷಿಪ್ರಂ ಸ್ತುತಃ ಪೂರ್ವೈರೃಷಿಭಿಃ ಸಂಸ್ತುತೋ ನು ಕ್ಷಿಪ್ರಂ ಗೃಣಾನೋಽಸ್ಮಾಭಿಃ ಸ್ತೂಯಮಾನಶ್ಚ ತ್ವಮಿಷಮನ್ನಂ ಜರಿತ್ರೇ ಸ್ತೋತ್ರೇ ಮಹ್ಯಂ ನದ್ಯೋ ನ ಅದ್ಭಿರ್ನದೀರಿವ ಪೀಪೇಃ ।

CC-0. Jangamwadi Math Collection. Digitized by eGangotri

ಪ್ಯಾಯಯ । ಪ್ರವೃದ್ಧಂ ಕುರು । ಹೇ ಇಂದ್ರ ಹರಿವೋ ಹರಿವನ್ ಹರಿಸಂಜ್ಞಕಾಶ್ವೋಪೇತೇಂದ್ರ ತೇ ತುಭ್ಯಂ ನವ್ಯಂ ನವತರಂ ಬ್ರಹ್ಮ ಸ್ತೋತ್ರಮಕಾರಿ । ಅಸ್ಮಾಭಿಃ ಕ್ರಿಯತೇ । ರಥ್ಯೋ ರಥವಂತೋ ವಯಂ ಧಿಯಾ ಪ್ರಜ್ಞಾರೂಪಯಾ ಸ್ತುತ್ಯಾ ಸದಾಸಾಸ್ತ್ವಾಂ ಸರ್ವದಾ ಭಜಮಾನಾಸ್ತ್ವದರ್ಥಂ ಹವೀ-ರೂಪಸ್ಯಾನ್ನಸ್ಯ ದಾತಾರೋ ವಾ ಸ್ಯಾಮ । ಭೂಯಾಸ್ಮ ॥

ಪ್ರತಿಪದಾರ್ಥ

ಇಂದ್ರ—ಎಲೈ ಇಂದ್ರನೇ । ನು—ಶೀಘ್ರವಾಗಿ (ನಿನ್ನನ್ನು ಪೂಜಿಸುವ ಆತುರದಿಂದ) । ಸ್ತುತಃ—ಪೂರ್ವ ಕಾಲದ ಋಷಿಗಳಿಂದ ಸ್ತುತನಾದವನೂ । ನು—ಅದೇ ಶ್ರದ್ಧಾರೂಪವಾದ ಆತುರದಿಂದ । ಗೃಣಾನಃ—ನಮ್ಮಿಂದ ಸ್ತುತಿಸಲ್ಪಡುವವನೂ ಆಗಿ । ಜರಿತ್ರೇ—ಸ್ತೋತೃವಾದ ನನಗೆ । ನದ್ಯೋ ನ—ನದಿಗಳು ಪ್ರವಾಹದಿಂದ ತುಂಬು ವಂತೆ । ಇಷಂ—ಅನ್ನವನ್ನು । ಪೀಪೇಃ—ತುಂಬಿಕೊಡು । ಹರಿವಃ—ಹರಿನಾಮಕವಾದ ಅಶ್ವಗಳುಳ್ಳ ಇಂದ್ರನೇ । ತೇ—ನಿನ್ನನ್ನುದ್ದೇಶಿಸಿ । ನವ್ಯಂ—ನೂತನವಾದ । ಬ್ರಹ್ಮ—ಸ್ತೋತ್ರವು । ಅಕಾರಿ—ನಮ್ಮಿಂದ ನಿರ್ಮಿತವಾಗು ತ್ತದೆ । ರಥ್ಯಃ—ರಥವನ್ನು ಹೊಂದಿರುವ ನಾವು । ಧಿಯಾ—ನಮ್ಮ ಪ್ರಜ್ಞಾರೂಪವಾದ ಸ್ತುತಿಯಿಂದ । ಸದಾ-ಸಾಃ—ನಿನಗೆ ಹವಿರಾದಿಗಳನ್ನರ್ಪಿಸುವವರಾಗಿ । ಸ್ಯಾಮ—ಆಗಿರುವಂತೆ ಅನುಗ್ರಹಿಸು.

ಭಾವಾರ್ಥ

ಎಲೈ ಇಂದ್ರನೇ, ನಿನ್ನನ್ನೇ ಪೂಜಿಸುವ ಆತುರದಿಂದಿದ್ದ ಹಿಂದಿನ ಕಾಲದ ಋಷಿಗಳಿಂದ ಸ್ತುತನಾದವನೂ, ಅದೇ ಶ್ರದ್ಧಾರೂಪವಾದ ಆತುರದಿಂದ ನಮ್ಮಿಂದಲೂ ಸ್ತುತಿಸಲ್ಪಡುವವನಾಗಿ ಸ್ತೋತೃವಾದ ನನಗೆ ನದಿಗಳು ಪ್ರವಾಹ ದಿಂದ ತುಂಬುವಂತೆ ಅನ್ನವನ್ನು ತುಂಭಿಕೊಡು. ಹರಿನಾಮಕವಾದ ಅಶ್ವಗಳುಳ್ಳ ಇಂದ್ರನೇ, ನಿನ್ನನ್ನುದ್ದೇಶಿಸಿ ನೂತನವಾದ ಸ್ತುತಿಯನ್ನು ನಾವು ನಿರ್ಮಿಸುತ್ತೇವೆ. ಉತ್ತಮವಾದ ರಥವನ್ನು ಹೊಂದಿರುವ ನಾವು ನಮ್ಮ ಪ್ರಜ್ಞಾ ರೂಪವಾದ ಸ್ತುತಿಯಿಂದ ನಿನಗೆ ಹವಿರಾದಿಗಳನ್ನರ್ಪಿಸುವವರಾಗಿರುವಂತೆ ಅನುಗ್ರಹಿಸು.

English Translation

Glorified ( in the past ), glorified, Indra, at present, satisfy your worshipper with food, as rivers (are filled with water): Lord of horses, a new hymn has been made for you : may we, possessed of chariots, be ever deligent in (your) praise.

————

## ಹದಿನೆಂಟನೆಯ ಸೂಕ್ತವು

————

ಸಾಯಣಭಾಷ್ಯಂ

ಅಯಂ ಪಂಥಾ ಇತಿ ತ್ರಯೋದಶರ್ಚಮಷ್ಟಮಂ ಸೂಕ್ತಂ ತ್ರೈಷ್ಟುಭಂ । ಅತ್ರಾನುಕ್ರಮಣಿಕಾ। ಅಯಂ ಪಂಥಾಃ ಸಪ್ತೋನಾ ಸಂವಾದ ಇಂದ್ರಾದಿತಿವಾಮದೇವಾನಾಮಿತಿ । ಯಸ್ಯ ವಾಕ್ಯಂ ಸ ಋಷಿ-

CC-0. Jangamwadi Math Collection. Digitized by eGangotri

ಯಾ ತೇನೋಚ್ಯತೇ ಸಾ ದೇವತೇತಿ ಪರಿಭಾಷಿತತ್ವಾದೃಷಿದೇವತೇ ತತ್ರ ತತ್ರ ಜ್ಞಾತವ್ಯೇ । ಅಸ್ಮಿನ್ ಸೂಕ್ತೇ ಇಂದ್ರಾದಿತಿವಾಮದೇವಸಂವಾದರೂಪಿಣೀ ಕಾಚಿದಾಖ್ಯಾಯಿಕಾ ಶ್ಲೋಕರೂಪೇಣ ಸೂಚ್ಯತೇ। ಗರ್ಭಸ್ಥೋ ಜ್ಞಾನಸಂಪನ್ನೋ ವಾಮದೇವೋ ಮಹಾಮುನಿಃ । ಮತಿಂ ಚಕ್ರೇ ನ ಜಾಯೇಯ ಯೋನಿ-ದೇಶಾತ್ತು ಮಾತೃತಃ । ಕಿಂತು ಪಾರ್ಶ್ವಾದಿತಶ್ಚೇತಿ ಜ್ಞಾತ್ವಾ ಸು ಜನನೀ ತ್ವಿದಂ । ದಧ್ಯೌ ಶಾಂತ್ಯೈ ಶಚೀಂ ದೇವೀಮದಿತಿಂ ತ್ವಿಂದ್ರಮಾತರಂ ॥ ಅದಿತಿಸ್ತ್ವಿಂದ್ರಸಹಿತಾ ಗರ್ಭಿಣೀಮಭ್ಯಗಾದ್ವನೇ । ಅದಿತೀಂದ್ರವಾಮದೇವಾಃ ಸಂವಾದಮಥ ಚಕ್ರಿರೇ॥ ಸಂವಾದ ಇತಿ ಸೂತ್ರೇಣ ಕಥಾ ಸೈಷಾತ್ರ ಸೂಚ್ಯತೇ। ನೋಕ್ತೋ ವಕ್ತೃವಿಶೇಷೋಽತ್ರ ಹ್ಯುಪದೇಶೇಷ್ವನುಕ್ತಿತಃ ॥ ಅರ್ಥತಸ್ತ್ವವಗಂತವ್ಯೋ ವಕ್ತೃಭೇದ ಇತಿ ಸ್ಥಿತಿಃ । ಇಂದ್ರೋಽದಿತಿರ್ಋಷಿಶ್ಚಾಸ್ಮಿನ್ಮಿಥಃ ಸೂಕ್ತೇ ಸಮೂಚಿರೇ ॥ ಗರ್ಭೇ ಶಯಾನಂ ಸುಚಿರಂ ಮಾತುರ್ಗರ್ಭಾದನಿರ್ಗತಂ । ವಾಮದೇವಂ ಪ್ರತಿ ಬ್ರೂತ ಆದ್ಯಯರ್ಚಾ ಶತಕ್ರತುಃ ॥ ದ್ವಿತೀಯಾದಿ-ಭಿರರ್ಧರ್ಚೈರ್ಋಷಿರತ್ರಾಹ ಪಂಚಭಿಃ । ನಹೀ ನ್ವಸ್ಯೇತಿ ಸಪ್ತ ಸ್ಯುರರ್ಧರ್ಚಾ ಅದಿತೇರ್ವಚಃ ॥ ಮಮಚ್ಚನ ತ್ವಾ ಯುವತಿರಿತ್ಯೃಚಃ ಪಂಚ ವೈ ಮುನೇಃ । ದೌರ್ಗತ್ಯಶಾಂತಿಮತ್ರಾಹ ವಾಮದೇ-ವಸ್ತಥಾಂತ್ಯಯಾ ॥ ಏವಮರ್ಥಾದ್ವಕ್ತೃಭೇದ ಇತಿ ಬಹ್ವೃಚಶಾಸನಂ । ಅರ್ಥೋ ವಿವೇಕಸ್ಪಷ್ಟತ್ವಾ-ದುಪದೇಶೇಷು ನೇರಿತಃ । ಋಷಿದೈವತಸಿದ್ಧ್ಯರ್ಥಂ ವಿವೇಕಾದರ್ಥ ಈರಿತ ಇತಿ ॥

ಅನುವಾದವು— ಅಯಂ ಪಂಥಾಃ ಎಂಬ ಈ ಸೂಕ್ತವು ಎರಡನೆಯ ಅನುವಾಕದಲ್ಲಿ ಎಂಟನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ— ಅಯಂ ಪಂಥಾಃ ಸಪ್ತೋನಾ ಸಂವಾದ ಇಂದ್ರಾದಿತಿವಾಮದೇವಾನಾಂ ಎಂದು ಹೇಳಿರುವುದು. ಎಂದರೆ ಈ ಸೂಕ್ತದಲ್ಲಿ ಇಂದ್ರ, ಅದಿತಿ, ವಾಮದೇವಋಷಿ ಇವರುಗಳ ಸಂವಾದವಿರುವುದು ಎಂದು ಹೇಳಿದೆ. ಯಸ್ಯ ವಾಕ್ಯಂ ಸ ಋಷಿಃ ಯಾ ತೇನೋಚ್ಯತೇ ಸಾ ದೇವತಾ— ಋಕ್ಕಿನಲ್ಲಿ ಯಾರ ವಾಕ್ಯವಿರುವುದೋ ಆ ಋಕ್ಕಿಗೆ ಅವರೇ ಋಷಿಗಳು. ಋಕ್ಕಿನಲ್ಲಿ ಯಾರ ವಿಷಯವು ಹೇಳಲ್ಪಟ್ಟಿರುವುದೋ ಅವರೇ ಆ ಋಕ್ಕಿಗೆ ದೇವತೆಯು ಎಂದು ಪರಿಭಾಷೆಯಿರುವುದರಿಂದ ಈ ಸೂಕ್ತದಲ್ಲಿಯೂ ಆಯಾ ಋಕ್ಕುಗಳಿಗೆ ಸಂದರ್ಭಾನುಸಾರವಾಗಿ ಋಷಿದೇವತೆಗಳನ್ನು ಊಹಿಸಿಕೊಳ್ಳಬೇಕು. ಈ ಸೂಕ್ತದಲ್ಲಿ ಹೇಳಲಾಗಿರುವ ಇಂದ್ರ, ಅದಿತಿ, ವಾಮದೇವ ಇವರುಗಳ ಸಂಭಾಷಣೆಯ ವಿಷಯವಾಗಿ ಒಂದು ಆಖ್ಯಾಯಿಕೆಯನ್ನು ಶ್ಲೋಕರೂಪವಾಗಿ ಇಲ್ಲಿ ಕೊಟ್ಟಿದೆ—

ಗರ್ಭಸ್ಥೋ ಜ್ಞಾನಸಂಪನ್ನೋ ವಾಮದೇವೋ ಮಹಾಮುನಿಃ ।
ಮತಿಂ ಚಕ್ರೇ ನ ಜಾಯೇಯ ಯೋನಿದೇಶಾತ್ತು ಮಾತೃತಃ ॥ ೧ ॥

ಕಿಂತು ಪಾರ್ಶ್ವಾದಿತಶ್ಚೇತಿ ಜ್ಞಾತ್ವಾ ಸು ಜನನೀ ತ್ವಿದಂ ।
ದಧ್ಯೌ ಶಾಂತ್ಯೈ ಶಚೀಂ ದೇವೀಮದಿತಿಂ ತ್ವಿಂದ್ರಮಾತರಂ ॥ ೨ ॥

ಅದಿತಿಸ್ತ್ವಿಂದ್ರಸಹಿತಾ ಗರ್ಭಿಣೀಮಭ್ಯಗಾದ್ವನೇ ।
ಅದಿತೀಂದ್ರವಾಮದೇವಾಃ ಸಂವಾದಮಥ ಚಕ್ರಿರೇ ॥ ೩ ॥

ಸಂವಾದ ಇತಿ ಸೂತ್ರೇಣ ಕಥಾ ಸೈಷಾತ್ರ ಸೂಚ್ಯತೇ ।
ನೋಕ್ತೋ ವಕ್ತೃವಿಶೇಷೋಽತ್ರ ಹ್ಯುಪದೇಶೇಷ್ವನುಕ್ತಿತಃ ॥ ೪ ॥

CC-0. Jangamwadi Math Collection. Digitized by eGangotri

ಅರ್ಥತಸ್ತ್ವವಗಂತವ್ಯೋ ವಕ್ತೃಭೇದ ಇತಿ ಸ್ಥಿತಿಃ ।
ಇಂದ್ರೋಽದಿತಿರ್ಋಷಿಶ್ಚಾಸ್ಮಿನ್ಮಿಥಃ ಸೂಕ್ತೇ ಸಮೂಚಿರೇ ॥ ೫ ॥
ಗರ್ಭೇ ಶಯಾನಂ ಸುಚಿರಂ ಮಾತುರ್ಗರ್ಭಾದನಿರ್ಗತಂ ।
ವಾಮದೇವಂ ಪ್ರತಿ ಬ್ರೂತ ಆದ್ಯಯರ್ಚಾ ಶತಕ್ರತುಃ ॥ ೬ ॥
ದ್ವಿತೀಯಾದಿಭಿರರ್ಧರ್ಚೈರ್ಋಷಿರತ್ರಾಹ ಪಂಚಭಿಃ
ನಹೀ ನ್ವಸ್ಯೇತಿ ಸಪ್ತ ಸ್ಯುರರ್ಧರ್ಚಾ ಅದಿತೇರ್ವಚಃ ॥ ೭ ॥
ಮಮಚ್ಚನ ತ್ವಾ ಯುವತಿರಿತ್ಯೃಚಃ ಪಂಚ ವೈ ಮುನೇಃ ।
ದೌರ್ಗತ್ಯಶಾಂತಿಮತ್ರಾಹ ವಾಮದೇವಸ್ತಥಾಂತ್ಯಯಾ ॥ ೮ ॥
ಏವಮರ್ಥಾದ್ವಕ್ತೃಭೇದ ಇತಿ ಬಹ್ವೃಚಶಾಸನಾತ್ ।
ಅರ್ಥೋ ವಿವೇಕಸ್ಪಷ್ಟತ್ವಾದುಪದೇಶೇಷು ನೇರಿತಃ ॥ ೯ ॥
ಋಷಿದೈವತಸಿದ್ಧ್ಯರ್ಥಂ ವಿವೇಕಾದರ್ಥ ಈರಿತಃ ।
(ಅನು. ಭಾ. ೪–೧೮).

ಮಹಾಜ್ಞಾನಸಂಪನ್ನನಾದ ವಾಮದೇವಋಷಿಯು ತನ್ನ ತಾಯಿಯ ಗರ್ಭದಲ್ಲಿರುವಾಗ ಇಂತು ಯೋಚಿಸಿದನು—ಈಗ ನಾನು ಸಾಮಾನ್ಯಜನರಂತೆ ತಾಯಿಯ ಯೋನಿಮಾರ್ಗದಿಂದ ಉತ್ಪನ್ನನಾಗಿ ಹೊರಕ್ಕೆ ಬರುವುದು ನನ್ನಂತ ಜ್ಞಾನಿಯಾದವನ ಮಹಿಮೆಗೆ ತಕ್ಕುದಲ್ಲ. ಆದುದರಿಂದ ನಾನು ಗರ್ಭದಿಂದ ಹೊರಕ್ಕೆ ಬರುವಾಗ ಯೋನಿಮಾರ್ಗದಿಂದ ಬರದೆ ಮಾತೃವಿನ ಪಾರ್ಶ್ವಭಾಗವನ್ನು ಛೇದಿಸಿಕೊಂಡು ಹೊರಕ್ಕೆ ಬರುವೆನು ಎಂದು ನಿಶ್ಚಯಿಸಿದನು. ವಾಮದೇವನ ತಾಯಿಯು ಇದನ್ನು ತಿಳಿದು ಶಿಶುವು ತನ್ನ ಉದರಪಾರ್ಶ್ವವನ್ನು ಸೀಳಿ ಹೊರಗೆ ಬಂದರೆ ತನಗೆ ಮರಣವು ಸಂಭವಿಸುವುದೆಂದು ಹೆದರಿ ಈ ಭಯನಿವಾರಣೆಗಾಗಿ ಇಂದ್ರಪತ್ನಿಯಾದ ಶಚೀದೇವಿಯನ್ನೂ, ಇಂದ್ರನ ತಾಯಿಯಾದ ಅದಿತಿದೇವಿಯನ್ನೂ ಧ್ಯಾನಮಾಡಿದಳು. ಇವಳ ಆರ್ತನಾದವನ್ನು ಕೇಳಿ ಅದಿತಿಯು ಇಂದ್ರನೊಡನೆ ವನದಲ್ಲಿ ಗರ್ಭಿಣಿ (ವಾಮದೇವನ ತಾಯಿ) ಯಿರುವ ಸ್ಥಳಕ್ಕೆ ಬಂದಳು. ಅನಂತರ ಅದಿತಿದೇವಿಗೂ, ಇಂದ್ರನಿಗೂ ಗರ್ಭದಲ್ಲಿದ್ದ ವಾಮದೇವ ಋಷಿಗೂ ಸಂಭಾಷಣೆಯು ನಡೆಯಿತು. ಅಲ್ಲಿ ನಡೆದ ಸಂಭಾಷಣೆಯೇ ಈ ಸೂಕ್ತದಲ್ಲಿ ವಿವರಿಸಲಾಗಿದೆ. ಈ ಸೂಕ್ತದಲ್ಲಿರುವ ಸಂವಾದವನ್ನು ಯಾರು ಸೂಕ್ತರೂಪದಲ್ಲಿ ಹೇಳಿದರು ಎಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲ. ಆದರೆ ಈ ವಿಷಯವು ಪರಂಪರಾಗತವಾಗಿ ತಿಳಿದುಬಂದಿರುವುದು. ಸೂಕ್ತದಲ್ಲಿ ಹೇಳಿರುವಂತೆ ಯಾರು ಯಾರು ಯಾವ ಯಾವ ವಾಕ್ಯಗಳನ್ನು ಹೇಳಿದರು ಎಂಬುದನ್ನು ಅರ್ಥಾನುಸಾರವಾಗಿ ತಿಳಿದುಕೊಳ್ಳಬೇಕು. ಇಂದ್ರ, ಅದಿತಿ, ವಾಮದೇವಋಷಿ ಎಂಬ ಮೂವರಲ್ಲಿ ಪರಸ್ಪರ ನಡೆಸಿದ ಸಂವಾದವು ಈ ಸೂಕ್ತದಲ್ಲಿರುವುದು. ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿ—ತಾಯಿಯ ಗರ್ಭದಲ್ಲಿ ಬಹಳ ಕಾಲದಿಂದಲೂ ಇರುವ ಮತ್ತು ಇನ್ನೂ ಈಚೆಗೆ ಬರದಿರುವ (ಶಿಶುರೂಪದಲ್ಲಿದ್ದ?) ವಾಮದೇವ ಋಷಿಯನ್ನು ಕುರಿತು ಇಂದ್ರನು ಆಡಿದ ವಾಕ್ಯವಿರುವುದು. ಎರಡನೆಯ ಋಕ್ಕಿನಿಂದ ನಾಲ್ಕನೆಯ ಋಕ್ಕಿನ ಪೂರ್ವಾರ್ಧದವರೆಗೆ ವಾಮದೇವಋಷಿಯ ವಾಕ್ಯವಿರುವುದು ನಾಲ್ಕನೆಯ ಋಕ್ಕಿನ ಉತ್ತರಾರ್ಧದಿಂದ ಏಳನೆಯ ಋಕ್ಕಿನ ವರೆಗೆ ಅದಿತಿಯ ವಾಕ್ಯವಿರುವುದು. ಎಂಟನೆಯ ಋಕ್ಕಿನಿಂದ ಹನ್ನೆರಡು ಋಕ್ಕಿನವರೆಗಿರುವ ಐದು ಋಕ್ಕುಗಳಲ್ಲಿ ವಾಮದೇವ ಋಷಿಯ ಗರ್ಭಿಣಿಯಾದ ತಾಯಿಯ ವಾಕ್ಯವಿರುವುದು. ಕೊನೆಯ ಋಕ್ಕಾದ ಹದಿಮೂರನೆಯ ಋಕ್ಕಿನಲ್ಲಿ ದುರ್ಗತಿಪರಿಹಾರಕ್ಕಾಗಿ ವಾಮದೇವಋಷಿಯು ಹೇಳಿದ ಶಾಂತಿಮಂತ್ರವಿರುವುದು.

CC-0. Jangamwadi Math Collection. Digitized by eGangotri

ಆದ್ದರಿಂದ ಯಾವ ಯಾವ ಋಕ್ಕುಗಳಿಗೆ ಯಾರು ಯಾರು ಋಷಿಗಳು, ಮತ್ತು ದೇವತೆಗಳು ಎಂಬ ವಿಷಯವನ್ನು ಆಯಾ ಋಕ್ಕುಗಳ ಅರ್ಥದಿಂದ ತಿಳಿದುಕೊಳ್ಳಬೇಕು. ಋಕ್ಕುಗಳಲ್ಲಿ ಹೇಳಿರುವ ಅರ್ಥವು ಸ್ಪಷ್ಟವಾಗಿರುವುದರಿಂದ ಅದನ್ನು ಇಲ್ಲಿ ಪುನಃ ಹೇಳಿರುವುದಿಲ್ಲ. ಋಷಿದೇವತೆಗಳನ್ನು ವಿಶದಪಡಿಸುವುದಕ್ಕಾಗಿ ಈ ವಿವರಣೆಯನ್ನು ಇಲ್ಲಿ ಹೇಳಬೇಕಾಯಿತು.

---

## ಸೂಕ್ತ—೧೮

ಮಂಡಲ—೪ ॥ ಅನುವಾಕ—೨ ॥ ಸೂಕ್ತ—೧೮ ॥
ಅಷ್ಟಕ—೩॥ ಅಧ್ಯಾಯ—೫ ॥ ವರ್ಗ—೨೫, ೨೬ ॥
॥ ಸೂಕ್ತದಲ್ಲಿರುವ ಋಕ್ಸಂಖ್ಯೆ—೧೩ ॥

ಋಷಿಃ— ವಾಮದೇವೋ ಗೌತಮಃ (೧. ಇಂದ್ರಃ । ೨, ೩, ೪ ರಲ್ಲಿ ಪೂರ್ವಾರ್ಧ, ೧೩. ವಾಮದೇವಃ । ೪ ರಲ್ಲಿ ಉತ್ತರಾರ್ಧ, ೫, ೬, ೭, ಅದಿತಿಃ । ೮, ೯, ೧೦, ೧೧, ೧೨. ಗರ್ಭಿಣೀ ವಾಮದೇವಸ್ಯ ಮಾತಾ ॥

ದೇವತಾ—೧. ವಾಮದೇವಃ । ೨, ೩, ೪ ರಲ್ಲಿ ಪೂರ್ವಾರ್ಧ. ಇಂದ್ರಃ । ೪ ರಲ್ಲಿ ಉತ್ತರಾರ್ಧ. ೫, ೬, ೭. ವಾಮದೇವಃ । ೮, ೯, ೧೦, ೧೧, ೧೨. ಇಂದ್ರಃ । ೧೩. ಆತ್ಮಶಂಸಾ ಇಂದ್ರೋ ವಾ ॥)

ಛಂದಃ—ತ್ರಿಷ್ಟುಪ್ ॥

---

ಸಂಹಿತಾಪಾಠಃ

ಅಯಂ ಪಂಥಾ ಅನುವಿತ್ತಃ ಪುರಾಣೋ ಯತೋ ದೇವಾ ಉದಜಾಯಂತ ವಿಶ್ವೇ ।

ಪದಪಾಠಃ

ಅತಶ್ಚಿದಾ ಜನಿಷೀಷ್ಟ ಪ್ರವೃದ್ಧೋ ಮಾ ಮಾತರಮಮುಯಾ ಪತ್ತವೇ ಕಃ॥

ಅಯಂ । ಪಂಥಾಃ । ಅನುಽವಿತ್ತಃ । ಪುರಾಣಃ । ಯತಃ । ದೇವಾಃ । ಉತ್ಽಅಜಾಯಂತ । ವಿಶ್ವೇ ।

ಅತಃ । ಚಿತ್ । ಆ । ಜನಿಷೀಷ್ಟ । ಪ್ರಽವೃದ್ಧಃ । ಮಾ । ಮಾತರಂ । ಅಮುಯಾ । ಪತ್ತವೇ । ಕರಿತಿ ಕಃ ॥

CC-0. Jangamwadi Math Collection. Digitized by eGangotri

### ಸಾಯಣಭಾಷ್ಯಂ

ಇಂದ್ರವಾಕ್ಯಂ | ಪುರಾಣೋಽನಾದಿರಯಂ ಪ್ರತ್ಯಕ್ಷೇಣೋಪಲಭ್ಯಮಾನಃ ಪಂಥಾ ಯೋನಿ-ರ್ನಿಗಮನರೂಪೋ ಮಾರ್ಗೋಽನು ಆನುಪೂರ್ವ್ಯೇಣ ವಿತ್ತಃ | ಸರ್ವೈರ್ಜಾಯಮಾನೈರ್ಲಬ್ಧಃ | ಯತೋ ಯಸ್ಮಾದ್ಯೋನಿಮಾರ್ಗಾದ್ವಿಶ್ವೇ ಸರ್ವೇ ದೇವಾ ಉದಜಾಯಂತ | ಉತ್ಕರ್ಷೇಣೋತ್ಪನ್ನಾ ಭವಂತಿ | ತಸ್ಮಾದ್ಯೋನಿಮಾರ್ಗಾನ್ಮನುಷ್ಯಾ ಉತ್ಪನ್ನಾ ಭವಂತೀತಿ ಕಿಮು ವಕ್ತವ್ಯಂ | ಅತಶ್ಚಿದಸ್ಮಾ-ದ್ಯೋನಿಮಾರ್ಗಾದೇವ ಪ್ರವೃದ್ಧೋ ಗರ್ಭೇ ಪ್ರಕರ್ಷೇಣ ವೃದ್ಧಿಂ ಗತೋ ವಾಮದೇವ ಆ ಜನಿಷೀಷ್ಟ | ಆ ಸಮಂತಾಜ್ಜಾಯತಾಂ | ಅಮುಯೇಮಾಮುಂ ಮಾತರಂ ಪತ್ತವೇ ಪತನಾಯ | ಮರಣಾಯೇತ್ಯರ್ಥಃ | ಮಾ ಕಃ | ಮಾ ಕರೋತು ||

### ಪ್ರತಿಪದಾರ್ಥ

ಯತಃ—ಯಾವ ಯೋನಿರೂಪವಾದ ಮಾರ್ಗದಿಂದ | ವಿಶ್ವೇ ದೇವಾಃ—ಸಮಸ್ತ ದೇವತೆಗಳೂ ಸಹ | ಉದಜಾಯಂತ—ಉತ್ಪನ್ನರಾದರೋ ಅಂತಹ | ಅಯಂ ಪಂಥಾಃ—ಯೋನಿರೂಪವಾದ ಈ ಗರ್ಭನಿರ್ಗಮನದ ಮಾರ್ಗವು | ಪುರಾಣಃ—ಅನಾದಿಯೆಂಬುದಾಗಿ | ಅನು—ಹಿಂದಿನಿಂದಲೂ | ವಿತ್ತಃ—ಸಕಲರಿಗೂ ತಿಳಿದ ವಿಷಯ ವಾಗಿದೆ | ಅತಶ್ಚಿತ್—ಆದುದರಿಂದಲೇ | ಪ್ರವೃದ್ಧಃ—ಗರ್ಭದಲ್ಲಿಯೇ ಪೂರ್ಣವಾಗಿ ಬೆಳೆದ ವಾಮದೇವನು | ಆ ಜನಿಷೀಷ್ಟ—ಲೌಕಿಕವಾದ ಉತ್ಪತ್ತಿಯನ್ನು ಹೊಂದಿ ಗರ್ಭದಿಂದ ಹೊರಕ್ಕೆ ಬರಲಿ | ಅಮುಯಾ ಮಾತರಂ—ಈ ತನ್ನ ತಾಯಿಯನ್ನು | ಪತ್ತವೇ—ಮರಣಕ್ಕೀಡಾಗುವಂತೆ | ಮಾ ಕಃ—ಮಾಡದಿರಲಿ.

### ಭಾವಾರ್ಥ

ಇಂದ್ರನ ವಾಕ್ಯವು—ಯಾವ ಯೋನಿರೂಪವಾದ ಮಾರ್ಗದಿಂದ ಸಮಸ್ತ ದೇವತೆಗಳೂ ಸಹ ಉತ್ಪನ್ನರಾದರೋ, ಅಂತಹ ಯೋನಿರೂಪವಾದ ಈ ಗರ್ಭನಿರ್ಗಮನದ ಮಾರ್ಗವು ದೇವಮಾನವಾದಿಗಳಿಗೆಲ್ಲಾ ಅನಾದಿಯಾದ ಉತ್ಪತ್ತಿಸ್ಥಾನವೆಂಬುದು ಸಕಲರಿಗೂ ತಿಳಿದ ವಿಷಯವಾಗಿದೆ. ಆದುದರಿಂದಲೇ, ಗರ್ಭದಲ್ಲಿಯೇ ಪೂರ್ಣವಾಗಿ ಬೆಳೆದ ವಾಮದೇವನು ಲೌಕಿಕವಾದ ಉತ್ಪತ್ತಿಯನ್ನು ಹೊಂದಿ ಗರ್ಭದಿಂದ ಹೊರಕ್ಕೆ ಬರಲಿ. ಮತ್ತು ತನ್ನ ಈ ತಾಯಿಯನ್ನು ಮರಣಕ್ಕೀಡಾಗುವಂತೆ ಮಾಡದಿರಲಿ.

## English Translation

Indra speaks.—This is the old and recognized path by which all the gods are born; so, when full-grown, let him be born in the same manner; let him not cause the loss of this his mother.

### ವಿಶೇಷವಿಷಯಗಳು

ಈ ಸೂಕ್ತದಲ್ಲಿ ವಾಮದೇವ ಋಷಿಯ ಜನನದ ವಿಷಯವಾದ ಇತಿಹಾಸವಿದೆ ವಾಮದೇವನು ತಾಯಿಯ ಗರ್ಭದಲ್ಲಿದ್ದಾಗಲೇ ಮಹಾಜ್ಞಾನಿಯಾಗಿದ್ದುದರಿಂದ ಅವನು ಸಾಮಾನ್ಯಜನರು ಜನಿಸುವಂತೆ ತಾಯಿಯ ಗರ್ಭದಿಂದ

CC-0. Jangamwadi Math Collection. Digitized by eGangotri

ಯೋನಿಮೂಲಕ ಹೊರಗೆ ಬರಲು ಇಷ್ಟಪಡದೆ ತಾಯಿಯ ಶರೀರದ ಪಾರ್ಶ್ವಭಾಗವನ್ನು ಭೇದಿಸಿಕೊಂಡು ಬರಬೇಕೆಂದು ಅಪೇಕ್ಷಿಸಿದನು. ಇದನ್ನು ತಿಳಿದ ಗರ್ಭಿಣಿಯಾದ ಅವನ ತಾಯಿಯು ತನಗೆ ಮರಣ ಸಂಭವಿಸುವುದೆಂಬ ಭಯದಿಂದ ಇಂದ್ರನ ಪತ್ನಿಯನ್ನೂ, ಇಂದ್ರನ ತಾಯಿಯಾದ ಅದಿತಿ ದೇವಿಯನ್ನೂ ಧ್ಯಾನಿಸಿ ಮರೆಹೊಕ್ಕಳು. ಆಗ ಅದಿತಿಯು ಇಂದ್ರನೊಡನೆ ವನದಲ್ಲಿ ಆಶ್ರಮದಲ್ಲಿದ್ದ ವಾಮದೇವನ ತಾಯಿಯ ಬಳಿಗೆ ಬಂದು ಗರ್ಭದಲ್ಲಿದ್ದ ವಾಮದೇವನಿಗೆ ಸಮಾಧಾನವನ್ನು ಮಾಡಿ ಅನೈಸರ್ಗಿಕವಾದ ಅವನ ಅಪೇಕ್ಷೆಯನ್ನು ಬಿಟ್ಟುಬಿಡುವಂತೆ ಹಿತೋಕ್ತಿಯನ್ನು ಹೇಳಿದರು. ಮೊದಲು ಇಂದ್ರನು ವಾಮದೇವನನ್ನುದ್ದೇಶಿಸಿ ಮಾತನಾಡುವನು—

**ಇಂದ್ರ** (ಗರ್ಭಸ್ಥನಾದ ವಾಮದೇವನನ್ನುದ್ದೇಶಿಸಿ)—ಎಲೈ ವಾಮದೇವನೇ, ಸಕಲದೇವಮಾನವರೂ ಸಹ ಹುಟ್ಟುವಾಗ ಎಂದರೆ ತಾಯಿಯ ಗರ್ಭದಿಂದ ಹೊರಕ್ಕೆ ಬರುವಾಗ ತಾಯಿಯ ಯೋನಿಮಾರ್ಗವಾಗಿಯೇ ಬರುವರು. ಸ್ತ್ರೀಯ ಯೋನಿಯೇ ಸಕಲ ಪ್ರಾಣಿವರ್ಗದ ಉತ್ಪತ್ತಿಸ್ಥಾನವು. ಇದು ಸ್ವಭಾವಸಿದ್ಧವಾದ ಮಾರ್ಗ. ಈ ಕ್ರಮವನ್ನು ಬಿಟ್ಟು ನೀನು ತಾಯಿಯ ಪಾರ್ಶ್ವವನ್ನು ಭೇದಿಸಿಕೊಂಡು ಬರುವುದಾದರೆ ನಿನ್ನ ತಾಯಿಯು ಮರಣಕ್ಕೀಡಾಗುವಳು. ಆದುದರಿಂದ ಹಾಗೆ ಮಾಡಬೇಡ.

(ಗರ್ಭಸ್ಥನಾದ) **ವಾಮದೇವ**—ಎಲೈ ಇಂದ್ರನೇ, ನಾನು ಅತ್ಯಂತ ದುಃಖಕರವಾದ ಈ ಸ್ತ್ರೀಯೋನಿಮಾರ್ಗದಿಂದ ಹೊರಕ್ಕೆ ಬರುವುದಿಲ್ಲ. ತಾಯಿಯ ಪಾರ್ಶ್ವದಿಂದ ದಾರಿಮಾಡಿಕೊಂಡು ಹೊರಕ್ಕೆ ಬರುತ್ತೇನೆ. ಏಕೆಂದರೆ, ನಾನು ಸಾಮಾನ್ಯಜನರಂತೆ ಅಲ್ಲ. ನನ್ನ ಮಹತ್ತ್ವವು ಅಧಿಕವಾಗಿರುವುದು. ಅನೇಕ ಮಹತ್ತರವಾದ ಕಾರ್ಯಗಳು ನನ್ನಿಂದ ನಡೆಯಬೇಕಾಗಿದೆ. ಇನ್ನೊಬ್ಬರ ಸಹಾಯವಿಲ್ಲದೆ ಒಬ್ಬಂಟಿಗನಾಗಿಯೇ ಶತ್ರುವಿನೊಡನೆ ಯುದ್ಧಮಾಡಬಲ್ಲೆ. ಪ್ರತಿಪಕ್ಷಿಯೊಂದಿಗೆ ನಾನೊಬ್ಬನೇ ವಾಗ್ವಾದಮಾಡಬಲ್ಲೆ. ನಾನು ತಾಯಿಯ ಯೋನಿಮಾರ್ಗದಿಂದ ಹೊರಕ್ಕೆ ಬರದೆ ಬೇರೆಮಾರ್ಗದಿಂದ ಬಂದರೆ ತಾಯಿಯು ಮೃತಳಾಗುವಳೆಂದು ಇಂದ್ರನು(ಇಂದ್ರನಾದ ನೀನು) ಈಗತಾನೇ ಹೇಳಿದಾನೆ. ಆದರೆ ಇಂದ್ರನ ಮಾತಿಗೆ ಏನು ಬೆಲೆಯನ್ನು ಕಟ್ಟಬಹುದು ? ಆ ಇಂದ್ರನು ಅನೇಕ ಅಕೃತ್ಯಗಳನ್ನು ಮಾಡಿಲ್ಲವೇ ? ತ್ವಷ್ಟೃವಿನ ಮನೆಯಲ್ಲಿ ಅವನು ಕರೆಯದಿದ್ದರೂ ತಾನೇ ಅಲ್ಲಿಗೆ ಹೋಗಿ ಬಹಳ ದುಡ್ಡುಕೊಟ್ಟು ಕೊಂಡುಕೊಂಡಿದ್ದ ಸೋಮರಸವನ್ನು ಬಲಾತ್ಕಾರವಾಗಿ ಪಾನಮಾಡಲಿಲ್ಲವೇ ? ಇಂದ್ರನ ತಾಯಿಯಾದ ಅದಿತಿಯು ಸಾವಿರಾರು ಮಾಸ ಪರ್ಯಂತರ ಇಂದ್ರನನ್ನು ತನ್ನ ಗರ್ಭದಲ್ಲಿ ಧರಿಸಿ ಬಹಳ ಕಷ್ಟಪಟ್ಟು ಅವನನ್ನು ಹೆತ್ತಳು. ಆದರೂ ಇಂದ್ರನು ಮಾಡಿರುವ ಕಾರ್ಯಗಳೆಲ್ಲವೂ ಲೋಕವಿರುದ್ಧವಾಗಿಯೇ ಇವೆ. ಆದ್ದರಿಂದ ಇಂದ್ರನ ಮಾತಿಗೆ ನಾನು ತಲೆಬಾಗಬೇಕಾದುದಿಲ್ಲ. ನಾನು ನನ್ನಿಷ್ಟಬಂದಂತೆ ತಾಯಿಯ ಗರ್ಭದಿಂದ ಹೊರಕ್ಕೆ ಬರುತ್ತೇನೆ.

**ಅದಿತಿ**—ಎಲೈ ವಾಮದೇವನೇ, ನೀನು ಇಂದ್ರನ ವಿಷಯದಲ್ಲಿ ತುಚ್ಛವಾದ ಮಾತುಗಳನ್ನಾಡಬಾರದು. ಈಗ (ಇದುವರೆಗೆ) ಲೋಕದಲ್ಲಿ ಉತ್ಪನ್ನರಾಗಿರುವವರೂ ಮುಂದೆ ಹುಟ್ಟುವವರೂ ಆದ ಸಮಸ್ತದೇವತೆಗಳಲ್ಲಿ ಯಾರೂ ಇಂದ್ರನಿಗೆ ಸರಿಸಮಾನರಾದವರಿಲ್ಲ. ಇಂದ್ರನನ್ನು ಸೂತಿಕಾಗೃಹದಲ್ಲಿ ಸಾಮಾನ್ಯ ಶಿಶುವಿನಂತೆ ಹಡೆಯುವುದು ಅವನ ಘನತೆಗೆ ತಕ್ಕದಲ್ಲವೆಂದು ಬಗೆದು ಅದಿತಿಯು ಇಂದ್ರನಿಗೆ ಅತಿಶಯವಾದ ಸಾಮರ್ಥ್ಯವನುಂಟುಮಾಡಿದಳು. ಆ ಸಾಮರ್ಥ್ಯದಿಂದ ಇಂದ್ರನು ತನ್ನದೇ ಆದ ತೇಜಸ್ಸಿನಿಂದ ಆವಿರ್ಭವಿಸಿ ನಿಂತನು ಮತ್ತು ತನ್ನ ಸಾಮರ್ಥ್ಯಾತಿಶಯದಿಂದ ದ್ಯಾವಾಪೃಥಿವಿಗಳನ್ನು ( ಸ್ವರ್ಗಲೋಕ, ಭೂಲೋಕಗಳನ್ನು ) ಪೂರ್ಣವಾಗಿ ವ್ಯಾಪಿಸಿದನು. ಭೂಮಿಯಲ್ಲಿ ಹರಿಯುವ ನದಿಗಳೆಲ್ಲವೂ ಅಲಲಾ ಎಂದು ಮೊದಲಾಗಿ ಹರ್ಷಧ್ವನಿಯನ್ನು ಮಾಡುತ್ತಾ ಇಂದ್ರನ ಮಹತ್ತ್ವವನ್ನು

CC-0. Jangamwadi Math Collection. Digitized by eGangotri

ಎತ್ತಿ ಹಿಡಿದು ಪ್ರಕಾಶಪಡಿಸುತ್ತಾ ಪ್ರವಹಿಸುತ್ತವೆ. ಎಲೈ ವಾಮದೇವ ಋಷಿಯೇ, ನೀನು ಆ ನದಿಗಳನ್ನು ಪ್ರಶ್ನಿಸಿ ಕೇಳು. ಇಂದ್ರನ ಸಹಾಯವಿಲ್ಲದೆ ಆ ನದಿಗಳಿಗೆ ಹೇಗೆತಾನೆ ಉದಕಗಳು ಮೇಘಗಳಿಂದ ಬರುತ್ತಿದ್ದವು ? ಇದಲ್ಲದೆ ನಿವಿತ್ಸೂಕ್ತಗಳೆಲ್ಲವೂ ಇಂದ್ರನ ವಿಷಯದಲ್ಲಿ ಕೇವಲ ಪ್ರಶಂಸಾತ್ಮಕವಾಗಿಯೇ ಇವೆ. ಉದಕಗಳು ಇಂದ್ರನ ಬ್ರಹ್ಮ ಹತ್ಯಾರೂಪವಾದ ಪಾಪವನ್ನು ನೊರೆಯ ರೂಪದಲ್ಲಿ ಧರಿಸುತ್ತವೆ. ನನ್ನ ಪುತ್ರನಾದ ಇಂದ್ರನು ವಜ್ರಾಯುಧದಿಂದ ವೃತ್ರನನ್ನು ಕೊಂದು ಅವನು ತಡೆಗಟ್ಟಿದ್ದ ಉದಕಗಳು ಭೂಮಿಯಮೇಲೆ ವೃಷ್ಟಿರೂಪದಿಂದ ಬಿದ್ದು ನದಿಗಳಾಗಿ ಪ್ರವಹಿಸುವಂತೆ ಮಾಡಿದನು. ಇಂತಹ ಮಹತ್ಸ್ವರೂಪವುಳ್ಳ ಇಂದ್ರನ ಮಾತನ್ನು ನೀನು ಅಲ್ಲಗಳೆಯಬಹುದೇ ?

ವಾಮದೇವನು—( ಇಂದ್ರನನ್ನು ಕುರಿತು ವ್ಯಂಗ್ಯವಾಗಿ ) ಎಲೈ ಇಂದ್ರನೇ, ಯುವತಿಯಾದ ನಿನ್ನ ತಾಯಿಯು (ಅದಿತಿಯು) ನಿನ್ನನ್ನು ಹರ್ಷದಿಂದಲೇ ಹಡೆದಳಲ್ಲವೇ ? ಕುಷವಾ ಎಂಬ ರಾಕ್ಷಸ ಸ್ತ್ರೀಯು ನಿನ್ನನ್ನು ನುಂಗಿದ್ದು ಹರ್ಷದಿಂದಲೇ ಅಲ್ಲವೇ ? ಆ ರಾಕ್ಷಸಿಯನ್ನು ನೀನು ಹರ್ಷದಿಂದಲೇ ಭೇದಿಸಿಕೊಂಡು ಹೊರಕ್ಕೆ ಬಂದೆ. ನಿನ್ನಿಂದಲೇ ಉದಕಗಳಿಗೂ ಸಂತೋಷವುಂಟಾಯಿತು. ವ್ಯಂಸನೆಂಬ ರಾಕ್ಷಸನು ನಿನ್ನನ್ನು ಕೆನ್ನೆಯಮೇಲೆ ಅಪ್ಪಳಿಸಿ ಹೊಡೆದದ್ದೂ ಹರ್ಷಾಧಿಕ್ಯದಿಂದಲೇ ತಾನೇ ? ಆದರೆ ಅವನಿಂದ ಏಟುತಿಂದ ನೀನು ಅವನಿಗಿಂತಲೂ ಅಧಿಕವಾಗಿ ಬೆಳೆದು ವಜ್ರಾಯುಧದಿಂದ ಅವನ ತಲೆಯನ್ನು ಪ್ರಹರಿಸಿ ಪುಡಿಪುಡಿಮಾಡಿದೆ. ಇವೆಲ್ಲಾ ನಿನ್ನ ಪರಾಕ್ರಮಗಳು. ಆದರೂ ನಿನ್ನ ಮಹತ್ತ್ವವನ್ನು ಅಲ್ಪವೆಂದು ಭಾವಿಸುವುದಕ್ಕಾಗುವುದಿಲ್ಲ. ಪುಷ್ಟವಾದ ಹಸುವು ಉತ್ತಮವಾದ ಕರುವನ್ನು ಪಡೆಯುವಂತೆ ನಿನ್ನ ತಾಯಿಯಾದ ಅದಿತಿಯು ಅಧಿಕವಾದ ಬಲವುಳ್ಳವನೂ, ಶತ್ರುಗಳಿಂದ ಪರಾಜಿತನಾಗ ದವನೂ ಎಲ್ಲರ ಅಭೀಷ್ಟಗಳನ್ನು ಪೂರ್ಣಮಾಡುವವನೂ ಎಲ್ಲರನ್ನು ಪ್ರೇರಿಸುವವನೂ, ತನ್ನನ್ನು ರಕ್ಷಿಸಿಕೊಳ್ಳಲು ಸಮರ್ಥನೂ, ಸ್ವೇಚ್ಛೆಯಾಗಿ ಸಂಚರಿಸುವವನೂ ಆದ ನಿನ್ನನ್ನು (ಇಂದ್ರನನ್ನು) ಪಡೆದಳು. ಆಗ ಅದಿತಿಯು ನಿನ್ನನ್ನು ಕುರಿತು ಎಲೈ ಪುತ್ರನಾದ ಇಂದ್ರನೇ ಅಗ್ನ್ಯಾದಿ ದೇವತೆಗಳು ನಿನ್ನ ಸ್ನೇಹವನ್ನು ಬಿಟ್ಟುಬಿಟ್ಟರೇ ? ಎಂದು ಕೇಳಲು ನೀನು ಅಲ್ಲಿಯೇ ಇದ್ದ ವಿಷ್ಣುವನ್ನು ಕುರಿತು—ಸಖನಾದ ಎಲೈ ವಿಷ್ಣುವೇ, ನೀನು ಸರ್ವವ್ಯಾಪಕನೂ ನನಗೆ ಸ್ನೇಹಿತನೂ ಆಗಿರುವೆ. ವೃತ್ರಾಸುರನನ್ನು ಕೊಲ್ಲಲು ಅಧಿಕ ಪರಾಕ್ರಮವನ್ನು ತೋರಿಸು ಎಂದು ನೀನು ಹೇಳಿದೆಯ ಲ್ಲವೇ ? ಇದಲ್ಲದೆ ನೀನು ನಿನ್ನ ತಂದೆಯ ಕಾಲನ್ನು ಹಿಡಿದೆಳೆದು ಅವನನ್ನು ಕೊಂದು ನಿನ್ನ ತಾಯಿಯನ್ನು ವಿಧವೆಯನ್ನಾಗಿ ಮಾಡಿದೆಯಲ್ಲಾ. ಈ ಕಾರ್ಯವನ್ನು ಮಾಡಲು ಇನ್ನಾರಿಂದಲೂ ಸಾಧ್ಯವೇ ? ಮಲಗಿರಲಿ, ಸಂಚರಿಸುತ್ತಿರಲಿ ನಿನ್ನನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಬೇರೆ ಯಾವ ದೇವತೆಗಳಿಗೆ ತಾನೆ ನಿನ್ನಷ್ಟು ಅಥವಾ ನಿನಗಿಂತ ಅಧಿಕವಾಗಿ ಶಕ್ತಿಸಾಮರ್ಥ್ಯಗಳಿವೆ ?

---

ಸಂಹಿತಾಪಾಠಃ

ನಾಹಮತೋ ನಿರಯಾ ದುರ್ಗಹೈತತ್ತಿರಶ್ಚತಾ ಪಾರ್ಶ್ವಾನ್ನಿರ್ಗಮಾಣಿ ।

ಬಹೂನಿ ಮೇ ಅಕೃತಾ ಕರ್ತ್ವಾನಿ ಯುಧ್ಯೈ ತ್ವೇನ ಸಂ ತ್ವೇನ ಪೃಚ್ಛೈ ॥೨॥

CC-0. Jangamwadi Math Collection. Digitized by eGangotri

ಪದಪಾಠಃ

ನ । ಅಹಂ । ಅತಃ । ನಿಃ । ಅಯ । ದುಃಗಹಾ । ಏತತ್ । ತಿರಶ್ಚತಾ । ಪಾರ್ಶ್ವಾತ್ । ನಿಃ । ಗಮಾನಿ । ಬಹೂನಿ । ಮೇ । ಅಕೃತಾ । ಕರ್ತ್ವಾನಿ । ಯುಧ್ಯೈ । ತ್ವೇನ । ಸಂ । ತ್ವೇನ । ಪೃಚ್ಛೈ ॥ ೨ ॥

ಸಾಯಣಭಾಷ್ಯಂ

ವಾಮದೇವ ಏವಮುಕ್ತವಂತಮಿಂದ್ರಂ ಪ್ರತ್ಯಾಹ । ಅಹಮತೋ ಯೋನಿಮಾರ್ಗಾನ್ನ ನಿರಯಾ। ನ ನಿರಯಾಣಿ । ನ ನಿರ್ಗಚ್ಛಾನಿ । ಏತದ್ಯೋನಿನಿರ್ಗಮರೂಪಂ ವರ್ತ್ಮ ದುರ್ಗಹಾ । ದುರ್ಗ್ರಹಂ । ದುಃಖೇನ ಗ್ರಾಹ್ಯಂ । ನ ಪ್ರಾಪ್ಯಂ ಭವತೀತ್ಯರ್ಥಃ । ಕಿಂತು ತಿರಶ್ಚತಾ ತಿರಶ್ಚೀನಾತ್ಪಾರ್ಶ್ವಾನ್ನಿರ್ಗಮಾನಿ । ನಿರ್ಗಚ್ಛಾನಿ । ಯೋನಿದೇಶಾದನಿರ್ಗತೋಽಹಂ ಪಾರ್ಶ್ವಂ ಭಿತ್ತ್ವಾ ನಿರ್ಗಚ್ಛಾನೀತ್ಯರ್ಥಃ । ಅನ್ಯೈರಕೃತಮಿದಮೇವ ನ ಕೇವಲಂ ಮಯಾ ಕ್ರಿಯತೇ ಕಿಂತ್ವನ್ಯೈರಕೃತಾನಿ ಬಹೂನಿ ಕರ್ಮಾಣಿ ಮೇ ಕರ್ತ್ವಾನಿ ಕರ್ತವ್ಯಾನಿ ಸಂತಿ । ತ್ವೇನೈಕೇನ ಸಪತ್ನೇನ ವಿವದಮಾನೇನ ಸಹ ಯುಧ್ಯೈ । ಯುದ್ಧಂ ಕರವಾಣಿ । ತ್ವೇನೈಕೇನ ಬುಭುತ್ಸುನಾ ಸಂ ಪೃಚ್ಛೈ । ಸಮ್ಯಕ್ ಪೃಚ್ಛಾನಿ ॥

ಪ್ರತಿಪದಾರ್ಥ

ಅಹಂ—ನಾನು । ಅತಃ—ಈ ಯೋನಿರೂಪವಾದ ಮಾರ್ಗದಿಂದ । ನ ನಿರಯಾ—ಹೊರಕ್ಕೆ ಬರುವುದಿಲ್ಲ। ಏತತ್—ಈ ಮಾರ್ಗವು । ದುರ್ಗಹಾ—ಅತ್ಯಂತ ದುಃಖಪ್ರದವಾದುದಾಗಿದೆ । ತಿರಶ್ಚತಾ—ಓರೆಯಾಗಿರುವ । ಪಾರ್ಶ್ವಾತ್—ಪಾರ್ಶ್ವಮಾರ್ಗದಿಂದ । ನಿರ್ಗಮಾನಿ—ಹೊರಕ್ಕೆ ಬರುತ್ತೇನೆ । ಅಕೃತಾ—ಇತರರಿಂದ ಮಾಡಲ್ಪಡದಿರುವ । ಬಹೂನಿ—ಅನೇಕ ಕರ್ಮಗಳು । ಕರ್ತ್ವಾನಿ—ನನ್ನಿಂದ ಮಾಡಲ್ಪಡಬೇಕಾಗಿದೆ । ತ್ವೇನ—ಒಬ್ಬನೇ ಆದ ಶತ್ರುವಿನೊಂದಿಗೆ । ಯುಧ್ಯೈ—ಯುದ್ಧವನ್ನು ಮಾಡಬಲ್ಲೆ । ತ್ವೇನ—ಒಬ್ಬನೇ ಆದ ಪ್ರತಿಕಕ್ಷಿಯೊಂದಿಗೆ । ಸಂಪ್ರಚ್ಛೈ—ವಾಗ್ವಾದಮಾಡಬಲ್ಲೆ.

ಭಾವಾರ್ಥ

ಗರ್ಭಸ್ಥನಾದ ವಾಮದೇವಋಷಿಯ ವಾಕ್ಯವು—ನಾನು ಯೋನಿರೂಪವಾದ ಈ ಮಾರ್ಗದಿಂದ ಹೊರಕ್ಕೆ ಬರುವುದಿಲ್ಲ. ಈ ಮಾರ್ಗವು ಅತ್ಯಂತ ದುಃಖಪ್ರದವಾಗಿದೆ. ಓರೆಯಾಗಿರುವ ಪಾರ್ಶ್ವಮಾರ್ಗದಿಂದ ಹೊರಕ್ಕೆ ಬರುತ್ತೇನೆ. ಇತರರಿಂದ ಮಾಡಲ್ಪಡದಿರುವ ಅನೇಕ ಕರ್ಮಗಳು ನನ್ನಿಂದ ಮಾಡಲ್ಪಡಬೇಕಾಗಿದೆ. ನಾನು ಒಬ್ಬನೇ ಆದ ಶತ್ರುವಿನೊಂದಿಗೆ ಯುದ್ಧಮಾಡಬಲ್ಲೆ. ಒಬ್ಬನೇ ಆದ ಪ್ರತಿಕಕ್ಷಿಯೊಂದಿಗೆ ವಾಗ್ವಾದ ಮಾಡಬಲ್ಲೆ.

English Translation

Vamadeva speaks—Let me not come forth by this path, for it is difficult (of issue): let me come forth obliquely from the side: many acts unperformed by others are to be accomplished by me: let me contend (in war) with one (enemy), in controversy with one opponent.

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಪರಾಯತೀಂ ಮಾತರಮನ್ವಚಷ್ಟ ನ ನಾನು ಗಾನ್ಯನು ನೂ ಗಮಾನಿ ।
ತ್ವಷ್ಟುರ್ಗೃಹೇ ಅಪಿಬತ್ಸೋಮಮಿಂದ್ರಃ ಶತಧನ್ಯಂ ಚಮ್ವೋಃ ಸುತಸ್ಯ ॥೩॥

ಪದಪಾಠಃ

ಪರಾಽಯತೀಂ । ಮಾತರಂ । ಅನು । ಅಚಷ್ಟ । ನ । ನ । ಅನು । ಗಾನಿ । ಅನು । ನು । ಗಮಾನಿ ।
ತ್ವಷ್ಟುಃ । ಗೃಹೇ । ಅಪಿಬತ್ । ಸೋಮಂ । ಇಂದ್ರಃ । ಶತಽಧನ್ಯಂ । ಚಮ್ವೋಃ । ಸುತಸ್ಯ ॥ ೩ ॥

ಸಾಯಣಭಾಷ್ಯಂ

ಮಯಿ ಗರ್ಭಸ್ಥಿತೇ ಸತೀಂದ್ರೋ ಮದೀಯಾಂ ಮಾತರಂ ಪರಾಯತೀಂ ಪರೇತಾಂ ಮ್ರಿಯಮಾಣಾಮನ್ವಚಷ್ಟ । ಅನ್ವಬ್ರವೀತ್ । ಏವಮಹಿದಾನೀಂ ಗರ್ಭೇ ಸ್ಥಿತೋಽಹಂ ಪುರಾಣಂ ಪಂಥಾನಂ ನ ನಾನು ಗಾನಿ । ನಾನುಗಚ್ಛಾನೀತಿ ನ । ಕಿಂತು ನು ಕ್ಷಿಪ್ರಮನು ಗಮಾನಿ । ಅನುಗಚ್ಛಾನ್ಯೇವ । ವಾಮದೇವಃ ಸ್ವಕೀಯಮಕೃತ್ಯಕಾರಿತ್ವಂ ಪರಿಹೃತ್ಯೇಂದ್ರಸ್ಯಾಕೃತ್ಯಕಾರಿತ್ವಮುತ್ತರಾರ್ಧರ್ಚೇನ ಪ್ರತಿಪಾದಯತಿ । ಇಂದ್ರಶ್ಚಮ್ವೋಃ ಸೋಮಾಭಿಷವಫಲಕಯೋಃ ಸುತಸ್ಯ ಸೋಮಂ ಸುತವತೋಽಭಿಷುತವತಸ್ತ್ವಷ್ಟುಃ ಸಂಬಂಧಿನಿ ಗೃಹೇಽನುಪಹೂತಃ ಸನ್ ಶತಧನ್ಯಂ ಬಹುಧನೇನ ಕ್ರೀತಂ ಸೋಮಮಪಿಬತ್ । ಬಲಾತ್ಕಾರೇಣ ಸೋಮಸ್ಯ ಪಾನಂ ಕೃತವಾನ್ । ಅಯಮರ್ಥಸ್ತೈತ್ತಿರೀಯೈಸ್ತ್ವಷ್ಟಾ ಹತಪುತ್ರೋ ವೀಂದ್ರಂ ಸೋಮಮಾಹರದಿತ್ಯನುವಾಕೇ । ತೈ. ಸಂ. ೨-೪-೧೨ । ಮಹತಾ ಪ್ರಬಂಧೇನ ಪ್ರಪಂಚಿತಃ ॥

ಪ್ರತಿಪದಾರ್ಥ

ಮಾತರಂ—ನನ್ನ ತಾಯಿಯನ್ನು । ಪರಾಯತೀಂ—ಮೃತಿಹೊಂದುವವಳೆಂಬುದನ್ನು । ಅನ್ವಚಷ್ಟ—ಇಂದ್ರನು) ಹೇಳಿದ್ದಾನೆ । ನ ನಾನು ಗಾನಿ—ನಾನು ಪುರಾತನ ಮಾರ್ಗವನ್ನನುಸರಿಸುವುದಿಲ್ಲ (ಆದರೆ) । ನು—ಶೀಘ್ರದಲ್ಲಿಯೇ । ಅನು ಗಮಾನಿ—ಹೊರಕ್ಕೆ ನನ್ನ ಇಚ್ಛೆಯಂತೆಯೇ ಹೊರಬರುತ್ತೇನೆ । ಇಂದ್ರಃ—ಇಂದ್ರನು । ಚಮ್ವೋಃ—ಸೋಮಪಾತ್ರೆಗಳಲ್ಲಿ । ಸುತಸ್ಯ—ಹಿಂಡಿರತಕ್ಕದ್ದೂ । ಶತಧನ್ಯಂ—ಬಹುದ್ರವ್ಯದಿಂದ ಕೊಂಡುದೂ । ಆದ । ಸೋಮಂ—ಸೋಮವನ್ನು । ತ್ವಷ್ಟುಃ—ತ್ವಷ್ಟೃವಿನ । ಗೃಹೇ—ಗೃಹದಲ್ಲಿ । ಅಪಿಬತ್—(ಆಹ್ವಾನವಿಲ್ಲದೇ ಅಲ್ಲಿ ಹೋಗಿ) ಕುಡಿದನು.

ಭಾವಾರ್ಥ

ನಾನು ಗರ್ಭದಿಂದ ಹೊರಕ್ಕೆ ಬರಲು ಪುರಾತನವಾದುದೂ ಯೋನಿರೂಪವಾದುದೂ ಆದ ಮಾರ್ಗವನ್ನು ಅನುಸರಿಸದಿದ್ದರೆ ನಮ್ಮ ತಾಯಿಯು ಮೃತಿಯನ್ನು ಹೊಂದುವಳೆಂದು ಇಂದ್ರನು ನನಗೆ ಹೇಳಿದ್ದಾನೆ. ಆದರೆ ನಾನು



CC-0. Jangamwadi Math Collection. Digitized by eGangotri

ಆ ಮಾರ್ಗವನ್ನನುಸರಿಸದೇ ನನ್ನಿಚ್ಛೆಯಂತೆಯೇ ಶೀಘ್ರವಾಗಿ ಹೊರಕ್ಕೆ ಬರುತ್ತೇನೆ. ಸೋಮಪಾತ್ರೆಗಳಲ್ಲಿ ಹಿಂಡಿರ ತಕ್ಕದ್ದೂ ಬಹಳ ದ್ರವ್ಯದಿಂದ ಕೊಂಡುದೂ ಆದ ಸೋಮವನ್ನು ಇಂದ್ರನು ತ್ವಷ್ಟೃವಿನ ಗೃಹದಲ್ಲಿ ಆಹ್ವಾನವಿಲ್ಲದೇ ಹೋಗಿ ಬಲಾತ್ಕಾರವಾಗಿ ಕುಡಿದನು. (ಅದೂ ಅಕೃತ್ಯವೇ ಆಯಿತು).

### English Translation

He, (Indra), has asserted (that it will) cause the death of my mother : let me not proceed by the usual way, but proceed quickly, according (to my will): in the dwelling of Twashtri, Indra drank the costly Soma from the vessels of the offerers.

### ವಿಶೇಷವಿಷಯಗಳು

ಇಂದ್ರನು ತ್ವಷ್ಟೃವಿನ ಗೃಹದಲ್ಲಿ ಬಲಾತ್ಕಾರವಾಗಿ ಸೋಮಪಾನಮಾಡಿದ ವಿಷಯವನ್ನು ನಾವು ಹಿಂದೆಯೇ ವಿಸ್ತಾರವಾಗಿ ವಿವರಿಸಿದೇವೆ.

———

### ಸಂಹಿತಾಪಾಠಃ

ಕಿಂ ಸ ಋಧಕ್ಕೃಣವದ್ಯಂ ಸಹಸ್ರಂ ಮಾಸೋ ಜಭಾರ ಶರದಶ್ಚ ಪೂರ್ವೀಃ ।
ನ ಹೀ ನ್ವಸ್ಯ ಪ್ರತಿಮಾನಮಸ್ತ್ಯಂತರ್ಜಾತೇಷೂತ ಯೇ ಜನಿತ್ವಾಃ ॥ ೪ ॥

### ಪದಪಾಠಃ

ಕಿಂ । ಸಃ । ಋಧಕ್ । ಕೃಣವತ್ । ಯಂ । ಸಹಸ್ರಂ । ಮಾಸಃ । ಜಭಾರ । ಶರದಃ । ಚ । ಪೂರ್ವೀಃ ।
ನಹಿ । ನು । ಅಸ್ಯ । ಪ್ರತಿಃಮಾನಂ । ಅಸ್ತಿ । ಅಂತಃ । ಜಾತೇಷು । ಉತ । ಯೇ । ಜನಿಽತ್ವಾಃ ॥ ೪ ॥

### ಸಾಯಣಭಾಷ್ಯಂ

ಅದಿತಿರ್ಯಮಿಂದ್ರಂ ಸಹಸ್ರಂ ಬಹೂನ್ಮಾಸೋ ಮಾಸಾನ್ಪೂರ್ವೀರ್ಬಹ್ವೀಃ ಶರದಶ್ಚ ಸಂವತ್ಸ-ರಾಂಶ್ಚ ಜಭಾರ । ಬಭಾರ ॥ ಬಿಭರ್ತೇರಿದಂ ರೂಪಂ ॥ ಗರ್ಭೇ ಸ್ಥಿತ ಇಂದ್ರೋ ಬಹುಷು ಸಂವತ್ಸರೇ-ಷ್ವದಿತಿಂ ಕ್ಲೇಶಿತವಾನಿತ್ಯರ್ಥಃ । ಏವಂಭೂತಃ ಸ ಇಂದ್ರಃ ಕಿಂ ಯತ್ಕಿಮಪಿ । ಸರ್ವಮಪೀತ್ಯರ್ಥಃ । ಋಧಕ್ ವಿರುದ್ಧಂ ಕರ್ಮ ಕೃಣವತ್ । ಅಕರೋತ್ । ಇಂದ್ರಸ್ಯಾಕ್ಷೇಪಮಸಹಮಾನಾದಿತಿರಿಂದ್ರ-ಮಾತಾಪ್ಯೇನಂ ಪ್ರತಿ ಬ್ರೂತೇ । ಹೇ ವಾಮದೇವ ಜಾತೇಷೂತ್ಪನ್ನೇಷು ದೇವಾದಿಷ್ವಂತರ್ಮಧ್ಯೇಽ-

CC-0. Jangamwadi Math Collection. Digitized by eGangotri

ಸ್ಯೇಂದ್ರಸ್ಯ ಪ್ರತಿಮಾನಂ ನ ಹ್ಯಸ್ತಿ । ನ ವಿದ್ಯತೇ ಖಲು । ನು ಇತಿ ಪಾದಪೂರಣಾರ್ಥಃ । ಉತಾಪಿ ಚ ಯೇ ದೇವಾದಯೋ ಜನಿತ್ವಾ ಜನಯಿತವ್ಯಾ ಜನಯಿಷ್ಯಮಾಣಾಸ್ತೇಷು ಮಧ್ಯೇಽಸ್ಯೇಂದ್ರಸ್ಯ ಪ್ರತಿಮಾನಂ ನಾಸ್ತಿ ॥

ಪ್ರತಿಪದಾರ್ಥ

ಯಂ—ಯಾವ ಇಂದ್ರನನ್ನು (ಅದಿತಿಯು) । ಸಹಸ್ರಂ ಮಾಸಃ—ಸಹಸ್ರಾರು ಮಾಸಗಳೂ। ಪೂರ್ವೀಃ ಶರದಃ—ಅನೇಕ ಸಂವತ್ಸರಗಳೂ । ಜಭಾರ—ಗರ್ಭದಲ್ಲಿ ಧರಿಸಿದ್ದಳೋ । ಸಃ—ಆ ಇಂದ್ರನು । ಕಿಂ—ಯಾವ ಕಾರ್ಯವನ್ನು। ಕೃಣವತ್—ಮಾಡಿದನೋ ಅದು । ಋಧಕ್—ಪೂರ್ಣವಾಗಿಯೂ ಲೋಕವಿರುದ್ಧವಾಗಿಯೇ ಇದೆ । ಜಾತೇಷು—(ಎಲೈ ವಾಮದೇವನೇ) ಉತ್ಪನ್ನರಾಗಿರುವವರೂ । ಉತ—ಮತ್ತು । ಯೇ—ಯಾರು । ಜನಿತ್ವಾಃ—ಮುಂದೆ ಉತ್ಪನ್ನರಾಗುವರೋ ಅಂತಹವರೂ ಆದ ಸಕಲ ದೇವತೆಗಳ । ಅಂತಃ—ಮಧ್ಯದಲ್ಲಿ । ಅಸ್ಯ—ಈ ಇಂದ್ರನಿಗೆ । ಪ್ರತಿಮಾನಂ—ಉಪಮಾನವು (ಸಮಾನರಾದವರು) । ನಹಿ ಅಸ್ತಿ—ಇಲ್ಲವೇ ಇಲ್ಲ.

ಭಾವಾರ್ಥ

ಯಾವ ಇಂದ್ರನನ್ನು ಸಹಸ್ರಾರು ಮಾಸಗಳೂ, ಅನೇಕ ಸಂವತ್ಸರಗಳೂ ಅವನ ತಾಯಿಯು ಗರ್ಭದಲ್ಲಿ ಧರಿಸಿದ್ದಳೋ ಆ ಇಂದ್ರನು ಮಾಡಿರುವ ಕಾರ್ಯಗಳೆಲ್ಲವೂ ಲೋಕವಿರುದ್ಧವಾಗಿಯೇ ಇವೆ.

ಅದಿತಿಯ ವಾಕ್ಯವು—ಎಲೈ ವಾಮದೇವನೇ, ಉತ್ಪನ್ನರಾಗಿರುವವರೂ ಮತ್ತು ಮುಂದೆ ಉತ್ಪನ್ನರಾಗುವರೂ ಆದ ಸಮಸ್ತ ದೇವತೆಗಳ ನಡುವೆಯೆಲ್ಲಾ ಇಂದ್ರನಿಗೆ ಸಮಾನರಾದವರು ಯಾರೂ ಇಲ್ಲ.

English Translation

Aditi speaks.—What irregular act has he committed whom (I, his mother,) bore for a thousand months and for many years? there is no analogy between him and those who have been or will be born.

———

ಸಂಹಿತಾಪಾಠಃ

ಅವದ್ಯಮಿವ ಮನ್ಯಮಾನಾ ಗುಹಾಕರಿಂದ್ರಂ ಮಾತಾ ವೀರ್ಯೇಣಾ ನ್ಯೃಷ್ಟಂ ।
ಅಥೋದಸ್ಥಾತ್ಸ್ವಯಮತ್ಕಂ ವಸಾನ ಆ ರೋದಸೀ ಅಪೃಣಾಜ್ಜಾಯಮಾನಃ ॥

ಪದಪಾಠಃ

ಅವದ್ಯಂಽಇವ । ಮನ್ಯಮಾನಾ । ಗುಹಾ । ಅಕಃ । ಇಂದ್ರಂ । ಮಾತಾ । ವೀರ್ಯೇಣ । ನಿಽಋಷ್ಟಂ ।

CC-0. Jangamwadi Math Collection. Digitized by eGangotri

ಅಥ । ಉತ್ । ಅಸ್ಥಾತ್ । ಸ್ವಯಂ । ಅತ್ಕಂ । ವಸಾನಃ । ಆ । ರೋದಸೀ ಇತಿ । ಅಪೃಣಾತ್ ।

ಜಾಯಮಾನಃ ॥

ಸಾಯಣಭಾಷ್ಯಂ

ಗುಹಾ ಗುಹಾಯಾಂ ಗಹ್ವರರೂಪೇ ಸೂತಿಕಾಗೃಹೇ ಜಾತಮಿಂದ್ರಮವದ್ಯಮಿವ ಗರ್ಹ್ಯಮಿವ ಮನ್ಯಮಾನಾ ಜಾನತೀ ಮಾತೇಂದ್ರಜನನ್ಯದಿತಿರ್ವೀರ್ಯೇಣ ಸಾಮರ್ಥ್ಯೇನ ನ್ಯೃಷ್ಟಂ ನಿತರಾಂ ಪ್ರಾಪ್ತಮಕಃ । ಅಕರೋತ್ । ಅಥಾನಂತರಂ ಜಾಯಮಾನ ಉತ್ಪದ್ಯಮಾನ ಇಂದ್ರಃ ಸ್ವಯಮೇವಾತ್ಕಂ ತೇಜೋ ವಸಾನ ಆಚ್ಛಾದಕಃ ಸನ್ । ದಧಾನ ಇತ್ಯರ್ಥಃ । ಉದಸ್ಥಾತ್ । ಉತ್ಕರ್ಷೇಣಾತಿಷ್ಠತ್ । ಕಿಂಚ ರೋದಸೀ ದ್ಯಾವಾಪೃಥಿವ್ಯಾವಾಪೃಣಾತ್ । ಸಮಂತಾತ್ಪೂರಯಾಮಾಸ ॥

ಪ್ರತಿಪದಾರ್ಥ

ಇಂದ್ರಂ—ಇಂದ್ರನನ್ನು । ಗುಹಾ—ಸೂತಿಕಾಗೃಹದ ಮರೆಯಲ್ಲಿ ಹಡೆಯುವುದು । ಅವದ್ಯಂ ಇವ—(ಅವನ ಮಹತ್ವಕ್ಕೆ ತಕ್ಕ) ಶ್ಲಾಘನೀಯವಾದ ಕಾರ್ಯವಲ್ಲವೆಂದು । ಮನ್ಯಮಾನಾ— ತಿಳಿದು । ಮಾತಾ—ಇಂದ್ರ ಮಾತೆಯಾದ ಅದಿತಿಯು । (ಇಂದ್ರಂ—ಇಂದ್ರನನ್ನು) । ವೀರ್ಯೇಣ—ಅತಿಶಯವಾದ ಸಾಮರ್ಥ್ಯದೊಡನೆ । ನ್ಯೃಷ್ಟಂ—ಕೂಡಿದವನನ್ನಾಗಿ । ಅಕಃ—ಮಾಡಿದಳು । ಅಥ—ಅನಂತರ । ಜಾಯಮಾನಃ— ಉತ್ಪನ್ನನಾದ ಇಂದ್ರನು । ಸ್ವಯಂ—ತನ್ನದೇ ಆದ । ಅತ್ಕಂ—ತೇಜಸ್ಸನ್ನು । ವಸಾನಃ—ಧರಿಸಿದವನಾಗಿ । ಉದಸ್ಥಾತ್—ಅತಿಶಯವಾಗಿ ಎದ್ದು ನಿಂತನು । ರೋದಸೀ—ದ್ಯಾವಾಪೃಥಿವಿಗಳೆರಡರಲ್ಲೂ । ಆ ಅಪೃಣಾತ್—ಪೂರ್ಣವಾಗಿ ವ್ಯಾಪಿಸಿದನು.

ಭಾವಾರ್ಥ

ಇಂದ್ರನನ್ನು ಸೂತಿಕಾಗೃಹದ ಮರೆಯಲ್ಲಿ ಹಡೆಯುವುದು ಅವನ ಘನತೆಗೆ ತಕ್ಕ ಕಾರ್ಯವಲ್ಲವೆಂದು ಇಂದ್ರ ಮಾತೆಯಾದ ಅದಿತಿಯು ತಿಳಿದು ಅವನನ್ನು ಅತಿಶಯವಾದ ಸಾಮರ್ಥ್ಯದೊಡನೆ ಕೂಡಿದವನನ್ನಾಗಿ ಮಾಡಿದಳು ಅನಂತರ ಉತ್ಪನ್ನನಾದ ಇಂದ್ರನು ತನ್ನದೇ ಆದ ತೇಜಸ್ಸನ್ನು ಧರಿಸಿದವನಾಗಿ ಉದ್ಭವಿಸಿ ನಿಂತನು ಒಡನೆಯೇ ದ್ಯಾವಾಪೃಥಿವಿಗಳೆರಡರಲ್ಲೂ ಪೂರ್ಣವಾಗಿ ವ್ಯಾಪಿಸಿದನು.

English Translation

Deeming it disreputable (that he should be brought forth) in secret, his mother endowed (Indra) with (extraordinary) vigour : therefore, as soon as born he sprung up of his own accord, invested with splendour, and filled both heaven and earth.

———

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಏತಾ ಅರ್ಷಂತ್ಯಲಲಾ ಭವಂತೀರ್ಋತಾವರೀರಿವ ಸಂಕ್ರೋಶಮಾನಾಃ ।

ಏತಾ ವಿ ಪೃಚ್ಛ ಕಿಮಿದಂ ಭನಂತಿ ಕಮಾಪೋ ಅದ್ರಿಂ ಪರಿಧಿಂ ರುಜಂತಿ ॥

ಪದಪಾಠಃ

ಏತಾಃ । ಅರ್ಷಂತಿ । ಅಲಲಾऽಭವಂತೀಃ । ಋತವರೀಃऽಇವ । ಸಂऽಕ್ರೋಶಮಾನಾಃ ।

ಏತಾಃ । ವಿ । ಪೃಚ್ಛ । ಕಿಂ । ಇದಂ । ಭನಂತಿ । ಕಂ । ಆಪಃ । ಅದ್ರಿಂ । ಪರಿಃಧಿಂ । ರುಜಂತಿ ॥ ೬ ॥

ಸಾಯಣಭಾಷ್ಯಂ

ಅಲಲಾಭವಂತೀರಲಲೇತ್ಯೇವಂರೂಪಂ ಶಬ್ದಂ ಕುರ್ವತ್ಯ ಋತಾವರೀರಿವೋದಕವತ್ಯ ಏವ್ಯೆತಾ ನದ್ಯಃ ಸಂಕ್ರೋಶಮಾನಾ ಇಂದ್ರಮಹತ್ತ್ವಪ್ರತಿಪಾದಕೋದ್ಭೂತೇನ ಹರ್ಷೇಣ ಬಹುವಿಧಂ ಶಬ್ದಾಯಮಾನಾಃ ಸತ್ಯೋऽರ್ಷಂತಿ । ಗಚ್ಛಂತಿ । ಏವಂಭೂತಾ ನದ್ಯ ಇದಂ ಕಿಂ ಭನಂತಿ ಶ್ರೋತ್ರಗ್ರಾಹ್ಯಂ ಶಬ್ದಾಯಮಾನಂ ಕಿಂ ವದಂತೀಮಮರ್ಥಂ ಹೇ ಋಷೇ ತ್ವಮೇತಾ ನದೀರ್ವಿ ಪೃಚ್ಛ । ವಿಶೇಷೇಣ ಪೃಷ್ಟವಾನ್ ಭವ । ಏವಂ ಸಂಪೃಚ್ಛ । ವಿಚಾರಿತೇ ಸತ್ಯೇತಚ್ಛಬ್ದಾಯಮಾನಮಿಂದ್ರಮಾಹಾತ್ಮ್ಯಸ್ಯೈವ ವಚನಂ ಭವತೀತ್ಯರ್ಥಃ । ಕಿಂಚ ಆಪ ಉದಕಾನಿ ಪರಿಧಿಮಾವರಕಂ ಕಮದ್ರಿಂ ಕಂ ಮೇಘಂ ರುಜಂತಿ । ಭಂಜಂತಿ । ಆಪಃ ಕಮಪಿ ಮೇಘಂ ನ ಭಂಜಂತಿ ಕಿಂತು ಇಂದ್ರೋ ಮಮ ಪುತ್ರ ಏವೋದಕಾವರಕಂ ಮೇಘಂ ಭಕ್ತ್ವಾಪಃ ಪ್ರವರ್ತಯತೀತ್ಯರ್ಥಃ ॥

ಪ್ರತಿಪದಾರ್ಥ

ಅಲಲಾಭವಂತೀಃ—'ಅಲಲಾ' ಇತ್ಯಾದಿ ಶಬ್ದವನ್ನು ಮಾಡುವುವೂ । ಋತಾವರೀಃ ಇವ—ಉದಕದಿಂದ ಪೂರ್ಣವಾದವೂ ಆದ । ಏತಾಃ—ಈ ನದಿಗಳು । ಸಂಕ್ರೋಶಮಾನಾಃ—(ಇಂದ್ರನ ಮಹತ್ವವನ್ನು ಪ್ರತಿಪಾದಿಸುವ) ಹರ್ಷಶಬ್ದಗಳಿಂದ ಕೂಡಿದವುಗಳಾಗಿ । ಅರ್ಷಂತಿ—ಪ್ರವಹಿಸುತ್ತವೆ । ಇದಂ ಕಿಂ ಭನಂತಿ—(ಎಲೈ ಋಷಿಯೇ) ಅವುಗಳ ಶ್ರಾವ್ಯವಾದ ಈ ಶಬ್ದದ ಅರ್ಥವೇನು ಎಂಬುದನ್ನು । ಏತಾಃ—ಈ ನದಿಗಳನ್ನು । ವಿ ಪೃಚ್ಛ—ಪ್ರಶ್ನಿಸಿ ಕೇಳು । ಆಪಃ—ಉದಕಗಳು । ಪರಿಧಿಂ—ಆವರಕವಾದ । ಕಂ ಅದ್ರಿಂ—ಯಾವ ಮೇಘವನ್ನು । ರುಜಂತಿ—ಹಿಂಸಿಸಬಲ್ಲವು ? ।

ಭಾವಾರ್ಥ

ಈ ನದಿಗಳೆಲ್ಲವೂ ಸಹ ಇಂದ್ರನ ಮಹತ್ವವನ್ನು ಪ್ರತಿಪಾದಿಸುವುವೋ ಎಂಬಂತೆ 'ಅಲಲಾ' ಇತ್ಯಾದಿ ಹರ್ಷಪೂರ್ವಕರಾದ ಶಬ್ದಗಳನ್ನು ಮಾಡುತ್ತಾ ಪ್ರವಹಿಸುತ್ತವೆ. ಎಲೈ ಋಷಿಯೇ, ಅವುಗಳ ಶ್ರಾವ್ಯವಾದ ಈ ಶಬ್ದದ ಅರ್ಥವೇನೆಂಬುದನ್ನು ಈ ನದಿಗಳನ್ನೇ ಪ್ರಶ್ನಿಸಿ ಕೇಳು. (ಇಂದ್ರನ ಸಹಾಯವಿಲ್ಲದೇ) ಉದಕಗಳು ಆವರಕವಾದ ಯಾವ ಮೇಘವನ್ನು ತಾನೇ ಹಿಂಸಿಸಬಲ್ಲವು ?

CC-0. Jangamwadi Math Collection. Digitized by eGangotri

## English Translation

These (rivers) flew murmuring as if, being filled with water, they were uttering sounds ( of joy ): ask them what is this they say; what is the encompassing cloud that the waters break through ?

ಸಂಹಿತಾಪಾಠಃ

ಕಿಮು ಷ್ವಿದಸ್ಮೈ ನಿವಿದೋ ಭನಂತೇಂದ್ರಸ್ಯಾವದ್ಯಂ ದಿಧಿಷಂತ ಆಪಃ ।
ಮಮೈತಾನ್ಪುತ್ರೋ ಮಹತಾ ವಧೇನ ವೃತ್ರಂ ಜಘನ್ವಾ ಅಸೃಜದ್ವಿ
ಸಿಂಧೂನ್ ॥ ೭ ॥

ಪದಪಾಠಃ

ಕಿಂ । ಊಂ ಇತಿ । ಸ್ವಿತ್ । ಅಸ್ಮೈ । ನಿऽವಿದಃ । ಭನಂತ । ಇಂದ್ರಸ್ಯ । ಅವದ್ಯಂ । ದಿಧಿಷಂತೇ । ಆಪಃ ।
ಮಮ । ಏತಾನ್ । ಪುತ್ರಃ । ಮಹತಾ । ವಧೇನ । ವೃತ್ರಂ । ಜಘನ್ವಾನ್ । ಅಸೃಜತ್ । ವಿ ।
ಸಿಂಧೂನ್ ॥ ೭ ॥

ಸಾಯಣಭಾಷ್ಯಂ

ಯದೇಂದ್ರೋ ವೃತ್ರಾಸುರಂ ಹತವಾನ್ ತದಾ ಶಾಶ್ವತೀಂ ಬ್ರಹ್ಮಹತ್ಯಾಂ ಪ್ರಾಪ್ತವಾನಿತಿ ವಾಮದೇವಸ್ಯಾಭಿಪ್ರಾಯಮುನ್ನೀಯಾದಿತಿರಾಹ । ನಿವಿದಃ । ಮರುತ್ವತೀಯಶಸ್ತ್ರೇ ಪ್ರಯುಜ್ಯಮಾನಾನಿ ಮರುತ್ಸ್ತೋತ್ರೋ ಮರುದ್ಗಣ ಇತ್ಯಾದೀನೀಂದ್ರಸ್ತುತಿಪ್ರತಿಪಾದಕಾನಿ ಕಾನಿಚಿತ್ಪದಾನಿ ನಿವಿಚ್ಛಬ್ದೇನೋಚ್ಯಂತೇ । ತಾ ನಿವಿದೋಽಸ್ಮಾ ಇದಮಂ ವೃತ್ರವಧನಿಮಿತ್ತಂ ಬ್ರಹ್ಮಹತ್ಯಾರೂಪಂ ಪಾಪಂ ಪ್ರಾಪ್ನುವಂತಮಿಂದ್ರಂ ಕಿಮು ಷ್ವಿತ್ ಭನಂತ । ಭನಂತಿ । ಕಿಂ ವದಂತೀತಿ ಚೇತ್ । ತರ್ಹಿ । ಪಾಪರಹಿತಮಿಂದ್ರಂ ಮತ್ವಾ ನಿವಿದಃ ಸ್ತುವಂತಿ। ಕಥಮಿಂದ್ರಸ್ಯ ಪಾಪರಹಿತತ್ವಂ । ಉಚ್ಯತೇ । ಆಪಃ ಫೇನರೂಪೇಣಾಸ್ಯೇಂದ್ರಸ್ಯಾವದ್ಯಂ ಬ್ರಹ್ಮಹತ್ಯಾದಿರೂಪಂ ಪಾಪಂ ದಿಧಿಷಂತೇ । ಧಾರಯಂತಿ । ಮಮ ಪುತ್ರೋ ಮದೀಯಃ ಪುತ್ರ ಇಂದ್ರೋ ಮಹತಾ ಪ್ರಭೂತೇನ ವಧೇನ । ವಧ ಇತಿ ವಜ್ರನಾಮೈತತ್ । ವಜ್ರೇಣ ವೃತ್ರಂ ಜಘನ್ವಾನ್ । ಹತವಾನ್ । ತತ ಏತಾನ್ ಸಿಂಧೂನುದಕಾನಿ ವ್ಯಸೃಜತ್ । ವಿಶೇಷೇಣ ಸ್ವೈರತ್ವೇನ ಸರ್ತುಂ ಸೃಷ್ಟವಾನ್ । ಇಂದ್ರೇಣೋತ್ಸೃಷ್ಟಾ ಆಪಸ್ತಸ್ಯ ಪಾಪಂ ಜಗೃಹುರಿತ್ಯರ್ಥಃ ॥

ಪ್ರತಿಪದಾರ್ಥ

ನಿವಿದಃ—' ನಿವಿದ್ ' ರೂಪವಾದ ಈ ಮಂತ್ರಗಳು । ಅಸ್ಮೈ—ಈ ಇಂದ್ರನ ವಿಷಯದಲ್ಲಿ । ಕಿಮು ಸ್ವಿತ್—ಏನನ್ನು ತಾನೇ । ಭನಂತ—ಹೇಳುತ್ತವೆ (ಅವನನ್ನು ಕೇವಲ ಪ್ರಶಂಸಿಸುತ್ತವೆ) । ಆಪಃ—ಉದಕಗಳು।

CC-0. Jangamwadi Math Collection. Digitized by eGangotri

ಇಂದ್ರಸ್ಯ—ಇಂದ್ರನ । ಅವದ್ಯಂ—ಬ್ರಹ್ಮಹತ್ಯಾದಿರೂಪವಾದ ಪಾಪವನ್ನು । ದಿಧಿಷಂತೇ—(ನೊರೆಯ ರೂಪದಲ್ಲಿ) ಧರಿಸುತ್ತವೆ । ಮಮ—ನನ್ನ । ಪುತ್ರಃ—ಪುತ್ರನಾದ ಇಂದ್ರನು । ಮಹತಾ—ಮಹತ್ತಾದ । ವಧೇನ—ವಜ್ರಾಯುಧದಿಂದ । ವೃತ್ರಂ—ವೃತ್ರನನ್ನು । ಜಘನ್ವಾನ್—ಕೊಂದನು । ಏತಾನ್ ಸಿಂಧೂನ್—ಈ ಉದಕಗಳನ್ನು । ವಿ ಅಸೃಜತ್—ಸ್ವತಂತ್ರವಾಗಿ ಪ್ರವಹಿಸಲು ಬಿಡಿಸಿದನು.

ಭಾವಾರ್ಥ

'ನಿವಿದ್' ರೂಪವಾದ ಮಂತ್ರಗಳು ಇಂದ್ರನ ವಿಷಯದಲ್ಲಿ ಕೇವಲ ಪ್ರಶಂಸಾತ್ಮಕವಾಗಿಯೇ ಇವೆ. ಉದಕಗಳು ಇಂದ್ರನ ಬ್ರಹ್ಮಹತ್ಯಾದಿ ರೂಪವಾದ ಪಾಪವನ್ನು ನೊರೆಯರೂಪದಲ್ಲಿ ಧರಿಸುತ್ತವೆ. ನನ್ನ ಪುತ್ರನಾದ ಇಂದ್ರನು ಮಹತ್ತಾದ ವಜ್ರಾಯುಧದಿಂದ ವೃತ್ರನನ್ನು ಕೊಂದನು. ಮತ್ತು ಈ ಉದಕಗಳನ್ನು ಬಿಡಿಸಿ ಸ್ವತಂತ್ರವಾಗಿ ಅವು ಪ್ರವಹಿಸುವಂತೆ ಮಾಡಿದನು.

English Translation

What do the sacred expiatory strains declare to me? the waters receive the reproach of Indra: my son has slain Vritra with the mighty thunderbolt: he has set those rivers free.

ವಿಶೇಷವಿಷಯಗಳು

ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ವಿಷಯ, ಅದರಿಂದ ಇಂದ್ರನಿಗೆ ಬ್ರಹ್ಮಹತ್ಯಾದೋಷಪ್ರಾಪ್ತಿ, ಬ್ರಹ್ಮಹತ್ಯಾದೋಷಪರಿಹಾರಕ್ಕಾಗಿ ಇಂದ್ರನು ಕೈಗೊಂಡ ಕಾರ್ಯಕ್ರಮ ಇವುಗಳ ವಿಸ್ತಾರವಾದ ವಿವರಣೆಯನ್ನು ಋ. ಸಂ. ಭಾಗ. 12 ಪೇಜು 627 ಗಳಲ್ಲಿ ನೋಡಿ.

---

ಸಂಹಿತಾಪಾಠಃ

ಮಮಚ್ಚನ ತ್ವಾ ಯುವತಿಃ ಪರಾಸ ಮಮಚ್ಚನ ತ್ವಾ ಕುಷವಾ ಜಗಾರ ।
ಮಮಚ್ಚಿದಾಪಃ ಶಿಶವೇ ಮಮೃಡ್ಯುರ್ಮಮಚ್ಚಿದಿಂದ್ರಃ ಸಹಸೋದತಿಷ್ಠತ್॥

ಪದಪಾಠಃ

ಮಮತ್ । ಚನ । ತ್ವಾ । ಯುವತಿಃ । ಪರಾ॒ಆಸ । ಮಮತ್ । ಚನ । ತ್ವಾ । ಕುಷವಾ । ಜಗಾರ ।
ಮಮತ್ । ಚಿತ್ । ಆಪಃ । ಶಿಶವೇ । ಮಮೃಡ್ಯುಃ । ಮಮತ್ । ಚಿತ್ । ಇಂದ್ರಃ । ಸಹಸಾ । ಉತ್ ।
ಅತಿಷ್ಠತ್ ॥ ೮ ॥

CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಸೂಕ್ತಶೇಷೇಣ ಋಷಿರಿಂದ್ರಂ ಸ್ತೌತಿ । ಹೇ ಇಂದ್ರ ಮಮಚ್ಚನ ಮಾದ್ಯಂತ್ಯೇವ । ಪ್ರಮತ್ತ್ಯೈವೇತ್ಯರ್ಥಃ । ಯುವತಿಸ್ತ್ವದೀಯಾ ಮಾತಾದಿತಿಸ್ತ್ವಾ ತ್ವಾಂ ಪರಾಸ । ಪರಾಚಿಕ್ಷೇಪ । ಕಿಂಚ ಕುಷವಾನಾಮ್ನೀ ಕಾಚಿದ್ರಾಕ್ಷಸೀ ಸಾ ಮಮಚ್ಚನ ಪ್ರಮತ್ತ್ಯೈವ ತ್ವಾ ತ್ವಾಂ ಜಗಾರ । ಗಿರತಿ ಸ್ಮ । ಹೇ ಇಂದ್ರ ಮಮಚ್ಚಿತ್ಪ್ರಮಾದ್ಯಂತ್ಯ ಏವಾಪಃ ಶಿಶವೇ ಜಾತಾಯ ತುಭ್ಯಂ ಮೃಳಯಂತ್ ಸುಖಯಾಂಚಕ್ರುಃ । ಮಮಚ್ಚಿತ್ ಮಾದ್ಯನ್ನೇವೇಂದ್ರಃ ಸಹಸಾ ಸ್ವೇನ ವೀರ್ಯೇಣೋದತಿಷ್ಠತ್ । ಸೂತಿಕಾಗ್ರಹಾದ್ರಾಕ್ಷಸೀಂ ಬಾಧಮಾನಃ ಸನ್ ಉತ್ಕರ್ಷೇಣ ತಸ್ಥೌ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಮಮಚ್ಚನ—ಹರ್ಷಿತಳಾಗಿಯೇ । ಯುವತಿಃ—ನಿನ್ನ ಮಾತೆಯಾದ ಅದಿತಿಯು । ತ್ವಾ—ನಿನ್ನನ್ನು । ಪರಾಸ—ಹಡೆದಳು । ಮಮಚ್ಚನ—ಹರ್ಷಗೊಂಡೇ । ಕುಷವಾ—ಕುಷವಾ ಎಂಬ ರಾಕ್ಷಸ ಸ್ತ್ರೀಯು । ತ್ವಾ—ನಿನ್ನನ್ನು । ಜಗಾರ—ನುಂಗಿದಳು । ಮಮಚ್ಚಿತ್—ಅದೇ ಹರ್ಷಾಧಿಕ್ಯದಿಂದಲೇ । ಆಪಃ—ಉದಕಗಳು । ಶಿಶವೇ—ಇಂದ್ರನು ಉತ್ಪನ್ನನಾದೊಡನೆಯೇ । ಮೃಳಯನ್—ಸುಖಕಾರಕಗಳಾದವು । ಮಮಚ್ಚಿತ್—ಹರ್ಷದಿಂದಲೇ । ಇಂದ್ರಃ—ಇಂದ್ರನು । ಸಹಸಾ—ಸ್ವಶಕ್ತಿಯಿಂದ । ಉದತಿಷ್ಠತ್—(ರಾಕ್ಷಸಿಯನ್ನು ಭೇದಿಸಿಕೊಂಡು) ಹೊರಕ್ಕೆ ಬಂದನು.

ಭಾವಾರ್ಥ

ವಾಮದೇವ ಋಷಿಯ ತಾಯಿಯ ವಾಕ್ಯವು—ಎಲೈ ಇಂದ್ರನೇ, ಯುವತಿಯಾದ ನಿನ್ನ ಮಾತೆಯು (ಅದಿತಿಯು) ಹರ್ಷದಿಂದಲೇ ನಿನ್ನನ್ನು ಹಡೆದಳು. ಹರ್ಷದಿಂದಲೇ ಕುಷವಾ ಎಂಬ ರಾಕ್ಷಸಸ್ತ್ರೀಯು ನಿನ್ನನ್ನು ನುಂಗಿದಳು. ಅದೇ ಹರ್ಷಾಧಿಕ್ಯದಿಂದಲೇ ಉದಕಗಳು ಇಂದ್ರನು ಉತ್ಪನ್ನನಾದೊಡನೆಯೇ ಸುಖಕಾರಕಗಳಾದವು. ಇಂದ್ರನೂ ಸಹ ಹರ್ಷಿತನಾಗಿಯೇ ಸ್ವಶಕ್ತಿಯಿಂದ ರಾಕ್ಷಸಿಯನ್ನು ಭೇದಿಸಿಕೊಂಡು ಹೊರಕ್ಕೆ ಬಂದನು.

## English Translation

Vamadeva speaks.—Exulting, the youthful mother brought you forth : exulting, Kushava swallowed you : exulting, the waters gave delight to the infant : Indra, exulting, rose up by his strength

———

ಸಂಹಿತಾಪಾಠಃ

ಮಮಚ್ಚನ ತೇ ಮಘವನ್ವ್ಯಂಸೋ ನಿವಿವಿಧ್ವಾँ ಅಪ ಹನೂ ಜಘಾನ ।

ಅಧಾ ನಿವಿದ್ಧ ಉತ್ತರೋ ಬಭೂವಾಞ್ಛಿರೋ ದಾಸಸ್ಯ ಸಂ ಪಿಣಗ್ವಧೇನ ॥

CC-0. Jangamwadi Math Collection. Digitized by eGangotri

ಪದಪಾಠಃ

ಮಮತ್ । ಚನ । ತ್ವಾ । ಮಘವನ್ । ವಿಽಅಂಸಃ । ನಿಽವಿವಿಧ್ವಾನ್ । ಅಪ । ಹನೂ ಇತಿ । ಜಘಾನ ।

ಅಧ । ನಿಽವಿದ್ಧಃ । ಉತ್ಽತರಃ । ಬಭೂವಾನ್ । ಶಿರಃ । ದಾಸಸ್ಯ । ಸಂ । ಪಿಣಕ್ । ವಧೇನ ॥ ೯ ॥

ಸಾಯಣಭಾಷ್ಯಂ

ಹೇ ಮಘವನ್ಧನವನ್ನಿಂದ್ರ ಮಮಚ್ಚನ ಪ್ರಮಾದ್ಯನ್ನೇವ ವ್ಯಂಸೋ ನಾಮ ರಾಕ್ಷಸೋ ನಿವಿ-ವಿಧ್ವಾನ್ ಪ್ರವಿಧ್ಯನ್ ತ್ವಾ ಹನೂ ತ್ವದೀಯೇ ಹನೂ ಮುಖಪಾರ್ಶ್ವೇ ಅಪ ಜಘಾನ । ಅಪಹತವಾನ್ । ಅಧ ಅಥಾನಂತರಂ ಹೇ ಇಂದ್ರ ನಿವಿದ್ಧೋ ರಾಕ್ಷಸೇನ ತಾಡಿತಸ್ತ್ವಮುತ್ತರೋ ವ್ಯಂಸಾದಧಿಕಬಲೋ ಬಭೂವಾನ್ಭೂತಃ ಸನ್ ದಾಸಸ್ಯ ಕ್ಷೀಣಸ್ಯ ವ್ಯಂಸಸ್ಯ ಶಿರೋ ವಧೇನ ವಜ್ರೇಣ ಸಂ ಪಿಣಕ್ । ಪಿಷ್ಟವಾನಸಿ ॥

ಪ್ರತಿಪದಾರ್ಥ

ಮಘವನ್—ಧನವಂತನಾದ ಇಂದ್ರನೇ । ಮಮಚ್ಚನ—ಹರ್ಷಾಧಿಕ್ಯದಿಂದಲೇ । ವ್ಯಂಸಃ—ವ್ಯಂಸನೆಂಬ ರಾಕ್ಷಸನು । ನಿವಿವಿಧ್ವಾನ್—ನಿನ್ನನ್ನು ಹೊಡೆಯುತ್ತಾ । ತ್ವಾ—ನಿನ್ನ । ಹನೂ—ಕೆನ್ನೆಯಮೇಲೆ । ಅಪ ಜಘಾನ—ಅಪ್ಪಳಿಸಿ ಹೊಡೆದನು । ಅಧ—ಅನಂತರ । ನಿವಿದ್ಧಃ—ಅವನಿಂದ ಹೊಡೆಯಲ್ಪಟ್ಟ ನೀನು । ಉತ್ತ-ರಃ—ಅವನಿಗಿಂತಲೂ ಅಧಿಕವಾದ ಬಲವುಳ್ಳವನಾಗಿ । ಬಭೂವಾನ್—ಬೆಳೆದು । ದಾಸಸ್ಯ—ಅಸುರನಾದ ವ್ಯಂಸನ । ಶಿರಃ—ತಲೆಯನ್ನು । ವಧೇನ—ವಧಸಾಧನವಾದ ವಜ್ರಾಯುಧದಿಂದ । ಸಂ ಪಿಣಕ್—ಚೂರ್ಣಮಾಡಿದೆ.

ಭಾವಾರ್ಥ

ಧನವಂತನಾದ ಇಂದ್ರನೇ, ಹರ್ಷಾಧಿಕ್ಯದಿಂದಲೇ (ಗರ್ವದಿಂದಲೇ) ವ್ಯಂಸನೆಂಬ ರಾಕ್ಷಸನು ನಿನ್ನನ್ನು ಹೊಡೆಯಲೆತ್ನಿಸಿ ನಿನ್ನ ಕೆನ್ನೆಯಮೇಲೆ ಅಪ್ಪಳಿಸಿ ಹೊಡೆದನು. ಅನಂತರ ಅವನಿಂದ ಹೊಡೆಯಲ್ಪಟ್ಟ ನೀನು ಅವನಿಗಿಂತಲೂ ಅಧಿಕವಾದ ಬಲವುಳ್ಳವನಾಗಿ ಬೆಳೆದು ಅಸುರನಾದ ವ್ಯಂಸನ ತಲೆಯನ್ನು ವಧಸಾಧನವಾದ ವಜ್ರಾಯುಧದಿಂದ ಚೂರ್ಣಮಾಡಿದೆ.

English Translation

Vyansa, exulting and striking (hard blows) smote you, Maghavan, upon the jaw ; whereupon, being so smitten, you proved the stronger, and did crush the head of the slave with the thunderbolt.

---

ಸಂಹಿತಾಪಾಠಃ

ಗೃಷ್ಟಿಃ ಸಸೂವ ಸ್ಥವಿರಂ ತವಾಗಾಮನಾಧೃಷ್ಯಂ ವೃಷಭಂ ತುಮ್ರಮಿಂದ್ರಂ।

ಅರೀಳ್ಹಂ ವತ್ಸಂ ಚರಥಾಯ ಮಾತಾ ಸ್ವಯಂ ಗಾತುಂ ತನ್ವ ಇಚ್ಛಮಾನಂ॥

CC-0. Jangamwadi Math Collection. Digitized by eGangotri

ಪದಪಾಠಃ

ಗೃಷ್ಟಿಃ । ಸಸೂವ । ಸ್ಥವಿರಂ । ತವಾಗಾಂ । ಅನಾಧೃಷ್ಯಂ । ವೃಷಭಂ । ತುಮ್ರಂ । ಇಂದ್ರಂ ।

ಅರೀಳ್ಹಂ । ವತ್ಸಂ । ಚರಥಾಯ । ಮಾತಾ । ಸ್ವಯಂ । ಗಾತುಂ । ತನ್ವೇ । ಇಚ್ಛಮಾನಂ ॥ ೧೦ ॥

ಸಾಯಣಭಾಷ್ಯಂ

ಗೃಷ್ಟಿಃ ಕಾಚಿದ್ಗೌರ್ವತ್ಸಂ ಯಥಾ ಸಸೂವ । ಸುಷುವೇ । ತಥಾ ಮಾತೇಂದ್ರಜನನ್ಯದಿತಿಶ್ಚರ-ಥಾಯ ಸ್ವೇಚ್ಛಯಾ ಸಂಚರಣಾಯೇಂದ್ರಂ ಸಸೂವ । ಸುಷುವೇ । ಕೀದೃಶಮಿಂದ್ರಂ । ಸ್ಥವಿರಂ ವಯಸಾ ಪ್ರವೃದ್ಧಂ ತವಾಗಾಂ ಪ್ರವೃದ್ಧಬಲಮನಾಧೃಷ್ಯಂ ಶತ್ರುಭಿರನಭಿಭಾವ್ಯಂ ವೃಷಭಂ ಸೇಚಸಸಮರ್ಥಂ ತುಮ್ರಂ ಪ್ರೇರಕಮರೀಳ್ಹಂ ಶತ್ರುಭಿರನಭಿಭೂತಂ ಸ್ವಯಂ ಗಾತುಮನ್ಯನಿರಪೇಕ್ಷಗಮನಂ ತನ್ವೇ ಸ್ವಶರೀ-ರಾಯೇಚ್ಛಮಾನಮಿಚ್ಛಂತಂ ॥

ಪ್ರತಿಪದಾರ್ಥ

ಗೃಷ್ಟಿಃ—ಪುಷ್ಟವಾದ ಕಡಸು । ವತ್ಸಂ—ಕರುವನ್ನು । ಸಸೂವ—ಪಡೆದಿರುವಂತೆ । ಮಾತಾ—ಇಂದ್ರ ಮಾತೆಯಾದ ಅದಿತಿಯು । ಸ್ಥವಿರಂ—ವಯಸ್ಸಿನಿಂದ ಪ್ರವೃದ್ಧನೂ । ತವಾಗಾಂ—ಅಧಿಕವಾದ ಬಲವುಳ್ಳವನೂ । ಅನಾಧೃಷ್ಯಂ—ಶತ್ರುಗಳಿಂದ ಪರಾಜಿತನಾಗದವನೂ । ವೃಷಭಂ—ಕಾಮುವರ್ಷಕನೂ । ತುಮ್ರಂ—ಎಲ್ಲರಿಗೂ ಪ್ರೇರಕನೂ । ಅರೀಳ್ಹಂ—ಅಪ್ರತಿಹತನೂ । ಸ್ವಯಂ ಗಾತುಂ—ಸ್ವೇಚ್ಛೆಯಾಗಿ ಸಂಚರಿಸುವವನೂ । ತನ್ವೇ ಇಚ್ಛಮಾನಂ—ತನ್ನ ಶರೀರ ರಕ್ಷಣೆಯಲ್ಲಿ ನಿರತನೂ ಆದ । ಇಂದ್ರಂ—ಇಂದ್ರನನ್ನು । ಚರಥಾಯ—ಸ್ವೇಚ್ಛಾ ಸಂಚಾರಕ್ಕಾಗಿ । (ಸಸೂವ—ಪಡೆದಳು).

ಭಾವಾರ್ಥ

ಪುಷ್ಟವಾದ ಕಡಸು ತನ್ನ ಕರುವನ್ನು ಪಡೆದಿರುವಂತೆ ಇಂದ್ರಮಾತೆಯಾದ ಅದಿತಿಯು ವಯಸ್ಸಿನಿಂದ ಪ್ರವೃದ್ಧನೂ, ಅಧಿಕವಾದ ಬಲವುಳ್ಳವನೂ, ಶತ್ರುಗಳಿಂದ ಪರಾಜಿತನಾಗದವನೂ, ಕಾಮುವರ್ಷಕನೂ, ಎಲ್ಲರಿಗೂ ಪ್ರೇರಕನೂ, ಅಪ್ರತಿಹತನೂ, ಸ್ವೇಚ್ಛೆಯಾಗಿ ಸಂಚರಿಸುವವನೂ, ತನ್ನ ಶರೀರ ರಕ್ಷಣೆಯಲ್ಲಿ ನಿರತನೂ ಆದ ಇಂದ್ರನನ್ನು ಸ್ವೇಚ್ಛಾ ಸಂಚಾರಕ್ಕಾಗಿ ಪಡೆದಳು.

English Translation

As a heifer bears a calf, his mother, (Aditi) bore Indra, mature (in years) strong. irresistible, vigorous, energetic, invincible, (destined) to follow his own course, heedful in his person.

—— :o: ——

CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಉತ ಮಾತಾ ಮಹಿಷಮನ್ವವೇನದಮೀ ತ್ವಾ ಜಹತಿ ಪುತ್ರ ದೇವಾಃ ।
ಅಥಾಬ್ರವೀದ್ವೃತ್ರಮಿಂದ್ರೋ ಹನಿಷ್ಯನ್ತ್ಸಖೇ ವಿಷ್ಣೋ ವಿತರಂ ವಿ ಕ್ರಮಸ್ವ ॥

ಪದಪಾಠಃ

ಉತ । ಮಾತಾ । ಮಹಿಷಂ । ಅನು । ಅವೇನತ್ । ಅಮೀ ಇತಿ । ತ್ವಾ । ಜಹತಿ । ಪುತ್ರ । ದೇವಾಃ ।

ಅಥ । ಅಬ್ರವೀತ್ । ವೃತ್ರಂ । ಇಂದ್ರಃ । ಹನಿಷ್ಯತ್ । ಸಖೇ । ವಿಷ್ಣೋ ಇತಿ । ವಿಽತರಂ । ವಿ । ಕ್ರಮಸ್ವ ॥ ೧೧ ॥

ಸಾಯಣಭಾಷ್ಯಂ

ಉತಾಪಿ ಚ ಹೇ ಮದೀಯ ಪುತ್ರೇಂದ್ರ ಅಮೀ ವಹ್ನ್ಯಾದಯೋ ದೇವಾಸ್ತ್ವಾ ತ್ವಾಂ ಜಹತಿ । ತ್ಯಜಂತಿ । ಇತ್ಯುಕ್ತವತೀಂದ್ರಸ್ಯ ಮಾತಾದಿತಿರಿಂದ್ರಂ ಮಹಿಷಂ ಮಹಾಂತಂ । ಮಹಿಷ ಇತಿ ಮಹನ್ನಾಮೈತತ್ । ಅನ್ವವೇನತ್ । ಅಯಾಚತ । ಅಥಾನಂತರಂ ಹೇ ವಿಷ್ಣೋ ವ್ಯಾಪನಶೀಲ ಹೇ ಸಖೇ ಮಿತ್ರಭೂತ ಹರೇ ತ್ವಂ ವೃತ್ರಂ ಹನಿಷ್ಯನ್ ಹಂತುಮಿಚ್ಛನ್ ವಿತರಂ ವಿ ಕ್ರಮಸ್ವ । ಅತಿಪರಾಕ್ರಮೀ ಭವೇತೀಂದ್ರೋ ವಿಷ್ಣುಮಬ್ರವೀತ್ । ಉವಾಚ ॥

ಪ್ರತಿಪದಾರ್ಥ

ಉತ—ಮತ್ತು । ಪುತ್ರ—ಎಲೈ ಇಂದ್ರನೇ । ಅಮೀ ದೇವಾಃ—ಈ ಅಗ್ನ್ಯಾದಿ ದೇವತೆಗಳು । ತ್ವಾ—ನಿನ್ನನ್ನು । ಜಹತಿ—ತ್ಯಾಗಮಾಡಿದರೆ (ಬಿಟ್ಟುಬಿಟ್ಟರೆ) ಎಂದು । ಮಾತಾ—ತಾಯಿಯಾದ ಅದಿತಿಯು । ಮಹಿಷಂ—ಮಹಾತ್ಮನಾದ ಇಂದ್ರನನ್ನು । ಅನ್ವವೇನತ್—ಕೇಳಿಕೊಂಡಳು । ಅಥ—ಅನಂತರ । ಇಂದ್ರಃ—ಇಂದ್ರನು । (ವಿಷ್ಣುಂ—ವಿಷ್ಣುವನ್ನು ಕುರಿತು) । ಸಖೇ—ಸುಹೃತ್ತಾದವನೂ । ವಿಷ್ಣೋ-ಸರ್ವವ್ಯಾಪಕನೂ ಆದ ವಿಷ್ಣುವೇ । ವೃತ್ರಂ—ವೃತ್ರಾಸುರನನ್ನು । ಹನಿಷ್ಯನ್—ಕೊಲ್ಲಲಿಚ್ಛೆಯುಳ್ಳವನಾಗಿ । ವಿತರಂ—ಅತ್ಯಧಿಕವಾಗಿ । ವಿ ಕ್ರಮಸ್ವಪರಾಕ್ರಮವುಳ್ಳವನಾಗು ಎಂದು । ಅಬ್ರವೀತ್—ಹೇಳಿದನು.

ಭಾವಾರ್ಥ

"ಪುತ್ರನಾದ ಎಲೈ ಇಂದ್ರನೇ, ಅಗ್ನ್ಯಾದಿದೇವತೆಗಳು ನಿನ್ನ ಸಖಿತ್ವವನ್ನು ಬಿಟ್ಟುಬಿಟ್ಟರೇ ?" ಎಂಬುದಾಗಿ ಅದಿತಿಯು ಕೇಳಿದಳು. ಆ ಒಡನೆಯೇ ಇಂದ್ರನು ವಿಷ್ಣುವನ್ನು ಕುರಿತು "ಸಖನಾದ ವಿಷ್ಣುವೇ, ನೀನು ಸರ್ವವ್ಯಾಪಕನೂ, ನನಗೆ ಸುಹೃತ್ತೂ ಆಗಿದ್ದೀಯೆ. ವೃತ್ರಾಸುರನನ್ನು ಕೊಲ್ಲಲಿಚ್ಛೆಯುಳ್ಳವನಾಗಿ ಅಧಿಕವಾದ ಪರಾಕ್ರಮವನ್ನು ಹೊಂದು" ಎಂದು ಹೇಳಿದನು.

CC-0. Jangamwadi Math Collection. Digitized by eGangotri

## English Translation

His mother inquired of the mighty Indra-have these deities deserted you, my son? then Indra said-Vishnu, my friend, (if you) purpose slaying Vritra, exert your greatest prowess.

---

ಸಂಹಿತಾಪಾಠಃ

**ಕಸ್ತೇ ಮಾತರಂ ವಿಧವಾಮಚಕ್ರಚ್ಛಯುಂ ಕಸ್ತ್ವಾಮಜಿಘಾಂಸ-ಚ್ಚರಂತಂ ।**
**ಕಸ್ತೇ ದೇವೋ ಅಧಿ ಮಾರ್ಡೀಕ ಆಸೀದ್ಯತ್ಪ್ರಾಕ್ಷಿಣಾಃ ಪಿತರಂ ಪಾದಗೃಹ್ಯ ॥**

ಪದಪಾಠಃ

ಕಃ । ತೇ । ಮಾತರಂ । ವಿಧವಾಂ । ಅಚಕ್ರತ್ । ಶಯುಂ । ಕಃ । ತ್ವಾಂ । ಅಜಿಘಾಂಸತ್ । ಚರಂತಂ ।
ಕಃ । ತೇ । ದೇವಃ । ಅಧಿ । ಮಾರ್ಡೀಕೇ । ಆಸೀತ್ । ಯತ್ । ಪ್ರ । ಅಕ್ಷಿಣಾಃ । ಪಿತರಂ । ಪಾದ್ಯ-ಗೃಹ್ಯ ॥ ೧೨ ॥

ಸಾಯಣಭಾಷ್ಯಂ

ಹೇ ಇಂದ್ರ ಯದ್ಯಸ್ಮಾತ್ಕಾರಣಾತ್ಪಿತುಃ ಸಕಾಶಾಜ್ಜನಿಷ್ಯಮಾಣಾದ್ಭೀತಸ್ತ್ವಂ ತ್ವದೀಯಂ ಪಿತರಂ ಪಾದಗೃಹ್ಯ ಪಾದೇಷು ಗೃಹೀತ್ವಾ ಪ್ರಾಕ್ಷಿಣಾಃ । ಪ್ರಕರ್ಷೇಣಾವಧೀಃ । ತಸ್ಮಾತ್ಕಾರಣಾತ್ತೇ ತ್ವತ್ತೋಽನ್ಯಃ ಕೋ ದೇವೋ ಮಾತರಂ ಸ್ವಕೀಯಜನನೀಂ ವಿಧವಾಂ ಪಿತೃವಧೇನ ಪತಿರಹಿತಾಮ-ಕಚ್ರತ್ । ಅಕರೋತ್ । ಕಸ್ತ್ವತ್ತೋಽನ್ಯಃ ಶಯುಂ ಶಯಾನಂ ಚರಂತಂ ಜಾಗ್ರತಂ ವಾ ತ್ವಾಮಜಿ-ಘಾಂಸತ್ । ಹಂತುಮೈಚ್ಛತ್ । ತೇ ತ್ವತ್ತೋಽನ್ಯಃ ಕೋ ದೇವೋ ಮಾರ್ಡೀಕೇ ಪ್ರಜಾನಾಂ ಸುಖ-ಕರಣೇಽಧಿ ಅಧಿಕ ಆಸೀತ್ । ಅಯಮರ್ಥ ಋಕ್ಸಾಮೇ ವೈ ದೇವೇಭ್ಯ ಇತ್ಯನುವಾಕೇ ಯಜ್ಞೋ ದಕ್ಷಿಣಾಮಭ್ಯಧ್ಯಾಯದಿತ್ಯಾದಿಬ್ರಾಹ್ಮಣೇನ । ತೈ. ಸಂ. ೬-೧-೩-೬ । ತೈತ್ತಿರೀಯಕೈರ್ಬಹುಧಾ ಪ್ರಪಂಚಿತಃ ॥

ಪ್ರತಿಪದಾರ್ಥ

(ಎಲೈ ಇಂದ್ರನೇ) ಯತ್—ಯಾವ ಕಾರಣದಿಂದ । ಪಿತರಂ—ನಿನ್ನ ತಂದೆಯನ್ನು । ಪಾದಗೃಹ್ಯ—ಕಾಲನ್ನು ಹಿಡಿದೆಳೆದು । ಪ್ರಾಕ್ಷಿಣಾಃ—ಬೀಳಿಸಿ ಸಾಯಿಸಿದೆಯೋ (ಆದುದರಿಂದಲೇ) । ತೇ—ನಿನಗಿಂತಲೂ ಬೇರೆ ।

CC-0. Jangamwadi Math Collection. Digitized by eGangotri

ಕಃ—ಯಾವ ದೇವತೆಯು ತಾನೇ । ಮಾತರಂ—ತನ್ನ ಜನನಿಯನ್ನು । ವಿಧವಾಂ—ವಿಧವೆಯಾಗುವಂತೆ । ಅಚಕ್ರತ್—ಮಾಡಬಲ್ಲನು । ಕಃ—ನಿನಗಿಂತಲೂ ಬೇರೆ ಯಾರು ತಾನೇ । ಶಯುಂ—ಮಲಗಿರುವವನೂ । ಚರಂತಂ—ಸಂಚರಿಸುವವನೂ ಆದ । ತ್ವಾಂ—ನಿನ್ನನ್ನು । ಅಜಿಘಾಂಸತ್—ಕೊಲ್ಲಲಿಚ್ಛಿಸುವನು ? । ತೇ—ನಿನಗಿಂತಲೂ ಬೇರೆ । ಕಃ ದೇವಃ—ಯಾವ ದೇವತೆಯು ತಾನೇ । ಮಾರ್ಡೀಕೇ—ಪ್ರಜೆಗಳಿಗೆ ಸುಖಕಾರಕನಾಗಿ । ಅಧಿ ಆಸೀತ್—ನಿನ್ನನ್ನು ಮೀರಿಸುತ್ತಾನೆ.

ಭಾವಾರ್ಥ

ಎಲೈ ಇಂದ್ರನೇ, ನೀನೇ ನಿನ್ನ ತಂದೆಯ ಕಾಲನ್ನು ಹಿಡಿದೆಳೆದು ತಳ್ಳಿ ಸಾಯಿಸಿದುದರಿಂದ ಅಂತಹ ಕೆಲಸಕ್ಕೆ ನೀನಲ್ಲದೇ ಇನ್ನಾರೂ ಸಮರ್ಥರಲ್ಲ. ಆದುದರಿಂದ ಸ್ವಮಾತೆಯನ್ನು ವಿಧವೆಯನ್ನಾಗಿ ಮಾಡಲು ನಿನ್ನನ್ನುಳಿದು ಇನ್ನಾರಿಗೂ ಶಕ್ಯವಿಲ್ಲ. ನೀನು ಮಲಗಿರುವಾಗಲಿ, ಹಾಗೆಯೇ ಸಂಚರಿಸುವಾಗಲಿ ನಿನ್ನನ್ನು ಕೊಲ್ಲಲು ಯಾರಿಗೆ ತಾನೇ ಸಾಧ್ಯವಾದೀತು. ಪ್ರಜೆಗಳಿಗೆ ಸುಖದಾತನಾಗಲು ನಿನ್ನನ್ನುಳಿದು ಇನ್ನಾವ ದೇವತೆಗೆ ತಾನೇ ನಿನಗಿಂತಲೂ ಅಧಿಕವಾದ ಶಕ್ತಿಯಿದ್ದೀತು ?

English Translation

Who has made your mother a widow ? who has sought to slay the sleeping and the waking ? what deity has been more gracious than you, since you have slain the father, having seized him by the foot ?

———

ಸಂಹಿತಾಪಾಠಃ

ಅವರ್ತ್ಯಾ ಶುನ ಆಂತ್ರಾಣಿ ಪೇಚೇ ನ ದೇವೇಷು ವಿವಿದೇ ಮರ್ಡಿತಾರಂ ।
ಅಪಶ್ಯಂ ಜಾಯಾಮಮಹೀಯಮಾನಾಮಧಾ ಮೇ ಶ್ಯೇನೋ ಮಧ್ವಾ ಜಭಾರ ॥ ೧೩ ॥

ಪದಪಾಠಃ

ಅವರ್ತ್ಯಾ । ಶುನಃ । ಆಂತ್ರಾಣಿ । ಪೇಚೇ । ನ । ದೇವೇಷು । ವಿವಿದೇ । ಮರ್ಡಿತಾರಂ ।

ಅಪಶ್ಯಂ । ಜಾಯಾಂ । ಅಮಹೀಯಮಾನಾಂ । ಅಧ । ಮೇ । ಶ್ಯೇನಃ । ಮಧು । ಆ । ಜಭಾರ ॥ ೧೩॥

ಸಾಯಣಭಾಷ್ಯಂ

ಅನಯಾ ವಾಮದೇವಃ ಸ್ವಕೀಯಂ ದಾರಿದ್ರ್ಯಂ ಸೂಚಯನ್ನಿಂದ್ರಸ್ಯೋತ್ಕರ್ಷಮಾಹ । ವಾಮದೇವೋಽಹಮವರ್ತ್ಯಾ ಜೀವನೋಪಾಯರಾಹಿತ್ಯೇನ ಶುನಃ ಶುನಕಸಂಬಂಧೀನ್ಯಾಂತ್ರಾಣಿ ಪುರೀತಂತಿ

CC-0. Jangamwadi Math Collection. Digitized by eGangotri

